THE

# NEW TESTAMENT

OF

OUR LORD AND SAVIOUR

# JESUS CHRIST

NEWLY TRANSLATED FROM THE ORIGINAL GREEK INTO KANARESE
BY A COMMITTEE APPOINTED BY THE BANGALORE AUXILIARY BIBLE SOCIETY
1891—1906

ಯೇಸು ಕ್ರಿಸ್ತನ ಮೂಲಕ

ಸ್ಥಾಪಿತವಾದ

# ಹೊಸ ಒಡಂಬಡಿಕೆ

ಎಂಬ ಗ್ರಂಥವು

ಗ್ರೀಕ್ ಭಾಷೆಯಿಂದ ನೂತನವಾಗಿ ಭಾಷಾಂತರಿಸಿದ್ದು

PRINTED FOR THE
BRITISH AND FOREIGN BIBLE SOCIETY
BANGALORE AUXILIARY
1906

*Demy 8vo.]*

# THE BOOKS OF THE NEW TESTAMENT

## ಹೊಸ ಒಡಂಬಡಿಕೆಯ ಪುಸ್ತಕಗಳ ಕ್ರಮಗಳು

# THE GOSPEL ACCORDING TO SAINT MATTHEW

# ಮತ್ತಾಯನು ಬರೆದ ಸುವಾರ್ತೆ.

## ಯೇಸು ಕ್ರಿಸ್ತನ ವಂಶಾವಳಿಯು.

**1** ಯೇಸು ಕ್ರಿಸ್ತನ ವಂಶಾವಳಿಯು. ಆತನು ದಾವೀದನ ವಂಶದವನು. ದಾವೀದನು ಅಬ್ರಹಾಮನ ವಂಶದವನು.

2 ಅಬ್ರಹಾಮನು ಇಸಾಕನನ್ನು ಪಡೆದನು. ಇಸಾಕನು ಯಾಕೋಬನನ್ನು ಪಡೆದನು.
3 ಯಾಕೋಬನು ಯೂದನನ್ನೂ ಅವನ ಅಣ್ಣತಮ್ಮಂದಿರನ್ನೂ ಪಡೆದನು. ಯೂದನು ತಾಮರಳಲ್ಲಿ ಫಾರೆಸನನ್ನೂ ಜರನನ್ನೂ ಪಡೆದನು. ಫಾರೆಸನು ಎಸ್ರೋಮನನ್ನು ಪಡೆ
4 ದನು. ಎಸ್ರೋಮನು ಅರಾಮನನ್ನು ಪಡೆದನು. ಅರಾಮನು ಅಮಿನದಾಬನನ್ನು ಪಡೆದನು. ಅಮಿನದಾಬನು ನಹಸ್ಸೋನನನ್ನು ಪಡೆದನು. ನಹಸ್ಸೋನನು ಸಲ್ಮೋನ
5 ನನ್ನು ಪಡೆದನು. ಸಲ್ಮೋನನು ರಹಾಬಳಲ್ಲಿ ಬೋವಜನನ್ನು ಪಡೆದನು. ಬೋವಜನು
6 ರೂತಳಲ್ಲಿ ಓಬೇದನನ್ನು ಪಡೆದನು. ಓಬೇದನು ಇಶಾಯನನ್ನು ಪಡೆದನು. ಇಶಾಯನು ಅರಸನಾದ ದಾವೀದನನ್ನು ಪಡೆದನು.

ದಾವೀದನು ಉರೀಯನ ಹೆಂಡತಿಯಾಗಿದ್ದವಳಲ್ಲಿ ಸೊಲೊಮೋನನನ್ನು ಪಡೆದನು.
7 ಸೊಲೊಮೋನನು ರೊಬೊವಾಮನನ್ನು ಪಡೆದನು. ರೊಬೊವಾಮನು ಅಬೀಯನನ್ನು
8 ಪಡೆದನು. ಅಬೀಯನು ಆಸನನ್ನು ಪಡೆದನು. ಆಸನು ಯೋಸಫಾತನನ್ನು ಪಡೆದನು.
9 ಯೋಸಫಾತನು ಯೋರಮನನ್ನು ಪಡೆದನು. ಯೋರಮನು ಉಜೀಯನನ್ನು ಪಡೆದನು. ಉಜೀಯನು ಯೋತಾಮನನ್ನು ಪಡೆದನು. ಯೋತಾಮನು ಆಹಜನನ್ನು ಪಡೆದನು.
10 ಆಹಜನು ಹೆಜಿಕೀಯನನ್ನು ಪಡೆದನು. ಹೆಜಿಕೀಯನು ಮನಸ್ಸೆಯನ್ನು ಪಡೆದನು. ಮನಸ್ಸೆಯು ಅಮೋನನನ್ನು ಪಡೆದನು. ಅಮೋನನು ಯೋಸೀಯನನ್ನು ಪಡೆದನು.
11 ಪ್ರಜೆಯು ಬಾಬೆಲಿಗೆ ಸೆರೇಹೋದ ಸಮಯದಲ್ಲಿ ಯೋಸೀಯನು ಯೆಕೊನೀಯನನ್ನೂ ಅವನ ಅಣ್ಣತಮ್ಮಂದಿರನ್ನೂ ಪಡೆದನು.

ಬಾಬೆಲಿಗೆ ಸೆರೇಹೋದ ಮೇಲೆ ಯೆಕೊನೀಯನು ಶೆಯಲ್ತಿಯೇಲನನ್ನು ಪಡೆದನು. 12 ಶೆಯಲ್ತಿಯೇಲನು ಜೆರುಬಾಬೆಲನನ್ನು ಪಡೆದನು. ಜೆರುಬಾಬೆಲನು ಅಬಿಹೂದನನ್ನು 13 ಪಡೆದನು. ಅಬಿಹೂದನು ಎಲ್ಯಕೀಮನನ್ನು ಪಡೆದನು. ಎಲ್ಯಕೀಮನು ಅಜೋರನನ್ನು 14 ಪಡೆದನು. ಅಜೋರನು ಸದೋಕನನ್ನು ಪಡೆದನು. ಸದೋಕನು ಅಖೀಮನನ್ನು ಪಡೆದನು. ಅಖೀಮನು ಎಲಿಹೂದನನ್ನು ಪಡೆದನು. ಎಲಿಹೂದನು ಎಲಿಯಾಜರನನ್ನು 15 ಪಡೆದನು. ಎಲಿಯಾಜರನು ಮತ್ತಾನನನ್ನು ಪಡೆದನು. ಮತ್ತಾನನು ಯಾಕೋಬನನ್ನು ಪಡೆದನು. ಯಾಕೋಬನು ಮರಿಯಳ ಗಂಡನಾದ ಯೋಸೇಫನನ್ನು ಪಡೆದನು. ಈ 16 ಮರಿಯಳಲ್ಲಿ ಕ್ರಿಸ್ತನೆಂಬ ಯೇಸು ಹುಟ್ಟಿದನು.

ಹೀಗೆ ಅಬ್ರಹಾಮನಿಂದ ದಾವೀದನ ವರೆಗೂ ಒಟ್ಟು ಹದಿನಾಲ್ಕು ತಲೆಗಳು. ದಾವೀದ 17 ಮೊದಲುಗೊಂಡು ಬಾಬೆಲಿಗೆ ಸೆರೇಹೋಗುವ ವರೆಗೂ ಹದಿನಾಲ್ಕು ತಲೆಗಳು. ಬಾಬೆಲಿಗೆ ಸೆರೇಹೋದಂದಿನಿಂದ ಕ್ರಿಸ್ತನ ವರೆಗೂ ಹದಿನಾಲ್ಕು ತಲೆಗಳು.

### ಯೇಸು ಕ್ರಿಸ್ತನ ಜನನವು.

ಯೇಸು ಕ್ರಿಸ್ತನ ಜನನವು ಹ್ಯಾಗಾಯಿತಂದರೆ—ಆತನ ತಾಯಿಯಾದ ಮರಿಯಳನ್ನು 18 ಯೋಸೇಫನಿಗೆ ನಿಶ್ಚಯಮಾಡಿರಲಾಗಿ ಅವರು ಕೂಡುವದಕ್ಕಿಂತ ಮುಂಚೆ ಆಕೆಯು ಪವಿತ್ರಾತ್ಮದಿಂದ ಬಸುರಾಗಿದ್ದದ್ದು ತಿಳಿಯ ಬಂತು. ಆದರೆ ಆಕೆಯ ಗಂಡನಾದ ಯೋಸೇ 19 ಫನು ಸಜ್ಜನನಾಗಿದ್ದು ಆಕೆಯನ್ನು ಬೈಲಿಗೆ ತರುವದಕ್ಕೆ ಮನಸ್ಸಿಲ್ಲದೆ, ಯಾರಿಗೂ ತಿಳಿಯದಂತೆ ಆಕೆಯನ್ನು ಬಿಟ್ಟುಬಿಡಬೇಕೆಂದಿದ್ದನು. ಅವನು ಇದನ್ನು ಆಲೋಚಿಸುತ್ತಿರುವಾಗ 20 ಕರ್ತನ ದೂತನು ಅವನಿಗೆ ಕನಸಿನಲ್ಲಿ ಕಾಣಿಸಿಕೊಂಡು—ಎಲೈ ಯೋಸೇಫನೇ, ದಾವೀದನ ವಂಶದವನೇ, ನಿನ್ನ ಹೆಂಡತಿಯಾದ ಮರಿಯಳನ್ನು ಸೇರಿಸಿಕೊಳ್ಳುವದಕ್ಕೆ ಅಂಜಬೇಡ. ಆಕೆಯ ಗರ್ಭವು ಪವಿತ್ರಾತ್ಮದಿಂದಲೇ ಆದದ್ದು. ಆಕೆಯು ಒಬ್ಬ ಮಗನನ್ನು ಹಡೆಯುವ 21 ಳು; ನೀನು ಆತನಿಗೆ ಯೇಸು ಎಂದು ಹೆಸರಿಡಬೇಕು; ಯಾಕಂದರೆ ಆತನೇ ತನ್ನ ಜನರನ್ನು ಅವರ ಪಾಪಗಳಿಂದ ಬಿಡಿಸಿಕಾಯುವನು ಅಂದನು. ಕರ್ತನು ಪ್ರವಾದಿಯ ಮುಖಾಂ 22 ತರ ಹೇಳಿದ ಮಾತು ನೆರವೇರುವಂತೆ ಇದೆಲ್ಲಾ ನಡೆಯಿತು; ಆ ಮಾತು ಏನಂದರೆ—

> ಇಗೋ, ಕನ್ಯಕೆಯು ಬಸುರಾಗಿ ಒಬ್ಬ ಮಗನನ್ನು ಹಡೆಯುವಳು; 23
> ಆತನಿಗೆ ಇಮ್ಮಾನುವೇಲ್ ಎಂದು ಹೆಸರಿಡುವರು

ಎಂಬುವದು[1]. ದೇವರು ನಮ್ಮ ಕೂಡ ಇದ್ದಾನೆಂದು ಈ ಹೆಸರಿನ ಅರ್ಥ. ಆಗ 24 ಯೋಸೇಫನು ನಿದ್ದೆತಿಳಿದೆದ್ದು, ಕರ್ತನ ದೂತನು ಅಪ್ಪಣೆಕೊಟ್ಟ ಹಾಗೆ ತನ್ನ ಹೆಂಡತಿಯನ್ನು ಸೇರಿಸಿಕೊಂಡನು. ಆದರೆ ಆಕೆಯು ಗಂಡುಮಗನನ್ನು ಹಡೆಯುವ ತನಕ ಆಕೆ 25 ಯನ್ನು ಅರಿಯಲಿಲ್ಲ. ಮಗುವಿಗೆ ಯೇಸುವೆಂದು ಹೆಸರಿಟ್ಟನು.

### ಜೋಯಿಸರು ಮೂಡಲಿಂದ ಬಂದು ಯೇಸುವಿಗೆ ನಮಸ್ಕರಿಸಿದ್ದು.

**2** ಅರಸನಾದ ಹೆರೋದನ ದಿನಗಳಲ್ಲಿ ಯೂದಾಯ ಸೀಮೆಯ ಬೇತ್ಲೆಹೇಮ್ ಎಂಬ ಊರಲ್ಲಿ ಯೇಸು ಹುಟ್ಟಿದಾಗ, ಮೂಡಣದೇಶದ ಜೋಯಿಸರು ಯೆರೂಸಲೇಮಿಗೆ

[1] ಯೆಶಾಯ ೭, ೧೪.

2 ಬಂದು—ಯೆಹೂದ್ಯರ ಅರಸನಾಗಿ ಹುಟ್ಟಿದವನು ಎಲ್ಲಿದ್ದಾನೆ? ಆತನನ್ನು ಸೂಚಿಸುವ ನಕ್ಷತ್ರವನ್ನು ನಾವು ಮೂಡಣದೇಶದಲ್ಲಿ ಕಂಡು ಆತನಿಗೆ ಅಡ್ಡಬೀಳುವದಕ್ಕೆ ಬಂದೆವು
3 ಅಂದರು. ಇದನ್ನು ಕೇಳಿ ಅರಸನಾದ ಹೆರೋದನೂ ಅವನ ಕೂಡ ಯೆರೂಸಲೇಮಿ
4 ನವರೆಲ್ಲರೂ ಕಳವಳಪಟ್ಟರು. ಅವನು ಯೆಹೂದ್ಯರ ಎಲ್ಲಾ ಮಹಾಯಾಜಕರನ್ನೂ ಶಾಸ್ತ್ರಿಗಳನ್ನೂ ಕೂಡಿಸಿ—ಕ್ರಿಸ್ತನು ಹುಟ್ಟಬೇಕಾದದ್ದು ಎಲ್ಲಿ ಎಂದು ಅವರನ್ನು ಕೇಳಿ
5 ದನು. ಅವರು ಅವನಿಗೆ—ಯೂದಾಯದ ಬೇತ್ಲೆಹೇಮಿನಲ್ಲಿಯೇ; ಯಾಕಂದರೆ—
6 ಯೆಹೂದ ಸೀಮೆಯ ಬೇತ್ಲೆಹೇಮೇ,
ಯೆಹೂದದ ಮುಖ್ಯಪಟ್ಟಣಗಳಲ್ಲಿ ನೀನು ಎಷ್ಟುಮಾತ್ರವೂ ಸಣ್ಣದಲ್ಲ.
ಒಬ್ಬ ಅಧಿಪತಿ ನಿನ್ನಲ್ಲೇ ಹುಟ್ಟುವನು;
ಆತನು ನನ್ನ ಪ್ರಜೆಯಾದ ಇಸ್ರಯೇಲನ್ನು ಆಳತಕ್ಕವನು
7 ಎಂಬದಾಗಿ[1] ಪ್ರವಾದಿಯ ಮುಖಾಂತರ ಬರೆದದೆ ಎಂದು ಹೇಳಿದರು. ಆಗ ಹೆರೋದನು ಯಾರಿಗೂ ತಿಳಿಯದಂತೆ ಆ ಜೋಯಿಸರನ್ನು ಕರಸಿ, ಆ ನಕ್ಷತ್ರವು ಕಾಣಿಸಿದ
8 ಕಾಲವನ್ನು ಅವರ ಕಡೆಯಿಂದ ಚನ್ನಾಗಿ ತಿಳುಕೊಂಡು—ನೀವು ಹೋಗಿ ಆ ಕೂಸಿನ ವಿಷಯದಲ್ಲಿ ಚನ್ನಾಗಿ ವಿಚಾರಣೆ ಮಾಡಿರಿ; ಅದು ಸಿಕ್ಕಿದ ಮೇಲೆ ನನಗೆ ತಿಳಿಸಿರಿ; ನಾನೂ ಬಂದು ಅದಕ್ಕೆ ಅಡ್ಡಬೀಳಬೇಕು ಎಂದು ಹೇಳಿ ಅವರನ್ನು ಬೇತ್ಲೆಹೇಮಿಗೆ ಕಳುಹಿಸಿದನು.

9 ಅವರು ಅರಸನ ಮಾತನ್ನು ಕೇಳಿ ಹೊರಟಾಗ, ಮೂಡಣದೇಶದಲ್ಲಿ ಕಂಡ ನಕ್ಷತ್ರವು ಅವರ ಮುಂದೆಮುಂದೆ ನಡೆದು, ಕೂಸು ಇದ್ದ ಸ್ಥಳದ ಮೇಲೆ ಬಂದು ನಿಂತಿತು.
10, 11 ಅವರು ನಕ್ಷತ್ರವನ್ನು ಕಂಡು ಅತ್ಯಂತ ಸಂತೋಷಪಟ್ಟರು. ಮತ್ತು ಆ ಮನೆಯೊಳಕ್ಕೆ ಹೋಗಿ, ಆ ಕೂಸನ್ನು ಅದರ ತಾಯಿಯಾದ ಮರಿಯಳ ಬಳಿಯಲ್ಲಿ ಕಂಡು, ಅದಕ್ಕೆ ಸಾಷ್ಟಾಂಗ ನಮಸ್ಕಾರ ಮಾಡಿ, ತಮ್ಮ ಗಂಟುಗಳನ್ನು ಬಿಚ್ಚಿ, ಅದಕ್ಕೆ ಚಿನ್ನ
12 ಧೂಪ ರಕ್ತಬೋಳಗಳನ್ನು ಕಾಣಿಕೆಯಾಗಿ ಕೊಟ್ಟರು. ಆ ಮೇಲೆ ದೇವರು ಕನಸಿನಲ್ಲಿ ಅವರಿಗೆ—ನೀವು ಹೆರೋದನ ಬಳಿಗೆ ತಿರಿಗಿ ಹೋಗಬಾರದೆಂದು ಅಪ್ಪಣೆಕೊಟ್ಟದ್ದರಿಂದ, ಅವರು ಮತ್ತೊಂದು ದಾರಿಯಿಂದ ತಮ್ಮ ದೇಶಕ್ಕೆ ಹೊರಟುಹೋದರು.

ಅರಸನು ಯೇಸುವನ್ನು ಕೊಲ್ಲುವದಕ್ಕೆ ಪ್ರಯತ್ನಮಾಡಿದ್ದು.

13 ಅವರು ಹೋದ ಮೇಲೆ ಕರ್ತನ ದೂತನು ಯೋಸೇಫನಿಗೆ ಕನಸಿನಲ್ಲಿ ಕಾಣಿಸಿಕೊಂಡು—ನೀನು ಎದ್ದು ಈ ಕೂಸನ್ನೂ ಇದರ ತಾಯಿಯನ್ನೂ ಕರಕೊಂಡು ಐಗುಪ್ತದೇಶಕ್ಕೆ ಓಡಿಹೋಗಿ, ನಾನು ನಿನಗೆ ಹೇಳುವ ತನಕ ಅಲ್ಲೇ ಇರು; ಹೆರೋದನು ಈ
14 ಕೂಸನ್ನು ಕೊಲ್ಲಬೇಕೆಂದು ಅದನ್ನು ಹುಡುಕುತ್ತಿರುವನು ಅಂದನು. ಆಗ ಅವನು ಎದ್ದು ಕೂಸನ್ನೂ ಅದರ ತಾಯಿಯನ್ನೂ ರಾತ್ರಿವೇಳೆಯಲ್ಲಿ ಕರಕೊಂಡು ಐಗುಪ್ತದೇಶಕ್ಕೆ
15 ಹೊರಟುಹೋಗಿ, ಹೆರೋದನು ತೀರಿಹೋಗುವ ತನಕ ಅಲ್ಲೇ ಇದ್ದನು. ಇದರಿಂದ—

[1] ಮೀಕ ೫, ೭.

ನನ್ನ ಮಗನನ್ನು ಐಗುಪ್ತದೇಶದೊಳಗಿಂದ ಕರೆದೆನೆಂದು[1] ಕರ್ತನು ಪ್ರವಾದಿಯ ಮುಖಾಂತರ ಹೇಳಿದ ಮಾತು ನೆರವೇರಿತು.

ಆಗ ಹೆರೋದನು ತನಗೆ ಜೋಯಿಸರು ಮೋಸಮಾಡಿದರೆಂದು ತಿಳಿದು, ಬಹಳ 16 ಸಿಟ್ಟಾಗಿ ಆಳುಗಳನ್ನು ಕಳುಹಿಸಿ, ತಾನು ಜೋಯಿಸರಿಂದ ತಿಳುಕೊಂಡ ಕಾಲಕ್ಕೆ ಸರಿಯಾಗಿ, ಬೇತ್ಲೆಹೇಮಿನಲ್ಲಿಯೂ ಅದರ ಎಲ್ಲಾ ನೆರೆಹೊರೆ ಹಳ್ಳಿಗಳಲ್ಲಿಯೂ ಎರಡು ವರುಷದೊಳಗಿನ ಗಂಡುಕೂಸುಗಳನ್ನೆಲ್ಲಾ ಕೊಲ್ಲಿಸಿದನು. ಯೆರೆಮೀಯನೆಂಬ ಪ್ರವಾ 17 ದಿಯು ಹೇಳಿದ ಮಾತು ಆ ಕಾಲದಲ್ಲಿ ನೆರವೇರಿತು; ಅದೇನಂದರೆ—

ರಾಮದಲ್ಲಿ ಬೊಬ್ಬೆಯು ಕೇಳಿಸಿತು; 18
ಅಳುವಿಕೆಯೂ ಬಹು ಗೋಳಾಟವೂ ಉಂಟಾದವು;
ರಾಹೇಲಳು ತನ್ನ ಮಕ್ಕಳಿಗೋಸ್ಕರ ಅತ್ತತ್ತು,
ಅವರು ಇಲ್ಲದೆಹೋದದ್ದಕ್ಕಾಗಿ ಸಮಾಧಾನ ಹೊಂದಲೊಲ್ಲದೆ ಇದ್ದಳು

ಎಂಬುವದು[2].

ಹೆರೋದನು ತೀರಿಹೋದ ಮೇಲೆ ಐಗುಪ್ತದೇಶದಲ್ಲಿ ಕರ್ತನ ದೂತನು ಯೋಸೇಫ 19 ನಿಗೆ ಕನಸಿನಲ್ಲಿ ಕಾಣಿಸಿಕೊಂಡು—ನೀನು ಎದ್ದು ಕೂಸನ್ನೂ ಅದರ ತಾಯಿಯನ್ನೂ ಕರ 20 ಕೊಂಡು ಇಸ್ರಯೇಲ್‌ದೇಶಕ್ಕೆ ಹೋಗು; ಕೂಸಿನ ಪ್ರಾಣವನ್ನು ತೆಗೆಯಬೇಕೆಂದಿದ್ದವರು ಸತ್ತುಹೋದರು ಎಂದು ಹೇಳಿದನು. ಆಗ ಯೋಸೇಫನು ಎದ್ದು ಕೂಸನ್ನೂ 21 ಅದರ ತಾಯಿಯನ್ನೂ ಕರಕೊಂಡು ಇಸ್ರಯೇಲ್‌ದೇಶಕ್ಕೆ ಬಂದನು. ಆದರೆ ಅರ್ಖೆಲಾ 22 ಯನು ತನ್ನ ತಂದೆಯಾದ ಹೆರೋದನಿಗೆ ಬದಲಾಗಿ ಯೂದಾಯವನ್ನು ಆಳುತ್ತಾನೆಂದು ಕೇಳಿ, ಅಲ್ಲಿಗೆ ಹೋಗುವದಕ್ಕೆ ಅಂಜಿದನು. ಆಗ ಅವನು ಕನಸಿನಲ್ಲಿ ದೇವರ ಅಪ್ಪಣೆಯನ್ನು ಹೊಂದಿ ಗಲಿಲಾಯ ಸೀಮೆಗೆ ಹೋದನು. ಮತ್ತು ನಜರೇತೆಂಬ ಊರಿಗೆ 23 ಬಂದು ಅಲ್ಲಿ ಮನೆಮಾಡಿಕೊಂಡು ಇದ್ದನು. ಇದರಿಂದ—ನಜರಾಯನೆಂಬ ಹೆಸರು ಆತನಿಗೆ ಬರುವದು ಎಂಬದಾಗಿ ಪ್ರವಾದಿಗಳಿಂದ ಹೇಳಿಸಿರುವ ಮಾತು ನೆರವೇರಿತು.

### ಸ್ನಾನಿಕನಾದ ಯೋಹಾನನ ಉಪದೇಶ.

(ಮಾರ್ಕ 1, 2—8; ಲೂಕ 3, 1—18; ಯೋಹಾನ 1, 6—8, 19—34.)

ಆ ದಿನಗಳಲ್ಲಿ ಸ್ನಾನಿಕನಾದ ಯೋಹಾನನು—ಪರಲೋಕರಾಜ್ಯವು ಸಮೀಪವಾಯಿತು; 3 ದೇವರ ಕಡೆಗೆ ತಿರುಗಿಕೊಳ್ಳಿರಿ ಎಂದು ಯೂದಾಯದ ಅಡವಿಯಲ್ಲಿ ಸಾರಿ ಹೇಳುತ್ತಾ 2 ಬಂದನು.

ಕರ್ತನ ದಾರಿಯನ್ನು ಸಿದ್ಧಮಾಡಿರಿ; 3
ಆತನ ಹಾದಿಗಳನ್ನು ಸಮಮಾಡಿರಿ ಎಂದು
ಅಡವಿಯಲ್ಲಿ ಕೂಗುವವನ ಶಬ್ದವದೆ

ಎಂಬದಾಗಿ[3] ಪ್ರವಾದಿಯಾದ ಯೆಶಾಯನಿಂದ ಸೂಚಿತನಾದವನು ಇವನೇ. ಈ 4

---

[1] ಹೋಶೆಯ ೧೧, ೧. [2] ಯೆರೆಮೀಯ ೩೧, ೧೫. [3] ಯೆಶಾಯ ೪೦, ೩.

ಯೋಹಾನನಿಗೆ ಒಂಟೇ ಕೂದಲಿನ ಉಡುಪೂ ಸೊಂಟದಲ್ಲಿ ತೊಗಲಿನ ನಡುಕಟ್ಟೂ
ಇದ್ದವು. ಅವನಿಗೆ ಮಿಡಿತೆ ಮತ್ತು ಕಾಡಜೇನು ಆಹಾರವಾಗಿದ್ದವು.
5 ಆಗ ಯೆರೂಸಲೇಮೂ ಎಲ್ಲಾ ಯೂದಾಯವೂ ಯೊರ್ದನ್‌ಹೊಳೆಯ ಸುತ್ತಲಿರುವ
6 ಎಲ್ಲಾ ಸೀಮೆಯೂ ಅವನ ಬಳಿಗೆ ಹೊರಟುಹೋಗಿ, ಅವರು ತಮ್ಮತಮ್ಮ ಪಾಪಗಳನ್ನು
ಹೇಳಿಕೊಂಡು ಯೊರ್ದನ್‌ಹೊಳೆಯಲ್ಲಿ ಅವನಿಂದ ದೀಕ್ಷಾಸ್ನಾನಮಾಡಿಸಿಕೊಳ್ಳುತ್ತಿದ್ದರು.
7 ಆದರೆ ಅವನು ಫರಿಸಾಯರಲ್ಲಿಯೂ ಸದ್ದುಕಾಯರಲ್ಲಿಯೂ ಅನೇಕರು ತನ್ನಿಂದ
ಸ್ನಾನಮಾಡಿಸಿಕೊಳ್ಳುವದಕ್ಕೆ ಬರುವದನ್ನು ಕಂಡು ಅವರಿಗೆ—ಎಲೈ ಸರ್ಪಜಾತಿಯವರೇ,
ಮುಂದೆ ಕಾಣಬರುವ ದೈವಕೋಪದಿಂದ ತಪ್ಪಿಸಿಕೊಳ್ಳುವದಕ್ಕೆ ನಿಮಗೆ ಉಪದೇಶ
8 ಮಾಡಿದವರ್ಯಾರು? ಹಾಗಾದರೆ ನಿಮ್ಮ ಮನಸ್ಸು ದೇವರ ಕಡೆಗೆ ತಿರುಗಿತೆಂಬುವದಕ್ಕೆ
9 ತಕ್ಕ ಫಲವನ್ನು ತೋರಿಸಿರಿ. ಅಬ್ರಹಾಮನು ನಮಗೆ ಮೂಲಪುರುಷನಲ್ಲವೇ ಎಂಬುವ
ಆಲೋಚನೆಯನ್ನು ಬಿಡಿರಿ. ದೇವರು ಅಬ್ರಹಾಮನಿಗೆ ಈ ಕಲ್ಲುಗಳಿಂದಲೂ ಮಕ್ಕ
10 ಳನ್ನು ಹುಟ್ಟಿಸಬಲ್ಲನೆಂದು ನಿಮಗೆ ಹೇಳುತ್ತೇನೆ. ಈಗಲೇ ಮರಗಳ ಬೇರಿಗೆ ಕೊಡಲಿ
ಹಾಕಿಯದೆ; ಒಳ್ಳೇ ಫಲವನ್ನು ಕೊಡದ ಪ್ರತಿ ಮರವನ್ನು ಕಡಿದು ಬೆಂಕಿಯಲ್ಲಿ ಹಾಕು
11 ವರು. ನಾನಂತೂ ನಿಮ್ಮ ಮನಸ್ಸು ತಿರುಗಿಕೊಳ್ಳಬೇಕೆಂಬುವದಕ್ಕೆ ನಿಮಗೆ ನೀರಿನಲ್ಲಿ
ಸ್ನಾನಮಾಡಿಸುತ್ತೇನೆ. ಆದರೆ ನನ್ನ ಹಿಂದೆ ಬರುವವನು ನನಗಿಂತ ಶಕ್ತನು; ಆತನ ಕೆರ
ಗಳನ್ನು ಹೊರಲಿಕ್ಕಾದರೂ ನಾನು ಯೋಗ್ಯನಲ್ಲ; ಆತನು ಪವಿತ್ರಾತ್ಮದಲ್ಲಿಯೂ ಬೆಂಕಿ
12 ಯಲ್ಲಿಯೂ ನಿಮಗೆ ಸ್ನಾನಮಾಡಿಸುವನು. ಆತನು ಮೊರವನ್ನು ಕೈಯಲ್ಲಿ ಹಿಡಿದಿ
ದ್ದಾನೆ; ತನ್ನ ಕಣದಲ್ಲಿಯ ರಾಶಿಯನ್ನು ತೂರಿ ಹಸನುಮಾಡಿ, ತನ್ನ ಗೋದಿಯನ್ನು ಕಣ
ಜದಲ್ಲಿ ತುಂಬಿಕೊಂಡು, ಹೊಟ್ಟನ್ನು ಆರದಂಥ ಬೆಂಕಿಯಲ್ಲಿ ಸುಟ್ಟುಬಿಡುವನು ಎಂದು
ಹೇಳಿದನು.

ಯೇಸು ದೀಕ್ಷಾಸ್ನಾನ ಮಾಡಿಸಿಕೊಂಡದ್ದು. (ಮಾರ್ಕ 1, 9—11; ಲೂಕ 3, 21. 22.)

13 ಆ ಕಾಲದಲ್ಲಿ ಯೇಸು ಯೋಹಾನನಿಂದ ಸ್ನಾನಮಾಡಿಸಿಕೊಳ್ಳಬೇಕೆಂದು ಗಲಿಲಾಯ
14 ದಿಂದ ಯೊರ್ದನ್‌ಹೊಳೆಗೆ ಬಂದನು. ಆಗ ಯೋಹಾನನು—ನಾನು ನಿನ್ನಿಂದ ಸ್ನಾನ
ಮಾಡಿಸಿಕೊಳ್ಳತಕ್ಕವನಾಗಿರುವಲ್ಲಿ ನೀನು ನನ್ನ ಬಳಿಗೆ ಬರುವದೇನು ಎಂದು ಹೇಳಿ
15 ಆತನನ್ನು ತಡೆಯುತ್ತಾ ಇದ್ದನು. ಆದರೆ ಯೇಸು ಅವನಿಗೆ—ಸದ್ಯಕ್ಕೆ ಒಪ್ಪಿಕೋ;
ಹೀಗೆ ನಾವು ಎಲ್ಲಾ ಧರ್ಮವನ್ನು ನೆರವೇರಿಸ ತಕ್ಕದ್ದಾಗಿದೆ ಎಂದು ಹೇಳಿದಾಗ ಅವನು
ಒಪ್ಪಿಕೊಂಡನು.
16 ಯೇಸು ಸ್ನಾನಮಾಡಿಸಿಕೊಂಡ ಕೂಡಲೇ ನೀರಿನಿಂದ ಮೇಲಕ್ಕೆ ಬರಲು, ಇಗೋ,
ಆತನಿಗೆ ಆಕಾಶವು ತೆರೆಯಿತು; ಮತ್ತು ದೇವರ ಆತ್ಮ ಪಾರಿವಾಳದ ಹಾಗೆ ಇಳಿದು ತನ್ನ
17 ಮೇಲೆ ಬರುವದನ್ನು ಕಂಡನು. ಆಗ—ಈತನು ಪ್ರಿಯನಾಗಿರುವ ನನ್ನ ಮಗನು, ಈತ
ನನ್ನು ನಾನು ಮೆಚ್ಚಿದ್ಧೇನೆ ಎಂದು ಆಕಾಶವಾಣಿ ಆಯಿತು.

ಸೈತಾನನು ಯೇಸುವನ್ನು ಪಾಪದಲ್ಲಿ ಸಿಕ್ಕಿಸುವದಕ್ಕೆ ಪ್ರಯತ್ನಿಸಿದ್ದು.

(ಮಾರ್ಕ 1, 12. 13; ಲೂಕ 4, 1—13.)

**4** ಆಗ ಯೇಸು ಸೈತಾನನಿಂದ ಶೋಧಿಸಲ್ಪಡುವದಕ್ಕಾಗಿ ಆತ್ಮನು ಆತನನ್ನು ಅಡವಿಗೆ ನೈದನು. 2 ಆತನು ನಾಲ್ವತ್ತು ದಿವಸ ಹಗಲಿರುಳು ಉಪವಾಸವಿದ್ದ ತರುವಾಯ ಆತನಿಗೆ ಹಸಿವೆಯಾಯಿತು.

3 ಆಗ ಆ ಶೋಧಕನು ಆತನ ಬಳಿಗೆ ಬಂದು—ನೀನು ದೇವರ ಮಗನಾಗಿದ್ದರೆ, ಈ ಕಲ್ಲುಗಳು ರೊಟ್ಟಿಯಾಗುವಂತೆ ಅಪ್ಪಣೇಕೊಡು ಅಂದನು. 4 ಅದಕ್ಕಾತನು—ಮನುಷ್ಯನು ರೊಟ್ಟೀ ತಿಂದ ಮಾತ್ರದಿಂದ ಬದುಕುವದಿಲ್ಲ, ದೇವರ ಬಾಯಿಯೊಳಗಿಂದ ಹೊರಡುವ ಪ್ರತಿಯೊಂದು ಮಾತಿನಿಂದಲೇ ಬದುಕುವನು ಎಂದು[1] ಬರೆದದೆ ಅಂದನು.

5 ಆಗ ಸೈತಾನನು ಆತನನ್ನು ಪರಿಶುದ್ಧಪಟ್ಟಣಕ್ಕೆ[2] ಕರಕೊಂಡು ಹೋಗಿ, ದೇವಾಲಯದ 6 ಶಿಖರದ ಮೇಲೆ ನಿಲ್ಲಿಸಿ, ಆತನಿಗೆ—ನೀನು ದೇವರ ಮಗನಾಗಿದ್ದರೆ, ಇಲ್ಲಿಂದ ಕೆಳಕ್ಕೆ ದುಮುಕು;

ಆತನು ನಿನ್ನ ವಿಷಯವಾಗಿ ತನ್ನ ದೂತರಿಗೆ ಅಪ್ಪಣೇಕೊಡುವನು;
ನಿನ್ನ ಕಾಲು ಕಲ್ಲಿಗೆ ತಗಲದಂತೆ ಅವರು ನಿನ್ನನ್ನು ಕೈಗಳಲ್ಲಿ ಹಿಡುಕೊಳ್ಳುವರು[3]

ಎಂಬದಾಗಿ ಬರೆದದೆಯಲ್ಲಾ ಎಂದು ಹೇಳಿದನು. 7 ಅದಕ್ಕೆ ಯೇಸು—ನಿನ್ನ ದೇವರಾಗಿರುವ ಕರ್ತನನ್ನು ಪರೀಕ್ಷಿಸಬಾರದೆಂಬದು ಸಹ[4] ಬರೆದದೆ ಅಂದನು.

8 ಬಳಿಕ ಸೈತಾನನು ಆತನನ್ನು ಬಹಳ ಎತ್ತರವಾದ ಬೆಟ್ಟಕ್ಕೆ ಕರಕೊಂಡು ಹೋಗಿ, 9 ಲೋಕದ ಎಲ್ಲಾ ರಾಜ್ಯಗಳನ್ನೂ ಅವುಗಳ ವೈಭವವನ್ನೂ ಆತನಿಗೆ ತೋರಿಸಿ—ನೀನು ನನಗೆ ಸಾಷ್ಟಾಂಗನಮಸ್ಕಾರ ಮಾಡಿದರೆ, ಇವುಗಳನ್ನೆಲ್ಲಾ ನಿನಗೆ ಕೊಡುತ್ತೇನೆ ಅಂದನು. 10 ಯೇಸು ಅವನಿಗೆ—ಸೈತಾನನೇ, ನೀನು ತೊಲಗಿ ಹೋಗು. ನಿನ್ನ ದೇವರಾಗಿರುವ ಕರ್ತನಿಗೆ ಅಡ್ಡಬಿದ್ದು ಆತನೊಬ್ಬನನ್ನೇ ಆರಾಧಿಸಬೇಕೆಂಬದಾಗಿ[5] ಬರೆದದೆ ಎಂದು ಹೇಳಿದನು.

11 ಆಗ ಸೈತಾನನು ಆತನನ್ನು ಬಿಟ್ಟು ಹೋದನು. ಮತ್ತು ದೇವದೂತರು ಬಂದು ಆತನಿಗೆ ಉಪಚಾರ ಮಾಡಿದರು.

ಯೇಸು ಗಲಿಲಾಯ ಸೀಮೆಯಲ್ಲಿ ಸುವಾರ್ತೆಯನ್ನು ಸಾರುವದಕ್ಕೆ ಪ್ರಾರಂಭಮಾಡಿದ್ದು.

(ಮಾರ್ಕ 1, 14. 15; ಲೂಕ 4, 14. 15.)

12 ಯೋಹಾನನನ್ನು ಹಿಡಿದು ಸೆರೇಹಾಕಿದರೆಂದು ಯೇಸು ಕೇಳಿ ಆ ಸ್ಥಳವನ್ನು ಬಿಟ್ಟು ಗಲಿಲಾಯ ಸೀಮೆಗೆ ಹೊರಟುಹೋದನು. 13 ಮತ್ತು ನಜರೇತೆಂಬ ಊರನ್ನು ಬಿಟ್ಟು ಜೆಬುಲೋನ್ ನೆಫ್ತಲೀಮ್ ಎಂಬ ನಾಡುಗಳಿಗೆ ಬಂದು ಸಮುದ್ರದ ಹತ್ತರದಲ್ಲಿರುವ ಕಪೆರ್ನೌಮೆಂಬ ಊರಿನಲ್ಲಿ ಮನೆಮಾಡಿಕೊಂಡು ಇದ್ದನು. 14 ಇದರಿಂದ ಯೆಶಾಯನೆಂಬ ಪ್ರವಾದಿಯ ಮುಖಾಂತರ ಹೇಳಿಸಿರುವ ಮಾತು ನೆರವೇರಿತು; ಆ ಮಾತು ಏನಂದರೆ—

---

1) ದ್ವಿತೀಯ ನ್ಯಾಯ ೮, ೩. 2) ಅಂದರೆ, ಯೆರೂಸಲೇಮಿಗೆ. 3) ಕೀರ್ತನೆ ೯೧, ೧೧. ೧೨.
4) ದ್ವಿತೀಯ ನ್ಯಾಯ ೬, ೧೬. 5) ದ್ವಿತೀಯ ನ್ಯಾಯ ೬, ೧೩; ೧೦, ೧೬.

15 ಜೆಬುಲೋನ್ ಸೀಮೆ ಮತ್ತು ನೆಫ್ತಲೀಮ್ ಸೀಮೆ,
ಯೊರ್ದನಿನ ಆಚೆ, ಸಮುದ್ರದ ಕಡೆಗಿರುವ ಸೀಮೆ,
ಅನ್ಯಜನಗಳಿರುವ ಗಲಿಲಾಯ ಸೀಮೆ,
16 ಕತ್ತಲಲ್ಲಿ ವಾಸಿಸಿದ ಈ ಸೀಮೆಗಳ ಪ್ರಜೆಗೆ ದೊಡ್ಡ ಬೆಳಕು ಕಾಣಿಸಿತು;
ಕಾರ್ಗತ್ತಲಾದ ದೇಶದಲ್ಲಿದ್ದವರಿಗೆ ಸೂರ್ಯೋದಯವಾಯಿತು[1]

17 ಎಂಬುವದು. ಅಂದಿನಿಂದ ಯೇಸು—ಪರಲೋಕರಾಜ್ಯವು ಸಮೀಪವಾಯಿತು; ದೇವರ ಕಡೆಗೆ ತಿರುಗಿಕೊಳ್ಳಿರಿ ಎಂದು ಸಾರಿಹೇಳುವದಕ್ಕೆ ಪ್ರಾರಂಭಿಸಿದನು.

### ಯೇಸು ಪ್ರಥಮ ಶಿಷ್ಯರನ್ನು ಮಾಡಿಕೊಂಡದ್ದು.

(ಮಾರ್ಕ 1, 16—20; ಲೂಕ 5, 2—11; ಯೋಹಾನ 1, 40—42.)

18 ಹೀಗಿರುವಲ್ಲಿ, ಯೇಸು ಗಲಿಲಾಯ ಸಮುದ್ರದ ಬಳಿಯಲ್ಲಿ ತಿರುಗಾಡುತ್ತಿರುವಾಗ, ಆತನು ಅಣ್ಣತಮ್ಮಂದಿರಿಬ್ಬರನ್ನು ಕಂಡನು; ಅವರು ಪೇತ್ರನೆನ್ನಿಸಿಕೊಳ್ಳುವ ಸೀಮೋನ ಮತ್ತು ಅವನ ತಮ್ಮನಾದ ಅಂದ್ರೆಯ. ಅವರು ಬೆಸ್ತರು; ಸಮುದ್ರದಲ್ಲಿ ಬಲೇ ಬೀಸು
19 ತ್ತಿದ್ದರು. ಅವರಿಗೆ ಆತನು—ನನ್ನನ್ನು ಹಿಂಬಾಲಿಸಿರಿ; ನಿಮ್ಮನ್ನು ಮನುಷ್ಯರನ್ನ ಹಿಡಿ
20 ಯುವ ಬೆಸ್ತರಾಗ ಮಾಡುವೆನು ಎಂದು ಹೇಳುತ್ತಲೇ, ಅವರು ತಮ್ಮ ಬಲೆಗಳನ್ನು
21 ಬಿಟ್ಟು ಆತನ ಹಿಂದೆ ಹೋದರು. ಯೇಸು ಅಲ್ಲಿಂದ ಮುಂದೆ ಹೋಗಿ ಇನ್ನಿಬ್ಬರು ಅಣ್ಣತಮ್ಮಂದಿರನ್ನು ಕಂಡನು; ಇವರು ಜೆಬೆದಾಯನ ಮಕ್ಕಳಾದ ಯಾಕೋಬ ಯೋಹಾನರು. ಇವರು ತಮ್ಮ ತಂದೆಯಾದ ಜೆಬೆದಾಯನ ಕೂಡ ದೋಣಿಯಲ್ಲಿ
22 ತಮ್ಮ ಬಲೆಗಳನ್ನು ಸರಿಮಾಡುತ್ತಿದ್ದರು. ಯೇಸು ಇವರನ್ನೂ ಕರೆದನು. ಕೂಡಲೇ ಅವರು ದೋಣಿಯನ್ನೂ ತಮ್ಮ ತಂದೆಯನ್ನೂ ಬಿಟ್ಟು ಆತನ ಹಿಂದೆ ಹೋದರು.

### ಯೇಸು ಸುವಾರ್ತೆಯನ್ನು ಸಾರಿ ರೋಗಗಳನ್ನು ಪರಿಹರಿಸಿ ಹೆಸರುಗೊಂಡದ್ದು.

(ಮಾರ್ಕ 1, 39; ಲೂಕ 4, 15. 44; 6, 17—19.)

23 ಮತ್ತು ಯೇಸು ಗಲಿಲಾಯದಲ್ಲೆಲ್ಲಾ ತಿರುಗಾಡಿ, ಅಲ್ಲಿಯವರ ಸಭಾಮಂದಿರಗಳಲ್ಲಿ ಉಪದೇಶ ಮಾಡುತ್ತಾ, ಪರಲೋಕರಾಜ್ಯದ ಸುವಾರ್ತೆಯನ್ನು ಸಾರಿಹೇಳುತ್ತಾ, ಜನರ ಎಲ್ಲಾತರದ ರೋಗಗಳನ್ನೂ ಎಲ್ಲಾತರದ ಬೇನೆಗಳನ್ನೂ ವಾಸಿಮಾಡುತ್ತಾ ಬಂದನು.
24 ಆತನ ಸುದ್ದಿಯು ಸಿರಿಯ ದೇಶದಲ್ಲೆಲ್ಲಾ ಹಬ್ಬಿದ್ದರಿಂದ, ಮೈಯಲ್ಲಿ ನೆಟ್ಟಗಿಲ್ಲದವರನ್ನು, ಅಂದರೆ ತರತರದ ರೋಗಬಾಧೆಗಳಿಂದ ಕಷ್ಟಪಡುವವರನ್ನೂ ದೆವ್ವಹಿಡಿದವರನ್ನೂ ಮೂರ್ಛಾರೋಗಿಗಳನ್ನೂ ಪಾರ್ಶ್ವವಾಯುವಿನವರನ್ನೂ ಆತನ ಬಳಿಗೆ ಕರತಂದರು;
25 ಆತನು ಅವರನ್ನು ಸ್ವಸ್ಥಮಾಡಿದನು. ಮತ್ತು ಗಲಿಲಾಯ ದೆಕಪೊಲಿ ಯೆರೂಸಲೇಮ್ ಯೂದಾಯ ಎಂಬೀ ಸ್ಥಳಗಳಿಂದಲೂ ಯೊರ್ದನ್‌ಹೊಳೆಯ ಆಚೇಕಡೆಯಿಂದಲೂ ಜನರು ಗುಂಪುಗುಂಪಾಗಿ ಆತನ ಹಿಂದೆ ಹೋದರು.

[1] ಯೆಶಾಯ ೯, ೧. ೨.

ಯೇಸು ಪರ್ವತದ ಮೇಲೆ ಮಾಡಿದ ಪ್ರಸಂಗವು.

(ಲೂಕ 6, 20—49; 11, 1—4; 9—13; 33—36; 12, 22—24; 57—59; 16, 17. 18.)

ಆತನು ಆ ಜನರ ಗುಂಪುಗಳನ್ನು ಕಂಡು ಬೆಟ್ಟವನ್ನೇರಿ ಕೂತುಕೊಂಡ ತರುವಾಯ **5** ಆತನ ಶಿಷ್ಯರು ಆತನ ಬಳಿಗೆ ಬಂದರು. ಆತನು ಅವರಿಗೆ ಉಪದೇಶಮಾಡಿ ಹೇಳಿ 2 ದ್ದೇನಂದರೆ—

**ಆ**ತ್ಮದಲ್ಲಿ ಬಡವರಾಗಿರುವವರು ಧನ್ಯರು; ಪರಲೋಕರಾಜ್ಯವು ಅವರದು. 3

ದುಃಖಪಡುವವರು ಧನ್ಯರು; ಅವರು ಸಮಾಧಾನ ಹೊಂದುವರು. 4

ಶಾಂತರು ಧನ್ಯರು; ಅವರು ಭೂಮಿಗೆ ಬಾಧ್ಯರಾಗುವರು. 5

ನೀತಿಗೆ ಹಸಿದು ಬಾಯಾರಿದವರು ಧನ್ಯರು; ಅವರಿಗೆ ತೃಪ್ತಿ ಆಗುವದು. 6

ಕರುಣೆಯುಳ್ಳವರು ಧನ್ಯರು; ಅವರು ಕರುಣೆ ಹೊಂದುವರು. 7

ನಿರ್ಮಲಚಿತ್ತರು ಧನ್ಯರು; ಅವರು ದೇವರನ್ನು ನೋಡುವರು. 8

ಸಮಾಧಾನ ಪಡಿಸುವವರು ಧನ್ಯರು; ಅವರು ದೇವರ ಮಕ್ಕಳು ಅನ್ನಿಸಿಕೊಳ್ಳುವರು. 9

ನೀತಿಯ ನಿಮಿತ್ತವಾಗಿ ಹಿಂಸೆಯನ್ನು ತಾಳಿಕೊಳ್ಳುವವರು ಧನ್ಯರು; ಪರಲೋಕ 10 ರಾಜ್ಯವು ಅವರದು.

ಜನರು ನನ್ನ ನಿಮಿತ್ತವಾಗಿ ನಿಮ್ಮನ್ನು ನಿಂದಿಸಿ, ಹಿಂಸೆಪಡಿಸಿ, ನಿಮ್ಮ ಮೇಲೆ ಕೆಟ್ಟಕೆಟ್ಟ 11 ಮಾತುಗಳನ್ನು ಸುಳ್ಳಾಗಿ ಹೊರಿಸಿದರೆ ನೀವು ಧನ್ಯರು. ಸಂತೋಷಪಡಿರಿ, ಉಲ್ಲಾಸ 12 ಪಡಿರಿ; ಪರಲೋಕದಲ್ಲಿ ನಿಮಗೆ ಬಹಳ ಫಲ ಸಿಕ್ಕುವದು; ನಿಮಗಿಂತ ಮುಂಚೆ ಇದ್ದ ಪ್ರವಾದಿಗಳನ್ನೂ ಹೀಗೆಯೇ ಹಿಂಸೆಪಡಿಸಿದರಲ್ಲಾ.

ನೀವು ಭೂಮಿಗೆ ಉಪ್ಪಾಗಿದ್ದೀರಿ. ಉಪ್ಪು ಸಪ್ಪಗಾದರೆ, ಅದಕ್ಕೆ ಇನ್ಯಾತರಿಂದ ರುಚಿ 13 ಬಂದೀತು? ಜನರು ಅದನ್ನು ಹೊರಗೆಹಾಕಿ ತುಳಿಯುವದಕ್ಕೆ ಅದು ಯೋಗ್ಯವೇ ಹೊರತು ಮತ್ತಾವ ಕೆಲಸಕ್ಕೂ ಬಾರದು. ನೀವು ಲೋಕಕ್ಕೆ ಬೆಳಕಾಗಿದ್ದೀರಿ. ಗುಡ್ಡದ 14 ಮೇಲೆ ಕಟ್ಟಿರುವ ಊರು ಮರೆಯಾಗಿರಲಾರದು. ಮತ್ತು ದೀಪವನ್ನು ಹಚ್ಚಿ ಕೊಳಗ 15 ದೊಳಗೆ ಇಡುವದಿಲ್ಲ; ದೀಪಸ್ತಂಭದ ಮೇಲೆ ಇಡುತ್ತಾರೆ. ಆಗ ಅದು ಮನೆಯಲ್ಲಿರುವ ವರೆಲ್ಲರಿಗೆ ಬೆಳಕುಕೊಡುವದು. ಅದರಂತೆ ನಿಮ್ಮ ಬೆಳಕು ಜನರ ಮುಂದೆ ಪ್ರಕಾಶಿಸಲಿ. 16 ಹೀಗಾದರೆ ಅವರು ನಿಮ್ಮ ಒಳ್ಳೇ ಕ್ರಿಯೆಗಳನ್ನು ನೋಡಿ ಪರಲೋಕದಲ್ಲಿರುವ ನಿಮ್ಮ ತಂದೆಯನ್ನು ಕೊಂಡಾಡುವರು.

ಮೋಶೆಯ ಧರ್ಮಶಾಸ್ತ್ರವನ್ನಾಗಲಿ ಪ್ರವಾದಿಗಳ ವಚನಗಳನ್ನಾಗಲಿ ತೆಗೆದುಹಾಕುವ 17 ದಕ್ಕೆ ನಾನು ಬಂದೆನೆಂದು ನೆನಸಬೇಡಿರಿ. ತೆಗೆದುಹಾಕುವದಕ್ಕೆ ಬಂದಿಲ್ಲ; ನೆರವೇರಿಸು ವದಕ್ಕೆ ಬಂದಿದ್ದೇನೆ. ನಿಮಗೆ ಸತ್ಯವಾಗಿ ಹೇಳುತ್ತೇನೆ—ಆಕಾಶವೂ ಭೂಮಿಯೂ 18 ಅಳಿದುಹೋಗುವ ತನಕ, ಧರ್ಮಶಾಸ್ತ್ರವೆಲ್ಲಾ ನೆರವೇರಿದ ಹೊರತು ಅದರೊಳಗಿಂದ ಒಂದು ಸೊನ್ನೆಯಾದರೂ ಒಂದು ಗುಡುಸಾದರೂ ಅಳಿದುಹೋಗಲಾರದು. ಆದದ 19 ರಿಂದ ಈ ಸಣ್ಣಸಣ್ಣ ಆಜ್ಞೆಗಳಲ್ಲಿಯಾದರೂ ಒಂದನ್ನು ಮೀರಿ ಜನರಿಗೂ ಹಾಗೆ ಮೀರು ವದಕ್ಕೆ ಬೋಧಿಸುವವನು ಪರಲೋಕರಾಜ್ಯದಲ್ಲಿ ಬಹಳ ಚಿಕ್ಕವನೆನ್ನಿಸಿಕೊಳ್ಳುವನು;

ಆದರೆ ತಾನೇ ಆ ಆಜ್ಞೆಗಳಂತೆ ನಡೆದುಕೊಂಡು ಜನರಿಗೂ ಹಾಗೆ ನಡೆಯಬೇಕೆಂದು
20 ಬೋಧಿಸುವವನು ಪರಲೋಕರಾಜ್ಯದಲ್ಲಿ ದೊಡ್ಡವನೆನ್ನಿಸಿಕೊಳ್ಳುವನು. ನಿಮ್ಮ ನೀತಿಯು ಶಾಸ್ತ್ರಿಗಳ ಮತ್ತು ಫರಿಸಾಯರ ನೀತಿಗಿಂತಲೂ ಹೆಚ್ಚಿನದಾಗದಿದ್ದರೆ ನೀವು ಪರಲೋಕ ರಾಜ್ಯದಲ್ಲಿ ಸೇರಲಾರಿರಿ ಎಂದು ನಿಮಗೆ ಹೇಳುತ್ತೇನೆ.

21 ನರಹತ್ಯ ಮಾಡಬಾರದು[1]; ನರಹತ್ಯ ಮಾಡುವವನು ನ್ಯಾಯವಿಚಾರಣೆಗೆ ಗುರಿ
22 ಯಾಗುವನೆಂದು ಹಿರಿಯರಿಗೆ ಹೇಳಿಯದೆ ಎಂದು ಕೇಳಿದ್ದೀರಷ್ಟೆ. ಆದರೆ ನಾನು ನಿಮಗೆ ಹೇಳುವದೇನಂದರೆ—ತನ್ನ ಸಹೋದರನ ಮೇಲೆ ಸಿಟ್ಟುಗೊಳ್ಳುವ ಪ್ರತಿ ಮನುಷ್ಯನು ನ್ಯಾಯವಿಚಾರಣೆಗೆ ಗುರಿಯಾಗುವನು; ತನ್ನ ಸಹೋದರನನ್ನು ನೋಡಿ—ಛೀ ನೀಚಾ ಅನ್ನುವವನು ನ್ಯಾಯಸಭೆಯ ವಿಚಾರಣೆಗೆ ಒಳಗಾಗುವನು; ಮೂರ್ಖಾ ಅನ್ನುವವನು
23 ಅಗ್ನಿದಂಡನೆಗೆ[2] ಗುರಿಯಾಗುವನು. ಆದಕಾರಣ ನೀನು ನಿನ್ನ ಕಾಣಿಕೆಯನ್ನು ಯಜ್ಞ ವೇದಿಯ ಹತ್ತರಕ್ಕೆ ತಂದಾಗ ನಿನ್ನ ಸಹೋದರನ ಮನಸ್ಸಿನಲ್ಲಿ ನಿನ್ನ ಮೇಲೆ ಏನೋ
24 ವಿರೋಧವದೆ ಎಂಬುವದು ನಿನ್ನ ನೆನಪಿಗೆ ಬಂದರೆ, ನಿನ್ನ ಕಾಣಿಕೆಯನ್ನು ಆ ಯಜ್ಞ ವೇದಿಯ ಮುಂದೆಯೇ ಬಿಟ್ಟು ಹೋಗಿ ಮೊದಲು ನಿನ್ನ ಸಹೋದರನ ಸಂಗಡ ಒಂದಾಗು; ಆ ಮೇಲೆ ಬಂದು ನಿನ್ನ ಕಾಣಿಕೆಯನ್ನು ಕೊಡು.

25 ನಿನ್ನ ವಾದಿಯ ಸಂಗಡ ಇನ್ನೂ ಮಾರ್ಗದಲ್ಲಿರುವಾಗಲೇ ಅವನ ಕೂಡ ಬೇಗ ಸಮಾಧಾನ ಮಾಡಿಕೋ; ಇಲ್ಲದಿದ್ದರೆ, ಆ ವಾದಿಯು ನಿನ್ನನ್ನು ನ್ಯಾಯಾಧಿಪತಿಯ ಬಳಿಗೆ ಎಳಕೊಂಡು ಹೋದಾನು; ನ್ಯಾಯಾಧಿಪತಿಯು ನಿನ್ನನ್ನು ಓಲೇಕಾರನ ಕೈಗೆ ಒಪ್ಪಿಸ್ಯಾನು;
26 ಆಗ ನೀನು ಸೆರೆಯಲ್ಲಿ ಬಿದ್ದೀಯೆ. ನೀನು ಒಂದು ಕಾಸನ್ನಾದರೂ ಸಿಲ್ಲಿಸಿಕೊಳ್ಳದೆ ಎಲ್ಲಾ ಸಲ್ಲಿಸುವ ತನಕ ಅಲ್ಲಿಂದ ಹೊರಗೆ ಬರಲಾರಿ ಎಂದು ನಿನಗೆ ಸತ್ಯವಾಗಿ ಹೇಳುತ್ತೇನೆ.

27 ವ್ಯಭಿಚಾರ ಮಾಡಬಾರದೆಂದು[3] ಹೇಳಿಯದೆ ಎಂಬದಾಗಿ ನೀವು ಕೇಳಿದ್ದೀರಷ್ಟೆ.
28 ಆದರೆ ನಾನು ನಿಮಗೆ ಹೇಳುವದೇನಂದರೆ—ಪರಸ್ತ್ರೀಯನ್ನು ನೋಡಿ ಮೋಹಿಸುವ ಪ್ರತಿ ಮನುಷ್ಯನು ಆಗಲೇ ತನ್ನ ಮನಸ್ಸಿನಲ್ಲಿ ಆಕೆಯ ಕೂಡ ವ್ಯಭಿಚಾರ ಮಾಡಿದವನಾದನು.
29 ನಿನ್ನ ಬಲಗಣ್ಣು ನಿನ್ನನ್ನು ಪಾಪದಲ್ಲಿ ಸಿಕ್ಕಿಸುವದಾದರೆ ಅದನ್ನು ಕಿತ್ತು ಬಿಸಾಟುಬಿಡು; ನಿನ್ನ ದೇಹವೆಲ್ಲಾ ನರಕದಲ್ಲಿ ಬೀಳುವದಕ್ಕಿಂತ ಅವಯವಗಳಲ್ಲಿ ಒಂದು ಹೋಗು
30 ವದು ನಿನಗೆ ಹಿತವಲ್ಲವೇ? ನಿನ್ನ ಬಲಗೈ ನಿನ್ನನ್ನು ಪಾಪದಲ್ಲಿ ಸಿಕ್ಕಿಸುವದಾದರೆ ಅದನ್ನು ಕಡಿದು ಬಿಸಾಟುಬಿಡು; ನಿನ್ನ ದೇಹವೆಲ್ಲಾ ನರಕದಲ್ಲಿ ಬೀಳುವದಕ್ಕಿಂತ ಅವಯವಗಳಲ್ಲಿ ಒಂದು ಹೋಗುವದು ನಿನಗೆ ಹಿತವಲ್ಲವೇ?

31 ಇದಲ್ಲದೆ, ತನ್ನ ಹೆಂಡತಿಯನ್ನು ಬಿಟ್ಟುಬಿಡುವವನು ಆಕೆಗೆ ಬಿಡುಗಡೆಯ ಪತ್ರವನ್ನು
32 ಕೊಡತಕ್ಕದ್ದೆಂದು[4] ಹೇಳಿಯದೆಯಷ್ಟೆ. ಆದರೆ ನಾನು ನಿಮಗೆ ಹೇಳುವದೇನಂದರೆ—ಹಾದರದ ಕಾರಣದಿಂದಲ್ಲದೆ ತನ್ನ ಹೆಂಡತಿಯನ್ನು ಬಿಟ್ಟುಬಿಡುವವನು ಅವಳು ವ್ಯಭಿಚಾರ ಮಾಡುವದಕ್ಕೆ ಕಾರಣನಾಗುತ್ತಾನೆ. ಮತ್ತು ಗಂಡಬಿಟ್ಟವಳನ್ನು ಮದುವೆಮಾಡಿಕೊಳ್ಳುವವನು ವ್ಯಭಿಚಾರಮಾಡಿದವನಾಗುತ್ತಾನೆ.

---

[1] ಹೊರಡೋಣ ೨೦, ೧೩.
[2] ಮೂಲ: ಬೆಂಕಿಯ ಗೆಹೆನ್ನಕ್ಕೆ.
[3] ಹೊರಡೋಣ ೨೦, ೧೪.
[4] ದ್ವಿತೀಯ ನ್ಯಾಯ ೨೪, ೧. ೩.

ಮತ್ತು—ನೀನು ಸುಳ್ಳಾಣೆಯಿಡಬಾರದು; ನೀನು ಇಟ್ಟುಕೊಂಡ ಆಣೆಗಳನ್ನು ಕರ್ತ 33
ನಿಗೆ ಸಲ್ಲಿಸಬೇಕೆಂದು[1] ಹಿರಿಯರಿಗೆ ಹೇಳಿಯದೆ ಎಂದು ಕೇಳಿದ್ಧೀರಷ್ಟೆ. ಆದರೆ ನಾನು 34
ನಿಮಗೆ ಹೇಳುವದೇನಂದರೆ—ಆಣೆಯನ್ನೇ ಇಡಬೇಡ. ಆಕಾಶದ ಮೇಲೆ ಆಣೆ ಇಡ
ಬೇಡ; ಅದು ದೇವರ ಸಿಂಹಾಸನವು. ಭೂಮಿಯ ಮೇಲೆ ಆಣೆ ಇಡಬೇಡ; ಅದು ಆತನ 35
ಪಾದಪೀಠವು. ಯೆರೂಸಲೇಮಿನ ಮೇಲೆ ಆಣೆ ಇಡಬೇಡ; ಅದು ಆ ದೊಡ್ಡ ಅರಸನ
ಪಟ್ಟಣವಾಗಿದೆ. ನಿನ್ನ ತಲೆಯ ಮೇಲೆ ಕೂಡ ಆಣೆ ಇಡಬೇಡ; ನೀನು ಒಂದು ಕೂದಲನ್ನಾ 36
ದರೂ ಬೆಳ್ಳಗೆ ಅಥವಾ ಕರ್‍ರಗೆ ಮಾಡಲಾರಿ. ಆದರೆ ನಿಮ್ಮ ಮಾತು ಹೌದಾದರೆ ಹೌದು, 37
ಅಲ್ಲವಾದರೆ ಅಲ್ಲ, ಎಂದಿರಲಿ; ಇದಕ್ಕಿಂತ ಹೆಚ್ಚಾದದ್ದು ಸೈತಾನನಿಂದ ಬಂದದ್ದು.

ಕಣ್ಣಿಗೆ ಪ್ರತಿಯಾಗಿ ಕಣ್ಣನ್ನು ಹಲ್ಲಿಗೆ ಪ್ರತಿಯಾಗಿ ಹಲ್ಲನ್ನು ತೆಗಿಸು ಅಂತ[2] ಹೇಳಿ 38
ಯದೆ ಎಂದು ಕೇಳಿದ್ಧೀರಷ್ಟೆ. ಆದರೆ ನಾನು ನಿಮಗೆ ಹೇಳುವದೇನಂದರೆ—ಕೆಡಕನನ್ನು 39
ಎದುರಿಸಬೇಡ. ಒಬ್ಬನು ನಿನ್ನ ಬಲಗೆನ್ನೆಯ ಮೇಲೆ ಹೊಡೆದರೆ ಅವನಿಗೆ ಮತ್ತೊಂದು ಕೆನ್ನೆ
ಯನ್ನೂ ಒಡ್ಡು. ನಿನ್ನ ಸಂಗಡ ವ್ಯಾಜ್ಯವಾಡಿ ನಿನ್ನ ಒಳಂಗಿಯನ್ನು ತಕ್ಕೊಳ್ಳಬೇಕೆಂದಿ 40
ರುವವನಿಗೆ ಮೇಲಂಗಿಯನ್ನೂ ಬಿಡು. ಒಬ್ಬನು—ಒಂದು ಮೈಲು ದೂರ ಬಾ ಎಂದು 41
ನಿನ್ನನ್ನು ಬಿಟ್ಟೀಹಿಡಿದರೆ ಅವನ ಸಂಗಡ ಎರಡು ಮೈಲು ಹೋಗು. ನಿನ್ನನ್ನು ಬೇಡುವವ 42
ನಿಗೆ ಕೊಡು; ನಿನ್ನಲ್ಲಿ ಕಡಾ ಈಸಿಕೊಳ್ಳಬೇಕೆಂದು ಬಂದವನಿಗೆ ಮುಖತಿರುವಿಕೊಳ್ಳಬೇಡ.

ನಿನ್ನ ನೆರೆಯವನನ್ನು ಪ್ರೀತಿಸಬೇಕು[3]; ನಿನ್ನ ವೈರಿಯನ್ನು ಹಗೆಮಾಡಬೇಕೆಂದು 43
ಹೇಳಿಯದೆ ಎಂಬದಾಗಿ ಕೇಳಿದ್ಧೀರಷ್ಟೆ. ಆದರೆ ನಾನು ನಿಮಗೆ ಹೇಳುವದೇನಂದರೆ— 44
ನಿಮ್ಮ ವೈರಿಗಳನ್ನು ಪ್ರೀತಿಸಿರಿ; ನಿಮ್ಮನ್ನು ಹಿಂಸೆ ಪಡಿಸುವವರಿಗೋಸ್ಕರ ಪ್ರಾರ್ಥನೆ
ಮಾಡಿರಿ. ಹೀಗೆ ಮಾಡಿದರೆ, ನೀವು ಪರಲೋಕದಲ್ಲಿರುವ ನಿಮ್ಮ ತಂದೆಗೆ ಮಕ್ಕಳಾಗು 45
ವಿರಿ. ಆತನು ಕೆಟ್ಟವರ ಮೇಲೆಯೂ ಒಳ್ಳೆಯವರ ಮೇಲೆಯೂ ತನ್ನ ಸೂರ್ಯನು
ಮೂಡುವಂತೆ ಮಾಡುತ್ತಾನೆ; ನೀತಿವಂತರ ಮೇಲೆಯೂ ಅನೀತಿವಂತರ ಮೇಲೆಯೂ
ಮಳೆಸುರಿಸುತ್ತಾನೆ. ನಿಮ್ಮನ್ನು ಪ್ರೀತಿಸುವವರನ್ನೇ ನೀವು ಪ್ರೀತಿಸಿದರೆ ನಿಮಗೆ ಫಲ 46
ವೇನು? ಭ್ರಷ್ಟರೂ[4] ಹಾಗೆ ಮಾಡುವದಿಲ್ಲವೇ? ನಿಮ್ಮ ಸಹೋದರರಿಗೆ ಮಾತ್ರ ನೀವು 47
ಮರ್ಯಾದೆ ಕೊಟ್ಟರೆ ಏನು ಹೆಚ್ಚು ಮಾಡಿದ ಹಾಗಾಯಿತು? ಅನ್ಯಜನಗಳು ಸಹ ಹೀಗೆ
ಮಾಡುವದಿಲ್ಲವೇ? ಆದದರಿಂದ ಪರಲೋಕದಲ್ಲಿರುವ ನಿಮ್ಮ ತಂದೆಯು ಯಾವ 48
ದೋಷವೂ ಇಲ್ಲದವನಾಗಿರುವಂತೆ ನೀವೂ ದೋಷವಿಲ್ಲದವರಾಗಿರ್‍ರಿ.

ಜನರು ನೋಡಲಿ ಎಂದು ನಿಮ್ಮ ಧರ್ಮಕಾರ್ಯಗಳನ್ನು ಅವರ ಮುಂದೆ ಮಾಡ **6**
ಬಾರದು, ನೋಡಿರಿ; ಹಾಗೆ ಮಾಡಿದರೆ ಪರಲೋಕದಲ್ಲಿರುವ ನಿಮ್ಮ ತಂದೆಯ ಹತ್ತರ
ನಿಮಗೆ ಫಲದೊರೆಯದು.

ಆದದರಿಂದ ನೀನು ಧರ್ಮಕೊಡುವಾಗ ನಿನ್ನ ಮುಂದೆ ಕೊಂಬೂದಿಸಬೇಡ; ಜನ 2
ರಿಂದ ಹೊಗಳಿಸಿಕೊಳ್ಳಬೇಕೆಂದು ಕಪಟಿಗಳು ಸಭಾಮಂದಿರಗಳಲ್ಲಿಯೂ ಬೀದಿಗಳಲ್ಲಿಯೂ

1) ಹೊರಡೋಣ ೨೦, ೭; ಲೇವಿಕ ೧೯, ೧೨. 2) ಹೊರಡೋಣ ೨೧, ೨೪. 3) ಲೇವಿಕ ೧೯, ೧೭. ೧೮.
4) ಮೂಲ: ಸುಂಕದವರೂ.

ಹಾಗೆ ಮಾಡುತ್ತಾರೆ. ಅವರು ತಮಗೆ ಬರತಕ್ಕ ಫಲವನ್ನು ಹೊಂದಿದ್ದಾಯಿತೆಂದು ನಿಮಗೆ
3 ಸತ್ಯವಾಗಿ ಹೇಳುತ್ತೇನೆ. ನೀನಾದರೆ ಧರ್ಮಕೊಡುವಾಗ ನೀನು ಧರ್ಮ ಕೊಟ್ಟದ್ದು
4 ಅಂತರಂಗವಾಗುವ ಹಾಗೆ ನಿನ್ನ ಬಲಗೈ ಮಾಡಿದ್ದು ಎಡಗೈಗೂ ತಿಳಿಯದಿರಲಿ. ಅಂತ
ರಂಗದಲ್ಲಿ ನಡೆಯುವದನ್ನು ನೋಡುವ ನಿನ್ನ ತಂದೆಯು ನಿನಗೆ ಫಲಕೊಡುವನು.

5 ಮತ್ತು ನೀವು ಪ್ರಾರ್ಥನೆಮಾಡುವಾಗ, ಕಪಟಿಗಳ ಹಾಗೆ ಮಾಡಬೇಡಿರಿ. ಜನರು
ನೋಡಬೇಕೆಂದು ಅವರು ಸಭಾಮಂದಿರಗಳಲ್ಲಿಯೂ ಬೀದೀಚೌಕಗಳಲ್ಲಿಯೂ ನಿಂತು
ಕೊಂಡು ಪ್ರಾರ್ಥನೆಮಾಡುವದಕ್ಕೆ ಇಷ್ಟಪಡುತ್ತಾರೆ. ಅವರು ತಮಗೆ ಬರತಕ್ಕ ಫಲ
6 ವನ್ನು ಹೊಂದಿದ್ದಾಯಿತೆಂದು ನಿಮಗೆ ಸತ್ಯವಾಗಿ ಹೇಳುತ್ತೇನೆ. ಆದರೆ ನೀನು ಪ್ರಾರ್ಥನೆ
ಮಾಡಬೇಕಾದರೆ, ನಿನ್ನ ಏಕಾಂತವಾದ ಕೋಣೆಯೊಳಗೆ ಹೋಗಿ, ಬಾಗಲನ್ನು ಮುಚ್ಚಿ
ಕೊಂಡು, ಅಂತರಂಗದಲ್ಲಿಯೂ ಇರುವ ನಿನ್ನ ತಂದೆಗೆ ಪ್ರಾರ್ಥನೆ ಮಾಡು; ಅಂತರಂಗ
7 ದಲ್ಲಿ ನಡೆಯುವದನ್ನು ನೋಡುವ ನಿನ್ನ ತಂದೆಯು ನಿನಗೆ ಫಲಕೊಡುವನು. ಆದರೆ
ಪ್ರಾರ್ಥನೆಮಾಡುವಾಗ, ಅಜ್ಞಾನಿಗಳ ಹಾಗೆ ಹೇಳಿದ್ದನ್ನೇ ಸುಮ್ಮಸುಮ್ಮನೆ ಹೇಳಬೇಡ;
ಅವರು ಬಹಳ ಮಾತುಗಳನ್ನಾಡಿದರೆ ತಮ್ಮ ಪ್ರಾರ್ಥನೆಯನ್ನು ದೇವರು ಕೇಳುತ್ತಾನೆಂದು
8 ನೆನಸುತ್ತಾರೆ. ಆದದರಿಂದ ನೀವು ಅವರ ಹಾಗೆ ಆಗಬೇಡಿರಿ. ನೀವು ನಿಮ್ಮ ತಂದೆ
ಯನ್ನು ಬೇಡಿಕೊಳ್ಳುವದಕ್ಕಿಂತ ಮುಂಚೆಯೇ, ನಿಮಗೆ ಏನೇನು ಅಗತ್ಯವೆಂಬುವದು
9 ಆತನಿಗೆ ತಿಳಿದದೆ. ಆದದರಿಂದ ನೀವು ಪ್ರಾರ್ಥನೆ ಮಾಡತಕ್ಕ ರೀತಿ ಹ್ಯಾಗಂದರೆ—

10 ಪರಲೋಕದಲ್ಲಿರುವ ನಮ್ಮ ತಂದೆಯೇ,
ನಿನ್ನ ನಾಮವು ಪರಿಶುದ್ಧವೆಂದು ಎಣಿಸಲ್ಪಡಲಿ.
ನಿನ್ನ ರಾಜ್ಯವು ಬರಲಿ.
ನಿನ್ನ ಚಿತ್ತವು ಪರಲೋಕದಲ್ಲಿ ನೆರವೇರುವ ಪ್ರಕಾರ ಭೂಲೋಕದಲ್ಲಿಯೂ
ನೆರವೇರಲಿ.
11 ನಮ್ಮ ಅನುದಿನದ ಆಹಾರವನ್ನು ಈ ಹೊತ್ತೂ ದಯಪಾಲಿಸು.
12 ನಮಗೆ ತಪ್ಪು ಮಾಡಿದವರನ್ನು[1] ನಾವು ಕ್ಷಮಿಸಿದಂತೆ ನಮ್ಮ ತಪ್ಪುಗಳನ್ನು[2]
ಕ್ಷಮಿಸು.
13 ನಮ್ಮನ್ನು ಶೋಧನೆಯೊಳಗೆ ಸೇರಿಸದೆ ಕೆಡಕನ ಕೈಗೆ[3] ನಮ್ಮನ್ನು ತಪ್ಪಿಸು[4]

14 ಎಂದು ಪ್ರಾರ್ಥಿಸಿರಿ. ನೀವು ಜನರ ತಪ್ಪುಗಳನ್ನು ಕ್ಷಮಿಸಿದರೆ ಪರಲೋಕದಲ್ಲಿರುವ
15 ನಿಮ್ಮ ತಂದೆಯು ನಿಮ್ಮ ತಪ್ಪುಗಳನ್ನು ಕ್ಷಮಿಸುವನು. ಆದರೆ ನೀವು ಜನರ ತಪ್ಪುಗಳನ್ನು
ಕ್ಷಮಿಸದೆಹೋದರೆ ನಿಮ್ಮ ತಂದೆ ಸಹ ನಿಮ್ಮ ತಪ್ಪುಗಳನ್ನು ಕ್ಷಮಿಸುವದಿಲ್ಲ.

16 ಇದಲ್ಲದೆ ನೀವು ಉಪವಾಸಮಾಡುವಾಗ, ಕಪಟಿಗಳಂತೆ ಮುಖವನ್ನು ಸಪ್ಪಗೆ
ಮಾಡಿಕೊಳ್ಳಬೇಡಿರಿ. ಅವರು ತಾವು ಉಪವಾಸಿಗಳೆಂದು ಜನರಿಗೆ ತೋರುವದಕ್ಕಾಗಿ

---

[1] ಮೂಲ: ನಮ್ಮ ಸಾಲಗಾರರನ್ನು. [2] ಮೂಲ: ಸಾಲಗಳನ್ನು.

[3] ಅಂದರೆ—ಸೈತಾನನ ಕೈಗೆ; ಕೆಲವರು, ಕೇಡಿನೊಳಗಿಂದ ಎಂದು ಭಾಷಾಂತರ ಮಾಡುತ್ತಾರೆ.

[4] ಕೆಲವು ಪ್ರತಿಗಳಲ್ಲಿ ಮುಂದಣ ಮಾತುಗಳು ಅವೆ—ಯಾಕಂದರೆ, ರಾಜ್ಯವೂ ಬಲವೂ ಮಹಿಮೆಯೂ ಸದಾ
ಕಾಲ ನಿನ್ನವೇ. ಆಮೆನ್; ೧ ದಿನಚರ್ಯ ೨೯, ೧೧ ನೋಡಿರಿ.

ತಮ್ಮ ಮುಖವನ್ನು ವಿಕಾರವಮಾಡಿಕೊಳ್ಳುತ್ತಾರೆ. ಅವರು ತಮಗೆ ಬರತಕ್ಕ ಫಲವನ್ನು
ಹೊಂದಿದ್ದಾಯಿತೆಂದು ನಿಮಗೆ ಸತ್ಯವಾಗಿ ಹೇಳುತ್ತೇನೆ. ಆದರೆ ನೀನು ಉಪವಾಸ 17
ಮಾಡುವಾಗ, ತಲೆಗೆ ಎಣ್ಣೇ ಹಚ್ಚಿಕೊಂಡು ಮುಖವನ್ನು ತೊಳಕೋ. ಹೀಗೆ ಮಾಡಿ 18
ದರೆ ನೀನು ಉಪವಾಸಿಯೆಂದು ಜನರಿಗೆ ಕಾಣದೆಹೋದಾಗ್ಯೂ ಅಂತರಂಗದಲ್ಲಿರುವ
ನಿನ್ನ ತಂದೆಗೆ ಉಪವಾಸಿಯೆಂದು ಕಾಣಿಸಿಕೊಳ್ಳುವಿ. ಅಂತರಂಗದಲ್ಲಿ ನಡಿಯುವದನ್ನು
ನೋಡುವ ನಿನ್ನ ತಂದೆಯು ನಿನಗೆ ಫಲಕೊಡುವನು.

ಭೂಲೋಕದಲ್ಲಿ ಗಂಟುಮಾಡಿ ಇಟ್ಟುಕೊಳ್ಳಬೇಡಿರಿ; ಇಲ್ಲಿ ಅಂತೂ ಅದು ನುಸಿ 19
ಹಿಡಿದು ಕಿಲುಬುಹತ್ತಿ ಕೆಟ್ಟುಹೋಗುವದು; ಇಲ್ಲಿ ಕಳ್ಳರು ಕನ್ನಾಕೊರೆದು ಕದಿಯು
ವರು. ಆದರೆ ಪರಲೋಕದಲ್ಲಿ ಗಂಟುಮಾಡಿ ಇಟ್ಟುಕೊಳ್ಳಿರಿ; ಅಲ್ಲಿ ಅದು ನುಸಿಹಿಡಿದು 20
ಕಿಲುಬುಹತ್ತಿ ಕೆಟ್ಟುಹೋಗುವದಿಲ್ಲ; ಅಲ್ಲಿ ಕಳ್ಳರು ಕನ್ನಾಕೊರೆಯುವದೂ ಇಲ್ಲ, ಕದಿ
ಯುವದೂ ಇಲ್ಲ. ನಿನ್ನ ಗಂಟು ಇದ್ದಲ್ಲಿಯೇ ನಿನ್ನ ಮನಸ್ಸೂ ಇರುವದಷ್ಟೆ. 21

ಕಣ್ಣು ದೇಹಕ್ಕೆ ದೀಪವಾಗಿದೆ; ಹೀಗಿರುವಲ್ಲಿ ನಿನ್ನ ಕಣ್ಣು ನೆಟ್ಟಗಿದ್ದರೆ ನಿನ್ನ ದೇಹವೆಲ್ಲಾ 22
ಬೆಳಕಾಗಿರುವದು. ನಿನ್ನ ಕಣ್ಣು ಕೆಟ್ಟದ್ದಾಗಿದ್ದರೆ ನಿನ್ನ ದೇಹವೆಲ್ಲಾ ಕತ್ತಲಾಗಿರುವದು. 23
ಹಾಗಾದರೆ ನಿನ್ನೊಳಗಿರುವ ಬೆಳಕೇ ಕತ್ತಲಾದರೆ ಆ ಕತ್ತಲೆ ಎಷ್ಟು ಬಲವಾಗಿರಬಹುದು!

ಯಜಮಾನರಿಬ್ಬರಿಗೆ ಸೇವೆಮಾಡುವದು ಯಾವನಿಂದಲೂ ಆಗದು. ಯಾಕಂದರೆ 24
ಒಬ್ಬನನ್ನು ಹಗೆಮಾಡಿ ಮತ್ತೊಬ್ಬನನ್ನು ಪ್ರೀತಿಸುವನು; ಇಲ್ಲವೆ ಒಬ್ಬನನ್ನು ಹೊಂದಿ
ಕೊಂಡು ಮತ್ತೊಬ್ಬನನ್ನು ತಾತ್ಸಾರಮಾಡುವನು. ನೀವು ದೇವರನ್ನೂ ಧನವನ್ನೂ[1]
ಕೂಡ ಸೇವಿಸಲಾರಿರಿ.

ಈ ಕಾರಣದಿಂದ—ನಮ್ಮ ಪ್ರಾಣಧಾರಣೆಗೆ ಏನು ಊಟಾಮಾಡಬೇಕು, ಏನು ಕುಡಿ 25
ಯಬೇಕು, ನಮ್ಮ ದೇಹರಕ್ಷಣೆಗೆ ಏನು ಹೊದ್ದುಕೊಳ್ಳಬೇಕು ಎಂದು ಚಿಂತೆಮಾಡ
ಬೇಡಿರಿ ಎಂಬದಾಗಿ ನಿಮಗೆ ಹೇಳುತ್ತೇನೆ. ಊಟಕ್ಕಿಂತ ಪ್ರಾಣವು ಉಡುಪಿಗಿಂತ 26
ದೇಹವು ಮೇಲಾದದ್ದಲ್ಲವೇ? ಆಕಾಶದಲ್ಲಿ ಹಾರ್ಯಾಡುವ ಹಕ್ಕಿಗಳನ್ನು ನೋಡಿರಿ; ಅವು
ಬಿತ್ತುವದಿಲ್ಲ, ಕೊಯ್ಯುವದಿಲ್ಲ, ಕಣಜಗಳಲ್ಲಿ ತುಂಬಿಟ್ಟುಕೊಳ್ಳುವದಿಲ್ಲ; ಆದಾಗ್ಯೂ
ಪರಲೋಕದಲ್ಲಿರುವ ನಿಮ್ಮ ತಂದೆಯು ಅವುಗಳನ್ನು ಸಾಕಿಸಲಹುತ್ತಾನೆ; ಅವುಗಳಿಗಿಂತ
ನೀವು ಎಷ್ಟೋ ಹೆಚ್ಚಿನವರಲ್ಲವೋ? ಚಿಂತೆಮಾಡಿಮಾಡಿ ಒಂದು ಮೊಳ ಉದ್ದ ಬೆಳೆ 27
ಯುವದು[2] ನಿಮ್ಮಲ್ಲಿ ಯಾರಿಂದಾದೀತು? ಇದಲ್ಲದೆ ನೀವು ಉಡುಪಿನ ವಿಷಯದಲ್ಲಿ 28
ಚಿಂತೆಮಾಡುವದು ಯಾಕೆ? ಅಡವಿಯ ಹೂವುಗಳು ಬೆಳೆಯುವ ರೀತಿಯನ್ನು ಯೋಚಿ
ಸಿರಿ; ಅವು ದುಡಿಯುವದಿಲ್ಲ, ನೂಲುವದಿಲ್ಲ; ಆದಾಗ್ಯೂ ಈ ಹೂವುಗಳಲ್ಲಿ ಒಂದಕ್ಕಿ 29
ರುವಷ್ಟು ಅಲಂಕಾರವು ಅರಸನಾದ ಸೊಲೊಮೋನನಿಗೆ ಸಹ ಅವನು ತನ್ನ ಎಲ್ಲಾ ವೈಭ
ವದಿಂದ ಇರುವಾಗಲೂ ಇರಲಿಲ್ಲವೆಂದು ನಿಮಗೆ ಹೇಳುತ್ತೇನೆ. ಎಲೈ ಅಲ್ಪವಿಶ್ವಾಸಿ 30
ಗಳೇ, ಈ ಹೊತ್ತು ಇದ್ದು ನಾಳೆ ಒಲೆಯ ಪಾಲಾಗುವ ಅಡವಿಯ ಹುಲ್ಲಿಗೆ ದೇವರು
ಹೀಗೆ ಉಡಿಸಿದರೆ ಅದಕ್ಕಿಂತ ಎಷ್ಟೋ ಹೆಚ್ಚಾಗಿ ನಿಮಗೆ ಉಡಿಸಿತೊಡಿಸುವನಲ್ಲವೇ?

---

[1] ಮೂಲ: ಮಮೋನನ್ನೂ. [2] ಅಂದರೆ, ಆಯುಸ್ಸು ಹೆಚ್ಚುಮಾಡಿಕೊಳ್ಳುವದು.

31 ಹೀಗಿರುವದರಿಂದ—ಏನು ಊಟಾಮಾಡಬೇಕು, ಏನು ಕುಡಿಯಬೇಕು, ಏನು ಹೊದ್ದು
32 ಕೊಳ್ಳಬೇಕು ಎಂದು ಚಿಂತೆಮಾಡಬೇಡಿರಿ. ಇದನ್ನೆಲ್ಲಾ ಅಜ್ಞಾನಿಗಳು ಬಯಸುತ್ತಾರೆ. ಆದರೆ ಇದೆಲ್ಲಾ ನಿಮಗೆ ಬೇಕಾಗಿದೆ ಎಂದು ಪರಲೋಕದಲ್ಲಿರುವ ನಿಮ್ಮ ತಂದೆಗೆ ತಿಳಿ
33 ದದೆ. ಹೀಗಿರುವದರಿಂದ, ನೀವು ಆತನ ರಾಜ್ಯವನ್ನೂ ನೀತಿಯನ್ನೂ ಪಡಕೊಳ್ಳುವದಕ್ಕೆ
34 ಮೊದಲು ಪ್ರಯತ್ನಿಸಿರಿ. ಇದರ ಕೂಡ ಅವೆಲ್ಲಾ ನಿಮಗೆ ದೊರಕುವವು. ಆದದರಿಂದ ನಾಳಿನ ವಿಷಯವಾಗಿ ಚಿಂತೆಮಾಡಬೇಡಿರಿ; ನಾಳಿನ ದಿನವು ತನ್ನದನ್ನು ತಾನೇ ಚಿಂತಿಸಿಕೊಳ್ಳುವದು. ಆ ಹೊತ್ತಿನ ಕಾಟ ಆ ಹೊತ್ತಿಗೆ ಸಾಕು.

**7** 2 ತೀರ್ಪುಮಾಡ ಬೇಡಿರಿ; ಹಾಗೆ ನಿಮಗೂ ತೀರ್ಪಾಗುವದಿಲ್ಲ. ನೀವು ಮಾಡುವ ತೀರ್ಪಿಗೆ ಸರಿಯಾಗಿ ನಿಮಗೂ ತೀರ್ಪಾಗುವದು; ನೀವು ಅಳೆಯುವ ಅಳತೆಯಿಂದಲೇ
3 ನಿಮಗೂ ಅಳೆಯುವರು. ನೀನು ನಿನ್ನ ಕಣ್ಣಿನಲ್ಲಿರುವ ತೊಲೆಯನ್ನು ಯೋಚಿಸದೆ
4 ಸಹೋದರನ ಕಣ್ಣಿನಲ್ಲಿರುವ ರವೆಯನ್ನು ಯೋಚಿಸುವದ್ಯಾಕೆ? ನೀನು ಸಹೋದರನಿಗೆ—ನಿನ್ನ ಕಣ್ಣಿನೊಳಗಿನ ರವೆಯನ್ನು ತೆಗೆಯುತ್ತೇನೆ ಬಾ ಎಂದು ಹೇಳುವದು ಹ್ಯಾಗೆ?
5 ನಿನ್ನ ಕಣ್ಣಿನಲ್ಲಿ ತೊಲೆಯದೆಯಲ್ಲಾ. ಕಪಟಿಯೇ, ಮೊದಲು ನಿನ್ನ ಕಣ್ಣಿನೊಳಗಿನ ತೊಲೆಯನ್ನು ತೆಗೆದುಹಾಕಿಕೋ; ಆ ಮೇಲೆ ನಿನ್ನ ಸಹೋದರನ ಕಣ್ಣಿನೊಳಗಿನ ರವೆಯನ್ನು ತೆಗೆಯುವದಕ್ಕೆ ಚನ್ನಾಗಿ ಕಾಣಿಸುವದು.

6 ದೇವರ ವಸ್ತುವನ್ನು ನಾಯಿಗಳಿಗೆ ಹಾಕಬೇಡಿರಿ; ನಿಮ್ಮ ಮುತ್ತುಗಳನ್ನು ಹಂದಿಗಳ ಮುಂದೆ ಚೆಲ್ಲಬೇಡಿರಿ. ಚೆಲ್ಲಿದರೆ ತಮ್ಮ ಕಾಲಿನಿಂದ ಅವುಗಳನ್ನು ತುಳಿದು, ಹಿಂತಿರಿಗಿ ಬಂದು ನಿಮ್ಮನ್ನು ಸೀಳಿಬಿಟ್ಟಾವು.

7 ಬೇಡಿಕೊಳ್ಳಿರಿ, ನಿಮಗೆ ದೊರೆಯುತ್ತದೆ; ಹುಡುಕಿರಿ, ನಿಮಗೆ ಸಿಕ್ಕುತ್ತದೆ; ತಟ್ಟಿರಿ,
8 ನಿಮಗೆ ತೆರೆಯುತ್ತದೆ; ಯಾಕಂದರೆ ಬೇಡಿಕೊಳ್ಳುವವನು ಹೊಂದುವನು, ಹುಡುಕುವ
9 ವನಿಗೆ ಸಿಕ್ಕುವದು, ತಟ್ಟುವವನಿಗೆ ತೆರೆಯುವದು. ನಿಮ್ಮಲ್ಲಿ ಯಾವನಾದರೂ ರೊಟ್ಟೀ
10 ಕೇಳುವ ಮಗನಿಗೆ ಕಲ್ಲನ್ನು ಕೊಟ್ಟಾನೇ? ಮೀನು ಕೇಳುವವನಿಗೆ ಹಾವನ್ನು ಕೊಟ್ಟಾ
11 ನೇ? ಹಾಗಾದರೆ ಕೆಟ್ಟವರಾದ ನೀವು ನಿಮ್ಮ ಮಕ್ಕಳಿಗೆ ಒಳ್ಳೇ ಪದಾರ್ಥಗಳನ್ನು ಕೊಡ ಬಲ್ಲವರಾದರೆ, ಪರಲೋಕದಲ್ಲಿರುವ ನಿಮ್ಮ ತಂದೆಯು ತನ್ನನ್ನು ಬೇಡಿಕೊಳ್ಳುವವರಿಗೆ ಎಷ್ಟೋ ಹೆಚ್ಚಾಗಿ ಒಳ್ಳೇ ವರಗಳನ್ನು ಕೊಡುವನಲ್ಲವೇ?

12 ಅಂತು, ಜನರಿಂದ ನಿಮಗೆ ಏನೇನು ಆಗಬೇಕೆಂದು ಅಪೇಕ್ಷಿಸುತ್ತೀರೋ ಅದನ್ನೇ ನೀವು ಅವರಿಗೆ ಮಾಡಿರಿ. ಇದೇ ಧರ್ಮಶಾಸ್ತ್ರದ ಮತ್ತು ಪ್ರವಾದಿಗಳ ತಾತ್ಪರ್ಯ.

13 ಇಕ್ಕಟ್ಟಾದ ಬಾಗಲಿನಿಂದ ಒಳಕ್ಕೆ ಹೋಗಿರಿ. ನಾಶಕ್ಕೆ ಹೋಗುವ ಬಾಗಲು
14 ದೊಡ್ಡದು, ದಾರಿ ಅಗಲವು; ಅದರಲ್ಲಿ ಹೋಗುವವರು ಬಹು ಜನ. ನಿತ್ಯಜೀವಕ್ಕೆ ಹೋಗುವ ಬಾಗಲು ಇಕ್ಕಟ್ಟು, ದಾರಿ ಬಿಕ್ಕಟ್ಟು; ಅದನ್ನು ಕಂಡುಹಿಡಿಯುವವರು ಸ್ವಲ್ಪ ಜನ.

15 ಸುಳ್ಳುಗುರುಗಳ ವಿಷಯದಲ್ಲಿ ಎಚ್ಚರವಾಗಿರ್ರಿ. ಅವರು ಕುರೀವೇಷಾ ಹಾಕಿಕೊಂಡು ನಿಮ್ಮ ಬಳಿಗೆ ಬರುತ್ತಾರೆ; ಆದರೆ ಒಳಗೆ ನೋಡಿದರೆ ಅವರು ಹಿಡುಕೊಂಡುಹೋಗುವ

ತೋಳಗಳೇ. ಅವರಿಂದಾಗುವ ಫಲವನ್ನು ನೋಡಿ ಅವರನ್ನು ತಿಳುಕೊಳ್ಳುವಿರಿ. ಮುಳ್ಳು 16 ಗಿಡದಲ್ಲಿ ದ್ರಾಕ್ಷೇಹಣ್ಣುಗಳನ್ನೂ ಮದ್ದುಗುಣಿಕೇಗಿಡದಲ್ಲಿ ಅಂಜೂರಗಳನ್ನೂ ಕೊಯ್ಯು ವದುಂಟೇ? ಹಾಗೆಯೇ ಒಳ್ಳೇ ಮರಗಳೆಲ್ಲಾ ಒಳ್ಳೇ ಫಲವನ್ನು ಕೊಡುವವು; ಹುಳುಕು 17 ಮರವು ಕೆಟ್ಟ ಫಲವನ್ನು ಕೊಡುವದು. ಒಳ್ಳೇ ಮರವು ಕೆಟ್ಟ ಫಲವನ್ನು ಕೊಡಲಾ 18 ರದು; ಹುಳುಕು ಮರವು ಒಳ್ಳೇ ಫಲವನ್ನು ಕೊಡಲಾರದು. ಒಳ್ಳೇ ಫಲವನ್ನು ಕೊಡದ 19 ಎಲ್ಲಾ ಮರಗಳನ್ನು ಕಡಿದು ಬೆಂಕಿಯಲ್ಲಿ ಹಾಕುತ್ತಾರೆ. ಹೀಗಿರಲಾಗಿ ಅವರ ಫಲಗ 20 ಳಿಂದ ಅವರನ್ನು ತಿಳಿದುಕೊಳ್ಳುವಿರಿ.

ನನ್ನನ್ನು ಸ್ವಾಮಿಾ ಸ್ವಾಮಿಾ ಅನ್ನುವವರೆಲ್ಲರು ಪರಲೋಕರಾಜ್ಯದಲ್ಲಿ ಸೇರುವರೆಂದು 21 ನೆನಸಬೇಡಿರಿ; ಪರಲೋಕದಲ್ಲಿರುವ ನನ್ನ ತಂದೆಯ ಚಿತ್ತದಂತೆ ನಡೆಯುವವನೇ ಪರ ಲೋಕರಾಜ್ಯಕ್ಕೆ ಸೇರುವನು. ಸ್ವಾಮಿಾ, ಸ್ವಾಮಿಾ, ನಿನ್ನ ಹೆಸರಿನ ಮೇಲೆ ನಾವು 22 ಬೋಧನೆ ಹೇಳಲಿಲ್ಲವೇ? ನಿನ್ನ ಹೆಸರಿನ ಮೇಲೆ ದೆವ್ವಗಳನ್ನು ಬಿಡಿಸಲಿಲ್ಲವೇ? ನಿನ್ನ ಹೆಸರಿನ ಮೇಲೆ ಅನೇಕ ಮಹತ್ಕಾರ್ಯಗಳನ್ನು ಮಾಡಲಿಲ್ಲವೇ ಎಂದು ಆ ದಿನದಲ್ಲಿ ಎಷ್ಟೋ ಜನರು ನನಗೆ ಹೇಳುವರು. ಆಗ ನಾನು ಅವರಿಗೆ—ನಾನೆಂದೂ ನಿಮ್ಮ 23 ಗುರುತು ಕಾಣೆನು; ಧರ್ಮವನ್ನು ಮಿಾರಿನಡೆಯುವವರೇ, ತೊಲಗಿಹೋಗಿರಿ ಎಂದು ಎಲ್ಲರ ಮುಂದೆ ಹೇಳಿಬಿಡುವೆನು.

ಆದದರಿಂದ, ಈ ನನ್ನ ಮಾತುಗಳನ್ನು ಕೇಳಿ ಅವುಗಳಂತೆ ನಡೆಯುವವನು ಬಂಡೆಯ 24 ಮೇಲೆ ಮನೆಯನ್ನು ಕಟ್ಟಿಕೊಂಡ ಬುದ್ಧಿಯುಳ್ಳ ಮನುಷ್ಯನನ್ನು ಹೋಲುವನು. ಕಟ್ಟಿದ 25 ಮೇಲೆ ಮಳೆ ಹೊಡೆಯಿತು; ಹಳ್ಳಗಳು ಬಂದವು; ನಾಲ್ಕು ಕಡೆಯಿಂದ ಗಾಳಿ ಬೀಸಿ ಆ ಮನೆಗೆ ಬಡಿಯಿತು. ಆದಾಗ್ಯೂ ಅದರ ಅಸ್ತಿವಾರವು ಬಂಡೆಯ ಮೇಲಿದ್ದದರಿಂದ ಅದು ಬೀಳಲಿಲ್ಲ. ಆದರೆ ಈ ನನ್ನ ಮಾತುಗಳನ್ನು ಕೇಳಿಯೂ ಅವುಗಳಂತೆ ನಡೆಯದವನು 26 ಉಸುಬಿನ ಮೇಲೆ ಮನೆಯನ್ನು ಕಟ್ಟಿಕೊಂಡ ಬುದ್ಧಿಹೀನ ಮನುಷ್ಯನನ್ನು ಹೋಲುವನು. ಕಟ್ಟಿದ ಮೇಲೆ ಮಳೆ ಹೊಡೆಯಿತು; ಹಳ್ಳಗಳು ಬಂದವು; ನಾಲ್ಕು ಕಡೆಯಿಂದ ಗಾಳಿ 27 ಬೀಸಿ ಆ ಮನೆಗೆ ಬಡಿಯಿತು. ಆಗ ಅದು ಧಡಮ್ಮನೆ ಕಡುಕೊಂಡು ಬಿತ್ತು.

ಯೇಸು ಈ ಮಾತುಗಳನ್ನು ಹೇಳಿ ಮುಗಿಸಿದ ಮೇಲೆ ಆ ಜನರ ಗುಂಪುಗಳು ಆತನ 28 ಉಪದೇಶಕ್ಕೆ ಅತ್ಯಾಶ್ಚರ್ಯ ಪಟ್ಟವು. ಯಾಕಂದರೆ ಆತನು ಅವರ ಶಾಸ್ತ್ರಿಗಳಂತೆ ಉಪ 29 ದೇಶಮಾಡದೆ ಅಧಿಕಾರವಿದ್ದವನಂತೆ ಅವರಿಗೆ ಉಪದೇಶ ಮಾಡುತ್ತಿದ್ದನು. ಆತನು **8** ಬೆಟ್ಟದಿಂದಿಳಿದು ಬರುವಾಗ ಜನರು ಗುಂಪುಗುಂಪಾಗಿ ಆತನ ಹಿಂದೆ ಹೋದರು.

ಯೇಸು ದಯವುಳ್ಳ ಅದ್ಭುತಕಾರ್ಯಗಳನ್ನು ಮಾಡಿ ತನ್ನ ಮಹಿಮೆಯನ್ನು ತೋರಿಸಿದ್ದು. (8, 2—9, 34.)

ಕುಷ್ಠರೋಗಿಯನ್ನು ಸ್ವಸ್ಥಮಾಡಿದ್ದು. (ಮಾರ್ಕ 1, 40—44; ಲೂಕ 5, 12—14.)

ಒಬ್ಬ ಕುಷ್ಠರೋಗಿಯು ಯೇಸುವಿನ ಹತ್ತಿರ ಬಂದು ಆತನಿಗೆ ಅಡ್ಡಬಿದ್ದು—ಸ್ವಾಮಿಾ, 2 ನಿನಗೆ ಮನಸ್ಸಿದ್ದರೆ ನನ್ನನ್ನು ಶುದ್ಧ ಮಾಡಬಲ್ಲಿ ಅಂದನು. ಆತನು ಕೈ ಚಾಚಿ ಅವ 3 ನನ್ನು ಮುಟ್ಟಿ—ನನಗೆ ಮನಸ್ಸುಂಟು; ಶುದ್ಧವಾಗು ಅಂದನು. ಕೂಡಲೇ ಅವನ ಕುಷ್ಠ

4 ಹೋಯಿತು. ಆಗ ಯೇಸು ಅವನಿಗೆ—ಯಾರಿಗೂ ಹೇಳಬೇಡ ನೋಡು; ಹೋಗಿ ಯಾಜಕನಿಗೆ ನಿನ್ನ ಮೈ ತೋರಿಸಿ, ಮೋಶೆ ನೇಮಿಸಿದ ಕಾಣಿಕೆಯನ್ನು ಕೊಡು; ಅದು ಜನರಿಗೆ ಸಾಕ್ಷಿಯಾಗಲಿ ಎಂದು ಹೇಳಿದನು.

ಶತಾಧಿಪತಿಯ ಆಳನ್ನು ಸ್ವಸ್ಥಮಾಡಿದ್ದು. (ಲೂಕ 7, 1—10; 13, 28. 29.)

5 ಆತನು ಕಪೆರ್ನೌಮೆಂಬ ಊರಿಗೆ ಬಂದಾಗ ದಂಡಿನ ಶತಾಧಿಪತಿಯು[1] ಆತನ ಬಳಿಗೆ 6 ಬಂದು—ಪ್ರಭುವೇ, ನನ್ನ ಆಳು ಪಾರ್ಶ್ವವಾಯುವಿನಿಂದ ಬಹಳ ಕಷ್ಟಪಡುತ್ತಾ ಮನೆ 7 ಯಲ್ಲಿ ಬಿದ್ದಿದ್ದಾನೆ ಎಂದು ಹೇಳಿಕೊಂಡನು. ಆತನು ಅವನಿಗೆ—ನಾನು ಬಂದು ಅವ 8 ನನ್ನು ವಾಸಿಮಾಡುತ್ತೇನೆ ಎಂದು ಹೇಳಿದ್ದಕ್ಕೆ ಆ ಶತಾಧಿಪತಿಯು—ಪ್ರಭುವೇ, ನೀನು ನನ್ನ ಮನೆಗೆ ಬರತಕ್ಕಷ್ಟು ಯೋಗ್ಯತೆ ನನ್ನಲ್ಲಿಲ್ಲ; ನೀನು ಒಂದು ಮಾತು ಹೇಳಿದರೆ 9 ಸಾಕು, ನನ್ನ ಆಳಿಗೆ ಗುಣವಾಗುವದು. ನಾನು ಸಹ ಮತ್ತೊಬ್ಬರ ಕೈಕೆಳಗಿರುವವನು; ನನ್ನ ಕೈಕೆಳಗೆ ಸಿಪಾಯಿಗಳಿದ್ದಾರೆ; ನಾನು ಅವರಲ್ಲಿ ಒಬ್ಬನಿಗೆ ಹೋಗು ಎಂದು ಹೇಳಿ ದರೆ ಹೋಗುತ್ತಾನೆ; ಮತ್ತೊಬ್ಬನಿಗೆ ಬಾ ಎಂದು ಹೇಳಿದರೆ ಬರುತ್ತಾನೆ; ನನ್ನ ಆಳಿಗೆ 10 ಇಂಥಿಂಥಾದ್ದನ್ನು ಮಾಡು ಎಂದು ಹೇಳಿದರೆ ಮಾಡುತ್ತಾನೆ ಅಂದನು. ಯೇಸು ಇದನ್ನು ಕೇಳಿ ಆಶ್ಚರ್ಯಪಟ್ಟು, ತನ್ನ ಹಿಂದೆ ಬರುತ್ತಿದ್ದವರಿಗೆ—ಇಂಥಾ ದೊಡ್ಡ ನಂಬಿಕೆಯನ್ನು ನಾನು ಇಸ್ರಯೇಲ ಜನರಲ್ಲಿಯೂ ಕಾಣಲಿಲ್ಲವೆಂದು ನಿಮಗೆ ಸತ್ಯವಾಗಿ ಹೇಳುತ್ತೇನೆ. 11 ಇದಲ್ಲದೆ ನಿಮಗೆ ಹೇಳುವದೇನಂದರೆ, ಮೂಡಣ ಪಡುವಣ ದಿಕ್ಕುಗಳಿಂದ ಬಹಳ ಜನ ಬಂದು ಪರಲೋಕರಾಜ್ಯದಲ್ಲಿ ಅಬ್ರಹಾಮ್ ಇಸಾಕ್ ಯಾಕೋಬ್ ಎಂಬವರ ಸಂಗಡ 12 ಊಟಕ್ಕೆ ಕೂಡ್ರುವರು; ಆದರೆ ಆ ರಾಜ್ಯದ ಬಾಧ್ಯಸ್ಥರು ಹೊರಗೆ ಕತ್ತಲೆಗೆ ನೂಕಲ್ಪ ಡುವರು; ಅಲ್ಲಿ ಗೋಳಾಟವೂ ಕಟಕಟನೆ ಹಲ್ಲುಕಡಿಯೋಣವೂ ಇರುವವು ಎಂದು 13 ಹೇಳಿದನು. ಬಳಿಕ ಯೇಸು ಆ ಶತಾಧಿಪತಿಗೆ—ನೀನು ನಂಬಿದಂತೆ ನಿನಗಾಗಲಿ, ಹೋಗು ಎಂದು ಹೇಳಿದನು. ಅದೇ ಗಳಿಗೆಯಲ್ಲಿ ಅವನ ಆಳಿಗೆ ಗುಣವಾಯಿತು.

ಯೇಸು ಬೇರೆ ಅದ್ಭುತಕಾರ್ಯಗಳಿಂದ ತನ್ನ ಕನಿಕರದ ಸ್ವಭಾವವನ್ನು ತೋರಿಸಿದ್ದು.
(ಮಾರ್ಕ 1, 29—34; ಲೂಕ 4, 38—41.)

14 ತರುವಾಯ ಯೇಸು ಪೇತ್ರನ ಮನೆಗೆ ಬಂದು, ಅವನ ಅತ್ತೆ ಜ್ವರದಲ್ಲಿ ಬಿದ್ದಿರುವದನ್ನು 15 ಕಂಡು, ಆಕೆಯ ಕೈಯನ್ನು ಮುಟ್ಟಿದನು. ಮುಟ್ಟಿದಾಗಲೇ ಜ್ವರವು ಆಕೆಯನ್ನು ಬಿಟ್ಟು ಹೋಯಿತು; ಆಕೆ ಎದ್ದು ಆತನಿಗೆ ಉಪಚಾರಮಾಡಿದಳು.

16 ಸಂಜೆಯಾಗಲು ದೆವ್ವಹಿಡಿದ ಬಹಳ ಜನರನ್ನು ಆತನ ಬಳಿಗೆ ಕರತಂದರು; ಆತನು ಮಾತು ಮಾತ್ರದಿಂದಲೇ ದೆವ್ವಗಳನ್ನು ಬಿಡಿಸಿದ್ದಲ್ಲದೆ, ಮೈಯಲ್ಲಿ ನೆಟ್ಟಗಿಲ್ಲದವರೆಲ್ಲರನ್ನು 17 ವಾಸಿಮಾಡಿದನು. ಇದರಿಂದ—ನಮ್ಮ ಬೇನೆಗಳನ್ನು ತಾನೇ ತೆಗೆದುಕೊಂಡು, ನಮ್ಮ ರೋಗಗಳನ್ನು ಹೊತ್ತುಕೊಂಡನು ಎಂದು[2] ಯೆಶಾಯನೆಂಬ ಪ್ರವಾದಿಯಿಂದ ಹೇಳಿರುವ ಮಾತು ನೆರವೇರಿತು.

---

[1] ಅಂದರೆ, ನೂರು ಸಿಪಾಯಿಗಳ ಮೇಲಿರುವ ಸರದಾರನು.
[2] ಯೆಶಾಯ ೫೩, ೪.

ಶಿಷ್ಯರಾಗಬೇಕೆಂದಿರುವವರಿಗೆ ವೈರಾಗ್ಯವೇ ಅವಶ್ಯವೆಂದು ಯೇಸು ಬೋಧಿಸಿದ್ದು. (ಲೂಕ 9, 57—60.)

ಯೇಸು ತನ್ನ ಸುತ್ತಲಿದ್ದ ಬಹು ಜನಗಳ ದೊಡ್ಡ ಗುಂಪುಗಳನ್ನು ಕಂಡು, ಆಚೇ 18 ದಡಕ್ಕೆ ಹೋಗಬೇಕೆಂದು ಅಪ್ಪಣೆಕೊಟ್ಟನು. ಆಗ ಒಬ್ಬ ಶಾಸ್ತ್ರಿಯು ಹತ್ತರಕ್ಕೆ 19 ಬಂದು—ಗುರುವೇ, ನೀನು ಎಲ್ಲಿಗೆ ಹೋದರೂ ನಾನು ನಿನ್ನ ಹಿಂದೆ ಬರುವೆನು ಅಂದನು. ಯೇಸು ಅವನಿಗೆ—ನರಿಗಳಿಗೆ ಗುದ್ದುಗಳವೆ, ಆಕಾಶದಲ್ಲಿ ಹಾರ್ಯಾಡುವ ಹಕ್ಕಿಗಳಿಗೆ 20 ಗೂಡುಗಳವೆ; ಆದರೆ ಮನುಷ್ಯಕುಮಾರನಿಗೆ ತಲೆಯಿಡುವಷ್ಟು ಸ್ಥಳವೂ ಇಲ್ಲ ಎಂದು ಹೇಳಿದನು. ಶಿಷ್ಯರಲ್ಲಿ ಬೇರೊಬ್ಬನು—ಸ್ವಾಮೀ, ನಾನು ಮೊದಲು ಹೋಗಿ ನನ್ನ 21 ತಂದೆಯ ಉತ್ತರಕ್ರಿಯೆಗಳನ್ನು ಮಾಡಿ ಬರುವಂತೆ ನನಗೆ ಅಪ್ಪಣೆಯಾಗಬೇಕು ಅನ್ನ ಲಾಗಿ, ಯೇಸು ಅವನಿಗೆ—ನನ್ನ ಹಿಂದೆ ಬಾ, ಸತ್ತವರೇ ತಮ್ಮವರಲ್ಲಿ ಸತ್ತುಹೋದವರ 22 ಉತ್ತರಕ್ರಿಯೆಗಳನ್ನು ಮಾಡಲಿ ಎಂದು ಉತ್ತರಕೊಟ್ಟನು.

ಯೇಸು ಬಿರುಗಾಳಿಯಲ್ಲಿ ನಿದ್ದೆಮಾಡಿ ದೇವರ ಮೇಲಿರುವ ತನ್ನ ನಂಬಿಕೆಯನ್ನು ತೋರಿಸಿದ್ದು.
(ಮಾರ್ಕ 4, 35—41; ಲೂಕ 8, 22—25.)

ಆತನು ಹಡಗನ್ನು ಹತ್ತಿದಾಗ ಆತನ ಶಿಷ್ಯರು ಆತನ ಹಿಂದೆ ಹೋದರು. ಅವರು 23, 24 ಹೋಗುತ್ತಿರುವಾಗ ಸಮುದ್ರವು ಅಲ್ಲಕಲ್ಲೋಲವಾಗಿ, ಹಡಗು ತೆರೆಗಳಿಂದ ಮುಚ್ಚಿ ಹೋಯಿತು; ಆದರೆ ಆತನು ನಿದ್ದೆಹತ್ತಿ ಮಲಗಿದ್ದನು. ಹಡಗಿನಲ್ಲಿದ್ದವರು ಹತ್ತರ 25 ಬಂದು ಆತನನ್ನು ಎಬ್ಬಿಸಿ—ಸ್ವಾಮೀ, ಕಾಪಾಡು, ಸಾಯುತ್ತೇವೆ ಅನ್ನಲಾಗಿ, ಆತನು 26 ಅವರಿಗೆ—ಅಲ್ಪವಿಶ್ವಾಸಿಗಳೇ, ಯಾಕೆ ಧೈರ್ಯಗೆಡುತ್ತೀರಿ ಎಂದು ಹೇಳಿ, ಎದ್ದು ಗಾಳಿ ಯನ್ನೂ ಸಮುದ್ರವನ್ನೂ ಗದರಿಸಿದನು; ಆಗ ಎಲ್ಲಾ ಶಾಂತವಾಯಿತು. ಆ ಜನರು 27 ಬೆರಗಾಗಿ—ಈತನು ಎಂಥವನಾಗಿರಬಹುದು! ಗಾಳಿಯೂ ಸಮುದ್ರವೂ ಸಹ ಈತನು ಹೇಳಿದ ಹಾಗೆ ಕೇಳುತ್ತವಲ್ಲಾ ಅಂದರು.

ಯೇಸು ಇಬ್ಬರಿಂದ ಅನೇಕ ದೆವ್ವಗಳನ್ನು ಬಿಡಿಸಿದ್ದು. (ಮಾರ್ಕ 5, 1—20; ಲೂಕ 8, 26—39.)

ಆ ಮೇಲೆ ಆತನು ಆಚೇದಡಕ್ಕೆ ಗದರೇನರ ಸೀಮೆಗೆ ಮುಟ್ಟಿದಾಗ, ದೆವ್ವಹಿಡಿದವ 28 ರಿಬ್ಬರು ಸಮಾಧಿಯ ಗವಿಗಳೊಳಗಿಂದ ಹೊರಟು ಆತನೆದುರಿಗೆ ಬಂದರು. ಅವರು ಬಹು ಉಗ್ರರಾಗಿದ್ದದರಿಂದ ಆ ದಾರಿಯಲ್ಲಿ ಯಾರೂ ತಿರುಗಾಡಲಾರದೆ ಇದ್ದರು. ಅವರು— 29 ದೇವರ ಮಗನೇ, ನಮ್ಮ ಗೊಡವೆ ನಿನಗೆ ಯಾಕೆ? ಕಾಲ ಬರುವದಕ್ಕಿಂತ ಮುಂಚೆ ನಮ್ಮನ್ನು ಕಾಡುವದಕ್ಕೆ ಇಲ್ಲಿಗೆ ಬಂದಿಯಾ ಎಂದು ಕೂಗಿದರು. ಸ್ವಲ್ಪ ದೂರದಲ್ಲಿ 30 ಹಂದಿಗಳ ಒಂದು ದೊಡ್ಡ ಹಿಂಡು ಮೇಯುತ್ತಿತ್ತು. ಆ ದೆವ್ವಗಳು—ನೀನು ನಮ್ಮನ್ನು 31 ಇವರೊಳಗಿಂದ ಹೊರಡಿಸುವದಾದರೆ ಆ ಹಂದಿಯ ಗುಂಪಿನೊಳಗೆ ಕಳುಹಿಸಿಕೊಡು ಎಂದು ಬೇಡಿಕೊಂಡವು. ಆತನು—ಹೋಗಿರಿ ಅನ್ನಲು, ಅವು ಹೊರಗೆ ಬಂದು ಹಂದಿ 32 ಗಳೊಳಗೆ ಹೊಕ್ಕವು; ಆ ಕ್ಷಣವೇ ಆ ಗುಂಪೆಲ್ಲಾ ಓಡಿ, ಕಡಿದಾದ ಸ್ಥಳದಿಂದ ಸಮುದ್ರ ದೊಳಗೆ ಬಿದ್ದು ನೀರಿನಲ್ಲಿ ಮುಣುಗಿ ಸತ್ತುಹೋಯಿತು. ಆದರೆ ಮೇಯಿಸುವವರು 33

ಊರೊಳಕ್ಕೆ ಓಡಿಬಂದು ಇದನ್ನೆಲ್ಲಾ ದೆವ್ವಹಿಡಿದವರ ಸಂಗತಿ ಸಹಿತವಾಗಿ ತಿಳಿಸಿದರು.
34 ಆಗ ಊರಿನವರೆಲ್ಲರೂ ಯೇಸುವಿನೆದುರಿಗೆ ಹೊರಟುಬಂದು ಆತನನ್ನು ಕಂಡು, ತಮ್ಮ
**9** ಸೀಮೆಯನ್ನು ಬಿಟ್ಟುಹೋಗಬೇಕೆಂದು ಬೇಡಿಕೊಂಡರು. ಆತನು ಹಡಗನ್ನು ಹತ್ತಿ ಸಮುದ್ರವನ್ನು ದಾಟಿ ತನ್ನ ಊರಿಗೆ ಬಂದನು.

ಪಾರ್ಶ್ವವಾಯುರೋಗಿಗೆ ಪಾಪವನ್ನು ಕ್ಷಮಿಸಿದ್ದು. (ಮಾರ್ಕ 2, 1—12; ಲೂಕ 5, 17—26.)

2 ಅಲ್ಲಿಗೆ ಬಂದಾಗ ಹಾಸಿಗೆಯ ಮೇಲೆ ಬಿದ್ದುಕೊಂಡಿರುವ ಒಬ್ಬ ಪಾರ್ಶ್ವವಾಯುವಿನವನನ್ನು ಆತನ ಬಳಿಗೆ ಹೊತ್ತುಕೊಂಡು ಬಂದರು. ಯೇಸು ಅವರ ನಂಬಿಕೆಯನ್ನು ನೋಡಿ ಪಾರ್ಶ್ವವಾಯುವಿನವನಿಗೆ—ಮಗನೇ, ಧೈರ್ಯವಾಗಿರು, ನಿನ್ನ ಪಾಪಗಳು ಕ್ಷಮಿ
3 ಸಲ್ಪಟ್ಟವೆ ಎಂದು ಹೇಳಿದನು. ಅಲ್ಲಿದ್ದ ಶಾಸ್ತ್ರಿಗಳಲ್ಲಿ ಕೆಲವರು—ಇವನು ದೇವದೂಷಣೆ
4 ಮಾಡುತ್ತಾನೆಂದು ತಮ್ಮೊಳಗೆ ಅಂದುಕೊಂಡರು. ಯೇಸು ಅವರ ಆಲೋಚನೆಗಳನ್ನು ತಿಳಿದು—ನೀವು ಯಾಕೆ ನಿಮ್ಮ ಮನಸ್ಸಿನಲ್ಲಿ ಕೆಟ್ಟ ಆಲೋಚನೆಯನ್ನು ಮಾಡುತ್ತೀರಿ?
5 ನಿನ್ನ ಪಾಪಗಳು ಕ್ಷಮಿಸಲ್ಪಟ್ಟವೆ ಅನ್ನುವದು ಸುಲಭವೋ? ಎದ್ದು ನಡೆ ಅನ್ನುವದು
6 ಸುಲಭವೋ? ಆದರೆ ಪಾಪಗಳನ್ನು ಕ್ಷಮಿಸಿಬಿಡುವದಕ್ಕೆ ಮನುಷ್ಯಕುಮಾರನಿಗೆ ಭೂಲೋಕದಲ್ಲಿ ಅಧಿಕಾರ ಉಂಟೆಂಬುವದು ನಿಮಗೆ ತಿಳಿಯಬೇಕು ಎಂದು ಹೇಳಿ, ಪಾರ್ಶ್ವವಾಯುವಿನವನನ್ನು ನೋಡಿ—ಎದ್ದು ನಿನ್ನ ಹಾಸಿಗೇ ಎತ್ತಿಕೊಂಡು ಮನೆಗೆ
7, 8 ಹೋಗು ಅಂದನು. ಅವನು ಎದ್ದು ಮನೆಗೆ ಹೋದನು. ಜನರು ಇದನ್ನು ನೋಡಿ ಭಯಪಟ್ಟು, ದೇವರು ಮನುಷ್ಯರಿಗೆ ಅಂಥಾ ಅಧಿಕಾರವನ್ನು ಕೊಟ್ಟದ್ದಕ್ಕೆ ಆತನನ್ನು ಕೊಂಡಾಡಿದರು.

ಯೇಸು ತಾನು ಪಾಪಿಗಳ ಸಂಗಡ ಊಟಾಮಾಡಿದ್ದಕ್ಕೂ ಉಪವಾಸ ಮಾಡದೆ ಹೋದದ್ದಕ್ಕೂ ಕಾರಣ ತೋರಿಸಿದ್ದು. (ಮಾರ್ಕ 2, 13—22; ಲೂಕ 5, 27—38.)

9 ಯೇಸು ಅಲ್ಲಿಂದ ಹಾದುಹೋಗುವಾಗ, ಸುಂಕದ ಕಟ್ಟೆಯಲ್ಲಿ ಕೂತುಕೊಂಡಿದ್ದ ಮತ್ತಾಯನೆಂಬ ಒಬ್ಬ ಮನುಷ್ಯನನ್ನು ನೋಡಿ—ನನ್ನನ್ನು ಹಿಂಬಾಲಿಸು ಎಂದು ಅವನನ್ನು ಕರೆಯಲು, ಅವನು ಎದ್ದು ಆತನನ್ನು ಹಿಂಬಾಲಿಸಿದನು.

10 ಅನಂತರ ಆತನು ಅವನ ಮನೆಯಲ್ಲಿ ಊಟಕ್ಕೆ ಕೂತಿರುವಾಗ, ಬಹಳ ಮಂದಿ ಸುಂಕದವರೂ ಅನಾಚಾರಿಗಳೂ ಬಂದು ಯೇಸುವಿನ ಮತ್ತು ಆತನ ಶಿಷ್ಯರ ಪಂಕ್ತಿಯಲ್ಲೇ
11 ಕೂತುಕೊಂಡರು. ಫರಿಸಾಯರು ಅದನ್ನು ನೋಡಿ, ಆತನ ಶಿಷ್ಯರನ್ನು—ನಿಮ್ಮ ಗುರುವು ಸುಂಕದವರ ಮತ್ತು ಪಾಪಿಗಳ ಸಂಗಡ ಯಾಕೆ ಊಟಾಮಾಡುತ್ತಾನೆ ಎಂದು ಕೇಳಿ
12 ದರು. ಆತನು ಅದನ್ನು ಕೇಳಿ—ಕ್ಷೇಮದಿಂದಿರುವವರಿಗೆ ವೈದ್ಯನು ಬೇಕಾಗಿಲ್ಲ, ಕ್ಷೇಮ
13 ವಿಲ್ಲದವರಿಗೆ ಬೇಕು. ನೀವು ಹೋಗಿ—ಯಜ್ಞವು ನನಗೆ ಬೇಡ; ದಯವೇ ಬೇಕು[1] ಎಂಬ ಮಾತಿನ ಅರ್ಥವನ್ನು ಕಲಿತುಕೊಳ್ಳಿರಿ. ನಾನು ನೀತಿವಂತರನ್ನು ಕರೆಯುವದಕ್ಕೆ ಬಂದವನಲ್ಲ, ಪಾಪಿಗಳನ್ನು ಕರೆಯುವದಕ್ಕೆ ಬಂದವನು ಅಂದನು.

---

1) ಹೊಶೇಯ ೬, ೬.

ಆ ಮೇಲೆ ಯೋಹಾನನ ಶಿಷ್ಯರು ಆತನ ಬಳಿಗೆ ಬಂದು—ನಾವೂ ಫರಿಸಾಯರೂ 14
ಉಪವಾಸಮಾಡುತ್ತಿರುವಲ್ಲಿ ನಿನ್ನ ಶಿಷ್ಯರು ಉಪವಾಸಮಾಡದೆ ಇರುವದಕ್ಕೆ ಕಾರಣ
ವೇನು ಎಂದು ಕೇಳಿದರು. ಯೇಸು ಅವರಿಗೆ—ಮದುವೇಜನರು ತಮ್ಮ ಸಂಗಡ 15
ಮದಲಿಂಗನು ಇರುವ ತನಕ ದುಃಖಪಟ್ಟಾರೋ? ಆದರೆ ಮದಲಿಂಗನನ್ನು ಅವರ ಬಳಿ
ಯಿಂದ ತೆಗೆದುಕೊಂಡುಹೋಗುವ ಕಾಲ ಬರುತ್ತದೆ; ಆಗ ಉಪವಾಸಮಾಡುವರು.
ಯಾರೂ ಹೊಸ ಬಟ್ಟೆಯ ತುಂಡನ್ನು ಹಳೇ ವಸ್ತ್ರಕ್ಕೆ ತ್ಯಾಪೇಹಚ್ಚುವದಿಲ್ಲ; ಹಚ್ಚಿದರೆ, 16
ಆ ತ್ಯಾಪೆಯು ವಸ್ತ್ರವನ್ನು ಹಿಂಜುವದರಿಂದ ಹರಕು ಹೆಚ್ಚಾಗುವದು. ಇದಲ್ಲದೆ 17
ಹಳೇ ಬುದ್ದಲಿಗಳಲ್ಲಿ ಹೊಸ ದ್ರಾಕ್ಷಾರಸವನ್ನು ಹಾಕಿಡುವದಿಲ್ಲ; ಇಟ್ಟರೆ, ಬುದ್ದಲಿಗಳು
ಒಡೆದು ದ್ರಾಕ್ಷಾರಸವು ಚೆಲ್ಲಿಹೋಗುವದು, ಬುದ್ದಲಿಗಳು ಕೆಟ್ಟುಹೋಗುವವು; ಆದರೆ
ಹೊಸ ದ್ರಾಕ್ಷಾರಸವನ್ನು ಹೊಸ ಬುದ್ದಲಿಗಳಲ್ಲಿ ಹಾಕಿಡುತ್ತಾರೆ, ಆಗ ಎರಡೂ ಉಳಿ
ಯುತ್ತವೆ ಎಂದು ಹೇಳಿದನು.

### ಯೇಸು ಒಬ್ಬ ಹುಡುಗಿಯನ್ನು ಬದುಕಿಸಿದ್ದೂ ಇನ್ನೂ ಕೆಲವು ಅದ್ಭುತಕಾರ್ಯಗಳನ್ನು ನಡಿಸಿದ್ದೂ.
(ಮಾರ್ಕ 5, 22—43; ಲೂಕ 8, 41—56.)

ಹೀಗೆ ಆತನು ಅವರೊಂದಿಗೆ ಮಾತಾಡುತ್ತಿರುವಾಗ, ಒಬ್ಬ ಅಧಿಕಾರಿ ಬಂದು ಆತ 18
ನಿಗೆ ಅಡ್ಡಬಿದ್ದು—ನನ್ನ ಮಗಳು ಈಗಲೇ ತೀರಿಹೋದಳು; ಆದಾಗ್ಯೂ ನೀನು ಬಂದು
ಆಕೆಯ ಮೇಲೆ ಕೈ ಇಟ್ಟರೆ ಬದುಕುವಳು ಎಂದು ಬೇಡಿಕೊಳ್ಳಲು, ಯೇಸು ಎದ್ದು 19
ತನ್ನ ಶಿಷ್ಯರನ್ನು ಕರಕೊಂಡು ಅವನ ಹಿಂದೆ ಹೋದನು.

ಹೋಗುವಾಗ, ಹನ್ನೆರಡು ವರ್ಷಗಳಿಂದ ರಕ್ತಕುಸುಮರೋಗವಿದ್ದ ಒಬ್ಬ ಹೆಂಗಸು— 20
ನಾನು ಆತನ ಉಡುಪನ್ನು ಮುಟ್ಟಿದರೆ ಸಾಕು, ನೆಟ್ಟಗಾದೇನು ಎಂದು ಮನಸ್ಸಿನಲ್ಲಿ 21
ಅಂದುಕೊಂಡು, ಹಿಂದಿನಿಂದ ಬಂದು ಆತನ ಉಡುಪಿನ ಗೊಂಡೆಯನ್ನು ಮುಟ್ಟಿದಳು.
ಆಗ ಯೇಸು ಹಿಂತಿರುಗಿ ಆಕೆಯನ್ನು ನೋಡಿ—ಮಗಳೇ, ಧೈರ್ಯವಾಗಿರು; ನಿನ್ನ ನಂಬಿ 22
ಕೆಯಿಂದಲೇ ನೀನು ಸ್ವಸ್ಥವಾದೆ ಅಂದನು. ಆ ಕ್ಷಣವೇ ಆ ಹೆಂಗಸು ಸ್ವಸ್ಥವಾದಳು.

ಆ ಮೇಲೆ ಯೇಸು ಆ ಅಧಿಕಾರಿಯ ಮನೆಗೆ ಬಂದು, ವಾದ್ಯಗಾರರನ್ನೂ ಗೋಳಾ 23
ಡುವ ಜನರ ಗುಂಪನ್ನೂ ಕಂಡು—ಹೊರಗೆ ಹೋಗಿರಿ; ಹುಡುಗಿ ಸತ್ತಿಲ್ಲ, ನಿದ್ದೆಮಾಡು 24
ತ್ತಾಳೆ ಅನ್ನಲು, ಅವರು ಹಾಸ್ಯಮಾಡಿದರು. ಜನರನ್ನು ಹೊರಕ್ಕೆ ಕಳುಹಿಸಿದ ಮೇಲೆ, 25
ಆತನು ಒಳಕ್ಕೆ ಹೋಗಿ ಆ ಹುಡುಗಿಯ ಕೈಯನ್ನು ಹಿಡಿಯಲು, ಆಕೆ ಎದ್ದಳು. ಈ 26
ಸುದ್ದಿ ಆ ದೇಶದೊಳಗೆಲ್ಲಾ ಹಬ್ಬಿತು.

ಯೇಸು ಅಲ್ಲಿಂದ ಹೋಗುವಾಗ, ಇಬ್ಬರು ಕುರುಡರು—ದಾವೀದನ ಕುಮಾರನೇ, 27
ನಮ್ಮನ್ನು ಕರುಣಿಸು ಎಂದು ಕೂಗುತ್ತಾ ಆತನ ಹಿಂದೆ ಹೋದರು. ಆತನು ಮನೆಗೆ 28
ಬಂದಾಗ ಆ ಕುರುಡರು ಆತನ ಬಳಿಗೆ ಬಂದರು. ಯೇಸು ಅವರನ್ನು—ನಾನು ಇದನ್ನು
ಮಾಡ ಬಲ್ಲೆನೆಂಬುವದನ್ನು ನಂಬುತ್ತೀರೋ ಎಂದು ಕೇಳಿದ್ದಕ್ಕೆ, ಅವರು—ಹೌದು,
ಸ್ವಾಮೀ, ನಂಬುತ್ತೇವೆ ಅಂದರು. ಆಗ ಆತನು ಅವರ ಕಣ್ಣುಗಳನ್ನು ಮುಟ್ಟಿ—ನೀವು 29
ನಂಬಿದಂತೆ ನಿಮಗೆ ಆಗಲಿ ಅಂದನು. ಆಗ ಅವರಿಗೆ ಕಣ್ಣು ಬಂದವು. ಮತ್ತು ಯೇಸು 30

ಅವರಿಗೆ—ಇದು ಯಾರಿಗೂ ತಿಳಿಯಬಾರದು ನೋಡಿರಿ ಎಂದು ಖಂಡಿತವಾಗಿ ಹೇಳಿ
31 ದನು. ಆದರೆ ಅವರು ಹೊರಟುಹೋಗಿ ಆ ದೇಶದೊಳಗೆಲ್ಲಾ ಆತನ ಸುದ್ದಿಯನ್ನು ಹಬ್ಬಿಸಿದರು.

32 ಅವರು ಹೊರಟುಹೋಗುತ್ತಿರುವಾಗ, ದೆವ್ವಹಿಡಿದ ಒಬ್ಬ ಮೂಕನನ್ನು ಆತನ ಬಳಿಗೆ
33 ಕರತಂದರು. ಆತನು ದೆವ್ವಾಬಿಡಿಸಿದ ಮೇಲೆ ಆ ಮೂಕನು ಮಾತಾಡುವವನಾದನು. ಅದಕ್ಕೆ ಆ ಜನರು—ಇಸ್ರಯೇಲ ಜನರಲ್ಲಿ ಇಂಥಾ ಕಾರ್ಯವನ್ನು ಇದುವರೆಗೆ ಯಾರೂ
34 ನೋಡಲಿಲ್ಲವೆಂದು ಬೆರಗಾದರು. ಆದರೆ ಫರಿಸಾಯರು—ಇವನು ದೆವ್ವಗಳ ಒಡೆಯನ ಸಹಾಯದಿಂದಲೇ ದೆವ್ವಾಬಿಡಿಸುತ್ತಾನೆ ಅಂದರು.

ಯೇಸು ಹನ್ನೆರಡು ಮಂದಿ ಶಿಷ್ಯರನ್ನು ಆಡುಕೊಂಡು, ಸುವಾರ್ತೆಯನ್ನು ಸಾರುವದಕ್ಕೆ ಕಳುಹಿಸಿದ್ದು.
(ಮಾರ್ಕ 3, 13—19; 6, 6—13; ಲೂಕ 6, 12—16; 9, 1—6.)

35 ಯೇಸು ಎಲ್ಲಾ ಊರುಗಳನ್ನೂ ಹಳ್ಳಿಗಳನ್ನೂ ಸಂಚಾರಮಾಡಿ ಅವರ ಸಭಾಮಂದಿರಗಳಲ್ಲಿ ಉಪದೇಶಮಾಡುತ್ತಾ, ಪರಲೋಕರಾಜ್ಯದ ಸುವಾರ್ತೆಯನ್ನು ಸಾರಿಹೇಳುತ್ತಾ, ಎಲ್ಲಾತರದ ರೋಗಗಳನ್ನೂ ಎಲ್ಲಾತರದ ಬೇನೆಗಳನ್ನೂ ವಾಸಿಮಾಡುತ್ತಾ ಬಂದನು.
36 ಆದರೆ ಜನರ ಗುಂಪುಗಳನ್ನು ನೋಡಿ, ಅವರು ಕುರುಬನಿಲ್ಲದ ಕುರಿಗಳಂತೆ ತೊಳಲಿ
37 ಬಳಲಿ ಇರುವದನ್ನು ಕಂಡಾಗ ಆತನಿಗೆ ಅವರ ಮೇಲೆ ಕರುಣ ಹುಟ್ಟಿತು. ಆಗ ತನ್ನ
38 ಶಿಷ್ಯರಿಗೆ—ಬೆಳೆಯು ಬಹಳ, ಕೆಲಸದವರು ಸ್ವಲ್ಪ; ಆದದರಿಂದ ಬೆಳೇಯಜಮಾನನನ್ನು—ನಿನ್ನ ಬೆಳೆಗೆ ಕೆಲಸದವರನ್ನು ಕಳುಹಿಸಬೇಕೆಂದು ಬೇಡಿಕೊಳ್ಳಿರಿ ಎಂದು ಹೇಳಿದನು.

**10** ಮತ್ತು ಆತನು ತನ್ನ ಹನ್ನೆರಡು ಮಂದಿ ಶಿಷ್ಯರನ್ನು ಹತ್ತರಕ್ಕೆ ಕರೆದು, ದೆವ್ವಗಳನ್ನು ಬಿಡಿಸುವದಕ್ಕೂ ಎಲ್ಲಾತರದ ರೋಗಗಳನ್ನೂ ಎಲ್ಲಾತರದ ಬೇನೆಗಳನ್ನೂ ವಾಸಿಮಾಡುವದಕ್ಕೂ ಅವರಿಗೆ ಅಧಿಕಾರ ಕೊಟ್ಟನು.

2 ಆತನು ಕಳುಹಿಸಿಕೊಟ್ಟ ಅಪೊಸ್ತಲರೆಂಬ ಹನ್ನೆರಡು ಮಂದಿಯ ಹೆಸರುಗಳು ಯಾವವಂದರೆ—ಮೊದಲನೆಯವನು ಪೇತ್ರನೆನ್ನಿಸಿಕೊಳ್ಳುವ ಸೀಮೋನ, ಅವನ ತಮ್ಮನಾದ ಅಂದ್ರೆಯ, ಜೆಬೆದಾಯನ ಮಗನಾದ ಯಾಕೋಬ, ಅವನ ತಮ್ಮನಾದ ಯೋಹಾನ,
3 ಫಿಲಿಪ್ಪ, ಬಾರ್ತೊಲೊಮಾಯ, ತೋಮ, ಸುಂಕದ ಮತ್ತಾಯ, ಅಲ್ಫಾಯನ ಮಗನಾದ
4 ಯಾಕೋಬ, ತದ್ದಾಯ, ಮತಾಭಿಮಾನಿ ಎಂದು ಹೆಸರುಗೊಂಡ ಸೀಮೋನ, ಯೇಸುವನ್ನು ಹಿಡಿದುಕೊಟ್ಟ ಇಸ್ಕರಿಯೋತ ಯೂದ, ಇವುಗಳೇ.

5 ಈ ಹನ್ನೆರಡು ಮಂದಿಯನ್ನು ಯೇಸು ಕಳುಹಿಸಿದನು. ಕಳುಹಿಸುವಾಗ, ಅವರಿಗೆ ಅಪ್ಪಣೆಕೊಟ್ಟದ್ದೇನಂದರೆ—

ಅನ್ಯಜನಗಳ ಕಡೆಗೆ ಹೋಗಬೇಡಿರಿ, ಸಮಾರ್ಯರ ಊರೊಳಗೆ ಕಾಲಿಡಬೇಡಿರಿ;
6 ಇವರನ್ನು ಬಿಟ್ಟು, ತಪ್ಪಿಸಿಕೊಂಡ ಕುರಿಗಳಂತಿರುವ ಇಸ್ರಯೇಲನ ಮನೆತನದವರ ಬಳಿಗೆ
7 ಹೋಗಿರಿ. ಪರಲೋಕರಾಜ್ಯವು ಸಮೀಪವಾಯಿತೆಂದು ಸಾರಿಹೇಳುತ್ತಾ ಹೋಗಿರಿ.
8 ರೋಗಿಗಳನ್ನು ಸ್ವಸ್ಥಮಾಡಿರಿ, ಸತ್ತವರನ್ನು ಬದುಕಿಸಿರಿ, ಕುಷ್ಠಹತ್ತಿದವರನ್ನು ಶುದ್ಧ

ಮಾಡಿರಿ, ದೆವ್ವಗಳನ್ನು ಬಿಡಿಸಿರಿ; ಉಚಿತವಾಗಿ ಹೊಂದಿದ್ದೀರಿ, ಉಚಿತವಾಗಿ ಕೊಡಿರಿ. ನಿಮ್ಮ ನಡುಕಟ್ಟಿನಲ್ಲಿ ಹೊನ್ನು ಹಣ ದುಡ್ಡುಗಳನ್ನೂ ಹಸಿಬೆ ಎರಡು ಅಂಗಿ ಕೆರ ಕೋಲು 9, 10 ಮೊದಲಾದವುಗಳನ್ನೂ ಸೌರಿಸಿಕೊಳ್ಳಬೇಡಿರಿ. ದುಡಿಯುವವನಿಗೆ ಊಟ ಸಿಕ್ಕುವದು ಯೋಗ್ಯವಾಗಿದೆ.

ನೀವು ಯಾವದೊಂದು ಊರಿಗೆ ಅಥವಾ ಹಳ್ಳಿಗೆ ಸೇರಿದಾಗ ಅಲ್ಲಿ ಯೋಗ್ಯರು 11 ಯಾರೆಂದು ವಿಚಾರಣೆಮಾಡಿ, ಮುಂದಕ್ಕೆ ಹೊರಡುವ ತನಕ ಅವರಲ್ಲೇ ಇರ್ರಿ. ಆ 12 ಮನೆಯೊಳಕ್ಕೆ ಹೋಗುವಾಗ, ಶುಭವಾಗಲಿ ಅನ್ನಿರಿ. ಆ ಮನೆಯವರು ಯೋಗ್ಯರಾಗಿ 13 ದ್ದರೆ ನೀವು ಹೇಳುವ ಆಶೀರ್ವಾದವು ಅವರಿಗೆ ಆಗಲಿ; ಅಯೋಗ್ಯರಾಗಿದ್ದರೆ ನೀವು ಹೇಳಿದ ಆಶೀರ್ವಾದವು ನಿಮಗೆ ಹಿಂತಿರುಗಲಿ. ಯಾರಾದರೂ ನಿಮ್ಮನ್ನು ಸೇರಿಸಿಕೊಳ್ಳ 14 ದೆಯೂ ನಿಮ್ಮ ವಾಕ್ಯಗಳನ್ನು ಕೇಳದೆಯೂ ಹೋದರೆ ನೀವು ಆ ಮನೆಯನ್ನಾಗಲಿ ಆ ಊರನ್ನಾಗಲಿ ಬಿಟ್ಟು ಹೊರಡುವಾಗ, ನಿಮ್ಮ ಕಾಲಿಗೆ ಹತ್ತಿದ ಧೂಳನ್ನು ಝಾಡಿಸಿಬಿಡಿರಿ. ನ್ಯಾಯವಿಚಾರಣೆಯ ದಿವಸದಲ್ಲಿ ಅಂಥಾ ಊರಿನ ಗತಿಯು ಸೊದೋಮ್ ಗಮೊರಗಳ 15 ಸೀಮೆಯ ಗತಿಗಿಂತಲೂ ಕಠಿಣವಾಗಿರುವದು ಎಂದು ನಿಮಗೆ ಸತ್ಯವಾಗಿ ಹೇಳುತ್ತೇನೆ.

ನೋಡಿರಿ, ತೋಳಗಳ ನಡುವೆ ಕುರಿಗಳನ್ನು ಹೊಗಿಸಿದಂತೆ ನಾನು ನಿಮ್ಮನ್ನು ಕಳುಹಿಸಿ 16 ಕೊಡುತ್ತೇನೆ. ಆದದರಿಂದ ಸರ್ಪಗಳಂತೆ ಜಾಣರಾಗಿಯೂ ಪಾರಿವಾಳಗಳಂತೆ ನಿಷ್ಕಪಟಿ ಗಳಾಗಿಯೂ ಇರ್ರಿ. ಇದಲ್ಲದೆ ಜನರ ವಿಷಯದಲ್ಲಿ ಎಚ್ಚರಿಕೆಯಾಗಿರ್ರಿ; ಅವರು ನಿಮ್ಮನ್ನು 17 ನ್ಯಾಯವಿಚಾರಣೆಯ ಸಭೆಗಳಿಗೆ ಎಳಕೊಂಡು ಹೋಗುವರು; ತಮ್ಮ ಸಭಾಮಂದಿರ ಗಳಲ್ಲಿ ನಿಮ್ಮನ್ನು ಕೊರಡೆಗಳಿಂದ ಹೊಡೆಯುವರು; ನನ್ನ ನಿಮಿತ್ತವಾಗಿ ನಿಮ್ಮನ್ನು ಅಧಿ 18 ಪತಿಗಳ ಮುಂದೆಯೂ ಅರಸುಗಳ ಮುಂದೆಯೂ ವೈಯುವರು. ಹೀಗೆ ಅವರಿಗೂ ಅನ್ಯ ಜನಗಳಿಗೂ ನನ್ನನ್ನು ಕುರಿತು ಸಾಕ್ಷಿಯಾಗುವದು. ಆದರೆ ಅವರು ನಿಮ್ಮನ್ನು ಒಪ್ಪಿಸಿ 19 ಕೊಡುವಾಗ, ಹ್ಯಾಗೆ ಮಾತಾಡಬೇಕು ಏನು ಹೇಳಬೇಕು ಎಂದು ಚಿಂತೆಮಾಡಬೇಡಿರಿ; ಆಡತಕ್ಕ ಮಾತು ಆ ಗಳಿಗೆಯಲ್ಲಿಯೇ ನಿಮಗೆ ಸೂಚನೆಯಾಗುವದು. ಮಾತಾಡು 20 ವವರು ನೀವಲ್ಲ, ನಿಮ್ಮ ತಂದೆಯ ಆತ್ಮನೇ ನಿಮ್ಮ ಮುಖಾಂತರವಾಗಿ ಮಾತಾಡುವನು. ಇದಲ್ಲದೆ ಅಣ್ಣನು ತಮ್ಮನನ್ನೂ ತಂದೆಯು ಮಗನನ್ನೂ ಮರಣಕ್ಕೆ ಒಪ್ಪಿಸುವರು; 21 ಮಕ್ಕಳು ಹೆತ್ತವರ ಮೇಲೆ ತಿರುಗಿಬಿದ್ದು ಅವರನ್ನು ಕೊಲ್ಲಿಸುವರು. ಮತ್ತು ನನ್ನ ಹೆಸ 22 ರಿನ ನಿಮಿತ್ತವಾಗಿ ಎಲ್ಲರು ನಿಮ್ಮನ್ನು ಹಗೆಮಾಡುವರು. ಆದರೆ ಕಡೇ ವರೆಗೂ ತಾಳು ವವನು ರಕ್ಷಣೆಹೊಂದುವನು. ಆದರೆ ಒಂದು ಊರಲ್ಲಿ ನಿಮ್ಮನ್ನು ಹಿಂಸೆಪಡಿಸಿದರೆ 23 ಮತ್ತೊಂದು ಊರಿಗೆ ಓಡಿಹೋಗಿರಿ; ಮನುಷ್ಯಕುಮಾರನು ಬರುವಷ್ಟರಲ್ಲಿ ನೀವು ಇಸ್ರ ಯೇಲ್ ಜನರ ಊರುಗಳ ಸಂಚಾರವನ್ನು ತೀರಿಸಿರುವದಿಲ್ಲವೆಂದು ನಿಮಗೆ ಸತ್ಯವಾಗಿ ಹೇಳುತ್ತೇನೆ.

ಗುರುವಿಗಿಂತ ಶಿಷ್ಯನು ದೊಡ್ಡವನಲ್ಲ, ಧಣಿಗಿಂತ ಆಳು ದೊಡ್ಡವನಲ್ಲ. ಗುರುವಿ 24, 25 ನಂತೆ ಆಗುವದು ಶಿಷ್ಯನಿಗೆ ಸಾಕು, ಧಣಿಯಂತೆ ಆಗುವದು ಆಳಿಗೆ ಸಾಕು. ಅವರು ಮನೆಯ ಯಜಮಾನನಿಗೆ ಬೆಲ್ಜೆಬೂಲನೆಂದು[1] ಹೆಸರಿಟ್ಟ ಮೇಲೆ, ಆತನ ಮನೆಯವರನ್ನು

[1] ಅಂದರೆ, ಪಿಶಾಚಗಳ ಒಡೆಯನು.

26 ಏನಂದಾರು? ಆದರೂ ಅವರಿಗೆ ಅಂಜಬೇಡಿರಿ. ಬೈಲಿಗೆ ಬಾರದ ಗುಟ್ಟು ಯಾವದೂ
27 ಇಲ್ಲ; ಜನರಿಗೆ ಗೊತ್ತಾಗದ ರಹಸ್ಯವು ಯಾವದೂ ಇಲ್ಲ. ನಾನು ಕತ್ತಲಲ್ಲಿ ನಿಮಗೆ
ಹೇಳುವದನ್ನು ನೀವು ಬೆಳಕಿನಲ್ಲಿ ಹೇಳಿರಿ, ಮತ್ತು ಕಿವಿಯಲ್ಲಿ ಹೇಳಿದ್ದನ್ನು ಮಾಳಿಗೆಗಳ
28 ಮೇಲೆ ನಿಂತು ಸಾರಿರಿ. ಇದಲ್ಲದೆ ದೇಹವನ್ನು ಕೊಲ್ಲುವವರಿಗೆ ಅಂಜಬೇಡಿರಿ, ಅವರು
ಆತ್ಮವನ್ನು ಕೊಲ್ಲಲಾರರು; ಆತ್ಮ ದೇಹ ಎರಡನ್ನೂ ಕೂಡ ನರಕದಲ್ಲಿ ಹಾಕಿ ಕೊಲ್ಲ
29 ಬಲ್ಲಾತನಿಗೆ ಅಂಜಿರಿ. ದುಡ್ಡಿಗೆ ಎರಡು ಗುಬ್ಬಿಗಳನ್ನು ಮಾರುತ್ತಾರಲ್ಲಾ; ಆದಾಗ್ಯೂ
30 ನಿಮ್ಮ ತಂದೆಯ ಚಿತ್ತವಿಲ್ಲದೆ ಒಂದಾದರೂ ನೆಲಕ್ಕೆ ಬೀಳದು. ನಿಮ್ಮ ತಲೇಕೂದಲು
31 ಗಳೆಲ್ಲವೂ ಎಣಿಕೆಯಾಗಿವೆ. ಆದದರಿಂದ ಅಂಜಬೇಡಿರಿ; ಬಹಳ ಗುಬ್ಬಿಗಳಿಗಿಂತ ನೀವು
ಹೆಚ್ಚಿನವರು.

32 ಹಾಗಾದರೆ ಯಾವನು ಮನುಷ್ಯರ ಮುಂದೆ ತಾನು ಯೇಸುವಿನವನೆಂದು ಒಪ್ಪಿಕೊ
ಳ್ಳುವನೋ, ನಾನು ಅವನನ್ನು ನನ್ನವನೆಂದು ಪರಲೋಕದಲ್ಲಿರುವ ನನ್ನ ತಂದೆಯ
33 ಮುಂದೆ ಒಪ್ಪಿಕೊಳ್ಳುವೆನು. ಆದರೆ ಯಾವನು ಮನುಷ್ಯರ ಮುಂದೆ ತಾನು ಯೇಸುವಿ
ನವನಲ್ಲವೆಂದು ಹೇಳುವನೋ ಅವನನ್ನು ನಾನು ಪರಲೋಕದಲ್ಲಿರುವ ನನ್ನ ತಂದೆಯ
ಮುಂದೆ ನನ್ನವನಲ್ಲವೆಂದು ಹೇಳುವೆನು.

34 ಭೂಲೋಕದ ಮೇಲೆ ಒಕ್ಕಟ್ಟು ಮಾಡುವದಕ್ಕೆ ಬಂದೆನೆಂದು ನೆನಸಬೇಡಿರಿ; ಒಕ್ಕಟ್ಟು
35 ಮಾಡುವದಕ್ಕೆ ನಾನು ಬಂದಿಲ್ಲ, ಭೇದವನ್ನು ಹುಟ್ಟಿಸಲಿಕ್ಕೆ ಬಂದೆನು. ಹ್ಯಾಗಂದರೆ,
ಮಗನಿಗೂ ತಂದೆಗೂ, ಮಗಳಿಗೂ ತಾಯಿಗೂ, ಸೊಸೆಗೂ ಅತ್ತೆಗೂ ಭೇದ ಹುಟ್ಟಿಸು
36 ವದಕ್ಕೆ ಬಂದೆನು. ಹೀಗಾದರೆ ಒಬ್ಬ ಮನುಷ್ಯನಿಗೆ ತನ್ನ ಮನೆಯವರೇ ವೈರಿಗಳಾಗು
37 ವರು[1]. ತಂದೆಯ ಮೇಲಾಗಲಿ ತಾಯಿಯ ಮೇಲಾಗಲಿ ನನ್ನ ಮೇಲೆ ಇಡುವದಕ್ಕಿಂತ
ಹೆಚ್ಚಾದ ಮಮತೆಯನ್ನಿಡುವವನು ನನಗೆ ಯೋಗ್ಯನಲ್ಲ; ಮಗನ ಮೇಲಾಗಲಿ ಮಗಳ
ಮೇಲಾಗಲಿ ನನ್ನ ಮೇಲೆ ಇಡುವದಕ್ಕಿಂತ ಹೆಚ್ಚಾದ ಮಮತೆಯನ್ನಿಡುವವನು ನನಗೆ
38 ಯೋಗ್ಯನಲ್ಲ. ಮತ್ತು ತನ್ನ ಶಿಲುಬೆಯನ್ನು ತೆಗೆದುಕೊಂಡು ನನ್ನ ಹಿಂದೆ ಬಾರದವನು
39 ನನಗೆ ಯೋಗ್ಯನಲ್ಲ. ತನ್ನ ಪ್ರಾಣವನ್ನು ಉಳಿಸಿಕೊಳ್ಳುವವನು ಅದರ ನಷ್ಟಪಡುವನು;
ನನ್ನ ನಿಮಿತ್ತವಾಗಿ ತನ್ನ ಪ್ರಾಣವನ್ನು ಕೊಡುವವನು ಅದನ್ನು ಉಳಿಸಿಕೊಳ್ಳುವನು.

40 ನಿಮ್ಮನ್ನು ಸೇರಿಸಿಕೊಳ್ಳುವವನು ನನ್ನನ್ನು ಸೇರಿಸಿಕೊಳ್ಳುವವನಾಗಿದ್ದಾನೆ; ನನ್ನನ್ನು
ಸೇರಿಸಿಕೊಳ್ಳುವವನು ನನ್ನನ್ನು ಕಳುಹಿಸಿಕೊಟ್ಟಾತನನ್ನು ಸೇರಿಸಿಕೊಳ್ಳುವವನಾಗಿದ್ದಾನೆ.
41 ಪ್ರವಾದಿಯನ್ನು ಪ್ರವಾದಿಯೆಂದು ಸೇರಿಸಿಕೊಳ್ಳುವವನು ಪ್ರವಾದಿಗೆ ಬರತಕ್ಕ ಪ್ರತಿಫಲ
ವನ್ನು ಹೊಂದುವನು; ನೀತಿವಂತನನ್ನು ನೀತಿವಂತನೆಂದು ಸೇರಿಸಿಕೊಳ್ಳುವವನು ನೀತಿ
42 ವಂತನಿಗೆ ಬರತಕ್ಕ ಪ್ರತಿಫಲವನ್ನು ಹೊಂದುವನು. ಮತ್ತು ಈ ಚಿಕ್ಕವರಲ್ಲಿ ಒಬ್ಬನಿಗೆ
ಯೇಸುವಿನ ಶಿಷ್ಯನೆಂದು ಯಾರಾದರೂ ಒಂದು ತಂಬಿಗೆ ತಣ್ಣೀರನ್ನಾದರೂ ಕುಡಿಯು
ವದಕ್ಕೆ ಕೊಟ್ಟರೆ, ಬರತಕ್ಕ ಪ್ರತಿಫಲವು ಅವನಿಗೆ ತಪ್ಪುವದೇ ಇಲ್ಲವೆಂದು ನಿಮಗೆ ಸತ್ಯ
ವಾಗಿ ಹೇಳುತ್ತೇನೆ ಅಂದನು.

---

[1] ಮೀಕ ೭, ೬.

**11** ಯೇಸು ತನ್ನ ಹನ್ನೆರಡು ಮಂದಿ ಶಿಷ್ಯರಿಗೆ ಹೇಳಬೇಕಾದದ್ದನ್ನು ಹೇಳಿ ಮುಗಿಸಿದ ಬಳಿಕ, ಅಲ್ಲಿಯವರ ಊರುಗಳಲ್ಲಿ ಉಪದೇಶಮಾಡುವದಕ್ಕೂ ಸುವಾರ್ತೆಯನ್ನು ಸಾರುವದಕ್ಕೂ ಅಲ್ಲಿಂದ ಹೊರಟನು.

**ಸ್ನಾನಿಕನಾದ ಯೋಹಾನನು ಮಾಡಿದ ವಿಚಾರಣೆಗೆ ಯೇಸು ಕೊಟ್ಟ ಉತ್ತರ. (ಲೂಕ 7, 18—35.)**

2 ಆದರೆ ಸೆರೆಮನೆಯಲ್ಲಿದ್ದ ಯೋಹಾನನು ಕ್ರಿಸ್ತನ ಕಾರ್ಯಗಳ ಸುದ್ದಿಯನ್ನು ಕೇಳಿ 3 ಆತನ ಬಳಿಗೆ[1] ಶಿಷ್ಯರನ್ನು ಕಳುಹಿಸಿ—ಬರಬೇಕಾದವನು ನೀನೋ, ನಾವು ಬೇರೊಬ್ಬನ ದಾರಿಯನ್ನು ನೋಡಬೇಕೋ ಎಂದು ಕೇಳಿಸಿದನು. 4, 5 ಆತನು ಪ್ರತ್ಯುತ್ತರವಾಗಿ—ಕುರುಡರಿಗೆ ಕಣ್ಣು ಬರುತ್ತವೆ; ಕುಂಟರಿಗೆ ಕಾಲು ಬರುತ್ತವೆ; ಕುಷ್ಠರೋಗಿಗಳು ಶುದ್ಧರಾಗುತ್ತಾರೆ; ಕಿವುಡರಿಗೆ ಕಿವಿ ಬರುತ್ತವೆ; ಸತ್ತವರು ಜೀವವನ್ನು ಹೊಂದುತ್ತಾರೆ; ಬಡವರಿಗೆ ಸುವಾರ್ತೆ ಸಾರಲ್ಪಡುತ್ತದೆ; ನೀವು ಕಂಡುಕೇಳುವವುಗಳನ್ನು ಯೋಹಾನನಿಗೆ ಹೋಗಿ ತಿಳಿಸಿರಿ. 6 ನನ್ನ ವಿಷಯದಲ್ಲಿ ಸಂಶಯಪಡದವನೇ ಧನ್ಯನು ಅಂದನು.

7 ಅವರು ಹೊರಟುಹೋಗಲು, ಯೇಸು ಯೋಹಾನನ ವಿಷಯವಾಗಿ ಜನರ ಗುಂಪುಗಳಿಗೆ ಹೇಳತೊಡಗಿದ್ದೇನಂದರೆ—ಏನು ನೋಡಬೇಕೆಂದು ಅಡವಿಗೆ ಹೋಗಿದ್ದಿರಿ? ಗಾಳಿಯಿಂದ ಅಲ್ಲಾಡುವ ದಂಟನ್ನೋ? 8 ಅಲ್ಲವಾದರೆ ಏನು ನೋಡಬೇಕೆಂದು ಹೋಗಿದ್ದಿರಿ? ನಯವಾದ ಉಡುಪನ್ನು ಹಾಕಿಕೊಂಡ ಮನುಷ್ಯನನ್ನೋ? ನಯವಾದ ಉಡುಪನ್ನು ಹಾಕಿಕೊಂಡವರು ಅರಮನೆಗಳಲ್ಲಿ ಇದ್ದಾರಷ್ಟೆ. 9 ಹಾಗಾದರೆ ಯಾತಕ್ಕೆ ಹೋಗಿದ್ದಿರಿ? ಪ್ರವಾದಿಯನ್ನು ನೋಡುವದಕ್ಕೋ? ಹೌದು, ಪ್ರವಾದಿಗಿಂತಲೂ ಹೆಚ್ಚಿನವನನ್ನು ನೋಡಿದಿರಿ ಎಂದು ನಿಮಗೆ ಹೇಳುತ್ತೇನೆ.

10 ಇಗೋ, ನಾನು ನನ್ನ ದೂತನನ್ನು ನಿನ್ನ ಮುಂದೆ ಕಳುಹಿಸುತ್ತೇನೆ;
ನೀನು ಹೋಗತಕ್ಕ ದಾರಿಯನ್ನು ಅವನು ನಿನ್ನ ಮುಂದೆ ಸಿದ್ಧಮಾಡುವನು[2]

ಎಂದು ಯಾರ ವಿಷಯವಾಗಿ ಬರೆದದೆಯೋ ಆ ಪುರುಷನು ಇವನೇ. 11 ಸ್ತ್ರೀಯರಲ್ಲಿ ಹುಟ್ಟಿದವರೊಳಗೆ ಸ್ನಾನಿಕನಾದ ಯೋಹಾನನಿಗಿಂತ ದೊಡ್ಡವನು ಒಬ್ಬನೂ ಇರಲಿಲ್ಲ. ಆದರೂ ಪರಲೋಕರಾಜ್ಯದಲ್ಲಿರುವ ಚಿಕ್ಕವನು ಅವನಿಗಿಂತಲೂ ದೊಡ್ಡವನೆಂದು ನಿಮಗೆ ಸತ್ಯವಾಗಿ ಹೇಳುತ್ತೇನೆ. 12 ಇದಲ್ಲದೆ ಸ್ನಾನಿಕನಾದ ಯೋಹಾನನ ಕಾಲದಿಂದ ಈ ವರೆಗೂ ಪರಲೋಕರಾಜ್ಯವು ಬಲಾತ್ಕಾರಕ್ಕೆ ಗುರಿಯಾಗಿರುತ್ತದೆ; ಬಲಾತ್ಕಾರಿಗಳು ಅದನ್ನು ಸ್ವಾಧೀನ ಮಾಡಿಕೊಳ್ಳುತ್ತಾರೆ. 13 ಪ್ರವಾದಿಗಳೆಲ್ಲರು ಮತ್ತು ಧರ್ಮಶಾಸ್ತ್ರವು ಪ್ರವಾದಿಸುವದು ಯೋಹಾನನ ತನಕ ಇತ್ತು. 14 ಗ್ರಹಿಸುವ ಮನಸ್ಸು ನಿಮಗಿದ್ದರೆ, ಬರತಕ್ಕ ಎಲೀಯನು ಇವನೇ ಎಂದು ತಿಳುಕೊಳ್ಳಿರಿ. 15, 16 ಕಿವಿಯುಳ್ಳವನು ಕೇಳಲಿ. ಆದರೆ ಈ ಕಾಲದ ಜನರನ್ನು ನಾನು ಯಾರಿಗೆ ಹೋಲಿಸಲಿ? ಪೇಟೆಗಳಲ್ಲಿ ಕೂತುಕೊಂಡು ತಮ್ಮ ಗೆಳೆಯರಿಗೆ—ನಿಮಗೋಸ್ಕರ ಕೊಳಲೂದಿದೆವು, ನೀವು ಕುಣಿಯಲಿಲ್ಲ; 17 ಗೋಳಾಡಿದೆವು, ನೀವು ಎದೆಬಡಕೊಳ್ಳಲಿಲ್ಲ ಎಂದು ಕೂಗಿಹೇಳುವಂಥ ಹುಡುಗರನ್ನು ಹೋಲು

---

[1] ಅಥವಾ, ಆದರೆ ಕ್ರಿಸ್ತನು ಮಾಡತಕ್ಕ ಕೆಲಸಗಳು [ಯೆಶಾಯ ೩೫, ೫. ೬; ೬೧, ೧] ನಡೆಯುತ್ತವೆಂಬ ಸುದ್ದಿಯನ್ನು ಸೆರೆಮನೆಯಲ್ಲಿದ್ದ ಯೋಹಾನನು ಕೇಳಿ ಯೇಸುವಿನ ಬಳಿಗೆ. [2] ಮಲಕೀಯ ೩, ೧.

18 ತ್ತಾರೆ. ಹ್ಯಾಗಂದರೆ, ಯೋಹಾನನು ಬಂದನು, ಅನ್ನಪಾನಗಳನ್ನು ತೆಗೆದುಕೊಳ್ಳದವ
19 ನಾಗಿದ್ದನು; ಅವರು—ಅವನಿಗೆ ದೆವ್ವಹಿಡಿದದೆ ಅನ್ನುತ್ತಾರೆ. ಮನುಷ್ಯಕುಮಾರನು ಬಂದನು, ಅನ್ನಪಾನಗಳನ್ನು ತೆಗೆದುಕೊಳ್ಳುವವನಾಗಿದ್ದಾನೆ; ಅವರು—ನೋಡಿರಿ, ಇವನು ಹೊಟ್ಟೆಬಾಕನು, ಕುಡುಕನು, ಭ್ರಷ್ಟರ[1] ಮತ್ತು ಪಾಪಿಷ್ಠರ ಗೆಳೆಯನು ಅನ್ನುತ್ತಾರೆ. ಆದರೆ ಜ್ಞಾನವು ತನ್ನ ಕೆಲಸಗಳಿಂದ[2] ಜ್ಞಾನವೆಂದು ಗೊತ್ತಾಗುವದು ಅಂದನು.

### ಯೇಸು ನಂಬಿಕೆಯಿಲ್ಲದವರಿಗಾಗಿ ದುಃಖಪಟ್ಟು, ಎಲ್ಲರನ್ನು ತನ್ನ ಹತ್ತರಕ್ಕೆ ಕರೆದದ್ದು.

(ಲೂಕ 10, 12—15. 21. 22.)

20 ಆಗ ಆತನು ತನ್ನ ಮಹತ್ಕಾರ್ಯಗಳು ಬಹಳವಾಗಿ ನಡೆದ ಊರುಗಳು ದೇವರ
21 ಕಡೆಗೆ ತಿರುಗಲಿಲ್ಲವೆಂದು ಅವುಗಳನ್ನು ಗದರಿಸ ತೊಡಗಿದನು. ಹ್ಯಾಗಂದರೆ—ಅಯ್ಯೋ ಖೊರಾಜಿನೇ, ಅಯ್ಯೋ ಬೆತ್ಸಾಯಿದವೇ, ನಿಮ್ಮಲ್ಲಿ ನಡೆದ ಮಹತ್ಕಾರ್ಯಗಳು ತೂರ್ ಮತ್ತು ಸೀದೋನ್ ಪಟ್ಟಣಗಳಲ್ಲಿ ನಡೆದಿದ್ದರೆ, ಅಲ್ಲಿಯವರು ಆಗಲೇ ಗೋಣೀತಟ್ಟು ಹೊದ್ದುಕೊಂಡು ಬೂದಿಯಲ್ಲಿ ಕೂತುಕೊಂಡು ದೇವರ ಕಡೆಗೆ ತಿರುಗುತ್ತಿದ್ದರು.
22 ಆದಾಗ್ಯೂ ನ್ಯಾಯವಿಚಾರಣೆಯ ದಿನದಲ್ಲಿ ನಿಮ್ಮ ಗತಿಗಿಂತಲೂ ತೂರ್ ಸೀದೋನ್
23 ಪಟ್ಟಣಗಳ ಗತಿಯು ಮೇಲಾಗಿರುವದು ಎಂದು ನಿಮಗೆ ಹೇಳುತ್ತೇನೆ. ಎಲಾ ಕಪೆರ್ನೌಮೇ, ನೀನು ಪರಲೋಕಕ್ಕೆ ಏರಿಸಲ್ಪಡುವಿಯಾ? ಪಾತಾಳಕ್ಕೇ ಇಳಿಯುವಿ[3]. ನಿನ್ನಲ್ಲಿ ನಡೆದ ಮಹತ್ಕಾರ್ಯಗಳು ಸೊದೋಮಿನಲ್ಲಿ ನಡೆದಿದ್ದರೆ, ಅದು ಇಂದಿನ ವರೆಗೂ ಉಳಿ
24 ಯುತ್ತಿತ್ತು. ಆದಾಗ್ಯೂ ನ್ಯಾಯವಿಚಾರಣೆಯ ದಿನದಲ್ಲಿ ನಿನ್ನ ಗತಿಗಿಂತಲೂ ಸೊದೋಮ್ ಸೀಮೆಯ ಗತಿಯು ಮೇಲಾಗಿರುವದು ಎಂದು ನಿಮಗೆ ಹೇಳುತ್ತೇನೆ ಅಂದನು.

25 ಆ ಸಮಯದಲ್ಲಿ ಯೇಸು ಹೇಳಿದ್ದೇನಂದರೆ—ತಂದೆಯೇ, ಪರಲೋಕ ಭೂಲೋಕಗಳ ಒಡೆಯನೇ, ನೀನು ಜ್ಞಾನಿಗಳಿಗೂ ಬುದ್ಧಿವಂತರಿಗೂ ಈ ಮಾತುಗಳನ್ನು ಮರೆಮಾಡಿ,
26 ಬಾಲಕರಿಗೆ ಪ್ರಕಟಮಾಡಿದ್ದೀ ಎಂದು ನಿನ್ನನ್ನು ಕೊಂಡಾಡುತ್ತೇನೆ. ಹೌದು, ತಂದೆಯೇ, ಹೀಗೆ ಮಾಡುವದೇ ಒಳ್ಳೇದೆಂದು ನಿನ್ನ ದೃಷ್ಟಿಗೆ ತೋರಿದ್ದರಿಂದ ನಿನ್ನನ್ನು ಕೊಂಡಾಡು
27 ತ್ತೇನೆ. ನನ್ನ ತಂದೆಯು ಎಲ್ಲವನ್ನೂ ನನಗೆ ಒಪ್ಪಿಸಿದ್ದಾನೆ. ತಂದೆಯೇ ಹೊರತು ಇನ್ನ್ಯಾವನೂ ಮಗನನ್ನು ತಿಳಿದವನಲ್ಲ; ಮಗನೇ ಹೊರತು ಇನ್ನ್ಯಾವನೂ ತಂದೆಯನ್ನು ತಿಳಿದವನಲ್ಲ; ಮತ್ತು ಮಗನು ತಂದೆಯನ್ನು ಯಾರಿಗೆ ಪ್ರಕಟಿಸುವದಕ್ಕೆ ಮನಸ್ಸಾಗಿದ್ದಾನೋ ಅವನೂ ಆತನನ್ನು ತಿಳಿದವನಾಗಿದ್ದಾನೆ.

28 ಎಲೈ ಕಷ್ಟಪಡುವವರೇ, ಹೊರೆಹೊತ್ತವರೇ, ನೀವೆಲ್ಲರೂ ನನ್ನ ಬಳಿಗೆ ಬನ್ನಿರಿ; ನಾನು
29 ನಿಮಗೆ ವಿಶ್ರಾಂತಿ ಕೊಡುವೆನು. ನಾನು ಸಾತ್ವಿಕನೂ ದೀನಮನಸ್ಸುಳ್ಳವನೂ ಆಗಿರುವದರಿಂದ ನನ್ನ ನೊಗವನ್ನು ನಿಮ್ಮ ಮೇಲೆ ತೆಗೆದುಕೊಂಡು ನನ್ನಲ್ಲಿ ಕಲಿತುಕೊಳ್ಳಿರಿ;
30 ಆಗ ನಿಮ್ಮ ಮನಸ್ಸಿಗೆ ವಿಶ್ರಾಂತಿಯಾಗುವದು[4]. ಯಾಕಂದರೆ, ನನ್ನ ನೊಗವು ಮೃದುವಾದದ್ದು; ನನ್ನ ಹೊರೆಯು ಹೌರವಾದದ್ದು ಅಂದನು.

---

1) ಮೂಲ: ಸುಂಕದವರ. 2) ಕೆಲವು ಪ್ರತಿಗಳಲ್ಲಿ—ಮಕ್ಕಳಿಂದ, ಅಂದರೆ ಜ್ಞಾನಾವಲಂಬಿಗಳಿಂದ ಎಂದು ಬರೆದದೆ; ಲೂಕ ೭, ೩೫ ನೋಡಿರಿ. 3) ಯೆಶಾಯ ೧೪, ೧೩. ೧೫. 4) ಯೆರೆಮಿಯ ೬, ೧೬.

ಯೇಸು ಸಬ್ಬತ್‌ದಿನವನ್ನು ಅಲಕ್ಷ್ಯಮಾಡುತ್ತಾನೆಂದು ಫರಿಸಾಯರು ಆತನ ಮೇಲೆ ಆಕ್ಷೇಪಣೆ ಮಾಡಿದ್ದು.
(ಮಾರ್ಕ 2, 23—3, 6; ಲೂಕ 6, 1—11.)

ಆ ಕಾಲದಲ್ಲಿ ಯೇಸು ಸಬ್ಬತ್‌ದಿನದಲ್ಲಿ ಪೈರಿನಹೊಲಗಳನ್ನು ದಾಟಿಹೋಗುತ್ತಿರು **12** ವಾಗ, ಆತನ ಶಿಷ್ಯರು ಹಸಿದು ತೆನೆಗಳನ್ನು ಮುರುಕೊಂಡು ತಿನ್ನುತ್ತಿದ್ದರು. 2 ಫರಿಸಾಯರು ಅದನ್ನು ಕಂಡು—ನೋಡು, ನಿನ್ನ ಶಿಷ್ಯರು ಸಬ್ಬತ್‌ದಿನದಲ್ಲಿ ಮಾಡಬಾರದ ಕೆಲಸವನ್ನು ಮಾಡುತ್ತಾರೆ ಎಂದು ಆತನಿಗೆ ಹೇಳಿದರು. 3 ಆತನು ಅವರಿಗೆ—ದಾವೀದನು ತಾನೂ ತನ್ನ ಸಂಗಡ ಇದ್ದವರೂ ಹಸಿದಾಗ ಏನು ಮಾಡಿದನೆಂಬುವದನ್ನು ನೀವು ಓದಲಿಲ್ಲವೇ? 4 ಅವನು ದೇವರ ಮಂದಿರದೊಳಗೆ ಹೋಗಿ, ಯಾಜಕರ ಹೊರತು ತಾನಾಗಲಿ ತನ್ನ ಸಂಗಡ ಇದ್ದವರಾಗಲಿ ತಿನ್ನಬಾರದಾಗಿದ್ದ ಸಮ್ಮುಖದ ರೊಟ್ಟಿಗಳನ್ನು ತಿಂದನಲ್ಲವೇ? 5 ಇದಲ್ಲದೆ ಸಬ್ಬತ್‌ದಿನದಲ್ಲಿ ಯಾಜಕರು ದೇವಾಲಯದಲ್ಲಿ ಸಬ್ಬತ್‌ದಿನವನ್ನು ಮಿಕ್ಕಾದ ದಿನಗಳಂತೆ ಮಾಡಿದಾಗ್ಯೂ ಅವರು ತಪ್ಪಿಗೆ ಗುರಿಯಾಗುವದಿಲ್ಲ. ಇದನ್ನು ನೀವು ಧರ್ಮಶಾಸ್ತ್ರದಲ್ಲಿ ಓದಲಿಲ್ಲವೋ? 6 ಆದರೆ ಇಲ್ಲಿ ದೇವಾಲಯಕ್ಕಿಂತ ಹೆಚ್ಚಿನವನು ಇದ್ದಾನೆಂದು ನಿಮಗೆ ಹೇಳುತ್ತೇನೆ. 7 ಯಜ್ಞವು ನನಗೆ ಬೇಡ, ದಯವೇ ಬೇಕು[1] ಎಂಬದರ ಅರ್ಥವನ್ನು ನೀವು ತಿಳಿದಿದ್ದರೆ, ನಿರಪರಾಧಿಗಳನ್ನು ಅಪರಾಧಿಗಳೆಂದು ತೀರ್ಪುಮಾಡುತ್ತಿದ್ದಿಲ್ಲ. 8 ಮನುಷ್ಯಕುಮಾರನು ಸಬ್ಬತ್‌ದಿನಕ್ಕೆ ಒಡೆಯನಾಗಿದ್ದಾನೆ ಎಂದು ಹೇಳಿದನು.

9, 10 ಆತನು ಅಲ್ಲಿಂದ ಹೊರಟು ಸಭಾಮಂದಿರಕ್ಕೆ ಬಂದಾಗ, ಅಲ್ಲಿ ಕೈಬತ್ತಿದವನೊಬ್ಬನಿದ್ದನು. ಆಗ ಅವರು ಆತನ ಮೇಲೆ ತಪ್ಪುಹೊರಿಸಬೇಕೆಂದು, ಆತನನ್ನು—ಸಬ್ಬತ್‌ದಿನದಲ್ಲಿ ಸ್ವಸ್ಥಮಾಡುವದು ಸರಿಯೋ ಎಂದು ಕೇಳಿದರು. 11 ಅದಕ್ಕಾತನು—ನಿಮ್ಮಲ್ಲಿ ಯಾರಿಗಾದರೂ ಒಂದೇ ಒಂದು ಕುರಿ ಇದ್ದು, ಅದು ಸಬ್ಬತ್‌ದಿನದಲ್ಲಿ ಕುಣಿಯೊಳಗೆ ಬಿದ್ದರೆ ಅವನು ಅದನ್ನು ಹಿಡಿದು ಮೇಲಕ್ಕೆ ತೆಗೆಯದೆ ಇರುವನೇ? 12 ಕುರಿಗಿಂತ ಮನುಷ್ಯನು ಎಷ್ಟೋ ಹೆಚ್ಚು. ಆದಕಾರಣ ಸಬ್ಬತ್‌ದಿನದಲ್ಲಿ ಒಳ್ಳೇ ಕೆಲಸ ಮಾಡುವದು ತಕ್ಕದ್ದೇ ಸರಿ ಎಂದು ಉತ್ತರಕೊಟ್ಟು, 13 ಆ ಮನುಷ್ಯನಿಗೆ—ನಿನ್ನ ಕೈ ಚಾಚು ಎಂದು ಹೇಳಿದನು; ಅವನು ಚಾಚಿದನು. ಅದು ವಾಸಿಯಾಗಿ ಮತ್ತೊಂದರ ಹಾಗಾಯಿತು. 14 ಆದರೆ ಫರಿಸಾಯರು ಹೊರಕ್ಕೆ ಹೋಗಿ, ಇವನನ್ನು ಕೊಲ್ಲಬೇಕೆಂದು ಆತನಿಗೆ ವಿರೋಧವಾಗಿ ಆಲೋಚನೆಮಾಡಿದರು. 15 ಯೇಸು ಅದನ್ನು ತಿಳಿದು ಅಲ್ಲಿಂದ ಹೊರಟುಹೋದನು.

ಯೇಸುವಿನ ಡಂಭವಿಲ್ಲದ ಸ್ವಭಾವ.

ಅನೇಕರು ಆತನ ಹಿಂದೆ ಹೋದರು. 16 ಆತನು ಅವರೆಲ್ಲರನ್ನು ಸ್ವಸ್ಥಮಾಡಿ, ತನ್ನ ಸುದ್ದಿಯನ್ನು ಯಾರಿಗೂ ತಿಳಿಸಬಾರದೆಂದು ಅವರಿಗೆ ಖಂಡಿತವಾಗಿ ಹೇಳಿದನು. 17 ಹೀಗೆ ಯೆಶಾಯನೆಂಬ ಪ್ರವಾದಿಯ ಮುಖಾಂತರ ಹೇಳಿಸಿರುವ ಮಾತು ನೆರವೇರಿತು; ಅದೇನಂದರೆ—

> 18 ಇಗೋ, ನನ್ನ ಸೇವಕನು; ಈತನನ್ನು ನಾನು ಆರಿಸಿಕೊಂಡೆನು;
> ಈತನು ನನಗೆ ಇಷ್ಟನು; ನನ್ನ ಪ್ರಾಣಪ್ರಿಯನು.

---

[1] ಹೋಶೇಯ ೬, ೬.

ಈತನಲ್ಲಿ ನನ್ನ ಆತ್ಮವನ್ನು ಇರಿಸುವೆನು;
ಈತನು ಅನ್ಯಜನಗಳಿಗೂ ನ್ಯಾಯವಿಧಿಯನ್ನು ಸಾರುವನು.
19 ಈತನು ಜಗಳಾಡುವದಿಲ್ಲ, ಕೂಗಾಡುವದಿಲ್ಲ;
ಬೀದಿಗಳಲ್ಲಿ ಈತನ ಧ್ವನಿಯು ಯಾರಿಗೂ ಕೇಳಿಸುವದಿಲ್ಲ.
20 ಜಜ್ಜಿದ ದಂಟನ್ನು ನಜ್ಜುಗುಜ್ಜು ಮಾಡದೆಯೂ,
ಆರಿಹೋಗುತ್ತಿರುವ ದೀಪವನ್ನು ನಂದಿಸದೆಯೂ,
ನ್ಯಾಯವನ್ನು ದಿಗ್ವಿಜಯಕ್ಕಾಗಿ ಕಳುಹಿಸಿಕೊಡುವನು.
21 ಈತನ ಹೆಸರನ್ನು ಕೇಳಿ ಅನ್ಯಜನರಿಗೆ ಆಶೆ ಹುಟ್ಟುವದು[1].

ಫರಿಸಾಯರು ಯೇಸುವನ್ನು ದೂಷಿಸಿದ್ದು; ಸೂಚಕಕಾರ್ಯವನ್ನು ನೋಡಬೇಕೆಂದು ಕೇಳಿದ್ದು.
(ಮಾರ್ಕ 3, 22—30; ಲೂಕ 11, 14—32; 12, 10.)

22 ದೆವ್ವಹಿಡಿದು ಕುರುಡನೂ ಮೂಕನೂ ಆಗಿರುವ ಒಬ್ಬನನ್ನು ಆತನ ಬಳಿಗೆ ಕರತಂದರು; ಆತನು ಅವನನ್ನು ಸ್ವಸ್ಥಮಾಡಲು, ಆ ಮೂಕನಿಗೆ ಬಾಯಿ ಕಣ್ಣು ಎರಡೂ 23 ಬಂದವು. ಅದಕ್ಕೆ ಜನರೆಲ್ಲರು ಬೆರಗಾಗಿ—ಈತನು ದಾವೀದಕುಮಾರನೇನು ಎಂದು 24 ಮಾತಾಡುತ್ತಿದ್ದರು. ಆದರೆ ಫರಿಸಾಯರು ಅದನ್ನು ಕೇಳಿ—ಇವನು ದೆವ್ವಗಳ ಒಡೆಯನಾದ ಬೆಲ್ಜೆಬೂಲನ ಸಹಾಯದಿಂದ ದೆವ್ವಗಳನ್ನು ಹೊರಡಿಸುತ್ತಾನೇ ಹೊರತು ಬೇರೆ 25 ರೀತಿಯಿಂದ ಹೊರಡಿಸುವದಿಲ್ಲ ಅಂದರು. ಆತನು ಅವರ ಆಲೋಚನೆಗಳನ್ನು ತಿಳುಕೊಂಡು ಅವರಿಗೆ ಹೇಳಿದ್ದೇನಂದರೆ—ತನ್ನಲ್ಲಿ ಭೇದ ಹುಟ್ಟಿದ ರಾಜ್ಯವು ಹಾಳಾಗುವದು; ತನ್ನಲ್ಲಿ ಭೇದ ಹುಟ್ಟಿದ ಯಾವ ಪಟ್ಟಣವಾದರೂ ಮನೆಯಾದರೂ ನಿಲ್ಲದು. 26 ಸೈತಾನನು ಸೈತಾನನನ್ನು ಹೊರಡಿಸಿದರೆ, ತನ್ನಲ್ಲಿ ಭೇದ ಹುಟ್ಟಿದ ಹಾಗಾಯಿತು. ಹಾಗಾ 27 ದರೆ ಅವನ ರಾಜ್ಯವು ಹ್ಯಾಗೆ ಉಳಿದೀತು? ನಾನು ಬೆಲ್ಜೆಬೂಲನ ಬಲದಿಂದ ದೆವ್ವಗಳನ್ನು ಬಿಡಿಸುವದಾದರೆ, ನಿಮ್ಮವರು ಯಾರ ಬಲದಿಂದ ಅವುಗಳನ್ನು ಬಿಡಿಸುತ್ತಾರೆ? 28 ಆದದರಿಂದ ಅವರೇ ನಿಮಗೆ ನ್ಯಾಯತೀರಿಸುವವರಾಗುವರು. ಆದರೆ ನಾನು ದೇವರ ಆತ್ಮದ ಬಲದಿಂದ ದೆವ್ವಗಳನ್ನು ಬಿಡಿಸುವದಾದರೆ, ದೇವರ ರಾಜ್ಯವು ನಿಮ್ಮ ಹತ್ತರಕ್ಕೆ 29 ಬಂತಲ್ಲಾ. ಇದಲ್ಲದೆ, ಒಬ್ಬನು ಮೊದಲು ಬಲಿಷ್ಠನನ್ನು ಕಟ್ಟಿಹಾಕದೆ, ಆ ಬಲಿಷ್ಠನ ಮನೆಯನ್ನು ಹೊಕ್ಕು ಅವನ ಸೊತ್ತನ್ನು ಸುಲುಕೊಳ್ಳುವದು ಹ್ಯಾಗೆ? ಕಟ್ಟಿಹಾಕಿದ 30 ಮೇಲೆ ಅವನ ಮನೆಯನ್ನು ಸುಲುಕೊಂಡಾನು. ನನ್ನ ಪಕ್ಷ ಹಿಡಿಯದವನು ನನಗೆ 31 ವಿರೋಧಿ; ನನ್ನ ಜೊತೆಯಲ್ಲಿ ಒಟ್ಟುಗೂಡಿಸದವನು ಚದರಿಸುವವನಾಗುತ್ತಾನೆ. ಆದ ಕಾರಣ ನಿಮಗೆ ಹೇಳುತ್ತೇನೆ, ಸಕಲ ಪಾಪ ದೂಷಣೆಗಳು ಮನುಷ್ಯರಿಗೆ ಕ್ಷಮಿಸಲ್ಪಡು 32 ವವು; ಆದರೆ ಪವಿತ್ರಾತ್ಮದೂಷಣೆಯು ಕ್ಷಮಿಸಲ್ಪಡುವದಿಲ್ಲ. ಯಾರಾದರೂ ಮನುಷ್ಯಕುಮಾರನಿಗೆ ವಿರೋಧವಾಗಿ ಮಾತಾಡಿದರೆ, ಅದು ಅವನಿಗೆ ಕ್ಷಮಿಸಲ್ಪಡುವದು; ಪವಿತ್ರಾತ್ಮನಿಗೆ ವಿರೋಧವಾಗಿ ಮಾತಾಡಿದರೆ, ಅವನಿಗೆ ಇಹದಲ್ಲಾಗಲಿ ಪರದಲ್ಲಾಗಲಿ ಕ್ಷಮಿ 33 ಸಲ್ಪಡುವದಿಲ್ಲ. ಮರ ಒಳ್ಳೇದೆಂದರೆ ಅದರ ಫಲವೂ ಒಳ್ಳೇದನ್ನಿರಿ. ಮರ ಹುಳುಕು

[1] ಯೆಶಾಯ ೪೨, ೧—೪.

ಅಂದರೆ ಅದರ ಫಲವೂ ಹುಳುಕು ಅನ್ನಿರಿ. ಫಲದಿಂದಲೇ ಮರದ ಗುಣವು ಗೊತ್ತಾ
ಗುವದು. ಸರ್ಪಜಾತಿಯವರೇ, ನೀವು ಕೆಟ್ಟವರಾಗಿರಲಾಗಿ ಒಳ್ಳೇ ಮಾತುಗಳನ್ನಾಡು 34
ವದಕ್ಕೆ ನಿಮ್ಮಿಂದ ಹ್ಯಾಗಾದೀತು? ಹೃದಯದಲ್ಲಿ ತುಂಬಿರುವದೇ ಬಾಯಲ್ಲಿ ಹೊರಡು
ವದು. ಒಳ್ಳೆಯವನು ತನ್ನ ಒಳ್ಳೇ ಬೊಕ್ಕಸದೊಳಗಿಂದ ಒಳ್ಳೇ ವಸ್ತುಗಳನ್ನು ತೆಗೆಯು 35
ವನು; ಕೆಟ್ಟವನು ಕೆಟ್ಟ ಬೊಕ್ಕಸದೊಳಗಿಂದ ಕೆಟ್ಟ ವಸ್ತುಗಳನ್ನು ತೆಗೆಯುವನು. ಇದ 36
ಲ್ಲದೆ ನಾನು ನಿಮಗೆ ಹೇಳುವದೇನಂದರೆ, ಮನುಷ್ಯರು ಸುಮ್ಮನೆ ಆಡುವ ಪ್ರತಿಯೊಂದು
ಮಾತಿನ ವಿಷಯವಾಗಿ ನ್ಯಾಯವಿಚಾರಣೆಯ ದಿನದಲ್ಲಿ ಉತ್ತರಕೊಡಬೇಕು. ನಿನ್ನ 37
ಮಾತುಗಳಿಂದಲೇ ನೀತಿವಂತನೆಂದು ತೀರ್ಪು ಹೊಂದುವಿ; ನಿನ್ನ ಮಾತುಗಳಿಂದಲೇ ಅಪ
ರಾಧಿಯೆಂದು ತೀರ್ಪು ಹೊಂದುವಿ ಅಂದನು.

ಆಗ ಶಾಸ್ತ್ರಿಗಳಲ್ಲಿಯೂ ಫರಿಸಾಯರಲ್ಲಿಯೂ ಕೆಲವರು—ಬೋಧಕನೇ, ನಿನ್ನಿಂದಾ 38
ಗುವ ಒಂದು ಸೂಚಕಕಾರ್ಯವನ್ನು ನೋಡಬೇಕೆಂದು ನಮಗೆ ಅಪೇಕ್ಷೆಯದೆ ಎಂದು
ಆತನನ್ನು ಕೇಳಲಾಗಿ, ಆತನು ಅವರಿಗೆ ಹೇಳಿದ್ದೇನಂದರೆ—ವ್ಯಭಿಚಾರಿಣಿಯಾಗಿರುವ[1] 39
ಈ ಕೆಟ್ಟ ಸಂತತಿಯು ಸೂಚಕಕಾರ್ಯವನ್ನು ನೋಡಬೇಕೆಂದು ಅಪೇಕ್ಷಿಸುತ್ತದೆ. ಆದರೆ
ಯೋನನೆಂಬ ಪ್ರವಾದಿಯಲ್ಲಿ ಆದ ಸೂಚಕಕಾರ್ಯವೇ ಹೊರತು ಬೇರೆ ಯಾವದೂ
ಸಿಕ್ಕುವದಿಲ್ಲ. ಅಂದರೆ, ಯೋನನು ಹ್ಯಾಗೆ ಮೂರು ದಿನ ರಾತ್ರಿಹಗಲು ದೊಡ್ಡ 40
ಮೀನಿನ ಹೊಟ್ಟೆಯೊಳಗೆ ಇದ್ದನೋ, ಹಾಗೆಯೇ ಮನುಷ್ಯಕುಮಾರನು ಮೂರು ದಿನ
ರಾತ್ರಿಹಗಲು ಭೂಗರ್ಭದೊಳಗೆ ಇರುವನು. ನ್ಯಾಯವಿಚಾರಣೆಯಲ್ಲಿ ನಿನವೆ ಪಟ್ಟಣ 41
ದವರು ಈ ಸಂತತಿಯವರೊಂದಿಗೆ ನಿಂತು ಅವರನ್ನು ಅಪರಾಧಿಗಳೆಂದು ಹೇಳುವರು;
ಅವರು ಯೋನನು ಸಾರಿದ ವಾಕ್ಯವನ್ನು ಕೇಳಿ ದೇವರಕಡೆಗೆ ತಿರುಗಿಕೊಂಡರು; ಆದರೆ
ಇಲ್ಲಿ ಯೋನನಿಗಿಂತಲೂ ಹೆಚ್ಚಿನವನು ಇದ್ದಾನೆ. ದಕ್ಷಿಣದೇಶದ ರಾಣಿಯು ನ್ಯಾಯ 42
ವಿಚಾರಣೆಯಲ್ಲಿ ಈ ಸಂತತಿಯವರೊಂದಿಗೆ ಎದ್ದು ನಿಂತು, ಅವರನ್ನು ಅಪರಾಧಿಗಳೆಂದು
ಹೇಳುವಳು; ಆಕೆಯು ಸೊಲಮೋನನ ಜ್ಞಾನವನ್ನು ತಿಳುಕೊಳ್ಳುವದಕ್ಕೆ ಭೂಮಿಯ
ಕಟ್ಟಕಡೆಯಿಂದ ಬಂದಳು; ಆದರೆ ಇಲ್ಲಿ ಸೊಲಮೋನನಿಗಿಂತಲೂ ಹೆಚ್ಚಿನವನು ಇದ್ದಾನೆ.

ದೆವ್ವವು ಮನುಷ್ಯನನ್ನು ಬಿಟ್ಟುಹೋದ ಮೇಲೆ, ವಿಶ್ರಾಂತಿಯನ್ನು ಹುಡುಕುತ್ತಾ ನೀರಿ 43
ಲ್ಲದ ಸ್ಥಳಗಳಲ್ಲಿ ತಿರುಗಾಡುತ್ತದೆ. ವಿಶ್ರಾಂತಿ ಸಿಕ್ಕದ ಕಾರಣ ಅದು—ನಾನು ಬಿಟ್ಟು 44
ಬಂದ ನನ್ನ ಮನೆಗೆ ತಿರಿಗಿ ಹೋಗುತ್ತೇನೆ ಅಂದುಕೊಂಡು ಬಂದು, ಆ ಮನೆ ಒಕ್ಕಲಿಲ್ಲ
ದ್ದಾಗಿಯೂ ಗುಡಿಸಿ ಅಲಂಕರಿಸಿದ್ದಾಗಿಯೂ ಇರುವದನ್ನು ಕಂಡು, ಹೊರಟುಹೋಗಿ, 45
ತನಗಿಂತ ಕೆಟ್ಟವುಗಳಾದ ಬೇರೆ ಏಳು ದೆವ್ವಗಳನ್ನು ಕರಕೊಂಡು ಬರುವದು. ಅವು
ಒಳ ಹೊಕ್ಕು ಅಲ್ಲಿ ವಾಸಮಾಡುವವು. ಆಗ ಆ ಮನುಷ್ಯನ ಅಂತ್ಯಸ್ಥಿತಿಯು
ಮೊದಲಿಗಿಂತ ಕೆಟ್ಟದಾಗುವದು. ಇದರಂತೆಯೇ ಈ ಕೆಟ್ಟ ಸಂತತಿಗೆ ಆಗುವದು
ಅಂದನು.

---

[1] ಅಂದರೆ, ದೇವದ್ರೋಹಿಯಾದ.

ದೇವರ ಚಿತ್ತವನ್ನು ಅನುಸರಿಸುವವರೇ ತನ್ನ ಸಂಬಂಧೀಕರೆಂದು ಯೇಸು ಹೇಳಿದ್ದು.
(ಮಾರ್ಕ 3, 31—35; ಲೂಕ 8, 19—21.)

46 ಆತನು ಜನರ ಗುಂಪುಗಳ ಸಂಗಡ ಇನ್ನೂ ಮಾತಾಡುತ್ತಿರುವಾಗ, ಆತನ ತಾಯಿಯೂ
47 ಅಣ್ಣತಮ್ಮಂದಿರೂ ಆತನನ್ನು ಮಾತಾಡಿಸಬೇಕೆಂದು ಹೊರಗೆ ನಿಂತಿದ್ದರು. ಆಗ ಒಬ್ಬನು—ಇಗೋ, ನಿನ್ನ ತಾಯಿಯೂ ನಿನ್ನ ಅಣ್ಣತಮ್ಮಂದಿರೂ ನಿನ್ನನ್ನು ಮಾತಾಡಿಸ
48 ಬೇಕೆಂದು ಹೊರಗೆ ನಿಂತಿರುತ್ತಾರೆ ಅಂದನು. ಅದಕ್ಕಾತನು ಆ ಮಾತು ಹೇಳಿದವನಿಗೆ—ನನಗೆ ತಾಯಿ ಯಾರು? ನನಗೆ ಅಣ್ಣತಮ್ಮಂದಿರು ಯಾರು? ಎಂದು ಹೇಳಿ,
49 ಶಿಷ್ಯರ ಕಡೆಗೆ ಕೈ ತೋರಿಸಿ—ಇವರೇ ನನ್ನ ತಾಯಿಯೂ ನನ್ನ ಅಣ್ಣತಮ್ಮಂದಿರೂ.
50 ಪರಲೋಕದಲ್ಲಿರುವ ನನ್ನ ತಂದೆಯ ಚಿತ್ತದಂತೆ ನಡೆಯುವವನೇ ನನಗೆ ತಮ್ಮನೂ ತಂಗಿಯೂ ತಾಯಿಯೂ ಆಗಬೇಕು ಅಂದನು.

ಪರಲೋಕರಾಜ್ಯವನ್ನು ಕುರಿತ ಸಾಮ್ಯಗಳು.
(ಮಾರ್ಕ 4, 1—20. 30—34; ಲೂಕ 8, 4—15; 13, 18. 19.)

**13** ಆ ದಿವಸದಲ್ಲಿ ಯೇಸು ಮನೆಯಿಂದ ಹೊರಟು, ಸಮುದ್ರದ ದಡದಲ್ಲಿ ಕೂತುಕೊಂಡನು.
2 ಬಹಳ ಜನರು ಆತನ ಬಳಿಗೆ ಕೂಡಿಬಂದದರಿಂದ, ಆತನು ದೋಣೀಹತ್ತಿ ಕೂತು
3 ಕೊಂಡನು. ಆ ಜನರೆಲ್ಲರು ದಡದಲ್ಲಿ ನಿಂತಿದ್ದರು. ಆಗ ಆತನು ಅವರಿಗೆ ಸಾಮ್ಯ ರೂಪವಾಗಿ ಅನೇಕ ಸಂಗತಿಗಳನ್ನು ಹೇಳಿದನು. ಹ್ಯಾಗಂದರೆ—
4 ಕೇಳಿರಿ! ಬಿತ್ತುವವನು ಬಿತ್ತುವದಕ್ಕೆ ಹೊರಟನು. ಅವನು ಬಿತ್ತುವಾಗ ಕೆಲವು ಬೀಜ ದಾರಿಯ ಮಗ್ಗುಲಲ್ಲಿ ಬಿದ್ದವು; ಹಕ್ಕಿಗಳು ಬಂದು ಅವುಗಳನ್ನು ತಿಂದುಬಿಟ್ಟವು.
5 ಕೆಲವು ಬೀಜ ಬಹಳ ಮಣ್ಣು ಇಲ್ಲದಂಥಾ ಬಂಡೆಯ ಭೂಮಿಯಲ್ಲಿ ಬಿದ್ದವು; ಅಲ್ಲಿ
6 ಮಣ್ಣು ತೆಳ್ಳಗಿದ್ದರಿಂದ ಅವು ಬೇಗ ಮೊಳಿತವು; ಆದರೆ ಬಿಸಲೇರಿದಾಗ ಬಾಡಿ, ಬೇರಿಲ್ಲದ
7 ಕಾರಣ ಒಣಗಿಹೋದವು. ಮತ್ತು ಕೆಲವು ಬೀಜ ಮುಳ್ಳುಗಿಡಗಳ ನಡುವೆ ಬಿದ್ದವು;
8 ಮುಳ್ಳುಗಿಡಗಳು ಬೆಳೆದು ಅವುಗಳನ್ನು ಅಡಗಿಸಿಬಿಟ್ಟವು. ಇನ್ನು ಕೆಲವು ಒಳ್ಳೇ ಭೂಮಿಯಲ್ಲಿ ಬಿದ್ದು, ಒಂದು ನೂರರಷ್ಟು ಒಂದು ಅರವತ್ತರಷ್ಟು ಒಂದು ಮೂವತ್ತರಷ್ಟು ಫಲ
9 ವನ್ನು ಕೊಟ್ಟವು. ಕಿವಿಯುಳ್ಳವನು ಕೇಳಲಿ ಅಂದನು.
10 ತರುವಾಯ ಆತನ ಶಿಷ್ಯರು ಬಂದು—ಯಾಕೆ ಸಾಮ್ಯರೂಪವಾಗಿ ಅವರ ಸಂಗಡ
11 ಮಾತಾಡುತ್ತೀ ಎಂದು ಕೇಳಿದರು. ಅದಕ್ಕಾತನು ಅವರಿಗೆ—ಪರಲೋಕರಾಜ್ಯದ
12 ಗುಟ್ಟುಗಳನ್ನು ತಿಳಿಯುವ ವರವು ನಿಮಗೇ ಕೊಟ್ಟದೆ; ಅವರಿಗೆ ಕೊಟ್ಟಿಲ್ಲ. ಯಾಕಂದರೆ ಇದ್ದವನಿಗೆ ಕೊಡಲ್ಪಡುವದು, ಅವನಿಗೆ ಮತ್ತೂ ಹೆಚ್ಚಾಗುವದು; ಇಲ್ಲದವನ ಕಡೆ
13 ಯಿಂದ ಅವನಿಗೆ ಇದ್ದದ್ದೂ ತೆಗೆಯಲ್ಪಡುವದು. ನಾನು ಅವರ ಸಂಗಡ ಸಾಮ್ಯರೂಪವಾಗಿ ಮಾತಾಡುವದಕ್ಕೆ ಕಾರಣವೇನಂದರೆ, ಅವರಿಗೆ ಕಣ್ಣಿದ್ದರೂ ನೋಡುವದಿಲ್ಲ, ಕಿವಿ
14 ಯಿದ್ದರೂ ಕೇಳುವದಿಲ್ಲ ಮತ್ತು ತಿಳುಕೊಳ್ಳುವದಿಲ್ಲ. ಯೆಶಾಯನು ಹೇಳಿದ ಪ್ರವಾದನೆಯು ಅವರಲ್ಲಿ ನೆರವೇರುತ್ತದೆ; ಅದೇನಂದರೆ—

ನೀವು ಕಿವಿಯಾರ ಕೇಳಿದರೂ ತಿಳುಕೊಳ್ಳುವದೇ ಇಲ್ಲ;
ಕಣ್ಣಾರ ಕಂಡರೂ ನೋಡುವದೇ ಇಲ್ಲ.
ಇವರ ಹೃದಯವು ಕೊಬ್ಬಿತು; 15
ಇವರ ಕಿವಿ ಮಂದವಾಯಿತು;
ಇವರು ಕಣ್ಣು ಮುಚ್ಚಿಕೊಂಡಿದ್ದಾರೆ.
ತಾವು ಕಣ್ಣಿನಿಂದ ಕಂಡು,
ಕಿವಿಯಿಂದ ಕೇಳಿ, ಹೃದಯದಿಂದ ಗ್ರಹಿಸಿ,
ನನ್ನ ಕಡೆಗೆ ತಿರುಗಿಕೊಂಡು ನನ್ನಿಂದ ಸ್ವಸ್ಥತೆಯನ್ನು ಹ್ಯಾಗೂ ಹೊಂದ
ಬಾರದೆಂದು ಮಾಡಿಕೊಂಡಿದ್ದಾರೆ[1].

ಆದರೆ ನಿಮ್ಮ ಕಣ್ಣು ಕಾಣುತ್ತವೆ, ನಿಮ್ಮ ಕಿವಿ ಕೇಳುತ್ತವೆ; ಆದದರಿಂದ ನೀವು ಧನ್ಯರು. 16 ನಿಮಗೆ ಸತ್ಯವಾಗಿ ಹೇಳುತ್ತೇನೆ, ಬಹು ಮಂದಿ ಪ್ರವಾದಿಗಳೂ ಸತ್ಪುರುಷರೂ ನೀವು 17 ನೋಡುತ್ತಿರುವ ಕಾರ್ಯಗಳನ್ನು ನೋಡಬೇಕೆಂದು ಅಪೇಕ್ಷಿಸಿ ನೋಡಲಿಲ್ಲ; ನೀವು ಕೇಳುತ್ತಿರುವ ಸಂಗತಿಗಳನ್ನು ಕೇಳಬೇಕೆಂದು ಅಪೇಕ್ಷಿಸಿ ಕೇಳಲಿಲ್ಲ.

ಬಿತ್ತುವವನ ವಿಷಯವಾದ ಸಾಮ್ಯದ ಅರ್ಥವನ್ನು ಕೇಳಿರಿ—ಯಾವನಾದರೂ ಪರ 18, 19 ಲೋಕರಾಜ್ಯದ ವಾಕ್ಯವನ್ನು ಕೇಳಿ ತಿಳುಕೊಳ್ಳದೆ ಇರುವಲ್ಲಿ, ಸೈತಾನನು ಬಂದು ಆ ಮನುಷ್ಯನ ಮನಸ್ಸಿನಲ್ಲಿ ಬಿತ್ತಿದ್ದನ್ನು ತೆಗೆದುಹಾಕುತ್ತಾನೆ; ಇಂಥಾ ಮನುಷ್ಯನೇ ಬೀಜ ಬಿದ್ದ ದಾರೀಮಗ್ಗುಲಾಗಿರುವವನು. ಒಬ್ಬನು ವಾಕ್ಯವನ್ನು ಕೇಳಿದ ಕೂಡಲೇ ಸಂತೋಷ 20 ದಿಂದ ಅದಕ್ಕೆ ಒಪ್ಪಿಕೊಂಡಾಗ್ಯೂ ಬೇರೂರದೆ, ಸ್ವಲ್ಪ ಕಾಲ ಇದ್ದು, ಬಳಿಕ ಆ ವಾಕ್ಯದ 21 ನಿಮಿತ್ತವಾಗಿ ಸಂಕಟವಾಗಲಿ ಹಿಂಸೆಯಾಗಲಿ ಬಂದರೆ ತಾಳಲಾರದೆ ಬೇಗ ಎಡವಿಬೀಳು ತ್ತಾನೆ; ಇವನೇ ಬೀಜ ಬಿದ್ದ ಬಂಡೆಯ ಭೂಮಿಯಾಗಿರುವವನು. ಒಬ್ಬನು ವಾಕ್ಯವನ್ನು 22 ಕೇಳಿದಾಗ್ಯೂ, ಪ್ರಪಂಚದ ಚಿಂತೆಯೂ ಐಶ್ವರ್ಯದಿಂದುಂಟಾಗುವ ಮೋಸವೂ ಆ ವಾಕ್ಯ ವನ್ನು ಅಡಗಿಸಿಬಿಡುವದರಿಂದ, ಫಲಕೊಡದೆ ಇರುತ್ತಾನೆ; ಇವನೇ ಮುಳ್ಳುಗಿಡಗಳ ಭೂಮಿಯಾಗಿರುವವನು. ಒಬ್ಬನು ವಾಕ್ಯವನ್ನು ಕೇಳಿ ತಿಳುಕೊಂಡು ಫಲವಂತನಾಗಿ, 23 ನೂರರಷ್ಟಾಗಲಿ ಅರವತ್ತರಷ್ಟಾಗಲಿ ಮೂವತ್ತರಷ್ಟಾಗಲಿ ಫಲಕೊಡುತ್ತಾನೆ; ಇವನೇ ಒಳ್ಳೇ ಭೂಮಿಯಾಗಿರುವವನು ಎಂದು ಹೇಳಿದನು.

ಆತನು ಮತ್ತೊಂದು ಸಾಮ್ಯವನ್ನು ಅವರಿಗೆ ಹೇಳಿದನು; ಅದೇನಂದರೆ—ಪರಲೋಕ 24 ರಾಜ್ಯವು ಒಳ್ಳೇ ಬೀಜವನ್ನು ತನ್ನ ಹೊಲದಲ್ಲಿ ಬಿತ್ತಿದ್ದ ಒಬ್ಬ ಮನುಷ್ಯನಿಗೆ ಹೋಲಿಕೆ ಯಾಗಿದೆ. ಆದರೆ ಜನರು ನಿದ್ರೆಮಾಡುವ ಕಾಲದಲ್ಲಿ ಅವನ ವೈರಿಯು ಬಂದು 25 ಗೋದಿಯ ನಡುವೆ ಹಣಜೀ ಬಿತ್ತಿ ಹೋದನು. ಗೋದಿಯು ಬೆಳೆದು ಫಲಕ್ಕೆ ಬಂದಾಗ, 26 ಹಣಜಿ ಸಹ ಕಾಣಬಂತು. ಆಗ ಯಜಮಾನನ ಆಳುಗಳು ಅವನ ಬಳಿಗೆ ಬಂದು— 27 ಅಯ್ಯಾ, ನೀನು ನಿನ್ನ ಹೊಲದಲ್ಲಿ ಒಳ್ಳೇ ಬೀಜ ಬಿತ್ತಿದಿಯಲ್ಲಾ; ಹಣಜಿ ಎಲ್ಲಿಂದ ಬಂತು ಎಂದು ಕೇಳಲು, ಅವನು—ಇದು ಒಬ್ಬ ವೈರಿ ಮಾಡಿದ ಕೆಲಸ ಅನ್ನಲಾಗಿ, ಆಳುಗಳು 28

[1] ಯೆಶಾಯ ೬, ೯. ೧೦.

ಅವನನ್ನು—ಹಾಗಾದರೆ ನಾವು ಅದನ್ನು ಆರಿಸಿ ತೆಗೆಯೋಣೋ ಎಂದು ಕೇಳಲು,
29 ಅವನು—ಬೇಡ; ಹಣಜಿಯನ್ನು ಆರಿಸಿ ತೆಗೆಯುವಾಗ ಅದರ ಸಂಗಡ ಗೋದಿಯನ್ನೆ
30 ಲ್ಲ್ಯಾದರೂ ಕಿತ್ತೀರಿ. ಸುಗ್ಗೀಕಾಲದ ತನಕ ಎರಡೂ ಕೂಡ ಬೆಳೆಯಲಿ; ಸುಗ್ಗೀಕಾಲ ದಲ್ಲಿ ನಾನು ಕೊಯ್ಯುವವರಿಗೆ—ಮೊದಲು ಹಣಜಿಯನ್ನು ಆರಿಸಿತೆಗೆದು ಅದನ್ನು ಸುಡು ವದಕ್ಕೆ ಹೊರೆಕಟ್ಟಿಹಾಕಿ, ಗೋದಿಯನ್ನು ನನ್ನ ಕಣಜಕ್ಕೆ ತುಂಬಿರಿ ಎಂದು ಹೇಳುವೆನು ಅಂದನು.

31 ಆತನು ಮತ್ತೊಂದು ಸಾಮ್ಯವನ್ನು ಅವರಿಗೆ ಹೇಳಿದನು; ಅದೇನಂದರೆ—ಪರಲೋಕ ರಾಜ್ಯವು ಸಾಸಿವೇಕಾಳಿಗೆ ಹೋಲಿಕೆಯಾಗಿದೆ. ಒಬ್ಬ ಮನುಷ್ಯನು ಅದನ್ನು ತಕ್ಕೊಂಡು
32 ತನ್ನ ಹೊಲದಲ್ಲಿ ಬಿತ್ತಿದನು. ಅದು ಎಲ್ಲಾ ಬೀಜಗಳಲ್ಲಿ ಸಣ್ಣದಾಗಿದ್ದರೂ, ಬೆಳೆದ ಮೇಲೆ ಕಾಯಿಪಲ್ಯದ ಗಿಡಗಳಿಗಿಂತ ದೊಡ್ಡದಾಗಿ ಮರವಾಗುತ್ತದೆ; ಆಕಾಶದಲ್ಲಿ ಹಾರ್ಯಾಡುವ ಪಕ್ಷಿಗಳು ಬಂದು ಅದರ ಕೊಂಬೆಗಳಲ್ಲಿ ವಾಸಮಾಡುತ್ತವೆ.

33 ಮತ್ತೊಂದು ಸಾಮ್ಯವನ್ನು ಅವರಿಗೆ ಹೇಳಿದನು; ಅದೇನಂದರೆ—ಪರಲೋಕರಾಜ್ಯವು ಹುಳಿಹಿಟ್ಟಿಗೆ ಹೋಲಿಕೆಯಾಗಿದೆ. ಅದನ್ನು ಒಬ್ಬ ಹೆಂಗಸು ತಕ್ಕೊಂಡು ಮೂರು ಸೇರು ಹಿಟ್ಟಿನಲ್ಲಿ ಕಲಸಿಡಲು, ಆ ಹಿಟ್ಟೆಲ್ಲಾ ಹುಳಿಯಾಯಿತು.

34 ಯೇಸು ಈ ಮಾತುಗಳನ್ನೆಲ್ಲಾ ಜನರ ಗುಂಪುಗಳಿಗೆ ಸಾಮ್ಯರೂಪವಾಗಿ ಹೇಳಿದನು;
35 ಸಾಮ್ಯಕೊಡದೆ ಒಂದನ್ನೂ ಹೇಳಲಿಲ್ಲ. ಹೀಗೆ—

ನಾನು ಸಾಮ್ಯರೂಪವಾಗಿ ಉಪದೇಶಮಾಡುವೆನು;
ಲೋಕಾದಿಯಿಂದ ಮರೆಯಾಗಿದ್ದ ಕಾರ್ಯಗಳನ್ನು ಬಾಯಿಬಿಟ್ಟು ಹೇಳುವೆನು[1]

ಎಂದು ಒಬ್ಬ ಪ್ರವಾದಿಯ ಮುಖಾಂತರ ನುಡಿದ ಮಾತು ನೆರವೇರಿತು.

36 ಆಗ ಯೇಸು ಜನರನ್ನು ಬಿಟ್ಟು ಮನೆಗೆ ಹೋದ ಮೇಲೆ, ಆತನ ಶಿಷ್ಯರು ಬಂದು—
37 ಹೊಲದಲ್ಲಿಯ ಹಣಜೀ ಸಾಮ್ಯದ ಅರ್ಥವನ್ನು ನಮಗೆ ಹೇಳು ಅಂದರು. ಅದಕ್ಕಾ ತನು ಹೇಳಿದ್ದೇನಂದರೆ—ಒಳ್ಳೇ ಬೀಜವನ್ನು ಬಿತ್ತುವವನಂದರೆ ಮನುಷ್ಯಕುಮಾರನು;
38 ಹೊಲವಂದರೆ ಈ ಲೋಕ; ಒಳ್ಳೇ ಬೀಜವಂದರೆ ಪರಲೋಕರಾಜ್ಯದವರು; ಹಣಜಿ
39 ಅಂದರೆ ಸೈತಾನನವರು; ಅದನ್ನು ಬಿತ್ತುವ ವೈರಿ ಅಂದರೆ ಸೈತಾನನು; ಸುಗ್ಗೀಕಾಲ
40 ಅಂದರೆ ಈ ಯುಗದ ಸಮಾಪ್ತಿ; ಕೊಯ್ಯುವವರು ಅಂದರೆ ದೇವದೂತರು. ಹೀಗಿರ ಲಾಗಿ, ಹ್ಯಾಗೆ ಹಣಜಿಯನ್ನು ಆರಿಸಿತೆಗೆದು ಸುಟ್ಟುಬಿಡುತ್ತಾರೋ, ಹಾಗೆಯೇ ಈ
41 ಲೋಕದ ಅಂತ್ಯದಲ್ಲಿ ನಡೆಯುವದು. ಮನುಷ್ಯಕುಮಾರನು ತನ್ನ ದೂತರನ್ನು ಕಳು ಹಿಸುವನು; ಅವರು ಆತನ ರಾಜ್ಯದೊಳಗಿಂದ ಎಲ್ಲಾ ಕಂಟಕರನ್ನೂ ಅಧರ್ಮಿಗಳನ್ನೂ
42 ಕೂಡಿಸಿ, ಬೆಂಕೀಕೊಂಡದಲ್ಲಿ ಹಾಕುವರು; ಅಲ್ಲಿ ಗೋಳಾಟವೂ ಕಟಕಟನೆ ಹಲ್ಲು
43 ಕಡಿಯೋಣವೂ ಇರುವವು. ಆಗ ನೀತಿವಂತರು ತಮ್ಮ ತಂದೆಯ ರಾಜ್ಯದಲ್ಲಿ ಸೂರ್ಯ ನಂತೆ ಪ್ರಕಾಶಿಸುವರು. ಕಿವಿಯುಳ್ಳವನು ಕೇಳಲಿ ಅಂದನು.

44 ಪರಲೋಕರಾಜ್ಯವು ಹೊಲದಲ್ಲಿ ಹೂಳಿಟ್ಟ ದ್ರವ್ಯಕ್ಕೆ ಹೋಲಿಕೆಯಾಗಿದೆ. ಒಬ್ಬನು

---

[1] ಕೀರ್ತನೆ ೭೮, ೨.

ಅದನ್ನು ಕಂಡುಕೊಂಡು ಮುಚ್ಚಿಬಿಟ್ಟು, ಅದರಿಂದಾದ ಸಂತೋಷದಿಂದ ತನ್ನ ಬದುಕನ್ನೆಲ್ಲಾ ಮಾರಿ, ಆ ಹೊಲವನ್ನು ಕೊಂಡುಕೊಂಡನು.

ಮತ್ತು ಪರಲೋಕರಾಜ್ಯವು ಉತ್ತಮವಾದ ಮುತ್ತುಗಳನ್ನು ಹುಡುಕುವ ವ್ಯಾಪಾರಸ್ಥನಿಗೆ ಹೋಲಿಕೆಯಾಗಿದೆ. 45 ಅವನು ಬಹು ಬೆಲೆಯುಳ್ಳ ಒಂದು ಮುತ್ತನ್ನು ಕಂಡು, 46 ತನ್ನ ಬದುಕನ್ನೆಲ್ಲಾ ಮಾರಿ ಬಂದು ಅದನ್ನು ಕೊಂಡುಕೊಂಡನು.

ಮತ್ತು ಪರಲೋಕರಾಜ್ಯವು ಒಂದು ಬಲೆಗೆ ಹೋಲಿಕೆಯಾಗಿದೆ. 47 ಅದನ್ನು ಸಮುದ್ರದಲ್ಲಿ ಹಾಕಿ ಎಲ್ಲಾ ಜಾತಿಯ ಮೀನುಗಳನ್ನು ಹಿಡಿದರು. 48 ಅದು ತುಂಬಿದ ಮೇಲೆ ಅಧನ್ನು ದಡಕ್ಕೆ ಎಳೆದು, ಕೂತುಕೊಂಡು, ಒಳ್ಳೇ ಮೀನುಗಳನ್ನು ಪುಟ್ಟಿಗಳಲ್ಲಿ ತುಂಬಿಕೊಂಡು, ಕೆಟ್ಟ ಮೀನುಗಳನ್ನು ಬಿಸಾಟುಬಿಟ್ಟರು. 49 ಹಾಗೆಯೇ ಲೋಕದ ಅಂತ್ಯದಲ್ಲಿ ಆಗುವದು. ದೇವದೂತರು ಹೊರಟುಬಂದು, ನೀತಿವಂತರೊಳಗಿಂದ ಕೆಟ್ಟವರನ್ನು ಬೇರೆ ಮಾಡಿ, ಅವರನ್ನು ಬೆಂಕೀಕೊಂಡದಲ್ಲಿ ಹಾಕುವರು. 50 ಅಲ್ಲಿ ಗೋಳಾಟವೂ ಕಟಕಟನೆ ಹಲ್ಲುಕಡಿಯೋಣವೂ ಇರುವವು.

51 ಈ ಎಲ್ಲಾ ಮಾತುಗಳ ಅರ್ಥವು ನಿಮಗೆ ತಿಳಿಯಿತೋ ಎಂದು ಕೇಳಲು, ಅವರು—ತಿಳಿಯಿತು ಅಂದರು. 52 ಆಗ ಆತನು ಅವರಿಗೆ—ಹೀಗಿರಲಾಗಿ, ಪರಲೋಕರಾಜ್ಯದ ವಿಷಯವಾಗಿ ಉಪದೇಶಹೊಂದಿ ಶಿಕ್ಷಿತನಾದ ಪ್ರತಿಯೊಬ್ಬ ಶಾಸ್ತ್ರೋಪದೇಶಕನು ಮನೇಯಜಮಾನನಿಗೆ ಹೋಲಿಕೆಯಾಗಿದ್ದಾನೆ. ಅವನು ತನ್ನ ಬೊಕ್ಕಸದೊಳಗಿಂದ ಹೊಸ ವಸ್ತುಗಳನ್ನೂ ಹಳೇ ವಸ್ತುಗಳನ್ನೂ ಹೊರಗೆ ತರುತ್ತಿರುವನು ಎಂದು ಹೇಳಿದನು.

53 ಯೇಸು ಈ ಸಾಮ್ಯಗಳನ್ನು ಮುಗಿಸಿದ ಮೇಲೆ ಅಲ್ಲಿಂದ ಹೊರಟುಹೋದನು.

ಯೇಸುವಿನ ಸ್ವಂತ ಊರಿನವರು ಆತನನ್ನು ತಾತ್ಸಾರಮಾಡಿದ್ದು. (ಮಾರ್ಕ 6, 1—6; ಲೂಕ 4, 15—30.)

54 ತರುವಾಯ ಆತನು ತನ್ನ ಊರಿಗೆ ಬಂದು, ಅಲ್ಲಿರುವ ಸಭಾಮಂದಿರದಲ್ಲಿ ಜನರಿಗೆ ಉಪದೇಶಮಾಡುತ್ತಿದ್ದನು. ಅವರು ಕೇಳಿ ಆಶ್ಚರ್ಯಪಟ್ಟು—ಇವನಿಗೆ ಈ ಜ್ಞಾನವೂ ಈ ಮಹತ್ಕಾರ್ಯಗಳೂ ಎಲ್ಲಿಂದ ಬಂದಿದ್ದಾವು? 55 ಇವನು ಬಡಗಿಯವನ ಮಗನಲ್ಲವೇ? ಇವನ ತಾಯಿ ಮರಿಯಳಲ್ಲವೇ? ಯಾಕೋಬ ಯೋಸೇಫ ಸೀಮೋನ ಯೂದ ಎಂಬವರು ಇವನ ಅಣ್ಣತಮ್ಮಂದಿರಲ್ಲವೇ? 56 ಇವನ ಅಕ್ಕತಂಗಿಯರೆಲ್ಲರು ನಮ್ಮಲ್ಲಿ ಇದ್ದಾರಲ್ಲವೇ? ಹಾಗಾದರೆ ಇವೆಲ್ಲಾ ಇವನಿಗೆ ಎಲ್ಲಿಂದ ಬಂದಿದ್ದಾವು? ಎಂದು ಮಾತಾಡಿಕೊಂಡು, ಆತನ ವಿಷಯವಾಗಿ ಸಂಶಯಪಟ್ಟರು. 57 ಆದರೆ ಯೇಸು ಅವರಿಗೆ—ಪ್ರವಾದಿಯು ಬೇರೆ ಎಲ್ಲಿದ್ದರೂ ಅವನಿಗೆ ಮರ್ಯಾದೆ ಉಂಟು; ಆದರೆ ಸ್ವದೇಶದಲ್ಲಿಯೂ ಸ್ವಂತ ಮನೆಯಲ್ಲಿಯೂ ಮರ್ಯಾದೆಯಿಲ್ಲ ಅಂದನು. 58 ಆತನನ್ನು ಅವರು ನಂಬದೆಹೋದದರಿಂದ ಆತನು ಅಲ್ಲಿ ಅನೇಕ ಮಹತ್ಕಾರ್ಯಗಳನ್ನು ನಡಸಲಿಲ್ಲ.

ಅರಸನು ಸ್ನಾನಿಕನಾದ ಯೋಹಾನನನ್ನು ಕೊಲ್ಲಿಸಿದ ಮೇಲೆ ಯೇಸುವಿನ ಸುದ್ದಿಯನ್ನು ಕೇಳಿ ದಿಗಿಲುಬಿದ್ದದ್ದು.
(ಮಾರ್ಕ 6, 14—29; ಲೂಕ 9, 7—9.)

**14** ಆ ಕಾಲದಲ್ಲಿ ಉಪರಾಜನಾದ ಹೆರೋದನು ಯೇಸುವಿನ ಸುದ್ದಿಯನ್ನು ಕೇಳಿ,
2 ತನ್ನ ಪರಿವಾರದವರಿಗೆ—ಇವನು ಸ್ನಾನಿಕನಾದ ಯೋಹಾನನು; ಸತ್ತವನು ತಿರಿಗಿ ಬದುಕಿ
ಬಂದಿದ್ದಾನೆ; ಆದಕಾರಣ ಇಂಥಾ ಮಹತ್ಕಾರ್ಯಗಳನ್ನು ನಡಸುವ ಶಕ್ತಿಗಳು ಅವನಲ್ಲಿ
3,4 ಅವೆ ಎಂದು ಹೇಳಿದನು. ಯೋಹಾನನು ಹೆರೋದನಿಗೆ—ನೀನು ನಿನ್ನ ಅಣ್ಣನಾದ
ಫಿಲಿಪ್ಪನ ಹೆಂಡತಿಯಾಗಿರುವ ಹೆರೋದ್ಯಳನ್ನು ಇಟ್ಟುಕೊಂಡಿರುವದು ನ್ಯಾಯವಲ್ಲ
ವೆಂದು ಹೇಳಿದ್ದರಿಂದ ಹೆರೋದನು ಆಕೆಯ ನಿಮಿತ್ತ ಅವನನ್ನು ಹಿಡಿದು ಕಟ್ಟಿಸಿ ಸೆರೆ
5 ಯಲ್ಲಿ ಹಾಕಿಸಿದ್ದನು. ಹೆರೋದನು ಅವನನ್ನು ಕೊಲ್ಲಿಸಬೇಕೆಂದಿದ್ದರೂ ಜನರು ಅವ
6 ನನ್ನು ಪ್ರವಾದಿಯೆಂದು ಎಣಿಸಿದ್ದರಿಂದ, ಅವರಿಗೆ ಭಯಪಟ್ಟು ಕೊಲ್ಲಿಸಲಿಲ್ಲ. ಆದರೆ
ಹೆರೋದನ ಹುಟ್ಟಿದ ದಿನದ ಹಬ್ಬವು ನಡೆಯುವಾಗ, ಹೆರೋದ್ಯಳ ಮಗಳು ಬಂದವರ
7 ಮುಂದೆ ನಾಟ್ಯವಾಡಿ ಹೆರೋದನನ್ನು ಮೆಚ್ಚಿಸಿದ್ದರಿಂದ, ಅವನು ಅವಳಿಗೆ—ನೀನು ಏನು
8 ಕೇಳಿದರೂ ಕೊಡುತ್ತೇನೆಂದು ಆಣೆಮಾಡಿ ಮಾತುಕೊಟ್ಟನು. ಆಗ ಅವಳು ತನ್ನ
ತಾಯಿಯ ಬೋಧನೆಯನ್ನು ಕೇಳಿ—ಇಲ್ಲಿಯೇ ಸ್ನಾನಿಕನಾದ ಯೋಹಾನನ ತಲೆಯನ್ನು
9 ಪರಾತಿನಲ್ಲಿ ನನಗೆ ತರಿಸಿಕೊಡು ಅಂದಳು. ಆ ಮಾತಿಗೆ ಅರಸನು ದುಃಖಪಟ್ಟಾಗ್ಯೂ,
ತಾನು ಮಾಡಿದ ಆಣೆಗಳ ನಿಮಿತ್ತವಾಗಿಯೂ ತನ್ನ ಪಙ್ತಿಯಲ್ಲಿ ಕೂತಿದ್ದವರ ನಿಮಿತ್ತ
10 ವಾಗಿಯೂ ಅದನ್ನು ತಂದುಕೊಡುವದಕ್ಕೆ ಅಪ್ಪಣೆಕೊಟ್ಟನು. ಮತ್ತು ಆಳುಗಳನ್ನು
11 ಕಳುಹಿಸಿ, ಸೆರೆಮನೆಯಲ್ಲಿ ಯೋಹಾನನ ತಲೆಯನ್ನು ಹೊಯ್ಸಿದನು. ಅವರು ಅವನ
ತಲೆಯನ್ನು ಪರಾತಿನಲ್ಲಿ ತಂದು ಆ ಹುಡುಗಿಗೆ ಕೊಟ್ಟರು; ಅವಳು ಅದನ್ನು ತನ್ನ
12 ತಾಯಿಯ ಬಳಿಗೆ ತಕ್ಕೊಂಡುಹೋದಳು. ಆ ಮೇಲೆ ಅವನ ಶಿಷ್ಯರು ಬಂದು ಅವನ
ಶವವನ್ನು ಹೊತ್ತುಕೊಂಡು ಹೋಗಿ ಹೂಣಿಟ್ಟು, ಯೇಸುವಿನ ಬಳಿಗೆ ಬಂದು ತಿಳಿಸಿದರು.

ಯೇಸು ಐದು ಸಾವಿರ ಜನರಿಗೆ ಊಟಾಮಾಡಿಸಿದ್ದು; ಸಮುದ್ರದ ಮೇಲೆ ನಡೆದದ್ದು.
(ಮಾರ್ಕ 6, 31—56; ಲೂಕ 9, 10—17; ಯೋಹಾನ 6, 1—21.)

13 ಯೇಸು ಅದನ್ನು ಕೇಳಿ, ಹಡಗನ್ನು ಹತ್ತಿ ಆ ಸ್ಥಳವನ್ನು ಬಿಟ್ಟು ಏಕಾಂತವಾಗಿ ಅಡ
ವಿಗೆ ಹೋದನು. ಇದನ್ನು ಕೇಳಿದ ಜನರು ತಮ್ಮತಮ್ಮ ಊರುಗಳಿಂದ ಕಾಲುನಡಿಗೆ
ಯಾಗಿ ಆತನ ಹಿಂದೆ ಬಂದರು.

14 ಆತನು ಹೊರಕ್ಕೆ ಬಂದು ಬಹು ಜನರ ಗುಂಪನ್ನು ಕಂಡು, ಕನಿಕರ ಪಟ್ಟು, ಅವರಲ್ಲಿದ್ದ
15 ರೋಗಿಗಳನ್ನು ಸ್ವಸ್ಥಮಾಡಿದನು. ಸಂಜೆಯಾದಾಗ ಶಿಷ್ಯರು ಆತನ ಬಳಿಗೆ ಬಂದು—
ಇದು ಅಡವಿ, ಹೊತ್ತುಹೋಯಿತು; ಈ ಜನರಿಗೆ ಅಪ್ಪಣೆ ಕೊಡು; ಅವರು ಹಳ್ಳಿಪಳ್ಳಿ
16 ಗಳಿಗೆ ಹೋಗಿ ತಮ್ಮ ಊಟಕ್ಕೆ ಏನಾದರೂ ಕೊಂಡುಕೊಳ್ಳಲಿ ಅನ್ನಲು; ಯೇಸು—
ಅವರು ಹೋಗುವದು ಅಗತ್ಯವಿಲ್ಲ; ನೀವೇ ಅವರಿಗೆ ಊಟಕ್ಕೆ ಕೊಡಿರಿ ಅಂದನು.
17 ಅದಕ್ಕೆ ಅವರು—ನಮಗೆ ಇಲ್ಲಿ ಐದು ರೊಟ್ಟಿ ಎರಡು ಮೀನುಗಳ ಹೊರತು ಮತ್ತೇನೂ

ಇಲ್ಲ ಅನ್ನಲಾಗಿ, ಆತನು—ಅವುಗಳನ್ನು ಇಲ್ಲಿ ನನಗೆ ತಂದು ಕೊಡಿರಿ ಅಂದನು. 18
ಮತ್ತು ಜನರಿಗೆ ಹುಲ್ಲಿನ ಮೇಲೆ ಕೂತುಕೊಳ್ಳುವದಕ್ಕೆ ಹೇಳಿ, ಆ ಐದು ರೊಟ್ಟಿ ಎರಡು 19
ಮೀನುಗಳನ್ನು ತಕ್ಕೊಂಡು, ಆಕಾಶದ ಕಡೆಗೆ ನೋಡಿ ಸ್ತೋತ್ರಮಾಡಿ, ರೊಟ್ಟಿಗಳನ್ನು
ಮುರಿದು ಶಿಷ್ಯರ ಕೈಗೆ ಕೊಟ್ಟನು; ಶಿಷ್ಯರು ಜನರಿಗೆ ಕೊಟ್ಟರು. ಅವರೆಲ್ಲರೂ ಊಟಾ 20
ಮಾಡಿ ತೃಪ್ತರಾದರು. ಮಿಕ್ಕ ತುಂಡುಗಳನ್ನು ಕೂಡಿಸಲಾಗಿ ಹನ್ನೆರಡು ಪುಟ್ಟಿ ತುಂಬಿ
ದವು. ಊಟಾಮಾಡಿದವರು ಹೆಂಗಸರೂ ಮಕ್ಕಳೂ ಅಲ್ಲದೆ ಗಂಡಸರೇ ಹೆಚ್ಚುಕಡಿಮೆ 21
ಐದು ಸಾವಿರ ಮಂದಿ.

ಇದು ಆದ ಕೂಡಲೇ ಆತನು ತನ್ನ ಶಿಷ್ಯರಿಗೆ—ನಾನು ಈ ಜನರ ಗುಂಪನ್ನು ಕಳು 22
ಹಿಸಿಬಿಡುವಷ್ಟರೊಳಗೆ ನೀವು ಹಡಗನ್ನು ಹತ್ತಿಕೊಂಡು ಮುಂದಾಗಿ ಆಚೇದಡಕ್ಕೆ
ಹೋಗಿರಿ ಎಂದು ಬಲವಂತ ಮಾಡಿದನು. ಆತನು ಜನರ ಗುಂಪುಗಳನ್ನು ಕಳುಹಿಸಿ 23
ಬಿಟ್ಟ ಮೇಲೆ, ಪ್ರಾರ್ಥನೆಮಾಡುವದಕ್ಕೆ ಏಕಾಂತವಾಗಿ ಬೆಟ್ಟವನ್ನು ಹತ್ತಿದನು. ಮತ್ತು
ಹೊತ್ತು ಮುಳುಗಿದ ಮೇಲೆ, ಒಬ್ಬನೇ ಅಲ್ಲಿ ಇದ್ದನು. ಅಷ್ಟರಲ್ಲಿ ಹಡಗು ಭೂಮಿಗೆ 24
ಬಹು ದೂರ[1] ಹೋಗಿತ್ತು. ಮತ್ತು ಎದುರುಗಾಳಿ ಬೀಸುತ್ತಿದ್ದರಿಂದ, ತೆರೆಗಳ ಬಡಿತಕ್ಕೆ
ಅದು ಹೊಯ್ದಾಡುತ್ತಿತ್ತು. ರಾತ್ರಿಯ ನಾಲ್ಕನೇ ಜಾವದಲ್ಲಿ ಯೇಸು ಸಮುದ್ರದ ಮೇಲೆ 25
ನಡೆದು ಅವರ ಕಡೆಗೆ ಬಂದನು. ಸಮುದ್ರದ ಮೇಲೆ ನಡೆಯುವ ಆತನನ್ನು ಶಿಷ್ಯರು 26
ನೋಡಿ, ಭೂತವೆಂದು ತತ್ತರಿಸಿ ಭಯದಿಂದ ಕೂಗಿದರು. ಕೂಗಿದ ಕೂಡಲೇ, ಯೇಸು 27
ಮಾತಾಡಿ ಅವರಿಗೆ—ಧೈರ್ಯವಾಗಿರಿ; ನಾನು; ಅಂಜಬೇಡಿರಿ ಎಂದು ಹೇಳಿದನು.
ಅದಕ್ಕೆ ಪೇತ್ರನು—ಸ್ವಾಮೀ, ನೀನೇಯಾದರೆ ನನಗೆ ನೀರಿನ ಮೇಲೆ ನಡೆದು ನಿನ್ನ ಬಳಿಗೆ 28
ಬರುವದಕ್ಕೆ ಅಪ್ಪಣೆ ಕೊಡು ಅನ್ನಲು; ಆತನು—ಬಾ ಅಂದನು. ಆಗ ಪೇತ್ರನು 29
ಯೇಸುವಿನ ಬಳಿಗೆ ಹೋಗುವದಕ್ಕೆ ಹಡಗಿನಿಂದ ಇಳಿದು, ನೀರಿನ ಮೇಲೆ ನಡೆದನು.
ಆದರೆ ಗಾಳಿಯನ್ನು ನೋಡಿ ಭಯಪಟ್ಟು, ಮುಣುಗುತ್ತಾ—ಸ್ವಾಮೀ, ನನ್ನನ್ನು 30
ಕಾಪಾಡು ಎಂದು ಕೂಗಿಕೊಂಡನು. ಆ ಕ್ಷಣವೇ ಯೇಸು ಕೈಚಾಚಿ ಅವನನ್ನು 31
ಹಿಡಿದು—ಅಲ್ಪವಿಶ್ವಾಸಿಯೇ, ಯಾಕೆ ಸಂದೇಹ ಪಟ್ಟೆ ಎಂದು ಹೇಳಿದನು. ತರು 32
ವಾಯ ಅವರು ಹಡಗನ್ನು ಹತ್ತಿದ ಮೇಲೆ, ಗಾಳಿ ನಿಂತುಹೋಯಿತು. ಆಗ ಹಡ 33
ಗಿನಲ್ಲಿದ್ದವರು—ನಿಜವಾಗಿ ನೀನು ದೇವಕುಮಾರನು ಎಂದು ಹೇಳಿ ಆತನಿಗೆ ನಮ
ಸ್ಕರಿಸಿದರು.

ಅವರು ಸಮುದ್ರವನ್ನು ದಾಟಿ ದಡದಲ್ಲಿ ಇಳಿದು ಗೆನೆಜರೇತ್ ದೇಶವನ್ನು ಸೇರಿದರು. 34
ಆ ಸ್ಥಳದವರು ಆತನ ಗುರುತನ್ನು ಹಿಡಿದು, ಆ ಸುತ್ತಲಿನ ಸೀಮೆಗೆಲ್ಲಾ ಹೇಳಿಕಳುಹಿಸಿ, 35
ಮೈಯಲ್ಲಿ ನೆಟ್ಟಗಿಲ್ಲದವರೆಲ್ಲರನ್ನು ಆತನ ಬಳಿಗೆ ಕರತರಿಸಿ, ಆತನನ್ನು—ನಿನ್ನ ಉಡುಪಿನ 36
ಗೊಂಡೆಯನ್ನಾದರೂ ಮುಟ್ಟಗೊಡಿಸಬೇಕೆಂದು ಆತನನ್ನು ಬೇಡಿಕೊಂಡರು. ಮುಟ್ಟಿದ
ವರೆಲ್ಲರು ಸ್ವಸ್ಥರಾದರು.

---

[1] ಮೂಲ: ಅನೇಕ ಸ್ತಾದ್ಯ, ಅಂದರೆ ಫರ್ಲೋಂಗು, ದೂರ. ಕೆಲವು ಪ್ರತಿಗಳಲ್ಲಿ—ಸಮುದ್ರದ ನಡುವೆ ಎಂದು ಬರೆದದೆ.

ಊಟದಿಂದ ಮನುಷ್ಯನು ಕೆಡುವದಿಲ್ಲವೆಂದು ಯೇಸು ಬೋಧಿಸಿದ್ದು. (ಮಾರ್ಕ 7, 1—23.)

**15** ಆಗ ಯೆರೂಸಲೇಮಿನಿಂದ ಫರಿಸಾಯರೂ ಶಾಸ್ತ್ರಿಗಳೂ ಯೇಸುವಿನ ಬಳಿಗೆ ಬಂದು—
2 ನಿನ್ನ ಶಿಷ್ಯರು ಹಿರಿಯರಿಂದ ಬಂದ ಸಂಪ್ರದಾಯವನ್ನು ಯಾಕೆ ಮಿೂರುತ್ತಾರೆ? ಅವರು
3 ಕೈತೊಳಕೊಳ್ಳದೆ ಆಹಾರ ತೆಗೆದುಕೊಳ್ಳುತ್ತಾರಲ್ಲಾ ಎಂದು ಕೇಳಿದ್ದಕ್ಕೆ, ಆತನು ಅವರಿಗೆ ಹೇಳಿದ್ದೇನಂದರೆ—ನೀವು ಸಹ ನಿಮ್ಮ ಸಂಪ್ರದಾಯಕ್ಕಾಗಿ ದೇವರ ಆಜ್ಞೆಯನ್ನು ಯಾಕೆ
4 ಮಿೂರುತ್ತೀರಿ? ಹ್ಯಾಗಂದರೆ, ತಂದೆತಾಯಿಗಳನ್ನು ಸನ್ಮಾನಿಸಬೇಕೆಂತಲೂ[1] ತಂದೆಯನ್ನಾಗಲಿ ತಾಯಿಯನ್ನಾಗಲಿ ನಿಂದಿಸುವವನಿಗೆ ಮರಣದಂಡನೆ ಆಗಬೇಕೆಂತಲೂ[2] ದೇವರು
5 ಹೇಳಿದ್ದಾನೆ. ಆದರೆ ನೀವು—ಒಬ್ಬನು ತನ್ನ ತಂದೆಯನ್ನಾಗಲಿ ತಾಯಿಯನ್ನಾಗಲಿ ನೋಡಿ—ನಾನು ನಿನ್ನ ಸಂರಕ್ಷಣೆಗಾಗಿ ಕೊಡತಕ್ಕದ್ದನ್ನು ದೇವರಿಗಾಗಿ ಇಟ್ಟಿದ್ದೇನೆ ಎಂದು
6 ಹೇಳುವದಾದರೆ, ಅವನಿಗೆ ತನ್ನ ತಂದೆತಾಯಿಗಳನ್ನು ಸನ್ಮಾನಿಸಬೇಕಾದದ್ದಿಲ್ಲ ಅನ್ನುತ್ತೀರಿ. ಹೀಗೆ ನಿಮ್ಮ ಸಂಪ್ರದಾಯದ ನಿಮಿತ್ತವಾಗಿ ದೇವರ ವಾಕ್ಯವನ್ನು ನಿರರ್ಥಕ ಮಾಡಿದ್ದೀರಿ.
7 ಕಪಟಿಗಳೇ, ನಿಮ್ಮ ವಿಷಯವಾಗಿ ಯೆಶಾಯನು ವಿಹಿತವಾಗಿ ಪ್ರವಾದಿಸಿದ್ದಾನೆ; ಅವನು ಬರೆದದ್ದೇನಂದರೆ—

8 ಈ ಜನರು ಮಾತಿನಿಂದ ನನ್ನನ್ನು ಸನ್ಮಾನಿಸುತ್ತಾರೆ,
ಆದರೆ ಅವರ ಮನಸ್ಸು ನನಗೆ ದೂರವಾಗಿದೆ.
9 ಮನುಷ್ಯರು ಕಲ್ಪಿಸಿದ ಕಟ್ಟಳೆಗಳನ್ನೇ ಅವರು ಬೋಧಿಸುವದರಿಂದ
ನನಗೆ ಭಕ್ತಿ ತೋರಿಸುವದು ವ್ಯರ್ಥ[3]

ಎಂಬುವದು.

10 ಆಗ ಯೇಸು ಜನರ ಗುಂಪನ್ನು ಕರೆದು, ಅವರಿಗೆ—ಕಿವಿಗೊಟ್ಟು ಕೇಳಿರಿ, ತಿಳುಕೊ
11 ಳ್ಳಿರಿ. ಬಾಯಿಯೊಳಗೆ ಹೋಗುವಂಥಾದ್ದು ಮನುಷ್ಯನನ್ನು ಹೊಲೆಮಾಡುವದಿಲ್ಲ; ಬಾಯಿಯೊಳಗಿಂದ ಹೊರಡುವಂಥಾದ್ದೇ ಮನುಷ್ಯನನ್ನು ಹೊಲೆಮಾಡುವದು ಎಂದು ಹೇಳಿದನು.

12 ಆಗ ಶಿಷ್ಯರು ಬಂದು ಆತನನ್ನು—ಫರಿಸಾಯರು ಈ ಮಾತನ್ನು ಕೇಳಿ ಬೇಸರಗೊಂಡ
13 ರೆಂದು ನಿನಗೆ ಗೊತ್ತಾಯಿತೋ ಎಂದು ಕೇಳಿದರು. ಅದಕ್ಕೆ ಆತನು—ಪರಲೋಕದಲ್ಲಿರುವ ನನ್ನ ತಂದೆಯು ನೆಡದೆ ಇರುವ ಗಿಡಗಳೆಲ್ಲಾ ಬೇರೊಂದಿಗೆ ಕಿತ್ತುಹಾಕಲ್ಪಡುವವು.
14 ಅವರ ಮಾತನ್ನು ಬಿಡಿರಿ; ತಾವೇ ಕುರುಡರು, ಮತ್ತೊಬ್ಬರಿಗೆ ದಾರೀತೋರಿಸುವದಕ್ಕೆ ಹೋಗುತ್ತಾರೆ; ಕುರುಡನು ಕುರುಡನಿಗೆ ದಾರೀತೋರಿಸಿದರೆ, ಅವರಿಬ್ಬರೂ ಕುಣಿಯಲ್ಲಿ
15 ಬೀಳುವರು ಅಂದನು. ಆಗ ಪೇತ್ರನು ಈ ಸಾಮ್ಯದ ಅರ್ಥವನ್ನು ನಮಗೆ ಹೇಳು
16, 17 ಅನ್ನಲು; ಆತನು—ನಿಮಗೂ ಇನ್ನೂ ಬುದ್ಧಿ ಬರಲಿಲ್ಲವೋ? ಬಾಯೊಳಗೆ ಹೋಗುವಂಥಾದ್ದು ಹೊಟ್ಟೆಯೊಳಗೆ ಸೇರಿ ಬಹಿರ್ದೇಶಕ್ಕೆ ಹೋಗುತ್ತದೆಂದು ನಿಮಗೆ ತಿಳಿಯ
18 ಲಿಲ್ಲವೋ? ಆದರೆ ಬಾಯೊಳಗಿಂದ ಹೊರಡುವಂಥಾದ್ದು ಮನಸ್ಸಿನೊಳಗಿಂದ ಬರು
19 ತ್ತದೆ; ಇದೇ ಮನುಷ್ಯನನ್ನು ಹೊಲೆಮಾಡುವಂಥಾದ್ದು. ಹ್ಯಾಗಂದರೆ ಮನಸ್ಸಿನೊಳ

[1] ಹೊರಡೋಣ ೨೦, ೧೨. [2] ಹೊರಡೋಣ ೨೧, ೧೭. [3] ಯೆಶಾಯ ೨೯, ೧೩.

ಗಿಂದಲೇ ಕೆಟ್ಟ ಆಲೋಚನೆ ಕೊಲೆ ಹಾದರ ಸೂಳೆಗಾರಿಕೆ ಕಳ್ಳತನ ಸುಳ್ಳುಸಾಕ್ಷಿ ಬೈಗಳು ಹೊರಟು ಬರುತ್ತವೆ. ಮನುಷ್ಯರನ್ನು ಕೆಡಿಸುವಂಥವುಗಳು ಇವೇ; ಆದರೆ ಕೈ 20 ತೊಳಕೊಳ್ಳದೆ ಊಟಾಮಾಡುವದು ಮನುಷ್ಯನನ್ನು ಕೆಡಿಸುವದಿಲ್ಲ ಅಂದನು.

ಯೇಸು ಕಾನಾನ್ಯಳಾದ ಸ್ತ್ರೀಯ ಮಗಳನ್ನು ಸ್ವಸ್ಥಮಾಡಿದ್ದು. (ಮಾರ್ಕ 7, 24—30.)

ಯೇಸು ಅಲ್ಲಿಂದ ಹೊರಟು ತೂರ್ ಸೀದೋನ್ ಪಟ್ಟಣಗಳ ಪ್ರಾಂತ್ಯಗಳಿಗೆ ಹೋದನು. 21 ಆ ಸೀಮೆಯಿಂದ ಕಾನಾನ್ಯರವಳೊಬ್ಬಳು ಹೊರಟು ಬಂದು—ಸ್ವಾಮೀ, ದಾವೀದನ 22 ಕುಮಾರನೇ, ನನ್ನನ್ನು ಕರುಣಿಸು. ನನ್ನ ಮಗಳಿಗೆ ದೆವ್ವದ ಕಾಟ ಬಹಳವಾಗಿದೆ ಎಂದು ಕೂಗಿಕೊಂಡಳು. ಆದರೆ ಆತನು ಆಕೆಗೆ ಏನೂ ಉತ್ತರ ಕೊಡಲಿಲ್ಲ. ಆಗ ಆತನ 23 ಶಿಷ್ಯರು ಬಂದು—ನಮ್ಮ ಹಿಂದೆ ಕೂಗಿಕೊಂಡು ಬರುತ್ತಾಳೆ; ಆಕೆಯನ್ನು ಕಳುಹಿಸಿಬಿಡು ಎಂದು ಆತನನ್ನು ಬೇಡಿಕೊಂಡರು. ಅದಕ್ಕಾತನು—ತಪ್ಪಿಸಿಕೊಂಡ ಕುರಿಗಳಂತಿರುವ 24 ಇಸ್ರಯೇಲನ ಮನೆತನದವರ ಬಳಿಗೇ ಹೊರತು ಮತ್ತ್ಯಾರ ಬಳಿಗೂ ನಾನು ಕಳುಹಿಸಲ್ಪಟ್ಟವನಲ್ಲ ಅಂದನು. ಆಗ ಆಕೆ ಬಂದು ಆತನಿಗೆ ಅಡ್ಡಬಿದ್ದು—ಸ್ವಾಮೀ, ನನಗೆ ಅನು 25 ಗ್ರಹ ಮಾಡಬೇಕು ಅಂದಳು. ಅದಕ್ಕಾತನು—ಮಕ್ಕಳು ತಿನ್ನುವ ರೊಟ್ಟಿಯನ್ನು 26 ತಕ್ಕೊಂಡು ನಾಯಿಮರಿಗಳಿಗೆ ಹಾಕುವದು ಸರಿಯಲ್ಲ ಅನ್ನಲು, ಆಕೆ—ಸ್ವಾಮೀ, ಆ 27 ಮಾತು ನಿಜವೇ, ನಾಯಿಮರಿಗಳಂತೂ ತಮ್ಮ ಯಜಮಾನರ ಮೇಜಿನಿಂದ ಬೀಳುವ ರೊಟ್ಟೀ ತುಂಡುಗಳನ್ನು ತಿನ್ನುತ್ತವಲ್ಲಾ ಅಂದಳು. ಆಗ ಯೇಸು ಆಕೆಗೆ—ಅಮ್ಮಾ, 28 ನಿನ್ನ ನಂಬಿಕೆ ಬಹಳ; ನಿನ್ನ ಮನಸ್ಸಿನಂತೆ ಆಗಲಿ ಎಂದು ಉತ್ತರಕೊಟ್ಟನು. ಅದೇ ಗಳಿಗೆಯಲ್ಲಿ ಆಕೆಯ ಮಗಳು ಸ್ವಸ್ಥಳಾದಳು.

ಯೇಸು ಅನೇಕರನ್ನು ಸ್ವಸ್ಥಮಾಡಿದ್ದು; ನಾಲ್ಕು ಸಾವಿರ ಜನರಿಗೆ ಊಟಾಮಾಡಿಸಿದ್ದು.
(ಮಾರ್ಕ 8, 1—10.)

ಯೇಸು ಅಲ್ಲಿಂದ ಹೊರಟು, ಗಲಿಲಾಯಸಮುದ್ರದ ಬಳಿಗೆ ಬಂದು, ಬೆಟ್ಟವನ್ನು ಹತ್ತಿ 29 ಅಲ್ಲಿ ಕೂತುಕೊಂಡನು. ಆಗ ಜನರು ಗುಂಪುಗುಂಪಾಗಿ ಆತನ ಬಳಿಗೆ ಬಂದು, 30 ಕುಂಟರು ಕುರುಡರು ಮೂಕರು ಕೈಕಾಲಿಲ್ಲದವರು ಈ ಮುಂತಾದ ಅನೇಕರನ್ನು ಕರ ತಂದು, ಅವರನ್ನು ಆತನ ಪಾದಗಳ ಬಳಿಯಲ್ಲಿ ಬಿಟ್ಟರು; ಆತನು ಅವರನ್ನು ವಾಸಿಮಾಡಿದನು. ಮೂಕರಾಗಿದ್ದವರು ಮಾತಾಡಿದ್ದನ್ನೂ ಕೈಕಾಲಿಲ್ಲದವರು ಸ್ವಸ್ಥವಾದದ್ದನ್ನೂ 31 ಕುಂಟರಿಗೆ ಕಾಲುಬಂದದ್ದನ್ನೂ ಕುರುಡರಿಗೆ ಕಣ್ಣುಬಂದದ್ದನ್ನೂ ಜನರು ಕಂಡು, ಆಶ್ಚರ್ಯಪಟ್ಟು ಇಸ್ರಯೇಲ ಜನರ ದೇವರನ್ನು ಕೊಂಡಾಡಿದರು.

ಆಗ ಯೇಸು ತನ್ನ ಶಿಷ್ಯರನ್ನು ಕರೆದು, ಅವರಿಗೆ—ಈ ಜನರನ್ನು ನೋಡಿ ಕನಿಕರ 32 ಪಡುತ್ತೇನೆ; ಅವರು ನನ್ನ ಬಳಿಗೆ ಬಂದು ಈಗ ಮೂರು ದಿವಸವಾಯಿತು; ಊಟಕ್ಕೆ ಅವರಿಗೆ ಏನೂ ಇಲ್ಲ; ಅವರನ್ನು ಉಪವಾಸವಾಗಿ ಕಳುಹಿಸಿಬಿಡುವದಕ್ಕೆ ನನಗೆ ಮನಸ್ಸಿಲ್ಲ; ದಾರಿಯಲ್ಲಿ ಬಳಲಿಹೋದಾರು ಎಂದು ಹೇಳಿದನು. ಶಿಷ್ಯರು—ಇಷ್ಟು ಜನಕ್ಕೆ 33 ಹೊಟ್ಟೆತುಂಬಾ ಆಗುವಷ್ಟು ರೊಟ್ಟಿ ಈ ಅಡವಿಯಲ್ಲಿ ನಮಗೆ ಎಲ್ಲಿಂದ ಬಂದೀತು?

34 ಅನ್ನಲು, ಯೇಸು—ನಿಮ್ಮಲ್ಲಿ ಎಷ್ಟು ರೊಟ್ಟಿಗಳವೆ ಎಂದು ಕೇಳಿದ್ದಕ್ಕೆ, ಅವರು—ಏಳು
35 ರೊಟ್ಟಿಗಳು ಮತ್ತು ಕೆಲವು ಸಣ್ಣ ಮೀನುಗಳು ಅವೆ ಅಂದರು. ಆಗ ಆತನು ಜನರಿಗೆ
36 ನೆಲದ ಮೇಲೆ ಕೂತುಕೊಳ್ಳಿರಿ ಎಂದು ಅಪ್ಪಣೆ ಕೊಟ್ಟು, ಆ ಏಳು ರೊಟ್ಟಿಗಳನ್ನೂ ಆ
ಮೀನುಗಳನ್ನೂ ತೆಗದುಕೊಂಡು ಸ್ತೋತ್ರಮಾಡಿ, ಅವುಗಳನ್ನು ಮುರಿದು ಶಿಷ್ಯರಿಗೆ
37 ಕೊಡಲು, ಶಿಷ್ಯರು ಆ ಜನರಿಗೆ ಹಂಚಿಕೊಟ್ಟರು. ಎಲ್ಲರೂ ಊಟಾಮಾಡಿ ತೃಪ್ತ
38 ರಾದರು. ಮಿಕ್ಕ ತುಂಡುಗಳನ್ನು ಕೂಡಿಸಲಾಗಿ, ಏಳು ಹೆಡಿಗೆ ತುಂಬಿದವು. ಊಟಾ
ಮಾಡಿದವರು, ಹೆಂಗಸರು ಮಕ್ಕಳು ಅಲ್ಲದೆ, ಗಂಡಸರೇ ನಾಲ್ಕು ಸಾವಿರ ಮಂದಿ.
39 ಬಳಿಕ ಆತನು ಆ ಜನರ ಗುಂಪನ್ನು ಕಳುಹಿಸಿಬಿಟ್ಟು, ಹಡಗನ್ನು ಹತ್ತಿ, ಮಗದಾನ
ಸೀಮೆಗೆ ಬಂದನು.

ಯೇಸು ಫರಿಸಾಯರ ಮತ್ತು ಸದ್ದುಕಾಯರ ವಿಷಯವಾಗಿ ಎಚ್ಚರಿಕೆ ಕೊಟ್ಟದ್ದು. (ಮಾರ್ಕ 8, 11—21.)

**16** ಫರಿಸಾಯರೂ ಸದ್ದುಕಾಯರೂ ಬಂದು ಆತನನ್ನು ಪರೀಕ್ಷಿಸುವದಕ್ಕಾಗಿ—ನೀನು
ಆಕಾಶದಲ್ಲಿ ಒಂದು ಸೂಚಕಕಾರ್ಯವನ್ನು ತೋರಿಸಿಕೊಡಬೇಕೆಂದು ಕೇಳಿದರು.
2 ಆತನು ಅವರಿಗೆ—ಸಂಜೀವೇಳೆಯಲ್ಲಿ ನೀವು—ಆಕಾಶವು ಕೆಂಪಾಗಿದೆ, ನಿರ್ಮಲದಿನ ಬರು
3 ವದು ಅನ್ನುತ್ತೀರಿ; ಬೆಳಿಗ್ಯೆ—ಆಕಾಶವು ಮೋಡಮುಚ್ಚಿಕೊಂಡು ಕೆಂಪಾಗಿದೆ, ಈ ಹೊತ್ತು
ಗಾಳಿ ಮಳೆ ಅನ್ನುತ್ತೀರಿ ಅಲ್ಲವೇ? ಆಕಾಶದ ಸ್ಥಿತಿಯನ್ನು ನೋಡಿ, ಇದು ಹೀಗೆ ಅದು
ಹಾಗೆ ಅನ್ನುವದಕ್ಕೆ ಬಲ್ಲಿರಿ; ಆದರೆ ಈ ಕಾಲದ ಸೂಚನೆಗಳನ್ನು ತಿಳುಕೊಳ್ಳಲಾರಿರಿ[1].
4 ವ್ಯಭಿಚಾರಿಣಿಯಂತಿರುವ[2] ಈ ಕೆಟ್ಟ ಸಂತತಿಯು ಸೂಚಕಕಾರ್ಯವನ್ನು ನೋಡ
ಬೇಕೆಂದು ಅಪೇಕ್ಷಿಸುತ್ತದೆ; ಆದರೆ ಯೋನನಲ್ಲಿ ಆದ ಸೂಚನೆಯೇ ಹೊರತು ಬೇರೆ
ಯಾವ ಸೂಚಕಕಾರ್ಯವೂ ಇವರಿಗೆ ದೊರಕುವದಿಲ್ಲ ಎಂದು ಹೇಳಿ, ಅವರನ್ನು ಬಿಟ್ಟು
ಹೋದನು.
5, 6 ಶಿಷ್ಯರು ರೊಟ್ಟೀಬುತ್ತಿ ಕಟ್ಟಿಕೊಳ್ಳುವದನ್ನು ಮರೆತು ಆಚೇದಡಕ್ಕೆ ಬಂದಾಗ ಯೇಸು
ಅವರಿಗೆ—ಫರಿಸಾಯರ ಮತ್ತು ಸದ್ದುಕಾಯರ ಹುಳೀಹಿಟ್ಟನ್ನು ತಕ್ಕೊಂಡೀರಿ, ಎಚ್ಚರಿಕೆ
7 ಯಾಗಿರಬೇಕೆಂದು ಹೇಳಲು, ಅವರು—ನಾವು ರೊಟ್ಟೀಬುತ್ತಿ ಕಟ್ಟಿಕೊಳ್ಳದೆ ಬಂದೆವಲ್ಲಾ
8 ಎಂದು ತಮ್ಮತಮ್ಮೊಳಗೆ ಮಾತಾಡಿಕೊಂಡರು. ಯೇಸು ಅದನ್ನು ತಿಳಿದು—ಅಲ್ಪವಿಶ್ವಾ
ಸಿಗಳೇ, ರೊಟ್ಟೀತರಲಿಲ್ಲವಲ್ಲಾ ಎಂದು ನಿಮ್ಮೊಳಗೆ ಮಾತಾಡಿಕೊಳ್ಳುವದು ಯಾಕೆ?
9 ನೀವು ಇನ್ನೂ ಗ್ರಹಿಸಲಿಲ್ಲವೋ? ಐದು ರೊಟ್ಟಿಗಳನ್ನು ಐದು ಸಾವಿರ ಜನರಿಗೆ ಹಂಚಿ
10 ಕೊಟ್ಟಾಗ ಎಷ್ಟು ಪುಟ್ಟಿತುಂಬ ಕೂಡಿಸಿಟ್ಟಿರಿ? ಇಲ್ಲವೆ ಏಳು ರೊಟ್ಟಿಗಳನ್ನು ನಾಲ್ಕು
11 ಸಾವಿರ ಜನರಿಗೆ ಹಂಚಿಕೊಟ್ಟಾಗ ಎಷ್ಟು ಹೆಡಿಗೆ ತುಂಬ ಕೂಡಿಸಿಟ್ಟಿರಿ? ಈ ಸಂಗತಿಗಳು
ನಿಮ್ಮ ನೆನಪಿಗೆ ಬರುವದಿಲ್ಲವೇ? ನಾನು ರೊಟ್ಟಿಯನ್ನು ಕುರಿತು ಮಾತಾಡಲಿಲ್ಲವೆಂಬು
ವದು ನಿಮಗೆ ತಿಳಿಯದೆ ಇರುವದು ಹ್ಯಾಗೆ? ಆದರೆ ಫರಿಸಾಯರ ಮತ್ತು ಸದ್ದುಕಾ
12 ಯರ ಹುಳೀಹಿಟ್ಟನ್ನು ತಕ್ಕೊಂಡೀರಿ, ಎಚ್ಚರಿಕೆಯಾಗಿರಿ ಅಂದನು. ಆಗ ಅವರು

1) ಕೆಲವು ಪ್ರತಿಗಳಲ್ಲಿ ೨ನೇ ೩ನೇ ವಚನಗಳು ಇಲ್ಲ. 2) ಅಂದರೆ, ದೇವದ್ರೋಹಿಯಾದ.

ರೊಟ್ಟಿಯ ಹುಳೀಹಿಟ್ಟನ್ನು ಕುರಿತು ಎಚ್ಚರಿಕೆಯಾಗಿರಬೇಕೆಂದು ಆತನು ತಮಗೆ ಹೇಳ ಲಿಲ್ಲ, ಫರಿಸಾಯರ ಮತ್ತು ಸದ್ದುಕಾಯರ ಬೋಧನೆಯನ್ನು ಕುರಿತು ಎಚ್ಚರಿಕೆಯಾಗಿರ ಬೇಕೆಂದು ಹೇಳಿದನು ಎಂಬದಾಗಿ ತಿಳುಕೊಂಡರು.

ಪೇತ್ರನು ಯೇಸುವನ್ನು ಕ್ರಿಸ್ತನೆಂದು ಅರಿಕೆಮಾಡಿದ್ದು. (ಮಾರ್ಕ 8, 27—29; ಲೂಕ 9, 18—21.)

ಯೇಸು ಫಿಲಿಪ್ಪನಕೈಸರೈಯ ಎಂಬ ಪಟ್ಟಣದ ಪ್ರಾಂತ್ಯಕ್ಕೆ ಬಂದಾಗ—ಮನುಷ್ಯಕುಮಾ 13 ರನೆಂಬ ನನ್ನನ್ನು ಜನರು ಯಾರನ್ನುತ್ತಾರೆ ಎಂದು ತನ್ನ ಶಿಷ್ಯರನ್ನು ಕೇಳಿದ್ದಕ್ಕೆ, ಅವರು— 14 ನಿನ್ನನ್ನು ಕೆಲವರು ಸ್ನಾನಿಕನಾದ ಯೋಹಾನನು ಅನ್ನುತ್ತಾರೆ, ಕೆಲವರು ಎಲೀಯನು ಅನ್ನುತ್ತಾರೆ, ಬೇರೆ ಕೆಲವರು ಯೆರೆಮೀಯನು, ಇಲ್ಲವೆ ಪ್ರವಾದಿಗಳಲ್ಲಿ ಒಬ್ಬನು ಅನ್ನು ತ್ತಾರೆ ಎಂದು ಹೇಳಿದರು. ಆತನು ಅವರನ್ನು—ನೀವಾದರೆ ನನ್ನನ್ನು ಯಾರನ್ನುತ್ತೀರಿ 15 ಎಂದು ಕೇಳಲಾಗಿ, ಸೀಮೋನ್ ಪೇತ್ರನು—ನೀನು ಬರಬೇಕಾಗಿರುವ ಕ್ರಿಸ್ತನು, ಜೀವ 16 ಸ್ವರೂಪನಾದ ದೇವರ ಕುಮಾರನು ಎಂದು ಉತ್ತರಕೊಟ್ಟನು. ಅದಕ್ಕೆ ಯೇಸು— 17 ಯೋನನ ಮಗನಾದ ಸೀಮೋನನೇ, ನೀನು ಧನ್ಯನು; ಈ ಗುಟ್ಟು ನಿನಗೆ ತಿಳಿಸಿದವನು ನರಮನುಷ್ಯನಲ್ಲ, ಪರಲೋಕದಲ್ಲಿರುವ ನನ್ನ ತಂದೆಯೇ ತಿಳಿಸಿದನು. ಮತ್ತು ನಾನೂ 18 ನಿನಗೆ ಒಂದು ಮಾತನ್ನು ಹೇಳುತ್ತೇನೆ, ಅದೇನಂದರೆ—ನೀನು ಪೇತ್ರನು[1], ಈ ಬಂಡೆಯ[2] ಮೇಲೆ ನನ್ನ ಸಭೆಯನ್ನು ಕಟ್ಟುವೆನು; ಪಾತಾಳಲೋಕದ ಬಲವು ಅದನ್ನು ಸೋಲಿಸ ಲಾರದು. ಪರಲೋಕರಾಜ್ಯದ ಬೀಗದ ಕೈಗಳನ್ನು ನಿನಗೆ ಕೊಡುವೆನು; ಭೂಲೋಕ 19 ದಲ್ಲಿ ನೀನು ಯಾವದನ್ನು ಕಟ್ಟುತ್ತೀಯೋ, ಅದು ಪರಲೋಕದಲ್ಲಿಯೂ ಕಟ್ಟಿರುವದು; ಮತ್ತು ಭೂಲೋಕದಲ್ಲಿ ನೀನು ಯಾವದನ್ನು ಬಿಚ್ಚುತ್ತೀಯೋ, ಅದು ಪರಲೋಕದ ಲ್ಲಿಯೂ ಬಿಚ್ಚಿರುವದು ಅಂದನು. ಆಗ ಆತನು—ನಾನು ಕ್ರಿಸ್ತನಾಗಿದ್ದೇನೆಂಬುವದನ್ನು 20 ಯಾರಿಗೂ ಹೇಳಬೇಡಿರೆಂದು ಶಿಷ್ಯರಿಗೆ ಖಂಡಿತವಾಗಿ ಹೇಳಿದನು.

ಯೇಸು ತನ್ನ ಮರಣವನ್ನು ಮುಂತಿಳಿಸಿ, ತನ್ನ ಶಿಷ್ಯರು ತನ್ನ ನಿಮಿತ್ತವಾಗಿ ಪ್ರಾಣಬಿಡುವದಕ್ಕೆ ಸಿದ್ಧವಾಗಿರ ಬೇಕೆಂದು ಬೋಧಿಸಿದ್ದು. (ಮಾರ್ಕ 8, 31—9, 1; ಲೂಕ 9, 22—27.)

ಅಂದಿನಿಂದ ಯೇಸು ಕ್ರಿಸ್ತನು[3] ತಾನು ಯೆರೂಸಲೇಮಿಗೆ ಹೋಗಿ ಅಲ್ಲಿ ಹಿರಿಯ 21 ರಿಂದಲೂ ಮಹಾಯಾಜಕರಿಂದಲೂ ಶಾಸ್ತ್ರಿಗಳಿಂದಲೂ ಬಹಳ ಕಷ್ಟವನ್ನು ತಾಳಿ ಕೊಲ್ಲ ಲ್ಪಟ್ಟು ಮೂರನೇ ದಿನದಲ್ಲಿ ಎಬ್ಬಿಸಲ್ಪಡುವದು ಅಗತ್ಯವೆಂಬದಾಗಿ ತನ್ನ ಶಿಷ್ಯರಿಗೆ ತಿಳಿಸು ವವನಾದನು. ಪೇತ್ರನು ಈ ಮಾತನ್ನು ಕೇಳಿ ಆತನ ಕೈ ಹಿಡಿದು—ಸ್ವಾಮಿಾ, ದೇವರು 22 ನಿನ್ನನ್ನು ಕಾಯಲಿ; ನಿನಗೆ ಹೀಗೆ ಎಂದಿಗೂ ಆಗಬಾರದು ಎಂದು ಆತನನ್ನು ಗದರಿಸುವ ದಕ್ಕೆ ಪ್ರಾರಂಭಿಸಲು, ಯೇಸು ತಿರುಗಿಕೊಂಡು ಪೇತ್ರನಿಗೆ—ಸೈತಾನನೇ, ನನ್ನ ಮುಂದೆ 23

[1] ಮೂಲ: ಪೇತ್ರೊಸ್, ಅಂದರೆ ಗುಂಡು. [2] ಮೂಲ: ಪೇತ್ರಾ, ಅಂದರೆ ವಿಸ್ತಾರವಾದ ಬಂಡೆ.
[3] ಕೆಲವು ಪ್ರತಿಗಳಲ್ಲಿ ಕ್ರಿಸ್ತನೆಂಬ ಪದವು ಇಲ್ಲ.

ನಿಲ್ಲಬೇಡ, ನಡೆ, ನನಗೆ ನೀನು ವಿಘ್ನವಾಗಿದ್ದೀ; ನೀನು ದೇವರ ಆಲೋಚನೆಗಳನ್ನು
24 ಬಿಟ್ಟು ಮನುಷ್ಯರ ಆಲೋಚನೆಗಳನ್ನು ಹಿಡಿಯುತ್ತೀ ಎಂದು ಹೇಳಿದನು. ಮತ್ತು
ಯೇಸು ತನ್ನ ಶಿಷ್ಯರಿಗೆ—ಯಾವನಿಗಾದರೂ ನನ್ನನ್ನು ಹಿಂಬಾಲಿಸಬೇಕೆಂದು ಮನಸ್ಸಿ
ದ್ದರೆ, ಅವನು ಜೀವದಾಸೆಯನ್ನು ಬಿಟ್ಟು[1] ತನ್ನ ಶಿಲುಬೆಯನ್ನು ಹೊತ್ತುಕೊಂಡು ನನ್ನನ್ನು
25 ಹಿಂಬಾಲಿಸಲಿ. ತನ್ನ ಪ್ರಾಣವನ್ನು ಉಳಿಸಿಕೊಳ್ಳಬೇಕೆಂದಿರುವವನು ಅದರ ನಷ್ಟ ಪಡು
ವನು; ಆದರೆ ನನ್ನ ನಿಮಿತ್ತವಾಗಿ ತನ್ನ ಪ್ರಾಣದ ನಷ್ಟ ಪಡುವವನು ಅದನ್ನು ಉಳಿಸಿಕೊಳ್ಳು
26 ವನು. ಒಬ್ಬ ಮನುಷ್ಯನು ಲೋಕವನ್ನೆಲ್ಲಾ ಸಂಪಾದಿಸಿಕೊಂಡರೂ ಪ್ರಾಣನಷ್ಟಪಟ್ಟರೆ
ಅವನಿಗೆ ಪ್ರಯೋಜನವೇನು? ಅಥವಾ ಒಬ್ಬನು ತನ್ನ ಪ್ರಾಣಕ್ಕೆ ಏನು ಈಡು ಕೊಟ್ಟಾನು?
27 ಮನುಷ್ಯಕುಮಾರನು ತನ್ನ ತಂದೆಯ ಮಹಿಮೆಯಲ್ಲಿ ತನ್ನ ದೂತರ ಸಮೇತವಾಗಿ ಬರು
ವನು; ಆವಾಗ ಆತನು ಒಬ್ಬೊಬ್ಬನಿಗೆ ಅವನವನ ನಡತೆಗೆ ತಕ್ಕ ಫಲವನ್ನು ಕೊಡುವನು.
28 ನಿಮಗೆ ಸತ್ಯವಾಗಿ ಹೇಳುತ್ತೇನೆ, ಇಲ್ಲಿ ನಿಂತವರೊಳಗೆ ಕೆಲವರು, ಮನುಷ್ಯಕುಮಾ
ರನು ತನ್ನ ರಾಜ್ಯದಲ್ಲಿ ಬರುವದನ್ನು ನೋಡುವ ತನಕ ಮರಣ ಹೊಂದುವದಿಲ್ಲ
ಅಂದನು.

ಯೇಸು ಪ್ರಕಾಶರೂಪವನ್ನು ಧರಿಸಿದ್ದು. (ಮಾರ್ಕ 9, 2—13; ಲೂಕ 9, 28—36.)

**17** ಆರು ದಿವಸಗಳಾದ ಮೇಲೆ ಯೇಸು ಪೇತ್ರನನ್ನೂ ಯಾಕೋಬನನ್ನೂ ಇವನ ತಮ್ಮ
ನಾದ ಯೋಹಾನನನ್ನೂ ಮಾತ್ರ ವಿಂಗಡವಾಗಿ ಕರಕೊಂಡು ಎತ್ತರವಾದ ಬೆಟ್ಟಕ್ಕೆ
2 ಹೋದನು. ಅಲ್ಲಿ ಅವರ ಕಣ್ಣಮುಂದೆ ಆತನ ರೂಪ ಬೇರೆಯಾಯಿತು; ಆತನ
ಮುಖವು ಸೂರ್ಯನ ಹಾಗೆ ಪ್ರಕಾಶಿಸಿತು; ಆತನ ವಸ್ತ್ರಗಳು ಬೆಳಕಿನಂತೆ ಹೊಳೆಯು
3 ತ್ತಿದ್ದವು. ಇದಲ್ಲದೆ ಮೋಶೆಯೂ ಎಲೀಯನೂ ಆತನ ಸಂಗಡ ಮಾತಾಡುತ್ತಾ ಅವರಿಗೆ
4 ಕಾಣಿಸಿಕೊಂಡರು. ಆಗ ಪೇತ್ರನು ಯೇಸುವಿಗೆ—ಸ್ವಾಮಿಾ, ನಾವು ಇಲ್ಲೇ ಇರುವದು
ಒಳ್ಳೇದು. ಅಪ್ಪಣೆಯಾದರೆ ಇಲ್ಲಿ ಮೂರು ಪರ್ಣಶಾಲೆಗಳನ್ನು ಕಟ್ಟುವೆನು; ನಿನಗೆ
5 ಒಂದು, ಮೋಶೆಗೆ ಒಂದು, ಎಲೀಯನಿಗೆ ಒಂದು ಎಂದು ಹೇಳಿದನು. ಹೀಗೆ ಹೇಳು
ತ್ತಿರುವಾಗಲೇ ಕಾಂತಿಯುಳ್ಳ ಮೋಡ ಅವರ ಮೇಲೆ ಕವಿಯಿತು. ಇದಲ್ಲದೆ ಆ ಮೋಡ
ದೊಳಗಿಂದ—ಈತನು ಪ್ರಿಯನಾಗಿರುವ ನನ್ನ ಮಗನು; ಈತನನ್ನು ನಾನು ಮೆಚ್ಚಿದ್ದೇನೆ;
6 ಈತನ ಮಾತನ್ನು ಕೇಳಿರಿ ಎಂಬ ಆಕಾಶವಾಣಿ ಆಯಿತು. ಶಿಷ್ಯರು ಇದನ್ನು ಕೇಳಿ
7 ಬಹಳವಾಗಿ ಹೆದರಿ ಬೋರ್ಲಬಿದ್ದರು. ಆದರೆ ಯೇಸು ಹತ್ತರಕ್ಕೆ ಬಂದು ಅವರನ್ನು
8 ಮುಟ್ಟಿ—ಏಳಿರಿ, ಹೆದರಬೇಡಿರಿ ಅಂದನು. ಅವರು ಕಣ್ಣೆತ್ತಿ ನೋಡಿದಾಗ ಯೇಸುವನ್ನೇ
ಹೊರತು ಮತ್ತಾರ್ಯರನ್ನೂ ಕಾಣಲಿಲ್ಲ.
9 ಅವರು ಆ ಬೆಟ್ಟದಿಂದ ಇಳಿದುಬರುತ್ತಿರುವಾಗ ಯೇಸು ಅವರಿಗೆ—ಮನುಷ್ಯಕುಮಾ
ರನು ಸತ್ತು ತಿರಿಗಿ ಜೀವದಿಂದೇಳುವ ತನಕ, ನೀವು ಈಗ ಕಂಡ ದರ್ಶನವನ್ನು ಯಾರಿಗೂ
10 ಹೇಳಬೇಡಿರೆಂದು ಖಂಡಿತವಾಗಿ ಹೇಳಿದನು. ಆಗ ಆತನ ಶಿಷ್ಯರು—ಎಲೀಯನು

[1] ಅಥವಾ, ತನ್ನನ್ನು ನಿರಾಕರಿಸಿ.

ಮೊದಲು ಬರುವದು ಅಗತ್ಯವೆಂಬದಾಗಿ ಶಾಸ್ತ್ರಿಗಳು ಹೇಳುತ್ತಾರಲ್ಲಾ, ಇದು ಹ್ಯಾಗೆ ಎಂದು ಆತನನ್ನು ಕೇಳಿದ್ದಕ್ಕೆ, ಆತನು—ಎಲೀಯನು ಬರುವದು ನಿಜ; ಬಂದು ಎಲ್ಲ 11 ವನ್ನು ತಿರಿಗಿ ಸರಿಮಾಡುವನು; ಆದರೆ ನಾನು ನಿಮಗೆ ಹೇಳುವದೇನಂದರೆ, ಎಲೀಯನು 12 ಬಂದು ಹೋದನು; ಜನರು ಅವನ ಗುರುತು ಅರಿಯದೆ ತಮ್ಮ ಮನಸ್ಸಿಗೆ ಬಂದಂತೆ ಅವನಿಗೆ ಮಾಡಿದರು. ಅವನಿಗಾದಂತೆ ಮನುಷ್ಯಕುಮಾರನಿಗೆ ಸಹ ಅವರ ಕಡೆಯಿಂದ ಹಿಂಸೆಯಾಗುವದು ಅಂದನು. ಆಗ ಸ್ನಾನಿಕನಾದ ಯೋಹಾನನ ವಿಷಯವಾಗಿ ತಮಗೆ 13 ಈ ಮಾತನ್ನು ಹೇಳಿದನೆಂದು ಶಿಷ್ಯರು ತಿಳುಕೊಂಡರು.

### ಮೂರ್ಛಾರೋಗಿಯನ್ನು ಸ್ವಸ್ಥಮಾಡಿದ್ದು. (ಮಾರ್ಕ 9, 14—29; ಲೂಕ 9, 37—42.)

ಅವರು ಜನರ ಗುಂಪಿನ ಬಳಿಗೆ ಬಂದಾಗ, ಒಬ್ಬನು ಆತನ ಹತ್ತಿರಕ್ಕೆ ಬಂದು 14 ಆತನ ಮುಂದೆ ಮೊಣಕಾಲೂರಿ ವಂದಿಸಿ—ಸ್ವಾಮೀ, ನನ್ನ ಮಗನನ್ನು ಕರುಣಿಸು; 15 ಅವನು ಮೂರ್ಛಾರೋಗದಿಂದ ಬಹಳ ಕಷ್ಟ ಪಡುತ್ತಾನೆ; ಆಗಾಗ್ಯೆ ಬೆಂಕಿಯಲ್ಲಿಯೂ ಆಗಾಗ್ಯೆ ನೀರಿನಲ್ಲಿಯೂ ಬೀಳುತ್ತಿರುವನು. ಅವನನ್ನು ನಿನ್ನ ಶಿಷ್ಯರ ಬಳಿಗೆ ಕರಕೊಂಡು 16 ಬಂದಿದ್ದೆನು; ಆದರೆ ಅವನಿಗೆ ವಾಸಿಮಾಡುವದಕ್ಕೆ ಅವರ ಕೈಯಿಂದಾಗಲಿಲ್ಲ ಅಂದನು. ಅದಕ್ಕೆ ಯೇಸು—ಎಲಾ, ನಂಬಿಕೆಯಿಲ್ಲದಂಥಾ ಮೂರ್ಖ ಸಂತಾನವೇ, ನಾನು ಇನ್ನೆಷ್ಟು 17 ದಿನ ನಿಮ್ಮ ಸಂಗಡ ಇರಲಿ? ಇನ್ನೆಷ್ಟು ದಿನ ನಿಮ್ಮನ್ನು ಸಹಿಸಿಕೊಳ್ಳಲಿ? ಅವನನ್ನು ಇಲ್ಲಿ ನನ್ನ ಬಳಿಗೆ ತಕ್ಕೊಂಡುಬನ್ನಿರಿ ಅಂದನು. ಯೇಸು ಅವನನ್ನು ಗದರಿಸಲು, ದೆವ್ವ ಅವ 18 ನನ್ನು ಬಿಟ್ಟು ಹೋಯಿತು; ಆ ಕ್ಷಣವೇ ಆ ಹುಡುಗನಿಗೆ ಸ್ವಸ್ಥವಾಯಿತು. ತರುವಾಯ 19 ಶಿಷ್ಯರು ಏಕಾಂತವಾಗಿ ಯೇಸುವಿನ ಬಳಿಗೆ ಬಂದು—ಅದನ್ನು ಬಿಡಿಸಲಿಕ್ಕೆ ನಮ್ಮಿಂದ ಯಾಕೆ ಆಗಲಿಲ್ಲವೆಂದು ಕೇಳಲು, ಆತನು ಅವರಿಗೆ—ನಿಮ್ಮ ನಂಬಿಕೆ ಕಡಿಮೆಯಾಗಿರುವದ 20 ರಿಂದಲೇ ಆಗಲಿಲ್ಲ; ನಿಮಗೆ ಸತ್ಯವಾಗಿ ಹೇಳುತ್ತೇನೆ, ಸಾಸಿವೇಕಾಳಷ್ಟು ನಂಬಿಕೆ ನಿಮಗೆ ಇರುವದಾದರೆ ನೀವು ಈ ಬೆಟ್ಟಕ್ಕೆ—ಇಲ್ಲಿಂದ ಅಲ್ಲಿಗೆ ಹೋಗು ಎಂದು ಹೇಳಿದರೆ ಅದು ಹೋಗುವದು; ಮತ್ತು ನಿಮ್ಮ ಕೈಯಿಂದಾಗದಂಥಾದ್ದು ಒಂದೂ ಇರುವದಿಲ್ಲ ಅಂದನು[1].

### ಯೇಸು ತನ್ನ ಮರಣ ಪುನರುತ್ಥಾನಗಳನ್ನು ಎರಡನೇ ಸಾರಿ ಮುಂತಿಳಿಸಿದ್ದು. (ಮಾರ್ಕ 9, 30—32; ಲೂಕ 9, 43—45.)

ಅವರು ಗಲಿಲಾಯದಲ್ಲಿ ಗುಂಪುಗುಂಪಾಗಿ ಕೂಡುತ್ತಿರುವಾಗ[2], ಯೇಸು ಅವರಿಗೆ— 22 ಮನುಷ್ಯಕುಮಾರನನ್ನು ಮನುಷ್ಯರ ಕೈಗೆ ಒಪ್ಪಿಸಿಕೊಡೋಣವಾಗುವದು; ಇವರು 23 ಆತನನ್ನು ಕೊಲ್ಲುವರು; ಸತ್ತ ಮೂರನೇ ದಿವಸದಲ್ಲಿ ಆತನು ಎದ್ದು ಬರುವನು ಎಂದು ಹೇಳಿದನು. ಅದನ್ನು ಕೇಳಿ ಅವರು ಬಹಳ ದುಃಖಪಟ್ಟರು.

---

[1] ೨೧ನೇ ವಚನ ಮೂಲಗ್ರಂಥದಲ್ಲಿ ಇಲ್ಲ; ಮಾರ್ಕ ೯, ೨೯ ನೋಡಿರಿ.

[2] ಲೂಕ ೨, ೪೪ ನೋಡಿರಿ; ಕೆಲವು ಪ್ರತಿಗಳಲ್ಲಿ—ಗಲಿಲಾಯದಲ್ಲಿರುವಾಗ ಎಂದು ಬರೆದದೆ.

ಯೇಸು ಮಂಡೇತೆರಿಗೆಯನ್ನು ಕೊಟ್ಟ ರೀತಿಯಿಂದ ತಾನು ದೇವಕುಮಾರನೆಂದು ತೋರಿಸಿದ್ದು.

24 ಅವರು ಕಪೆರ್ನೌಮಿಗೆ ಬಂದಾಗ, ದೇವಾಲಯಕ್ಕಾಗಿ ತೆರಿಗೆಯನ್ನು[1] ಎತ್ತುವವರು ಪೇತ್ರನ ಬಳಿಗೆ ಬಂದು—ನಿಮ್ಮ ಬೋಧಕನು ದೇವಾಲಯದ ತೆರಿಗೆಯನ್ನು ಸಲ್ಲಿಸು 25 ವದಿಲ್ಲವೇ ಎಂದು ಕೇಳಲು—ಹೌದು, ಸಲ್ಲಿಸುವನು ಅಂದನು. ಪೇತ್ರನು ಮನೆಯೊಳಕ್ಕೆ ಬಂದಾಗ, ಯೇಸು ಅವನಿಗಿಂತ ಮೊದಲೇ—ಸೀಮೋನಾ, ನಿನಗೆ ಹ್ಯಾಗೆ ತೋರುತ್ತದೆ? ಭೂಲೋಕದ ಅರಸರು ಸುಂಕವನ್ನಾಗಲಿ ಮಂಡೇತೆರಿಗೆಯನ್ನಾಗಲಿ ಯಾರಿಂದ ತೆಗೆದು ಕೊಳ್ಳುತ್ತಾರೆ? ತಮ್ಮ ಮಕ್ಕಳಿಂದಲೋ? ಬೇರೆಯವರಿಂದಲೋ? ಎಂದು ಕೇಳಿದನು. 26 ಅವನು—ಬೇರೆಯವರಿಂದ ಎಂದು ಉತ್ತರಕೊಡಲು, ಯೇಸು ಅವನಿಗೆ—ಹಾಗಾದರೆ, 27 ಮಕ್ಕಳು ಅದಕ್ಕೆ ಒಳಗಾದವರಲ್ಲವಲ್ಲಾ. ಆದರೂ ನಮ್ಮ ವಿಷಯವಾಗಿ ಅವರು ಬೇಸರ ಗೊಳ್ಳಬಾರದು; ನೀನು ಸಮುದ್ರಕ್ಕೆ ಹೋಗಿ, ಗಾಳಾ ಹಾಕಿ, ಮೊದಲು ಸಿಕ್ಕುವ ಮೀನನ್ನು ಎತ್ತು; ಅದರ ಬಾಯಿ ತೆರೆದು ನೋಡಿದರೆ ಅದರಲ್ಲಿ ಒಂದು ರೂಪಾಯಿ ಸಿಕ್ಕುವದು; ಅದನ್ನು ತೆಗೆದುಕೊಂಡು ನಮ್ಮಿಬ್ಬರದಂತ ಹೇಳಿ ಅವರಿಗೆ ಕೊಡು ಎಂದು ಹೇಳಿದನು.

ಯೇಸು ತನ್ನ ಶಿಷ್ಯರಿಗೆ ಶಿಶುಭಾವ ಇರಬೇಕೆಂತಲೂ ಸಹೋದರರ ಪಾಪಗಳನ್ನು ಕ್ಷಮಿಸಬೇಕೆಂತಲೂ ಬೋಧಿಸಿದ್ದು. (ಮಾರ್ಕ 9, 33—37; ಲೂಕ 9, 46—48.)

**18** ಆ ವೇಳೆಯಲ್ಲಿ ಶಿಷ್ಯರು ಯೇಸುವಿನ ಬಳಿಗೆ ಬಂದು—ಪರಲೋಕರಾಜ್ಯದಲ್ಲಿ ಹೆಚ್ಚಿ 2 ನವನು ಯಾರು ಎಂದು ಕೇಳಲು, ಆತನು ಚಿಕ್ಕ ಮಗುವನ್ನು ಹತ್ತರಕ್ಕೆ ಕರೆದು ಅವರ 3 ನಡುವೆ ನಿಲ್ಲಿಸಿ, ಅವರಿಗೆ—ನೀವು ತಿರುಗಿಕೊಂಡು ಚಿಕ್ಕ ಮಕ್ಕಳಂತೆ ಆಗದೆಹೋದರೆ, ನೀವು ಪರಲೋಕರಾಜ್ಯದಲ್ಲಿ ಸೇರುವದೇ ಇಲ್ಲವೆಂದು ನಿಮಗೆ ಸತ್ಯವಾಗಿ ಹೇಳುತ್ತೇನೆ. 4 ಹೀಗಿರುವದರಿಂದ ಯಾವನು ಈ ಚಿಕ್ಕ ಮಗುವಿನಂತೆ ತನ್ನನ್ನು ತಗ್ಗಿಸಿಕೊಳ್ಳುತ್ತಾನೋ, 5 ಅವನೇ ಪರಲೋಕರಾಜ್ಯದಲ್ಲಿ ಹೆಚ್ಚಿನವನು. ಇದಲ್ಲದೆ, ನನ್ನನ್ನು ನೆನಸಿ ಇಂಥಾ ಒಂದು ಚಿಕ್ಕ ಮಗುವನ್ನು ಸೇರಿಸಿಕೊಂಡರೆ ನನ್ನನ್ನು ಸೇರಿಸಿಕೊಂಡ ಹಾಗಾಯಿತು. 6 ಆದರೆ ನನ್ನಲ್ಲಿ ನಂಬಿಕೆಯಿಡುವ ಈ ಚಿಕ್ಕವರಲ್ಲಿ ಒಬ್ಬನಿಗೆ ಯಾವನಾದರೂ ಅಡ್ಡಿಯಾ ದರೆ ಅಂಥವನ ಕುತ್ತಿಗೆಗೆ ಬೀಸುವ ಕಲ್ಲು ಕಟ್ಟಿ ಅವನನ್ನು ಆಳವಾದ ಸಮುದ್ರದಲ್ಲಿ ಮುಣುಗಿಸಿಬಿಡುವದು ಅವನಿಗೆ ಹಿತವಾಗುವದು.

7 ತೊಡಕುಗಳು ಬರುವದರಿಂದ ಲೋಕಕ್ಕೆ ಎಷ್ಟೋ ಕೇಡು! ಅಂಥಾ ತೊಡಕುಗಳು ಹ್ಯಾಗಾದರೂ ಬರುವವು. ಆದಾಗ್ಯೂ ಯಾವ ಮನುಷ್ಯನಿಂದ ತೊಡಕು ಬರುತ್ತದೋ, 8 ಅವನ ಗತಿಯನ್ನು ಏನು ಹೇಳಲಿ! ಹಾಗಾದರೆ ನಿನ್ನ ಕೈಯಾಗಲಿ ನಿನ್ನ ಕಾಲಾಗಲಿ ನಿನ್ನನ್ನು ಪಾಪದಲ್ಲಿ ಸಿಕ್ಕಿಸುವದಾದರೆ ಅದನ್ನು ಕತ್ತರಿಸಿ ಬಿಸಾಟುಬಿಡು; ಎರಡು ಕೈ ಎರಡು ಕಾಲು ಉಳ್ಳವನಾಗಿದ್ದು ನಿತ್ಯವಾಗಿರುವ ಬೆಂಕಿಯಲ್ಲಿ ಹಾಕಿಸಿಕೊಳ್ಳುವದಕ್ಕಿಂತ

[1] ಮೂಲ: ದಿದ್ರಾಖ್ಮ, ಅಂದರೆ ತೆರತಕ್ಕ ಅರ್ಧ ರೂಪಾಯಿ.

ಕೈ ಕಾಲು ಕಳಕೊಂಡವನಾಗಿ ಜೀವದಲ್ಲಿ ಸೇರುವದು ನಿನಗೆ ಉತ್ತಮ. ನಿನ್ನ ಕಣ್ಣು 9
ನಿನ್ನನ್ನು ಪಾಪದಲ್ಲಿ ಸಿಕ್ಕಿಸುವದಾದರೆ ಅದನ್ನು ಕಿತ್ತು ಬಿಸಾಟುಬಿಡು; ಎರಡು ಕಣ್ಣುಳ್ಳ
ವನಾಗಿದ್ದು ಬೆಂಕಿಯ ನರಕದಲ್ಲಿ ಹಾಕಿಸಿಕೊಳ್ಳುವದಕ್ಕಿಂತ ಒಂದೇ ಕಣ್ಣುಳ್ಳವನಾಗಿದ್ದು
ಜೀವದಲ್ಲಿ ಸೇರುವದು ನಿನಗೆ ಉತ್ತಮ.

ಈ ಚಿಕ್ಕವರಲ್ಲಿ ಒಬ್ಬನನ್ನಾದರೂ ತಾತ್ಸಾರಮಾಡಬಾರದು ನೋಡಿರಿ; ಪರಲೋಕ 10
ದಲ್ಲಿ ಅವರ ದೂತರು ಪರಲೋಕದಲ್ಲಿರುವ ನನ್ನ ತಂದೆಯ ಮುಖವನ್ನು ಯಾವಾಗಲೂ
ನೋಡುತ್ತಲಿದ್ದಾರೆ ಎಂದು ನಿಮಗೆ ಹೇಳುತ್ತೇನೆ[1]. ನಿಮಗೆ ಹ್ಯಾಗೆ ತೋರುತ್ತದೆ? 12
ಒಬ್ಬ ಮನುಷ್ಯನಿಗೆ ನೂರು ಕುರಿಗಳು ಇರಲಾಗಿ, ಅವುಗಳಲ್ಲಿ ಒಂದು ತಪ್ಪಿಸಿಕೊಂಡರೆ,
ಅವನು ತೊಂಭತ್ತೊಂಭತ್ತು ಕುರಿಗಳನ್ನು ಬಿಟ್ಟು, ಬೆಟ್ಟಕ್ಕೆ ಹೋಗಿ ತಪ್ಪಿಸಿಕೊಂಡದ್ದನ್ನು
ಹುಡುಕುತ್ತಾನಲ್ಲವೇ? ಅದು ಸಿಕ್ಕಿದರೆ, ತಪ್ಪಿಸಿಕೊಳ್ಳದೆ ಇರುವ ತೊಂಭತ್ತೊಂಭತ್ತು 13
ಕುರಿಗಳಿಗಿಂತ ಆ ಒಂದಕ್ಕೋಸ್ಕರ ಹೆಚ್ಚಾಗಿ ಸಂತೋಷಪಡುವನೆಂದು ನಿಮಗೆ ಸತ್ಯವಾಗಿ
ಹೇಳುತ್ತೇನೆ. ಹಾಗೆಯೇ ಈ ಚಿಕ್ಕವರಲ್ಲಿ ಒಬ್ಬನಾದರೂ ಕೆಟ್ಟುಹೋಗುವದು ಪರ 14
ಲೋಕದಲ್ಲಿರುವ ನಿಮ್ಮ ತಂದೆಯ ಚಿತ್ತವಲ್ಲ.

ಇದಲ್ಲದೆ ನಿನ್ನ ಸಹೋದರನು ತಪ್ಪುಮಾಡಿದರೆ[2], ನೀನು ಹೋಗಿ ನೀನೂ ಅವನೂ 15
ಇಬ್ಬರೇ ಇರುವಾಗ, ಅವನ ತಪ್ಪನ್ನು ಅವನಿಗೆ ತಿಳಿಸು. ಅವನು ನಿನ್ನ ಮಾತನ್ನು
ಕೇಳಿದರೆ ನಿನ್ನ ಸಹೋದರನನ್ನು ಸಂಪಾದಿಸಿಕೊಂಡಿರುವಿ. ಅವನು ಕೇಳದೆಹೋದರೆ 16
ಎರಡು ಮೂರು ಸಾಕ್ಷಿಗಳ ಬಾಯಿಂದ ಪ್ರತಿಯೊಂದು ಮಾತು ಸ್ಥಾಪನೆಯಾಗುವ ಹಾಗೆ[3]
ಇನ್ನೂ ಒಬ್ಬಿಬ್ಬರನ್ನು ನಿನ್ನ ಸಂಗಡ ಕರಕೊಂಡುಹೋಗು. ಅವನು ಅವರ ಮಾತನ್ನು 17
ಕೇಳದೆಹೋದರೆ ಸಭೆಗೆ ಹೇಳು, ಆದರೆ ಸಭೆಯ ಮಾತನ್ನೂ ಕೇಳದೆಹೋದರೆ ಅವನು
ನಿನಗೆ ಅಜ್ಞಾನಿಯಂತೆಯೂ ಭ್ರಷ್ಟನಂತೆಯೂ ಇರಲಿ.

ಭೂಲೋಕದಲ್ಲಿ ನೀವು ಏನೇನು ಕಟ್ಟುತ್ತೀರೋ ಅದು ಪರಲೋಕದಲ್ಲಿಯೂ ಕಟ್ಟಿ 18
ರುವದು; ಮತ್ತು ಭೂಲೋಕದಲ್ಲಿ ನೀವು ಏನೇನು ಬಿಚ್ಚುತ್ತೀರೋ ಅದು ಪರಲೋಕ
ದಲ್ಲಿಯೂ ಬಿಚ್ಚಿರುವದು ಎಂದು ನಿಮಗೆ ಸತ್ಯವಾಗಿ ಹೇಳುತ್ತೇನೆ. ಇದಲ್ಲದೆ ನಿಮ್ಮಲ್ಲಿ 19
ಇಬ್ಬರು ತಾವು ಬೇಡಿಕೊಳ್ಳತಕ್ಕ ಯಾವದಾದರೂ ಒಂದು ಕಾರ್ಯದ ವಿಷಯವಾಗಿ
ಭೂಲೋಕದಲ್ಲಿ ಒಂದೇ ಮನಸ್ಸುಳ್ಳವರಾಗಿದ್ದರೆ, ಅದು ಪರಲೋಕದಲ್ಲಿರುವ ನನ್ನ ತಂದೆ
ಯಿಂದ ಅವರಿಗೆ ಆಗುವದೆಂದು ನಿಮಗೆ ಹೇಳುತ್ತೇನೆ. ಯಾಕಂದರೆ ಇಬ್ಬರು ಮೂವರು 20
ನನ್ನ ಹೆಸರಿನಲ್ಲಿ ಎಲ್ಲಿ ಕೂಡಿಬಂದಿರುತ್ತಾರೋ ಅಲ್ಲಿ ಅವರ ನಡುವೆ ನಾನು ಇದ್ದೇನೆ
ಅಂದನು.

ಆಗ ಪೇತ್ರನು ಆತನ ಬಳಿಗೆ ಬಂದು—ಸ್ವಾಮಿಾ, ನನ್ನ ಸಹೋದರನು ನನಗೆ ತಪ್ಪು 21
ಮಾಡುತ್ತಾ ಬಂದರೆ, ನಾನು ಎಷ್ಟು ಸಾರಿ ಅವನಿಗೆ ಕ್ಷಮಿಸಬೇಕು? ಏಳು ಸಾರಿಯೋ
ಎಂದು ಕೇಳಲು, ಯೇಸು ಅವನಿಗೆ—ಏಳು ಸಾರಿ ಎಂದಲ್ಲ, ಏಳೆಪ್ಪತ್ತು ಸಾರಿ ಎಂದು 22
ನಿನಗೆ ಹೇಳುತ್ತೇನೆ. ಆದದರಿಂದ ಪರಲೋಕರಾಜ್ಯವು ತನ್ನ ಸೇವಕರಿಂದ ಲೆಕ್ಕವನ್ನು 23

[1] ೧೧ನೇ ವಚನ ಮೂಲಗ್ರಂಥದಲ್ಲಿ ಇಲ್ಲ; ಲೂಕ ೧೯, ೧೦ ನೋಡಿರಿ.
[2] ಕೆಲವು ಪ್ರತಿಗಳಲ್ಲಿ — ನಿನಗೆ ತಪ್ಪುಮಾಡಿದರೆ ಎಂದು ಬರೆದದೆ. [3] ದ್ವಿತೀಯ ನ್ಯಾಯ ೧೯, ೧೫.

24 ತೆಗೆದುಕೊಳ್ಳಬೇಕೆಂದಿದ್ದ ಒಬ್ಬ ಅರಸನಿಗೆ ಹೋಲಿಕೆಯಾಗಿದೆ. ಅವನು ಲೆಕ್ಕಾ ತೆಗೆದು ಕೊಳ್ಳುವದಕ್ಕೆ ಪ್ರಾರಂಭ ಮಾಡಿದಾಗ, ಕೋಟ್ಯಂತರ[1] ಸಾಲಾ ಮಾಡಿದವನೊಬ್ಬ 25 ನನ್ನು ಅವನ ಬಳಿಗೆ ಹಿಡತಂದರು. ಆ ಸಾಲಾ ತೀರಿಸುವದಕ್ಕೆ ಅವನಲ್ಲಿ ಏನೂ ಇಲ್ಲ ದ್ದರಿಂದ, ಅವನ ಒಡೆಯನು ಅವನನ್ನೂ ಅವನ ಹೆಂಡತಿಮಕ್ಕಳನ್ನೂ ಅವನ ಬದುಕೆಲ್ಲ 26 ವನ್ನೂ ಮಾರಿ ಅದನ್ನು ತೀರಿಸಬೇಕೆಂದು ಅಪ್ಪಣೆಮಾಡಿದನು. ಆ ಸೇವಕನು ಅವನ ಕಾಲಿಗೆ ಬಿದ್ದು ಅವನಿಗೆ—ಒಡೆಯನೇ, ಸ್ವಲ್ಪ ತಾಳಿಕೋ, ನಿನ್ನದೆಲ್ಲಾ ನಾನು ಕೊಟ್ಟು 27 ತೀರಿಸುತ್ತೇನೆಂದು ನಮಸ್ಕರಿಸಲಾಗಿ, ಆ ಸೇವಕನ ಒಡೆಯನು ಕನಿಕರಪಟ್ಟು ಅವನನ್ನು 28 ಬಿಡಿಸಿ ಆ ಸಾಲವನ್ನೆಲ್ಲಾ ಬಿಟ್ಟುಬಿಟ್ಟನು. ತರುವಾಯ ಆ ಸೇವಕನು ಹೊರಕ್ಕೆ ಬಂದು, ತನಗೆ ನೂರು ಹಣಾ ಕೊಡಬೇಕಾದ ಒಬ್ಬ ಜೊತೇಸೇವಕನನ್ನು ಕಂಡು, ಅವನನ್ನು 29 ಹಿಡಿದು—ಎಲಾ, ನನ್ನ ಸಾಲಾ ತೀರಿಸು ಎಂದು ಹೇಳಿ ಕುತ್ತಿಗೇ ಹಿಸಿಕಿದನು. ಆಗ ಅವನ ಜೊತೇಸೇವಕನು ಅವನ ಕಾಲಿಗೆ ಬಿದ್ದು—ಸ್ವಲ್ಪ ತಾಳಿಕೋ, ತೀರಿಸುತ್ತೇನೆ 30 ಎಂದು ಬೇಡಿಕೊಂಡನು. ಆದರೆ ಅವನು ಒಪ್ಪದೆ, ಹೊರಟುಹೋಗಿ, ಆ ಸಾಲಾ 31 ತೀರಿಸುವ ತನಕ ಅವನನ್ನು ಸೆರೆಮನೆಯಲ್ಲಿ ಹಾಕಿಸಿದನು. ಅವನ ಜೊತೇಸೇವಕರು ನಡೆದ ಸಂಗತಿಯನ್ನು ನೋಡಿ, ಬಹಳವಾಗಿ ದುಃಖಪಟ್ಟು, ಒಡೆಯನ ಬಳಿಗ ಬಂದು 32 ನಡೆದದ್ದನ್ನೆಲ್ಲಾ ತಿಳಿಸಿದರು. ಆಗ ಅವನ ಒಡೆಯನು ಅವನನ್ನು ಕರಸಿ—ಎಲಾ ನೀಚನೇ, 33 ನೀನು ನನ್ನನ್ನು ಬೇಡಿಕೊಂಡದ್ದರಿಂದ ಆ ಸಾಲವನ್ನೆಲ್ಲಾ ನಾನು ಬಿಟ್ಟುಬಿಟ್ಟೆನಲ್ಲಾ; ನಾನು ನಿನ್ನನ್ನು ಕರುಣಿಸಿದ ಹಾಗೆ ನೀನು ಸಹ ನಿನ್ನ ಜೊತೇಸೇವಕನನ್ನು ಕರುಣಿಸಬಾರದಾ 34 ಗಿತ್ತೇ ಎಂದು ಹೇಳಿ, ಸಿಟ್ಟುಮಾಡಿ ತನಗೆ ಕೊಡಬೇಕಾದ ಸಾಲವನ್ನು ತೀರಿಸುವ ತನಕ 35 ಪೀಡಿಸುವವರ ಕೈಗೆ ಒಪ್ಪಿಸಿದನು. ನಿಮ್ಮಲ್ಲಿ ಪ್ರತಿಯೊಬ್ಬನು ತನ್ನ ಸಹೋದರನಿಗೆ ಮನಃಪೂರ್ವಕವಾಗಿ ಕ್ಷಮಿಸದೆಹೋದರೆ, ಪರಲೋಕದಲ್ಲಿರುವ ನನ್ನ ತಂದೆಯೂ ನಿಮಗೆ ಹಾಗೆಯೇ ಮಾಡುವನು ಅಂದನು.

ಯೇಸು ಯೆರೂಸಲೇಮಿಗೆ ಹೋಗಬೇಕೆಂದು ಹೊರಟದ್ದು. ಹೆಂಡತಿಯ ಪರಿತ್ಯಾಗದ ವಿಷಯವಾಗಿ ಉತ್ತರಕೊಟ್ಟದ್ದು. (ಮಾರ್ಕ 10, 1—12.)

**19** ಯೇಸು ಈ ಮಾತುಗಳನ್ನು ಮುಗಿಸಿದ ಮೇಲೆ, ಗಲಿಲಾಯವನ್ನು ಬಿಟ್ಟು ಯೊರ್ದನ್ 2 ಹೊಳೆಯ ಆಚೆಗೆ ಹೋಗಿ ಯೂದಾಯ ಸೀಮೆಯ ಮೇರೆಗಳಿಗೆ ಬಂದನು. ಬಹು ಜನರು ಆತನ ಹಿಂದೆ ಹೋದರು; ಆತನು ಅವರನ್ನು ಅಲ್ಲಿಯೇ ಸ್ವಸ್ಥಮಾಡಿದನು.

3 ಆಗ ಫರಿಸಾಯರು ಆತನನ್ನು ಪರೀಕ್ಷಿಸುವದಕ್ಕೆ ಆತನ ಬಳಿಗೆ ಬಂದು—ಒಬ್ಬನು ಯಾವದಾದರೂ ಒಂದು ಕಾರಣದಿಂದ ತನ್ನ ಹೆಂಡತಿಯನ್ನು ಬಿಟ್ಟುಬಿಡುವದು ನ್ಯಾಯ 4 ವೋ ಹ್ಯಾಗೆ ಎಂದು ಕೇಳಿದ್ದಕ್ಕೆ, ಆತನು—ಮನುಷ್ಯರನ್ನು ನಿರ್ಮಾಣಮಾಡಿದವನು 5 ಆದಿಯಿಂದಲೇ ಅವರನ್ನು ಗಂಡುಹೆಣ್ಣಾಗಿ ನಿರ್ಮಾಣಮಾಡಿ, ಅವರ ವಿಷಯದಲ್ಲಿ— ಇದರ ನಿಮಿತ್ತವಾಗಿ ಪುರುಷನು ತಂದೆತಾಯಿಗಳನ್ನು ಬಿಟ್ಟು ತನ್ನ ಹೆಂಡತಿಯನ್ನು

[1] ಮೂಲ: ೧೦,೦೦೦ ತಲಾಂತು; ತಲಾಂತು ಅಂದರೆ ಸುಮಾರು ೩,೦೦೦ ರೂಪಾಯಿ.

ಕೂಡಿಕೊಳ್ಳುವನು; ಅವರಿಬ್ಬರು ಒಂದೇ ಶರೀರವಾಗಿರುವರು ಎಂದು ಹೇಳಿದನೆಂಬ ದಾಗಿ[1] ನೀವು ಓದಲಿಲ್ಲವೋ? ಹೀಗಿರುವಲ್ಲಿ ಅವರು ಇನ್ನು ಇಬ್ಬರಲ್ಲ, ಒಂದೇ ಶರೀರ 6 ವಾಗಿದ್ದಾರೆ. ಆದದರಿಂದ ದೇವರು ಕೂಡಿಸಿದ್ದನ್ನು ಮನುಷ್ಯರು ಅಗಲಿಸಬಾರದು ಅಂದನು.

ಅವರು ಆತನನ್ನು—ಹಾಗಾದರೆ ಬಿಡುಗಡೆಯ ಪತ್ರವನ್ನು ಕೊಟ್ಟು ಆಕೆಯನ್ನು ಬಿಟ್ಟು 7 ಬಿಡುವದಕ್ಕೆ[2] ಮೋಶೆಯು ಯಾಕೆ ಅಪ್ಪಣೆಕೊಟ್ಟನು ಎಂದು ಕೇಳಲು; ಆತನು— 8 ಮೋಶೆಯು ನಿಮ್ಮ ಮೊಂಡತನವನ್ನು ನೋಡಿ ನಿಮ್ಮ ಹೆಂಡರನ್ನು ಬಿಟ್ಟುಬಿಡುವದಕ್ಕೆ ಒಪ್ಪಿಕೊಂಡನು; ಆದರೆ ಆದಿಯಿಂದಲೇ ಹಾಗೆ ಇರಲಿಲ್ಲ. ಮತ್ತು ಹಾದರದ ಕಾರಣ 9 ದಿಂದಲ್ಲದೆ ತನ್ನ ಹೆಂಡತಿಯನ್ನು ಬಿಟ್ಟು ಬೇರೊಬ್ಬಳನ್ನು ಮದುವೆ ಮಾಡಿಕೊಳ್ಳುವವನು ವ್ಯಭಿಚಾರ ಮಾಡುವವನಾಗುತ್ತಾನೆಂದು[3] ನಿಮಗೆ ಹೇಳುತ್ತೇನೆ ಅಂದನು. ಅದಕ್ಕೆ 10 ಶಿಷ್ಯರು—ಹೆಂಡತಿಯ ವಿಷಯವಾಗಿ ಗಂಡನ ಧರ್ಮ ಹೀಗಿದ್ದರೆ, ಮದುವೆಯಾಗುವದು ಒಳ್ಳೇದಲ್ಲ ಅಂದಾಗ, ಆತನು ಅವರಿಗೆ—ಈ ಮಾತನ್ನು ಅಂಗೀಕರಿಸುವ ವರವನ್ನು 11 ಹೊಂದಿದವರೇ ಹೊರತು ಮತ್ತಾರ್ಯರೂ ಅದನ್ನು ಅಂಗೀಕರಿಸುವದಿಲ್ಲ. ತಾಯಿಯ 12 ಗರ್ಭದಿಂದ ನಪುಂಸಕರಾಗಿ ಹುಟ್ಟಿದವರು ಕೆಲವರು ಇದ್ದಾರೆ; ಮನುಷ್ಯರಿಂದ ನಪುಂಸ ಕರಾಗಿ ಮಾಡಲ್ಪಟ್ಟವರು ಕೆಲವರು ಇದ್ದಾರೆ; ಮತ್ತು ಪರಲೋಕರಾಜ್ಯದ ನಿಮಿತ್ತ ವಾಗಿ ತಮ್ಮನ್ನು ತಾವೇ ನಪುಂಸಕರಾಗ ಮಾಡಿಕೊಂಡವರು ಕೆಲವರು ಇದ್ದಾರೆ. ಅಂಗೀ ಕರಿಸಬಲ್ಲವನು ಅಂಗೀಕರಿಸಲಿ ಎಂದು ಹೇಳಿದನು.

#### ಯೇಸು ಚಿಕ್ಕ ಮಕ್ಕಳನ್ನು ಆಶೀರ್ವದಿಸಿದ್ದು. (ಮಾರ್ಕ 10, 13—16; ಲೂಕ 18, 15—17.)

ಆಗ ಕೆಲವರು ತಮ್ಮ ಚಿಕ್ಕ ಮಕ್ಕಳನ್ನು ಯೇಸುವಿನ ಬಳಿಗೆ ತಂದು, ಆತನು ಅವು 13 ಗಳ ಮೇಲೆ ಕೈಯಿಟ್ಟು ಪ್ರಾರ್ಥನೆ ಮಾಡಬೇಕೆಂದು ಕೇಳಲು ಶಿಷ್ಯರು ಅವರನ್ನು ಗದರಿ ಸಿದರು. ಆದರೆ ಯೇಸು—ಚಿಕ್ಕ ಮಕ್ಕಳನ್ನು ನನ್ನ ಹತ್ತರಕ್ಕೆ ಬರಗೊಡಿಸಿರಿ; ಅವುಗ 14 ಳಿಗೆ ಅಡ್ಡಿಮಾಡಬೇಡಿರಿ; ಪರಲೋಕರಾಜ್ಯವು ಇಂಥವರದೇ ಎಂದು ಹೇಳಿ, ಅವುಗಳ 15 ಮೇಲೆ ಕೈಯಿಟ್ಟು, ಅಲ್ಲಿಂದ ಹೊರಟುಹೋದನು.

#### ನಿತ್ಯಜೀವವನ್ನು ಹ್ಯಾಗೆ ಪಡೆಯಬೇಕೆಂದು ಒಬ್ಬ ಐಶ್ವರ್ಯವಂತನು ವಿಚಾರಿಸಿದ್ದಕ್ಕೆ ಯೇಸು ಹಣದ ಭ್ರಾಂತಿಯಿಂದಾಗುವ ಕೇಡನ್ನು ತೋರಿಸಿದ್ದು. (ಮಾರ್ಕ 10, 17—27; ಲೂಕ 18, 18—27.)

ಆಗ ಒಬ್ಬನು ಬಂದು, ಆತನನ್ನು—ಬೋಧಕನೇ, ನಾನು ನಿತ್ಯಜೀವವನ್ನು ಪಡೆಯ 16 ಬೇಕಾದರೆ ಏನು ಒಳ್ಳೇ ಕಾರ್ಯವನ್ನು ಮಾಡಬೇಕು ಎಂದು ಕೇಳಿದನು. ಆತನು 17 ಅವನಿಗೆ—ಒಳ್ಳೇದನ್ನು ಕುರಿತು ನನ್ನನ್ನು ಯಾಕೆ ಕೇಳುತ್ತೀ? ಒಳ್ಳೆಯವನು ಒಬ್ಬನೇ. ಆದರೆ ಆ ಜೀವದಲ್ಲಿ ಸೇರಬೇಕೆಂದಿದ್ದರೆ ಆಜ್ಞೆಗಳಿಗೆ ಸರಿಯಾಗಿ ನಡೆದುಕೋ ಎಂದು

---

[1] ಉತ್ಪತ್ತಿ ೨, ೨೪. [2] ದ್ವಿತೀಯ ನ್ಯಾಯ ೨೪, ೧.

[3] ಕೆಲವು ಪ್ರತಿಗಳಲ್ಲಿ—ಮತ್ತು ಬಿಟ್ಟಿರುವವಳನ್ನು ಮದುವೆ ಮಾಡಿಕೊಳ್ಳುವವನು ಸಹ ವ್ಯಭಿಚಾರ ಮಾಡುವ ವನಾಗುತ್ತಾನೆ ಎಂಬ ಹೆಚ್ಚು ಮಾತುಗಳಿವೆ.

18 ಹೇಳಿದ್ದಕ್ಕೆ, ಅವನು—ಅವು ಯಾವವು ಎಂದು ಕೇಳಲು, ಯೇಸು—ನರಹತ್ಯ ಮಾಡ
19 ಬಾರದು; ವ್ಯಭಿಚಾರ ಮಾಡಬಾರದು; ಕದಿಯಬಾರದು; ಸುಳ್ಳುಸಾಕ್ಷಿ ಹೇಳಬಾರದು;
ನಿನ್ನ ತಂದೆತಾಯಿಗಳನ್ನು ಸನ್ಮಾನಿಸಬೇಕು; ಮತ್ತು ನಿನ್ನ ಹಾಗೆಯೇ ನಿನ್ನ ನೆರೆಯವ
20 ನನ್ನು ಪ್ರೀತಿ ಮಾಡಬೇಕು ಎಂಬಿವುಗಳೇ[1] ಅಂದನು. ಆ ಯೌವನಸ್ಥನು—ಇವೆಲ್ಲವು
ಗಳಿಗೆ ಸರಿಯಾಗಿ ನಡಕೊಂಡಿದ್ದೇನೆ; ನನಗೆ ಇನ್ನೇನು ಕಡಿಮೆಯಾಗಿರಬಹುದು?
21 ಅನ್ನಲು, ಯೇಸು ಅವನಿಗೆ—ನೀನು ಸಂಪೂರ್ಣನಾಗಬೇಕೆಂದಿದ್ದರೆ ಹೋಗಿ ನಿನ್ನ ಬದು
ಕನ್ನೆಲ್ಲಾ ಮಾರಿ ಬಡವರಿಗೆ ಕೊಡು; ಪರಲೋಕದಲ್ಲಿ ನಿನಗೆ ಸಂಪತ್ತು ಇರುವದು;
22 ಮತ್ತು ಬಂದು ನನ್ನನ್ನು ಹಿಂಬಾಲಿಸು ಎಂದು ಹೇಳಿದನು. ಆ ಯೌವನಸ್ಥನು ಬಹಳ
ಆಸ್ತಿಯುಳ್ಳವನಾದ್ದರಿಂದ ಈ ಮಾತನ್ನು ಕೇಳಿದಾಗ ದುಃಖದಿಂದ ಹೊರಟುಹೋದನು.
23 ಆಗ ಯೇಸು ತನ್ನ ಶಿಷ್ಯರನ್ನು ನೋಡಿ—ನಿಮಗೆ ಸತ್ಯವಾಗಿ ಹೇಳುತ್ತೇನೆ, ಐಶ್ವರ್ಯ
24 ವಂತನು ಪರಲೋಕರಾಜ್ಯದಲ್ಲಿ ಸೇರುವದು ಕಷ್ಟ. ಐಶ್ವರ್ಯವಂತನು ದೇವರ ರಾಜ್ಯ
ದಲ್ಲಿ ಸೇರುವದಕ್ಕಿಂತ ಒಂಟೆಯು ಸೂಜೀ ಕಣ್ಣಿನಲ್ಲಿ ನುಗ್ಗುವದು ಸುಲಭವೆಂದು ನಿಮಗೆ
25 ತಿರಿಗಿ ಹೇಳುತ್ತೇನೆ ಅಂದನು. ಶಿಷ್ಯರು ಇದನ್ನು ಕೇಳಿ ಅತ್ಯಾಶ್ಚರ್ಯಪಟ್ಟು—ಹೀಗಿದ್ದರೆ
26 ಯಾರಿಗಾದರೂ ರಕ್ಷಣೆಯಾದೀತೇ ಎಂದು ಕೇಳಲು, ಯೇಸು ಅವರನ್ನು ದೃಷ್ಟಿಸಿ
ನೋಡಿ—ಇದು ಮನುಷ್ಯರಿಗೆ ಅಸಾಧ್ಯ; ಆದರೆ ದೇವರಿಗೆ ಎಲ್ಲಾ ಸಾಧ್ಯವಾಗಿದೆ ಅಂದನು.

**ಯೇಸುವಿಗೋಸ್ಕರ ಎಲ್ಲವನ್ನು ಬಿಟ್ಟವರಿಗೂ ಪ್ರತಿಫಲವು ದೇವರ ಕೃಪೆಯಿಂದಲೇ ಸಿಕ್ಕುವದು.**
**(ಮಾರ್ಕ 10, 28—31; ಲೂಕ 18, 28—30.)**

27 ಆಗ ಪೇತ್ರನು ಆತನನ್ನು—ಇಗೋ, ನಾವು ಎಲ್ಲಾ ಬಿಟ್ಟುಬಿಟ್ಟು ನಿನ್ನನ್ನು ಹಿಂಬಾಲಿಸಿ
28 ದ್ದೇವಲ್ಲಾ; ನಮಗೆ ಏನು ದೊರಕುವದು ಎಂದು ಕೇಳಲಾಗಿ, ಯೇಸು ಅವರಿಗೆ—
ನಿಮಗೆ ಸತ್ಯವಾಗಿ ಹೇಳುತ್ತೇನೆ, ಹೊಸ ಸೃಷ್ಟಿಯಲ್ಲಿ ಮನುಷ್ಯಕುಮಾರನು ತನ್ನ ಮಹಿ
ಮೆಯ ಸಿಂಹಾಸನದ ಮೇಲೆ ಕೂತುಕೊಳ್ಳುವಾಗ ನನ್ನನ್ನು ಹಿಂಬಾಲಿಸಿರುವ ನೀವು ಸಹ
ಹನ್ನೆರಡು ಸಿಂಹಾಸನಗಳ ಮೇಲೆ ಕೂತುಕೊಂಡು ಇಸ್ರಯೇಲಿನ ಹನ್ನೆರಡು ಕುಲಗಳಿಗೆ
29 ನ್ಯಾಯತೀರಿಸುವವರಾಗಿರುವಿರಿ. ಮತ್ತು ಯಾರು ನನ್ನ ಹೆಸರಿನ ನಿಮಿತ್ತವಾಗಿ ಮನೆಗಳ
ನ್ನಾಗಲಿ ಅಣ್ಣತಮ್ಮಂದಿರನ್ನಾಗಲಿ ಅಕ್ಕತಂಗಿಯರನ್ನಾಗಲಿ ತಂದೆತಾಯಿಗಳನ್ನಾಗಲಿ ಮಕ್ಕ
ಳನ್ನಾಗಲಿ ಭೂಮಿಯನ್ನಾಗಲಿ ಬಿಟ್ಟುಬಿಟ್ಟಿದ್ಧಾರೋ, ಅವರಿಗೆ ಅನೇಕ ಪಾಲು ಹೆಚ್ಚಾಗಿ[2]
30 ಸಿಕ್ಕುವದು; ಮತ್ತು ಅವರು ನಿತ್ಯಜೀವಕ್ಕೆ ಬಾಧ್ಯರಾಗುವರು. ಆದರೆ ಬಹು ಮಂದಿ
ಮೊದಲಿನವರು ಕಡೆಯವರಾಗುವರು; ಕಡೆಯವರು ಮೊದಲಿನವರಾಗುವರು.

**20** ಅದು ಹ್ಯಾಗಂದರೆ—ಪರಲೋಕರಾಜ್ಯವು ಒಬ್ಬ ಮನೇಯಜಮಾನನಿಗೆ ಹೋಲಿಕೆ
ಯಾಗಿದೆ. ಅವನು ತನ್ನ ದ್ರಾಕ್ಷೇತೋಟಕ್ಕೆ ಕೂಲೀ ಆಳುಗಳನ್ನು ಕರೆಯುವದಕ್ಕೆ
2 ಬೆಳಿಗ್ಯೆ ಹೊರಟನು. ಆಳಿಗೆ ದಿನಕ್ಕೆ ಒಂದು ಪಾವಲಿಯಂತೆ ಕೂಲೀ ಗೊತ್ತುಮಾಡಿ
3 ಅವರನ್ನು ತನ್ನ ದ್ರಾಕ್ಷೇತೋಟಕ್ಕೆ ಕಳುಹಿಸಿದನು. ತರುವಾಯ ಹೆಚ್ಚುಕಡಿಮೆ ಮೂರು

[1] ಹೊರಡೋಣ ೨೦, ೧೨—೧೭; ಲೇವಿಕ ೧೯, ೧೮.
[2] ಕೆಲವು ಪ್ರತಿಗಳಲ್ಲಿ—ನೂರರಷ್ಟು ಎಂದು ಬರೆದದೆ.

ತಾಸು ಹೊತ್ತಿಗೆ[1] ಹೋಗಿ, ಪೇಟೆಯಲ್ಲಿ ಸುಮ್ಮನೆ ನಿಂತಿದ್ದ ಇನ್ನು ಕೆಲವರನ್ನು ಕಂಡು—
ನೀವು ಸಹ ನನ್ನ ದ್ರಾಕ್ಷೇತೋಟಕ್ಕೆ ಹೋಗಿರಿ; ನಿಮಗೆ ಸರಿಯಾದ ಕೂಲಿಯನ್ನು 4
ಕೊಡುತ್ತೇನೆ ಅನ್ನಲು, ಅವರು ತೋಟಕ್ಕೆ ಹೋದರು. ಅವನು ತಿರಿಗಿ ಹೆಚ್ಚುಕಡಿಮೆ 5
ಆರುತಾಸಿಗೆ ಮತ್ತು ಒಂಭತ್ತುತಾಸಿಗೆ[2] ಹೋಗಿ, ಅದೇ ಪ್ರಕಾರ ಮಾಡಿದನು. ತಿರಿಗಿ 6
ಹೆಚ್ಚುಕಡಿಮೆ ಹನ್ನೊಂದುತಾಸಿಗೆ[3] ಹೋಗಿ, ಬೇರೆ ಕೆಲವರು ನಿಂತಿರುವದನ್ನು ಕಂಡು,
ಅವರನ್ನು—ದಿನವೆಲ್ಲಾ ಇಲ್ಲಿ ಯಾಕೆ ಸುಮ್ಮನೆ ನಿಂತಿದ್ಧೀರಿ ಎಂದು ಕೇಳಲು, ಅವರು— 7
ಯಾರೂ ನಮ್ಮನ್ನು ಕೂಲಿಗೆ ಕರೆಯಲಿಲ್ಲ ಅಂದಾಗ, ಅವನು—ನೀವು ಸಹ ನನ್ನ ದ್ರಾಕ್ಷೇ
ತೋಟಕ್ಕೆ ಹೋಗಿರಿ ಅಂದನು. ಸಂಜೇಹೊತ್ತಿಗೆ ದ್ರಾಕ್ಷೇತೋಟದ ಯಜಮಾನನು 8
ತನ್ನ ಪಾರುಪತ್ಯಗಾರನಿಗೆ—ಆ ಆಳುಗಳನ್ನು ಕರೆದು, ಕಡೆಗೆ ಬಂದವರನ್ನು ಮೊದಲು
ಮಾಡಿಕೊಂಡು ಮೊದಲು ಬಂದವರ ತನಕ ಅವರಿಗೆ ಕೂಲೀ ಕೊಡು ಎಂದು ಹೇಳಿದನು.
ಆಗ ಹನ್ನೊಂದುತಾಸಿಗೆ ಬಂದವರಿಗೆ ಒಂದೊಂದು ಪಾವಲಿ ಸಿಕ್ಕಿತು. ತರುವಾಯ 9, 10
ಮೊದಲಿನವರು ಬಂದು ತಮಗೆ ಹೆಚ್ಚು ದೊರೆಯುವದೆಂದು ನೆನಸಿದರು; ಆದರೆ ಇವ
ರಿಗೆ ಸಹ ಒಂದೊಂದು ಪಾವಲಿಯೇ ಸಿಕ್ಕಿತು. ಅದನ್ನು ತೆಗೆದುಕೊಂಡು ಮನೇಯಜ 11
ಮಾನನ ಮೇಲೆ ಗುಣುಗುಟ್ಟಿ—ಕಡೆಗೆ ಬಂದ ಇವರು ಒಂದು ತಾಸು ಹೊತ್ತು ಮಾತ್ರ 12
ಕೆಲಸ ಮಾಡಿದ್ಧಾರೆ; ನಾವು ದಿನವೆಲ್ಲಾ ಬಿಸಲಿನಲ್ಲಿ ಕೆಲಸ ಮಾಡಿ ಕಷ್ಟಪಟ್ಟಿದ್ಧೇವೆ;
ಇವರನ್ನು ನಮಗೆ ಸಮಮಾಡಿದ್ಧೀಯೆ ಅಂದರು. ಅದಕ್ಕೆ ಅವನು ಅವರಲ್ಲಿ ಒಬ್ಬ 13
ನಿಗೆ—ಏನಪ್ಪಾ, ನಾನು ನಿನಗೆ ಅನ್ಯಾಯಮಾಡಲಿಲ್ಲ; ನೀನು ನನ್ನ ಸಂಗಡ ಒಂದು
ಪಾವಲಿಗೆ ಒಡಂಬಟ್ಟಿಯಲ್ಲಾ; ನಿನ್ನ ಕೂಲೀ ತಕ್ಕೊಂಡು ಹೋಗು; ನಿನಗೆ ಕೊಟ್ಟಂತೆ 14
ಕಡೆಗೆ ಬಂದ ಇವನಿಗೂ ಕೊಡುವದಕ್ಕೆ ನನಗೆ ಮನಸ್ಸುಂಟು. ನನ್ನ ಬದುಕನ್ನು ನಾನು 15
ಬೇಕಾದ ಹಾಗೆ ಮಾಡಬಹುದಲ್ಲವೋ? ನಾನು ಒಳ್ಳೆಯವನಾಗಿರುವದು ನಿನ್ನ ಕಣ್ಣನ್ನು
ಒತ್ತುತ್ತದೋ ಎಂದು ಹೇಳಿದನು. ಈ ಪ್ರಕಾರ ಕಡೆಯವರು ಮೊದಲಿನವರಾಗಿಯೂ 16
ಮೊದಲಿನವರು ಕಡೆಯವರಾಗಿಯೂ ಇರುವರು ಅಂದನು.

ಯೇಸು ತನ್ನ ಕಷ್ಟ ಮರಣ ಪುನರುತ್ಥಾನಗಳನ್ನು ಮೂರನೇ ಸಾರಿ ಮುಂತಿಳಿಸಿದ್ದು.
(ಮಾರ್ಕ 10, 32—34; ಲೂಕ 18, 31—33.)

ಯೇಸು ಯೆರೂಸಲೇಮಿಗೆ ಹೋಗುತ್ತಿರುವಾಗ, ಹನ್ನೆರಡು ಮಂದಿ ಶಿಷ್ಯರನ್ನು ಒತ್ತ 17
ಟ್ಟಿಗೆ ಕರೆದು ದಾರಿಯಲ್ಲಿ ಅವರಿಗೆ—ಇಗೋ, ಯೆರೂಸಲೇಮಿಗೆ ಹೋಗುತ್ತೇವೆ; ಅಲ್ಲಿ 18
ಮನುಷ್ಯಕುಮಾರನನ್ನು ಮಹಾಯಾಜಕರ ಮತ್ತು ಶಾಸ್ತ್ರಿಗಳ ಕೈಗೆ ಹಿಡುಕೊಡುವರು.
ಅವರು ಅವನಿಗೆ ಮರಣದಂಡನೆಯನ್ನು ವಿಧಿಸಿ, ಅವನನ್ನು ಅಪಹಾಸ್ಯಮಾಡುವದಕ್ಕೂ 19
ಕೊರಡೆಗಳಿಂದ ಹೊಡೆಯುವದಕ್ಕೂ ಶಿಲುಬೆಗೆ ಹಾಕುವದಕ್ಕೂ ಅನ್ಯರ ಕೈಗೆ ಒಪ್ಪಿಸು
ವರು; ಅವನು ಸತ್ತ ಮೂರನೇ ದಿನದಲ್ಲಿ ಎದ್ದು ಬರುವನು[4] ಎಂದು ಹೇಳಿದನು.

---

1) ಅಂದರೆ, ೯ ಘಂಟೆಗೆ. 2) ಅಂದರೆ, ೧೨ ಘಂಟೆಗೆ, ಮತ್ತು ೩ ಘಂಟೆಗೆ.
3) ಅಂದರೆ, ಸಾಯಂಕಾಲ ೫ ಘಂಟೆಗೆ. 4) ಹೋಶೇಯ ೬, ೨.

ಇಬ್ಬರು ಶಿಷ್ಯರು ತಮಗೆ ಹೆಚ್ಚಿನ ಪದವಿಯನ್ನು ಕೊಡಬೇಕೆಂದು ಬೇಡಿಕೊಳ್ಳಲು, ಯೇಸು ದೀನತೆಯನ್ನು ಕುರಿತು ಬೋಧಿಸಿದ್ದು. (ಮಾರ್ಕ 10, 35—45.)

20 ಆಗ ಜೆಬೆದಾಯನ ಮಕ್ಕಳ ತಾಯಿ ಆತನಿಂದ ಏನೋ ಒಂದು ಬೇಡಿಕೊಳ್ಳಬೇಕೆಂದು
21 ತನ್ನ ಮಕ್ಕಳನ್ನು ಕರಕೊಂಡು ಬಂದು ಆತನಿಗೆ ಅಡ್ಡಬಿದ್ದಳು. ಆತನು ಆಕೆಯನ್ನು— ನಿನಗೇನು ಬೇಕಮ್ಮಾ ಎಂದು ಕೇಳಿದಾಗ, ಆಕೆ—ನಿನ್ನ ರಾಜ್ಯದಲ್ಲಿ ನನ್ನ ಈ ಇಬ್ಬರು ಮಕ್ಕಳೊಳಗೆ ಒಬ್ಬನು ನಿನ್ನ ಬಲಗಡೆಯಲ್ಲಿ ಒಬ್ಬನು ಎಡಗಡೆಯಲ್ಲಿ ಕೂತುಕೊಳ್ಳುವ
22 ದಕ್ಕೆ ಅಪ್ಪಣೆಯಾಗಬೇಕು ಅಂದಳು. ಅದಕ್ಕೆ ಯೇಸು—ನೀವು ಬೇಡಿಕೊಂಡದ್ದು ಏನೆಂದು ನಿಮಗೆ ತಿಳಿಯದು. ನಾನು ಕುಡಿಯಬೇಕಾಗಿರುವ ಪಾತ್ರೆಯಲ್ಲಿ ನೀವು
23 ಕುಡಿಯುವದಕ್ಕಾದೀತೇ ಎಂದು ಕೇಳಲು, ಅವರು—ಆಗುವದು ಅಂದರು. ಆಗ ಆತನು ಅವರಿಗೆ—ನಾನು ಕುಡಿಯಬೇಕಾಗಿರುವ ಪಾತ್ರೆಯಲ್ಲಿ ನೀವು ಕುಡಿಯುವಿರಿ ಸರಿ; ಆದರೆ ನನ್ನ ಬಲಗಡೆಯಲ್ಲಿಯೂ ಎಡಗಡೆಯಲ್ಲಿಯೂ ಕೂದ್ರಬಹುದೆಂದು ಅಪ್ಪಣೆಕೊಡುವದು ನನ್ನದಲ್ಲ; ಆ ಪದವಿಯನ್ನು ನನ್ನ ತಂದೆ ಯಾರಿಗೆಂದು ಸಿದ್ಧಮಾಡಿದ್ದಾನೋ ಅವರಿಗೆ ಅದು ಸಿಕ್ಕುವದು ಎಂದು ಹೇಳಿದನು.
24 ಉಳಿದ ಹತ್ತು ಮಂದಿ ಶಿಷ್ಯರು ಇದನ್ನು ಕೇಳಿ, ಆ ಇಬ್ಬರು ಅಣ್ಣತಮ್ಮಂದಿರ ಮೇಲೆ
25 ಕೋಪಗೊಂಡರು. ಆದರೆ ಯೇಸು ಅವರನ್ನು ಹತ್ತರಕ್ಕೆ ಕರೆದು ಅವರಿಗೆ—ಜನಗಳನ್ನಾಳುವವರು ಅವರ ಮೇಲೆ ಅಹಂಕಾರದಿಂದ ದೊರೆತನಮಾಡುತ್ತಾರೆ, ಮತ್ತು ದೊಡ್ಡ
26 ವರು ಬಲಾತ್ಕಾರದಿಂದ ಅಧಿಕಾರನಡಸುತ್ತಾರೆ ಎಂದು ನೀವು ಬಲ್ಲಿರಷ್ಟೆ. ನಿಮ್ಮಲ್ಲಿ ಹಾಗಿರಬಾರದು; ಆದರೆ ನಿಮ್ಮಲ್ಲಿ ದೊಡ್ಡವನಾಗಬೇಕೆಂಬವನು ನಿಮ್ಮ ಸೇವಕನಾಗಿರ
27, 28 ಬೇಕು; ನಿಮ್ಮಲ್ಲಿ ಮೊದಲನೆಯವನಾಗಬೇಕೆಂಬವನು ನಿಮ್ಮ ಆಳಾಗಿರಬೇಕು. ಹಾಗೆಯೇ ಮನುಷ್ಯಕುಮಾರನು ಸೇವೆಮಾಡಿಸಿಕೊಳ್ಳುವದಕ್ಕೆ ಬರಲಿಲ್ಲ, ಸೇವೆ ಮಾಡುವದಕ್ಕೂ ಅನೇಕರನ್ನು ಬಿಡಿಸಿಕೊಳ್ಳುವದಕ್ಕಾಗಿ ತನ್ನ ಪ್ರಾಣವನ್ನು ಈಡುಕೊಡುವದಕ್ಕೂ ಬಂದನು ಎಂದು ಹೇಳಿದನು.

ಯೇಸು ಇಬ್ಬರು ಕುರುಡರಿಗೆ ದೃಷ್ಟಿ ಕೊಟ್ಟದ್ದು. (ಮಾರ್ಕ 10, 46—52; ಲೂಕ 18, 35—43.)

29 ಅವರು ಯೆರಿಕೋವಿನಿಂದ ಹೊರಟುಹೋಗುತ್ತಿರುವಾಗ ಜನರ ದೊಡ್ಡ ಗುಂಪು
30 ಆತನ ಹಿಂದೆ ಹೋಯಿತು. ಆಗ ದಾರಿಯ ಮಗ್ಗಲಲ್ಲಿ ಕೂತುಕೊಂಡಿದ್ದ ಇಬ್ಬರು ಕುರುಡರು, ಯೇಸು ಈ ಮಾರ್ಗವಾಗಿ ಹೋಗುತ್ತಿದ್ದಾನೆಂದು ಕೇಳಿ—ಸ್ವಾಮೀ, ದಾವೀ
31 ದನ ಕುಮಾರನೇ, ನಮ್ಮನ್ನು ಕರುಣಿಸು ಎಂದು ಕೂಗಿಕೊಂಡರು. ಆ ಗುಂಪಿನವರು— ಸುಮ್ಮನಿರ್ರಿ ಎಂದು ಅವರನ್ನು ಗದರಿಸಿದಾಗ ಅವರು—ಸ್ವಾಮೀ, ದಾವೀದನ ಕುಮಾ
32 ರನೇ, ನಮ್ಮನ್ನು ಕರುಣಿಸು ಎಂದು ಮತ್ತಷ್ಟು ಘಟ್ಟಿಯಾಗಿ ಕೂಗಿಕೊಂಡರು. ಆಗ ಯೇಸು ನಿಂತು ಅವರನ್ನು ಕರೆದು—ನಾನು ನಿಮಗೆ ಏನು ಮಾಡಬೇಕನ್ನುತ್ತೀರಿ ಎಂದು
33, 34 ಕೇಳಲು ಅವರು—ಕಣ್ಣು ಬರುವ ಹಾಗೆ ಮಾಡಬೇಕು ಸ್ವಾಮೀ ಅಂದರು. ಆಗ ಯೇಸು ಕನಿಕರಪಟ್ಟು ಅವರ ಕಣ್ಣುಗಳನ್ನು ಮುಟ್ಟಿದನು. ಕೂಡಲೇ ಅವರಿಗೆ ಕಣ್ಣು ಬಂದವು, ಮತ್ತು ಅವರು ಆತನ ಹಿಂದೆ ಹೋದರು.

### ಯೇಸು ಅರಸನಂತೆ ಯೆರೂಸಲೇಮಿನಲ್ಲಿ ಪ್ರವೇಶಮಾಡಿದ್ದು.

(ಮಾರ್ಕ 11, 1—11; ಲೂಕ 19, 29—40; ಯೋಹಾನ 12, 12—19.)

**21** ಅವರು ಯೆರೂಸಲೇಮಿಗೆ ಸಮೀಪಿಸಿ ಎಣ್ಣೇಮರಗಳ ಗುಡ್ಡದ ಬಳಿಯಲ್ಲಿರುವ ಬೇತ್ಫಗೆಗೆ ಬಂದಾಗ, ಯೇಸು ಇಬ್ಬರು ಶಿಷ್ಯರಿಗೆ—ನಿಮ್ಮೆದುರಿಗಿರುವ ಹಳ್ಳಿಗೆ ಹೋಗಿರಿ; 2 ಹೋದಕೂಡಲೆ, ಅಲ್ಲಿ ಕಟ್ಟಿರುವ ಕತ್ತೆಯನ್ನೂ ಅದರ ಕೂಡ ಇರುವ ಮರಿಯನ್ನೂ ಕಾಣುವಿರಿ; ಅವುಗಳನ್ನು ಬಿಚ್ಚಿ ನನ್ನ ಹತ್ತರಕ್ಕೆ ಹಿಡುಕೊಂಡು ಬನ್ನಿರಿ. 3 ಯಾರಾದರೂ ನಿಮಗೆ ಏನಾದರೂ ಹೇಳಿದರೆ, ಇವು ಸ್ವಾಮಿಯವರಿಗೆ ಬೇಕು ಅನ್ನಿರಿ; ಕೂಡಲೆ ಅವುಗಳನ್ನು ಬಿಟ್ಟುಕೊಡುವರು ಎಂದು ಹೇಳಿ ಅವರನ್ನು ಕಳುಹಿಸಿದನು. 4 ಒಬ್ಬ ಪ್ರವಾದಿಯ ಮುಖಾಂತರ ಹೇಳಿದ ಮಾತು ನೆರವೇರುವಂತೆ ಇದು ಆಯಿತು; ಆ ಮಾತು ಏನಂದರೆ—

> 5 ಚಿಯೋನ ಪಟ್ಟಣವೆಂಬ ಕನ್ಯೆಗೆ—
> ನೋಡು, ನಿನ್ನ ಅರಸು ನಿನ್ನ ಬಳಿಗೆ ಬರುತ್ತಾನೆ;
> ಆತನು ಶಾಂತಗುಣವುಳ್ಳವನಾಗಿಯೂ
> ಹೇರುವ ಪಶುವಾಗಿರುವ ಕತ್ತೆಯ ಮರಿಯನ್ನು ಹತ್ತಿದವನಾಗಿಯೂ ಬರುತ್ತಾನೆಂದು ಹೇಳಿರಿ[1]

ಎಂಬುವದು. 6, 7 ಆಗ ಶಿಷ್ಯರು ಹೋಗಿ, ಯೇಸು ತಮಗೆ ಅಪ್ಪಣೆಕೊಟ್ಟಂತೆ ಕತ್ತೆಯನ್ನೂ ಮರಿಯನ್ನೂ ತಂದರು; ಅವುಗಳ ಮೇಲೆ ತಮ್ಮ ಬಟ್ಟೆಗಳನ್ನು ಹಾಕಲು, ಆತನು ಹತ್ತಿ ಕೂತುಕೊಂಡನು. 8 ಆಗ ಜನರ ಗುಂಪಿನಲ್ಲಿ ಬಹಳ ಮಂದಿ ತಮ್ಮ ಬಟ್ಟೆಗಳನ್ನು ದಾರಿಯಲ್ಲಿ ಹಾಸಿದರು; ಬೇರೆ ಕೆಲವರು ಮರಗಳಿಂದ ಚಿಗುರುಗಳನ್ನು ಕೊಯಿದು ದಾರಿಯಲ್ಲಿ ಹರಡಿದರು. 9 ಆತನ ಹಿಂದೆಯೂ ಮುಂದೆಯೂ ಹೋಗುತ್ತಿದ್ದ ಜನರು—

> ದಾವೀದನ ಕುಮಾರನಿಗೆ ಜಯ![2]
> ಕರ್ತನ ಹೆಸರಿನಲ್ಲಿ ಬರುವವನಿಗೆ ಶುಭವಾಗಲಿ![3]
> ಮೇಲಣ ಲೋಕಗಳಲ್ಲಿ ಜಯ![2]

ಎಂದು ಆರ್ಭಟಿಸಿ ಹೇಳಿದರು. 10 ಆತನು ಯೆರೂಸಲೇಮಿನೊಳಗೆ ಸೇರಲು, ಪಟ್ಟಣವೆಲ್ಲಾ ಗದ್ದಲವಾಗಿ, ಈತನು ಯಾರು? ಅಂದರು. 11 ಅದಕ್ಕೆ ಆ ಜನರ ಗುಂಪಿನವರು—ಈತನು ಆ ಪ್ರವಾದಿ, ಗಲಿಲಾಯದ ನಜರೇತಿನ ಯೇಸು ಅಂದರು.

### ಯೇಸು ದೇವಾಲಯದಲ್ಲಿದ್ದ ವ್ಯಾಪಾರಸ್ಥರನ್ನು ಹೊರಡಿಸಿದ್ದು; ಆತನ ಮಾತಿಗೆ ಅಂಜೂರದ ಮರವು ಒಣಗಿಹೋದದ್ದು.

(ಮಾರ್ಕ 11, 11—24; ಲೂಕ 19, 45—48.)

12 ಯೇಸು ದೇವಾಲಯದೊಳಗೆ ಬಂದು, ಅದರಲ್ಲಿ ಮಾರುವ ಕೊಳ್ಳುವ ಎಲ್ಲರನ್ನು ಹೊರಡಿಸಿಬಿಟ್ಟನು; ಚಿನಿವಾರರ ಮೇಜುಗಳನ್ನೂ ಪಾರಿವಾಳಮಾರುವವರ ಕಾಲ್ಮಣೆ

[1] ಯೆಶಾಯ ೬೨, ೧೧; ಜಕರೀಯ ೯, ೯.
[2] ಮೂಲ: ಹೊಸನ್ನ.
[3] ಕೀರ್ತನೆ ೧೧೮, ೨೫. ೨೬.

13 ಗಳನ್ನೂ ಕೆಡವಿ ಅವರಿಗೆ—ನನ್ನ ಮನೆಯು ಪ್ರಾರ್ಥನೇಮನೆ ಅನ್ನಿಸಿಕೊಳ್ಳುವದೆಂದು[1]
14 ಬರೆದದೆ; ಆದರೆ ನೀವು ಅದನ್ನು ಕಳ್ಳರ ಗವಿ[2] ಮಾಡುತ್ತೀರಿ ಎಂದು ಹೇಳಿದನು. ಆಗ ಕುರುಡರೂ ಕುಂಟರೂ ದೇವಾಲಯದಲ್ಲಿ ಆತನ ಬಳಿಗೆ ಬರಲು, ಅವರನ್ನು ಸ್ವಸ್ಥಮಾಡಿ
15 ದನು. ಆದರೆ ಮಹಾಯಾಜಕರೂ ಶಾಸ್ತ್ರಿಗಳೂ ಆತನು ಮಾಡಿದ ಆಶ್ಚರ್ಯಕರವಾದ ಕಾರ್ಯಗಳನ್ನೂ ದಾವೀದನ ಕುಮಾರನಿಗೆ ಜಯಜಯವೆಂದು ದೇವಾಲಯದಲ್ಲಿ
16 ಕೂಗುತ್ತಿರುವ ಹುಡುಗರನ್ನೂ ನೋಡಿ ಸಿಟ್ಟುಗೊಂಡು ಆತನಿಗೆ—ಇವರು ಹೇಳುವದನ್ನು ಕೇಳುತ್ತೀಯಾ ಎಂದು ಹೇಳಲು, ಯೇಸು—ಹೌದು, ಕೇಳುತ್ತೇನೆ; ಸಣ್ಣಮಕ್ಕಳ ಬಾಯಿಯಿಂದಲೂ ಮೊಲೇಕೂಸುಗಳ ಬಾಯಿಯಿಂದಲೂ ಸ್ತೋತ್ರವನ್ನು ಸಿದ್ಧಿಗೆ ತಂದಿ
17 ಎಂಬುವದನ್ನು[3] ನೀವು ಎಂದಾದರೂ ಓದಲಿಲ್ಲವೋ? ಅಂದನು. ಬಳಿಕ ಅವರನ್ನು ಬಿಟ್ಟು ಪಟ್ಟಣದಿಂದ ಹೊರಟು ಬೇಥಾನ್ಯಕ್ಕೆ ಬಂದು, ಅಲ್ಲಿ ರಾತ್ರಿ ಇಳಕೊಂಡನು.
18, 19 ಬೆಳಿಗ್ಯೆ ಆತನು ಪಟ್ಟಣಕ್ಕೆ ತಿರಿಗಿ ಹೋಗುತ್ತಿರುವಾಗ ಹಸಿದನು. ದಾರಿಯಲ್ಲಿ ಒಂದು ಅಂಜೂರದ ಮರವನ್ನು ಕಂಡು, ಅದರ ಬಳಿಗೆ ಹೋಗಿ, ಅದರಲ್ಲಿ ಬರೇ ಎಲೆಗಳನ್ನಲ್ಲದೆ ಮತ್ತೇನೂ ಕಾಣದೆ, ಅದಕ್ಕೆ—ಇನ್ನು ಮೇಲೆ ಎಂದೆಂದಿಗೂ ನಿನ್ನಲ್ಲಿ ಫಲವು ಆಗದೆಹೋಗಲಿ ಎಂದು ಹೇಳಿದನು. ಆ ಕ್ಷಣವೇ ಆ ಅಂಜೂರದ ಮರವು ಒಣಗಿ
20 ಹೋಯಿತು. ಶಿಷ್ಯರು ಅದನ್ನು ನೋಡಿ ಬೆರಗಾಗಿ—ಈ ಅಂಜೂರದ ಮರವು ಒಂದು
21 ಕ್ಷಣದಲ್ಲೇ ಒಣಗಿಹೋಯಿತಲ್ಲಾ; ಅದು ಹ್ಯಾಗೆ? ಅಂದರು. ಅದಕ್ಕೆ ಯೇಸು—ನಿಮಗೆ ಸತ್ಯವಾಗಿ ಹೇಳುತ್ತೇನೆ, ನೀವು ಸಂಶಯಪಡದೆ ನಂಬಿದರೆ, ನಾನು ಅಂಜೂರದ ಮರಕ್ಕೆ ಮಾಡಿದಂಥಾದ್ದನ್ನು ನೀವು ಮಾಡುವಿರಿ. ಇದು ಮಾತ್ರವಲ್ಲದೆ ಈ ಬೆಟ್ಟಕ್ಕೆ—
22 ನೀನು ಎದ್ದು ಸಮುದ್ರದಲ್ಲಿ ಬೀಳು ಎಂದು ಹೇಳಿದರೆ ಅದೂ ಆಗುವದು. ನೀವು ನಂಬಿಕೊಂಡು ಪ್ರಾರ್ಥನೆಯಲ್ಲಿ ಏನೇನು ಬೇಡಿಕೊಳ್ಳುವಿರೋ ಅದನ್ನೆಲ್ಲಾ ಹೊಂದುವಿರಿ ಅಂದನು.

**ಶಾಸ್ತ್ರಿಗಳು ಯೇಸುವಿನ ಅಧಿಕಾರವನ್ನು ವಿಚಾರಿಸಿದಾಗ, ಆತನು ತಕ್ಕ ಉತ್ತರಕೊಟ್ಟು ಅವರು ಮಾಡಿದ ದೈವದ್ರೋಹವನ್ನು ತೋರಿಸುವದಕ್ಕಾಗಿ ಮೂರು ಸಾಮ್ಯಗಳನ್ನು ಹೇಳಿದ್ದು.**
**(ಮಾರ್ಕ 11, 27—12, 12; ಲೂಕ 20, 1—19; 14, 16—24.)**

23 ತರುವಾಯ ಆತನು ದೇವಾಲಯಕ್ಕೆ ಬಂದು ಬೋಧಿಸುತ್ತಿರಲು, ಮಹಾಯಾಜಕರೂ ಪ್ರಜೆಯ ಹಿರಿಯರೂ ಆತನ ಬಳಿಗೆ ಬಂದು—ಯಾವ ಅಧಿಕಾರದಿಂದ ಇದನ್ನೆಲ್ಲಾ
24 ಮಾಡುತ್ತೀ? ಈ ಅಧಿಕಾರವನ್ನು ನಿನಗೆ ಯಾರು ಕೊಟ್ಟರು ಎಂದು ಕೇಳಿದರು. ಅದಕ್ಕೆ ಯೇಸು—ನಾನು ಸಹ ನಿಮ್ಮನ್ನು ಒಂದು ಮಾತು ಕೇಳುತ್ತೇನೆ; ಅದನ್ನು ನೀವು ನನಗೆ ಹೇಳಿದರೆ ನಾನೂ ಯಾವ ಅಧಿಕಾರದಿಂದ ಇದನ್ನು ಮಾಡುತ್ತೇನೆಂಬುವದನ್ನು ನಿಮಗೆ
25 ಹೇಳುತ್ತೇನೆ. ದೀಕ್ಷಾಸ್ನಾನ ಮಾಡಿಸುವ ಅಧಿಕಾರವು ಯೋಹಾನನಿಗೆ ಎಲ್ಲಿಂದ ಬಂತು? ಪರಲೋಕದಿಂದಲೋ? ಮನುಷ್ಯರಿಂದಲೋ ಅಂದನು. ಆಗ ಅವರು—

---

[1] ಯೆಶಾಯ ೫೬, ೭. [2] ಯೆರೆಮಿಾಯ ೭, ೧೧.
[3] ಕೀರ್ತನೆ ೮, ೨.

ಪರಲೋಕದಿಂದ ಬಂತೆಂದು ನಾವು ಹೇಳಿದರೆ, ಹಾಗಾದರೆ ನೀವು ಅವನನ್ನು ಯಾಕೆ ನಂಬಲಿಲ್ಲ ಅಂದಾನು; 26 ಮನುಷ್ಯರಿಂದ ಬಂತೆಂದರೆ, ನಮಗೆ ಜನರ ಭಯವದೆ; ಯೋಹಾನನು ಪ್ರವಾದಿಯೆಂದು ಎಲ್ಲರೂ ಎಣಿಸಿದ್ದಾರಲ್ಲಾ ಎಂಬದಾಗಿ ತಮ್ಮತಮ್ಮೊಳಗೆ ಮಾತಾಡಿಕೊಂಡರು. 27 ಕಡೆಗೆ ಅವರು—ನಾವರಿಯೆವು ಎಂದು ಯೇಸುವಿಗೆ ಉತ್ತರಕೊಟ್ಟರು. ಆಗ ಆತನು ಅವರಿಗೆ—ಯಾವ ಅಧಿಕಾರದಿಂದ ನಾನಿದನ್ನೆಲ್ಲಾ ಮಾಡುತ್ತೇನೋ ಅದನ್ನು ನಾನೂ ನಿಮಗೆ ಹೇಳುವದಿಲ್ಲ.

28 ಆದರೆ ನಿಮಗೆ ಹ್ಯಾಗೆ ತೋರುತ್ತದೆ? ಒಬ್ಬ ಮನುಷ್ಯನಿಗೆ ಇಬ್ಬರು ಮಕ್ಕಳಿದ್ದರು. ಅವನು ಮೊದಲನೆಯವನ ಬಳಿಗೆ ಬಂದು—ಮಗನೇ, ಹೋಗಿ ಈ ಹೊತ್ತು ದ್ರಾಕ್ಷೇತೋಟದಲ್ಲಿ ಕೆಲಸಮಾಡು ಅಂದಾಗ 29 ಅವನು—ನಾನು ಹೋಗುವದಿಲ್ಲವೆಂದು ಹೇಳಿದಾಗ್ಯೂ ತರುವಾಯ ಪಶ್ಚಾತ್ತಾಪಪಟ್ಟು ತೋಟಕ್ಕೆ ಹೋದನು. 30 ಆ ಮೇಲೆ ಎರಡನೆಯವನ ಬಳಿಗೆ ಬಂದು ಅದೇ ಮಾತನ್ನು ಹೇಳಿದಾಗ ಅವನು—ಹೋಗುತ್ತೇನಪ್ಪಾ ಅಂದಾಗ್ಯೂ ಹೋಗಲೇ ಇಲ್ಲ. 31 ಅವರಿಬ್ಬರಲ್ಲಿ ತಂದೆಯ ಚಿತ್ತದಂತೆ ನಡೆದವನು ಯಾರು ಎಂದು ಕೇಳಿದ್ದಕ್ಕೆ ಅವರು—ಮೊದಲನೆಯವನೇ ಅಂದರು. ಆಗ ಯೇಸು ಅವರಿಗೆ—ಭ್ರಷ್ಟರೂ[1] ಸೂಳೆಯರೂ ನಿಮಗಿಂತ ಮೊದಲು ದೇವರರಾಜ್ಯವನ್ನು ಸೇರುವರು ಎಂದು ನಿಮಗೆ ಸತ್ಯವಾಗಿ ಹೇಳುತ್ತೇನೆ. 32 ಯೋಹಾನನು ಧರ್ಮಮಾರ್ಗವನ್ನು ಬೋಧಿಸುವವನಾಗಿ ನಿಮ್ಮ ಬಳಿಗೆ ಬಂದನು, ನೀವು ಅವನನ್ನು ನಂಬಲಿಲ್ಲ; ಸುಂಕದವರೂ ಸೂಳೆಯರೂ ಅವನನ್ನು ನಂಬಿದರು; ನೀವು ಇದನ್ನು ನೋಡಿದಾಗ್ಯೂ ಪಶ್ಚಾತ್ತಾಪಪಡಲಿಲ್ಲ, ಅವನನ್ನು ನಂಬಲಿಲ್ಲ.

33 ಮತ್ತೊಂದು ಸಾಮ್ಯವನ್ನು ಕೇಳಿರಿ—ಒಬ್ಬ ಮನೇಯಜಮಾನನಿದ್ದನು. ಅವನು ಒಂದು ದ್ರಾಕ್ಷೇತೋಟವನ್ನು ಮಾಡಿ[2], ಅದರ ಸುತ್ತಲೂ ಬೇಲೀಹಾಕಿಸಿ, ಅದರಲ್ಲಿ ದ್ರಾಕ್ಷೇ ಆಲೆಯನ್ನು ಮಾಡಿಸಿ, ಹೂಡೆಯನ್ನು ಕಟ್ಟಿಸಿ, ಒಕ್ಕಲಿಗರಿಗೆ ವಾರಕ್ಕೆ[3] ಕೊಟ್ಟು, ಬೇರೊಂದು ದೇಶಕ್ಕೆ ಹೋದನು. 34 ಫಲಕಾಲ ಹತ್ತರವಾದಾಗ, ತನಗೆ ಬರಬೇಕಾದ ಹಣ್ಣುಗಳನ್ನು ತೆಗೆದುಕೊಳ್ಳುವದಕ್ಕಾಗಿ ಆ ಒಕ್ಕಲಿಗರ ಬಳಿಗೆ ತನ್ನ ಆಳುಗಳನ್ನು ಕಳುಹಿಸಲು, 35 ಒಕ್ಕಲಿಗರು ಅವನ ಆಳುಗಳನ್ನು ಹಿಡುಕೊಂಡು, ಒಬ್ಬನನ್ನು ಹೊಡೆದರು, ಒಬ್ಬನನ್ನು ಕಡಿದು ಹಾಕಿದರು, ಒಬ್ಬನನ್ನು ಕಲ್ಲೆಸೆದು ಕೊಂದರು. 36 ಆ ಮೇಲೆ ಮೊದಲಿನವರಿಗಿಂತ ಹೆಚ್ಚು ಮಂದಿ ಆಳುಗಳನ್ನು ಕಳುಹಿಸಲು, ಅವರಿಗೂ ಹಾಗೆಯೇ ಮಾಡಿದರು. 37 ಕಡೆಯಲ್ಲಿ, ನನ್ನ ಮಗನಿಗೆಯಾದರೆ ಮರ್ಯಾದೆ ತೋರಿಸ್ಯಾರು ಅಂದುಕೊಂಡು, ತನ್ನ ಮಗನನ್ನು ಕಳುಹಿಸಿದನು. 38 ಆದರೆ ಒಕ್ಕಲಿಗರು ಅವನ ಮಗನನ್ನು ಕಂಡಾಗ—ಇವನೇ ಬಾಧ್ಯಸ್ಥನು, ಬನ್ನಿ, ಇವನನ್ನು ಕೊಂದುಹಾಕೋಣ, ಆಗ ಇವನ ಸ್ವಾಸ್ತ್ಯ ನಮ್ಮದಾಗುವದು ಎಂದು ತಮ್ಮತಮ್ಮೊಳಗೆ ಮಾತಾಡಿಕೊಂಡು, 39 ಅವನನ್ನು ಹಿಡಿದು ದ್ರಾಕ್ಷೇತೋಟದಿಂದ ಹೊರಗೆ ದೊಬ್ಬಿ ಕೊಂದುಹಾಕಿದರು. 40 ಹಾಗಾದರೆ ದ್ರಾಕ್ಷೇತೋಟದ ಧಣಿಯು ಬಂದಾಗ ಆ ಒಕ್ಕಲಿಗರಿಗೆ ಏನು ಮಾಡುವನೆನ್ನುತ್ತೀರಿ ಅಂದನು.

---

[1] ಮೂಲ: ಸುಂಕದವರೂ. [2] ಯೆಶಾಯ ೫, ೧. ೨.
[3] ಅಥವಾ, ಕೋರಿಗೆ.

41 ಅವರು ಆತನಿಗೆ—ಆ ಕೆಡಕರನ್ನು ಕ್ರೂರವಾಗಿ ಕೊಂದುಹಾಕಿ, ಕಾಲಕಾಲಕ್ಕೆ ಹಣ್ಣುಗಳನ್ನು ತನಗೆ ಸಲ್ಲಿಸುವಂಥ ಬೇರೆ ಒಕ್ಕಲಿಗರಿಗೆ ಆ ದ್ರಾಕ್ಷೇತೋಟವನ್ನು ವಾರಕ್ಕೆ
42 ಕೊಡುವನು ಎಂದು ಹೇಳಿದರು. ಯೇಸು ಅವರಿಗೆ—

ಮನೇ ಕಟ್ಟುವವರು ಬೇಡವೆಂದು ಬಿಟ್ಟ ಕಲ್ಲೇ
ಮುಖ್ಯವಾದ ಮೂಲೆಗಲ್ಲಾಯಿತು.
ಈ ಕಾರ್ಯವು ಕರ್ತನಿಂದಲೇ ಆಯಿತು;
ಅದು ನಮಗೆ ಆಶ್ಚರ್ಯವಾಗಿ ತೋರುತ್ತದೆ[1]

43 ಎಂಬುವ ಮಾತನ್ನು ನೀವು ಶಾಸ್ತ್ರದಲ್ಲಿ ಎಂದಾದರೂ ಓದಲಿಲ್ಲವೋ? ಆದದರಿಂದ ದೇವರರಾಜ್ಯವು ನಿಮ್ಮಿಂದ ತೆಗೆಯಲ್ಪಟ್ಟು, ಅದರ ಫಲಗಳನ್ನು ಕೊಡುವ ಜನಕ್ಕೆ ಕೊಡ
44 ಲಾಗುವದು. ಈ ಕಲ್ಲಿನ ಮೇಲೆ ಬೀಳುವವನು ತುಂಡುತುಂಡಾಗುವನು; ಇದು ಯಾರ
45 ಮೇಲೆ ಬೀಳುತ್ತದೋ, ಅವನನ್ನು ಪುಡಿಪುಡಿಮಾಡುವದು ಎಂದು ಹೇಳಿದನು[2]. ಮಹಾ ಯಾಜಕರೂ ಫರಿಸಾಯರೂ ಆತನ ಸಾಮ್ಯಗಳನ್ನು ಕೇಳಿ, ತಮ್ಮನ್ನು ಕುರಿತು ಮಾತಾ
46 ಡುತ್ತಾನೆಂದು ತಿಳುಕೊಂಡು ಆತನನ್ನು ಹಿಡಿಯಬೇಕೆಂದಿದ್ದರು; ಆದರೆ ಜನರು ಆತನನ್ನು ಪ್ರವಾದಿಯೆಂದು ಎಣಿಸಿದ್ದರಿಂದ ಅವರಿಗೆ ಹೆದರಿಕೊಂಡು ಹಿಡಿಯದೆ ಹೋದರು.

**22** ಯೇಸು ಬೋಧನೆ ಮಾಡುತ್ತಾ ಇನ್ನೂ ಸಾಮ್ಯರೂಪವಾಗಿ ಅವರಿಗೆ ಹೇಳಿದ್ದೇ
2 ನಂದರೆ—ಪರಲೋಕರಾಜ್ಯವು ಮಗನಿಗೆ ಮದುವೆಮಾಡಿದ ಒಬ್ಬ ಅರಸನಿಗೆ ಹೋಲಿಕೆ
3 ಯಾಗಿದೆ. ಅವನು ಮದುವೆಗೆ ಹೇಳಿಸಿಕೊಂಡವರನ್ನು ಕರೆಯುವದಕ್ಕೆ ತನ್ನ ಆಳುಗಳನ್ನು
4 ಕಳುಹಿಸಲು ಬರುವದಕ್ಕೆ ಅವರಿಗೆ ಮನಸ್ಸಿರಲಿಲ್ಲ. ತಿರಿಗಿ ಬೇರೆ ಆಳುಗಳನ್ನು ಕರೆದು—ನೀವು ಊಟಕ್ಕೆ ಹೇಳಿಸಿಕೊಂಡವರ ಬಳಿಗೆ ಹೋಗಿ—ಇಗೋ, ಅಡಿಗೆ ಸಿದ್ಧವಾಗಿದೆ; ನನ್ನ ಹೋರಿಗಳನ್ನೂ ಕೊಬ್ಬಿದ ಪಶುಗಳನ್ನೂ ಕೊಯಿಸಿದ್ದೇನೆ; ಎಲ್ಲಾ ಸಿದ್ಧವಾಗಿದೆ; ಮದುವೇ ಊಟಕ್ಕೆ ಬನ್ನಿರೆಂಬದಾಗಿ ಅವರಿಗೆ ಹೇಳಿರೆಂದು ಅಪ್ಪಣೆಕೊಟ್ಟು ಕಳುಹಿಸಿ
5 ದನು. ಆದರೆ ಅವರು ಅಲಕ್ಷ್ಯ ಮಾಡಿ, ಒಬ್ಬನು ತನ್ನ ಹೊಲಕ್ಕೆ ಒಬ್ಬನು ತನ್ನ
6 ವ್ಯಾಪಾರಕ್ಕೆ ಹೋಗಿಬಿಟ್ಟರು; ಉಳಿದವರು ಅವನ ಆಳುಗಳನ್ನು ಹಿಡಿದು ಬೈದು
7 ಕೊಂದುಹಾಕಿದರು. ಅರಸನು ಸಿಟ್ಟುಗೊಂಡು ತನ್ನ ದಂಡುಗಳನ್ನು ಕಳುಹಿಸಿ ಆ
8 ಕೊಲೆಗಾರರನ್ನು ನಾಶಮಾಡಿ ಅವರ ಪಟ್ಟಣವನ್ನು ಸುಟ್ಟುಬಿಟ್ಟನು. ಆಗ ತನ್ನ ಆಳುಗಳಿಗೆ—ಮದುವೆಗೆ ಸಿದ್ಧವಾಗಿದೆ ಸರಿ, ಆದರೆ ಕರೆಯಲ್ಪಟ್ಟವರು ಯೋಗ್ಯರಾಗಿರಲಿಲ್ಲ.
9 ನೀವು ಈಗ ನಾಲ್ಕು ಹಾದಿಗಳು ಕೂಡುವ ಸ್ಥಳಗಳಿಗೆ ಹೋಗಿ, ಕಂಡವರನ್ನೆಲ್ಲಾ ಮದು
10 ವೇಊಟಕ್ಕೆ ಕರೆಯಿರಿ ಎಂದು ಹೇಳಿದನು. ಆ ಆಳುಗಳು ಹಾದಿಗಳಿಗೆ ಹೋಗಿ, ಕೆಟ್ಟವರು ಒಳ್ಳೆಯವರು ಅನ್ನದೆ, ಕಂಡವರನ್ನೆಲ್ಲಾ ಕೂಡಿಸಿ ಕರಕೊಂಡುಬಂದರು.
11 ಹೀಗೆ ಮನೆತುಂಬ ಊಟಕ್ಕೆ ಕೂತರು. ಆ ಮೇಲೆ ಅರಸನು ಕೂತವರನ್ನು ನೋಡುವದಕ್ಕೆ ಒಳಕ್ಕೆ ಬರಲಾಗಿ, ಮದುವೇಬಟ್ಟೆಯನ್ನು ಹಾಕಿಕೊಳ್ಳದ ಒಬ್ಬನನ್ನು ಕಂಡು
12 ಅವನನ್ನು—ಏನಪ್ಪಾ, ಮದುವೇಬಟ್ಟೆ ಇಲ್ಲದೆ ನೀನಿಲ್ಲಿ ಹ್ಯಾಗೆ ಒಳಕ್ಕೆ ಬಂದಿ ಎಂದು

---

[1] ಕೀರ್ತನೆ ೧೧೮, ೨೨. ೨೩.  [2] ಕೆಲವು ಪ್ರತಿಗಳಲ್ಲಿ ೪೪ನೇ ವಚನವಿಲ್ಲ.

ಕೇಳಲು, ಅವನು ಸುಮ್ಮನಿದ್ದನು. ಆ ಮೇಲೆ ಅರಸನು ಸೇವಕರಿಗೆ—ಅವನ ಕೈಕಾಲು 13 ಕಟ್ಟಿ ಅವನನ್ನು ಹೊರಗೆ ಕತ್ತಲೆಗೆ ನೂಕಿರಿ ಎಂದು ಹೇಳಿದನು. ಅಲ್ಲಿ ಗೋಳಾಟವೂ ಕಟಕಟನೆ ಹಲ್ಲುಕಡಿಯೋಣವೂ ಇರುವವು. ಹೀಗೆ ಕರೆಯಲ್ಪಟ್ಟವರು ಬಹು ಜನ, 14 ಆಯಲ್ಪಟ್ಟವರು ಸ್ವಲ್ಪ ಜನ ಅಂದನು.

ಅನೇಕರು ಯೇಸುವನ್ನು ಮಾತಿನಲ್ಲಿ ಸಿಕ್ಕಿಸುವದಕ್ಕೆ ಪ್ರಯತ್ನಮಾಡಿ ಸೋತುಹೋದದ್ದು.
(ಮಾರ್ಕ 12, 13—37; ಲೂಕ 20, 20—44.)

ಆಗ್ಯೆ ಫರಿಸಾಯರು ಹೊರಟು ಆತನನ್ನು ಮಾತಿನಲ್ಲಿ ಹ್ಯಾಗೆ ಸಿಕ್ಕಿಸುವ ಎಂದು 15 ಕೂಡಿ ಆಲೋಚಿಸಿಕೊಂಡು, ಆತನ ಬಳಿಗೆ ತಮ್ಮ ಶಿಷ್ಯರನ್ನು ಹೆರೋದಿಯರ ಕೂಡ 16 ಕಳುಹಿಸಿದರು. ಇವರು ಬಂದು—ಗುರುವೇ, ನೀನು ಸತ್ಯವಂತನು, ದೇವರ ಮಾರ್ಗ ವನ್ನು ಸತ್ಯವಾಗಿ ಬೋಧಿಸುವವನು, ಯಾರಿಗೂ ಹೆದರದವನು; ನೀನು ಜನರ ಮುಖದಿ ಚ್ಛೆಗೆ ಮಾತಾಡುವವನಲ್ಲ; ಇದೆಲ್ಲಾ ನಮಗೆ ಗೊತ್ತಾಗಿದೆ. ಹೀಗಿರಲಾಗಿ, ಕೈಸರನಿಗೆ 17 ತೆರಿಗೆ ಕೊಡುವದು ಸರಿಯೋ ಸರಿಯಲ್ಲವೋ? ನಿನಗೆ ಹ್ಯಾಗೆ ತೋರುತ್ತದೆ? ನಮಗೆ ಹೇಳು ಅಂದರು. ಯೇಸು ಅವರ ಕೆಡಕನ್ನು ತಿಳಿದು—ಕಪಟಿಗಳೇ, ನನ್ನನ್ನು 18 ಯಾಕೆ ಪರೀಕ್ಷೆಮಾಡುತ್ತೀರಿ? ತೆರಿಗೆಗೆ ಕೊಡುವ ನಾಣ್ಯವನ್ನು ನನಗೆ ತೋರಿಸಿರಿ 19 ಅನ್ನಲು, ಅವರು ಒಂದು ಹಣವನ್ನು ಆತನ ಕೈಗೆ ಕೊಟ್ಟರು. ಆತನು—ಈ ತಲೆಯೂ 20 ಈ ಮುದ್ರೆಯೂ ಯಾರದು ಎಂದು ಕೇಳಿದಾಗ, ಅವರು—ಅದು ಕೈಸರನದು ಅಂದರು. 21 ಆಗ ಆತನು—ಹಾಗಾದರೆ ಕೈಸರನದನ್ನು ಕೈಸರನಿಗೆ ಕೊಡಿರಿ; ದೇವರದನ್ನು ದೇವರಿಗೆ ಕೊಡಿರಿ ಅಂದನು. ಅವರು ಈ ಮಾತನ್ನು ಕೇಳಿ ಆಶ್ಚರ್ಯಪಟ್ಟು ಆತನನ್ನು ಬಿಟ್ಟು 22 ಹೋದರು.

ಅದೇ ದಿನದಲ್ಲಿ ಸದ್ದುಕಾಯರೂ ಆತನ ಬಳಿಗೆ ಬಂದರು. ಇವರು ಪುನರುತ್ಥಾನ 23 ವಿಲ್ಲ ಅನ್ನುವವರು[1]. ಇವರು ಆತನಿಗೆ ಪ್ರಶ್ನೆಮಾಡಿದ್ದೇನಂದರೆ—ಗುರುವೇ, ಒಬ್ಬನು 24 ಮಕ್ಕಳಿಲ್ಲದೆ ಸತ್ತರೆ, ಅವನ ಹೆಂಡತಿಯನ್ನು ಅವನ ತಮ್ಮನು ಮದುವೆಮಾಡಿಕೊಂಡು ತನ್ನ ಅಣ್ಣನಿಗೆ ಸಂತಾನವನ್ನು ಹುಟ್ಟಿಸಬೇಕೆಂದು[2] ಮೋಶೆಯು ಹೇಳಿದನಷ್ಟೆ. ಆದರೆ 25 ನಮ್ಮಲ್ಲಿ ಏಳು ಮಂದಿ ಅಣ್ಣತಮ್ಮಂದಿರಿದ್ದರು. ಮೊದಲನೆಯವನು ಮದುವೆಯಾಗಿ ತೀರಿಹೋದನು. ಅವನಿಗೆ ಸಂತಾನವಿಲ್ಲದಕಾರಣ ಹೆಂಡತಿಯನ್ನು ತನ್ನ ತಮ್ಮನಿಗೆ ಬಿಟ್ಟನು; ಅದರಂತೆ ಎರಡನೆಯವನೂ ಮೂರನೆಯವನೂ ಮುಂತಾದವರು ಏಳನೆಯ 26 ವನ ವರೆಗೂ ಮಾಡಿದರು. ಅವರೆಲ್ಲರು ಸತ್ತ ಮೇಲೆ ಆ ಹೆಂಗಸೂ ಸತ್ತಳು. ಹಾಗಾ 27, 28 ದರೆ ಪುನರುತ್ಥಾನದಲ್ಲಿ ಆಕೆ ಆ ಏಳು ಮಂದಿಯಲ್ಲಿ ಯಾರ ಹೆಂಡತಿಯಾಗಿರುವಳು? ಆಕೆ ಅವರೆಲ್ಲರಿಗೂ ಹೆಂಡತಿಯಾಗಿದ್ದಳಷ್ಟೆ ಅಂದರು. ಅದಕ್ಕೆ ಯೇಸು ಉತ್ತರವಾಗಿ 29 ಅವರಿಗೆ—ನೀವು ಶಾಸ್ತ್ರವನ್ನಾದರೂ ದೇವರ ಶಕ್ತಿಯನ್ನಾದರೂ ತಿಳಿಯದೆ ತಪ್ಪುವವರಾಗಿ ದ್ದೀರಿ; ಪುನರುತ್ಥಾನವಾದ ಮೇಲೆ ಮದುವೆಮಾಡಿಕೊಳ್ಳುವದೂ ಇಲ್ಲ, ಮದುವೆಮಾಡಿ 30

[1] ಪುನರುತ್ಥಾನವು ಅಂದರೆ ಸತ್ತವರು ತಿರಿಗಿ ಬದುಕಿ ಏಳುವದು ಎಂದು ಅರ್ಥ.

[2] ದ್ವಿತೀಯ ನ್ಯಾಯ ೨೫, ೫.

31, 32 ಕೊಡುವದೂ ಇಲ್ಲ; ಪರಲೋಕದಲ್ಲಿರುವ ದೇವದೂತರಂತೆ ಇರುತ್ತಾರೆ. ಸತ್ತವರ ಪುನರುತ್ಥಾನದ ವಿಷಯವಾಗಿ ಹೇಳಬೇಕಾದರೆ—ನಾನು ಅಬ್ರಹಾಮನ ದೇವರು, ಇಸಾಕನ ದೇವರು, ಯಾಕೋಬನ ದೇವರು ಎಂದು[1] ದೇವರು ನಿಮಗೆ ನುಡಿದದ್ದನ್ನು ನೀವು ಓದಲಿಲ್ಲವೇ? ಆತನು ಜೀವಿತರಿಗೆ ದೇವರಾಗಿದ್ದಾನೆ ಹೊರತು ಜೀವವಿಲ್ಲದವರಿಗೆ ದೇವ
33 ರಲ್ಲ ಎಂದು ಹೇಳಿದನು. ಜನರು ಅದನ್ನು ಕೇಳಿ ಆತನ ಬೋಧನೆಗೆ ಆಶ್ಚರ್ಯಪಟ್ಟರು.
34 ಆತನು ಸದ್ದುಕಾಯರ ಬಾಯಿ ಕಟ್ಟಿದನೆಂದು ಫರಿಸಾಯರು ಕೇಳಿ ಅಲ್ಲಿಗೆ ಕೂಡಿ
35 ಬಂದರು. ಅವರಲ್ಲಿದ್ದ ಒಬ್ಬ ಧರ್ಮೋಪದೇಶಕನು ಆತನನ್ನು ಪರೀಕ್ಷೆಮಾಡಬೇಕೆಂದು
36 ಆತನಿಗೆ—ಗುರುವೇ, ಧರ್ಮಶಾಸ್ತ್ರದಲ್ಲಿ ಯಾವ ಆಜ್ಞೆ ಮುಖ್ಯವಾದದ್ದು ಎಂದು ಪ್ರಶ್ನೆ ಹಾಕಿ
37 ದನು. ಅದಕ್ಕೆ ಆತನು—ನಿನ್ನ ದೇವರಾದ ಕರ್ತನನ್ನು ನಿನ್ನ ಪೂರ್ಣ ಮನಸ್ಸಿನಿಂದಲೂ ನಿನ್ನ ಪೂರ್ಣ ಪ್ರಾಣದಿಂದಲೂ ನಿನ್ನ ಪೂರ್ಣ ಬುದ್ಧಿಯಿಂದಲೂ ಪ್ರೀತಿಸಬೇಕು[2] ಎಂಬುವ
38, 39 ಆಜ್ಞೆಯೇ ಮುಖ್ಯವಾದದ್ದು ಮತ್ತು ಮೊದಲನೇದು. ಇದಕ್ಕೆ ಸಮಾನವಾದ ಎರಡನೇ ಆಜ್ಞೆ ಒಂದು ಉಂಟು, ಅದು ಯಾವದಂದರೆ—ನೀನು ನಿನ್ನನ್ನು ಪ್ರೀತಿಸಿಕೊಳ್ಳು
40 ವಂತೆ ನಿನ್ನ ನೆರೆಯವನನ್ನು ಪ್ರೀತಿಸಬೇಕು[3] ಎಂಬುವದೇ. ಈ ಎರಡು ಆಜ್ಞೆಗಳು ಎಲ್ಲಾ ಧರ್ಮಶಾಸ್ತ್ರಕ್ಕೂ ಪ್ರವಾದನಗ್ರಂಥಕ್ಕೂ ಆಧಾರವಾಗಿವೆ ಎಂದು ಹೇಳಿದನು.
41, 42 ಫರಿಸಾಯರು ಕೂಡಿಬಂದಿರುವಾಗ, ಯೇಸು ಅವರಿಗೆ—ಬರಬೇಕಾದ ಕ್ರಿಸ್ತನ ವಿಷಯವಾಗಿ ನಿಮಗೆ ಹ್ಯಾಗೆ ತೋರುತ್ತದೆ? ಆತನು ಯಾರ ಮಗನು? ಎಂದು ಪ್ರಶ್ನೆ
43, 44 ಹಾಕಿದ್ದಕ್ಕೆ, ಅವರು ಆತನಿಗೆ—ದಾವೀದನ ಮಗನು ಎಂದು ಹೇಳಲು, ಆತನು—ಹಾಗಾದರೆ

> ನಾನು ನಿನ್ನ ವಿರೋಧಿಗಳನ್ನು ನಿನ್ನ ಕಾಲಿನ ಕೆಳಗೆ ಹಾಕುವ ತನಕ
> ನನ್ನ ಬಲಗಡೆಯಲ್ಲಿ ಕೂತುಕೊಂಡಿರು ಎಂದು
> ಕರ್ತನು ನನ್ನ ಒಡೆಯನಿಗೆ ನುಡಿದನು[4]

ಎಂಬುವ ಮಾತಿನಲ್ಲಿ ದಾವೀದನು ಪವಿತ್ರಾತ್ಮಪ್ರೇರಿತನಾಗಿ ಆತನನ್ನು ಒಡೆಯನು ಅನ್ನು
45 ವದು ಹ್ಯಾಗೆ? ದಾವೀದನು ಆತನನ್ನು ಒಡೆಯನೆಂದು ಹೇಳಿದ ಮೇಲೆ, ಆತನು ಅವ
46 ನಿಗೆ ಮಗನಾಗುವದು ಹ್ಯಾಗೆ? ಅಂದನು. ಅದಕ್ಕೆ ಉತ್ತರವಾಗಿ ಯಾರೂ ಒಂದು ಮಾತಾದರೂ ಆತನಿಗೆ ಹೇಳಲಾರದೆಹೋದರು. ಇದಲ್ಲದೆ ಅಂದಿನಿಂದ ಆತನನ್ನು ಇನ್ನೇನಾದರೂ ಕೇಳುವದಕ್ಕೆ ಯಾರಿಗೂ ಧೈರ್ಯ ಹುಟ್ಟಲಿಲ್ಲ.

### ಯೇಸು ಶಾಸ್ತ್ರಿಗಳನ್ನೂ ಫರಿಸಾಯರನ್ನೂ ಗದರಿಸಿದ್ದು; ಯೆರೂಸಲೇಮಿನ ವಿಷಯದಲ್ಲಿ ದುಃಖಪಟ್ಟದ್ದು.

(ಮಾರ್ಕ 12, 38—40; ಲೂಕ 20, 45—47; 11, 39—54; 13, 34. 35.)

**23** 2 ತರುವಾಯ ಯೇಸು ಜನರಿಗೂ ತನ್ನ ಶಿಷ್ಯರಿಗೂ ಹೇಳಿದ್ದೇನಂದರೆ—ಶಾಸ್ತ್ರಿಗಳೂ ಫರಿ
3 ಸಾಯರೂ ಮೋಶೆಯ ಪೀಠದಲ್ಲಿ ಕೂತುಕೊಂಡಿದ್ದಾರೆ; ಆದದರಿಂದ ಅವರು ನಿಮಗೆ ಏನೇನು ಹೇಳುತ್ತಾರೋ ಅದನ್ನೆಲ್ಲಾ ಮಾಡಿರಿ, ಕಾಪಾಡಿಕೊಳ್ಳಿರಿ; ಆದರೆ ಅವರ ನಡ

[1] ಹೊರಡೋಣ ೩, ೬. [2] ದ್ವಿತೀಯ ನ್ಯಾಯ ೬, ೫. [3] ಲೇವಿಕ ೧೯, ೧೮.
[4] ಕೀರ್ತನೆ ೧೧೦, ೧.

ತೆಯ ಪ್ರಕಾರ ನಡೆಯಬೇಡಿರಿ; ಅವರು ಹೇಳುತ್ತಾರೇ ಹೊರತು ನಡೆಯುವದಿಲ್ಲ.
ಅವರು[1] ಭಾರವಾದ ಹೊರೆಗಳನ್ನು ಕಟ್ಟಿ, ಜನರ ಹೆಗಲಿನ ಮೇಲೆ ಹೊರಿಸುತ್ತಾರೆ; 4
ತಾವಾದರೋ ಒಂದು ಬೆರಳಿನಿಂದಲಾದರೂ ಅವುಗಳನ್ನು ಕದಲಿಸಲೊಲ್ಲರು. ಅವರು 5
ತಮ್ಮ ಕೆಲಸಗಳನ್ನೆಲ್ಲಾ ಜನರಿಗೆ ಕಾಣಬೇಕೆಂದು ಮಾಡುತ್ತಾರೆ. ತಾವು ಕಟ್ಟಿಕೊಳ್ಳುವ
ಜ್ಞಾಪಕಪಟ್ಟಿಗಳನ್ನು[2] ಅಗಲಮಾಡುತ್ತಾರೆ, ಗೊಂಡೆಗಳನ್ನು ಉದ್ದ ಮಾಡುತ್ತಾರೆ.
ಇದಲ್ಲದೆ ಔತಣಪ್ರಸ್ತಗಳಲ್ಲಿ ಮೇಲ್ಪಂಕ್ತಿ, ಸಭಾಮಂದಿರಗಳಲ್ಲಿ ಮುಖ್ಯ ಪೀಠಗಳು, 6
ಅಂಗಡೀಬೀದಿಗಳಲ್ಲಿ ನಮಸ್ಕಾರಗಳು, ಜನರಿಂದ ಬೋಧಕರನ್ನಿಸಿಕೊಳ್ಳುವದು, ಇವು 7
ಗಳೇ ಅವರಿಗೆ ಇಷ್ಟ. ಆದರೆ ನೀವು ಬೋಧಕರನ್ನಿಸಿಕೊಳ್ಳಬೇಡಿರಿ; ಒಬ್ಬನೇ ನಿಮ್ಮ 8
ಬೋಧಕನು, ನೀವೆಲ್ಲರು ಸಹೋದರರು. ಇದಲ್ಲದೆ ಭೂಲೋಕದಲ್ಲಿ ಯಾರನ್ನೂ 9
ನಮ್ಮ ತಂದೆ ಎಂದು ಕರೆಯಬೇಡಿರಿ; ಪರಲೋಕದಲ್ಲಿರುವಾತನೊಬ್ಬನೇ ನಿಮಗೆ ತಂದೆ.
ಮತ್ತು ಗುರುಗಳು ಅನ್ನಿಸಿಕೊಳ್ಳಬೇಡಿರಿ; ಕ್ರಿಸ್ತನೊಬ್ಬನೇ ನಿಮಗೆ ಗುರುವು. ನಿಮ್ಮಲ್ಲಿ 10, 11
ಹೆಚ್ಚಿನವನು ನಿಮ್ಮ ಸೇವಕನಾಗಿರಬೇಕು. ತನ್ನನ್ನು ಹೆಚ್ಚಿಸಿಕೊಳ್ಳುವವನು ತಗ್ಗಿಸಲ್ಪಡು 12
ವನು, ತನ್ನನ್ನು ತಗ್ಗಿಸಿಕೊಳ್ಳುವವನು ಹೆಚ್ಚಿಸಲ್ಪಡುವನು.

ಅಯ್ಯೋ, ಕಪಟಿಗಳಾದ ಶಾಸ್ತ್ರಿಗಳೇ, ಫರಿಸಾಯರೇ, ಪರಲೋಕರಾಜ್ಯದ ಬಾಗ 13
ಲನ್ನು ಮನುಷ್ಯರ ಎದುರಿಗೆ ಮುಚ್ಚಿಬಿಡುತ್ತೀರಿ; ನೀವೂ ಒಳಕ್ಕೆ ಹೋಗುವದಿಲ್ಲ,
ಹೋಗುವವರನ್ನೂ ಹೋಗಗೊಡಿಸುವದಿಲ್ಲ[3].

ಅಯ್ಯೋ, ಕಪಟಿಗಳಾದ ಶಾಸ್ತ್ರಿಗಳೇ, ಫರಿಸಾಯರೇ, ನೀವು ಒಬ್ಬನನ್ನು ನಿಮ್ಮ ಮತ 15
ದಲ್ಲಿ ಸೇರಿಸಿಕೊಳ್ಳುವದಕ್ಕಾಗಿ ಭೂಮಿಯನ್ನೂ ಸಮುದ್ರವನ್ನೂ ಸುತ್ತಿಕೊಂಡು ಬರು
ತ್ತೀರಿ; ಅವನು ಸೇರಿದ ಮೇಲೆ ಅವನನ್ನು ನಿಮಗಿಂತ ಎರಡಷ್ಟಾಗಿ ನರಕಪಾತ್ರನಾಗ
ಮಾಡುತ್ತೀರಿ.

ಅಯ್ಯೋ, ದಾರಿತೋರಿಸುವ ಕುರುಡರೇ, ಒಬ್ಬನು ದೇವಾಲಯದ ಮೇಲೆ ಆಣೆ 16
ಯಿಟ್ಟುಕೊಂಡರೆ ಅದೇನು ಆಣೆಯಲ್ಲ, ಆದರೆ ಒಬ್ಬನು ದೇವಾಲಯದ ಚಿನ್ನದ ಮೇಲೆ
ಆಣೆಯಿಟ್ಟುಕೊಂಡರೆ ಅದನ್ನು ನಡಿಸಲೇಬೇಕು ಎಂದು ನೀವು ಹೇಳುತ್ತೀರಿ. ಹುಚ್ಚರೇ, 17
ಕುರುಡರೇ, ಯಾವದು ಹೆಚ್ಚಿನದು? ಚಿನ್ನವೋ, ಚಿನ್ನವನ್ನು ಪಾವನಮಾಡುವ ದೇವಾ
ಲಯವೋ? ಒಬ್ಬನು ಯಜ್ಞವೇದಿಯಮೇಲೆ ಆಣೆಯಿಟ್ಟುಕೊಂಡರೆ ಅದೇನು ಆಣೆಯಲ್ಲ, 18
ಆದರೆ ಅದರಲ್ಲಿರುವ ಕಾಣಿಕೆಯ ಮೇಲೆ ಆಣೆಯಿಟ್ಟುಕೊಂಡರೆ ಅದನ್ನು ನಡಿಸಲೇಬೇಕು
ಎಂದು ಹೇಳುತ್ತೀರಿ. ಕುರುಡರೇ, ಯಾವದು ಹೆಚ್ಚಿನದು? ಕಾಣಿಕೆಯೋ, ಆ ಕಾಣಿ 19
ಕೆಯನ್ನು ಪಾವನಮಾಡುವ ಯಜ್ಞವೇದಿಯೋ? ಹೀಗಿರುವದರಿಂದ ಯಜ್ಞವೇದಿಯ 20
ಮೇಲೆ ಆಣೆಯಿಟ್ಟುಕೊಂಡರೆ ಅದರ ಮೇಲೆಯೂ ಅದರಲ್ಲಿರುವ ಎಲ್ಲಾದರ ಮೇಲೆಯೂ
ಆಣೆಯಿಟ್ಟುಕೊಂಡ ಹಾಗಾಯಿತು. ದೇವಾಲಯದ ಮೇಲೆ ಆಣೆಯಿಟ್ಟುಕೊಂಡರೆ 21
ಅದರ ಮೇಲೆಯೂ ಅದರಲ್ಲಿ ವಾಸಮಾಡುವಾತನ ಮೇಲೆಯೂ ಆಣೆಯಿಟ್ಟುಕೊಂಡ

---

[1] ಕೆಲವು ಪ್ರತಿಗಳಲ್ಲಿ — ಯಾರೂ ಹೊರಲಾರದಂಥಾ ಎಂದು ಬರೆದದೆ.

[2] ದ್ವಿತೀಯ ನ್ಯಾಯ ೬, ೮; ೧೧, ೧೮.

[3] ೧೪ನೇ ವಚನ ಮೂಲಗ್ರಂಥದಲ್ಲಿ ಇಲ್ಲ; ಮಾರ್ಕ ೧೨, ೪೦; ಲೂಕ ೨೦, ೪೭ ನೋಡಿರಿ.

22 ಹಾಗಾಯಿತು. ಪರಲೋಕದ ಮೇಲೆ ಆಣೆಯಿಟ್ಟುಕೊಂಡರೆ ದೇವರಸಿಂಹಾಸನದ ಮೇಲೆಯೂ ಅದರಲ್ಲಿ ಕೂತಿರುವಾತನ ಮೇಲೆಯೂ ಆಣೆಯಿಟ್ಟುಕೊಂಡ ಹಾಗಾಯಿತು.

23 ಅಯ್ಯೋ, ಕಪಟಿಗಳಾದ ಶಾಸ್ತ್ರಿಗಳೇ, ಫರಿಸಾಯರೇ, ನೀವು ಮರುಗ ಸೋಪು ಜೀರಿಗೆಗಳಲ್ಲಿ ಹತ್ತರಲ್ಲೊಂದು ಪಾಲು ಕೊಡುತ್ತೀರಿ, ಆದರೆ ಧರ್ಮಶಾಸ್ತ್ರದಲ್ಲಿ ಗೌರವವಾದ್ದನ್ನು, ಅಂದರೆ ನ್ಯಾಯವನ್ನೂ ಕರುಣೆಯನ್ನೂ ನಂಬಿಕೆಯನ್ನೂ ಬಿಟ್ಟುಬಿಟ್ಟಿರಿ.
24 ಇವುಗಳನ್ನೇ ಮಾಡಬೇಕಾಗಿತ್ತು; ಅವುಗಳನ್ನು ಬಿಡಬಾರದು. ದಾರಿತೋರಿಸುವ ಕುರುಡರೇ, ನೀವು ಸೊಳ್ಳೇ ಸೋಸುವವರು, ಒಂಟೇ ನುಂಗುವವರು.

25 ಅಯ್ಯೋ, ಕಪಟಿಗಳಾದ ಶಾಸ್ತ್ರಿಗಳೇ, ಫರಿಸಾಯರೇ, ನೀವು ಪಂಚಪಾತ್ರೆ ಬಟ್ಲುಗಳನ್ನು ಹೊರಗೆ ಶುಚಿಮಾಡುತ್ತೀರಿ; ಆದರೆ ಅವು ಒಳಗೆ ಸುಲುಕೊಂಡವುಗಳಿಂದಲೂ
26 ಇಹಭೋಗಪದಾರ್ಥಗಳಿಂದಲೂ ತುಂಬಿರುತ್ತವೆ. ಕುರುಡನಾದ ಫರಿಸಾಯನೇ, ಮೊದಲು ಪಂಚಪಾತ್ರೆ ಬಟ್ಲುಗಳ ಒಳಭಾಗವನ್ನು ಶುಚಿಮಾಡು, ಆಗ ಅವುಗಳ ಹೊರಭಾಗವೂ ಶುಚಿಯಾಗುವದು.

27 ಅಯ್ಯೋ, ಕಪಟಿಗಳಾದ ಶಾಸ್ತ್ರಿಗಳೇ, ಫರಿಸಾಯರೇ, ನೀವು ಸುಣ್ಣಾ ಹಚ್ಚಿದ ಸಮಾಧಿಗಳಿಗೆ ಹೋಲಿಕೆಯಾಗಿದ್ದೀರಿ; ಇವು ಹೊರಗೆ ಚಂದವಾಗಿ ಕಾಣುತ್ತವೆ, ಒಳಗೆ ನೋಡಿದರೆ ಸತ್ತವರ ಎಲುಬುಗಳಿಂದಲೂ ಎಲ್ಲಾ ಹೊಲಸಿನಿಂದಲೂ ತುಂಬಿರುತ್ತವೆ.
28 ಹಾಗೆಯೇ, ನೀವು ಸಹ ಹೊರಗೆ ಜನರಿಗೆ ಸತ್ಪುರುಷರಂತೆ ಕಾಣಿಸಿಕೊಳ್ಳುತ್ತೀರಿ ಸರಿ, ಆದರೆ ಒಳಗೆ ಕಪಟದಿಂದಲೂ ಅನ್ಯಾಯದಿಂದಲೂ ತುಂಬಿದವರಾಗಿದ್ದೀರಿ.

29 ಅಯ್ಯೋ, ಕಪಟಿಗಳಾದ ಶಾಸ್ತ್ರಿಗಳೇ, ಫರಿಸಾಯರೇ, ನೀವು ಪ್ರವಾದಿಗಳ ಸಮಾಧಿ
30 ಗಳನ್ನು ಕಟ್ಟಿ, ನೀತಿವಂತರ ಗೋರಿಗಳನ್ನು ಅಲಂಕರಿಸಿ—ನಾವು ನಮ್ಮ ಹಿರಿಯರ ಕಾಲದಲ್ಲಿ ಇರುತ್ತಿದ್ದರೆ ಪ್ರವಾದಿಗಳನ್ನು ಕೊಂದ ಪಾಪದಲ್ಲಿ ಪಾಲುಗಾರರಾಗುತ್ತಿರಲಿಲ್ಲ ಅನ್ನು
31 ತ್ತೀರಿ. ಹಾಗಾದರೆ ನೀವು ಪ್ರವಾದಿಗಳನ್ನು ಕೊಂದವರ ಮಕ್ಕಳೇ ಹೌದು ಎಂಬುವ
32 ದಕ್ಕೆ ನಿಮಗೆ ನೀವೇ ಸಾಕ್ಷಿಗಳಾಗಿದ್ದೀರಿ. ಒಳ್ಳೇದು, ನೀವು ನಿಮ್ಮ ಹಿರಿಯರ ಪಾಪದ
33 ಅಳತೆಯನ್ನು ಪೂರ್ತಿಮಾಡಿರಿ. ಹಾವುಗಳೇ, ಸರ್ಪಜಾತಿಯವರೇ, ನರಕದಂಡನೆಗೆ
34 ಹ್ಯಾಗೆ ತಪ್ಪಿಸಿಕೊಂಡೀರಿ? ಆದದರಿಂದ ನೋಡಿರಿ, ನಾನು ನಿಮ್ಮ ಬಳಿಗೆ ಪ್ರವಾದಿಗಳನ್ನೂ ಜ್ಞಾನಿಗಳನ್ನೂ ಶಾಸ್ತ್ರಿಗಳನ್ನೂ ಕಳುಹಿಸುತ್ತೇನೆ; ಅವರಲ್ಲಿ ಕೆಲವರನ್ನು ಕೊಲ್ಲುವಿರಿ, ಶಿಲುಬೆಗೆ ಹಾಕುವಿರಿ; ಕೆಲವರನ್ನು ನಿಮ್ಮ ಸಭಾಮಂದಿರಗಳಲ್ಲಿ ಕೊರಡೆಗಳಿಂದ
35 ಹೊಡೆದು ಊರಿಂದ ಊರಿಗೆ ಅಟ್ಟಿಕೊಂಡುಹೋಗುವಿರಿ. ಹೀಗೆ ನೀತಿವಂತನಾದ ಹೇಬೆಲನ ರಕ್ತವು ಮೊದಲ್ಗೊಂಡು ನೀವು ದೇವಾಲಯಕ್ಕೂ ಯಜ್ಞವೇದಿಗೂ ನಡುವೆ ಕೊಂದುಹಾಕಿದ ಬರಕೀಯನ ಮಗನಾದ ಜಕರೀಯನ ರಕ್ತದ ವರೆಗೂ ಭೂಮಿಯ ಮೇಲೆ ಸೋರಿಸಿದ ಎಲ್ಲಾ ನೀತಿವಂತರ ರಕ್ತದಿಂದುಂಟಾಗುವ ಅಪರಾಧವು ನಿಮ್ಮ
36 ತಲೆಯ ಮೇಲೆ ಬರುವದು. ಅದೆಲ್ಲಾ ಈ ಸಂತತಿಯವರ ಮೇಲೆ ಬರುವದೆಂದು ನಿಮಗೆ ಸತ್ಯವಾಗಿ ಹೇಳುತ್ತೇನೆ.

37 ಯೆರೂಸಲೇಮೇ, ಯೆರೂಸಲೇಮೇ, ಪ್ರವಾದಿಗಳ ಪ್ರಾಣಾ ತೆಗೆಯುವವಳೇ, ದೇವರು ನಿನ್ನ ಬಳಿಗೆ ಕಳುಹಿಸಿಕೊಟ್ಟವರನ್ನು ಕಲ್ಲೆಸೆದು ಕೊಲ್ಲುವವಳೇ, ಕೋಳಿ ತನ್ನ ಮರಿ

ಗಳನ್ನು ರೆಕ್ಕೆಗಳ ಕೆಳಗೆ ಕೂಡಿಸಿಕೊಳ್ಳುವ ಪ್ರಕಾರ ನಿನ್ನ ಮಕ್ಕಳನ್ನು ಕೂಡಿಸಿಕೊಳ್ಳು ವದಕ್ಕೆ ನನಗೆ ಎಷ್ಟೋ ಸಾರಿ ಮನಸ್ಸಿತ್ತು; ಆದರೆ ನಿಮಗೆ ಮನಸ್ಸಿಲ್ಲದೆ ಹೋಯಿತು. ನೋಡಿರಿ, ನಿಮ್ಮ ಆಲಯವು ನಿಮಗೆ ಬರೀದಾಗಿ ಬಿಟ್ಟಿದೆ. ಈಗಿನಿಂದ ಕರ್ತನ ಹೆಸರಿ 38, 39 ನಲ್ಲಿ ಬರುವವನಿಗೆ ಶುಭವಾಗಲಿ[1] ಎಂದು ನೀವು ಹೇಳುವ ತನಕ ನೀವು ನನ್ನನ್ನು ನೋಡುವದೇ ಇಲ್ಲವೆಂದು ನಿಮಗೆ ಹೇಳುತ್ತೇನೆ ಅಂದನು.

ಯೆರೂಸಲೇಮಿನ ನಾಶನವನ್ನೂ ಲೋಕಾಂತ್ಯವನ್ನೂ ಕುರಿತು ಯೇಸು ಕಾಲಜ್ಞಾನ ಹೇಳಿದ್ದು.

(ಮಾರ್ಕ 13, 1—31; ಲೂಕ 21, 5—33.)

ಆ ಮೇಲೆ ಯೇಸು ದೇವಾಲಯದಿಂದ ಹೊರಟುಹೋಗುತ್ತಿರಲು ಆತನ ಶಿಷ್ಯರು ಆತ **24** ನಿಗೆ ದೇವಾಲಯದ ಕಟ್ಟಣಗಳನ್ನು ತೋರಿಸುವದಕ್ಕೆ ಹತ್ತರಕ್ಕೆ ಬಂದರು. ಆಗ 2 ಆತನು—ಇವುಗಳನ್ನೆಲ್ಲಾ ನೋಡುತ್ತೀರಲ್ಲವೇ? ಇಲ್ಲಿ ಕಲ್ಲಿನ ಮೇಲೆ ಕಲ್ಲು ಉಳಿಯು ವದಿಲ್ಲ, ಎಲ್ಲಾ ಕೆಡವಲ್ಪಡುವದು ಎಂದು ನಿಮಗೆ ಸತ್ಯವಾಗಿ ಹೇಳುತ್ತೇನೆ ಅಂದನು.

ಬಳಿಕ ಎಣ್ಣೇಮರಗಳ ಗುಡ್ಡದ ಮೇಲೆ ಆತನು ಕೂತಿರುವಾಗ ಶಿಷ್ಯರು ಆತನ ಬಳಿಗೆ 3 ಪ್ರತ್ಯೇಕವಾಗಿ ಬಂದು—ಅದು ಯಾವಾಗ ಆಗುವದು? ನೀನು ಪ್ರತ್ಯಕ್ಷನಾಗುವದಕ್ಕೂ ಈ ಯುಗದ ಸಮಾಪ್ತಿಗೂ ಗುರುತೇನು? ನಮಗೆ ಹೇಳು ಅಂದರು. ಯೇಸು ಅವರಿಗೆ 4 ಉತ್ತರವಾಗಿ ಹೇಳಿದ್ದೇನಂದರೆ—ಯಾರಾದರೂ ನಿಮ್ಮನ್ನು ಮೋಸಗೊಳಿಸ್ಯಾರು, ನೋಡಿ ಕೊಳ್ಳಿರಿ. ಅನೇಕರು ಬಂದು ನನ್ನ ಹೆಸರನ್ನು ಎತ್ತಿಕೊಂಡು—ನಾನು ಕ್ರಿಸ್ತನು, ನಾನು 5 ಕ್ರಿಸ್ತನು ಎಂದು ಹೇಳಿ ಎಷ್ಟೋ ಜನರನ್ನು ಮೋಸಗೊಳಿಸುವರು. ಇದಲ್ಲದೆ ನೀವು 6 ಯುದ್ಧಗಳನ್ನೂ ಯುದ್ಧಗಳ ಸುದ್ದಿಗಳನ್ನೂ ಕೇಳಬೇಕಾಗಿರುವದು. ನೀವು ಕಳವಳಪಡ ದಂತೆ ನೋಡಿಕೊಳ್ಳಿರಿ; ಯಾಕಂದರೆ ಹಾಗಾಗುವದು ಅಗತ್ಯ. ಆದಾಗ್ಯೂ ಇದು ಇನ್ನೂ ಅಂತ್ಯಕಾಲವಲ್ಲ. ಜನಕ್ಕೆ ವಿರೋಧವಾಗಿ ಜನವೂ, ರಾಜ್ಯಕ್ಕೆ ವಿರೋಧವಾಗಿ 7 ರಾಜ್ಯವೂ ಏಳುವದು; ಮತ್ತು ಅಲ್ಲಲ್ಲಿ ಬರಗಳು ಬರುವವು, ಭೂಕಂಪಗಳು ಆಗು ವವು; ಇವೆಲ್ಲಾ [ನೂತನಕಾಲವು ಹುಟ್ಟುವ] ಪ್ರಸವವೇದನೆಯ ಪ್ರಾರಂಭ. ಆಗ 8, 9 ನಿಮ್ಮನ್ನು ಉಪದ್ರಕ್ಕೆ ಒಪ್ಪಿಸಿ ಕೊಲ್ಲುವರು; ಎಲ್ಲಾ ಜನಗಳು ನನ್ನ ಹೆಸರಿನ ನಿಮಿತ್ತ ವಾಗಿ ನಿಮ್ಮ ಮೇಲೆ ದ್ವೇಷಮಾಡುವರು. ಆಗ ಅನೇಕರು ಹಿಂಜರಿದು ಒಬ್ಬರನ್ನೊ 10 ಬ್ಬರು ಹಿಡುಕೊಡುವರು, ಒಬ್ಬರ ಮೇಲೊಬ್ಬರು ದ್ವೇಷಮಾಡುವರು. ಬಹು ಮಂದಿ 11 ಸುಳ್ಳುಪ್ರವಾದಿಗಳು ಸಹ ಎದ್ದು ಅನೇಕರನ್ನು ಮೋಸಗೊಳಿಸುವರು. ಇದಲ್ಲದೆ 12 ಅಧರ್ಮವು ಹೆಚ್ಚಾಗುವದರಿಂದ ಬಹು ಜನರ ಪ್ರೀತಿಯು ತಣ್ಣಗಾಗಿಹೋಗುವದು. ಆದರೆ ಕಡೇ ವರೆಗೂ ತಾಳುವವನು ರಕ್ಷಣೆಹೊಂದುವನು. ಇದಲ್ಲದೆ ಪರಲೋಕ 13, 14 ರಾಜ್ಯದ ಈ ಸುವಾರ್ತೆಯು ಸರ್ವಲೋಕದಲ್ಲಿ ಎಲ್ಲಾ ಜನಗಳಿಗೆ ಸಾಕ್ಷಿಗಾಗಿ ಸಾರಲಾ ಗುವದು; ಆಗ ಅಂತ್ಯವು ಬರುವದು.

[1] ಕೀರ್ತನೆ ೧೧೮, ೨೬.

15 ಆದದರಿಂದ ಪ್ರವಾದಿಯಾದ ದಾನಿಯೇಲನು ಹೇಳಿದಂಥ ಹಾಳುಮಾಡುವ ಅಸಹ್ಯ
ವಸ್ತುವು[1] ಪವಿತ್ರಸ್ಥಾನದಲ್ಲಿ ನಿಂತಿರುವದನ್ನು ನೀವು ನೋಡುವಾಗ (ಇದನ್ನು ಓದುವ
16, 17 ವನು ತಿಳುಕೊಳ್ಳಲಿ) ಯೂದಾಯದಲ್ಲಿರುವವರು ಬೆಟ್ಟಗಳಿಗೆ ಓಡಿಹೋಗಲಿ; ಮಾಳಿ
ಗೆಯ ಮೇಲೆ ಇರುವವನು ತನ್ನ ಮನೆಯೊಳಗಿರುವದನ್ನು ತಕ್ಕೊಳ್ಳುವದಕ್ಕೆ ಇಳಿಯದೆ,
18 ಹೊಲದಲ್ಲಿರುವವನು ತನ್ನ ಬಟ್ಟೆ ತಕ್ಕೊಂಡುಹೋಗುವದಕ್ಕೆ ಹಿಂತಿರುಗಿ ಬಾರದೆ, ಓಡಿ
19 ಹೋಗಲಿ. ಅದಲ್ಲದೆ ಆ ದಿನಗಳಲ್ಲಿ ಬಸುರಿಯರಿಗೂ ಮೊಲೆಕೂಸಿರುವ ಹೆಂಗಸರಿಗೂ
20 ಆಗುವ ಕಷ್ಟವನ್ನು ಏನು ಹೇಳಲಿ. ಆಗ ಮಹಾ ಸಂಕಟ ಉಂಟಾಗುವದರಿಂದ ನಿಮ್ಮ
ಪಲಾಯನವು ಚಳಿಗಾಲದಲ್ಲಿಯಾಗಲಿ ಸಬ್ಬತ್‌ದಿನದಲ್ಲಿಯಾಗಲಿ ಆಗಬಾರದೆಂದು
21 ಪ್ರಾರ್ಥನೆಮಾಡಿರಿ. ಅಂಥ ಸಂಕಟವು ಲೋಕ ಹುಟ್ಟಿದ್ದು ಮೊದಲುಗೊಂಡು ಇಂದಿನ
22 ವರೆಗೂ ಆಗಲಿಲ್ಲ, ಇನ್ನು ಮೇಲೆಯೂ ಆಗುವದಿಲ್ಲ. ದೇವರು ಆ ದಿನಗಳನ್ನು ಕಡಿ
ಮೆಮಾಡದಿದ್ದರೆ ಒಂದು ನರಪ್ರಾಣಿಯಾದರೂ ಉಳಿಯದು; ಆದರೆ ದೇವರು ಆ ದಿನ
23 ಗಳನ್ನು ತಾನು ಆದುಕೊಂಡವರಿಗೋಸ್ಕರ ಕಡಿಮೆಮಾಡುವನು. ಆಗ ಯಾರಾದರೂ
ನಿಮಗೆ—ಇಗೋ ಕ್ರಿಸ್ತನು ಇಲ್ಲಿದ್ದಾನೆ, ಅಗೋ ಅಲ್ಲಿದ್ದಾನೆ ಎಂದು ಹೇಳಿದರೆ ನಂಬ
24 ಬೇಡಿರಿ. ಸುಳ್ಳುಕ್ರಿಸ್ತರೂ ಸುಳ್ಳುಪ್ರವಾದಿಗಳೂ ಎದ್ದು, ಸಾಧ್ಯವಾದರೆ ದೇವರಾದು
ಕೊಂಡವರನ್ನು ಸಹ ಮೋಸಗೊಳಿಸತಕ್ಕಂಥ ದೊಡ್ಡದೊಡ್ಡ ಸೂಚಕಕಾರ್ಯಗಳನ್ನೂ
25 ಅದ್ಭುತಕಾರ್ಯಗಳನ್ನೂ ಮಾಡಿ ತೋರಿಸುವರು. ನೋಡಿರಿ, ಮುಂದಾಗಿ ನಿಮಗೆ
26 ಹೇಳಿದ್ದೇನೆ. ಆದಕಾರಣ ಯಾರಾದರೂ ನಿಮಗೆ—ಅಗೋ ಕ್ರಿಸ್ತನು ಅಡವಿಯಲ್ಲಿ
ಇದ್ದಾನೆಂದು ಹೇಳಿದರೆ ಹೊರಟುಹೋಗಬೇಡಿರಿ; ಇಗೋ ಕೋಣೆಗಳಲ್ಲಿದ್ದಾನೆಂದು
27 ಹೇಳಿದರೆ ನಂಬಬೇಡಿರಿ. ಹ್ಯಾಗೆ ಮಿಂಚು ಮೂಡಣದಲ್ಲಿ ಹುಟ್ಟಿ ಪಡುವಣದ ವರೆಗೂ
28 ಕಾಣಿಸುತ್ತದೋ ಹಾಗೆಯೇ ಮನುಷ್ಯಕುಮಾರನ ಪ್ರತ್ಯಕ್ಷತೆಯು ಇರುವದು. ಹೆಣ
ಬಿದ್ದಲ್ಲಿ ಹದ್ದುಗಳು ಕೂಡುವವು.

29 ಆ ದಿನಗಳ ಸಂಕಟವು ತೀರಿದಕೂಡಲೆ ಸೂರ್ಯನು ಕತ್ತಲಾಗಿಹೋಗುವನು,
ಚಂದ್ರನು ಬೆಳಕು ಕೊಡದೆ ಇರುವನು, ನಕ್ಷತ್ರಗಳು ಆಕಾಶದಿಂದ ಉದುರುವವು,
30 ಆಕಾಶದಲ್ಲಿರುವ ಶಕ್ತಿಗಳು ಕದಲುವವು. ಆಗ ಮನುಷ್ಯಕುಮಾರನನ್ನು ಸೂಚಿಸುವ
ಗುರುತು ಆಕಾಶದಲ್ಲಿ ಕಾಣಬರುವದು. ಆಗ ಭೂಲೋಕದಲ್ಲಿರುವ ಎಲ್ಲಾ ಕುಲದ
ವರು ಎದೆಬಡಕೊಳ್ಳುವರು, ಮತ್ತು ಮನುಷ್ಯಕುಮಾರನು ಬಲದಿಂದಲೂ ಬಹು ಮಹಿ
31 ಮೆಯಿಂದಲೂ ಆಕಾಶದ ಮೇಘಗಳ ಮೇಲೆ ಬರುವದನ್ನು ನೋಡುವರು. ಮತ್ತು
ಆತನು ತುತೂರಿಯ ಮಹಾ ಶಬ್ದದಿಂದ ತನ್ನ ದೂತರನ್ನು ಕಳುಹಿಸುವನು. ಅವರು
ಆತನು ಆದುಕೊಂಡವರನ್ನು ಆಕಾಶದ ಒಂದು ಕಡೆಯಿಂದ ಮತ್ತೊಂದು ಕಡೆಯ
ವರೆಗೂ ನಾಲ್ಕೂ ದಿಕ್ಕುಗಳಿಂದ ಒಟ್ಟುಗೂಡಿಸುವರು.

32 ಅಂಜೂರದ ಮರದ ದೃಷ್ಟಾಂತದಿಂದ ಬುದ್ಧೀಕಲಿಯಿರಿ. ಅದರ ಕೊಂಬೆ ಇನ್ನೂ
ಎಳೇದಾಗಿದ್ದು ಎಲೆಬಿಡುವಾಗ ಬೇಸಿಗೇಕಾಲ ಹತ್ತರವಾಯಿತು ಎಂದು ತಿಳುಕೊಳ್ಳುತ್ತೀ

---

[1] ದಾನಿಯೇಲ ೯, ೨೭; ೧೧, ೩೧; ೧೨, ೧೧.

ರಲ್ಲಾ. ಹಾಗೆಯೇ ನೀವು ಸಹ ಅದನ್ನೆಲ್ಲಾ ನೋಡುವಾಗ ಹತ್ತರವದೆ, ಬಾಗಲಲ್ಲೇ 33 ಅದೆ ಎಂದು ತಿಳುಕೊಳ್ಳಿರಿ. ಇದೆಲ್ಲಾ ಆಗುವ ತನಕ ಈ ಸಂತತಿಯು ಅಳಿದುಹೋಗು 34 ವದಿಲ್ಲವೆಂದು ನಿಮಗೆ ಸತ್ಯವಾಗಿ ಹೇಳುತ್ತೇನೆ. ಆಕಾಶವೂ ಭೂಮಿಯೂ ಅಳಿದು 35 ಹೋಗುವವು, ಆದರೆ ನನ್ನ ಮಾತುಗಳು ಅಳಿದುಹೋಗುವದಿಲ್ಲ.

ಮನುಷ್ಯಕುಮಾರನು ಪ್ರತ್ಯಕ್ಷನಾಗುವ ಕಾಲ ತಿಳಿಯದ ಕಾರಣ ಎಚ್ಚರವಾಗಿರಬೇಕೆಂದು ಯೇಸು ಬೋಧಿಸಿದ್ದು.

(ಮಾರ್ಕ 13, 32—37; ಲೂಕ 21, 34—36; 19, 12—27.)

ಇದಲ್ಲದೆ ಆ ದಿನದ ವಿಷಯವೂ ಆ ಗಳಿಗೆಯ ವಿಷಯವೂ ನನ್ನ ತಂದೆಯೊಬ್ಬನಿಗೆ 36 ತಿಳಿಯುವದೇ ಹೊರತು ಮತ್ತ್ಯಾರಿಗೂ ತಿಳಿಯದು; ಪರಲೋಕದಲ್ಲಿರುವ ದೂತರಿಗೂ ತಿಳಿಯದು, ಮಗನಿಗೂ ತಿಳಿಯದು. ನೋಹನ ದಿವಸಗಳು ಹ್ಯಾಗಿದ್ದವೋ ಹಾಗೆಯೇ 37 ಮನುಷ್ಯಕುಮಾರನ ಪ್ರತ್ಯಕ್ಷತೆಯೂ ಇರುವದು. ಹ್ಯಾಗಂದರೆ, ಜಲಪ್ರಳಯಕ್ಕೆ 38 ಮುಂಚಿನ ದಿನಗಳಲ್ಲಿ ನೋಹನು ನಾವೆಯಲ್ಲಿ ಸೇರಿದ ದಿನದ ತನಕ ಜನರು ಉಣ್ಣುತ್ತಾ ಕುಡಿಯುತ್ತಾ ಮದುವೆಮಾಡಿಕೊಳ್ಳುತ್ತಾ ಮಾಡಿಕೊಡುತ್ತಾ ಇದ್ದು ಪ್ರಳಯದ ನೀರು 39 ಬಂದು ಎಲ್ಲರನ್ನು ಬಡುಕೊಂಡುಹೋಗುವ ತನಕ ಏನೂ ತಿಳಿಯದೆ ಇದ್ದರಲ್ಲಾ. ಅದ ರಂತೆ ಮನುಷ್ಯಕುಮಾರನು ಪ್ರತ್ಯಕ್ಷನಾಗುವ ಕಾಲದಲ್ಲಿಯೂ ಆಗುವದು. ಆವಾಗ 40 ಇಬ್ಬರು ಹೊಲದಲ್ಲಿರುವರು; ಒಬ್ಬನು ತೆಗೆದುಕೊಳ್ಳಲ್ಪಡುವನು, ಒಬ್ಬನು ಬಿಡಲ್ಪಡು ವನು. ಇಬ್ಬರು ಹೆಂಗಸರು ಬೀಸುವಕಲ್ಲಿನ ಮುಂದೆ ಕೂತು ಬೀಸುತ್ತಿರುವರು; ಒಬ್ಬಳು 41 ತೆಗೆದುಕೊಳ್ಳಲ್ಪಡುವಳು, ಒಬ್ಬಳು ಬಿಡಲ್ಪಡುವಳು.

ಹೀಗಿರಲಾಗಿ, ನಿಮ್ಮ ಕರ್ತನು ಬರುವ ದಿನವನ್ನು ನೀವು ಅರಿಯದಿರುವದರಿಂದ ಎಚ್ಚ 42 ರವಾಗಿರ್ರಿ. ಕಳ್ಳನು ಬರುವ ಜಾವ ಮನೇಯಜಮಾನನಿಗೆ ತಿಳಿದಿದ್ದರೆ ಅವನು ಎಚ್ಚರ 43 ವಾಗಿದ್ದು ತನ್ನ ಮನೆಗೆ ಕನ್ನಾಹಾಕಗೊಡಿಸುತ್ತಿದ್ದಿಲ್ಲವೆಂದು ತಿಳುಕೊಳ್ಳಿರಿ. ಆದಕಾರಣ 44 ನೀವು ಸಹ ಸಿದ್ಧವಾಗಿರ್ರಿ; ನೀವು ನೆನಸದ ಗಳಿಗೆಯಲ್ಲಿ ಮನುಷ್ಯಕುಮಾರನು ಬರು ತ್ತಾನೆ. ಹಾಗಾದರೆ ಯಜಮಾನನು ತನ್ನ ಮನೆಯವರಿಗೆ ಹೊತ್ತುಹೊತ್ತಿಗೆ ಆಹಾರ 45 ಕೊಡಲಿಕ್ಕೆ ಅವರ ಮೇಲಿಟ್ಟ ನಂಬಿಗಸ್ತನೂ ವಿವೇಕಿಯೂ ಆದಂಥಾ ಆಳು ಯಾರು? ಯಜಮಾನನು ಬಂದು ಯಾವ ಆಳು ಹೀಗೆ ಮಾಡುವದನ್ನು ಕಾಣುವನೋ ಆ ಆಳು 46 ಧನ್ಯನು. ಅಂಥವನನ್ನು ಆತನು ತನ್ನ ಎಲ್ಲಾ ಬದುಕಿನ ಮೇಲಿಡುವನು ಎಂದು ನಿಮಗೆ 47 ಸತ್ಯವಾಗಿ ಹೇಳುತ್ತೇನೆ. ಆದರೆ ಆ ಕೆಟ್ಟ ಆಳು—ನನ್ನ ಯಜಮಾನನು ಬರುವದಕ್ಕೆ 48 ತಡಮಾಡುತ್ತಾನೆ ಅಂತ ತನ್ನ ಮನಸ್ಸಿನಲ್ಲಿ ಅಂದುಕೊಂಡು ತನ್ನ ಜೊತೇಆಳುಗಳನ್ನು 49 ಹೊಡೆಯುತ್ತಾ ಕುಡಿಕರ ಸಂಗಡ ತಿನ್ನುತ್ತಾ ಕುಡಿಯುತ್ತಾ ಇರುವದಾದರೆ, ಆ ಆಳು 50 ನೆನಸದ ದಿನದಲ್ಲಿಯೂ ತಿಳಿಯದ ಗಳಿಗೆಯಲ್ಲಿಯೂ ಯಜಮಾನನು ಬಂದು ಅವನನ್ನು 51 ಕಠಿನವಾಗಿ ಹೊಡಿಸಿ ಕಪಟಿಗಳಿಗೆ ಆಗತಕ್ಕ ಗತಿಯನ್ನು ಅವನಿಗೆ ನೇಮಿಸುವನು. ಅಲ್ಲಿ ಗೋಳಾಟವೂ ಕಟಕಟನೆ ಹಲ್ಲುಕಡಿಯೋಣವೂ ಇರುವವು.

**25** ಆಗ ಪರಲೋಕರಾಜ್ಯವು ಆರತಿಗಳನ್ನು[1] ತೆಗೆದುಕೊಂಡು ಮದಲಿಂಗನನ್ನು ಎದುರುಗೊಳ್ಳುವದಕ್ಕೆ ಹೊರಟಂಥಾ ಹತ್ತು ಮಂದಿ ಕನ್ಯೆಯರಿಗೆ ಹೋಲಿಕೆಯಾಗಿರುವದು.
2, 3 ಅವರಲ್ಲಿ ಐದುಮಂದಿ ಬುದ್ಧಿಯಿಲ್ಲದವರು, ಐದುಮಂದಿ ಬುದ್ಧಿವಂತೆಯರು. ಬುದ್ಧಿಯಿಲ್ಲದವರು ತಮ್ಮ ಆರತಿಗಳನ್ನು ತಕ್ಕೊಂಡರು, ಆದರೆ ಎಣ್ಣೆ ತಕ್ಕೊಳ್ಳಲಿಲ್ಲ. 4 ಬುದ್ಧಿವಂತೆಯರು ತಮ್ಮ ಆರತಿಗಳ ಕೂಡ ಪಾತ್ರೆಗಳಲ್ಲಿ ಎಣ್ಣೆ ತಕ್ಕೊಂಡರು. 5 ಮದಲಿಂಗನು ಬರುವದಕ್ಕೆ ತಡಮಾಡಲು ಅವರೆಲ್ಲರು ತೂಕಡಿಸಿ ಮಲಗಿದರು. 6 ಆದರೆ ಅರ್ಧರಾತ್ರಿಯಲ್ಲಿ—ಈಗೋ, ಮದಲಿಂಗನು! ಅವನನ್ನು ಎದುರ್ಗೊಳ್ಳುವದಕ್ಕೆ ಹೊರಡಿರಿ ಎಂಬ ಕೂಗಾಯಿತು. 7 ಆಗ ಆ ಕನ್ಯೆಯರೆಲ್ಲರು ಎಚ್ಚತ್ತು ತಮ್ಮ ಆರತಿಗಳನ್ನು ನೆಟ್ಟಗೆ ಮಾಡಿದರು. 8 ಆಗ್ಯೆ ಬುದ್ಧಿಯಿಲ್ಲದವರು ಬುದ್ಧಿವಂತೆಯರಿಗೆ—ನಿಮ್ಮ ಎಣ್ಣೆಯಲ್ಲಿ ನಮಗೆ ಸ್ವಲ್ಪ ಕೊಡಿರಿ. ನಮ್ಮ ಆರತಿಗಳು ಆರಿಹೋಗುತ್ತವೆ ಎಂದು ಹೇಳಿದರು. 9 ಅದಕ್ಕೆ ಆ ಬುದ್ಧಿವಂತೆಯರು—ನಿಮಗೆ ಕೊಟ್ಟರೆ ನಮಗೂ ನಿಮಗೂ ಕೂಡ ಸಾಲದೆಹೋದೀತು; ನೀವು ಮಾರುವವರ ಬಳಿಗೆ ಹೋಗಿ ಕೊಂಡುಕೊಂಡರೆ ಒಳ್ಳೇದು ಅಂದರು. 10 ಅವರು ಕೊಂಡುಕೊಳ್ಳಲಿಕ್ಕೆ ಹೋದಾಗ ಮದಲಿಂಗನು ಬಂದನು. ಸಿದ್ಧವಾಗಿದ್ದವರು ಅವನ ಸಂಗಡ ಮದುವೇಮನೆಯೊಳಕ್ಕೆ ಹೋದರು. ಬಾಗಲು ಮುಚ್ಚಲಾಯಿತು. 11 ತರುವಾಯ ಉಳಿದ ಕನ್ಯೆಯರು ಸಹ ಬಂದು—ಯಜಮಾನನೇ, ಯಜಮಾನನೇ, ನಮಗೆ ತೆರೆಯಬೇಕು ಅಂದರು. 12 ಆತನು—ನಿಮ್ಮನ್ನು ನಾನರಿಯೆನೆಂದು ನಿಮಗೆ ಸತ್ಯವಾಗಿ ಹೇಳುತ್ತೇನೆ ಅಂದನು. 13 ಆದಕಾರಣ ಆ ದಿನವಾದರೂ ಗಳಿಗೆಯಾದರೂ ನಿಮಗೆ ಗೊತ್ತಾಗದೆ ಇರುವದರಿಂದ ಎಚ್ಚರವಾಗಿರ್ರಿ.

14 ದೇಶಾಂತರಕ್ಕೆ ಹೋಗುವ ಒಬ್ಬ ಮನುಷ್ಯನು ತನ್ನ ಆಳುಗಳನ್ನು ಕರೆದು ಅವರಿಗೆ ತನ್ನ ಆಸ್ತಿಯನ್ನು ಒಪ್ಪಿಸಿಕೊಟ್ಟಂತಿರುವದು. 15 ಅವನು ಒಬ್ಬನಿಗೆ ಐದು ತಲಾಂತು[2] ಒಬ್ಬನಿಗೆ ಎರಡು, ಒಬ್ಬನಿಗೆ ಒಂದು, ಹೀಗೆ ಅವನವನ ಸಾಮರ್ಥ್ಯದ ಪ್ರಕಾರ ಕೊಟ್ಟು, ಬೇರೊಂದು ದೇಶಕ್ಕೆ ಹೋದನು. 16 ಐದು ತಲಾಂತು ಹೊಂದಿದವನು ಹೋಗಿ ಅದನ್ನು ವ್ಯಾಪಾರಕ್ಕೆ ಹಾಕಿ ಇನ್ನೂ ಐದು ತಲಾಂತು ಗಳಿಸಿಕೊಂಡನು. 17 ಹಾಗೆಯೇ ಎರಡು ತಲಾಂತು ಹೊಂದಿದವನು ಇನ್ನೂ ಎರಡು ಸಂಪಾದಿಸಿಕೊಂಡನು. 18 ಆದರೆ ಒಂದು ತಲಾಂತು ಹೊಂದಿದವನು ಹೋಗಿ ಭೂಮಿಯನ್ನು ಅಗಿದು ತನ್ನ ಧಣಿಯ ಹಣವನ್ನು ಬಚ್ಚಿಟ್ಟನು. 19 ಬಹುಕಾಲದ ಮೇಲೆ ಆ ಆಳುಗಳ ಧಣಿಯು ಬಂದು ಅವರಿಂದ ಲೆಕ್ಕಾ ತೆಗೆದುಕೊಳ್ಳಲು, 20 ಐದು ತಲಾಂತು ಹೊಂದಿದವನು ಮುಂದೆಬಂದು ಇನ್ನೂ ಐದು ತಲಾಂತು ತಂದು—ಸ್ವಾಮಿಾ, ನೀನು ಐದು ತಲಾಂತನ್ನು ನನಗೆ ಕೊಟ್ಟಿದ್ದಿಯಲ್ಲಾ, ಇಗೋ, ಇನ್ನು ಐದು ತಲಾಂತು ಸಂಪಾದಿಸಿದ್ದೇನೆ ಅಂದನು. 21 ಅವನ ಧಣಿಯು—ಭಲಾ, ನಂಬಿಗಸ್ತನಾದ ಒಳ್ಳೇ ಆಳು ನೀನು; ಸ್ವಲ್ಪ ಕೆಲಸದಲ್ಲಿ ನಂಬಿಗಸ್ತನಾಗಿದ್ದಿ, ದೊಡ್ಡ ಕೆಲಸದಲ್ಲಿ ನಿನ್ನನ್ನು ಇಡುತ್ತೇನೆ; ನಿನ್ನ ಧಣಿಯ ಸೌಭಾಗ್ಯದಲ್ಲಿ ಸೇರು ಅಂದನು.
22 ಆಗ ಎರಡು ತಲಾಂತು ಹೊಂದಿದವನು ಮುಂದೆಬಂದು—ಸ್ವಾಮಿಾ, ಎರಡು ತಲಾಂತು

---

[1] ಅಥವಾ, ದೀವಟಿಗೆಗಳನ್ನು.

[2] ತಲಾಂತು ಅಂದರೆ ಸುಮಾರು ೬,೦೦೦ ರೂಪಾಯಿ.

ನನಗೆ ಒಪ್ಪಿಸಿದಿಯಲ್ಲಾ; ಇಗೋ, ಇನ್ನು ಎರಡು ತಲಾಂತು ಸಂಪಾದಿಸಿದ್ದೇನೆ ಅಂದನು.
ಅವನ ಧಣಿಯು—ಭಲಾ, ನಂಬಿಗಸ್ತನಾದ ಒಳ್ಳೇ ಆಳು ನೀನು; ಸ್ವಲ್ಪ ಕೆಲಸದಲ್ಲಿ ನಂಬಿ 23
ಗಸ್ತನಾಗಿದ್ದಿ, ದೊಡ್ಡ ಕೆಲಸದಲ್ಲಿ ನಿನ್ನನ್ನು ಇಡುತ್ತೇನೆ; ನಿನ್ನ ಧಣಿಯ ಸೌಭಾಗ್ಯದಲ್ಲಿ
ಸೇರು ಅಂದನು. ತರುವಾಯ ಒಂದೇ ತಲಾಂತು ಹೊಂದಿದವನು ಸಹ ಮುಂದೆಬಂದು— 24
ಸ್ವಾಮಿಾ, ನೀನು ಕಠಿನ ಮನುಷ್ಯನು, ನೀನು ಬಿತ್ತದಿರುವಲ್ಲಿ ಕೊಯ್ಯುವವನು, ನೀನು
ತೂರದಿರುವಲ್ಲಿ ರಾಶಿಮಾಡಿಕೊಳ್ಳುವವನು ಎಂದು ತಿಳಿದು ಹೆದರಿಕೊಂಡು, ಹೋಗಿ 25
ನಿನ್ನ ತಲಾಂತನ್ನು ಭೂಮಿಯಲ್ಲಿ ಬಚ್ಚಿಟ್ಟೆನು; ಇಗೋ, ನಿನ್ನದು ನಿನಗೆ ಸಂದಿದೆ ಅಂದನು.
ಆಗ ಅವನ ಧಣಿಯು ಅವನಿಗೆ—ಮೈಗಳ್ಳನಾದ ಕೆಟ್ಟ ಆಳು ನೀನು; ನಾನು ಬಿತ್ತದಿರು 26
ವಲ್ಲಿ ಕೊಯ್ಯುವವನು ತೂರದಿರುವಲ್ಲಿ ರಾಶಿಮಾಡಿಕೊಳ್ಳುವವನು ಎಂದು ತಿಳಿದಿಯಾ?
ಹಾಗಾದರೆ, ನೀನು ನನ್ನ ಹಣವನ್ನು ಸಾಹುಕಾರರಲ್ಲಿ ಬಡ್ಡಿಗೆ ಹಾಕಬೇಕಾಗಿತ್ತು; ನಾನು 27
ಬಂದಾಗ ನನ್ನದನ್ನು ಬಡ್ಡಿಯ ಕೂಡ ತಕ್ಕೊಳ್ಳುತ್ತಿದ್ದೆನು ಎಂದು ಹೇಳಿ ತನ್ನ ಸೇವಕ
ರಿಗೆ—ಅವನಿಂದ ಆ ತಲಾಂತು ತೆಗೆದು ಹತ್ತು ತಲಾಂತು ಇದ್ದವನಿಗೆ ಕೊಡಿರಿ. ಇದ್ದ 28, 29
ವನಿಗೆ ಕೊಡಲ್ಪಡುವದು, ಅವನಿಗೆ ಮತ್ತೂ ಹೆಚ್ಚಾಗುವದು; ಇಲ್ಲದವನಿಂದ ಅವನಿಗೆ
ಇದ್ದದ್ದೂ ತೆಗೆಯಲ್ಪಡುವದು. ಮತ್ತು ಕೆಲಸಕ್ಕೆ ಬಾರದ ಈ ಆಳನ್ನು ಹೊರಗಿ ಕತ್ತ 30
ಲೆಗೆ ಹಾಕಿಬಿಡಿರಿ ಎಂದು ಹೇಳಿದನು. ಅಲ್ಲಿ ಗೋಳಾಟವೂ ಕಟಕಟನೆ ಹಲ್ಲುಕಡಿ
ಯೋಣವೂ ಇರುವವು.

ಇದಲ್ಲದೆ, ಮನುಷ್ಯಕುಮಾರನು ತನ್ನ ಮಹಿಮೆಯಿಂದ ಎಲ್ಲಾ ದೇವದೂತರೊಂದಿಗೆ 31
ಕೂಡಿಬರುವಾಗ ತನ್ನ ಮಹಿಮೆಯ ಸಿಂಹಾಸನದಲ್ಲಿ ಕೂತುಕೊಳ್ಳುವನು; ಮತ್ತು ಎಲ್ಲಾ 32
ದೇಶಗಳ ಜನರು ಆತನ ಮುಂದೆ ಕೂಡಿಸಲ್ಪಡುವರು. ಕುರುಬನು ಆಡುಗಳನ್ನೂ
ಕುರಿಗಳನ್ನೂ ಬೇರೆಬೇರೆಮಾಡುವ ಪ್ರಕಾರ ಆತನು ಅವರನ್ನು ಬೇರೆಬೇರೆಮಾಡಿ, ಕುರಿ 33
ಗಳನ್ನು ತನ್ನ ಬಲಗಡೆಯಲ್ಲಿ ಆಡುಗಳನ್ನು ಎಡಗಡೆಯಲ್ಲಿ ನಿಲ್ಲಿಸುವನು. ಆಗ ಅರಸನು 34
ತನ್ನ ಬಲಗಡೆಯಲ್ಲಿರುವವರಿಗೆ—ನನ್ನ ತಂದೆಯ ಆಶೀರ್ವಾದ ಹೊಂದಿದವರೇ ಬನ್ನಿರಿ,
ಲೋಕಾದಿಯಿಂದ ನಿಮಗೋಸ್ಕರ ಸಿದ್ಧಮಾಡಿದ ರಾಜ್ಯವನ್ನು ಸ್ವಾಸ್ತ್ಯವಾಗಿ ತೆಗೆದು
ಕೊಳ್ಳಿರಿ. ನಾನು ಹಸಿದಿದ್ದೆನು, ನನಗೆ ಊಟಕ್ಕೆ ಕೊಟ್ಟಿರಿ; ನಾನು ಬಾಯಾರಿದ್ದೆನು, 35
ನನಗೆ ಕುಡಿಯುವದಕ್ಕೆ ಕೊಟ್ಟಿರಿ; ಪರದೇಶಿಯಾಗಿದ್ದೆನು, ನನ್ನನ್ನು ಸೇರಿಸಿಕೊಂಡಿರಿ;
ಬಟ್ಟೆಯಿಲ್ಲದವನಾಗಿದ್ದೆನು, ನನಗೆ ಉಡುವದಕ್ಕೆ ಕೊಟ್ಟಿರಿ; ರೋಗದಲ್ಲಿ ಬಿದ್ದಿದ್ದೆನು, 36
ನನ್ನನ್ನು ಆರೈಕೆಮಾಡುವದಕ್ಕೆ ಬಂದಿರಿ; ಸೆರೆಮನೆಯಲ್ಲಿದ್ದೆನು, ನನ್ನನ್ನು ನೋಡುವದಕ್ಕೆ
ಬಂದಿರಿ ಎಂದು ಹೇಳುವನು. ಅದಕ್ಕೆ ನೀತಿವಂತರು—ಸ್ವಾಮಿಾ, ಯಾವಾಗ ನೀನು 37
ಹಸಿದದ್ದನ್ನು ಕಂಡು ನಿನಗೆ ಊಟಕ್ಕೆ ಕೊಟ್ಟೆವು? ಇಲ್ಲವೆ ನೀನು ಬಾಯಾರಿದ್ದನ್ನು
ಕಂಡು ಕುಡಿಯುವದಕ್ಕೆ ಕೊಟ್ಟೆವು? ಯಾವಾಗ ನೀನು ಪರದೇಶಿಯಾಗಿರುವದನ್ನು 38
ಕಂಡು ಸೇರಿಸಿಕೊಂಡೆವು? ಇಲ್ಲವೆ ನಿನಗೆ ಬಟ್ಟೆಯಿಲ್ಲದ್ದನ್ನು ಕಂಡು ಉಡುವದಕ್ಕೆ
ಕೊಟ್ಟೆವು? ಯಾವಾಗ ನೀನು ರೋಗದಲ್ಲಿ ಬಿದ್ದದ್ದನ್ನು ಅಥವಾ ಸೆರೆಮನೆಯಲ್ಲಿ ಇದ್ದ 39
ದ್ದನ್ನು ಕಂಡು ನಿನ್ನನ್ನು ನೋಡುವದಕ್ಕೆ ಬಂದೆವು ಎಂದು ಉತ್ತರವಾಗಿ ಹೇಳುವರು.
ಅದಕ್ಕೆ ಅರಸನು—ಈ ನನ್ನ ಸಹೋದರರಲ್ಲಿ ಕೇವಲ ಅಲ್ಪನಾದವನೊಬ್ಬನಿಗೆ ಏನೇನು 40

ಮಾಡಿದಿರೋ ಅದನ್ನು ನನಗೂ ಮಾಡಿದ ಹಾಗಾಯಿತು ಎಂದು ನಿಮಗೆ ಸತ್ಯವಾಗಿ ಹೇಳು
41 ತ್ತೇನೆ ಅನ್ನುವನು. ಆ ಮೇಲೆ ಆತನು ಎಡಗಡೆಯಲ್ಲಿರುವವರಿಗೆ—ಶಾಪಗ್ರಸ್ತರೇ, ನನ್ನನ್ನು ಬಿಟ್ಟು ಪಿಶಾಚನಿಗೂ ಅವನ ದೂತರಿಗೂ ಸಿದ್ಧ ಮಾಡಿರುವ ನಿತ್ಯ ಬೆಂಕಿಯೊಳಕ್ಕೆ
42 ಹೋಗಿರಿ. ನಾನು ಹಸಿದಿದ್ದೆನು, ನೀವು ನನಗೆ ಊಟಕ್ಕೆ ಕೊಡಲಿಲ್ಲ; ನಾನು ಬಾಯಾ
43 ರಿದ್ದೆನು, ನೀವು ನನಗೆ ಕುಡಿಯುವದಕ್ಕೆ ಕೊಡಲಿಲ್ಲ; ಪರದೇಶಿಯಾಗಿದ್ದೆನು, ನೀವು ನನ್ನನ್ನು ಸೇರಿಸಿಕೊಳ್ಳಲಿಲ್ಲ; ಬಟ್ಟೆಯಿಲ್ಲದವನಾಗಿದ್ದೆನು, ನೀವು ನನಗೆ ಉಡುವದಕ್ಕೆ ಕೊಡಲಿಲ್ಲ; ರೋಗದಲ್ಲಿ ಬಿದ್ದಿದ್ದೆನು, ಸೆರೆಮನೆಯಲ್ಲಿದ್ದೆನು, ನೀವು ನನ್ನನ್ನು ಆರೈಕೆ
44 ಮಾಡುವದಕ್ಕೆ ಬರಲಿಲ್ಲವೆಂದು ಹೇಳುವನು. ಅದಕ್ಕೆ ಅವರು ಸಹ—ಸ್ವಾಮಿಾ, ಯಾವಾಗ ನೀನು ಹಸಿದದ್ದನ್ನೂ ನೀನು ಬಾಯಾರಿದ್ದನ್ನೂ ನೀನು ಪರದೇಶಿಯಾದ ದ್ದನ್ನೂ ಬಟ್ಟೆಯಿಲ್ಲದವನಾಗಿದ್ದದ್ದನ್ನೂ ರೋಗದಲ್ಲಿ ಬಿದ್ದದ್ದನ್ನೂ ಸೆರೆಮನೆಯಲ್ಲಿದ್ದ
45 ದ್ದನ್ನೂ ಕಂಡು ನಿನಗೆ ಉಪಚಾರ ಮಾಡದೆ ಹೋದೆವು? ಅನ್ನುವರು. ಆಗ ಆತನು— ನೀವು ಈ ಕೇವಲ ಅಲ್ಪವಾದವರಲ್ಲಿ ಒಬ್ಬನಿಗೆ ಏನೇನು ಮಾಡದೆ ಹೋದಿರೋ ಅದನ್ನು ನನಗೂ ಮಾಡದೆ ಹೋದಹಾಗಾಯಿತು ಎಂದು ನಿಮಗೆ ಸತ್ಯವಾಗಿ ಹೇಳುತ್ತೇನೆ
46 ಅನ್ನುವನು. ಮತ್ತು ಇವರು ನಿತ್ಯಶಿಕ್ಷೆಗೂ ನೀತಿವಂತರು ನಿತ್ಯಜೀವಕ್ಕೂ ಹೋಗುವರು.

ಅಧಿಕಾರಸ್ಥರು ಯೇಸುವನ್ನು ಕೊಲ್ಲಬೇಕೆಂದು ಆಲೋಚಿಸಿದ್ದು. ಒಬ್ಬ ಸ್ತ್ರೀಯು ಬೆಲೆಯುಳ್ಳ ಪರಿಮಳ ತೈಲವನ್ನು ಆತನ ಮೇಲೆ ಹೊಯಿದದ್ದು.

(ಮಾರ್ಕ 14, 1—11; ಲೂಕ 22, 1—6; ಯೋಹಾನ 12, 1—8.)

**26** ಯೇಸು ಈ ಮಾತುಗಳನ್ನೆಲ್ಲಾ ಆಡಿ ಮುಗಿಸಿದ ಮೇಲೆ ತನ್ನ ಶಿಷ್ಯರಿಗೆ—
2 ಎರಡು ದಿವಸಗಳಾದ ಮೇಲೆ ಪಸ್ಕಹಬ್ಬ ಬರುತ್ತದೆಂದು ಬಲ್ಲಿರಿ; ಆಗ ಮನುಷ್ಯಕುಮಾರ ನನ್ನು ಶಿಲುಬೆಗೆ ಹಾಕುವದಕ್ಕೆ ಒಪ್ಪಿಸಿಕೊಡೋಣವಾಗುವದು ಎಂದು ಹೇಳಿದನು.
3 ಆ ಕಾಲದಲ್ಲಿ ಮಹಾಯಾಜಕರೂ ಪ್ರಜೆಯ ಹಿರಿಯರೂ ಕಾಯಫನೆಂಬ ಮಹಾ
4 ಯಾಜಕನ ಮಠಕ್ಕೆ ಕೂಡಿಬಂದು, ಯೇಸುವನ್ನು ಉಪಾಯದಿಂದ ಹಿಡಿದು ಕೊಲ್ಲ
5 ಬೇಕೆಂಬದಾಗಿ ಆಲೋಚನೆಮಾಡಿಕೊಂಡರು. ಆದರೂ—ಹಬ್ಬದಲ್ಲಿ ಹಿಡಿಯಬಾರದು, ಜನರಲ್ಲಿ ಗದ್ದಲವಾದೀತು ಅಂದುಕೊಂಡರು.
6 ಯೇಸು ಬೇಥಾನ್ಯದಲ್ಲಿ ಕುಷ್ಠರೋಗಿಯಾದ ಸೀಮೋನನ ಮನೆಯಲ್ಲಿದ್ದಾಗ, ಒಬ್ಬ
7 ಸ್ತ್ರೀಯು ಬಹು ಬೆಲೆಯುಳ್ಳ ಸುಗಂಧತೈಲದ ಭರಣಿಯನ್ನು[1] ತೆಗೆದುಕೊಂಡು ಆತನ ಬಳಿಗೆ ಬಂದು, ಆತನು ಊಟಕ್ಕೆ ಕೂತಿರುವಾಗ ಆತನ ತಲೆಯ ಮೇಲೆ ಆ ತೈಲವನ್ನು
8 ಹೊಯಿದಳು. ಶಿಷ್ಯರು ಇದನ್ನು ಕಂಡು ಕೋಪಗೊಂಡು—ಈ ನಷ್ಟ ಯಾತಕ್ಕೆ?
9 ಈ ತೈಲವನ್ನು ಬಹಳ ಹಣಕ್ಕೆ ಮಾರಿ ಬಡವರಿಗೆ ಕೊಡಬಹುದಾಗಿತ್ತು ಅಂದರು.
10 ಯೇಸು ಅದನ್ನು ತಿಳಿದು ಅವರಿಗೆ—ಈ ಸ್ತ್ರೀಗೆ ಯಾಕೆ ತೊಂದರೆಕೊಡುತ್ತೀರಿ? ಈಕೆ

[1] ಮೂಲ: ಚಂದ್ರಕಾಂತಶಿಲೆಯ ಭರಣಿಯನ್ನು.

ನನಗೆ ಒಳ್ಳೇ ಕಾರ್ಯವನ್ನು ಮಾಡಿದ್ದಾಳೆ. ಬಡವರು ಯಾವಾಗಲೂ ನಿಮ್ಮಲ್ಲಿ ಇರು 11
ತ್ತಾರೆ, ಆದರೆ ನಾನು ನಿಮ್ಮಲ್ಲಿ ಯಾವಾಗಲೂ ಇರುವದಿಲ್ಲ. ಈಕೆಯು ಈ ತೈಲವನ್ನು 12
ನನ್ನ ದೇಹದ ಮೇಲೆ ಹೊಯಿದದ್ದು ನನ್ನ ಉತ್ತರಕ್ರಿಯೆಗಾಗಿಯೇ. ಈ ಸುವಾರ್ತೆಯು 13
ಸರ್ವಲೋಕದಲ್ಲಿ ಎಲ್ಲೆಲ್ಲಿ ಸಾರಲಾಗುವದೋ ಅಲ್ಲಲ್ಲಿ ಈಕೆ ಮಾಡಿದ್ದನ್ನು ಸಹ ಈಕೆಯ
ನೆನಪಿಗಾಗಿ ಹೇಳುವರೆಂದು ನಿಮಗೆ ಸತ್ಯವಾಗಿ ಹೇಳುತ್ತೇನೆ ಎಂದು ಹೇಳಿದನು.

ಆ ಮೇಲೆ ಹನ್ನೆರಡು ಮಂದಿ ಶಿಷ್ಯರಲ್ಲಿ ಒಬ್ಬನಾದ ಇಸ್ಕರಿಯೋತ ಯೂದನೆಂಬವನು 14
ಮಹಾಯಾಜಕರ ಬಳಿಗೆ ಹೋಗಿ—ನಾನು ಅವನನ್ನು ನಿಮಗೆ ಹಿಡುಕೊಟ್ಟರೆ ನನಗೆ 15
ಏನು ಕೊಡುತ್ತೀರಿ? ಅಂದನು. ಅವರು ಅವನಿಗೆ ಮೂವತ್ತು ರೂಪಾಯಿ ಕೊಟ್ಟರು.
ಅಂದಿನಿಂದ ಅವನು ಆತನನ್ನು ಹಿಡುಕೊಡುವದಕ್ಕೆ ಸಮಯ ನೋಡಿಕೊಂಡೇ ಇದ್ದನು. 16

### ಯೇಸು ತನ್ನ ಶಿಷ್ಯರ ಸಂಗಡ ಕಡೇ ಭೋಜನವನ್ನು ಮಾಡಿದ್ದು.
(ಮಾರ್ಕ 14, 12—31; ಲೂಕ 22, 7—34; ಯೋಹಾನ 13, 21—26.)

ಹುಳಿಯಿಲ್ಲದ ರೊಟ್ಟಿಯ ಹಬ್ಬದ ಮೊದಲನೇ ದಿವಸದಲ್ಲಿ ಶಿಷ್ಯರು ಯೇಸುವಿನ 17
ಬಳಿಗೆ ಬಂದು—ಪಸ್ಕದ ಊಟಾಮಾಡುವದಕ್ಕೆ ನಾವು ನಿನಗೆ ಎಲ್ಲಿ ಸಿದ್ಧಮಾಡಬೇಕ
ನ್ನುತ್ತೀ? ಅಂದರು. ಅದಕ್ಕಾತನು—ನೀವು ಪಟ್ಟಣಕ್ಕೆ ಇಂಥವನ ಬಳಿಗೆ ಹೋಗಿ ಅವ 18
ನಿಗೆ—ನನ್ನ ಕಾಲ ಸಮೀಪವಾಯಿತು, ನಿನ್ನ ಮನೆಯಲ್ಲಿ ನನ್ನ ಶಿಷ್ಯರ ಸಂಗಡ ಪಸ್ಕಹಬ್ಬ
ಮಾಡುತ್ತೇನೆ ಎಂಬದಾಗಿ ಗುರುವು ಹೇಳುತ್ತಾನೆಂದು ಹೇಳಿರಿ ಅಂದನು. ಶಿಷ್ಯರು 19
ಯೇಸು ತಮಗೆ ಅಪ್ಪಣೆಕೊಟ್ಟಂತೆ ಮಾಡಿ ಪಸ್ಕಕ್ಕೆ ಸೌರಿಸಿದರು.

ಸಂಜೆಯಾದಾಗ ಆತನು ಹನ್ನೆರಡು ಮಂದಿ ಶಿಷ್ಯರ ಸಂಗಡ ಊಟಕ್ಕೆ ಕೂತು 20
ಕೊಂಡನು. ಅವರು ಊಟಾಮಾಡುತ್ತಿರುವಾಗ ಆತನು—ನಿಮ್ಮಲ್ಲಿ ಒಬ್ಬನು ನನ್ನನ್ನು 21
ಹಿಡುಕೊಡುವನೆಂದು ನಿಮಗೆ ಸತ್ಯವಾಗಿ ಹೇಳುತ್ತೇನೆ ಅಂದನು. ಆಗ ಅವರು ಬಹಳ 22
ದುಃಖಪಟ್ಟು—ಸ್ವಾಮೀ, ನಾನಲ್ಲವಲ್ಲ ಎಂದು ಪ್ರತಿಯೊಬ್ಬರು ಕೇಳುವವರಾದರು.
ಅದಕ್ಕಾತನು—ಬಟ್ಟಲಲ್ಲಿ ನನ್ನ ಸಂಗಡ ಕೈ ಅದ್ದಿದವನೇ ನನ್ನನ್ನು ಹಿಡುಕೊಡುವನು. 23
ಮನುಷ್ಯಕುಮಾರನು ಹೊರಟುಹೋಗುತ್ತಾನೆ ಸರಿ; ಹಾಗೆ ಆತನ ವಿಷಯವಾಗಿ ಬರೆ 24
ದದೆಯಲ್ಲಾ. ಆದರೆ ಯಾವನು ಮನುಷ್ಯಕುಮಾರನನ್ನು ಹಿಡುಕೊಡುವನೋ ಅವನ
ದುರ್ಗತಿಯನ್ನು ಏನು ಹೇಳಲಿ. ಆ ಮನುಷ್ಯನು ಹುಟ್ಟದಿದ್ದರೆ ಅವನಿಗೆ ವಾಸಿ ಅಂದನು.
ಆಗ ಆತನನ್ನು ಹಿಡುಕೊಡಬೇಕೆಂದಿದ್ದ ಯೂದನು—ಗುರುವೇ, ನಾನಲ್ಲವಲ್ಲ? ಅನ್ನ 25
ಲಾಗಿ; ಯೇಸು ಅವನಿಗೆ—ನೀನೇ ಹೇಳಿದ್ದೀ ಎಂದು ಹೇಳಿದನು. ಅವರು ಊಟಾ 26
ಮಾಡುತ್ತಿರುವಾಗ ಯೇಸು ರೊಟ್ಟಿಯನ್ನು ತೆಗೆದುಕೊಂಡು ಸ್ತೋತ್ರಮಾಡಿ ಮುರಿದು
ಶಿಷ್ಯರಿಗೆ ಕೊಟ್ಟು—ತಕ್ಕೊಳ್ಳಿರಿ, ತಿನ್ನಿರಿ, ಇದು ನನ್ನ ದೇಹ ಅಂದನು. ಆ ಮೇಲೆ ಪಾತ್ರೆ 27
ಯನ್ನು ತೆಗೆದುಕೊಂಡು ಸ್ತೋತ್ರಮಾಡಿ ಅವರಿಗೆ ಕೊಟ್ಟು—ಇದರಲ್ಲಿರುವದನ್ನು
ಎಲ್ಲರೂ ಕುಡಿಯಿರಿ; ಇದು ನನ್ನ ರಕ್ತ, ಇದು ಒಡಂಬಡಿಕೆಯ[1] ರಕ್ತ, ಇದು ಪಾಪ 28

---

[1] ಕೆಲವು ಪ್ರತಿಗಳಲ್ಲಿ—ಹೊಸ ಒಡಂಬಡಿಕೆಯ ಎಂದು ಬರೆದಿದೆ; ಹೊರಡೋಣ ೨೪, ೮; ಯೆರೆಮೀಯ ೩೧, ೩೧; ಜೆಕರೀಯ ೯, ೧೧ ನೋಡಿರಿ.

29 ಗಳ ಕ್ಷಮೆಗಾಗಿ ಬಹು ಜನರಿಗೋಸ್ಕರ ಸುರಿಸಲ್ಪಡುವ ರಕ್ತ. ಮತ್ತು ನಿಮಗೆ ಹೇಳು ವದೇನಂದರೆ, ನಾನು ನನ್ನ ತಂದೆಯ ರಾಜ್ಯದಲ್ಲಿ ದ್ರಾಕ್ಷಾರಸವನ್ನು ನಿಮ್ಮ ಸಂಗಡ ಹೊಸ

30 ದಾಗಿ ಕುಡಿಯುವ ದಿನದ ವರೆಗೂ ಇನ್ನು ಮೇಲೆ ಕುಡಿಯುವದಿಲ್ಲ ಅಂದನು. ಬಳಿಕ ಕೀರ್ತನೆಯನ್ನು ಹಾಡಿ ಎಣ್ಣೇಮರಗಳ ಗುಡ್ಡಕ್ಕೆ ಹೊರಟುಹೋದರು.

31 ಆಗ ಯೇಸು ಅವರಿಗೆ—ನೀವೆಲ್ಲರೂ ಈ ರಾತ್ರಿ ನನ್ನ ವಿಷಯದಲ್ಲಿ ದಿಗಿಲುಪಟ್ಟು ಹಿಂಜರಿಯುವಿರಿ. ಕುರುಬನನ್ನು ಹೊಡೆಯುವೆನು, ಹಿಂಡಿನ ಕುರಿಗಳು ಚದರಿಹೋಗುವವು

32 ಎಂದು[1] ಬರೆದದೆಯಲ್ಲಾ. ಆದರೆ ನಾನು ಜೀವಿತನಾಗಿ ಎದ್ದ ಮೇಲೆ ನಿಮ್ಮ ಮುಂದೆ

33 ಗಲಿಲಾಯಕ್ಕೆ ಹೋಗುವೆನು ಎಂದು ಹೇಳಿದನು. ಪೇತ್ರನು ಆತನಿಗೆ—ಎಲ್ಲರೂ ನಿನ್ನ ವಿಷಯದಲ್ಲಿ ದಿಗಿಲುಪಟ್ಟು ಹಿಂಜರಿದರೂ ನಾನು ಎಂದಿಗೂ ಹಿಂಜರಿಯುವದಿಲ್ಲ ಎಂದು

34 ಉತ್ತರಕೊಡಲು; ಯೇಸು—ಇದೇ ರಾತ್ರಿಯಲ್ಲಿ ಕೋಳಿಕೂಗುವದಕ್ಕಿಂತ ಮುಂಚೆ ನೀನು ನನ್ನ ವಿಷಯದಲ್ಲಿ—ಅವನನ್ನು ಅರಿಯೆನೆಂಬದಾಗಿ ಮೂರು ಸಾರಿ ಹೇಳುವಿ

35 ಎಂದು ನಿನಗೆ ಸತ್ಯವಾಗಿ ಹೇಳುತ್ತೇನೆ ಅಂದನು. ಪೇತ್ರನು ಆತನಿಗೆ—ನಾನು ನಿನ್ನ ಸಂಗಡ ಸಾಯಬೇಕಾದರೂ ನಿನ್ನನ್ನು ಅರಿಯೆನೆಂದು ಹೇಳುವದೇ ಇಲ್ಲ ಎಂದು ಹೇಳಿ ದನು. ಅದರಂತೆ ಶಿಷ್ಯರೆಲ್ಲರೂ ಹೇಳಿದರು.

### ಯೇಸು ಗೆತ್ಸೇಮನೆ ತೋಟದಲ್ಲಿ ಪ್ರಾರ್ಥಿಸುವಾಗ ಯೂದನು ಆತನನ್ನು ಶತ್ರುಗಳಿಗೆ ಹಿಡುಕೊಟ್ಟದ್ದು.

(ಮಾರ್ಕ 14, 32—50; ಲೂಕ 22, 40—53; ಯೋಹಾನ 18, 1—12.)

36 ತರುವಾಯ ಯೇಸು ತನ್ನ ಶಿಷ್ಯರ ಸಂಗಡ ಗೆತ್ಸೇಮನೆ ಎಂಬ ತೋಟಕ್ಕೆ ಬಂದು ಅವರಿಗೆ—ಇಲ್ಲೇ ಕೂತುಕೊಳ್ಳಿರಿ, ನಾನು ಅತ್ತಲಾಗಿ ಹೋಗಿ ಪ್ರಾರ್ಥನೆ ಮಾಡಿ ಬರು

37 ತ್ತೇನೆ ಎಂದು ಹೇಳಿ, ಪೇತ್ರನನ್ನೂ ಜೆಬೆದಾಯನ ಇಬ್ಬರು ಮಕ್ಕಳನ್ನೂ ಕರಕೊಂಡು

38 ಹೋಗಿ, ದುಃಖಪಟ್ಟು ಮನಗುಂದಿದವನಾದನು. ಮತ್ತು ಅವರಿಗೆ—ನನ್ನ ಪ್ರಾಣವು ಸಾಯುವಷ್ಟು ದುಃಖಕ್ಕೆ ಒಳಗಾಗಿದೆ; ಇಲ್ಲಿ ಇದ್ದು ನನ್ನ ಸಂಗಡ ಎಚ್ಚರವಾಗಿರ್ರಿ

39 ಎಂದು ಹೇಳಿ, ಸ್ವಲ್ಪ ಮುಂದೆ ಹೋಗಿ, ನೆಲದ ಮೇಲೆ ಅಡ್ಡಬಿದ್ದು—ನನ್ನ ತಂದೆಯೇ, ಸಾಧ್ಯವಾಗಿದ್ದರೆ, ಈ ಪಾತ್ರೆಯು[2] ನನ್ನನ್ನು ಬಿಟ್ಟುಹೋಗಲಿ; ಆದರೆ ನನ್ನ ಚಿತ್ತದಂತಾ

40 ಗದೆ ನಿನ್ನ ಚಿತ್ತದಂತೆಯೇ ಆಗಲಿ ಎಂದು ಪ್ರಾರ್ಥನೆಮಾಡಿದನು. ಆ ಮೇಲೆ ಆ ಶಿಷ್ಯರ ಬಳಿಗೆ ಬಂದು ಅವರು ನಿದ್ದೆಮಾಡುತ್ತಿರುವದನ್ನು ಕಂಡು, ಪೇತ್ರನಿಗೆ—ಹೀಗೋ?

41 ಒಂದು ಗಳಿಗೆಯಾದರೂ ನನ್ನ ಸಂಗಡ ಎಚ್ಚರವಾಗಿರಲಾರಿರಾ? ಶೋಧನೆಗೆ ಒಳಗಾಗ ದಂತೆ ಎಚ್ಚರವಾಗಿದ್ದು ಪ್ರಾರ್ಥಿಸಿರಿ; ಮನಸ್ಸು[3] ಸಿದ್ಧವಾಗಿದೆ ಸರಿ, ಆದರೆ ದೇಹಕ್ಕೆ[4]

42 ಬಲ ಸಾಲದು ಎಂದು ಹೇಳಿದನು. ತಿರಿಗಿ ಎರಡನೇ ಸಾರಿ ಹೋಗಿ—ನನ್ನ ತಂದೆಯೇ, ನಾನು ಕುಡಿಯದ ಹೊರತು ಈ ಪಾತ್ರೆ ಬಿಟ್ಟುಹೋಗಕೂಡದಾಗಿದ್ದರೆ, ನಿನ್ನ ಚಿತ್ತ

43 ದಂತಾಗಲಿ ಎಂದು ಪ್ರಾರ್ಥನೆಮಾಡಿದನು. ಆತನು ತಿರಿಗಿ ಬಂದಾಗ ಅವರು ನಿದ್ದೇ

[1] ಜೆಕರ್‍ಯ ೧೩, ೭.  [2] ಅಂದರೆ, ಕಷ್ಟಾನುಭವ.  [3] ಮೂಲ: ಆತ್ಮ.
[4] ಅಥವಾ, ಶರೀರಭಾವವಾದರೆ.

ನನಗೆ ಒಳ್ಳೇ ಕಾರ್ಯವನ್ನು ಮಾಡಿದ್ದಾಳೆ. ಬಡವರು ಯಾ
ತ್ತಾರೆ, ಆದರೆ ನಾನು ನಿಮ್ಮಲ್ಲಿ ಯಾವಾಗಲೂ ಇರುವದಿಲ್ಲ.
ನನ್ನ ದೇಹದ ಮೇಲೆ ಹೊಯಿದದ್ದು ನನ್ನ ಉತ್ತರಕ್ರಿಯೆಗಾಗಿ
ಸರ್ವಲೋಕದಲ್ಲಿ ಎಲ್ಲೆಲ್ಲಿ ಸಾರಲಾಗುವದೋ ಅಲ್ಲಲ್ಲಿ ಈಕೆ
ನೆನಪಿಗಾಗಿ ಹೇಳುವರೆಂದು ನಿಮಗೆ ಸತ್ಯವಾಗಿ ಹೇಳುತ್ತೇನೆ

ಆ ಮೇಲೆ ಹನ್ನೆರಡು ಮಂದಿ ಶಿಷ್ಯರಲ್ಲಿ ಒಬ್ಬನಾದ ಇಸ್ಕರಿ
ಮಹಾಯಾಜಕರ ಬಳಿಗೆ ಹೋಗಿ—ನಾನು ಅವನನ್ನು ನಿಮ
ಏನು ಕೊಡುತ್ತೀರಿ? ಅಂದನು. ಅವರು ಅವನಿಗೆ ಮೂವತ
ಅಂದಿನಿಂದ ಅವನು ಆತನನ್ನು ಹಿಡುಕೊಡುವದಕ್ಕೆ ಸಮಯ

**ಯೇಸು ತನ್ನ ಶಿಷ್ಯರ ಸಂಗಡ ಕಡೇ ಭೋಜನವನ್ನು ಮ**

(ಮಾರ್ಕ 14, 12—31; ಲೂಕ 22, 7—34; ಯೋಹಾನ

ಹುಳಿಯಿಲ್ಲದ ರೊಟ್ಟಿಯ ಹಬ್ಬದ ಮೊದಲನೇ ದಿವಸದ
ಬಳಿಗೆ ಬಂದು—ಪಸ್ಕದ ಊಟಾಮಾಡುವದಕ್ಕೆ ನಾವು ನಿನ
ನ್ನುತ್ತೀ? ಅಂದರು. ಅದಕ್ಕಾತನು—ನೀವು ಪಟ್ಟಣಕ್ಕೆ ಇಂಥ
ನಿಗೆ—ನನ್ನ ಕಾಲ ಸಮೀಪವಾಯಿತು, ನಿನ್ನ ಮನೆಯಲ್ಲಿ ನನ್ನ
ಮಾಡುತ್ತೇನೆ ಎಂಬದಾಗಿ ಗುರುವು ಹೇಳುತ್ತಾನೆಂದು ಹೇ
ಯೇಸು ತಮಗೆ ಅಪ್ಪಣೆಕೊಟ್ಟಂತೆ ಮಾಡಿ ಪಸ್ಕಕ್ಕೆ ಸೌರಿಸಿ

ಸಂಜೆಯಾದಾಗ ಆತನು ಹನ್ನೆರಡು ಮಂದಿ ಶಿಷ್ಯರ
ಕೊಂಡನು. ಅವರು ಊಟಾಮಾಡುತ್ತಿರುವಾಗ ಆತನು—
ಹಿಡುಕೊಡುವನೆಂದು ನಿಮಗೆ ಸತ್ಯವಾಗಿ ಹೇಳುತ್ತೇನೆ ಅಂ
ದುಃಖಪಟ್ಟು—ಸ್ವಾಮೀ, ನಾನಲ್ಲವಲ್ಲ ಎಂದು ಪ್ರತಿಯೆ
ಅದಕ್ಕಾತನು—ಬಟ್ಟಲಲ್ಲಿ ನನ್ನ ಸಂಗಡ ಕೈ ಅದ್ದಿದವನೆ
ಮನುಷ್ಯಕುಮಾರನು ಹೊರಟುಹೋಗುತ್ತಾನೆ ಸರಿ;
ದದೆಯಲ್ಲಾ. ಆದರೆ ಯಾವನು ಮನುಷ್ಯಕುಮಾರ
ದುರ್ಗತಿಯನ್ನು ಏನು ಹೇಳಲಿ. ಆ ಮನುಷ್ಯನು
ಆಗ ಆತನನ್ನು ಹಿಡುಕೊಡಬೇಕೆಂದಿದ್ದ ಯೂದ
ಲಾಗಿ; ಯೇಸು ಅವನಿಗೆ—ನೀನೇ ಹೇಳಿದ್ದೀ
ಮಾಡುತ್ತಿರುವಾಗ ಯೇಸು ರೊಟ್ಟಿಯನ್ನು
ಶಿಷ್ಯರಿಗೆ ಕೊಟ್ಟು—ತಕ್ಕೊಳ್ಳಿರಿ, ತಿನ್ನಿರಿ,
ಯನ್ನು ತೆಗೆದುಕೊಂಡು ಸ್ತೋತ್ರಾ
ಎಲ್ಲರೂ ಕುಡಿಯಿರಿ; ಇದು ನನ್ನ

---

1) ಕೆಲವು ಪ್ರತಿಗಳಲ್ಲಿ—
೩೧; ಜೆಕರೀಯ ೯, ೧೧ ನೋಡಿ

ಪದ್ಧತಿಯಾಗಿತ್ತು. ಆ ಕಾಲದಲ್ಲಿ
ಇದ್ದನು. ಹೀಗಿರಲಾಗಿ ಅವರು
ರನ್ನು ಬಿಡುಗಡೆ ಮಾಡಿಕೊಡ
ಯೇಸುವನ್ನೋ ಎಂದು ಅವರನ್ನು
ನ್ನು ತನಗೆ ಒಪ್ಪಿಸಿಕೊಟ್ಟಿದ್ದರೆಂದು
ಸನದಲ್ಲಿ ಕೂತಿರುವಾಗ, ಅವನ
ಹೋಗಬೇಡ; ಅವನ ದೆಸೆಯಿಂದ
ದು ಅವನ ಬಳಿಗೆ ಹೇಳಿಕಳುಹಿಸಿ
ಸುವನ್ನು ಕೊಲ್ಲಿಸಬೇಕೆಂದು ಬೇಡಿ
ಜನರನ್ನು ಒಡಂಬಡಿಸಿದರು.
ರನ್ನು ನಿಮಗೆ ಬಿಟ್ಟುಕೊಡಬೇಕು
ಅವರನ್ನು—ಹಾಗಾದರೆ ಕ್ರಿಸ್ತ
ಂದು ಕೇಳಲು ಎಲ್ಲರೂ—ಅವ
ಯಾಕೆ? ಕೆಟ್ಟದ್ದೇನು ಮಾಡಿ
ಹಾಕಿಸು ಎಂದು ಬಹಳವಾಗಿ
ಯುವದಿಲ್ಲ, ಗದ್ದಲ ಮಾತ್ರ
ಮುಂದೆ ಕೈ ತೊಳಕೊಂಡು—
ನೀವೇ ನೋಡಿಕೊಳ್ಳಿರಿ ಅನ್ನ
ಮಕ್ಕಳೂ ಉತ್ತರ ಕೊಡು
ಟ್ಟು, ಯೇಸುವನ್ನು ಕೊರಡೆ
ದನು.

ಾಕದ್ದು.

ಾನ 19, 2. 3. 16—30.)

ವನ್ನು ಅರಮನೆಯೊಳಕ್ಕೆ ಹಿಡು
ಕೂಡಿಸಿಕೊಂಡು, ಆತನ ಬಟ್ಟೆ
ದಿಸಿ, ಮುಳ್ಳಿನ ಕಿರೀಟವನ್ನು ಹೆಣೆದು
ತ್ತವನ್ನು ಕೊಟ್ಟು, ಆತನ ಮುಂದೆ ಮೊಣ
ನಮಸ್ಕಾರ ಎಂದು ಆತನನ್ನು ಪರಿಹಾಸ್ಯ
ಉಗುಳಿ, ಆ ಬೆತ್ತವನ್ನು ಕಸಕೊಂಡು ಆತನ
ಹೀಗೆ ಆತನನ್ನು ಪರಿಹಾಸ್ಯಮಾಡಿದ ಮೇಲೆ, ಆ ಒಲ್ಲಿ
ವನ್ನು ತೊಡಿಸಿ, ಆತನನ್ನು ಶಿಲುಬೆಗೆ ಹಾಕುವದಕ್ಕೆ ಹಿಡು

ರಲ್ಲಾ. ಹಾಗೆಯೇ ನೀವು ಸಹ ಅದನ್ನೆಲ್ಲಾ ನೋಡುವಾಗ ಹತ್ತರವದೆ, ಬಾಗಲಲ್ಲೇ 33 ಅದೆ ಎಂದು ತಿಳುಕೊಳ್ಳಿರಿ. ಇದೆಲ್ಲಾ ಆಗುವ ತನಕ ಈ ಸಂತತಿಯು ಅಳಿದುಹೋಗು 34 ವದಿಲ್ಲವೆಂದು ನಿಮಗೆ ಸತ್ಯವಾಗಿ ಹೇಳುತ್ತೇನೆ. ಆಕಾಶವೂ ಭೂಮಿಯೂ ಅಳಿದು 35 ಹೋಗುವವು, ಆದರೆ ನನ್ನ ಮಾತುಗಳು ಅಳಿದುಹೋಗುವದಿಲ್ಲ.

ಮನುಷ್ಯಕುಮಾರನು ಪ್ರತ್ಯಕ್ಷನಾಗುವ ಕಾಲ ತಿಳಿಯದ ಕಾರಣ ಎಚ್ಚರವಾಗಿರಬೇಕೆಂದು ಯೇಸು ಬೋಧಿಸಿದ್ದು.

(ಮಾರ್ಕ 13, 32—37; ಲೂಕ 21, 34—36; 19, 12—27.)

ಇದಲ್ಲದೆ ಆ ದಿನದ ವಿಷಯವೂ ಆ ಗಳಿಗೆಯ ವಿಷಯವೂ ನನ್ನ ತಂದೆಯೊಬ್ಬನಿಗೆ 36 ತಿಳಿಯುವದೇ ಹೊರತು ಮತ್ತ್ಯಾರಿಗೂ ತಿಳಿಯದು; ಪರಲೋಕದಲ್ಲಿರುವ ದೂತರಿಗೂ ತಿಳಿಯದು, ಮಗನಿಗೂ ತಿಳಿಯದು. ನೋಹನ ದಿವಸಗಳು ಹ್ಯಾಗಿದ್ದವೋ ಹಾಗೆಯೇ 37 ಮನುಷ್ಯಕುಮಾರನ ಪ್ರತ್ಯಕ್ಷತೆಯೂ ಇರುವದು. ಹ್ಯಾಗಂದರೆ, ಜಲಪ್ರಳಯಕ್ಕೆ 38 ಮುಂಚಿನ ದಿನಗಳಲ್ಲಿ ನೋಹನು ನಾವೆಯಲ್ಲಿ ಸೇರಿದ ದಿನದ ತನಕ ಜನರು ಉಣ್ಣುತ್ತಾ ಕುಡಿಯುತ್ತಾ ಮದುವೆಮಾಡಿಕೊಳ್ಳುತ್ತಾ ಮಾಡಿಕೊಡುತ್ತಾ ಇದ್ದು ಪ್ರಳಯದ ನೀರು 39 ಬಂದು ಎಲ್ಲರನ್ನು ಬಡುಕೊಂಡುಹೋಗುವ ತನಕ ಏನೂ ತಿಳಿಯದೆ ಇದ್ದರಲ್ಲಾ. ಅದ ರಂತೆ ಮನುಷ್ಯಕುಮಾರನು ಪ್ರತ್ಯಕ್ಷನಾಗುವ ಕಾಲದಲ್ಲಿಯೂ ಆಗುವದು. ಆವಾಗ 40 ಇಬ್ಬರು ಹೊಲದಲ್ಲಿರುವರು; ಒಬ್ಬನು ತೆಗೆದುಕೊಳ್ಳಲ್ಪಡುವನು, ಒಬ್ಬನು ಬಿಡಲ್ಪಡು ವನು. ಇಬ್ಬರು ಹೆಂಗಸರು ಬೀಸುವಕಲ್ಲಿನ ಮುಂದೆ ಕೂತು ಬೀಸುತ್ತಿರುವರು; ಒಬ್ಬಳು 41 ತೆಗೆದುಕೊಳ್ಳಲ್ಪಡುವಳು, ಒಬ್ಬಳು ಬಿಡಲ್ಪಡುವಳು.

ಹೀಗಿರಲಾಗಿ, ನಿಮ್ಮ ಕರ್ತನು ಬರುವ ದಿನವನ್ನು ನೀವು ಅರಿಯದಿರುವದರಿಂದ ಎಚ್ಚ 42 ರವಾಗಿರ್ರಿ. ಕಳ್ಳನು ಬರುವ ಜಾವ ಮನೇಯಜಮಾನನಿಗೆ ತಿಳಿದಿದ್ದರೆ ಅವನು ಎಚ್ಚರ 43 ವಾಗಿದ್ದು ತನ್ನ ಮನೆಗೆ ಕನ್ನಾಹಾಕಗೊಡಿಸುತ್ತಿದ್ದಿಲ್ಲವೆಂದು ತಿಳುಕೊಳ್ಳಿರಿ. ಆದಕಾರಣ 44 ನೀವು ಸಹ ಸಿದ್ಧವಾಗಿರ್ರಿ; ನೀವು ನೆನಸದ ಗಳಿಗೆಯಲ್ಲಿ ಮನುಷ್ಯಕುಮಾರನು ಬರು ತ್ತಾನೆ. ಹಾಗಾದರೆ ಯಜಮಾನನು ತನ್ನ ಮನೆಯವರಿಗೆ ಹೊತ್ತುಹೊತ್ತಿಗೆ ಆಹಾರ 45 ಕೊಡಲಿಕ್ಕೆ ಅವರ ಮೇಲಿಟ್ಟ ನಂಬಿಗಸ್ತನೂ ವಿವೇಕಿಯೂ ಆದಂಥಾ ಆಳು ಯಾರು? ಯಜಮಾನನು ಬಂದು ಯಾವ ಆಳು ಹೀಗೆ ಮಾಡುವದನ್ನು ಕಾಣುವನೋ ಆ ಆಳು 46 ಧನ್ಯನು. ಅಂಥವನನ್ನು ಆತನು ತನ್ನ ಎಲ್ಲಾ ಬದುಕಿನ ಮೇಲಿಡುವನು ಎಂದು ನಿಮಗೆ 47 ಸತ್ಯವಾಗಿ ಹೇಳುತ್ತೇನೆ. ಆದರೆ ಆ ಕೆಟ್ಟ ಆಳು—ನನ್ನ ಯಜಮಾನನು ಬರುವದಕ್ಕೆ 48 ತಡಮಾಡುತ್ತಾನೆ ಅಂತ ತನ್ನ ಮನಸ್ಸಿನಲ್ಲಿ ಅಂದುಕೊಂಡು ತನ್ನ ಜೊತೇಆಳುಗಳನ್ನು 49 ಹೊಡೆಯುತ್ತಾ ಕುಡಿಕರ ಸಂಗಡ ತಿನ್ನುತ್ತಾ ಕುಡಿಯುತ್ತಾ ಇರುವದಾದರೆ, ಆ ಆಳು 50 ನೆನಸದ ದಿನದಲ್ಲಿಯೂ ತಿಳಿಯದ ಗಳಿಗೆಯಲ್ಲಿಯೂ ಯಜಮಾನನು ಬಂದು ಅವನನ್ನು 51 ಕಠಿನವಾಗಿ ಹೊಡಿಸಿ ಕಪಟಿಗಳಿಗೆ ಆಗತಕ್ಕ ಗತಿಯನ್ನು ಅವನಿಗೆ ನೇಮಿಸುವನು. ಅಲ್ಲಿ ಗೋಳಾಟವೂ ಕಟಕಟನೆ ಹಲ್ಲುಕಡಿಯೋಣವೂ ಇರುವವು.

**25** ಆಗ ಪರಲೋಕರಾಜ್ಯವು ಆರತಿಗಳನ್ನು[1] ತೆಗೆದುಕೊಂಡು ಮದಲಿಂಗನನ್ನು ಎದುರು
ಗೊಳ್ಳುವದಕ್ಕೆ ಹೊರಟಂಥಾ ಹತ್ತು ಮಂದಿ ಕನ್ಯೆಯರಿಗೆ ಹೋಲಿಕೆಯಾಗಿರುವದು.
2, 3 ಅವರಲ್ಲಿ ಐದುಮಂದಿ ಬುದ್ಧಿಯಿಲ್ಲದವರು, ಐದುಮಂದಿ ಬುದ್ಧಿವಂತೆಯರು. ಬುದ್ಧಿ
4 ಯಿಲ್ಲದವರು ತಮ್ಮ ಆರತಿಗಳನ್ನು ತಕ್ಕೊಂಡರು, ಆದರೆ ಎಣ್ಣೆ ತಕ್ಕೊಳ್ಳಲಿಲ್ಲ. ಬುದ್ಧಿ
5 ವಂತೆಯರು ತಮ್ಮ ಆರತಿಗಳ ಕೂಡ ಪಾತ್ರೆಗಳಲ್ಲಿ ಎಣ್ಣೆ ತಕ್ಕೊಂಡರು. ಮದಲಿಂಗನು
6 ಬರುವದಕ್ಕೆ ತಡಮಾಡಲು ಅವರೆಲ್ಲರು ತೂಕಡಿಸಿ ಮಲಗಿದರು. ಆದರೆ ಅರ್ಧರಾತ್ರಿ
ಯಲ್ಲಿ—ಈಗೋ, ಮದಲಿಂಗನು! ಅವನನ್ನು ಎದುರ್ಗೊಳ್ಳುವದಕ್ಕೆ ಹೊರಡಿರಿ ಎಂಬ
7 ಕೂಗಾಯಿತು. ಆಗ ಆ ಕನ್ಯೆಯರೆಲ್ಲರು ಎಚ್ಚತ್ತು ತಮ್ಮ ಆರತಿಗಳನ್ನು ನೆಟ್ಟಗೆ ಮಾಡಿ
8 ದರು. ಆಗ್ಯೆ ಬುದ್ಧಿಯಿಲ್ಲದವರು ಬುದ್ಧಿವಂತೆಯರಿಗೆ—ನಿಮ್ಮ ಎಣ್ಣೆಯಲ್ಲಿ ನಮಗೆ ಸ್ವಲ್ಪ
9 ಕೊಡಿರಿ. ನಮ್ಮ ಆರತಿಗಳು ಆರಿಹೋಗುತ್ತವೆ ಎಂದು ಹೇಳಿದರು. ಅದಕ್ಕೆ ಆ ಬುದ್ಧಿ
ವಂತೆಯರು—ನಿಮಗೆ ಕೊಟ್ಟರೆ ನಮಗೂ ನಿಮಗೂ ಕೂಡ ಸಾಲದೆಹೋದೀತು;
10 ನೀವು ಮಾರುವವರ ಬಳಿಗೆ ಹೋಗಿ ಕೊಂಡುಕೊಂಡರೆ ಒಳ್ಳೇದು ಅಂದರು. ಅವರು
ಕೊಂಡುಕೊಳ್ಳಲಿಕ್ಕೆ ಹೋದಾಗ ಮದಲಿಂಗನು ಬಂದನು. ಸಿದ್ಧವಾಗಿದ್ದವರು ಅವನ
11 ಸಂಗಡ ಮದುವೇಮನೆಯೊಳಕ್ಕೆ ಹೋದರು. ಬಾಗಲು ಮುಚ್ಚಲಾಯಿತು. ತರು
ವಾಯ ಉಳಿದ ಕನ್ಯೆಯರು ಸಹ ಬಂದು—ಯಜಮಾನನೇ, ಯಜಮಾನನೇ, ನಮಗೆ
12 ತೆರೆಯಬೇಕು ಅಂದರು. ಆತನು—ನಿಮ್ಮನ್ನು ನಾನರಿಯೆನೆಂದು ನಿಮಗೆ ಸತ್ಯವಾಗಿ
13 ಹೇಳುತ್ತೇನೆ ಅಂದನು. ಆದಕಾರಣ ಆ ದಿನವಾದರೂ ಗಳಿಗೆಯಾದರೂ ನಿಮಗೆ
ಗೊತ್ತಾಗದೆ ಇರುವದರಿಂದ ಎಚ್ಚರವಾಗಿರ್ರಿ.

14 ದೇಶಾಂತರಕ್ಕೆ ಹೋಗುವ ಒಬ್ಬ ಮನುಷ್ಯನು ತನ್ನ ಆಳುಗಳನ್ನು ಕರೆದು ಅವರಿಗೆ
15 ತನ್ನ ಆಸ್ತಿಯನ್ನು ಒಪ್ಪಿಸಿಕೊಟ್ಟಂತಿರುವದು. ಅವನು ಒಬ್ಬನಿಗೆ ಐದು ತಲಾಂತು[2]
ಒಬ್ಬನಿಗೆ ಎರಡು, ಒಬ್ಬನಿಗೆ ಒಂದು, ಹೀಗೆ ಅವನವನ ಸಾಮರ್ಥ್ಯದ ಪ್ರಕಾರ ಕೊಟ್ಟು,
16 ಬೇರೊಂದು ದೇಶಕ್ಕೆ ಹೋದನು. ಐದು ತಲಾಂತು ಹೊಂದಿದವನು ಹೋಗಿ ಅದನ್ನು
17 ವ್ಯಾಪಾರಕ್ಕೆ ಹಾಕಿ ಇನ್ನೂ ಐದು ತಲಾಂತು ಗಳಿಸಿಕೊಂಡನು. ಹಾಗೆಯೇ ಎರಡು
18 ತಲಾಂತು ಹೊಂದಿದವನು ಇನ್ನೂ ಎರಡು ಸಂಪಾದಿಸಿಕೊಂಡನು. ಆದರೆ ಒಂದು
ತಲಾಂತು ಹೊಂದಿದವನು ಹೋಗಿ ಭೂಮಿಯನ್ನು ಅಗಿದು ತನ್ನ ಧಣಿಯ ಹಣವನ್ನು
19 ಬಚ್ಚಿಟ್ಟನು. ಬಹುಕಾಲದ ಮೇಲೆ ಆ ಆಳುಗಳ ಧಣಿಯು ಬಂದು ಅವರಿಂದ ಲೆಕ್ಕಾ
20 ತೆಗೆದುಕೊಳ್ಳಲು, ಐದು ತಲಾಂತು ಹೊಂದಿದವನು ಮುಂದೆಬಂದು ಇನ್ನೂ ಐದು
ತಲಾಂತು ತಂದು—ಸ್ವಾಮೀ, ನೀನು ಐದು ತಲಾಂತನ್ನು ನನಗೆ ಕೊಟ್ಟಿದ್ದಿಯಲ್ಲಾ,
21 ಇಗೋ, ಇನ್ನು ಐದು ತಲಾಂತು ಸಂಪಾದಿಸಿದ್ದೇನೆ ಅಂದನು. ಅವನ ಧಣಿಯು—
ಭಲಾ, ನಂಬಿಗಸ್ತನಾದ ಒಳ್ಳೇ ಆಳು ನೀನು; ಸ್ವಲ್ಪ ಕೆಲಸದಲ್ಲಿ ನಂಬಿಗಸ್ತನಾಗಿದ್ದಿ,
ದೊಡ್ಡ ಕೆಲಸದಲ್ಲಿ ನಿನ್ನನ್ನು ಇಡುತ್ತೇನೆ; ನಿನ್ನ ಧಣಿಯ ಸೌಭಾಗ್ಯದಲ್ಲಿ ಸೇರು ಅಂದನು.
22 ಆಗ ಎರಡು ತಲಾಂತು ಹೊಂದಿದವನು ಮುಂದೆಬಂದು—ಸ್ವಾಮೀ, ಎರಡು ತಲಾಂತು

[1] ಅಥವಾ, ದೀವಟಿಗೆಗಳನ್ನು.
[2] ತಲಾಂತು ಅಂದರೆ ಸುಮಾರು ೬,೦೦೦ ರೂಪಾಯಿ.

ನನಗೆ ಒಪ್ಪಿಸಿದಿಯಲ್ಲಾ; ಇಗೋ, ಇನ್ನು ಎರಡು ತಲಾಂತು ಸಂಪಾದಿಸಿದ್ದೇನೆ ಅಂದನು.
ಅವನ ಧಣಿಯು—ಭಲಾ, ನಂಬಿಗಸ್ತನಾದ ಒಳ್ಳೇ ಆಳು ನೀನು; ಸ್ವಲ್ಪ ಕೆಲಸದಲ್ಲಿ ನಂಬಿ 23
ಗಸ್ತನಾಗಿದ್ದಿ, ದೊಡ್ಡ ಕೆಲಸದಲ್ಲಿ ನಿನ್ನನ್ನು ಇಡುತ್ತೇನೆ; ನಿನ್ನ ಧಣಿಯ ಸೌಭಾಗ್ಯದಲ್ಲಿ
ಸೇರು ಅಂದನು. ತರುವಾಯ ಒಂದೇ ತಲಾಂತು ಹೊಂದಿದವನು ಸಹ ಮುಂದೆಬಂದು— 24
ಸ್ವಾಮಿಾ, ನೀನು ಕಠಿನ ಮನುಷ್ಯನು, ನೀನು ಬಿತ್ತದಿರುವಲ್ಲಿ ಕೊಯ್ಯುವವನು, ನೀನು
ತೂರದಿರುವಲ್ಲಿ ರಾಶಿಮಾಡಿಕೊಳ್ಳುವವನು ಎಂದು ತಿಳಿದು ಹೆದರಿಕೊಂಡು, ಹೋಗಿ 25
ನಿನ್ನ ತಲಾಂತನ್ನು ಭೂಮಿಯಲ್ಲಿ ಬಚ್ಚಿಟ್ಟೆನು; ಇಗೋ, ನಿನ್ನದು ನಿನಗೆ ಸಂದಿದೆ ಅಂದನು.
ಆಗ ಅವನ ಧಣಿಯು ಅವನಿಗೆ—ಮೈಗಳ್ಳನಾದ ಕೆಟ್ಟ ಆಳು ನೀನು; ನಾನು ಬಿತ್ತದಿರು 26
ವಲ್ಲಿ ಕೊಯ್ಯುವವನು ತೂರದಿರುವಲ್ಲಿ ರಾಶಿಮಾಡಿಕೊಳ್ಳುವವನು ಎಂದು ತಿಳಿದಿಯಾ?
ಹಾಗಾದರೆ, ನೀನು ನನ್ನ ಹಣವನ್ನು ಸಾಹುಕಾರರಲ್ಲಿ ಬಡ್ಡಿಗೆ ಹಾಕಬೇಕಾಗಿತ್ತು; ನಾನು 27
ಬಂದಾಗ ನನ್ನದನ್ನು ಬಡ್ಡಿಯ ಕೂಡ ತಕ್ಕೊಳ್ಳುತ್ತಿದ್ದೆನು ಎಂದು ಹೇಳಿ ತನ್ನ ಸೇವಕ
ರಿಗೆ—ಅವನಿಂದ ಆ ತಲಾಂತು ತೆಗೆದು ಹತ್ತು ತಲಾಂತು ಇದ್ದವನಿಗೆ ಕೊಡಿರಿ. ಇದ್ದ 28, 29
ವನಿಗೆ ಕೊಡಲ್ಪಡುವದು, ಅವನಿಗೆ ಮತ್ತೂ ಹೆಚ್ಚಾಗುವದು; ಇಲ್ಲದವನಿಂದ ಅವನಿಗೆ
ಇದ್ದದ್ದೂ ತೆಗೆಯಲ್ಪಡುವದು. ಮತ್ತು ಕೆಲಸಕ್ಕೆ ಬಾರದ ಈ ಆಳನ್ನು ಹೊರಗೆ ಕತ್ತ 30
ಲೆಗೆ ಹಾಕಿಬಿಡಿರಿ ಎಂದು ಹೇಳಿದನು. ಅಲ್ಲಿ ಗೋಳಾಟವೂ ಕಟಕಟನೆ ಹಲ್ಲುಕಡಿ
ಯೋಣವೂ ಇರುವವು.

ಇದಲ್ಲದೆ, ಮನುಷ್ಯಕುಮಾರನು ತನ್ನ ಮಹಿಮೆಯಿಂದ ಎಲ್ಲಾ ದೇವದೂತರೊಂದಿಗೆ 31
ಕೂಡಿಬರುವಾಗ ತನ್ನ ಮಹಿಮೆಯ ಸಿಂಹಾಸನದಲ್ಲಿ ಕೂತುಕೊಳ್ಳುವನು; ಮತ್ತು ಎಲ್ಲಾ 32
ದೇಶಗಳ ಜನರು ಆತನ ಮುಂದೆ ಕೂಡಿಸಲ್ಪಡುವರು. ಕುರುಬನು ಆಡುಗಳನ್ನೂ
ಕುರಿಗಳನ್ನೂ ಬೇರೆಬೇರೆಮಾಡುವ ಪ್ರಕಾರ ಆತನು ಅವರನ್ನು ಬೇರೆಬೇರೆಮಾಡಿ, ಕುರಿ 33
ಗಳನ್ನು ತನ್ನ ಬಲಗಡೆಯಲ್ಲಿ ಆಡುಗಳನ್ನು ಎಡಗಡೆಯಲ್ಲಿ ನಿಲ್ಲಿಸುವನು. ಆಗ ಅರಸನು 34
ತನ್ನ ಬಲಗಡೆಯಲ್ಲಿರುವವರಿಗೆ—ನನ್ನ ತಂದೆಯ ಆಶೀರ್ವಾದ ಹೊಂದಿದವರೇ ಬನ್ನಿರಿ,
ಲೋಕಾದಿಯಿಂದ ನಿಮಗೋಸ್ಕರ ಸಿದ್ಧಮಾಡಿದ ರಾಜ್ಯವನ್ನು ಸ್ವಾಸ್ಥ್ಯವಾಗಿ ತೆಗೆದು
ಕೊಳ್ಳಿರಿ. ನಾನು ಹಸಿದಿದ್ದೆನು, ನನಗೆ ಊಟಕ್ಕೆ ಕೊಟ್ಟಿರಿ; ನಾನು ಬಾಯಾರಿದ್ದೆನು, 35
ನನಗೆ ಕುಡಿಯುವದಕ್ಕೆ ಕೊಟ್ಟಿರಿ; ಪರದೇಶಿಯಾಗಿದ್ದೆನು, ನನ್ನನ್ನು ಸೇರಿಸಿಕೊಂಡಿರಿ;
ಬಟ್ಟೆಯಿಲ್ಲದವನಾಗಿದ್ದೆನು, ನನಗೆ ಉಡುವದಕ್ಕೆ ಕೊಟ್ಟಿರಿ; ರೋಗದಲ್ಲಿ ಬಿದ್ದಿದ್ದೆನು, 36
ನನ್ನನ್ನು ಆರೈಕೆಮಾಡುವದಕ್ಕೆ ಬಂದಿರಿ; ಸೆರೆಮನೆಯಲ್ಲಿದ್ದೆನು, ನನ್ನನ್ನು ನೋಡುವದಕ್ಕೆ
ಬಂದಿರಿ ಎಂದು ಹೇಳುವನು. ಅದಕ್ಕೆ ನೀತಿವಂತರು—ಸ್ವಾಮಿಾ, ಯಾವಾಗ ನೀನು 37
ಹಸಿದದ್ದನ್ನು ಕಂಡು ನಿನಗೆ ಊಟಕ್ಕೆ ಕೊಟ್ಟೆವು? ಇಲ್ಲವೆ ನೀನು ಬಾಯಾರಿದ್ದನ್ನು
ಕಂಡು ಕುಡಿಯುವದಕ್ಕೆ ಕೊಟ್ಟೆವು? ಯಾವಾಗ ನೀನು ಪರದೇಶಿಯಾಗಿರುವದನ್ನು 38
ಕಂಡು ಸೇರಿಸಿಕೊಂಡೆವು? ಇಲ್ಲವೆ ನಿನಗೆ ಬಟ್ಟೆಯಿಲ್ಲದ್ದನ್ನು ಕಂಡು ಉಡುವದಕ್ಕೆ
ಕೊಟ್ಟೆವು? ಯಾವಾಗ ನೀನು ರೋಗದಲ್ಲಿ ಬಿದ್ದದ್ದನ್ನು ಅಥವಾ ಸೆರೆಮನೆಯಲ್ಲಿ ಇದ್ದ 39
ದ್ದನ್ನು ಕಂಡು ನಿನ್ನನ್ನು ನೋಡುವದಕ್ಕೆ ಬಂದೆವು ಎಂದು ಉತ್ತರವಾಗಿ ಹೇಳುವರು.
ಅದಕ್ಕೆ ಅರಸನು—ಈ ನನ್ನ ಸಹೋದರರಲ್ಲಿ ಕೇವಲ ಅಲ್ಪನಾದವನೊಬ್ಬನಿಗೆ ಏನೇನು 40

ಮಾಡಿದಿರೋ ಅದನ್ನು ನನಗೂ ಮಾಡಿದ ಹಾಗಾಯಿತು ಎಂದು ನಿಮಗೆ ಸತ್ಯವಾಗಿ ಹೇಳು
41 ತ್ತೇನೆ ಅನ್ನುವನು. ಆ ಮೇಲೆ ಆತನು ಎಡಗಡೆಯಲ್ಲಿರುವವರಿಗೆ—ಶಾಪಗ್ರಸ್ತರೇ, ನನ್ನನ್ನು ಬಿಟ್ಟು ಪಿಶಾಚನಿಗೂ ಅವನ ದೂತರಿಗೂ ಸಿದ್ಧ ಮಾಡಿರುವ ನಿತ್ಯ ಬೆಂಕಿಯೊಳಕ್ಕೆ
42 ಹೋಗಿರಿ. ನಾನು ಹಸಿದಿದ್ದೆನು, ನೀವು ನನಗೆ ಊಟಕ್ಕೆ ಕೊಡಲಿಲ್ಲ; ನಾನು ಬಾಯಾ
43 ರಿದ್ದೆನು, ನೀವು ನನಗೆ ಕುಡಿಯುವದಕ್ಕೆ ಕೊಡಲಿಲ್ಲ; ಪರದೇಶಿಯಾಗಿದ್ದೆನು, ನೀವು ನನ್ನನ್ನು ಸೇರಿಸಿಕೊಳ್ಳಲಿಲ್ಲ; ಬಟ್ಟೆಯಿಲ್ಲದವನಾಗಿದ್ದೆನು, ನೀವು ನನಗೆ ಉಡುವದಕ್ಕೆ ಕೊಡಲಿಲ್ಲ; ರೋಗದಲ್ಲಿ ಬಿದ್ದಿದ್ದೆನು, ಸೆರೆಮನೆಯಲ್ಲಿದ್ದೆನು, ನೀವು ನನ್ನನ್ನು ಆರೈಕೆ
44 ಮಾಡುವದಕ್ಕೆ ಬರಲಿಲ್ಲವೆಂದು ಹೇಳುವನು. ಅದಕ್ಕೆ ಅವರು ಸಹ—ಸ್ವಾಮೀ, ಯಾವಾಗ ನೀನು ಹಸಿದದ್ದನ್ನೂ ನೀನು ಬಾಯಾರಿದ್ದನ್ನೂ ನೀನು ಪರದೇಶಿಯಾದ ದ್ದನ್ನೂ ಬಟ್ಟೆಯಿಲ್ಲದವನಾಗಿದ್ದದ್ದನ್ನೂ ರೋಗದಲ್ಲಿ ಬಿದ್ದದ್ದನ್ನೂ ಸೆರೆಮನೆಯಲ್ಲಿದ್ದ
45 ದ್ದನ್ನೂ ಕಂಡು ನಿನಗೆ ಉಪಚಾರ ಮಾಡದೆ ಹೋದೆವು? ಅನ್ನುವರು. ಆಗ ಆತನು— ನೀವು ಈ ಕೇವಲ ಅಲ್ಪವಾದವರಲ್ಲಿ ಒಬ್ಬನಿಗೆ ಏನೇನು ಮಾಡದೆ ಹೋದಿರೋ ಅದನ್ನು ನನಗೂ ಮಾಡದೆ ಹೋದಹಾಗಾಯಿತು ಎಂದು ನಿಮಗೆ ಸತ್ಯವಾಗಿ ಹೇಳುತ್ತೇನೆ
46 ಅನ್ನುವನು. ಮತ್ತು ಇವರು ನಿತ್ಯಶಿಕ್ಷೆಗೂ ನೀತಿವಂತರು ನಿತ್ಯಜೀವಕ್ಕೂ ಹೋಗುವರು.

ಅಧಿಕಾರಸ್ಥರು ಯೇಸುವನ್ನು ಕೊಲ್ಲಬೇಕೆಂದು ಆಲೋಚಿಸಿದ್ದು. ಒಬ್ಬ ಸ್ತ್ರೀಯು ಬೆಲೆಯುಳ್ಳ ಪರಿಮಳ ತೈಲವನ್ನು ಆತನ ಮೇಲೆ ಹೊಯಿದದ್ದು.

(ಮಾರ್ಕ 14, 1—11; ಲೂಕ 22, 1—6; ಯೋಹಾನ 12, 1—8.)

**26** ಯೇಸು ಈ ಮಾತುಗಳನ್ನೆಲ್ಲಾ ಆಡಿ ಮುಗಿಸಿದ ಮೇಲೆ ತನ್ನ ಶಿಷ್ಯರಿಗೆ—
2 ಎರಡು ದಿವಸಗಳಾದ ಮೇಲೆ ಪಸ್ಕಹಬ್ಬ ಬರುತ್ತದೆಂದು ಬಲ್ಲಿರಿ; ಆಗ ಮನುಷ್ಯಕುಮಾರ ನನ್ನು ಶಿಲುಬೆಗೆ ಹಾಕುವದಕ್ಕೆ ಒಪ್ಪಿಸಿಕೊಡೋಣವಾಗುವದು ಎಂದು ಹೇಳಿದನು.
3 ಆ ಕಾಲದಲ್ಲಿ ಮಹಾಯಾಜಕರೂ ಪ್ರಜೆಯ ಹಿರಿಯರೂ ಕಾಯಫನೆಂಬ ಮಹಾ
4 ಯಾಜಕನ ಮಠಕ್ಕೆ ಕೂಡಿಬಂದು, ಯೇಸುವನ್ನು ಉಪಾಯದಿಂದ ಹಿಡಿದು ಕೊಲ್ಲ
5 ಬೇಕೆಂಬದಾಗಿ ಆಲೋಚನೆಮಾಡಿಕೊಂಡರು. ಆದರೂ—ಹಬ್ಬದಲ್ಲಿ ಹಿಡಿಯಬಾರದು, ನಮ್ಮ ಜನರಲ್ಲಿ ಗದ್ದಲವಾದೀತು ಅಂದುಕೊಂಡರು.
6 ಯೇಸು ಬೇಥಾನ್ಯದಲ್ಲಿ ಕುಷ್ಠರೋಗಿಯಾದ ಸೀಮೋನನ ಮನೆಯಲ್ಲಿದ್ದಾಗ, ಒಬ್ಬ
7 ಸ್ತ್ರೀಯು ಬಹು ಬೆಲೆಯುಳ್ಳ ಸುಗಂಧತೈಲದ ಭರಣಿಯನ್ನು[1] ತೆಗೆದುಕೊಂಡು ಆತನ ಬಳಿಗೆ ಬಂದು, ಆತನು ಊಟಕ್ಕೆ ಕೂತಿರುವಾಗ ಆತನ ತಲೆಯ ಮೇಲೆ ಆ ತೈಲವನ್ನು
8 ಹೊಯಿದಳು. ಶಿಷ್ಯರು ಇದನ್ನು ಕಂಡು ಕೋಪಗೊಂಡು—ಈ ನಷ್ಟ ಯಾತಕ್ಕೆ?
9 ಈ ತೈಲವನ್ನು ಬಹಳ ಹಣಕ್ಕೆ ಮಾರಿ ಬಡವರಿಗೆ ಕೊಡಬಹುದಾಗಿತ್ತು ಅಂದರು.
10 ಯೇಸು ಅದನ್ನು ತಿಳಿದು ಅವರಿಗೆ—ಈ ಸ್ತ್ರೀಗೆ ಯಾಕೆ ತೊಂದರೆಕೊಡುತ್ತೀರಿ? ಈಕೆ

[1] ಮೂಲ: ಚಂದ್ರಕಾಂತಶಿಲೆಯ ಭರಣಿಯನ್ನು.

ನನಗೆ ಒಳ್ಳೇ ಕಾರ್ಯವನ್ನು ಮಾಡಿದ್ದಾಳೆ. ಬಡವರು ಯಾವಾಗಲೂ ನಿಮ್ಮಲ್ಲಿ ಇರು 11
ತ್ತಾರೆ, ಆದರೆ ನಾನು ನಿಮ್ಮಲ್ಲಿ ಯಾವಾಗಲೂ ಇರುವದಿಲ್ಲ. ಈಕೆಯು ಈ ತೈಲವನ್ನು 12
ನನ್ನ ದೇಹದ ಮೇಲೆ ಹೊಯಿದದ್ದು ನನ್ನ ಉತ್ತರಕ್ರಿಯೆಗಾಗಿಯೇ. ಈ ಸುವಾರ್ತೆಯು 13
ಸರ್ವಲೋಕದಲ್ಲಿ ಎಲ್ಲೆಲ್ಲಿ ಸಾರಲಾಗುವದೋ ಅಲ್ಲಲ್ಲಿ ಈಕೆ ಮಾಡಿದ್ದನ್ನು ಸಹ ಈಕೆಯ
ನೆನಪಿಗಾಗಿ ಹೇಳುವರೆಂದು ನಿಮಗೆ ಸತ್ಯವಾಗಿ ಹೇಳುತ್ತೇನೆ ಎಂದು ಹೇಳಿದನು.

ಆ ಮೇಲೆ ಹನ್ನೆರಡು ಮಂದಿ ಶಿಷ್ಯರಲ್ಲಿ ಒಬ್ಬನಾದ ಇಸ್ಕರಿಯೋತ ಯೂದನೆಂಬವನು 14
ಮಹಾಯಾಜಕರ ಬಳಿಗೆ ಹೋಗಿ—ನಾನು ಅವನನ್ನು ನಿಮಗೆ ಹಿಡುಕೊಟ್ಟರೆ ನನಗೆ 15
ಏನು ಕೊಡುತ್ತೀರಿ? ಅಂದನು. ಅವರು ಅವನಿಗೆ ಮೂವತ್ತು ರೂಪಾಯಿ ಕೊಟ್ಟರು.
ಅಂದಿನಿಂದ ಅವನು ಆತನನ್ನು ಹಿಡುಕೊಡುವದಕ್ಕೆ ಸಮಯ ನೋಡಿಕೊಂಡೇ ಇದ್ದನು. 16

### ಯೇಸು ತನ್ನ ಶಿಷ್ಯರ ಸಂಗಡ ಕಡೇ ಭೋಜನವನ್ನು ಮಾಡಿದ್ದು.

(ಮಾರ್ಕ 14, 12—31; ಲೂಕ 22, 7—34; ಯೋಹಾನ 13, 21—26.)

ಹುಳಿಯಿಲ್ಲದ ರೊಟ್ಟಿಯ ಹಬ್ಬದ ಮೊದಲನೇ ದಿವಸದಲ್ಲಿ ಶಿಷ್ಯರು ಯೇಸುವಿನ 17
ಬಳಿಗೆ ಬಂದು—ಪಸ್ಕದ ಊಟಾಮಾಡುವದಕ್ಕೆ ನಾವು ನಿನಗೆ ಎಲ್ಲಿ ಸಿದ್ಧಮಾಡಬೇಕ
ನ್ನುತ್ತೀ? ಅಂದರು. ಅದಕ್ಕಾತನು—ನೀವು ಪಟ್ಟಣಕ್ಕೆ ಇಂಥವನ ಬಳಿಗೆ ಹೋಗಿ ಅವ 18
ನಿಗೆ—ನನ್ನ ಕಾಲ ಸಮೀಪವಾಯಿತು, ನಿನ್ನ ಮನೆಯಲ್ಲಿ ನನ್ನ ಶಿಷ್ಯರ ಸಂಗಡ ಪಸ್ಕಹಬ್ಬ
ಮಾಡುತ್ತೇನೆ ಎಂಬದಾಗಿ ಗುರುವು ಹೇಳುತ್ತಾನೆಂದು ಹೇಳಿರಿ ಅಂದನು. ಶಿಷ್ಯರು 19
ಯೇಸು ತಮಗೆ ಅಪ್ಪಣೆಕೊಟ್ಟಂತೆ ಮಾಡಿ ಪಸ್ಕಕ್ಕೆ ಸೌರಿಸಿದರು.

ಸಂಜೆಯಾದಾಗ ಆತನು ಹನ್ನೆರಡು ಮಂದಿ ಶಿಷ್ಯರ ಸಂಗಡ ಊಟಕ್ಕೆ ಕೂತು 20
ಕೊಂಡನು. ಅವರು ಊಟಾಮಾಡುತ್ತಿರುವಾಗ ಆತನು—ನಿಮ್ಮಲ್ಲಿ ಒಬ್ಬನು ನನ್ನನ್ನು 21
ಹಿಡುಕೊಡುವನೆಂದು ನಿಮಗೆ ಸತ್ಯವಾಗಿ ಹೇಳುತ್ತೇನೆ ಅಂದನು. ಆಗ ಅವರು ಬಹಳ 22
ದುಃಖಪಟ್ಟು—ಸ್ವಾಮೀ, ನಾನಲ್ಲವಲ್ಲ ಎಂದು ಪ್ರತಿಯೊಬ್ಬರು ಕೇಳುವವರಾದರು.
ಅದಕ್ಕಾತನು—ಬಟ್ಟಲಲ್ಲಿ ನನ್ನ ಸಂಗಡ ಕೈ ಅದ್ದಿದವನೇ ನನ್ನನ್ನು ಹಿಡುಕೊಡುವನು. 23
ಮನುಷ್ಯಕುಮಾರನು ಹೊರಟುಹೋಗುತ್ತಾನೆ ಸರಿ; ಹಾಗೆ ಆತನ ವಿಷಯವಾಗಿ ಬರೆ 24
ದದೆಯಲ್ಲಾ. ಆದರೆ ಯಾವನು ಮನುಷ್ಯಕುಮಾರನನ್ನು ಹಿಡುಕೊಡುವನೋ ಅವನ
ದುರ್ಗತಿಯನ್ನು ಏನು ಹೇಳಲಿ. ಆ ಮನುಷ್ಯನು ಹುಟ್ಟದಿದ್ದರೆ ಅವನಿಗೆ ವಾಸಿ ಅಂದನು.
ಆಗ ಆತನನ್ನು ಹಿಡುಕೊಡಬೇಕೆಂದಿದ್ದ ಯೂದನು—ಗುರುವೇ, ನಾನಲ್ಲವಲ್ಲ? ಅನ್ನ 25
ಲಾಗಿ; ಯೇಸು ಅವನಿಗೆ—ನೀನೇ ಹೇಳಿದ್ದೀ ಎಂದು ಹೇಳಿದನು. ಅವರು ಊಟಾ 26
ಮಾಡುತ್ತಿರುವಾಗ ಯೇಸು ರೊಟ್ಟಿಯನ್ನು ತೆಗೆದುಕೊಂಡು ಸ್ತೋತ್ರಾಮಾಡಿ ಮುರಿದು
ಶಿಷ್ಯರಿಗೆ ಕೊಟ್ಟು—ತಕ್ಕೊಳ್ಳಿರಿ, ತಿನ್ನಿರಿ, ಇದು ನನ್ನ ದೇಹ ಅಂದನು. ಆ ಮೇಲೆ ಪಾತ್ರೆ 27
ಯನ್ನು ತೆಗೆದುಕೊಂಡು ಸ್ತೋತ್ರಾಮಾಡಿ ಅವರಿಗೆ ಕೊಟ್ಟು—ಇದರಲ್ಲಿರುವದನ್ನು
ಎಲ್ಲರೂ ಕುಡಿಯಿರಿ; ಇದು ನನ್ನ ರಕ್ತ, ಇದು ಒಡಂಬಡಿಕೆಯ[1] ರಕ್ತ, ಇದು ಪಾಪ 28

---

[1] ಕೆಲವು ಪ್ರತಿಗಳಲ್ಲಿ—ಹೊಸ ಒಡಂಬಡಿಕೆಯ ಎಂದು ಬರೆದಿದೆ; ಹೊರಡೋಣ ೨೪, ೮; ಯೆರೆಮೀಾಯ ೩೧, ೩೧; ಜೆಕರ್ಯೆಯ ೯, ೧೧ ನೋಡಿರಿ.

29 ಗಳ ಕ್ಷಮೆಗಾಗಿ ಬಹು ಜನರಿಗೋಸ್ಕರ ಸುರಿಸಲ್ಪಡುವ ರಕ್ತ. ಮತ್ತು ನಿಮಗೆ ಹೇಳು ವದೇನಂದರೆ, ನಾನು ನನ್ನ ತಂದೆಯ ರಾಜ್ಯದಲ್ಲಿ ದ್ರಾಕ್ಷಾರಸವನ್ನು ನಿಮ್ಮ ಸಂಗಡ ಹೊಸ
30 ದಾಗಿ ಕುಡಿಯುವ ದಿನದ ವರೆಗೂ ಇನ್ನು ಮೇಲೆ ಕುಡಿಯುವದಿಲ್ಲ ಅಂದನು. ಬಳಿಕ ಕೀರ್ತನೆಯನ್ನು ಹಾಡಿ ಎಣ್ಣೇಮರಗಳ ಗುಡ್ಡಕ್ಕೆ ಹೊರಟುಹೋದರು.
31 ಆಗ ಯೇಸು ಅವರಿಗೆ—ನೀವೆಲ್ಲರೂ ಈ ರಾತ್ರಿ ನನ್ನ ವಿಷಯದಲ್ಲಿ ದಿಗಿಲುಪಟ್ಟು ಹಿಂಜರಿಯುವಿರಿ. ಕುರುಬನನ್ನು ಹೊಡೆಯುವೆನು, ಹಿಂಡಿನ ಕುರಿಗಳು ಚದರಿಹೋಗುವವು
32 ಎಂದು[1] ಬರೆದದೆಯಲ್ಲಾ. ಆದರೆ ನಾನು ಜೀವಿತನಾಗಿ ಎದ್ದ ಮೇಲೆ ನಿಮ್ಮ ಮುಂದೆ
33 ಗಲಿಲಾಯಕ್ಕೆ ಹೋಗುವೆನು ಎಂದು ಹೇಳಿದನು. ಪೇತ್ರನು ಆತನಿಗೆ—ಎಲ್ಲರೂ ನಿನ್ನ ವಿಷಯದಲ್ಲಿ ದಿಗಿಲುಪಟ್ಟು ಹಿಂಜರಿದರೂ ನಾನು ಎಂದಿಗೂ ಹಿಂಜರಿಯುವದಿಲ್ಲ ಎಂದು
34 ಉತ್ತರಕೊಡಲು; ಯೇಸು—ಇದೇ ರಾತ್ರಿಯಲ್ಲಿ ಕೋಳಿಕೂಗುವದಕ್ಕಿಂತ ಮುಂಚೆ ನೀನು ನನ್ನ ವಿಷಯದಲ್ಲಿ—ಅವನನ್ನು ಅರಿಯೆನೆಂಬದಾಗಿ ಮೂರು ಸಾರಿ ಹೇಳುವಿ
35 ಎಂದು ನಿನಗೆ ಸತ್ಯವಾಗಿ ಹೇಳುತ್ತೇನೆ ಅಂದನು. ಪೇತ್ರನು ಆತನಿಗೆ—ನಾನು ನಿನ್ನ ಸಂಗಡ ಸಾಯಬೇಕಾದರೂ ನಿನ್ನನ್ನು ಅರಿಯೆನೆಂದು ಹೇಳುವದೇ ಇಲ್ಲ ಎಂದು ಹೇಳಿ ದನು. ಅದರಂತೆ ಶಿಷ್ಯರೆಲ್ಲರೂ ಹೇಳಿದರು.

ಯೇಸು ಗೆತ್ಸೇಮನೆ ತೋಟದಲ್ಲಿ ಪ್ರಾರ್ಥಿಸುವಾಗ ಯೂದನು ಆತನನ್ನು ಶತ್ರುಗಳಿಗೆ ಹಿಡುಕೊಟ್ಟದ್ದು.
(ಮಾರ್ಕ 14, 32—50; ಲೂಕ 22, 40—53; ಯೋಹಾನ 18, 1—12.)

36 ತರುವಾಯ ಯೇಸು ತನ್ನ ಶಿಷ್ಯರ ಸಂಗಡ ಗೆತ್ಸೇಮನೆ ಎಂಬ ತೋಟಕ್ಕೆ ಬಂದು ಅವರಿಗೆ—ಇಲ್ಲೇ ಕೂತುಕೊಳ್ಳಿರಿ, ನಾನು ಅತ್ತಲಾಗಿ ಹೋಗಿ ಪ್ರಾರ್ಥನೆ ಮಾಡಿ ಬರು
37 ತ್ತೇನೆ ಎಂದು ಹೇಳಿ, ಪೇತ್ರನನ್ನೂ ಜೆಬೆದಾಯನ ಇಬ್ಬರು ಮಕ್ಕಳನ್ನೂ ಕರಕೊಂಡು
38 ಹೋಗಿ, ದುಃಖಪಟ್ಟು ಮನಗುಂದಿದವನಾದನು. ಮತ್ತು ಅವರಿಗೆ—ನನ್ನ ಪ್ರಾಣವು ಸಾಯುವಷ್ಟು ದುಃಖಕ್ಕೆ ಒಳಗಾಗಿದೆ; ಇಲ್ಲಿ ಇದ್ದು ನನ್ನ ಸಂಗಡ ಎಚ್ಚರವಾಗಿರ್ರಿ
39 ಎಂದು ಹೇಳಿ, ಸ್ವಲ್ಪ ಮುಂದೆ ಹೋಗಿ, ನೆಲದ ಮೇಲೆ ಅಡ್ಡಬಿದ್ದು—ನನ್ನ ತಂದೆಯೇ, ಸಾಧ್ಯವಾಗಿದ್ದರೆ, ಈ ಪಾತ್ರೆಯು[2] ನನ್ನನ್ನು ಬಿಟ್ಟುಹೋಗಲಿ; ಆದರೆ ನನ್ನ ಚಿತ್ತದಂತಾ
40 ಗದೆ ನಿನ್ನ ಚಿತ್ತದಂತೆಯೇ ಆಗಲಿ ಎಂದು ಪ್ರಾರ್ಥನೆಮಾಡಿದನು. ಆ ಮೇಲೆ ಆ ಶಿಷ್ಯರ ಬಳಿಗೆ ಬಂದು ಅವರು ನಿದ್ದೆಮಾಡುತ್ತಿರುವದನ್ನು ಕಂಡು, ಪೇತ್ರನಿಗೆ—ಹೀಗೋ?
41 ಒಂದು ಗಳಿಗೆಯಾದರೂ ನನ್ನ ಸಂಗಡ ಎಚ್ಚರವಾಗಿರಲಾರಿರಾ? ಶೋಧನೆಗೆ ಒಳಗಾಗ ದಂತೆ ಎಚ್ಚರವಾಗಿದ್ದು ಪ್ರಾರ್ಥಿಸಿರಿ; ಮನಸ್ಸು[3] ಸಿದ್ಧವಾಗಿದೆ ಸರಿ, ಆದರೆ ದೇಹಕ್ಕೆ[4]
42 ಬಲ ಸಾಲದು ಎಂದು ಹೇಳಿದನು. ತಿರಿಗಿ ಎರಡನೇ ಸಾರಿ ಹೋಗಿ—ನನ್ನ ತಂದೆಯೇ, ನಾನು ಕುಡಿಯದ ಹೊರತು ಈ ಪಾತ್ರೆ ಬಿಟ್ಟುಹೋಗಕೂಡದಾಗಿದ್ದರೆ, ನಿನ್ನ ಚಿತ್ತ
43 ದಂತಾಗಲಿ ಎಂದು ಪ್ರಾರ್ಥನೆಮಾಡಿದನು. ಆತನು ತಿರಿಗಿ ಬಂದಾಗ ಅವರು ನಿದ್ದೇ

[1] ಜೆಕರ್ಯ ೧೩, ೭. [2] ಅಂದರೆ, ಕಷ್ಟಾನುಭವ. [3] ಮೂಲ: ಆತ್ಮ.
[4] ಅಥವಾ, ಶರೀರಭಾವವಾದರೆ.

ಮಾಡುವದನ್ನು ಕಂಡನು; ಅವರ ಕಣ್ಣುಗಳು ಭಾರವಾಗಿದ್ದವು. ಆ ಮೇಲೆ ತಿರಿಗಿ 44 ಅವರನ್ನು ಬಿಟ್ಟು ಹೋಗಿ, ಅದೇ ಮಾತನ್ನು ಹೇಳಿ ಮೂರನೇ ಸಾರಿ ಪ್ರಾರ್ಥಿಸಿದನು. ತರುವಾಯ ಶಿಷ್ಯರ ಬಳಿಗೆ ಬಂದು—ನೀವು ಇನ್ನೂ ನಿದ್ದೇಮಾಡಿ ದಣುವಾರಿಸಿಕೊಳ್ಳು 45 ವಿರೋ? ಇಗೋ ಗಳಿಗೆ ಬಂತು, ಈಗ ಮನುಷ್ಯಕುಮಾರನು ದುರ್ಜನರ ಕೈಗೆ ಒಪ್ಪಿಸ ಲ್ಪಡುತ್ತಾನೆ. ಏಳಿರಿ, ಹೋಗೋಣ; ನನ್ನನ್ನು ಹಿಡುಕೊಡುವವನು ಹತ್ತರಕ್ಕೆ ಬಂದಿ 46 ದ್ದಾನೆ ನೋಡಿರಿ ಅಂದನು.

ಆತನು ಇನ್ನೂ ಮಾತಾಡುತ್ತಿರಲು ಹನ್ನೆರಡು ಮಂದಿ ಶಿಷ್ಯರಲ್ಲಿ ಒಬ್ಬನಾದ ಯೂದನು 47 ಬಂದನು; ಮಹಾಯಾಜಕರ ಕಡೆಯಿಂದಲೂ ಜನರ ಹಿರಿಯರ ಕಡೆಯಿಂದಲೂ ಬಹು ಜನರು ಕತ್ತಿ ದೊಣ್ಣೆಗಳನ್ನು ಹಿಡುಕೊಂಡು ಅವನ ಸಂಗಡ ಬಂದರು. ಇದಲ್ಲದೆ ಆತ 48 ನನ್ನು ಹಿಡುಕೊಡುವವನು ಅವರಿಗೆ—ನಾನು ಯಾರಿಗೆ ಮುದ್ದಿಡುತ್ತೇನೋ ಅವನೇ ಆತನು; ಅವನನ್ನು ಹಿಡುಕೊಳ್ಳಿರಿ ಎಂದು ಗುರುತು ಹೇಳಿಕೊಟ್ಟಿದ್ದನು. ಅಲ್ಲಿಗೆ ಬಂದ 49 ಕೂಡಲೇ ಅವನು ಯೇಸುವಿನ ಬಳಿಗೆ ಹೋಗಿ—ಗುರುವೇ, ನಮಸ್ಕಾರ ಎಂದು ಹೇಳಿ, ಆತನಿಗೆ ಮುದ್ದಿಟ್ಟನು. ಯೇಸು ಅವನಿಗೆ—ಗೆಳೆಯನೇ, ನೀನು ಬಂದ ಕೆಲಸ ಇದೇ 50 ಯೋ? ಎಂದು ಹೇಳಲು, ಅವರು ಹತ್ತರಕ್ಕೆ ಬಂದು ಯೇಸುವಿನ ಮೇಲೆ ಕೈ ಹಾಕಿ ಆತನನ್ನು ಹಿಡಿದರು. ಹಿಡಿಯುತ್ತಲೇ ಯೇಸುವಿನ ಸಂಗಡ ಇದ್ದವರಲ್ಲಿ ಒಬ್ಬನು 51 ಕೈಚಾಚಿ ತನ್ನ ಕತ್ತಿಯನ್ನು ಹಿರಿದು ಮಹಾಯಾಜಕನ ಆಳನ್ನು ಹೊಡೆದು ಅವನ ಕಿವಿ ಯನ್ನು ಕಡಿದುಹಾಕಿದನು. ಆಗ ಯೇಸು ಅವನಿಗೆ—ನಿನ್ನ ಕತ್ತಿಯನ್ನು ಒರೆಯಲ್ಲಿ 52 ಹಾಕು; ಕತ್ತಿಯನ್ನು ಹಿಡಿದವರೆಲ್ಲರು ಕತ್ತಿಯಿಂದ ಸಾಯುವರು. ನಾನು ನನ್ನ 53 ತಂದೆಯನ್ನು ಬೇಡಿಕೊಳ್ಳಲಾರೆನೆಂದೂ ಬೇಡಿಕೊಂಡರೆ ಆತನು ನನಗೆ ಈಗಲೇ ಹನ್ನೆರಡು ಗಣಗಳಿಗಿಂತ ಹೆಚ್ಚು ಮಂದಿ ದೇವದೂತರನ್ನು ಕಳುಹಿಸಿಕೊಡುವದಿಲ್ಲವೆಂದೂ ನೆನಸು ತ್ತೀಯಾ? ಕಳುಹಿಸಿಕೊಟ್ಟರೆ, ನನಗೆ ಇಂಥಿಂಥಾದ್ದು ಆಗಬೇಕೆಂಬುವ ಶಾಸ್ತ್ರದ ಮಾತು 54 ಗಳು ನೆರವೇರುವದು ಹ್ಯಾಗೆ ಎಂದು ಹೇಳಿದನು. ಅದೇ ಗಳಿಗೆಯಲ್ಲಿ ಯೇಸು ಜನ 55 ರಿಗೆ—ಕಳ್ಳನನ್ನು ಹಿಡಿಯುವದಕ್ಕೆ ಬಂದಂತೆ, ಕತ್ತಿಗಳನ್ನೂ ದೊಣ್ಣೆಗಳನ್ನೂ ತಕ್ಕೊಂಡು ನನ್ನನ್ನು ಹಿಡಿಯುವದಕ್ಕೆ ಬಂದಿರಾ? ನಾನು ದಿನಾಲು ದೇವಾಲಯದಲ್ಲಿ ಕೂತುಕೊಂಡು ಬೋಧಿಸುತ್ತಿದ್ದಾಗ ನೀವು ನನ್ನನ್ನು ಹಿಡಿಯಲಿಲ್ಲ; ಆದರೆ ಪ್ರವಾದಿಗಳು ಬರೆದ ವಚನ 56 ಗಳು ನೆರವೇರುವಂತೆ ಇದೆಲ್ಲಾ ಆಯಿತು ಎಂದು ಹೇಳಿದನು. ಆಗ ಶಿಷ್ಯರೆಲ್ಲರೂ ಆತ ನನ್ನು ಬಿಟ್ಟು ಓಡಿಹೋದರು.

ಹಿರೀಸಭೆಯವರು ಯೇಸುವನ್ನು ಮರಣದಂಡನೆಗೆ ತಕ್ಕವನೆಂದು ಪಿಲಾತನ ಬಳಿಗೆ ತೆಗೆದುಕೊಂಡುಹೋದದ್ದು. ಅಷ್ಟರಲ್ಲಿ ಪೇತ್ರನು ಅವನನ್ನು ಅರಿಯೆನೆಂದು ಹೇಳಿದ್ದು.

(ಮಾರ್ಕ 14, 53—72; ಲೂಕ 22, 54—71; ಯೋಹಾನ 18, 12—27.)

ಯೇಸುವನ್ನು ಹಿಡಿದವರು ಆತನನ್ನು ಮಹಾಯಾಜಕನಾದ ಕಾಯಫನ ಬಳಿಗೆ ತೆಗೆ 57 ದುಕೊಂಡುಹೋದರು. ಅಲ್ಲಿ ಶಾಸ್ತ್ರಿಗಳೂ ಹಿರಿಯರೂ ಕೂಡಿಬಂದಿದ್ದರು. ಮತ್ತು 58 ಪೇತ್ರನು ದೂರದಿಂದ ಆತನ ಹಿಂದೆ ಹೋಗುತ್ತಾ ಮಹಾಯಾಜಕನ ಮಠದ ತನಕ

ಬಂದು ಅಂಗಳದೊಳಗೆ ಹೊಕ್ಕು, ಆತನಿಗೆ ಏನಾಗುವದೋ ನೋಡಬೇಕೆಂದು ಓಲೇ
59 ಕಾರರ ಸಂಗಡ ಕೂತುಕೊಂಡನು. ಆಗ ಮಹಾಯಾಜಕರೂ ಹಿರೀಸಭೆಯವರೆಲ್ಲರೂ
ಯೇಸುವನ್ನು ಕೊಲ್ಲಿಸಬೇಕೆಂದು ಆತನ ಮೇಲೆ ಸುಳ್ಳುಸಾಕ್ಷಿಯನ್ನು ಹುಡುಕಿದರು;
60 ಆದರೆ ಬಹು ಮಂದಿ ಸುಳ್ಳುಸಾಕ್ಷಿಗಳು ಬಂದುನಿಂತರೂ ಏನೂ ಸಿಕ್ಕಲಿಲ್ಲ. ಕಡೆಗೆ
61 ಇಬ್ಬರು ಮುಂದೆ ಬಂದು—ನಾನು ದೇವಾಲಯವನ್ನು ಕೆಡವಿ ಮೂರು ದಿನಗಳಲ್ಲಿ ಕಟ್ಟ
62 ಬಲ್ಲೆನೆಂದು ಇವನು ಹೇಳಿದನು ಅನ್ನಲಾಗಿ; ಮಹಾಯಾಜಕನು ಎದ್ದುನಿಂತು ಆತ
ನನ್ನು—ನೀನೇನೂ ಉತ್ತರ ಹೇಳುವದಿಲ್ಲವೋ? ಇವರು ನಿನ್ನ ಮೇಲೆ ಹೇಳುವ ಈ
63 ಸಾಕ್ಷಿ ಏನು ಎಂದು ಕೇಳಿದನು. ಆದರೆ ಯೇಸು ಸುಮ್ಮನಿದ್ದನು. ಆಗ ಮಹಾ
ಯಾಜಕನು—ನಿನಗೆ ಜೀವಸ್ವರೂಪನಾದ ದೇವರ ಆಣೆಯನ್ನು ಇಡುತ್ತೇನೆ; ನೀನು ದೇವ
ಕುಮಾರನಾದ ಕ್ರಿಸ್ತನು ಹೌದೋ ಅಲ್ಲವೋ ಎಂಬುವದನ್ನು ನಮಗೆ ಹೇಳಬೇಕು
64 ಎಂದು ಆತನನ್ನು ಕೇಳಲಾಗಿ, ಯೇಸು ಅವನಿಗೆ—ನೀನೇ ಹೇಳಿದ್ದೀ; ಇದಲ್ಲದೆ ಇನ್ನು
ಮೇಲೆ ಮನುಷ್ಯಕುಮಾರನು ಸರ್ವಶಕ್ತನ ಬಲಗಡೆಯಲ್ಲಿ ಕೂತಿರುವದನ್ನೂ ಆಕಾಶದ
ಮೇಘಗಳಲ್ಲಿ ಬರುವದನ್ನೂ ನೋಡುವಿರಿ ಎಂದು ನಿಮಗೆ ಹೇಳುತ್ತೇನೆ ಎಂದು ಉತ್ತರ
65 ಕೊಟ್ಟನು. ಆಗ ಮಹಾಯಾಜಕನು ತನ್ನ ಬಟ್ಟೆಗಳನ್ನು ಹರಕೊಂಡು—ಇದು ದೇವ
ದೂಷಣೆಯ ಮಾತು; ಸಾಕ್ಷಿಗಳು ಇನ್ನ್ಯಾತಕ್ಕೆ ಬೇಕು? ಅವನು ಈಗಲೇ ಆಡಿದ
66 ದೂಷಣೆಯ ಮಾತನ್ನು ಕೇಳಿದಿರಲ್ಲಾ; ನಿಮಗೆ ಹ್ಯಾಗೆ ತೋರುತ್ತದೆ? ಅನ್ನಲು; ಅವನು
67 ಮರಣದಂಡನೆ ಹೊಂದತಕ್ಕವನೆಂದು ಉತ್ತರಕೊಟ್ಟರು. ಆ ಮೇಲೆ ಆತನ ಮುಖದ
ಮೇಲೆ ಉಗುಳಿ ಆತನನ್ನು ಗುದ್ದಿದರು; ಕೆಲವರು ಆತನ ಕೆನ್ನೆಗೆ ಹೊಡೆದು—ಕ್ರಿಸ್ತನೇ,
68 ನಿನ್ನನ್ನು ಹೊಡೆದವರ್ಯಾರೆಂದು ನಮಗೆ ಪ್ರವಾದನೆ ಹೇಳು ಅಂದರು.

69 ಇತ್ತಲಾಗಿ ಪೇತ್ರನು ಹೊರಗೆ ಅಂಗಳದಲ್ಲಿ ಕೂತಿದ್ದನು. ಅಲ್ಲಿ ಒಬ್ಬ ಚಾಕರಿಯವಳು
ಅವನ ಬಳಿಗೆ ಬಂದು—ನೀನು ಸಹ ಗಲಿಲಾಯದ ಯೇಸುವಿನ ಸಂಗಡ ಇದ್ದವನು
70 ಅನ್ನಲು; ಅವನು—ಅಲ್ಲ, ನೀನು ಏನನ್ನುತ್ತೀಯೋ ನನಗೆ ಗೊತ್ತಿಲ್ಲ ಎಂದು ಎಲ್ಲರ
71 ಮುಂದೆ ಹೇಳಿದನು. ಅವನು ಅಲ್ಲಿಂದ ಬಾಗಲಿನ ಕಡೆಗೆ ಹೊರಟುಹೋದಾಗ ಮತ್ತೊ
ಬ್ಬಳು ಅವನನ್ನು ಕಂಡು, ಅಲ್ಲಿರುವವರಿಗೆ—ಇವನು ಸಹ ನಜರೇತಿನ ಯೇಸುವಿನ ಸಂಗಡ
72 ಇದ್ದವನು ಎಂದು ಹೇಳಿದಳು. ಅವನು ತಿರಿಗಿ—ಅಲ್ಲ, ಆ ಮನುಷ್ಯನನ್ನು ನಾನ
73 ರಿಯೆನು ಎಂದು ಆಣೆಯಿಟ್ಟುಕೊಂಡು ಹೇಳಿದನು. ಸ್ವಲ್ಪ ಹೊತ್ತಿನ ಮೇಲೆ ಅಲ್ಲಿ ನಿಂತ
ವರು ಮುಂದೆಬಂದು ಪೇತ್ರನಿಗೆ—ನಿಶ್ಚಯವಾಗಿ ನೀನು ಸಹ ಅವರಲ್ಲಿ ಒಬ್ಬನು, ನಿನ್ನ
74 ಮಾತಿನಿಂದ ಗೊತ್ತಾಗುತ್ತದಲ್ಲಾ ಎಂದು ಹೇಳಲಾಗಿ, ಅವನು—ಆ ಮನುಷ್ಯನನ್ನು
ಅರಿಯೆನು ಎಂದು ಹೇಳಿ ಶಪಿಸಿಕೊಳ್ಳುವದಕ್ಕೂ ಆಣೆಯಿಟ್ಟುಕೊಳ್ಳುವದಕ್ಕೂ ಪ್ರಾರಂಭಿ
75 ಸಿದನು. ಆಗಲೇ ಕೋಳಿ ಕೂಗಿತು. ಆಗ ಪೇತ್ರನು—ಕೋಳಿ ಕೂಗುವದಕ್ಕಿಂತ
ಮುಂಚೆ ಮೂರು ಸಾರಿ ನನ್ನ ವಿಷಯವಾಗಿ ಅವನನ್ನು ಅರಿಯೆನೆಂಬದಾಗಿ ಹೇಳುವಿ
ಎಂದು ಯೇಸು ಹೇಳಿದ ಮಾತನ್ನು ನೆನಸಿ, ಹೊರಕ್ಕೆ ಹೋಗಿ ಬಹು ವ್ಯಥೆಪಟ್ಟು
ಅತ್ತನು.

**27** ಬೆಳಗಾಗಲು ಎಲ್ಲಾ ಮಹಾಯಾಜಕರೂ ಜನರ ಹಿರಿಯರೂ ಯೇಸುವನ್ನು ಕೊಲ್ಲಿಸ ಬೇಕೆಂದು ಆಲೋಚನೆಮಾಡಿಕೊಂಡು, 2 ಆತನನ್ನು ಕಟ್ಟಿಸಿ ತೆಗೆದುಕೊಂಡುಹೋಗಿ ದೇಶಾಧಿಪತಿಯಾದ ಪಿಲಾತನಿಗೆ ಒಪ್ಪಿಸಿದರು.

### ಯೂದನು ಪಶ್ಚಾತ್ತಾಪಪಟ್ಟು ಆತ್ಮಹತ್ಯ ಮಾಡಿಕೊಂಡದ್ದು.

3 ಆಗ ಆತನನ್ನು ಹಿಡುಕೊಟ್ಟ ಯೂದನು ಆತನಿಗೆ ಮರಣದಂಡನೇ ತೀರ್ಪಾಯಿತೆಂದು ನೋಡಿ, ಪಶ್ಚಾತ್ತಾಪಪಟ್ಟು, ಆ ಮೂವತ್ತು ರೂಪಾಯಿಗಳನ್ನು ಮಹಾಯಾಜಕರಿಗೂ ಹಿರಿಯರಿಗೂ ತಿರಿಗಿ ತಂದು—4 ತಪ್ಪಿಲ್ಲದವನನ್ನು ಮರಣಕ್ಕೆ ಒಪ್ಪಿಸಿಕೊಟ್ಟು ಪಾಪಮಾಡಿದೆನು ಅಂದನು. ಅದಕ್ಕವರು—ಅದು ನಮಗೇನು? ನೀನೇ ನೋಡಿಕೋ ಅಂದರು. 5 ಆಗ ಅವನು ಆ ಹಣವನ್ನು ದೇವಾಲಯದೊಳಗೆ ಬಿಸಾಟುಬಿಟ್ಟು, ಹೊರಟುಹೋಗಿ ಉರ್ಲು ಹಾಕಿಕೊಂಡು ಸತ್ತನು. 6 ಮಹಾಯಾಜಕರು ಆ ಹಣವನ್ನು ತೆಗೆದುಕೊಂಡು, ಅದು ಜೀವಹತ್ಯಕ್ಕೆ ಕೊಟ್ಟ ಕ್ರಯವಾದ್ದರಿಂದ ಅದನ್ನು ಕಾಣಿಕೇಪೆಟ್ಟಿಗೆಯಲ್ಲಿ ಹಾಕ ಬಾರದು ಅಂದರು. 7 ಬಳಿಕ ಆಲೋಚನೆ ಮಾಡಿ, ಪರದೇಶಿಗಳನ್ನು ಹೂಣುವದಕ್ಕೋಸ್ಕರ ಅದರಿಂದ ಕುಂಬಾರನ ಹೊಲವೆಂಬ ಭೂಮಿಯನ್ನು ಕೊಂಡುಕೊಂಡರು. 8 ಈ ಕಾರಣದಿಂದ ಇಂದಿನವರೆಗೂ ಆ ಹೊಲಕ್ಕೆ ಜೀವಹತ್ಯದಹೊಲವೆಂಬ ಹೆಸರು ಅದೆ. 9 ಹೀಗೆ ಪ್ರವಾದಿಯಾದ ಯೆರೆಮೀಯನು ಹೇಳಿದ ಮಾತು ನೆರವೇರಿತು, ಅದೇನಂದರೆ—

> ಅವರು ಆ ಮೂವತ್ತು ರೂಪಾಯಿ ತೆಗೆದುಕೊಂಡು,
> 10 ಕರ್ತನು ನನಗೆ ಅಪ್ಪಣೆಮಾಡಿದಂತೆ,
> ಅದನ್ನು ಕುಂಬಾರನ ಹೊಲಕ್ಕೆ ಕೊಟ್ಟರು.
> ಇದೇ ಅವರು ಕ್ರಯಕಟ್ಟಿದವನ ಬೆಲೆ,
> ಇದೇ ಇಸ್ರಯೇಲ್ಯರಲ್ಲಿ ಕೆಲವರು ಕ್ರಯಕಟ್ಟಿದವನ ಬೆಲೆ

ಎಂಬುವದು[1].

### ಪಿಲಾತನು ಯೇಸುವಿಗೆ ಮರಣವನ್ನು ವಿಧಿಸಿದ್ದು.

(ಮಾರ್ಕ **15**, 2—15; ಲೂಕ **23**, 2. 3. 13—25; ಯೋಹಾನ **18**, 29—40; **19**, 16.)

11 ಯೇಸು ದೇಶಾಧಿಪತಿಯ ಮುಂದೆ ನಿಂತಿರುವಾಗ ದೇಶಾಧಿಪತಿಯು—ನೀನು ಯೆಹೂದ್ಯರ ಅರಸನು ಹೌದೋ ಎಂದು ಆತನನ್ನು ಕೇಳಿದನು. 12 ಯೇಸು—ನೀನೇ ಹೇಳಿದ್ದೀ ಅಂದನು. ಮತ್ತು ಮಹಾಯಾಜಕರೂ ಹಿರಿಯರೂ ಆತನ ಮೇಲೆ ದೂರುಹೇಳುವಾಗ ಆತನು ಏನೂ ಉತ್ತರಕೊಡಲಿಲ್ಲ. 13 ಆಗ ಪಿಲಾತನು ಆತನನ್ನು—ಇವರು ನಿನ್ನ ಮೇಲೆ ಎಷ್ಟು ಸಾಕ್ಷಿ ಹೇಳುತ್ತಾರೆ, ನೀನು ಕೇಳುವದಿಲ್ಲವೋ? ಎಂದು ಕೇಳಲು, 14 ಆತನು ಅವನಿಗೆ ಒಂದು ಮಾತಿಗಾದರೂ ಉತ್ತರಕೊಡಲಿಲ್ಲ; ಅದನ್ನು ನೋಡಿ ದೇಶಾಧಿಪತಿಯು ಬಹಳ ಆಶ್ಚರ್ಯಪಟ್ಟನು. 15 ಆದರೆ ಆ ಹಬ್ಬದಲ್ಲಿ ಜನರು ಅಪೇಕ್ಷೆಮಾಡುವ ಸೆರೆಯವ

[1] ಜಕರೀಯ ೧೧, ೧೨. ೧೩.

16 ನನ್ನು ಅವರಿಗೆ ಬಿಟ್ಟುಕೊಡುವದು ದೇಶಾಧಿಪತಿಯ ಪದ್ಧತಿಯಾಗಿತ್ತು. ಆ ಕಾಲದಲ್ಲಿ
17 ಬರಬ್ಬನೆಂಬ ಪ್ರಸಿದ್ಧನಾದ ಒಬ್ಬ ಸೆರೆಯವನು ಅಲ್ಲಿ ಇದ್ದನು. ಹೀಗಿರಲಾಗಿ ಅವರು ಕೂಡಿಬಂದ ಸಮಯದಲ್ಲಿ ಪಿಲಾತನು—ನಿಮಗೆ ಯಾರನ್ನು ಬಿಡುಗಡೆ ಮಾಡಿಕೊಡಬೇಕು? ಬರಬ್ಬನನ್ನೋ? ಕ್ರಿಸ್ತನನ್ನಿಸಿಕೊಳ್ಳುವ ಯೇಸುವನ್ನೋ ಎಂದು ಅವರನ್ನು
18 ಕೇಳಿದನು. ಯಾಕಂದರೆ ಹೊಟ್ಟೇಕಿಚ್ಚಿನಿಂದ ಆತನನ್ನು ತನಗೆ ಒಪ್ಪಿಸಿಕೊಟ್ಟಿದ್ದರೆಂದು
19 ಅವನಿಗೆ ತಿಳಿದಿತ್ತು. ಇದಲ್ಲದೆ ಅವನು ನ್ಯಾಯಾಸನದಲ್ಲಿ ಕೂತಿರುವಾಗ, ಅವನ ಹೆಂಡತಿಯು—ನೀನು ಆ ಸತ್ಪುರುಷನ ಗೊಡವೆಗೆ ಹೋಗಬೇಡ; ಅವನ ದೆಸೆಯಿಂದ ಈ ಹೊತ್ತು ಕನಸಿನಲ್ಲಿ ಬಹಳ ತೊಂದರೆ ಪಟ್ಟೆನು ಎಂದು ಅವನ ಬಳಿಗೆ ಹೇಳಿಕಳುಹಿಸಿ
20 ದಳು. ಅತ್ತಲಾಗಿ ಬರಬ್ಬನನ್ನು ಬಿಟ್ಟುಕೊಟ್ಟು ಯೇಸುವನ್ನು ಕೊಲ್ಲಿಸಬೇಕೆಂದು ಬೇಡಿಕೊಳ್ಳಿರಿ ಎಂಬದಾಗಿ ಮಹಾಯಾಜಕರೂ ಹಿರಿಯರೂ ಜನರನ್ನು ಒಡಂಬಡಿಸಿದರು.
21 ಆಗ ದೇಶಾಧಿಪತಿಯು ಅವರನ್ನು—ಈ ಇಬ್ಬರಲ್ಲಿ ಯಾರನ್ನು ನಿಮಗೆ ಬಿಟ್ಟುಕೊಡಬೇಕು
22 ಎಂದು ಕೇಳಲು—ಬರಬ್ಬನನ್ನು ಅಂದರು. ಪಿಲಾತನು ಅವರನ್ನು—ಹಾಗಾದರೆ ಕ್ರಿಸ್ತನನ್ನಿಸಿಕೊಳ್ಳುವ ಯೇಸುವನ್ನು ನಾನೇನು ಮಾಡಲಿ ಎಂದು ಕೇಳಲು ಎಲ್ಲರೂ—ಅವ
23 ನನ್ನು ಶಿಲುಬೆಗೆ ಹಾಕಿಸು ಅಂದರು. ಅದಕ್ಕವನು—ಯಾಕೆ? ಕೆಟ್ಟದ್ದೇನು ಮಾಡಿದನು? ಅಂದನು. ಆದರೆ ಅವರು—ಅವನನ್ನು ಶಿಲುಬೆಗೆ ಹಾಕಿಸು ಎಂದು ಬಹಳವಾಗಿ
24 ಕೂಗಿಕೊಂಡರು. ಆಗ ಪಿಲಾತನು ತನ್ನ ಯತ್ನ ನಡೆಯುವದಿಲ್ಲ, ಗದ್ದಲ ಮಾತ್ರ ಹೆಚ್ಚಾಗುತ್ತದೆ ಎಂದು ತಿಳಿದು, ನೀರು ತಕ್ಕೊಂಡು ಜನರ ಮುಂದೆ ಕೈ ತೊಳಕೊಂಡು—ಈ ಪುರುಷನನ್ನು ಕೊಲ್ಲಿಸಿದ್ದಕ್ಕೆ ನಾನು ಸೇರಿದವನಲ್ಲ, ನೀವೇ ನೋಡಿಕೊಳ್ಳಿರಿ ಅನ್ನ
25 ಲಾಗಿ ಜನರೆಲ್ಲಾ—ಅವನನ್ನು ಕೊಲ್ಲಿಸಿದ್ದಕ್ಕೆ ನಾವೂ ನಮ್ಮ ಮಕ್ಕಳೂ ಉತ್ತರ ಕೊಡು
26 ತ್ತೇವೆ ಅಂದರು. ಆಗ ಬರಬ್ಬನನ್ನು ಅವರಿಗೆ ಬಿಟ್ಟುಕೊಟ್ಟು, ಯೇಸುವನ್ನು ಕೊರಡೆಗಳಿಂದ ಹೊಡಿಸಿ ಆತನನ್ನು ಶಿಲುಬೆಗೆ ಹಾಕುವದಕ್ಕೆ ಒಪ್ಪಿಸಿದನು.

### ಯೇಸುವನ್ನು ಅಪಹಾಸ್ಯಮಾಡಿ ಶಿಲುಬೆಗೆ ಹಾಕಿದ್ದು.

**(ಮಾರ್ಕ 15, 16—41; ಲೂಕ 23, 26. 33—49; ಯೋಹಾನ 19, 2. 3. 16—30.)**

27 ಆ ಮೇಲೆ ದೇಶಾಧಿಪತಿಯ ಸಿಪಾಯಿಗಳು ಯೇಸುವನ್ನು ಅರಮನೆಯೊಳಕ್ಕೆ ಹಿಡು
28 ಕೊಂಡುಹೋಗಿ, ಪಟಾಲಮನ್ನೆಲ್ಲಾ ಆತನ ಸುತ್ತಲು ಕೂಡಿಸಿಕೊಂಡು, ಆತನ ಬಟ್ಟೆ
29 ಗಳನ್ನು ತೆಗೆದುಹಾಕಿ ಕೆಂಪು ಒಲ್ಲಿಯನ್ನು ಹೊದ್ದಿಸಿ, ಮುಳ್ಳಿನ ಕಿರೀಟವನ್ನು ಹೆಣೆದು ಆತನ ತಲೆಯ ಮೇಲೆ ಇಟ್ಟು, ಬಲಗೈಯಲ್ಲಿ ಬೆತ್ತವನ್ನು ಕೊಟ್ಟು, ಆತನ ಮುಂದೆ ಮೊಣಕಾಲೂರಿ—ಯೆಹೂದ್ಯರ ಅರಸನೇ, ನಿನಗೆ ನಮಸ್ಕಾರ ಎಂದು ಆತನನ್ನು ಪರಿಹಾಸ್ಯ
30 ಮಾಡಿದರು. ಮತ್ತು ಆತನ ಮೇಲೆ ಉಗುಳಿ, ಆ ಬೆತ್ತವನ್ನು ಕಸಕೊಂಡು ಆತನ
31 ತಲೆಯ ಮೇಲೆ ಹೊಡೆದರು. ಹೀಗೆ ಆತನನ್ನು ಪರಿಹಾಸ್ಯಮಾಡಿದ ಮೇಲೆ, ಆ ಒಲ್ಲಿಯನ್ನು ತೆಗೆದು ಆತನ ಬಟ್ಟೆಗಳನ್ನು ಹೊದ್ದಿಸಿ, ಆತನನ್ನು ಶಿಲುಬೆಗೆ ಹಾಕುವದಕ್ಕೆ ಹಿಡುಕೊಂಡುಹೋದರು.

ಹೊರಕ್ಕೆ ಹೋಗುತ್ತಿರುವಾಗ ಕುರೇನೆಪಟ್ಟಣದ ಸೀಮೋನನೆಂಬವನನ್ನು ಕಂಡು, 32
ಅವನನ್ನು ಆತನ ಶಿಲುಬೆಯನ್ನು ಹೊರುವದಕ್ಕೆ ಬಿಟ್ಟೀಹಿಡಿದರು. ಮತ್ತು ಗೊಲ್ಗೊಥಾ 33
ಅಂದರೆ ಕಪಾಲಸ್ಥಳ ಎಂಬ ಸ್ಥಾನಕ್ಕೆ ಬಂದಾಗ, ಆತನಿಗೆ ಕಹಿ ಬೆರಸಿದ ದ್ರಾಕ್ಷಾರಸ 34
ವನ್ನು ಕುಡಿಯುವದಕ್ಕೆ ಕೊಟ್ಟರು; ಆತನು ಅದನ್ನು ರುಚಿನೋಡಿ ಕುಡಿಯಲೊಲ್ಲದೆ
ಇದ್ದನು. ಬಳಿಕ ಆತನನ್ನು ಶಿಲುಬೆಗೆ ಹಾಕಿ, ಆತನ ಬಟ್ಟೆಗಳಿಗಾಗಿ ಚೀಟು ಹಾಕಿ 35
ಪಾಲು ಮಾಡಿಕೊಂಡರು; ಮತ್ತು ಅಲ್ಲಿ ಕೂತುಕೊಂಡು ಆತನನ್ನು ಕಾಯುತ್ತಾ ಇದ್ದರು. 36
ಇದಲ್ಲದೆ ಆತನ ಮೇಲೆ ಹೊರಿಸಿದ ಅಪರಾಧವನ್ನು ಬರೆದು ಆತನ ತಲೆಯ ಮೇಲ್ಗಡೆ 37
ಹಚ್ಚಿದರು; ಬರೆದದ್ದೇನಂದರೆ—ಇವನು ಯೆಹೂದ್ಯರ ಅರಸನಾದ ಯೇಸು ಎಂಬುವದೇ.
ಆಗ ಇಬ್ಬರು ಕಳ್ಳರನ್ನು ತಂದು, ಒಬ್ಬನನ್ನು ಬಲಗಡೆಯಲ್ಲಿ ಒಬ್ಬನನ್ನು ಎಡಗಡೆಯಲ್ಲಿ 38
ಆತನ ಸಂಗಡ ಶಿಲುಬೆಗೆ ಹಾಕಿದರು. ಅಲ್ಲಿ ಹಾದುಹೋಗುವವರು ತಲೇ ಆಡಿಸಿ— 39
ದೇವಾಲಯವನ್ನು ಕೆಡವಿ ಮೂರು ದಿನದಲ್ಲಿ ಕಟ್ಟುವವನೇ, ನಿನ್ನನ್ನು ರಕ್ಷಿಸಿಕೋ; 40
ದೇವರಮಗನೇ ಆಗಿದ್ದರೆ ಶಿಲುಬೆಯಿಂದ ಇಳಿದು ಬಾ ಎಂದು ಆತನನ್ನು ಹಂಗಿಸು
ತ್ತಿದ್ದರು. ಅದೇ ಮೇರೆಗೆ ಮಹಾಯಾಜಕರೂ ಶಾಸ್ತ್ರಿಗಳೂ ಹಿರಿಯರೂ ಹಾಸ್ಯ 41
ಮಾಡಿ—ಅವನು ಮತ್ತೊಬ್ಬರನ್ನು ರಕ್ಷಿಸಿದನು, ತನ್ನನ್ನು ರಕ್ಷಿಸಿಕೊಳ್ಳಲಾರನು. ಅವನು 42
ಇಸ್ರಯೇಲಿನ ಅರಸನಲ್ಲವೇ? ಈಗಲೇ ಶಿಲುಬೆಯಿಂದ ಇಳಿದು ಬರಲಿ, ಇಳಿದು ಬಂದರೆ
ಅವನಲ್ಲಿ ನಂಬಿಕೆಯಿಟ್ಟೇವು. ದೇವರಲ್ಲಿ ಭರವಸವಿಟ್ಟಿದ್ದಾನೆ, ದೇವರು ಅವನಲ್ಲಿ ಇಷ್ಟ 43
ಪಟ್ಟರೆ, ಈಗ ಅವನನ್ನು ಬಿಡಿಸಲಿ; ತಾನು ದೇವರಮಗನಾಗಿದ್ದೇನೆಂದು ಹೇಳಿದನಲ್ಲಾ
ಅಂದರು. ಆತನ ಸಂಗಡ ಶಿಲುಬೆಗೆ ಹಾಕಲ್ಪಟ್ಟ ಕಳ್ಳರು ಸಹ ಆತನನ್ನು ಅದೇ ಪ್ರಕಾರ 44
ನಿಂದಿಸಿದರು.

ಆರು ತಾಸಿನಿಂದ ಒಂಭತ್ತು ತಾಸಿನ ತನಕ[1] ಆ ದೇಶದ ಮೇಲೆಲ್ಲಾ ಕತ್ತಲೆ ಕವಿ 45
ಯಿತು. ಸುಮಾರು ಒಂಭತ್ತು ತಾಸಿಗೆ ಯೇಸು—ಏಲೀ, ಏಲೀ, ಲಮಾ ಸಬಕ್ತಾನೀ, 46
ಅಂದರೆ, ನನ್ನ ದೇವರೇ, ನನ್ನ ದೇವರೇ, ಯಾಕೆ ನನ್ನನ್ನು ಕೈಬಿಟ್ಟಿದ್ದೀ ಎಂದು[2] ಮಹಾ
ಧ್ವನಿಯಿಂದ ಕೂಗಿದನು. ಅಲ್ಲಿ ನಿಂತವರಲ್ಲಿ ಕೆಲವರು ಅದನ್ನು ಕೇಳಿ—ಇವನು ಎಲೀ 47
ಯನನ್ನು ಕರೆಯುತ್ತಾನೆ ಅಂದರು. ಕೂಡಲೆ ಅವರಲ್ಲಿ ಒಬ್ಬನು ಓಡಿಹೋಗಿ, ಸ್ಪಂಜನ್ನು 48
ತಂದು, ಹುಳಿರಸದಿಂದ ತುಂಬಿಸಿ ಕೋಲಿಗೆ ಸಿಕ್ಕಿಸಿ ಆತನಿಗೆ ಕುಡಿಯುವದಕ್ಕೆ ಕೊಟ್ಟನು.
ಮಿಕ್ಕಾದವರು—ಬಿಡು, ಎಲೀಯನು ಬಂದು ಅವನನ್ನು ರಕ್ಷಿಸುವನೇನೋ ನೋಡೋಣ 49
ಅಂದರು[3]. ಯೇಸು ತಿರಿಗಿ ಮಹಾ ಧ್ವನಿಯಿಂದ ಕೂಗಿ ಪ್ರಾಣಾ ಬಿಟ್ಟನು. ಆಗ 50, 51
ಇಗೋ ದೇವಾಲಯದ ತೆರೆಯು ಮೇಲಿನಿಂದ ಕೆಳಗಿನ ವರೆಗೂ ಹರಿದು ಎರಡು ಭಾಗ
ವಾಯಿತು; ಭೂಮಿಯು ಅದರಿತು; ಬಂಡೆಗಳು ಸೀಳಿಹೋದವು; ಸಮಾಧಿಗಳು ತೆರೆ 52
ದವು; ನಿದ್ದೆಹೋಗಿದ್ದ ಅನೇಕ ಭಕ್ತರ ದೇಹಗಳು ಎದ್ದವು; ಮತ್ತು ಆತನು ಎದ್ದ ಮೇಲೆ, 53
ಸಮಾಧಿಗಳೊಳಗಿಂದ ಹೊರಗೆ ಬಂದು ಪರಿಶುದ್ಧ ಪಟ್ಟಣದೊಳಕ್ಕೆ ಹೋಗಿ ಅನೇಕರಿಗೆ

---

1) ಅಂದರೆ, ಮಧ್ಯಾಹ್ನ ೧೨ ಘಂಟೆಯಿಂದ ೩ ಘಂಟೆಯವರೆಗೆ. 2) ಕೀರ್ತನೆ ೨೨, ೧.

3) ಕೆಲವು ಪ್ರತಿಗಳಲ್ಲಿ—ಮತ್ತೊಬ್ಬನು ಈಟಿಯನ್ನು ತೆಗೆದುಕೊಂಡು ಆತನ ಪಕ್ಕೆಯನ್ನು ತಿವಿದನು; ತಿವಿಯಲು ನೀರೂ ರಕ್ತವೂ ಹೊರಟಿತು ಎಂದು ಬರೆದದೆ; ಯೋಹಾನ ೧೯, ೩೪ ನೋಡಿರಿ.

54 ಕಾಣಿಸಿಕೊಂಡರು. ಶತಾಧಿಪತಿಯು ಮತ್ತು ಅವನ ಸಂಗಡ ಯೇಸುವನ್ನು ಕಾಯುತ್ತಿದ್ದ
ವರು ಭೂಕಂಪವನ್ನೂ ನಡೆದ ಸಂಗತಿಗಳನ್ನೂ ನೋಡಿ, ಬಹಳ ಹೆದರಿಕೊಂಡು—ನಿಜವಾಗಿ
55 ಈತನು ದೇವಕುಮಾರನಾಗಿದ್ದನು[1] ಅಂದರು. ಇದಲ್ಲದೆ ಅನೇಕ ಸ್ತ್ರೀಯರು ಅಲ್ಲಿ ಇದ್ದು
ದೂರದಿಂದ ನೋಡುತ್ತಾ ಇದ್ದರು. ಇವರು ಯೇಸುವಿನ ಸೇವೆಮಾಡುತ್ತಾ ಗಲಿಲಾಯ
56 ದಿಂದ ಆತನ ಹಿಂದೆ ಬಂದಿದ್ದರು. ಇವರಲ್ಲಿ ಮಗ್ದಲದ ಮರಿಯಳೂ ಯಾಕೋಬ ಯೋಸೆ
ಯರ ತಾಯಿಯಾದ ಮರಿಯಳೂ ಜೆಬೆದಾಯನ ಮಕ್ಕಳ ತಾಯಿಯೂ ಇದ್ದರು.

**ಶಿಷ್ಯರು ಯೇಸುವಿನ ದೇಹವನ್ನು ಸಮಾಧಿಯಲ್ಲಿ ಇರಿಸಿದ್ದು; ಅಧಿಕಾರಸ್ಥರು ಕಾವಲಿಟ್ಟದ್ದು.**
**(ಮಾರ್ಕ 15, 42—47; ಲೂಕ 23, 50—56; ಯೋಹಾನ 19, 38—42.)**

57 ಸಂಜೆಯಾದಾಗ ಅರಿಮಥಾಯದ ಯೋಸೇಫನೆಂಬ ಒಬ್ಬ ಧನವಂತನು ಬಂದನು;
58 ಇವನು ಸಹ ಯೇಸುವಿನ ಶಿಷ್ಯನಾಗಿದ್ದನು. ಇವನು ಪಿಲಾತನ ಬಳಿಗೆ ಹೋಗಿ ಯೇಸು
ವಿನ ದೇಹವನ್ನು ತನಗೆ ಕೊಡಿಸಬೇಕೆಂದು ಬೇಡಿಕೊಳ್ಳಲಾಗಿ, ಪಿಲಾತನು ಅದನ್ನು ಕೊಡ
59 ಬೇಕೆಂದು ಅಪ್ಪಣೆಮಾಡಿದನು. ಯೋಸೇಫನು ಆ ದೇಹವನ್ನು ತೆಗೆದುಕೊಂಡು,
60 ಅದನ್ನು ಶುದ್ಧವಾದ ನಾರುಮಡಿಯಲ್ಲಿ ಸುತ್ತಿ, ತನಗಾಗಿ ಬಂಡೆಯಲ್ಲಿ ತೋಡಿಸಿದ್ದ ಹೊಸ
ಸಮಾಧಿಯಲ್ಲಿ ಇಟ್ಟು, ಸಮಾಧಿಯ ಬಾಗಲಿಗೆ ದೊಡ್ಡ ಕಲ್ಲನ್ನು ಉರುಳಿಸಿ ಹೋದನು.
61 ಮಗ್ದಲದ ಮರಿಯಳೂ ಆ ಬೇರೆ ಮರಿಯಳೂ ಅಲ್ಲಿ ಸಮಾಧಿಗೆ ಎದುರಾಗಿ ಕೂತಿದ್ದರು.
62 ಮರುದಿನ ಅಂದರೆ ಸೌರಣೇದಿನ ಕಳೆದ ಮೇಲೆ, ಮಹಾಯಾಜಕರೂ ಫರಿಸಾಯರೂ
63 ಪಿಲಾತನ ಬಳಿಗೆ ಕೂಡಿಬಂದು—ದೊರೆಯೇ, ಆ ಮೋಸಗಾರನು ಬದುಕಿದ್ದಾಗ, ತಾನು
64 ಮೂರು ದಿನದ ಮೇಲೆ ಏಳುತ್ತೇನೆ ಅಂತ ಹೇಳಿದ್ದು ನಮ್ಮ ನೆನಪಿಗೆ ಬಂತು; ಆದಕಾರಣ
ಮೂರನೇ ದಿನದ ತನಕ ಸಮಾಧಿಯನ್ನು ಭದ್ರಮಾಡಿ ಕಾಯುವದಕ್ಕೆ ಅಪ್ಪಣೆಕೊಡ
ಬೇಕು; ಇಲ್ಲದಿದ್ದರೆ, ಅವನ ಶಿಷ್ಯರು ಬಂದು ಅವನನ್ನು ಕದ್ದುಕೊಂಡು ಹೋಗಿ, ಸತ್ತ
ವನು ಬದುಕಿ ಬಂದಿದ್ದಾನೆ ಎಂದು ಹೇಳ್ಯಾರು; ಆಗ ಮೊದಲನೇ ಮೋಸಕ್ಕಿಂತ ಕಡೇ
65 ಮೋಸವು ಕೆಡಕಾದೀತು ಅಂದರು. ಪಿಲಾತನು ಅವರಿಗೆ—ಕಾವಲುಗಾರರನ್ನು
ತಕ್ಕೊಳ್ಳಿ; ಹೋಗಿ, ನಿಮಗೆ ತಿಳಿದ ಹಾಗೆ ಭದ್ರಮಾಡಿ ಕಾಯಿರಿ ಎಂದು ಹೇಳಲಾಗಿ;
66 ಅವರು ಹೊರಟು ಕಾವಲುಗಾರರೊಂದಿಗೆ ಆ ಕಲ್ಲಿಗೆ ಮುದ್ರೆ ಹಾಕಿ ಸಮಾಧಿಯನ್ನು
ಭದ್ರಮಾಡಿದರು.

**ಯೇಸುವಿನ ಪುನರುತ್ಥಾನವು. (ಮಾರ್ಕ 16, 1—10; ಲೂಕ 24, 1—10; ಯೋಹಾನ 20, 1—18.)**

**28** ಸಬ್ಬತ್‌ದಿನ ಆದ ಮೇಲೆ, ವಾರದ ಮೊದಲನೇ ದಿವಸ ಬೆಳಗಾಗುವಾಗ, ಮಗ್ದಲದ
2 ಮರಿಯಳೂ ಆ ಬೇರೆ ಮರಿಯಳೂ ಸಮಾಧಿಯನ್ನು ನೋಡುವದಕ್ಕೆ ಬಂದರು. ಆಗ
ಮಹಾ ಭೂಕಂಪವಾಯಿತು. ಕರ್ತನ ದೂತನು ಆಕಾಶದಿಂದ ಇಳಿದು ಬಂದು ಆ
3 ಕಲ್ಲನ್ನು ಬಾಗಲಿನಿಂದ ಉರುಳಿಸಿ ಅದರ ಮೇಲೆ ಕೂತುಕೊಂಡನು. ಅವನ ಮುಖ

[1] ದಾನಿಯೇಲ ೩, ೨೫ ನೋಡಿರಿ.

ಭಾವವು ಮಿಂಚಿನಂತೆ ಇತ್ತು, ಅವನ ಉಡುಪು ಹಿಮದಂತೆ ಬೆಳ್ಳಗಿತ್ತು; ಕಾವಲು 4
ಗಾರರು ಅವನಿಗೆ ಹೆದರಿ ನಡುಗಿ ಸತ್ತವರ ಹಾಗಾದರು. ಆಗ ದೂತನು ಆ ಹೆಂಗಸ 5
ರಿಗೆ—ನೀವಾದರೋ ಹೆದರಬೇಡಿರಿ; ಶಿಲುಬೆಗೆ ಹಾಕಲ್ಪಟ್ಟಿದ್ದ ಯೇಸುವನ್ನು ಹುಡುಕು
ತ್ತೀರೆಂದು ಬಲ್ಲೆನು; ಆತನು ಇಲ್ಲಿ ಇಲ್ಲ; ತಾನು ಹೇಳಿದಂತೆ ಎದ್ದಿದ್ದಾನೆ; ಬನ್ನಿ ಆತನು[1] 6
ಮಲಗಿದ್ದ ಸ್ಥಳವನ್ನು ನೋಡಿರಿ; ಮತ್ತು ಬೇಗ ಹೋಗಿ ಆತನ ಶಿಷ್ಯರಿಗೆ—ಸತ್ತವನು 7
ಬದುಕಿದ್ದಾನೆ, ಆತನು ನಿಮ್ಮ ಮುಂದೆ ಗಲಿಲಾಯಕ್ಕೆ ಹೋಗುತ್ತಾನೆ, ಅಲ್ಲಿ ಆತನನ್ನು
ಕಾಣುವಿರಿ ಎಂದು ಹೇಳಿರಿ; ನಾನು ನಿಮಗೆ ಹೇಳಿದ್ದೇನೆ, ನೋಡಿರಿ ಎಂದು ಹೇಳಿದನು.
ಅವರು ಭಯದಿಂದಲೂ ಮಹಾ ಸಂತೋಷದಿಂದಲೂ ಬೇಗ ಸಮಾಧಿಯ ಬಳಿಯಿಂದ 8
ಹೊರಟು, ಆತನ ಶಿಷ್ಯರಿಗೆ ತಿಳಿಸುವದಕ್ಕೆ ಓಡಿಹೋದರು. ಆಗ ಯೇಸು ಅವರ ಎದು 9
ರಿಗೆ ಬಂದು—ನಿಮಗೆ ಶುಭವಾಗಲಿ ಅಂದನು. ಅವರು ಹತ್ತರಕ್ಕೆ ಬಂದು ಆತನ ಪಾದ
ಗಳನ್ನು ಹಿಡಿದು ಆತನಿಗೆ ನಮಸ್ಕಾರಮಾಡಿದರು. ಯೇಸು ಅವರಿಗೆ—ಹೆದರ ಬೇಡಿರಿ; 10
ನನ್ನ ಸಹೋದರರ ಬಳಿಗೆ ಹೋಗಿ ಅವರು ಗಲಿಲಾಯಕ್ಕೆ ಹೋಗಬೇಕೆಂದು ಹೇಳಿರಿ;
ಅಲ್ಲಿ ನನ್ನನ್ನು ನೋಡುವರು ಎಂದು ಹೇಳಿದನು.

ಅವರು ಹೋಗುತ್ತಿರುವಾಗ, ಕಾವಲುಗಾರರಲ್ಲಿ ಕೆಲವರು ಪಟ್ಟಣದೊಳಕ್ಕೆ ಬಂದು 11
ನಡೆದ ಸಂಗತಿಗಳನ್ನೆಲ್ಲಾ ಮಹಾಯಾಜಕರಿಗೆ ತಿಳಿಸಿದರು. ಇವರು ಹಿರಿಯರ ಸಂಗಡ 12
ಕೂಡಿಕೊಂಡು ಆಲೋಚನೆಮಾಡಿ, ಆ ಸಿಪಾಯಿಗಳಿಗೆ ಬಹಳ ಹಣಾಕೊಟ್ಟು—ಅವನ 13
ಶಿಷ್ಯರು ರಾತ್ರಿಯಲ್ಲಿ ಬಂದು ನಾವು ನಿದ್ದೆಮಾಡುತ್ತಿರುವಾಗ ಅವನನ್ನು ಕದ್ದುಕೊಂಡು
ಹೋದರು ಎಂದು ಹೇಳಿರಿ; ಈ ಸುದ್ದಿ ದೇಶಾಧಿಪತಿಯ ಕಿವಿಗೆ ಬಿದ್ದರೆ, ನಾವು ಅವ 14
ನನ್ನು ಸಮಾಧಾನಪಡಿಸಿ ನಿಮಗೆ ಭಯವಿಲ್ಲದ ಹಾಗೆ ಮಾಡುತ್ತೇವೆ ಅಂದರು. ಇವರು 15
ಆ ಹಣವನ್ನು ತೆಗೆದುಕೊಂಡು ತಮಗೆ ಹೇಳಿಕೊಟ್ಟ ಹಾಗೆ ಮಾಡಿದರು. ಈ ಮಾತು
ಇಂದಿನ ವರೆಗೂ ಯೆಹೂದ್ಯರಲ್ಲಿ ಹಬ್ಬಿ ಅದೆ.

### ಯೇಸುವಿನ ಕಡೇ ಮಾತುಗಳು.

ಬಳಿಕ ಹನ್ನೊಂದು ಮಂದಿ ಶಿಷ್ಯರು ಗಲಿಲಾಯಕ್ಕೆ ಹೋಗಿ, ಯೇಸು ತಮಗೆ ಗೊತ್ತು 16
ಮಾಡಿದ್ದ ಬೆಟ್ಟಕ್ಕೆ ಸೇರಿದರು. ಅಲ್ಲಿ ಆತನನ್ನು ಕಂಡು ಆತನಿಗೆ ಅಡ್ಡಬಿದ್ದರು; ಆದರೆ 17
ಕೆಲವರು ಸಂದೇಹಪಟ್ಟರು. ಆಗ ಯೇಸು ಹತ್ತರಕ್ಕೆ ಬಂದು—ಪರಲೋಕದಲ್ಲಿಯೂ 18
ಭೂಲೋಕದಲ್ಲಿಯೂ ಎಲ್ಲಾ ಅಧಿಕಾರವು ನನಗೆ ಕೊಡಲ್ಪಟ್ಟದೆ. ಆದ್ದರಿಂದ ನೀವು 19
ಹೊರಟುಹೋಗಿ, ಎಲ್ಲಾ ದೇಶಗಳ ಜನರನ್ನು ಶಿಷ್ಯರಾಗ ಮಾಡಿರಿ; ಅವರಿಗೆ ತಂದೆಯ,
ಮಗನ, ಪವಿತ್ರಾತ್ಮನ ಹೆಸರಿನಲ್ಲಿ ದೀಕ್ಷಾಸ್ನಾನಮಾಡಿಸಿ, ನಾನು ನಿಮಗೆ ಆಜ್ಞಾಪಿಸಿದ್ದ 20
ನ್ನೆಲ್ಲಾ ಕಾಪಾಡಿಕೊಳ್ಳುವದಕ್ಕೆ ಅವರಿಗೆ ಉಪದೇಶ ಮಾಡಿರಿ. ನೋಡಿರಿ, ನಾನು
ಯುಗದ ಸಮಾಪ್ತಿಯ ವರೆಗೂ ಎಲ್ಲಾ ದಿವಸ ನಿಮ್ಮ ಸಂಗಡ ಇರುತ್ತೇನೆ ಎಂದು
ಹೇಳಿದನು.

---

[1] ಕೆಲವು ಪ್ರತಿಗಳಲ್ಲಿ—ಸ್ವಾಮಿಯು ಎಂದು ಬರೆದದೆ.

# THE GOSPEL ACCORDING TO SAINT MARK

# ಮಾರ್ಕನು ಬರೆದ ಸುವಾರ್ತೆ

### ಸ್ನಾನಿಕನಾದ ಯೋಹಾನನ ವಿಷಯ.

(ಮತ್ತಾಯ 3, 1—12; ಲೂಕ 3, 1—18; ಯೋಹಾನ 1, 19—28.)

1 ಯೇಸು ಕ್ರಿಸ್ತನ[1] ವಿಷಯವಾದ ಸುವಾರ್ತೆಯ ಪ್ರಾರಂಭವು.

2 ಇಗೋ, ನಾನು ನನ್ನ ದೂತನನ್ನು ನಿನ್ನ ಮುಂದೆ ಕಳುಹಿಸಿಕೊಡುತ್ತೇನೆ;
ನೀನು ಹೋಗತಕ್ಕ ದಾರಿಯನ್ನು ಅವನು ಸಿದ್ಧ ಮಾಡುವನೆಂತಲೂ[2],
3 ಕರ್ತನ ದಾರಿಯನ್ನು ಸಿದ್ಧ ಮಾಡಿರಿ; ಆತನ ಹಾದಿಗಳನ್ನು ಸಮವಾಡಿರಿ ಎಂದು
ಅಡವಿಯಲ್ಲಿ ಕೂಗುವವನ ಶಬ್ದವದೆ ಎಂತಲೂ[3]

4 ಪ್ರವಾದಿಯಾದ ಯೆಶಾಯನ[4] ಗ್ರಂಥದಲ್ಲಿ ಬರೆದಿರುವ ಪ್ರಕಾರ ಯೋಹಾನನು ಬಂದು, ಜನರಿಗೆ—ನೀವು ಪಾಪಪರಿಹಾರಕ್ಕಾಗಿ ದೇವರ ಕಡೆಗೆ ತಿರುಗಿಕೊಂಡು ದೀಕ್ಷಾಸ್ನಾನ ಮಾಡಿಸಿಕೊಳ್ಳಬೇಕೆಂದು ಸಾರಿಹೇಳುತ್ತಾ ಅಡವಿಯಲ್ಲಿ ದೀಕ್ಷಾಸ್ನಾನಮಾಡಿಸುತ್ತಾ 5 ಇದ್ದನು. ಆಗ ಯೂದಾಯ ಸೀಮೆಯೆಲ್ಲವೂ ಯೆರೂಸಲೇಮಿನವರೆಲ್ಲರೂ ಅವನ ಬಳಿಗೆ ಹೊರಟುಹೋಗಿ, ತಮ್ಮತಮ್ಮ ಪಾಪಗಳನ್ನು ಹೇಳಿಕೊಂಡು ಯೊರ್ದನ್ ಹೊಳೆ 6 ಯಲ್ಲಿ ಅವನಿಂದ ದೀಕ್ಷಾಸ್ನಾನಮಾಡಿಸಿಕೊಳ್ಳುತ್ತಾ ಇದ್ದರು. ಈ ಯೋಹಾನನು ಒಂಟೇ ಕೂದಲಿನ ಹೊದಿಕೆಯನ್ನು ಹೊದ್ದುಕೊಂಡು ಸೊಂಟಕ್ಕೆ ತೊಗಲಿನ ನಡು ಕಟ್ಟನ್ನು ಕಟ್ಟಿಕೊಂಡಿದ್ದನು; ಅವನು ಮಿಡಿತೆಯನ್ನೂ ಕಾಡುಜೇನನ್ನೂ ಆಹಾರ ಮಾಡು 7 ತ್ತಿದ್ದನು. ಅವನು—ನನಗಿಂತ ಶಕ್ತನು ನನ್ನ ಹಿಂದೆ ಬರುತ್ತಾನೆ; ಆತನ ಕೆರಗಳ 8 ವಾರನ್ನು ಬೊಗ್ಗಿಕೊಂಡು ಬಿಚ್ಚುವದಕ್ಕೂ ನಾನು ಯೋಗ್ಯನಲ್ಲ. ನಾನು ನಿಮಗೆ ನೀರಿನ ಸ್ನಾನಮಾಡಿಸಿದೆನು; ಆತನಾದರೋ ನಿಮಗೆ ಪವಿತ್ರಾತ್ಮದ ಸ್ನಾನಮಾಡಿಸುವನು ಎಂದು ಸಾರಿಹೇಳಿದನು.

---

[1] ಕೆಲವು ಪ್ರತಿಗಳಲ್ಲಿ—ದೇವಕುಮಾರನಾದ ಯೇಸು ಕ್ರಿಸ್ತನ ಎಂದು ಬರೆದದೆ.
[2] ಮಲಕೀಯ ೩, ೧. [3] ಯೆಶಾಯ ೪೦, ೩. [4] ಕೆಲವು ಪ್ರತಿಗಳಲ್ಲಿ—ಪ್ರವಾದಿಗಳ ಎಂದು ಬರೆದದೆ.

ಯೇಸು ಪ್ರತಿಷ್ಠೆಯನ್ನು ಹೊಂದಿ, ತನ್ನ ಉದ್ಯೋಗವನ್ನು ಪ್ರಾರಂಭಿಸಿದ್ದು.
(ಮತ್ತಾಯ 3, 13—4, 17; ಲೂಕ 3, 21—22; 4, 1—15; ಯೋಹಾನ 1, 31—33.)

ಆ ದಿನಗಳಲ್ಲಿ ಯೇಸು ಗಲಿಲಾಯ ಸೀಮೆಗೆ ಸೇರಿದ ನಜರೇತೆಂಬ ಊರಿನಿಂದ ಬಂದು 9 ಯೊರ್ದನ್ ಹೊಳೆಯಲ್ಲಿ ಯೋಹಾನನಿಂದ ಸ್ನಾನಮಾಡಿಸಿಕೊಂಡನು. ಮಾಡಿಸಿ 10 ಕೊಂಡ ಕೂಡಲೆ ಆತನು ನೀರಿನಿಂದ ಮೇಲಕ್ಕೆ ಬರಲು, ಆಕಾಶವು ಒಡೆಯಲಾಗಿ ದೇವ ರಾತ್ಮವು ಪಾರಿವಾಳದಂತೆ ತನ್ನ ಮೇಲೆ ಇಳಿಯುವದನ್ನು ಕಂಡನು. ಆಗ—ನೀನು 11 ಪ್ರಿಯನಾಗಿರುವ ನನ್ನ ಮಗನು, ನಿನ್ನನ್ನು ನಾನು ಮೆಚ್ಚಿದ್ದೇನೆ ಎಂದು ಆಕಾಶವಾಣಿ ಯಾಯಿತು.

ಕೂಡಲೆ ಯೇಸು ದೇವರಾತ್ಮಪ್ರೇರಿತನಾಗಿ ಅಡವಿಗೆ ಹೋದನು. ಆತನು 12, 13 ನಾಲ್ವತ್ತು ದಿವಸ ಅಡವಿಯಲ್ಲಿ ಮೃಗಗಳೊಂದಿಗೆ ಇದ್ದು ಸೈತಾನನಿಂದ ಶೋಧಿಸಲ್ಪಡುವ ವನಾದನು. ಮತ್ತು ದೇವದೂತರು ಆತನಿಗೆ ಉಪಚಾರಮಾಡಿದರು.

ಯೋಹಾನನು ಸೆರೆಗೆ ಬಿದ್ದ ಮೇಲೆ, ಯೇಸು ಗಲಿಲಾಯ ಸೀಮೆಗೆ ಬಂದು— 14 ಕಾಲ ಪರಿಪೂರ್ಣವಾಯಿತು, ದೇವರ ರಾಜ್ಯವು ಸಮೀಪಿಸಿತು, ನಿಮ್ಮ ಮನಸ್ಸನ್ನು 15 ದೇವರ ಕಡೆಗೆ ತಿರುಗಿಸಿಕೊಂಡು ಸುವಾರ್ತೆಯನ್ನು ನಂಬಿರಿ ಎಂದು ದೇವರ ಸುವಾರ್ತೆ ಯನ್ನು ಸಾರಿಹೇಳಿದನು.

ಯೇಸು ಪ್ರಥಮ ಶಿಷ್ಯರನ್ನು ಮಾಡಿಕೊಂಡದ್ದು. (ಮತ್ತಾಯ 4, 18—22; ಲೂಕ 5, 1—11.)

ಹೀಗಿರುವಲ್ಲಿ, ಆತನು ಗಲಿಲಾಯ ಸಮುದ್ರದ ಬಳಿಯಲ್ಲಿ ಹೋಗುತ್ತಿರುವಾಗ ಸೀಮೋ 16 ನನೂ ಸೀಮೋನನ ತಮ್ಮನಾದ ಅಂದ್ರೆಯನೂ ಸಮುದ್ರದಲ್ಲಿ ಬಲೇಬೀಸುವದನ್ನು ಕಂಡನು. ಅವರು ಬೆಸ್ತರಾಗಿದ್ದರು. ಯೇಸು ಅವರಿಗೆ—ನನ್ನ ಹಿಂದೆ ಬನ್ನಿರಿ; ನಿಮ್ಮನ್ನು 17 ಮನುಷ್ಯರ ಹಿಡಿಯುವ ಬೆಸ್ತರಾಗ ಮಾಡುವೆನು ಎಂದು ಹೇಳುತ್ತಲೇ, ಅವರು ತಮ್ಮ 18 ಬಲೆಗಳನ್ನು ಬಿಟ್ಟು ಆತನ ಹಿಂದೆ ಹೋದರು. ಇನ್ನೂ ಸ್ವಲ್ಪ ಮುಂದೆ ಹೋಗಿ, 19 ಜೆಬೆದಾಯನ ಮಗನಾದ ಯಾಕೋಬನನ್ನೂ ಅವನ ತಮ್ಮನಾದ ಯೋಹಾನನನ್ನೂ ಕಂಡನು. ಇವರು ದೋಣಿಯಲ್ಲಿ ತಮ್ಮ ಬಲೆಗಳನ್ನು ಸರಿಮಾಡುತ್ತಿದ್ದರು. ಕೂಡಲೇ 20 ಅವರನ್ನೂ ಕರೆದನು. ಅವರು ತಮ್ಮ ತಂದೆಯಾದ ಜೆಬೆದಾಯನನ್ನು ಕೂಲಿಯಾಳುಗಳ ಸಂಗಡ ದೋಣಿಯಲ್ಲಿ ಬಿಟ್ಟು ಆತನ ಹಿಂದೆ ಹೋದರು.

ಯೇಸು ಉಪದೇಶಮಾಡಿ, ದೆವ್ವಗಳನ್ನು ಬಿಡಿಸಿ, ರೋಗಿಗಳನ್ನು ಸ್ವಸ್ಥಮಾಡಿ ಹೆಸರುಗೊಂಡದ್ದು.
(ಮತ್ತಾಯ 8, 14—16; ಲೂಕ 4, 31—41.)

ಬಳಿಕ ಅವರು ಕಪೆರ್ನೌಮೆಂಬ ಊರಿಗೆ ಸೇರಿದರು. ಸಬ್ಬತ್‌ದಿನದಲ್ಲಿ ಯೇಸು 21 ಸಭಾಮಂದಿರಕ್ಕೆ ಹೋಗಿ ಉಪದೇಶಮಾಡಿದನು. ಜನರು ಆತನ ಉಪದೇಶವನ್ನು 22 ಕೇಳಿ ಅತ್ಯಾಶ್ಚರ್ಯಪಟ್ಟರು; ಯಾಕಂದರೆ ಆತನು ಶಾಸ್ತ್ರಿಗಳಂತೆ ಉಪದೇಶಮಾಡದೆ

23 ಅಧಿಕಾರವಿದ್ದವನಂತೆ ಅವರಿಗೆ ಉಪದೇಶಮಾಡುತ್ತಿದ್ದನು. ಆಗ ಅವರ ಸಭಾಮಂದಿರ
24 ದಲ್ಲಿ ದೆವ್ವಹಿಡಿದ ಒಬ್ಬ ಮನುಷ್ಯನು ಇದ್ದು—ನಜರೇತಿನ ಯೇಸುವೇ, ನಮ್ಮ ಗೊಡವೆ
ನಿನಗ್ಯಾಕೆ? ನಮ್ಮನ್ನು ನಾಶಮಾಡುವದಕ್ಕೆ ಬಂದೆಯಾ? ನಿನ್ನನ್ನು ಬಲ್ಲೆನು; ನೀನು
25 ದೇವರು ಪ್ರತಿಷ್ಠಿಸಿದವನೇ ಎಂದು ಅಬ್ಬರಿಸಿ ಹೇಳಿದನು. ಯೇಸು ಆ ದೆವ್ವವನ್ನು
26 ಗದರಿಸಿ—ಸುಮ್ಮನಿರು, ಇವನನ್ನು ಬಿಟ್ಟುಹೋಗು ಎನ್ನಲಾಗಿ, ಆ ದೆವ್ವವು ಅವನನ್ನು
27 ಒದ್ದಾಡಿಸಿ ಅಬ್ಬರಿಸಿಕೊಂಡು ಬಿಟ್ಟುಹೋಯಿತು. ಅದಕ್ಕೆ ಎಲ್ಲರು ಬೆರಗಾಗಿ—ಇದೇನಿರ
ಬಹುದು? ಇದು ಹೊಸ ಉಪದೇಶ. ಈತನು ಅಧಿಕಾರದಿಂದ ದೆವ್ವಗಳಿಗೂ ಅಪ್ಪಣೆ
ಕೊಡುತ್ತಾನೆ; ಅವು ಆತನ ಮಾತನ್ನು ಕೇಳುತ್ತವೆ ಎಂದು ತಮ್ಮತಮ್ಮೊಳಗೆ ಮಾತಾಡಿ
28 ಕೊಂಡರು. ಕೂಡಲೆ ಆತನ ಸುದ್ದಿಯು ಗಲಿಲಾಯ ಸೀಮೆಯಲ್ಲಿ ಎಲ್ಲೆಲ್ಲಿಯೂ ಹಬ್ಬಿತು.
29 ಆ ಮೇಲೆ ಆತನು ಸಭಾಮಂದಿರದಿಂದ ಹೊರಟು ಯಾಕೋಬ ಯೋಹಾನರ ಸಂಗಡ
30 ಸೀಮೋನ ಅಂದ್ರೆಯರ ಮನೆಗೆ ಬಂದನು. ಅಲ್ಲಿ ಸೀಮೋನನ ಅತ್ತೆ ಜ್ವರಬಂದು ಮಲ
31 ಗಿರಲಾಗಿ ಅವರು ಆಕೆಯ ಸಂಗತಿಯನ್ನು ಆತನಿಗೆ ತಿಳಿಸಿದರು. ಆತನು ಹತ್ತರಕ್ಕೆ
ಬಂದು ಆಕೆಯ ಕೈಯನ್ನು ಹಿಡಿದು ಎಬ್ಬಿಸಲು, ಜ್ವರವು ಆಕೆಯನ್ನು ಬಿಟ್ಟುಹೋಯಿತು;
ಆಕೆಯು ಅವರಿಗೆ ಉಪಚಾರಮಾಡಿದಳು.

32 ಸಂಜೆಯಾಗಿ ಹೊತ್ತುಮುಣುಗಿದ ಮೇಲೆ, ಜನರು ಮೈಯಲ್ಲಿ ನೆಟ್ಟಗಿಲ್ಲದವರೆಲ್ಲ
33 ರನ್ನೂ ದೆವ್ವಹಿಡಿದವರನ್ನೂ ಆತನ ಬಳಿಗೆ ಕರತಂದರು. ಊರೆಲ್ಲಾ ಬಾಗಲಿನ ಮುಂದೆ
34 ಒಟ್ಟುಗೂಡಿತ್ತು. ಆಗ ಆತನು ತರತರವಾದ ರೋಗಗಳಿಂದ ಮೈಯಲ್ಲಿ ನೆಟ್ಟಗಿಲ್ಲದ
ಬಹುಜನರನ್ನು ವಾಸಿಮಾಡಿ ಅನೇಕ ದೆವ್ವಗಳನ್ನು ಬಿಡಿಸಿದನು. ಮತ್ತು ತಾನು ಇಂಥ
ವನೆಂದು[1] ದೆವ್ವಗಳಿಗೆ ತಿಳಿದ್ದರಿಂದ ಆತನು ಅವುಗಳನ್ನು ಮಾತಾಡಗೊಡಿಸಲಿಲ್ಲ.

### ಯೇಸು ಸುವಾರ್ತೆಯನ್ನು ಸಾರುತ್ತಾ ಗಲಿಲಾಯದಲ್ಲಿ ಸಂಚರಿಸಿದ್ದು. (ಲೂಕ 4, 42—44.)

35 ಮುಂಜಾನೆ ಇನ್ನೂ ಮೊಬ್ಬಿರುವಾಗ, ಆತನು ಎದ್ದು ಹೊರಟು ಅಡವಿಯ ಸ್ಥಳಕ್ಕೆ
36 ಹೋಗಿ ದೇವರನ್ನು ಪ್ರಾರ್ಥಿಸುತ್ತಿದ್ದನು. ಸೀಮೋನನೂ ಅವನ ಸಂಗಡ ಇದ್ದ
37 ವರೂ ಆತನನ್ನು ಹಿಂದಟ್ಟಿ ಕಂಡು—ಎಲ್ಲರು ನಿನ್ನನ್ನು ಹುಡುಕುತ್ತಾರೆ ಅನ್ನಲಾಗಿ,
38 ಆತನು ಅವರಿಗೆ—ನಾವು ಸಮೀಪದಲ್ಲಿರುವ ಬೇರೆ ಊರುಗಳಿಗೆ ಹೋಗೋಣ; ಅಲ್ಲಿಯೂ
ನಾನು ಸುವಾರ್ತೆಯನ್ನು ಸಾರಬೇಕು; ಅದಕ್ಕಾಗಿಯೇ ನಾನು ಹೊರಟುಬಂದಿದ್ದೇನೆ
39 ಎಂದು ಹೇಳಿದನು. ಬಳಿಕ ಆತನು ಗಲಿಲಾಯದಲ್ಲೆಲ್ಲಾ ಹೋಗಿ ಅವರ ಸಭಾಮಂದಿರ
ಗಳಲ್ಲಿ ಸುವಾರ್ತೆಯನ್ನು ಸಾರುತ್ತಾ ದೆವ್ವಗಳನ್ನು ಬಿಡಿಸುತ್ತಾ ಇದ್ದನು.

### ಕುಷ್ಠರೋಗಿಯನ್ನು ಸ್ವಸ್ಥಮಾಡಿದ್ದು. (ಮತ್ತಾಯ 8, 2—4; ಲೂಕ 5, 12—16.)

40 ಒಬ್ಬ ಕುಷ್ಠರೋಗಿಯು ಯೇಸುವಿನ ಬಳಿಗೆ ಬಂದು, ಆತನ ಮುಂದೆ ಮೊಣಕಾಲೂರಿ
ಕೊಂಡು—ನಿನಗೆ ಮನಸ್ಸಿದ್ದರೆ ನನ್ನನ್ನು ಶುದ್ಧ ಮಾಡಬಲ್ಲೆ ಎಂದು ಬೇಡಿಕೊಳ್ಳಲು,

[1] ಕೆಲವು ಪ್ರತಿಗಳಲ್ಲಿ—ಕ್ರಿಸ್ತನೆಂದು ಬರೆದದೆ.

ಆತನು ಕನಿಕರಪಟ್ಟು ಕೈಚಾಚಿ, ಅವನನ್ನು ಮುಟ್ಟಿ—ನನಗೆ ಮನಸ್ಸುಂಟು; ಶುದ್ಧವಾಗು 41 ಅಂದನು. ಅಂದಕೂಡಲೆ ಅವನ ಕುಷ್ಠವು ಹೋಗಿ, ಅವನು ಶುದ್ಧವಾದನು. ಆಗ 42-44 ಯೇಸು ಅವನಿಗೆ—ಯಾರಿಗೂ ಏನೂ ಹೇಳಬೇಡ ನೋಡು; ಆದರೆ ಹೋಗಿ, ಯಾಜಕನಿಗೆ ನಿನ್ನ ಮೈ ತೋರಿಸಿ, ಮೋಶೆಯು ನೇಮಕಮಾಡಿರುವದನ್ನು ಅರ್ಪಿಸಿ[1], ನಿನ್ನ ಶುದ್ಧಾಚಾರವನ್ನು ನೆರವೇರಿಸು, ಅದು ಜನರಿಗೆ ಸಾಕ್ಷಿಯಾಗಲಿ ಎಂದು ಖಂಡಿತವಾಗಿ ಹೇಳಿ, ಅವನನ್ನು ಕಳುಹಿಸಿಬಿಟ್ಟನು. ಆದರೆ ಅವನು ಹೊರಟುಹೋಗಿ ಆ ಸಂಗತಿ 45 ಯನ್ನು ಬಹಳವಾಗಿ ಸಾರಿ ಹಬ್ಬಿಸಿದ್ದರಿಂದ, ಯೇಸು ಬಹಿರಂಗವಾಗಿ ಇನ್ನು ಯಾವ ಊರೊಳಕ್ಕೂ ಹೋಗಲಾರದೆ, ಹೊರಗೆ ಅಡವಿಯ ಸ್ಥಳಗಳಲ್ಲಿ ಇದ್ದನು. ಮತ್ತು ಜನರು ನಾಲ್ಕು ಕಡೆಯಿಂದಲೂ ಆತನ ಬಳಿಗೆ ಬರುತ್ತಿದ್ದರು.

### ಯೇಸು ಒಬ್ಬ ರೋಗಿಗೆ ಪಾಪವನ್ನು ಕ್ಷಮಿಸಿದ್ದಕ್ಕೆ ಶಾಸ್ತ್ರಿಗಳು ಆತನ ಮೇಲೆ ಆಕ್ಷೇಪಣೆ ಮಾಡಿದ್ದು.

(ಮತ್ತಾಯ 9, 1—8; ಲೂಕ 5, 17—26.)

**2** ಕೆಲವು ದಿನಗಳಾದ ಮೇಲೆ ಆತನು ಕಪೆರ್ನೌಮಿಗೆ ತಿರಿಗಿ ಬಂದನು. ಮನೆಯಲ್ಲಿದ್ದಾನೆಂಬ ವರ್ತಮಾನವು ಹಬ್ಬಿದಾಗ, 2 ಬಹುಜನರು ಕೂಡಿಬಂದದ್ದರಿಂದ ಬಾಗಲಿನ ಬಳಿಯಲ್ಲಾದರೂ ಸ್ಥಳವಿರಲಿಲ್ಲ. ಆತನು ಅವರಿಗೆ ದೇವರ ವಾಕ್ಯವನ್ನು ಹೇಳುತ್ತಿದ್ದನು. 3 ಅಷ್ಟರಲ್ಲಿ ಕೆಲವರು ಒಬ್ಬ ಪಾರ್ಶ್ವವಾಯುರೋಗದವನನ್ನು ನಾಲ್ಕುಮಂದಿಯಿಂದ ಹೊರಿಸಿಕೊಂಡು ಆತನ ಬಳಿಗೆ ತಂದರು. 4 ಜನರ ಗುಂಪು ಬಹಳವಾಗಿದ್ದದರಿಂದ ಅವರು ಆತನ ಹತ್ತರಕ್ಕೆ ಸೇರಲಾರದೆ, ಆತನಿದ್ದ ಮನೆಯ ಮೇಲ್ಚಾವಣೆಯನ್ನು ಬಿಚ್ಚಿ ದ್ವಾರಮಾಡಿ, ಪಾರ್ಶ್ವವಾಯುವಿನವನು ಮಲಗಿದ್ದ ಹಾಸಿಗೆಯನ್ನು ಇಳಿಸಿದರು. 5 ಯೇಸು ಅವರ ನಂಬಿಕೆಯನ್ನು ನೋಡಿ, ಆ ಪಾರ್ಶ್ವವಾಯುರೋಗಿಗೆ—ಮಗನೇ, ನಿನ್ನ ಪಾಪಗಳು ಕ್ಷಮಿಸಲ್ಪಟ್ಟಿವೆ ಎಂದು ಹೇಳಿದನು. 6 ಆದರೆ ಶಾಸ್ತ್ರಿಗಳಲ್ಲಿ ಕೆಲವರು ಅಲ್ಲಿ ಕೂತುಕೊಂಡಿದ್ದು—7 ಇವನು ಯಾಕೆ ಹೀಗೆ ಮಾತಾಡುತ್ತಾನೆ? ಇದು ದೇವದೂಷಣೆ. ದೇವರೊಬ್ಬನೇ ಹೊರತು ಮತ್ತ್ಯಾರು ಪಾಪಗಳನ್ನು ಕ್ಷಮಿಸಬಲ್ಲರು? ಎಂದು ತಮ್ಮತಮ್ಮ ಮನಸ್ಸಿನಲ್ಲಿ ಅಂದುಕೊಂಡರು. 8 ಹೀಗೆ ಅಂದುಕೊಳ್ಳುವದನ್ನು ಕೂಡಲೆ ಯೇಸು ತನ್ನ ಆತ್ಮದಲ್ಲಿ ತಿಳಿದುಕೊಂಡು, ಅವರಿಗೆ—ನೀವು ನಿಮ್ಮ ಮನಸ್ಸಿನಲ್ಲಿ ಯಾಕೆ ಹೀಗೆ ಅಂದುಕೊಳ್ಳುತ್ತೀರಿ? 9 ಪಾರ್ಶ್ವವಾಯುರೋಗಿಗೆ—ನಿನ್ನ ಪಾಪಗಳು ಕ್ಷಮಿಸಲ್ಪಟ್ಟಿವೆ ಅನ್ನುವದು ಸುಲಭವೋ? ಎದ್ದು ನಿನ್ನ ಹಾಸಿಗೆಯನ್ನು ತೆಗೆದುಕೊಂಡು ನಡೆ ಅನ್ನುವದು ಸುಲಭವೋ? 10 ಆದರೆ ಪಾಪಗಳನ್ನು ಕ್ಷಮಿಸಿಬಿಡುವದಕ್ಕೆ ಮನುಷ್ಯಕುಮಾರನಿಗೆ ಭೂಲೋಕದಲ್ಲಿ ಅಧಿಕಾರ ಉಂಟೆಂಬುವದು ನಿಮಗೆ ತಿಳಿಯಬೇಕು ಎಂದು ಹೇಳಿ, ಪಾರ್ಶ್ವವಾಯುರೋಗಿಯನ್ನು ನೋಡಿ—11 ಎದ್ದು ನಿನ್ನ ಹಾಸಿಗೆಯನ್ನು ತೆಗೆದುಕೊಂಡು ಮನೆಗೆ ಹೋಗೆಂದು ನಿನಗೆ ಹೇಳುತ್ತೇನೆ ಅಂದನು. 12 ಅವನು ಎದ್ದು, ಕೂಡಲೆ ತನ್ನ ಹಾಸಿಗೆಯನ್ನು ತೆಗೆದು

[1] ಲೇವಿಕ ೧೪, ೧—೩೨.

ಕೊಂಡು, ಎಲ್ಲರ ಮುಂದೆ ಹೊರಟುಹೋದನು. ಅದಕ್ಕೆ ಎಲ್ಲರು ಬೆರಗಾಗಿ—ಇದು ವರೆಗೆ ನಾವು ಇಂಥಾದ್ದನ್ನು ಎಂದಿಗೂ ನೋಡಿದ್ದೇ ಇಲ್ಲವೆಂದು ಹೇಳುತ್ತಾ ದೇವರನ್ನು ಕೊಂಡಾಡಿದರು.

ಯೇಸು ಭ್ರಷ್ಟರ ಕೂಡ ಊಟಾಮಾಡಿದ್ದಕ್ಕೆ ಶಾಸ್ತ್ರಿಗಳು ಆತನ ಮೇಲೆ ಆಕ್ಷೇಪಣೆ ಮಾಡಿದ್ದು.
(ಮತ್ತಾಯ 9, 9—13; ಲೂಕ 5, 27—32.)

13 ಆತನು ಹೊರಟು, ತಿರಿಗಿ ಸಮುದ್ರದ ಬಳಿಗೆ ಹೋದನು. ಜನರ ಗುಂಪೆಲ್ಲಾ ಆತನ
14 ಬಳಿಗೆ ಬಂದಾಗ ಆತನು ಅವರಿಗೆ ಉಪದೇಶಮಾಡಿದನು. ಅಲ್ಲಿಂದ ಆತನು ಹೋಗು ತ್ತಿರುವಾಗ ಸುಂಕಕ್ಕೆ ಕೂತಿದ್ದ ಅಲ್ಫಾಯನ ಮಗನಾದ ಲೇವಿಯನ್ನು ನೋಡಿ—ನನ್ನ ಹಿಂದೆ ಬಾ ಎಂದು ಅವನನ್ನು ಕರೆಯಲು, ಅವನು ಎದ್ದು ಆತನ ಹಿಂದೆ ಹೋದನು.
15 ಅನಂತರ ಆತನು ಅವನ ಮನೆಯೊಳಗೆ ಊಟಕ್ಕೆ ಕೂತಿರುವಲ್ಲಿ, ಬಹು ಮಂದಿ ಸುಂಕ ದವರೂ ಅನಾಚಾರಿಗಳೂ ಯೇಸುವಿನ ಮತ್ತು ಆತನ ಶಿಷ್ಯರ ಪಙ್ಕ್ತಿಯಲ್ಲೇ ಕೂತು
16 ಕೊಂಡರು. ಅಂಥವರು ಬಹುಮಂದಿ ಇದ್ದರು. ಫರಿಸಾಯರಾದ ಶಾಸ್ತ್ರಿಗಳು ಆತನ ಹಿಂದೆ ಹೋಗಿ ಆತನು ಅನಾಚಾರಿಗಳ ಮತ್ತು ಸುಂಕದವರ ಸಂಗಡ ಊಟಾಮಾಡುವ ದನ್ನು ಕಂಡು ಆತನ ಶಿಷ್ಯರಿಗೆ—ಈತನು ಸುಂಕದವರ ಮತ್ತು ಪಾಪಿಗಳ ಸಂಗಡ ಅನ್ನ
17 ಪಾನಾದಿಗಳನ್ನು ತೆಗೆದುಕೊಳ್ಳುತ್ತಾನೆ ನೋಡಿರಿ ಎಂದು ಹೇಳಿದರು. ಯೇಸು ಅದನ್ನು ಕೇಳಿ—ಕ್ಷೇಮದಿಂದಿರುವವರಿಗೆ ವೈದ್ಯನು ಬೇಕಾಗಿಲ್ಲ; ಕ್ಷೇಮವಿಲ್ಲದವರಿಗೆ ಬೇಕು. ನಾನು ನೀತಿವಂತರನ್ನು ಕರೆಯುವದಕ್ಕೆ ಬಂದವನಲ್ಲ, ಪಾಪಿಗಳನ್ನು ಕರೆಯುವದಕ್ಕೆ ಬಂದವನು ಅಂದನು.

ಯೇಸುವಿನ ಶಿಷ್ಯರು ಉಪವಾಸಮಾಡದ್ದಕ್ಕೆ ಶಾಸ್ತ್ರಿಗಳು ಆತನ ಮೇಲೆ ಆಕ್ಷೇಪಣೆ ಮಾಡಿದ್ದು.
(ಮತ್ತಾಯ 9, 14—17; ಲೂಕ 5, 33—38.)

18 ಇದಲ್ಲದೆ ಯೋಹಾನನ ಶಿಷ್ಯರೂ ಫರಿಸಾಯರೂ ಉಪವಾಸವಾಗಿದ್ದರು. ಆಗ ಕೆಲವರು ಆತನ ಬಳಿಗೆ ಬಂದು—ಯೋಹಾನನ ಶಿಷ್ಯರೂ ಫರಿಸಾಯರ ಶಿಷ್ಯರೂ ಉಪ ವಾಸಮಾಡುತ್ತಾರಲ್ಲ? ನಿನ್ನ ಶಿಷ್ಯರು ಯಾಕೆ ಉಪವಾಸಮಾಡುವದಿಲ್ಲ? ಎಂದು ಕೇಳಿ
19 ದ್ದಕ್ಕೆ, ಯೇಸು—ಮದುವೇಜನರು ತಮ್ಮ ಸಂಗಡ ಮದಲಿಂಗನು ಇರುವಲ್ಲಿ ಉಪವಾಸ ಮಾಡುವದುಂಟೇ? ಮದಲಿಂಗನು ತಮ್ಮ ಸಂಗಡ ಇರುವ ತನಕ ಅವರು ಉಪವಾಸ
20 ಮಾಡಲಾಗದು. ಆದರೆ ಮದಲಿಂಗನನ್ನು ಅವರ ಬಳಿಯಿಂದ ತೆಗೆದುಕೊಂಡುಹೋ
21 ಗುವ ದಿವಸ ಬರುತ್ತದೆ; ಆ ದಿವಸದಲ್ಲೇ ಉಪವಾಸಮಾಡುವರು. ಯಾರೂ ಹೊಸ ಬಟ್ಟೆಯ ತುಂಡನ್ನು ಹಳೇ ವಸ್ತ್ರಕ್ಕೆ ತ್ಯಾಪೇಹಚ್ಚುವದಿಲ್ಲ; ಹಚ್ಚಿದರೆ, ಆ ಹೊಸ
22 ತ್ಯಾಪೆಯು ಹಳೇ ವಸ್ತ್ರವನ್ನು ಹಿಂಜಿ, ಹರಕು ಹೆಚ್ಚಾಗುವದು. ಇದಲ್ಲದೆ ಹಳೇ ಬುದ್ದಲಿ ಗಳಲ್ಲಿ ಹೊಸ ದ್ರಾಕ್ಷಾರಸವನ್ನು ಯಾರೂ ಹಾಕಿಡುವದಿಲ್ಲ; ಇಟ್ಟರೆ, ಆ ದ್ರಾಕ್ಷಾರಸವು

ಬುದ್ದಲಿಗಳನ್ನು ಒಡೆದು, ದ್ರಾಕ್ಷಾರಸವು ಬುದ್ದಲಿಗಳು ಎರಡೂ ಕೆಟ್ಟುಹೋಗುವವು. ಆದರೆ ಹೊಸ ದ್ರಾಕ್ಷಾರಸವನ್ನು ಹೊಸ ಬುದ್ದಲಿಗಳಲ್ಲಿ ಹಾಕಿಡತಕ್ಕದ್ದು ಎಂದು ಹೇಳಿದನು.

ಯೇಸೂ ಆತನ ಶಿಷ್ಯರೂ ಸಬ್ಬತ್‌ದಿನವನ್ನು ಅಲಕ್ಷ್ಯಮಾಡುತ್ತಾರೆಂದು ಶಾಸ್ತ್ರಿಗಳು ಆತನ ಮೇಲೆ ಆಕ್ಷೇಪಣೆ ಮಾಡಿದ್ದು. (ಮತ್ತಾಯ 12, 1—14; ಲೂಕ 6, 1—11.)

ಯೇಸು ಸಬ್ಬತ್‌ದಿನದಲ್ಲಿ ಪೈರಿನ ಹೊಲಗಳನ್ನು ಹಾದುಹೋಗುತ್ತಿರುವಾಗ, ಆತನ 23 ಶಿಷ್ಯರು ತೆನೆಗಳನ್ನು ಮುರುಕೊಂಡರು. ಫರಿಸಾಯರು ಆತನನ್ನು—ಇಗೋ, ಇವರು 24 ಸಬ್ಬತ್‌ದಿನದಲ್ಲಿ ಮಾಡಬಾರದ ಕೆಲಸವನ್ನು ಯಾಕೆ ಮಾಡುತ್ತಾರೆ ಎಂದು ಕೇಳಿದರು. ಅದಕ್ಕೆ ಆತನು—ದಾವೀದನು ತಾನೂ ತನ್ನ ಸಂಗಡ ಇದ್ದವರೂ ಕೊರತೆಯುಳ್ಳವರಾಗಿ 25 ಹಸಿದಾಗ, ಏನು ಮಾಡಿದನೆಂಬುವದನ್ನು ನೀವು ಎಂದಾದರೂ ಓದಲಿಲ್ಲವೋ? ಅವನು 26 ಮಹಾಯಾಜಕನಾದ ಅಬಿಯಾತರನ ಕಾಲದಲ್ಲಿ ದೇವರಮಂದಿರದೊಳಕ್ಕೆ ಹೋಗಿ, ಯಾಜಕರು ಹೊರತು ಮತ್ತ್ಯಾರೂ ತಿನ್ನಬಾರದಾಗಿದ್ದ ಸಮ್ಮುಖದ ರೊಟ್ಟಿಗಳನ್ನು ತಾನು ತಿಂದು ತನ್ನ ಸಂಗಡ ಇದ್ದವರಿಗೂ ಕೊಟ್ಟನಲ್ಲವೇ?[1] ಎಂದು ಹೇಳಿದನು. ಮತ್ತು 27 ಆತನು—ಸಬ್ಬತ್‌ದಿನವು ಮನುಷ್ಯರಿಗೋಸ್ಕರ ಉಂಟಾಯಿತೇ ಹೊರತು ಮನುಷ್ಯರು ಸಬ್ಬತ್‌ದಿನಕ್ಕೋಸ್ಕರ ಉಂಟಾಗಲಿಲ್ಲ; ಹೀಗಿರಲಾಗಿ ಮನುಷ್ಯಕುಮಾರನು ಸಬ್ಬತ್ 28 ದಿನಕ್ಕೂ ಒಡೆಯನಾಗಿದ್ದಾನೆ ಅಂದನು.

ಇನ್ನೊಂದು ಸಮಯದಲ್ಲಿ ಯೇಸು ಸಭಾಮಂದಿರಕ್ಕೆ ಹೋದಾಗ, ಅಲ್ಲಿ ಕೈಬತ್ತಿದವ **3** ನೊಬ್ಬನಿದ್ದನು. ಅವರು ಆತನ ಮೇಲೆ ತಪ್ಪುಹೊರಿಸಬೇಕೆಂದು ಆಲೋಚಿಸಿ, ಸಬ್ಬತ್ 2 ದಿನದಲ್ಲಿ ಅವನನ್ನು ಸ್ವಸ್ಥಮಾಡುವನೋ ಏನೋ ಎಂದು ಆತನನ್ನು ಹೊಂಚಿನೋಡುತ್ತಾ ಇದ್ದರು. ಆತನು ಕೈಬತ್ತಿದವನಿಗೆ—ಎದ್ದು ನಡುವೆ ಬಾ ಎಂದು ಹೇಳಿ, ಅವರನ್ನು— 3, 4 ಸಬ್ಬತ್‌ದಿನದಲ್ಲಿ ಯಾವದನ್ನು ಮಾಡುವದು ನ್ಯಾಯ? ಮೇಲನ್ನು ಮಾಡುವದೋ, ಕೇಡನ್ನು ಮಾಡುವದೋ? ಪ್ರಾಣವನ್ನು ಉಳಿಸುವದೋ, ತೆಗೆಯುವದೋ? ಎಂದು ಕೇಳಲು, ಅವರು ಸುಮ್ಮನಿದ್ದರು. ಆಗ ಆತನು ಅವರ ಮನಸ್ಸು ಕಲ್ಲಾಗಿರುವದನ್ನು 5 ಕಂಡು ದುಃಖಪಟ್ಟು ಕೋಪದಿಂದ ಸುತ್ತಲೂ ಅವರನ್ನು ನೋಡಿ ಆ ಮನುಷ್ಯನಿಗೆ— ನಿನ್ನ ಕೈ ಚಾಚು ಎಂದು ಹೇಳಿದನು. ಅವನು ಚಾಚಿದನು; ಅದು ವಾಸಿಯಾಯಿತು. ಫರಿಸಾಯರು ಹೊರಕ್ಕೆ ಹೋಗಿ, ಕೂಡಲೆ ಹೆರೋದ್ಯರನ್ನು ಕೂಡಿಕೊಂಡು, ಇವನನ್ನು 6 ಕೊಲ್ಲಬೇಕೆಂದು ಆತನಿಗೆ ವಿರೋಧವಾಗಿ ಆಲೋಚನೆಮಾಡಿದರು.

ಯೇಸು ಏಂಗಡವಾಗಿ ಹೋಗಿ, ಹನ್ನೆರಡುಮಂದಿ ಅಪೊಸ್ತಲರನ್ನು ನೇಮಿಸಿದ್ದು. (ಮತ್ತಾಯ 10, 1—4; ಲೂಕ 6, 12—19.)

ಯೇಸು ತನ್ನ ಶಿಷ್ಯರ ಕೂಡ ಆ ಸ್ಥಳವನ್ನು ಬಿಟ್ಟು ಸಮುದ್ರದ ಬಳಿಗೆ ಹೋದನು. 7 ಗಲಿಲಾಯದಿಂದ ಬಹುಜನರು ಆತನ ಹಿಂದೆ ಹೋದರು. ಇದಲ್ಲದೆ ಆತನು ಇಂಥಿಂಥಾ 8

[1] ೧ ಸಮುವೇಲ ೨೧, ೬.

ಕೆಲಸಗಳನ್ನು ಮಾಡುತ್ತಾನೆಂದು ಕೇಳಿ ಬಹುಜನರು ಯೂದಾಯದಿಂದಲೂ ಯೆರೂಸ
ಲೇಮಿನಿಂದಲೂ ಇದೂಮಾಯದಿಂದಲೂ ಯೊರ್ದನ್ ಹೊಳೇ ಆಚೆಯಿಂದಲೂ ತೂರ್
9 ಸೀದೋನ್ ಪಟ್ಟಣಗಳ ಸುತ್ತಲಿನಿಂದಲೂ ಆತನ ಬಳಿಗೆ ಬಂದರು. ಜನರು ಗುಂಪಾ
ಗಿದ್ದದರಿಂದ, ಮೈಮೇಲೆ ಬಿದ್ದು ನೂಕ್ಯಾರೆಂದು ಆತನು ತನಗೆ ಒಂದು ದೋಣಿಯು ಸಿದ್ಧ
10 ವಾಗಿರಲಿ ಎಂಬದಾಗಿ ಶಿಷ್ಯರಿಗೆ ಹೇಳಿದನು. ಯಾಕಂದರೆ, ಆತನು ಅನೇಕರನ್ನು ಸ್ವಸ್ಥ
ಮಾಡಿದ್ದದರಿಂದ ರೋಗಪೀಡಿತರಾಗಿದ್ದವರೆಲ್ಲರೂ ಆತನನ್ನು ಮುಟ್ಟಬೇಕೆಂದು ಮೇಲೆ
11 ಬೀಳುತ್ತಿದ್ದರು. ಮತ್ತು ದೆವ್ವಗಳು ಆತನನ್ನು ಕಂಡಾಗೆಲ್ಲಾ ಆತನ ಪಾದಕ್ಕೆ ಬಿದ್ದು—
12 ನೀನು ದೇವಕುಮಾರನೆಂದು ಕೂಗುತ್ತಿದ್ದವು. ಆದರೆ ಆತನು ತಾನು ಇಂಥವನೆಂದು
ಯಾರಿಗೂ ತಿಳಿಸಬಾರದೆಂದು ಅವರಿಗೆ ಬಹು ಖಂಡಿತವಾಗಿ ಹೇಳಿದನು.

13 ಆ ಮೇಲೆ ಯೇಸು ಬೆಟ್ಟವನ್ನು ಹತ್ತಿ ತನಗೆ ಬೇಕಾದವರನ್ನು ಕರೆಯಲು, ಅವರು
14 ಆತನ ಬಳಿಗೆ ಬಂದರು. ಆತನು ಹನ್ನೆರಡು ಮಂದಿಯನ್ನು ಆರಿಸಿ, ಅವರು ತನ್ನ ಸಂಗಡ
15 ಇರಬೇಕೆಂತಲೂ, ದೆವ್ವಗಳನ್ನು ಬಿಡಿಸುವ ಅಧಿಕಾರವುಳ್ಳವರಾಗಿ ಸುವಾರ್ತೆಯನ್ನು ಸಾರು
ವದಕ್ಕೆ ತಾನು ಅವರನ್ನು ಕಳುಹಿಸುವೆನೆಂತಲೂ ಆ ಹನ್ನೆರಡು ಮಂದಿಯನ್ನು ಆರಿಸಿ
16, 17 ನೇಮಿಸಿದನು. ಸೀಮೋನನೆಂಬವನಿಗೆ ಪೇತ್ರನೆಂದು ಹೆಸರನ್ನು ಇಟ್ಟನು. ಜೆಬೆ
ದಾಯನ ಮಗನಾದ ಯಾಕೋಬನಿಗೂ ಯಾಕೋಬನ ತಮ್ಮನಾದ ಯೋಹಾನನಿಗೂ
18 ಬೊವನೆರ್ಗೆಸ್ ಅಂದರೆ ಗುಡುಗಿನಮರಿಗಳೆಂದು ಹೆಸರಿಟ್ಟನು. ಉಳಿದವರು ಯಾರಂದರೆ,
ಅಂದ್ರೆಯ, ಫಿಲಿಪ್ಪ, ಬಾರ್ತೊಲೊಮಾಯ, ಮತ್ತಾಯ, ತೋಮ, ಅಲ್ಫಾಯನ ಮಗ
ನಾದ ಯಾಕೋಬ, ತದ್ದಾಯ, ಮತಾಭಿಮಾನಿ ಎಂದು ಹೆಸರುಗೊಂಡ ಸೀಮೋನ,
19 ಯೇಸುವನ್ನು ಹಿಡುಕೊಟ್ಟ ಇಸ್ಕರಿಯೋತ ಯೂದ, ಇವರೇ.

ಯೇಸುವಿನ ವೈರಿಗಳು ಆತನನ್ನು ದೂಷಿಸಿದ್ದು; ಆತನ ಸ್ವಂತ ಜನರು ಆತನ ವಿಷಯವಾಗಿ ಅನುಮಾನಪಟ್ಟದ್ದು.
(ಮತ್ತಾಯ 12, 22—32; 46—50; ಲೂಕ 11, 14—22; 8, 19—21.)

20 ಆತನು ಮನೆಯೊಳಗೆ ಬಂದಾಗ, ಜನರು ತಿರಿಗಿ ನೆರೆದದ್ದರಿಂದ ಊಟಕ್ಕೂ ಅವಕಾಶ
21 ವಾಗಲಿಲ್ಲ. ಇದನ್ನು ಕೇಳಿ ಆತನ ಬಂಧುಗಳು ಅವನಿಗೆ ಹುಚ್ಚುಹಿಡಿದದೆ ಎಂದು
22 ಹೇಳಿ ಆತನನ್ನು ಹಿಡಿಯುವದಕ್ಕೆ ಹೊರಟರು. ಇದಲ್ಲದೆ ಯೆರೂಸಲೇಮಿನಿಂದ ಬಂದಿದ್ದ
ಶಾಸ್ತ್ರಿಗಳು—ಇವನನ್ನು ಬೆಲ್ಜೆಬೂಲನು ಹಿಡಿದಿದ್ದಾನೆಂತಲೂ ಇವನು ದೆವ್ವಗಳ ಒಡೆಯನ
23 ಸಹಾಯದಿಂದ ದೆವ್ವಗಳನ್ನು ಬಿಡಿಸುತ್ತಾನೆಂತಲೂ ಹೇಳುತ್ತಿದ್ದರು. ಆತನು ಅವರನ್ನು
ಹತ್ತರಕ್ಕೆ ಕರದು, ಅವರಿಗೆ ಸಾಮ್ಯರೂಪವಾಗಿ ಹೇಳಿದ್ದೇನಂದರೆ—ಸೈತಾನನು ಸೈತಾನ
24 ನನ್ನು ಬಿಡಿಸುವದುಂಟೇ? ಆಲೋಚಿಸಿರಿ, ಒಂದು ರಾಜ್ಯದಲ್ಲಿ ಭೇದಹುಟ್ಟಿದರೆ ಆ
25 ರಾಜ್ಯವು ಉಳಿಯಲಾರದು; ಒಂದು ಮನೆಯಲ್ಲಿ ಭೇದಹುಟ್ಟಿದರೆ ಆ ಮನೆಯು ನಿಲ್ಲ
26 ಲಾರದು. ಹಾಗೆಯೇ ಸೈತಾನನು ತನಗೆ ವಿರೋಧವಾಗಿ ಎದ್ದು ತನ್ನಲ್ಲಿ ಭೇದವನ್ನು
27 ಹುಟ್ಟಿಸಿಕೊಂಡರೆ ಅವನು ನಿಲ್ಲಲಾರದೆ ನಾಶವಾಗಿ ಹೋಗುವನು. ಇನ್ನೂ ಆಲೋಚಿ
ಸಿರಿ, ಒಬ್ಬನು ಮೊದಲು ಬಲಿಷ್ಠನನ್ನು ಕಟ್ಟಿಹಾಕದೆ, ಆ ಬಲಿಷ್ಠನ ಮನೆಯನ್ನು ಹೊಕ್ಕು

ಅವನ ಸೊತ್ತನ್ನು ಸುಲುಕೊಳ್ಳುವದಕ್ಕಾಗುವದಿಲ್ಲ; ಕಟ್ಟಿಹಾಕಿದ್ದಾದರೆ ಅವನ ಮನೆಯನ್ನು ಸುಲುಕೊಂಡಾನು. ಇದಲ್ಲದೆ ಅವರು—ಇವನಿಗೆ ದೆವ್ವ ಹಿಡಿದದೆ ಎಂದು 30 ಹೇಳಿದ್ದರಿಂದ, ಆತನು ಅವರಿಗೆ—ನಿಮಗೆ ಸತ್ಯವಾಗಿ ಹೇಳುತ್ತೇನೆ, ಮನುಷ್ಯರು 28 ಮಾಡುವ ಎಲ್ಲಾ ಪಾಪಗಳಿಗೂ ದೂಷಣೆಗಳಿಗೂ ಕ್ಷಮಾಪಣೆ ಉಂಟಾಗುವದು, ಆದರೆ 29 ಪವಿತ್ರಾತ್ಮವನ್ನೇ ದೂಷಿಸುವವನಿಗೆ ಎಂದಿಗೂ ಕ್ಷಮಾಪಣೆಯಿಲ್ಲ; ಅವನು ಶಾಶ್ವತ ಪಾಪದೊಳಗೆ ಸೇರಿದವನಾದನು ಎಂದು ಹೇಳಿದನು.

ಜನರು ಆತನ ಸುತ್ತಲು ಕೂತುಕೊಂಡಿದ್ದಾಗ ಆತನ ತಾಯಿಯೂ ಅಣ್ಣತಮ್ಮಂದಿರೂ 31 ಬಂದು ಹೊರಗೆ ನಿಂತುಕೊಂಡು, ಆತನನ್ನು ಕರೇ ಕಳುಹಿಸಿದರು. ಆ ಜನರು ಆತನಿಗೆ— 32 ನಿನ್ನ ತಾಯಿಯೂ ನಿನ್ನ ಅಣ್ಣತಮ್ಮಂದಿರೂ ನಿನ್ನನ್ನು ಹುಡುಕಿಕೊಂಡು ಬಂದು ಹೊರಗೆ ನಿಂತಿದ್ದಾರೆ ನೋಡು ಎಂದು ಹೇಳಿದ್ದಕ್ಕೆ, ಆತನು ಅವರಿಗೆ—ನನಗೆ ತಾಯಿಯೂ ಅಣ್ಣ 33 ತಮ್ಮಂದಿರೂ ಯಾರು? ಎಂದು ಹೇಳಿ, ತನ್ನ ಸುತ್ತಲು ಕೂತಿದ್ದವರನ್ನು ನೋಡಿ— 34 ಇಗೋ, ನನ್ನ ತಾಯಿ, ನನ್ನ ಅಣ್ಣತಮ್ಮಂದಿರು. ದೇವರ ಚಿತ್ತದಂತೆ ನಡೆಯು 35 ವವನೇ ನನಗೆ ತಮ್ಮನೂ ತಂಗಿಯೂ ತಾಯಿಯೂ ಆಗಬೇಕು ಅಂದನು.

ದೇವರ ರಾಜ್ಯವನ್ನು ಕುರಿತ ಸಾಮ್ಯಗಳು. (ಮತ್ತಾಯ 13, 1—34; ಲೂಕ 8, 4—18; 13, 18. 19.)

ಆತನು ತಿರಿಗಿ ಸಮುದ್ರದ ದಡದಲ್ಲಿ ಉಪದೇಶಮಾಡುತ್ತಿದ್ದನು. ಬಹುಜನರು ಆತನ **4** ಬಳಿಗೆ ಕೂಡಿಬಂದದ್ದರಿಂದ ಆತನು ಸಮುದ್ರದಲ್ಲಿದ್ದ ದೋಣೀಹತ್ತಿ ಕೂತುಕೊಂಡನು; ಆ ಜನರೆಲ್ಲರು ಸಮುದ್ರದ ಹತ್ತರ ನೆಲದ ಮೇಲೆ ಇದ್ದರು. ಆಗ ಆತನು ಅವರಿಗೆ 2 ಸಾಮ್ಯರೂಪವಾಗಿ ಅನೇಕ ಸಂಗತಿಗಳನ್ನು ಉಪದೇಶಮಾಡಿದನು. ಆ ಉಪದೇಶದಲ್ಲಿ ಅವರಿಗೆ ಹೇಳಿದ್ದೇನಂದರೆ—

ಕೇಳಿರಿ! ಬಿತ್ತುವವನು ಬಿತ್ತುವದಕ್ಕೆ ಹೊರಟನು. ಬಿತ್ತುವಾಗ ಕೆಲವು ಬೀಜ 3, 4 ದಾರಿಯ ಮಗ್ಗುಲಲ್ಲಿ ಬಿದ್ದವು; ಹಕ್ಕಿಗಳು ಬಂದು ಅವುಗಳನ್ನು ತಿಂದುಬಿಟ್ಟವು. ಬೇರೆ 5 ಕೆಲವು ಬೀಜ ಬಹಳ ಮಣ್ಣಿಲ್ಲದಂಥ ಬಂಡೆನೆಲದಲ್ಲಿ ಬಿದ್ದವು; ಅಲ್ಲಿ ಮಣ್ಣು ತೆಳ್ಳಗಿದ್ದದರಿಂದ ಅವು ಬೇಗ ಮೊಳೆತವು; ಆದರೆ ಬಿಸಲೇರಿದಾಗ ಬಾಡಿ, ಬೇರಿಲ್ಲದಕಾರಣ ಒಣಗಿ 6 ಹೋದವು. ಮತ್ತೆ ಕೆಲವು ಬೀಜ ಮುಳ್ಳುಗಿಡಗಳಲ್ಲಿ ಬಿದ್ದವು; ಮುಳ್ಳುಗಿಡಗಳು 7 ಬೆಳೆದು ಅವುಗಳನ್ನು ಅಡಗಿಸಿಬಿಟ್ಟದ್ದರಿಂದ ಅವು ಫಲಕೊಡಲಿಲ್ಲ. ಇನ್ನು ಕೆಲವು 8 ಬೀಜ ಒಳ್ಳೇ ಭೂಮಿಯಲ್ಲಿ ಬಿದ್ದು ಹುಟ್ಟಿ ಬೆಳೆಯುತ್ತಾ ಒಂದು, ಒಂದು ಮೂವತ್ತರಷ್ಟು, ಒಂದು ಅರವತ್ತರಷ್ಟು, ಒಂದು ನೂರರಷ್ಟು, ಫಲವನ್ನು ಕೊಟ್ಟವು. ಎಂದು 9 ಹೇಳಿ—ಕೇಳುವದಕ್ಕೆ ಕಿವಿಯುಳ್ಳವನು ಕೇಳಲಿ ಅಂದನು.

ಆತನು ಒಬ್ಬನೇ ಇದ್ದಾಗ, ಆತನ ಹತ್ತರ ಇದ್ದವರು ಹನ್ನೆರಡು ಮಂದಿ ಶಿಷ್ಯರ ಕೂಡ 10 ಆ ಸಾಮ್ಯಗಳ ವಿಷಯದಲ್ಲಿ ಆತನನ್ನು ಕೇಳಿದರು. ಆತನು ಅವರಿಗೆ—ನಿಮಗೋ 11 ದೇವರ ರಾಜ್ಯದ ಗುಟ್ಟು ಕೊಟ್ಟಿದೆ; ಹೊರಗಿನವರಿಗೆ ಎಲ್ಲವನ್ನು ಸಾಮ್ಯರೂಪವಾಗಿ ಹೇಳುವದಾಗುತ್ತದೆ.

12 ಅವರು ಕಣ್ಣಾರ ನೋಡಿದರೂ ಕಾಣಬಾರದು,
ಕಿವಿಯಾರ ಕೇಳಿದರೂ ತಿಳುಕೊಳ್ಳಬಾರದು,
ಹಾಗೆ ಕಂಡು ತಿಳುಕೊಂಡರೆ ಅವರು ದೇವರ ಕಡೆಗೆ ತಿರುಗಿಕೊಂಡು ಪಾಪ
ಕ್ಷಮೆಯನ್ನು ಹೊಂದ್ಯಾರು

13 ಎಂದು[1] ಬರೆದದೆಯಲ್ಲಾ ಅಂದನು. ಆ ಮೇಲೆ ಆತನು ಅವರಿಗೆ ಹೇಳಿದ್ದೇನಂದರೆ— ಈ ಸಾಮ್ಯದ ಅರ್ಥ ನಿಮಗೆ ಗೊತ್ತಾಗಲಿಲ್ಲವೋ? ಹಾಗಾದರೆ ನನ್ನ ಎಲ್ಲಾ ಸಾಮ್ಯ 14 ಗಳನ್ನು ಹ್ಯಾಗೆ ತಿಳುಕೊಂಡೀರಿ? ಆ ಬಿತ್ತುವವನು ಬಿತ್ತುವ ಬೀಜವಂದರೆ ದೇವರ 15 ವಾಕ್ಯ. ಕೆಲವರು ವಾಕ್ಯವನ್ನು ಕೇಳಿದ ಕೂಡಲೆ ಸೈತಾನನು ಬಂದು ಅವರಲ್ಲಿ ಬಿತ್ತಿದ್ದ ವಾಕ್ಯವನ್ನು ತೆಗೆದುಬಿಡುತ್ತಾನೆ. ವಾಕ್ಯವು ಬಿತ್ತಲ್ಪಟ್ಟ ದಾರೀಮಗ್ಗುಲಿಗೆ ಸಮಾನರಾದ 16-17 ವರು ಇವರೇ. ಅದೇ ಪ್ರಕಾರ ಬೇರೆ ಕೆಲವರು ವಾಕ್ಯವನ್ನು ಕೇಳಿದ ಕೂಡಲೆ ಸಂತೋಷದಿಂದ ಅದನ್ನು ಒಪ್ಪಿಕೊಂಡಾಗ್ಯೂ ಅದರಲ್ಲಿ ನೆಲೆಗೊಳ್ಳದೆ ಸ್ವಲ್ಪಕಾಲದ ಮಟ್ಟಿಗೆ ಇದ್ದು, ಬಳಿಕ ಆ ವಾಕ್ಯದ ನಿಮಿತ್ತವಾಗಿ ಸಂಕಟವಾಗಲಿ ಹಿಂಸೆಯಾಗಲಿ ಬಂದರೆ, ಬೇಗ ಬೇಸರಗೊಂಡು ಬಿದ್ದುಹೋಗುತ್ತಾರೆ; ಇವರೇ ಬಂಡೆನೆಲವಾಗಿರು 18-19 ವವರು. ಇನ್ನು ಕೆಲವರು ವಾಕ್ಯವನ್ನು ಕೇಳಿದಾಗ್ಯೂ ಪ್ರಪಂಚದ ಚಿಂತೆಗಳೂ ಐಶ್ವರ್ಯದಿಂದುಂಟಾಗುವ ಮೋಸವೂ ಇತರ ವಿಷಯಗಳ ಮೇಲಣ ಆಶೆಗಳೂ ಒಳಗೆ ಸೇರಿ ಆ ವಾಕ್ಯವನ್ನು ಅಡಗಿಸಿಬಿಡುವದರಿಂದ ಫಲವನ್ನು ಕೊಡದೆ ಇರುತ್ತಾರೆ; ಇವರೇ 20 ಮುಳ್ಳುಗಿಡಗಳ ಭೂಮಿಯಾಗಿರುವವರು. ಮತ್ತು ಕೆಲವರು ವಾಕ್ಯವನ್ನು ಕೇಳಿ ಕೈಕೊಂಡು ಮೂವತ್ತರಷ್ಟಾಗಲಿ ಅರವತ್ತರಷ್ಟಾಗಲಿ ನೂರರಷ್ಟಾಗಲಿ ಫಲವನ್ನು ಕೊಡು ತ್ತಾರೆ; ಇವರೇ ಒಳ್ಳೇ ಭೂಮಿಯಾಗಿರುವವರು ಅಂದನು.

21 ಇದಲ್ಲದೆ ಆತನು ಅವರಿಗೆ—ದೀಪವನ್ನು ತಂದು ಕೊಳಗದೊಳಗಾಗಲಿ ಮಂಚದ 22 ಕೆಳಗಾಗಲಿ ಇಡುವದುಂಟೇ? ದೀಪಸ್ತಂಭದ ಮೇಲೆ ಇಡುತ್ತಾರಲ್ಲಾ? ಯಾವದಾಗಲಿ ತೋರಿಬರಬೇಕೇ ಹೊರತು ಮರೆಯಾಗುವದಿಲ್ಲ; ಯಾವದಾಗಲಿ ಕಣ್ಣಿಗೆ ಕಾಣಬೇಕೇ 23 ಹೊರತು ಗುಪ್ತವಾಗುವದಿಲ್ಲ. ಕೇಳುವದಕ್ಕೆ ಕಿವಿಯುಳ್ಳವನು ಕೇಳಲಿ ಎಂದು ಹೇಳಿ 24 ದನು. ಮತ್ತು ಆತನು ಅವರಿಗೆ—ನೀವು ಕಿವಿಗೊಡುವ ವಿಷಯದಲ್ಲಿ ಎಚ್ಚರಿಕೆಯಾಗಿರಿ. ನೀವು ಅಳೆಯುವ ಅಳತೆಯಿಂದಲೇ ನಿಮಗೂ ಅಳೆಯುವರು; ಇನ್ನೂ ಕೂಡಿಸಿಕೊಡು 25 ವರು. ಇದ್ದವನಿಗೆ ಕೊಡಲ್ಪಡುವದು; ಇಲ್ಲದವನ ಕಡೆಯಿಂದ ಅವನಿಗೆ ಇದ್ದದ್ದೂ ತೆಗೆಯಲ್ಪಡುವದು ಎಂದು ಹೇಳಿದನು.

26 ಇನ್ನೂ ಆತನು ಅವರಿಗೆ ಹೇಳಿದ್ದು—ಒಬ್ಬನು ಭೂಮಿಯಲ್ಲಿ ಬೀಜವನ್ನು ಹಾಕಿ, 27 ರಾತ್ರಿ ಮಲಗುತ್ತಾ ಹಗಲು ಎದ್ದಿರುತ್ತಾ ಇರಲು, ಅವನಿಗೆ ತಿಳಿಯದ ರೀತಿಯಲ್ಲಿ ಆ 28 ಬೀಜವು ಹುಟ್ಟಿ ಬೆಳೆಯುವದು. ಇದರಂತೆ ದೇವರ ರಾಜ್ಯ. ಭೂಮಿಯು ಮೊದಲು ಗರಿಯನ್ನೂ, ಆ ಮೇಲೆ ಹೊಡೆಯನ್ನೂ, ತರುವಾಯ ತೆನೆಯಲ್ಲಿ ತುಂಬಾ ಕಾಳನ್ನೂ 29 ತನ್ನಷ್ಟಕ್ಕೆ ತಾನೇ ಹುಟ್ಟಿಸುತ್ತದೆ. ಆದರೆ ಫಲವಾಗಿದ ಕೂಡಲೆ ಅವನು ಸುಗ್ಗಿಕಾಲ ಬಂತೆಂದು ಕೊಯಿಸುತ್ತಾನೆ ಅಂದನು.

---

[1] ಯೆಶಾಯ ೬, ೯. ೧೦.

ಇನ್ನೂ ಆತನು ಹೇಳಿದ್ದು—ದೇವರ ರಾಜ್ಯವನ್ನು ಯಾವದಕ್ಕೆ ಹೋಲಿಸೋಣ? 30
ಯಾವ ಸಾಮ್ಯದಿಂದ ಅದನ್ನು ತೋರಿಸಿಕೊಡೋಣ? ಅದು ಸಾಸಿವೆಕಾಳಿನಂತಿರುತ್ತದೆ. 31
ಸಾಸಿವೆಕಾಳನ್ನು ಭೂಮಿಯಲ್ಲಿ ಬಿತ್ತುವಾಗ ಅದು ಭೂಮಿಯಲ್ಲಿರುವ ಎಲ್ಲಾ ಬೀಜ
ಗಳೊಳಗೆ ಸಣ್ಣದಾಗಿದೆ. ಬಿತ್ತಿದ ಮೇಲೆ ಅದು ಬೆಳೆದು ಎಲ್ಲಾ ಕಾಯಿಪಲ್ಯದ ಗಿಡಗಳಿ 32
ಗಿಂತ ದೊಡ್ಡದಾಗಿ ದೊಡ್ಡದೊಡ್ಡ ಕೊಂಬೆಗಳನ್ನು ಬಿಡುವದರಿಂದ, ಆಕಾಶದಲ್ಲಿ ಹಾರ್ಯಾ
ಡುವ ಹಕ್ಕಿಗಳು ಅದರ ನೆರಳಿನಲ್ಲಿ ಕೂತುಕೊಳ್ಳುವದಕ್ಕಾಗುತ್ತದೆ ಅಂದನು.

ಆತನು ಈ ತರದ ಅನೇಕ ಸಾಮ್ಯಗಳಿಂದ ಜನರ ಗ್ರಹಿಕೆಗೆ ತಕ್ಕ ಹಾಗೆ ದೇವರ 33
ವಾಕ್ಯವನ್ನು ಹೇಳುತ್ತಿದ್ದನು. ಸಾಮ್ಯವಿಲ್ಲದೆ ಅವರಿಗೆ ಹೇಳಲಿಲ್ಲ. ಆದರೆ ಪ್ರತ್ಯೇಕ 34
ವಾಗಿ ಆತನು ತನ್ನ ಶಿಷ್ಯರಿಗೆ ಎಲ್ಲವನ್ನು ಬಿಚ್ಚಿಹೇಳಿದನು.

ಯೇಸು ಸಮುದ್ರದ ಮೇಲಣ ಬಿರುಗಾಳಿಯನ್ನು ನಿಲ್ಲಿಸಿದ್ದು. (ಮತ್ತಾಯ 8, 23—27; ಲೂಕ 8, 22—25.)

ಆ ಹೊತ್ತು ಸಾಯಂಕಾಲವಾದಾಗ ಆತನು ಅವರಿಗೆ—ಆಚೇದಡಕ್ಕೆ ಹೋಗೋಣ 35
ಎಂದು ಹೇಳಲು, ಅವರು ಆ ಜನರ ಗುಂಪನ್ನು ಬಿಟ್ಟು, ಆತನನ್ನು ಅದೇ ದೋಣಿ 36
ಯಲ್ಲಿ ಹಾಗೆಯೇ ಕರಕೊಂಡುಹೋದರು. ಬೇರೆ ದೋಣಿಗಳೂ ಆತನ ಸಂಗಡ
ಇದ್ದವು. ತರುವಾಯ ದೊಡ್ಡ ಬಿರುಗಾಳಿ ಎದ್ದು, ತೆರೆಗಳು ಆ ದೋಣಿಗೆ ಬಡಿದು ಒಳಗೆ 37
ಬಂದದ್ದರಿಂದ, ಆ ದೋಣಿ ಆಗಲೇ ತುಂಬುವದಕ್ಕೆ ಬಂದಿತ್ತು. ಅಷ್ಟರಲ್ಲಿ ಆತನು 38
ದೋಣಿಯ ಹಿಂಭಾಗದಲ್ಲಿ ತಲೆಗಿಂಬನ್ನು ಒರಗಿ ನಿದ್ದೆಮಾಡುತ್ತಿದ್ದನು. ಅವರು ಆತ
ನನ್ನು ಎಬ್ಬಿಸಿ—ಗುರುವೇ, ನಾವು ಮುಳುಗಿಹೋಗುವದರಲ್ಲಿ ನಿನಗೆ ಚಿಂತೆಯಿಲ್ಲವೇ
ಎಂದು ಕೇಳಲು, ಆತನು ಎದ್ದು ಗಾಳಿಯನ್ನು ಗದರಿಸಿ, ಸಮುದ್ರಕ್ಕೆ—ಸುಮ್ಮನಿರು, 39
ಮೊರೆಯಬೇಡ ಎಂದು ಅಪ್ಪಣೆಕೊಟ್ಟನು. ಕೊಡುತ್ತಲೇ, ಗಾಳಿ ನಿಂತುಹೋಗಿ, ಎಲ್ಲಾ
ಶಾಂತವಾಯಿತು. ತರುವಾಯ ಆತನು ಅವರನ್ನು—ಯಾಕೆ ಧೈರ್ಯಗೆಡುತ್ತೀರಿ? 40
ಇನ್ನೂ ನಿಮಗೆ ನಂಬಿಕೆಯಿಲ್ಲವೇ ಎಂದು ಕೇಳಲು, ಅವರು ಮಹಾ ಭಯವುಳ್ಳವ 41
ರಾಗಿ—ಈತನು ಯಾರಿರಬಹುದು? ಗಾಳಿಯೂ ಸಮುದ್ರವೂ ಈತನು ಹೇಳಿದ ಹಾಗೆ
ಕೇಳುತ್ತವಲ್ಲಾ ಎಂದು ತಮ್ಮತಮ್ಮೊಳಗೆ ಮಾತಾಡಿಕೊಂಡರು.

ದೆವ್ವಗಳ ದಂಡಿನಿಂದ ಹಿಡಿಯಲ್ಪಟ್ಟವನನ್ನು ಕುರಿತದ್ದು. (ಮತ್ತಾಯ 8, 28—34; ಲೂಕ 8, 26—39.)

ಆ ಮೇಲೆ ಅವರು ಸಮುದ್ರದ ಆಚೇದಡಕ್ಕೆ ಗೆರಸೇನರ ಸೀಮೆಗೆ ಮುಟ್ಟಿದರು. **5**
ಆತನು ದೋಣಿಯಿಂದ ಇಳಿದುಬಂದ ಕೂಡಲೆ, ದೆವ್ವಹಿಡಿದವನೊಬ್ಬನು ಸಮಾಧಿಯ 2
ಗವಿಗಳೊಳಗಿಂದ ಆತನೆದುರಿಗೆ ಬಂದನು. ಅವನಿಗೆ ಸಮಾಧಿಯ ಗವಿಗಳೇ ವಾಸಸ್ಥಳ 3-4
ವಾಗಿದ್ದವು. ಅವನನ್ನು ಅನೇಕಸಾರಿ ಬೇಡಿಗಳಿಂದಲೂ ಸರಪಣಿಗಳಿಂದಲೂ ಕಟ್ಟಿ
ದ್ದಾಗ್ಯೂ ಅವನು ಸರಪಣಿಗಳನ್ನು ಕಿತ್ತು, ಬೇಡಿಗಳನ್ನು ಮುರಿದುಹಾಕಿದ್ದನು; ಅವ
ನನ್ನು ಇನ್ನು ಯಾರೂ ಸರಪಣಿಯಿಂದಾದರೂ ಕಟ್ಟಲಾರದೆ ಹೋದರು; ಅವನನ್ನು

5 ಹತೋಟಿಗೆ ತರುವದಕ್ಕೆ ಯಾರಿಂದಲೂ ಆಗಲಿಲ್ಲ. ಅವನು ನಿತ್ಯ ರಾತ್ರಿಹಗಲು ಸಮಾಧಿಯ ಗವಿಗಳಲ್ಲಿಯೂ ಗುಡ್ಡಗಳಲ್ಲಿಯೂ ಆರ್ಭಟಿಸುತ್ತಾ ಕಲ್ಲುಗಳಿಂದ ತನ್ನನ್ನು ಕಡಿದು
6 ಕೊಳ್ಳುತ್ತಾ ಇದ್ದನು. ಅವನು ಯೇಸುವನ್ನು ದೂರದಿಂದ ಕಂಡು, ಓಡಿಬಂದು ಆತ
7 ನಿಗೆ ಅಡ್ಡಬಿದ್ದು ಮಹಾಶಬ್ದದಿಂದ ಆರ್ಭಟಿಸಿ—ಯೇಸುವೇ, ಪರಾತ್ಪರನಾದ ದೇವರ ಮಗನೇ, ನನ್ನ ಗೊಡವೆ ನಿನಗ್ಯಾಕೆ? ದೇವರಾಣೆ ನನ್ನನ್ನು ಕಾಡಬೇಡ ಎಂದು ಹೇಳಿ
8 ದನು. ಇದಕ್ಕೆ ಕಾರಣವೇನಂದರೆ—ಎಲಾ ದೆವ್ವಾ, ಇವನನ್ನು ಬಿಟ್ಟುಹೋಗು ಎಂದು
9 ಯೇಸು ಹೇಳಿದ್ದನು. ಮತ್ತು—ನಿನ್ನ ಹೆಸರೇನೆಂದು ಅವನನ್ನು ಕೇಳಿದ್ದಕ್ಕೆ, ಅವನು—ನನ್ನ ಹೆಸರು ದಂಡು; ಯಾಕಂದರೆ ನಾವು ಬಹು ಮಂದಿ ಇದ್ದೇವೆ ಎಂದು ಹೇಳಿ—
10 ನಮ್ಮನ್ನು ಈ ಸೀಮೆಯಿಂದ ಹೊರಡಿಸಬೇಡವೆಂದು ಆತನನ್ನು ಬಹಳವಾಗಿ ಬೇಡಿ
11, 12 ಕೊಂಡನು. ಆ ಗುಡ್ಡದಲ್ಲಿ ಹಂದಿಗಳ ದೊಡ್ಡ ಗುಂಪು ಮೇಯುತ್ತಿತ್ತು. ಆ ದೆವ್ವಗಳು—ಆ ಹಂದಿಗಳೊಳಗೆ ಸೇರಿಕೊಳ್ಳುವದಕ್ಕೆ ನಮ್ಮನ್ನು ಕಳುಹಿಸಿಕೊಡು ಎಂದು ಬೇಡಿ
13 ಕೊಂಡವು. ಯೇಸು—ಹಾಗೇ ಆಗಲಿ ಎಂದು ಅವುಗಳಿಗೆ ಅಪ್ಪಣೆಕೊಡಲು, ಆ ದೆವ್ವಗಳು ಹೊರಕ್ಕೆ ಬಂದು ಹಂದಿಗಳೊಳಗೆ ಹೊಕ್ಕವು; ಆ ಗುಂಪು ಓಡಿ ಕಡಿದಾದ ಸ್ಥಳದಿಂದ ಸಮುದ್ರದೊಳಗೆ ಬಿದ್ದು ಅಲ್ಲಿ ಉಸುರುಕಟ್ಟಿ ಸತ್ತುಹೋಯಿತು; ಹೆಚ್ಚುಕಡಿಮೆ
14 ಎರಡು ಸಾವಿರ ಹಂದಿಗಳಿದ್ದವು. ಅವುಗಳನ್ನು ಮೇಯಿಸುವವರು ಓಡಿಹೋಗಿ, ಆ ಊರಲ್ಲಿಯೂ ಹಳ್ಳಿಗಳಲ್ಲಿಯೂ ತಿಳಿಸಲು, ಜನರು ನಡೆದ ಸಂಗತಿ ಏನೆಂದು ನೋಡು
15 ವದಕ್ಕೆ ಹೊರಟು ಯೇಸುವಿದ್ದಲ್ಲಿಗೆ ಬಂದು, ಆ ದೆವ್ವಹಿಡಿದಿದ್ದವನು, ಅಂದರೆ ದೆವ್ವಗಳ ದಂಡಿನಿಂದ ಹಿಡಿಯಲ್ಪಟ್ಟಿದ್ದವನು, ಬಟ್ಟೆಗಳನ್ನು ಹಾಕಿಕೊಂಡು ಸ್ವಸ್ಥಬುದ್ಧಿಯಿಂದ ಕೂತಿರುವದನ್ನು ನೋಡಿ ಹೆದರಿದರು. ನಡೆದ ಸಂಗತಿಯನ್ನು ನೋಡಿದ್ದವರು ಆ ದೆವ್ವಹಿಡಿ
16 ದಿದ್ದವನಿಗೆ ಹೀಗೆಹೀಗಾಯಿತೆಂಬುವದನ್ನೂ ಹಂದಿಗಳ ವಿಷಯವನ್ನೂ ಆ ಜನರಿಗೆ ತಿಳಿಸಿ
17 ದಾಗ, ಅವರು ಯೇಸುವನ್ನು ತಮ್ಮ ಸೀಮೇ ಬಿಟ್ಟುಹೋಗಬೇಕೆಂದು ಬೇಡಿಕೊಂಡರು.
18 ಆತನು ದೋಣಿಯನ್ನು ಹತ್ತಿದಾಗ ಆ ದೆವ್ವಹಿಡಿದಿದ್ದವನು—ನಾನು ನಿನ್ನ ಬಳಿಯಲ್ಲಿಯೇ
19 ಇರುತ್ತೇನೆಂದು ಆತನನ್ನು ಬೇಡಿಕೊಂಡನು. ಆದರೆ ಆತನು ಅವನನ್ನು ಇರಗೊಡದೆ ಅವನಿಗೆ—ನೀನು ನಿನ್ನ ಮನೆಗೂ ನಿನ್ನ ಜನರ ಬಳಿಗೂ ಹೋಗಿ, ಸ್ವಾಮಿಯು ನಿನ್ನಲ್ಲಿ ಕರುಣೆಯಿಟ್ಟು ನಿನಗೆ ಎಂಥೆಂಥಾ ದೊಡ್ಡ ಉಪಕಾರಗಳನ್ನು ಮಾಡಿದನೋ ಅದನ್ನು
20 ಹೇಳು ಅಂದನು. ಅವನು ಹೊರಟುಹೋಗಿ ಯೇಸು ತನಗೆ ಮಾಡಿದ ಉಪಕಾರಗಳನ್ನು ದೆಕಪೊಲಿ ಎಂಬ ಸೀಮೆಯಲ್ಲಿ ಸಾರುವದಕ್ಕೆ ಪ್ರಾರಂಭಿಸಿದನು; ಎಲ್ಲರೂ ಆಶ್ಚರ್ಯಪಟ್ಟರು.

**ಯೇಸು ಸತ್ತಹುಡುಗಿಯನ್ನು ಬದುಕಿಸಿದ್ದು; ಮತ್ತು ಒಬ್ಬ ಸ್ತ್ರೀಯ ರಕ್ತಕುಸುಮರೋಗವನ್ನು ವಾಸಿಮಾಡಿದ್ದು.**

**(ಮತ್ತಾಯ 9, 18—26; ಲೂಕ 8, 40—56.)**

21 ಯೇಸು ತಿರಿಗಿ ದೋಣಿಯಲ್ಲಿ ಈಚೇದಡಕ್ಕೆ ಬಂದಾಗ, ಜನರು ಬಹು ದೊಡ್ಡ
22 ಗುಂಪಾಗಿ ಆತನ ಬಳಿಗೆ ಬಂದರು; ಆತನು ಸಮುದ್ರದ ದಡದಲ್ಲಿದ್ದನು. ಆಗ ಸಭಾ

ಮಂದಿರದ ಅಧಿಕಾರಿಗಳಲ್ಲಿ ಒಬ್ಬನಾದ ಯಾಯಿರನೆಂಬವನು ಬಂದು ಯೇಸುವನ್ನು
ಕಂಡು ಆತನ ಪಾದಕ್ಕೆ ಬಿದ್ದು—ನನ್ನ ಚಿಕ್ಕಮಗಳು ಈಗ ಸಾಯುತ್ತಾಳೆ; ಆಕೆಯು 23
ವಾಸಿಯಾಗಿ ಬದುಕಿಕೊಳ್ಳುವಂತೆ ನೀನು ಬಂದು ಆಕೆಯ ಮೇಲೆ ಕೈಯಿಡಬೇಕು ಎಂದು
ಆತನನ್ನು ಬಹಳವಾಗಿ ಬೇಡಿಕೊಂಡನು. ಆತನು ಅವನ ಸಂಗಡ ಹೋದನು; ಮತ್ತು 24
ಬಹುಜನರು ಆತನನ್ನು ನೂಕಿಕೊಂಡು ಹಿಂದೆ ಹೋದರು.

ಅಷ್ಟರಲ್ಲಿ ಹನ್ನೆರಡು ವರುಷದಿಂದ ರಕ್ತಕುಸುಮರೋಗವಿದ್ದ ಒಬ್ಬ ಹೆಂಗಸು 25
ಬಂದಳು. ಆಕೆಯು ಅನೇಕ ವೈದ್ಯರಿಂದ ಬಹು ಕಷ್ಟವನ್ನು ಅನುಭವಿಸಿ, ಕೈಯಲ್ಲಿದ್ದ 26
ದ್ದನ್ನೆಲ್ಲಾ ಕಳಕೊಂಡಾಗ್ಯೂ, ರೋಗವು ಹೆಚ್ಚುತ್ತಾ ಬಂದದ್ದೇ ಹೊರತು ಮತ್ತೇನು
ಪ್ರಯೋಜನವನ್ನೂ ಹೊಂದಿರಲಿಲ್ಲ. ಆ ಹೆಂಗಸು ಯೇಸುವಿನ ಸಮಾಚಾರವನ್ನು 27-28
ಕೇಳಿ—ನಾನು ಆತನ ಉಡುಪನ್ನು ಮುಟ್ಟಿದರೆ ಸಾಕು, ನೆಟ್ಟಗಾದೇನು ಎಂದು ಆಲೋ
ಚಿಸಿ, ಗುಂಪಿನಲ್ಲಿ ಹಿಂದಿನಿಂದ ಬಂದು ಆತನ ಉಡುಪನ್ನು ಮುಟ್ಟಿದಳು. ಮುಟ್ಟಿದ 29
ಕೂಡಲೆ, ಆಕೆಗೆ ರಕ್ತಹರಿಯುವದು ನಿಂತುಹೋದದರಿಂದ ಆಕೆಯು—ನನ್ನನ್ನು ಕಾಡಿದ
ರೋಗವು ಹೋಗಿ ನನಗೆ ಗುಣವಾಯಿತು ಎಂದು ತನ್ನೊಳಗೆ ತಿಳುಕೊಂಡಳು. ಆ 30
ಕ್ಷಣವೇ ಯೇಸು ತನ್ನಿಂದ ಶಕ್ತಿಯು ಹೊರಟಿತೆಂದು ತನ್ನಲ್ಲಿ ತಿಳುಕೊಂಡು, ಗುಂಪಿನಲ್ಲಿ
ಹಿಂತಿರುಗಿ—ನನ್ನ ಉಡುಪನ್ನು ಯಾರು ಮುಟ್ಟಿದರು? ಎಂದು ಕೇಳಲು, ಆತನ ಶಿಷ್ಯರು 31
ಆತನಿಗೆ—ಜನರು ನಿನ್ನನ್ನು ನೂಕುವದನ್ನು ಕಂಡೂ ಕಂಡು, ನನ್ನನ್ನು ಯಾರು ಮುಟ್ಟಿದ
ರೆಂದು ಕೇಳುತ್ತೀಯಲ್ಲಾ ಎಂದು ಹೇಳಿದರು. ಆದರೆ ಆತನು ಈ ಕೆಲಸ ಮಾಡಿದವ 32
ಳನ್ನು ಕಾಣಬೇಕೆಂದು ಸುತ್ತಲು ನೋಡುತ್ತಾ ಇರಲಾಗಿ, ಆ ಹೆಂಗಸು ತನಗಾದದ್ದನ್ನು 33
ತಿಳುಕೊಂಡು ಅಂಜಿ ಗಡಗಡನೆ ನಡುಗುತ್ತಾ ಬಂದು ಆತನಿಗೆ ಅಡ್ಡಬಿದ್ದು, ಇದ್ದ ಸಂಗತಿ
ಯನ್ನೆಲ್ಲಾ ಹೇಳಿದಳು. ಆತನು ಆಕೆಗೆ—ಮಗಳೇ, ನಿನ್ನ ನಂಬಿಕೆಯೇ ನಿನ್ನನ್ನು ಸ್ವಸ್ಥ 34
ಮಾಡಿತು; ಸಮಾಧಾನದಿಂದ ಹೋಗು; ನಿನ್ನನ್ನು ಕಾಡಿದ ರೋಗವು ಹೋಗಿ ನಿನಗೆ
ಗುಣವಾಗಲಿ ಎಂದು ಹೇಳಿದನು.

ಆತನು ಇನ್ನೂ ಮಾತಾಡುತ್ತಿರುವಲ್ಲಿ ಸಭಾಮಂದಿರದ ಅಧಿಕಾರಿಯ ಕಡೆಯವರು 35
ಬಂದು—ನಿನ್ನ ಮಗಳು ತೀರಿಹೋದಳು; ಇನ್ನ್ಯಾಕೆ ಗುರುವಿಗೆ ತೊಂದರೆ ಕೊಡುವದು?
ಅಂದರು. ಅವರು ಆಡಿದ ಮಾತನ್ನು ಯೇಸು ಲಕ್ಷ್ಯಮಾಡದೆ, ಸಭಾಮಂದಿರದ ಅಧಿ 36
ಕಾರಿಗೆ—ಅಂಜಬೇಡ, ನಂಬಿಕೆ ಒಂದೇ ಇರಲಿ ಎಂದು ಹೇಳಿದನು. ಮತ್ತು ಆತನು 37
ಪೇತ್ರ, ಯಾಕೋಬ, ಯಾಕೋಬನ ತಮ್ಮನಾದ ಯೋಹಾನ ಇವರನ್ನೇ ಹೊರತು
ಮತ್ತ್ಯಾರನ್ನೂ ತನ್ನೊಂದಿಗೆ ಬರಗೊಡಲಿಲ್ಲ. ಅವರು ಆ ಸಭಾಮಂದಿರದ ಅಧಿಕಾರಿಯ 38
ಮನೆಗೆ ಬಂದಾಗ, ಆತನು ಗದ್ದಲವನ್ನೂ ಕೆಲವರು ಬಹಳವಾಗಿ ಅಳುವದನ್ನೂ ಗೋಳಾ
ಡುವದನ್ನೂ ಕಂಡನು. ಆತನು ಒಳಕ್ಕೆ ಹೋಗಿ—ನೀವು ಗದ್ದಲಮಾಡುವದೂ 39
ಅಳುವದೂ ಯಾಕೆ? ಹುಡುಗಿ ಸತ್ತಿಲ್ಲ; ನಿದ್ದೆಮಾಡುತ್ತಾಳೆ ಅನ್ನಲು, ಅವರು ಆತನನ್ನು 40
ಹಾಸ್ಯಮಾಡಿದರು. ಆದರೆ ಆತನು ಎಲ್ಲರನ್ನು ಹೊರಕ್ಕೆ ಕಳುಹಿಸಿ, ಆ ಹುಡುಗಿಯ
ತಂದೆತಾಯಿಗಳನ್ನೂ ತನ್ನೊಂದಿಗಿದ್ದವರನ್ನೂ ಹುಡುಗಿಯಿದ್ದಲ್ಲಿಗೆ ಕರಕೊಂಡು ಹೋಗಿ,
ಅವಳ ಕೈಹಿಡಿದು—ತಲಿಥಾಕೂಮ್ ಅಂದನು. ಈ ಮಾತಿಗೆ—ಅಮ್ಮಣ್ಣೀ, ಏಳನ್ನು 41

42 ತ್ರೇನೆ ಎಂದರ್ಥ. ಕೂಡಲೆ ಆ ಹುಡುಗಿ ಎದ್ದು ನಡೆದಾಡಿದಳು; ಅವಳು ಹನ್ನೆರಡು
43 ವರುಷ ವಯಸ್ಸಿನವಳು. ಅವರು ಬಹಳ ಆಶ್ಚರ್ಯದಿಂದ ಬೆರಗಾದರು. ಆ ಮೇಲೆ ಆತನು ಅವರಿಗೆ—ಇದು ಯಾರಿಗೂ ತಿಳಿಯಬಾರದೆಂದು ಬಹು ಖಂಡಿತವಾಗಿ ಹೇಳಿ, ಆ ಹುಡುಗಿಗೆ ಊಟಾಮಾಡಿಸಿರಿ ಅಂದನು.

ಯೇಸುವಿನ ಸ್ವಂತ ಊರಿನವರು ಆತನನ್ನು ತಾತ್ಸಾರಮಾಡಿದ್ದು.

(ಮತ್ತಾಯ 13, 54—58; ಲೂಕ 4, 15—30.)

**6** ಆತನು ಅಲ್ಲಿಂದ ಹೊರಟು ತನ್ನ ಊರಿಗೆ ಬಂದನು; ಶಿಷ್ಯರು ಆತನ ಹಿಂದೆಯೇ
2 ಬಂದರು. ಸಬ್ಬತ್‌ದಿನ ಬಂದಾಗ ಆತನು ಸಭಾಮಂದಿರಕ್ಕೆ ಹೋಗಿ ಉಪದೇಶಮಾಡುವದಕ್ಕೆ ಪ್ರಾರಂಭಿಸಿದನು. ಎಲ್ಲರು ಕೇಳಿ ಆಶ್ಚರ್ಯಪಟ್ಟು—ಇವನಿಗೆ ಈ ಮಾತುಗಳು ಎಲ್ಲಿಂದ ಬಂದಿದ್ದಾವು? ಇವನು ಪಡೆದಿರುವ ಈ ಜ್ಞಾನವೇನು? ಇವನ ಕೈಯಿಂದ
3 ಇಂಥಾ ಮಹತ್ಕಾರ್ಯಗಳಾಗುವದೇನು? ಇವನು ಆ ಬಡಗಿಯವನಲ್ಲವೇ? ಇವನು ಮರಿಯಳ ಮಗನಲ್ಲವೇ? ಯಾಕೋಬ ಯೋಸೆ ಯೂದ ಸೀಮೋನ ಎಂಬವರ ಅಣ್ಣನಲ್ಲವೇ? ಇವನ ತಂಗಿಯರು ಇಲ್ಲಿ ನಮ್ಮಲ್ಲಿ ಇದ್ದಾರಲ್ಲವೇ? ಎಂದು ಮಾತಾಡಿ
4 ಕೊಂಡು ಆತನ ವಿಷಯವಾಗಿ ಬೇಸರಗೊಂಡರು. ಯೇಸು ಅವರಿಗೆ—ಪ್ರವಾದಿಯು ಬೇರೆ ಎಲ್ಲಿದ್ದರೂ ಅವನಿಗೆ ಮರ್ಯಾದೆ ಉಂಟು; ಆದರೆ ಸ್ವದೇಶದಲ್ಲಿಯೂ ಸ್ವಂತ ಜನರಲ್ಲಿಯೂ ಸ್ವಂತ ಮನೆಯಲ್ಲಿಯೂ ಮಾತ್ರ ಮರ್ಯಾದೆಯಿಲ್ಲ ಎಂದು ಹೇಳಿದನು.
5 ಆತನು ಅಲ್ಲಿ ಕೆಲವು ಮಂದಿ ರೋಗಿಗಳ ಮೇಲೆ ಕೈಯಿಟ್ಟು ಸ್ವಸ್ಥಮಾಡಿದ್ದೇ ಹೊರತು
6 ಬೇರೆ ಯಾವ ಮಹತ್ಕಾರ್ಯವನ್ನೂ ಮಾಡುವದಕ್ಕಾಗಲಿಲ್ಲ. ಅವರು ತನ್ನನ್ನು ನಂಬದೆ ಹೋದದ್ದಕ್ಕೆ ಆತನು ಆಶ್ಚರ್ಯಪಟ್ಟನು.

ಯೇಸು ಹನ್ನೆರಡುಮಂದಿ ಶಿಷ್ಯರನ್ನು ಸುವಾರ್ತೆಸಾರುವದಕ್ಕೆ ಕಳುಹಿಸಿದ್ದು.

(ಮತ್ತಾಯ 9, 35—10, 14; ಲೂಕ 9, 1—6.)

7 ಆತನು ಉಪದೇಶಮಾಡುತ್ತಾ ಹಳ್ಳಿಪಳ್ಳಿಗಳನ್ನು ಸುತ್ತಿದನು. ಮತ್ತು ಹನ್ನೆರಡು ಮಂದಿ ಶಿಷ್ಯರನ್ನು ಕರೆದು ಅವರನ್ನು ಇಬ್ಬರಿಬ್ಬರಾಗಿ ಕಳುಹಿಸಲಾರಂಭಿಸಿದನು. ಕಳು
8 ಹಿಸುವಾಗ ಅವರಿಗೆ ದೆವ್ವಗಳ ಮೇಲೆ ಅಧಿಕಾರ ಕೊಟ್ಟು—ನೀವು ದಾರಿಗೆ ಕೋಲನ್ನು ತೆಗೆದುಕೊಳ್ಳಬಹುದೇ ಹೊರತು ಬುತ್ತಿಯನ್ನಾಗಲಿ ಹಸಿಬೆಯನ್ನಾಗಲಿ ಚೀಲದಲ್ಲಿ
9 ದುಡ್ಡನ್ನಾಗಲಿ ಬೇರೆ ಯಾವದನ್ನಾಗಲಿ ತೆಗೆದುಕೊಂಡು ಹೋಗಬೇಡಿರಿ. ಕೆರಗಳನ್ನು ಮೆಟ್ಟಿಕೊಳ್ಳಬಹುದು; ಎರಡು ಅಂಗಿಗಳನ್ನು ತೊಟ್ಟುಕೊಳ್ಳಬೇಡಿರಿ ಎಂದು ಖಂಡಿತವಾಗಿ
10 ಅಪ್ಪಣೆ ಕೊಟ್ಟನು. ಇದಲ್ಲದೆ ಆತನು ಅವರಿಗೆ—ನೀವು ಎಲ್ಲಿಯಾದರೂ ಒಂದು ಮನೆ
11 ಯಲ್ಲಿ ಇಳುಕೊಂಡಾಗ ಆ ಸ್ಥಳದಿಂದ ಹೊರಡುವ ತನಕ ಅಲ್ಲೇ ಇರ್ರಿ. ಮತ್ತು ಯಾವ ಸ್ಥಳದವರು ನಿಮ್ಮನ್ನು ಸೇರಿಸದೆಯೂ ನೀವು ಹೇಳುವದನ್ನು ಕೇಳದೆಯೂ ಇರುವರೋ ಆ ಸ್ಥಳದಿಂದ ಹೊರಟುಹೋಗುವಾಗ ನಿಮ್ಮ ಕಾಲಿಗೆ ಹತ್ತಿದ ಧೂಳನ್ನು ಝಾಡಿಸಿಬಿಡಿರಿ;
12 ಅದು ಅವರಿಗೆ ಸಾಕ್ಷಿಯಾಗಿರಲಿ ಎಂದು ಹೇಳಿದನು. ಅವರು ಹೊರಟುಹೋಗಿ ಜನ

ರಿಗೆ—ದೇವರ ಕಡೆಗೆ ತಿರುಗಿಕೊಳ್ಳಬೇಕೆಂದು ಸಾರಿ, ಅನೇಕ ದೆವ್ವಗಳನ್ನು ಬಿಡಿಸಿ, ಅನೇಕ 13
ರೋಗಿಗಳನ್ನು ಎಣ್ಣೇ ಹಚ್ಚಿ ಸ್ವಸ್ಥಮಾಡಿದರು.

ಅರಸನು ಸ್ನಾನಿಕನಾದ ಯೋಹಾನನನ್ನು ಕೊಲ್ಲಿಸಿದ ಮೇಲೆ ಯೇಸುವಿನ ಸುದ್ದಿಯನ್ನು ಕೇಳಿ ದಿಗಿಲುಬಿದ್ದದ್ದು.
(ಮತ್ತಾಯ 14, 1—12; ಲೂಕ 9, 7—9; 3, 19. 20.)

ಮತ್ತು ಅರಸನಾದ ಹೆರೋದನು ಯೇಸುವಿನ ಸುದ್ದಿಯನ್ನು ಕೇಳಿದನು. ಯಾಕಂದರೆ 14
ಆತನ ಹೆಸರು ಪ್ರಸಿದ್ಧವಾಯಿತು, ಮತ್ತು ಜನರು ಆತನ ವಿಷಯದಲ್ಲಿ—ಸತ್ತಿದ್ದ ಸ್ನಾನಿ
ಕನಾದ ಯೋಹಾನನೇ ಇವನು; ಅವನು ತಿರಿಗಿ ಬದುಕಿ ಬಂದದರಿಂದ ಮಹತ್ಕಾರ್ಯ
ಗಳನ್ನು ನಡಸುವ ಶಕ್ತಿಗಳು ಅವನಲ್ಲಿ ಅವೆ ಎಂದು ಹೇಳುತ್ತಿದ್ದರು. ಕೆಲವರು— 15
ಇವನು ಎಲೀಯನೆಂತಲೂ ಕೆಲವರು—ಇವನು ಹಿಂದಿನ ಪ್ರವಾದಿಗಳಂತಿರುವ ಒಬ್ಬ
ಪ್ರವಾದಿಯೆಂತಲೂ ಹೇಳಿದರು. ಆದರೆ ಹೆರೋದನು ಆತನ ಸುದ್ದಿಯನ್ನು ಕೇಳಿ— 16
ನಾನು ತಲೆಹೊಯಿಸಿದ ಯೋಹಾನನೇ ತಿರಿಗಿ ಬದುಕಿ ಬಂದಿದ್ದಾನೆ ಅಂದನು.
ಹೆರೋದನು ತಾನು ಇಟ್ಟುಕೊಂಡಿದ್ದ ಹೆರೋದ್ಯಳ ನಿಮಿತ್ತವಾಗಿ ಯೋಹಾನನನ್ನು 17
ಹಿಡಿತರಿಸಿ ಸೆರೆಯಲ್ಲಿ ಕಟ್ಟಿಹಾಕಿಸಿದ್ದನು. ಆ ಹೆರೋದ್ಯಳು ಹೆರೋದನ ಅಣ್ಣನಾದ
ಫಿಲಿಪ್ಪನ ಹೆಂಡತಿ. ಯೋಹಾನನು ಹೆರೋದನಿಗೆ—ನಿನ್ನ ಅಣ್ಣನ ಹೆಂಡತಿಯನ್ನು 18
ಇಟ್ಟುಕೊಂಡಿರುವದು ಧರ್ಮವಲ್ಲವೆಂದು ಹೇಳುತ್ತಿದ್ದನು. ಇದಕ್ಕೆ ಹೆರೋದ್ಯಳು 19
ಅವನ ಮೇಲೆ ದ್ವೇಷವಿಟ್ಟುಕೊಂಡು ಅವನನ್ನು ಕೊಲ್ಲಿಸಬೇಕೆಂದಿದ್ದರೂ ಆಗದೆ
ಹೋಯಿತು. ಹೆರೋದನು ಯೋಹಾನನನ್ನು ನೀತಿವಂತನೆಂದೂ ದೇವಭಕ್ತನೆಂದೂ 20
ತಿಳಿದು ಅಂಜಿಕೊಂಡು, ಅವನಿಗೆ ಯಾವ ಅಪಾಯವೂ ಬಾರದಂತೆ ಇಟ್ಟಿದ್ದನು. ಇದ
ಲ್ಲದೆ ಯೋಹಾನನು ಹೇಳಿದ್ದನ್ನು ಅವನು ಕೇಳಿದಾಗ ಮನಸ್ಸಿನಲ್ಲಿ ಬಹು ಗಲಿಬಿಲಿ ಹುಟ್ಟಿ
ದರೂ ಅವನ ಮಾತನ್ನು ಸಂತೋಷದಿಂದ ಕೇಳುತ್ತಿದ್ದನು. ಹೀಗಿರಲಾಗಿ ಅವಳಿಗೆ ಅನು 21
ಕೂಲವಾದ ದಿವಸ ಬಂತು; ಹ್ಯಾಗಂದರೆ, ಹೆರೋದನು ತಾನು ಹುಟ್ಟಿದ ದಿವಸದಲ್ಲಿ
ಪ್ರಭುಗಳಿಗೂ ಸಹಸ್ರಾಧಿಪತಿಗಳಿಗೂ ಗಲಿಲಾಯ ಸೀಮೆಯ ಮುಖ್ಯಸ್ಥರಿಗೂ ಔತಣ
ವನ್ನು ಮಾಡಿಸಿದಾಗ, ಹೆರೋದ್ಯಳ ಮಗಳೇ ಒಳಕ್ಕೆ ಬಂದು ನಾಟ್ಯವಾಡಿ, ಹೆರೋದ 22
ನನ್ನೂ ಅವನ ಪಙ್ತಿಯಲ್ಲಿ ಊಟಕ್ಕೆ ಕೂತಿದ್ದವರನ್ನೂ ಮೆಚ್ಚಿಸಿದಳು. ಅರಸನು ಆ
ಹುಡುಗಿಗೆ—ಬೇಕಾದದ್ದನ್ನು ಕೇಳಿಕೋ, ಕೊಡುತ್ತೇನೆ. ನೀನು ನನ್ನನ್ನು ಏನು ಕೇಳಿ 23
ಕೊಂಡರೂ ಸರಿ, ನನ್ನ ರಾಜ್ಯದಲ್ಲಿ ಅರ್ಧ ರಾಜ್ಯವನ್ನು ಕೇಳಿದರೂ, ನಿನಗೆ ಕೊಡುತ್ತೇನೆ
ಎಂದು ಆಣೆಯಿಟ್ಟುಕೊಂಡು ಹೇಳಿದನು. ಆಗ ಅವಳು ಹೊರಕ್ಕೆ ಹೋಗಿ—ನಾನು 24
ಏನು ಕೇಳಿಕೊಳ್ಳಲಿ? ಎಂದು ತನ್ನ ತಾಯಿಯನ್ನು ಕೇಳಲಾಗಿ, ಅವಳು—ಸ್ನಾನಿಕನಾದ
ಯೋಹಾನನ ತಲೆಯನ್ನು ಕೇಳಿಕೋ ಅಂದಳು. ಕೂಡಲೆ ಅವಳು ಅರಸನ ಬಳಿಗೆ 25
ಅವಸರದಿಂದ ಬಂದು—ಈ ಕ್ಷಣದಲ್ಲೇ ಸ್ನಾನಿಕನಾದ ಯೋಹಾನನ ತಲೆಯನ್ನು ಪರಾತಿ
ನಲ್ಲಿ ನನಗೆ ತರಿಸಿಕೊಡಬೇಕೆಂದು ಕೇಳಿಕೊಂಡಳು. ಅದಕ್ಕೆ ಅರಸನು ಬಹು ದುಃಖ 26
ಪಟ್ಟಾಗ್ಯೂ ತಾನು ಇಟ್ಟುಕೊಂಡ ಆಣೆಗಳ ನಿಮಿತ್ತವಾಗಿಯೂ ತನ್ನ ಪಙ್ತಿಯಲ್ಲಿ ಕೂತಿ
ದ್ದವರ ನಿಮಿತ್ತವಾಗಿಯೂ ಅವಳನ್ನು ಅಸಡ್ಡೆ ಮಾಡುವದಕ್ಕೆ ಮನಸ್ಸಿಲ್ಲದೆ, ಕೂಡಲೆ 27

ತನ್ನ ಮೈಗಾವಲಿನ ಸಿಪಾಯಿಗಳಲ್ಲಿ ಒಬ್ಬನಿಗೆ—ನೀನು ಹೋಗಿ ಯೋಹಾನನ ತಲೆಯನ್ನು ತಂದುಕೊಡು ಎಂದು ಅಪ್ಪಣೆಕೊಟ್ಟು ಕಳುಹಿಸಿದನು; ಅವನು ಹೋಗಿ ಸೆರೆಮನೆಯಲ್ಲಿ
28 ಅವನ ತಲೆಯನ್ನು ಹೊಯಿದು, ಪರಾತಿನಲ್ಲಿ ತಂದು ಆ ಹುಡುಗಿಗೆ ಒಪ್ಪಿಸಿದನು.
29 ಆ ಹುಡುಗಿ ಅದನ್ನು ತನ್ನ ತಾಯಿಗೆ ಕೊಟ್ಟಳು. ಯೋಹಾನನ ಶಿಷ್ಯರು ಈ ಸಂಗತಿಗಳನ್ನು ಕೇಳಿದಾಗ ಅವರು ಬಂದು ಅವನ ಶವವನ್ನು ಹೊತ್ತುಕೊಂಡು ಹೋಗಿ ಸಮಾಧಿಯಲ್ಲಿ ಇಟ್ಟರು.

ಯೇಸು ಐದುಸಾವಿರ ಜನರಿಗೆ ಊಟಾಮಾಡಿಸಿದ್ದು; ಸಮುದ್ರದ ಮೇಲೆ ನಡೆದದ್ದು; ರೋಗಿಗಳನ್ನು ಸ್ವಸ್ಥಮಾಡಿದ್ದು.

(ಮತ್ತಾಯ 14, 13—36; ಲೂಕ 9, 10—17; ಯೋಹಾನ 6, 1—21.)

30 ಇತ್ತಲಾಗಿ, ಯೇಸು ಕಳುಹಿಸಿಕೊಟ್ಟಿದ್ದ ಶಿಷ್ಯರು[1] ಆತನ ಬಳಿಗೆ ಕೂಡಿಬಂದು,
31 ತಾವು ಮಾಡಿದ್ದನ್ನೂ ಉಪದೇಶಿಸಿದ್ದನ್ನೂ ಎಲ್ಲಾ ಆತನಿಗೆ ತಿಳಿಸಲು, ಆತನು ಅವರಿಗೆ—ನೀವು ಮಾತ್ರ ವಿಂಗಡವಾಗಿ ಅಡವಿಗೆ ಬಂದು, ಸ್ವಲ್ಪ ದಣುವಾರಿಸಿಕೊಳ್ಳಿರಿ ಎಂದು ಹೇಳಿದನು. ಯಾಕಂದರೆ ಬಹಳ ಮಂದಿ ಬರುತ್ತಾ ಹೋಗುತ್ತಾ ಇದ್ದದರಿಂದ ಅವರಿಗೆ
32 ಊಟಾಮಾಡುವದಕ್ಕೂ ಅವಕಾಶ ಸಿಕ್ಕಲಿಲ್ಲ. ಆಗ ಅವರು ದೋಣಿಯಲ್ಲಿ ಹೊರಟು
33 ವಿಂಗಡವಾಗಿ ಅಡವಿಗೆ ಹೋದರು. ಅವರು ಹೋಗುವದನ್ನು ಬಹುಜನರು ಕಂಡು, ಅವರ ಗುರುತನ್ನು ಹಿಡಿದು, ಎಲ್ಲಾ ಊರುಗಳಿಂದ ಕಾಲುನಡಿಗೆಯಾಗಿ ಓಡಿ, ಅವರಿಗಿಂತ
34 ಮುಂಚೆ ಅಲ್ಲಿ ಸೇರಿದರು. ಆತನು ಹೊರಗೆ ಬಂದು ಬಹುಜನರ ಗುಂಪನ್ನು ಕಂಡು, ಇವರು ಕುರುಬನಿಲ್ಲದ ಕುರಿಗಳ ಹಾಗಿದ್ದಾರಲ್ಲಾ ಎಂದು ಕನಿಕರಪಟ್ಟು ಅವರಿಗೆ ಬಹಳ
35 ಉಪದೇಶಮಾಡುತ್ತಿದ್ದನು. ಅಷ್ಟರಲ್ಲಿ ಬಹಳ ಹೊತ್ತಾದ್ದರಿಂದ ಆತನ ಶಿಷ್ಯರು ಆತನ
36 ಬಳಿಗೆ ಬಂದು—ಇದು ಅಡವಿ, ಈಗ ಹೊತ್ತು ಬಹಳವಾಯಿತು; ಈ ಜನರಿಗೆ ಅಪ್ಪಣೆಕೊಡು; ಇವರು ಸುತ್ತಲಿರುವ ಹಳ್ಳಿಪಳ್ಳಿಗಳಿಗೆ ಹೋಗಿ ತಮ್ಮ ಊಟಕ್ಕೆ ಏನಾದರೂ
37 ಕೊಂಡುಕೊಳ್ಳಲಿ ಅನ್ನಲಾಗಿ, ಯೇಸು—ನೀವೇ ಅವರಿಗೆ ಊಟಕ್ಕೆ ಕೊಡಿರಿ ಅಂದನು. ಅದಕ್ಕವರು—ನಾವು ಹೋಗಿ ಇನ್ನೂರು ಹಣಕ್ಕೆ ರೊಟ್ಟಿಯನ್ನು ಕೊಂಡುಕೊಂಡು ಅವ
38 ರಿಗೆ ಊಟಕ್ಕೆ ಕೊಡಬೇಕೋ? ಎಂದು ಕೇಳಲು, ಆತನು—ನಿಮ್ಮಲ್ಲಿ ಎಷ್ಟು ರೊಟ್ಟಿಗಳಿವೆ? ಹೋಗಿ ನೋಡಿಕೊಂಡು ಬನ್ನಿ ಅಂದನು. ಅವರು ತಿಳುಕೊಂಡು ಬಂದು—
39 ಐದು ರೊಟ್ಟಿ ಎರಡು ಮೀನು ಅಂದರು. ಆಗ ಆತನು ಅವರಿಗೆ—ಎಲ್ಲರೂ ಹಸುರು
40 ಹುಲ್ಲಿನ ಮೇಲೆ ಪಙ್ತಿಪಙ್ತಿಯಾಗಿ ಕೂತುಕೊಳ್ಳಲಿ ಎಂದು ಅಪ್ಪಣೆಕೊಟ್ಟಾಗ, ಜನರು
41 ಪಙ್ತಿಗೆ ನೂರರಂತೆ ಐವತ್ತರಂತೆ ಸಾಲುಸಾಲಾಗಿ ಕೂತುಕೊಂಡರು. ಆ ಮೇಲೆ ಆತನು ಆ ಐದು ರೊಟ್ಟಿ ಎರಡು ಮೀನುಗಳನ್ನು ತೆಗೆದುಕೊಂಡು ಆಕಾಶದ ಕಡೆಗೆ ನೋಡಿ, ದೇವರ ಸ್ತೋತ್ರಮಾಡಿ, ಆ ರೊಟ್ಟಿಗಳನ್ನು ಮುರಿದು—ನೀವು ಜನರಿಗೆ ಹಂಚಿರಿ ಎಂದು
42 ಶಿಷ್ಯರ ಕೈಗೆ ಕೊಟ್ಟು, ಆ ಎರಡು ಮೀನುಗಳನ್ನೂ ಎಲ್ಲರಿಗೆ ಹಂಚಿಸಿದನು. ಅವ
43 ರೆಲ್ಲರೂ ಊಟಾಮಾಡಿ ತೃಪ್ತರಾದರು. ರೊಟ್ಟೀ ತುಂಡುಗಳನ್ನೂ ಮೀನಿನ ತುಂಡು

[1] ಮಾರ್ಕ ೬, ೭.

ಗಳನ್ನೂ ಕೂಡಿಸಲಾಗಿ, ಹನ್ನೆರಡು ಪುಟ್ಟಿ ತುಂಬಿದವು. ಊಟಾಮಾಡಿದವರು ಐದು 44
ಸಾವಿರ ಮಂದಿ ಗಂಡಸರು.

ಇದಾದ ಕೂಡಲೆ ಆತನು ತನ್ನ ಶಿಷ್ಯರಿಗೆ—ನಾನು ಈ ಜನರನ್ನು ಕಳುಹಿಸಿಬಿಡು 45
ವಷ್ಟರೊಳಗೆ ನೀವು ದೋಣಿಯನ್ನು ಹತ್ತಿ ಮುಂದಾಗಿ ಆಚೇದಡಕ್ಕೆ ಬೆತ್ಸಾಯಿದಕ್ಕೆ
ಹೋಗಿರಿ ಎಂದು ಹೇಳಿ ಅವರನ್ನು ಬಲವಂತಮಾಡಿದನು. ಆತನು ಜನರನ್ನು ಕಳು 46
ಹಿಸಿಬಿಟ್ಟನಂತರ ದೇವರಿಗೆ ಪ್ರಾರ್ಥನೆಮಾಡುವದಕ್ಕಾಗಿ ಬೆಟ್ಟಕ್ಕೆ ಹೋದನು. ಹೊತ್ತು 47
ಮುಳುಗಿದ ಮೇಲೆ, ದೋಣಿಯು ಸಮುದ್ರದ ನಡುವೆ ಇತ್ತು; ಆತನು ಒಬ್ಬನೇ ದಡ
ದಲ್ಲಿದ್ದನು. ಎದುರುಗಾಳಿ ಬೀಸುತ್ತಿದ್ದದರಿಂದ ಶಿಷ್ಯರು ಹುಟ್ಟು ಹಾಕಿ ಹಾಕಿ ದಣಿದಿ 48
ರುವದನ್ನು ಆತನು ಕಂಡು, ಹೆಚ್ಚುಕಡಿಮೆ ರಾತ್ರಿಯ ನಾಲ್ಕನೇ ಜಾವದಲ್ಲಿ ಸಮುದ್ರದ
ಮೇಲೆ ನಡೆದು, ಅವರ ಕಡೆಗೆ ಬಂದು, ಅವರನ್ನು ದಾಟಿ ಮುಂದಕ್ಕೆ ಹೋಗಬೇಕೆಂದಿ
ದ್ದನು. ಸಮುದ್ರದ ಮೇಲೆ ನಡೆಯುವ ಆತನನ್ನು ಅವರು ಕಂಡು, ಭೂತವೆಂದು 49
ಭಾವಿಸಿ, ಅಬ್ಬರಿಸಿ ಕೂಗಿದರು; ಅವರೆಲ್ಲರೂ ಆತನನ್ನು ನೋಡಿ ತತ್ತರಿಸಿದರು. ಆತನು 50
ಕೂಡಲೆ ಅವರನ್ನು ಮಾತಾಡಿಸಿ ಅವರಿಗೆ—ಧೈರ್ಯವಾಗಿರಿ; ನಾನು; ಅಂಜಬೇಡಿರಿ
ಎಂದು ಹೇಳಿದನು. ತರುವಾಯ ಆತನು ದೋಣಿಯನ್ನು ಹತ್ತಿ ಅವರ ಬಳಿಗೆ ಬಂದ 51
ಮೇಲೆ, ಗಾಳಿ ನಿಂತುಹೋಯಿತು. ಆಗ ಅವರು ತಮ್ಮೊಳಗೆ ಬಹಳವಾಗಿ ಬೆರಗಾದರು.
ಯಾಕಂದರೆ ಅವರು ರೊಟ್ಟಿಯ ವಿಷಯವಾದ ಮಹತ್ಕಾರ್ಯವನ್ನು ಗ್ರಹಿಸಲಿಲ್ಲ; ಅವರ 52
ಮನಸ್ಸು ಕಲ್ಲಾಗಿತ್ತು.

ಅವರು ಸಮುದ್ರವನ್ನು ದಾಟಿ ಗೆನೆಜರೇತ್ ದೇಶದ ದಡಕ್ಕೆ ಮುಟ್ಟಿ ದೋಣಿಯನ್ನು 53
ಕಟ್ಟಿದರು. ಅವರು ದೋಣಿಯಿಂದ ಇಳಿದ ಕೂಡಲೆ, ಜನರು ಆತನ ಗುರುತನ್ನು 54
ಹಿಡಿದು, ಆ ಸೀಮೆಯಲ್ಲೆಲ್ಲಾ ಓಡ್ಯಾಡುತ್ತಾ, ಮೈಯಲ್ಲಿ ನೆಟ್ಟಗಿಲ್ಲದವರನ್ನು ದೋಲಿಯ 55
ಮೇಲೆ ಹಾಕಿಕೊಂಡು, ಆತನು ಎಲ್ಲೆಲ್ಲಿ ಇದ್ದಾನೆಂದು ಕೇಳಿದರೋ ಅಲ್ಲಲ್ಲಿಗೆ ತೆಗೆದು
ಕೊಂಡು ಹೋದರು. ಆತನು ಯಾವ ಗ್ರಾಮಗಳಿಗೂ ಯಾವ ಊರು ಹಳ್ಳಿಗಳಿಗೂ 56
ಹೋದನೋ ಅಲ್ಲಿಯವರು ರೋಗಿಗಳನ್ನು ಪೇಟೆಗಳಲ್ಲಿ ಇಟ್ಟು—ನಿನ್ನ ಉಡುಪಿನ ಗೊಂಡೆ
ಯನ್ನಾದರೂ ಮುಟ್ಟಗೊಡಿಸಬೇಕೆಂದು ಆತನನ್ನು ಬೇಡಿಕೊಂಡರು; ಆತನನ್ನು ಮುಟ್ಟಿ
ದವರೆಲ್ಲರೂ ಸ್ವಸ್ಥರಾದರು.

ಊಟದಿಂದ ಮನುಷ್ಯರು ಕೆಡುವದಿಲ್ಲವೆಂದು ಯೇಸು ಬೋಧಿಸಿದ್ದು.

(ಮತ್ತಾಯ 15, 1—20.)

ತರುವಾಯ ಯೆರೂಸಲೇಮಿನಿಂದ ಬಂದಿದ್ದ ಫರಿಸಾಯರೂ ಶಾಸ್ತ್ರಿಗಳಲ್ಲಿ ಕೆಲವರೂ **7**
ಆತನ ಬಳಿಗೆ ಕೂಡಿಬಂದರು. ಫರಿಸಾಯರೂ ಯೆಹೂದ್ಯರೆಲ್ಲರೂ ಹಿರಿಯರಿಂದ 3
ಬಂದ ಸಂಪ್ರದಾಯವನ್ನು ಹಿಡಿದು, ತಮ್ಮ ಕೈಗಳನ್ನು ಚನ್ನಾಗಿ ತೊಳಕೊಳ್ಳದೆ ಆಹಾರ
ತೆಗೆದುಕೊಳ್ಳುವದಿಲ್ಲ; ಮತ್ತು ಪೇಟೆಗೆ ಹೋಗಿ ಬಂದರೆ, ನೀರನ್ನು ಪ್ರೋಕ್ಷಿಸಿಕೊಳ್ಳದೆ[1] 4

---

[1] ಕೆಲವು ಪ್ರತಿಗಳಲ್ಲಿ—ಸ್ನಾನಮಾಡದೆ ಎಂದು ಬರೆದದೆ.

ಆಹಾರ ತೆಗೆದುಕೊಳ್ಳುವದಿಲ್ಲ; ಇದಲ್ಲದೆ, ಅವರಲ್ಲಿ ತಂಬಿಗೆ ಬಟ್ಲು ತಪ್ಪಲೆಗಳನ್ನು ಬೆಳಗಿ
2 ತೊಳೆಯುವದೇ ಮೊದಲಾದ ಅನೇಕಾಚಾರಗಳನ್ನು ನಡಸುವ ನೇಮಕವುಂಟು. ಆತನ
ಶಿಷ್ಯರಲ್ಲಿ ಕೆಲವರು ಹೊಲೆಯಾದ ಕೈಯಿಂದ, ಅಂದರೆ ಕೈತೊಳಕೊಳ್ಳದೆ, ಆಹಾರ ತೆಗೆ
5 ದುಕೊಳ್ಳುವದನ್ನು ಆ ಫರಿಸಾಯರೂ ಶಾಸ್ತ್ರಿಗಳೂ ಕಂಡು, ಆತನನ್ನು—ನಿನ್ನ ಶಿಷ್ಯರು
ಹಿರಿಯರಿಂದ ಬಂದ ಸಂಪ್ರದಾಯದಂತೆ ಯಾಕೆ ನಡೆದುಕೊಳ್ಳುವದಿಲ್ಲ? ಕೈತೊಳಕೊಳ್ಳದೆ
6 ಯಾಕೆ ಆಹಾರ ತೆಗೆದುಕೊಳ್ಳುತ್ತಾರೆ ಎಂದು ಕೇಳಿದರು. ಅದಕ್ಕೆ ಆತನು—ಕಪಟಿ
ಗಳಾದ ನಿಮ್ಮ ವಿಷಯದಲ್ಲಿ ಯೆಶಾಯನು ವಿಹಿತವಾಗಿ ಪ್ರವಾದಿಸಿದ್ದಾನೆ; ಅವನು ಬರೆ
ದದ್ದೇನಂದರೆ—

ಈ ಜನರು ಮಾತಿನಿಂದ ನನ್ನನ್ನು ಸನ್ಮಾನಿಸುತ್ತಾರೆ,
ಆದರೆ ಅವರ ಮನಸ್ಸು ನನಗೆ ದೂರವಾಗಿದೆ.
7 ಮನುಷ್ಯರು ಕಲ್ಪಿಸಿದ ಕಟ್ಟಳೆಗಳನ್ನೇ ಅವರು ಬೋಧಿಸುವದರಿಂದ ನನಗೆ
ಭಕ್ತಿ ತೋರಿಸುವದು ವ್ಯರ್ಥ[1]

8 ಎಂಬುವದೇ. ನೀವು ದೇವರ ಆಜ್ಞೆಯನ್ನು ಬಿಟ್ಟು, ಮನುಷ್ಯರು ಕಲ್ಪಿಸಿದ ಸಂಪ್ರದಾ
9 ಯವನ್ನು ಹಿಡಿದಿದ್ದೀರಿ ಎಂದು ಹೇಳಿದನು. ಆತನು ಇನ್ನೂ ಅವರಿಗೆ—ನೀವು ನಿಮ್ಮ
ಸಂಪ್ರದಾಯವನ್ನು ಹಿಡಿದುನಡಸುವದಕ್ಕಾಗಿ ದೇವರ ಆಜ್ಞೆಯನ್ನು ವ್ಯರ್ಥಮಾಡು
10 ತ್ತೀರಿ; ಬಹು ಚನ್ನಾಗಿದೆಯಲ್ಲವೇ? ತಂದೆತಾಯಿಗಳನ್ನು ಸನ್ಮಾನಿಸಬೇಕೆಂತಲೂ[2]
ತಂದೆಯನ್ನಾಗಲಿ ತಾಯಿಯನ್ನಾಗಲಿ ನಿಂದಿಸುವವನಿಗೆ ಮರಣದಂಡನೆ ಆಗಬೇಕೆಂತಲೂ[3]
11 ಮೋಶೆಯು ಹೇಳಿದ್ದಾನೆ; ನೀವೋ ಒಬ್ಬನು ತನ್ನ ತಂದೆಯನ್ನಾಗಲಿ ತಾಯಿಯನ್ನಾಗಲಿ
ನೋಡಿ—ನಾನು ನಿನ್ನ ಸಂರಕ್ಷಣೆಗಾಗಿ ಕೊಡತಕ್ಕದ್ದನ್ನು ಕೊರ್ಬಾನ್ ಮಾಡಿದ್ದೇನೆ
12 (ಅಂದರೆ, ದೇವರಿಗಾಗಿ ಇಟ್ಟಿದ್ದೇನೆ) ಎಂದು ಹೇಳುವದಾದರೆ, ಅವನು ತನ್ನ ತಂದೆಗಾ
13 ಗಲಿ ತಾಯಿಗಾಗಲಿ ಇನ್ನೇನೂ ಮಾಡಬಾರದೆಂದು ಹೇಳುತ್ತೀರಿ. ಹೀಗೆ ನೀವು ಕಲಿ
ಸುವ ಸಂಪ್ರದಾಯದಿಂದ ದೇವರ ವಾಕ್ಯವನ್ನು ನಿರರ್ಥಕಮಾಡುತ್ತೀರಿ, ಮತ್ತು ಇಂಥಾ
ಕಾರ್ಯಗಳನ್ನು ಇನ್ನೂ ಎಷ್ಟೋ ಮಾಡುತ್ತೀರಿ ಎಂದು ಹೇಳಿದನು.

14 ಆ ಮೇಲೆ ಯೇಸು ಜನರ ಗುಂಪನ್ನು ತಿರಿಗಿ ಹತ್ತರಕ್ಕೆ ಕರೆದು ಅವರಿಗೆ—ಎಲ್ಲರೂ
15 ಕಿವಿಗೊಟ್ಟು ನನ್ನ ಮಾತನ್ನು ಕೇಳಿರಿ, ತಿಳುಕೊಳ್ಳಿರಿ. ಹೊರಗಿನಿಂದ ಮನುಷ್ಯನೊಳಕ್ಕೆ
ಹೋಗಿ ಅವನನ್ನು ಹೊಲೆಮಾಡತಕ್ಕಂಥಾದ್ದು ಒಂದೂ ಇಲ್ಲ; ಆದರೆ ಮನುಷ್ಯನೊಳ
ಗಿಂದ ಹೊರಡುವವುಗಳೇ ಮನುಷ್ಯನನ್ನು ಹೊಲೆಮಾಡುವಂಥವುಗಳಾಗಿವೆ ಎಂದು ಹೇಳಿ
17 ದನು[4]. ತರುವಾಯ ಆತನು ಜನರನ್ನು ಬಿಟ್ಟು ಮನೆಯೊಳಕ್ಕೆ ಹೋದಾಗ, ಆತನ
18 ಶಿಷ್ಯರು ಆ ಸಾಮ್ಯದ ಅರ್ಥವೇನೆಂದು ಆತನನ್ನು ಕೇಳಲು, ಆತನು ಅವರಿಗೆ—ನಿಮಗೂ
ಅಷ್ಟು ಬುದ್ಧಿ ಇಲ್ಲವೇ? ಹೊರಗಿನಿಂದ ಮನುಷ್ಯನೊಳಕ್ಕೆ ಹೋಗುವಂಥಾದ್ದು ಅವನ
19 ಹೃದಯದೊಳಕ್ಕೆ ಸೇರದೆ, ಹೊಟ್ಟೆಯಲ್ಲಿ ಸೇರಿ ಬಹಿರ್ದೇಶಕ್ಕೆ ಹೋಗುವದರಿಂದ ಅವ

---

[1] ಯೆಶಾಯ ೨೯, ೧೩. [2] ಹೊರಡೋಣ ೨೦, ೧೨. [3] ಹೊರಡೋಣ ೨೧, ೧೭.

[4] ೧೬ನೇ ವಚನವು ಮೂಲಗ್ರಂಥದ ಹೆಚ್ಚು ಪ್ರತಿಗಳಲ್ಲಿ ಇಲ್ಲ; ಅದು ಯಾವದಂದರೆ—ಯಾವನಿಗಾದರೂ ಕೇಳುವದಕ್ಕೆ ಕಿವಿಯಿದ್ದರೆ ಕೇಳಲಿ ಎಂಬುವದು.

ನನ್ನು ಹೊಲೆಮಾಡಲಾರದೆಂದು ನಿಮಗೆ ತಿಳಿಯಲಿಲ್ಲವೇ ಎಂದು ಹೇಳಿದನು. ಹೀಗೆ
ಹೇಳಿದ್ದರಿಂದ ತಿನ್ನುವ ಪದಾರ್ಥಗಳೆಲ್ಲಾ ಶುದ್ಧವೆಂದು ಸೂಚಿಸಿದನು. ಆತನು ಇನ್ನೂ— 20
ಮನುಷ್ಯನೊಳಗಿಂದ ಹೊರಡುವಂಥಾದ್ದೇ ಮನುಷ್ಯನನ್ನು ಹೊಲೆಮಾಡುವದು; ಒಳಗಿ 21
ನಿಂದ ಅಂದರೆ ಮನುಷ್ಯರ ಹೃದಯದೊಳಗಿಂದ ಸೂಳೆಗಾರಿಕೆ ಕಳ್ಳತನ ಕೊಲೆ ಹಾದರ 22
ದ್ರವ್ಯಾಶೆ ಕೆಡಕುತನ ಮೋಸ ಬಂಡತನ ಹೊಟ್ಟೇಕಿಚ್ಚು ಬೈಗಳು ಸೊಕ್ಕು ಬುದ್ಧಿಗೇಡಿತನ
ಇವೇ ಮೊದಲಾದವುಗಳ ಕೆಟ್ಟ ಆಲೋಚನೆಗಳು ಹೊರಡುತ್ತವೆ. ಈ ಕೆಟ್ಟ ವಿಷಯಗ 23
ಳೆಲ್ಲಾ ಒಳಗಿನಿಂದ ಹೊರಡುವಂಥವುಗಳಾಗಿ ಮನುಷ್ಯನನ್ನು ಹೊಲೆಮಾಡುತ್ತವೆ ಅಂದನು.

### ಯೇಸು ಅನ್ಯಮತಸ್ಥಳ ಮಗಳನ್ನೂ ಒಬ್ಬ ಮೂಕನನ್ನೂ ಸ್ವಸ್ಥಮಾಡಿದ್ದು.
(ಮತ್ತಾಯ 15, 21—28.)

ಅಲ್ಲಿಂದ ಯೇಸು ಎದ್ದು ಹೊರಟು ತೂರ್ ಪಟ್ಟಣದ ಪ್ರಾಂತ್ಯಗಳಿಗೆ ಹೋಗಿ, 24
ಒಂದು ಮನೆಯೊಳಗೆ ಇಳುಕೊಂಡು, ಅದು ಯಾರಿಗೂ ಗೊತ್ತಾಗಬಾರದೆಂದಿದ್ದನು;
ಆದರೆ ಆತನು ಗುಪ್ತವಾಗಿರುವದಕ್ಕೆ ಆಗದೆಹೋಯಿತು. ಒಬ್ಬ ಹೆಂಗಸು ಆತನ ಸುದ್ದಿ 25
ಯನ್ನು ಕೇಳಿ, ಬಂದು ಆತನ ಪಾದಕ್ಕೆ ಬಿದ್ದಳು. ಆಕೆಯ ಮಗಳಿಗೆ ದೆವ್ವ ಹಿಡಿದಿತ್ತು.
ಆ ಹೆಂಗಸು ಅನ್ಯಮತದವಳೂ[1] ಸುರೋಫೊಯಿನಿಕ್ಯರವಳೂ ಆಗಿದ್ದಳು. ಆಕೆಯು 26
ತನ್ನ ಮಗಳ ದೆವ್ವವನ್ನು ಬಿಡಿಸಬೇಕೆಂದು ಆತನನ್ನು ಬೇಡಿಕೊಂಡಾಗ, ಆತನು ಆಕೆಗೆ— 27
ಮಕ್ಕಳಿಗೆ ಮೊದಲು ತೃಪ್ತಿಯಾಗಲಿ; ಮಕ್ಕಳು ತಿನ್ನುವ ರೊಟ್ಟಿಯನ್ನು ತೆಗೆದುಕೊಂಡು
ನಾಯಿಮರಿಗಳಿಗೆ ಹಾಕುವದು ಸರಿಯಲ್ಲ ಎಂದು ಹೇಳಿದನು. ಅದಕ್ಕೆ ಆಕೆಯು— 28
ಸ್ವಾಮೀ, ಆ ಮಾತು ನಿಜವೇ; ಮೇಜಿನ ಕೆಳಗಿರುವ ನಾಯಿಮರಿಗಳಂತೂ ಮಕ್ಕಳ
ಕೈಯಿಂದ ಬೀಳುವ ರೊಟ್ಟೀತುಂಡುಗಳನ್ನು ತಿನ್ನುತ್ತವಲ್ಲಾ ಅನ್ನಲಾಗಿ, ಆತನು—ಈ 29
ಮಾತನ್ನು ಹೇಳಿದ್ದರಿಂದ, ದೆವ್ವವು ನಿನ್ನ ಮಗಳನ್ನು ಬಿಟ್ಟುಬಿಟ್ಟಿದೆ, ಹೋಗು ಅಂದನು.
ಆಕೆಯು ತನ್ನ ಮನೆಗೆ ಹೋಗಿ ನೋಡಲಾಗಿ, ಆ ಹುಡುಗಿ ಹಾಸಿಗೆಯ ಮೇಲೆ ಮಲಗಿ 30
ದ್ದಳು; ದೆವ್ವ ಅವಳನ್ನು ಬಿಟ್ಟುಹೋಗಿತ್ತು.

ಅನಂತರ ಆತನು ತೂರ್ ಪಟ್ಟಣದ ಪ್ರಾಂತ್ಯಗಳನ್ನು ಬಿಟ್ಟು, ಸೀದೋನ್ ಪಟ್ಟಣದ 31
ಮಾರ್ಗವಾಗಿ ದೆಕಪೊಲಿಯ ಪ್ರಾಂತ್ಯಗಳನ್ನು ಹಾದು ಗಲಿಲಾಯ ಸಮುದ್ರಕ್ಕೆ ಬಂದನು.
ಆಗ ಕೆಲವರು ತೊದಲುಮಾತಾಡುವ ಒಬ್ಬ ಕಿವುಡನನ್ನು ಆತನ ಬಳಿಗೆ ಕರತಂದು— 32
ಇವನ ಮೇಲೆ ನಿನ್ನ ಕೈಯಿಡಬೇಕು ಎಂದು ಆತನನ್ನು ಬೇಡಿಕೊಂಡರು. ಆತನು ಅವ 33
ನನ್ನು ಜನರ ಗುಂಪಿನಿಂದ ಒತ್ತಟ್ಟಿಗೆ ಕರಕೊಂಡು ಹೋಗಿ, ತನ್ನ ಬೆರಳುಗಳನ್ನು ಅವನ
ಕಿವಿಗಳಲ್ಲಿ ಇಟ್ಟು, ಉಗುಳಿ, ಅವನ ನಾಲಿಗೆಯನ್ನು ಮುಟ್ಟಿ, ಆಕಾಶದ ಕಡೆಗೆ ನೋಡಿ, 34
ನಿಟ್ಟುಸುರುಬಿಟ್ಟು ಅವನಿಗೆ—ಎಪ್ಫಥಾ ಎಂದು ಹೇಳಿದನು. ಆ ಶಬ್ದಕ್ಕೆ ತೆರೆಯಲಿ
ಎಂದರ್ಥ. ಹೇಳುತ್ತಲೇ ಅವನ ಕಿವಿ ತೆರೆದವು; ಅವನ ನಾಲಿಗೆಯ ಕಟ್ಟು ಬಿಚ್ಚಿಹೋ 35
ಯಿತು; ಅವನು ನೆಟ್ಟಗೆ ಮಾತಾಡಿದನು. ಆಗ ಆತನು—ಯಾರಿಗೂ ತಿಳಿಸಬಾರದೆಂದು 36
ಅವರಿಗೆ ಖಂಡಿತವಾಗಿ ಹೇಳಿದನು. ಆದರೆ ಎಷ್ಟು ಖಂಡಿತವಾಗಿ ಹೇಳಿದರೂ ಅವರು

[1] ಮೂಲ: ಗ್ರೀಕಳು.

37 ಮತ್ತಷ್ಟು ಹೆಚ್ಚಾಗಿ ಅದನ್ನು ಹಬ್ಬಿಸಿದರು. ಅವರು ಮಿತಿಮಿಾರಿ ಬೆರಗಾಗಿ—ಎಲ್ಲಾ ಚನ್ನಾಗಿ ಮಾಡಿದ್ದಾನೆ; ಕಿವುಡರಾದರೂ ಕೇಳುವಂತೆ ಮಾಡುತ್ತಾನೆ, ಮೂಕರಾದರೂ ಮಾತಾಡುವಂತೆ ಮಾಡುತ್ತಾನೆ ಅಂದುಕೊಂಡರು.

### ಯೇಸು ನಾಲ್ಕುಸಾವಿರ ಜನರಿಗೆ ಊಟಾಮಾಡಿಸಿದ್ದು.

(ಮತ್ತಾಯ 15, 32—39.)

**8** ಆ ದಿವಸಗಳಲ್ಲಿ ಜನರು ತಿರಿಗಿ ಗುಂಪುಕೂಡಿ ಬಂದಾಗ, ಅವರಿಗೆ ಊಟಕ್ಕೆ ಏನೂ 2 ಇಲ್ಲದೆ ಇರಲು, ಯೇಸು ತನ್ನ ಶಿಷ್ಯರನ್ನು ಹತ್ತರಕ್ಕೆ ಕರೆದು—ಈ ಜನರನ್ನು ನೋಡಿ ಕನಿಕರ ಪಡುತ್ತೇನೆ, ಇವರು ನನ್ನ ಬಳಿಗೆ ಬಂದು ಮೂರು ದಿನವಾಯಿತು; ಇವರಿಗೆ 3 ಊಟಕ್ಕೆ ಏನೂ ಇಲ್ಲ; ಇವರನ್ನು ಉಪವಾಸವಾಗಿ ಮನೆಗೆ ಕಳುಹಿಸಿಬಿಟ್ಟರೆ ದಾರಿಯಲ್ಲಿ ಬಳಲಿ ಹೋದಾರು; ಇವರಲ್ಲಿ ಕೆಲವರು ದೂರದಿಂದ ಬಂದಿದ್ದಾರಲ್ಲಾ ಎಂದು 4 ಅವರಿಗೆ ಹೇಳಿದ್ದಕ್ಕೆ, ಶಿಷ್ಯರು—ಇದು ಅಡವಿ, ಇಲ್ಲಿ ಎಲ್ಲಿಂದ ರೊಟ್ಟಿಯನ್ನು ತಂದು 5 ಈ ಜನರನ್ನು ತೃಪ್ತಿಪಡಿಸುವದಕ್ಕಾದೀತು? ಅಂದರು. ಆತನು—ನಿಮ್ಮಲ್ಲಿ ಎಷ್ಟು 6 ರೊಟ್ಟಿಗಳಿವೆ ಎಂದು ಅವರನ್ನು ಕೇಳಲು, ಅವರು—ಏಳು ಅವೆ ಅಂದರು. ಆಗ ಆತನು ಜನರಿಗೆ—ನೆಲದ ಮೇಲೆ ಕೂತುಕೊಳ್ಳಿರಿ ಎಂದು ಅಪ್ಪಣೆಕೊಟ್ಟು, ಆ ಏಳು ರೊಟ್ಟಿಗಳನ್ನು ತೆಗೆದುಕೊಂಡು, ದೇವರ ಸ್ತೋತ್ರಾಮಾಡಿ, ಅವುಗಳನ್ನು ಮುರಿದು, ಹಂಚುವದಕ್ಕಾಗಿ 7 ತನ್ನ ಶಿಷ್ಯರ ಕೈಗೆ ಕೊಟ್ಟನು; ಅವರು ಜನರಿಗೆ ಹಂಚಿಕೊಟ್ಟರು. ಇದಲ್ಲದೆ ಅವರಲ್ಲಿ ಕೆಲವು ಸಣ್ಣ ಮಿಾನುಗಳಿದ್ದವು; ಅವುಗಳನ್ನು ಆತನು ತೆಗೆದುಕೊಂಡು, ದೇವರ ಸ್ತೋತ್ರಾ 8 ಮಾಡಿ—ಇವುಗಳನ್ನೂ ಹಂಚಿಕೊಡಿರಿ ಅಂದನು. ಅವರು ಊಟಾಮಾಡಿ ತೃಪ್ತರಾದ 9 ಮೇಲೆ ಮಿಕ್ಕ ತುಂಡುಗಳನ್ನು ಕೂಡಿಸಲಾಗಿ, ಏಳು ಹೆಡಿಗೆ ತುಂಬಿದವು. ಊಟಾಮಾಡಿದವರು ಹೆಚ್ಚುಕಡಿಮೆ ನಾಲ್ಕುಸಾವಿರ ಮಂದಿ. ಆ ಮೇಲೆ ಆತನು ಅವರನ್ನು 10 ಕಳುಹಿಸಿಬಿಟ್ಟು, ಕೂಡಲೆ ತನ್ನ ಶಿಷ್ಯರನ್ನು ಕರಕೊಂಡು, ದೋಣಿಯನ್ನು ಹತ್ತಿ, ದಲ್ಮನೂಥ ಸೀಮೆಗೆ ಬಂದನು.

### ಯೇಸು ಯೆಹೂದ್ಯ ಮತಾಭಿಮಾನಿಗಳ ವಿಷಯವಾಗಿ ಎಚ್ಚರಿಕೆ ಕೊಟ್ಟದ್ದು.

(ಮತ್ತಾಯ 16, 1—12; ಲೂಕ 11, 16; 12, 1; ಯೋಹಾನ 6, 30.)

11 ತರುವಾಯ ಫರಿಸಾಯರು ಹೊರಟುಬಂದು ಆತನ ಕೂಡ ತರ್ಕಮಾಡುತ್ತಾ ಪರೀಕ್ಷಿಸುವದಕ್ಕಾಗಿ—ನೀನು ಆಕಾಶದಲ್ಲಿ ಒಂದು ಸೂಚಕಕಾರ್ಯವನ್ನು ತೋರಿಸಿಕೊಡ 12 ಬೇಕೆಂದು ಕೇಳಲು, ಆತನು ತನ್ನ ಆತ್ಮದಲ್ಲಿ ನೊಂದು ನಿಟ್ಟುಸುರುಬಿಟ್ಟು—ಈ ಸಂತತಿಯು ಸೂಚಕಕಾರ್ಯವನ್ನು ಅಪೇಕ್ಷಿಸುವದು ಯಾಕೆ? ನಿಮಗೆ ಸತ್ಯವಾಗಿ ಹೇಳು 13 ತ್ತೇನೆ, ಈ ಸಂತತಿಗೆ ಸೂಚಕಕಾರ್ಯವು ಸಿಕ್ಕುವದೇ ಇಲ್ಲ ಎಂದು ಹೇಳಿ, ಅವರನ್ನು ಬಿಟ್ಟು, ತಿರಿಗಿ ದೋಣಿಯನ್ನು ಹತ್ತಿ ಆಚೇದಡಕ್ಕೆ ಹೋದನು.

14 ಆದರೆ ಶಿಷ್ಯರು ರೊಟ್ಟೀಬುತ್ತಿ ಕಟ್ಟಿಕೊಳ್ಳುವದನ್ನು ಮರೆತರು. ದೋಣಿಯಲ್ಲಿ ಅವರಿಗೆ 15 ಒಂದು ರೊಟ್ಟಿ ಮಾತ್ರ ಇತ್ತು; ಬೇರೆ ಇರಲಿಲ್ಲ. ಯೇಸು ಅವರಿಗೆ—ಫರಿಸಾಯರ

ಮತ್ತು ಹೆರೋದನ ಹುಳೀಹಿಟ್ಟನ್ನು ತೆಗೆದುಕೊಂಡೀರಿ, ಎಚ್ಚರಿಕೆಯಾಗಿರಿ ಎಂದು ಖಂಡಿತ ವಾಗಿ ಹೇಳಲು, ಅವರು—ನಮ್ಮಲ್ಲಿ ರೊಟ್ಟಿಯಿಲ್ಲವಲ್ಲಾ ಎಂದು ತಮ್ಮತಮ್ಮೊಳಗೆ ಮಾತಾ 16 ಡಿಕೊಳ್ಳುತ್ತಿದ್ದರು. ಯೇಸು ಅದನ್ನು ತಿಳಿದು—ರೊಟ್ಟಿಯಿಲ್ಲವಲ್ಲಾ ಎಂದು ನಿಮ್ಮೊಳಗೆ 17 ಮಾತಾಡಿಕೊಳ್ಳುವದೇಕೆ? ಇನ್ನೂ ನಿಮಗೆ ಗ್ರಹಿಕೆ ಇಲ್ಲವೋ? ತಿಳುವಳಿಕೆ ಬರಲಿಲ್ಲ ವೋ? ನಿಮ್ಮ ಮನಸ್ಸು ಕಲ್ಲಾಗಿದೆಯೋ? ಕಣ್ಣಿದ್ದೂ ಕಾಣುವದಿಲ್ಲವೋ? ಕಿವಿಯಿದ್ದೂ 18 ಕೇಳುವದಿಲ್ಲವೋ? ನಿಮಗೆ ನೆನಪಿಲ್ಲವೋ? ನಾನು ಆ ಐದು ರೊಟ್ಟಿಗಳನ್ನು ಮುರಿದು 19 ಐದುಸಾವಿರ ಜನರಿಗೆ ಹಂಚಿಸಿದಾಗ, ಎಷ್ಟು ಪುಟ್ಟಿ ತುಂಡುಗಳನ್ನು ಕೂಡಿಸಿಟ್ಟಿರಿ ಎಂದು ಕೇಳಿದ್ದಕ್ಕೆ, ಅವರು—ಹನ್ನೆರಡು ಪುಟ್ಟಿ ಅಂದರು. ಮತ್ತು ಆ ಏಳು ರೊಟ್ಟಿಗಳನ್ನು 20 ನಾಲ್ಕುಸಾವಿರ ಜನರಿಗೆ ಹಂಚಿಸಿದಾಗ, ಮಿಕ್ಕ ತುಂಡುಗಳನ್ನು ಎಷ್ಟು ಹೆಡಿಗೆ ತುಂಬ ಕೂಡಿಸಿಟ್ಟಿರಿ ಎಂದು ಕೇಳಿದ್ದಕ್ಕೆ, ಅವರು—ಏಳು ಹೆಡಿಗೆ ತುಂಬ ಅಂದರು. ಆಗ ಆತನು 21 ಅವರಿಗೆ—ನಿಮಗೆ ಇನ್ನೂ ತಿಳುವಳಿಕೆ ಬರಲಿಲ್ಲವೇ? ಎಂದು ಹೇಳಿದನು.

### ಯೇಸು ಕುರುಡನಿಗೆ ಕಣ್ಣು ಕೊಟ್ಟದ್ದು.

ಮತ್ತು ಅವರು ಬೆತ್ಸಾಯಿದ ಊರಿಗೆ ಬಂದರು. ಅಲ್ಲಿ ಜನರು ಒಬ್ಬ ಕುರುಡ 22 ನನ್ನು ಯೇಸುವಿನ ಬಳಿಗೆ ಕರಕೊಂಡುಬಂದು—ಇವನನ್ನು ಮುಟ್ಟಬೇಕು ಎಂದು ಆತ ನನ್ನು ಬೇಡಿಕೊಂಡರು. ಆತನು ಕುರುಡನ ಕೈ ಹಿಡುಕೊಂಡು, ಊರ ಹೊರಕ್ಕೆ ಕರ 23 ಕೊಂಡು ಹೋಗಿ, ಅವನ ಕಣ್ಣುಗಳಲ್ಲಿ ಉಗುಳಿ, ಅವನ ಮೇಲೆ ಕೈಯಿಟ್ಟು—ನಿನಗೇನಾ ದರೂ ಕಾಣುತ್ತದೋ? ಎಂದು ಅವನನ್ನು ಕೇಳಿದನು. ಅವನು ತಲೆಯೆತ್ತಿ ನೋಡಿ— 24 ನನಗೆ ಜನರು ಕಾಣುತ್ತಾರೆ; ಅವರು ಮರಗಳಂತೆ ಕಾಣಿಸಿದರೂ ತಿರುಗಾಡುತ್ತಾ ಇದ್ದಾರೆ ಅಂದನು. ಆಗ ಆತನು ಅವನ ಕಣ್ಣುಗಳ ಮೇಲೆ ತಿರಿಗಿ ಕೈಯಿಟ್ಟನು; 25 ಅವನು ಕಣ್ಣುಬಿಟ್ಟು ನೋಡಲು, ಅವನಿಗೆ ಗುಣವಾಗಿತ್ತು; ಎಲ್ಲವೂ ಸ್ಪಷ್ಟವಾಗಿ ಕಾಣಿ ಸಿತು. ತರುವಾಯ ಆತನು—ನೀನು ಊರೊಳಕ್ಕೇನೂ ಹೋಗಬೇಡ ಎಂದು ಹೇಳಿ, 26 ಅವನನ್ನು ಅವನ ಮನೆಗೆ ಕಳುಹಿಸಿಬಿಟ್ಟನು.

### ಪೇತ್ರನು ಯೇಸುವನ್ನು ಕ್ರಿಸ್ತನೆಂದು ಒಪ್ಪಿಕೊಂಡ ಮೇಲೆ ಯೇಸು ತನ್ನ ಮರಣವನ್ನೂ ತನ್ನ ಶಿಷ್ಯರಿಗೆ ಬರುವ ಕಷ್ಟಗಳನ್ನೂ ಮುಂದಾಗಿ ತಿಳಿಸಿದ್ದು.

(ಮತ್ತಾಯ 16, 13—28; ಲೂಕ 9, 18—27.)

ಯೇಸೂ ಆತನ ಶಿಷ್ಯರೂ ಫಿಲಿಪ್ಪನಕೈಸರೈಯ ಎಂಬ ಪಟ್ಟಣಕ್ಕೆ ಸೇರಿದ ಗ್ರಾಮ 27 ಗಳಿಗೆ ಹೊರಟರು. ದಾರಿಯಲ್ಲಿ ಆತನು—ನನ್ನನ್ನು ಜನರು ಯಾರೆಂದು ಹೇಳಿಕೊಳ್ಳು ತ್ತಾರೆ ಎಂದು ತನ್ನ ಶಿಷ್ಯರನ್ನು ಕೇಳಿದ್ದಕ್ಕೆ, ಅವರು—ನಿನ್ನನ್ನು ಕೆಲವರು ಸ್ನಾನಿಕನಾದ 28 ಯೋಹಾನನು ಅನ್ನುತ್ತಾರೆ; ಕೆಲವರು ಎಲೀಯನು ಅನ್ನುತ್ತಾರೆ; ಇನ್ನು ಕೆಲವರು ಪ್ರವಾದಿಗಳಲ್ಲಿ ಒಬ್ಬನು ಅನ್ನುತ್ತಾರೆ ಎಂದು ಹೇಳಿದರು. ಆತನು ಅವರನ್ನು—ನೀವಾ 29 ದರೋ ನನ್ನನ್ನು ಯಾರೆನ್ನುತ್ತೀರಿ? ಎಂದು ಕೇಳಲಾಗಿ, ಪೇತ್ರನು—ನೀನು ಬರಬೇಕಾಗಿ

30 ರುವ ಕ್ರಿಸ್ತನು ಎಂದು ಉತ್ತರಕೊಟ್ಟನು. ಅದಕ್ಕೆ ಆತನು—ನನ್ನ ವಿಷಯವಾಗಿ ಯಾರಿಗೂ
31 ತಿಳಿಸಬೇಡಿರಿ ಎಂದು ಅವರಿಗೆ ಖಂಡಿತವಾಗಿ ಹೇಳಿದನು. ಇದಲ್ಲದೆ ಆತನು—ಮನು ಷ್ಯಕುಮಾರನು ಬಹು ಕಷ್ಟಗಳನ್ನನುಭವಿಸಿ, ಹಿರಿಯರಿಂದಲೂ ಮಹಾಯಾಜಕರಿಂದಲೂ ಶಾಸ್ತ್ರಿಗಳಿಂದಲೂ ನಿರಾಕೃತನಾಗಿ ಕೊಲ್ಲಲ್ಪಟ್ಟು, ಮೂರು ದಿನದ ಮೇಲೆ ಜೀವಿತನಾಗಿ ಎದ್ದು ಬರಬೇಕಾಗಿದೆ[1] ಎಂಬದಾಗಿ ಉಪದೇಶಮಾಡುವದಕ್ಕೆ ಪ್ರಾರಂಭಮಾಡಿದನು.
32 ಆತನು ಈ ಮಾತನ್ನು ಏನೂ ಗುಂಬವಿಲ್ಲದೆ ಹೇಳಿದನು. ಆಗ ಪೇತ್ರನು ಆತನ ಕೈ ಹಿಡಿದು
33 ಆತನನ್ನು ಗದರಿಸುವದಕ್ಕೆ ಪ್ರಾರಂಭಿಸಲು, ಆತನು ಹಿಂತಿರುಗಿಕೊಂಡು ತನ್ನ ಶಿಷ್ಯರನ್ನು ನೋಡಿ, ಪೇತ್ರನಿಗೆ—ಸೈತಾನನೇ, ನನ್ನ ಮುಂದೆ ನಿಲ್ಲಬೇಡ, ನಡೆ, ನೀನು ದೇವರ ಆಲೋಚನೆಗಳನ್ನು ಬಿಟ್ಟು ಮನುಷ್ಯರ ಆಲೋಚನೆಗಳನ್ನು ಹಿಡಿದಿದ್ಧೀ ಎಂದು ಗದರಿಸಿ ಹೇಳಿದನು.
34 ಆ ಮೇಲೆ ಆತನು ಜನರ ಗುಂಪನ್ನೂ ತನ್ನ ಶಿಷ್ಯರನ್ನೂ ಕೂಡಕರೆದು ಅವರಿಗೆ ಹೇಳಿದ್ದೇನಂದರೆ—ಯಾವನಿಗಾದರೂ ನನ್ನ ಹಿಂದೆ ಬರುವದಕ್ಕೆ ಮನಸ್ಸಿದ್ದರೆ, ಅವನು ಜೀವ
35 ದಾಶೆಯನ್ನು ಬಿಟ್ಟು[2] ತನ್ನ ಶಿಲುಬೆಯನ್ನು ಹೊತ್ತುಕೊಂಡು ನನ್ನ ಹಿಂದೆ ಬರಲಿ. ತನ್ನ ಪ್ರಾಣವನ್ನು ಉಳಿಸಿಕೊಳ್ಳಬೇಕೆಂದಿರುವವನು ಅದರ ನಷ್ಟ ಪಡುವನು; ಆದರೆ ನನ್ನ ನಿಮಿತ್ತವಾಗಿಯೂ ಸುವಾರ್ತೆಯ ನಿಮಿತ್ತವಾಗಿಯೂ ತನ್ನ ಪ್ರಾಣದ ನಷ್ಟ ಪಡುವವನು
36 ಅದನ್ನು ಉಳಿಸಿಕೊಳ್ಳುವನು. ಒಬ್ಬ ಮನುಷ್ಯನು ಲೋಕವನ್ನೆಲ್ಲಾ ಸಂಪಾದಿಸಿಕೊಂಡು
37 ತನ್ನ ಪ್ರಾಣದ ನಷ್ಟಪಟ್ಟಲ್ಲಿ ಅವನಿಗೆ ಪ್ರಯೋಜನವೇನು? ಒಬ್ಬನು ತನ್ನ ಪ್ರಾಣಕ್ಕೆ ಏನು
38 ಈಡು ಕೊಡಬಹುದು? ವ್ಯಭಿಚಾರಿಣಿಯಂತಿರುವ ಈ ಪಾಪಿಷ್ಠ ಸಂತತಿಯಲ್ಲಿ ಯಾವನು ನನಗೂ ನನ್ನ ಮಾತುಗಳಿಗೂ ನಾಚಿಕೊಳ್ಳುತ್ತಾನೋ ಅವನಿಗೆ ಮನುಷ್ಯಕುಮಾರನು, ತಾನು ತನ್ನ ತಂದೆಯ ಪ್ರಭಾವದೊಡನೆ ಪರಿಶುದ್ಧ ದೇವದೂತರ ಸಮೇತವಾಗಿ ಬರುವಾಗ, ನಾಚಿಕೊಳ್ಳುವನು ಅಂದನು.

**9** ಮತ್ತು ಅವರಿಗೆ—ನಿಮಗೆ ಸತ್ಯವಾಗಿ ಹೇಳುತ್ತೇನೆ, ಇಲ್ಲಿ ನಿಂತಿರುವವರಲ್ಲಿ ಕೆಲವರು ದೇವರ ರಾಜ್ಯವು ಪ್ರಬಲವಾಗಿ ಬಂದಿರುವದನ್ನು ನೋಡುವ ತನಕ ಮರಣವನ್ನು ಹೊಂದುವದಿಲ್ಲವೆಂದು ಹೇಳಿದನು.

ಯೇಸು ಪ್ರಕಾಶರೂಪವುಳ್ಳವನಾದದ್ದು.

(ಮತ್ತಾಯ 17, 1—13; ಲೂಕ 9, 28—36.)

2 ಆರು ದಿವಸಗಳಾದ ಮೇಲೆ ಯೇಸು ಪೇತ್ರನನ್ನೂ ಯಾಕೋಬನನ್ನೂ ಯೋಹಾನನನ್ನೂ ಮಾತ್ರ ಏಂಗಡವಾಗಿ ಕರಕೊಂಡು ಎತ್ತರವಾದ ಬೆಟ್ಟಕ್ಕೆ ಹೋದನು. ಅಲ್ಲಿ
3 ಅವರ ಕಣ್ಣಮುಂದೆ ಆತನ ರೂಪ ಬೇರೆಯಾಯಿತು. ಆತನ ವಸ್ತ್ರಗಳು ಬಹು ಬೆಳ್ಳಗೆ ಹೊಳೆಯುತ್ತಿದ್ದವು; ಭೂಲೋಕದಲ್ಲಿರುವ ಯಾವ ಅಗಸನಾದರೂ ಅಷ್ಟು ಬೆಳ್ಳಗೆ ಮಾಡ
4 ಲಾರನು. ಇದಲ್ಲದೆ ಎಲೀಯನೂ ಮೋಶೆಯೂ ಅವರಿಗೆ ಕಾಣಿಸಿಕೊಂಡು ಯೇಸುವಿನ
5 ಸಂಗಡ ಮಾತಾಡುತ್ತಾ ಇದ್ದರು. ಆಗ ಪೇತ್ರನು ಯೇಸುವಿಗೆ—ಗುರುವೇ, ನಾವು ಇಲ್ಲೇ ಇರುವದು ಒಳ್ಳೇದು; ಮೂರು ಪರ್ಣಶಾಲೆಗಳನ್ನು ಕಟ್ಟುವೆವು; ನಿನಗೊಂದು, ಮೋಶೆ

[1] ಹೋಶೇಯ ೬, ೨. [2] ಅಥವಾ, ತನ್ನನ್ನು ತ್ಯಜಿಸಿ.

ಗೊಂದು, ಎಲೀಯನಿಗೊಂದು ಎಂದು ಹೇಳಿದನು. ಏನು ಹೇಳಬೇಕೋ ತಿಳಿಯದೆ ಹೀಗೆ 6
ಮಾತಾಡಿದನು. ಅವರು ಬಹಳವಾಗಿ ಹೆದರಿಕೊಂಡಿದ್ದರು. ಅಷ್ಟರಲ್ಲಿ ಮೋಡವು ಅವರ 7
ಮೇಲೆ ಕವಿಯಿತು. ಆ ಮೋಡದೊಳಗಿಂದ—ಈತನು ಪ್ರಿಯನಾಗಿರುವ ನನ್ನ ಮಗನು;
ಈತನ ಮಾತನ್ನು ಕೇಳಿರಿ ಎಂದು ಆಕಾಶವಾಣಿ ಆಯಿತು. ಫಕ್ಕನೆ ಅವರು ಸುತ್ತಲೂ 8
ನೋಡಿದಾಗ, ತಮ್ಮ ಸಂಗಡ ಯೇಸುವನ್ನೇ ಹೊರತು ಮತ್ತ್ಯಾರನ್ನೂ ಕಾಣಲಿಲ್ಲ.

ಅವರು ಆ ಬೆಟ್ಟದಿಂದ ಇಳಿದುಬರುತ್ತಿರುವಾಗ ಯೇಸು ಅವರಿಗೆ—ನೀವು ಕಂಡಿರು 9
ವದನ್ನು ಮನುಷ್ಯಕುಮಾರನು ಸತ್ತು ಜೀವಿತನಾಗಿ ಎದ್ದುಬರುವತನಕ ಯಾರಿಗೂ
ತಿಳಿಸಬಾರದೆಂದು ಖಂಡಿತವಾಗಿ ಹೇಳಿದನು. ಅವರು ಈ ಮಾತನ್ನು ಹಿಡಿದು, ಸತ್ತು 10
ಜೀವಿತನಾಗಿ ಏಳುವದಂದರೇನು ಎಂದು ತಮ್ಮತಮ್ಮೊಳಗೆ ಮಾತಾಡಿಕೊಂಡರು. ಇದ 11
ಲ್ಲದೆ ಅವರು—ಎಲೀಯನು ಮೊದಲು ಬರುವದು ಅಗತ್ಯ ಎಂಬದಾಗಿ ಶಾಸ್ತ್ರಿಗಳು ಹೇಳು
ತ್ತಾರಲ್ಲಾ, ಇದು ಹ್ಯಾಗೆ? ಎಂದು ಆತನನ್ನು ಕೇಳಿದ್ದಕ್ಕೆ, ಆತನು—ಎಲೀಯನು 12
ಮೊದಲು ಬಂದು ಎಲ್ಲವನ್ನು ತಿರಿಗಿ ಸರಿಮಾಡುವದು ನಿಜ[1]. ಮತ್ತು ಮನುಷ್ಯ
ಕುಮಾರನ ವಿಷಯವಾಗಿ—ಅವನು ಅನೇಕ ಕಷ್ಟಗಳನ್ನನುಭವಿಸಿ ಹೀನೈಸಲ್ಪಡಬೇಕೆಂಬ
ದಾಗಿ ಬರೆದದೆ, ಇದು ಹ್ಯಾಗೆ? ಆದರೆ ನಾನು ನಿಮಗೆ ಹೇಳುವದೇನಂದರೆ—ಎಲೀ 13
ಯನು ಬಂದನು; ಮತ್ತು ಅವನ ವಿಷಯವಾಗಿ ಬರೆದಿರುವ ಪ್ರಕಾರ ಜನರು ತಮ್ಮ ಮನ
ಸ್ಸಿಗೆ ಬಂದಂತೆ ಅವನಿಗೆ ಮಾಡಿದರು ಅಂದನು.

### ಯೇಸು ಮೂರ್ಛಾರೋಗಿಯನ್ನು ಸ್ವಸ್ಥಮಾಡಿದ್ದು.

(ಮತ್ತಾಯ 17, 14—21; ಲೂಕ 9, 37—42.)

ತರುವಾಯ ಅವರು ಉಳಿದ ಶಿಷ್ಯರ ಬಳಿಗೆ ಬಂದು ಅವರ ಸುತ್ತಲು ದೊಡ್ಡ ಗುಂಪು 14
ಇರುವದನ್ನೂ ಅವರ ಸಂಗಡ ಶಾಸ್ತ್ರಿಗಳು ತರ್ಕಮಾಡುವದನ್ನೂ ಕಂಡರು. ಕೂಡಲೆ 15
ಆ ಗುಂಪಿನವರು ಯೇಸುವನ್ನು ಕಂಡು ಬಹು ಆಶ್ಚರ್ಯಪಟ್ಟು, ಆತನ ಬಳಿಗೆ ಓಡಿಬಂದು
ಆತನನ್ನು ವಂದಿಸಿದರು. ಆತನು ಶಾಸ್ತ್ರಿಗಳನ್ನು—ಇವರ ಸಂಗಡ ಏನು ತರ್ಕಮಾಡು 16
ತ್ತೀರಿ? ಎಂದು ಕೇಳಿದ್ದಕ್ಕೆ, ಆ ಗುಂಪಿನಲ್ಲಿ ಒಬ್ಬನು—ಬೋಧಕನೇ, ನನ್ನ ಮಗನನ್ನು 17
ನಿನ್ನ ಬಳಿಗೆ ಕರಕೊಂಡು ಬಂದೆನು; ಅವನಿಗೊಂದು ಮೂಗದೆವ್ವ ಹಿಡಿದದೆ; ಅದು ಎಲ್ಲಿ 18
ಅವನ ಮೇಲೆ ಬಂದರೂ ಅವನನ್ನು ಕೆಡವುತ್ತದೆ; ಆಗ ಅವನು ನೊರೆಸುರಿಸುತ್ತಾ ಕರ
ಕರನೆ ಹಲ್ಲುಕಡಿಯುತ್ತಾ ಕುಂದಿಹೋಗುತ್ತಾನೆ. ಆ ದೆವ್ವವನ್ನು ಬಿಡಿಸಬೇಕೆಂದು ನಿನ್ನ
ಶಿಷ್ಯರಿಗೆ ಹೇಳಿಕೊಂಡೆ; ಅವರ ಕೈಯಿಂದ ಆಗದೆಹೋಯಿತು ಅಂದನು. ಅದಕ್ಕಾ 19
ತನು—ಎಲಾ, ನಂಬಿಕೆಯಿಲ್ಲದಂಥಾ ಸಂತಾನವೇ, ನಾನು ಇನ್ನೆಷ್ಟು ದಿನ ನಿಮ್ಮ ಸಂಗಡ
ಇರಲಿ? ಇನ್ನೆಷ್ಟು ದಿನ ನಿಮ್ಮನ್ನು ಸಹಿಸಿಕೊಳ್ಳಲಿ? ಅವನನ್ನು ನನ್ನ ಬಳಿಗೆ ಕರಕೊಂಡು
ಬನ್ನಿರಿ, ಅನ್ನಲು, ಅವನನ್ನು ಆತನ ಬಳಿಗೆ ತೆಗೆದುಕೊಂಡುಬಂದರು. ಆತನನ್ನು ಕಂಡ 20
ಕೂಡಲೆ ಆ ದೆವ್ವವು ಅವನನ್ನು ಬಹಳವಾಗಿ ಒದ್ದಾಡಿಸಲು, ಅವನು ನೆಲಕ್ಕೆ ಬಿದ್ದು,

[1] ಮಲಕೀಯ ೪, ೫. ೬.

21 ನೊರೆಸುರಿಸುತ್ತಾ ಹೊರಳಾಡಿದನು. ಯೇಸು ಅವನ ತಂದೆಯನ್ನು—ಇದು ಇವನಿಗೆ ಬಂದು ಎಷ್ಟು ದಿನವಾಯಿತು ಎಂದು ಕೇಳಿದಾಗ, ಅವನು—ಚಿಕ್ಕಂದಿನಲ್ಲಿಯೇ ಬಂದಿದೆ;
22 ಮತ್ತು ಇವನನ್ನು ಕೊಲ್ಲಬೇಕೆಂದು ಆಗಾಗ್ಯೆ ಬೆಂಕಿಯಲ್ಲಿಯೂ ನೀರಿನಲ್ಲಿಯೂ ಕೆಡವಿತು; ನಿನ್ನ ಕೈಲಿ ಏನಾದರೂ ಆಗುವಹಾಗಿದ್ದರೆ, ನಮ್ಮ ಮೇಲೆ ಕರುಣವಿಟ್ಟು ನಮಗೆ
23 ಸಹಾಯ ಮಾಡು ಅಂದನು. ಯೇಸು ಅವನಿಗೆ—ನಿನ್ನ ಕೈಲಿ ಆಗುವ ಹಾಗಿದ್ದರೆ,
24 ಅನ್ನುತ್ತೀಯೋ? ನಂಬುವವನಿಗೆ ಎಲ್ಲಾ ಆಗುವದು ಎಂದು ಹೇಳಿದನು. ಕೂಡಲೆ ಆ ಹುಡುಗನ ತಂದೆಯು—ನಂಬುತ್ತೇನೆ, ನನಗೆ ನಂಬಿಕೆ ಕಡಿಮೆಯಾಗಿದ್ದರೂ ಸಹಾಯ
25 ಮಾಡು ಎಂದು ಕೂಗಿ ಹೇಳಿದನು. ಆಗ ಯೇಸು ಜನರ ಗುಂಪು ಓಡಿಬರುವದನ್ನು ಕಂಡು, ಆ ದೆವ್ವವನ್ನು ಗದರಿಸಿ— ಎಲೇ ಕಿವುಡಾದ ಮೂಗದೆವ್ವವೇ, ಇವನನ್ನು ಬಿಟ್ಟು ಹೋಗು; ಇನ್ನು ಮುಂದೆ ಹಿಡುಕೊಳ್ಳಬೇಡವೆಂದು ನಾನು ನಿನಗೆ ಅಪ್ಪಣೆಕೊಡುತ್ತೇನೆ
26 ಅಂದನು. ಆಗ ಅದು ಅಬ್ಬರಿಸಿ, ಅವನನ್ನು ಒದ್ದಾಡಿಸಿ, ಬಿಟ್ಟುಹೋಯಿತು. ಆ
27 ಹುಡುಗನು ಸತ್ತಹಾಗೆ ಬಿದ್ದಿದ್ದರಿಂದ ಬಹುಜನರು—ಸತ್ತುಹೋದ ಅಂದರು. ಆದರೆ
28 ಯೇಸು ಅವನನ್ನು ಕೈಹಿಡಿದು ಎಬ್ಬಿಸಲು, ಅವನು ಎದ್ದು ನಿಂತನು. ಯೇಸು ಮನೆಗೆ ಬಂದಾಗ, ಆತನ ಶಿಷ್ಯರು—ಅದನ್ನು ಬಿಡಿಸುವದಕ್ಕೆ ನಮ್ಮಿಂದ ಯಾಕೆ ಆಗಲಾರದೆ
29 ಹೋಯಿತು ಎಂದು ಆತನನ್ನು ಏಕಾಂತದಲ್ಲಿ ಕೇಳಲು, ಆತನು—ಈ ಜಾತಿಯು ದೇವರ ಪ್ರಾರ್ಥನೆಯಿಂದಲೇ ಹೊರತು ಬೇರೆ ಯಾತರಿಂದಲೂ ಬಿಟ್ಟುಹೋಗುವದಿಲ್ಲವೆಂದು ಅವರಿಗೆ ಹೇಳಿದನು.

### ಯೇಸು ತನ್ನ ಮರಣ ಪುನರುತ್ಥಾನಗಳನ್ನು ಎರಡನೇ ಸಾರಿ ಮುಂದಾಗಿ ತಿಳಿಸಿದ್ದು.

(ಮತ್ತಾಯ 17, 22. 23; ಲೂಕ 9, 43—45.)

30 ಅಲ್ಲಿಂದ ಅವರು ಹೊರಟು ಗಲಿಲಾಯವನ್ನು ಹಾದು ಹೋಗುತ್ತಿದ್ದರು. ಇದು
31 ಜನರಿಗೆ ಗೊತ್ತಾಗಬಾರದೆಂದು ಆತನಿಗೆ ಮನಸ್ಸಿತ್ತು. ಯಾಕಂದರೆ ಆತನು ತನ್ನ ಶಿಷ್ಯರಿಗೆ ಉಪದೇಶಮಾಡುತ್ತಾ—ಮನುಷ್ಯಕುಮಾರನು ಜನರ ಕೈಗೆ ಒಪ್ಪಿಸಲ್ಪಡುತ್ತಾನೆ; ಅವರು ಅವನನ್ನು ಕೊಲ್ಲುವರು; ಕೊಂದ ಮೂರು ದಿನದ ಮೇಲೆ ಆತನು ಜೀವಿತನಾಗಿ
32 ಎದ್ದು ಬರುವನೆಂದು[1] ಹೇಳಿದನು. ಈ ಮಾತನ್ನು ಅವರು ಗ್ರಹಿಸಲಿಲ್ಲ, ಆದರೆ ಆತನನ್ನು ಕೇಳುವದಕ್ಕೆ ಅಂಜಿದರು.

### ಯೇಸು ತನ್ನ ಶಿಷ್ಯರಿಗೆ ದೀನಭಾವ ಇರಬೇಕೆಂತಲೂ ಪಾಪದಲ್ಲಿ ಸಿಕ್ಕಿಸುವಂಥಾದ್ದನ್ನು ತೆಗೆದು ಹಾಕಬೇಕೆಂತಲೂ ಬೋಧಿಸಿದ್ದು.

(ಮತ್ತಾಯ 18, 1—9; ಲೂಕ 9, 46—50.)

33 ಮತ್ತು ಅವರು ಕಪೆರ್ನೌಮಿಗೆ ಬಂದರು. ಅಲ್ಲಿ ಆತನು ಮನೆಯಲ್ಲಿದ್ದಾಗ—ನೀವು
34 ದಾರಿಯಲ್ಲಿ ಏನು ಮಾತಾಡಿಕೊಳ್ಳುತ್ತಿದ್ದಿರಿ ಎಂದು ಶಿಷ್ಯರನ್ನು ಕೇಳಲು, ಅವರು ಸುಮ್ಮ

[1] ಹೊಶೇಯ ೬, ೨.

ನಿದ್ದರು; ಯಾಕಂದರೆ ಅವರು ದಾರಿಯಲ್ಲಿ ಒಬ್ಬರಕೂಡೊಬ್ಬರು—ತಮ್ಮಲ್ಲಿ ಯಾವನು
ಹೆಚ್ಚಿನವನೆಂದು ವಾಗ್ವಾದ ಮಾಡಿಕೊಂಡಿದ್ದರು. ಆತನು ಕೂತುಕೊಂಡು, ತನ್ನ ಹನ್ನೆ 35
ರಡು ಮಂದಿ ಶಿಷ್ಯರನ್ನು ಕರೆದು, ಅವರಿಗೆ—ಯಾವನಾದರೂ ಮೊದಲಿನವನಾಗಬೇಕೆಂದಿ
ದ್ದರೆ, ಅವನು ಎಲ್ಲರಲ್ಲಿ ಕಡೆಯವನೂ ಎಲ್ಲರ ಆಳೂ ಆಗಿರಬೇಕು ಎಂದು ಹೇಳಿ,
ಒಂದು ಚಿಕ್ಕ ಮಗುವನ್ನು ತೆಗೆದುಕೊಂಡು, ಅವರ ನಡುವೆ ನಿಲ್ಲಿಸಿ ಅಪ್ಪಿಕೊಂಡು ಅವ 36
ರಿಗೆ—ಯಾವನಾದರೂ ನನ್ನ ಹೆಸರಿನಲ್ಲಿ ಇಂಥಾ ಚಿಕ್ಕ ಮಕ್ಕಳಲ್ಲಿ ಒಂದನ್ನು ಸೇರಿಸಿ 37
ಕೊಂಡರೆ, ನನ್ನನ್ನು ಸೇರಿಸಿಕೊಂಡ ಹಾಗಾಯಿತು; ಮತ್ತು ಯಾವನಾದರೂ ನನ್ನನ್ನು
ಸೇರಿಸಿಕೊಂಡರೆ, ನನ್ನನ್ನು ಮಾತ್ರ ಸೇರಿಸಿಕೊಂಡ ಹಾಗಲ್ಲ, ನನ್ನನ್ನು ಕಳುಹಿಸಿಕೊಟ್ಟಾತ
ನನ್ನು ಸೇರಿಸಿಕೊಂಡ ಹಾಗಾಯಿತು ಎಂದು ಹೇಳಿದನು.

ಯೋಹಾನನು ಆತನಿಗೆ—ಗುರುವೇ, ಯಾವನೋ ಒಬ್ಬನು ನಿನ್ನ ಹೆಸರನ್ನು ಹೇಳಿ 38
ದೆವ್ವಬಿಡಿಸುವದನ್ನು ನಾವು ಕಂಡು, ಅವನು ನಮಗೆ ಸೇರಿದವನಲ್ಲವಾದ್ದರಿಂದ ಅವನಿಗೆ
ಅಡ್ಡಿಮಾಡಿದೆವು ಎಂದು ಹೇಳಲಾಗಿ, ಯೇಸು—ಅವನಿಗೆ ಅಡ್ಡಿಮಾಡಬೇಡಿರಿ; ನನ್ನ ಹೆಸ 39
ರಿನ ಮೇಲೆ ಮಹತ್ತನ್ನು ಮಾಡಿ, ಏಕಾಏಕಿ ನನ್ನನ್ನು ದೂಷಿಸುವವನು ಒಬ್ಬನೂ ಇಲ್ಲ.
ನಮ್ಮನ್ನು ಎದುರಿಸದವನು ನಮ್ಮ ಪಕ್ಷದವನಾಗಿದ್ದಾನಷ್ಟೆ. ನೀವು ಕ್ರಿಸ್ತನವರೆಂದು 40, 41
ನಿಮಗೆ ಯಾವನಾದರೂ ಒಂದು ತಂಬಿಗೆ ನೀರನ್ನು ಕುಡಿಯುವದಕ್ಕೆ ಕೊಟ್ಟರೆ, ಅವನಿಗೆ
ಬರತಕ್ಕ ಪ್ರತಿಫಲವು ತಪ್ಪುವದೇ ಇಲ್ಲವೆಂದು ನಿಮಗೆ ಸತ್ಯವಾಗಿ ಹೇಳುತ್ತೇನೆ. ಮತ್ತು 42
ನಂಬುವ ಈ ಚಿಕ್ಕವರಲ್ಲಿ ಒಬ್ಬನಿಗೆ ಯಾವನಾದರೂ ಅಡ್ಡಿಯಾದರೆ, ಅಂಥವನ ಕೊರ
ಳಿಗೆ ಬೀಸುವ ಕಲ್ಲು ಕಟ್ಟಿ ಅವನನ್ನು ಸಮುದ್ರದಲ್ಲಿ ಹಾಕಿದರೂ ಅವನಿಗೆ ಲೇಸು.
ಇದಲ್ಲದೆ ನಿನ್ನ ಕೈ ನಿನ್ನನ್ನು ಪಾಪದಲ್ಲಿ ಸಿಕ್ಕಿಸುವದಾದರೆ ಅದನ್ನು ಕತ್ತರಿಸಿಬಿಡು; 43
ಎರಡು ಕೈಯುಳ್ಳವನಾಗಿದ್ದು ಆರದ ಬೆಂಕಿಯಾಗಿರುವ ನರಕದಲ್ಲಿ ಬೀಳುವದಕ್ಕಿಂತ
ಕೈಕಳಕೊಂಡವನಾಗಿ ಜೀವದಲ್ಲಿ ಸೇರುವದು ನಿನಗೆ ಉತ್ತಮ[1]. ಮತ್ತು ನಿನ್ನ ಕಾಲು 45
ನಿನ್ನನ್ನು ಪಾಪದಲ್ಲಿ ಸಿಕ್ಕಿಸುವದಾದರೆ, ಅದನ್ನು ಕತ್ತರಿಸಿಬಿಡು; ಎರಡು ಕಾಲುಳ್ಳವ
ನಾಗಿದ್ದು ನರಕದಲ್ಲಿ ಹಾಕಿಸಿಕೊಳ್ಳುವದಕ್ಕಿಂತ ಕಾಲು ಕಳಕೊಂಡವನಾಗಿ ಜೀವದಲ್ಲಿ
ಸೇರುವದು ನಿನಗೆ ಉತ್ತಮ. ನಿನ್ನ ಕಣ್ಣು ನಿನ್ನನ್ನು ಪಾಪದಲ್ಲಿ ಸಿಕ್ಕಿಸುವದಾದರೆ, 47
ಅದನ್ನು ಕಿತ್ತುಬಿಸಾಡು; ಎರಡು ಕಣ್ಣುಳ್ಳವನಾಗಿದ್ದು ನರಕದಲ್ಲಿ ಹಾಕಿಸಿಕೊಳ್ಳುವದ
ಕ್ಕಿಂತ ಒಂದೇ ಕಣ್ಣುಳ್ಳವನಾಗಿದ್ದು ದೇವರ ರಾಜ್ಯದಲ್ಲಿ ಸೇರುವದು ನಿನಗೆ ಉತ್ತಮ.
ನರಕದಲ್ಲಿ ಅವರನ್ನು ಕಡಿಯುವ ಹುಳ ಸಾಯುವದಿಲ್ಲ, ಬೆಂಕಿ ಆರುವದಿಲ್ಲ[2]. ಪ್ರತಿ 48, 49
ಯೊಬ್ಬನಿಗೂ ಬೆಂಕಿಯೆಂಬ ಉಪ್ಪಿನ ಹದವು ಕೊಡಲ್ಪಡಬೇಕು. ಉಪ್ಪು ಒಳ್ಳೇ ಪದಾ 50
ರ್ಥವೇ; ಅದು ಸಪ್ಪೆಯಾದರೆ, ಅದನ್ನು ಇನ್ನ್ಯಾತರಿಂದ ರುಚಿಗೊಳ್ಳಿಸುವಿರಿ? ನಿಮ್ಮೊಳಗೆ
ಉಪ್ಪು ಇರಲಿ, ಒಬ್ಬರಿಗೊಬ್ಬರು ಸಮಾಧಾನದಿಂದಿರ್ರಿ.

---

1) ೪೪ನೇ ಮತ್ತು ೪೬ನೇ ವಚನಗಳು ಉತ್ತಮ ಪ್ರತಿಗಳಲ್ಲಿ ಇಲ್ಲ, ಅವೆರಡೂ ೪೮ನೇ ವಚನಕ್ಕೆ ಸಮವಾಗಿವೆ.
2) ಯೆಶಾಯ ೬೬, ೨೪.

ಹೆಂಡತಿಯ ಪರಿತ್ಯಾಗದ ವಿಷಯವಾಗಿ ಯೇಸು ಉತ್ತರ ಕೊಟ್ಟದ್ದು.

(ಮತ್ತಾಯ 19, 1—9; ಲೂಕ 16, 18.)

10 ಅಲ್ಲಿಂದ ಆತನು ಎದ್ದು ಯೊರ್ದನ್ ಹೊಳೆಯ ಆಚೇಸೀಮೆಯನ್ನು ದಾಟಿ, ಯೂದಾಯ ಪ್ರಾಂತ್ಯಕ್ಕೆ ಬಂದನು. ಅಲ್ಲಿ ಜನರು ತಿರಿಗಿ ಗುಂಪುಗುಂಪಾಗಿ ಆತನ ಬಳಿಗೆ ಕೂಡಿಬರಲು, ಆತನು ತಿರಿಗಿ ಎಂದಿನಂತೆ ಅವರಿಗೆ ಉಪದೇಶಮಾಡುತ್ತಿದ್ದನು.
2 ಆಗ ಫರಿಸಾಯರು ಹತ್ತರಕ್ಕೆ ಬಂದು, ಆತನನ್ನು ಪರೀಕ್ಷಿಸಬೇಕೆಂಬ ಯೋಚನೆಯಿಂದ— ಒಬ್ಬನು ಹೆಂಡತಿಯನ್ನು ಬಿಟ್ಟುಬಿಡುವದು ಧರ್ಮವೋ ಹ್ಯಾಗೆ ಎಂದು ಕೇಳಿದರು.
3, 4 ಆತನು ಅದಕ್ಕೆ—ಮೋಶೆ ನಿಮಗೆ ಏನು ಆಜ್ಞೆ ಕೊಟ್ಟನು ಅನ್ನಲಾಗಿ, ಅವರು—ಬಿಡು ಗಡೆಯ ಪತ್ರವನ್ನು ಬರೆದುಕೊಟ್ಟು ಆಕೆಯನ್ನು ಬಿಟ್ಟುಬಿಡಬಹುದೆಂದು[1] ಮೋಶೆಯು
5 ಅಪ್ಪಣೆ ಕೊಟ್ಟನು ಅಂದರು. ಆದರೆ ಯೇಸು ಅವರಿಗೆ—ಅವನು ನಿಮ್ಮ ಮೊಂಡತನ
6 ವನ್ನು ನೋಡಿ ನಿಮಗೆ ಇಂಥಾ ಆಜ್ಞೆಯನ್ನು ಬರೆದಿಟ್ಟನು. ಸೃಷ್ಟಿಯ ಮೊದಲಿಂದ ಹಾಗಲ್ಲ;—ದೇವರು ಮನುಷ್ಯರನ್ನು ಗಂಡುಹೆಣ್ಣಾಗಿ ನಿರ್ಮಾಣಮಾಡಿದನೆಂತಲೂ[2]
7 ಇದರ ನಿಮಿತ್ತವಾಗಿ ಪುರುಷನು ತನ್ನ ತಂದೆತಾಯಿಗಳನ್ನು ಬಿಟ್ಟು ತನ್ನ ಹೆಂಡತಿಯನ್ನು
8 ಸೇರಿಕೊಂಡು ಅವರಿಬ್ಬರು ಒಂದೇ ಶರೀರವಾಗಿರುವರೆಂತಲೂ[3] ಬರೆದದೆ. ಹೀಗಿರುವಲ್ಲಿ
9 ಅವರು ಇನ್ನು ಇಬ್ಬರಲ್ಲ, ಒಂದೇ ಶರೀರವಾಗಿದ್ದಾರಲ್ಲಾ. ಆದದರಿಂದ ದೇವರು ಕೂಡಿ
10 ಸಿದ್ದನ್ನು ಮನುಷ್ಯರು ಅಗಲಿಸಬಾರದು ಎಂದು ಹೇಳಿದನು. ಮನೆಯಲ್ಲಿ ಆತನ ಶಿಷ್ಯರು
11 ಈ ವಿಷಯದಲ್ಲಿ ಆತನನ್ನು ತಿರಿಗಿ ಕೇಳಿದಾಗ, ಆತನು ಅವರಿಗೆ—ತನ್ನ ಹೆಂಡತಿಯನ್ನು ಬಿಟ್ಟು ಬೇರೊಬ್ಬಳನ್ನು ಮದುವೆಮಾಡಿಕೊಳ್ಳುವವನು ತನ್ನ ಹೆಂಡತಿಗೆ ದ್ರೋಹಿಯಾಗಿ
12 ವ್ಯಭಿಚಾರ ಮಾಡುವವನಾಗುತ್ತಾನೆ; ಮತ್ತು ಹೆಂಡತಿಯು ತನ್ನ ಗಂಡನನ್ನು ಬಿಟ್ಟು ಬೇರೊಬ್ಬನನ್ನು ಮದುವೆಮಾಡಿಕೊಂಡರೆ, ಅವಳು ವ್ಯಭಿಚಾರ ಮಾಡುವವಳಾಗುತ್ತಾಳೆ ಎಂದು ಹೇಳಿದನು.

ಯೇಸು ಚಿಕ್ಕ ಮಕ್ಕಳನ್ನು ಆಶೀರ್ವದಿಸಿದ್ದು.

(ಮತ್ತಾಯ 19, 13—15; ಲೂಕ 18, 15—17.)

13 ಬಳಿಕ ಕೆಲವರು ತಮ್ಮ ಚಿಕ್ಕ ಮಕ್ಕಳನ್ನು ಯೇಸುವಿನಿಂದ ಮುಟ್ಟಿಸಬೇಕೆಂದು ಆತನ
14 ಬಳಿಗೆ ತೆಗೆದುಕೊಂಡು ಬರಲು, ಶಿಷ್ಯರು ತಂದವರನ್ನು ಗದರಿಸಿದರು. ಆದರೆ ಯೇಸು ಅದನ್ನು ಕಂಡು, ಕೋಪಗೊಂಡು ಅವರಿಗೆ—ಚಿಕ್ಕ ಮಕ್ಕಳನ್ನು ನನ್ನ ಹತ್ತರಕ್ಕೆ ಬರ
15 ಗೊಡಿಸಿರಿ; ಅವುಗಳಿಗೆ ಅಡ್ಡಿಮಾಡಬೇಡಿರಿ; ದೇವರ ರಾಜ್ಯವು ಇಂಥವರದೇ. ನಿಮಗೆ ಸತ್ಯವಾಗಿ ಹೇಳುತ್ತೇನೆ, ಯಾವನು ಚಿಕ್ಕ ಮಗುವಿಗೆ ಸಮಾನನಾಗಿ ದೇವರ ರಾಜ್ಯ
16 ವನ್ನು ಅಂಗೀಕರಿಸುವದಿಲ್ಲವೋ ಅವನು ಅದರಲ್ಲಿ ಸೇರುವದೇ ಇಲ್ಲ ಎಂದು ಹೇಳಿ, ಅವು ಗಳನ್ನು ಅಪ್ಪಿಕೊಂಡು, ಅವುಗಳ ಮೇಲೆ ಕೈಯಿಟ್ಟು, ಆಶೀರ್ವದಿಸಿದನು.

1) ದ್ವಿತೀಯ ನ್ಯಾಯ ೨೪, ೧. 2) ಉತ್ಪತ್ತಿ ೧, ೨೭. 3) ಉತ್ಪತ್ತಿ ೨, ೨೪.

### ಯೇಸು ಹಣದ ಭ್ರಮೆಯಿಂದಾಗುವ ಕೇಡನ್ನು ತೋರಿಸಿದ್ದು.

(ಮತ್ತಾಯ 19, 16—30; ಲೂಕ 18, 18—30.)

ಆತನು ಹೊರಟು ದಾರೀಹಿಡಿದು ಹೋಗುವಾಗ, ಒಬ್ಬನು ಓಡುತ್ತಾ ಆತನ ಎದು 17
ರಿಗೆ ಬಂದು, ಮೊಣಕಾಲೂರಿ—ಒಳ್ಳೇ ಬೋಧಕನೇ, ನಾನು ನಿತ್ಯಜೀವಕ್ಕೆ ಬಾಧ್ಯಸ್ಥ
ನಾಗಬೇಕಾದರೆ ಏನು ಮಾಡಬೇಕೆಂದು ಆತನನ್ನು ಕೇಳಿದ್ದಕ್ಕೆ, ಯೇಸು—ನನ್ನನ್ನು 18
ಒಳ್ಳೆಯವನೆಂದು ಯಾಕೆ ಹೇಳುತ್ತೀ? ದೇವರೊಬ್ಬನೇ ಹೊರತು ಮತ್ತ್ಯಾವನೂ ಒಳ್ಳೆ
ಯವನಲ್ಲ. ನರಹತ್ಯ ಮಾಡಬಾರದು; ವ್ಯಭಿಚಾರಮಾಡಬಾರದು; ಕದಿಯಬಾರದು; 19
ಸುಳ್ಳುಸಾಕ್ಷಿ ಹೇಳಬಾರದು; ಮೋಸಮಾಡಬಾರದು; ನಿನ್ನ ತಂದೆತಾಯಿಗಳನ್ನು ಸನ್ಮಾ
ನಿಸಬೇಕು ಎಂಬ ದೇವರಾಜ್ಞೆಗಳು[1] ನಿನಗೆ ಗೊತ್ತಿವೆಯಷ್ಟೆ ಅಂದನು. ಅವನು ಆತ 20
ನಿಗೆ—ಬೋಧಕನೇ, ನಾನು ಚಿಕ್ಕಂದಿನಿಂದಲೂ ಇವೆಲ್ಲಕ್ಕೂ ಸರಿಯಾಗಿ ನಡಕೊಂಡು
ಬಂದಿದ್ದೇನೆ ಎಂದು ಹೇಳಲು, ಯೇಸು ಅವನನ್ನು ದೃಷ್ಟಿಸಿನೋಡಿ, ಪ್ರೀತಿಸಿ—ನಿನಗೆ 21
ಒಂದು ಕಡಿಮೆಯಾಗಿದೆ; ಹೋಗು, ನಿನ್ನ ಬದುಕನ್ನು ಮಾರಿ, ಬಡವರಿಗೆ ಕೊಡು;
ಪರಲೋಕದಲ್ಲಿ ನಿನಗೆ ಸಂಪತ್ತು ಇರುವದು; ನೀನು ನನ್ನನ್ನು ಹಿಂಬಾಲಿಸು ಅಂದನು.
ಆದರೆ ಅವನು ಬಹಳ ಆಸ್ತಿಯುಳ್ಳವನಾದ್ದರಿಂದ ಆ ಮಾತನ್ನು ಕೇಳಿದಾಗ ಮೋರೆಬಾಡಿ 22
ದವನಾಗಿ ದುಃಖದಿಂದ ಹೊರಟುಹೋದನು.

ಆಗ ಯೇಸು ಸುತ್ತಲೂ ನೋಡಿ, ತನ್ನ ಶಿಷ್ಯರಿಗೆ—ಧನವಂತರು ದೇವರ ರಾಜ್ಯದಲ್ಲಿ 23
ಸೇರುವದು ಎಷ್ಟೋ ಕಷ್ಟ ಎಂದು ಹೇಳಿದನು. ಶಿಷ್ಯರು ಆತನ ಮಾತುಗಳನ್ನು ಕೇಳಿ 24
ಬೆರಗಾದರು. ಯೇಸು ತಿರಿಗಿ ಅವರಿಗೆ—ಮಕ್ಕಳಿರಾ, ದೇವರ[2] ರಾಜ್ಯದಲ್ಲಿ ಸೇರು
ವದು ಎಷ್ಟೋ ಕಷ್ಟ. ಐಶ್ವರ್ಯವಂತನು ದೇವರ ರಾಜ್ಯದಲ್ಲಿ ಸೇರುವದಕ್ಕಿಂತ 25
ಒಂಟೆಯು ಸೂಜೀ ಕಣ್ಣಿನಲ್ಲಿ ನುಗ್ಗುವದು ಸುಲಭ ಎಂದು ಹೇಳಿದನು. ಈ ಮಾತಿಗೆ 26
ಅವರು ಇನ್ನಷ್ಟಾಶ್ಚರ್ಯಪಟ್ಟು—ಹೀಗಿದ್ದರೆ ಯಾರಿಗೆ ರಕ್ಷಣೆಯಾದೀತು ಎಂದು ತಮ್ಮ
ತಮ್ಮೊಳಗೆ ಹೇಳಿಕೊಳ್ಳಲು, ಯೇಸು ಅವರನ್ನು ದೃಷ್ಟಿಸಿ ನೋಡಿ—ಇದು ಮನುಷ್ಯರಿಗೆ 27
ಅಸಾಧ್ಯ; ದೇವರಿಗೆ ಅಸಾಧ್ಯವಲ್ಲ; ದೇವರಿಗೆ ಎಲ್ಲವು ಸಾಧ್ಯವೇ ಅಂದನು. ಪೇತ್ರನು 28
ಆತನಿಗೆ—ಇಗೋ, ನಾವು ಎಲ್ಲಾ ಬಿಟ್ಟುಬಿಟ್ಟು ನಿನ್ನನ್ನು ಹಿಂಬಾಲಿಸಿದ್ದೇವೆ ಎಂದು ಹೇಳು
ವದಕ್ಕೆ ಪ್ರಾರಂಭಿಸಲು, ಯೇಸು—ನಿಮಗೆ ಸತ್ಯವಾಗಿ ಹೇಳುತ್ತೇನೆ, ನನ್ನ ನಿಮಿತ್ತವಾ 29
ಗಿಯೂ ಸುವಾರ್ತೆಯ ನಿಮಿತ್ತವಾಗಿಯೂ ಮನೆಯನ್ನಾಗಲಿ ಅಣ್ಣತಮ್ಮಂದಿರನ್ನಾಗಲಿ ಅಕ್ಕ
ತಂಗಿಯರನ್ನಾಗಲಿ ತಾಯಿತಂದೆಗಳನ್ನಾಗಲಿ ಮಕ್ಕಳನ್ನಾಗಲಿ ಭೂಮಿಯನ್ನಾಗಲಿ ಬಿಟ್ಟುಬಿಟ್ಟಿ
ರುವವನಿಗೆ ಈಗಿನ ಕಾಲದಲ್ಲಿ ಮನೆ ಅಣ್ಣ ತಮ್ಮ ಅಕ್ಕ ತಂಗಿ ತಾಯಿ ಮಕ್ಕಳು ಭೂಮಿ 30
ಇವೆಲ್ಲವೂ ಹಿಂಸೆಗಳು ಸಹಿತವಾಗಿ ನೂರರಷ್ಟು ಸಿಕ್ಕೇ ಸಿಕ್ಕುತ್ತವೆ; ಮತ್ತು ಮುಂದಣ
ಲೋಕದಲ್ಲಿ ನಿತ್ಯಜೀವವು ದೊರೆಯುವದು. ಆದರೆ ಬಹು ಮಂದಿ ಮೊದಲಿನವರು 31
ಕಡೆಯವರಾಗುವರು, ಕಡೆಯವರು ಮೊದಲಿನವರಾಗುವರು ಎಂದು ಹೇಳಿದನು.

---

[1] ಹೊರಡೋಣ ೨೦, ೧೨—೧೬. [2] ಕೆಲವು ಪ್ರತಿಗಳಲ್ಲಿ—ಧನವನ್ನು ನಂಬಿಕೊಂಡಿರುವವರು ಎಂಬ ಮಾತು ಹೆಚ್ಚಾಗಿ ಸೇರಿಸಿ ಅದೆ; ಸಾಮತಿ ೧೧, ೨೮ ನೋಡು.

ಯೇಸು ತನ್ನ ಮರಣ ಪುನರುತ್ಥಾನಗಳನ್ನು ಮೂರನೇ ಸಾರಿ ಮುಂದಾಗಿ ತಿಳಿಸಿದ್ದು.

(ಮತ್ತಾಯ 20, 17—19; ಲೂಕ 18, 31—34.)

32 ಅವರು ಯೆರೂಸಲೇಮಿನ ದಾರಿಯನ್ನು ಹಿಡಿದು ಹೋಗುತ್ತಿರುವಾಗ ಯೇಸು ಅವರ ಮುಂದೆಮುಂದೆ ಹೋಗುತ್ತಿದ್ದನು. ಅವರು ನೋಡಿ ಬೆರಗಾದರು; ಆತನ ಹಿಂದೆ ಬರುವವರು ಭಯಪಡುವವರಾದರು. ಆಗ ಆತನು ತನ್ನ ಹನ್ನೆರಡು ಮಂದಿ ಶಿಷ್ಯರನ್ನು 33 ತಿರಿಗಿ ಒತ್ತಟ್ಟಿಗೆ ಕರೆದು, ಮುಂದೆ ತನಗಾಗುವದನ್ನು ಹೇಳುವದಕ್ಕೆ ತೊಡಗಿ—ನೋಡಿರಿ, ನಾವು ಯೆರೂಸಲೇಮಿಗೆ ಹೋಗುತ್ತಾ ಇದ್ದೇವೆ. ಅಲ್ಲಿ ಮನುಷ್ಯಕುಮಾರನನ್ನು ಮಹಾಯಾಜಕರ ಮತ್ತು ಶಾಸ್ತ್ರಿಗಳ ಕೈಗೆ ಹಿಡುಕೊಡುವರು. ಅವರು ಅವನಿಗೆ 34 ಮರಣದಂಡನೆಯನ್ನು ವಿಧಿಸಿ, ಅವನನ್ನು ಅನ್ಯರ ಕೈಗೆ ಒಪ್ಪಿಸುವರು. ಇವರು ಅವನನ್ನು ಅಪಹಾಸ್ಯಮಾಡುವರು, ಅವನ ಮೇಲೆ ಉಗುಳುವರು, ಅವನನ್ನು ಕೊರಡೆಗಳಿಂದ ಹೊಡೆಯುವರು, ಕಡೆಗೆ ಕೊಂದುಹಾಕುವರು. ಅವನು ಮೂರು ದಿನದ ಮೇಲೆ ಜೀವಿತನಾಗಿ ಎದ್ದು ಬರುವನು[1] ಅಂದನು.

ಯೇಸು ತನ್ನ ಶಿಷ್ಯರಿಗೆ ದೀನಭಾವವಿರಬೇಕೆಂದು ಬೋಧಿಸಿದ್ದು.

(ಮತ್ತಾಯ 20, 20—28.)

35 ಆಗ ಜೆಬೆದಾಯನ ಮಕ್ಕಳಾದ ಯಾಕೋಬ ಯೋಹಾನರು ಆತನ ಬಳಿಗೆ ಬಂದು, ಆತನಿಗೆ—ಗುರುವೇ, ನಾವು ಒಂದನ್ನು ಕೇಳಿಕೊಳ್ಳುತ್ತೇವೆ; ಅದನ್ನು ನಮಗೋಸ್ಕರ 36 ನಡಿಸಿಕೊಡಬೇಕೆಂದು ಹೇಳಿದರು. ನಾನು ನಿಮಗೆ ಏನು ನಡಿಸಿಕೊಡಬೇಕೆಂದು 37 ಆತನು ಅವರನ್ನು ಕೇಳಲು, ಅವರು—ನಿನಗೆ ಮಹಾಪದವಿ ಬಂದಾಗ ನಮ್ಮಲ್ಲಿ ಒಬ್ಬನು ನಿನ್ನ ಬಲಗಡೆಯಲ್ಲಿ, ಮತ್ತೊಬ್ಬನು ನಿನ್ನ ಎಡಗಡೆಯಲ್ಲಿ ಕೂತುಕೊಳ್ಳುವಂತೆ ನಮಗೆ 38 ಅನುಗ್ರಹ ಮಾಡಬೇಕು ಅಂದರು. ಆದರೆ ಯೇಸು ಅವರನ್ನು—ನೀವು ಬೇಡಿಕೊಂಡದ್ದು ಏನೆಂದು ನಿಮಗೆ ತಿಳಿಯದು; ನಾನು ಕುಡಿಯುವ ಪಾತ್ರೆಯಲ್ಲಿ ಕುಡಿಯುವದು ನಿಮ್ಮಿಂದಾದೀತೇ? ನನಗಾಗುವ ದೀಕ್ಷಾಸ್ನಾನವನ್ನು ಹೊಂದುವದು ನಿಮ್ಮಿಂದಾ 39 ದೀತೇ ಎಂದು ಕೇಳಲು, ಅವರು—ಆಗುವದು ಅಂದರು. ಆಗ ಯೇಸು ಅವರಿಗೆ—ನಾನು ಕುಡಿಯುವ ಪಾತ್ರೆಯಲ್ಲಿ ಕುಡಿಯುವಿರಿ; ನನಗಾಗುವ ಸ್ನಾನವು ನಿಮಗಾಗು 40 ವದು; ಆದರೆ ನನ್ನ ಬಲಗಡೆಯಲ್ಲಾದರೂ ನನ್ನ ಎಡಗಡೆಯಲ್ಲಾದರೂ ಕೂತುಕೊಳ್ಳುವಂತೆ ಅನುಗ್ರಹಮಾಡುವದು ನನ್ನದಲ್ಲ; ಆ ಪದವಿಯು ಯಾರಿಗೆ ಸಿದ್ಧಮಾಡಿರುವದೋ 41 ಅವರಿಗೇ ಸಿಕ್ಕುವದು ಎಂದು ಹೇಳಿದನು. ಉಳಿದ ಹತ್ತು ಮಂದಿ ಶಿಷ್ಯರು ಇದನ್ನು 42 ಕೇಳಿ, ಯಾಕೋಬ ಯೋಹಾನರ ಮೇಲೆ ಕೋಪಗೊಂಡರು. ಯೇಸು ಅವರನ್ನು ಹತ್ತರಕ್ಕೆ ಕರೆದು, ಅವರಿಗೆ—ಜನಗಳನ್ನಾಳುವವರೆನ್ನಿಸಿಕೊಳ್ಳುವವರು ಅವರ ಮೇಲೆ ಅಹಂಕಾರದಿಂದ ದೊರೆತನಮಾಡುತ್ತಾರೆ, ಮತ್ತು ಅವರೊಳಗೆ ದೊಡ್ಡವರು ಬಲಾತ್ಕಾರ

[1] ಹೊಶೇಯ ೬, ೨.

ದಿಂದ ಅಧಿಕಾರ ನಡಸುತ್ತಾರೆ ಎಂದು ನೀವು ಬಲ್ಲಿರಷ್ಟೆ; ಆದರೆ ನಿಮ್ಮಲ್ಲಿ ಹಾಗಿರಬಾರದು; 43
ನಿಮ್ಮಲ್ಲಿ ದೊಡ್ಡವನಾಗಬೇಕೆಂದಿರುವವನು ನಿಮ್ಮ ಸೇವಕನಾಗಿರಬೇಕು; ನಿಮ್ಮಲ್ಲಿ ಮೊದ 44
ಲನೆಯವನಾಗಬೇಕೆಂದಿರುವವನು ಎಲ್ಲರ ಆಳಾಗಿರಬೇಕು. ಮನುಷ್ಯಕುಮಾರನು ಸಹ 45
ಸೇವೆಮಾಡಿಸಿಕೊಳ್ಳುವದಕ್ಕೆ ಬರಲಿಲ್ಲ, ಸೇವೆಮಾಡುವದಕ್ಕೂ ಅನೇಕರನ್ನು ಬಿಡಿಸಿ
ಕೊಳ್ಳುವದಕ್ಕಾಗಿ ತನ್ನ ಪ್ರಾಣವನ್ನು ಈಡುಕೊಡುವದಕ್ಕೂ ಬಂದನು ಎಂದು ಹೇಳಿದನು.

ಯೇಸು ಬಾರ್ತಿಮಾಯನೆಂಬ ಒಬ್ಬ ಕುರುಡನಿಗೆ ದೃಷ್ಟಿಕೊಟ್ಟದ್ದು.

**(ಮತ್ತಾಯ 20, 29—34; ಲೂಕ 18, 35—43.)**

ಆ ಮೇಲೆ ಅವರು ಯೆರಿಕೋವೆಂಬ ಊರಿಗೆ ಬಂದರು. ಆತನೂ ಆತನ ಶಿಷ್ಯರೂ 46
ಬಹುಜನರ ಗುಂಪೂ ಆ ಊರನ್ನು ಬಿಟ್ಟುಹೋಗುವಾಗ, ತಿಮಾಯನ ಮಗನಾದ
ಬಾರ್ತಿಮಾಯನು ದಾರಿಯ ಮಗ್ಗುಲಲ್ಲಿ ಕೂತಿದ್ದನು. ಅವನು ಕುರುಡ ಭಿಕ್ಷಗಾರನು.
ಈ ಮಾರ್ಗವಾಗಿ ಹೋಗುವವನು ನಜರೇತಿನ ಯೇಸುವೆಂದು ಅವನು ಕೇಳಿ—ದಾವೀ 47
ದನ ಕುಮಾರನೇ, ಯೇಸುವೇ, ನನ್ನನ್ನು ಕರುಣಿಸು ಎಂದು ಕೂಗುವದಕ್ಕೆ ಪ್ರಾರಂಭಿಸಿ
ದನು. ಅನೇಕರು—ಸುಮ್ಮನಿರು ಎಂದು ಅವನನ್ನು ಗದರಿಸಿದಾಗ, ಅವನು—ದಾವೀ 48
ದನ ಕುಮಾರನೇ, ನನ್ನನ್ನು ಕರುಣಿಸು ಎಂದು ಮತ್ತಷ್ಟು ಕೂಗಿಕೊಂಡನು. ಆಗ 49
ಯೇಸು ನಿಂತು—ಅವನನ್ನು ಕರೆಯಿರಿ ಅನ್ನಲು, ಅವರು ಆ ಕುರುಡನನ್ನು ಕರೆದು—
ಧೈರ್ಯವಿರಲಿ, ಏಳು, ನಿನ್ನನ್ನು ಕರೆಯುತ್ತಾನೆ ಅಂದರು. ಅವನು ತನ್ನ ಹೊದಿಕೆ 50
ಯನ್ನು ತೆಗೆದುಹಾಕಿ, ತಟ್ಟನೆ ಎದ್ದು ಯೇಸುವಿನ ಬಳಿಗೆ ಬಂದನು. ಯೇಸು ಅವ 51
ನನ್ನು—ನಾನು ನಿನಗೆ ಏನು ಮಾಡಬೇಕೆನ್ನುತ್ತೀ ಎಂದು ಕೇಳಲು, ಆ ಕುರುಡನು—
ನನಗೆ ಕಣ್ಣು ಬರುವಂತೆ ಮಾಡಬೇಕು, ಗುರುವೇ, ಅಂದನು. ಯೇಸು ಅವನಿಗೆ— 52
ಹೋಗು, ನಿನ್ನ ನಂಬಿಕೆಯೇ ನಿನ್ನನ್ನು ಸ್ವಸ್ಥಮಾಡಿ ಅದೆ ಎಂದು ಹೇಳಿದನು; ಹೇಳಿದ
ಕೂಡಲೆ, ಅವನಿಗೆ ಕಣ್ಣು ಬಂದವು; ಅವನು ಆ ದಾರಿಯಲ್ಲಿ ಆತನ ಹಿಂದೆ ಹೋದನು.

ಯೇಸು ಅರಸನಂತೆ ಯೆರೂಸಲೇಮಿನಲ್ಲಿ ಪ್ರವೇಶಮಾಡಿದ್ದು.

**(ಮತ್ತಾಯ 21, 1—9; ಲೂಕ 19, 29—38; ಯೋಹಾನ 12, 12—16.)**

ಅವರು ಯೆರೂಸಲೇಮಿಗೆ ಸಮೀಪಿಸಿ, ಎಣ್ಣೇಮರಗಳ ಗುಡ್ಡದ ಬಳಿಯಲ್ಲಿರುವ ಬೇತ್ಫ **11**
ಗೆಗೂ ಬೇಥಾನ್ಯಕ್ಕೂ ಬಂದಾಗ, ಯೇಸು ತನ್ನ ಶಿಷ್ಯರಲ್ಲಿ ಇಬ್ಬರನ್ನು ಕರೆದು—ನಿಮ್ಮೆ 2
ದುರಿಗಿರುವ ಹಳ್ಳಿಗೆ ಹೋಗಿರಿ; ಅದರೊಳಕ್ಕೆ ಸೇರಿದಕೂಡಲೆ, ಅಲ್ಲಿ ಒಂದು ಕತ್ತೇಮರಿ
ಕಟ್ಟಿರುವದನ್ನು ಕಾಣುವಿರಿ; ಇದುವರೆಗೆ ಅದರ ಮೇಲೆ ಯಾರೂ ಹತ್ತಿಲ್ಲ; ಅದನ್ನು
ಬಿಚ್ಚಿ ಹಿಡುಕೊಂಡು ಬನ್ನಿರಿ. ಯಾವನಾದರೂ ನಿಮ್ಮನ್ನು—ಯಾಕೆ ಬಿಚ್ಚುತ್ತೀರಿ 3
ಎಂದು ಕೇಳಿದರೆ—ಇದು ಸ್ವಾಮಿಯವರಿಗೆ ಬೇಕಾಗಿದೆ, ಅವರು ತಡಮಾಡದೆ ಅದನ್ನು
ತಿರಿಗಿ ಇಲ್ಲಿಗೆ ಕಳುಹಿಸಿಕೊಡುವರು ಅನ್ನಿರಿ ಎಂದು ಹೇಳಿ ಕಳುಹಿಸಿದನು. ಆ ಶಿಷ್ಯರು 4

ಹೋಗಿ, ಬೀದಿಯಲ್ಲಿ ಹೊರಗೆ ಬಾಗಿಲಿನ ಹತ್ತರ ಒಂದು ಕತ್ತೇಮರಿ ಕಟ್ಟಿರುವದನ್ನು
5 ಕಂಡು, ಅದನ್ನು ಬಿಚ್ಚಿದರು. ಅಲ್ಲಿ ನಿಂತಿದ್ದವರಲ್ಲಿ ಕೆಲವರು—ಈ ಮರಿಯನ್ನು
6 ಯಾಕೆ ಬಿಚ್ಚುತ್ತೀರಿ? ಎಂದು ಅವರನ್ನು ಕೇಳಿದ್ದಕ್ಕೆ, ಯೇಸು ಹೇಳಿಕೊಟ್ಟಿದ್ದಂತೆಯೇ
7 ಅವರು ಹೇಳಿದಾಗ, ಆ ಜನರು ತೆಗೆದುಕೊಂಡುಹೋಗಗೊಡಿಸಿದರು. ಶಿಷ್ಯರು ಆ
ಮರಿಯನ್ನು ಯೇಸುವಿನ ಬಳಿಗೆ ಹಿಡುಕೊಂಡುಬಂದು ತಾವು ಹೊದ್ದಿದ್ದ ಬಟ್ಟೆಗಳನ್ನು
8 ಅದರ ಮೇಲೆ ಹಾಕಲು, ಆತನು ಅದನ್ನು ಹತ್ತಿ ಕೂತುಕೊಂಡನು. ಆಗ ಅನೇಕರು
ತಾವು ಹೊದ್ದಿದ್ದ ಬಟ್ಟೆಗಳನ್ನು ದಾರಿಯಲ್ಲಿ ಹಾಸಿದರು. ಬೇರೆ ಕೆಲವರು ತೋಟಗಳಿಂದ
9 ಚಿಗುರುಗಳನ್ನು ಕೊಯಿದು ತಂದು ಹಾಸಿದರು. ಆತನ ಹಿಂದೆ ಮುಂದೆ ಹೋದ
10 ವರು—ಜಯ[1], ಕರ್ತನ ಹೆಸರಿನಲ್ಲಿ ಬರುವವನಿಗೆ ಶುಭವಾಗಲಿ[2]; ನಮ್ಮ ಪಿತೃವಾದ
ದಾವೀದನ ರಾಜ್ಯವು ಬರುತ್ತದೆ, ಅದಕ್ಕೆ ಶುಭವಾಗಲಿ; ಮೇಲಣಲೋಕಗಳಲ್ಲಿ ಜಯ[1]
ಎಂದು ಆರ್ಭಟಿಸಿದರು.

11 ತರುವಾಯ ಯೇಸು ಯೆರೂಸಲೇಮನ್ನು ಸೇರಿ, ದೇವಾಲಯಕ್ಕೆ ಹೋಗಿ, ಸುತ್ತಲೂ
ಎಲ್ಲಾ ನೋಡಿಕೊಂಡು, ಅಷ್ಟರಲ್ಲಿ ಸಂಜೆಯಾದದ್ದರಿಂದ ಹನ್ನೆರಡು ಮಂದಿ ಶಿಷ್ಯರನ್ನು
ಕರಕೊಂಡು ಬೇಥಾನ್ಯಕ್ಕೆ ಹೊರಟುಹೋದನು.

### ಯೇಸುವಿನ ಮಾತಿಗೆ ಅಂಜೂರದ ಮರವು ಒಣಗಿಹೋದದ್ದು; ದೇವಾಲಯದಲ್ಲಿ ವ್ಯಾಪಾರಮಾಡುವವರನ್ನು ಹೊರಡಿಸಿದ್ದು.

(ಮತ್ತಾಯ 21, 12—22; ಲೂಕ 19, 45—48.)

12 ಮರುದಿನ ಅವರು ಬೇಥಾನ್ಯವನ್ನು ಬಿಟ್ಟು ಬರುತ್ತಿರುವಾಗ, ಆತನು ಹಸಿದನು.
13 ಮತ್ತು ಎಲೆಬಿಟ್ಟಿದ್ದ ಒಂದು ಅಂಜೂರದ ಮರವನ್ನು ದೂರದಲ್ಲಿ ಕಂಡು, ಅದರಲ್ಲಿ ತನ
ಗೇನಾದರೂ ಹಣ್ಣು ಸಿಕ್ಕೀತೆಂದು ಅಲ್ಲಿಗೆ ಹೋದನು. ಅದರ ಹತ್ತರಕ್ಕೆ ಬಂದಾಗ, ಅದರಲ್ಲಿ
ಬರೀ ಎಲೆಗಳನ್ನೇ ಹೊರತು ಮತ್ತೇನೂ ಕಾಣಲಿಲ್ಲ; ಅದು ಅಂಜೂರದ ಹಣ್ಣಿನ
14 ಕಾಲವಲ್ಲ. ಆಗ ಯೇಸು ಆ ಮರಕ್ಕೆ—ಇನ್ನು ಮೇಲೆ ಒಬ್ಬರೂ ನಿನ್ನಲ್ಲಿ ಎಂದೆಂದಿಗೂ
ಹಣ್ಣನ್ನು ತಿನ್ನದ ಹಾಗಾಗಲಿ ಎಂದು ಹೇಳಿದನು. ಆತನ ಶಿಷ್ಯರು ಅದನ್ನು ಕೇಳಿದರು.

15 ಅವರು ಯೆರೂಸಲೇಮಿಗೆ ಬಂದಾಗ, ಯೇಸು ದೇವಾಲಯಕ್ಕೆ ಹೋಗಿ, ಅದರೊಳಗೆ
ಮಾರುವ ಕೊಳ್ಳುವ ಎಲ್ಲರನ್ನೂ ಹೊರಕ್ಕೆ ಕಳುಹಿಸುವದಕ್ಕೆ ಪ್ರಾರಂಭಿಸಿ, ಚಿನಿವಾರರ
16 ಮೇಜುಗಳನ್ನೂ ಪಾರಿವಾಳ ಮಾರುವವರ ಕಾಲ್ಮಣೆಗಳನ್ನೂ ಕೆಡವಿದನು; ಒಬ್ಬನನ್ನಾ
ದರೂ ಸಾಮಾನು ಹೊತ್ತುಕೊಂಡು ದೇವಾಲಯದೊಳಗೆ ಹಾದುಹೋಗಗೊಡಿಸಲಿಲ್ಲ.
17 ಮತ್ತು ಆತನು ಉಪದೇಶಮಾಡಿ ಅವರಿಗೆ—ನನ್ನ ಮನೆಯು ಎಲ್ಲಾ ದೇಶದವರಿಗೆ ಪ್ರಾರ್ಥ
ನೆಯಮನೆ ಎನ್ನಿಸಿಕೊಳ್ಳುವದೆಂದು ಬರೆದಿದೆಯಲ್ಲಾ?[3] ಆದರೆ ನೀವು ಅದನ್ನು ಕಳ್ಳರ
18 ಗವಿ[4] ಮಾಡಿದ್ಧೀರಿ ಎಂದು ಹೇಳಿದನು. ಅದನ್ನು ಮಹಾಯಾಜಕರೂ ಶಾಸ್ತ್ರಿಗಳೂ

---

1) ಮೂಲ: ಹೊಸನ್ನ. 2) ಕೀರ್ತನೆ ೧೧೮, ೨೫. ೨೬. 3) ಯೆಶಾಯ ೫೬, ೭.
4) ಯೆರೆಮೀಯ ೭, ೧೧.

ಕೇಳಿ, ಅವನನ್ನು ಯಾವ ಉಪಾಯದಿಂದ ನಾಶಮಾಡೋಣ ಎಂದು ಆಲೋಚಿಸುತ್ತಿ
ದ್ದರು; ಯಾಕಂದರೆ ಜನರೆಲ್ಲಾ ಆತನ ಉಪದೇಶವನ್ನು ಕೇಳಿ ಮರುಳಾದರಲ್ಲಾ ಎಂದು
ಅವರು ಆತನಿಗೆ ಹೆದರುತ್ತಿದ್ದರು.

ಪ್ರತಿ ಸಾಯಂಕಾಲವೂ ಯೇಸೂ ಆತನ ಶಿಷ್ಯರೂ ಪಟ್ಟಣವನ್ನು ಬಿಟ್ಟು ಹೊರಗೆ 19
ಹೋಗುತ್ತಿದ್ದರು.

ಬೆಳಿಗ್ಗೆ ಅವರು ಬರುತ್ತಿರುವಾಗ ಆ ಅಂಜೂರದ ಮರವು ಬುಡದಿಂದಲೂ ಒಣಗಿ 20
ಹೋಗಿರುವದನ್ನು ಕಂಡರು. ಆಗ ಪೇತ್ರನು ಹಿಂದಿನ ದಿನದ ಸಂಗತಿಯನ್ನು ನೆನಸಿ 21
ಕೊಂಡು, ಆತನಿಗೆ—ಗುರುವೇ, ಇಗೋ, ನೀನು ಶಾಪಕೊಟ್ಟ ಅಂಜೂರದ ಮರವು
ಒಣಗಿಹೋಗಿದೆ ಎಂದು ಹೇಳಿದ್ದಕ್ಕೆ, ಯೇಸು ಹೇಳಿದ್ದೇನಂದರೆ—ನಿಮಗೆ ದೇವರಲ್ಲಿ 22
ನಂಬಿಕೆಯಿರಲಿ. ನಿಮಗೆ ಸತ್ಯವಾಗಿ ಹೇಳುತ್ತೇನೆ, ಯಾವನಾದರೂ ಈ ಬೆಟ್ಟಕ್ಕೆ— 23
ನೀನು ಎದ್ದು ಹೋಗಿ ಸಮುದ್ರದಲ್ಲಿ ಬೀಳು ಎಂದು ಹೇಳಿ, ತನ್ನ ಮನಸ್ಸಿನಲ್ಲಿ ಸಂಶಯ
ಪಡದೆ, ತಾನು ಹೇಳಿದ್ದು ಆಗುವದೆಂದು ನಂಬಿದರೆ, ಅವನು ಹೇಳಿದಂತೆಯೇ ಆಗುವದು.
ಆದಕಾರಣ ನೀವು ಪ್ರಾರ್ಥನೆಯಲ್ಲಿ ಏನೇನು ದೇವರಿಂದ ಕೇಳಿಕೊಳ್ಳುತ್ತೀರೋ ಅದನ್ನು 24
ಹೊಂದಿದ್ದೇವೆಂದು ನಂಬಿರಿ; ಅದು ನಿಮಗೆ ಸಿಕ್ಕುವದೆಂದು ನಿಮಗೆ ಹೇಳುತ್ತೇನೆ. ಇದ 25
ಲ್ಲದೆ ನೀವು ನಿಂತುಕೊಂಡು ಪ್ರಾರ್ಥನೆಮಾಡುವಾಗೆಲ್ಲಾ ಯಾರ ಮೇಲೆ ಏನಾದರೂ
ವಿರೋಧವಿದ್ದರೆ, ಅದನ್ನು ಅವನಿಗೆ ಕ್ಷಮಿಸಿಬಿಡಿರಿ; ಕ್ಷಮಿಸಿಬಿಟ್ಟರೆ, ಪರಲೋಕದಲ್ಲಿರುವ
ನಿಮ್ಮ ತಂದೆಯು ನಿಮ್ಮ ತಪ್ಪುಗಳನ್ನು ನಿಮಗೆ ಕ್ಷಮಿಸಿಬಿಡುವನು ಅಂದನು[1].

**ಶಾಸ್ತ್ರಿಗಳು ಯೇಸುವಿನ ಅಧಿಕಾರವನ್ನು ವಿಚಾರಿಸಿದಾಗ, ಆತನು ತಕ್ಕ ಉತ್ತರಕೊಟ್ಟು, ಅವರು ಮಾಡಿದ ದೈವದ್ರೋಹವನ್ನು ಸಾಮ್ಯದಿಂದ ಸೂಚಿಸಿದ್ದು.**

**(ಮತ್ತಾಯ 21, 23—46; ಲೂಕ 20, 1—19.)**

ಅವರು ತಿರಿಗಿ ಯೆರೂಸಲೇಮಿಗೆ ಬಂದಾಗ ಆತನು ದೇವಾಲಯದಲ್ಲಿ ತಿರುಗಾಡುತ್ತಿ 27
ರಲಾಗಿ ಮಹಾಯಾಜಕರೂ ಶಾಸ್ತ್ರಿಗಳೂ ಹಿರಿಯರೂ ಆತನ ಬಳಿಗೆ ಬಂದು—ನೀನು 28
ಯಾವ ಅಧಿಕಾರದಿಂದ ಇದನ್ನೆಲ್ಲಾ ಮಾಡುತ್ತೀ? ಇದನ್ನು ಮಾಡುವದಕ್ಕೆ ಅಧಿಕಾರ
ವನ್ನು ಯಾರು ಕೊಟ್ಟರು ಎಂದು ಆತನನ್ನು ಕೇಳಿದರು. ಅದಕ್ಕೆ ಯೇಸು—ನಾನು 29
ನಿಮಗೂ ಒಂದು ಪ್ರಶ್ನೆ ಹಾಕುತ್ತೇನೆ, ನನಗೆ ಉತ್ತರ ಹೇಳಿದರೆ ನಾನು ಸಹ ಯಾವ
ಅಧಿಕಾರದಿಂದ ಇದನ್ನು ಮಾಡುತ್ತೇನೆಂಬುವದನ್ನು ನಿಮಗೆ ಹೇಳುತ್ತೇನೆ. ದೀಕ್ಷಾ 30
ಸ್ನಾನ ಮಾಡಿಸುವ ಅಧಿಕಾರವು ಯೋಹಾನನಿಗೆ ಪರಲೋಕದಿಂದ ಬಂತೋ? ಮನು
ಷ್ಯರಿಂದ ಬಂತೋ? ಹೇಳಿರಿ ಅಂದನು. ಆಗ ಅವರು—ಪರಲೋಕದಿಂದ ಬಂತೆಂದು 31
ನಾವು ಹೇಳಿದರೆ, ಹಾಗಾದರೆ ನೀವು ಅವನನ್ನು ಯಾಕೆ ನಂಬಲಿಲ್ಲ ಅಂದಾನು; ಮನು 32
ಷ್ಯರಿಂದ ಬಂತೆಂದು ಹೇಳಿದರೆ, ಜನರು ಏನು ಮಾಡ್ಯಾರೋ ಎಂಬದಾಗಿ ತಮ್ಮತಮ್ಮೊ

---

[1] ಕೆಲವು ಪ್ರತಿಗಳಲ್ಲಿ ೨೬ನೇ ವಚನ ಉಂಟು—ಆದರೆ ನೀವು ಕ್ಷಮಿಸಿಬಿಡದಿದ್ದರೆ, ಪರಲೋಕದಲ್ಲಿರುವ ನಿಮ್ಮ ತಂದೆಯು ನಿಮ್ಮ ತಪ್ಪುಗಳನ್ನು ಕ್ಷಮಿಸಿಬಿಡುವದಿಲ್ಲ. ಮತ್ತಾಯ ೬, ೧೫ ನೋಡು.

ಳಗೆ ಮಾತಾಡಿಕೊಳ್ಳುತ್ತಿದ್ದರು. ಯೋಹಾನನು ಪ್ರವಾದಿಯೆಂದು ಜನರೆಲ್ಲರೂ ಅನು
33 ಮಾನವಿಲ್ಲದೆ ತಿಳುಕೊಂಡಿದ್ದದರಿಂದ ಇವರಿಗೆ ಜನರ ಭಯವಿತ್ತು. ಹೀಗಿರಲಾಗಿ
ಅವರು—ನಾವರಿಯೆವು ಎಂದು ಯೇಸುವಿಗೆ ಉತ್ತರಕೊಟ್ಟರು. ಆಗ ಯೇಸು ಅವ
ರಿಗೆ—ಯಾವ ಅಧಿಕಾರದಿಂದ ಇದನ್ನು ಮಾಡುತ್ತೇನೋ ಅದನ್ನು ನಾನೂ ನಿಮಗೆ
ಹೇಳುವದಿಲ್ಲ ಅಂದನು.

**12** ಆಗ ಯೇಸು ಅವರ ಕೂಡ ಸಾಮ್ಯರೂಪವಾಗಿ ಮಾತಾಡುವದಕ್ಕೆ ತೊಡಗಿ ಹೇಳಿ
ದ್ದೇನಂದರೆ—ಒಬ್ಬ ಮನುಷ್ಯನು ಒಂದು ದ್ರಾಕ್ಷೇತೋಟವನ್ನು ಮಾಡಿ[1], ಅದರ
ಸುತ್ತಲು ಬೇಲಿಹಾಕಿಸಿ, ದ್ರಾಕ್ಷೆಯ ಆಲೆಗಾಗಿ ಒಂದು ಗುಂಡಿಯನ್ನು ತೆಗಿಸಿ, ಹೂಡೆ
ಯನ್ನು ಕಟ್ಟಿಸಿ, ಒಕ್ಕಲಿಗರಿಗೆ ವಾರಕ್ಕೆ[2] ಕೊಟ್ಟು, ಬೇರೊಂದು ದೇಶಕ್ಕೆ ಹೋದನು.
2 ಫಲಕಾಲ ಬಂದಾಗ ಆ ದ್ರಾಕ್ಷೇತೋಟದ ಹಣ್ಣಿನ ಪಾಲನ್ನು ಒಕ್ಕಲಿಗರಿಂದ ತೆಗೆದು
3 ಕೊಂಡು ಬರುವದಕ್ಕಾಗಿ ಒಬ್ಬ ಆಳನ್ನು ಅವರ ಬಳಿಗೆ ಕಳುಹಿಸಿದನು. ಅವರು ಅವ
4 ನನ್ನು ಹಿಡುಕೊಂಡು ಹೊಡೆದು, ಬರಿಗೈಲಿ ಕಳುಹಿಸಿಬಿಟ್ಟರು. ಆ ಮೇಲೆ ಆ ಧಣಿಯು
ತಿರಿಗಿ ಮತ್ತೊಬ್ಬ ಆಳನ್ನು ಅವರ ಬಳಿಗೆ ಕಳುಹಿಸಲು, ಅವನನ್ನು ಅವರು ತಲೆತಲೇ
5 ಮೇಲೆ ಹೊಡೆದು, ಅಪಮಾನ ಪಡಿಸಿದರು. ಇನ್ನೊಬ್ಬನನ್ನು ಕಳುಹಿಸಿದನು; ಅವ
ನನ್ನು ಕೊಂದುಹಾಕಿದರು. ಇನ್ನೂ ಅನೇಕರನ್ನು ಕಳುಹಿಸಿದನು. ಅವರಲ್ಲಿ ಕೆಲವ
6 ರನ್ನು ಹೊಡೆದರು, ಕೆಲವರನ್ನು ಕೊಂದುಹಾಕಿದರು. ಅವನಿಗೆ ಇನ್ನೂ ಒಬ್ಬನಿದ್ದನು;
ಯಾರೆಂದರೆ, ಅವನ ಪ್ರಿಯ ಮಗನೇ. ಈ ನನ್ನ ಮಗನಿಗಾದರೂ ಮರ್ಯಾದೆ ತೋರಿ
7 ಸ್ಯಾರೆಂದು ಧಣಿಯು ಕಡೆಯಲ್ಲಿ ಅವನನ್ನು ಅವರ ಬಳಿಗೆ ಕಳುಹಿಸಿಕೊಟ್ಟನು. ಆದರೆ
ಆ ಒಕ್ಕಲಿಗರು—ಇವನೇ ಬಾಧ್ಯಸ್ಥನು; ಇವನನ್ನು ಕೊಂದುಹಾಕೋಣ, ಬನ್ನಿ; ಆಗ
8 ಇವನ ಸ್ವಾಸ್ತ್ಯ ನಮ್ಮದಾಗುವದು ಎಂದು ತಮ್ಮತಮ್ಮೊಳಗೆ ಮಾತಾಡಿಕೊಂಡು, ಅವ
9 ನನ್ನು ಹಿಡಿದು ಕೊಂದುಹಾಕಿ ದ್ರಾಕ್ಷೇತೋಟದ ಹೊರಗೆ ಬಿಸಾಟುಬಿಟ್ಟರು. ಹಾಗಾ
ದರೆ ದ್ರಾಕ್ಷೇತೋಟದ ಧಣಿಯು ಏನು ಮಾಡುವನು? ಅವನು ಬಂದು ಆ ಒಕ್ಕಲಿಗ
ರನ್ನು ಕೊಂದುಹಾಕಿ, ತನ್ನ ತೋಟವನ್ನು ಮಾಡುವದಕ್ಕೆ ಬೇರೆ ಜನರಿಗೆ ಕೊಡುವನು.

10-11 ಮನೆಕಟ್ಟುವವರು ಬೇಡವೆಂದು ಬಿಟ್ಟಕಲ್ಲೇ
ಮುಖ್ಯವಾದ ಮೂಲೆಗಲ್ಲಾಯಿತು.
ಈ ಕಾರ್ಯವು ಕರ್ತನಿಂದಲೇ ಆಯಿತು;
ಅದು ನಮಗೆ ಆಶ್ಚರ್ಯವಾಗಿ ತೋರುತ್ತದೆ[3]

12 ಎಂಬುವ ಶಾಸ್ತ್ರವಚನವನ್ನು ನೀವು ಓದಿಲ್ಲವೇ? ಅಂದನು. ಇವನು ಈ ಸಾಮ್ಯವನ್ನು
ನಮ್ಮನ್ನೇ ಕುರಿತು ಹೇಳಿದನು ಎಂದು ಅವರು ತಿಳಿದು, ಆತನನ್ನು ಹಿಡಿಯಬೇಕೆಂದಿದ್ದರು;
ಆದರೆ ಜನರಿಗೆ ಹೆದರಿ ಆತನ ಬಳಿಯಿಂದ ಹೊರಟುಹೋದರು.

---

1) ಯೆಶಾಯ ೫, ೧. ೨.   2) ಅಥವಾ, ಕೋರಿಗೆ.   3) ಕೀರ್ತನೆ ೧೧೮, ೨೨. ೨೩.

**ಬೇರೆ ಬೇರೆ ಪಕ್ಷದವರು ಯೇಸುವನ್ನು ಮಾತಿನಲ್ಲಿ ಸಿಕ್ಕಿಸುವದಕ್ಕೆ ಪ್ರಯತ್ನಮಾಡಿ ಸೋತುಹೋದದ್ದು.**

**(ಮತ್ತಾಯ 22, 15—46; ಲೂಕ 20, 20—44.)**

ಆ ಮೇಲೆ ಅವರು ಆತನನ್ನು ಮಾತಿನಲ್ಲಿ ಸಿಕ್ಕಿಸಬೇಕೆಂದು ಫರಿಸಾಯರಲ್ಲಿಯೂ 13
ಹೆರೋದ್ಯರಲ್ಲಿಯೂ ಕೆಲವರನ್ನು ಆತನ ಬಳಿಗೆ ಕಳುಹಿಸಿಕೊಟ್ಟರು. ಇವರು ಬಂದು— 14
ಬೋಧಕನೇ, ನೀನು ಸತ್ಯವಂತನು, ಯಾರಿಗೂ ಹೆದರದವನು; ನೀನು ಜನರ ಮುಖದಿ
ಚ್ಛೆಗೆ ಮಾತಾಡದೆ, ದೇವರ ಮಾರ್ಗವನ್ನು ಸತ್ಯವಾಗಿ ಬೋಧಿಸುವವನಾಗಿದ್ದೀ. ಕೈಸರ
ನಿಗೆ[1] ತೆರಿಗೆ ಕೊಡುವದು ಸರಿಯೋ, ಸರಿಯಲ್ಲವೋ? ಕೊಡಬೇಕೋ, ಬೇಡವೋ 15
ಎಂದು ಆತನನ್ನು ಕೇಳಿದರು. ಆತನು ಅವರ ಕಪಟವನ್ನು ತಿಳಿದು—ನನ್ನನ್ನು ಯಾಕೆ
ಪರೀಕ್ಷೆಮಾಡುತ್ತೀರಿ? ನನಗೆ ಒಂದು ಹಣವನ್ನು ತಂದು ತೋರಿಸಿರಿ ಅನ್ನಲು, ಅವರು 16
ತಂದರು. ಆಗ ಆತನು—ಈ ತಲೆಯೂ ಮುದ್ರೆಯೂ ಯಾರದು ಎಂದು ಕೇಳಿದ್ದಕ್ಕೆ,
ಅವರು—ಕೈಸರನದು ಅಂದರು. ಯೇಸು ಅವರಿಗೆ—ಕೈಸರನದನ್ನು ಕೈಸರನಿಗೆ ಕೊಡಿರಿ; 17
ದೇವರದನ್ನು ದೇವರಿಗೆ ಕೊಡಿರಿ ಎಂದು ಹೇಳಿದನು. ಅವರು ಆತನ ವಿಷಯದಲ್ಲಿ ಬಹು
ಆಶ್ಚರ್ಯಪಟ್ಟರು.

ತರುವಾಯ ಸದ್ದುಕಾಯರು ಆತನ ಬಳಿಗೆ ಬಂದರು. ಇವರು ಪುನರುತ್ಥಾನವಿಲ್ಲ[2] 18
ಅನ್ನುವವರು. ಇವರು ಆತನಿಗೆ ಪ್ರಶ್ನೆಮಾಡಿದ್ದೇನಂದರೆ—ಬೋಧಕನೇ, ಅಣ್ಣನಾದವನು 19
ಮಕ್ಕಳಿಲ್ಲದೆ ಹೆಂಡತಿಯನ್ನು ಬಿಟ್ಟು ಸತ್ತರೆ, ಆಕೆಯನ್ನು ಅವನ ತಮ್ಮನು ಮದುವೆಮಾಡಿ
ಕೊಂಡು, ತನ್ನ ಅಣ್ಣನಿಗೆ ಸಂತಾನವನ್ನು ಹುಟ್ಟಿಸಬೇಕೆಂದು ಮೋಶೆಯು ನಮಗೆ ಬರೆ
ದಿಟ್ಟನಷ್ಟೆ[3]. ಒಳ್ಳೇದು; ಏಳುಮಂದಿ ಅಣ್ಣತಮ್ಮಂದಿರಿದ್ದರು. ಮೊದಲನೆಯವನು ಹೆಂಡ 20
ತಿಯನ್ನು ಮಾಡಿಕೊಂಡು ಸಂತಾನವಿಲ್ಲದೆ ಸತ್ತನು. ಎರಡನೆಯವನೂ ಆಕೆಯನ್ನು 21
ಮದುವೆಮಾಡಿಕೊಂಡು ಸಂತಾನವಿಲ್ಲದೆ ಸತ್ತನು. ಅದರಂತೆ ಮೂರನೆಯವನು. ಇದೇ 22
ಪ್ರಕಾರ ಏಳು ಮಂದಿಯೂ ಸಂತಾನವಿಲ್ಲದೆ ಹೋದರು. ಕಡೆಯಲ್ಲಿ ಆ ಹೆಂಗಸೂ
ಸತ್ತಳು. ಪುನರುತ್ಥಾನದಲ್ಲಿ ಆಕೆ ಯಾರ ಹೆಂಡತಿಯಾಗಿರುವಳು? ಆಕೆಯನ್ನು ಏಳು 23
ಮಂದಿಯೂ ಮಾಡಿಕೊಂಡಿದ್ದರಲ್ಲಾ ಅಂದರು. ಯೇಸು ಅವರಿಗೆ—ನೀವು ಶಾಸ್ತ್ರವ 24
ನ್ನಾದರೂ ದೇವರ ಶಕ್ತಿಯನ್ನಾದರೂ ತಿಳಿಯದೆ ಇದ್ದೀರಿ; ನೀವು ತಪ್ಪಾದ ಅಭಿಪ್ರಾಯ
ವನ್ನು ಹಿಡಿದದ್ದಕ್ಕೆ ಇದೇ ಕಾರಣವಲ್ಲವೇ? ಸತ್ತವರು ತಿರಿಗಿ ಬದುಕಿ ಎದ್ದಮೇಲೆ 25
ಮದುವೆಮಾಡಿಕೊಳ್ಳುವದೂ ಇಲ್ಲ, ಮಾಡಿಕೊಡುವದೂ ಇಲ್ಲ; ಅವರು ಪರಲೋಕ
ದಲ್ಲಿರುವ ದೇವದೂತರಂತೆ ಇರುತ್ತಾರೆ. ಆದರೆ ಸತ್ತವರು ಬದುಕಿ ಏಳುತ್ತಾರೆಂಬ 26
ವಿಷಯದಲ್ಲಿ ಪ್ರಮಾಣ ಬೇಕೆನ್ನುತ್ತೀರೋ? ದೇವರು ಮೋಶೆಗೆ—ನಾನು ಅಬ್ರಹಾಮನ
ದೇವರು, ಇಸಾಕನ ದೇವರು, ಯಾಕೋಬನ ದೇವರು ಎಂದು ನುಡಿದದ್ದನ್ನು[4] ನೀವು
ಮೋಶೆಯ ಗ್ರಂಥದಲ್ಲಿ ಪೊದೆಯ ಸಂಗತಿಯಿರುವ ಅಧ್ಯಾಯದಲ್ಲಿ ಓದಲಿಲ್ಲವೇ? ಆತನು 27

---

[1] ಅಂದರೆ, ರೋಮ್‌ಸಾಮ್ರಾಜ್ಯದ ಚಕ್ರವರ್ತಿಗೆ. [2] ಪುನರುತ್ಥಾನವೆಂದರೆ, ಸತ್ತವರು ತಿರಿಗಿ ಬದುಕಿ ಏಳುವದು.
[3] ದ್ವಿತೀಯ ನ್ಯಾಯ ೨೫, ೫. [4] ಹೊರಡೋಣ ೩, ೬.

ಜೀವಿತರ ದೇವರಾಗಿದ್ದಾನೆ ಹೊರತು ಜೀವವಿಲ್ಲದವರ ದೇವರಲ್ಲ; ನೀವು ಹಿಡಿದ ಅಭಿ ಪ್ರಾಯವು ಬಹು ತಪ್ಪಾಗಿದೆ ಎಂದು ಹೇಳಿದನು.

28 ಶಾಸ್ತ್ರಿಗಳಲ್ಲಿ ಒಬ್ಬನು ಅವರ ತರ್ಕವನ್ನು ಕೇಳಿ, ಯೇಸು ಅವರಿಗೆ ಒಳ್ಳೇ ಉತ್ತರ ಕೊಟ್ಟನೆಂದು ತಿಳಿದು, ಹತ್ತರಕ್ಕೆ ಬಂದು—ಎಲ್ಲಾ ಆಜ್ಞೆಗಳಲ್ಲಿ ಮೊದಲನೇದು ಯಾವದು 29 ಎಂದು ಆತನನ್ನು ಕೇಳಿದ್ದಕ್ಕೆ, ಯೇಸು—ಇಸ್ರಯೇಲ ಜನವೇ ಕೇಳು, ಕರ್ತನೇ ನಮ್ಮ 30 ದೇವರು; ಕರ್ತನು ಒಬ್ಬನೇ; ನಿನ್ನ ದೇವರಾಗಿರುವ ಕರ್ತನನ್ನು ನಿನ್ನ ಪೂರ್ಣ ಮನ ಸ್ಸಿನಿಂದಲೂ ನಿನ್ನ ಪೂರ್ಣ ಪ್ರಾಣದಿಂದಲೂ ನಿನ್ನ ಪೂರ್ಣ ಬುದ್ಧಿಯಿಂದಲೂ ನಿನ್ನ 31 ಪೂರ್ಣ ಶಕ್ತಿಯಿಂದಲೂ ಪ್ರೀತಿಸಬೇಕು ಎಂಬುವದೇ[1] ಮೊದಲನೇ ಆಜ್ಞೆ; ನಿನ್ನನ್ನು ಪ್ರೀತಿಸಿಕೊಳ್ಳುವಂತೆ ನೀನು ನಿನ್ನ ನೆರೆಯವನನ್ನು ಪ್ರೀತಿಸಬೇಕು ಎಂಬುವದೇ[2] ಎರ 32 ಡನೇ ಆಜ್ಞೆ; ಇವುಗಳಿಗಿಂತ ಹೆಚ್ಚಿನ ಆಜ್ಞೆ ಮತ್ತೊಂದಿಲ್ಲ ಅಂದನು. ಆಗ ಆ ಶಾಸ್ತ್ರಿ ಯು—ಬೋಧಕನೇ, ಚನ್ನಾಗಿ ಹೇಳಿದೆ; ಒಬ್ಬನೇ ಇದ್ದಾನೆ, ಆತನ ಹೊರತು ಮತ್ತೊಬ್ಬ 33 ದೇವರಿಲ್ಲ ಎಂದು[3] ನೀನು ಹೇಳಿದ್ದು ಸತ್ಯ. ಆತನನ್ನು ಪೂರ್ಣ ಮನಸ್ಸಿನಿಂದಲೂ ಪೂರ್ಣ ಬುದ್ಧಿಯಿಂದಲೂ ಪೂರ್ಣ ಶಕ್ತಿಯಿಂದಲೂ ಪ್ರೀತಿಸುವದು ಮತ್ತು ತನ್ನನ್ನು ಪ್ರೀತಿಸಿಕೊಳ್ಳುವಂತೆ ತನ್ನ ನೆರೆಯವನನ್ನು ಪ್ರೀತಿಸುವದು ಇವೆರಡೂ ಎಲ್ಲಾ ಸರ್ವಾಂಗ 34 ಹೋಮಗಳಿಗಿಂತಲೂ ಎಲ್ಲಾ ಯಜ್ಞಗಳಿಗಿಂತಲೂ ಹೆಚ್ಚಿನವು[4] ಅಂದನು. ಅವನು ಬುದ್ಧಿಯಿಂದ ಉತ್ತರಕೊಟ್ಟದ್ದನ್ನು ಯೇಸು ಕಂಡು—ನೀನು ದೇವರ ರಾಜ್ಯಕ್ಕೆ ದೂರ ವಾದವನಲ್ಲ ಅಂದನು. ಅಂದಿನಿಂದ ಆತನನ್ನು ಪ್ರಶ್ನೆಮಾಡುವದಕ್ಕೆ ಯಾರಿಗೂ ಧೈರ್ಯ ವಿರಲಿಲ್ಲ.

35 ಯೇಸು ದೇವಾಲಯದಲ್ಲಿ ಉಪದೇಶಮಾಡುತ್ತಿರಲಾಗಿ ಅವರಿಗೆ ಒಂದು ಪ್ರಶ್ನೆಮಾಡಿ ದನು; ಅದೇನಂದರೆ—ಶಾಸ್ತ್ರಿಗಳು ಬರಬೇಕಾದ ಕ್ರಿಸ್ತನನ್ನು ದಾವೀದನ ಮಗನೆಂದು ಹೇಳುತ್ತಾರಲ್ಲಾ, ಅದು ಹ್ಯಾಗಾದೀತು?

36 ನಾನು ನಿನ್ನ ವಿರೋಧಿಗಳನ್ನು ನಿನ್ನ ಪಾದಪೀಠ ಮಾಡುವ ತನಕ
ನನ್ನ ಬಲಗಡೆಯಲ್ಲಿ ಕೂತುಕೊಂಡಿರು ಎಂದು
ದೇವರು ನನ್ನ ಒಡೆಯನಿಗೆ ನುಡಿದನು[5]

37 ಎಂಬದಾಗಿ ದಾವೀದನೇ ಪವಿತ್ರಾತ್ಮನ ಪ್ರೇರಣೆಯಿಂದ ಹೇಳಿದನು. ದಾವೀದನೇ ಆತ ನನ್ನು ಒಡೆಯನೆಂದು ಹೇಳುತ್ತಾನೆ; ಹಾಗಾದರೆ ಆತನು ದಾವೀದನಿಗೆ ಮಗನಾಗುವದು ಹ್ಯಾಗೆ? ಎಂದು ಕೇಳಿದನು.

### ಯೇಸು ಶಾಸ್ತ್ರಿಗಳ ವಿಷಯದಲ್ಲಿ ಎಚ್ಚರಿಕೆ ಹೇಳಿದ್ದು.

(ಮತ್ತಾಯ 23; ಲೂಕ 20, 45—47.)

38 ಸಾಧಾರಣ ಜನರು ಆತನ ಮಾತನ್ನು ಸಂತೋಷದಿಂದ ಕೇಳುತ್ತಿದ್ದರು. ಆತನು ಉಪದೇಶಮಾಡಿ ಹೇಳಿದ್ದೇನಂದರೆ—ಶಾಸ್ತ್ರಿಗಳ ವಿಷಯದಲ್ಲಿ ಎಚ್ಚರಿಕೆಯಾಗಿರ್ರಿ. ನಿಲು

---

1) ದ್ವಿತೀಯ ನ್ಯಾಯ ೬, ೪. ೫. 2) ಲೇವಿಕ ೧೯, ೧೮. 3) ದ್ವಿತೀಯ ನ್ಯಾಯ ೪, ೩೫.
4) ೧ ಸಮುವೇಲ ೧೫, ೨೨. 5) ಕೀರ್ತನೆ ೧೧೦, ೧.

ವಂಗಿಗಳನ್ನು ತೊಟ್ಟುಕೊಂಡು ತಿರುಗಾಡುವದು, ಅಂಗಡಿಬೀದಿಗಳಲ್ಲಿ ನಮಸ್ಕಾರಗಳು, ಸಭಾಮಂದಿರಗಳಲ್ಲಿ ಮುಖ್ಯ ಪೀಠಗಳು, ಔತಣಪ್ರಸ್ತಗಳಲ್ಲಿ ಮೇಲ್ಪಙ್ತಿಗಳು, ಇವೇ 39 ಅವರಿಗೆ ಇಷ್ಟ. ವಿಧವೆಯರ ಮನೆಗಳನ್ನು ನುಂಗಿ, ನಟನೆಗಾಗಿ ದೇವರಿಗೆ ಉದ್ದವಾದ 40 ಪ್ರಾರ್ಥನೆಗಳನ್ನು ಮಾಡುವವರಾದ ಇವರು ಹೆಚ್ಚಾದ ದಂಡನೆಯನ್ನು ಹೊಂದುವರು ಅಂದನು.

### ದೇವರಿಗೆ ಕಾಣಿಕೆ ಕೊಡುವವರ ತಾರತಮ್ಯವನ್ನು ಕುರಿತು ಮಾತಾಡಿದ್ದು.

(ಲೂಕ 21, 1—4.)

ಯೇಸು ಬೊಕ್ಕಸದಮನೆಗೆ ಎದುರಾಗಿ ಕೂತುಕೊಂಡು ಜನರು ಬೊಕ್ಕಸದಲ್ಲಿ ಹಣಾ 41 ಹಾಕುವದನ್ನು ನೋಡುತ್ತಿದ್ದನು. ಅನೇಕ ಮಂದಿ ಐಶ್ವರ್ಯವಂತರು ಬಹಳ ಬಹಳ ಹಾಕುತ್ತಿರಲು, ಒಬ್ಬ ಬಡ ವಿಧವೆಯು ಬಂದು ಎರಡು ಕಾಸು ಅಂದರೆ ಒಂದು ದುಗ್ಗಾಣಿ 42 ಹಾಕಿದಳು. ಆಗ ಆತನು ತನ್ನ ಶಿಷ್ಯರನ್ನು ಹತ್ತರಕ್ಕೆ ಕರೆದು—ನಿಮಗೆ ಸತ್ಯವಾಗಿ 43 ಹೇಳುತ್ತೇನೆ, ಬೊಕ್ಕಸದಲ್ಲಿ ಹಾಕಿದವರೆಲ್ಲರಲ್ಲಿ ಈ ಬಡ ವಿಧವೆಯೇ ಹೆಚ್ಚು ಹಾಕಿದ್ದಾಳೆ. ಹ್ಯಾಗಂದರೆ ಉಳಿದವರೆಲ್ಲರು ತಮಗೆ ಸಾಕಾಗಿ ಮಿಕ್ಕದ್ದರಲ್ಲಿ ಹಾಕಿದರು; ಈಕೆಯೋ 44 ತನ್ನ ಬಡತನದಲ್ಲಿಯೂ ತನಗಿದ್ದದ್ದನ್ನೆಲ್ಲಾ ಹಾಕಿದಳು, ತನ್ನ ಜೀವನವನ್ನೇ ಕೊಟ್ಟು ಬಿಟ್ಟಳು ಅಂದನು.

### ಯೇಸು ಯೆರೂಸಲೇಮಿನ ನಾಶನವನ್ನು ಮುಂದಾಗಿ ತಿಳಿಸಿದ್ದು.

(ಮತ್ತಾಯ 24; ಲೂಕ 21, 5—36.)

**13** ಯೇಸು ದೇವಾಲಯವನ್ನು ಬಿಟ್ಟು ಹೋಗುತ್ತಿರಲು, ಆತನ ಶಿಷ್ಯರಲ್ಲಿ ಒಬ್ಬನು ಆತನಿಗೆ—ಗುರುವೇ, ನೋಡು, ಎಂಥಾ ಕಲ್ಲುಗಳು! ಎಂಥಾ ಕಟ್ಟಣಗಳು! ಎಂದು ಹೇಳಿದನು. 2 ಯೇಸು—ಈ ದೊಡ್ಡ ಕಟ್ಟಣಗಳನ್ನು ನೋಡುತ್ತೀಯಾ? ಇಲ್ಲಿ ಕಲ್ಲಿನ ಮೇಲೆ ಕಲ್ಲು ಉಳಿಯುವದಿಲ್ಲ; ಎಲ್ಲಾ ಕೆಡವಲ್ಪಡುವದು ಅಂದನು.

3 ಬಳಿಕ ಆತನು ಎಣ್ಣೇಮರಗಳ ಗುಡ್ಡಕ್ಕೆ ಹೋಗಿ, ದೇವಾಲಯಕ್ಕೆ ಎದುರಾಗಿ ಕೂತಿದ್ದಾಗ, 4 ಪೇತ್ರ ಯಾಕೋಬ ಯೋಹಾನ ಅಂದ್ರೆಯ ಇವರು—ಅದು ಯಾವಾಗ ಆಗುವದು? ಅದೆಲ್ಲಾ ನೆರವೇರುವಹಾಗಿರುವಾಗ ಯಾವ ಲಕ್ಷಣ ತೋರುವದು? ನಮಗೆ ಹೇಳು ಎಂದು ಆತನನ್ನು ಪ್ರತ್ಯೇಕವಾಗಿ ಕೇಳಲು, 5 ಯೇಸು ಅವರಿಗೆ ಹೇಳಿದ್ದೇನಂದರೆ— 6 ನಿಮ್ಮನ್ನು ಯಾರಾದರೂ ಮೋಸಗೊಳಿಸ್ಯಾರು ನೋಡಿಕೊಳ್ಳಿರಿ. ಅನೇಕರು ಬಂದು ನನ್ನ ಹೆಸರನ್ನು ಎತ್ತಿಕೊಂಡು—ನಾನು ಕ್ರಿಸ್ತನು, ನಾನು ಕ್ರಿಸ್ತನು ಎಂದು ಹೇಳಿ ಎಷ್ಟೋ ಜನರನ್ನು ಮೋಸಗೊಳಿಸುವರು. 7 ಇದಲ್ಲದೆ ಯುದ್ಧಗಳಾಗುವದನ್ನೂ ಯುದ್ಧಗಳ ಸುದ್ದಿಗಳನ್ನೂ ನೀವು ಕೇಳುವಾಗ ಕಳವಳ ಪಡಬೇಡಿರಿ. ಹಾಗಾಗುವದು ಅಗತ್ಯ; ಆದಾಗ್ಯೂ ಇದು ಇನ್ನೂ ಅಂತ್ಯಕಾಲವಲ್ಲ. 8 ಜನಕ್ಕೆ ವಿರೋಧವಾಗಿ ಜನವೂ ರಾಜ್ಯಕ್ಕೆ ವಿರೋಧವಾಗಿ ರಾಜ್ಯವೂ ಏಳುವದು; ಮತ್ತು ಅಲ್ಲಲ್ಲಿ ಭೂಕಂಪಗಳೂ ಆಗುವವು; ಬರಗಳೂ ಬರುವವು; ಇವೆಲ್ಲಾ [ನೂತನ ಕಾಲವು ಹುಟ್ಟುವ] ಪ್ರಸವವೇದನೆಯ ಪ್ರಾರಂಭ.

9 ಆದರೆ ನಿಮ್ಮ ವಿಷಯದಲ್ಲಿ ನೋಡಿಕೊಳ್ಳಿರಿ. ನಿಮ್ಮನ್ನು ನ್ಯಾಯವಿಚಾರಣೆಯ ಸಭೆಗಳಿಗೆ ಎಳಕೊಂಡುಹೋಗುವರು; ಸಭಾಮಂದಿರಗಳಲ್ಲಿ ನಿಮ್ಮನ್ನು ಹೊಡೆಯುವರು; ನನ್ನ ನಿಮಿತ್ತವಾಗಿ ನೀವು ಅಧಿಪತಿಗಳ ಮುಂದೆಯೂ ಅರಸುಗಳ ಮುಂದೆಯೂ ಸಾಕ್ಷಿಗಳಾಗಿ
10 ನಿಲ್ಲಬೇಕಾಗುವದು. ಮೊದಲು ಎಲ್ಲಾ ದೇಶದವರಿಗೆ ಸುವಾರ್ತೆಯು ಸಾರಲ್ಪಡಬೇಕು.
11 ನಿಮ್ಮನ್ನು ಹಿಡುಕೊಂಡುಹೋಗಿ ಒಪ್ಪಿಸುವಾಗ, ಏನು ಹೇಳಬೇಕು ಎಂದು ಮುಂಚಿತವಾಗಿ ಚಿಂತೆಮಾಡಬೇಡಿರಿ; ಆ ಗಳಿಗೆಯಲ್ಲಿ ನಿಮಗೆ ಸೂಚನೆಯಾಗುವಂಥ ಮಾತನ್ನೇ
12 ಆಡಿರಿ; ಮಾತಾಡುವವರು ನೀವಲ್ಲ, ಪವಿತ್ರಾತ್ಮನೇ. ಇದಲ್ಲದೆ ಅಣ್ಣನು ತಮ್ಮನನ್ನು ತಂದೆಯು ಮಗನನ್ನು ಮರಣಕ್ಕೆ ಒಪ್ಪಿಸುವರು. ಮಕ್ಕಳು ಹೆತ್ತವರ ಮೇಲೆ ತಿರುಗಿ
13 ಬಿದ್ದು ಅವರನ್ನು ಕೊಲ್ಲಿಸುವರು. ಮತ್ತು ನನ್ನ ಹೆಸರಿನ ನಿಮಿತ್ತವಾಗಿ ಎಲ್ಲರೂ ನಿಮ್ಮನ್ನು ಹಗೆಮಾಡುವರು. ಆದರೆ ಕಡೇವರೆಗೂ ತಾಳುವವನು ರಕ್ಷಣೆ ಹೊಂದುವನು.
14 ಇದಲ್ಲದೆ ಹಾಳುಮಾಡುವ ಅಸಹ್ಯವಸ್ತುವು[1] ನಿಲ್ಲಬಾರದ ಸ್ಥಳದಲ್ಲಿ ನಿಂತಿರುವದನ್ನು ನೀವು ಕಾಣುವಾಗ ಯೂದಾಯದಲ್ಲಿರುವವರು ಬೆಟ್ಟಗಳಿಗೆ ಓಡಿಹೋಗಲಿ. (ಇದನ್ನು
15 ಓದುವವನು ತಿಳುಕೊಳ್ಳಲಿ.) ಮಾಳಿಗೆಯ ಮೇಲಿರುವವನು ತನ್ನ ಮನೆಯೊಳಗಿಂದ ಏನಾದರೂ ತೆಗೆದುಕೊಳ್ಳುವದಕ್ಕೆ ಇಳಿಯದೆಯೂ ಒಳಕ್ಕೆ ಹೋಗದೆಯೂ ಓಡಲಿ.
16 ಹೊಲದಲ್ಲಿರುವವನು ತನ್ನ ಹೊದಿಕೆಯನ್ನು ತೆಗೆದುಕೊಂಡು ಹೋಗಬೇಕೆಂದು ಹಿಂತಿರಿಗಿ
17 ಬಾರದೆ ಓಡಿಹೋಗಲಿ. ಆದರೆ ಆ ದಿನಗಳಲ್ಲಿ ಬಸುರಿಯರಿಗೂ ಮೊಲೆಕೂಸಿರುವ
18 ಹೆಂಗಸರಿಗೂ ಆಗುವ ಕಷ್ಟವನ್ನು ಏನು ಹೇಳಲಿ! ನಿಮ್ಮ ಪಲಾಯನವು ಚಳಿಗಾಲದಲ್ಲಿ
19 ಆಗದಂತೆ ದೇವರನ್ನು ಪ್ರಾರ್ಥಿಸಿರಿ; ಯಾಕಂದರೆ ಆ ದಿವಸಗಳು ಸಂಕಟದಿವಸಗಳಾಗಿರುವವು; ಅಂಥಾ ಸಂಕಟ ದೇವರು ಮಾಡಿದ ಸೃಷ್ಟಿಮೊದಲುಗೊಂಡು ಇಂದಿನವರಿಗೂ
20 ಆಗಲಿಲ್ಲ[2]; ಇನ್ನು ಮೇಲೆಯೂ ಆಗುವದಿಲ್ಲ. ಕರ್ತನು ಆ ದಿನಗಳನ್ನು ಕಡಿಮೆಮಾಡದಿದ್ದರೆ ಒಂದು ನರಪ್ರಾಣಿಯಾದರೂ ಉಳಿಯಲಿಕ್ಕಿಲ್ಲ; ಆದರೆ ಆತನು ಆ ದಿನಗಳನ್ನು
21 ತಾನು ಆದುಕೊಂಡವರಿಗೋಸ್ಕರ ಕಡಿಮೆಮಾಡಿದನು. ಆ ಕಾಲದಲ್ಲಿ ಯಾರಾದರೂ ನಿಮಗೆ—ಇಗೋ ಕ್ರಿಸ್ತನು ಇಲ್ಲಿದ್ದಾನೆ, ಅಗೋ ಅಲ್ಲಿದ್ದಾನೆ ಎಂದು ಹೇಳಿದರೆ, ನಂಬ
22 ಬೇಡಿರಿ; ಸುಳ್ಳು ಕ್ರಿಸ್ತರೂ ಸುಳ್ಳುಪ್ರವಾದಿಗಳೂ ಎದ್ದು, ಸಾಧ್ಯವಾದರೆ ದೇವರಾದುಕೊಂಡವರನ್ನೂ ಮೋಸಗೊಳಿಸುವದಕ್ಕೋಸ್ಕರ ಸೂಚಕಕಾರ್ಯಗಳನ್ನೂ ಅದ್ಭುತ
23 ಕಾರ್ಯಗಳನ್ನೂ ಮಾಡಿ ತೋರಿಸುವರು. ನೋಡಿಕೊಳ್ಳಿರಿ; ಇಗೋ ನಿಮಗೆ ಎಲ್ಲವನ್ನೂ ಮುಂದಾಗಿ ಹೇಳಿದ್ದೇನೆ.

24 ಇದಲ್ಲದೆ ಆ ದಿನಗಳಲ್ಲಿ ಆ ಸಂಕಟ ತೀರಿದ ಮೇಲೆ, ಸೂರ್ಯನು ಕತ್ತಲಾಗಿ
25 ಹೋಗುವನು; ಚಂದ್ರನು ಬೆಳಕು ಕೊಡದೆ ಇರುವನು; ನಕ್ಷತ್ರಗಳು ಆಕಾಶದಿಂದ
26 ಉದುರುತ್ತಿರುವವು; ಆಕಾಶದಲ್ಲಿರುವ ಶಕ್ತಿಗಳು ಕದಲುವವು[3]. ಆಗ ಮನುಷ್ಯಕುಮಾರನು ಬಹು ಬಲದಿಂದಲೂ ಮಹಿಮೆಯಿಂದಲೂ ಮೇಘಗಳಲ್ಲಿ ಬರುವದನ್ನು[4]
27 ಕಾಣುವರು. ಮತ್ತು ಆತನು ತನ್ನ ದೂತರನ್ನು ಕಳುಹಿಸಿ, ತಾನಾದುಕೊಂಡವರನ್ನು

---

1) ದಾನಿಯೇಲ ೯, ೨೭; ೧೨, ೧೧.
2) ದಾನಿಯೇಲ ೧೨, ೧.
3) ಯೆಶಾಯ ೧೩, ೧೦; ೩೪, ೪.
4) ದಾನಿಯೇಲ ೭, ೧೩. ೧೪.

ಭೂಮಿಯ ಕಟ್ಟಕಡೆಯಿಂದ ಆಕಾಶದ ಕಟ್ಟಕಡೆಯ ವರೆಗೆ ನಾಲ್ಕು ದಿಕ್ಕುಗಳಿಂದಲೂ ಒಟ್ಟುಗೂಡಿಸುವನು.

ಅಂಜೂರದ ಮರದ ದೃಷ್ಟಾಂತದಿಂದ ಬುದ್ಧೀಕಲಿತುಕೊಳ್ಳಿರಿ; ಅದರ ಕೊಂಬೆಯು 28 ಇನ್ನೂ ಎಳೇದಾಗಿದ್ದು ಎಲೆಬಿಡುವಾಗ ಬೇಸಿಗೆಯು ಹತ್ತರವಾಯಿತೆಂದು ತಿಳುಕೊಳ್ಳು ತ್ತೀರಲ್ಲಾ. ಹಾಗೆಯೇ ನೀವು ಸಹ ಇದೆಲ್ಲಾ ಆಗುವದನ್ನು ಕಾಣುವಾಗ, ಹತ್ತರವದೆ, 29 ಬಾಗಲಲ್ಲೇ ಅದೆ ಎಂದು ತಿಳುಕೊಳ್ಳಿರಿ. ಎಲ್ಲಾ ಆಗುವ ತನಕ ಈ ಸಂತತಿಯು ಅಳಿದು 30 ಹೋಗುವದಿಲ್ಲವೆಂದು ನಿಮಗೆ ಸತ್ಯವಾಗಿ ಹೇಳುತ್ತೇನೆ. ಭೂಮ್ಯಾಕಾಶಗಳು ಅಳಿದು 31 ಹೋಗುವವು; ಆದರೆ ನನ್ನ ಮಾತುಗಳು ಅಳಿದುಹೋಗುವದಿಲ್ಲ.

ಇದಲ್ಲದೆ ಆ ದಿನದ ವಿಷಯವಾಗಲಿ ಆ ಗಳಿಗೆಯ ವಿಷಯವಾಗಲಿ ನನ್ನ ತಂದೆಗೆ 32 ತಿಳಿಯುವದೇ ಹೊರತು ಮತ್ತ್ಯಾರಿಗೂ ತಿಳಿಯದು; ಪರಲೋಕದಲ್ಲಿರುವ ದೂತರಿಗೂ ತಿಳಿಯದು; ಮಗನಿಗೂ ತಿಳಿಯದು. ಆ ಕಾಲವು ಯಾವಾಗ ಬರುವದೋ ನಿಮಗೆ 33 ಗೊತ್ತಿಲ್ಲವಾದ್ದರಿಂದ ನೋಡಿಕೊಳ್ಳಿರಿ, ಜಾಗರೂಕರಾಗಿರಿ[1]. ಒಬ್ಬ ಮನುಷ್ಯನು ತನ್ನ 34 ಮನೆಯನ್ನು ಬಿಟ್ಟು ಬೇರೊಂದು ದೇಶಕ್ಕೆ ಹೋಗುವಾಗ ತನ್ನ ಆಳುಗಳಿಗೆ ಮನೇ ಆಡ ಳಿತವನ್ನು ಒಪ್ಪಿಸಿಕೊಟ್ಟು, ಒಬ್ಬೊಬ್ಬನಿಗೆ ಅವನವನ ಕೆಲಸವನ್ನು ನೇಮಿಸಿ, ಬಾಗಲು ಕಾಯುವವನನ್ನು ಕರೆದು—ನೀನು ಎಚ್ಚರವಾಗಿರಬೇಕೆಂದು ಅಪ್ಪಣೆ ಕೊಡುವ ಪ್ರಕಾರ [ನಾನು ನಿಮಗೆ ಅಪ್ಪಣೆ ಕೊಡುತ್ತೇನೆ]. ಮನೇಯಜಮಾನನು ಸಂಜೆಯಲ್ಲೋ ಸರಿ 35 ಹೊತ್ತಿನಲ್ಲೋ ಕೋಳಿ ಕೂಗುವಾಗಲೋ ಮುಂಜಾನೆಯಲ್ಲೋ ಯಾವಾಗ ಬರು ತ್ತಾನೋ ನಿಮಗೆ ಗೊತ್ತಿಲ್ಲದ ಕಾರಣ ಎಚ್ಚರವಾಗಿರಿ; ಅವನು ಏಕಾಏಕಿ ಬಂದು 36 ನೀವು ನಿದ್ದೆಮಾಡುವದನ್ನು ಕಂಡಾನು. ನಾನು ನಿಮಗೆ ಹೇಳಿದ್ದನ್ನು ಎಲ್ಲರಿಗೂ ಹೇಳು 37 ತ್ತೇನೆ, ಎಚ್ಚರವಾಗಿರಿ ಅಂದನು.

ಅಧಿಕಾರಸ್ಥರು ಯೇಸುವನ್ನು ಕೊಲ್ಲುವದಕ್ಕೆ ಉಪಾಯ ಮಾಡಿದ್ದು; ಒಬ್ಬ ಸ್ತ್ರೀಯು ಪರಿಮಳತೈಲವನ್ನು ಆತನ ಮೇಲೆ ಹೊಯಿದದ್ದು.

(ಮತ್ತಾಯ 26, 1—16; ಲೂಕ 22, 1—6; ಯೋಹಾನ 11, 47—53.)

ಪಸ್ಕದ ಕುರಿಮರಿಯನ್ನೂ ಹುಳಿಯಿಲ್ಲದ ರೊಟ್ಟಿಯನ್ನೂ ತಿನ್ನುವ ಹಬ್ಬ ಬರುವದಕ್ಕೆ **14** ಇನ್ನೂ ಎರಡು ದಿನಗಳಿದ್ದಾಗ, ಮಹಾಯಾಜಕರೂ ಶಾಸ್ತ್ರಿಗಳೂ ಯೇಸುವನ್ನು ಉಪಾ ಯದಿಂದ ಹಿಡಿದು ಕೊಲ್ಲುವದಕ್ಕೆ ಮಾರ್ಗವನ್ನು ಹುಡುಕುತ್ತಿದ್ದರು. ಯಾಕಂದರೆ— 2 ಹಬ್ಬದಲ್ಲಿ ಹಿಡಿಯಬಾರದು, ನಮ್ಮ ಜನರಲ್ಲಿ ದೊಂಬಿಯಾದೀತು ಎಂದು ಅವರು ಮಾತಾ ಡಿಕೊಂಡರು.

ಆತನು ಬೇಥಾನ್ಯದಲ್ಲಿ ಕುಷ್ಠರೋಗಿಯಾದ ಸೀಮೋನನ ಮನೆಯಲ್ಲಿ ಇದ್ದು 3 ಊಟಕ್ಕೆ ಕೂತಿದ್ದಾಗ, ಒಬ್ಬ ಸ್ತ್ರೀಯು ಬಹು ಬೆಲೆಯುಳ್ಳ ಅಚ್ಚ ಜಟಾಮಾಂಸಿ ತೈಲದ

[1] ಕೆಲವು ಪ್ರತಿಗಳಲ್ಲಿ—ಜಾಗರೂಕರಾಗಿರಿ, ದೇವರನ್ನು ಪ್ರಾರ್ಥಿಸಿರಿ ಎಂದು ಬರೆದದೆ.

ಭರಣಿಯನ್ನು ತೆಗೆದುಕೊಂಡು ಬಂದು, ಆ ಭರಣಿಯನ್ನು ಒಡೆದು, ತೈಲವನ್ನು ಆತನ
4 ತಲೆಯಮೇಲೆ ಹೊಯಿದಳು. ಆದರೆ ಕೆಲವರು ತಮ್ಮೊಳಗೆ ಕೋಪಗೊಂಡು—ಈ ತೈಲ
5 ವನ್ನು ನಷ್ಟ ಮಾಡಿದ್ದೇಕೆ? ಇದನ್ನು ಮುನ್ನೂರು ಹಣಕ್ಕಿಂತ ಹೆಚ್ಚು ಬೆಲೆಗೆ ಮಾರಿ,
6 ಬಡವರಿಗೆ ಕೊಡಬಹುದಾಗಿತ್ತಲ್ಲಾ ಎಂದು ಹೇಳಿ ಆಕೆಯನ್ನು ಗದರಿಸಿದರು. ಆದರೆ
ಯೇಸು—ಈಕೆಯ ಮಾತನ್ನು ಬಿಡಿರಿ. ಈಕೆಗೆ ಯಾಕೆ ತೊಂದರೆ ಕೊಡುತ್ತೀರಿ? ಈಕೆ
7 ನನಗೆ ಒಳ್ಳೇ ಕಾರ್ಯವನ್ನು ಮಾಡಿದ್ದಾಳೆ. ಬಡವರು ಯಾವಾಗಲೂ ನಿಮ್ಮ ಬಳಿಯಲ್ಲಿ
ಇರುತ್ತಾರೆ; ನಿಮಗೆ ಮನಸ್ಸು ಬಂದಾಗ ಅವರಿಗೆ ಉಪಕಾರಮಾಡಬಹುದು; ಆದರೆ
8 ನಾನು ಯಾವಾಗಲೂ ನಿಮ್ಮ ಬಳಿಯಲ್ಲಿ ಇರುವದಿಲ್ಲ. ಈಕೆಯು ತನ್ನ ಕೈಲಾಗುವಷ್ಟು
ಮಾಡಿದ್ದಾಳೆ; ಈಕೆಯು ಮುಂದಾಗಿ ನನ್ನ ಉತ್ತರಕ್ರಿಯೆಗೋಸ್ಕರ ನನ್ನ ದೇಹಕ್ಕೆ ಈ
9 ತೈಲವನ್ನು ಹಚ್ಚಿದ್ದಾಳೆ. ಸುವಾರ್ತೆಯು ಸರ್ವಲೋಕದಲ್ಲಿ ಎಲ್ಲೆಲ್ಲಿ ಸಾರಲಾಗು
ವದೋ ಅಲ್ಲಲ್ಲಿ ಈಕೆ ಮಾಡಿದ್ದನ್ನು ಸಹ ಈಕೆಯ ನೆನಪಿಗಾಗಿ ಹೇಳುವರೆಂದು ನಿಮಗೆ
ಸತ್ಯವಾಗಿ ಹೇಳುತ್ತೇನೆ ಅಂದನು.

10 ಆ ಮೇಲೆ ಹನ್ನೆರಡುಮಂದಿ ಶಿಷ್ಯರಲ್ಲಿ ಒಬ್ಬನಾಗಿದ್ದ ಇಸ್ಕರಿಯೋತ ಯೂದನು
11 ಯೇಸುವನ್ನು ಹಿಡುಕೊಡಬೇಕೆಂತ ಮಹಾಯಾಜಕರ ಬಳಿಗೆ ಹೋದನು. ಅವರು
ಕೇಳಿ ಸಂತೋಷಪಟ್ಟು—ನಿನಗೆ ಹಣಕೊಡುತ್ತೇವೆಂದು ಮಾತುಕೊಟ್ಟರು. ಅವನು
ಆತನನ್ನು ಹಿಡುಕೊಡುವದಕ್ಕೆ ಅನುಕೂಲವಾದ ಸಮಯವನ್ನು ನೋಡುತ್ತಾ ಇದ್ದನು.

### ಯೇಸು ತನ್ನ ಶಿಷ್ಯರ ಸಂಗಡ ಕಡೇ ಭೋಜನವನ್ನು ಮಾಡಿದ್ದು.

(ಮತ್ತಾಯ **26**, 17—29; ಲೂಕ **22**, 7—23; ಯೋಹಾನ **13**, 21—30.)

12 ಹುಳಿಯಿಲ್ಲದ ರೊಟ್ಟಿಯ ಹಬ್ಬದ ಮೊದಲನೇ ದಿವಸ, ಅಂದರೆ ಪಸ್ಕದ ಕುರಿಮರಿ
ಯನ್ನು ಕೊಯ್ಯುವ ದಿವಸ, ಆತನ ಶಿಷ್ಯರು—ನಿನ್ನ ಪಸ್ಕದ ಊಟಕ್ಕೆ ಎಲ್ಲಿ ಹೋಗಿ
13 ಸಿದ್ಧಮಾಡಬೇಕೆಂದು ನಮಗೆ ಹೇಳುತ್ತೀ ಎಂದು ಆತನನ್ನು ಕೇಳಿದಾಗ, ಆತನು ತನ್ನ
ಶಿಷ್ಯರಲ್ಲಿ ಇಬ್ಬರನ್ನು ಕರೆದು—ನೀವು ಪಟ್ಟಣಕ್ಕೆ ಹೋಗಿರಿ; ಅಲ್ಲಿ ಒಬ್ಬ ಮನುಷ್ಯನು
ತುಂಬಿದ ಕೊಡವನ್ನು ಹೊತ್ತುಕೊಂಡು ನಿಮ್ಮೆದುರಿಗೆ ಬರುವನು; ನೀವು ಅವನ ಹಿಂದೆ
14 ಹೋಗಿರಿ; ಅವನು ಯಾವ ಮನೆಗೆ ಹೋಗುವನೋ ಆ ಮನೆಯ ಯಜಮಾನನಿಗೆ—
ನಮ್ಮ ಬೋಧಕನು ತನ್ನ ಶಿಷ್ಯರ ಸಂಗಡ ಪಸ್ಕದ ಊಟವನ್ನು ಮಾಡುವದಕ್ಕೆ ತನಗೆ
15 ಭೋಜನಶಾಲೆ ಎಲ್ಲಿ ಎಂದು ಕೇಳುತ್ತಾನೆ ಎಂಬದಾಗಿ ಹೇಳಿರಿ. ಅವನು ತಕ್ಕ ಸಾಮಾ
ನೆಲ್ಲಾ ಸಿದ್ಧವಾಗಿ ಇಟ್ಟಿರುವ ಮೇಲಂತಸ್ತಿನ ದೊಡ್ಡ ಕೊಠಡಿಯನ್ನು ತೋರಿಸುವನು; ಅಲ್ಲಿ
16 ನಮಗೆ ಸಿದ್ಧಮಾಡಿರಿ ಎಂದು ಹೇಳಿ, ಅವರನ್ನು ಕಳುಹಿಸಿಕೊಟ್ಟನು. ಶಿಷ್ಯರು ಹೊರಟು
ಪಟ್ಟಣಕ್ಕೆ ಹೋಗಿ, ಆತನು ತಮಗೆ ಹೇಳಿದಂತೆ ಕಂಡು, ಪಸ್ಕದೂಟಕ್ಕೆ ಸಿದ್ಧಮಾಡಿದರು.
17, 18 ಸಂಜೆಯಾದಾಗ, ಆತನು ಹನ್ನೆರಡುಮಂದಿ ಶಿಷ್ಯರ ಸಂಗಡ ಬಂದನು. ಅವರು
ಕೂತುಕೊಂಡು ಊಟಮಾಡುತ್ತಿರುವಾಗ ಯೇಸು—ನಿಮ್ಮಲ್ಲಿ ಒಬ್ಬನು ನನ್ನನ್ನು ಹಿಡು
ಕೊಡುವನು, ಅವನು ನನ್ನ ಸಂಗಡ ಊಟಮಾಡುವವನೇ ಎಂದು ನಿಮಗೆ ಸತ್ಯವಾಗಿ

ಹೇಳುತ್ತೇನೆ ಅಂದನು. ಆಗ ಅವರು ದುಃಖಪಟ್ಟು ಒಬ್ಬೊಬ್ಬರಾಗಿ—ನಾನಲ್ಲವಲ್ಲಾ, 19
ನಾನಲ್ಲವಲ್ಲಾ ಎಂದು ಆತನನ್ನು ಕೇಳುವವರಾದರು. ಆತನು ಅವರಿಗೆ—ಅವನು ನನ್ನ 20
ಹನ್ನೆರಡುಮಂದಿಯಲ್ಲಿ ಒಬ್ಬನು, ನನ್ನ ಕೂಡ ಬಟ್ಟಲಲ್ಲಿ ಕೈ ಅದ್ದುವವನೇ. ಮನುಷ್ಯ 21
ಕುಮಾರನ ವಿಷಯವಾಗಿ ಬರೆದಿರುವ ಪ್ರಕಾರ ಹಾಗೆ ಆತನು ಹೊರಟುಹೋಗುತ್ತಾನೆ,
ಸರಿ; ಆದರೆ ಯಾವನು ಮನುಷ್ಯಕುಮಾರನನ್ನು ಹಿಡುಕೊಡುವನೋ ಅವನ ದುರ್ಗತಿ
ಯನ್ನು ಏನು ಹೇಳಲಿ. ಆ ಮನುಷ್ಯನು ಹುಟ್ಟದಿದ್ದರೆ ಅವನಿಗೆ ಒಳ್ಳೇದಾಗಿತ್ತು ಎಂದು
ಹೇಳಿದನು.

ಅವರು ಊಟಾಮಾಡುತ್ತಿರುವಾಗ, ಆತನು ರೊಟ್ಟಿಯನ್ನು ತೆಗೆದುಕೊಂಡು, ದೇವರ 22
ಸ್ತೋತ್ರಾಮಾಡಿ, ಮುರಿದು, ಅವರಿಗೆ ಕೊಟ್ಟು—ತಕ್ಕೊಳ್ಳಿರಿ; ಇದು ನನ್ನ ದೇಹ
ಅಂದನು. ಆ ಮೇಲೆ ಪಾತ್ರೆಯನ್ನು ತೆಗೆದುಕೊಂಡು, ಸ್ತೋತ್ರಾಮಾಡಿ, ಅವರಿಗೆ 23
ಕೊಟ್ಟನು; ಅವರೆಲ್ಲರೂ ಅದರಲ್ಲಿ ಕುಡಿದರು. ಮತ್ತು ಆತನು ಅವರಿಗೆ—ಇದು ನನ್ನ 24
ರಕ್ತ, ಇದು ಒಡಂಬಡಿಕೆಯ ರಕ್ತ[1]; ಇದು ಬಹು ಜನರಿಗೋಸ್ಕರ ಸುರಿಸಲ್ಪಡುವ ರಕ್ತ.
ನಿಮಗೆ ಸತ್ಯವಾಗಿ ಹೇಳುತ್ತೇನೆ, ನಾನು ದೇವರ ರಾಜ್ಯದಲ್ಲಿ ದ್ರಾಕ್ಷಾರಸವನ್ನು ಹೊಸ 25
ದಾಗಿ ಕುಡಿಯುವ ದಿನದ ವರೆಗೂ ಅದನ್ನು ಇನ್ನು ಕುಡಿಯುವದಿಲ್ಲ ಎಂದು ಹೇಳಿದನು.

### ಯೇಸು ಗೆತ್ಸೇಮನೆ ತೋಟಕ್ಕೆ ಹೋಗಿ ಪ್ರಾರ್ಥಿಸಿದ್ದು; ಯೂದನು ಆತನನ್ನು ಶತ್ರುಗಳಿಗೆ ಹಿಡುಕೊಟ್ಟದ್ದು.

(ಮತ್ತಾಯ **26**, 30—57; ಲೂಕ **22**, 31—55; ಯೋಹಾನ **13**, 36—38; **18**, 1—11.)

ಬಳಿಕ ಅವರು ಕೀರ್ತನೆ ಹಾಡಿ ಎಣ್ಣೇಮರಗಳ ಗುಡ್ಡಕ್ಕೆ ಹೊರಟುಹೋದರು. 26
ಆಗ ಯೇಸು ಅವರಿಗೆ—ನೀವೆಲ್ಲರೂ ದಿಗಿಲುಪಟ್ಟು ಹಿಂಜರಿಯುವಿರಿ. ಕುರುಬನನ್ನು 27
ಹೊಡೆಯುವೆನು, ಕುರಿಗಳು ಚದರಿ ಹೋಗುವವು ಎಂದು[2] ಬರೆದದೆಯಲ್ಲಾ. ಆದಾಗ್ಯೂ 28
ನಾನು ಜೀವಿತನಾಗಿ ಎದ್ದ ಮೇಲೆ, ನಿಮ್ಮ ಮುಂದೆ ಗಲಿಲಾಯಕ್ಕೆ ಹೋಗುವೆನು ಎಂದು
ಹೇಳಿದನು. ಆದರೆ ಪೇತ್ರನು—ಎಲ್ಲರು ದಿಗಿಲುಪಟ್ಟು ಹಿಂಜರಿದಾಗ್ಯೂ ನಾನು ಹಿಂಜರಿ 29
ಯುವವನಲ್ಲ ಅಂದನು. ಯೇಸು ಅವನಿಗೆ—ನಿನಗೆ ಸತ್ಯವಾಗಿ ಹೇಳುತ್ತೇನೆ, ಇದೇ 30
ರಾತ್ರಿಯಲ್ಲಿ ಕೋಳಿ ಎರಡುಸಾರಿ ಕೂಗುವದಕ್ಕಿಂತ ಮುಂಚೆ, ನೀನು ನನ್ನ ವಿಷಯ
ದಲ್ಲಿ—ಅವನನ್ನು ಅರಿಯೆನೆಂಬದಾಗಿ ಮೂರುಸಾರಿ ಹೇಳುವಿ ಎಂದು ಹೇಳಿದನು. ಆದರೆ 31
ಅವನು—ನಾನು ನಿನ್ನ ಸಂಗಡ ಸಾಯಬೇಕಾದರೂ ನಿನ್ನನ್ನು ಅರಿಯೆನೆಂಬದಾಗಿ ಎಂದಿಗೂ
ಹೇಳುವದಿಲ್ಲವೆಂದು ಬಹು ಖಂಡಿತವಾಗಿ ಮಾತಾಡಿದನು. ಅದರಂತೆ ಅವರೆಲ್ಲರೂ
ಹೇಳಿದರು.

ತರುವಾಯ ಅವರು ಗೆತ್ಸೇಮನೆ ಎಂಬ ತೋಟಕ್ಕೆ ಬಂದರು. ಆತನು ತನ್ನ ಶಿಷ್ಯ 32
ರಿಗೆ—ನೀವು ಇಲ್ಲೇ ಕೂತುಕೊಳ್ಳಿರಿ, ನಾನು ಪ್ರಾರ್ಥನೆಮಾಡಿ ಬರುತ್ತೇನೆ ಎಂದು
ಹೇಳಿ, ಪೇತ್ರ ಯಾಕೋಬ ಯೋಹಾನರನ್ನು ತನ್ನ ಜೊತೆಯಲ್ಲಿ ಕರಕೊಂಡು ಹೋಗಿ, 33
ಬೆಚ್ಚಿಬೆರಗಾಗಿ ಮನಗುಂದಿದವನಾದನು. ಮತ್ತು ಅವರಿಗೆ—ನನ್ನ ಪ್ರಾಣವು ಸಾಯು 34

---

[1] ಕೆಲವು ಪ್ರತಿಗಳಲ್ಲಿ—ಹೊಸ ಒಡಂಬಡಿಕೆಯ ರಕ್ತ ಎಂದು ಬರೆದದೆ; ಹೊರಡೋಣ ೨೪, ೮; ಯೆರೆಮೀಯ ೩೧, ೩೧; ಜೆಕರೀಯ ೯, ೧೧ ನೋಡು.
[2] ಜೆಕರೀಯ ೧೩, ೭.

ವಷ್ಟು ದುಃಖಕ್ಕೆ ಒಳಗಾಗಿದೆ. ನೀವು ಇಲ್ಲೇ ಇದ್ದು ಎಚ್ಚರವಾಗಿರಿ ಎಂದು ಹೇಳಿ,
35 ಸ್ವಲ್ಪ ಮುಂದೆ ಹೋಗಿ ನೆಲದ ಮೇಲೆ ಅಡ್ಡಬಿದ್ದು, ಸಾಧ್ಯವಾದರೆ ಆ ಗಳಿಗೆ
36 ತನ್ನನ್ನು ಬಿಟ್ಟುಹೋಗುವಂತೆ ದೇವರನ್ನು ಪ್ರಾರ್ಥಿಸಿ—ಅಪ್ಪಾ, ಅಪ್ಪಾ, ನಿನಗೆ ಎಲ್ಲಾ
ಸಾಧ್ಯವೇ; ಈ ಪಾತ್ರೆಯನ್ನು[1] ನನ್ನಿಂದ ತೊಲಗಿಸು; ಆದಾಗ್ಯೂ ನನ್ನ ಚಿತ್ತದಂತಾ
37 ಗದೆ, ನಿನ್ನ ಚಿತ್ತದಂತಾಗಲಿ ಅಂದನು. ಆ ಮೇಲೆ ಆತನು ಬಂದು, ಅವರು ನಿದ್ದೆ
ಮಾಡುವದನ್ನು ಕಂಡು, ಪೇತ್ರನಿಗೆ—ಸೀಮೋನನೇ, ನಿದ್ದೆಮಾಡುತ್ತೀಯಾ? ಒಂದು
38 ಗಳಿಗೆಯಾದರೂ ಎಚ್ಚರವಾಗಿರಲಾರೆಯಾ? ಶೋಧನೆಗೆ ಒಳಗಾಗದಂತೆ ಎಚ್ಚರವಾ
ಗಿದ್ದು ಪ್ರಾರ್ಥಿಸಿರಿ; ಮನಸ್ಸು[2] ಸಿದ್ಧವಾಗಿದೆ ಸರಿ, ಆದರೆ ದೇಹಕ್ಕೆ[3] ಬಲ ಸಾಲದು
39 ಎಂದು ಹೇಳಿದನು. ಆ ಮೇಲೆ ತಿರಿಗಿ ಹೋಗಿ, ಮೊದಲು ಹೇಳಿದ ಮಾತನ್ನೇ
40 ಹೇಳುತ್ತಾ ಪ್ರಾರ್ಥಿಸಿದನು. ಹಿಂತಿರುಗಿಬಂದಾಗ ಅವರು ನಿದ್ದೆಮಾಡುವದನ್ನು
ಕಂಡನು; ಅವರ ಕಣ್ಣುಗಳು ಬಹು ಭಾರವಾಗಿದ್ದವು; ಮತ್ತು ಆತನು ಕೇಳಿದ್ದಕ್ಕೆ ಏನು
41 ಉತ್ತರ ಕೊಡಬೇಕೋ ಅವರಿಗೆ ತಿಳಿಯಲಿಲ್ಲ. ಆತನು ಮೂರನೇ ಸಾರಿ ಹೋಗಿ
ಬಂದು—ನೀವು ಇನ್ನೂ ನಿದ್ದೆಮಾಡಿ, ದಣುವಾರಿಸಿಕೊಳ್ಳಿರಿ; ಸಾಕು; ಆ ಗಳಿಗೆ ಬಂತು;
42 ಇಗೋ, ಮನುಷ್ಯಕುಮಾರನು ದುರ್ಜನರ ಕೈಗೆ ಒಪ್ಪಿಸಲ್ಪಡುತ್ತಾನೆ. ಏಳಿರಿ, ಹೋ
ಗೋಣ; ಇಗೋ, ನನ್ನನ್ನು ಹಿಡುಕೊಡುವವನು ಹತ್ತರಕ್ಕೆ ಬಂದಿದ್ದಾನೆ ಅಂದನು.

43 ಆತನು ಇನ್ನೂ ಮಾತಾಡುತ್ತಿರುವಾಗಲೇ, ಹನ್ನೆರಡುಮಂದಿ ಶಿಷ್ಯರಲ್ಲಿ ಒಬ್ಬನಾದ
ಯೂದನು ಬಂದನು. ಅವನ ಸಂಗಡ ಒಂದು ಗುಂಪು ಕತ್ತಿ ದೊಣ್ಣೆಗಳನ್ನು ಹಿಡು
ಕೊಂಡು ಬಂತು; ಅವರನ್ನು ಮಹಾಯಾಜಕರೂ ಶಾಸ್ತ್ರಿಗಳೂ ಹಿರಿಯರೂ ಕಳುಹಿಸಿ
44 ದ್ದರು. ಇದಲ್ಲದೆ ಆತನನ್ನು ಹಿಡುಕೊಡುವವನು ಅವರಿಗೆ—ನಾನು ಯಾರಿಗೆ ಮುದ್ದಿ
ಡುತ್ತೇನೋ ಅವನೇ ಯೇಸು; ಅವನನ್ನು ಹಿಡಿದು ಭದ್ರವಾಗಿ ತೆಗೆದುಕೊಂಡುಹೋಗಿರಿ
45 ಎಂದು ಗುರುತು ಹೇಳಿದ್ದನು. ಅಲ್ಲಿಗೆ ಬಂದ ಕೂಡಲೆ, ಅವನು ಯೇಸುವಿನ ಬಳಿಗೆ
46 ಹೋಗಿ—ಗುರುವೇ ಎಂದು ಹೇಳಿ ಆತನಿಗೆ ಮುದ್ದಿಡಲು, ಅವರು ಆತನ ಮೇಲೆ
47 ಕೈಹಾಕಿ ಆತನನ್ನು ಹಿಡಿದರು. ಆದರೆ ಹತ್ತರ ನಿಂತಿದ್ದವರಲ್ಲಿ ಒಬ್ಬನು ತನ್ನ ಕತ್ತಿ
ಯನ್ನು ಹಿರಿದು ಮಹಾಯಾಜಕನ ಆಳನ್ನು ಹೊಡೆದು, ಅವನ ಕಿವಿಯನ್ನು ಕಡಿದು
48 ಹಾಕಿದನು. ಅವರು ಯೇಸುವನ್ನು ಹಿಡಿದಾಗ ಆತನು ಅವರಿಗೆ—ಕಳ್ಳನನ್ನು ಹಿಡಿಯು
ವದಕ್ಕೆ ಹೊರಡುವ ಪ್ರಕಾರ ಕತ್ತಿಗಳನ್ನೂ ದೊಣ್ಣೆಗಳನ್ನೂ ತೆಗೆದುಕೊಂಡು ನನ್ನನ್ನು
49 ಹಿಡಿಯುವದಕ್ಕೆ ಬಂದಿರಾ? ದಿನಾಲೂ ದೇವಾಲಯದಲ್ಲಿ ಬೋಧಿಸುತ್ತಾ ನಿಮ್ಮ ಸಂಗಡ
ಇದ್ದೆನಲ್ಲವೇ? ಆಗ ನೀವು ನನ್ನನ್ನು ಹಿಡಿಯಲಿಲ್ಲ. ಆದರೆ ಶಾಸ್ತ್ರವಚನಗಳು ನೆರವೇರು
50 ವಂತೆ ಇದೆಲ್ಲಾ ಆಯಿತು ಎಂದು ಉತ್ತರಕೊಟ್ಟನು. ಆಗ ಶಿಷ್ಯರೆಲ್ಲರೂ ಆತನನ್ನು
ಬಿಟ್ಟು ಓಡಿಹೋದರು.

51 ಒಬ್ಬಾನೊಬ್ಬ ಯೌವನಸ್ಥನು ಬರೀ ಮೈಮೇಲೆ ನಾರುಮಡಿಯನ್ನು ಹೊದ್ದವನಾಗಿ
52 ಆತನ ಹಿಂದೆ ಜನರ ಕೂಡ ಬರುತ್ತಿದ್ದನು. ಅವರು ಅವನನ್ನು ಹಿಡಿಯಲಾಗಿ, ಅವನು
ಆ ನಾರುಮಡಿಯನ್ನು ಬಿಟ್ಟು ಬರೀ ಮೈಲಿ ಓಡಿಹೋದನು.

---

1) ಅಂದರೆ, ಕಷ್ಟಾನುಭವವನ್ನು. 2) ಮೂಲ: ಆತ್ಮ. 3) ಅಥವಾ, ನರಭಾವಕ್ಕೆ.

ಹಿರೀ ಸಭೆಯವರು ಯೇಸುವನ್ನು ಮರಣದಂಡನೆಗೆ ತಕ್ಕವನೆಂದು ತೀರ್ಪುಮಾಡಿ, ದೇಶಾಧಿಪತಿಯ ಬಳಿಗೆ ತೆಗೆದುಕೊಂಡು ಹೋದದ್ದು; ಪೇತ್ರನು ಯೇಸುವನ್ನು ನಾನರಿಯೆನೆಂದು ಹೇಳಿದ್ದು.

(ಮತ್ತಾಯ **26**, **57—75**; ಲೂಕ **22**, **54—71**; ಯೋಹಾನ **18**, **12—27**.)

ಅಷ್ಟರಲ್ಲಿ ಅವರು ಯೇಸುವನ್ನು ಮಹಾಯಾಜಕನ ಬಳಿಗೆ ತೆಗೆದುಕೊಂಡು ಹೋ 53
ದರು. ಇವನ ಬಳಿಗೆ ಮಹಾಯಾಜಕರು ಶಾಸ್ತ್ರಿಗಳು ಹಿರಿಯರು ಇವರೆಲ್ಲರೂ ಕೂಡಿ
ಬಂದರು. ಪೇತ್ರನು ಆತನ ಹಿಂದೆ ದೂರದಲ್ಲಿ ಹೋಗುತ್ತಾ ಮಹಾಯಾಜಕನ ಮಠದ 54
ಅಂಗಳದೊಳಗೆ ಬಂದು ಓಲೇಕಾರರ ಸಂಗಡ ಬೆಂಕಿಯ ಮುಂದೆ ಕೂತುಕೊಂಡು ಚಳಿ
ಕಾಯಿಸಿಕೊಳ್ಳುತ್ತಿದ್ದನು. ಆಗ ಮಹಾಯಾಜಕರೂ ಹಿರೀಸಭೆಯವರೆಲ್ಲರೂ ಯೇಸು 55
ವನ್ನು ಕೊಲ್ಲಿಸಬೇಕೆಂದು ಆತನ ಮೇಲೆ ಸಾಕ್ಷಿಯನ್ನು ಹುಡುಕಿದರೂ ಏನೂ ಸಿಕ್ಕಲಿಲ್ಲ.
ಬಹುಮಂದಿ ಬಂದು ಆತನ ಮೇಲೆ ಸುಳ್ಳುಸಾಕ್ಷಿ ಹೇಳಿದಾಗ್ಯೂ ಅವರ ಸಾಕ್ಷಿ ಒಂದ 56
ಕ್ಕೊಂದು ಸರಿಬೀಳಲಿಲ್ಲ. ಕಡೆಗೆ ಕೆಲವರು ಎದ್ದು ನಿಂತು—ಇವನು, ಕೈಯಿಂದ 57-58
ಕಟ್ಟಿರುವ ಈ ದೇವಾಲಯವನ್ನು ನಾನು ಕೆಡವಿ, ಕೈಯಿಂದ ಕಟ್ಟದಿರುವ ಮತ್ತೊಂದನ್ನು
ಮೂರು ದಿವಸದೊಳಗೆ ಕಟ್ಟುವೆನು ಎಂದು ಹೇಳಿದ ಮಾತನ್ನು ನಾವು ಕೇಳಿದ್ದೇವೆ ಎಂಬ
ದಾಗಿ ಆತನ ಮೇಲೆ ಸುಳ್ಳುಸಾಕ್ಷಿ ಹೇಳಿದರು. ಹೀಗೆ ಹೇಳಿದಾಗ್ಯೂ ಅವರ ಸಾಕ್ಷಿ 59
ಒಂದಕ್ಕೊಂದು ಸರಿಬೀಳಲಿಲ್ಲ. ಆಗ ಮಹಾಯಾಜಕನು ಎದ್ದು ನಡುವೆ ನಿಂತು— 60
ನೀನೇನೂ ಉತ್ತರಹೇಳುವದಿಲ್ಲವೋ? ಇವರು ನಿನ್ನ ಮೇಲೆ ಹೇಳುವ ಈ ಸಾಕ್ಷಿ ಏನು?
ಎಂದು ಯೇಸುವನ್ನು ಕೇಳಿದನು. ಆದರೆ ಆತನು ಸುಮ್ಮನಿದ್ದು ಏನೂ ಉತ್ತರ ಹೇಳ 61
ಲಿಲ್ಲ. ತಿರಿಗಿ ಮಹಾಯಾಜಕನು ಆತನನ್ನು—ಭಗವಂತನ ಕುಮಾರನಾದ ಕ್ರಿಸ್ತನು
ನೀನೇಯೋ? ಎಂದು ಕೇಳಿದ್ದಕ್ಕೆ, ಯೇಸು—ನಾನೇ, ಇದಲ್ಲದೆ ಮನುಷ್ಯಕುಮಾ 62
ರನು ಸರ್ವಶಕ್ತನ ಬಲಗಡೆಯಲ್ಲಿ ಕೂತಿರುವದನ್ನೂ ಆಕಾಶದ ಮೇಘಗಳೊಂದಿಗೆ ಬರು
ವದನ್ನೂ ಕಾಣುವಿರಿ[1] ಅಂದನು. ಇದನ್ನು ಕೇಳಿ ಮಹಾಯಾಜಕನು ತನ್ನ ಅಂಗಿಗ 63
ಳನ್ನು ಹರಕೊಂಡು—ನಮಗೆ ಸಾಕ್ಷಿಗಳಿನ್ನ್ಯಾಕೆ? ಇವನು ಮಾಡಿದ ದೂಷಣೆಯನ್ನು 64
ಕೇಳಿದಿರಲ್ಲಾ; ನಿಮಗೆ ಹ್ಯಾಗೆ ತೋರುತ್ತದೆ ಎಂದು ಕೇಳಲು, ಅವರೆಲ್ಲರು—ಇವನು
ಮರಣದಂಡನೆ ಹೊಂದತಕ್ಕವನು ಎಂದು ತೀರ್ಪುಮಾಡಿದರು. ಆ ಮೇಲೆ ಕೆಲವರು ಆತ 65
ನನ್ನು ಉಗುಳಿ, ಆತನ ಮುಖಕ್ಕೆ ಮುಸುಕುಹಾಕಿ ಗುದ್ದಿ—ಪ್ರವಾದನೆ ಹೇಳು ಅನ್ನುತ್ತಿ
ದ್ದರು. ಮತ್ತು ಓಲೇಕಾರರು ಆತನನ್ನು ಏಟುಹಾಕುತ್ತಾ ತಮ್ಮ ವಶಕ್ಕೆ ತೆಗೆದುಕೊಂಡರು.

ಇತ್ತಲಾಗಿ ಪೇತ್ರನು ಕೆಳಗೆ ಅಂಗಳದಲ್ಲಿ ಇದ್ದಾಗ, ಮಹಾಯಾಜಕನ ತೊತ್ತುಗಳಲ್ಲಿ 66
ಒಬ್ಬಳು ಬಂದು, ಅವನು ಚಳಿಕಾಯಿಸಿಕೊಳ್ಳುತ್ತಿರುವದನ್ನು ಕಂಡು ಅವನನ್ನು ದೃಷ್ಟಿಸಿ 67
ನೋಡಿ—ನೀನು ಸಹ ಆ ನಜರೇತಿನವನಾದ ಯೇಸುವಿನ ಕೂಡ ಇದ್ದವನು ಅಂದಳು.
ಅವನು—ಅಲ್ಲ; ನೀನು ಏನನ್ನುತ್ತೀಯೋ ನನಗೆ ಗೊತ್ತಿಲ್ಲ, ತಿಳಿಯುವದಿಲ್ಲ ಎಂದು 68
ಹೇಳಿ, ಹೊರಂಗಳಕ್ಕೆ ಹೋದನು[2]. ಅಲ್ಲಿ ತೊತ್ತು ಅವನನ್ನು ಕಂಡು ಹತ್ತರದಲ್ಲಿ 69
ನಿಂತಿದ್ದವರಿಗೆ—ಇವನೂ ಅವರಲ್ಲಿ ಒಬ್ಬನೆಂದು ತಿರಿಗಿ ಹೇಳುವದಕ್ಕೆ ತೊಡಗಿದಳು.

---

[1] ದಾನಿಯೇಲ ೭, ೧೩; ಕೀರ್ತನೆ ೧೧೦, ೧. [2] ಕೆಲವು ಪ್ರತಿಗಳಲ್ಲಿ—ಕೋಳಿ ಕೂಗಿತು ಎಂಬುವದು ಇಲ್ಲಿ ಸೇರಿಸಿ ಇದೆ.

70 ಅವನು ತಿರಿಗಿ ಅಲ್ಲವೆಂದನು. ಸ್ವಲ್ಪ ಹೊತ್ತಿನ ಮೇಲೆ ಅಲ್ಲಿ ನಿಂತವರು ಪೇತ್ರನಿಗೆ—ನಿಶ್ಚಯವಾಗಿ ನೀನು ಸಹ ಅವರಲ್ಲಿ ಒಬ್ಬನು; ನೀನು ಗಲಿಲಾಯದವನಷ್ಟೆ ಎಂದು ತಿರಿಗಿ
71 ಹೇಳಿದರು. ಆದರೆ ಅವನು—ನೀವು ಹೇಳುವ ಆ ಮನುಷ್ಯನನ್ನು ನಾನರಿಯೆನೆಂದು ಹೇಳಿ ಶಾಪಹಾಕಿಕೊಳ್ಳುವದಕ್ಕೂ ಆಣೆಯಿಟ್ಟುಕೊಳ್ಳುವದಕ್ಕೂ ಪ್ರಾರಂಭಿಸಿದನು.
72 ಕೂಡಲೆ ಕೋಳಿ ಎರಡನೇ ಸಾರಿ ಕೂಗಿತು. ಆಗ ಪೇತ್ರನು—ಕೋಳಿ ಎರಡುಸಾರಿ ಕೂಗುವದಕ್ಕಿಂತ ಮುಂಚೆ ಮೂರುಸಾರಿ ನನ್ನ ವಿಷಯವಾಗಿ ಅವನನ್ನು ಅರಿಯೆನೆಂಬದಾಗಿ ಹೇಳುವಿ ಎಂದು ಯೇಸು ತನಗೆ ಹೇಳಿದ ಮಾತನ್ನು ನೆನಪಿಗೆ ತಂದುಕೊಂಡು, ಆ ವಿಷಯದಲ್ಲಿ ಯೋಚಿಸಿ ಅತ್ತನು.

**ಪಿಲಾತನು ಯೇಸುವನ್ನು ವಿಚಾರಿಸಿ, ಆತನಲ್ಲಿ ಅಪರಾಧವಿಲ್ಲವೆಂದು ಕಂಡರೂ ಆತನಿಗೆ ಮರಣವಿಧಿಸಿದ್ದು.**

**(ಮತ್ತಾಯ 27, 1. 2. 11—26; ಲೂಕ 23, 1—25; ಯೋಹಾನ 18, 28—19, 16.)**

**15** ಬೆಳಗಾದ ಕೂಡಲೆ ಮಹಾಯಾಜಕರೂ ಹಿರಿಯರೂ ಶಾಸ್ತ್ರಿಗಳೂ ಹಿರೀಸಭೆಯವರೆಲ್ಲರೂ ಒಟ್ಟುಗೂಡಿ ಆಲೋಚನೆ ಮಾಡಿಕೊಂಡು ಯೇಸುವನ್ನು ಕಟ್ಟಿಸಿ ಹಿಡುಕೊಂಡು
2 ಹೋಗಿ ಪಿಲಾತನಿಗೆ ಒಪ್ಪಿಸಿದರು. ಪಿಲಾತನು—ನೀನು ಯೆಹೂದ್ಯರ ಅರಸನು ಹೌದೋ? ಎಂದು ಆತನನ್ನು ಕೇಳಿದನು. ಆತನು—ನೀನೇ ಹೇಳಿದ್ದೀ ಅಂದನು.
3-4 ಮತ್ತು ಮಹಾಯಾಜಕರು ಆತನ ಮೇಲೆ ದೂರು ಹೇಳುವಾಗ, ಪಿಲಾತನು ಇನ್ನೊಂದಾವರ್ತಿ—ನೀನು ಏನೂ ಉತ್ತರಕೊಡುವದಿಲ್ಲವೇ? ಇವರು ನಿನ್ನ ಮೇಲೆ ಎಷ್ಟು ದೂರು
5 ಗಳನ್ನು ಹೇಳುತ್ತಾರೆ ನೋಡು, ಎಂದು ಆತನನ್ನು ಕೇಳಿದನು. ಆದರೆ ಯೇಸು ಇನ್ನೇನೂ ಉತ್ತರಕೊಡಲಿಲ್ಲ. ಅದನ್ನು ಕಂಡು ಪಿಲಾತನು ಆಶ್ಚರ್ಯಪಟ್ಟನು.
6 ಅವನು ಆ ಹಬ್ಬದಲ್ಲಿ ಜನರು ಬೇಡಿದ ಸೆರೆಯವನನ್ನು ಅವರಿಗೆ ಬಿಟ್ಟುಕೊಡುವ ಪದ್ಧ
7 ತಿಯಿತ್ತು. ಆಗ ಬರಬ್ಬನೆಂಬವನೊಬ್ಬನಿದ್ದನು; ಇವನನ್ನು ದಂಗೆಯಲ್ಲಿ ಕೊಲೆಪಾತಕ
8 ಮಾಡಿದ ದಂಗೆಗಾರರ ಕೂಡ ಕಟ್ಟಿಹಾಕಿದ್ದರು. ಜನರು ಪಿಲಾತನ ಬಳಿಗೆ ಹೋಗಿ—ನೀನು ನಮಗೆ ಮಾಡುತ್ತಾ ಬಂದ ಪ್ರಕಾರ ಮಾಡು ಎಂದು ಬೇಡಿಕೊಳ್ಳುತ್ತಿದ್ದರು.
9-10 ಮಹಾಯಾಜಕರು ಹೊಟ್ಟೇಕಿಚ್ಚಿನಿಂದ ಯೇಸುವನ್ನು ಒಪ್ಪಿಸಿಕೊಟ್ಟಿದ್ದಾರೆಂದು ಪಿಲಾತನು ತಿಳಿದು—ನಾನು ಯೆಹೂದ್ಯರ ಅರಸನನ್ನು ನಿಮಗೆ ಬಿಟ್ಟುಕೊಡಬೇಕನ್ನುತ್ತೀರೋ
11 ಎಂದು ಅವರನ್ನು ಕೇಳಿದನು. ಆದರೆ ಮಹಾಯಾಜಕರು—ಇವನನ್ನು ಬೇಡ, ಬರಬ್ಬನನ್ನು ಬಿಟ್ಟುಕೊಡಬೇಕೆಂದು ಕೇಳಿಕೊಳ್ಳಿರಿ ಎಂಬದಾಗಿ ಜನರನ್ನು ಪ್ರೇರೇಪಿಸಿದರು.
12 ಅದಕ್ಕೆ ಪಿಲಾತನು ತಿರಿಗಿ—ಹಾಗಾದರೆ ನೀವು ಹೇಳುವ ಯೆಹೂದ್ಯರ ಅರಸನನ್ನು ನಾನು
13 ಏನು ಮಾಡಲಿ ಎಂದು ಕೇಳಲು, ಅವರು—ಅವನನ್ನು ಶಿಲುಬೆಗೆ ಹಾಕಿಸು ಎಂದು ತಿರಿಗಿ
14 ಕೂಗಿದರು. ಪಿಲಾತನು—ಯಾಕೆ? ಕೆಟ್ಟದ್ದೇನು ಮಾಡಿದನು? ಅಂದನು. ಆದರೆ
15 ಅವರು—ಅವನನ್ನು ಶಿಲುಬೆಗೆ ಹಾಕಿಸು ಎಂದು ಬಹಳವಾಗಿ ಕೂಗಿದರು. ಆಗ ಪಿಲಾತನು ಜನರ ಮನಸ್ಸನ್ನು ಸಮಾಧಾನಪಡಿಸಬೇಕೆಂದು ಬರಬ್ಬನನ್ನು ಬಿಟ್ಟುಕೊಟ್ಟು, ಯೇಸುವನ್ನು ಕೊರಡೆಗಳಿಂದ ಹೊಡಿಸಿ, ಶಿಲುಬೆಗೆ ಹಾಕುವದಕ್ಕೆ ಒಪ್ಪಿಸಿದನು.

ಯೇಸುವನ್ನು ಪರಿಹಾಸ್ಯಮಾಡಿ ಶಿಲುಬೆಗೆ ಹಾಕಿದ್ದು; ಆತನು ಪ್ರಾಣಾಬಿಟ್ಟದ್ದು.

(ಮತ್ತಾಯ 27, 27—56; ಲೂಕ 23, 26—49; ಯೋಹಾನ 19, 17—30.)

ಸಿಪಾಯಿಗಳು ಆತನನ್ನು ಅಧಿಪತಿಯ ಅರಮನೆಗೆ ಸೇರಿದ ಅಂಗಳದೊಳಕ್ಕೆ ಹಿಡು 16
ಕೊಂಡುಹೋಗಿ, ಪಟಾಲಮನ್ನೆಲ್ಲಾ ಒಟ್ಟಿಗೆ ಕರೆದು, ಆತನಿಗೆ ಕೆಂಪು ಒಲ್ಲಿಯನ್ನು ಹೊದಿಸಿ, 17
ಮುಳ್ಳಿನ ಕಿರೀಟವನ್ನು ಹೆಣೆದು ಆತನಿಗಿಟ್ಟು—ಯೆಹೂದ್ಯರ ಅರಸನೇ, ನಿನಗೆ ನಮ 18
ಸ್ಕಾರ ಎಂದು ಆತನಿಗೆ ವಂದನೆಮಾಡಿ, ಬೆತ್ತದಿಂದ ಆತನ ತಲೆಯ ಮೇಲೆ ಹೊಡೆದು, 19
ಆತನ ಮೇಲೆ ಉಗುಳಿ, ಆತನ ಮುಂದೆ ಮೊಣಕಾಲೂರಿ ಅಡ್ಡಬಿದ್ದರು. ಹೀಗೆ ಆತನನ್ನು 20
ಪರಿಹಾಸ್ಯಮಾಡಿದ ಮೇಲೆ ಆ ಒಲ್ಲಿಯನ್ನು ತೆಗೆದು ಆತನ ಬಟ್ಟೆಗಳನ್ನು ಹೊದಿಸಿ, ಆತ
ನನ್ನು ಶಿಲುಬೆಗೆ ಹಾಕುವದಕ್ಕೆ ಹಿಡುಕೊಂಡು ಹೋದರು.

ಆಗ ಹೊಲದಿಂದ ಹೊರಟು ಆ ಮಾರ್ಗವಾಗಿ ಬರುತ್ತಿದ್ದ ಒಬ್ಬನನ್ನು ಯೇಸುವಿನ 21
ಶಿಲುಬೇ ಹೊರುವದಕ್ಕೆ ಬಿಟ್ಟೀಹಿಡಿದರು. ಇವನು ಯಾರಂದರೆ—ಅಲೆಕ್ಸಾಂದ್ರ ರೂಫ
ಎಂಬವರ ತಂದೆಯಾದ ಕುರೇನೆ ಪಟ್ಟಣದ ಸೀಮೋನನು. ಬಳಿಕ ಆತನನ್ನು ಗೊಲ್ಗೊಥಾ 22
ಎಂಬ ಸ್ಥಳಕ್ಕೆ ಕರಕೊಂಡು ಬಂದರು. ಗೊಲ್ಗೊಥಾ ಅಂದರೆ ಕಪಾಲಸ್ಥಳ. ಅಲ್ಲಿ 23
ಆತನಿಗೆ ರಕ್ತಬೋಳ ಬೆರಸಿದ ದ್ರಾಕ್ಷಾರಸವನ್ನು ಕೊಟ್ಟರು; ಆದರೆ ಆತನು ತೆಗೆದು
ಕೊಳ್ಳಲಿಲ್ಲ. ಅವರು ಆತನನ್ನು ಶಿಲುಬೆಗೆ ಹಾಕಿ, ಆತನ ಬಟ್ಟೆಗಳಲ್ಲಿ ಯಾವಯಾವದು 24
ಯಾರ್ಯಾರಿಗೆ ಆಗಬೇಕೆಂದು ಚೀಟೀಹಾಕಿ, ಅವುಗಳನ್ನು ಪಾಲುಮಾಡಿಕೊಂಡರು.
ಆತನನ್ನು ಶಿಲುಬೆಗೆ ಹಾಕುವಾಗ ಮೂರು ತಾಸಾಗಿತ್ತು[1]. ಮತ್ತು ಅವರು ಹೊರಿಸಿದ 25, 26
ಅಪರಾಧವನ್ನು ಸೂಚಿಸುವ ಒಂದು ವಿಳಾಸವು ಶಿಲುಬೆಯ ಮೇಲ್ಗಡೆಯಲ್ಲಿ ಬರೆದಿತ್ತು.
ಅದೇನಂದರೆ—ಯೆಹೂದ್ಯರ ಅರಸನು ಎಂಬುವದೇ. ಅದಲ್ಲದೆ ಇಬ್ಬರು ಕಳ್ಳರನ್ನು 27
ತಂದು, ಒಬ್ಬನನ್ನು ಆತನ ಬಲಗಡೆಯಲ್ಲಿ ಒಬ್ಬನನ್ನು ಎಡಗಡೆಯಲ್ಲಿ ಆತನ ಸಂಗಡ
ಶಿಲುಬೆಗೆ ಹಾಕಿದರು[2]. ಅಲ್ಲಿ ಹಾದುಹೋದವರು ತಲೇ ಆಡಿಸಿ—ಆಹಾ, ದೇವಾ 29
ಲಯವನ್ನು ಕೆಡವಿ ಮೂರು ದಿನದಲ್ಲಿ ಕಟ್ಟುವವನೇ, ಶಿಲುಬೆಯಿಂದ ಇಳಿದು ನಿನ್ನನ್ನು 30
ರಕ್ಷಿಸಿಕೋ ಎಂದು ಆತನನ್ನು ಹಂಗಿಸಿದರು. ಅದೇ ಮೇರೆಗೆ ಮಹಾಯಾಜಕರೂ 31
ಶಾಸ್ತ್ರಿಗಳೂ ಕೂಡಿ—ಅವನು ಮತ್ತೊಬ್ಬರನ್ನು ರಕ್ಷಿಸಿದನು; ತನ್ನನ್ನು ರಕ್ಷಿಸಿಕೊಳ್ಳಲಾ
ರನು. ಇಸ್ರಯೇಲ್ಯರ ಅರಸನಾದ ಈ ಕ್ರಿಸ್ತನು ಈಗ ಶಿಲುಬೆಯಿಂದ ಇಳಿದು ಬರಲಿ; 32
ಇಳಿದುಬಂದರೆ ನಾವು ನೋಡಿ ನಂಬೇವು ಎಂದು ತಮ್ಮಲ್ಲಿ ಹಾಸ್ಯದಿಂದ ಮಾತಾಡುತ್ತಿ
ದ್ದರು. ಆತನ ಸಂಗಡ ಶಿಲುಬೆಗೆ ಹಾಕಲ್ಪಟ್ಟವರು ಸಹ ಆತನನ್ನು ನಿಂದಿಸುತ್ತಿದ್ದರು.

ಮಧ್ಯಾಹ್ನವಾದಾಗ ಆ ದೇಶದ ಮೇಲೆಲ್ಲಾ ಕತ್ತಲೆ ಕವಿದು, ಒಂಭತ್ತು ತಾಸಿನ ತನಕ[3] 33
ಇತ್ತು. ಒಂಭತ್ತು ತಾಸಿಗೆ ಯೇಸು—ಎಲೋಹಿ, ಎಲೋಹಿ, ಲಮಾ ಸಬಕ್ತಾನೀ 34

---

[1] ಅಂದರೆ, ಹೊತ್ತಾರೆ ಒಂಭತ್ತು ಘಂಟೆ.

[2] ೨೮ನೇ ವಚನವು ಮೂಲಗ್ರಂಥದ ಹೆಚ್ಚು ಪ್ರತಿಗಳಲ್ಲಿ ಇಲ್ಲ. ಅದು ಯಾವದಂದರೆ—ಆತನು ಅಧರ್ಮಿಗಳ ಸಂಗಡ ಎಣಿಸಲ್ಪಟ್ಟನು ಎಂಬ ಶಾಸ್ತ್ರವಚನವು ಹೀಗೆ ನೆರವೇರಿತು ಎಂಬುವದು. ಲೂಕ ೨೨, ೩೭ ನೋಡು.

[3] ಅಂದರೆ, ಸಾಯಂಕಾಲ ಮೂರು ಘಂಟೆಯ ತನಕ.

ಎಂದು[1], ಅಂದರೆ—ನನ್ನ ದೇವರೇ, ನನ್ನ ದೇವರೇ, ಯಾಕೆ ನನ್ನನ್ನು ಕೈಬಿಟ್ಟೆದ್ದೀ ಎಂದು
35 ಮಹಾಧ್ವನಿಯಿಂದ ಕೂಗಿದನು. ಹತ್ತರ ನಿಂತಿದ್ದವರಲ್ಲಿ ಕೆಲವರು ಅದನ್ನು ಕೇಳಿ—
36 ಎಲೀಯನನ್ನು ಕರೆಯುತ್ತಾನೆ ಕಾಣಿರೋ, ಅಂದರು. ಆಗ ಒಬ್ಬನು ಓಡಿಹೋಗಿ, ಸ್ಪಂಜನ್ನು ಹುಳಿರಸದಿಂದ ತುಂಬಿಸಿ, ಕೋಲಿಗೆ ಸಿಕ್ಕಿಸಿ, ಆತನಿಗೆ ಕುಡಿಯುವದಕ್ಕೆ ಕೊಟ್ಟು—ನಿಲ್ಲಿರಿ, ಎಲೀಯನು ಇವನನ್ನು ಇಳಿಸುವದಕ್ಕೆ ಬರುತ್ತಾನೇನೋ ನೋಡೋಣ
37, 38 ಅಂದನು. ಆದರೆ ಯೇಸು ಮಹಾ ಧ್ವನಿಯಿಂದ ಕೂಗಿ ಪ್ರಾಣಾಬಿಟ್ಟನು. ಆಗ ದೇವಾಲಯದ ತೆರೆಯು ಮೇಲಿಂದ ಕೆಳಗಿನ ವರೆಗೂ ಹರಿದು ಎರಡು ಭಾಗವಾಯಿತು.
39 ಆತನು ಹೀಗೆ ಪ್ರಾಣಾಬಿಟ್ಟದ್ದನ್ನು ಆತನ ಹತ್ತರ ಎದುರಿಗೆ ನಿಂತಿದ್ದ ಶತಾಧಿಪತಿಯು
40-41 ಕಂಡು—ಈತನು ನಿಜವಾಗಿ ದೇವರ ಕುಮಾರನಾಗಿದ್ದನು[2] ಅಂದನು. ಇದಲ್ಲದೆ, ಅಲ್ಲಿ ಸ್ತ್ರೀಯರು ಸಹ ದೂರದಿಂದ ನೋಡುತ್ತಿದ್ದರು; ಇವರಲ್ಲಿ, ಆತನು ಗಲಿಲಾಯದಲ್ಲಿದ್ದಾಗ ಆತನನ್ನು ಹಿಂಬಾಲಿಸಿ ಸೇವೆ ಮಾಡುತ್ತಿದ್ದವರಾದ ಮಗ್ದಲದ ಮರಿಯ, ಚಿಕ್ಕ ಯಾಕೋಬನ ಮತ್ತು ಯೋಸೆಯ ತಾಯಿಯಾದ ಮರಿಯ, ಸಲೋಮೆ ಎಂಬವರೂ ಆತನ ಸಂಗಡ ಯೆರೂಸಲೇಮಿಗೆ ಬಂದಿದ್ದ ಇನ್ನೂ ಅನೇಕ ಸ್ತ್ರೀಯರೂ ಇದ್ದರು.

### ಶಿಷ್ಯರು ಯೇಸುವಿನ ದೇಹವನ್ನು ಸಮಾಧಿಯಲ್ಲಿಟ್ಟದ್ದು.

(ಮತ್ತಾಯ 27, 57—61; ಲೂಕ 23, 50—56; ಯೋಹಾನ 19, 38—42.)

42 ಆಗಲೇ ಸಂಜೆಯಾಗಿತ್ತು; ಮತ್ತು ಆ ದಿನವು ಸೌರಣೆಯದಿನ, ಅಂದರೆ ಸಬ್ಬತ್‌ದಿನದ
43 ಹಿಂದಿನ ದಿನ ಆಗಿತ್ತು. ಹೀಗಿರಲಾಗಿ, ಅರಿಮಥಾಯದ ಯೋಸೇಫನೆಂಬವನು ಬಂದು, ಧೈರ್ಯದಿಂದ ಪಿಲಾತನ ಬಳಿಗೆ ಹೋಗಿ—ಯೇಸುವಿನ ದೇಹವನ್ನು ನನಗೆ ಕೊಡಿಸಬೇಕು ಎಂದು ಬೇಡಿಕೊಂಡನು. ಇವನು ಮಂತ್ರಾಲೋಚನಾಸಭೆಯವರಲ್ಲಿ ಘನವಂತನು,
44 ದೇವರ ರಾಜ್ಯವನ್ನು ಎದುರುನೋಡುತ್ತಿದ್ದವನು. ಪಿಲಾತನು—ಅವನು ಇಷ್ಟು ಬೇಗ ಸತ್ತನೋ? ಎಂದು ಆಶ್ಚರ್ಯಪಟ್ಟು, ಶತಾಧಿಪತಿಯನ್ನು ಕರೆಸಿ—ಅವನು ಆಗಲೇ
45 ಸತ್ತನೋ ಎಂದು ಅವನನ್ನು ಕೇಳಿ, ಆತನು ಸತ್ತದ್ದನ್ನು ಶತಾಧಿಪತಿಯಿಂದ ತಿಳಿದು, ಶವ
46 ವನ್ನು ಯೋಸೇಫನಿಗೆ ಕೊಡಿಸಿದನು. ಯೋಸೇಫನು ನಾರುಮಡಿಯನ್ನು ಕೊಂಡು ತಂದು, ಆತನನ್ನು ಇಳಿಸಿ, ನಾರುಮಡಿಯಲ್ಲಿ ಸುತ್ತಿ, ಬಂಡೆಯಲ್ಲಿ ತೋಡಿದ್ದ ಸಮಾಧಿ
47 ಯಲ್ಲಿಟ್ಟು, ಸಮಾಧಿಯ ಬಾಗಲಿಗೆ ಕಲ್ಲನ್ನು ಉರುಳಿಸಿದನು. ಮಗ್ದಲದ ಮರಿಯಳೂ ಯೋಸೆಯ ತಾಯಿ ಮರಿಯಳೂ ಆತನನ್ನಿಡುವ ಸ್ಥಳವನ್ನು ನೋಡಿದರು.

### ಸ್ತ್ರೀಯರು ಯೇಸುವಿನ ಸಮಾಧಿಯನ್ನು ಖಾಲಿಯಾಗಿರುವದನ್ನು ಕಂಡು ದೂತರ ದರ್ಶನವನ್ನು ನೋಡಿದ್ದು.

(ಮತ್ತಾಯ 28, 1—8; ಲೂಕ 24, 1—10; ಯೋಹಾನ 20, 1.)

**16** ಸಬ್ಬತ್‌ದಿನ ಕಳೆದ ಮೇಲೆ, ಮಗ್ದಲದ ಮರಿಯಳೂ ಯಾಕೋಬನ ತಾಯಿ ಮರಿಯಳೂ ಸಲೋಮೆಯೂ ಆತನ ದೇಹಕ್ಕೆ ಹಚ್ಚುವದಕ್ಕಾಗಿ ಸುಗಂಧದ್ರವ್ಯಗಳನ್ನು
2 ಕೊಂಡುತಂದರು. ಮತ್ತು ವಾರದ ಮೊದಲನೇ ದಿನದ ಬೆಳಿಗ್ಗೆ ಹೊತ್ತು ಮೂಡುವಾಗ,

1) ಕೀರ್ತನೆ ೨೨, ೧. 2) ದಾನಿಯೇಲ ೭, ೨೫.

ಅವರು ಸಮಾಧಿಯ ಬಳಿಗೆ ಬಂದರು. ಸಮಾಧಿಗೆ ಉರುಳಿಸಿದ್ದ ಕಲ್ಲು ಬಹಳ ದೊಡ್ಡ 3
ದಾಗಿದ್ದದರಿಂದ, ಅವರು—ಸಮಾಧಿಯ ಬಾಗಲಿಂದ ಆ ಕಲ್ಲನ್ನು ನಮಗೋಸ್ಕರ ಉರುಳಿ
ಸುವವರು ಯಾರಿದ್ದಾರೆ ಎಂದು ತಮ್ಮೊಳಗೆ ಮಾತಾಡಿಕೊಳ್ಳುತ್ತಾ ಇರಲಾಗಿ ತಲೆಯೆತ್ತಿ 4
ನೋಡಿ, ಆ ಕಲ್ಲು ಉರುಳಿಹೋಗಿರುವದನ್ನು ಕಂಡರು. ಅವರು ಸಮಾಧಿಯೊಳಕ್ಕೆ 5
ಹೋಗಿ, ಒಬ್ಬ ಯೌವನಸ್ಥನು ಬಿಳೀ ಅಂಗಿ ತೊಟ್ಟುಕೊಂಡು ಬಲಗಡೆ ಕೂತಿರುವದನ್ನು
ಕಂಡು ಬೆಚ್ಚಿಬೆರಗಾದರು. ಅವನು ಅವರಿಗೆ—ನೀವು ಬೆರಗಾಗಬೇಡಿರಿ. ಶಿಲುಬೆಗೆ 6
ಹಾಕಲ್ಪಟ್ಟ ನಜರೇತಿನ ಯೇಸುವನ್ನು ಹುಡುಕುತ್ತೀರಲ್ಲವೇ? ಆತನು ಜೀವಿತನಾಗಿ
ಎದ್ದು ಹೋದನು; ಇಲ್ಲಿ ಇಲ್ಲ. ಆತನನ್ನು ಇಟ್ಟಿದ್ದ ಸ್ಥಳವು ಇದೇ, ನೋಡಿರಿ.
ಆದರೆ ನೀವು ಹೋಗಿ, ಆತನ ಶಿಷ್ಯರನ್ನೂ ಪೇತ್ರನನ್ನೂ ಕಂಡು—ಆತನು ನಿಮಗೆ ಹೇಳಿ 7
ರುವಂತೆ ನಿಮ್ಮ ಮುಂದೆ ಗಲಿಲಾಯಕ್ಕೆ ಹೋಗುತ್ತಾನೆ, ಅಲ್ಲಿ ಆತನನ್ನು ಕಾಣುವಿರಿ
ಎಂದು ತಿಳಿಸಿರಿ ಎಂದು ಹೇಳಿದನು. ಅವರು ಭ್ರಮೆ ಹಿಡಿದವರಾಗಿ ನಡುಗುತ್ತಾ ಹೊರಕ್ಕೆ 8
ಬಂದು, ಸಮಾಧಿಯ ಬಳಿಯಿಂದ ಓಡಿಹೋದರು; ಅವರು ಹೆದರಿಕೊಂಡದರಿಂದ
ಯಾರಿಗೂ ಏನೂ ಹೇಳಲಿಲ್ಲ.

### ಯೇಸು ಜೀವಿತನಾಗಿ ಎದ್ದ ಮೇಲೆ ತನ್ನ ಶಿಷ್ಯರಿಗೆ ಕಾಣಿಸಿಕೊಂಡದ್ದು.

[ವಾರದ ಮೊದಲನೇ ದಿನ ಬೆಳಿಗ್ಗೆ ಯೇಸು ಜೀವಿತನಾಗಿ ಎದ್ದ ಮೇಲೆ, ಮಗ್ದಲದ 9
ಮರಿಯಳಿಗೆ ಮೊದಲು ಕಾಣಿಸಿಕೊಂಡನು. ಆಕೆಗೆ ಏಳು ದೆವ್ವಗಳನ್ನು ಬಿಡಿಸಿದ್ದನು.
ಆಕೆ ಹೋಗಿ, ಆತನು ಕಾಣಿಸಿಕೊಂಡದ್ದನ್ನು ಮುಂಚೆ ಆತನ ಜೊತೆಯಲ್ಲಿದ್ದವರಿಗೆ ತಿಳಿಸಿ 10
ದಳು; ಇವರು ಹಂಬಲಿಸುತ್ತಾ ಅಳುತ್ತಾ ಕೂತಿದ್ದರು. ಆತನು ಬದುಕಿದ್ದಾನೆ, ನನಗೆ 11
ಕಾಣಿಸಿಕೊಂಡನು ಎಂಬ ಮಾತನ್ನು ಕೇಳಿದಾಗ, ಅವರು ನಂಬಲಿಲ್ಲ.

ಇದಾದ ಮೇಲೆ ಶಿಷ್ಯರಲ್ಲಿ ಇಬ್ಬರು ಒಂದು ಹಳ್ಳಿಗೆ ನಡಕೊಂಡು ಹೋಗುತ್ತಿದ್ದಾಗ, 12
ಆತನು ಅವರಿಗೆ ರೂಪಾಂತರದಿಂದ ಕಾಣಿಸಿಕೊಂಡನು. ಅವರು ಹೋಗಿ, ಮಿಕ್ಕಾದವ 13
ರಿಗೆ ತಿಳಿಸಿದರು. ಆದರೆ ಅವರನ್ನೂ ನಂಬಲಿಲ್ಲ.

ತರುವಾಯ ಹನ್ನೊಂದು ಮಂದಿ ಶಿಷ್ಯರು ಊಟಕ್ಕೆ ಕೂತಿದ್ದಾಗ, ಆತನು ಅವರಿಗೂ 14
ಕಾಣಿಸಿಕೊಂಡನು. ತಾನು ಜೀವಿತನಾಗಿ ಎದ್ದು ಬಂದಮೇಲೆ ತನ್ನನ್ನು ಕಂಡವರ
ಮಾತನ್ನು ಅವರು ನಂಬಲಿಲ್ಲವಾದ ಕಾರಣ ಆತನು ಅವರ ಅಪನಂಬಿಕೆಗೂ ಅವರ ಮನ
ಸ್ಸಿನ ಕಾಠಿಣ್ಯಕ್ಕೂ ಅವರನ್ನು ಗದರಿಸಿದನು. ಆ ಮೇಲೆ ಅವರಿಗೆ—ನೀವು ಲೋಕದ 15
ಎಲ್ಲಾ ಕಡೆಗೆ ಹೋಗಿ ಜಗತ್ತಿಗೆಲ್ಲಾ ಸುವಾರ್ತೆಯನ್ನು ಸಾರಿರಿ. ನಂಬಿ ದೀಕ್ಷಾಸ್ನಾನ 16
ಮಾಡಿಸಿಕೊಳ್ಳುವವನು ರಕ್ಷಣೆಹೊಂದುವನು; ನಂಬದೆ ಹೋಗುವವನು ದಂಡನೆಗೆ ಗುರಿ
ಯಾಗುವನು. ಇದಲ್ಲದೆ ನಂಬುವದರಿಂದ ಸೂಚಕಕಾರ್ಯಗಳು ಉಂಟಾಗುವವು; 17
ಅವರು ನನ್ನ ಹೆಸರನ್ನು ಹೇಳಿ ದೆವ್ವಗಳನ್ನು ಬಿಡಿಸುವರು; ಹೊಸಭಾಷೆಗಳಿಂದ ಮಾತಾ
ಡುವರು; ಹಾವುಗಳನ್ನು ಎತ್ತುವರು; ವಿಷಪದಾರ್ಥವನ್ನೇನಾದರೂ ಕುಡಿದರೂ ಅವರಿಗೆ 18
ಯಾವ ಕೇಡೂ ಆಗುವದಿಲ್ಲ; ಅವರು ರೋಗಿಗಳ ಮೇಲೆ ಕೈಯಿಟ್ಟರೆ ಇವರಿಗೆ ಗುಣ
ವಾಗುವದು ಎಂದು ಹೇಳಿದನು.

19 ಯೇಸುಸ್ವಾಮಿಯು ಅವರ ಕೂಡ ಮಾತಾಡಿದ ಮೇಲೆ, ಆಕಾಶಕ್ಕೆ ಹೈಯಲ್ಪಟ್ಟು
20 ದೇವರ ಬಲಗಡೆಯಲ್ಲಿ ಆಸನಾರೂಢನಾದನು. ಇತ್ತಲಾಗಿ ಅವರು ಹೊರಟುಹೋಗಿ, ಎಲ್ಲೆಲ್ಲಿಯೂ ಸುವಾರ್ತೆಯನ್ನು ಸಾರಿದರು; ಮತ್ತು ಸ್ವಾಮಿಯು ಅವರ ಕೂಡ ಕೆಲಸ ಮಾಡುತ್ತಾ ಸೂಚಕಕಾರ್ಯಗಳಿಂದ ಸುವಾರ್ತೆಯ ವಾಕ್ಯವನ್ನು ಬಲಪಡಿಸುತ್ತಾ ಇದ್ದನು.][1]

---

[1] ೯ನೇ ವಚನದಿಂದ ೨೦ನೇ ವಚನದ ಪರ್ಯಂತರ ಬರೆದಿರುವ ಮಾತುಗಳು ಕೆಲವು ಪುರಾತನ ಪ್ರತಿಗಳಲ್ಲಿ ಇಲ್ಲ. ಕೆಲವು ಪ್ರತಿಗಳಲ್ಲಿ ಅವುಗಳಿಗೆ ಬದಲಾಗಿ ಬೇರೊಂದು ಸಮಾಪ್ತಿವಾಕ್ಯವು ಉಂಟು; ಅದೇನಂದರೆ—ಆದರೆ ತಮಗೆ ಆಜ್ಞಾಪಿಸಲ್ಪಟ್ಟ ಮಾತುಗಳನ್ನೆಲ್ಲಾ ಪೇತ್ರನ ಸಂಗಡವಿದ್ದವರಿಗೆ ಸಂಕ್ಷೇಪವಾಗಿ ತಿಳಿಸಿದರು. ತರುವಾಯ ಯೇಸು ತಾನೇ ನಿರಂತರವಾದ ರಕ್ಷಣೆಯನ್ನು ತಿಳಿಸುವ ಲಯವಾಗದ ದಿವ್ಯ ಪ್ರಕಟಣೆಯನ್ನು ಪೂರ್ವದಿಂದ ಪಶ್ಚಿಮದ ವರೆಗೂ ಇವರ ಮುಖಾಂತರ ಪ್ರಚುರಪಡಿಸಿದನು.

# THE GOSPEL ACCORDING TO SAINT LUKE

# ಲೂಕನು ಬರೆದ ಸುವಾರ್ತೆ

### ಪೀಠಿಕೆ.

ಶ್ರೀಮತ್ ಥೆಯೊಫಿಲನೇ, ನಮ್ಮಲ್ಲಿ ನಿಶ್ಚಯಕ್ಕೆ ಬಂದಿರುವ ಕಾರ್ಯಗಳನ್ನು ಮೊದ 2 **1**
ಲಿಂದ ಕಣ್ಣಾರೆಕಂಡು ಸುವಾರ್ತಾವಾಕ್ಯವನ್ನು ಸಾರುತ್ತಿದ್ದವರು ನಮಗೆ ತಿಳಿಸಿದಪ್ರಕಾರ
ಆ ಕಾರ್ಯಗಳನ್ನು ಚರಿತ್ರರೂಪವಾಗಿ ಬರೆಯುವದಕ್ಕೆ ಅನೇಕರು ಪ್ರಯತ್ನಿಸಿರಲಾಗಿ,
ನಾನು ಬುಡದಿಂದ ಎಲ್ಲವನ್ನೂ ಚನ್ನಾಗಿ ವಿಚಾರಿಸಿದವನಾದಕಾರಣ ಅವುಗಳನ್ನು ನಿನಗೆ 3
ಕ್ರಮವಾಗಿ ಬರೆಯುವದು ಒಳ್ಳೇದೆಂದು ನನಗೂ ತೋಚಿತು. ನಿನಗೆ ಉಪದೇಶಿಸಿರುವ 4
ವಿಷಯಗಳು ಯಥಾರ್ಥವಾದವುಗಳೆಂದು ಇದರಿಂದ ನೀನು ಗೊತ್ತುಮಾಡಿಕೊಳ್ಳ
ಬಹುದು.

### ದೇವದೂತನು ಸ್ನಾನಿಕನಾದ ಯೋಹಾನನ ಜನನವನ್ನು ಮುಂತಿಳಿಸಿದ್ದು.

ಯೂದಾಯದ ಅರಸನಾದ ಹೆರೋದನ ಕಾಲದಲ್ಲಿ ಅಬೀಯನ ವರ್ಗಕ್ಕೆ ಸೇರಿದ 5
ಜಕರೀಯನೆಂಬ ಒಬ್ಬ ಯಾಜಕನಿದ್ದನು. ಅವನ ಹೆಂಡತಿಯು ಆರೋನನ ವಂಶದವಳು.
ಆಕೆಯ ಹೆಸರು ಎಲಿಸಬೇತ್. ಅವರಿಬ್ಬರೂ ಕರ್ತನ ಎಲ್ಲಾ ಆಜ್ಞೆಗಳನ್ನೂ ನೇಮ 6
ನಿಷ್ಠೆಗಳನ್ನೂ ಕೈಕೊಂಡು ತಪ್ಪಿಲ್ಲದೆ ನಡಕೊಳ್ಳುತ್ತಾ, ದೇವರ ದೃಷ್ಟಿಯಲ್ಲಿ ನೀತಿವಂತ
ರಾಗಿದ್ದರು. ಆದರೆ ಎಲಿಸಬೇತಳು ಬಂಜೆಯಾದದರಿಂದ ಅವರಿಗೆ ಮಕ್ಕಳಿರಲಿಲ್ಲ; ಇದ 7
ಲ್ಲದೆ ಅವರಿಬ್ಬರೂ ದಿನಹೋದವರಾಗಿದ್ದರು.

ಹೀಗಿರಲಾಗಿ, ಜಕರೀಯನ ವರ್ಗದ ಸರತಿ ಬಂದಾಗ ಅವನು ದೇವರ ಸನ್ನಿಧಿಯಲ್ಲಿ 8
ಯಾಜಕಧರ್ಮವನ್ನು ನಡಿಸುತ್ತಿರಲು, ದೇವಾಲಯದೊಳಕ್ಕೆ ಹೋಗಿ ಧೂಪವನ್ನರ್ಪಿಸು 9
ವದು ಯಾಜಕರ ಮರ್ಯಾದೆಯ ಪ್ರಕಾರ ಅವನ ಪಾಲಿಗೆ ಬಂತು. ಧೂಪವನ್ನು ಅರ್ಪಿ 10
ಸುವ ಹೊತ್ತಿನಲ್ಲಿ ಜನರ ಗುಂಪೆಲ್ಲಾ ಹೊರಗೆ ನಿಂತು ದೇವರನ್ನು ಪ್ರಾರ್ಥಿಸುತ್ತಿರಲಾಗಿ
ಕರ್ತನ ದೂತನು ಧೂಪಪೀಠದ ಬಲಗಡೆಯಲ್ಲಿ ನಿಂತುಕೊಂಡವನಾಗಿ ಅವನಿಗೆ ಕಾಣಿಸಿ 11

12 ಕೊಂಡನು. ಜಕರೀಯನು ಅವನನ್ನು ಕಂಡು ತತ್ತರಗೊಂಡು ಭಯಹಿಡಿದವನಾದನು.
13 ಆದರೆ ಆ ದೂತನು ಅವನಿಗೆ—ಜಕರೀಯಾ, ಭಯ ಪಡಬೇಡ; ನಿನ್ನ ವಿಜ್ಞಾಪನೆ ದೇವ
ರಿಗೆ ಮುಟ್ಟಿತು; ನಿನ್ನ ಹೆಂಡತಿಯಾದ ಎಲಿಸಬೇತಳು ನಿನಗೆ ಒಬ್ಬ ಮಗನನ್ನು ಹೆರು
14 ವಳು. ನೀನು ಅವನಿಗೆ ಯೋಹಾನನೆಂದು ಹೆಸರಿಡಬೇಕು. ನಿನಗೆ ಸಂತೋಷವೂ
ಉಲ್ಲಾಸವೂ ಉಂಟಾಗುವದು; ಮತ್ತು ಅವನು ಹುಟ್ಟಿದ್ದಕ್ಕೆ ಬಹುಜನರು ಸಂತೋಷ
15 ಪಡುವರು. ಅವನು ಕರ್ತನ ದೃಷ್ಟಿಯಲ್ಲಿ ಮಹಾಪುರುಷನಾಗಿರುವನು; ದ್ರಾಕ್ಷಾರಸ
ವನ್ನಾಗಲಿ ಯಾವ ಮದ್ಯವನ್ನಾಗಲಿ ಕುಡಿಯದವನಾಗಿರುವನು[1]; ಅವನು ಹುಟ್ಟಿದಂದಿ
16 ನಿಂದಲೂ ಪವಿತ್ರಾತ್ಮಭರಿತನಾಗಿರುವನು. ಇಸ್ರಯೇಲ್ಯರಲ್ಲಿ ಅನೇಕರನ್ನು ಅವರ ದೇವ
17 ರಾಗಿರುವ ಕರ್ತನ ಕಡೆಗೆ ತಿರುಗಿಸುವನು. ಅವನು ಆತನ ಮುಂದೆ ಹೋಗಿ
ಎಲೀಯನ ಗುಣಶಕ್ತಿಗಳಿಂದ ಕೂಡಿದವನಾಗಿ ತಂದೆಗಳ ಹೃದಯವನ್ನು ಮಕ್ಕಳ
ಕಡೆಗೂ[2] ಹಟಹಿಡಿದವರನ್ನು ನೀತಿವಂತರ ಜ್ಞಾನದ ಕಡೆಗೂ ತಿರುಗಿಸಿ, ಸಿದ್ಧವಾದ ಜನ
18 ವನ್ನು ಕರ್ತನಿಗೆ ಒದಗಿಸುವನು ಎಂದು ಹೇಳಿದನು. ಜಕರೀಯನು ಆ ದೂತನಿಗೆ—
ಇದನ್ನು ನಾನು ಯಾತರಿಂದ ತಿಳುಕೊಳ್ಳಲಿ? ನಾನು ಮುದುಕನು; ನನ್ನ ಹೆಂಡತಿಯೂ
19 ದಿನಹೋದವಳು ಎಂದು ಹೇಳಿದ್ದಕ್ಕೆ, ಆ ದೂತನು—ನಾನು ದೇವರ ಸನ್ನಿಧಿಯಲ್ಲಿ
ನಿಲ್ಲುವ ಗಬ್ರಿಯೇಲನು; ನಿನ್ನ ಕೂಡ ಮಾತಾಡಿ ಈ ಶುಭವರ್ತಮಾನವನ್ನು ನಿನಗೆ
20 ತಿಳಿಸುವದಕ್ಕಾಗಿ ನಾನು ಕಳುಹಿಸಲ್ಪಟ್ಟಿದ್ದೇನೆ. ಈ ನನ್ನ ಮಾತು ತಕ್ಕ ಸಮಯದಲ್ಲಿ
ನೆರವೇರುವದು; ಆದರೆ ನೀನು ಅದನ್ನು ನಂಬದೆಹೋದದ್ದರಿಂದ ಅದೆಲ್ಲಾ ಸಂಭವಿಸುವ
ದಿನದ ವರೆಗೂ ಮಾತನಾಡಲಾರದೆ ಮೂಕನಾಗಿರುವಿ ಎಂದು ಅವನಿಗೆ ಉತ್ತರ
21 ಕೊಟ್ಟನು. ಇಷ್ಟರೊಳಗೆ ಜನರು ಜಕರೀಯನನ್ನು ಕಾದುಕೊಂಡಿದ್ದು ಅವನು ದೇವಾ
22 ಲಯದೊಳಗೆ ತಡಮಾಡಿದ್ದಕ್ಕೆ ಆಶ್ಚರ್ಯಪಟ್ಟರು. ಅವನು ಹೊರಗೆ ಬಂದಾಗ ಅವರ
ಕೂಡ ಏನೂ ಮಾತಾಡಲಾರದೆ ಇರಲು ಅವರು—ಇವನಿಗೆ ದೇವಾಲಯದಲ್ಲಿ ಏನೋ
ದಿವ್ಯ ದರ್ಶನವಾಗಿರಬೇಕು ಎಂದು ತಿಳುಕೊಂಡರು. ಅವನು ಅವರಿಗೆ ಕೈಸನ್ನೆ
23 ಮಾಡುತ್ತಾ ಮೂಕನಾಗಿಯೇ ಇದ್ದನು. ಅವನ ಯಾಜಕಕಾರ್ಯದ ದಿನಗಳು ತೀರಿದ
ನಂತರ ಅವನು ತನ್ನ ಮನೆಗೆ ಹೋದನು.

24 ಆ ದಿವಸಗಳಾದ ಮೇಲೆ ಅವನ ಹೆಂಡತಿಯಾದ ಎಲಿಸಬೇತಳು ಬಸುರಾಗಿ, ಐದು
25 ತಿಂಗಳು ಮನೆಯಲ್ಲೇ ಮರೆಯಾಗಿದ್ದು—ಕರ್ತನು ಈ ಕಾಲದಲ್ಲಿ ನನ್ನನ್ನು ಪರಾಮರಿಸಿ,
ನನಗೆ ಈ ರೀತಿಯಾಗಿ ಮಾಡಿ ಜನರಲ್ಲಿ ನನಗಿದ್ದ ಅವಮಾನವನ್ನು ಪರಿಹರಿಸಿದ್ದಾನಲ್ಲಾ
ಅನ್ನುತ್ತಿದ್ದಳು.

### ದೇವದೂತನು ಯೇಸುವಿನ ಜನನವನ್ನು ಮುಂತಿಳಿಸಿದ್ದು.

26 ಆರನೇ ತಿಂಗಳಲ್ಲಿ ದೇವರು ಗಬ್ರಿಯೇಲನೆಂಬ ತನ್ನ ದೂತನನ್ನು ಗಲಿಲಾಯಸೀಮೆಯ
27 ನಜರೇತೆಂಬ ಊರಿಗೆ ಒಬ್ಬ ಕನ್ಯೆಯ ಬಳಿಗೆ ಕಳುಹಿಸಿದನು; ಆ ಕನ್ಯೆಯ ಹೆಸರು ಮರಿ

1) ಅಂಕೆ ೬, ೩. 2) ಮಲಕೀಯ ೪, ೪—೬.

ಯಳು; ಆಕೆಯು ದಾವೀದನ ಮನೆತನದ ಯೋಸೇಫನೆಂಬ ಪುರುಷನಿಗೆ ನಿಶ್ಚಿತಾರ್ಥ
ವಾಗಿದ್ದಳು. ಆ ದೂತನು ಆಕೆಯ ಬಳಿಗೆ ಬಂದು—ದೇವರ ದಯೆ ಹೊಂದಿದವಳೇ, 28
ನಿನಗೆ ಶುಭವಾಗಲಿ; ಕರ್ತನು ನಿನ್ನ ಸಂಗಡ ಇದ್ದಾನೆ ಅಂದನು. ಆಕೆಯು ಆ 29
ಮಾತಿಗೆ ತತ್ತರಿಸಿ—ಇದೆಂಥಾ ಆಶೀರ್ವಾದ ಎಂದು ಯೋಚನೆಮಾಡುತ್ತಿರಲಾಗಿ,
ಆ ದೂತನು ಆಕೆಗೆ—ಮರಿಯಳೇ, ಹೆದರಬೇಡ; ನಿನಗೆ ದೇವರ ದಯೆ ದೊರಕಿತು. 30
ಇಗೋ, ನೀನು ಗರ್ಭಿಣಿಯಾಗಿ ಒಬ್ಬ ಮಗನನ್ನು ಹೆರುವಿ; ಆತನಿಗೆ ಯೇಸುವೆಂದು 31
ಹೆಸರಿಡಬೇಕು. ಆತನು ಮಹಾಪುರುಷನಾಗಿ ಪರಾತ್ಪರನ ಕುಮಾರನೆನ್ನಿಸಿಕೊಳ್ಳುವನು; 32
ಇದಲ್ಲದೆ ದೇವರಾಗಿರುವ ಕರ್ತನು ಆತನ ಮೂಲಪಿತನಾದ ದಾವೀದನ ಸಿಂಹಾಸನ
ವನ್ನು ಆತನಿಗೆ ಕೊಡುವನು. ಆತನು ಯಾಕೋಬನ ವಂಶವನ್ನು ಸದಾಕಾಲ ಆಳು 33
ವನು; ಆತನ ರಾಜ್ಯಕ್ಕೆ ಅಂತ್ಯವೇ ಇಲ್ಲ ಎಂದು ಹೇಳಿದನು. ಮರಿಯಳು ಆ 34
ದೂತನನ್ನು—ಇದು ಹ್ಯಾಗಾದೀತು? ನಾನು ಪುರುಷನನ್ನು ಅರಿತವಳಲ್ಲವಲ್ಲಾ ಎಂದು
ಕೇಳಿದ್ದಕ್ಕೆ, ದೂತನು—ನಿನ್ನ ಮೇಲೆ ಪವಿತ್ರಾತ್ಮ ಬರುವದು; ಪರಾತ್ಪರನ ಶಕ್ತಿಯ ನೆರಳು 35
ನಿನ್ನ ಮೇಲೆ ಬೀಳುವದು; ಆದದರಿಂದ ಹುಟ್ಟುವ ಆ ಪವಿತ್ರ ಶಿಶು ದೇವರ ಮಗನೆನ್ನಿಸಿ
ಕೊಳ್ಳುವದು. ಮತ್ತು ನಿನ್ನ ಬಂಧುವಾದ ಎಲಿಸಬೇತಳಿದ್ದಾಳಲ್ಲಾ, ಆಕೆ ಸಹ ಮುಪ್ಪಿ 36
ನವಳಾದರೂ ಗರ್ಭಿಣಿಯಾಗಿದ್ದಾಳೆ; ಆಕೆಯ ಗರ್ಭದಲ್ಲಿ ಗಂಡುಮಗುವದೆ; ಬಂಜೆಯೆ
ನ್ನಿಸಿಕೊಂಡಿದ್ದ ಆಕೆಗೆ ಇದೇ ಆರನೇ ತಿಂಗಳು. ದೇವರಿಂದ ಬರುವ ಯಾವ ಮಾತಾ 37
ದರೂ ನಿಷ್ಫಲವಾಗುವದಿಲ್ಲ[1] ಅಂದನು. ಆಗ ಮರಿಯಳು—ಇಗೋ, ನಾನು ಕರ್ತನ 38
ದಾಸಿ; ನಿನ್ನ ಮಾತಿನಂತೆ ನನಗಾಗಲಿ ಅಂದಳು. ಆ ಮೇಲೆ ಆ ದೂತನು ಆಕೆಯ
ಬಳಿಯಿಂದ ಹೊರಟುಹೋದನು.

### ಯೇಸುವಿನ ತಾಯಿಯಾದ ಮರಿಯಳು ಯೋಹಾನನ ತಾಯಿಗೆ ಭೇಟಿಕೊಟ್ಟದ್ದು, ಮತ್ತು ದೇವರನ್ನು ಕೊಂಡಾಡಿದ್ದು.

ಆ ಕಾಲದಲ್ಲಿ ಮರಿಯಳು ಎದ್ದು ಅವಸರದಿಂದ ಮಲೆನಾಡಿಗೆ ಹೊರಟು ಯೆಹೂದ 39
ದಲ್ಲಿರುವ ಒಂದೂರಿಗೆ ಹೋಗಿ, ಜಕರೀಯನ ಮನೆಯನ್ನು ಸೇರಿ, ಎಲಿಸಬೇತಳಿಗೆ ವಂದಿ 40
ಸಿದಳು. ಎಲಿಸಬೇತಳು ಮರಿಯಳ ವಂದನೆಯನ್ನು ಕೇಳುತ್ತಲೇ ಆಕೆಯ ಗರ್ಭದಲ್ಲಿದ್ದ 41
ಕೂಸು ಹಾರ್ಯಾಡಿತು. ಮತ್ತು ಎಲಿಸಬೇತಳು ಪವಿತ್ರಾತ್ಮದಿಂದ ತುಂಬಿದವಳಾಗಿ
ಮಹಾಧ್ವನಿಯಿಂದ ಕೂಗಿ—ನೀನು ಸ್ತ್ರೀಯರೊಳಗೆ ಆಶೀರ್ವಾದ ಹೊಂದಿದವಳು, 42
ಮತ್ತು ನಿನ್ನಲ್ಲಿ ಹುಟ್ಟುವ ಕೂಸು ಆಶೀರ್ವಾದ ಹೊಂದಿದ್ದು. ನನ್ನ ಸ್ವಾಮಿಯ 43
ತಾಯಿಯು ನನ್ನ ಬಳಿಗೆ ಬರುವಷ್ಟು ಭಾಗ್ಯ ನನಗೆ ಎಲ್ಲಿಂದಾಯಿತು? ಇಗೋ, ನಿನ್ನ 44
ವಂದನೆಯು ನನ್ನ ಕಿವಿಗೆ ಬೀಳುತ್ತಲೇ ಕೂಸು ನನ್ನ ಗರ್ಭದಲ್ಲಿ ಉಲ್ಲಾಸದಿಂದ ಹಾರ್ಯಾ
ಡಿತು. ನಂಬಿದವಳಾದ ನೀನು ಧನ್ಯಳೇ; ಕರ್ತನು ನಿನಗೆ ಹೇಳಿದ ಮಾತುಗಳು ನೆರ 45
ವೇರುವವು ಅಂದಳು. ಆಗ ಮರಿಯಳು ಹೇಳಿದ್ದೇನಂದರೆ—[2] 46

---

[1] ಅಥವಾ, ಯಾವ ಕಾರ್ಯವೂ ದೇವರಿಗೆ ಅಸಾಧ್ಯವಲ್ಲ.

[2] ೧ ಸಮುವೇಲ ೨, ೧—೧೦ ಸರಿನೋಡಿರಿ.

ನನ್ನ ಪ್ರಾಣವು ಕರ್ತನನ್ನು ಕೊಂಡಾಡುತ್ತದೆ,
47 ನನ್ನ ಆತ್ಮವು ನನ್ನ ಉದ್ಧಾರಕನಾದ ದೇವರ ವಿಷಯದಲ್ಲಿ ಉಲ್ಲಾಸಗೊಂಡದೆ.
48 ಆತನು ತನ್ನ ದಾಸಿಯ ದೀನಸ್ಥಿತಿಯ ಮೇಲೆ ಲಕ್ಷ್ಯವಿಟ್ಟಿದ್ದಾನೆ.
ಇಗೋ, ಇಂದಿನಿಂದ ತಲತಲಾಂತರದವರೆಲ್ಲಾ ನನ್ನನ್ನು ಧನ್ಯಳೆಂದು ಹೊಗಳುವರು.
49 ಶಕ್ತನಾಗಿರುವಾತನು ನನಗೆ ದೊಡ್ಡ ಉಪಕಾರಗಳನ್ನು ಮಾಡಿದ್ದಾನೆ; ಆತನ ನಾಮವು ಪರಿಶುದ್ಧವಾದದ್ದು.
50 ಆತನಿಗೆ ಭಯಪಡುವವರ ಮೇಲೆ ಆತನ ದಯವು ತಲತಲಾಂತರದ ವರೆಗೂ ಇರುವದು.
51 ಆತನು ತನ್ನ ಭುಜಪರಾಕ್ರಮವನ್ನು ತೋರಿಸಿ, ಸೊಕ್ಕಿದ ಮನಸ್ಸುಳ್ಳವರನ್ನು ಚದರಿಸಿಬಿಟ್ಟಿದ್ದಾನೆ.
52 ಪ್ರಭುಗಳನ್ನು ಸಿಂಹಾಸನಗಳಿಂದ ದೊಬ್ಬಿ, ದೀನಸ್ಥಿತಿಯವರನ್ನು ಉನ್ನತಸ್ಥಿತಿಗೆ ತಂದಿದ್ದಾನೆ.
53 ಹಸಿದವರನ್ನು ಮೃಷ್ಟಾನ್ನದಿಂದ ತೃಪ್ತಿಪಡಿಸಿ, ಸ್ಥಿತಿವಂತರನ್ನು ಬರಿಗೈಯಲ್ಲಿ ಕಳುಹಿಸಿಬಿಟ್ಟಿದ್ದಾನೆ.
54-55 ಆತನು ನಮ್ಮ ಪೂರ್ವಿಕರಿಗೆ ಹೇಳಿದ್ದಕ್ಕೆ ಸರಿಯಾಗಿ,
ಅಬ್ರಹಾಮನಿಗೂ ಅವನ ವಂಶದವರಿಗೂ ಯಾವಾಗಲೂ ದಯೆ ತೋರಿಸಬೇಕೆಂಬುವದನ್ನು ನೆನಸಿಕೊಂಡು,
ತನ್ನ ಸೇವಕನಾದ ಇಸ್ರಾಯೇಲನನ್ನು ಕೈಹಿಡಿದಿದ್ದಾನೆ,
56 ಅಂದಳು. ಮರಿಯಳು ಹೆಚ್ಚುಕಡಿಮೆ ಮೂರು ತಿಂಗಳು ಎಲಿಸಬೇತಳ ಬಳಿಯಲ್ಲಿದ್ದು ತನ್ನ ಮನೆಗೆ ಹಿಂತಿರುಗಿಹೋದಳು.

ಸ್ನಾನಿಕನಾದ ಯೋಹಾನನ ಜನನವೂ ನಾಮಕರಣವೂ. ಅವನ ತಂದೆಯು ದೇವರನ್ನು ಕೊಂಡಾಡಿದ್ದು.

57, 58 ಆ ಮೇಲೆ ಎಲಿಸಬೇತಳು ದಿನತುಂಬಿ ಗಂಡುಮಗುವನ್ನು ಹೆತ್ತಳು. ಆಕೆಯ ನೆರೆಹೊರೆಯವರೂ ಬಂಧುಬಾಂಧವರೂ ಆಕೆಯ ಮೇಲೆ ಕರ್ತನು ತನ್ನ ದಯವನ್ನು ವಿಶೇಷವಾಗಿ ತೋರಿಸಿದ್ದಾನೆಂಬುವದನ್ನು ಕೇಳಿ ಆಕೆಯ ಕೂಡ ಸಂತೋಷಪಟ್ಟರು.
59 ಎಂಟನೇ ದಿನದಲ್ಲಿ ಅವರು ಆ ಮಗುವಿಗೆ ಸುನ್ನತಿಮಾಡುವದಕ್ಕಾಗಿ ಬಂದು, ಅದಕ್ಕೆ
60 ಜಕರೀಯನೆಂದು ತಂದೆಯ ಹೆಸರನ್ನು ಇಡಬೇಕೆಂದಿದ್ದರು. ಈ ವಿಷಯದಲ್ಲಿ ಅದರ
61 ತಾಯಿಯು—ಅದು ಬೇಡ, ಯೋಹಾನನೆಂದು ಹೆಸರಿಡಬೇಕು ಅನ್ನಲು; ಅವರು—ನಿನ್ನ ಬಂಧುಬಾಂಧವರಲ್ಲಿ ಈ ಹೆಸರಿನವರು ಒಬ್ಬರಾದರೂ ಇಲ್ಲವಲ್ಲಾ ಎಂದು ಆಕೆಗೆ
62 ಹೇಳಿ, ಇದಕ್ಕೆ ಏನು ಹೆಸರಿಡಬೇಕೆಂದಿರುತ್ತೀ ಎಂಬದಾಗಿ ತಂದೆಗೆ ಸನ್ನೆಮಾಡಿದರು.
63 ಅವನು ಒಂದು ಹಲಿಗೆಯನ್ನು ತರಿಸಿಕೊಂಡು—ಯೋಹಾನನೆಂತಲೇ ಅದರ ಹೆಸರು
64 ಎಂದು ಬರೆದನು. ಅದಕ್ಕೆ ಎಲ್ಲರೂ ಆಶ್ಚರ್ಯಪಟ್ಟರು. ಕೂಡಲೇ ಅವನಿಗೆ ಬಾಯಿ ಬಂತು, ನಾಲಿಗೆ ಸಡ್ಲವಾಯಿತು, ಅವನು ಮಾತಾಡುವ ಶಕ್ತಿಯುಳ್ಳವನಾಗಿ ದೇವರನ್ನು
65 ಕೊಂಡಾಡಿದನು. ಇದನ್ನು ಕೇಳಿದ ನೆರೆಹೊರೆಯವರಿಗೆಲ್ಲಾ ಹೆದರಿಕೆಯುಂಟಾಯಿತು;

ಮತ್ತು ಈ ಎಲ್ಲಾ ಸಂಗತಿಗಳನ್ನು ಕುರಿತು ಯೂದಾಯದ ಮಲೆನಾಡಿನಲ್ಲೆಲ್ಲಾ ಮಾತಾಡಿ ಕೊಳ್ಳುತ್ತಿದ್ದರು. ಕೇಳಿದವರೆಲ್ಲರೂ—ಅಹಾ, ಈ ಕೂಸು ಎಂಥವನಾಗುವನೋ ಎಂದು 66 ಈ ಸಂಗತಿಗಳನ್ನು ಮನಸ್ಸಿನಲ್ಲಿಟ್ಟುಕೊಂಡರು. ಮತ್ತು ಕರ್ತನ ಹಸ್ತವು ಆದರ ಮೇಲೆ ಇತ್ತು.

ಇದಲ್ಲದೆ ಆ ಮಗುವಿನ ತಂದೆಯಾದ ಜಕರೀಯನು ಪವಿತ್ರಾತ್ಮಭರಿತನಾಗಿ ಪ್ರವಾದ 67 ನಾವಚನವನ್ನು ನುಡಿದದ್ದೇನಂದರೆ—

ಇಸ್ರಯೇಲ ಜನರ ದೇವರಾಗಿರುವ ಕರ್ತನಿಗೆ ಸ್ತೋತ್ರವು; 68-70
ಆತನು ಪೂರ್ವದಲ್ಲಿದ್ದ ತನ್ನ ಶ್ರೀಪ್ರವಾದಿಗಳ ಬಾಯಿಯಿಂದ ತಾನು ಹೇಳಿ ದಂತೆಯೇ,
ತನ್ನ ಪ್ರಜೆಯನ್ನು ಪರಾಮರಿಸಿ, ಅವರಿಗೆ ಬಿಡುಗಡೆಯನ್ನುಂಟುಮಾಡಿದ್ದಾನೆ;
ತನ್ನ ಸೇವಕನಾದ ದಾವೀದನ ಮನೆತನದಲ್ಲಿ ನಮಗೋಸ್ಕರ ಒಬ್ಬ ರಕ್ಷಣ ವೀರನನ್ನು ಎಬ್ಬಿಸಿದ್ದಾನೆ.
ಆತನು ನಮ್ಮ ಪಿತೃಗಳಿಗೆ ದಯೆಯನ್ನು ತೋರಿಸುವವನಾಗಿಯೂ 71-73
ನಮ್ಮ ಮೂಲಪಿತೃವಾದ ಅಬ್ರಹಾಮನಿಗೆ ಪ್ರಮಾಣಮಾಡಿ ಕೊಟ್ಟ ತನ್ನ ಪರಿಶುದ್ಧವಾದ ಒಡಂಬಡಿಕೆಯನ್ನು ನೆನಸಿಕೊಳ್ಳುವವನಾಗಿಯೂ ಇದ್ದು,
ನಮ್ಮ ವೈರಿಗಳಿಂದಲೂ ನಮ್ಮನ್ನು ದ್ವೇಷಿಸುವವರೆಲ್ಲರ ಕೈಯಿಂದಲೂ ನಮ್ಮನ್ನು ತಪ್ಪಿಸಿ ರಕ್ಷಿಸಿದ್ದಾನೆ.
ಹೀಗೆ ನಾವು ನಮ್ಮ ವೈರಿಗಳ ಕೈಯಿಂದ ಬಿಡುಗಡೆಹೊಂದಿ ಭಯವಿಲ್ಲದವ 74-75 ರಾಗಿದ್ದು,
ನಮ್ಮ ಜೀವಮಾನದಲ್ಲೆಲ್ಲಾ ನಿರ್ಮಲಚಿತ್ತದಿಂದಲೂ ನೀತಿಯಿಂದಲೂ
ತನ್ನ ಸನ್ನಿಧಿಯಲ್ಲಿ ಸೇವೆಮಾಡುವಂತೆ ನಮಗೆ ಅನುಕೂಲ ಮಾಡಿದ್ದಾನೆ.

ಮಗುವೇ, ನೀನಾದರೋ ಪರಾತ್ಪರನ ಪ್ರವಾದಿಯೆನ್ನಿಸಿಕೊಳ್ಳುವಿ. 76
ನೀನು ಸ್ವಾಮಿಯ ಮುಂದೆ ಹೋಗಿ ಆತನ ಹಾದಿಗಳನ್ನು ಸಿದ್ಧ ಮಾಡುವವ ನಾಗಿಯೂ
ನಮ್ಮ ದೇವರು ಅತ್ಯಂತಕರುಣೆಯಿಂದ ದಯಪಾಲಿಸುವ ಪಾಪಪರಿಹಾರ 77-78 ವೆಂಬ ರಕ್ಷಣೆಯ ತಿಳುವಳಿಕೆಯನ್ನು ಆತನ ಪ್ರಜೆಗೆ ಕೊಡುವವನಾಗಿಯೂ ಇರುವಿ.
ಆ ಕರುಣೆಯಿಂದಲೇ ನಮಗೆ ಮೇಲಿನಿಂದ ಅರುಣೋದಯವು ಉಂಟಾಗಿ,
ಕತ್ತಲಲ್ಲಿಯೂ ಮರಣಾಂಧಕಾರದಲ್ಲಿಯೂ ವಾಸಿಸಿರುವವರಾದ ನಮಗೆ 79 ಪ್ರಕಾಶಕೊಟ್ಟು,
ನಮ್ಮ ಕಾಲುಗಳನ್ನು ಸಮಾಧಾನದ[1] ಮಾರ್ಗದಲ್ಲಿ ಸೇರಿಸಿ ನಡಿಸುವದು

ಅಂದನು. ಆ ಬಾಲಕನು ಬೆಳೆದು ಆತ್ಮದಲ್ಲಿ ಬಲವುಳ್ಳವನಾದನು. ಮತ್ತು ಇಸ್ರಯೇಲ 80 ಜನರಿಗೆ ತನ್ನನ್ನು ತೋರ್ಪಡಿಸಿಕೊಳ್ಳುವ ದಿನದ ವರೆಗೆ ಅರಣ್ಯಪ್ರದೇಶಗಳಲ್ಲಿ ಇದ್ದನು.

[1] ಅಥವಾ, ಸುಕ್ಷೇಮದ.

ಯೇಸು ಕ್ರಿಸ್ತನ ಜನನವು; ದೇವದೂತರು ಅದನ್ನು ಕುರುಬರಿಗೆ ತಿಳಿಸಿದ್ದು.

**2** ಆ ಕಾಲದಲ್ಲಿ ರಾಜ್ಯವೆಲ್ಲಾ ಖಾನೆಷುಮಾರೀ ಬರಸಿಕೊಳ್ಳಬೇಕೆಂಬ ಆಜ್ಞೆಯು ಚಕ್ರ
2 ವರ್ತಿಯಾದ ಔಗುಸ್ತನಿಂದ ಹೊರಟಿತು. ಕುರೇನ್ಯನು ಸುರಿಯಕ್ಕೆ ಅಧಿಪತಿಯಾಗಿ
3 ದ್ದಾಗ ಈ ಮೊದಲನೇ ಖಾನೆಷುಮಾರಿ ನಡೆಯಿತು. ಆಗ ಎಲ್ಲರೂ ಖಾನೆಷುಮಾರೀ
4-5 ಬರಸಿಕೊಳ್ಳುವದಕ್ಕಾಗಿ ತಮ್ಮತಮ್ಮ ಊರುಗಳಿಗೆ ಹೊರಟರು. ಯೋಸೇಫನು ಸಹ
ತಾನು ದಾವೀದನ ಮನೆತನದವನೂ ಗೋತ್ರದವನೂ ಆಗಿದ್ದದರಿಂದ, ಹೆಸರುಬರಸಿ
ಕೊಳ್ಳುವದಕ್ಕಾಗಿ, ತನಗೆ ನಿಶ್ಚಿತಾರ್ಥವಾಗಿದ್ದ ಮರಿಯಳ ಸಂಗಡ ಗಲಿಲಾಯಸೀಮೆಯ
ನಜರೇತ್ ಎಂಬ ಊರಿನಿಂದ ಹೊರಟು, ಯೂದಾಯದಲ್ಲಿರುವ ಬೇತ್ಲೆಹೇಮೆಂಬ ದಾವೀ
6 ದನೂರಿಗೆ ಹೋದನು. ಆಗ ಮರಿಯಳು ಪೂರ್ಣಗರ್ಭಿಣಿಯಾಗಿದ್ದಳು. ಅವರು
7 ಅಲ್ಲಿದ್ದಾಗ ಆಕೆಗೆ ದಿನತುಂಬಿತು. ಆಕೆಯು ತನ್ನ ಚೊಚ್ಚಲುಮಗನನ್ನು ಹೆತ್ತು ಬಟ್ಟೆ
ಯಲ್ಲಿ ಸುತ್ತಿ ಚತ್ರದಲ್ಲಿ ಅವರಿಗೆ ಸ್ಥಳವಿಲ್ಲದ ಕಾರಣ ಅವನನ್ನು ಗೋದಲಿಯಲ್ಲಿ ಮಲಗಿ
ಸಿದಳು.

8 ಆ ಸೀಮೆಯಲ್ಲಿ ಕುರುಬರು ಹೊಲದಲ್ಲಿದ್ದುಕೊಂಡು ರಾತ್ರಿಯಲ್ಲಿ ತಮ್ಮ ಕುರೀ
9 ಹಿಂಡನ್ನು ಕಾಯುತ್ತಿರಲಾಗಿ, ಕರ್ತನ ದೂತನೊಬ್ಬನು ಬಂದು ಅವರ ಎದುರಿನಲ್ಲಿ ನಿಂತನು.
ಕರ್ತನ ಪ್ರಭೆಯು ಅವರ ಸುತ್ತಲು ಪ್ರಕಾಶಿಸಿತು; ಅವರು ಬಹಳವಾಗಿ ಹೆದರಿದರು.
10 ಆ ದೂತನು ಅವರಿಗೆ—ಹೆದರಬೇಡಿರಿ, ಕೇಳಿರಿ; ಜನರಿಗೆಲ್ಲಾ ಮಹಾ ಸಂತೋಷ
11 ವನ್ನುಂಟುಮಾಡುವ ಶುಭಸಮಾಚಾರವನ್ನು ನಿಮಗೆ ತಿಳಿಸುತ್ತೇನೆ. ಅದೇನಂದರೆ, ಈ
ಹೊತ್ತು ನಿಮಗೋಸ್ಕರ ದಾವೀದನೂರಲ್ಲಿ ಒಬ್ಬ ರಕ್ಷಕನು ಹುಟ್ಟಿದ್ದಾನೆ. ಆತನು
12 ಸ್ವಾಮಿಯಾಗಿರುವ ಕ್ರಿಸ್ತನೇ. ಆತನು ನಿಮಗೆ ಗೊತ್ತಾಗುವದಕ್ಕೆ ಗುರುತೇನಂದರೆ—
ಬಟ್ಟೆಯಿಂದ ಸುತ್ತಿರುವ ಒಂದು ಕೂಸು ಗೋದಲಿಯಲ್ಲಿ ಮಲಗಿರುವದನ್ನು ಕಾಣುವಿರಿ
13 ಎಂದು ಹೇಳಿದನು. ಫಕ್ಕನೆ ಆ ದೂತನ ಸಂಗಡ ಪರಲೋಕಸೈನ್ಯದವರ ಒಂದು ದೊಡ್ಡ
ಗುಂಪು ಕಾಣಿಸಿಕೊಂಡು—

14 ಮೇಲಣಲೋಕಗಳಲ್ಲಿ ದೇವರಿಗೆ ಮಹಿಮೆ,
ಭೂಲೋಕದಲ್ಲಿ ಮನುಷ್ಯರೊಳಗೆ ಸಮಾಧಾನ[1].
ದೇವರು ಅವರಿಗೆ ಒಲಿಯುತ್ತಾನೆ[2]

ಎಂದು ದೇವರನ್ನು ಕೊಂಡಾಡುತ್ತಾ ಹೇಳಿದರು.

15 ದೇವದೂತರು ಅವರ ಬಳಿಯಿಂದ ಪರಲೋಕಕ್ಕೆ ಹೊರಟುಹೋದ ಮೇಲೆ, ಆ ಕುರು
ಬರು—ನಾವು ಈಗಲೇ ಬೇತ್ಲೆಹೇಮಿಗೆ ಹೋಗಿ, ಕರ್ತನು ನಮಗೆ ತಿಳಿಯಪಡಿಸಿದ ಈ
ಸಂಗತಿಯನ್ನು ನೋಡೋಣ ನಡೆಯಿರಿ ಎಂದು ತಮ್ಮತಮ್ಮೊಳಗೆ ಮಾತಾಡಿಕೊಂಡು,
16 ತಟ್ಟನೆ ಹೋಗಿ, ಮರಿಯಳನ್ನೂ ಯೋಸೇಫನನ್ನೂ ಗೋದಲಿಯಲ್ಲಿ ಮಲಗಿರುವ ಆ
17 ಕೂಸನ್ನೂ ಕಂಡುಕೊಂಡರು. ಅದನ್ನು ನೋಡಿದಾಗ ಅವರು ಆ ಮಗುವಿನ ವಿಷಯ

---

[1] ಅಥವಾ, ಸುಕ್ಷೇಮ.

[2] ಕೆಲವು ಪ್ರತಿಗಳಲ್ಲಿ—ಭೂಲೋಕದಲ್ಲಿ ಸಮಾಧಾನ, ಮನುಷ್ಯರ ಮೇಲೆ ದೇವರ ದಯೆ ಎಂದು ಬರೆದದೆ.

ದಲ್ಲಿ ತಮಗೆ ಹೇಳಿದ್ದ ಮಾತನ್ನು ತಿಳಿಯಪಡಿಸಿದರು. ಅದನ್ನು ಕೇಳಿದವರೆಲ್ಲರೂ ತಮಗೆ 18
ಕುರುಬರು ಹೇಳಿದ ಮಾತುಗಳಿಗೆ ಆಶ್ಚರ್ಯಪಟ್ಟರು. ಆದರೆ ಮರಿಯಳು ಆ ಮಾತು 19
ಗಳನ್ನೆಲ್ಲಾ ತನ್ನ ಮನಸ್ಸಿನಲ್ಲಿಟ್ಟುಕೊಂಡು ಯೋಚಿಸುತ್ತಿದ್ದಳು. ಕುರುಬರು ತಮಗೆ 20
ದೂತರಿಂದ ಹೇಳಲ್ಪಟ್ಟಂತೆಯೇ ಎಲ್ಲಾ ಸಂಗತಿಗಳನ್ನು ಕೇಳಿ ನೋಡಿ, ಅವುಗಳಿಗೋಸ್ಕರ
ದೇವರನ್ನು ಕೊಂಡಾಡುತ್ತಾ ಸ್ತುತಿಸುತ್ತಾ ಹಿಂತಿರುಗಿ ಹೋದರು.

### ಯೇಸುವಿನ ನಾಮಕರಣವು; ಆತನನ್ನು ದೇವಾಲಯದಲ್ಲಿ ದೇವರಿಗೆ ಸಮರ್ಪಿಸಿದ್ದು.

ಆ ಕೂಸಿಗೆ ಸುನ್ನತಿಮಾಡುವದಕ್ಕೆ ಕಳೆಯಬೇಕಾದ ಎಂಟು ದಿವಸಗಳು ತುಂಬಿದ 21
ಮೇಲೆ ಅದಕ್ಕೆ ಯೇಸುವೆಂದು ಹೆಸರಿಟ್ಟರು. ಅದು ಗರ್ಭದಲ್ಲಿ ಮೂಡುವದಕ್ಕಿಂತ
ಮೊದಲು ದೇವದೂತನು ಅದೇ ಹೆಸರನ್ನು ಸೂಚಿಸಿದ್ದನು.

ಬಳಿಕ ಮೋಶೆಯ ನೇಮದ ಪ್ರಕಾರ[1] ಅವರ ಸೂತಕ ಕಳೆಯುವದಕ್ಕೆ ತಕ್ಕಷ್ಟು 22
ದಿವಸಗಳು ತುಂಬಲು, ಅವರು ಆ ಕೂಸನ್ನು ಯೆರೂಸಲೇಮಿಗೆ ತೆಗೆದುಕೊಂಡು
ಹೋದರು. ಯಾಕಂದರೆ, ಚೊಚ್ಚಲು ಗಂಡೆಲ್ಲಾ ಕರ್ತನಿಗೆ ಮೀಸಲೆನ್ನಿಸಿಕೊಳ್ಳುವದು 23
ಎಂಬದಾಗಿ[2] ಕರ್ತನ ಧರ್ಮಶಾಸ್ತ್ರದಲ್ಲಿ ಬರೆದಿರುವಂತೆ, ಅದನ್ನು ಕರ್ತನಿಗೆ ಸಮರ್ಪಿಸ
ಬೇಕಾಗಿತ್ತು. ಇದಲ್ಲದೆ ಕರ್ತನ ಧರ್ಮಶಾಸ್ತ್ರದಲ್ಲಿ ಹೇಳಿರುವಂತೆ[1] ಒಂದು ಜೋಡಿ 24
ಬೆಳವವನ್ನಾಗಲಿ ಎರಡು ಪಾರಿವಾಳದ ಮರಿಗಳನ್ನಾಗಲಿ ಬಲಿಕೊಡಬೇಕಾಗಿತ್ತು. ಆ 25
ಕಾಲದಲ್ಲಿ ಯೆರೂಸಲೇಮಿನಲ್ಲಿ ಸಿಮೆಯೋನನೆಂಬ ಒಬ್ಬ ಮನುಷ್ಯನಿದ್ದನು. ಈ ಮನು
ಷ್ಯನು ನೀತಿವಂತನೂ ದೇವಭಕ್ತನೂ ಆಗಿದ್ದು, ಇಸ್ರಯೇಲ ಜನರನ್ನು ಸಂತೈಸುವವನು
ಯಾವಾಗ ಬಂದಾನೆಂದು ಹಾರೈಸುತ್ತಿದ್ದನು[4]; ಮತ್ತು ಪವಿತ್ರಾತ್ಮಪ್ರೇರಿತನಾಗಿದ್ದನು.
ಇದಲ್ಲದೆ, ಕರ್ತನು ಕಳುಹಿಸಬೇಕಾದ ಕ್ರಿಸ್ತನನ್ನು ಕಾಣುವದಕ್ಕಿಂತ ಮುಂಚೆ ನೀನು 26
ಸಾಯುವದಿಲ್ಲವೆಂದು ಪವಿತ್ರಾತ್ಮನ ಮೂಲಕ ಅವನಿಗೆ ದೈವೋಕ್ತಿ ಉಂಟಾಗಿತ್ತು.
ಇವನು ಪವಿತ್ರಾತ್ಮನ ಪ್ರೇರಣೆಯಿಂದ ದೇವಾಲಯಕ್ಕೆ ಬಂದನು; ಆಗ ತಂದೆತಾಯಿಗಳು 27
ಯೇಸುವೆಂಬ ಮಗುವಿಗೆ ಧರ್ಮಶಾಸ್ತ್ರದಲ್ಲಿ ಹೇಳಿರುವ ಪದ್ಧತಿಯ ಪ್ರಕಾರ ನಡಿಸ
ಬೇಕೆಂದು ಅದನ್ನು ಒಳಕ್ಕೆ ತರಲು, ಅವನು ಅದನ್ನು ತನ್ನ ಕೈಯಲ್ಲಿ ತಕ್ಕೊಂಡು ದೇವ 28
ರನ್ನು ಕೊಂಡಾಡಿ—

> ಒಡೆಯನೇ, ನಿನ್ನ ಮಾತು ನೆರವೇರಿತು; 29
> ಈಗ ಸಮಾಧಾನದಿಂದ ಹೋಗುವದಕ್ಕೆ ನಿನ್ನ ದಾಸನಿಗೆ ಅಪ್ಪಣೆಯಾಯಿತು.
> ನೀನು ನೇಮಿಸಿರುವ ರಕ್ಷಕನನ್ನು ನಾನು ಕಣ್ಣಾರೆ ಕಂಡೆನು. 30
> ಎಲ್ಲಾ ಜನಗಳಿಗೆ ಪ್ರತ್ಯಕ್ಷನಾಗಲಿ ಎಂದು ಆತನನ್ನು ಒದಗಿಸಿಕೊಟ್ಟಿದ್ದೀ. 31
> ಆತನು ಅನ್ಯದೇಶದವರಿಗೆ ಜ್ಞಾನೋದಯದ ಬೆಳಕು, 32
> ನಿನ್ನ ಪ್ರಜೆಯಾದ ಇಸ್ರಯೇಲ್ಯರಿಗೆ ಕೀರ್ತಿ.

---

1) ಲೇವಿಕ ೧೨, ೨. ೪. 2) ಹೊರಡೋಣ ೧೩, ೨. 3) ಲೇವಿಕ ೧೨, ೮.
4) ಮೂಲ: ಇಸ್ರಯೇಲ ಜನರ ದುಃಖಶಾಂತಿಯನ್ನು ಹಾರೈಸುತ್ತಿದ್ದನು.

33 ಅಂದನು. ಆ ಮಗುವಿನ ವಿಷಯವಾಗಿ ಹೇಳಿದ ಈ ಮಾತುಗಳಿಗೆ ಅದರ ತಂದೆತಾಯಿ
34 ಗಳು ಆಶ್ಚರ್ಯಪಡುತ್ತಿರಲು, ಸಿಮೆಯೋನನು ಅವರನ್ನು ಆಶೀರ್ವದಿಸಿ, ತಾಯಿಯಾದ
ಮರಿಯಳಿಗೆ—ಇಗೋ, ಈತನು ಇಸ್ರಯೇಲ ಜನರಲ್ಲಿ ಅನೇಕರು ಬೀಳುವದಕ್ಕೂ ಅನೇ
ಕರು ಏಳುವದಕ್ಕೂ ಕಾರಣನಾಗಿರುವನು; ಮತ್ತು ಜನರು ಎದುರುಮಾತಾಡುವದಕ್ಕೆ
35 ಗುರುತಾಗಿರುವನು; ಹೀಗೆ ಬಹುಜನರ ಅಂತರಂಗದ ವಿಚಾರಗಳು ಬೈಲಿಗೆ ಬಂದಾವು;
ಇದಕ್ಕೆ ಈತನು ಹುಟ್ಟಿದ್ದು. ಇದಲ್ಲದೆ ನಿನ್ನ ಪ್ರಾಣಕ್ಕಂತೂ ಅಲಗು ನಾಟಿದಂತಾಗು
ವದು ಎಂದು ಹೇಳಿದನು.

36 ಇದಲ್ಲದೆ ಅಸೇರನ ಕುಲದ ಫನುವೇಲನ ಮಗಳಾದ ಅನ್ನಳೆಂಬ ಒಬ್ಬ ಪ್ರವಾದಿನಿ
ಇದ್ದಳು. ಆಕೆ ಬಹಳ ಮುಪ್ಪಿನವಳು; ಆಕೆ ತನ್ನ ಕನ್ಯಾವಸ್ಥೆ ಕಳೆದ ತರುವಾಯ
37 ಗಂಡನ ಕೂಡ ಏಳು ವರುಷ ಬಾಳುವೆ ಮಾಡಿ, ಎಂಭತ್ತುನಾಲ್ಕು ವರುಷ ವಿಧವೆಯಾಗಿ
ದ್ದಳು. ಆಕೆ ದೇವಾಲಯವನ್ನು ಬಿಟ್ಟುಹೋಗದೆ ಉಪವಾಸ ವಿಜ್ಞಾಪನೆಗಳಿಂದ ರಾತ್ರೆ
38 ಹಗಲೂ ದೇವರ ಸೇವೆಯನ್ನು ಮಾಡುತ್ತಿದ್ದಳು. ಆಕೆ ಅದೇ ಗಳಿಗೆಯಲ್ಲಿ ಹತ್ತರಕ್ಕೆ
ಬಂದು, ದೇವರಿಂದಾದ ಉಪಕಾರವನ್ನು ನೆನಸಿ ಕೊಂಡಾಡಿದ್ದಲ್ಲದೆ, ಯೆರೂಸಲೇಮಿನ
ಬಿಡುಗಡೆಯನ್ನು ಹಾರೈಸುತ್ತಿದ್ದವರೆಲ್ಲರ ಸಂಗಡ ಆತನ ವಿಷಯವಾಗಿ ಮಾತಾಡುವವ
39 ಳಾದಳು. ಇತ್ತಲಾಗಿ ಅವರು ಕರ್ತನ ಧರ್ಮಶಾಸ್ತ್ರದಲ್ಲಿ ಹೇಳಿರುವ ಕಾರ್ಯಗಳ
ನ್ನೆಲ್ಲಾ ನೆರವೇರಿಸಿದ ಮೇಲೆ, ಗಲಿಲಾಯಕ್ಕೆ ಸೇರಿದ ನಜರೇತೆಂಬ ತಮ್ಮ ಊರಿಗೆ ಹಿಂತಿ
ರುಗಿ ಹೋದರು.

40 ಆ ಬಾಲಕನು ಬೆಳೆದು ಬಲಗೊಂಡು ಜ್ಞಾನದಿಂದ ತುಂಬಿದವನಾದನು; ಮತ್ತು
ಆತನ ಮೇಲೆ ದೇವರ ದಯವಿತ್ತು.

#### ಯೇಸು ಹನ್ನೆರಡು ವರುಷದವನಾದಾಗ, ಯೆರೂಸಲೇಮಿಗೆ ಹೋಗಿ ದೇವಾಲಯದಲ್ಲಿ ವಿದ್ವಾಂಸರ ಸಂಗಡ ಸಂಭಾಷಣೆ ಮಾಡಿದ್ದು.

41 ಆತನ ತಂದೆತಾಯಿಗಳು ಪ್ರತಿವರುಷವೂ ಪಸ್ಕಹಬ್ಬದ ಜಾತ್ರೆಗೆ ಯೆರೂಸಲೇಮಿಗೆ
42 ಹೋಗುತ್ತಿದ್ದರು. ಹೀಗಿರಲಾಗಿ, ಆತನು ಹನ್ನೆರಡು ವರುಷದವನಾದಾಗ ಅವರು
43 ಹಬ್ಬದ ಪದ್ಧತಿಯ ಪ್ರಕಾರ ಅಲ್ಲಿಗೆ ಹೋದರು. ಹಬ್ಬದ ದಿವಸಗಳನ್ನು ತೀರಿಸಿಕೊಂಡು
ಹಿಂತಿರುಗಿ ಬರುವಾಗ, ಬಾಲಕನಾದ ಯೇಸು ಯೆರೂಸಲೇಮಿನಲ್ಲಿಯೇ ಉಳುಕೊಂಡನು.
44 ಆತನ ತಂದೆತಾಯಿಗಳು ಅದನ್ನು ತಿಳಿಯದೆ, ಆತನು ಯಾತ್ರೆಯವರ ಗುಂಪಿನಲ್ಲಿ ಸೇರಿ
ರುವನು ಎಂದು ಭಾವಿಸಿ ಒಂದು ದಿನದ ಪ್ರಯಾಣ ನಡೆದು, ಬಂಧುಬಾಂಧವರಲ್ಲಿಯೂ
45 ಪರಿಚಿತಿಯವರಲ್ಲಿಯೂ ಆತನನ್ನು ಹುಡುಕಿ ಕಾಣದೆ, ತಿರಿಗಿ ಯೆರೂಸಲೇಮಿಗೆ ಹುಡುಕಿ
46 ಕೊಂಡು ಹೋದರು. ಮೂರು ದಿನದ ಮೇಲೆ ಆತನನ್ನು ದೇವಾಲಯದಲ್ಲಿ ಕಂಡರು.
ಆತನು ಬೋಧಕರ ನಡುವೆ ಕುಳಿತುಕೊಂಡು, ಅವರ ಉಪದೇಶವನ್ನು ಕೇಳುತ್ತಾ ಪ್ರಶ್ನೆ
47 ಮಾಡುತ್ತಾ ಇದ್ದನು. ಆತನು ಆಡಿದ ಮಾತುಗಳನ್ನು ಕೇಳಿದವರೆಲ್ಲರು ಆತನ ಬುದ್ಧಿಗೂ
48 ಉತ್ತರಗಳಿಗೂ ಆಶ್ಚರ್ಯಪಟ್ಟರು. ತಂದೆತಾಯಿಗಳು ಆತನನ್ನು ಕಂಡು ಬೆರಗಾದರು;
ಮತ್ತು ಆತನ ತಾಯಿಯು—ಕಂದಾ, ನೀನು ನಮಗೆ ಯಾಕೆ ಹೀಗೆ ಮಾಡಿದಿ?

ನಿನ್ನ ತಂದೆಯೂ ನಾನೂ ಎಷ್ಟೋ ತಳಮಳಗೊಂಡು ನಿನ್ನನ್ನು ಹುಡುಕಿ ಬಂದೆವಲ್ಲಾ ಎಂದು ಹೇಳಲು, ಆತನು ಅವರಿಗೆ—ನೀವು ನನ್ನನ್ನು ಹುಡುಕಿದ್ದೇನು? ನಾನು ನನ್ನ 49 ತಂದೆಯ ಮನೆಯಲ್ಲಿ ಇರಬೇಕಾದದ್ದು ನಿಮಗೆ ತಿಳಿಯಲಿಲ್ಲವೇ? ಎಂದು ಉತ್ತರ ಕೊಟ್ಟನು. ಆದರೆ ಆತನು ಹೇಳಿದ ಮಾತಿನ ಅರ್ಥವನ್ನು ಅವರು ಗ್ರಹಿಸಲಿಲ್ಲ. ಬಳಿಕ 50, 51 ಆತನು ಅವರ ಜೊತೆಯಲ್ಲಿ ನಜರೇತಿಗೆ ಬಂದು ಅವರಿಗೆ ಅಧೀನನಾಗಿದ್ದನು. ಆತನ ತಾಯಿಯು ಈ ಸಂಗತಿಗಳನ್ನೆಲ್ಲಾ ತನ್ನ ಮನಸ್ಸಿನಲ್ಲಿ ಇಟ್ಟುಕೊಂಡಳು.

ಯೇಸು ಜ್ಞಾನದಲ್ಲಿಯೂ ದೇಹಬಲದಲ್ಲಿಯೂ ವೃದ್ಧಿಯಾಗುತ್ತಾ ಬಂದನು; ಇದ 52 ಲ್ಲದೆ, ದೇವರ ಮತ್ತು ಮನುಷ್ಯರ ದಯವು ಆತನ ಮೇಲೆ ಹೆಚ್ಚಾಗುತ್ತಾ ಬಂತು.

### ಸ್ನಾನಿಕನಾದ ಯೋಹಾನನು ಉಪದೇಶ ಮಾಡಿದ್ದು.

(ಮತ್ತಾಯ 3, 1—12; ಮಾರ್ಕ 1, 2—8.)

**ಚ**ಕ್ರವರ್ತಿಯಾದ ತಿಬೇರಿಯನು ಪಟ್ಟಕ್ಕೆ ಬಂದ ಹದಿನೈದನೇ ವರುಷದಲ್ಲಿ, ಪೊಂತ್ಯಪಿಲಾ **3** ತನು ಯೂದಾಯಕ್ಕೆ ಅಧಿಪತಿಯಾಗಿಯೂ ಹೆರೋದನು ಗಲಿಲಾಯಕ್ಕೆ ಉಪರಾಜ ನಾಗಿಯೂ ಅವನ ತಮ್ಮನಾದ ಫಿಲಿಪ್ಪನು ಇತುರಾಯ ತ್ರಕೋನೀತಿ ಸೀಮೆಗಳಿಗೆ ಉಪ ರಾಜನಾಗಿಯೂ ಲುಸನ್ಯನು ಅಬಿಲೇನೆಗೆ ಉಪರಾಜನಾಗಿಯೂ ಇರುವಲ್ಲಿ, ಅನ್ನನೂ 2 ಕಾಯಫನೂ ಮಹಾಯಾಜಕರಾಗಿದ್ದ ಕಾಲದಲ್ಲಿ ಜಕರೀಯನ ಮಗನಾದ ಯೋಹಾನ ನಿಗೆ ಅಡವಿಯಲ್ಲಿ ದೇವರವಾಕ್ಯವುಂಟಾಯಿತು. ಅವನು ಯೊರ್ದನ್ ಹೊಳೆಯ ಸುತ್ತ 3 ಲಿರುವ ಪ್ರಾಂತ್ಯದಲ್ಲೆಲ್ಲಾ ಸಂಚರಿಸಿ ಜನರಿಗೆ—ನೀವು ಪಾಪಪರಿಹಾರಕ್ಕಾಗಿ ದೇವರ ಕಡೆಗೆ ತಿರುಗಿಕೊಂಡು ದೀಕ್ಷಾಸ್ನಾನ ಮಾಡಿಸಿಕೊಳ್ಳಬೇಕೆಂದು ಸಾರಿ ಹೇಳುವವನಾ ದನು. ಇದು ಯೆಶಾಯನೆಂಬ ಪ್ರವಾದಿಯ ಗ್ರಂಥದಲ್ಲಿ ಬರೆದಿರುವ ಮಾತಿಗೆ ಅನುಸಾ 4-6 ರವಾಗಿ ನಡೆಯಿತು. ಆ ಮಾತು ಏನಂದರೆ

> ಕರ್ತನ ದಾರಿಯನ್ನು ಸಿದ್ಧಮಾಡಿರಿ,
> ಆತನ ಹಾದಿಗಳನ್ನು ನೆಟ್ಟಗೆಮಾಡಿರಿ.
> ಎಲ್ಲಾ ಹಳ್ಳಕೊಳ್ಳಗಳು ಮುಚ್ಚಲ್ಪಡಬೇಕು,
> ಎಲ್ಲಾ ಬೆಟ್ಟಗುಡ್ಡಗಳು ತಗ್ಗಿಸಲ್ಪಡಬೇಕು;
> ಡೊಂಕಾಗಿರುವಂಥಾದ್ದು ನೀಟಾಗಬೇಕು,
> ಕೊರಕಲಾದ ದಾರಿಗಳು ಸಮವಾಗಬೇಕು.
> ಎಲ್ಲಾ ಮನುಷ್ಯರೂ ದೇವರಿಂದ ಸಿದ್ಧವಾಗುವ ರಕ್ಷಣೆಯನ್ನು ಕಾಣು
> ವರು ಎಂಬದಾಗಿ
> ಅಡವಿಯಲ್ಲಿ ಕೂಗುವವನ ಶಬ್ದವದೆ[1]

ಎಂಬುವದೇ. ಹೀಗಿರಲಾಗಿ, ಅವನು ತನ್ನಿಂದ ದೀಕ್ಷಾಸ್ನಾನ ಮಾಡಿಸಿಕೊಳ್ಳುವದಕ್ಕಾಗಿ 7

[1] ಯೆಶಾಯ ೪೦, ೩—೫.

ಹೊರಟುಬಂದ ಜನರ ಗುಂಪುಗಳಿಗೆ—ಎಲೈ ಸರ್ಪಜಾತಿಯವರೇ, ನೀವು ಯಾರ ಉಪ
ದೇಶವನ್ನು ಕೇಳಿ ಮುಂದೆ ಕಾಣಬರುವ ದೈವಕೋಪದಿಂದ ತಪ್ಪಿಸಿಕೊಳ್ಳಬೇಕೆಂದಿದ್ದೀರಿ?
8 ಹಾಗಾದರೆ ನಿಮ್ಮ ಮನಸ್ಸು ದೇವರ ಕಡೆಗೆ ತಿರುಗಿತೆಂಬುವದನ್ನು ತಕ್ಕ ಫಲಗಳಿಂದ
ತೋರಿಸಿರಿ. ಅಬ್ರಹಾಮನು ನಮಗೆ ಮೂಲಪಿತೃವಲ್ಲವೇ ಎಂದು ನಿಮ್ಮೊಳಗೆ ಅಂದು
ಕೊಳ್ಳುವವರಾಗಬೇಡಿರಿ. ದೇವರು ಅಬ್ರಹಾಮನಿಗೆ ಈ ಕಲ್ಲುಗಳಿಂದಾದರೂ ಮಕ್ಕ
9 ಳನ್ನು ಹುಟ್ಟಿಸಬಲ್ಲನೆಂದು ನಿಮಗೆ ಹೇಳುತ್ತೇನೆ. ಈಗಲೇ ಮರಗಳ ಬೇರಿಗೆ ಕೊಡಲಿ
ಹಾಕಿಯದೆ; ಒಳ್ಳೇ ಫಲವನ್ನು ಕೊಡದ ಪ್ರತಿ ಮರವನ್ನೂ ಕಡಿದು ಬೆಂಕಿಯಲ್ಲಿ ಹಾಕು
10 ವರು ಎಂದು ಹೇಳಿದನು. ಆಗ ಆ ಗುಂಪಿನವರು—ಹಾಗಾದರೆ ನಾವೇನು ಮಾಡ
11 ಬೇಕು ಎಂದು ಅವನನ್ನು ಕೇಳಿದ್ದಕ್ಕೆ, ಅವನು—ಎರಡು ಅಂಗಿಗಳುಳ್ಳವನು ಇಲ್ಲದವ
ನಿಗೆ ಒಂದು ಕೊಡಲಿ; ಆಹಾರವುಳ್ಳವನು ಇಲ್ಲದವನಿಗೆ ಕೊಡಲಿ ಎಂದು ಅವರಿಗೆ ಹೇಳಿ
12 ದನು. ಸುಂಕದವರು ಸಹ ದೀಕ್ಷಾಸ್ನಾನ ಮಾಡಿಸಿಕೊಳ್ಳಬೇಕೆಂದು ಬಂದು—
13 ಗುರುವೇ, ನಾವೇನು ಮಾಡಬೇಕು ಎಂದು ಅವನನ್ನು ಕೇಳಲು; ಅವನು—ನೇಮಿಸಿದ
14 ಹಾಸಲಿಗಿಂತ ಹೆಚ್ಚಾಗಿ ಏನೂ ಎಳಕೊಳ್ಳಬೇಡಿರಿ ಎಂದು ಅವರಿಗೆ ಹೇಳಿದನು. ಸಿಪಾ
ಯಿಗಳು ಸಹ ಬಂದು—ನಾವು ಏನು ಮಾಡಬೇಕು ಎಂದು ಅವನನ್ನು ಕೇಳಿದಾಗ,
ಅವನು ಅವರಿಗೆ—ಯಾರನ್ನಾದರೂ ಬೆದರಿಸಬೇಡಿರಿ; ಯಾರ ಮೇಲಾದರೂ ಸುಳ್ಳು
ದೂರು ತಂದು ದುಡ್ಡು ಕಸುಕೊಳ್ಳಬೇಡಿರಿ; ನಿಮ್ಮ ಸಂಬಳದಲ್ಲಿ ತೃಪ್ತರಾಗಿರ್ರಿ ಎಂದು
ಹೇಳಿದನು.

15 ಹೀಗಿರುವಲ್ಲಿ, ಇಸ್ರಯೇಲ ಜನರು ಬರಬೇಕಾದ ಕ್ರಿಸ್ತನನ್ನು ಎದುರುನೋಡುವವ
ರಾಗಿದ್ದದರಿಂದ, ಅವರೆಲ್ಲರು ಯೋಹಾನನ ವಿಷಯವಾಗಿ—ಇವನೇ ಆ ಕ್ರಿಸ್ತನಾಗಿರ
16 ಬಹುದೋ ಏನೋ ಎಂದು ತಮ್ಮ ಮನಸ್ಸಿನಲ್ಲಿ ವಿಚಾರಮಾಡಿಕೊಳ್ಳುತ್ತಿರಲು, ಯೋಹಾ
ನನು ಅವರೆಲ್ಲರಿಗೆ—ನಾನಂತೂ ನಿಮಗೆ ನೀರಿನಿಂದ ಸ್ನಾನ ಮಾಡಿಸುವವನು; ಆದರೆ
ನನಗಿಂತ ಶಕ್ತನಾದವನು ಬರುತ್ತಾನೆ. ಆತನ ಕೆರಗಳ ಬಾರನ್ನು ಬಿಚ್ಚುವದಕ್ಕೂ ನಾನು
ಯೋಗ್ಯನಲ್ಲ. ಆತನು ಪವಿತ್ರಾತ್ಮದಲ್ಲಿಯೂ ಬೆಂಕಿಯಲ್ಲಿಯೂ ನಿಮಗೆ ಸ್ನಾನಮಾಡಿಸು
17 ವನು. ಆತನು ಮೊರವನ್ನು ಕೈಯಲ್ಲಿ ಹಿಡಿದಿದ್ದಾನೆ; ತನ್ನ ಕಣದಲ್ಲಿಯ ರಾಶಿಯನ್ನು
ತೂರಿ ಹಸನಮಾಡಿ, ತನ್ನ ಗೋದಿಯನ್ನು ಕಣಜದಲ್ಲಿ ತುಂಬಿಕೊಂಡು ಹೊಟ್ಟನ್ನು ಆರದ
ಬೆಂಕಿಯಲ್ಲಿ ಸುಟ್ಟುಬಿಡುವನು ಎಂದು ಉತ್ತರಕೊಟ್ಟನು.

18 ಇನ್ನು ಬೇರೆ ಅನೇಕ ಮಾತುಗಳಿಂದ ಅವನು ಇಸ್ರಯೇಲ ಜನರಿಗೆ ಬುದ್ಧಿಹೇಳಿ
19 ಸುವಾರ್ತೆಯನ್ನು ಸಾರುತ್ತಿದ್ದನು. ಆದರೆ ಉಪರಾಜನಾದ ಹೆರೋದನು ತನ್ನ ಅಣ್ಣನ
ಹೆಂಡತಿಯಾದ ಹೆರೋದ್ಯಳ ನಿಮಿತ್ತವಾಗಿಯೂ ತಾನು ಮಾಡಿದ್ದ ಎಲ್ಲಾ ದುಷ್ಕೃತ್ಯಗಳ
20 ನಿಮಿತ್ತವಾಗಿಯೂ ಯೋಹಾನನಿಂದ ಗದರಿಸಲ್ಪಟ್ಟವನಾಗಿ ಅವನನ್ನು ಸೆರೆಮನೆಯಲ್ಲಿ
ಹಾಕಿಸಿ ತನ್ನ ದುಷ್ಕೃತ್ಯಗಳ ಲೆಕ್ಕವನ್ನು ಇನ್ನೂ ಹೆಚ್ಚಿಸಿದನು.

### ಯೇಸು ದೀಕ್ಷಾಸ್ನಾನ ಮಾಡಿಸಿಕೊಂಡದ್ದು.

(ಮತ್ತಾಯ 3, 13—17; ಮಾರ್ಕ 1, 9—11; ಯೋಹಾನ 1, 32—34.)

ಜನರೆಲ್ಲಾ ದೀಕ್ಷಾಸ್ನಾನ ಮಾಡಿಸಿಕೊಂಡಾಗ ಯೇಸು ಸಹ ಸ್ನಾನ ಮಾಡಿಸಿಕೊಂಡು 21 ಪ್ರಾರ್ಥನೆಮಾಡುತ್ತಿರುವಲ್ಲಿ, ಆಕಾಶವು ತೆರೆಯಿತು ಮತ್ತು ಪವಿತ್ರಾತ್ಮನು ದೇಹಾಕಾರ 22 ವಾಗಿ ಪಾರಿವಾಳದ ಹಾಗೆ ಆತನ ಮೇಲೆ ಇಳಿದುಬಂದನು. ಆಗ—ನೀನು ಪ್ರಿಯ ನಾಗಿರುವ ನನ್ನ ಮಗನು, ನಿನ್ನನ್ನು ನಾನು ಮೆಚ್ಚಿದ್ದೇನೆ ಎಂದು ಆಕಾಶವಾಣಿ ಯಾಯಿತು.

### ಯೇಸು ಕ್ರಿಸ್ತನ ವಂಶಾವಳಿ.

ಯೇಸು ಉಪದೇಶಮಾಡುವದಕ್ಕೆ ಪ್ರಾರಂಭಿಸಿದಾಗ ಹೆಚ್ಚುಕಡಿಮೆ ಮೂವತ್ತು 23 ವರುಷದವನಾಗಿದ್ದನು. ಆತನು ಜನರ ಎಣಿಕೆಯಲ್ಲಿ ಯೋಸೇಫನ ಮಗನು. ಯೋಸೇ 24 ಫನು ಹೇಲೀಯ ಮಗನು; ಇವನು ಮತ್ಥಾತನ ಮಗನು; ಇವನು ಲೇವಿಯ ಮಗನು; ಇವನು ಮೆಲ್ಖಿಯ ಮಗನು; ಇವನು ಯನ್ನಾಯನ ಮಗನು; ಇವನು ಯೋಸೇಫನ ಮಗನು; ಇವನು ಮತ್ತಥೀಯನ ಮಗನು; ಇವನು ಆಮೋಸನ ಮಗನು; ಇವನು 25 ನಹೂಮನ ಮಗನು; ಇವನು ಎಸ್ಲಿಯ ಮಗನು; ಇವನು ನಗ್ಗಾಯನ ಮಗನು; ಇವನು ಮಹಾಥನ ಮಗನು; ಇವನು ಮತ್ತಥೀಯನ ಮಗನು; ಇವನು ಶಿಮಿಾಯ 26 ಮಗನು; ಇವನು ಯೊಸೇಖನ ಮಗನು; ಇವನು ಯೂದನ ಮಗನು; ಇವನು 27 ಯೋಹಾನನ ಮಗನು; ಇವನು ರೇಸನ ಮಗನು; ಇವನು ಜೆರುಬಾಬೆಲನ ಮಗನು; ಇವನು ಸಲಥಿಯೇಲನ ಮಗನು; ಇವನು ನೇರಿಯ ಮಗನು; ಇವನು ಮೆಲ್ಖಿಯ 28 ಮಗನು; ಇವನು ಅದ್ದಿಯ ಮಗನು; ಇವನು ಕೋಸಾಮನ ಮಗನು; ಇವನು ಎಲ್ಮ ದಾಮನ ಮಗನು; ಇವನು ಏರನ ಮಗನು; ಇವನು ಯೆಹೋಷುವನ ಮಗನು; 29 ಇವನು ಎಲಿಯೇಜರನ ಮಗನು; ಇವನು ಯೋರೈಮನ ಮಗನು; ಇವನು ಮತ್ಥಾತನ ಮಗನು; ಇವನು ಲೇವಿಯ ಮಗನು; ಇವನು ಸಿಮಿಯೋನನ ಮಗನು; ಇವನು 30 ಯೂದನ ಮಗನು; ಇವನು ಯೋಸೇಫನ ಮಗನು; ಇವನು ಯೋನಾಮನ ಮಗನು; ಇವನು ಎಲಿಯಕೀಮನ ಮಗನು; ಇವನು ಮೆಲೆಯಾನ ಮಗನು; ಇವನು ಮೆನ್ನನ 31 ಮಗನು; ಇವನು ಮತ್ತಾಥನ ಮಗನು; ಇವನು ನಾತಾನನ ಮಗನು; ಇವನು ದಾವೀ ದನ ಮಗನು; ಇವನು ಇಶಾಯನ ಮಗನು; ಇವನು ಓಬೇದನ ಮಗನು; ಇವನು 32 ಬೋವಜನ ಮಗನು; ಇವನು ಸಲ್ಮೋನನ ಮಗನು; ಇವನು ನಹಸ್ಸೋನನ ಮಗನು; ಇವನು ಅಮ್ಮಿನಾದಾಬನ ಮಗನು; ಇವನು ಆರ್ನೈಯನ ಮಗನು; ಇವನು ಎಸ್ರೋ 33 ನನ ಮಗನು; ಇವನು ಪೆರೆಸನ ಮಗನು; ಇವನು ಯೂದನ ಮಗನು; ಇವನು 34 ಯಾಕೋಬನ ಮಗನು; ಇವನು ಇಸಾಕನ ಮಗನು; ಇವನು ಅಬ್ರಹಾಮನ ಮಗನು; ಇವನು ತೇರನ ಮಗನು; ಇವನು ನಹೋರನ ಮಗನು; ಇವನು ಸೆರೂಗನ ಮಗನು; 35 ಇವನು ರೆಗೂವನ ಮಗನು; ಇವನು ಪೆಲೆಗನ ಮಗನು; ಇವನು ಹೇಬೆರನ ಮಗನು;

36 ಇವನು ಸಾಲನ ಮಗನು; ಇವನು ಕಯಿನಾನನ ಮಗನು; ಇವನು ಅರ್ಫಕ್ಷಾದನ ಮಗನು; ಇವನು ಶೇಮನ ಮಗನು; ಇವನು ನೋಹನ ಮಗನು; ಇವನು ಲಾಮೆಕನ
37 ಮಗನು; ಇವನು ಮತೂಷಲನ ಮಗನು; ಇವನು ಹನೋಕನ ಮಗನು; ಇವನು ಯೆರೆದನ ಮಗನು; ಇವನು ಮಹಲಲೇಲನ ಮಗನು; ಇವನು ಕಯಿನಾನನ ಮಗನು;
38 ಇವನು ಎನೋಷನ ಮಗನು; ಇವನು ಸೇಥನ ಮಗನು; ಇವನು ಆದಮನ ಮಗನು; ಇವನು ದೇವರ ಮಗನು.

### ಸೈತಾನನು ಯೇಸುವನ್ನು ಪಾಪದಲ್ಲಿ ಸಿಕ್ಕಿಸುವದಕ್ಕೆ ಪ್ರಯತ್ನಿಸಿದ್ದು.

(ಮತ್ತಾಯ 4, 1—11; ಮಾರ್ಕ 1, 12. 13.)

**4** ಯೇಸು ಪವಿತ್ರಾತ್ಮಭರಿತನಾಗಿ ಯೊರ್ದನ್ ಹೊಳೆಯಿಂದ ಹಿಂತಿರುಗಿ, ದೇವರಾತ್ಮ
2 ನಿಂದ ನಾಲ್ವತ್ತು ದಿವಸ ಅಡವಿಯಲ್ಲಿ ನಡಿಸಲ್ಪಡುತ್ತಾ ಸೈತಾನನಿಂದ ಶೋಧಿಸಲ್ಪಟ್ಟನು. ಆ ದಿವಸಗಳಲ್ಲಿ ಆತನು ಏನೂ ತಿನ್ನಲಿಲ್ಲ. ಅವು ಕಳೆದ ಮೇಲೆ ಆತನಿಗೆ ಹಸಿವಾಯಿತು.
3 ಆಗ ಸೈತಾನನು ಆತನಿಗೆ—ನೀನು ದೇವರ ಮಗನಾಗಿದ್ದರೆ ಈ ಕಲ್ಲು ರೊಟ್ಟಿಯಾಗು
4 ವಂತೆ ಅಪ್ಪಣೆಕೊಡು ಎಂದು ಹೇಳಿದ್ದಕ್ಕೆ, ಯೇಸು—ಮನುಷ್ಯನು ರೊಟ್ಟೀ ತಿಂದಮಾತ್ರ
5 ದಿಂದ ಬದುಕುವದಿಲ್ಲ ಎಂತ[1] ಬರೆದದೆ ಎಂದು ಉತ್ತರಕೊಟ್ಟನು. ಬಳಿಕ ಸೈತಾನನು ಆತನನ್ನು ಮೇಲಕ್ಕೆ ಕರದುಕೊಂಡು ಹೋಗಿ, ಒಂದು ಕ್ಷಣಹೊತ್ತಿನಲ್ಲಿ ಲೋಕದ ಎಲ್ಲಾ
6 ರಾಜ್ಯಗಳನ್ನು ಆತನಿಗೆ ತೋರಿಸಿ—ಇವೆಲ್ಲವುಗಳ ಅಧಿಕಾರವನ್ನೂ ಇವುಗಳ ವೈಭವ ವನ್ನೂ ನಿನಗೆ ಕೊಡುವೆನು; ಇದೆಲ್ಲಾ ನನಗೆ ಕೊಟ್ಟದೆ, ಇದನ್ನು ನನ್ನ ಮನಸ್ಸು ಬಂದ
7 ವನಿಗೆ ಕೊಡುತ್ತೇನೆ; ನೀನು ನನ್ನ ಮುಂದೆ ಅಡ್ಡಬಿದ್ದರೆ, ಇದೆಲ್ಲಾ ನಿನ್ನದಾಗುವದು
8 ಎಂದು ಆತನಿಗೆ ಹೇಳಿದನು. ಅದಕ್ಕೆ ಯೇಸು—ನಿನ್ನ ದೇವರಾಗಿರುವ ಕರ್ತನಿಗೆ ಅಡ್ಡ ಬಿದ್ದು, ಆತನೊಬ್ಬನನ್ನೇ ಆರಾಧಿಸಬೇಕು ಎಂಬದಾಗಿ[2] ಬರೆದದೆ ಎಂದು ಉತ್ತರ
9 ಕೊಟ್ಟನು. ಇದಲ್ಲದೆ ಅವನು ಆತನನ್ನು ಯೆರೂಸಲೇಮಿಗೆ ಕರಕೊಂಡು ಹೋಗಿ, ದೇವಾಲಯದ ಶಿಖರದ ಮೇಲೆ ನಿಲ್ಲಿಸಿ ಆತನಿಗೆ—ನೀನು ದೇವರ ಮಗನಾಗಿದ್ದರೆ
10 ಇಲ್ಲಿಂದ ಕೆಳಕ್ಕೆ ಧುಮುಕು; ನಿನ್ನನ್ನು ಕಾಯುವದಕ್ಕೆ ಆತನು ನಿನ್ನ ವಿಷಯವಾಗಿ
11 ತನ್ನ ದೂತರಿಗೆ ಅಪ್ಪಣೆ ಕೊಡುವನು; ಮತ್ತು ನಿನ್ನ ಕಾಲು ಕಲ್ಲಿಗೆ ತಗಲದಂತೆ ಅವರು ನಿನ್ನನ್ನು ಕೈಗಳಲ್ಲಿ ಹಿಡುಕೊಳ್ಳುವರು ಎಂಬದಾಗಿ[3] ಬರೆದದೆಯಲ್ಲಾ ಎಂದು ಹೇಳಿದನು.
12 ಅದಕ್ಕೆ ಯೇಸು—ನಿನ್ನ ದೇವರಾಗಿರುವ ಕರ್ತನನ್ನು ಪರೀಕ್ಷಿಸಬಾರದೆಂದು[4] ಹೇಳಿಯದೆ ಅಂದನು.
13 ಸೈತಾನನು ಸಕಲವಿಧವಾದ ಶೋಧನೆಯನ್ನು ಮುಗಿಸಿ, ಸ್ವಲ್ಪಕಾಲ ಆತನನ್ನು ಬಿಟ್ಟು ಹೋದನು.

---

1) ದ್ವಿತೀಯ ನ್ಯಾಯ ೮, ೩.
2) ದ್ವಿತೀಯ ನ್ಯಾಯ ೬, ೧೩; ೧೦, ೨೦.
3) ಕೀರ್ತನೆ ೯೧, ೧೧. ೧೨.
4) ದ್ವಿತೀಯ ನ್ಯಾಯ ೬, ೧೬.

### ಯೇಸು ಗಲಿಲಾಯದಲ್ಲಿ ಉಪದೇಶಮಾಡಿ ಕೀರ್ತಿಹೊಂದಿದ್ದು.

(ಮತ್ತಾಯ 4, 12—17; ಮಾರ್ಕ 1, 14. 15.)

ತರುವಾಯ ಯೇಸು ಪವಿತ್ರಾತ್ಮನ ಶಕ್ತಿಯಿಂದ ಕೂಡಿದವನಾಗಿ ತಿರಿಗಿ ಗಲಿಲಾಯಕ್ಕೆ 14 ಹೋದನು; ಆತನ ಸುದ್ದಿಯು ಸುತ್ತಲಿರುವ ಪ್ರಾಂತ್ಯದಲ್ಲೆಲ್ಲಾ ಹಬ್ಬಿಕೊಂಡಿತು. ಆತನು 15 ಅವರ ಸಭಾಮಂದಿರಗಳಲ್ಲಿ ಬೋಧಿಸುತ್ತಾ ಬಂದನು; ಎಲ್ಲರೂ ಆತನನ್ನು ಹೊಗಳಿದರು.

### ನಜರೇತಿನವರು ಯೇಸುವನ್ನು ತಳ್ಳಿಬಿಟ್ಟದ್ದು.

(ಮತ್ತಾಯ 13, 54—58; ಮಾರ್ಕ 6, 1—6.)

ಹೀಗಿರಲಾಗಿ ಆತನು ತಾನು ಬೆಳೆದ ನಜರೇತಿಗೆ ಬಂದು, ತನ್ನ ವಾಡಿಕೆಯ ಪ್ರಕಾರ 16 ಸಬ್ಬತ್‌ದಿನದಲ್ಲಿ ಸಭಾಮಂದಿರಕ್ಕೆ ಹೋಗಿ ಓದುವದಕ್ಕಾಗಿ ಎದ್ದುನಿಂತನು. ಆಗ 17 ಯೆಶಾಯನೆಂಬ ಪ್ರವಾದಿಯ ಗ್ರಂಥದ ಸುರಳಿಯನ್ನು ಆತನ ಕೈಗೆ ಕೊಡಲಾಗಿ, ಆತನು ಆ ಸುರಳಿಯನ್ನು ಬಿಚ್ಚಿ ಮುಂದೆ ಹೇಳುವ ಮಾತು ಬರೆದಿರುವ ಸ್ಥಳವನ್ನು ಕಂಡು ಓದಿದನು; ಆ ಮಾತೇನಂದರೆ—

> ಕರ್ತನ ಆತ್ಮವು ನನ್ನ ಮೇಲೆ ಅದೆ, 18
> ಆತನು ನನ್ನನ್ನು ಬಡವರಿಗೆ ಶುಭವರ್ತಮಾನವನ್ನು ಸಾರುವದಕ್ಕೆ ಅಭಿಷೇಕಿಸಿದನು.
> ಸೆರೆಯವರಿಗೆ ಬಿಡುಗಡೆಯಾಗುವದನ್ನು
> ಮತ್ತು ಕುರುಡರಿಗೆ ಕಣ್ಣುಬರುವದನ್ನು ಸಾರುವದಕ್ಕೂ
> ಕುಗ್ಗಿಸಲ್ಪಟ್ಟವರನ್ನು ಬಿಡಿಸಿ ಕಳುಹಿಸುವದಕ್ಕೂ
> ಕರ್ತನು ನೇಮಿಸಿರುವ ಶುಭವರುಷವನ್ನು ಸಾರುವದಕ್ಕೂ 19
> ಆತನು ನನ್ನನ್ನು ಕಳುಹಿಸಿದ್ದಾನೆ[1]

ಎಂಬುವದು. ಓದಿದ ಮೇಲೆ ಆತನು ಆ ಸುರಳಿಯನ್ನು ಸುತ್ತಿ ಸಭಾಮಂದಿರದ ಆಳಿನ 20 ಕೈಗೆ ಕೊಟ್ಟು ಕೂತುಕೊಂಡನು. ಅಲ್ಲಿದ್ದವರೆಲ್ಲರ ಕಣ್ಣುಗಳು ಆತನ ಮೇಲೆಯೇ ಬಿದ್ದಿರಲಾಗಿ, ಆತನು ಅವರಿಗೆ—ಈ ಹೊತ್ತು ನೀವು ನನ್ನ ಮಾತನ್ನು ಕೇಳುವಲ್ಲಿ[2] ಈ 21 ವೇದೋಕ್ತಿ ನೆರವೇರಿದೆ ಎಂದು ಹೇಳುತ್ತಿರುವಾಗ, ಎಲ್ಲರು ಆತನನ್ನು ಹೊಗಳಿ, ಆತನ 22 ಬಾಯಿಂದ ಹೊರಡುವ ಇಂಪಾದ ಮಾತುಗಳಿಗೆ ಆಶ್ಚರ್ಯಪಟ್ಟು, ಇವನು ಯೋಸೇಫನ ಮಗನಲ್ಲವೇ ಎಂದು ಮಾತಾಡಿಕೊಂಡರು. ಆತನು ಅವರಿಗೆ—ನೀವಂತೂ ವೈದ್ಯನೇ 23 ನಿನ್ನನ್ನೇ ವಾಸಿಮಾಡಿಕೋ ಎಂಬ ಗಾದೆಯನ್ನು ನನಗೆ ಹೇಳಿ, ಕಪೆರ್ನೌಮಿನಲ್ಲಿ ಎಂಥೆಂಥಾ ಕಾರ್ಯಗಳು ನಡೆದವೆಂದು ನಾವು ಕೇಳಿದೆವೋ ಅಂಥವುಗಳನ್ನು ಈ ನಿನ್ನ ಸ್ವದೇಶದಲ್ಲಿಯೂ ಮಾಡು ಅನ್ನುವಿರಷ್ಟೆ. ಆದರೆ ಯಾವ ಪ್ರವಾದಿಯೂ ಸ್ವದೇಶದಲ್ಲಿ ಸಮ್ಮತನಲ್ಲ 24

[1] ಯೆಶಾಯ ೬೧, ೧—೨.

[2] ಅಥವಾ, ನೀವು ಸುದ್ದಿ ಕೇಳಿದ ಪ್ರಕಾರ; ಮೂಲ: ನಿಮ್ಮ ಕಿವಿಗಳಲ್ಲಿ.

25 ನೆಂದು ನಿಮಗೆ ಸತ್ಯವಾಗಿ ಹೇಳುತ್ತೇನೆ. ನಡೆದ ಒಂದು ಸಂಗತಿಯನ್ನು ಕೇಳಿರಿ, ಎಲೀಯನ ಕಾಲದಲ್ಲಿ ಮೂರು ವರುಷ ಆರು ತಿಂಗಳು ಮಳೆ ಬಾರದೆ ದೇಶದಲ್ಲೆಲ್ಲಾ ದೊಡ್ಡ ಬರ ಉಂಟಾದಾಗ ಇಸ್ರಯೇಲ ಜನರಲ್ಲಿ ಎಷ್ಟೋ ಮಂದಿ ವಿಧವೆಯರಿದ್ದಾಗ್ಯೂ,
26 ಅವರಲ್ಲಿ ಒಬ್ಬರ ಬಳಿಗಾದರೂ ದೇವರು ಎಲೀಯನನ್ನು ಕಳುಹಿಸದೆ ಸೀದೋನ್‌ದೇಶಕ್ಕೆ
27 ಸೇರಿದ ಸರೆಪ್ತ ಊರಿನಲ್ಲಿದ್ದ ಒಬ್ಬ ವಿಧವೆಯ ಬಳಿಗೆ ಮಾತ್ರ ಕಳುಹಿಸಿದನು. ಮತ್ತು ಎಲೀಷನೆಂಬ ಪ್ರವಾದಿಯ ಕಾಲದಲ್ಲಿ ಇಸ್ರಯೇಲ್ ಜನರೊಳಗೆ ಎಷ್ಟೋ ಮಂದಿ ಕುಷ್ಠರೋಗಿಗಳು ಇದ್ದಾಗ್ಯೂ ಅವರಲ್ಲಿ ಒಬ್ಬನಾದರೂ ಶುದ್ಧನಾಗದೆ ಸುರಿಯದೇಶದವನಾದ
28 ನಾಮಾನನು ಮಾತ್ರ ಶುದ್ಧನಾದನು ಎಂದು ಹೇಳಿದನು. ಸಭಾಮಂದಿರದಲ್ಲಿರುವವ
29 ರೆಲ್ಲರು ಈ ಮಾತುಗಳನ್ನು ಕೇಳಿ ಬಹಳವಾಗಿ ಸಿಟ್ಟುಗೊಂಡು, ಎದ್ದು, ಆತನನ್ನು ಊರ ಹೊರಕ್ಕೆ ಅಟ್ಟಿ, ತಮ್ಮ ಊರು ಕಟ್ಟಿದ್ದ ಗುಡ್ಡದ ಕಡಿದಾದ ಸ್ಥಳಕ್ಕೆ ನಡಸಿಕೊಂಡು
30 ಹೋಗಿ ಅಲ್ಲಿಂದ ಕೆಳಕ್ಕೆ ದೊಬ್ಬಬೇಕೆಂದಿದ್ದರು. ಆದರೆ ಆತನು ಅವರ ಮಧ್ಯದಲ್ಲಿ ಹಾದು ಹೊರಟುಹೋದನು.

ಯೇಸು ಕಪೆರ್ನೌಮೆಂಬ ಊರಿನಲ್ಲಿ ದೆವ್ವಗಳನ್ನು ಬಿಡಿಸಿ ರೋಗಿಗಳನ್ನು ಸ್ವಸ್ಥಮಾಡಿದ್ದು.

(ಮತ್ತಾಯ 8, 14—17; ಮಾರ್ಕ 1, 21—39.)

31 ತರುವಾಯ ಆತನು ಗಟ್ಟಾ ಇಳಿದು ಗಲಿಲಾಯಕ್ಕೆ ಸೇರಿದ ಕಪೆರ್ನೌಮೆಂಬ ಊರಿಗೆ ಬಂದನು. ಅಲ್ಲಿ ಸಬ್ಬತ್‌ದಿನದಲ್ಲಿ ಅವರಿಗೆ ಉಪದೇಶಮಾಡುತ್ತಿರಲು, ಆತನ ಮಾತು
32 ಅಧಿಕಾರವುಳ್ಳದ್ದಾಗಿದ್ದದರಿಂದ ಅವರು ಆತನ ಉಪದೇಶಕ್ಕೆ ಅತ್ಯಾಶ್ಚರ್ಯಪಟ್ಟರು.
33, 34 ಆ ಸಭಾಮಂದಿರದಲ್ಲಿ ದೆವ್ವಹಿಡಿದ ಒಬ್ಬ ಮನುಷ್ಯನಿದ್ದನು. ಆ ದೆವ್ವವು—ಹಾ! ನಜರೇತಿನ ಯೇಸುವೇ, ನಮ್ಮ ಗೊಡವೆ ನಿನಗ್ಯಾಕೆ? ನಮ್ಮನ್ನು ನಾಶಮಾಡುವದಕ್ಕೆ ಬಂದೆಯಾ? ನಿನ್ನನ್ನು ಬಲ್ಲೆನು. ದೇವರು ಪ್ರತಿಷ್ಠಿಸಿದ ಪವಿತ್ರನೇ ನೀನು ಎಂದು ಅಬ್ಬರಿಸಿ
35 ಹೇಳಿತು. ಯೇಸು ಅದನ್ನು ಗದರಿಸಿ—ಸುಮ್ಮನಿರು, ಇವನನ್ನು ಬಿಟ್ಟುಹೋಗು ಎನ್ನಲಾಗಿ, ಆ ದೆವ್ವವು ಅವನನ್ನು ನಡುವೆ ಕೆಡವಿ ಅವನಿಗೆ ಯಾವ ಕೇಡನ್ನೂ ಮಾಡದೆ
36 ಬಿಟ್ಟುಹೋಯಿತು. ಅದಕ್ಕೆ ಎಲ್ಲರು ಬೆರಗಾಗಿ—ಇದೆಂಥಾ ಮಾತಾಗಿರಬಹುದು? ಈತನು ಅಧಿಕಾರದಿಂದಲೂ ಬಲದಿಂದಲೂ ದೆವ್ವಗಳಿಗೆ ಅಪ್ಪಣೆ ಕೊಡುತ್ತಲೇ ಅವು ಬಿಟ್ಟು
37 ಹೋಗುತ್ತವಲ್ಲಾ ಎಂದು ತಮ್ಮತಮ್ಮೊಳಗೆ ಮಾತಾಡಿಕೊಂಡರು. ಮತ್ತು ಆತನ ಸುದ್ದಿಯು ಸುತ್ತಲಿರುವ ಪ್ರಾಂತ್ಯದ ಊರುಗಳಲ್ಲೆಲ್ಲಾ ಹಬ್ಬಿತು.

38 ಆತನು ಸಭಾಮಂದಿರದಿಂದೆದ್ದು ಸೀಮೋನನ ಮನೆಗೆ ಬಂದನು. ಅಲ್ಲಿ ಸೀಮೋನನ ಅತ್ತೆಯು ಕಠಿನಜ್ವರದಿಂದ ಬಹಳ ಕಷ್ಟಪಡುತ್ತಿರಲಾಗಿ, ಆಕೆಯ ವಿಷಯದಲ್ಲಿ ಆತನನ್ನು
39 ಬೇಡಿಕೊಂಡರು. ಆತನು ಆಕೆಯ ಹತ್ತರಕ್ಕೆ ಬಂದು ನಿಂತು ಆ ಜ್ವರವನ್ನು ಗದರಿಸಲು ಅದು ಆಕೆಯನ್ನು ಬಿಟ್ಟುಹೋಯಿತು. ಕೂಡಲೇ ಆಕೆಯು ಎದ್ದು ಅವರಿಗೆ ಉಪಚಾರ ಮಾಡಿದಳು.

40 ಹೊತ್ತುಮುಣುಗುವಾಗ ಆದದ್ದೇನಂದರೆ, ಯಾರ್ಯಾರ ಮನೆಯಲ್ಲಿ ತರತರದ ರೋಗಗಳಿಂದ ಅಸ್ವಸ್ಥವಾದವರಿದ್ದರೋ ಅವರೆಲ್ಲರು ಆ ರೋಗಿಗಳನ್ನು ಆತನ ಹತ್ತರಕ್ಕೆ ಕರ

ಕೊಂಡು ಬಂದರು; ಆತನು ಪ್ರತಿಯೊಬ್ಬನ ಮೇಲೆಯೂ ಕೈಯಿಟ್ಟು ಅವರನ್ನು ಸ್ವಸ್ಥಮಾ
ಡಿದನು. ದೆವ್ವಗಳು ಸಹ—ನೀನು ದೇವರ ಕುಮಾರನು ಎಂದು ಅಬ್ಬರಿಸಿ, ಅನೇಕ 41
ರನ್ನು ಬಿಟ್ಟುಹೋದವು. ಈತನು ಕ್ರಿಸ್ತನೆಂಬುವದು ಅವುಗಳಿಗೆ ಗೊತ್ತಾಗಿದ್ದದರಿಂದ
ಆತನು ಅವುಗಳನ್ನು ಮಾತಾಡದಂತೆ ಗದರಿಸಿದನು.

ಬೆಳಗಾದ ಮೇಲೆ ಆತನು ಹೊರಟು ಅಡವಿಯ ಸ್ಥಳಕ್ಕೆ ಹೋದನು; ಜನರು ಗುಂಪು 42
ಗುಂಪಾಗಿ ಆತನನ್ನು ಹುಡುಕಿಕೊಂಡು ಆತನಿದ್ದಲ್ಲಿಗೆ ಬಂದು—ನೀನು ನಮ್ಮನ್ನು ಬಿಟ್ಟು
ಹೋಗಬೇಡ ಎಂದು ಆತನನ್ನು ತಡೆದರು. ಆದರೆ ಆತನು ಅವರಿಗೆ—ನಾನು ದೇವರ 43
ರಾಜ್ಯದ ಸುವಾರ್ತೆಯನ್ನು ಬೇರೆ ಊರುಗಳಿಗೂ ಸಾರಿಹೇಳಬೇಕಾಗಿದೆ; ಇದಕ್ಕಾಗಿಯೇ
ಕಳುಹಿಸಲ್ಪಟ್ಟಿದ್ದೇನೆ ಎಂದು ಹೇಳಿದನು.

ಮುಂದೆ ಆತನು ಯೂದಾಯ ದೇಶದ[1] ಸಭಾಮಂದಿರಗಳಲ್ಲಿ ಸುವಾರ್ತೆಯನ್ನು 44
ಸಾರುತ್ತಾ ಇದ್ದನು.

ಯೇಸು ಆಶ್ಚರ್ಯರೀತಿಯಿಂದ ಮೀನುಗಳನ್ನು ದೊರಕಿಸಿಕೊಟ್ಟು ಪ್ರಥಮಶಿಷ್ಯರನ್ನು ಮಾಡಿಕೊಂಡದ್ದು.

ಒಂದಾನೊಂದು ದಿವಸ ಜನರು ಒತ್ತಾಗಿ ಬಂದು ಆತನ ಮೇಲೆ ಬಿದ್ದುಕೊಂಡು **5**
ದೇವರ ವಾಕ್ಯವನ್ನು ಕೇಳುತ್ತಿರಲು, ಗೆನೇಜರೆತ್ ಕೆರೆಯ ಅಂಚಿನಲ್ಲಿ ನಿಂತಿದ್ದ ಆತನು 2
ಆ ಕೆರೆಯ ದಡದಲ್ಲಿ ಎರಡು ದೋಣಿಗಳನ್ನು ಕಂಡನು. ಬೆಸ್ತರು ಅವುಗಳೊಳಗಿಂದ
ಹೊರಗೆ ಬಂದು ತಮ್ಮ ಬಲೆಗಳನ್ನು ತೊಳೆಯುತ್ತಿದ್ದರು. ಆ ದೋಣಿಗಳಲ್ಲಿ ಸೀಮೋನನ 3
ಒಂದು ದೋಣಿಯನ್ನು ಆತನು ಹತ್ತಿ, ದಡದಿಂದ ಸ್ವಲ್ಪ ದೂರಕ್ಕೆ ನೂಕಬೇಕೆಂದು ಅವ
ನನ್ನು ಕೇಳಿಕೊಂಡನು. ತರುವಾಯ ಆತನು ಕೂತುಕೊಂಡು ದೋಣಿಯೊಳಗಿಂದಲೇ
ಆ ಜನರ ಗುಂಪಿಗೆ ಉಪದೇಶಮಾಡಿದನು. ಮಾತಾಡುವದನ್ನು ಮುಗಿಸಿದ ಮೇಲೆ, 4
ಸೀಮೋನನಿಗೆ—ಆಳವಾದ ಸ್ಥಳಕ್ಕೆ ದೋಣಿಯನ್ನು ನಡಸಿ ಮೀನುಬೇಟೆಗಾಗಿ ನಿಮ್ಮ
ಬಲೆಗಳನ್ನು ಹಾಕಿರಿ ಎಂದು ಹೇಳಿದನು. ಆದಕ್ಕೆ ಸೀಮೋನನು—ಗುರುವೇ, ನಾವು 5
ರಾತ್ರಿಯೆಲ್ಲಾ ಪ್ರಯಾಸಪಟ್ಟಾಗ್ಯೂ ಏನೂ ಸಿಕ್ಕಲಿಲ್ಲ; ಆದರೆ ನಿನ್ನ ಮಾತಿನ ಮೇಲೆ ಬಲೆ
ಗಳನ್ನು ಹಾಕುತ್ತೇನೆ ಅಂದನು. ಹಾಕಿದ ಮೇಲೆ, ಮೀನುಗಳು ರಾಶಿರಾಶಿಯಾಗಿ ಸಿಕ್ಕಿ 6
ಕೊಂಡು ಅವರ ಬಲೆಗಳು ಹರಿದುಹೋಗುತ್ತಿದ್ದವು. ಆಗ ಅವರು ಮತ್ತೊಂದು ದೋಣಿ 7
ಯಲ್ಲಿದ್ದ ತಮ್ಮ ಪಾಲುಗಾರರಿಗೆ—ನೀವು ಬಂದು ನಮಗೆ ನೆರವಾಗಬೇಕೆಂದು ಸನ್ನೆ
ಮಾಡಿದರು. ಅವರು ಬಂದು ಆ ಎರಡು ದೋಣಿಗಳಲ್ಲಿ ಮೀನುಗಳನ್ನು ತುಂಬಿಸಲು,
ಅವು ಮುಳುಗುವ ಹಾಗಾದವು. ಸೀಮೋನ್ ಪೇತ್ರನು ಇದನ್ನು ಕಂಡು ಯೇಸುವಿನ 8
ಮೊಣಕಾಲಿಗೆ ಬಿದ್ದು—ಸ್ವಾಮೀ, ನಾನು ಪಾಪಾತ್ಮನು; ನನ್ನನ್ನು ಬಿಟ್ಟುಹೋಗಬೇಕು
ಅಂದನು. ಯಾಕಂದರೆ ಅವನಿಗೂ ಅವನ ಸಂಗಡ ಇದ್ದವರೆಲ್ಲರಿಗೂ ತಾವು ಹಿಡಿದ 9
ಮೀನುಗಳ ನಿಮಿತ್ತ ವಿಸ್ಮಯ ಹಿಡಿದಿತ್ತು; ಸೀಮೋನನ ಪಾಲುಗಾರರಾಗಿದ್ದಂಥ ಜೆಬೆ 10
ದಾಯನ ಮಕ್ಕಳಾದ ಯಾಕೋಬ ಯೋಹಾನರೂ ಹಾಗೆಯೇ ವಿಸ್ಮಯಪಟ್ಟರು.

[1] ಕೆಲವು ಪ್ರತಿಗಳಲ್ಲಿ—ಗಲಿಲಾಯದ ಎಂದು ಬರೆದದೆ.

ಯೇಸು ಸೀಮೋನನಿಗೆ—ಅಂಜಬೇಡ, ಇಂದಿನಿಂದ ನೀನು ಮನುಷ್ಯರನ್ನು ಹಿಡಿಯುವವ
11 ನಾಗಿರುವಿ ಎಂದು ಹೇಳಿದನು. ಅವರು ತಮ್ಮ ದೋಣಿಗಳನ್ನು ದಡಕ್ಕೆ ತಂದು, ಎಲ್ಲ
ವನ್ನೂ ಬಿಟ್ಟು ಆತನನ್ನು ಹಿಂಬಾಲಿಸಿದರು.

ಯೇಸು ಕುಷ್ಠರೋಗಿಯನ್ನು ವಾಸಿಮಾಡಿದ್ದು.

(ಮತ್ತಾಯ 8, 2—4; ಮಾರ್ಕ 1, 40—45.)

12 ಆತನು ಒಂದಾನೊಂದು ಊರಿನಲ್ಲಿದ್ದಾಗ ಮೈಯೆಲ್ಲಾ ಕುಷ್ಠರೋಗ ತುಂಬಿದ್ದ ಒಬ್ಬ
ಮನುಷ್ಯನು ಯೇಸುವನ್ನು ಕಂಡು, ಅಡ್ಡಬಿದ್ದು—ಸ್ವಾಮೀ, ನಿನಗೆ ಮನಸ್ಸಿದ್ದರೆ ನನ್ನನ್ನು
13 ಶುದ್ಧಮಾಡ ಬಲ್ಲಿ ಎಂದು ಬೇಡಿಕೊಂಡನು. ಆತನು ಕೈನೀಡಿ ಅವನನ್ನು ಮುಟ್ಟಿ—ನನಗೆ
ಮನಸ್ಸುಂಟು; ಶುದ್ಧನಾಗು ಅಂದನು. ಅಂದ ಕೂಡಲೇ ಅವನಿಗೆ ಕುಷ್ಠವು ಹೋ
14 ಯಿತು. ಆಗ ಆತನು ಅವನಿಗೆ—ನೀನು ಯಾರಿಗೂ ಹೇಳಬೇಡ; ಹೋಗಿ, ಯಾಜಕ
ನಿಗೆ ನಿನ್ನ ಮೈ ತೋರಿಸಿ ಮೋಶೆಯು ನೇಮಕ ಮಾಡಿರುವದನ್ನು ಅರ್ಪಿಸಿ[1] ನಿನ್ನ ಶುದ್ಧಾ
ಚಾರವನ್ನು ನೆರವೇರಿಸು, ಅದು ಜನರಿಗೆ ಸಾಕ್ಷಿಯಾಗಲಿ ಎಂದು ಖಂಡಿತವಾಗಿ ಹೇಳಿ
15 ದನು. ಆದಾಗ್ಯೂ ಆತನ ಸುದ್ದಿಯು ಮತ್ತಷ್ಟು ಹಬ್ಬಿತು; ಮತ್ತು ಜನರು ಆತನ ಉಪ
ದೇಶವನ್ನು ಕೇಳುವದಕ್ಕೂ ತಮ್ಮತಮ್ಮ ಜಾಡ್ಯಗಳನ್ನು ವಾಸಿಮಾಡಿಸಿಕೊಳ್ಳುವದಕ್ಕೂ
16 ಗುಂಪುಗುಂಪಾಗಿ ನೆರೆದರು. ಆತನಾದರೋ ಅರಣ್ಯಪ್ರದೇಶಗಳಿಗೆ ಹೋಗಿ ದೇವರ
ಪ್ರಾರ್ಥನೆಯನ್ನು ಮಾಡುತ್ತಿದ್ದನು.

ಯೇಸು ಪಾರ್ಶ್ವವಾಯುರೋಗಿಯ ಪಾಪವನ್ನು ಕ್ಷಮಿಸಿ, ಅವನನ್ನು ಗುಣಮಾಡಿದ್ದು.

(ಮತ್ತಾಯ 9, 2—8; ಮಾರ್ಕ 2, 1—12.)

17 ಒಂದಾನೊಂದು ದಿನದಲ್ಲಿ ಆತನು ಉಪದೇಶಮಾಡುತ್ತಿರಲು, ಗಲಿಲಾಯ ಯೂದಾ
ಯಗಳ ಎಲ್ಲಾ ಗ್ರಾಮಗಳಿಂದಲೂ ಯೆರೂಸಲೇಮಿನಿಂದಲೂ ಬಂದಿದ್ದ ಫರಿಸಾಯರೂ
ನ್ಯಾಯಶಾಸ್ತ್ರಿಗಳೂ ಆತನ ಹತ್ತರ ಕೂತುಕೊಂಡಿದ್ದರು. ಗುಣಮಾಡುವದಕ್ಕೆ ಕರ್ತನ
18 ಶಕ್ತಿಯು ಆತನಲ್ಲಿತ್ತು. ಹೀಗಿರುವಲ್ಲಿ ಕೆಲವು ಮಂದಿ ಗಂಡಸರು ಒಬ್ಬ ಪಾರ್ಶ್ವ
ವಾಯುರೋಗಿಯನ್ನು ದೋಲಿಯಲ್ಲಿ ಹೊತ್ತುಕೊಂಡು ಬಂದರು; ಆದರೆ ಅವನನ್ನು
ಒಳಗೆ ತೆಗೆದುಕೊಂಡುಹೋಗಿ ಆತನ ಮುಂದೆ ಇಡಬೇಕೆಂದು ಪ್ರಯತ್ನಿಸಿದಾಗ್ಯೂ,
19 ಜನರು ಗುಂಪಾಗಿದ್ದದರಿಂದ ಅವನನ್ನು ಒಳಗೆ ತೆಗೆದುಕೊಂಡುಹೋಗುವ ಮಾರ್ಗ
ವನ್ನು ಕಾಣದೆ, ಮನೆಯ ಮೇಲೆ ಹತ್ತಿ, ಹಂಚುಗಳನ್ನು ತೆಗೆದು ದ್ವಾರಮಾಡಿ ಅವನನ್ನು
20 ಹಾಸಿಗೆಯ ಸಹಿತ ನಡುವೆ ಯೇಸುವಿನ ಮುಂದೆ ಇಳಿಬಿಟ್ಟರು. ಆತನು ಅವರ ನಂಬಿಕೆ
21 ಯನ್ನು ನೋಡಿ—ಅಪ್ಪಾ, ನಿನ್ನ ಪಾಪಗಳು ಕ್ಷಮಿಸಲ್ಪಟ್ಟವೆ ಅಂದನು. ಅದಕ್ಕೆ ಆ ಶಾಸ್ತ್ರಿ
ಗಳೂ ಫರಿಸಾಯರೂ—ಇವನು ಯಾರು? ದೇವದೂಷಣೆಯ ಮಾತನಾಡುತ್ತಾನಲ್ಲಾ!

[1] ಲೇವಿಕ ೧೪, ೧—೩೨.

ಪಾಪಗಳನ್ನು ಕ್ಷಮಿಸಿಬಿಡುವದು ದೇವರೊಬ್ಬನಿಂದ ಹೊರತು ಮತ್ತ್ಯಾರಿಂದಾದೀತು ಎಂದು ತಮ್ಮತಮ್ಮೊಳಗೆ ಅಂದುಕೊಳ್ಳುತ್ತಿದ್ದರು. ಆದರೆ ಅವರು ಹಾಗಂದುಕೊಳ್ಳುವ 22 ದನ್ನು ಯೇಸು ತಿಳಿದು ಅವರಿಗೆ—ನೀವು ನಿಮ್ಮ ಮನಸ್ಸಿನಲ್ಲಿ ಅಂದುಕೊಳ್ಳುವದೇನು? ಯಾವದು ಸುಲಭ? ನಿನ್ನ ಪಾಪಗಳು ಕ್ಷಮಿಸಲ್ಪಟ್ಟವೆ ಅನ್ನುವದು ಸುಲಭವೋ, ಎದ್ದು 23 ನಡೆ ಅನ್ನುವದು ಸುಲಭವೋ? ಆದರೆ ಪಾಪಗಳನ್ನು ಕ್ಷಮಿಸಿಬಿಡುವದಕ್ಕೆ ಮನುಷ್ಯ 24 ಕುಮಾರನಿಗೆ ಭೂಲೋಕದಲ್ಲಿ ಅಧಿಕಾರ ಉಂಟೆಂಬುವದು ನಿಮಗೆ ತಿಳಿಯಬೇಕು ಎಂದು ಹೇಳಿ, ಆ ಪಾರ್ಶ್ವವಾಯುರೋಗಿಯನ್ನು ನೋಡಿ—ಎದ್ದು ನಿನ್ನ ಹಾಸಿಗೆಯನ್ನು ತೆಗೆದು ಕೊಂಡು ಮನೆಗೆ ಹೋಗೆಂದು ನಿನಗೆ ಹೇಳುತ್ತೇನೆ ಅಂದನು. ಅಂದ ಕೂಡಲೇ, 25 ಅವನು ಅವರ ಮುಂದೆ ಎದ್ದು ತಾನು ಮಲಗಿದ್ದ ಹಾಸಿಗೆಯನ್ನು ಎತ್ತಿಕೊಂಡು ದೇವರನ್ನು ಕೊಂಡಾಡುತ್ತಾ ತನ್ನ ಮನೆಗೆ ಹೊರಟುಹೋದನು. ನೋಡಿದವರೆಲ್ಲರು ಬೆರಗಾಗಿ 26 ದೇವರನ್ನು ಕೊಂಡಾಡಿದರು; ಮತ್ತು ಅವರು ಭಯದಿಂದ ತುಂಬಿದವರಾಗಿ—ನಾವು ಈ ಹೊತ್ತು ಅಪೂರ್ವಸಂಗತಿಯನ್ನು ಕಂಡೆವು ಅಂದರು.

### ಯೇಸು ಪಾಪಿಷ್ಠರ ಕೂಡ ಊಟಮಾಡಿದ್ದಕ್ಕೆ ಮತ್ತು ತನ್ನ ಶಿಷ್ಯರು ಉಪವಾಸ ಮಾಡದೆಹೋದದ್ದಕ್ಕೆ ಕಾರಣ ತೋರಿಸಿದ್ದು.

(ಮತ್ತಾಯ 9, 9—17; ಮಾರ್ಕ 2, 13—22.)

ಇದಾದ ಮೇಲೆ ಆತನು ಹೊರಟು, ಲೇವಿಯೆಂಬ ಒಬ್ಬ ಸುಂಕದವನು ಸುಂಕದಕಟ್ಟೆ 27 ಯಲ್ಲಿ ಕೂತಿರುವದನ್ನು ಕಂಡು—ನನ್ನನ್ನು ಹಿಂಬಾಲಿಸು ಎಂದು ಅವನನ್ನು ಕರೆಯಲು, ಅವನು ಎಲ್ಲವನ್ನೂ ಬಿಟ್ಟು ಎದ್ದು ಆತನ ಹಿಂದೆ ಹೋದನು. ತರುವಾಯ ಲೇವಿಯು ತನ್ನ 28,29 ಮನೆಯಲ್ಲಿ ಆತನಿಗೆ ಒಂದು ದೊಡ್ಡ ಔತಣವನ್ನು ಮಾಡಿಸಲು, ಬಹುಮಂದಿ ಸುಂಕದ ವರೂ ಬೇರೆ ಅನೇಕರೂ ಅವರ ಪಙ್ತಿಯಲ್ಲೇ ಕೂತುಕೊಂಡಿದ್ದರು. ಅದನ್ನು ಕಂಡು 30 ಫರಿಸಾಯರೂ ಅವರಲ್ಲಿದ್ದ ಶಾಸ್ತ್ರಿಗಳೂ ಆತನ ಶಿಷ್ಯರ ಮೇಲೆ ಗುಣುಗುಟ್ಟುತ್ತಾ—ನೀವು ಸುಂಕದವರ ಮತ್ತು ಪಾಪಿಗಳ ಸಂಗಡ ಅನ್ನಪಾನಾದಿಗಳನ್ನು ತೆಗೆದುಕೊಳ್ಳುವದೇಕೆ ಎಂದು ಕೇಳಿದರು. ಅದಕ್ಕೆ ಯೇಸು—ಕ್ಷೇಮದಿಂದಿರುವವರಿಗೆ ವೈದ್ಯನು ಬೇಕಾಗಿಲ್ಲ, 31 ಕ್ಷೇಮವಿಲ್ಲದವರಿಗೆ ಬೇಕು; ದೇವರ ಕಡೆಗೆ ತಿರುಗಿಕೊಳ್ಳಿರಿ ಎಂದು ನೀತಿವಂತರನ್ನು ಕರೆ 32 ಯುವದಕ್ಕೆ ನಾನು ಬಂದವನಲ್ಲ, ಪಾಪಿಗಳನ್ನು ಕರೆಯುವದಕ್ಕೆ ಬಂದವನು ಎಂದು ಅವರಿಗೆ ಉತ್ತರಕೊಟ್ಟನು.

ಅವರು ಆತನಿಗೆ—ಯೋಹಾನನ ಶಿಷ್ಯರು ಪದೇಪದೇ ಉಪವಾಸಗಳನ್ನೂ ವಿಜ್ಞಾಪನೆ 33 ಗಳನ್ನೂ ಮಾಡುತ್ತಾ ಇದ್ದಾರೆ; ಅದರಂತೆ ಫರಿಸಾಯರ ಶಿಷ್ಯರೂ ಮಾಡುತ್ತಾರೆ; ಆದರೆ ನಿನ್ನ ಶಿಷ್ಯರು ಊಟಮಾಡುತ್ತಾರೆ, ಕುಡಿಯುತ್ತಾರೆ ಎಂದು ಹೇಳಲು, ಯೇಸು ಅವ 34 ರಿಗೆ—ಮದಲಿಂಗನು ಮದುವೇಜನರ ಸಂಗಡ ಇರುವಲ್ಲಿ ಅವರಿಗೆ ಉಪವಾಸಮಾಡಿಸುವ ದಕ್ಕೆ ನಿಮ್ಮಿಂದಾದೀತೇ? ಆದರೆ ಮದಲಿಂಗನನ್ನು ಅವರ ಬಳಿಯಿಂದ ತೆಗೆದುಕೊಂಡು 35 ಹೋಗುವ ದಿನಗಳು ಬರುವವು. ಆ ದಿನಗಳಲ್ಲಿ ಉಪವಾಸಮಾಡುವರು ಎಂದು ಉತ್ತರಕೊಟ್ಟನು. ಅವರಿಗೆ ಒಂದು ಸಾಮ್ಯವನ್ನು ಸಹ ಹೇಳಿದನು, ಅದೇನಂದರೆ— 36

ಯಾರೂ ಹೊಸ ವಸ್ತ್ರದಿಂದ ಒಂದು ತುಂಡನ್ನು ಹರಕೊಂಡು ಹಳೇ ವಸ್ತ್ರಕ್ಕೆ ತ್ಯಾಪೇ ಹಚ್ಚುವದಿಲ್ಲ; ಹಚ್ಚಿದರೆ, ಆ ಹೊಸದನ್ನು ಹರಿದು ಕೆಡಿಸಿದ ಹಾಗಾಗುವದಲ್ಲದೆ ಹೊಸ 37 ದರಿಂದ ಹರಿದು ಹಚ್ಚಿದ ತ್ಯಾಪೆಯು ಹಳೇದಕ್ಕೆ ಒಪ್ಪುವದೂ ಇಲ್ಲ. ಮತ್ತು ಹಳೇ ಬುದ್ದಲಿಗಳಲ್ಲಿ ಯಾರೂ ಹೊಸ ದ್ರಾಕ್ಷಾರಸವನ್ನು ಹಾಕಿಡುವದಿಲ್ಲ; ಇಟ್ಟರೆ, ಆ ಹೊಸ ದ್ರಾಕ್ಷಾರಸವು ಬುದ್ದಲಿಗಳನ್ನು ಒಡೆದು ತಾನೂ ಸೋರಿಹೋಗುವದಲ್ಲದೆ ಬುದ್ದಲಿಗಳೂ 38 ಕೆಟ್ಟುಹೋಗುವವು. ಆದರೆ ಹೊಸ ದ್ರಾಕ್ಷಾರಸವನ್ನು ಹೊಸ ಬುದ್ದಲಿಗಳಲ್ಲಿ ಹಾಕಿಡ 39 ತಕ್ಕದ್ದು. ಇದಲ್ಲದೆ ಹಳೇ ದ್ರಾಕ್ಷಾರಸವನ್ನು ಕುಡಿದವನು ಹೊಸದು ಬೇಕು ಅನ್ನುವ ದಿಲ್ಲ; ಹಳೇದೇ ಉತ್ತಮ ಅನ್ನುವನು.

### ಯೇಸೂ ಆತನ ಶಿಷ್ಯರೂ ಸಬ್ಬತ್‌ದಿನವನ್ನು ಅಲಕ್ಷ್ಯಮಾಡುತ್ತಾರೆಂದು ಫರಿಸಾಯರು ಆತನ ಮೇಲೆ ಆಕ್ಷೇಪಣೆಮಾಡಿದ್ದು.

(ಮತ್ತಾಯ 12, 1—14; ಮಾರ್ಕ 2, 23—3, 6.)

**6** ಒಂದಾನೊಂದು ಸಬ್ಬತ್‌ದಿನದಲ್ಲಿ ಯೇಸು ಪೈರಿನ ಹೊಲಗಳನ್ನು ಹಾದುಹೋಗುತ್ತಿರುವಾಗ, ಆತನ ಶಿಷ್ಯರು ತೆನೆಗಳನ್ನು ಮುರಿದು ಕೈಗಳಲ್ಲಿ ಹೊಸಗಿಕೊಂಡು ತಿನ್ನುತ್ತಿ 2 ದ್ದರು. ಆದರೆ ಫರಿಸಾಯರಲ್ಲಿ ಕೆಲವರು—ಸಬ್ಬತ್‌ದಿನದಲ್ಲಿ ಮಾಡಬಾರದ ಕೆಲಸವನ್ನು 3 ನೀವು ಯಾಕೆ ಮಾಡುತ್ತೀರಿ ಎಂದು ಕೇಳಿದ್ದಕ್ಕೆ, ಯೇಸು ಅವರಿಗೆ—ದಾವೀದನು ತಾನೂ ತನ್ನ ಸಂಗಡ ಇದ್ದವರೂ ಹಸಿದಾಗ ಏನು ಮಾಡಿದನೆಂಬುವದನ್ನು ನೀವು ಓದಲಿಲ್ಲವೇ? 4 ಅವನು ದೇವರ ಮಂದಿರದೊಳಕ್ಕೆ ಹೋಗಿ ಯಾಜಕರೇ ಹೊರತು ಮತ್ತ್ಯಾರೂ ತಿನ್ನ ಬಾರದಾಗಿದ್ದ ಸಮ್ಮುಖದ ರೊಟ್ಟಿಗಳನ್ನು ಈಸಿಕೊಂಡು ತಿಂದು ತನ್ನ ಸಂಗಡ ಇದ್ದವ 5 ರಿಗೂ ಕೊಟ್ಟನಲ್ಲಾ? ಎಂದು ಉತ್ತರಕೊಟ್ಟು, ಮನುಷ್ಯಕುಮಾರನು ಸಬ್ಬತ್‌ದಿನಕ್ಕೆ ಒಡೆಯನಾಗಿದ್ದಾನೆ ಎಂದು ಅವರಿಗೆ ಹೇಳಿದನು.

6 ಮತ್ತೊಂದು ಸಬ್ಬತ್‌ದಿನದಲ್ಲಿ ಆತನು ಸಭಾಮಂದಿರಕ್ಕೆ ಹೋಗಿ ಉಪದೇಶಮಾಡು 7 ತ್ತಿದ್ದಾಗ ಬಲಗೈ ಬತ್ತಿದವನೊಬ್ಬನು ಅಲ್ಲಿ ಇದ್ದನು. ಶಾಸ್ತ್ರಿಗಳೂ ಫರಿಸಾಯರೂ ಆತನ ಮೇಲೆ ತಪ್ಪುಹೊರಿಸುವದಕ್ಕೆ ಆಸ್ಪದ ಸಿಕ್ಕಬೇಕೆಂದು, ಸಬ್ಬತ್‌ದಿನದಲ್ಲಿ ಸ್ವಸ್ಥಮಾಡು 8 ವನೋ ಏನೋ ಎಂದು ಆತನನ್ನು ಹೊಂಚಿನೋಡುತ್ತಿದ್ದರು. ಆದರೆ ಆತನು ಅವರ ಯೋಚನೆಗಳನ್ನು ತಿಳಿದು, ಕೈ ಬತ್ತಿಹೋಗಿದ್ದ ಆ ಮನುಷ್ಯನಿಗೆ—ಎದ್ದು ನಡುವೆ ಬಂದು 9 ನಿಂತುಕೋ ಎಂದು ಹೇಳಿದನು. ಅವನು ಎದ್ದು ನಿಂತುಕೊಂಡನು. ಆಗ ಯೇಸು ಅವರಿಗೆ—ನಿಮ್ಮನ್ನು ಒಂದು ಮಾತು ಕೇಳುತ್ತೇನೆ; ಸಬ್ಬತ್‌ದಿನದಲ್ಲಿ ಯಾವದನ್ನು ಮಾಡುವದು ನ್ಯಾಯ? ಮೇಲನ್ನು ಮಾಡುವದೋ, ಕೇಡನ್ನು ಮಾಡುವದೋ? 10 ಪ್ರಾಣವನ್ನು ಉಳಿಸುವದೋ, ತೆಗೆಯುವದೋ ಎಂದು ಹೇಳಿ, ಸುತ್ತಲು ಅವರೆಲ್ಲರನ್ನು ನೋಡಿ ಆ ಮನುಷ್ಯನಿಗೆ—ನಿನ್ನ ಕೈ ಚಾಚು ಎಂದು ಹೇಳಿದನು. ಅವನು ಚಾಚಲು 11 ಕೈ ವಾಸಿಯಾಯಿತು. ಆದರೆ ಅವರಲ್ಲಿ ದುರ್ಬುದ್ಧಿ ತುಂಬಿದ್ದದರಿಂದ—ಈ ಯೇಸುವಿಗೆ ಏನು ಮಾಡೋಣ ಎಂದು ತಮ್ಮತಮ್ಮೊಳಗೆ ಮಾತಾಡಿಕೊಂಡರು.

### ಯೇಸು ಹನ್ನೆರಡು ಮಂದಿ ಅಪೊಸ್ತಲರನ್ನು ನೇಮಿಸಿದ್ದು.

(ಮತ್ತಾಯ 10, 2—4; ಮಾರ್ಕ 3, 13—19.)

ಆ ದಿವಸಗಳಲ್ಲಿ ಆತನು ಪ್ರಾರ್ಥನೆಮಾಡುವದಕ್ಕಾಗಿ ಬೆಟ್ಟಕ್ಕೆ ಹೋಗಿ, ರಾತ್ರಿಯ 12 ನ್ನೆಲ್ಲಾ ಪ್ರಾರ್ಥನೆಯಲ್ಲೇ ಕಳೆದನು. ಬೆಳಗಾದ ಮೇಲೆ ಆತನು ತನ್ನ ಶಿಷ್ಯರನ್ನು 13 ಕರೆದು, ಅವರಲ್ಲಿ ಹನ್ನೆರಡು ಮಂದಿಯನ್ನು ಆರಿಸಿಕೊಂಡು ಅವರಿಗೆ ಅಪೊಸ್ತಲರೆಂತ ಹೆಸರಿಟ್ಟನು. ಅವರು ಯಾರ್ಯಾರಂದರೆ—ಆತನಿಂದ ಪೇತ್ರನೆಂಬ ಹೆಸರನ್ನು ಹೊಂದಿದ 14 ಸೀಮೋನನು, ಅವನ ತಮ್ಮನಾದ ಅಂದ್ರೆಯನು, ಯಾಕೋಬನು, ಯೋಹಾನನು, ಫಿಲಿಪ್ಪನು, ಬಾರ್ತೊಲೊಮಾಯನು, ಮತ್ತಾಯನು, ತೋಮನು, ಅಲ್ಫಾಯನ ಮಗನಾದ 15 ಯಾಕೋಬನು, ಮತಾಭಿಮಾನಿ ಅನ್ನಿಸಿಕೊಂಡ ಸೀಮೋನನು, ಯಾಕೋಬನ ಮಗ 16 ನಾದ ಯೂದನು, ಆತನನ್ನು ಹಿಡುಕೊಟ್ಟವನಾದ ಇಸ್ಕರಿಯೋತ ಯೂದನು, ಇವರೇ.

### ಯೇಸು ಪರ್ವತದ ಮೇಲೆ ಒಂದು ಸಮಭೂಮಿಯಲ್ಲಿ ಮಾಡಿದ ಪ್ರಸಂಗವು.

(ಮತ್ತಾಯ 5, 3—12; 39—48; 7, 1—5; 16—18; 24—27.)

ಆ ಮೇಲೆ ಆತನು ಅವರ ಸಂಗಡ ಬೆಟ್ಟದಿಂದ ಇಳಿದು ಸಮಭೂಮಿಯಲ್ಲಿ ನಿಂತನು. 17 ಆತನ ಶಿಷ್ಯರ ದೊಡ್ಡಗುಂಪು ಮತ್ತು ಎಲ್ಲಾ ಯೂದಾಯದಿಂದಲೂ ಯೆರೂಸಲೇಮಿನಿಂದಲೂ ತೂರ್ ಸೀದೋನ್ ಪಟ್ಟಣಗಳಿರುವ ಸಮುದ್ರತೀರದಿಂದಲೂ ಬಂದಿದ್ದ ಜನರ ಮಹಾಸಮೂಹವು ಆತನ ಸಂಗಡ ಇದ್ದವು. ಆ ಜನರು ಆತನ ಉಪದೇಶವನ್ನು ಕೇಳುವದಕ್ಕೂ ತಮ್ಮ ರೋಗಗಳನ್ನು ವಾಸಿಮಾಡಿಸಿಕೊಳ್ಳುವದಕ್ಕೂ ಬಂದಿದ್ದರು. ಅವ 18 ರಲ್ಲಿ ದೆವ್ವಗಳ ಕಾಟವಿದ್ದವರು ಸ್ವಸ್ಥವಾದರು. ಮತ್ತು ಆತನಿಂದ ಶಕ್ತಿ ಹೊರಟು ಎಲ್ಲ 19 ರನ್ನು ವಾಸಿಮಾಡುತ್ತಿದ್ದರಿಂದ, ಆ ಗುಂಪಿನ ಜನರೆಲ್ಲಾ ಆತನನ್ನು ಮುಟ್ಟುವದಕ್ಕೆ ಪ್ರಯತ್ನ ಮಾಡಿದರು. ತರುವಾಯ ಆತನು ತನ್ನ ಶಿಷ್ಯರ ಕಡೆಗೆ ಕಣ್ಣೆತ್ತಿನೋಡಿ ಹೇಳಿದ್ದೇನಂದರೆ— 20

ಬಡವರಾದ ನೀವು ಧನ್ಯರು; ದೇವರ ರಾಜ್ಯವು ನಿಮ್ಮದೇ. ಈಗ ಹಸಿದಿರುವವ 21 ರಾದ ನೀವು ಧನ್ಯರು; ನಿಮಗೆ ತೃಪ್ತಿಯಾಗುವದು. ಈಗ ಅಳುವವರಾದ ನೀವು ಧನ್ಯರು; ನೀವು ನಗುವಿರಿ. ಮನುಷ್ಯಕುಮಾರನ ನಿಮಿತ್ತವಾಗಿ ಜನರು ನಿಮ್ಮನ್ನು 22 ಹಗೆಮಾಡಿ ನಿಮಗೆ ಬಹಿಷ್ಕಾರ ಹಾಕಿ ನಿಂದಿಸಿ ನಿಮ್ಮ ಹೆಸರನ್ನು ಕೆಟ್ಟದೆಂದು ತೆಗೆದು ಹಾಕಿದರೆ, ನೀವು ಧನ್ಯರು. ಆ ದಿನದಲ್ಲಿ ಸಂತೋಷಪಡಿರಿ, ಕುಣಿದಾಡಿರಿ; ಪರಲೋಕ 23 ದಲ್ಲಿ ನಿಮಗೆ ಬಹಳ ಫಲಸಿಕ್ಕುವದು ಎಂದು ತಿಳುಕೊಳ್ಳಿರಿ. ಈ ಜನರ ಪಿತೃಗಳು ಪ್ರವಾದಿಗಳಿಗೂ ಹಾಗೆಯೇ ಮಾಡಿದರು. ಆದರೆ ಐಶ್ವರ್ಯವಂತರೇ, ನಿಮ್ಮ ಗತಿಯನ್ನು 24 ಏನು ಹೇಳಲಿ! ನಿಮ್ಮ ಸುಖ ನಿಮಗೆ ಬಂದದೆ. ಈಗ ಹೊಟ್ಟೆತುಂಬಿದವರೇ, ನಿಮ್ಮ 25 ಗತಿಯನ್ನು ಏನು ಹೇಳಲಿ! ನೀವು ಹಸಿಯುವಿರಿ. ಈಗ ನಗುವವರೇ, ನಿಮ್ಮ ಗತಿಯನ್ನು ಏನು ಹೇಳಲಿ! ನೀವು ದುಃಖಪಟ್ಟು ಅಳುವಿರಿ. ಜನರೆಲ್ಲಾ ನಿಮ್ಮನ್ನು ಹೊಗಳಿ 26 ದರೆ, ನಿಮ್ಮ ಗತಿಯನ್ನು ಏನು ಹೇಳಲಿ! ಅವರ ಪಿತೃಗಳು ಸುಳ್ಳುಪ್ರವಾದಿಗಳನ್ನು ಹಾಗೆಯೇ ಹೊಗಳಿದರು.

27 ಕೇಳುವವರಾದ ನಿಮಗೆ ನಾನು ಹೇಳುವದೇನಂದರೆ—ನಿಮ್ಮ ವೈರಿಗಳನ್ನು ಪ್ರೀತಿ
28 ಸಿರಿ; ನಿಮ್ಮನ್ನು ಹಗೆಮಾಡುವವರಿಗೆ ಉಪಕಾರಮಾಡಿರಿ; ನಿಮ್ಮನ್ನು ಶಪಿಸುವವರಿಗೆ
ಆಶೀರ್ವಾದಮಾಡಿರಿ; ನಿಮ್ಮನ್ನು ಬಯ್ಯುವವರಿಗೋಸ್ಕರ ದೇವರನ್ನು ಪ್ರಾರ್ಥಿಸಿರಿ.
29 ನಿನ್ನನ್ನು ಕೆನ್ನೆಯ ಮೇಲೆ ಬಡಿದವನಿಗೆ ಮತ್ತೊಂದು ಕೆನ್ನೆಯನ್ನು ತಿರುಗಿಸು; ನಿನ್ನ
30 ಮೇಲಂಗಿಯನ್ನು ಕಸುಕೊಳ್ಳುವವನಿಗೆ ಒಳಂಗಿಯನ್ನು ತಡೆಯಬೇಡ. ನಿನ್ನನ್ನು ಬೇಡು
ವವರೆಲ್ಲರಿಗೆ ಕೊಡು; ನಿನ್ನ ಸೊತ್ತು ಕಸುಕೊಳ್ಳುವವನನ್ನು ಹಿಂದಕ್ಕೆ ಕೊಡೆಂದು ಕೇಳ
31 ಬೇಡ. ಜನರು ನಿಮಗೆ ಹ್ಯಾಗೆಹ್ಯಾಗೆ ಮಾಡಬೇಕೆಂದು ನೀವು ಅಪೇಕ್ಷಿಸುತ್ತೀರೋ,
32 ಹಾಗೆಯೇ ನೀವೂ ಅವರಿಗೆ ಮಾಡಿರಿ. ನಿಮಗೆ ಪ್ರೀತಿ ತೋರಿಸುವವರನ್ನು ನೀವು
ಪ್ರೀತಿಸಿದರೆ, ನಿಮಗೆ ಏನು ಹೊಗಳಿಕೆ ಬಂದೀತು? ಪಾಪಿಷ್ಠರು ಸಹ ತಮಗೆ ಪ್ರೀತಿ ತೋರಿ
33 ಸುವವರನ್ನು ಪ್ರೀತಿಸುತ್ತಾರಲ್ಲಾ. ನಿಮಗೆ ಮೇಲನ್ನು ಮಾಡುವವರಿಗೆ ನೀವು ಮೇಲನ್ನು
ಮಾಡಿದರೆ, ನಿಮಗೆ ಏನು ಹೊಗಳಿಕೆ ಬಂದೀತು? ಪಾಪಿಷ್ಠರು ಸಹ ಅದನ್ನೇ ಮಾಡು
34 ತ್ತಾರಲ್ಲಾ. ಅವರು ನಮಗೂ ಸಾಲಕೊಟ್ಟಾರೆಂದು ನೀವು ಯಾರಿಗಾದರೂ ಸಾಲ
ಕೊಟ್ಟರೆ, ನಿಮಗೆ ಏನು ಹೊಗಳಿಕೆ ಬಂದೀತು? ಪಾಪಿಷ್ಠರು ಸಹ ತಾವು ಕೊಟ್ಟಷ್ಟು
35 ತಮಗೆ ತಿರಿಗಿ ಸಿಕ್ಕೀತೆಂದು ಪಾಪಿಷ್ಠರಿಗೆ ಸಾಲ ಕೊಡುತ್ತಾರಲ್ಲಾ. ನೀವಾದರೋ
ನಿಮ್ಮ ವೈರಿಗಳನ್ನು ಪ್ರೀತಿಸಿ, ಅವರಿಗೆ ಉಪಕಾರಮಾಡಿರಿ, ಧೈರ್ಯವನ್ನು ಬಿಡದೆ[1]
ಸಾಲಕೊಡಿರಿ[2]; ಹೀಗೆ ಮಾಡಿದರೆ, ನಿಮಗೆ ಬಹಳ ಫಲ ಸಿಕ್ಕುವದು, ಮತ್ತು ನೀವು
ಪರಾತ್ಪರನ ಮಕ್ಕಳಾಗುವಿರಿ. ಆತನಂತೂ ಉಪಕಾರನೆನಸದವರಿಗೂ ಕೆಟ್ಟವರಿಗೂ
36 ಉಪಕಾರಿಯಾಗಿದ್ದಾನೆ. ನಿಮ್ಮ ತಂದೆ ಕರುಣವುಳ್ಳವನಾಗಿರುವ ಪ್ರಕಾರವೇ ನೀವೂ
ಕರುಣವುಳ್ಳವರಾಗಿರ್ರಿ.

37 ಇದಲ್ಲದೆ ತಪ್ಪು ಹಿಡಿಯಬೇಡಿರಿ, ಆಗ ನಿಮ್ಮ ತಪ್ಪುಗಳನ್ನು ಹಿಡಿಯುವದಿಲ್ಲ; ಅಪರಾ
ಧಿಯೆಂದು ತೀರ್ಪುಮಾಡಬೇಡಿರಿ, ಆಗ ನಿಮ್ಮನ್ನೂ ಅಪರಾಧಿಗಳೆಂದು ತೀರ್ಪುಮಾಡುವ
38 ದಿಲ್ಲ; ಬಿಡಿಸಿರಿ, ಆಗ ನಿಮ್ಮನ್ನು ಬಿಡಿಸುವರು; ಕೊಡಿರಿ, ಆಗ ನಿಮಗೂ ಕೊಡುವರು;
ಜಡಿದು ಅಲ್ಲಾಡಿಸಿ ಹೊರ ಚೆಲ್ಲುವ ಹಾಗೆ ತುಂಬಾ ಅಳತೆಯನ್ನು ಅಳೆದು ನಿಮ್ಮ
ಸೆರಗಿಗೆ ಹಾಕುವರು. ನೀವು ಅಳೆಯುವ ಅಳತೆಯಿಂದಲೇ ನಿಮಗೂ ಅಳೆಯುವರು
ಅಂದನು.

39 ಇದಲ್ಲದೆ ಆತನು ಅವರಿಗೆ ಒಂದು ಸಾಮ್ಯವನ್ನು ಹೇಳಿದನು. ಅದೇನಂದರೆ—ಕುರು
ಡನು ಕುರುಡನಿಗೆ ದಾರೀ ತೋರಿಸುವದಕ್ಕಾದೀತೇ? ಅವರಿಬ್ಬರೂ ಕುಣಿಯಲ್ಲಿ ಬೀಳು
40 ವರಷ್ಟೆ. ಶಿಷ್ಯನು ಗುರುವಿಗಿಂತ ದೊಡ್ಡವನಲ್ಲ; ಆದರೆ ತೀರಾ ಕಲಿತವನಾದ ಪ್ರತಿಯೊ
ಬ್ಬನು ತನ್ನ ಗುರುವಿನಂತಾಗಿರುವನು.

41 ಇದಲ್ಲದೆ, ನೀನು ನಿನ್ನ ಕಣ್ಣಿನಲ್ಲಿರುವ ತೊಲೆಯನ್ನು ಯೋಚಿಸದೆ ನಿನ್ನ ಸಹೋದ
42 ರನ ಕಣ್ಣಿನಲ್ಲಿರುವ ರವೆಯನ್ನು ಯೋಚಿಸುವದ್ಯಾಕೆ? ಇಲ್ಲವೆ, ನಿನ್ನ ಕಣ್ಣಿನಲ್ಲಿರುವ

[1] ಅಥವಾ, ತಿರಿಗಿ ಸಿಕ್ಕೀತೆಂದು ಆಶೆಯಿಟ್ಟುಕೊಳ್ಳದೆ.

[2] ಕೆಲವು ಪ್ರತಿಗಳಲ್ಲಿ—ಒಬ್ಬರ ವಿಷಯದಲ್ಲಿಯೂ ನಿರಾಶೆಪಡದೆ, ನಿಮ್ಮ ವೈರಿಗಳನ್ನು ಪ್ರೀತಿಸಿ, ಉಪಕಾರ ಮಾಡಿರಿ, ಸಾಲಕೊಡಿರಿ ಎಂದು ಬರೆದದೆ.

ತೊಲೆಯನ್ನೇ ನೀನು ನೋಡದೆ ನಿನ್ನ ಸಹೋದರನಿಗೆ—ಅಣ್ಣಾ, ನಿನ್ನ ಕಣ್ಣೊಳಗಿನ ರವೆ ಯನ್ನು ತೆಗೆಯುತ್ತೇನೆ ಬಾ ಎಂದು ಹೇಳುವದಕ್ಕೆ ಹ್ಯಾಗಾದೀತು? ಕಪಟಿಯೇ, ಮೊದಲು ನಿನ್ನ ಕಣ್ಣೊಳಗಿನ ತೊಲೆಯನ್ನು ತೆಗೆದುಹಾಕಿಕೋ, ಆ ಮೇಲೆ ನಿನ್ನ ಸಹೋ ದರನ ಕಣ್ಣೊಳಗಿನ ರವೆಯನ್ನು ತೆಗೆಯುವದಕ್ಕೆ ಚನ್ನಾಗಿ ಕಾಣಿಸುವದು. 43 ಒಳ್ಳೇ ಮರವು ಹುಳುಕು ಫಲವನ್ನು ಕೊಡುವದಿಲ್ಲ; ಹುಳುಕುಮರವು ಒಳ್ಳೇ ಫಲವನ್ನು ಕೊಡುವದಿಲ್ಲ. 44 ಮರವು ತನ್ನ ಫಲದಿಂದಲೇ ಇಂಥಾದ್ದೆಂದು ಗೊತ್ತಾಗುವದು.

ಮುಳ್ಳುಗಿಡಗಳಲ್ಲಿ ಅಂಜೂರದ ಹಣ್ಣುಗಳನ್ನೂ ಗಜ್ಜುಗದ ಮೆಳೆಯಲ್ಲಿ ದ್ರಾಕ್ಷೇಹಣ್ಣು ಗಳನ್ನೂ ಕೊಯ್ಯುವದುಂಟೇ? 45 ಒಳ್ಳೆಯವನು ತನ್ನ ಹೃದಯವೆಂಬ ಒಳ್ಳೇ ಬೊಕ್ಕಸ ದಿಂದ ಒಳ್ಳೇದನ್ನು ಹೊರಗೆ ತರುತ್ತಾನೆ; ಕೆಟ್ಟವನು ಕೆಟ್ಟ ಬೊಕ್ಕಸದಿಂದ ಕೆಟ್ಟದ್ದನ್ನು ಹೊರಗೆ ತರುತ್ತಾನೆ; ಹೃದಯದಲ್ಲಿ ತುಂಬಿರುವದನ್ನೇ ಬಾಯಿ ಆಡಿ ತೋರಿಸುತ್ತದೆ.

46 ಇದಲ್ಲದೆ, ನೀವು ನನ್ನನ್ನು ಸ್ವಾಮಿಾ ಸ್ವಾಮಿಾ ಅಂತ ಕರೆದು, ನಾನು ಹೇಳುವದನ್ನು ನಡಸದೆ ಇರುವದೇಕೆ? 47 ನನ್ನ ಬಳಿಗೆ ಬಂದು ನನ್ನ ಮಾತುಗಳನ್ನು ಕೇಳಿ ಅವುಗಳಂತೆ ನಡೆಯುವವನು ಯಾರಿಗೆ ಸಮಾನನೆಂಬುವದನ್ನು ನಿಮಗೆ ತೋರಿಸುತ್ತೇನೆ. 48 ಅವನು ಆಳವಾಗಿ ಅಗೆದು ಬಂಡೆಯ ಮೇಲೆ ಅಸ್ತಿವಾರವನ್ನು ಹಾಕಿ ಮನೇ ಕಟ್ಟಿದವನಿಗೆ ಸಮಾನನು; ಹೊಳೆ ಬಂದು ಪ್ರವಾಹವು ಆ ಮನೆಗೆ ಬಡಿದಾಗ್ಯೂ ಅದು ಚನ್ನಾಗಿ ಕಟ್ಟಿ ದ್ದರಿಂದ ಆ ಪ್ರವಾಹವು ಅದನ್ನು ಅಲ್ಲಾಡಿಸಲಾರದೆ ಹೋಯಿತು. 49 ಆದರೆ ನನ್ನ ಮಾತು ಗಳನ್ನು ಕೇಳಿ ಅವುಗಳಂತೆ ನಡೆಯದೆ ಇರುವವನು ಅಸ್ತಿವಾರವಿಲ್ಲದೆ ನೆಲದ ಮೇಲೆ ಮನೇ ಕಟ್ಟಿದವನಿಗೆ ಸಮಾನನು. ಪ್ರವಾಹವು ಅದಕ್ಕೆ ಬಡಿಯಿತು; ಬಡಿದ ಕೂಡಲೇ, ಅದು ಧಡಮ್ಮನೆ ಕಡಕೊಂಡು ಬಿತ್ತು.

### ಯೇಸು ಶತಾಧಿಪತಿಯ ಆಳನ್ನು ಸ್ವಸ್ಥಮಾಡಿದ್ದು.

(ಮತ್ತಾಯ 8, 5—13.)

**7** ಆತನು ತನ್ನ ಮಾತುಗಳನ್ನೆಲ್ಲಾ ಜನರು ಕೇಳುವಂತೆ ಹೇಳಿ ಮುಗಿಸಿದ ಮೇಲೆ, ಕಪೆ ರ್ನೌಮಿಗೆ ಬಂದನು. 2 ಅಲ್ಲಿ ದಂಡಿನ ಶತಾಧಿಪತಿಗೆ[1] ಇಷ್ಟನಾದ ಒಬ್ಬ ಆಳು ಕ್ಷೇಮ ವಿಲ್ಲದೆ ಸಾಯುವ ಹಾಗಿದ್ದನು. 3 ಅವನು ಯೇಸುವಿನ ಸುದ್ದಿಯನ್ನು ಕೇಳಿ, ಆತನ ಬಳಿಗೆ—ನೀನು ಬಂದು ನನ್ನ ಆಳನ್ನು ವಾಸಿಮಾಡಬೇಕೆಂದು ಆತನನ್ನು ಬೇಡಿಕೊಳ್ಳುವ ಹಾಗೆ ಯೆಹೂದ್ಯರ ಹಿರಿಯರನ್ನು ಕಳುಹಿಸಿದನು. 4 ಅವರು ಯೇಸುವಿನ ಬಳಿಗೆ ಬಂದು—ನಿನ್ನಿಂದ ಇಂಥಾ ಉಪಕಾರ ಹೊಂದುವದಕ್ಕೆ ಅವನು ಯೋಗ್ಯನು; 5 ಅವನು ನಮ್ಮ ಜನರನ್ನು ಪ್ರೀತಿಸುವವನು, ತಾನೇ ನಮ್ಮ ಸಭಾಮಂದಿರವನ್ನು ನಮಗಾಗಿ ಕಟ್ಟಿಸಿ ದನು ಎಂದು ಆತನನ್ನು ಬಹಳವಾಗಿ ಬೇಡಿಕೊಳ್ಳಲು, 6 ಯೇಸು ಅವರ ಸಂಗಡ ಹೋ ದನು. ಆತನು ಇನ್ನೂ ಮನೆಗೆ ಮುಟ್ಟುವದಕ್ಕೆ ಸ್ವಲ್ಪದೂರವಿರುವಾಗಲೇ ಶತಾಧಿ ಪತಿಯು ಸ್ನೇಹಿತರನ್ನು ಆತನ ಬಳಿಗೆ ಕಳುಹಿಸಿ—ಪ್ರಭುವೇ, ತೊಂದರೆ ತೆಗೆದುಕೊಳ್ಳ

[1] ಶತಾಧಿಪತಿ ಅಂದರೆ ನೂರು ಸಿಪಾಯಿಗಳ ಮೇಲಿರುವ ಸರದಾರನು.

7 ಬೇಡ; ನೀನು ನನ್ನ ಮನೆಗೆ ಬರತಕ್ಕಷ್ಟು ಯೋಗ್ಯತೆ ನನ್ನಲ್ಲಿಲ್ಲ. ಈ ಕಾರಣದಿಂದ ನಾನು ನನ್ನನ್ನು ನಿನ್ನ ಬಳಿಗೆ ಬರುವದಕ್ಕೆ ತಕ್ಕವನೆಂದು ಎಣಿಸಿಕೊಳ್ಳಲಿಲ್ಲ. ಆದರೆ ನೀನು
8 ಒಂದು ಮಾತು ಹೇಳಿದರೆ ಸಾಕು, ನನ್ನ ಆಳಿಗೆ ಗುಣವಾಗುವದು. ನಾನು ಸಹ ಮತ್ತೊಬ್ಬರ ಕೈಕೆಳಗಿರುವವನು; ನನ್ನ ಕೈಕೆಳಗೆ ಸಿಪಾಯಿಗಳಿದ್ದಾರೆ; ನಾನು ಅವರಲ್ಲಿ ಒಬ್ಬನಿಗೆ ಹೋಗು ಎಂದು ಹೇಳಿದರೆ ಹೋಗುತ್ತಾನೆ; ಮತ್ತೊಬ್ಬನಿಗೆ ಬಾ ಎಂದು ಹೇಳಿದರೆ ಬರುತ್ತಾನೆ; ನನ್ನ ಆಳಿಗೆ ಇಂಥಿಂಥಾದ್ದನ್ನು ಮಾಡು ಎಂದು ಹೇಳಿದರೆ ಮಾಡು
9 ತ್ತಾನೆ ಎಂಬದಾಗಿ ಹೇಳಿಸಿದನು. ಯೇಸು ಈ ಮಾತನ್ನು ಕೇಳಿ, ಅವನ ವಿಷಯದಲ್ಲಿ ಆಶ್ಚರ್ಯಪಟ್ಟು, ತನ್ನ ಹಿಂದೆ ಬರುತ್ತಿರುವ ಗುಂಪನ್ನು ಹಿಂತಿರುಗಿ ನೋಡಿ—ನಾನು ಇಂಥಾ ದೊಡ್ಡ ನಂಬಿಕೆಯನ್ನು ಇಸ್ರಯೇಲ ಜನರಲ್ಲಿಯೂ ಕಾಣಲಿಲ್ಲವೆಂದು ನಿಮಗೆ
10 ಹೇಳುತ್ತೇನೆ ಅಂದನು. ತರುವಾಯ, ಆ ಶತಾಧಿಪತಿಯ ಕಡೆಯಿಂದ ಬಂದವರು ತಿರಿಗಿ ಮನೆಗೆ ಹೋಗಿ ಆಳು ಗುಣವಾದದ್ದನ್ನು ಕಂಡರು.

### ನಾಯಿನೆಂಬ ಊರಿನಲ್ಲಿ ಸತ್ತುಹೋಗಿದ್ದ ಒಬ್ಬ ಯೌವನಸ್ಥನನ್ನು ಯೇಸು ಬದುಕಿಸಿದ್ದು.

11 ಸ್ವಲ್ಪಕಾಲದ ಮೇಲೆ ಆತನು ನಾಯಿನೆಂಬ ಊರಿಗೆ ಹೋದನು. ಆತನ ಜೊತೆಯಲ್ಲಿ
12 ಆತನ ಶಿಷ್ಯರೂ ಇನ್ನೂ ಅನೇಕ ಜನರೂ ಹೋಗುತ್ತಿದ್ದರು. ಆತನು ಊರಬಾಗಲಿನ ಹತ್ತರಕ್ಕೆ ಬಂದಾಗ ಸತ್ತುಹೋಗಿದ್ದ ಒಬ್ಬನನ್ನು ಹೊರಗೆ ತರುತ್ತಿದ್ದರು. ಇವನು ತನ್ನ ತಾಯಿಗೆ ಒಬ್ಬನೇ ಮಗನು; ಆಕೆಯು ಗಂಡಸತ್ತವಳಾಗಿದ್ದಳು. ಆಕೆಯ ಸಂಗಡ
13 ಗ್ರಾಮಸ್ಥರು ಅನೇಕರಿದ್ದರು. ಸ್ವಾಮಿಯು ಆಕೆಯನ್ನು ಕಂಡು ಕನಿಕರಿಸಿ—ಅಳಬೇಡ
14 ಎಂದು ಆಕೆಗೆ ಹೇಳಿ, ಚಟ್ಟದ ಹತ್ತರಕ್ಕೆ ಹೋಗಿ ಅದನ್ನು ಮುಟ್ಟಲು ಹೊತ್ತುಕೊಂಡವರು ನಿಂತರು. ಆಗ ಆತನು—ಯೌವನಸ್ಥನೇ, ಏಳು ಎಂದು ನಿನಗೆ ಹೇಳುತ್ತೇನೆ ಅಂದನು.
15 ಅನ್ನುತ್ತಲೇ, ಸತ್ತಿದ್ದವನು ಎದ್ದು ಕೂತುಕೊಂಡು ಮಾತಾಡುವದಕ್ಕೆ ತೊಡಗಿದನು.
16 ಯೇಸು ಅವನನ್ನು ಅವನ ತಾಯಿಗೆ ಕೊಟ್ಟನು. ಎಲ್ಲರು ಭಯಹಿಡಿದವರಾಗಿ—ಮಹಾಪ್ರವಾದಿಯು ನಮ್ಮಲ್ಲಿ ಎದ್ದಿದ್ದಾನೆ, ದೇವರು ತನ್ನ ಜನರಿಗೆ ದರ್ಶನವನ್ನು ಅನುಗ್ರ
17 ಹಿಸಿದ್ದಾನೆ ಎಂದು ದೇವರನ್ನು ಕೊಂಡಾಡುವವರಾದರು. ಈ ವಾರ್ತೆಯು ಯೂದಾಯದಲ್ಲಿಯೂ ಸುತ್ತಲಿರುವ ಎಲ್ಲಾ ಪ್ರಾಂತ್ಯದಲ್ಲಿಯೂ ಹಬ್ಬಿತು.

### ಸ್ನಾನಿಕನಾದ ಯೋಹಾನನು ಹೇಳಿಕಳುಹಿಸಿದ ಮಾತಿಗೆ ಯೇಸು ಉತ್ತರಕೊಟ್ಟದ್ದು.

(ಮತ್ತಾಯ 11, 2—19.)

18, 19 ಯೋಹಾನನ ಶಿಷ್ಯರು ನಡೆದ ಸಂಗತಿಗಳನ್ನೆಲ್ಲಾ ಅವನಿಗೆ ತಿಳಿಸಲು, ಅವನು ತನ್ನ ಶಿಷ್ಯರಲ್ಲಿ ಇಬ್ಬರನ್ನು ಕರೆದು—ಬರಬೇಕಾದವನು ನೀನೋ, ನಾವು ಮತ್ತೊಬ್ಬನ ದಾರಿ
20 ಯನ್ನು ನೋಡಬೇಕೋ ಎಂದು ಸ್ವಾಮಿಗೆ ಹೇಳಿಕಳುಹಿಸಿದನು. ಅವರು ಆತನ ಬಳಿಗೆ ಬಂದು—ಬರಬೇಕಾದವನು ನೀನೋ, ನಾವು ಮತ್ತೊಬ್ಬನ ದಾರಿಯನ್ನು ನೋಡಬೇಕೋ

ಎಂದು ಕೇಳುವದಕ್ಕಾಗಿ ಸ್ನಾನಿಕನಾದ ಯೋಹಾನನು ನಮ್ಮನ್ನು ನಿನ್ನ ಬಳಿಗೆ ಕಳುಹಿಸಿದ್ದಾನೆ ಅಂದರು. 21 ಅದೇ ಗಳಿಗೆಯಲ್ಲಿ ಆತನು ಅನೇಕರನ್ನು ರೋಗ ಉಪದ್ರ ದೆವ್ವ ಇಂಥವುಗಳಿಂದ ಬಿಡಿಸಿ ವಾಸಿಮಾಡಿದನು; ಮತ್ತು ಅನೇಕ ಮಂದಿ ಕುರುಡರಿಗೆ ಕಣ್ಣನ್ನು ದಯಪಾಲಿಸಿದನು. 22 ಹೀಗಿರಲಾಗಿ ಆತನು—ನೀವು ಯೋಹಾನನ ಬಳಿಗೆ ಹೋಗಿ ಕಂಡು ಕೇಳಿದವುಗಳನ್ನು ತಿಳಿಸಿರಿ; ಕುರುಡರಿಗೆ ಕಣ್ಣು ಬರುತ್ತವೆ, ಕುಂಟರಿಗೆ ಕಾಲುಬರುತ್ತವೆ, ಕುಷ್ಠರೋಗಿಗಳು ಶುದ್ಧರಾಗುತ್ತಾರೆ, ಕಿವುಡರಿಗೆ ಕಿವಿಬರುತ್ತವೆ, ಸತ್ತವರು ಜೀವವನ್ನು ಹೊಂದುತ್ತಾರೆ, ಬಡವರಿಗೆ ಸುವಾರ್ತೆ ಸಾರಲ್ಪಡುತ್ತದೆ. 23 ನನ್ನ ವಿಷಯದಲ್ಲಿ ಸಂಶಯ ಪಡದವನೇ ಧನ್ಯನು ಎಂದು ಅವರಿಗೆ ಉತ್ತರಕೊಟ್ಟನು.

24 ಯೋಹಾನನ ದೂತರು ಹೊರಟುಹೋಗಲು, ಆತನು ಯೋಹಾನನ ವಿಷಯವಾಗಿ ಆ ಜನರ ಗುಂಪುಗಳಿಗೆ ಹೇಳತೊಡಗಿದ್ದೇನಂದರೆ—ಏನು ನೋಡಬೇಕೆಂದು ಅಡವಿಗೆ ಹೋಗಿದ್ದಿರಿ? ಗಾಳಿಯಿಂದ ಅಲ್ಲಾಡುವ ದಂಟನ್ನೋ? 25 ಅಲ್ಲವಾದರೆ ಏನು ನೋಡಬೇಕೆಂದು ಹೋಗಿದ್ದಿರಿ? ನಯವಾದ ಉಡುಪನ್ನು ಹಾಕಿಕೊಂಡ ಮನುಷ್ಯನನ್ನೋ? ಶೋಭಾಯಮಾನವಾದ ಉಡುಪನ್ನು ಹಾಕಿಕೊಂಡು ಭೋಗದಲ್ಲಿ ಬಾಳುವವರು ಅರಮನೆಗಳಲ್ಲಿ ಇರುತ್ತಾರಷ್ಟೆ. 26 ಹಾಗಾದರೆ ಏನು ನೋಡಬೇಕೆಂದು ಹೋಗಿದ್ದಿರಿ? ಪ್ರವಾದಿಯನ್ನೋ? ಹೌದು, ಪ್ರವಾದಿಗಿಂತಲೂ ಹೆಚ್ಚಿನವನನ್ನು ನೋಡಿದಿರಿ ಎಂದು ನಿಮಗೆ ಹೇಳುತ್ತೇನೆ.

27 ಇಗೋ, ನಾನು ನನ್ನ ದೂತನನ್ನು ನಿನ್ನ ಮುಂದೆ ಕಳುಹಿಸುತ್ತೇನೆ.
ನೀನು ಹೋಗುವ ದಾರಿಯನ್ನು ಅವನು ನಿನ್ನ ಮುಂದೆ ಸಿದ್ಧಮಾಡುವನು[1]

ಎಂದು ಯಾರ ವಿಷಯವಾಗಿ ಬರೆದದೆಯೋ ಆ ಪುರುಷನು ಇವನೇ. 28 ಸ್ತ್ರೀಯರಲ್ಲಿ ಹುಟ್ಟಿದವರೊಳಗೆ ಯೋಹಾನನಿಗಿಂತ ದೊಡ್ಡವನು ಒಬ್ಬನೂ ಇಲ್ಲ; ಆದರೂ ದೇವರ ರಾಜ್ಯದಲ್ಲಿ ಚಿಕ್ಕವನು ಅವನಿಗಿಂತಲೂ ದೊಡ್ಡವನೆಂದು ನಿಮಗೆ ಹೇಳುತ್ತೇನೆ. 29 ಇದಲ್ಲದೆ ಜನರೆಲ್ಲರೂ ಸುಂಕದವರೂ ಯೋಹಾನನ ಉಪದೇಶವನ್ನು ಕೇಳಿದಾಗ, ಅವನಿಂದ ದೀಕ್ಷಾಸ್ನಾನ ಮಾಡಿಸಿಕೊಂಡದ್ದರಲ್ಲಿ ದೇವರು ನೀತಿವಂತನೆಂದು ಒಪ್ಪಿಕೊಂಡರು. 30 ಆದರೆ ಫರಿಸಾಯರೂ ಧರ್ಮೋಪದೇಶಕರೂ ಅವನಿಂದ ದೀಕ್ಷಾಸ್ನಾನ ಮಾಡಿಸಿಕೊಳ್ಳದೆ ಹೋದದ್ದರಲ್ಲಿ ತಮ್ಮ ವಿಷಯವಾಗಿ[2] ದೇವರ ಸಂಕಲ್ಪವನ್ನು ನಿರಾಕರಿಸಿದರು. 31 ಹೀಗಿರುವಲ್ಲಿ, ಈ ಕಾಲದ ಜನರನ್ನು ಯಾರಿಗೆ ಹೋಲಿಸಲಿ? ಅವರು ಯಾರನ್ನು ಹೋಲುತ್ತಾರೆ? 32 ಪೇಟೆಯಲ್ಲಿ ಕೂತುಕೊಂಡು—ನಿಮಗೋಸ್ಕರ ಕೊಳಲೂದಿದೆವು, ನೀವು ಕುಣಿಯಲಿಲ್ಲ; ಗೋಳಾಡಿದೆವು, ನೀವು ಅಳಲಿಲ್ಲ ಎಂದು ಒಬ್ಬರಿಗೊಬ್ಬರು ಕೂಗಿ ಹೇಳುವಂಥಾ ಹುಡುಗರನ್ನು ಹೋಲುತ್ತಾರೆ. 33 ಹ್ಯಾಗಂದರೆ, ಸ್ನಾನಿಕನಾದ ಯೋಹಾನನು ಬಂದಿದ್ದಾನೆ; ಅವನು ರೊಟ್ಟೀ ತಿನ್ನದವನು, ದ್ರಾಕ್ಷಾರಸ ಕುಡಿಯದವನು; ನೀವು—ಅವನಿಗೆ ದೆವ್ವ ಹಿಡಿದದೆ ಅನ್ನುತ್ತೀರಿ. 34 ಮನುಷ್ಯಕುಮಾರನು ಬಂದಿದ್ದಾನೆ, ಅವನು ಅನ್ನಪಾನಗಳನ್ನು ತೆಗೆದುಕೊಳ್ಳುವವನಾಗಿದ್ದಾನೆ; ನೀವು—ಇಗೋ, ಇವನು ಹೊಟ್ಟೆ

[1] ಮಲಕೀಯ ೩, ೧.
[2] ಅಥವಾ, ಕೇಡಿಗಾಗಿ.

35 ಬಾಕನು, ಕುಡುಕನು, ಭ್ರಷ್ಟರ ಮತ್ತು ಪಾಪಿಷ್ಠರ ಗೆಳೆಯನು ಅನ್ನುತ್ತೀರಿ. ಆದರೆ ಜ್ಞಾನವು ಜ್ಞಾನಾವಲಂಬಿಗಳ ಮೂಲಕ ಜ್ಞಾನವೇ ಎಂದು ಗೊತ್ತಾಗುವದು ಅಂದನು.

ಯೇಸು ಒಬ್ಬ ಫರಿಸಾಯನ ಮನೆಯಲ್ಲಿ ಊಟಾಮಾಡುವಾಗ ದುರಾಚಾರಿಯಾದ ಒಬ್ಬ ಹೆಂಗಸು ಬಂದು ಆತನ ಪಾದಸೇವೆ ಮಾಡಿದ್ದು.

36 ಫರಿಸಾಯರಲ್ಲಿ ಒಬ್ಬನು ಆತನನ್ನು ತನ್ನ ಜೊತೆಯಲ್ಲಿ ಊಟಾಮಾಡಬೇಕೆಂದು ಬೇಡಿಕೊಂಡಾಗ, ಆತನು ಆ ಫರಿಸಾಯನ ಮನೆಗೆ ಹೋಗಿ ಊಟಕ್ಕೆ ಒರಗಿಕೊಂಡನು.
37 ಆಗ ಆ ಊರಲ್ಲಿದ್ದ ದುರಾಚಾರಿಯಾದ ಒಬ್ಬ ಹೆಂಗಸು ಫರಿಸಾಯನ ಮನೆಯಲ್ಲಿ ಆತನು ಊಟಕ್ಕೆ ಒರಗಿದ್ದಾನೆಂದು ಗೊತ್ತುಹಿಡುಕೊಂಡು, ಸುಗಂಧತೈಲದ ಭರಣಿಯನ್ನು
38 ತೆಗೆದುಕೊಂಡು ಬಂದು, ಹಿಂದೆ ಆತನ ಪಾದಗಳ ಬಳಿಯಲ್ಲಿ ನಿಂತುಕೊಂಡು, ಅಳುತ್ತಾ ತನ್ನ ಕಣ್ಣೀರಿನಿಂದ ಆತನ ಪಾದಗಳನ್ನು ತ್ಯಾವಮಾಡಿ, ತನ್ನ ತಲೇಕೂದಲಿನಿಂದ ಒರಸಿ,
39 ಅವುಗಳಿಗೆ ಮುದ್ದಿಟ್ಟು ಆ ತೈಲವನ್ನು ಹಚ್ಚಿದಳು. ಆದರೆ ಆತನನ್ನು ಊಟಕ್ಕೆ ಕರೆದ ಫರಿಸಾಯನು ಇದನ್ನು ಕಂಡು—ಇವಳು ದುರಾಚಾರಿ; ಇವನು ಪ್ರವಾದಿಯಾಗಿದ್ದರೆ[1] ತನ್ನನ್ನು ಮುಟ್ಟಿದ ಈ ಹೆಂಗಸು ಇಂಥವಳೆಂದು ತಿಳುಕೊಳ್ಳುತ್ತಿದ್ದನು ಅಂದುಕೊಂಡನು.
40 ಅದಕ್ಕೆ ಯೇಸು—ಸೀಮೋನನೇ, ನಾನು ನಿನಗೆ ಹೇಳಬೇಕಾದ ಒಂದು ಮಾತದೆ
41 ಅಂದಾಗ, ಅವನು—ಬೋಧಕನೇ, ಹೇಳು ಅಂದನು. ಆಗ ಯೇಸು—ಒಬ್ಬ ಸಾವುಕಾರನಿಗೆ ಇಬ್ಬರು ಸಾಲಗಾರರಿದ್ದರು; ಒಬ್ಬನು ಐನೂರು ಹಣ ಕೊಡಬೇಕಾಗಿತ್ತು,
42 ಮತ್ತೊಬ್ಬನು ಐವತ್ತು ಹಣ ಕೊಡಬೇಕಾಗಿತ್ತು. ತೀರಿಸುವದಕ್ಕೆ ಅವರಿಗೆ ಗತಿಯಿಲ್ಲದ್ದರಿಂದ ಆ ಇಬ್ಬರಿಗೂ ಸಾಲವನ್ನು ಬಿಟ್ಟುಬಿಟ್ಟನು. ಹಾಗಾದರೆ ಅವರಲ್ಲಿ ಯಾವನು
43 ಆ ಸಾವುಕಾರನನ್ನು ಹೆಚ್ಚಾಗಿ ಪ್ರೀತಿಸ್ಯಾನು ಎಂದು ಕೇಳಿದ್ದಕ್ಕೆ, ಸೀಮೋನನು—ಯಾವನಿಗೆ ಹೆಚ್ಚಾಗಿ ಬಿಟ್ಟನೋ ಅವನೇ ಎಂದು ಭಾವಿಸುತ್ತೇನೆ ಅಂದನು. ಯೇಸು
44 ಅವನಿಗೆ—ನೀನು ಸರಿಯಾಗಿ ತೀರ್ಪುಮಾಡಿದಿ ಎಂದು ಹೇಳಿ, ಆ ಹೆಂಗಸಿನ ಕಡೆಗೆ ತಿರುಗಿಕೊಂಡು ಸೀಮೋನನಿಗೆ ಹೇಳಿದ್ದೇನಂದರೆ—ಈ ಹೆಂಗಸನ್ನು ನೋಡಿದಿಯಾ? ನಾನು ನಿನ್ನ ಮನೆಗೆ ಬಂದಾಗ, ನೀನು ನನ್ನ ಕಾಲಿಗೆ ನೀರು ಕೊಡಲಿಲ್ಲ; ಇವಳಾದರೋ ನನ್ನ ಕಾಲುಗಳನ್ನು ಕಣ್ಣೀರಿನಿಂದ ತ್ಯಾವಮಾಡಿ ತನ್ನ ತಲೇಕೂದಲಿನಿಂದ ಒರಸಿದಳು.
45 ನೀನು ನನಗೆ ಮುದ್ದಿಡಲಿಲ್ಲ; ಇವಳಾದರೋ ನಾನು ಒಳಗೆ ಬಂದಾಗಿನಿಂದ ನನ್ನ ಕಾಲಿಗೆ
46 ಮುದ್ದಿಡುವದನ್ನು ಬಿಟ್ಟಿಲ್ಲ. ನೀನು ನನ್ನ ತಲೆಗೆ ಎಣ್ಣೀ ಹಚ್ಚಲಿಲ್ಲ; ಇವಳಾದರೋ
47 ಸುಗಂಧತೈಲವನ್ನು ನನ್ನ ಕಾಲಿಗೆ ಹಚ್ಚಿದಳು. ಹೀಗಿರಲು ನಾನು ಹೇಳುವ ಮಾತೇನಂದರೆ—ಇವಳ ಪಾಪಗಳು ಬಹಳವಾಗಿದ್ದರೂ ಅವು ಕ್ಷಮಿಸಲ್ಪಟ್ಟವೆ. ಇದಕ್ಕೆ ಪ್ರಮಾಣವೇನಂದರೆ, ಇವಳು ತೋರಿಸಿದ ಪ್ರೀತಿ ಬಹಳ. ಆದರೆ ಯಾವನಿಗೆ ಸ್ವಲ್ಪ ಮಾತ್ರ
48 ಕ್ಷಮಿಸಲ್ಪಟ್ಟದೆಯೋ ಅವನು ತೋರಿಸುವ ಪ್ರೀತಿಯು ಸ್ವಲ್ಪವೇ ಅಂದನು. ಆ ಮೇಲೆ
49 ಆತನು ಅವಳಿಗೆ—ನಿನ್ನ ಪಾಪಗಳು ಕ್ಷಮಿಸಲ್ಪಟ್ಟವೆ ಎಂದು ಹೇಳಿದನು. ಆತನ ಸಂಗಡ

[1] ಕೆಲವು ಪ್ರತಿಗಳಲ್ಲಿ—ಆ ಪ್ರವಾದಿಯಾಗಿದ್ದರೆ ಎಂದು ಬರೆದದೆ; ಯೋಹಾನ ೧, ೨೧. ೨೫ ನೋಡು.

ಊಟಕ್ಕೆ ಒರಗಿಕೊಂಡವರು—ಪಾಪಗಳನ್ನು ಸಹ ಕ್ಷಮಿಸಿಬಿಡುವವನು ಇವನ್ಯಾರು ಎಂದು ತಮ್ಮತಮ್ಮೊಳಗೆ ಅಂದುಕೊಂಡರು. ಆದರೆ ಆತನು ಆ ಹೆಂಗಸಿಗೆ—ನಿನ್ನ ನಂಬಿ 50 ಕೆಯೇ ನಿನ್ನನ್ನು ರಕ್ಷಿಸಿ ಅದೆ; ಸಮಾಧಾನದಿಂದ ಹೋಗು ಎಂದು ಹೇಳಿದನು.

### ಯೇಸು ಸುವಾರ್ತೆಯನ್ನು ಸಾರುತ್ತಾ ಸಂಚಾರ ಮಾಡುವಲ್ಲಿ ಭಕ್ತರಾದ ಸ್ತ್ರೀಯರು ಸೇವೆಮಾಡಿದ್ದು.

**8** ತರುವಾಯ ಆತನು ದೇವರ ರಾಜ್ಯದ ಸುವಾರ್ತೆಯನ್ನು ಸಾರುತ್ತಾ ಊರುಗಳಲ್ಲಿಯೂ ಗ್ರಾಮಗಳಲ್ಲಿಯೂ ಸಂಚರಿಸಿದನು. ಆತನ ಸಂಗಡ ಹನ್ನೆರಡು ಮಂದಿ ಶಿಷ್ಯರೂ ಇದ್ದರು. 2 ದೆವ್ವಗಳ ಕಾಟದಿಂದಲೂ ರೋಗಗಳಿಂದಲೂ ಗುಣಹೊಂದಿದ ಕೆಲವು ಹೆಂಗಸರು ಸಹ ಇದ್ದರು. ಈ ಹೆಂಗಸರು ಯಾರ್ಯಾರಂದರೆ—ಏಳು ದೆವ್ವಗಳು ಬಿಟ್ಟುಹೋಗಿದ್ದ ಮಗ್ದಲದವಳೆಂಬ ಮರಿಯಳು, 3 ಹೆರೋದನ ಮನೆವಾರ್ತೆಯವನಾದ ಕೂಜನ ಹೆಂಡತಿ ಯೋಹಾನಳು, ಸುಸನ್ನಳು, ಇನ್ನು ಬೇರೆ ಅನೇಕರು. ಇವರು ತಮ್ಮ ಆಸ್ತಿಯಿಂದ ಅವನಿಗೆ ಕೊಟ್ಟು ಉಪಚಾರಮಾಡುತ್ತಿದ್ದರು.

### ಬಿತ್ತುವವನ ಸಾಮ್ಯವೂ, ಅದರ ವಿವರವೂ, ದೀಪದ ದೃಷ್ಟಾಂತವೂ.

(ಮತ್ತಾಯ 13, 1—23; ಮಾರ್ಕ 4, 1—25.)

4 ಬಹುಜನರು ಗುಂಪುಕೂಡಿರುವಾಗ ಪಟ್ಣಪಟ್ಣದಿಂದ ಜನರು ಆತನ ಬಳಿಗೆ ಬರುತ್ತಿರಲು, 5 ಆತನು ಸಾಮ್ಯರೂಪವಾಗಿ ಹೇಳಿದ್ದೇನಂದರೆ—ಬಿತ್ತುವವನು ಬೀಜವನ್ನು ಬಿತ್ತುವದಕ್ಕೆ ಹೊರಟನು. ಅವನು ಬಿತ್ತುವಾಗ ಕೆಲವು ಬೀಜ ದಾರಿಯ ಮಗ್ಗುಲಲ್ಲಿ ಬಿದ್ದು ತುಳಿಯಲ್ಪಟ್ಟವು; ಆಕಾಶದಲ್ಲಿ ಹಾರ್ಯಾಡುವ ಹಕ್ಕಿಗಳು ಅವುಗಳನ್ನು ತಿಂದುಬಿಟ್ಟವು. 6 ಬೇರೆ ಕೆಲವು ಬೀಜ ಬಂಡೆಯ ಮೇಲೆ ಬಿದ್ದವು; ಅವು ಮೊಳೆತು, ತ್ಯಾವವಿಲ್ಲದ ಕಾರಣ ಒಣಗಿಹೋದವು. 7 ಮತ್ತೆ ಕೆಲವು ಬೀಜ ಮುಳ್ಳುಗಿಡಗಳ ನಡುವೆ ಬಿದ್ದವು; ಅವುಗಳ ಸಂಗಡ ಮುಳ್ಳುಗಿಡಗಳು ಬೆಳೆದು ಅವುಗಳನ್ನು ಅಡಗಿಸಿಬಿಟ್ಟವು. 8 ಇನ್ನು ಕೆಲವು ಬೀಜ ಒಳ್ಳೇ ಭೂಮಿಯಲ್ಲಿ ಬಿದ್ದು ಮೊಳೆತು ನೂರರಷ್ಟು ಫಲವನ್ನು ಕೊಟ್ಟವು. ಈ ಮಾತುಗಳನ್ನು ಹೇಳುವಾಗ, ಆತನು—ಕೇಳುವದಕ್ಕೆ ಕಿವಿಯುಳ್ಳವನು ಕೇಳಲಿ ಎಂದು ಕೂಗಿದನು.

9, 10 ಆತನ ಶಿಷ್ಯರು—ಈ ಸಾಮ್ಯದ ಅರ್ಥವೇನೆಂದು ಆತನನ್ನು ಕೇಳಿದಾಗ, ಆತನು—ದೇವರ ರಾಜ್ಯದ ಗುಟ್ಟುಗಳನ್ನು ತಿಳಿಯುವ ವರವು ನಿಮಗೇ ಕೊಟ್ಟದೆ, ಆದರೆ ಉಳಿದವರಿಗೆ ಸಾಮ್ಯರೂಪವಾಗಿ ಹೇಳುವದಾಗುತ್ತದೆ. ಕಣ್ಣಿದ್ದರೂ ಕಾಣಬಾರದು, ಕಿವಿಯಿದ್ದರೂ ತಿಳುಕೊಳ್ಳಬಾರದು[1] ಎಂದು ಬರೆದದೆಯಲ್ಲಾ. 11 ಈ ಸಾಮ್ಯದ ಅರ್ಥವನ್ನು ಕೇಳಿರಿ—ಆ ಬೀಜವಂದರೆ ದೇವರ ವಾಕ್ಯ. 12 ಕೆಲವರು ವಾಕ್ಯವನ್ನು ಕೇಳಿದ ಕೂಡಲೆ ಸೈತಾನನು ಬಂದು, ಅವರು ನಂಬಿ ರಕ್ಷಣೆ ಹೊಂದಬಾರದೆಂದು ವಾಕ್ಯವನ್ನು ಅವರ

[1] ಯೆಶಾಯ ೬, ೯. ೧೦.

13 ಹೃದಯದಿಂದ ತೆಗೆದುಬಿಡುತ್ತಾನೆ; ಇವರೇ ದಾರಿಯ ಮಗ್ಗುಲಾಗಿರುವವರು. ಕೆಲ ವರು ವಾಕ್ಯವನ್ನು ಕೇಳಿದಾಗಲೇ ಅದಕ್ಕೆ ಸಂತೋಷದಿಂದ ಒಪ್ಪಿಕೊಳ್ಳುತ್ತಾರೆ; ಆದಾಗ್ಯೂ ಬೇರಿಲ್ಲದವರಾದ ಕಾರಣ ಸ್ವಲ್ಪಕಾಲ ಮಾತ್ರ ನಂಬಿಕೊಂಡಿದ್ದು, ಶೋಧನೆಯ ಕಾಲದಲ್ಲಿ
14 ಬಿದ್ದುಹೋಗುತ್ತಾರೆ; ಇವರೇ ಬಂಡೆಯ ಭೂಮಿಯಾಗಿರುವವರು. ಬೇರೆ ಕೆಲವರು ವಾಕ್ಯವನ್ನು ಕೇಳಿದ ಮೇಲೆ ಬರಬರುತ್ತಾ ಈ ಜೀವಮಾನದಲ್ಲಿ ಆಗುವ ಚಿಂತೆ ಐಶ್ವರ್ಯ ಭೋಗಗಳಿಂದ ಅಡಗಿಸಲ್ಪಟ್ಟು, ಫಲವನ್ನು ಮಾಗಿಸುವದಿಲ್ಲ; ಇವರೇ ಮುಳ್ಳುಗಿಡಗಳ
15 ಭೂಮಿಯಾಗಿರುವವರು. ಮತ್ತೆ ಕೆಲವರು ವಾಕ್ಯವನ್ನು ಕೇಳಿ ಸುಗುಣವುಳ್ಳ ಒಳ್ಳೇ ಹೃದಯದಲ್ಲಿ ಇಟ್ಟುಕೊಂಡು ತಾಳ್ಮೆಯಿಂದ ಫಲವನ್ನು ಕೊಡುತ್ತಾರೆ; ಇವರೇ ಒಳ್ಳೇ ಭೂಮಿಯಾಗಿರುವವರು.

16 ಇದಲ್ಲದೆ ಯಾರೂ ದೀಪಾ ಹಚ್ಚಿ ಮಡಿಕೆಯಿಂದ ಮುಚ್ಚುವದಿಲ್ಲ, ಮಂಚದ ಕೆಳಗೂ ಇಡುವದಿಲ್ಲ; ಮನೆಯೊಳಕ್ಕೆ ಬರುವವರಿಗೆ ಬೆಳಕು ಕಾಣಿಸುವಂತೆ ಅದನ್ನು ದೀಪಸ್ತಂಭದ
17 ಮೇಲಿಡುತ್ತಾರಷ್ಟೆ[1]. ಪ್ರಕಾಶಕ್ಕೆ ಬಾರದ ಯಾವ ರಹಸ್ಯವೂ ಇಲ್ಲ; ಮತ್ತು ಗೊತ್ತಾ
18 ಗದೆ ಬೈಲಿಗೆ ಬಾರದೆ ಇರುವಂಥ ಗುಟ್ಟು ಒಂದೂ ಇಲ್ಲ. ಆದದರಿಂದ ನೀವು ಹ್ಯಾಗೆ ಕಿವಿಗೊಡಬೇಕೋ ನೋಡಿಕೊಳ್ಳಿರಿ; ಯಾಕಂದರೆ, ಯಾವನಿಗೆ ಅದೆಯೋ ಅವನಿಗೆ ಕೊಡಲ್ಪಡುವದು; ಯಾವನಿಗೆ ಇಲ್ಲವೋ ಅವನು ತನ್ನದೆಂದು ಎಣಿಸುವಂಥಾದ್ದೂ ಅವನ ಕಡೆಯಿಂದ ತೆಗೆಯಲ್ಪಡುವದು ಅಂದನು.

### ದೇವರ ಚಿತ್ತವನ್ನು ಅನುಸರಿಸುವವರೇ ತನ್ನ ಸಂಬಂಧೀಕರೆಂದು ಯೇಸು ಹೇಳಿದ್ದು.

(ಮತ್ತಾಯ 12, 46—50; ಮಾರ್ಕ 3, 31—35.)

19 ಆತನ ತಾಯಿಯೂ ಅಣ್ಣತಮ್ಮಂದಿರೂ ಆತನಿದ್ದಲ್ಲಿಗೆ ಬಂದು ಜನರ ಗುಂಪಿನ ನಿಮಿತ್ತ
20 ಆತನ ಬಳಿಗೆ ಸೇರಲಾರದೆ ಇದ್ದರು. ಜನರು ಆತನಿಗೆ—ನಿನ್ನ ತಾಯಿಯೂ ನಿನ್ನ ಅಣ್ಣ ತಮ್ಮಂದಿರೂ ನಿನ್ನನ್ನು ಕಾಣಬೇಕೆಂದು ಹೊರಗೆ ನಿಂತಿರುತ್ತಾರೆ ಎಂದು ಹೇಳಿದಾಗ,
21 ಆತನು ಅವರಿಗೆ—ಯಾರು ದೇವರ ವಾಕ್ಯವನ್ನು ಕೇಳಿ ಅದರಂತೆ ನಡೆಯುತ್ತಾರೋ ಇವರೇ ನನಗೆ ತಾಯಿಯೂ ಅಣ್ಣತಮ್ಮಂದಿರೂ ಆಗಬೇಕು ಎಂದು ಉತ್ತರಕೊಟ್ಟನು.

### ಯೇಸು ಸಮುದ್ರದ ಮೇಲಣ ಬಿರುಗಾಳಿಯನ್ನು ನಿಲ್ಲಿಸಿದ್ದು.

(ಮತ್ತಾಯ 8, 18. 23—27; ಮಾರ್ಕ 4, 35—41.)

22 ಒಂದಾನೊಂದು ದಿನದಲ್ಲಿ ಆತನು ತನ್ನ ಶಿಷ್ಯರ ಸಂಗಡ ಒಂದು ದೋಣಿಯನ್ನು ಹತ್ತಿ ಕೆರೆಯ ಆಚೇದಡಕ್ಕೆ ಹೋಗೋಣ ಎಂದು ಅವರಿಗೆ ಹೇಳಲು, ಅವರು ದೋಣಿ
23 ಯನ್ನು ನೀರಿನೊಳಗೆ ನೂಕಿ ಹೊರಟರು. ಅವರು ಹೋಗುತ್ತಿರುವಾಗ ಆತನಿಗೆ ನಿದ್ರೆ ಹತ್ತಿತು; ಅಷ್ಟರಲ್ಲಿ ಬಿರುಗಾಳಿ ಕೆರೆಯ ಮೇಲೆ ಬರಲು ದೋಣಿಯೊಳಗೆ ನೀರು ತುಂಬಿ

[1] ಲೂಕ ೧೧, ೩೩; ಮತ್ತಾಯ ೫, ೧೫.

ಕೊಂಡದರಿಂದ ಅವರು ಅಪಾಯಕ್ಕೆ ಗುರಿಯಾದರು. ಹೀಗಿರಲಾಗಿ ಅವರು ಆತನ 24
ಹತ್ತರ ಬಂದು—ಗುರುವೇ, ಗುರುವೇ, ಸಾಯುತ್ತೇವೆ ಎಂದು ಹೇಳಿ ಆತನನ್ನು ಎಬ್ಬಿಸಿ
ದರು. ಆಗ ಆತನು ಎದ್ದು ಗಾಳಿಯನ್ನೂ ಉಬ್ಬುವ ನೀರನ್ನೂ ಗದರಿಸಿದನು. ಗದರಿ
ಸಲು ಅವು ಸಿಂತವು, ಸಮಾಧಾನವಾಯಿತು. ತರುವಾಯ ಆತನು—ನಿಮ್ಮ ನಂಬಿಕೆ 25
ಎಲ್ಲಿ? ಎಂದು ಅವರನ್ನು ಕೇಳಿದನು. ಅವರಾದರೋ ಭಯಹಿಡಿದವರಾಗಿ—ಈತನು
ಯಾರಿರಬಹುದು? ಗಾಳಿಗೂ ನೀರಿಗೂ ಅಪ್ಪಣೆಕೊಡುತ್ತಾನೆ; ಅವು ಕೂಡ ಹೇಳಿದ
ಹಾಗೆ ಕೇಳುತ್ತವಲ್ಲಾ ಎಂದು ಒಬ್ಬರಿಗೊಬ್ಬರು ಮಾತಾಡಿಕೊಂಡು ಅತ್ಯಾಶ್ಚರ್ಯ
ಪಟ್ಟರು.

### ದೆವ್ವಗಳ ದಂಡಿನಿಂದ ಹಿಡಿಯಲ್ಪಟ್ಟವನನ್ನು ಕುರಿತದ್ದು.

(ಮತ್ತಾಯ 8, 28—34; ಮಾರ್ಕ 5, 1—20.)

ಆ ಮೇಲೆ ಅವರು ಗಲಿಲಾಯಕ್ಕೆ ಎದುರಾಗಿರುವ ಗೆರಸೇನರ ಸೀಮೆಗೆ ಮುಟ್ಟಿದರು. 26
ಆತನು ದಡಕ್ಕೆ ಇಳಿಯುತ್ತಲೇ ಆ ಊರಿನವನಾದ ಒಬ್ಬ ಮನುಷ್ಯನು ಆತನ ಎದುರಿಗೆ 27
ಬಂದನು. ಅವನಿಗೆ ದೆವ್ವಗಳು ಹಿಡಿದಿದ್ದವು. ಬಹುಕಾಲದಿಂದ ಬಟ್ಟೆಯನ್ನೇ ಹಾಕಿ
ಕೊಳ್ಳದೆ, ಯಾವ ಮನೆಯಲ್ಲಿಯೂ ಇರದೆ ಸಮಾಧಿಯ ಗವಿಗಳಲ್ಲಿಯೇ ಇರುತ್ತಿದ್ದನು.
ಇವನು ಯೇಸುವನ್ನು ಕಂಡು ಆರ್ಭಟಿಸಿ ಆತನ ಮುಂದೆ ಬಿದ್ದು ಮಹಾ ಶಬ್ದದಿಂದ— 28
ಯೇಸುವೇ, ಪರಾತ್ಪರನಾದ ದೇವರ ಮಗನೇ, ನನ್ನ ಗೊಡವೆ ನಿನಗ್ಯಾಕೆ? ನನ್ನನ್ನು
ಕಾಡಬೇಡವೆಂತ ನಿನ್ನನ್ನು ಬೇಡಿಕೊಳ್ಳುತ್ತೇನೆ ಅಂದನು. ಯಾಕಂದರೆ—ಈ ಮನುಷ್ಯ 29
ನನ್ನು ಬಿಟ್ಟುಹೋಗಬೇಕೆಂದು ಆತನು ಆ ದೆವ್ವಕ್ಕೆ ಅಪ್ಪಣೆಕೊಟ್ಟಿದ್ದನು. ಅದು ಬಹು
ಕಾಲದಿಂದ ಅವನನ್ನು ಹಿಡಿದಿತ್ತು; ಇದಲ್ಲದೆ, ಅವನನ್ನು ಕಾವಲಲ್ಲಿಟ್ಟು ಸರಪಣಿಗ
ಳಿಂದಲೂ ಬೇಡಿಗಳಿಂದಲೂ ಕಟ್ಟಿದ್ದರೂ, ಅವನು ಆ ಬಂಧಗಳನ್ನು ಮುರಿದುಹಾಕುತ್ತಿ
ದ್ದನು; ಮತ್ತು ಆ ದೆವ್ವ ಅವನನ್ನು ಅರಣ್ಯಪ್ರದೇಶಗಳಿಗೆ ಓಡಿಸುತ್ತಿತ್ತು. ಯೇಸು— 30
ನಿನ್ನ ಹೆಸರೇನೆಂದು ಅವನನ್ನು ಕೇಳಿದ್ದಕ್ಕೆ, ಅವನು—ನನ್ನ ಹೆಸರು ದಂಡು ಅಂದನು;
ಯಾಕಂದರೆ ಬಹಳ ದೆವ್ವಗಳು ಅವನೊಳಗೆ ಹೊಕ್ಕಿದ್ದವು. ಪಾತಾಳಕ್ಕೆ ಹೋಗಿಬಿಡು 31
ವಂತೆ ನಮಗೆ ಆಜ್ಞೆಮಾಡಬೇಡವೆಂದು ಅವು ಆತನನ್ನು ಬೇಡಿಕೊಂಡವು. ಅಲ್ಲಿಯ 32
ಗುಡ್ಡದಲ್ಲಿ ಬಹಳ ಹಂದಿಗಳದೊಂದು ಗುಂಪು ಮೇಯುತ್ತಿತ್ತು. ಹೀಗಿರಲಾಗಿ ಆ ದೆವ್ವ
ಗಳು—ಆ ಹಂದಿಗಳೊಳಗೆ ಸೇರಿಕೊಳ್ಳುವದಕ್ಕೆ ನಮಗೆ ಅಪ್ಪಣೆಯಾಗಬೇಕೆಂದು ಆತ
ನನ್ನು ಬೇಡಿಕೊಳ್ಳಲು, ಆತನು—ಹಾಗಾಗಲಿ ಎಂದು ಅವುಗಳಿಗೆ ಅಪ್ಪಣೆಕೊಟ್ಟನು.
ಆಗ ದೆವ್ವಗಳು ಆ ಮನುಷ್ಯನೊಳಗಿಂದ ಹೊರಕ್ಕೆ ಬಂದು ಹಂದಿಗಳೊಳಗೆ ಹೊಕ್ಕವು; 33
ಆ ಗುಂಪು ಓಡಿ ಕಡಿದಾದ ಸ್ಥಳದಿಂದ ಕೆರೆಯೊಳಗೆ ಬಿದ್ದು ಉಸುರುಕಟ್ಟಿಕೊಂಡು
ಸತ್ತಿತು. ಮೇಯಿಸಿದವರು ನಡೆದದ್ದನ್ನು ಕಂಡು ಓಡಿಹೋಗಿ ಆ ಊರಲ್ಲಿಯೂ ಹಳ್ಳಿ 34
ಗಳಲ್ಲಿಯೂ ಅದನ್ನು ತಿಳಿಸಲು, ಜನರು ನಡೆದ ಸಂಗತಿ ಏನೆಂದು ನೋಡುವದಕ್ಕೆ 35
ಹೊರಟು ಯೇಸುವಿನ ಬಳಿಗೆ ಬಂದು, ದೆವ್ವಗಳು ಬಿಟ್ಟುಹೋಗಿದ್ದ ಆ ಮನುಷ್ಯನು
ಬಟ್ಟೆಗಳನ್ನು ಹಾಕಿಕೊಂಡು ಸ್ವಸ್ಥಬುದ್ಧಿಯಿಂದ ಯೇಸುವಿನ ಪಾದಗಳ ಬಳಿಯಲ್ಲಿ

36 ಕೂತಿರುವದನ್ನು ಕಂಡು ಬೆರಗಾದರು. ನಡೆದ ಸಂಗತಿಯನ್ನು ನೋಡಿದ್ದವರು ದೆವ್ವ
37 ಹಿಡಿದವನಿಗೆ ಬಿಡುಗಡೆಯಾದ ರೀತಿಯನ್ನು ಅವರಿಗೆ ತಿಳಿಸಲು, ಗೆರಸೇನರ ಸುತ್ತಲಿರುವ
ಸೀಮೆಯವರಿಗೆಲ್ಲಾ ಮಹಾ ಭಯಹಿಡಿದದ್ದರಿಂದ, ಅವರು ಯೇಸುವನ್ನು—ನೀನು
ನಮ್ಮನ್ನು ಬಿಟ್ಟುಹೋಗಬೇಕೆಂದು ಬೇಡಿಕೊಂಡರು. ಆತನು ದೋಣಿಯನ್ನು ಹತ್ತಿ
38 ಹಿಂತಿರುಗಿ ಹೋದನು. ಹೊರಡುವಾಗ, ದೆವ್ವಗಳಿಂದ ಬಿಡುಗಡೆಯಾದ ಆ ಮನು
ಷ್ಯನು—ನಾನು ನಿನ್ನ ಬಳಿಯಲ್ಲಿಯೇ ಇರುತ್ತೇನೆ ಎಂದು ಆತನನ್ನು ಬೇಡಿಕೊಂಡಾಗ,
39 ಆತನು—ನೀನು ನಿನ್ನ ಮನೆಗೆ ಹಿಂತಿರುಗಿ ಹೋಗಿ, ದೇವರು ನಿನಗೆ ಎಂಥೆಂಥಾ ಉಪ
ಕಾರಗಳನ್ನು ಮಾಡಿದ್ದಾನೋ ಅದನ್ನೆಲ್ಲಾ ವಿವರವಾಗಿ ಹೇಳು ಎಂದು ಅವನನ್ನು ಕಳು
ಹಿಸಿಬಿಟ್ಟನು. ಅವನು ಹೊರಟುಹೋಗಿ ಯೇಸು ತನಗೆ ಮಾಡಿದ ಉಪಕಾರಗಳನ್ನು
ಆ ಊರಲ್ಲೆಲ್ಲಾ ಸಾರಿದನು.

### ಯೇಸು ಸತ್ತಹುಡುಗಿಯನ್ನು ಬದುಕಿಸಿದ್ದು; ಮತ್ತು ಒಬ್ಬ ಸ್ತ್ರೀಯ ರಕ್ತಕುಸುಮರೋಗವನ್ನು ವಾಸಿಮಾಡಿದ್ದು.

(ಮತ್ತಾಯ 9, 18—26; ಮಾರ್ಕ 5, 21—43.)

40 ಯೇಸು ಹಿಂತಿರುಗಿ ಬಂದಾಗ, ಜನರೆಲ್ಲರೂ ಆತನನ್ನು ಕಾದುಕೊಂಡಿದ್ದು ಸಂತೋ
41-42 ಷದಿಂದ ಸ್ವೀಕರಿಸಿದರು. ಆಗ ಸಭಾಮಂದಿರದ ಅಧಿಕಾರಿಯಾದ ಯಾಯಿರನೆಂಬ
ಒಬ್ಬ ಮನುಷ್ಯನು ಬಂದು ಯೇಸುವಿನ ಪಾದಗಳಿಗೆ ಬಿದ್ದನು. ಹೆಚ್ಚುಕಡಿಮೆ ಹನ್ನೆ
ರಡು ವರುಷದವಳಾದ ಅವನ ಒಬ್ಬಳೇ ಮಗಳು ಸಾಯುವವಳಾಗಿದ್ದ ಕಾರಣ ಆತನನ್ನು
ತನ್ನ ಮನೆಗೆ ಬರಬೇಕೆಂದು ಬೇಡಿಕೊಂಡನು. ಆತನು ಹೋಗುತ್ತಿರುವಲ್ಲಿ ಜನರು
ಗುಂಪುಗುಂಪಾಗಿ ಆತನನ್ನು ಇರಿಕಿಸುತ್ತಿದ್ದರು.
43 ಅಷ್ಟರೊಳಗೆ, ಹನ್ನೆರಡು ವರುಷದಿಂದ ರಕ್ತಕುಸುಮರೋಗವಿದ್ದ ಒಬ್ಬ ಹೆಂಗಸು
44 ಬಂದಳು. ಆಕೆಯು[1] ಒಬ್ಬರಿಂದಲೂ ಗುಣಹೊಂದಲಾರದೆ ಇದ್ದಳು. ಆಕೆಯು ಹಿಂದಿ
ನಿಂದ ಬಂದು ಆತನ ಉಡುಪಿನ ಗೊಂಡೆಯನ್ನು ಮುಟ್ಟಿದಳು; ಮುಟ್ಟುತ್ತಲೇ ಆಕೆಗೆ
45 ರಕ್ತಹರಿಯುವದು ನಿಂತಿತು. ಆಗ ಯೇಸು—ನನ್ನನ್ನು ಮುಟ್ಟಿದವರ್ಯಾರು ಎಂದು
ಕೇಳಿದನು. ಎಲ್ಲರು—ನಾನಲ್ಲ ನಾನಲ್ಲ ಅನ್ನಲು, ಪೇತ್ರನು[2]—ಗುರುವೇ ಎಷ್ಟೋ ಜನರು
46 ನಿನ್ನನ್ನು ಒತ್ತೊತ್ತಿ ಮೈಮೇಲೆ ಬೀಳುತ್ತಿದ್ದಾರಲ್ಲಾ ಅಂದನು. ಆದರೆ ಯೇಸು—ಯಾರೋ
ಒಬ್ಬರು ನನ್ನನ್ನು ಮುಟ್ಟಿದರು; ನನ್ನಿಂದ ಶಕ್ತಿಯು ಹೊರಟತೆಂಬುವದು ನನಗೆ ಗೊತ್ತಾ
47 ಯಿತು ಅಂದಾಗ, ಆ ಹೆಂಗಸು ತಾನು ಮರೆಯಾಗಿಲ್ಲವೆಂತ ತಿಳಿದು ನಡುಗುತ್ತಾ ಬಂದು
ಆತನಿಗೆ ಅಡ್ಡಬಿದ್ದು, ತಾನು ಇಂಥಾ ಕಾರಣದಿಂದ ಈತನನ್ನು ಮುಟ್ಟಿದೆನೆಂತಲೂ ಮುಟ್ಟಿದ
48 ಕೂಡಲೇ ತನಗೆ ವಾಸಿಯಾಯಿತೆಂತಲೂ ಎಲ್ಲಾ ಜನರ ಮುಂದೆ ತಿಳಿಸಿದಳು. ಆತನು
ಆಕೆಗೆ—ಮಗಳೇ ನಿನ್ನ ನಂಬಿಕೆಯೇ ನಿನ್ನನ್ನು ಸ್ವಸ್ಥಮಾಡಿತು; ಸಮಾಧಾನದಿಂದ ಹೋಗು
ಎಂದು ಹೇಳಿದನು.

---

[1] ಕೆಲವು ಪ್ರತಿಗಳಲ್ಲಿ—ಆಕೆಯು ತನ್ನ ಬದುಕನ್ನೆಲ್ಲಾ ವೈದ್ಯರಿಗೆ ಕೊಟ್ಟು ಕಳಕೊಂಡಾಗ್ಯೂ ಎಂದು ಬರೆದದೆ.
[2] ಕೆಲವು ಪ್ರತಿಗಳಲ್ಲಿ—ಪೇತ್ರನೂ ಅವನ ಸಂಗಡ ಇದ್ದವರೂ ಎಂದು ಬರೆದದೆ.

ಆತನು ಇನ್ನೂ ಮಾತಾಡುತ್ತಿರುವಲ್ಲಿ ಸಭಾಮಂದಿರದ ಅಧಿಕಾರಿಯ ಕಡೆಯವನೊ 49
ಬ್ಬನು ಬಂದು—ನಿನ್ನ ಮಗಳು ಸತ್ತಳು; ಗುರುವಿಗೆ ತೊಂದರೆ ಕೊಡಬೇಡ ಅಂದನು.
ಆದರೆ ಯೇಸು ಅದನ್ನು ಕೇಳಿ ಅವನಿಗೆ—ಹೆದರಬೇಡ, ನಂಬಿಕೆ ಒಂದೇ ಇರಲಿ, ಆಕೆ 50
ಬದುಕುವಳು ಎಂದು ಉತ್ತರಕೊಟ್ಟನು. ತರುವಾಯ ಆತನು ಆ ಮನೆಗೆ ಹೋಗಿ, 51
ಪೇತ್ರನು ಯೋಹಾನನು ಯಾಕೋಬನು ಆ ಹುಡುಗಿಯ ತಂದೆತಾಯಿಗಳು ಇಷ್ಟು
ಮಂದಿಯನ್ನೇ ಹೊರತು ಬೇರೆ ಯಾರನ್ನೂ ತನ್ನ ಸಂಗಡ ಒಳಕ್ಕೆ ಬರಗೊಡಿಸಲಿಲ್ಲ.
ಎಲ್ಲರು ಅಳುತ್ತಾ ಆಕೆಗೋಸ್ಕರ ಎದೆಬಡುಕೊಳ್ಳುತ್ತಾ ಇದ್ದರು. ಯೇಸು—ಅಳಬೇಡಿರಿ, 52
ಆಕೆ ಸತ್ತಿಲ್ಲ, ನಿದ್ದೆಮಾಡುತ್ತಾಳೆ ಅನ್ನಲಾಗಿ; ಜನರು ಆಕೆ ಸತ್ತಳೆಂದು ತಿಳಿದುಕೊಂಡದ 53
ರಿಂದ ಆತನನ್ನು ಹಾಸ್ಯಮಾಡಿದರು. ಆದರೆ ಆತನು ಆಕೆಯ ಕೈಯನ್ನು ಹಿಡಿದು— 54
ಅಮ್ಮಣ್ಣೀ, ಏಳು ಎಂದು ಕೂಗಿದನು. ಆಕೆಯ ಪ್ರಾಣ ತಿರಿಗಿ ಬಂದು, ತಕ್ಷಣವೇ 55
ಆಕೆ ಎದ್ದಳು. ತರುವಾಯ ಆತನು—ಈಕೆಗೆ ಊಟಾಮಾಡಿಸಿರಿ ಎಂದು ಅಪ್ಪಣೆ
ಕೊಟ್ಟನು. ಆಕೆಯ ತಂದೆತಾಯಿಗಳು ಬೆರಗಾದರು. ಆತನು—ಈ ನಡೆದ ಸಂಗತಿಯನ್ನು 56
ಯಾರಿಗೂ ತಿಳಿಸಬೇಡಿರೆಂದು ಖಂಡಿತವಾಗಿ ಹೇಳಿದನು.

### ಯೇಸು ಹನ್ನೆರಡು ಮಂದಿ ಶಿಷ್ಯರನ್ನು ಸುವಾರ್ತೆ ಸಾರುವದಕ್ಕೆ ಕಳುಹಿಸಿದ್ದು.

(ಮತ್ತಾಯ 10, 1. 5—14; ಮಾರ್ಕ 6, 7—13.)

**9** ಆತನು ಹನ್ನೆರಡು ಮಂದಿ ಶಿಷ್ಯರನ್ನು ಒಟ್ಟಿಗೆ ಕರೆದು ಅವರಿಗೆ ಎಲ್ಲಾ ದೆವ್ವಗಳನ್ನು
ಬಿಡಿಸುವ ಮತ್ತು ರೋಗಗಳನ್ನು ವಾಸಿಮಾಡುವ ಶಕ್ತಿ ಅಧಿಕಾರಗಳನ್ನು ಕೊಟ್ಟು,
ದೇವರ ರಾಜ್ಯದ ವಿಷಯವನ್ನು ಸಾರುವದಕ್ಕೂ ಅಸ್ವಸ್ಥರಾದವರನ್ನು ಸ್ವಸ್ಥಮಾಡುವ 2
ದಕ್ಕೂ ಅವರನ್ನು ಕಳುಹಿಸಿದನು. ಕಳುಹಿಸುವಾಗ ಅವರಿಗೆ ಹೇಳಿದ್ದೇನಂದರೆ—ದಾರಿಗೆ 3
ಏನೂ ತಕ್ಕೊಂಡುಹೋಗಬೇಡಿರಿ, ಕೋಲು ಬೇಡ, ಹಸಿಬೆ ಬೇಡ, ರೊಟ್ಟಿ ಬೇಡ, ಹಣ
ಬೇಡ; ನಿಮಗೆ ಎರಡಂಗಿಗಳಿರಬಾರದು. ಇದಲ್ಲದೆ ನೀವು ಯಾವ ಮನೆಯಲ್ಲಿ ಇಳು 4
ಕೊಂಡರೂ ಅಲ್ಲೇ ಇರ್ರಿ, ಅಲ್ಲಿಂದಲೇ ಹೊರಡಿರಿ. ಮತ್ತು ಯಾವ್ಯಾವ ಊರಿನವರು 5
ನಿಮ್ಮನ್ನು ಸೇರಿಸಿಕೊಳ್ಳದೆ ಹೋಗುತ್ತಾರೋ ಆ ಊರನ್ನು ನೀವು ಬಿಟ್ಟುಹೋಗುವಾಗ,
ನಿಮ್ಮ ಕಾಲಿಗೆ ಹತ್ತಿದ ಧೂಳನ್ನು ಝಾಡಿಸಿಬಿಡಿರಿ; ಅದು ಅವರಿಗೆ ವಿರೋಧವಾಗಿ
ಸಾಕ್ಷಿಯಾಗಿರಲಿ ಅಂದನು. ಆಗ ಅವರು ಹೊರಟುಹೋಗಿ ಎಲ್ಲೆಲ್ಲಿಯೂ ಸುವಾರ್ತೆ 6
ಯನ್ನು ಸಾರುತ್ತಾ ರೋಗಿಗಳಿಗೆ ವಾಸಿಮಾಡುತ್ತಾ ಗ್ರಾಮಗಳಲ್ಲೆಲ್ಲಾ ಸಂಚರಿಸಿದರು.

### ಅರಸನಾದ ಹೆರೋದನು ಯೇಸುವಿನ ಸುದ್ದಿಯನ್ನು ಕೇಳಿದ್ದು.

(ಮತ್ತಾಯ 14, 1—12; ಮಾರ್ಕ 6, 14—29.)

ಶಾಗಿ ಉಪರಾಜನಾದ ಹೆರೋದನು ನಡೆದ ಸಂಗತಿಗಳನ್ನೆಲ್ಲಾ ಕೇಳಿ ಬಹಳ 7
ನಳಪಡುವವನಾದನು. ಯಾಕಂದರೆ ಸತ್ತಿದ್ದ ಯೋಹಾನನು ತಿರಿಗಿ ಬದುಕಿ

8 ಬಂದಿದ್ದಾನೆಂದು ಕೆಲವರೂ, ಎಲೀಯನು ಕಾಣಿಸಿಕೊಂಡನೆಂದು ಕೆಲವರೂ, ಪೂರ್ವದ ಪ್ರವಾದಿಗಳಲ್ಲಿ ಯಾವನೋ ಒಬ್ಬನು ಎದ್ದಿದ್ದಾನೆಂದು ಕೆಲವರೂ ಹೇಳಿಕೊಳ್ಳುತ್ತಿದ್ದರು.
9 ಆದರೆ ಹೆರೋದನು—ಯೋಹಾನನನ್ನು ನಾನೇ ತಲೇಹೊಯ್ಸಿದೆನಷ್ಟೆ. ಇವನ್ಯಾರು? ಇವನ ವಿಷಯವಾಗಿ ಆಶ್ಚರ್ಯಕರವಾದ ಸಂಗತಿಗಳನ್ನು ಕೇಳುತ್ತೇನಲ್ಲಾ ಎಂದು ಹೇಳಿ ಅವನನ್ನು ನೋಡಬೇಕೆಂದು ಪ್ರಯತ್ನಿಸಿದನು.

### ಯೇಸು ಐದು ಸಾವಿರ ಜನರಿಗೆ ಊಟಮಾಡಿಸಿದ್ದು.

(ಮತ್ತಾಯ 14, 13—21; ಮಾರ್ಕ 6, 30—44; ಯೋಹಾನ 6, 1—13.)

10 ಅಪೊಸ್ತಲರು ಹಿಂತಿರುಗಿ ಬಂದು ತಾವು ಮಾಡಿದ್ದನ್ನೆಲ್ಲಾ ಯೇಸುವಿಗೆ ವಿವರವಾಗಿ ಹೇಳಲು, ಆತನು ಅವರನ್ನು ಬೆತ್ಸಾಯಿದವೆಂಬ ಊರಿಗೆ ಏಂಗಡವಾಗಿ ಕರಕೊಂಡು
11 ಹೋದನು. ಆದರೆ ಜನರ ಗುಂಪು ಇದನ್ನು ತಿಳಿದು ಆತನ ಹಿಂದೆ ಹೋಗಲು, ಆತನು ಅವರನ್ನು ಪ್ರೀತಿಯಿಂದ ಸ್ವೀಕರಿಸಿ, ದೇವರ ರಾಜ್ಯದ ವಿಷಯವಾಗಿ ಅವರ ಸಂಗಡ
12 ಮಾತಾಡಿ, ಕ್ಷೇಮ ಬೇಕಾದವರಿಗೆ ವಾಸಿಮಾಡಿದನು. ಅಷ್ಟರಲ್ಲಿ ಹೊತ್ತು ಇಳಿಯುತ್ತಾ ಬರಲು, ಆ ಹನ್ನೆರಡು ಮಂದಿ ಶಿಷ್ಯರು ಆತನ ಬಳಿಗೆ ಬಂದು—ಈ ಜನರಿಗೆ ಅಪ್ಪಣೆ ಕೊಡು; ಇವರು ಸುತ್ತಲಿರುವ ಹಳ್ಳಿಪಳ್ಳಿಗಳಿಗೆ ಹೋಗಿ ಇಳುಕೊಂಡು ಊಟಕ್ಕೆ ಬೇಕಾದ ಪದಾರ್ಥಗಳನ್ನು ದೊರಕಿಸಿಕೊಳ್ಳಲಿ; ನಾವು ಇಲ್ಲಿ ಅಡವಿಯ ಸ್ಥಳದಲ್ಲಿ ಇದ್ದೇವಲ್ಲಾ
13 ಎಂದು ಆತನಿಗೆ ಹೇಳಿದರು. ಆದರೆ ಆತನು—ನೀವೇ ಅವರಿಗೆ ಊಟಕ್ಕೆ ಕೊಡಿರಿ ಅನ್ನಲು, ಅವರು—ನಮ್ಮಲ್ಲಿ ಐದು ರೊಟ್ಟಿ ಎರಡು ಮೀನುಗಳು ಹೊರತು ಹೆಚ್ಚೇನೂ ಇಲ್ಲ; ನಾವು ಹೋಗಿ ಈ ಜನರಿಗೆಲ್ಲಾ ಆಹಾರವನ್ನು ಕೊಂಡುಕೊಳ್ಳಬೇಕು ಅನ್ನು
14 ತ್ತೀಯೋ? ಅಂದರು. ಗಂಡಸರೇ ಹೆಚ್ಚುಕಡಿಮೆ ಐದು ಸಾವಿರ ಮಂದಿಯಿದ್ದರು. ಆಗ ಆತನು ತನ್ನ ಶಿಷ್ಯರಿಗೆ—ಇವರನ್ನು ಒಂದೊಂದು ಪಙ್ತಿಗೆ ಐವತ್ತೈವತ್ತರಂತೆ ಕೂಡ್ರಿ
15, 16 ಸಿರಿ ಎಂದು ಹೇಳಲು, ಅವರು ಹಾಗೆಯೇ ಎಲ್ಲರನ್ನೂ ಕೂಡ್ರಿಸಿದರು. ಆ ಮೇಲೆ ಆತನು ಆ ಐದು ರೊಟ್ಟಿ ಎರಡು ಮೀನುಗಳನ್ನು ತೆಗೆದುಕೊಂಡು ಆಕಾಶದ ಕಡೆಗೆ ನೋಡಿ ಅವುಗಳನ್ನು ಆಶೀರ್ವದಿಸಿ ಮುರಿದು ಶಿಷ್ಯರ ಕೈಗೆ ಕೊಟ್ಟು—ಈ ಜನರ
17 ಗುಂಪಿಗೆ ಹಂಚಿರಿ ಅಂದನು. ಅವರೆಲ್ಲರು ಊಟಮಾಡಿ ತೃಪ್ತರಾದರು; ಉಳಿದ ತುಂಡುಗಳನ್ನು ಕೂಡಿಸಲಾಗಿ ಅವು ಹನ್ನೆರಡು ಪುಟ್ಟಿ ತುಂಬಾ ಆದವು.

### ಪೇತ್ರನು ಯೇಸುವನ್ನು ಕ್ರಿಸ್ತನೆಂದು ಅರಿಕೆಮಾಡಿದ್ದು; ಯೇಸು ತನ್ನ ಮರಣವನ್ನು ಮುಂತಿಳಿಸಿದ್ದು.

(ಮತ್ತಾಯ 16, 13—28; ಮಾರ್ಕ 8, 27—9, 1.)

18 ಒಂದಾನೊಂದು ದಿವಸ ಆತನು ಏಕಾಂತವಾಗಿ ಪ್ರಾರ್ಥನೆಮಾಡುತ್ತಿರುವಾಗ ಆತನ ಶಿಷ್ಯರು ಆತನ ಸಂಗಡ ಇದ್ದರು. ಆತನು ಅವರನ್ನು—ಜನರು ನನ್ನನ್ನು ಯಾರೆಂದು
19 ಹೇಳಿಕೊಳ್ಳುತ್ತಾರೆ ಎಂದು ಕೇಳಿದ್ದಕ್ಕೆ ಅವರು—ನಿನ್ನನ್ನು ಸ್ನಾನಿಕನಾದ ಯೋಹಾನನು

ಆನ್ನುತ್ತಾರೆ; ಕೆಲವರು ಎಲೀಯಸು ಅನ್ನುತ್ತಾರೆ; ಇನ್ನು ಕೆಲವರು ಪೂರ್ವದ ಪ್ರವಾದಿ
ಗಳಲ್ಲಿ ಯಾವನೋ ಒಬ್ಬನು ಎದ್ದಿದ್ದಾನೆ ಅನ್ನುತ್ತಾರೆ ಎಂದು ಹೇಳಿದರು. ಆತನು 20
ಅವರನ್ನು—ನೀವಾದರೋ ನನ್ನನ್ನು ಯಾರು ಅನ್ನುತ್ತೀರಿ ಎಂದು ಕೇಳಲಾಗಿ, ಪೇತ್ರನು—
ನೀನು ದೇವರಿಂದ ಬಂದ ಕ್ರಿಸ್ತನು ಎಂದು ಉತ್ತರಕೊಟ್ಟನು. ಆಗ ಆತನು—ಇದನ್ನು 21
ಯಾರಿಗೂ ಹೇಳಬೇಡಿರೆಂದು ಬಹು ಖಂಡಿತವಾಗಿ ಅವರಿಗೆ ಅಪ್ಪಣೆಕೊಟ್ಟು—ಮನುಷ್ಯ 22
ಕುಮಾರನು ಬಹು ಕಷ್ಟಗಳನ್ನನುಭವಿಸಿ, ಹಿರಿಯರಿಂದಲೂ ಮಹಾಯಾಜಕರಿಂದಲೂ
ಶಾಸ್ತ್ರಿಗಳಿಂದಲೂ ನಿರಾಕೃತನಾಗಿ ಕೊಲ್ಲಲ್ಪಟ್ಟು, ಮೂರನೇ ದಿನದಲ್ಲಿ ಜೀವಿತನಾಗಿ ಎದ್ದು
ಬರಬೇಕಾಗಿದೆ[1] ಎಂದು ಹೇಳಿದನು. ಇದಲ್ಲದೆ ಆತನು ಎಲ್ಲರಿಗೂ ಹೇಳಿದ್ದೇನಂದರೆ— 23
ನನ್ನ ಹಿಂದೆ ಬರುವದಕ್ಕೆ ಯಾವನಿಗಾದರೂ ಮನಸ್ಸಿದ್ದರೆ, ಅವನು ಜೀವದಾಶೆಯನ್ನು
ಬಿಟ್ಟು[2] ತನ್ನ ಶಿಲುಬೆಯನ್ನು ದಿನಾಲೂ ಹೊತ್ತುಕೊಂಡು ನನ್ನ ಹಿಂದೆ ಬರಲಿ. ತನ್ನ 24
ಪ್ರಾಣವನ್ನು ಉಳಿಸಿಕೊಳ್ಳಬೇಕೆಂದಿರುವವನು ಅದರ ನಷ್ಟಪಡುವನು; ಆದರೆ ನನ್ನ
ನಿಮಿತ್ತವಾಗಿ ತನ್ನ ಪ್ರಾಣದ ನಷ್ಟಪಡುವವನು ಅದನ್ನು ಉಳಿಸಿಕೊಳ್ಳುವನು. ಒಬ್ಬ 25
ಮನುಷ್ಯನು ಲೋಕವನ್ನೆಲ್ಲಾ ಸಂಪಾದಿಸಿಕೊಂಡರೂ ತನ್ನನ್ನೇ ನಷ್ಟಪಡಿಸಿಕೊಂಡರೆ
ಅಥವಾ ಕೆಡಿಸಿಕೊಂಡರೆ ಅವನಿಗೇನು ಪ್ರಯೋಜನ? ಯಾವನು ನನಗೂ ನನ್ನ ಮಾತು 26
ಗಳಿಗೂ ನಾಚಿಕೊಳ್ಳುತ್ತಾನೋ ಅವನಿಗೆ ಮನುಷ್ಯಕುಮಾರನು ತನಗೂ ತನ್ನ ತಂದೆಗೂ
ಪರಿಶುದ್ಧ ದೂತರಿಗೂ ಇರುವ ಮಹಿಮೆಯಿಂದ ಕೂಡಿದವನಾಗಿ ಬರುವಾಗ ನಾಚಿ
ಕೊಳ್ಳುವನು. ಇಲ್ಲಿ ನಿಂತವರೊಳಗೆ ಕೆಲವರು ದೇವರ ರಾಜ್ಯವನ್ನು ನೋಡುವ ತನಕ 27
ಮರಣಹೊಂದುವದಿಲ್ಲವೆಂದು ನಿಮಗೆ ಸತ್ಯವಾಗಿ ಹೇಳುತ್ತೇನೆ ಅಂದನು.

### ಯೇಸು ಪ್ರಕಾಶರೂಪದಿಂದ ಕಾಣಿಸಿಕೊಂಡದ್ದು.

(ಮತ್ತಾಯ 17, 1—8; ಮಾರ್ಕ 9, 2—8.)

ಯೇಸು ಈ ಮಾತುಗಳನ್ನು ಹೇಳಿ ಸುಮಾರು ಎಂಟು ದಿವಸಗಳಾದ ಮೇಲೆ, 28
ಪೇತ್ರ ಯೋಹಾನ ಯಾಕೋಬರನ್ನು ಕರಕೊಂಡು ಪ್ರಾರ್ಥನೆಮಾಡುವದಕ್ಕೆ ಬೆಟ್ಟ
ವನ್ನು ಹತ್ತಿದನು. ಆತನು ಪ್ರಾರ್ಥನೆಮಾಡುತ್ತಿರಲಾಗಿ, ಆತನ ಮುಖಭಾವವು ಬೇರೆ 29
ಯಾಯಿತು. ಆತನ ಉಡುಪು ಬೆಳ್ಳಗಾಗಿ ಮಿಂಚುತ್ತಾ ಬಂತು. ಇದಲ್ಲದೆ ಇಬ್ಬರು 30
ಪುರುಷರು ಯೇಸುವಿನ ಸಂಗಡ ಸಂಭಾಷಣೆ ಮಾಡುತ್ತಿದ್ದರು. ಇವರು ಯಾರಂದರೆ
ಮೋಶೆಯೂ ಎಲೀಯನೂ. ಇವರು ವೈಭವದೊಡನೆ ಕಾಣಿಸಿಕೊಂಡು ಯೆರೂಸ 31
ಲೇಮಿನಲ್ಲಿ ಆತನು ನೆರವೇರಿಸಬೇಕಾಗಿದ್ದ ಮರಣದ ವಿಷಯವಾಗಿ ಮಾತಾಡುತ್ತಿ
ದ್ದರು. ಇಷ್ಟರಲ್ಲಿ ಪೇತ್ರನಿಗೂ ಅವನ ಸಂಗಡ ಇದ್ದವರಿಗೂ ನಿದ್ರೆಯಿಂದ ಮೈಭಾರ 32
ವಾಗಿತ್ತು. ಆದರೆ ಎಚ್ಚರವಾದ ಮೇಲೆ ಅವರು ಆತನ ಮಹಿಮೆಯನ್ನೂ ಆತನ ಸಂಗಡ
ನಿಂತಿದ್ದ ಆ ಇಬ್ಬರು ಪುರುಷರನ್ನೂ ಕಂಡರು. ಇವರು ಆತನನ್ನು ಬಿಟ್ಟುಹೋಗುತ್ತಿರು 33
ವಾಗ ಪೇತ್ರನು ಯೇಸುವಿಗೆ—ಗುರುವೇ ನಾವು ಇಲ್ಲೇ ಇರುವದು ಒಳ್ಳೇದು, ಮೂರು

[1] ಹೋಶೇಯ ೬, ೨.

[2] ಅಥವಾ, ತನ್ನನ್ನು ತ್ಯಜಿಸಿ.

ಪರ್ಣಶಾಲೆಗಳನ್ನು ಕಟ್ಟುವೆವು; ನಿನಗೊಂದು ಮೋಶೆಗೊಂದು ಎಲೀಯನಿಗೊಂದು
34 ಎಂದು ಹೇಳಿದನು. ತಾನಂದದ್ದು ತನಗೇ ಗೊತ್ತಾಗಲಿಲ್ಲ. ಅವನು ಇದನ್ನು ಹೇಳು
ತ್ತಿರುವಲ್ಲಿ ಮೋಡವು ಬಂದು ಅವರ ಮೇಲೆ ಕವಿಯಿತು. ಅವರು ಮೋಡದೊಳಗೆ
35 ಸೇರಿದಾಗ ಹೆದರಿದರು. ಆಗ ಆ ಮೋಡದೊಳಗಿಂದ—ಈತನು ನನ್ನ ಮಗನು, ನಾನು
36 ಆರಿಸಿಕೊಂಡವನು; ಈತನ ಮಾತನ್ನು ಕೇಳಿರಿ ಎಂಬ ವಾಣಿ ಆಯಿತು. ಆ ವಾಣಿ ಆದ
ಮೇಲೆ ಯೇಸುವನ್ನು ಮಾತ್ರ ಕಂಡರು. ತಾವು ಕಂಡ ಈ ಸಂಗತಿಗಳೊಳಗೆ ಒಂದನ್ನಾ
ದರೂ ಆ ದಿವಸಗಳಲ್ಲಿ ಯಾರಿಗೂ ತಿಳಿಸದೆ ಸುಮ್ಮನಿದ್ದರು.

### ಯೇಸು ಅಪಸ್ಮಾರರೋಗಿಯನ್ನು ಸ್ವಸ್ಥಮಾಡಿದ್ದು.

(ಮತ್ತಾಯ 17, 14—18; ಮಾರ್ಕ 9, 14—27.)

37 ಮರುದಿವಸ ಅವರು ಬೆಟ್ಟದಿಂದ ಇಳಿದು ಬರಲು ಬಹು ಜನರು ಆತನೆದುರಿಗೆ ಬಂದರು.
38 ಆಗ ಆ ಜನರಲ್ಲಿ ಒಬ್ಬನು—ಬೋಧಕನೇ ನನ್ನ ಮಗನ ಮೇಲೆ ದೃಷ್ಟಿಯಿಡಬೇಕು
39 ಎಂದು ನಿನ್ನನ್ನು ಬೇಡಿಕೊಳ್ಳುತ್ತೇನೆ. ನನಗೆ ಇವನೊಬ್ಬನೇ ಮಗನು. ಇವನನ್ನು
ದೆವ್ವ ಹಿಡಿಯುತ್ತದೆ, ಹಿಡಿಯುತ್ತಲೇ ಕೂಗಿಕೊಳ್ಳುತ್ತಾನೆ. ಬಾಯಲ್ಲಿ ನೊರೆಬರುವಷ್ಟು
ಇವನನ್ನು ಒದ್ದಾಡಿಸುತ್ತದೆ; ಮತ್ತು ಬಹು ಕಷ್ಟಕೊಟ್ಟು ಜಜ್ಜಿದ ಹೊರತು ಬಿಡುವದಿಲ್ಲ.
40 ಅದನ್ನು ಬಿಡಿಸಬೇಕೆಂದು ನಿನ್ನ ಶಿಷ್ಯರನ್ನು ಬೇಡಿಕೊಂಡೆನು. ಆದರೆ ಅವರಿಂದ ಆಗದೆ
41 ಹೋಯಿತು ಎಂದು ಕೂಗಿ ಹೇಳಿದನು. ಅದಕ್ಕೆ ಯೇಸು—ಎಲಾ ನಂಬಿಕೆಯಿಲ್ಲದಂಥಾ
ಮೂರ್ಖಜಾತಿಯೇ, ನಾನು ಇನ್ನೆಷ್ಟು ದಿನ ನಿಮ್ಮ ಸಂಗಡ ಇದ್ದು ನಿಮ್ಮನ್ನು ಸಹಿಸಿ
42 ಕೊಳ್ಳಲಿ? ನಿನ್ನ ಮಗನನ್ನು ಇಲ್ಲಿಗೆ ತೆಗೆದುಕೊಂಡು ಬಾ ಅಂದನು. ಆ ಹುಡುಗನು
ಇನ್ನೂ ಬರುತ್ತಿರುವಾಗ, ಆ ದೆವ್ವವು ಅವನನ್ನು ನೆಲಕ್ಕೆ ಅಪ್ಪಳಿಸಿ ಬಹಳವಾಗಿ ಒದ್ದಾಡಿ
ಸಿತು. ಆದರೆ ಯೇಸು ಆ ದೆವ್ವವನ್ನು ಗದರಿಸಿ, ಆ ಹುಡುಗನಿಗೆ ವಾಸಿಮಾಡಿ,
43 ಅವನ ತಂದೆಯ ಕೈಗೆ ಕೊಟ್ಟನು. ಅದನ್ನು ನೋಡಿ ಎಲ್ಲರು ದೇವರ ಮಹತ್ವಕ್ಕೆ
ಬೆರಗಾದರು.

### ಯೇಸು ತನ್ನ ಮರಣವನ್ನು ಎರಡನೇ ಸಾರಿ ಮುಂತಿಳಿಸಿದ್ದು.

(ಮತ್ತಾಯ 17, 22—23; ಮಾರ್ಕ 9, 30—32.)

ಯೇಸು ಮಾಡಿದ ಎಲ್ಲಾ ಕಾರ್ಯಗಳಿಗೆ ಎಲ್ಲರು ಆಶ್ಚರ್ಯಪಡುತ್ತಿರಲಾಗಿ, ಆತನು
44 ತನ್ನ ಶಿಷ್ಯರಿಗೆ—ನೀವಂತೂ ಈ ಮಾತುಗಳನ್ನು ನಿಮ್ಮ ಮನಸ್ಸಿನಲ್ಲಿ ಇಟ್ಟುಕೊಳ್ಳಿರಿ;
ಯಾಕಂದರೆ, ಮನುಷ್ಯಕುಮಾರನು ಮನುಷ್ಯರ ಕೈಗೆ ಒಪ್ಪಿಸಲ್ಪಡುವನು ಎಂದು
45 ಹೇಳಿದನು. ಅವರು ಆ ಮಾತನ್ನು ಗ್ರಹಿಸಲಿಲ್ಲ; ಅದು ಅವರಿಗೆ ಮರೆಯಾದದರಿಂದ
ಅದರ ಅರ್ಥವನ್ನು ಅವರು ತಿಳಿಯದೆಹೋದರು. ಆ ಮಾತಿನ ವಿಷಯದಲ್ಲಿ ಅವರು
ಆತನನ್ನು ಕೇಳುವದಕ್ಕೆ ಅಂಜಿದರು.

ಯೇಸು ತನ್ನ ಶಿಷ್ಯರಲ್ಲಿ ನಮ್ರತೆಯುಳ್ಳವನೇ ದೊಡ್ಡವನೆಂದು ತೋರಿಸಿದ್ದು.

(ಮತ್ತಾಯ 18, 1—5; ಮಾರ್ಕ 9, 33—37.)

ತರುವಾಯ ಶಿಷ್ಯರೊಳಗೆ—ತಮ್ಮಲ್ಲಿ ಯಾವನು ಹೆಚ್ಚಿನವನಾಗುವನು ಎಂಬ ವಿಚಾರ 46 ಹುಟ್ಟಿತು. ಯೇಸು ಅವರ ಮನಸ್ಸಿನ ವಿಚಾರವನ್ನು ತಿಳಿದು, ಒಂದು ಚಿಕ್ಕ ಮಗು 47 ವನ್ನು ಹಿಡಿದುಕೊಂಡು ತನ್ನ ಬಳಿಯಲ್ಲಿ ನಿಲ್ಲಿಸಿ, ಅವರಿಗೆ—ಯಾವನಾದರೂ ನನ್ನನ್ನು 48 ನೆನಸಿ ಈ ಚಿಕ್ಕ ಮಗುವನ್ನು ಸೇರಿಸಿಕೊಂಡರೆ ನನ್ನನ್ನು ಸೇರಿಸಿಕೊಂಡಹಾಗಾಯಿತು; ಮತ್ತು ಯಾವನಾದರೂ ನನ್ನನ್ನು ಸೇರಿಸಿಕೊಂಡರೆ ನನ್ನ ಕಳುಹಿಸಿದಾತನನ್ನು ಸೇರಿಸಿ ಕೊಂಡಹಾಗಾಯಿತು; ಯಾಕಂದರೆ ನಿಮ್ಮೆಲ್ಲರಲ್ಲಿ ಯಾವನು ಚಿಕ್ಕವನೋ ಅವನೇ ದೊಡ್ಡವನು ಎಂದು ಹೇಳಿದನು.

ಯೇಸುವಿನ ಶಿಷ್ಯರನ್ನು ಎದುರಿಸದವರು ಅವರ ಪಕ್ಷದವರಾಗಿದ್ದಾರೆಂಬುವ ಬೋಧೆ.

(ಮಾರ್ಕ 9, 38—40.)

ಅದಕ್ಕೆ ಯೋಹಾನನು—ಗುರುವೇ, ಯಾವನೋ ಒಬ್ಬನು ನಿನ್ನ ಹೆಸರನ್ನು ಹೇಳಿ 49 ದೆವ್ವಬಿಡಿಸುವದನ್ನು ನಾವು ಕಂಡು, ಅವನು ನಮಗೆ ಸೇರಿದವನಲ್ಲವಾದ್ದರಿಂದ ಅವನಿಗೆ ಅಡ್ಡಿಮಾಡಿದೆವು ಅನ್ನಲು, ಯೇಸು ಅವನಿಗೆ—ಅಡ್ಡಿಮಾಡಬೇಡಿರಿ; ನಿಮ್ಮನ್ನು ಎದುರಿಸ 50 ದವನು ನಿಮ್ಮ ಪಕ್ಷದವನೇ ಎಂದು ಹೇಳಿದನು.

ಯೇಸು ಯೆರೂಸಲೇಮಿಗೆ ಹೋಗುವಾಗ ಆತನನ್ನು ಸಮಾರ್ಯರು ಸೇರಿಸಿಕೊಳ್ಳದೆ ಹೋದದ್ದು.

ಯೇಸು ತಾನು ಪರಲೋಕವನ್ನೇರುವ ದಿವಸಗಳು ತುಂಬುತ್ತಾ ಬರುವಾಗ, ಯೆರೂ 51 ಸಲೇಮಿಗೆ ಹೋಗುವದಕ್ಕೆ ಮನಸ್ಸನ್ನು ದೃಢಮಾಡಿಕೊಂಡು, ತನ್ನ ಮುಂದಾಗಿ ದೂತ 52 ರನ್ನು ಕಳುಹಿಸಿದನು. ಇವರು ಹೊರಟು ಆತನಿಗೆ ಬೇಕಾದದ್ದನ್ನು ಸಿದ್ಧಮಾಡುವದ ಕ್ಕಾಗಿ ಸಮಾರ್ಯದವರ ಒಂದು ಹಳ್ಳಿಗೆ ಬಂದರು. ಆದರೆ ಆತನು ಯೆರೂಸಲೇಮಿಗೆ 53 ಹೋಗುವವನಾದದರಿಂದ, ಆ ಸಮಾರ್ಯದವರು ಆತನನ್ನು ಸೇರಿಸಿಕೊಳ್ಳಲಿಲ್ಲ. ಆತನ 54 ಶಿಷ್ಯರಾದ ಯಾಕೋಬ ಯೋಹಾನರು ಇದನ್ನು ಕಂಡು—ಸ್ವಾಮಿಾ, ಆಕಾಶದಿಂದ ಬೆಂಕಿ ಬಿದ್ದು ಇವರನ್ನು ನಾಶಮಾಡಲಿ ಎಂದು ನಾವು[1] ಹೇಳುವದಕ್ಕೆ ನಿನಗೆ ಮನ ಸ್ಸುಂಟೋ ಎಂದು ಕೇಳಲು, ಆತನು ತಿರುಗಿಕೊಂಡು ಅವರನ್ನು ಗದರಿಸಿದನು[2]. ಆಗ 55-56 ಅವರೆಲ್ಲರು ಬೇರೆ ಹಳ್ಳಿಗೆ ಹೋದರು.

---

[1] ಕೆಲವು ಪ್ರತಿಗಳಲ್ಲಿ—ಎಲೀಯನು ಹೇಳಿದಂತೆ ನಾವೂ ಎಂದು ಬರೆದದೆ. ೨ ಅರಸು ೧, ೧೦. ೧೨ ನೋಡಿರಿ.

[2] ಕೆಲವು ಪ್ರತಿಗಳಲ್ಲಿ—ಗದರಿಸಿ ಹೇಳಿದ್ದೇನಂದರೆ, ನೀವೆಂಥಾ ಆತ್ಮಕ್ಕೆ ಅಧೀನರಾದಿರೆಂದು ನಿಮಗೆ ತಿಳಿಯದು; ಷ್ಯಕುಮಾರನು ಮನುಷ್ಯರ ಪ್ರಾಣಗಳನ್ನು ನಾಶಮಾಡುವದಕ್ಕೆ ಬಂದವನಲ್ಲ, ರಕ್ಷಿಸುವದಕ್ಕೇ ಬಂದವನು ಎಂದು ತೆ.

ತನ್ನ ಶಿಷ್ಯರು ದೇವರ ಸೇವೆಗೆ ಮೊದಲಾಗಿ ಬೇರೆ ಯಾವದನ್ನೂ ಚಿಂತಿಸಕೂಡದೆಂದು ಯೇಸು ಬೋಧಿಸಿದ್ದು.

(ಮತ್ತಾಯ 8, 19—22.)

57 ಅವರು ದಾರಿಯಲ್ಲಿ ಹೋಗುತ್ತಿರುವಾಗ, ಯಾವನೋ ಒಬ್ಬನು ಯೇಸುವಿಗೆ—
58 ನೀನು ಎಲ್ಲಿಗೆ ಹೋದರೂ ನಾನು ನಿನ್ನ ಹಿಂದೆ ಬರುತ್ತೇನೆ ಎಂದು ಹೇಳಲು, ಆತನು ಅವನಿಗೆ—ನರಿಗಳಿಗೆ ಗುದ್ದುಗಳವೆ, ಆಕಾಶದಲ್ಲಿ ಹಾರ್ಯಾಡುವ ಹಕ್ಕಿಗಳಿಗೆ ಗೂಡುಗಳವೆ; ಆದರೆ ಮನುಷ್ಯಕುಮಾರನಿಗೆ ತಲೆಯಿಡುವಷ್ಟು ಸ್ಥಳವೂ ಇಲ್ಲ ಎಂದು ಹೇಳಿದನು.
59 ಆತನು ಮತ್ತೊಬ್ಬನಿಗೆ—ನನ್ನನ್ನು ಹಿಂಬಾಲಿಸು ಎಂದು ಹೇಳಲು, ಅವನು—ಸ್ವಾಮಿ, ನಾನು ಹೋಗಿ ಮೊದಲು ನನ್ನ ತಂದೆಯ ಉತ್ತರಕ್ರಿಯೆಗಳನ್ನು ಮಾಡಿ ಬರುವಂತೆ ನನಗೆ
60 ಅಪ್ಪಣೆಯಾಗಬೇಕು ಅಂದನು. ಆದರೆ ಆತನು ಅವನಿಗೆ—ಸತ್ತವರೇ ತಮ್ಮವರಲ್ಲಿ ಸತ್ತುಹೋದವರ ಉತ್ತರಕ್ರಿಯೆಗಳನ್ನು ಮಾಡಲಿ, ನೀನಂತೂ ದೇವರ ರಾಜ್ಯವನ್ನು
61 ಪ್ರಸಿದ್ಧಿ ಪಡಿಸು ಎಂದು ಹೇಳಿದನು. ಇನ್ನೊಬ್ಬನು ಸಹ—ಸ್ವಾಮಿ, ನಿನ್ನನ್ನು ಹಿಂಬಾಲಿಸುತ್ತೇನೆ; ಆದರೆ ಮೊದಲು ನನ್ನ ಮನೆಯವರಿಗೆ ಹೇಳಿ ಬರುವದಕ್ಕೆ ನನಗೆ ಅಪ್ಪಣೆ
62 ಯಾಗಬೇಕು ಅಂದನು. ಯೇಸು ಅವನಿಗೆ—ಯಾವನಾದರೂ ನೇಗಿಲಿನ ಮೇಲೆ ತನ್ನ ಕೈಯನ್ನು ಹಾಕಿ ಹಿಂದಕ್ಕೆ ನೋಡಿದರೆ, ಅವನು ದೇವರ ರಾಜ್ಯಕ್ಕೆ ತಕ್ಕವನಲ್ಲವೆಂದು ಹೇಳಿದನು.

ಯೇಸು ಎಪ್ಪತ್ತು ಮಂದಿ ಶಿಷ್ಯರನ್ನು ಸುವಾರ್ತೆ ಸಾರುವದಕ್ಕೆ ಕಳುಹಿಸಿದ್ದು;
ಅವರು ಹಿಂತಿರುಗಿ ಬಂದು ತಾವು ಮಾಡಿದ್ದನ್ನು ತಿಳಿಸಿದ್ದು.

(ಮತ್ತಾಯ 9, 37. 38; 10, 7—16; 11, 25—27.)

**10** ಇದಾದ ಮೇಲೆ ಸ್ವಾಮಿಯು ಇನ್ನೂ ಎಪ್ಪತ್ತು[1] ಮಂದಿಯನ್ನು ನೇಮಿಸಿ, ಅವರನ್ನು ಇಬ್ಬಿಬ್ಬರಾಗಿ ತಾನು ಹೋಗಬೇಕೆಂದಿದ್ದ ಪ್ರತಿಯೊಂದೂರಿಗೂ ಪ್ರತಿಯೊಂದು ಸ್ಥಳಕ್ಕೂ
2 ಮುಂದಾಗಿ ಕಳುಹಿಸಿದನು. ಕಳುಹಿಸುವಾಗ ಅವರಿಗೆ ಹೇಳಿದ್ದೇನಂದರೆ—ಬೆಳೆಯು ಬಹಳ, ಕೆಲಸದವರು ಸ್ವಲ್ಪ; ಆದದರಿಂದ ಬೆಳೇ ಯಜಮಾನನನ್ನು—ನಿನ್ನ ಬೆಳೆಗೆ ಕೆಲಸ
3 ದವರನ್ನು ಕಳುಹಿಸಬೇಕೆಂದು ಬೇಡಿಕೊಳ್ಳಿರಿ. ಹೋಗಿರಿ; ತೋಳಗಳ ನಡುವೆ ಕುರಿ
4 ಗಳನ್ನು ಹೊಗಿಸಿದಂತೆ ನಾನು ನಿಮ್ಮನ್ನು ಕಳುಹಿಸುತ್ತೇನೆ ನೋಡಿರಿ. ಹಮ್ಮಿಣಿಯನ್ನಾಗಲಿ ಹಸಿಬೆಯನ್ನಾಗಲಿ ಕೆರಗಳನ್ನಾಗಲಿ ತೆಗೆದುಕೊಂಡು ಹೋಗಬೇಡಿರಿ; ದಾರಿಯಲ್ಲಿ
5 ಯಾರಿಗೂ ವಂದಿಸಬೇಡಿರಿ. ಇದಲ್ಲದೆ ನೀವು ಯಾವ ಮನೆಯಲ್ಲಿ ಇಳುಕೊಂಡರೂ—
6 ಈ ಮನೆಗೆ ಶುಭವಾಗಲಿ ಎಂದು ಮೊದಲು ಹೇಳಿರಿ. ಆಶೀರ್ವಾದಪಾತ್ರನು ಅಲ್ಲಿ ಇದ್ದರೆ, ನಿಮ್ಮ ಆಶೀರ್ವಾದವು ಅವನ ಮೇಲೆ ನಿಲ್ಲುವದು; ಇಲ್ಲದಿದ್ದರೆ ಅದು ನಿಮಗೆ
7 ಹಿಂತಿರುಗುವದು. ಆ ಮನೆಯಲ್ಲಿಯೇ ಇದ್ದುಕೊಂಡು ಅವರು ಕೊಡುವಂಥಾದ್ದನ್ನು ಊಟಮಾಡಿರಿ, ಕುಡಿಯಿರಿ. ದುಡಿಯುವವನು ತನ್ನ ಕೂಲಿಗೆ ಯೋಗ್ಯನಾಗಿದ್ದಾನಷ್ಟೆ.
8 ಒಂದು ಮನೆಯನ್ನು ಬಿಟ್ಟು ಮತ್ತೊಂದು ಮನೆಗೆ ಹೋಗಿ ಇಳುಕೊಳ್ಳಬೇಡಿರಿ. ಮತ್ತು

[1] ಇಲ್ಲಿಯೂ ೧೭ನೇ ವಚನದಲ್ಲಿಯೂ ಕೆಲವು ಪ್ರತಿಗಳೊಳಗೆ—ಎಪ್ಪತ್ತೆರಡು ಎಂದು ಬರೆದದೆ.

ನೀವು ಯಾವ ಊರಿಗಾದರೂ ಹೋದ ಮೇಲೆ ಆ ಜನರು ನಿಮ್ಮನ್ನು ಸೇರಿಸಿಕೊಂಡರೆ,
ಅವರು ನಿಮಗೆ ಬಡಿಸಿದ್ದನ್ನು ಊಟಮಾಡಿರಿ. ಅಲ್ಲಿರುವ ರೋಗಿಗಳಿಗೆ ವಾಸಿಮಾಡಿ 9
ಅವರಿಗೆ—ದೇವರ ರಾಜ್ಯವು ನಿಮ್ಮ ಸವಿಾಪಕ್ಕೆ ಬಂದದೆ ಎಂದು ಹೇಳಿರಿ. ಆದರೆ ನೀವು 10
ಯಾವ ಊರಿಗಾದರೂ ಹೋದ ಮೇಲೆ ಆ ಜನರು ನಿಮ್ಮನ್ನು ಸೇರಿಸಿಕೊಳ್ಳದಿದ್ದರೆ, ನೀವು
ಆ ಊರ ಬೀದಿಗಳಿಗೆ ಬಂದು—ನಿಮ್ಮ ಊರಿಂದ ನಮ್ಮ ಕಾಲುಗಳಿಗೆ ಹತ್ತಿದ ಧೂಳನ್ನೂ 11
ಒರಸಿಬಿಡುತ್ತೇವೆ; ಅದು ನಿಮಗೇ ಇರಲಿ; ಆದಾಗ್ಯೂ ದೇವರ ರಾಜ್ಯವು ಸವಿಾಪಕ್ಕೆ
ಬಂದದೆ ಎಂದು ನಿಮಗೆ ತಿಳಿದಿರಲಿ ಎಂಬದಾಗಿ ಹೇಳಿರಿ. ಆ ದಿವಸದಲ್ಲಿ ಅಂಥಾ 12
ಊರಿನ ಗತಿಗಿಂತಲೂ ಸೊದೋಮೂರಿನ ಗತಿಯು ಮೇಲಾಗಿರುವದು ಎಂದು ನಿಮಗೆ
ಹೇಳುತ್ತೇನೆ. ಅಯ್ಯೋ ಖೊರಾಜಿನೇ, ಅಯ್ಯೋ ಬೆತ್ಸಾಯಿದವೇ, ನಿಮ್ಮಲ್ಲಿ ನಡೆದ 13
ಮಹತ್ಕಾರ್ಯಗಳು ತೂರ್ ಮತ್ತು ಸೀದೋನ್ ಪಟ್ಟಣಗಳಲ್ಲಿ ನಡೆದಿದ್ದರೆ, ಅಲ್ಲಿಯವರು
ಆಗಲೇ ಗೋಣೀತಟ್ಟು ಹೊದ್ದುಕೊಂಡು ಬೂದಿಯಲ್ಲಿ ಕೂತುಕೊಂಡು ದೇವರ ಕಡೆಗೆ
ತಿರುಗಿಕೊಳ್ಳುತ್ತಿದ್ದರು. ಹ್ಯಾಗೂ ನ್ಯಾಯವಿಚಾರಣೆಯಲ್ಲಿ ನಿಮ್ಮ ಗತಿಗಿಂತಲೂ ತೂರ್ 14
ಮತ್ತು ಸೀದೋನ್ ಪಟ್ಟಣಗಳ ಗತಿಯು ಮೇಲಾಗಿರುವದು. ಎಲಾ ಕಪೆರ್ನೌಮೇ, 15
ನೀನು ಪರಲೋಕಕ್ಕೆ ಏರಿಸಲ್ಪಡುವಿಯಾ? ಇಲ್ಲ, ಪಾತಾಳಕ್ಕೇ ಇಳಿಯುವಿ. ನಿಮ್ಮ 16
ಮಾತನ್ನು ಕೇಳುವವನು ನನ್ನ ಮಾತನ್ನು ಕೇಳುವವನಾಗಿದ್ದಾನೆ; ನಿಮ್ಮನ್ನು ಅಲಕ್ಷ್ಯ
ಮಾಡುವವನು ನನ್ನನ್ನು ಅಲಕ್ಷ್ಯಮಾಡುವವನಾಗಿದ್ದಾನೆ; ನನ್ನನ್ನು ಅಲಕ್ಷ್ಯಮಾಡು
ವವನು ನನ್ನ ಕಳುಹಿಸಿದಾತನನ್ನು ಅಲಕ್ಷ್ಯಮಾಡುವವನಾಗಿದ್ದಾನೆ ಅಂದನು.

ತರುವಾಯ ಆ ಎಪ್ಪತ್ತು ಮಂದಿಯು ಸಂತೋಷವುಳ್ಳವರಾಗಿ ಹಿಂತಿರುಗಿ ಬಂದು— 17
ಸ್ವಾಮಿಾ, ದೆವ್ವಗಳು ಕೂಡಾ ನಿನ್ನ ಹೆಸರನ್ನು ಕೇಳಿ ನಮಗೆ ಅಧೀನವಾಗುತ್ತವೆ ಅಂದರು.
ಆತನು ಅವರಿಗೆ—ಸೈತಾನನು ಸಿಡಿಲಿನಂತೆ ಆಕಾಶದಿಂದ ಬೀಳುವದನ್ನು ಕಂಡೆನು. 18
ನೋಡಿರಿ, ಹಾವುಗಳನ್ನೂ ಚೇಳುಗಳನ್ನೂ ವೈರಿಯ ಸಮಸ್ತ ಬಲವನ್ನೂ ತುಳಿಯುವ 19
ದಕ್ಕೆ ನಿಮಗೆ ಅಧಿಕಾರ ಕೊಟ್ಟಿದ್ದೇನೆ. ಯಾವದೂ ನಿಮಗೆ ಕೇಡುಮಾಡುವದೇ ಇಲ್ಲ.
ಆದಾಗ್ಯೂ ದೆವ್ವಗಳು ನಮಗೆ ಅಧೀನವಾಗಿವೆ ಎಂದು ಸಂತೋಷಪಡದೆ, ನಮ್ಮ ಹೆಸರು 20
ಗಳು ಪರಲೋಕದಲ್ಲಿ ಬರೆದಿರುತ್ತವೆ ಎಂದು ಸಂತೋಷಪಡಿರಿ ಎಂಬದಾಗಿ ಹೇಳಿದನು.

ಅದೇ ಗಳಿಗೆಯಲ್ಲಿ ಆತನು ಪವಿತ್ರಾತ್ಮನ ಪ್ರೇರಣೆಯಿಂದ ಉಲ್ಲಾಸಗೊಂಡು ಹೇಳಿದ್ದೇ 21
ನಂದರೆ—ತಂದೆಯೇ, ಪರಲೋಕ ಭೂಲೋಕಗಳ ಒಡೆಯನೇ, ನೀನು ಜ್ಞಾನಿಗಳಿಗೂ
ಬುದ್ಧಿವಂತರಿಗೂ ಈ ಮಾತುಗಳನ್ನು ಮರೆಮಾಡಿ ಬಾಲಕರಿಗೆ ಪ್ರಕಟಮಾಡಿದ್ದೀ ಎಂದು
ನಿನ್ನನ್ನು ಕೊಂಡಾಡುತ್ತೇನೆ. ಹೌದು, ತಂದೆಯೇ, ಹೀಗೆ ಮಾಡುವದೇ ನಿನ್ನ ದೃಷ್ಟಿಗೆ
ಒಳ್ಳೇದೆಂದು ತೋರಿದ್ದರಿಂದ ನಿನ್ನನ್ನು ಕೊಂಡಾಡುತ್ತೇನೆ. ನನ್ನ ತಂದೆಯು ಎಲ್ಲವನ್ನೂ 22
ನನಗೆ ಒಪ್ಪಿಸಿದ್ದಾನೆ. ಮಗನು ಇಂಥವನೆಂದು ತಂದೆಯಲ್ಲದೆ ಇನ್ನ್ಯಾವನೂ ತಿಳಿದವ
ನಲ್ಲ; ತಂದೆ ಇಂಥವನೆಂದು ಮಗನಲ್ಲದೆ ಇನ್ನ್ಯಾವನೂ ತಿಳಿದವನಲ್ಲ; ಮತ್ತು ಮಗನು
ತಂದೆಯನ್ನು ಯಾರಿಗೆ ಪ್ರಕಟಿಸುವದಕ್ಕೆ ಮನಸ್ಸುಳ್ಳವನಾಗಿದ್ದಾನೋ ಅವನೂ ಆತನನ್ನು
ತಿಳಿದವನಾಗಿದ್ದಾನೆ ಅಂದನು. ಆ ಮೇಲೆ ಆತನು ಶಿಷ್ಯರ ಕಡೆಗೆ ತಿರುಗಿಕೊಂಡು ಏಂಗ 23
ಡವಾಗಿ ಹೇಳಿದ್ದೇನಂದರೆ—ನೀವು ನೋಡುವ ಸಂಗತಿಗಳನ್ನು ನೋಡುವವರು ಧನ್ಯರು.

24 ಬಹುಮಂದಿ ಪ್ರವಾದಿಗಳೂ ಅರಸರೂ ನೀವು ನೋಡುವ ಸಂಗತಿಗಳನ್ನು ನೋಡಬೇಕೆಂದು ಅಪೇಕ್ಷಿಸಿದರೂ ನೋಡಲಿಲ್ಲ, ನೀವು ಕೇಳುವ ಮಾತುಗಳನ್ನು ಕೇಳಬೇಕೆಂದು ಅಪೇಕ್ಷಿಸಿದರೂ ಕೇಳಲಿಲ್ಲ ಎಂಬದಾಗಿ ನಿಮಗೆ ಹೇಳುತ್ತೇನೆ ಅಂದನು.

ಯೇಸು ಕರುಣೆಯುಳ್ಳ ಸಮಾರ್ಯದವನ ದೃಷ್ಟಾಂತವನ್ನು ಹೇಳಿದ್ದು.

25 ಆಗ ಒಬ್ಬ ಧರ್ಮೋಪದೇಶಕನು ಎದ್ದು ಆತನನ್ನು ಪರೀಕ್ಷಿಸುವದಕ್ಕಾಗಿ—ಬೋಧಕನೇ, ನಾನು ನಿತ್ಯಜೀವಕ್ಕೆ ಬಾಧ್ಯನಾಗುವಂತೆ ಏನು ಮಾಡಬೇಕು ಎಂದು ಕೇಳಲು,
26 ಆತನು ಅವನಿಗೆ—ಶಾಸ್ತ್ರದಲ್ಲಿ ಏನು ಬರೆದದೆ? ಹ್ಯಾಗೆ ಓದಿದ್ಧೀ? ಎಂದು ಹೇಳಿದನು.
27 ಅದಕ್ಕೆ ಅವನು—ನಿನ್ನ ದೇವರಾಗಿರುವ ಕರ್ತನನ್ನು ನಿನ್ನ ಪೂರ್ಣ ಮನಸ್ಸಿನಿಂದಲೂ ನಿನ್ನ ಪೂರ್ಣ ಪ್ರಾಣದಿಂದಲೂ ನಿನ್ನ ಪೂರ್ಣ ಶಕ್ತಿಯಿಂದಲೂ ನಿನ್ನ ಪೂರ್ಣ ಬುದ್ಧಿಯಿಂದಲೂ ಪ್ರೀತಿಸು. ಮತ್ತು ನಿನ್ನನ್ನು ಪ್ರೀತಿಸಿಕೊಳ್ಳುವಂತೆ ನಿನ್ನ ನೆರೆಯವನನ್ನೂ
28 ಪ್ರೀತಿಸು ಎಂದು ಬರೆದದೆ ಅಂದನು. ಆತನು ಅವನಿಗೆ—ನೀನು ಸರಿಯಾಗಿ ಉತ್ತರ
29 ಕೊಟ್ಟಿ; ಇದರಂತೆ ಮಾಡು, ಮಾಡಿದರೆ ಜೀವಿಸುವಿ ಎಂದು ಹೇಳಿದನು. ಆದರೆ ಅವನು ತನ್ನನ್ನು ನೀತಿವಂತನೆಂದು ತೋರಿಸಿಕೊಳ್ಳುವದಕ್ಕೆ ಅಪೇಕ್ಷಿಸಿ—ನನ್ನ ನೆರೆ
30 ಯವನು ಯಾರು ಎಂದು ಯೇಸುವನ್ನು ಕೇಳಲು, ಯೇಸು ಅವನಿಗೆ ಪ್ರತ್ಯುತ್ತರವಾಗಿ ಹೇಳಿದ್ದೇನಂದರೆ—ಒಬ್ಬಾನೊಬ್ಬ ಮನುಷ್ಯನು ಯೆರೂಸಲೇಮಿನಿಂದ ಘಟ್ಟಾ ಇಳಿದು ಯೆರಿಕೋವಿಗೆ ಹೋಗುತ್ತಿರುವಾಗ ಕಳ್ಳರ ಕೈಗೆ ಸಿಕ್ಕಿದನು. ಅವರು ಅವನನ್ನು ಸುಲಿಗೆ ಮಾಡಿಕೊಂಡು, ಗಾಯವಾಗುವಷ್ಟು ಹೊಡೆದು ಅವನನ್ನು ಅರೆಜೀವಮಾಡಿ ಬಿಟ್ಟು
31 ಹೋದರು. ಆಗ ಹ್ಯಾಗೋ ಒಬ್ಬ ಯಾಜಕನು ಆ ದಾರಿಯಲ್ಲಿ ಇಳಿದುಬರುತ್ತಾ ಅವ
32 ನನ್ನು ಕಂಡು ವಾರೆಯಾಗಿ ಹೋದನು. ಅದೇ ರೀತಿಯಲ್ಲಿ ಒಬ್ಬ ಲೇವ್ಯನೂ ಆ ಸ್ಥಳಕ್ಕೆ
33 ಬಂದು ಅವನನ್ನು ಕಂಡು ವಾರೆಯಾಗಿ ಹೋದನು. ಆದರೆ ಒಬ್ಬ ಸಮಾರ್ಯದವನು
34 ಪ್ರಯಾಣಮಾಡುತ್ತಾ ಅವನಿದ್ದಲ್ಲಿಗೆ ಬಂದು ಅವನನ್ನು ಕಂಡು, ಕನಿಕರಿಸಿ ಅವನ ಹತ್ತರಕ್ಕೆ ಹೋಗಿ, ಅವನ ಗಾಯಗಳಲ್ಲಿ ಎಣ್ಣೆಯನ್ನೂ ದ್ರಾಕ್ಷಾರಸವನ್ನೂ ಹೊಯ್ದು, ಕಟ್ಟಿ, ತನ್ನ ಸ್ವಂತ ವಾಹನದ ಮೇಲೆ ಹತ್ತಿಸಿಕೊಂಡು, ಛತ್ರಕ್ಕೆ ಕರಕೊಂಡು ಹೋಗಿ ಅವನನ್ನು
35 ಆರೈಕೆಮಾಡಿದನು. ಮರುದಿನ ಅವನು ಎರಡು ಹಣಗಳನ್ನು ತೆಗೆದು ಛತ್ರದವನಿಗೆ ಕೊಟ್ಟು—ಇವನನ್ನು ಆರೈಕೆಮಾಡು; ಇದಕ್ಕಿಂತ ಹೆಚ್ಚಾಗಿ ಏನಾದರೂ ವೆಚ್ಚಮಾಡಿದರೆ,
36 ನಾನು ಹಿಂತಿರುಗಿ ಬಂದಾಗ ನಿನಗೆ ಕೊಡುವೆನು ಅಂದನು. ಈ ಮೂವರಲ್ಲಿ ಯಾವನು ಕಳ್ಳರ ಕೈಗೆ ಸಿಕ್ಕಿದವನಿಗೆ ನೆರೆಯವನಾದನೆಂದು ನಿನಗೆ ತೋರುತ್ತದೆ ಹೇಳು ಎಂದು ಕೇಳಿ
37 ದ್ದಕ್ಕೆ ಆ ಧರ್ಮೋಪದೇಶಕನು—ಅವನಿಗೆ ದಯತೋರಿಸಿದವನೇ ಅಂದನು. ಆಗ ಯೇಸು ಅವನಿಗೆ—ಹೋಗು, ನೀನೂ ಅದರಂತೆ ಮಾಡು ಎಂದು ಹೇಳಿದನು.

ಕೊಂಡದರಿಂದ ಅವರು ಅಪಾಯಕ್ಕೆ ಗುರಿಯಾದರು. ಹೀಗಿರಲಾಗಿ ಅವರು ಆತನ 24 ಹತ್ತರ ಬಂದು—ಗುರುವೇ, ಗುರುವೇ, ಸಾಯುತ್ತೇವೆ ಎಂದು ಹೇಳಿ ಆತನನ್ನು ಎಬ್ಬಿಸಿದರು. ಆಗ ಆತನು ಎದ್ದು ಗಾಳಿಯನ್ನೂ ಉಬ್ಬುವ ನೀರನ್ನೂ ಗದರಿಸಿದನು. ಗದರಿಸಲು ಅವು ನಿಂತವು, ಸಮಾಧಾನವಾಯಿತು. ತರುವಾಯ ಆತನು—ನಿಮ್ಮ ನಂಬಿಕೆ 25 ಎಲ್ಲಿ? ಎಂದು ಅವರನ್ನು ಕೇಳಿದನು. ಅವರಾದರೋ ಭಯಹಿಡಿದವರಾಗಿ—ಈತನು ಯಾರಿರಬಹುದು? ಗಾಳಿಗೂ ನೀರಿಗೂ ಅಪ್ಪಣೆಕೊಡುತ್ತಾನೆ; ಅವು ಕೂಡ ಹೇಳಿದ ಹಾಗೆ ಕೇಳುತ್ತವಲ್ಲಾ ಎಂದು ಒಬ್ಬರಿಗೊಬ್ಬರು ಮಾತಾಡಿಕೊಂಡು ಅತ್ಯಾಶ್ಚರ್ಯಪಟ್ಟರು.

### ದೆವ್ವಗಳ ದಂಡಿನಿಂದ ಹಿಡಿಯಲ್ಪಟ್ಟವನನ್ನು ಕುರಿತದ್ದು.

(ಮತ್ತಾಯ 8, 28—34; ಮಾರ್ಕ 5, 1—20.)

ಆ ಮೇಲೆ ಅವರು ಗಲಿಲಾಯಕ್ಕೆ ಎದುರಾಗಿರುವ ಗೆರಸೇನರ ಸೀಮೆಗೆ ಮುಟ್ಟಿದರು. 26 ಆತನು ದಡಕ್ಕೆ ಇಳಿಯುತ್ತಲೇ ಆ ಊರಿನವನಾದ ಒಬ್ಬ ಮನುಷ್ಯನು ಆತನ ಎದುರಿಗೆ 27 ಬಂದನು. ಅವನಿಗೆ ದೆವ್ವಗಳು ಹಿಡಿದಿದ್ದವು. ಬಹುಕಾಲದಿಂದ ಬಟ್ಟೆಯನ್ನೇ ಹಾಕಿಕೊಳ್ಳದೆ, ಯಾವ ಮನೆಯಲ್ಲಿಯೂ ಇರದೆ ಸಮಾಧಿಯ ಗವಿಗಳಲ್ಲಿಯೇ ಇರುತ್ತಿದ್ದನು. ಇವನು ಯೇಸುವನ್ನು ಕಂಡು ಆರ್ಭಟಿಸಿ ಆತನ ಮುಂದೆ ಬಿದ್ದು ಮಹಾ ಶಬ್ದದಿಂದ— 28 ಯೇಸುವೇ, ಪರಾತ್ಪರನಾದ ದೇವರ ಮಗನೇ, ನನ್ನ ಗೊಡವೆ ನಿನಗ್ಯಾಕೆ? ನನ್ನನ್ನು ಕಾಡಬೇಡವೆಂತ ನಿನ್ನನ್ನು ಬೇಡಿಕೊಳ್ಳುತ್ತೇನೆ ಅಂದನು. ಯಾಕಂದರೆ—ಈ ಮನುಷ್ಯ 29 ನನ್ನು ಬಿಟ್ಟುಹೋಗಬೇಕೆಂದು ಆತನು ಆ ದೆವ್ವಕ್ಕೆ ಅಪ್ಪಣೆಕೊಟ್ಟಿದ್ದನು. ಅದು ಬಹುಕಾಲದಿಂದ ಅವನನ್ನು ಹಿಡಿದಿತ್ತು; ಇದಲ್ಲದೆ, ಅವನನ್ನು ಕಾವಲಲ್ಲಿಟ್ಟು ಸರಪಣಿಗಳಿಂದಲೂ ಬೇಡಿಗಳಿಂದಲೂ ಕಟ್ಟಿದ್ದರೂ, ಅವನು ಆ ಬಂಧಗಳನ್ನು ಮುರಿದುಹಾಕುತ್ತಿದ್ದನು; ಮತ್ತು ಆ ದೆವ್ವ ಅವನನ್ನು ಅರಣ್ಯಪ್ರದೇಶಗಳಿಗೆ ಓಡಿಸುತ್ತಿತ್ತು. ಯೇಸು— 30 ನಿನ್ನ ಹೆಸರೇನೆಂದು ಅವನನ್ನು ಕೇಳಿದ್ದಕ್ಕೆ, ಅವನು—ನನ್ನ ಹೆಸರು ದಂಡು ಅಂದನು; ಯಾಕಂದರೆ ಬಹಳ ದೆವ್ವಗಳು ಅವನೊಳಗೆ ಹೊಕ್ಕಿದ್ದವು. ಪಾತಾಳಕ್ಕೆ ಹೋಗಿಬಿಡು 31 ವಂತೆ ನಮಗೆ ಆಜ್ಞೆಮಾಡಬೇಡವೆಂದು ಅವು ಆತನನ್ನು ಬೇಡಿಕೊಂಡವು. ಅಲ್ಲಿಯ 32 ಗುಡ್ಡದಲ್ಲಿ ಬಹಳ ಹಂದಿಗಳದೊಂದು ಗುಂಪು ಮೇಯುತ್ತಿತ್ತು. ಹೀಗಿರಲಾಗಿ ಆ ದೆವ್ವಗಳು—ಆ ಹಂದಿಗಳೊಳಗೆ ಸೇರಿಕೊಳ್ಳುವದಕ್ಕೆ ನಮಗೆ ಅಪ್ಪಣೆಯಾಗಬೇಕೆಂದು ಆತನನ್ನು ಬೇಡಿಕೊಳ್ಳಲು, ಆತನು—ಹಾಗಾಗಲಿ ಎಂದು ಅವುಗಳಿಗೆ ಅಪ್ಪಣೆಕೊಟ್ಟನು. ಆಗ ದೆವ್ವಗಳು ಆ ಮನುಷ್ಯನೊಳಗಿಂದ ಹೊರಕ್ಕೆ ಬಂದು ಹಂದಿಗಳೊಳಗೆ ಹೊಕ್ಕವು; 33 ಆ ಗುಂಪು ಓಡಿ ಕಡಿದಾದ ಸ್ಥಳದಿಂದ ಕೆರೆಯೊಳಗೆ ಬಿದ್ದು ಉಸುರುಕಟ್ಟಿಕೊಂಡು ಸತ್ತಿತು. ಮೇಯಿಸಿದವರು ನಡೆದದ್ದನ್ನು ಕಂಡು ಓಡಿಹೋಗಿ ಆ ಊರಲ್ಲಿಯೂ ಹಳ್ಳಿ 34 ಗಳಲ್ಲಿಯೂ ಅದನ್ನು ತಿಳಿಸಲು, ಜನರು ನಡೆದ ಸಂಗತಿ ಏನೆಂದು ನೋಡುವದಕ್ಕೆ 35 ಹೊರಟು ಯೇಸುವಿನ ಬಳಿಗೆ ಬಂದು, ದೆವ್ವಗಳು ಬಿಟ್ಟುಹೋಗಿದ್ದ ಆ ಮನುಷ್ಯನು ಬಟ್ಟೆಗಳನ್ನು ಹಾಕಿಕೊಂಡು ಸ್ವಸ್ಥಬುದ್ಧಿಯಿಂದ ಯೇಸುವಿನ ಪಾದಗಳ ಬಳಿಯಲ್ಲಿ

36 ಕೂತಿರುವದನ್ನು ಕಂಡು ಬೆರಗಾದರು. ನಡೆದ ಸಂಗತಿಯನ್ನು ನೋಡಿದ್ದವರು ದೆವ್ವ
37 ಹಿಡಿದವನಿಗೆ ಬಿಡುಗಡೆಯಾದ ರೀತಿಯನ್ನು ಅವರಿಗೆ ತಿಳಿಸಲು, ಗೆರಸೇನರ ಸುತ್ತಲಿರುವ ಸೀಮೆಯವರಿಗೆಲ್ಲಾ ಮಹಾ ಭಯಹಿಡಿದದ್ದರಿಂದ, ಅವರು ಯೇಸುವನ್ನು—ನೀನು ನಮ್ಮನ್ನು ಬಿಟ್ಟುಹೋಗಬೇಕೆಂದು ಬೇಡಿಕೊಂಡರು. ಆತನು ದೋಣಿಯನ್ನು ಹತ್ತಿ
38 ಹಿಂತಿರುಗಿ ಹೋದನು. ಹೊರಡುವಾಗ, ದೆವ್ವಗಳಿಂದ ಬಿಡುಗಡೆಯಾದ ಆ ಮನುಷ್ಯನು—ನಾನು ನಿನ್ನ ಬಳಿಯಲ್ಲಿಯೇ ಇರುತ್ತೇನೆ ಎಂದು ಆತನನ್ನು ಬೇಡಿಕೊಂಡಾಗ,
39 ಆತನು—ನೀನು ನಿನ್ನ ಮನೆಗೆ ಹಿಂತಿರುಗಿ ಹೋಗಿ, ದೇವರು ನಿನಗೆ ಎಂಥೆಂಥಾ ಉಪಕಾರಗಳನ್ನು ಮಾಡಿದ್ದಾನೋ ಅದನ್ನೆಲ್ಲಾ ವಿವರವಾಗಿ ಹೇಳು ಎಂದು ಅವನನ್ನು ಕಳುಹಿಸಿಬಿಟ್ಟನು. ಅವನು ಹೊರಟುಹೋಗಿ ಯೇಸು ತನಗೆ ಮಾಡಿದ ಉಪಕಾರಗಳನ್ನು ಆ ಊರಲ್ಲೆಲ್ಲಾ ಸಾರಿದನು.

ಯೇಸು ಸತ್ತಹುಡುಗಿಯನ್ನು ಬದುಕಿಸಿದ್ದು; ಮತ್ತು ಒಬ್ಬ ಸ್ತ್ರೀಯ ರಕ್ತಕುಸುಮರೋಗವನ್ನು ವಾಸಿಮಾಡಿದ್ದು.
(ಮತ್ತಾಯ 9, 18—26; ಮಾರ್ಕ 5, 21—43.)

40 ಯೇಸು ಹಿಂತಿರುಗಿ ಬಂದಾಗ, ಜನರೆಲ್ಲರೂ ಆತನನ್ನು ಕಾದುಕೊಂಡಿದ್ದು ಸಂತೋ
41-42 ಷದಿಂದ ಸ್ವೀಕರಿಸಿದರು. ಆಗ ಸಭಾಮಂದಿರದ ಅಧಿಕಾರಿಯಾದ ಯಾಯಿರನೆಂಬ ಒಬ್ಬ ಮನುಷ್ಯನು ಬಂದು ಯೇಸುವಿನ ಪಾದಗಳಿಗೆ ಬಿದ್ದನು. ಹೆಚ್ಚುಕಡಿಮೆ ಹನ್ನೆರಡು ವರುಷದವಳಾದ ಅವನ ಒಬ್ಬಳೇ ಮಗಳು ಸಾಯುವವಳಾಗಿದ್ದ ಕಾರಣ ಆತನನ್ನು ತನ್ನ ಮನೆಗೆ ಬರಬೇಕೆಂದು ಬೇಡಿಕೊಂಡನು. ಆತನು ಹೋಗುತ್ತಿರುವಲ್ಲಿ ಜನರು ಗುಂಪುಗುಂಪಾಗಿ ಆತನನ್ನು ಇರಿಕಿಸುತ್ತಿದ್ದರು.
43 ಅಷ್ಟರೊಳಗೆ, ಹನ್ನೆರಡು ವರುಷದಿಂದ ರಕ್ತಕುಸುಮರೋಗವಿದ್ದ ಒಬ್ಬ ಹೆಂಗಸು
44 ಬಂದಳು. ಆಕೆಯು[1] ಒಬ್ಬರಿಂದಲೂ ಗುಣಹೊಂದಲಾರದೆ ಇದ್ದಳು. ಆಕೆಯು ಹಿಂದಿನಿಂದ ಬಂದು ಆತನ ಉಡುಪಿನ ಗೊಂಡೆಯನ್ನು ಮುಟ್ಟಿದಳು; ಮುಟ್ಟುತ್ತಲೇ ಆಕೆಗೆ
45 ರಕ್ತಹರಿಯುವದು ನಿಂತಿತು. ಆಗ ಯೇಸು—ನನ್ನನ್ನು ಮುಟ್ಟಿದವರ್ಯಾರು ಎಂದು ಕೇಳಿದನು. ಎಲ್ಲರು—ನಾನಲ್ಲ ನಾನಲ್ಲ ಅನ್ನಲು, ಪೇತ್ರನು[2]—ಗುರುವೇ ಎಷ್ಟೋ ಜನರು
46 ನಿನ್ನನ್ನು ಒತ್ತೊತ್ತಿ ಮೈಮೇಲೆ ಬೀಳುತ್ತಿದ್ದಾರಲ್ಲಾ ಅಂದನು. ಆದರೆ ಯೇಸು—ಯಾರೋ ಒಬ್ಬರು ನನ್ನನ್ನು ಮುಟ್ಟಿದರು; ನನ್ನಿಂದ ಶಕ್ತಿಯು ಹೊರಟಿತೆಂಬುವದು ನನಗೆ ಗೊತ್ತಾ
47 ಯಿತು ಅಂದಾಗ, ಆ ಹೆಂಗಸು ತಾನು ಮರೆಯಾಗಿಲ್ಲವೆಂತ ತಿಳಿದು ನಡುಗುತ್ತಾ ಬಂದು ಆತನಿಗೆ ಅಡ್ಡಬಿದ್ದು, ತಾನು ಇಂಥಾ ಕಾರಣದಿಂದ ಈತನನ್ನು ಮುಟ್ಟಿದೆನೆಂತಲೂ ಮುಟ್ಟಿದ
48 ಕೂಡಲೇ ತನಗೆ ವಾಸಿಯಾಯಿತೆಂತಲೂ ಎಲ್ಲಾ ಜನರ ಮುಂದೆ ತಿಳಿಸಿದಳು. ಆತನು ಆಕೆಗೆ—ಮಗಳೇ ನಿನ್ನ ನಂಬಿಕೆಯೇ ನಿನ್ನನ್ನು ಸ್ವಸ್ಥಮಾಡಿತು; ಸಮಾಧಾನದಿಂದ ಹೋಗು ಎಂದು ಹೇಳಿದನು.

[1] ಕೆಲವು ಪ್ರತಿಗಳಲ್ಲಿ—ಆಕೆಯು ತನ್ನ ಬದುಕನ್ನೆಲ್ಲಾ ವೈದ್ಯರಿಗೆ ಕೊಟ್ಟು ಕಳಕೊಂಡಾಗ್ಯೂ ಎಂದು ಬರೆದದೆ.
[2] ಕೆಲವು ಪ್ರತಿಗಳಲ್ಲಿ—ಪೇತ್ರನೂ ಅವನ ಸಂಗಡ ಇದ್ದವರೂ ಎಂದು ಬರೆದದೆ.

ಆತನು ಇನ್ನೂ ಮಾತಾಡುತ್ತಿರುವಲ್ಲಿ ಸಭಾಮಂದಿರದ ಅಧಿಕಾರಿಯ ಕಡೆಯವನೊಬ್ಬನು ಬಂದು—ನಿನ್ನ ಮಗಳು ಸತ್ತಳು; ಗುರುವಿಗೆ ತೊಂದರೆ ಕೊಡಬೇಡ ಅಂದನು. 49
ಆದರೆ ಯೇಸು ಅದನ್ನು ಕೇಳಿ ಅವನಿಗೆ—ಹೆದರಬೇಡ, ನಂಬಿಕೆ ಒಂದೇ ಇರಲಿ, ಆಕೆ ಬದುಕುವಳು ಎಂದು ಉತ್ತರಕೊಟ್ಟನು. 50
ತರುವಾಯ ಆತನು ಆ ಮನೆಗೆ ಹೋಗಿ, ಪೇತ್ರನು ಯೋಹಾನನು ಯಾಕೋಬನು ಆ ಹುಡುಗಿಯ ತಂದೆತಾಯಿಗಳು ಇಷ್ಟುಮಂದಿಯನ್ನೇ ಹೊರತು ಬೇರೆ ಯಾರನ್ನೂ ತನ್ನ ಸಂಗಡ ಒಳಕ್ಕೆ ಬರಗೊಡಿಸಲಿಲ್ಲ. 51
ಎಲ್ಲರು ಅಳುತ್ತಾ ಆಕೆಗೋಸ್ಕರ ಎದೆಬಡುಕೊಳ್ಳುತ್ತಾ ಇದ್ದರು. 52
ಯೇಸು—ಅಳಬೇಡಿರಿ, ಆಕೆ ಸತ್ತಿಲ್ಲ, ನಿದ್ದೆಮಾಡುತ್ತಾಳೆ ಅನ್ನಲಾಗಿ; ಜನರು ಆಕೆ ಸತ್ತಳೆಂದು ತಿಳಿದುಕೊಂಡದರಿಂದ ಆತನನ್ನು ಹಾಸ್ಯಮಾಡಿದರು. 53
ಆದರೆ ಆತನು ಆಕೆಯ ಕೈಯನ್ನು ಹಿಡಿದು—ಅಮ್ಮಣ್ಣೀ, ಏಳು ಎಂದು ಕೂಗಿದನು. 54
ಆಕೆಯ ಪ್ರಾಣ ತಿರಿಗಿ ಬಂದು, ತಕ್ಷಣವೇ ಆಕೆ ಎದ್ದಳು. ತರುವಾಯ ಆತನು—ಈಕೆಗೆ ಊಟಾಮಾಡಿಸಿರಿ ಎಂದು ಅಪ್ಪಣೆಕೊಟ್ಟನು. 55
ಆಕೆಯ ತಂದೆತಾಯಿಗಳು ಬೆರಗಾದರು. ಆತನು—ಈ ನಡೆದ ಸಂಗತಿಯನ್ನು ಯಾರಿಗೂ ತಿಳಿಸಬೇಡಿರೆಂದು ಖಂಡಿತವಾಗಿ ಹೇಳಿದನು. 56

### ಯೇಸು ಹನ್ನೆರಡು ಮಂದಿ ಶಿಷ್ಯರನ್ನು ಸುವಾರ್ತೆ ಸಾರುವದಕ್ಕೆ ಕಳುಹಿಸಿದ್ದು.

(ಮತ್ತಾಯ 10, 1. 5—14; ಮಾರ್ಕ 6, 7—13.)

**9** ಆತನು ಹನ್ನೆರಡು ಮಂದಿ ಶಿಷ್ಯರನ್ನು ಒಟ್ಟಿಗೆ ಕರೆದು ಅವರಿಗೆ ಎಲ್ಲಾ ದೆವ್ವಗಳನ್ನು ಬಿಡಿಸುವ ಮತ್ತು ರೋಗಗಳನ್ನು ವಾಸಿಮಾಡುವ ಶಕ್ತಿ ಅಧಿಕಾರಗಳನ್ನು ಕೊಟ್ಟು, 2 ದೇವರ ರಾಜ್ಯದ ವಿಷಯವನ್ನು ಸಾರುವದಕ್ಕೂ ಅಸ್ವಸ್ಥರಾದವರನ್ನು ಸ್ವಸ್ಥಮಾಡುವದಕ್ಕೂ ಅವರನ್ನು ಕಳುಹಿಸಿದನು. 3 ಕಳುಹಿಸುವಾಗ ಅವರಿಗೆ ಹೇಳಿದ್ದೇನಂದರೆ—ದಾರಿಗೆ ಏನೂ ತಕ್ಕೊಂಡುಹೋಗಬೇಡಿರಿ, ಕೋಲು ಬೇಡ, ಹಸಿಬೆ ಬೇಡ, ರೊಟ್ಟಿ ಬೇಡ, ಹಣ ಬೇಡ; ನಿಮಗೆ ಎರಡಂಗಿಗಳಿರಬಾರದು. 4 ಇದಲ್ಲದೆ ನೀವು ಯಾವ ಮನೆಯಲ್ಲಿ ಇಳುಕೊಂಡರೂ ಅಲ್ಲೇ ಇರ್ರಿ, ಅಲ್ಲಿಂದಲೇ ಹೊರಡಿರಿ. 5 ಮತ್ತು ಯಾವ್ಯಾವ ಊರಿನವರು ನಿಮ್ಮನ್ನು ಸೇರಿಸಿಕೊಳ್ಳದೆ ಹೋಗುತ್ತಾರೋ ಆ ಊರನ್ನು ನೀವು ಬಿಟ್ಟುಹೋಗುವಾಗ, ನಿಮ್ಮ ಕಾಲಿಗೆ ಹತ್ತಿದ ಧೂಳನ್ನು ಝಾಡಿಸಿಬಿಡಿರಿ; ಅದು ಅವರಿಗೆ ವಿರೋಧವಾಗಿ ಸಾಕ್ಷಿಯಾಗಿರಲಿ ಅಂದನು. 6 ಆಗ ಅವರು ಹೊರಟುಹೋಗಿ ಎಲ್ಲೆಲ್ಲಿಯೂ ಸುವಾರ್ತೆಯನ್ನು ಸಾರುತ್ತಾ ರೋಗಿಗಳಿಗೆ ವಾಸಿಮಾಡುತ್ತಾ ಗ್ರಾಮಗಳಲ್ಲೆಲ್ಲಾ ಸಂಚರಿಸಿದರು.

### ಅರಸನಾದ ಹೆರೋದನು ಯೇಸುವಿನ ಸುದ್ದಿಯನ್ನು ಕೇಳಿದ್ದು.

(ಮತ್ತಾಯ 14, 1—12; ಮಾರ್ಕ 6, 14—29.)

7 ಹೀಗಿರಲಾಗಿ ಉಪರಾಜನಾದ ಹೆರೋದನು ನಡೆದ ಸಂಗತಿಗಳನ್ನೆಲ್ಲಾ ಕೇಳಿ ಬಹಳವಾಗಿ ಕಳವಳಪಡುವವನಾದನು. ಯಾಕಂದರೆ ಸತ್ತಿದ್ದ ಯೋಹಾನನು ತಿರಿಗಿ ಬದುಕಿ

8 ಬಂದಿದ್ಧಾನೆಂದು ಕೆಲವರೂ, ಎಲೀಯನು ಕಾಣಿಸಿಕೊಂಡನೆಂದು ಕೆಲವರೂ, ಪೂರ್ವದ ಪ್ರವಾದಿಗಳಲ್ಲಿ ಯಾವನೋ ಒಬ್ಬನು ಎದ್ದಿದ್ಧಾನೆಂದು ಕೆಲವರೂ ಹೇಳಿಕೊಳ್ಳುತ್ತಿದ್ದರು.
9 ಆದರೆ ಹೆರೋದನು—ಯೋಹಾನನನ್ನು ನಾನೇ ತಲೇಹೊಯ್ಸಿದೆನಷ್ಟೆ. ಇವನ್ಯಾರು? ಇವನ ವಿಷಯವಾಗಿ ಆಶ್ಚರ್ಯಕರವಾದ ಸಂಗತಿಗಳನ್ನು ಕೇಳುತ್ತೇನಲ್ಲಾ ಎಂದು ಹೇಳಿ ಅವನನ್ನು ನೋಡಬೇಕೆಂದು ಪ್ರಯತ್ನಿಸಿದನು.

ಯೇಸು ಐದು ಸಾವಿರ ಜನರಿಗೆ ಊಟಮಾಡಿಸಿದ್ದು.

(ಮತ್ತಾಯ 14, 13—21; ಮಾರ್ಕ 6, 30—44; ಯೋಹಾನ 6, 1—13.)

10 ಅಪೊಸ್ತಲರು ಹಿಂತಿರುಗಿ ಬಂದು ತಾವು ಮಾಡಿದ್ದನ್ನೆಲ್ಲಾ ಯೇಸುವಿಗೆ ವಿವರವಾಗಿ ಹೇಳಲು, ಆತನು ಅವರನ್ನು ಬೆತ್ಸಾಯಿದವೆಂಬ ಊರಿಗೆ ಏಂಗಡವಾಗಿ ಕರಕೊಂಡು
11 ಹೋದನು. ಆದರೆ ಜನರ ಗುಂಪು ಇದನ್ನು ತಿಳಿದು ಆತನ ಹಿಂದೆ ಹೋಗಲು, ಆತನು ಅವರನ್ನು ಪ್ರೀತಿಯಿಂದ ಸ್ವೀಕರಿಸಿ, ದೇವರ ರಾಜ್ಯದ ವಿಷಯವಾಗಿ ಅವರ ಸಂಗಡ
12 ಮಾತಾಡಿ, ಕ್ಷೇಮ ಬೇಕಾದವರಿಗೆ ವಾಸಿಮಾಡಿದನು. ಅಷ್ಟರಲ್ಲಿ ಹೊತ್ತು ಇಳಿಯುತ್ತಾ ಬರಲು, ಆ ಹನ್ನೆರಡು ಮಂದಿ ಶಿಷ್ಯರು ಆತನ ಬಳಿಗೆ ಬಂದು—ಈ ಜನರಿಗೆ ಅಪ್ಪಣೆ ಕೊಡು; ಇವರು ಸುತ್ತಲಿರುವ ಹಳ್ಳಿಪಳ್ಳಿಗಳಿಗೆ ಹೋಗಿ ಇಳುಕೊಂಡು ಊಟಕ್ಕೆ ಬೇಕಾದ ಪದಾರ್ಥಗಳನ್ನು ದೊರಕಿಸಿಕೊಳ್ಳಲಿ; ನಾವು ಇಲ್ಲಿ ಅಡವಿಯ ಸ್ಥಳದಲ್ಲಿ ಇದ್ದೇವಲ್ಲಾ
13 ಎಂದು ಆತನಿಗೆ ಹೇಳಿದರು. ಆದರೆ ಆತನು—ನೀವೇ ಅವರಿಗೆ ಊಟಕ್ಕೆ ಕೊಡಿರಿ ಅನ್ನಲು, ಅವರು—ನಮ್ಮಲ್ಲಿ ಐದು ರೊಟ್ಟಿ ಎರಡು ಮಿಾನುಗಳು ಹೊರತು ಹೆಚ್ಚೇನೂ ಇಲ್ಲ; ನಾವು ಹೋಗಿ ಈ ಜನರಿಗೆಲ್ಲಾ ಆಹಾರವನ್ನು ಕೊಂಡುಕೊಳ್ಳಬೇಕು ಅನ್ನು
14 ತ್ತೀಯೋ? ಅಂದರು. ಗಂಡಸರೇ ಹೆಚ್ಚುಕಡಿಮೆ ಐದು ಸಾವಿರ ಮಂದಿಯಿದ್ದರು. ಆಗ ಆತನು ತನ್ನ ಶಿಷ್ಯರಿಗೆ—ಇವರನ್ನು ಒಂದೊಂದು ಪಙ್ಕ್ತಿಗೆ ಐವತ್ತೈವತ್ತರಂತೆ ಕೂಡ್ರಿ
15, 16 ಸಿರಿ ಎಂದು ಹೇಳಲು, ಅವರು ಹಾಗೆಯೇ ಎಲ್ಲರನ್ನೂ ಕೂಡ್ರಿಸಿದರು. ಆ ಮೇಲೆ ಆತನು ಆ ಐದು ರೊಟ್ಟಿ ಎರಡು ಮಿಾನುಗಳನ್ನು ತೆಗೆದುಕೊಂಡು ಆಕಾಶದ ಕಡೆಗೆ ನೋಡಿ ಅವುಗಳನ್ನು ಆಶೀರ್ವದಿಸಿ ಮುರಿದು ಶಿಷ್ಯರ ಕೈಗೆ ಕೊಟ್ಟು—ಈ ಜನರ
17 ಗುಂಪಿಗೆ ಹಂಚಿರಿ ಅಂದನು. ಅವರೆಲ್ಲರು ಊಟಮಾಡಿ ತೃಪ್ತರಾದರು; ಉಳಿದ ತುಂಡುಗಳನ್ನು ಕೂಡಿಸಲಾಗಿ ಅವು ಹನ್ನೆರಡು ಪುಟ್ಟಿ ತುಂಬಾ ಆದವು.

ಪೇತ್ರನು ಯೇಸುವನ್ನು ಕ್ರಿಸ್ತನೆಂದು ಅರಿಕೆಮಾಡಿದ್ದು; ಯೇಸು ತನ್ನ ಮರಣವನ್ನು ಮುಂತಿಳಿಸಿದ್ದು.

(ಮತ್ತಾಯ 16, 13—28; ಮಾರ್ಕ 8, 27—9, 1.)

18 ಒಂದಾನೊಂದು ದಿವಸ ಆತನು ಏಕಾಂತವಾಗಿ ಪ್ರಾರ್ಥನೆಮಾಡುತ್ತಿರುವಾಗ ಆತನ ಶಿಷ್ಯರು ಆತನ ಸಂಗಡ ಇದ್ದರು. ಆತನು ಅವರನ್ನು—ಜನರು ನನ್ನನ್ನು ಯಾರೆಂದು
19 ಹೇಳಿಕೊಳ್ಳುತ್ತಾರೆ ಎಂದು ಕೇಳಿದ್ದಕ್ಕೆ ಅವರು—ನಿನ್ನನ್ನು ಸ್ನಾನಿಕನಾದ ಯೋಹಾನನು

ಅನ್ನುತ್ತಾರೆ; ಕೆಲವರು ಎಲೀಯಸು ಅನ್ನುತ್ತಾರೆ; ಇನ್ನು ಕೆಲವರು ಪೂರ್ವದ ಪ್ರವಾದಿ
ಗಳಲ್ಲಿ ಯಾವನೋ ಒಬ್ಬನು ಎದ್ದಿದ್ದಾನೆ ಅನ್ನುತ್ತಾರೆ ಎಂದು ಹೇಳಿದರು. ಆತನು 20
ಅವರನ್ನು—ನೀವಾದರೋ ನನ್ನನ್ನು ಯಾರು ಅನ್ನುತ್ತೀರಿ ಎಂದು ಕೇಳಲಾಗಿ, ಪೇತ್ರನು—
ನೀನು ದೇವರಿಂದ ಬಂದ ಕ್ರಿಸ್ತನು ಎಂದು ಉತ್ತರಕೊಟ್ಟನು. ಆಗ ಆತನು—ಇದನ್ನು 21
ಯಾರಿಗೂ ಹೇಳಬೇಡಿರೆಂದು ಬಹು ಖಂಡಿತವಾಗಿ ಅವರಿಗೆ ಅಪ್ಪಣೆಕೊಟ್ಟು—ಮನುಷ್ಯ 22
ಕುಮಾರನು ಬಹು ಕಷ್ಟಗಳನ್ನನುಭವಿಸಿ, ಹಿರಿಯರಿಂದಲೂ ಮಹಾಯಾಜಕರಿಂದಲೂ
ಶಾಸ್ತ್ರಿಗಳಿಂದಲೂ ನಿರಾಕೃತನಾಗಿ ಕೊಲ್ಲಲ್ಪಟ್ಟು, ಮೂರನೇ ದಿನದಲ್ಲಿ ಜೀವಿತನಾಗಿ ಎದ್ದು
ಬರಬೇಕಾಗಿದೆ[1] ಎಂದು ಹೇಳಿದನು. ಇದಲ್ಲದೆ ಆತನು ಎಲ್ಲರಿಗೂ ಹೇಳಿದ್ದೇನಂದರೆ— 23
ನನ್ನ ಹಿಂದೆ ಬರುವದಕ್ಕೆ ಯಾವನಿಗಾದರೂ ಮನಸ್ಸಿದ್ದರೆ, ಅವನು ಜೀವದಾಶೆಯನ್ನು
ಬಿಟ್ಟು[2] ತನ್ನ ಶಿಲುಬೆಯನ್ನು ದಿನಾಲೂ ಹೊತ್ತುಕೊಂಡು ನನ್ನ ಹಿಂದೆ ಬರಲಿ. ತನ್ನ 24
ಪ್ರಾಣವನ್ನು ಉಳಿಸಿಕೊಳ್ಳಬೇಕೆಂದಿರುವವನು ಅದರ ನಷ್ಟಪಡುವನು; ಆದರೆ ನನ್ನ
ನಿಮಿತ್ತವಾಗಿ ತನ್ನ ಪ್ರಾಣದ ನಷ್ಟಪಡುವವನು ಅದನ್ನು ಉಳಿಸಿಕೊಳ್ಳುವನು. ಒಬ್ಬ 25
ಮನುಷ್ಯನು ಲೋಕವನ್ನೆಲ್ಲಾ ಸಂಪಾದಿಸಿಕೊಂಡರೂ ತನ್ನನ್ನೇ ನಷ್ಟಪಡಿಸಿಕೊಂಡರೆ
ಅಥವಾ ಕೆಡಿಸಿಕೊಂಡರೆ ಅವನಿಗೇನು ಪ್ರಯೋಜನ? ಯಾವನು ನನಗೂ ನನ್ನ ಮಾತು 26
ಗಳಿಗೂ ನಾಚಿಕೊಳ್ಳುತ್ತಾನೋ ಅವನಿಗೆ ಮನುಷ್ಯಕುಮಾರನು ತನಗೂ ತನ್ನ ತಂದೆಗೂ
ಪರಿಶುದ್ಧ ದೂತರಿಗೂ ಇರುವ ಮಹಿಮೆಯಿಂದ ಕೂಡಿದವನಾಗಿ ಬರುವಾಗ ನಾಚಿ
ಕೊಳ್ಳುವನು. ಇಲ್ಲಿ ನಿಂತವರೊಳಗೆ ಕೆಲವರು ದೇವರ ರಾಜ್ಯವನ್ನು ನೋಡುವ ತನಕ 27
ಮರಣಹೊಂದುವದಿಲ್ಲವೆಂದು ನಿಮಗೆ ಸತ್ಯವಾಗಿ ಹೇಳುತ್ತೇನೆ ಅಂದನು.

### ಯೇಸು ಪ್ರಕಾಶರೂಪದಿಂದ ಕಾಣಿಸಿಕೊಂಡದ್ದು.

(ಮತ್ತಾಯ 17, 1—8; ಮಾರ್ಕ 9, 2—8.)

ಯೇಸು ಈ ಮಾತುಗಳನ್ನು ಹೇಳಿ ಸುಮಾರು ಎಂಟು ದಿವಸಗಳಾದ ಮೇಲೆ, 28
ಪೇತ್ರ ಯೋಹಾನ ಯಾಕೋಬರನ್ನು ಕರಕೊಂಡು ಪ್ರಾರ್ಥನೆಮಾಡುವದಕ್ಕೆ ಬೆಟ್ಟ
ವನ್ನು ಹತ್ತಿದನು. ಆತನು ಪ್ರಾರ್ಥನೆಮಾಡುತ್ತಿರಲಾಗಿ, ಆತನ ಮುಖಭಾವವು ಬೇರೆ 29
ಯಾಯಿತು. ಆತನ ಉಡುಪು ಬೆಳ್ಳಗಾಗಿ ಮಿಂಚುತ್ತಾ ಬಂತು. ಇದಲ್ಲದೆ ಇಬ್ಬರು 30
ಪುರುಷರು ಯೇಸುವಿನ ಸಂಗಡ ಸಂಭಾಷಣೆ ಮಾಡುತ್ತಿದ್ದರು. ಇವರು ಯಾರಂದರೆ
ಮೋಶೆಯೂ ಎಲೀಯನೂ. ಇವರು ವೈಭವದೊಡನೆ ಕಾಣಿಸಿಕೊಂಡು ಯೆರೂಸ 31
ಲೇಮಿನಲ್ಲಿ ಆತನು ನೆರವೇರಿಸಬೇಕಾಗಿದ್ದ ಮರಣದ ವಿಷಯವಾಗಿ ಮಾತಾಡುತ್ತಿ
ದ್ದರು. ಇಷ್ಟರಲ್ಲಿ ಪೇತ್ರನಿಗೂ ಅವನ ಸಂಗಡ ಇದ್ದವರಿಗೂ ನಿದ್ರೆಯಿಂದ ಮೈಭಾರ 32
ವಾಗಿತ್ತು. ಆದರೆ ಎಚ್ಚರವಾದ ಮೇಲೆ ಅವರು ಆತನ ಮಹಿಮೆಯನ್ನೂ ಆತನ ಸಂಗಡ
ನಿಂತಿದ್ದ ಆ ಇಬ್ಬರು ಪುರುಷರನ್ನೂ ಕಂಡರು. ಇವರು ಆತನನ್ನು ಬಿಟ್ಟುಹೋಗುತ್ತಿರು 33
ವಾಗ ಪೇತ್ರನು ಯೇಸುವಿಗೆ—ಗುರುವೇ ನಾವು ಇಲ್ಲೇ ಇರುವದು ಒಳ್ಳೇದು, ಮೂರು

1) ಹೋಶೇಯ ೬, ೨. 2) ಅಥವಾ, ತನ್ನನ್ನು ತ್ಯಜಿಸಿ.

ಪರ್ಣಶಾಲೆಗಳನ್ನು ಕಟ್ಟುವೆವು; ನಿನಗೊಂದು ಮೋಶೆಗೊಂದು ಎಲೀಯನಿಗೊಂದು
34 ಎಂದು ಹೇಳಿದನು. ತಾನಂದದ್ದು ತನಗೇ ಗೊತ್ತಾಗಲಿಲ್ಲ. ಅವನು ಇದನ್ನು ಹೇಳು
ತ್ತಿರುವಲ್ಲಿ ಮೋಡವು ಬಂದು ಅವರ ಮೇಲೆ ಕವಿಯಿತು. ಅವರು ಮೋಡದೊಳಗೆ
35 ಸೇರಿದಾಗ ಹೆದರಿದರು. ಆಗ ಆ ಮೋಡದೊಳಗಿಂದ—ಈತನು ನನ್ನ ಮಗನು, ನಾನು
36 ಆರಿಸಿಕೊಂಡವನು; ಈತನ ಮಾತನ್ನು ಕೇಳಿರಿ ಎಂಬ ವಾಣಿ ಆಯಿತು. ಆ ವಾಣಿ ಆದ
ಮೇಲೆ ಯೇಸುವನ್ನು ಮಾತ್ರ ಕಂಡರು. ತಾವು ಕಂಡ ಈ ಸಂಗತಿಗಳೊಳಗೆ ಒಂದನ್ನಾ
ದರೂ ಆ ದಿವಸಗಳಲ್ಲಿ ಯಾರಿಗೂ ತಿಳಿಸದೆ ಸುಮ್ಮನಿದ್ದರು.

### ಯೇಸು ಅಪಸ್ಮಾರರೋಗಿಯನ್ನು ಸ್ವಸ್ಥಮಾಡಿದ್ದು.

(ಮತ್ತಾಯ 17, 14—18; ಮಾರ್ಕ 9, 14—27.)

37 ಮರುದಿವಸ ಅವರು ಬೆಟ್ಟದಿಂದ ಇಳಿದು ಬರಲು ಬಹು ಜನರು ಆತನೆದುರಿಗೆ ಬಂದರು.
38 ಆಗ ಆ ಜನರಲ್ಲಿ ಒಬ್ಬನು—ಬೋಧಕನೇ ನನ್ನ ಮಗನ ಮೇಲೆ ದೃಷ್ಟಿಯಿಡಬೇಕು
39 ಎಂದು ನಿನ್ನನ್ನು ಬೇಡಿಕೊಳ್ಳುತ್ತೇನೆ. ನನಗೆ ಇವನೊಬ್ಬನೇ ಮಗನು. ಇವನನ್ನು
ದೆವ್ವ ಹಿಡಿಯುತ್ತದೆ, ಹಿಡಿಯುತ್ತಲೇ ಕೂಗಿಕೊಳ್ಳುತ್ತಾನೆ. ಬಾಯಲ್ಲಿ ನೊರೆಬರುವಷ್ಟು
ಇವನನ್ನು ಒದ್ದಾಡಿಸುತ್ತದೆ; ಮತ್ತು ಬಹು ಕಷ್ಟಕೊಟ್ಟು ಜಜ್ಜಿದ ಹೊರತು ಬಿಡುವದಿಲ್ಲ.
40 ಅದನ್ನು ಬಿಡಿಸಬೇಕೆಂದು ನಿನ್ನ ಶಿಷ್ಯರನ್ನು ಬೇಡಿಕೊಂಡೆನು. ಆದರೆ ಅವರಿಂದ ಆಗದೆ
41 ಹೋಯಿತು ಎಂದು ಕೂಗಿ ಹೇಳಿದನು. ಅದಕ್ಕೆ ಯೇಸು—ಎಲಾ ನಂಬಿಕೆಯಿಲ್ಲದಂಥಾ
ಮೂರ್ಖಜಾತಿಯೇ, ನಾನು ಇನ್ನೆಷ್ಟು ದಿನ ನಿಮ್ಮ ಸಂಗಡ ಇದ್ದು ನಿಮ್ಮನ್ನು ಸಹಿಸಿ
42 ಕೊಳ್ಳಲಿ? ನಿನ್ನ ಮಗನನ್ನು ಇಲ್ಲಿಗೆ ತೆಗೆದುಕೊಂಡು ಬಾ ಅಂದನು. ಆ ಹುಡುಗನು
ಇನ್ನೂ ಬರುತ್ತಿರುವಾಗ, ಆ ದೆವ್ವವು ಅವನನ್ನು ನೆಲಕ್ಕೆ ಅಪ್ಪಳಿಸಿ ಬಹಳವಾಗಿ ಒದ್ದಾಡಿ
ಸಿತು. ಆದರೆ ಯೇಸು ಆ ದೆವ್ವವನ್ನು ಗದರಿಸಿ, ಆ ಹುಡುಗನಿಗೆ ವಾಸಿಮಾಡಿ,
43 ಅವನ ತಂದೆಯ ಕೈಗೆ ಕೊಟ್ಟನು. ಅದನ್ನು ನೋಡಿ ಎಲ್ಲರು ದೇವರ ಮಹತ್ವಕ್ಕೆ
ಬೆರಗಾದರು.

### ಯೇಸು ತನ್ನ ಮರಣವನ್ನು ಎರಡನೇ ಸಾರಿ ಮುಂತಿಳಿಸಿದ್ದು.

(ಮತ್ತಾಯ 17, 22—23; ಮಾರ್ಕ 9, 30—32.)

ಯೇಸು ಮಾಡಿದ ಎಲ್ಲಾ ಕಾರ್ಯಗಳಿಗೆ ಎಲ್ಲರು ಆಶ್ಚರ್ಯಪಡುತ್ತಿರಲಾಗಿ, ಆತನು
44 ತನ್ನ ಶಿಷ್ಯರಿಗೆ—ನೀವಂತೂ ಈ ಮಾತುಗಳನ್ನು ನಿಮ್ಮ ಮನಸ್ಸಿನಲ್ಲಿ ಇಟ್ಟುಕೊಳ್ಳಿರಿ;
ಯಾಕಂದರೆ, ಮನುಷ್ಯಕುಮಾರನು ಮನುಷ್ಯರ ಕೈಗೆ ಒಪ್ಪಿಸಲ್ಪಡುವನು ಎಂದು
45 ಹೇಳಿದನು. ಅವರು ಆ ಮಾತನ್ನು ಗ್ರಹಿಸಲಿಲ್ಲ; ಅದು ಅವರಿಗೆ ಮರೆಯಾದದರಿಂದ
ಅದರ ಅರ್ಥವನ್ನು ಅವರು ತಿಳಿಯದೆಹೋದರು. ಆ ಮಾತಿನ ವಿಷಯದಲ್ಲಿ ಅವರು
ಆತನನ್ನು ಕೇಳುವದಕ್ಕೆ ಅಂಜಿದರು.

ಯೇಸು ತನ್ನ ಶಿಷ್ಯರಲ್ಲಿ ನಮ್ರತೆಯುಳ್ಳವನೇ ದೊಡ್ಡವನೆಂದು ತೋರಿಸಿದ್ದು.

(ಮತ್ತಾಯ 18, 1—5; ಮಾರ್ಕ 9, 33—37.)

ತರುವಾಯ ಶಿಷ್ಯರೊಳಗೆ—ತಮ್ಮಲ್ಲಿ ಯಾವನು ಹೆಚ್ಚಿನವನಾಗುವನು ಎಂಬ ವಿಚಾರ 46 ಹುಟ್ಟಿತು. ಯೇಸು ಅವರ ಮನಸ್ಸಿನ ವಿಚಾರವನ್ನು ತಿಳಿದು, ಒಂದು ಚಿಕ್ಕ ಮಗು 47 ವನ್ನು ಹಿಡಿದುಕೊಂಡು ತನ್ನ ಬಳಿಯಲ್ಲಿ ನಿಲ್ಲಿಸಿ, ಅವರಿಗೆ—ಯಾವನಾದರೂ ನನ್ನನ್ನು 48 ನೆನಸಿ ಈ ಚಿಕ್ಕ ಮಗುವನ್ನು ಸೇರಿಸಿಕೊಂಡರೆ ನನ್ನನ್ನು ಸೇರಿಸಿಕೊಂಡಹಾಗಾಯಿತು; ಮತ್ತು ಯಾವನಾದರೂ ನನ್ನನ್ನು ಸೇರಿಸಿಕೊಂಡರೆ ನನ್ನ ಕಳುಹಿಸಿದಾತನನ್ನು ಸೇರಿಸಿ ಕೊಂಡಹಾಗಾಯಿತು; ಯಾಕಂದರೆ ನಿಮ್ಮೆಲ್ಲರಲ್ಲಿ ಯಾವನು ಚಿಕ್ಕವನೋ ಅವನೇ ದೊಡ್ಡವನು ಎಂದು ಹೇಳಿದನು.

ಯೇಸುವಿನ ಶಿಷ್ಯರನ್ನು ಎದುರಿಸದವರು ಅವರ ಪಕ್ಷದವರಾಗಿದ್ದಾರೆಂಬುವ ಬೋಧೆ.

(ಮಾರ್ಕ 9, 38—40.)

ಅದಕ್ಕೆ ಯೋಹಾನನು—ಗುರುವೇ, ಯಾವನೋ ಒಬ್ಬನು ನಿನ್ನ ಹೆಸರನ್ನು ಹೇಳಿ 49 ದೆವ್ವಬಿಡಿಸುವದನ್ನು ನಾವು ಕಂಡು, ಅವನು ನಮಗೆ ಸೇರಿದವನಲ್ಲವಾದ್ದರಿಂದ ಅವನಿಗೆ ಅಡ್ಡಿಮಾಡಿದೆವು ಅನ್ನಲು, ಯೇಸು ಅವನಿಗೆ—ಅಡ್ಡಿಮಾಡಬೇಡಿರಿ; ನಿಮ್ಮನ್ನು ಎದುರಿಸ 50 ದವನು ನಿಮ್ಮ ಪಕ್ಷದವನೇ ಎಂದು ಹೇಳಿದನು.

ಯೇಸು ಯೆರೂಸಲೇಮಿಗೆ ಹೋಗುವಾಗ ಆತನನ್ನು ಸಮಾರ್ಯರು ಸೇರಿಸಿಕೊಳ್ಳದೆ ಹೋದದ್ದು.

ಯೇಸು ತಾನು ಪರಲೋಕವನ್ನೇರುವ ದಿವಸಗಳು ತುಂಬುತ್ತಾ ಬರುವಾಗ, ಯೆರೂ 51 ಸಲೇಮಿಗೆ ಹೋಗುವದಕ್ಕೆ ಮನಸ್ಸನ್ನು ದೃಢಮಾಡಿಕೊಂಡು, ತನ್ನ ಮುಂದಾಗಿ ದೂತ 52 ರನ್ನು ಕಳುಹಿಸಿದನು. ಇವರು ಹೊರಟು ಆತನಿಗೆ ಬೇಕಾದದ್ದನ್ನು ಸಿದ್ಧಮಾಡುವದ ಕ್ಕಾಗಿ ಸಮಾರ್ಯದವರ ಒಂದು ಹಳ್ಳಿಗೆ ಬಂದರು. ಆದರೆ ಆತನು ಯೆರೂಸಲೇಮಿಗೆ 53 ಹೋಗುವವನಾದದರಿಂದ, ಆ ಸಮಾರ್ಯದವರು ಆತನನ್ನು ಸೇರಿಸಿಕೊಳ್ಳಲಿಲ್ಲ. ಆತನ 54 ಶಿಷ್ಯರಾದ ಯಾಕೋಬ ಯೋಹಾನರು ಇದನ್ನು ಕಂಡು—ಸ್ವಾಮಿ, ಆಕಾಶದಿಂದ ಬೆಂಕಿ ಬಿದ್ದು ಇವರನ್ನು ನಾಶಮಾಡಲಿ ಎಂದು ನಾವು[1] ಹೇಳುವದಕ್ಕೆ ನಿನಗೆ ಮನ ಸ್ಸುಂಟೋ ಎಂದು ಕೇಳಲು, ಆತನು ತಿರುಗಿಕೊಂಡು ಅವರನ್ನು ಗದರಿಸಿದನು[2]. ಆಗ 55-56 ಅವರೆಲ್ಲರು ಬೇರೆ ಹಳ್ಳಿಗೆ ಹೋದರು.

---

[1] ಕೆಲವು ಪ್ರತಿಗಳಲ್ಲಿ—ಎಲೀಯನು ಹೇಳಿದಂತೆ ನಾವೂ ಎಂದು ಬರೆದದೆ. ೨ ಅರಸು ೧, ೧೦. ೧೨ ನೋಡಿರಿ.

[2] ಕೆಲವು ಪ್ರತಿಗಳಲ್ಲಿ—ಗದರಿಸಿ ಹೇಳಿದ್ದೇನಂದರೆ, ನೀವೆಂಥಾ ಆತ್ಮಕ್ಕೆ ಅಧೀನರಾದಿರೆಂದು ನಿಮಗೆ ತಿಳಿಯದು; ಮನುಷ್ಯಕುಮಾರನು ಮನುಷ್ಯರ ಪ್ರಾಣಗಳನ್ನು ನಾಶಮಾಡುವದಕ್ಕೆ ಬಂದವನಲ್ಲ, ರಕ್ಷಿಸುವದಕ್ಕೇ ಬಂದವನು ಎಂದು ಬರೆದದೆ.

### ತನ್ನ ಶಿಷ್ಯರು ದೇವರ ಸೇವೆಗೆ ಮೊದಲಾಗಿ ಬೇರೆ ಯಾವದನ್ನೂ ಚಿಂತಿಸಕೂಡದೆಂದು ಯೇಸು ಬೋಧಿಸಿದ್ದು.

(ಮತ್ತಾಯ 8, 19—22.)

57 ಅವರು ದಾರಿಯಲ್ಲಿ ಹೋಗುತ್ತಿರುವಾಗ, ಯಾವನೋ ಒಬ್ಬನು ಯೇಸುವಿಗೆ—
58 ನೀನು ಎಲ್ಲಿಗೆ ಹೋದರೂ ನಾನು ನಿನ್ನ ಹಿಂದೆ ಬರುತ್ತೇನೆ ಎಂದು ಹೇಳಲು, ಆತನು
ಅವನಿಗೆ—ನರಿಗಳಿಗೆ ಗುದ್ದುಗಳವೆ, ಆಕಾಶದಲ್ಲಿ ಹಾರ್ಯಾಡುವ ಹಕ್ಕಿಗಳಿಗೆ ಗೂಡುಗಳವೆ;
ಆದರೆ ಮನುಷ್ಯಕುಮಾರನಿಗೆ ತಲೆಯಿಡುವಷ್ಟು ಸ್ಥಳವೂ ಇಲ್ಲ ಎಂದು ಹೇಳಿದನು.
59 ಆತನು ಮತ್ತೊಬ್ಬನಿಗೆ—ನನ್ನನ್ನು ಹಿಂಬಾಲಿಸು ಎಂದು ಹೇಳಲು, ಅವನು—ಸ್ವಾಮಿಾ,
ನಾನು ಹೋಗಿ ಮೊದಲು ನನ್ನ ತಂದೆಯ ಉತ್ತರಕ್ರಿಯೆಗಳನ್ನು ಮಾಡಿ ಬರುವಂತೆ ನನಗೆ
60 ಅಪ್ಪಣೆಯಾಗಬೇಕು ಅಂದನು. ಆದರೆ ಆತನು ಅವನಿಗೆ—ಸತ್ತವರೇ ತಮ್ಮವರಲ್ಲಿ
ಸತ್ತುಹೋದವರ ಉತ್ತರಕ್ರಿಯೆಗಳನ್ನು ಮಾಡಲಿ, ನೀನಂತೂ ದೇವರ ರಾಜ್ಯವನ್ನು
61 ಪ್ರಸಿದ್ಧಿ ಪಡಿಸು ಎಂದು ಹೇಳಿದನು. ಇನ್ನೊಬ್ಬನು ಸಹ—ಸ್ವಾಮಿಾ, ನಿನ್ನನ್ನು ಹಿಂಬಾ
ಲಿಸುತ್ತೇನೆ; ಆದರೆ ಮೊದಲು ನನ್ನ ಮನೆಯವರಿಗೆ ಹೇಳಿ ಬರುವದಕ್ಕೆ ನನಗೆ ಅಪ್ಪಣೆ
62 ಯಾಗಬೇಕು ಅಂದನು. ಯೇಸು ಅವನಿಗೆ—ಯಾವನಾದರೂ ನೇಗಿಲಿನ ಮೇಲೆ ತನ್ನ
ಕೈಯನ್ನು ಹಾಕಿ ಹಿಂದಕ್ಕೆ ನೋಡಿದರೆ, ಅವನು ದೇವರ ರಾಜ್ಯಕ್ಕೆ ತಕ್ಕವನಲ್ಲವೆಂದು
ಹೇಳಿದನು.

### ಯೇಸು ಎಪ್ಪತ್ತು ಮಂದಿ ಶಿಷ್ಯರನ್ನು ಸುವಾರ್ತೆ ಸಾರುವದಕ್ಕೆ ಕಳುಹಿಸಿದ್ದು; ಅವರು ಹಿಂತಿರುಗಿ ಬಂದು ತಾವು ಮಾಡಿದ್ದನ್ನು ತಿಳಿಸಿದ್ದು.

(ಮತ್ತಾಯ 9, 37. 38; 10, 7—16; 11, 25—27.)

**10** ಇದಾದ ಮೇಲೆ ಸ್ವಾಮಿಯು ಇನ್ನೂ ಎಪ್ಪತ್ತು[1] ಮಂದಿಯನ್ನು ನೇಮಿಸಿ, ಅವರನ್ನು
ಇಬ್ಬಿಬ್ಬರಾಗಿ ತಾನು ಹೋಗಬೇಕೆಂದಿದ್ದ ಪ್ರತಿಯೊಂದೂರಿಗೂ ಪ್ರತಿಯೊಂದು ಸ್ಥಳಕ್ಕೂ
2 ಮುಂದಾಗಿ ಕಳುಹಿಸಿದನು. ಕಳುಹಿಸುವಾಗ ಅವರಿಗೆ ಹೇಳಿದ್ದೇನಂದರೆ—ಬೆಳೆಯು
ಬಹಳ, ಕೆಲಸದವರು ಸ್ವಲ್ಪ; ಆದದರಿಂದ ಬೆಳೇ ಯಜಮಾನನನ್ನು—ನಿನ್ನ ಬೆಳೆಗೆ ಕೆಲಸ
3 ದವರನ್ನು ಕಳುಹಿಸಬೇಕೆಂದು ಬೇಡಿಕೊಳ್ಳಿರಿ. ಹೋಗಿರಿ; ತೋಳಗಳ ನಡುವೆ ಕುರಿ
4 ಗಳನ್ನು ಹೊಗಿಸಿದಂತೆ ನಾನು ನಿಮ್ಮನ್ನು ಕಳುಹಿಸುತ್ತೇನೆ ನೋಡಿರಿ. ಹಮ್ಮಿಾಣಿಯನ್ನಾ
ಗಲಿ ಹಸಿಬೆಯನ್ನಾಗಲಿ ಕೆರಗಳನ್ನಾಗಲಿ ತೆಗೆದುಕೊಂಡು ಹೋಗಬೇಡಿರಿ; ದಾರಿಯಲ್ಲಿ
5 ಯಾರಿಗೂ ವಂದಿಸಬೇಡಿರಿ. ಇದಲ್ಲದೆ ನೀವು ಯಾವ ಮನೆಯಲ್ಲಿ ಇಳುಕೊಂಡರೂ—
6 ಈ ಮನೆಗೆ ಶುಭವಾಗಲಿ ಎಂದು ಮೊದಲು ಹೇಳಿರಿ. ಆಶೀರ್ವಾದಪಾತ್ರನು ಅಲ್ಲಿ
ಇದ್ದರೆ, ನಿಮ್ಮ ಆಶೀರ್ವಾದವು ಅವನ ಮೇಲೆ ನಿಲ್ಲುವದು; ಇಲ್ಲದಿದ್ದರೆ ಅದು ನಿಮಗೆ
7 ಹಿಂತಿರುಗುವದು. ಆ ಮನೆಯಲ್ಲಿಯೇ ಇದ್ದುಕೊಂಡು ಅವರು ಕೊಡುವಂಥಾದ್ದನ್ನು
ಊಟಾಮಾಡಿರಿ, ಕುಡಿಯಿರಿ. ದುಡಿಯುವವನು ತನ್ನ ಕೂಲಿಗೆ ಯೋಗ್ಯನಾಗಿದ್ದಾನಷ್ಟೆ.
8 ಒಂದು ಮನೆಯನ್ನು ಬಿಟ್ಟು ಮತ್ತೊಂದು ಮನೆಗೆ ಹೋಗಿ ಇಳುಕೊಳ್ಳಬೇಡಿರಿ. ಮತ್ತು

[1] ಇಲ್ಲಿಯೂ ೧೭ನೇ ವಚನದಲ್ಲಿಯೂ ಕೆಲವು ಪ್ರತಿಗಳೊಳಗೆ—ಎಪ್ಪತ್ತೆರಡು ಎಂದು ಬರೆದದೆ.

ನೀವು ಯಾವ ಊರಿಗಾದರೂ ಹೋದ ಮೇಲೆ ಆ ಜನರು ನಿಮ್ಮನ್ನು ಸೇರಿಸಿಕೊಂಡರೆ, ಅವರು ನಿಮಗೆ ಬಡಿಸಿದ್ದನ್ನು ಊಟಾಮಾಡಿರಿ. ಅಲ್ಲಿರುವ ರೋಗಿಗಳಿಗೆ ವಾಸಿಮಾಡಿ 9 ಅವರಿಗೆ—ದೇವರ ರಾಜ್ಯವು ನಿಮ್ಮ ಸಮೀಪಕ್ಕೆ ಬಂದದೆ ಎಂದು ಹೇಳಿರಿ. ಆದರೆ ನೀವು 10 ಯಾವ ಊರಿಗಾದರೂ ಹೋದ ಮೇಲೆ ಆ ಜನರು ನಿಮ್ಮನ್ನು ಸೇರಿಸಿಕೊಳ್ಳದಿದ್ದರೆ, ನೀವು ಆ ಊರ ಬೀದಿಗಳಿಗೆ ಬಂದು—ನಿಮ್ಮ ಊರಿಂದ ನಮ್ಮ ಕಾಲುಗಳಿಗೆ ಹತ್ತಿದ ಧೂಳನ್ನೂ 11 ಒರಸಿಬಿಡುತ್ತೇವೆ; ಅದು ನಿಮಗೇ ಇರಲಿ; ಆದಾಗ್ಯೂ ದೇವರ ರಾಜ್ಯವು ಸಮೀಪಕ್ಕೆ ಬಂದದೆ ಎಂದು ನಿಮಗೆ ತಿಳಿದಿರಲಿ ಎಂಬದಾಗಿ ಹೇಳಿರಿ. ಆ ದಿವಸದಲ್ಲಿ ಅಂಥಾ 12 ಊರಿನ ಗತಿಗಿಂತಲೂ ಸೊದೋಮೂರಿನ ಗತಿಯು ಮೇಲಾಗಿರುವದು ಎಂದು ನಿಮಗೆ ಹೇಳುತ್ತೇನೆ. ಅಯ್ಯೋ ಖೊರಾಜಿನೇ, ಅಯ್ಯೋ ಬೆತ್ಸಾಯಿದವೇ, ನಿಮ್ಮಲ್ಲಿ ನಡೆದ 13 ಮಹತ್ಕಾರ್ಯಗಳು ತೂರ್ ಮತ್ತು ಸೀದೋನ್ ಪಟ್ಟಣಗಳಲ್ಲಿ ನಡೆದಿದ್ದರೆ, ಅಲ್ಲಿಯವರು ಆಗಲೇ ಗೋಣೀತಟ್ಟು ಹೊದ್ದುಕೊಂಡು ಬೂದಿಯಲ್ಲಿ ಕೂತುಕೊಂಡು ದೇವರ ಕಡೆಗೆ ತಿರುಗಿಕೊಳ್ಳುತ್ತಿದ್ದರು. ಹ್ಯಾಗೂ ನ್ಯಾಯವಿಚಾರಣೆಯಲ್ಲಿ ನಿಮ್ಮ ಗತಿಗಿಂತಲೂ ತೂರ್ 14 ಮತ್ತು ಸೀದೋನ್ ಪಟ್ಟಣಗಳ ಗತಿಯು ಮೇಲಾಗಿರುವದು. ಎಲಾ ಕಪೆರ್ನೌಮೇ, 15 ನೀನು ಪರಲೋಕಕ್ಕೆ ಏರಿಸಲ್ಪಡುವಿಯಾ? ಇಲ್ಲ, ಪಾತಾಳಕ್ಕೇ ಇಳಿಯುವಿ. ನಿಮ್ಮ 16 ಮಾತನ್ನು ಕೇಳುವವನು ನನ್ನ ಮಾತನ್ನು ಕೇಳುವವನಾಗಿದ್ದಾನೆ; ನಿಮ್ಮನ್ನು ಅಲಕ್ಷ್ಯ ಮಾಡುವವನು ನನ್ನನ್ನು ಅಲಕ್ಷ್ಯಮಾಡುವವನಾಗಿದ್ದಾನೆ; ನನ್ನನ್ನು ಅಲಕ್ಷ್ಯಮಾಡು ವವನು ನನ್ನ ಕಳುಹಿಸಿದಾತನನ್ನು ಅಲಕ್ಷ್ಯಮಾಡುವವನಾಗಿದ್ದಾನೆ ಅಂದನು.

ತರುವಾಯ ಆ ಎಪ್ಪತ್ತು ಮಂದಿಯು ಸಂತೋಷವುಳ್ಳವರಾಗಿ ಹಿಂತಿರುಗಿ ಬಂದು— 17 ಸ್ವಾಮೀ, ದೆವ್ವಗಳು ಕೂಡಾ ನಿನ್ನ ಹೆಸರನ್ನು ಕೇಳಿ ನಮಗೆ ಅಧೀನವಾಗುತ್ತವೆ ಅಂದರು. ಆತನು ಅವರಿಗೆ—ಸೈತಾನನು ಸಿಡಿಲಿನಂತೆ ಆಕಾಶದಿಂದ ಬೀಳುವದನ್ನು ಕಂಡೆನು. 18 ನೋಡಿರಿ, ಹಾವುಗಳನ್ನೂ ಚೇಳುಗಳನ್ನೂ ವೈರಿಯ ಸಮಸ್ತ ಬಲವನ್ನೂ ತುಳಿಯುವ 19 ದಕ್ಕೆ ನಿಮಗೆ ಅಧಿಕಾರ ಕೊಟ್ಟಿದ್ದೇನೆ. ಯಾವದೂ ನಿಮಗೆ ಕೇಡುಮಾಡುವದೇ ಇಲ್ಲ. ಆದಾಗ್ಯೂ ದೆವ್ವಗಳು ನಮಗೆ ಅಧೀನವಾಗಿವೆ ಎಂದು ಸಂತೋಷಪಡದೆ, ನಮ್ಮ ಹೆಸರು 20 ಗಳು ಪರಲೋಕದಲ್ಲಿ ಬರೆದಿರುತ್ತವೆ ಎಂದು ಸಂತೋಷಪಡಿರಿ ಎಂಬದಾಗಿ ಹೇಳಿದನು.

ಅದೇ ಗಳಿಗೆಯಲ್ಲಿ ಆತನು ಪವಿತ್ರಾತ್ಮನ ಪ್ರೇರಣೆಯಿಂದ ಉಲ್ಲಾಸಗೊಂಡು ಹೇಳಿದ್ದೇ 21 ನಂದರೆ—ತಂದೆಯೇ, ಪರಲೋಕ ಭೂಲೋಕಗಳ ಒಡೆಯನೇ, ನೀನು ಜ್ಞಾನಿಗಳಿಗೂ ಬುದ್ಧಿವಂತರಿಗೂ ಈ ಮಾತುಗಳನ್ನು ಮರೆಮಾಡಿ ಬಾಲಕರಿಗೆ ಪ್ರಕಟಮಾಡಿದ್ದೀ ಎಂದು ನಿನ್ನನ್ನು ಕೊಂಡಾಡುತ್ತೇನೆ. ಹೌದು, ತಂದೆಯೇ, ಹೀಗೆ ಮಾಡುವದೇ ನಿನ್ನ ದೃಷ್ಟಿಗೆ ಒಳ್ಳೇದೆಂದು ತೋರಿದ್ದರಿಂದ ನಿನ್ನನ್ನು ಕೊಂಡಾಡುತ್ತೇನೆ. ನನ್ನ ತಂದೆಯು ಎಲ್ಲವನ್ನೂ 22 ನನಗೆ ಒಪ್ಪಿಸಿದ್ದಾನೆ. ಮಗನು ಇಂಥವನೆಂದು ತಂದೆಯಲ್ಲದೆ ಇನ್ನ್ಯಾವನೂ ತಿಳಿದವ ನಲ್ಲ; ತಂದೆ ಇಂಥವನೆಂದು ಮಗನಲ್ಲದೆ ಇನ್ನ್ಯಾವನೂ ತಿಳಿದವನಲ್ಲ; ಮತ್ತು ಮಗನು ತಂದೆಯನ್ನು ಯಾರಿಗೆ ಪ್ರಕಟಿಸುವದಕ್ಕೆ ಮನಸ್ಸುಳ್ಳವನಾಗಿದ್ದಾನೋ ಅವನೂ ಆತನನ್ನು ತಿಳಿದವನಾಗಿದ್ದಾನೆ ಅಂದನು. ಆ ಮೇಲೆ ಆತನು ಶಿಷ್ಯರ ಕಡೆಗೆ ತಿರುಗಿಕೊಂಡು ಏಂಗ 23 ಡವಾಗಿ ಹೇಳಿದ್ದೇನಂದರೆ—ನೀವು ನೋಡುವ ಸಂಗತಿಗಳನ್ನು ನೋಡುವವರು ಧನ್ಯರು.

24 ಬಹುಮಂದಿ ಪ್ರವಾದಿಗಳೂ ಅರಸರೂ ನೀವು ನೋಡುವ ಸಂಗತಿಗಳನ್ನು ನೋಡಬೇಕೆಂದು ಅಪೇಕ್ಷಿಸಿದರೂ ನೋಡಲಿಲ್ಲ, ನೀವು ಕೇಳುವ ಮಾತುಗಳನ್ನು ಕೇಳಬೇಕೆಂದು ಅಪೇಕ್ಷಿಸಿದರೂ ಕೇಳಲಿಲ್ಲ ಎಂಬದಾಗಿ ನಿಮಗೆ ಹೇಳುತ್ತೇನೆ ಅಂದನು.

ಯೇಸು ಕರುಣೆಯುಳ್ಳ ಸಮಾರ್ಯದವನ ದೃಷ್ಟಾಂತವನ್ನು ಹೇಳಿದ್ದು.

25 ಆಗ ಒಬ್ಬ ಧರ್ಮೋಪದೇಶಕನು ಎದ್ದು ಆತನನ್ನು ಪರೀಕ್ಷಿಸುವದಕ್ಕಾಗಿ—ಬೋಧಕನೇ, ನಾನು ನಿತ್ಯಜೀವಕ್ಕೆ ಬಾಧ್ಯನಾಗುವಂತೆ ಏನು ಮಾಡಬೇಕು ಎಂದು ಕೇಳಲು,
26 ಆತನು ಅವನಿಗೆ—ಶಾಸ್ತ್ರದಲ್ಲಿ ಏನು ಬರೆದದೆ? ಹ್ಯಾಗೆ ಓದಿದ್ದೀ? ಎಂದು ಹೇಳಿದನು.
27 ಅದಕ್ಕೆ ಅವನು—ನಿನ್ನ ದೇವರಾಗಿರುವ ಕರ್ತನನ್ನು ನಿನ್ನ ಪೂರ್ಣ ಮನಸ್ಸಿನಿಂದಲೂ ನಿನ್ನ ಪೂರ್ಣ ಪ್ರಾಣದಿಂದಲೂ ನಿನ್ನ ಪೂರ್ಣ ಶಕ್ತಿಯಿಂದಲೂ ನಿನ್ನ ಪೂರ್ಣ ಬುದ್ಧಿಯಿಂದಲೂ ಪ್ರೀತಿಸು. ಮತ್ತು ನಿನ್ನನ್ನು ಪ್ರೀತಿಸಿಕೊಳ್ಳುವಂತೆ ನಿನ್ನ ನೆರೆಯವನನ್ನೂ
28 ಪ್ರೀತಿಸು ಎಂದು ಬರೆದದೆ ಅಂದನು. ಆತನು ಅವನಿಗೆ—ನೀನು ಸರಿಯಾಗಿ ಉತ್ತರ
29 ಕೊಟ್ಟೆ; ಇದರಂತೆ ಮಾಡು, ಮಾಡಿದರೆ ಜೀವಿಸುವಿ ಎಂದು ಹೇಳಿದನು. ಆದರೆ ಅವನು ತನ್ನನ್ನು ನೀತಿವಂತನೆಂದು ತೋರಿಸಿಕೊಳ್ಳುವದಕ್ಕೆ ಅಪೇಕ್ಷಿಸಿ—ನನ್ನ ನೆರೆ
30 ಯವನು ಯಾರು ಎಂದು ಯೇಸುವನ್ನು ಕೇಳಲು, ಯೇಸು ಅವನಿಗೆ ಪ್ರತ್ಯುತ್ತರವಾಗಿ ಹೇಳಿದ್ದೇನಂದರೆ—ಒಬ್ಬಾನೊಬ್ಬ ಮನುಷ್ಯನು ಯೆರೂಸಲೇಮಿನಿಂದ ಘಟ್ಟಾ ಇಳಿದು ಯೆರಿಕೋವಿಗೆ ಹೋಗುತ್ತಿರುವಾಗ ಕಳ್ಳರ ಕೈಗೆ ಸಿಕ್ಕಿದನು. ಅವರು ಅವನನ್ನು ಸುಲಿಗೆ ಮಾಡಿಕೊಂಡು, ಗಾಯವಾಗುವಷ್ಟು ಹೊಡೆದು ಅವನನ್ನು ಅರೆಜೀವಮಾಡಿ ಬಿಟ್ಟು
31 ಹೋದರು. ಆಗ ಹ್ಯಾಗೋ ಒಬ್ಬ ಯಾಜಕನು ಆ ದಾರಿಯಲ್ಲಿ ಇಳಿದುಬರುತ್ತಾ ಅವ
32 ನನ್ನು ಕಂಡು ವಾರೆಯಾಗಿ ಹೋದನು. ಅದೇ ರೀತಿಯಲ್ಲಿ ಒಬ್ಬ ಲೇವ್ಯನೂ ಆ ಸ್ಥಳಕ್ಕೆ
33 ಬಂದು ಅವನನ್ನು ಕಂಡು ವಾರೆಯಾಗಿ ಹೋದನು. ಆದರೆ ಒಬ್ಬ ಸಮಾರ್ಯದವನು
34 ಪ್ರಯಾಣಮಾಡುತ್ತಾ ಅವನಿದ್ದಲ್ಲಿಗೆ ಬಂದು ಅವನನ್ನು ಕಂಡು, ಕನಿಕರಿಸಿ ಅವನ ಹತ್ತರಕ್ಕೆ ಹೋಗಿ, ಅವನ ಗಾಯಗಳಲ್ಲಿ ಎಣ್ಣೆಯನ್ನೂ ದ್ರಾಕ್ಷಾರಸವನ್ನೂ ಹೊಯ್ದು, ಕಟ್ಟಿ, ತನ್ನ ಸ್ವಂತ ವಾಹನದ ಮೇಲೆ ಹತ್ತಿಸಿಕೊಂಡು, ಛತ್ರಕ್ಕೆ ಕರಕೊಂಡು ಹೋಗಿ ಅವನನ್ನು
35 ಆರೈಕೆಮಾಡಿದನು. ಮರುದಿನ ಅವನು ಎರಡು ಹಣಗಳನ್ನು ತೆಗೆದು ಛತ್ರದವನಿಗೆ ಕೊಟ್ಟು—ಇವನನ್ನು ಆರೈಕೆಮಾಡು; ಇದಕ್ಕಿಂತ ಹೆಚ್ಚಾಗಿ ಏನಾದರೂ ವೆಚ್ಚಮಾಡಿದರೆ,
36 ನಾನು ಹಿಂತಿರುಗಿ ಬಂದಾಗ ನಿನಗೆ ಕೊಡುವೆನು ಅಂದನು. ಈ ಮೂವರಲ್ಲಿ ಯಾವನು ಕಳ್ಳರ ಕೈಗೆ ಸಿಕ್ಕಿದವನಿಗೆ ನೆರೆಯವನಾದನೆಂದು ನಿನಗೆ ತೋರುತ್ತದೆ ಹೇಳು ಎಂದು ಕೇಳಿ
37 ದ್ದಕ್ಕೆ ಆ ಧರ್ಮೋಪದೇಶಕನು—ಅವನಿಗೆ ದಯತೋರಿಸಿದವನೇ ಅಂದನು. ಆಗ ಯೇಸು ಅವನಿಗೆ—ಹೋಗು, ನೀನೂ ಅದರಂತೆ ಮಾಡು ಎಂದು ಹೇಳಿದನು.

**ಮಾರ್ಥಳು ಮರಿಯಳು ಎಂಬವರ ಮನೆಯಲ್ಲಿ ಯೇಸು ಇಳುಕೊಂಡದ್ದು.**

ಅವರು ಸಂಚಾರವಮಾಡುತ್ತಿರುವಾಗ ಆತನು ಒಂದಾನೊಂದು ಹಳ್ಳಿಗೆ ಬಂದನು; 38 ಅಲ್ಲಿ ಮಾರ್ಥಳೆಂಬ ಒಬ್ಬ ಸ್ತ್ರೀಯು ಆತನನ್ನು ತನ್ನ ಮನೆಯಲ್ಲಿ ಇಳಿಸಿಕೊಂಡಳು. ಆಕೆಗೆ ಮರಿಯಳೆಂಬ ಒಬ್ಬ ತಂಗಿ ಇದ್ದಳು. 39 ಈಕೆಯು ಸ್ವಾಮಿಯ ಪಾದಗಳ ಬಳಿಯಲ್ಲಿ ಕೂತುಕೊಂಡು ಆತನ ವಾಕ್ಯವನ್ನು ಕೇಳುತ್ತಿದ್ದಳು. 40 ಆದರೆ ಮಾರ್ಥಳು ಬಹಳ ಸೇವೆಯ ವಿಷಯವಾಗಿ ಬೇಸತ್ತು ಆತನ ಬಳಿಗೆ ಬಂದು—ಸ್ವಾಮಿಾ, ನನ್ನ ತಂಗಿಯು ಸೇವೆಗೆ ನನ್ನೊಬ್ಬಳನ್ನೇ ಬಿಟ್ಟಿದ್ದಾಳೆ; ಇದಕ್ಕೆ ನಿನಗೆ ಚಿಂತೆಯಿಲ್ಲವೋ? ನನಗೆ ನೆರವಾಗ ಬೇಕೆಂದು ಆಕೆಗೆ ಹೇಳು ಅಂದಳು. 41 ಸ್ವಾಮಿಯು ಆಕೆಗೆ—ಮಾರ್ಥಳೇ, ಮಾರ್ಥಳೇ, ನೀನು ಅನೇಕ ವಿಷಯವಾಗಿ ಚಿಂತೆಯಲ್ಲಿಯೂ ಗಡಬಿಡಿಯಲ್ಲಿಯೂ ಸಿಕ್ಕಿಕೊಂಡಿದ್ದೀ. 42 ಕೆಲವು ಮಾತ್ರ ಬೇಕಾದದ್ದು, ಅಥವಾ ಒಂದೇ[1], ಮರಿಯಳು ಆ ಉತ್ತಮ ಭಾಗವನ್ನು ಆರಿಸಿಕೊಂಡಿದ್ದಾಳೆ; ಅದು ಆಕೆಯಿಂದ ತೆಗೆಯಲ್ಪಡುವದಿಲ್ಲ ಎಂದು ಉತ್ತರಕೊಟ್ಟನು.

**ಮನುಷ್ಯರು ದೇವರ ಪ್ರಾರ್ಥನೆಯಲ್ಲಿ ಆಸಕ್ತರಾಗಿರಬೇಕೆಂದು ಯೇಸುವು ಸಾಮ್ಯರೂಪವಾಗಿ ಬೋಧಿಸಿದ್ದು.**

**(ಮತ್ತಾಯ 6, 9—13; 7, 7—11.)**

**11** ಆತನು ಒಂದಾನೊಂದು ಸ್ಥಳದಲ್ಲಿ ಪ್ರಾರ್ಥನೆಮಾಡಿ ಮುಗಿಸಿದಾಗ, ಆತನ ಶಿಷ್ಯರಲ್ಲಿ ಒಬ್ಬನು ಆತನಿಗೆ—ಸ್ವಾಮಿಾ, ಯೋಹಾನನು ತನ್ನ ಶಿಷ್ಯರಿಗೆ ಕಲಿಸಿದ ಹಾಗೆ ನಮಗೂ ಪ್ರಾರ್ಥನೆಮಾಡುವದನ್ನು ಕಲಿಸು ಎಂದು ಕೇಳಿದನು. 2 ಅದಕ್ಕಾತನು—ನೀವು ಪ್ರಾರ್ಥಿಸುವಾಗ—

ತಂದೆಯೇ, ನಿನ್ನ ನಾಮವು ಪರಿಶುದ್ಧವೆಂದು ಎಣಿಸಲ್ಪಡಲಿ.
ನಿನ್ನ ರಾಜ್ಯವು ಬರಲಿ.
3 ನಮಗೆ ಬೇಕಾದ ಆಹಾರವನ್ನು ದಿನದಿನವೂ ದಯಪಾಲಿಸು.
4 ನಮಗೆ ತಪ್ಪುಮಾಡಿರುವ ಪ್ರತಿಯೊಬ್ಬನನ್ನು ನಾವು ಕ್ಷಮಿಸುತ್ತೇವಾದ್ದರಿಂದ
  ನಮ್ಮ ಪಾಪಗಳನ್ನೂ ಕ್ಷಮಿಸು.
ನಮ್ಮನ್ನು ಶೋಧನೆಗೆ ಗುರಿಮಾಡಬೇಡ

ಎಂದು ಹೇಳಿರಿ ಅಂದನು.

5 ಮತ್ತು ಅವರಿಗೆ ಹೇಳಿದ್ದೇನಂದರೆ—ನಿಮ್ಮಲ್ಲಿ ಒಬ್ಬನಿಗೆ ಸ್ನೇಹಿತನಿದ್ದಾನೆ ಎಂದು ಹೇಳೋಣ. ಅವನು ಸರುಹೊತ್ತಿನಲ್ಲಿ ಆ ಸ್ನೇಹಿತನ ಬಳಿಗೆ ಹೋಗಿ—ಸ್ನೇಹಿತನೇ, ನನಗೆ ಮೂರು ರೊಟ್ಟಿಗಳನ್ನು ಕಡವಾಗಿ ಕೊಡು. 6 ನನ್ನ ಸ್ನೇಹಿತರಲ್ಲಿ ಒಬ್ಬನು ಎಲ್ಲಿಗೋ ಪ್ರಯಾಣವಾಗಿ ನನ್ನ ಬಳಿಗೆ ಬಂದಿದ್ದಾನೆ; ಅವನಿಗೆ ಊಟಾಮಾಡಿಸುವದಕ್ಕೆ ನನ್ನಲ್ಲಿ ಏನೂ ಇಲ್ಲ ಎಂದು ಕೇಳಲು, 7 ಆ ಸ್ನೇಹಿತನು—ನನಗೆ ತೊಂದರೆಕೊಡಬೇಡ; ಈಗ ಕದಾ ಹಾಕಿ ಅದೆ; ನನ್ನ ಚಿಕ್ಕ ಮಕ್ಕಳು ನನ್ನ ಕೂಡ ಮಲಗಿದ್ದಾರೆ; ನಾನು ಎದ್ದು ನಿನಗೆ

[1] ಕೆಲವು ಪ್ರತಿಗಳಲ್ಲಿ—ಬೇಕಾದದ್ದು ಒಂದೇ ಎಂದು ಬರೆದದೆ.

ಕೊಡುವದಕ್ಕಾಗುವದಿಲ್ಲ ಎಂದು ಒಳಗಿನಿಂದ ಉತ್ತರಕೊಟ್ಟರೂ ಕೊಡಬಹುದು.
8 ಆದರೆ ಸ್ನೇಹದ ನಿಮಿತ್ತವಾಗಿ ಎದ್ದು ಕೊಡದೆ ಇದ್ದಾಗ್ಯೂ ಅವನ ಕಾಟದ ದೆಸೆಯಿಂದ ಎದ್ದು ಬಂದು, ಕೇಳಿದಷ್ಟು ಅವನಿಗೆ ಕೊಡುವನೆಂದು ನಿಮಗೆ ಹೇಳುತ್ತೇನೆ.
9 ಹಾಗೆಯೇ ನಾನು ನಿಮಗೆ ಹೇಳುವದೇನಂದರೆ—ಬೇಡಿಕೊಳ್ಳಿರಿ, ನಿಮಗೆ ದೊರಕುವದು;
10 ಹುಡುಕಿರಿ, ನಿಮಗೆ ಸಿಕ್ಕುವದು; ತಟ್ಟಿರಿ, ನಿಮಗೆ ತೆರೆಯುವದು. ಯಾಕಂದರೆ ಬೇಡಿಕೊಳ್ಳುವ ಪ್ರತಿಯೊಬ್ಬನೂ ಹೊಂದುತ್ತಾನೆ, ಹುಡುಕುವವನಿಗೆ ಸಿಕ್ಕುತ್ತದೆ, ತಟ್ಟುವವನಿಗೆ ತೆರೆಯುವದು.
11 ನಿಮ್ಮಲ್ಲಿ ತಂದೆಯಾದವನು[1] ಮೀನನ್ನು ಕೇಳಿದ ಮಗನಿಗೆ
12 ಮೀನು ಕೊಡದೆ ಹಾವನ್ನು ಕೊಡುವನೇ? ಅಥವಾ ತತ್ತಿಯನ್ನು[2] ಕೇಳಿದ ಅವನಿಗೆ
13 ಚೇಳನ್ನು ಕೊಡುವನೇ? ಹಾಗಾದರೆ, ಕೆಟ್ಟವರಾದ ನೀವು ನಿಮ್ಮ ಮಕ್ಕಳಿಗೆ ಒಳ್ಳೇ ಪದಾರ್ಥ ಕೊಡುವದನ್ನು ತಿಳಿದವರಾಗಿರುವಲ್ಲಿ ಪರಲೋಕದಲ್ಲಿರುವ ನಿಮ್ಮ ತಂದೆಯು ತನ್ನನ್ನು ಬೇಡಿಕೊಳ್ಳುವವರಿಗೆ ಪವಿತ್ರಾತ್ಮವರವನ್ನು ಎಷ್ಟೋ ಹೆಚ್ಚಾಗಿ ಕೊಡುವನಲ್ಲವೇ ಅಂದನು.

ಫರಿಸಾಯರು ಯೇಸುವನ್ನು ದೂಷಿಸಿ, ಸೂಚಕಕಾರ್ಯವನ್ನು ನೋಡಬೇಕೆಂದು ಕೇಳಿಕೊಂಡಾಗ, ಯೇಸು ಕೊಟ್ಟ ಉತ್ತರ.

(ಮತ್ತಾಯ **12**, 22—45; ಮಾರ್ಕ **3**, 22—30; **8**, 11. 12.)

14 ಒಂದಾನೊಂದು ಸಮಯದಲ್ಲಿ ಆತನು ಮೂಕದೆವ್ವವನ್ನು ಬಿಡಿಸುತ್ತಿದ್ದನು. ಆ ದೆವ್ವವು ಬಿಟ್ಟುಹೋದ ಮೇಲೆ ಮೂಕನು ಮಾತಾಡಿದನು; ಅದಕ್ಕೆ ಜನರು ಆಶ್ಚರ್ಯ
15 ಪಟ್ಟರು. ಆದರೆ ಅವರಲ್ಲಿ ಕೆಲವರು—ಇವನು ದೆವ್ವಗಳ ಒಡೆಯನಾದ ಬೆಲ್ಜೆಬೂಲನ
16 ಸಹಾಯದಿಂದ ದೆವ್ವಗಳನ್ನು ಬಿಡಿಸುತ್ತಾನೆ ಅಂದರು. ಬೇರೆ ಕೆಲವರು ಆತನನ್ನು ಪರೀಕ್ಷಿಸುವದಕ್ಕಾಗಿ—ಆಕಾಶದೊಳಗಿಂದ ಒಂದು ಸೂಚಕಕಾರ್ಯವು ನಿನ್ನಿಂದಾಗ
17 ಬೇಕು ಎಂದು ಕೇಳಿದರು. ಆತನು ಅವರ ಆಲೋಚನೆಗಳನ್ನು ತಿಳುಕೊಂಡು ಅವರಿಗೆ ಹೇಳಿದ್ದೇನಂದರೆ—ತನ್ನಲ್ಲಿ ಭೇದಹುಟ್ಟಿದ ರಾಜ್ಯವು ಹಾಳಾಗುತ್ತದೆ; ಮತ್ತು ತನ್ನಲ್ಲಿ
18 ಭೇದಹುಟ್ಟಿದ ಮನೆ ಬೀಳುತ್ತದೆ. ಅದರಂತೆ ಸೈತಾನನಲ್ಲಿ ಭೇದಹುಟ್ಟಿದರೆ, ಅವನ ರಾಜ್ಯವು ಹ್ಯಾಗೆ ಉಳಿದೀತು? ಬೆಲ್ಜೆಬೂಲನ ಬಲದಿಂದ ದೆವ್ವಗಳನ್ನು ಬಿಡಿಸುತ್ತೀ ಎಂದು
19 ನನಗೆ ಹೇಳುತ್ತೀರಲ್ಲಾ. ನಾನು ಬೆಲ್ಜೆಬೂಲನ ಬಲದಿಂದ ದೆವ್ವಗಳನ್ನು ಬಿಡಿಸುವದಾದರೆ, ನಿಮ್ಮವರು ಯಾರ ಬಲದಿಂದ ಬಿಡಿಸುತ್ತಾರೆ? ಅವರೇ ಈ ವಿಷಯದಲ್ಲಿ ನಿಮಗೆ
20 ತೀರ್ಪುಮಾಡುವರು. ನಾನು ದೇವರ ಬಲದಿಂದಲೇ ದೆವ್ವಗಳನ್ನು ಬಿಡಿಸುವದಾದರೆ,
21 ದೇವರ ರಾಜ್ಯವು ನಿಮ್ಮ ಹತ್ತರಕ್ಕೆ ಬಂತಲ್ಲಾ. ಒಬ್ಬ ಬಲಿಷ್ಠನು ಸರ್ವಾಯುಧಗಳನ್ನು ಧರಿಸಿಕೊಂಡು ತನ್ನ ಮನೆಯನ್ನು ಕಾಪಾಡಿಕೊಂಡಿರುವಾಗ ಅವನ ವಸ್ತುಗಳು
22 ಭದ್ರವಾಗಿಯೇ ಇರುವವು; ಆದರೆ ಅವನಿಗಿಂತ ಬಲಿಷ್ಠನು ಬಂದು ಅವನನ್ನು ಸೋಲಿಸಿದ ಮೇಲೆ, ಆ ಮೊದಲಿನವನು ನೆಚ್ಚಿಕೊಂಡಿದ್ದ ಆಯುಧಗಳನ್ನೆಲ್ಲಾ ತೆಗೆದುಕೊಂಡು

[1] ಕೆಲವು ಪ್ರತಿಗಳಲ್ಲಿ—ರೊಟ್ಟಿಯನ್ನು ಕೇಳಿದ ಮಗನಿಗೆ ಕಲ್ಲನ್ನು ಕೊಡುವನೇ ಎಂದು ಹೆಚ್ಚಾಗಿ ಬರೆದದೆ.
[2] ಅಥವಾ, ಮೊಟ್ಟೆಯನ್ನು.

ತಾನು ಸುಲಿಗೆಮಾಡಿದ್ದನ್ನು ಹಂಚಿಕೊಡುವನು. ನನ್ನ ಪಕ್ಷ ಹಿಡಿಯದವನು ನನಗೆ 23 ವಿರೋಧಿ; ನನ್ನ ಜೊತೆಯಲ್ಲಿ ಒಟ್ಟುಗೂಡಿಸದವನು ಚದರಿಸುವವನಾಗುತ್ತಾನೆ. ದೆವ್ವವು 24 ಮನುಷ್ಯನನ್ನು ಬಿಟ್ಟುಹೋದ ಮೇಲೆ, ವಿಶ್ರಾಂತಿಯನ್ನು ಹುಡುಕುತ್ತಾ ನೀರಿಲ್ಲದ ಸ್ಥಳಗಳಲ್ಲಿ ತಿರುಗಾಡುತ್ತದೆ; ವಿಶ್ರಾಂತಿ ಸಿಕ್ಕದ ಕಾರಣ, ಅದು—ನಾನು ಬಿಟ್ಟುಬಂದ ನನ್ನ ಮನೆಗೆ ಹಿಂತಿರುಗಿ ಹೋಗುತ್ತೇನೆ ಅಂದುಕೊಂಡು ಬಂದು, ಆ ಮನೆ ಗುಡಿಸಿ ಅಲಂಕರಿ 25 ಸಿದ್ದಾಗಿರುವದನ್ನು ಕಂಡು, ಹೊರಟುಹೋಗಿ ತನಗಿಂತ ಕೆಟ್ಟವುಗಳಾದ ಬೇರೆ ಏಳು 26 ದೆವ್ವಗಳನ್ನು ಕರಕೊಂಡು ಬರುವದು; ಅವು ಒಳಹೊಕ್ಕು ಅಲ್ಲಿ ವಾಸಮಾಡುವವು; ಆಗ ಆ ಮನುಷ್ಯನ ಅಂತ್ಯಸ್ಥಿತಿಯು ಮೊದಲಿಗಿಂತ ಕೆಟ್ಟದ್ದಾಗುವದು ಅಂದನು.

ಆತನು ಈ ಮಾತುಗಳನ್ನು ಹೇಳುತ್ತಿರುವಾಗ, ಜನರಲ್ಲಿ ಒಬ್ಬ ಸ್ತ್ರೀಯು—ನಿನ್ನನ್ನು 27 ಹೊತ್ತ ಗರ್ಭವೂ ನೀನು ಕುಡಿದ ಮೊಲೆಗಳೂ ಧನ್ಯವಾದವುಗಳು ಎಂದು ಕೂಗಿದಳು. ಆತನು—ಹಾಗನ್ನ ಬೇಡ, ದೇವರ ವಾಕ್ಯವನ್ನು ಕೇಳಿ ಅದಕ್ಕೆ ಸರಿಯಾಗಿ ನಡಕೊಳ್ಳು 28 ವವರೇ ಧನ್ಯರು ಅಂದನು.

ಜನರು ಗುಂಪುಗುಂಪಾಗಿ ಕೂಡಿಬರುತ್ತಿರುವಾಗ ಆತನು ಹೇಳುವದಕ್ಕೆ ತೊಡಗಿದ್ದೇ 29 ನಂದರೆ—ಈ ಸಂತತಿ ಕೆಟ್ಟ ಸಂತತಿಯೇ; ಇದು ಸೂಚಕಕಾರ್ಯವನ್ನು ನೋಡಬೇಕೆಂದು ಅಪೇಕ್ಷಿಸುತ್ತದೆ. ಆದರೆ ಇದಕ್ಕೆ ಯೋನನಲ್ಲಿ ಆದ ಸೂಚಕಕಾರ್ಯವೇ ಹೊರತು ಬೇರೆ ಯಾವದೂ ಸಿಕ್ಕುವದಿಲ್ಲ. ಹ್ಯಾಗಂದರೆ, ಯೋನನು ನಿನವೇ ಪಟ್ಟಣದವರಿಗೆ ಗುರುತಾದ 30 ಹಾಗೆಯೇ ಮನುಷ್ಯಕುಮಾರನು ಈ ಸಂತತಿಗೆ ಗುರುತಾಗುವನು. ದಕ್ಷಿಣದೇಶದ 31 ರಾಣಿಯು ನ್ಯಾಯವಿಚಾರಣೆಯಲ್ಲಿ ಈ ಸಂತತಿಯವರೊಂದಿಗೆ ಎದ್ದು ನಿಂತು, ಇವರನ್ನು ಅಪರಾಧಿಗಳೆಂದು ಹೇಳುವಳು; ಆಕೆಯು ಸೊಲೊಮೋನನ ಜ್ಞಾನವನ್ನು ತಿಳುಕೊಳ್ಳು ವದಕ್ಕೆ ಭೂಮಿಯ ಕಟ್ಟಕಡೆಯಿಂದ ಬಂದಳು; ಆದರೆ ಇಲ್ಲಿ ಸೊಲೊಮೋನನಿಗಿಂತಲೂ ಹೆಚ್ಚಿನವನಿದ್ದಾನೆ. ನ್ಯಾಯವಿಚಾರಣೆಯಲ್ಲಿ ನಿನವೇ ಪಟ್ಟಣದವರು ಈ ಸಂತತಿಯವ 32 ರೊಂದಿಗೆ ನಿಂತು, ಇವರನ್ನು ಅಪರಾಧಿಗಳೆಂದು ಹೇಳುವರು. ಯೋನನು ಸಾರಿದ ವಾಕ್ಯವನ್ನು ಅವರು ಕೇಳಿ ದೇವರ ಕಡೆಗೆ ತಿರುಗಿಕೊಂಡರು; ಆದರೆ ಇಲ್ಲಿ ಯೋನನಿ ಗಿಂತಲೂ ಹೆಚ್ಚಿನವನಿದ್ದಾನೆ.

ಯಾರೂ ದೀಪಾಹಚ್ಚಿ ಮರೆಯಲ್ಲಾಗಲಿ ಕೊಳಗದ ಒಳಗಾಗಲಿ ಇಡುವದಿಲ್ಲ. 33 ಮನೆಯೊಳಕ್ಕೆ ಬರುವವರಿಗೆ ಬೆಳಕು ಕಾಣಿಸುವಂತೆ ಆ ದೀಪವನ್ನು ದೀಪಸ್ತಂಭದ ಮೇಲೆಯೇ ಇಡುತ್ತಾರೆ[1]. ದೇಹಕ್ಕೆ ನಿನ್ನ ಕಣ್ಣೇ ದೀಪ; ನಿನ್ನ ಕಣ್ಣು ನೆಟ್ಟಗಿರುವಾಗ 34 ನಿನ್ನ ದೇಹವೆಲ್ಲಾ ಬೆಳಕಿನಿಂದ ತುಂಬಿಕೊಂಡಿರುವದು; ಅದು ಕೆಟ್ಟದ್ದಾಗಿರುವಾಗ ನಿನ್ನ ದೇಹವು ಸಹ ಕತ್ತಲೆಯಿಂದ ತುಂಬಿಕೊಂಡಿರುವದು. ಆದದರಿಂದ ನಿನ್ನಲ್ಲಿರುವ 35 ಬೆಳಕು ಕತ್ತಲೆಯಾಗಿದೆಯೋ ಏನೋ ನೋಡು. ನಿನ್ನ ದೇಹವೆಲ್ಲಾ ಬೆಳಕಿನಿಂದ ತುಂಬಿ 36 ಕೊಂಡದ್ದಾಗಿ ಒಂದು ಭಾಗದಲ್ಲಿಯೂ ಕತ್ತಲೆಯಿಲ್ಲದ್ದಾಗಿದ್ದರೆ, ದೀಪವು ಹೊಳೆದು ನಿನಗೆ ಬೆಳಕನ್ನು ಕೊಡುವ ಕಾಲದಲ್ಲಿ ಹ್ಯಾಗೋ ಹಾಗೆಯೇ ಅದು ಪೂರ್ಣವಾಗಿ ಬೆಳಕಿನಿಂದ ತುಂಬಿಕೊಂಡಿರುವದು[2] ಅಂದನು.

---

[1] [illegible] ೮, ೧೬; ಮತ್ತಾಯ ೫, ೧೫. [2] ಮತ್ತಾಯ ೬, ೨೨. ೨೩.

ಯೇಸು ಫರಿಸಾಯರ ದುರ್ಗುಣಗಳನ್ನು ಖಂಡಿಸಿದ್ದು.

(ಮತ್ತಾಯ 23, 1—36.)

37 ಆತನು ಮಾತಾಡುತ್ತಿರುವಾಗ ಒಬ್ಬ ಫರಿಸಾಯನು ಆತನನ್ನು ಊಟಕ್ಕೆ ಬರ
38 ಬೇಕೆಂದು ಕೇಳಿಕೊಳ್ಳಲು, ಆತನು ಒಳಕ್ಕೆ ಹೋಗಿ ಊಟಕ್ಕೆ ಕೂತುಕೊಂಡನು. ಆತನು ತೊಳಕೊಳ್ಳದೆ ಊಟಕ್ಕೆ ಕೂತದ್ದನ್ನು ಆ ಫರಿಸಾಯನು ಕಂಡು ಆಶ್ಚರ್ಯಪಟ್ಟನು.
39 ಸ್ವಾಮಿಯು ಅವನಿಗೆ—ಫರಿಸಾಯರಾದ ನೀವು ಪಂಚಪಾತ್ರೆ ಬಟ್ಟಲು ಇವುಗಳ ಹೊರ ಭಾಗವನ್ನು ಶುಚಿಮಾಡುತ್ತೀರಿ ಸರಿ; ಆದರೆ ನಿಮ್ಮ ಒಳಭಾಗವು ಸುಲಿಗೆಯಿಂದಲೂ
40 ಕೆಟ್ಟತನದಿಂದಲೂ ತುಂಬಿಹೋಗಿದೆ. ಬುದ್ಧಿಯಿಲ್ಲದವರೇ, ಹೊರಭಾಗವನ್ನು ಮಾಡಿ
41 ದಾತನು ಒಳಭಾಗವನ್ನೂ ಮಾಡಿದನಲ್ಲವೇ? ಹ್ಯಾಗೂ ಒಳಗಿರುವಂಥಾದ್ದನ್ನು ದಾನಾ ಕೊಡಿರಿ; ಆಗ ಸಕಲವೂ ನಿಮಗೆ ಶುದ್ಧವಾಗಿರುವದು.

42 ಅಯ್ಯೋ ಫರಿಸಾಯರೇ, ನೀವು ಮರುಗ ಸದಾಪು ಮುಂತಾದ ಸಕಲ ಪಲ್ಯಗಳಲ್ಲಿ ಹತ್ತರಲ್ಲೊಂದು ಪಾಲು ಕೊಡುತ್ತೀರಿ ಸರಿ; ಆದರೆ ನ್ಯಾಯವನ್ನೂ ದೇವರ ಪ್ರೀತಿಯನ್ನೂ ಒತ್ತಟ್ಟಿಗೆ ಬಿಟ್ಟಿದ್ದೀರಿ; ಇವುಗಳನ್ನು ಅನುಸರಿಸಬೇಕಾಗಿತ್ತು, ಅವುಗಳನ್ನೂ ಬಿಡ
43 ಬಾರದು. ಅಯ್ಯೋ ಫರಿಸಾಯರೇ, ಸಭಾಮಂದಿರಗಳಲ್ಲಿ ಮೇಲಿನ ಸ್ಥಳಗಳೂ ಅಂಗಡಿ
44 ಬೀದಿಗಳಲ್ಲಿ ನಮಸ್ಕಾರಗಳೂ ನಿಮಗೆ ಇಷ್ಟ. ನಿಮ್ಮ ಗತಿಯನ್ನು ಏನು ಹೇಳಲಿ; ನೆಲಸಮವಾದ ಸಮಾಧಿಗಳ ಹಾಗಿದ್ದೀರಿ; ಅವುಗಳ ಮೇಲೆ ತಿರುಗಾಡುವ ಜನರಿಗೆ ಇವು ಸಮಾಧಿಗಳೆಂದು ತಿಳಿಯದು ಎಂದು ಹೇಳಿದನು.

45 ಇದನ್ನು ಕೇಳಿ ಒಬ್ಬ ಧರ್ಮೋಪದೇಶಕನು ಆತನಿಗೆ—ಬೋಧಕನೇ, ಈ ಮಾತು
46 ಗಳನ್ನು ಹೇಳುವದರಿಂದ ನಮ್ಮನ್ನೂ ನಿಂದಿಸಿದ ಹಾಗಾಯಿತು ಎಂದು ಹೇಳಲು; ಆತನು— ಧರ್ಮೋಪದೇಶಕರೇ, ನಿಮ್ಮ ಗತಿಯನ್ನೂ ಏನು ಹೇಳಲಿ? ನೀವು ಜನರ ಮೇಲೆ ಹೊರಲಾರದ ಹೊರೆಗಳನ್ನು ಹೊರಿಸುತ್ತೀರಿ; ನೀವಾದರೋ ಆ ಹೊರೆಗಳನ್ನು ಒಂದು
47 ಬೆರಳಿನಿಂದಲೂ ಮುಟ್ಟುವದಿಲ್ಲ. ನಿಮ್ಮ ಗತಿಯನ್ನು ಏನು ಹೇಳಲಿ? ನೀವು ಪ್ರವಾದಿ
48 ಗಳ ಸಮಾಧಿಗಳನ್ನು ಕಟ್ಟುತ್ತೀರಿ; ಅವರನ್ನು ಕೊಂದವರು ನಿಮ್ಮ ಪಿತೃಗಳೇ. ಹೀಗಿರುವದರಿಂದ ನಿಮ್ಮ ಪಿತೃಗಳು ಮಾಡಿದ್ದನ್ನು ನೀವೇ ತೋರಿಸುವದಲ್ಲದೆ ಅವರ ಕೃತ್ಯಗಳಿಗೆ ಒಪ್ಪಿಕೊಂಡ ಹಾಗಾಯಿತು. ಹ್ಯಾಗಂದರೆ, ಅವರು ಪ್ರವಾದಿಗಳನ್ನು ಕೊಂದರು,
49 ನೀವು ಸಮಾಧಿಗಳನ್ನೇ ಕಟ್ಟುತ್ತೀರಿ. ಆದ್ದರಿಂದ ದೇವರ ಜ್ಞಾನವು ಹೇಳಿದ್ದೇನಂದರೆ— ನಾನು ಅವರ ಬಳಿಗೆ ಪ್ರವಾದಿಗಳನ್ನೂ ಪ್ರೇಷಿತರನ್ನೂ ಕಳುಹಿಸುವೆನು; ಅವರಲ್ಲಿ
50-51 ಕೆಲವರನ್ನು ಕೊಲ್ಲುವರು; ಕೆಲವರನ್ನು ಹಿಂಸೆಪಡಿಸುವರು. ಹೀಗೆ ಲೋಕಾದಿಯಿಂದ ಹೇಬೆಲನ ರಕ್ತವು ಮೊದಲ್ಗೊಂಡು, ಯಜ್ಞವೇದಿಗೂ ದೇವಾಲಯಕ್ಕೂ ನಡುವೆ ಹತವಾದ ಜಕರೀಯನ ರಕ್ತದವರೆಗೂ[1] ಸುರಿಸಲ್ಪಟ್ಟ ಎಲ್ಲಾ ಪ್ರವಾದಿಗಳ ರಕ್ತಕ್ಕೂ ಈ ಸಂತತಿಯವರು ಉತ್ತರಕೊಡಬೇಕು ಎಂಬುವದೇ; ಹೌದು, ಈ ಸಂತತಿಯವರೇ

---

[1]) ೨ ದಿನಚರ್ಯ ೨೪, ೨೦—೨೨.

ಉತ್ತರಕೊಡಬೇಕೆಂದು ನಿಮಗೆ ಹೇಳುತ್ತೇನೆ. ಅಯ್ಯೋ ಧರ್ಮೋಪದೇಶಕರೇ, ಜ್ಞಾನಕ್ಕೆ 52 ಸಾಧನವಾದ ಬೀಗದಕೈಯನ್ನು ತೆಗೆದುಬಿಟ್ಟಿರಿ. ನೀವೂ ಒಳಕ್ಕೆ ಹೋಗಲಿಲ್ಲ; ಒಳಕ್ಕೆ ಹೋಗುತ್ತಿರುವವರಿಗೂ ಅಡ್ಡೀಮಾಡಿದಿರಿ ಅಂದನು.

ಬಳಿಕ ಆತನು ಅಲ್ಲಿಂದ ಹೊರಗೆ ಬಂದಾಗ, ಶಾಸ್ತ್ರಿಗಳೂ ಫರಿಸಾಯರೂ ಆತನನ್ನು 53 ಕಠಿನವಾಗಿ ವಿರೋಧಿಸಿ, ಅನೇಕ ವಿಷಯಗಳನ್ನು ಕುರಿತು ಆತನನ್ನು ಅಡ್ಡಾದಿಡ್ಡೀ ಪ್ರಶ್ನೆ ಮಾಡುತ್ತಾ ಆತನ ಬಾಯಿಮಾತಿನಲ್ಲಿ ಏನಾದರೂ ಹಿಡಿಯಬೇಕೆಂದು ಆತನನ್ನು ಹೊಂಚಿ 54 ನೋಡುತ್ತಿದ್ದರು.

ಫರಿಸಾಯರ ಉಪದೇಶಕ್ಕೆ ಎಚ್ಚರಿಕೆಯಾಗಿರಬೇಕೆಂದು ಯೇಸು ಬೋಧಿಸಿದ್ದು.

(ಮತ್ತಾಯ. 10, 26—33.)

**12** ಇಷ್ಟರಲ್ಲಿ ಸಾವಿರಾರು ಜನರು ಒಬ್ಬರನ್ನೊಬ್ಬರು ತುಳಿಯುವಷ್ಟು ಕೂಡಿಬಂದಿರಲಾಗಿ, ಆತನು ಮೊದಲು ತನ್ನ ಶಿಷ್ಯರಿಗೆ ಹೇಳುವದಕ್ಕೆ ತೊಡಗಿದ್ದೇನಂದರೆ—ಫರಿಸಾಯರ ಕಪಟವೆಂಬ ಹುಳಿಹಿಟ್ಟಿಗೆ ಎಚ್ಚರಿಕೆಯುಳ್ಳವರಾಗಿರ್ರಿ. 2 ಬೈಲಿಗೆ ಬಾರದೆ ಮರೆಯಾದದ್ದು ಯಾವದೂ ಇಲ್ಲ; ಯಾವ ಗುಟ್ಟೂ ಜನರಿಗೆ ಗೊತ್ತಾಗದೆ ಇರುವದಿಲ್ಲ. 3 ಹೀಗಿರುವದರಿಂದ ನೀವು ಕತ್ತಲಲ್ಲಿ ಹೇಳಿದಂಥಾದ್ದು ಬೆಳಕಿನಲ್ಲಿ ಕೇಳಲಾಗುವದು; ಮತ್ತು ನೀವು ಕೋಣೆಗಳೊಳಗೆ ಕಿವಿಮಾತು ಆಡಿದ್ದು ಮಾಳಿಗೆಗಳ ಮೇಲೆ ಸಾರಲಾಗುವದು.

4 ನನ್ನ ಸ್ನೇಹಿತರಾದ ನಿಮಗೆ ಹೇಳುತ್ತೇನೆ—ದೇಹವನ್ನು ಕೊಂದು, ಅದಕ್ಕಿಂತ ಹೆಚ್ಚಿನದೇನೂ ಮಾಡಲಾರದವರಿಗೆ ಹೆದರಬೇಡಿರಿ. 5 ನೀವು ಯಾರಿಗೆ ಹೆದರಬೇಕೋ ನಿಮಗೆ ತಿಳಿಸುತ್ತೇನೆ; ಕೊಂದ ಮೇಲೆ ನರಕದೊಳಗೆ ಹಾಕುವ ಅಧಿಕಾರವುಳ್ಳವನಿಗೆ ಹೆದರಬೇಕು; ಹೌದು, ಆತನಿಗೇ ಹೆದರಬೇಕೆಂದು ನಿಮಗೆ ಹೇಳುತ್ತೇನೆ. 6 ಐದು ಗುಬ್ಬಿಗಳನ್ನು ಎರಡು ದುಡ್ಡಿಗೆ ಮಾರುತ್ತಾರಲ್ಲಾ? ಅವುಗಳಲ್ಲಿ ಒಂದಾದರೂ ದೇವರಿಗೆ ಮರೆತುಹೋಗುವದಿಲ್ಲ. 7 ನಿಮ್ಮ ತಲೇಕೂದಲುಗಳು ಸಹ ಎಲ್ಲಾ ಎಣಿಕೆಯಾಗಿವೆ. ಹೆದರಬೇಡಿರಿ; ನೂರಾರು ಗುಬ್ಬಿಗಳಿಗಿಂತ ನೀವು ಹೆಚ್ಚಿನವರು. 8 ನಾನು ನಿಮಗೆ ಹೇಳುತ್ತೇನೆ, ಯಾವನು ಮನುಷ್ಯರ ಮುಂದೆ ತಾನು ಯೇಸುವಿನವನೆಂದು ಒಪ್ಪಿಕೊಳ್ಳುವನೋ ಅವನನ್ನು ಮನುಷ್ಯಕುಮಾರನು ಸಹ ದೇವದೂತರ ಮುಂದೆ ತನ್ನವನೆಂದು ಒಪ್ಪಿಕೊಳ್ಳುವನು. 9 ಆದರೆ ಯಾವನು ಮನುಷ್ಯರ ಮುಂದೆ ತಾನು ಯೇಸುವಿನವನಲ್ಲವೆಂದು ಹೇಳುವನೋ ಅವನನ್ನು ನಾನು ದೇವದೂತರ ಮುಂದೆ ನನ್ನವನಲ್ಲವೆಂದು ಹೇಳುವೆನು. 10 ಯಾವನಾದರೂ ಮನುಷ್ಯಕುಮಾರನ ಮೇಲೆ ಏನಾದರೂ ಮಾತಾಡಿದರೆ, ಅದು ಅವನಿಗೆ ಕ್ಷಮಿಸಲ್ಪಡುವದು; ಆದರೆ ಪವಿತ್ರಾತ್ಮನ ಮೇಲೆ ದೂಷಣೆ ಮಾತಾಡುವವನಿಗೆ ಕ್ಷಮಿಸಲ್ಪಡುವದೇ ಇಲ್ಲ. 11 ಅವರು ನಿಮ್ಮನ್ನು ಸಭಾಮಂದಿರದವರ ಮುಂದಕ್ಕೂ ಅಧಿಕಾರಿಗಳ ಮುಂದಕ್ಕೂ ಅಧಿಪತಿಗಳ ಮುಂದಕ್ಕೂ ಹಿಡುಕೊಂಡು ಹೋಗುವಾಗ, ಹ್ಯಾಗೆ ಉತ್ತರಕೊಡಬೇಕು? ಏನು ಉತ್ತರಕೊಡಬೇಕು? ಏನು ಹೇಳಬೇಕು ಎಂದು ಚಿಂತೆಮಾಡಬೇಡಿರಿ. 12 ಯಾಕಂದರೆ, ನೀವು ಹೇಳತಕ್ಕದ್ದನ್ನು ...ತ್ಮನು ಆ ಗಳಿಗೆಯಲ್ಲಿಯೇ ನಿಮಗೆ ಕಲಿಸಿಕೊಡುವನು ಅಂದನು.

ಯೇಸು ಬುದ್ಧಿಯಿಲ್ಲದ ಐಶ್ವರ್ಯವಂತನ ಸಾಮ್ಯವನ್ನು ಹೇಳಿ ದ್ರವ್ಯಾಶೆಯ ವಿಷಯವಾಗಿಯೂ ಇಹಲೋಕದ ಚಿಂತೆಯ ವಿಷಯವಾಗಿಯೂ ಎಚ್ಚರಿಸಿದ್ದು.

(ಮತ್ತಾಯ 6, 25—33.)

13 ಆಗ ಜನರಲ್ಲಿ ಒಬ್ಬನು—ಬೋಧಕನೇ, ತಂದೆಯ ಆಸ್ತಿಯನ್ನು ನನಗೆ ಪಾಲುಮಾಡಿ
14 ಕೊಡುವಂತೆ ನನ್ನ ಅಣ್ಣನಿಗೆ ಹೇಳು ಎಂದು ಆತನನ್ನು ಕೇಳಿಕೊಳ್ಳಲು, ಆತನು—ಎಲಾ
ಮನುಷ್ಯಾ, ನನ್ನನ್ನು ನಿಮಗೆ ನ್ಯಾಯಾಧಿಪತಿಯನ್ನಾಗಿ ಅಥವಾ ಪಾಲುಮಾಡುವವ
15 ನನ್ನಾಗಿ ನೇಮಿಸಿದವರ್ಯಾರು ಎಂದು ಅವನನ್ನು ಕೇಳಿ, ಜನರಿಗೆ—ಎಲ್ಲಾ ಲೋಭಕ್ಕೂ
ಎಚ್ಚರಿಕೆಯಾಗಿದ್ದು ನಿಮ್ಮನ್ನು ಕಾಪಾಡಿಕೊಳ್ಳಿರಿ. ಒಬ್ಬನಿಗೆ ಎಷ್ಟು ಆಸ್ತಿಯಿದ್ದರೂ
16 ಅದು ಅವನಿಗೆ ಜೀವಾಧಾರವಾಗುವದಿಲ್ಲ ಎಂದು ಹೇಳಿ ಒಂದು ಸಾಮ್ಯವನ್ನು ಹೇಳಿ
ದನು; ಅದೇನಂದರೆ, ಒಬ್ಬಾನೊಬ್ಬ ಐಶ್ವರ್ಯವಂತನ ಭೂಮಿಯು ಚನ್ನಾಗಿ ಬೆಳೆಯಿತು.
17 ಆಗ ಅವನು ತನ್ನೊಳಗೆ—ನಾನೇನು ಮಾಡಲಿ? ನನ್ನ ಬೆಳೆಯನ್ನು ತುಂಬಿಡುವದಕ್ಕೆ
18 ನನಗೆ ಸ್ಥಳವಿಲ್ಲವಲ್ಲಾ ಎಂದು ಆಲೋಚಿಸಿ—ಒಂದು ಕೆಲಸ ಮಾಡುತ್ತೇನೆ; ನನ್ನ ಕಣ
ಜಗಳನ್ನು ಕೀಳಿಸಿ ಅವುಗಳಿಗಿಂತ ದೊಡ್ಡ ಕಣಜಗಳನ್ನು ಕಟ್ಟಿಸುವೆನು. ಅಲ್ಲಿ ನನ್ನ ಎಲ್ಲಾ
19 ದವಸಧಾನ್ಯಗಳನ್ನೂ ಸರಕುಗಳನ್ನೂ ತುಂಬಿಟ್ಟು, ನನ್ನ ಜೀವಾತ್ಮಕ್ಕೆ—ಜೀವವೇ, ಅನೇಕ
ವರುಷಗಳಿಗೆ ಬೇಕಾದಷ್ಟು ಸರಕು ನಿನಗೆ ಬಿದ್ದದೆ; ವಿಶ್ರಮಿಸಿಕೋ, ಊಟಾಮಾಡು,
20 ಕುಡಿ, ಸುಖಪಡು ಎಂದು ಹೇಳುವೆನು ಅಂದುಕೊಂಡನು. ಆದರೆ ದೇವರು ಅವನಿಗೆ—
ಬುದ್ಧಿಹೀನನು ನೀನು! ಈ ಹೊತ್ತು ರಾತ್ರಿ ನಿನ್ನ ಪ್ರಾಣವನ್ನು ನಿನ್ನ ಕಡೆಯಿಂದ ಕೇಳು
ವರು; ಆಗ ನೀನು ಸಿದ್ಧಮಾಡಿಟ್ಟಿರುವದು ಯಾರಿಗಾಗುವದು ಎಂದು ಹೇಳಿದನು.
21 ತನಗೋಸ್ಕರ ದ್ರವ್ಯವನ್ನಿಟ್ಟುಕೊಂಡು ದೇವರ ವಿಷಯಗಳಲ್ಲಿ ಐಶ್ವರ್ಯವಂತನಾಗದೆ
ಇರುವವನು ಅವನಂತೆಯೇ ಇದ್ದಾನೆ ಅಂದನು.

22 ಇದಲ್ಲದೆ ಆತನು ತನ್ನ ಶಿಷ್ಯರಿಗೆ ಹೇಳಿದ್ದೇನಂದರೆ—ಈ ಕಾರಣದಿಂದ ಪ್ರಾಣಧಾರ
ಣೆಗೆ ಏನು ಊಟಾಮಾಡಬೇಕು? ದೇಹರಕ್ಷಣೆಗೆ ಏನು ಹೊದ್ದುಕೊಳ್ಳಬೇಕು ಎಂದು
23 ಚಿಂತೆಮಾಡಬೇಡಿರಿ ಎಂಬದಾಗಿ ನಿಮಗೆ ಹೇಳುತ್ತೇನೆ. ಊಟಕ್ಕಿಂತ ಪ್ರಾಣವು, ಉಡು
24 ಪಿಗಿಂತ ದೇಹವು ಮೇಲಾದದ್ದಷ್ಟೆ. ಕಾಗೆಗಳನ್ನು ನೋಡಿರಿ; ಅವು ಬಿತ್ತುವದಿಲ್ಲ,
ಕೊಯ್ಯುವದಿಲ್ಲ, ಅವುಗಳಿಗೆ ಉಗ್ರಾಣವೂ ಇಲ್ಲ, ಕಣಜವೂ ಇಲ್ಲ; ಆದಾಗ್ಯೂ ದೇವರು
ಅವುಗಳನ್ನು ಸಾಕಿಸಲಹುತ್ತಾನೆ. ಹಕ್ಕಿಗಳಿಗಿಂತ ನೀವು ಎಷ್ಟೋ ಹೆಚ್ಚಿನವರಲ್ಲವೇ?
25 ಚಿಂತೆಮಾಡಿಮಾಡಿ ಒಂದು ಮೊಳ ಉದ್ದ ಬೆಳೆಯುವದು[1] ನಿಮ್ಮಲ್ಲಿ ಯಾರಿಂದಾದೀತು?
26 ಆದದರಿಂದ ಕೇವಲ ಅಲ್ಪವಾದದ್ದನ್ನಾದರೂ ಮಾಡುವದಕ್ಕೆ ನೀವು ಅಶಕ್ತರಾಗಿರಲಾಗಿ,
27 ಮಿಕ್ಕಾದ್ದರ ವಿಷಯದಲ್ಲಿ ಯಾಕೆ ಚಿಂತೆಮಾಡುತ್ತೀರಿ? ಹೂವುಗಳು ಬೆಳೆಯುವ ರೀತಿ
ಯನ್ನು ಯೋಚನೆಗೆ ತಂದುಕೊಳ್ಳಿರಿ; ಅವು ದುಡಿಯುವದಿಲ್ಲ, ನೂಲುವದಿಲ್ಲ; ಆದಾಗ್ಯೂ
ಈ ಹೂವುಗಳೊಳಗೆ ಒಂದಕ್ಕಿರುವಷ್ಟು ಅಲಂಕಾರವು ಅರಸನಾದ ಸೊಲೊಮೋನನಿಗೆ
ಅವನು ತನ್ನ ಸಕಲ ವೈಭವದಿಂದಿರುವಾಗಲೂ ಇರಲಿಲ್ಲವೆಂದು ನಿಮಗೆ ಹೇಳುತ್ತೇನೆ.

[1] ಅಂದರೆ, ಆಯುಸ್ಸು ಹೆಚ್ಚು ಮಾಡಿಕೊಳ್ಳುವದು.

ಎಲೈ ಅಲ್ಪವಿಶ್ವಾಸಿಗಳೇ, ಈಹೊತ್ತು ಇದ್ದು ನಾಳೆ ಒಲೆಯ ಪಾಲಾಗುವ ಅಡವಿಯ 28
ಹುಲ್ಲಿಗೆ ದೇವರು ಹೀಗೆ ಉಡಿಸಿದರೆ, ಅದಕ್ಕಿಂತಲೂ ಎಷ್ಟೋ ಹೆಚ್ಚಾಗಿ ನಿಮಗೆ ಉಡಿಸಿ
ತೊಡಿಸುವನಲ್ಲವೇ? ಏನು ಊಟಾಮಾಡಬೇಕು? ಏನು ಕುಡಿಯಬೇಕು ಎಂದು 29
ಹಂಬಲಿಸುತ್ತಾ ಇರಬೇಡಿರಿ, ಮತ್ತು ಅನುಮಾನ ಪಡಬೇಡಿರಿ. ಇವೆಲ್ಲವುಗಳ ವಿಷಯ 30
ದಲ್ಲಿ ಇಹಲೋಕದ ಜನಗಳು ಹಂಬಲಿಸುತ್ತಾರೆ; ಅವು ನಿಮಗೆ ಅವಶ್ಯವೆಂದು ನಿಮ್ಮ
ತಂದೆಗೆ ಗೊತ್ತುಂಟು. ನೀವಾದರೋ ಆತನ ರಾಜ್ಯವನ್ನು ಪಡಕೊಳ್ಳುವದಕ್ಕೆ ಪ್ರಯತ್ನಿ 31
ಸಿರಿ; ಇದರ ಕೂಡ ಅವೂ ನಿಮಗೆ ದೊರಕುವವು. ಚಿಕ್ಕ ಹಿಂಡೇ, ಹೆದರಬೇಡ; 32
ಆ ರಾಜ್ಯವನ್ನು ನಿಮಗೆ ದಯಪಾಲಿಸುವದಕ್ಕೆ ನಿಮ್ಮ ತಂದೆಯು ಸಂತೋಷವುಳ್ಳವನಾಗಿ
ದ್ದಾನೆ. ನಿಮಗಿರುವದನ್ನು ಮಾರಿಬಿಟ್ಟು ದಾನಾಕೊಡಿರಿ; ಹಳೇವಾಗದಂಥ ಹಮ್ಮಿಣಿ 33
ಗಳನ್ನು ಮಾಡಿಕೊಂಡು ಪರಲೋಕದಲ್ಲಿ ಲಯವಾಗದ ದ್ರವ್ಯವನ್ನು ಇಟ್ಟುಕೊಳ್ಳಿರಿ. ಅಲ್ಲಿ
ಕಳ್ಳನು ಸಮಿಾಪಕ್ಕೆ ಬರುವದಿಲ್ಲ; ನುಸಿ ಹಿಡಿಯುವದಿಲ್ಲ. ನಿಮ್ಮ ದ್ರವ್ಯವೆಲ್ಲಿರುವದೋ 34
ನಿಮ್ಮ ಮನಸ್ಸೂ ಅಲ್ಲೇ ಇರುವದಷ್ಟೆ.

ತನ್ನ ಶಿಷ್ಯರು ಯಾವಾಗಲೂ ಎಚ್ಚರವಾಗಿರಬೇಕೆಂಬದಾಗಿ ಯೇಸು ಎರಡು ಸಾಮ್ಯಗಳನ್ನು ಹೇಳಿದ್ದು.
(ಮತ್ತಾಯ 24, 42—51.)

ನಿಮ್ಮ ನಡುಗಳು ಕಟ್ಟಿರಲಿ; ನಿಮ್ಮ ದೀವಟಿಗೆಗಳು ಉರಿಯುತ್ತಾ ಇರಲಿ. ನೀವಂತೂ 35,36
ತಮ್ಮ ಒಡೆಯನು ಬಂದು ತಟ್ಟಿದ ಕೂಡಲೇ ಕದವನ್ನು ತೆರೆಯುವದಕ್ಕೆ ಸಿದ್ಧವಾಗಿದ್ದು,
ಮದುವೇ ಊಟವನ್ನು ಯಾವಾಗ ತೀರಿಸಿಕೊಂಡು ಬರುವನೋ ಎಂದು ಅವನನ್ನು
ಎದುರುನೋಡುತ್ತಿರುವ ಮನುಷ್ಯರಂತಿರ್ರಿ. ಒಡೆಯನು ಬಂದು ಯಾವ ಯಾವ 37
ಆಳುಗಳು ಎಚ್ಚರವಾಗಿರುವದನ್ನು ಕಂಡುಕೊಳ್ಳುವನೋ ಆ ಆಳುಗಳೇ ಧನ್ಯರು.
ಆತನೇ ನಡುಕಟ್ಟಿಕೊಂಡು, ಅವರನ್ನು ಊಟಕ್ಕೆ ಕುಂಡ್ರಿಸಿ, ಹತ್ತರಕ್ಕೆ ಬಂದು, ಅವರಿಗೆ
ಸೇವೆಮಾಡುವನು ಎಂದು ನಿಮಗೆ ಸತ್ಯವಾಗಿ ಹೇಳುತ್ತೇನೆ. ಎರಡನೇ ಜಾವದಲ್ಲಿ 38
ಯಾಗಲಿ ಮೂರನೇ ಜಾವದಲ್ಲಿಯಾಗಲಿ ಬಂದಾತನಿಗೆ ಹಾಗೆ ಕಾಣಿಸಿಕೊಂಡವರು
ಧನ್ಯರು. ಕಳ್ಳನು ಬರುವ ಗಳಿಗೆಯು ಮನೇಯಜಮಾನನಿಗೆ ತಿಳಿದಿದ್ದರೆ, ಅವನು 39
ಎಚ್ಚರವಾಗಿದ್ದು ತನ್ನ ಮನೆಗೆ ಕನ್ನಾಹಾಕಗೊಡಿಸುತ್ತಿರಲಿಲ್ಲವೆಂದು ತಿಳುಕೊಳ್ಳಿರಿ.
ನೀವೂ ಸಿದ್ಧವಾಗಿರ್ರಿ. ನೀವು ನೆನಸದ ಗಳಿಗೆಯಲ್ಲೇ ಮನುಷ್ಯಕುಮಾರನು ಬರುತ್ತಾನೆ 40
ಅಂದನು.

ಆಗ ಪೇತ್ರನು—ಸ್ವಾಮಿಾ, ನೀನು ಈ ಸಾಮ್ಯವನ್ನು ನಮಗೆ ಮಾತ್ರ ಹೇಳುತ್ತೀ 41
ಯೋ? ಎಲ್ಲರಿಗೂ ಹೇಳುತ್ತೀಯೋ ಎಂದು ಕೇಳಲು, ಸ್ವಾಮಿ ಹೇಳಿದ್ದೇನಂದರೆ— 42
ಹೊತ್ತುಹೊತ್ತಿಗೆ ಅಶನಕ್ಕೆ ಬೇಕಾದದ್ದನ್ನು ಅಳೆದುಕೊಡುವದಕ್ಕಾಗಿ ಯಜಮಾನನು
ತನ್ನ ಮನೆಯವರ ಮೇಲೆ ನೇಮಿಸಿದ ನಂಬಿಗಸ್ತನೂ ವಿವೇಕಿಯೂ ಆಗಿರುವ ಮನೆವಾರ್ತೆ
ಯವನು ಯಾರು? ಯಾವ ಆಳು ಹೀಗೆ ಮಾಡುವದನ್ನು ಯಜಮಾನನು ಬಂದು 43
ಕಾಣುವನೋ ಆ ಆಳು ಧನ್ಯನು. ಇಂಥವನನ್ನು ಅವನು ತನ್ನ ಎಲ್ಲಾ ಆಸ್ತಿಯ 44
ಮೇಲೆ ನೇಮಿಸುವನು ಎಂದು ನಿಮಗೆ ಸತ್ಯವಾಗಿ ಹೇಳುತ್ತೇನೆ. ಆದರೆ ಆ ಆಳು— 45

ನನ್ನ ಯಜಮಾನನು ಬರುವದಕ್ಕೆ ತಡವಾಗುತ್ತದೆ ಅಂತ ತನ್ನ ಮನಸ್ಸಿನಲ್ಲಿ ಅಂದು
ಕೊಂಡು, ಗಂಡಾಳು ಹೆಣ್ಣಾಳುಗಳನ್ನು ಹೊಡೆಯುವದಕ್ಕೂ ತಿಂದು ಕುಡಿದು ಅಮಲೇರು
46 ವದಕ್ಕೂ ತೊಡಗಿದರೆ, ಅವನು ನೆನಸದ ದಿನದಲ್ಲಿಯೂ ಅವನಿಗೆ ತಿಳಿಯದ ಗಳಿಗೆಯಲ್ಲಿ
ಯೂ ಆ ಆಳಿನ ಯಜಮಾನನು ಬಂದು, ಅವನನ್ನು ಚನ್ನಾಗಿ ಹೊಡಿಸಿ, ಅಪನಂಬಿಗಸ್ತ
47 ರಿಗೆ ಆಗತಕ್ಕ ಗತಿಯನ್ನು ಅವನಿಗೆ ನೇಮಿಸುವನು. ತನ್ನ ಯಜಮಾನನ ಚಿತ್ತವನ್ನು
ತಿಳಿದ ಆಳು ಸಿದ್ಧಮಾಡದೆ ಹೋದರೆ ಅಥವಾ ಅವನ ಚಿತ್ತಕ್ಕನುಸಾರ ನಡೆಯದಿದ್ದರೆ,
48 ಅವನು ಬಹಳ ಪೆಟ್ಟು ತಿನ್ನುವನು. ತಿಳಿಯದೆ ಪೆಟ್ಟುಗಳಿಗೆ ಯೋಗ್ಯವಾದದ್ದನ್ನು ನಡಸಿ
ದವನು ಸ್ವಲ್ಪ ಪೆಟ್ಟು ತಿನ್ನುವನು. ಯಾವನಿಗೆ ಬಹಳವಾಗಿ ಕೊಟ್ಟದೆಯೋ ಅವನ
ಕಡೆಯಿಂದ ಬಹಳವಾಗಿ ನಿರೀಕ್ಷಿಸಲ್ಪಡುವದು; ಇದಲ್ಲದೆ ಯಾವನ ವಶಕ್ಕೆ ಬಹಳವಾಗಿ
ಒಪ್ಪಿಸಿದೆಯೋ ಅವನ ಕಡೆಯಿಂದ ಇನ್ನೂ ಹೆಚ್ಚಾಗಿ ಕೇಳುವರು.

### ಯೇಸುವನ್ನು ಅನುಸರಿಸುವವರಿಗೆ ನೆಂಟರ ವಿರೋಧವಿರುವದೆಂತಲೂ ನೂತನ ಕಾಲದ ಸೂಚನೆಗಳನ್ನು ಗುರುತು ಹಿಡಿಯಬೇಕೆಂತಲೂ ಬೋಧೆ.

(ಮತ್ತಾಯ **10, 34—36; 16, 1—3.**)

49 ನಾನು ಬೆಂಕಿಯನ್ನು ಭೂಮಿಯ ಮೇಲೆ ಹಾಕಬೇಕೆಂದು ಬಂದೆನು; ಅದು ಇಷ್ಟ
50 ರೊಳಗೆ ಹತ್ತಿಕೊಂಡಿದ್ದರೆ ನನಗೆ ಎಷ್ಟೋ ಸಂತೋಷ! ಆದರೆ ನಾನು ಹೊಂದತಕ್ಕ
ದೀಕ್ಷಾಸ್ನಾನ ಒಂದುಂಟು. ಅದು ನೆರವೇರುವ ತನಕ ನಾನು ಎಷ್ಟೋ ಬಿಕ್ಕಟ್ಟಿನಲ್ಲಿ
51 ದ್ದೇನೆ. ನನ್ನನ್ನು ಭೂಲೋಕದಲ್ಲಿ ಒಕ್ಕಟ್ಟನ್ನು ಉಂಟುಮಾಡುವದಕ್ಕೆ ಬಂದವನೆಂದು
ಭಾವಿಸುತ್ತೀರೋ? ಅದಕ್ಕೆ ಬರಲಿಲ್ಲ, ಭೇದವನ್ನು ಹುಟ್ಟಿಸುವದಕ್ಕೆ ಬಂದೆನೆಂದು ನಿಮಗೆ
52 ಹೇಳುತ್ತೇನೆ. ಹ್ಯಾಗಂದರೆ—ಇಂದಿನಿಂದ ಒಂದೇ ಮನೆಯಲ್ಲಿರುವ ಐದು ಮಂದಿಯೊ
ಳಗೆ ಇಬ್ಬರಿಗೆ ವಿರೋಧವಾಗಿ ಮೂವರು, ಮೂವರಿಗೆ ವಿರೋಧವಾಗಿ ಇಬ್ಬರು, ಈ
53 ಮೇರೆಗೆ ಭೇದವುಳ್ಳವರಾಗಿರುವರು. ಮಗನಿಗೆ ವಿರೋಧವಾಗಿ ತಂದೆಯು, ತಂದೆಗೆ
ವಿರೋಧವಾಗಿ ಮಗನು, ಮಗಳಿಗೆ ವಿರೋಧವಾಗಿ ತಾಯಿಯು, ತಾಯಿಗೆ ವಿರೋಧ
ವಾಗಿ ಮಗಳು, ಸೊಸೆಗೆ ವಿರೋಧವಾಗಿ ಅತ್ತೆಯು, ಅತ್ತೆಗೆ ವಿರೋಧವಾಗಿ ಸೊಸೆಯು
ಭೇದವುಳ್ಳವರಾಗಿರುವರು ಅಂದನು[1].

54 ಇದಲ್ಲದೆ ಆತನು ಜನರೆಲ್ಲರಿಗೂ ಹೇಳಿದ್ದೇನಂದರೆ—ಪಶ್ಚಿಮ ದಿಕ್ಕಿನಲ್ಲಿ ಮೋಡ ಏಳು
ವದನ್ನು ನೀವು ನೋಡಿದ ಕೂಡಲೇ ಮಳೆ ಬರುತ್ತದೆ ಅನ್ನುತ್ತೀರಿ; ಹಾಗೇ ಆಗುತ್ತದೆ.
55 ದಕ್ಷಿಣ ದಿಕ್ಕಿನ ಗಾಳಿ ಬೀಸಲಾಗಿ, ಸೆಕೆ ಹುಟ್ಟುವದು ಅನ್ನುತ್ತೀರಿ; ಅದೂ ಆಗುತ್ತದೆ.
56 ಕಪಟಿಗಳು ನೀವು, ಭೂಮ್ಯಾಕಾಶಗಳ ಭಾವವನ್ನು ಶೋಧಿಸುವದಕ್ಕೆ ನಿಮಗೆ ಗೊತ್ತಿರು
ವಲ್ಲಿ ಈ ಸಮಯವನ್ನು ಶೋಧಿಸುವದಕ್ಕೆ ನಿಮಗೆ ಯಾಕೆ ಗೊತ್ತಿಲ್ಲ?

57 ಇದಲ್ಲದೆ ಇಂಥಿಂಥಾದ್ದು ನ್ಯಾಯವಾದದ್ದೆಂದು ನೀವೇ ಯಾಕೆ ತೀರ್ಮಾನ ಮಾಡಿ
58 ಕೊಳ್ಳುವದಿಲ್ಲ? ನೀನು ವಾದಿಯ ಸಂಗಡ ನ್ಯಾಯಾಧಿಪತಿಯ ಮುಂದಕ್ಕೆ ಹೋಗುತ್ತಿರು

[1] ಮೀಕ ೭, ೬.

ವಾಗ ದಾರಿಯಲ್ಲಿಯೇ ತಂಟೇಹರಿಸಿಕೊಳ್ಳಲು ಪ್ರಯತ್ನಮಾಡು; ಇಲ್ಲದಿದ್ದರೆ, ಅವನು ನಿನ್ನನ್ನು ನ್ಯಾಯಾಧಿಪತಿಯ ಬಳಿಗೆ ಎಳಕೊಂಡು ಹೋದಾನು; ನ್ಯಾಯಾಧಿಪತಿಯು ನಿನ್ನನ್ನು ಸೆರೇಯಜವಾನನ ವಶಕ್ಕೆ ಒಪ್ಪಿಸ್ಯಾನು; ಸೆರೇಯಜಮಾನನು ನಿನ್ನನ್ನು ಸೆರೆ ಮನೆಯಲ್ಲಿ ಹಾಕ್ಯಾನು. ನೀನು ಒಂದು ಕಾಸನ್ನಾದರೂ ನಿಲ್ಲಿಸಿಕೊಳ್ಳದೆ ಎಲ್ಲಾ ಸಲ್ಲಿ 59 ಸುವ ತನಕ ಅಲ್ಲಿಂದ ಬರುವದೇ ಇಲ್ಲವೆಂದು ನಿನಗೆ ಹೇಳುತ್ತೇನೆ[1] ಅಂದನು.

### ಮನುಷ್ಯರು ದೇವರ ಕಡೆಗೆ ತಿರುಗದಿದ್ದರೆ ನಾಶವಾಗುತ್ತಾರೆಂದು ಬೋಧಿಸುವದಕ್ಕಾಗಿ ಯೇಸು ಗೊಡ್ಡು ಅಂಜೂರದ ಮರದ ಸಾಮ್ಯವನ್ನು ಹೇಳಿದ್ದು.

ಅದೇ ಸಮಯದಲ್ಲಿ ಕೆಲವರು ಆತನ ಹತ್ತರದಲ್ಲಿದ್ದು—ಪಿಲಾತನು ಗಲಿಲಾಯದವರ **13** ರಕ್ತವನ್ನು ಅವರು ಕೊಟ್ಟ ಬಲಿಗಳ ಸಂಗಡ ಬೆರಸಿದನೆಂದು ಆತನಿಗೆ ತಿಳಿಸಿದರು. ಅದಕ್ಕೆ 2 ಆತನು ಅವರಿಗೆ—ಆ ಗಲಿಲಾಯದವರು ಅಂಥಾ ಕೊಲೆಯನ್ನು ಅನುಭವಿಸಿದ್ದರಿಂದ ಅವ ರನ್ನು ಎಲ್ಲಾ ಗಲಿಲಾಯದವರಿಗಿಂತ ಪಾಪಿಷ್ಠರೆಂದು ಭಾವಿಸುತ್ತೀರೋ? ಹಾಗೆ ಭಾವಿಸ 3 ಕೂಡದೆಂದು ನಿಮಗೆ ಹೇಳುತ್ತೇನೆ. ದೇವರ ಕಡೆಗೆ ತಿರುಗಿಕೊಳ್ಳದಿದ್ದರೆ ನೀವೆಲ್ಲರೂ ಹಾಗೆಯೇ ಹಾಳಾಗಿ ಹೋಗುವಿರಿ. ಇಲ್ಲವೆ ಸಿಲೊವಾಮಿನಲ್ಲಿ ಬುರುಜುಬಿದ್ದು ಸತ್ತ 4 ಆ ಹದಿನೆಂಟು ಮಂದಿಯು ಯೆರೂಸಲೇಮಿನಲ್ಲಿ ವಾಸವಾಗಿರುವ ಎಲ್ಲಾ ಮನುಷ್ಯರಿ ಗಿಂತಲೂ ಅಪರಾಧಿಗಳೆಂದು ಭಾವಿಸುತ್ತೀರೋ? ಹಾಗಲ್ಲವೆಂದು ನಿಮಗೆ ಹೇಳುತ್ತೇನೆ. 5 ದೇವರ ಕಡೆಗೆ ತಿರುಗಿಕೊಳ್ಳದಿದ್ದರೆ ನೀವೆಲ್ಲರೂ ಅವರಂತೆ ಹಾಳಾಗಿ ಹೋಗುವಿರಿ ಎಂದು ಹೇಳಿದನು.

ಆ ಮೇಲೆ ಆತನು ಒಂದು ಸಾಮ್ಯವನ್ನು ಹೇಳಿದನು. ಅದೇನಂದರೆ—ಒಬ್ಬಾ 6 ನೊಬ್ಬನು ತನ್ನ ದ್ರಾಕ್ಷೇತೋಟದಲ್ಲಿ ಒಂದು ಅಂಜೂರದ ಗಿಡವನ್ನು ನೆಡಿಸಿದ್ದನು. ತರುವಾಯ ಅವನು ಅದರಲ್ಲಿ ಹಣ್ಣನ್ನು ಹುಡುಕುತ್ತಾ ಬಂದನು, ಸಿಕ್ಕಲಿಲ್ಲ. ಬಳಿಕ 7 ಅವನು ತೋಟಮಾಡುವವನಿಗೆ—ನೋಡು, ನಾನು ಮೂರು ವರುಷದಿಂದಲೂ ಈ ಅಂಜೂರದ ಮರದಲ್ಲಿ ಹಣ್ಣನ್ನು ಹುಡುಕುತ್ತಾ ಬಂದಿದ್ದೇನೆ; ಆದರೂ ನನಗೆ ಸಿಕ್ಕಲಿಲ್ಲ. ಇದನ್ನು ಕಡಿದು ಹಾಕು; ಇದರಿಂದ ಭೂಮಿಯೂ ಯಾಕೆ ಬಂಜೆಯಾಗಬೇಕು ಎಂದು ಹೇಳಿದನು. ಆದರೆ ತೋಟಮಾಡುವವನು—ಅಯ್ಯಾ, ಈ ವರುಷವೂ ಇದನ್ನು ಬಿಡು; 8 ಅಷ್ಟರಲ್ಲಿ ನಾನು ಇದರ ಸುತ್ತಲು ಅಗಿದು ಗೊಬ್ಬರ ಹಾಕುತ್ತೇನೆ; ಮುಂದೆ ಹಣ್ಣು 9 ಬಿಟ್ಟರೆ ಸರಿ; ಇಲ್ಲದಿದ್ದರೆ ಇದನ್ನು ಕಡಿದು ಹಾಕಬಹುದು ಎಂದು ಉತ್ತರಕೊಟ್ಟನು.

### ಯೇಸು ಸಬ್ಬತ್‌ದಿನದಲ್ಲಿ ಒಬ್ಬ ಹೆಂಗಸನ್ನು ಸ್ವಸ್ಥಮಾಡಿದ್ದು.

ಒಂದಾನೊಂದು ಸಬ್ಬತ್‌ದಿನದಲ್ಲಿ ಆತನು ಒಂದು ಸಭಾಮಂದಿರದೊಳಗೆ ಉಪದೇಶ 10 ಮಾಡುತ್ತಾ ಇದ್ದನು. ಅಲ್ಲಿ ಹದಿನೆಂಟು ವರುಷಗಳಿಂದ ದೆವ್ವ ಬಡಿದು ಮೈಯಲ್ಲಿ 11

1) ಮತ್ತಾಯ ೫, ೨೫. ೨೬.

ರೋಗವುಳ್ಳ ಒಬ್ಬ ಸ್ತ್ರೀಯು ಇದ್ದಳು. ಆಕೆಯು ನಡುಬೊಗ್ಗಿಹೋಗಿ ಸ್ವಲ್ಪವಾದರೂ
12 ಮೈಯನ್ನು ಮೇಲಕ್ಕೆ ಎತ್ತಲಾರದೆ ಇದ್ದಳು. ಯೇಸು ಆಕೆಯನ್ನು ನೋಡಿ, ಹತ್ತರಕ್ಕೆ
13 ಕರೆದು ಆಕೆಗೆ—ಅಮ್ಮಾ, ನಿನಗೆ ರೋಗ ಬಿಡುಗಡೆಯಾಯಿತು ಎಂದು ಹೇಳಿ, ಆಕೆಯ
ಮೇಲೆ ತನ್ನ ಕೈಗಳನ್ನಿಟ್ಟನು; ಇಟ್ಟಕೂಡಲೇ ಆಕೆ ನೆಟ್ಟಗಾದಳು, ದೇವರನ್ನು ಕೊಂಡಾಡಿ
14 ದಳು. ಆದರೆ ಆ ಸಭಾಮಂದಿರದ ಅಧಿಕಾರಿಯು ನಡೆದ ಸಂಗತಿಯನ್ನು ನೋಡಿ
ಸಬ್ಬತ್‌ದಿನದಲ್ಲಿ ಯೇಸು ಸ್ವಸ್ಥಮಾಡಿದನಲ್ಲಾ ಎಂದು ರೋಷಗೊಂಡು ಜನರಿಗೆ—ಕೆಲಸ
ಮಾಡುವದಕ್ಕೆ ಆರು ದಿವಸಗಳು ಅವೆಯಷ್ಟೆ; ಆ ದಿವಸಗಳಲ್ಲಿ ಬಂದು ವಾಸಿಮಾಡಿಸಿ
15 ಕೊಳ್ಳಿರಿ; ಸಬ್ಬತ್‌ದಿನದಲ್ಲಿ ಮಾತ್ರ ಬೇಡ ಎಂದು ಹೇಳಿದನು. ಆ ಮಾತನ್ನು ಕೇಳಿ
ಸ್ವಾಮಿಯು ಅವನಿಗೆ—ಕಪಟಿಗಳು ನೀವು, ನಿಮ್ಮಲ್ಲಿ ಪ್ರತಿಯೊಬ್ಬನೂ ಸಬ್ಬತ್‌ದಿನದಲ್ಲಿ
ತನ್ನ ಎತ್ತನ್ನಾಗಲಿ ಕತ್ತೆಯನ್ನಾಗಲಿ ಗೋದಲಿಯಿಂದ ಬಿಚ್ಚಿ ನೀರು ಕುಡಿಸುವದಕ್ಕಾಗಿ ಹಿಡು
16 ಕೊಂಡು ಹೋಗುತ್ತಾನಲ್ಲವೇ? ಹಾಗಾದರೆ, ಹದಿನೆಂಟು ವರುಷಗಳ ತನಕ ಸೈತಾನನು
ಕಟ್ಟಿಹಾಕಿದ್ದವಳೂ ಅಬ್ರಹಾಮನ ವಂಶದವಳೂ ಆಗಿರುವ ಈಕೆಯನ್ನು ಸಬ್ಬತ್‌ದಿನದಲ್ಲಿ
17 ಈ ಕಟ್ಟಿನೊಳಗಿಂದ ಬಿಡಿಸಬಾರದೋ ಎಂದು ಉತ್ತರಕೊಟ್ಟನು. ಈ ಮಾತುಗಳನ್ನು
ಆತನು ಹೇಳುತ್ತಿರಲಾಗಿ, ಆತನ ವಿರೋಧಿಗಳೆಲ್ಲರೂ ನಾಚಿಕೊಂಡರು; ಗುಂಪುಕೂಡಿದ್ದ
ಜನರೆಲ್ಲಾ ಆತನಿಂದಾಗುತ್ತಿದ್ದ ಎಲ್ಲಾ ಮಹತ್ವದ ಕಾರ್ಯಗಳಿಗೆ ಸಂತೋಷಪಟ್ಟರು.

### ದೇವರ ರಾಜ್ಯವು ಸಾಸಿವೆಕಾಳಿಗೂ ಹುಳಿಹಿಟ್ಟಿಗೂ ಸಮಾನವಾಗಿದೆ ಎಂಬುವ ಬೋಧೆ.

(ಮತ್ತಾಯ 13, 31—33; ಮಾರ್ಕ 4, 30—32.)

18 ಆತನು ಹೇಳಿದ್ದೇನಂದರೆ—ದೇವರ ರಾಜ್ಯವು ಯಾವದಕ್ಕೆ ಹೋಲಿಕೆಯಾಗಿದೆ? ಅದನ್ನು
19 ನಾನು ಯಾವದಕ್ಕೆ ಹೋಲಿಸಲಿ? ಅದು ಸಾಸಿವೆಕಾಳಿಗೆ ಹೋಲಿಕೆಯಾಗಿದೆ. ಒಬ್ಬ
ಮನುಷ್ಯನು ಸಾಸಿವೆಕಾಳನ್ನು ತೆಗೆದುಕೊಂಡುಹೋಗಿ ತನ್ನ ತೋಟದಲ್ಲಿ ಹಾಕಿದನು;
ಅದು ಬೆಳೆದು ಮರವಾಯಿತು; ಮತ್ತು ಆಕಾಶದಲ್ಲಿ ಹಾರ್ಯಾಡುವ ಪಕ್ಷಿಗಳು ಅದರ
20 ಕೊಂಬೆಗಳಲ್ಲಿ ವಾಸಮಾಡಿದವು ಅಂದನು. ಆತನು ಇನ್ನೂ ಹೇಳಿದ್ದೇನಂದರೆ—ದೇವರ
21 ರಾಜ್ಯವನ್ನು ನಾನು ಯಾವದಕ್ಕೆ ಹೋಲಿಸಲಿ? ಅದು ಹುಳಿಹಿಟ್ಟಿಗೆ ಹೋಲಿಕೆಯಾಗಿದೆ.
ಅದನ್ನು ಒಬ್ಬ ಹೆಂಗಸು ತಕ್ಕೊಂಡು ಮೂರು ಸೇರು ಹಿಟ್ಟಿನಲ್ಲಿ ಕಲಸಿಡಲು ಆ ಹಿಟ್ಟೆಲ್ಲಾ
ಹುಳಿಯಾಯಿತು ಅಂದನು.

### ಇಕ್ಕಟ್ಟಾದ ಬಾಗಲಲ್ಲಿ ಪ್ರವೇಶಿಸಿರಿ ಎಂಬುವ ಬೋಧೆ.

(ಮತ್ತಾಯ 7, 13. 14; 8, 11. 12.)

22 ಆತನು ಊರೂರಿಗೂ ಗ್ರಾಮಗ್ರಾಮಕ್ಕೂ ಹೋಗಿ ಉಪದೇಶಮಾಡುತ್ತಾ, ಯೆರೂ
23 ಸಲೇಮಿಗೆ ಪ್ರಯಾಣಮಾಡುತ್ತಿದ್ದನು. ಆ ಕಾಲದಲ್ಲಿ ಒಬ್ಬನು—ಸ್ವಾಮಿ, ರಕ್ಷಣೆ
24 ಹೊಂದುವವರು ಸ್ವಲ್ಪಜನರೋ ಎಂದು ಕೇಳಲು, ಆತನು ಅವರಿಗೆ—ಇಕ್ಕಟ್ಟಾದ ಬಾಗಿಲಿ

ನಿಂದ ಒಳಕ್ಕೆ ಹೋಗುವದಕ್ಕೆ ಹೆಣಗಾಡಿರಿ. ಅನೇಕರು ಒಳಕ್ಕೆ ಹೋಗುವದಕ್ಕೆ ನೋಡುವರು, ಆದರೆ ಅವರಿಂದಾಗುವದಿಲ್ಲ ಎಂದು ನಿಮಗೆ ಹೇಳುತ್ತೇನೆ. 25 ಮನೇ ಯಜಮಾನನು ಎದ್ದು ಕದಾ ಹಾಕಿಕೊಂಡಮೇಲೆ ನೀವು ಹೊರಗೆ ನಿಂತುಕೊಂಡು ಕದಾ ತಟ್ಟಿ—ಸ್ವಾಮಿ, ನಮಗೆ ಕದಾ ತೆಗೆಯಿರಿ ಎಂದು ಹೇಳುವದಕ್ಕೆ ತೊಡಗುವಾಗ ಅವನು—ನೀವು ಎಲ್ಲಿಯವರೋ? ನಿಮ್ಮ ಗುರುತು ನನಗಿಲ್ಲ ಅಂದಾನು. 26 ಅದಕ್ಕೆ ನೀವು—ನಿನ್ನ ಸನ್ನಿಧಿಯಲ್ಲಿ ನಾವು ಊಟಾಮಾಡಿದೆವು, ಕುಡಿದೆವು, ನಮ್ಮ ಬೀದಿಗಳಲ್ಲಿ ನೀನು ಉಪದೇಶಮಾಡಿದಿ ಎಂದು ಹೇಳುವದಕ್ಕೆ ತೊಡಗೀರಿ; 27 ಆದರೆ ಅವನು—ನೀವು ಎಲ್ಲಿಯವರೋ ನಿಮ್ಮ ಗುರುತು ನನಗಿಲ್ಲ; ಅಧರ್ಮವಾಡುವ ನೀವೆಲ್ಲರೂ ನನ್ನ ಕಡೆಯಿಂದ ಹೊರಟುಹೋಗಿರಿ ಎಂದು ನಿಮಗೆ ಹೇಳುತ್ತೇನೆ ಅನ್ನುವನು. 28 ಅಬ್ರಹಾಮ ಇಸಾಕ ಯಾಕೋಬ ಇವರು ಮತ್ತು ಎಲ್ಲಾ ಪ್ರವಾದಿಗಳು ದೇವರ ರಾಜ್ಯದಲ್ಲಿರುವದನ್ನೂ ನಿಮ್ಮನ್ನು ಮಾತ್ರ ಹೊರಗೆ ಹಾಕುವದನ್ನೂ ನೀವು ನೋಡುವಾಗ, ನಿಮಗೆ ಗೋಳಾಟವೂ ಕಟಕಟನೆ ಹಲ್ಲುಕಡಿಯೋಣವೂ ಉಂಟಾಗುವವು. 29 ಇದಲ್ಲದೆ ಪೂರ್ವ ಪಶ್ಚಿಮ ಉತ್ತರ ದಕ್ಷಿಣ ದಿಕ್ಕುಗಳಿಂದಲೂ ಜನರು ಬಂದು ದೇವರ ರಾಜ್ಯದಲ್ಲಿ ಊಟಕ್ಕೆ ಕೂಡ್ರುವರು. 30 ಇಗೋ, ಕಡೆಯವರಾಗಿರುವ ಕೆಲವರು ಮೊದಲಿನವರಾಗುವರು; ಮೊದಲಿನವರಾಗಿರುವ ಕೆಲವರು ಕಡೆಯವರಾಗುವರು ಅಂದನು.

ಯೇಸು ಉಪರಾಜನಾದ ಹೆರೋದನನ್ನು ಕುರಿತು ಹೇಳಿದ್ದು; ಯೆರೂಸಲೇಮಿನ ವಿಷಯದಲ್ಲಿ ದುಃಖಪಟ್ಟದ್ದು.

(ಮತ್ತಾಯ **23**, 37—39.)

31 ಅದೇ ಗಳಿಗೆಯಲ್ಲಿ ಕೆಲವು ಮಂದಿ ಫರಿಸಾಯರು ಹತ್ತರ ಬಂದು, ಆತನಿಗೆ—ನೀನು ಇಲ್ಲಿಂದ ಹೊರಟುಹೋಗು, ಹೆರೋದನು ನಿನ್ನನ್ನು ಕೊಲ್ಲಬೇಕೆಂದಿದ್ದಾನೆ ಎಂದು ಹೇಳಲು, 32 ಆತನು ಅವರಿಗೆ—ನೀವು ಹೋಗಿ—ಇಗೋ ನಾನು ಈಹೊತ್ತು ನಾಳೆ ದೆವ್ವಗಳನ್ನು ಬಿಡಿಸುತ್ತಾ ರೋಗಗಳನ್ನು ವಾಸಿಮಾಡುತ್ತಾ ಇದ್ದು ಮೂರನೇ ದಿನದಲ್ಲಿ ಸಿದ್ಧಿಗೆ ಬರುತ್ತೇನೆ[1] ಎಂದು ಆ ನರಿಗೆ ಹೇಳಿರಿ. 33 ಹ್ಯಾಗೂ ನಾನು ಈಹೊತ್ತು ನಾಳೆ ನಾಡಿದು ಸಂಚಾರ ಮಾಡಬೇಕು; ಪ್ರವಾದಿಯಾದವನು ಯೆರೂಸಲೇಮಿನಲ್ಲಿಯೇ ಹೊರತು ಬೇರೆ ಪಟ್ಟಣದಲ್ಲಿ ಕೊಲ್ಲಲ್ಪಡಕೂಡದಷ್ಟೆ. 34 ಯೆರೂಸಲೇಮೇ, ಯೆರೂಸಲೇಮೇ, ಪ್ರವಾದಿಗಳ ಪ್ರಾಣಾ ತೆಗೆಯುವವಳೇ, ದೇವರು ನಿನ್ನ ಬಳಿಗೆ ಕಳುಹಿಸಿಕೊಟ್ಟವರನ್ನು ಕಲ್ಲೆಸೆದು ಕೊಲ್ಲುವವಳೇ, ಕೋಳಿ ತನ್ನ ಮರಿಗಳನ್ನು ರೆಕ್ಕೆಗಳ ಕೆಳಗೆ ಕೂಡಿಸಿಕೊಳ್ಳುವಂತೆ ನಿನ್ನ ಮಕ್ಕಳನ್ನು ಕೂಡಿಸಿಕೊಳ್ಳುವದಕ್ಕೆ ನನಗೆ ಎಷ್ಟೋ ಸಾರಿ ಮನಸ್ಸಿತ್ತು; ಆದರೆ ನಿಮಗೆ ಮನಸ್ಸಿಲ್ಲದೆ ಹೋಯಿತು. 35 ನೋಡಿರಿ, ನಿಮ್ಮ ಆಲಯವು ನಿಮಗೆ ಬರೀದಾಗಿ ಬಿಟ್ಟದೆ. ಈಗಿನಿಂದ—ಕರ್ತನ ಹೆಸರಿನಲ್ಲಿ ಬರುವವನಿಗೆ ಶುಭವಾಗಲಿ ಎಂದು ನೀವು ಹೇಳುವ ತನಕ ನೀವು ನನ್ನನ್ನು ನೋಡುವದೇ ಇಲ್ಲವೆಂದು ನಿಮಗೆ ಹೇಳುತ್ತೇನೆ ಅಂದನು.

---

[1] ಅಥವಾ, ಕಾರ್ಯವನ್ನು ಮುಗಿಸಿರುವೆನು.

**ಒಬ್ಬ ಪ್ರಮುಖನ ಮನೆಯಲ್ಲಿ ಯೇಸು ಊಟಕ್ಕೆ ಕೂತಿದ್ದಾಗ, ಕರಿಸಿಕೊಂಡವರಿಗೂ ಕರೆದವರಿಗೂ ಆತನು ಸಾಮ್ಯರೂಪವಾಗಿ ಉಪದೇಶಮಾಡಿದ್ದು.**

**(ಮತ್ತಾಯ 22, 2—10 ಸರಿನೋಡಿರಿ.)**

**14** ಆತನು ಸಬ್ಬತ್‌ದಿನದಲ್ಲಿ ಫರಿಸಾಯರ ಮುಖ್ಯಸ್ಥರಲ್ಲಿ ಒಬ್ಬನ ಮನೆಗೆ ಊಟಕ್ಕೆ 2 ಹೋದಾಗ, ಅವರು ಆತನನ್ನು ಹೊಂಚಿನೋಡುತ್ತಿದ್ದರು. ಆಗ ಯೇಸು ತನ್ನೆದುರಿಗೆ 3 ಜಲೋದರವುಳ್ಳ ಒಬ್ಬ ಮನುಷ್ಯನಿರುವದನ್ನು ನೋಡಿ—ಸಬ್ಬತ್‌ದಿನದಲ್ಲಿ ಸ್ವಸ್ಥಮಾಡುವದು ಸರಿಯೋ? ಸರಿಯಲ್ಲವೋ ಎಂದು ಧರ್ಮೋಪದೇಶಕರನ್ನೂ ಫರಿಸಾಯರನ್ನೂ 4 ಕೇಳಿದನು. ಅವರು ಸುಮ್ಮನೇ ಇರಲು, ಆತನು ಅವನ ಕೈ ಹಿಡಿದು ಅವನಿಗೆ ವಾಸಿ 5 ಮಾಡಿ ಕಳುಹಿಸಿ—ನಿಮ್ಮಲ್ಲಿ ಯಾವನೊಬ್ಬನ ಮಗನಾಗಲಿ[1] ಎತ್ತಾಗಲಿ ಬಾವಿಯಲ್ಲಿ ಬಿದ್ದರೆ, ಅವನು ತಡಮಾಡದೆ ಸಬ್ಬತ್‌ದಿನದಲ್ಲಾದರೂ ಮೇಲಕ್ಕೆ ತೆಗೆಯುವದಿಲ್ಲವೇ 6 ಎಂದು ಅವರನ್ನು ಕೇಳಿದನು. ಅವರು ಅದಕ್ಕೆ ಉತ್ತರಕೊಡಲಾರದೆ ಇದ್ದರು.

7 ಊಟಕ್ಕೆ ಕರಿಸಿಕೊಂಡವರು ಪಙ್ಕ್ತಿಯ ಮೊದಲನೇ ಸ್ಥಾನವನ್ನು ಆರಿಸಿಕೊಳ್ಳುವದನ್ನು 8 ನೋಡಿ ಯೇಸು ಒಂದು ಸಾಮ್ಯವನ್ನು ಹೇಳಿದನು, ಏನಂದರೆ—ಯಾವನಾದರೂ ನಿನ್ನನ್ನು ಮದುವೇ ಊಟಕ್ಕೆ ಕರೆದರೆ, ಪಙ್ಕ್ತಿಯೊಳಗೆ ಮೊದಲನೇ ಸ್ಥಾನದಲ್ಲಿ ಕೂತುಕೊಳ್ಳಬೇಡ; ಒಂದು ವೇಳೆ ನಿನಗಿಂತ ಮಾನವುಳ್ಳವನನ್ನು ಅವನು ಕರೆದಿರಬಹುದು, 9 ಮತ್ತು ನಿನ್ನನ್ನೂ ಅವನನ್ನೂ ಕರೆದವನು ಬಂದು—ಇವನಿಗೆ ಸ್ಥಳಬಿಡು ಎಂದು ನಿನಗೆ ಹೇಳುವಾಗ ನೀನು ನಾಚಿಕೊಂಡು ಕಡೇಸ್ಥಾನದಲ್ಲಿ ಕೂತುಕೊಳ್ಳುವದಕ್ಕೆ ಹೋಗುವಿ. 10 ಆದರೆ ಯಾವನಾದರೂ ನಿನ್ನನ್ನು ಕರೆದಾಗ, ನೀನು ಹೋಗಿ ಕಡೇಸ್ಥಾನದಲ್ಲಿ ಕೂತುಕೋ; ಹೀಗೆ ಮಾಡಿದರೆ ನಿನ್ನನ್ನು ಕರೆದವನು ಬಂದು, ನಿನ್ನನ್ನು ನೋಡಿ—ಸ್ನೇಹಿತನೇ, ಇನ್ನೂ ಮೇಲಕ್ಕೆ ಬಾ ಅನ್ನುವನು. ಆಗ ನಿನ್ನ ಸಂಗಡ ಕೂತಿರುವವರೆಲ್ಲರ ಮುಂದೆ ನಿನಗೆ 11 ಮಾನಬರುವದು. ತನ್ನನ್ನು ಹೆಚ್ಚಿಸಿಕೊಳ್ಳುವ ಪ್ರತಿಯೊಬ್ಬನು ತಗ್ಗಿಸಲ್ಪಡುವನು; ತನ್ನನ್ನು ತಗ್ಗಿಸಿಕೊಳ್ಳುವವನು ಹೆಚ್ಚಿಸಲ್ಪಡುವನು ಅಂದನು.

12 ಆತನು ತನ್ನನ್ನು ಊಟಕ್ಕೆ ಕರೆದವನಿಗೆ ಸಹ ಒಂದು ಮಾತು ಹೇಳಿದನು, ಅದೇನಂದರೆ—ನೀನು ಮಧ್ಯಾಹ್ನದ ಊಟಕ್ಕೆ ಅಥವಾ ಸಾಯಂಕಾಲದ ಊಟಕ್ಕೆ ನಿನ್ನ ಸ್ನೇಹಿತರನ್ನಾಗಲಿ ನಿನ್ನ ಅಣ್ಣತಮ್ಮಂದಿರನ್ನಾಗಲಿ ನಿನ್ನ ಬಂಧುಬಾಂಧವರನ್ನಾಗಲಿ ಐಶ್ವರ್ಯವಂತರಾದ ನೆರೆಯವರನ್ನಾಗಲಿ ಕರೆಯಬೇಡ. ಒಂದು ವೇಳೆ ಅವರು ಸಹ ಪ್ರತಿಯಾಗಿ ನಿನ್ನನ್ನು ಕರೆದಾರು, ಮತ್ತು ನಿನಗೆ ಮುಯ್ಯಿಗೆಮುಯ್ಯಾಗುವದು. 13 ಆದರೆ ನೀನು ಔತಣಮಾಡಿಸುವಾಗ, ಬಡವರು ಊನವಾದವರು ಕುಂಟರು ಕುರುಡರು 14 ಇಂಥವರನ್ನು ಕರೆ; ಅವರು ನಿನಗೆ ಮುಯ್ಯಿಗೆಮುಯ್ಯಿ ಮಾಡುವದಕ್ಕೆ ಏನೂ ಇಲ್ಲದವರಾಗಿದ್ದಾಗ್ಯೂ, ನೀತಿವಂತರು ಜೀವಿತರಾಗಿ ಎದ್ದುಬರುವಲ್ಲಿ ನಿನಗೆ ಮುಯ್ಯಿಗೆಮುಯ್ಯಾಗುವದರಿಂದ ನೀನು ಧನ್ಯನಾಗುವಿ ಅಂದನು.

---

[1] ಕೆಲವು ಪ್ರತಿಗಳಲ್ಲಿ—ಕತ್ತೆಯಾಗಲಿ ಎಂದು ಬರೆದದೆ; ಲೂಕ ೧೩, ೧೫ ಸರಿನೋಡಿರಿ.

ತಾನು ಸುಲಿಗೆಮಾಡಿದ್ದನ್ನು ಹಂಚಿಕೊಡುವನು. ನನ್ನ ಪಕ್ಷ ಹಿಡಿಯದವನು ನನಗೆ 23
ವಿರೋಧಿ; ನನ್ನ ಜೊತೆಯಲ್ಲಿ ಒಟ್ಟುಗೂಡಿಸದವನು ಚದರಿಸುವವನಾಗುತ್ತಾನೆ. ದೆವ್ವವು 24
ಮನುಷ್ಯನನ್ನು ಬಿಟ್ಟುಹೋದ ಮೇಲೆ, ವಿಶ್ರಾಂತಿಯನ್ನು ಹುಡುಕುತ್ತಾ ನೀರಿಲ್ಲದ
ಸ್ಥಳಗಳಲ್ಲಿ ತಿರುಗಾಡುತ್ತದೆ; ವಿಶ್ರಾಂತಿ ಸಿಕ್ಕದ ಕಾರಣ, ಅದು—ನಾನು ಬಿಟ್ಟುಬಂದ ನನ್ನ
ಮನೆಗೆ ಹಿಂತಿರುಗಿ ಹೋಗುತ್ತೇನೆ ಅಂದುಕೊಂಡು ಬಂದು, ಆ ಮನೆ ಗುಡಿಸಿ ಅಲಂಕರಿ 25
ಸಿದ್ದಾಗಿರುವದನ್ನು ಕಂಡು, ಹೊರಟುಹೋಗಿ ತನಗಿಂತ ಕೆಟ್ಟವುಗಳಾದ ಬೇರೆ ಏಳು 26
ದೆವ್ವಗಳನ್ನು ಕರಕೊಂಡು ಬರುವದು; ಅವು ಒಳಹೊಕ್ಕು ಅಲ್ಲಿ ವಾಸಮಾಡುವವು;
ಆಗ ಆ ಮನುಷ್ಯನ ಅಂತ್ಯಸ್ಥಿತಿಯು ಮೊದಲಿಗಿಂತ ಕೆಟ್ಟದ್ದಾಗುವದು ಅಂದನು.

ಆತನು ಈ ಮಾತುಗಳನ್ನು ಹೇಳುತ್ತಿರುವಾಗ, ಜನರಲ್ಲಿ ಒಬ್ಬ ಸ್ತ್ರೀಯು—ನಿನ್ನನ್ನು 27
ಹೊತ್ತ ಗರ್ಭವೂ ನೀನು ಕುಡಿದ ಮೊಲೆಗಳೂ ಧನ್ಯವಾದವುಗಳು ಎಂದು ಕೂಗಿದಳು.
ಆತನು—ಹಾಗನ್ನ ಬೇಡ, ದೇವರ ವಾಕ್ಯವನ್ನು ಕೇಳಿ ಅದಕ್ಕೆ ಸರಿಯಾಗಿ ನಡಕೊಳ್ಳು 28
ವವರೇ ಧನ್ಯರು ಅಂದನು.

ಜನರು ಗುಂಪುಗುಂಪಾಗಿ ಕೂಡಿಬರುತ್ತಿರುವಾಗ ಆತನು ಹೇಳುವದಕ್ಕೆ ತೊಡಗಿದ್ದೇ 29
ನಂದರೆ—ಈ ಸಂತತಿ ಕೆಟ್ಟ ಸಂತತಿಯೇ; ಇದು ಸೂಚಕಕಾರ್ಯವನ್ನು ನೋಡಬೇಕೆಂದು
ಅಪೇಕ್ಷಿಸುತ್ತದೆ. ಆದರೆ ಇದಕ್ಕೆ ಯೋನನಲ್ಲಿ ಆದ ಸೂಚಕಕಾರ್ಯವೇ ಹೊರತು ಬೇರೆ
ಯಾವದೂ ಸಿಕ್ಕುವದಿಲ್ಲ. ಹ್ಯಾಗಂದರೆ, ಯೋನನು ನಿನವೇ ಪಟ್ಟಣದವರಿಗೆ ಗುರುತಾದ 30
ಹಾಗೆಯೇ ಮನುಷ್ಯಕುಮಾರನು ಈ ಸಂತತಿಗೆ ಗುರುತಾಗುವನು. ದಕ್ಷಿಣದೇಶದ 31
ರಾಣಿಯು ನ್ಯಾಯವಿಚಾರಣೆಯಲ್ಲಿ ಈ ಸಂತತಿಯವರೊಂದಿಗೆ ಎದ್ದು ನಿಂತು, ಇವರನ್ನು
ಅಪರಾಧಿಗಳೆಂದು ಹೇಳುವಳು; ಆಕೆಯು ಸೊಲೊಮೋನನ ಜ್ಞಾನವನ್ನು ತಿಳುಕೊಳ್ಳು
ವದಕ್ಕೆ ಭೂಮಿಯ ಕಟ್ಟಕಡೆಯಿಂದ ಬಂದಳು; ಆದರೆ ಇಲ್ಲಿ ಸೊಲೊಮೋನನಿಗಿಂತಲೂ
ಹೆಚ್ಚಿನವನಿದ್ದಾನೆ. ನ್ಯಾಯವಿಚಾರಣೆಯಲ್ಲಿ ನಿನವೇ ಪಟ್ಟಣದವರು ಈ ಸಂತತಿಯವ 32
ರೊಂದಿಗೆ ನಿಂತು, ಇವರನ್ನು ಅಪರಾಧಿಗಳೆಂದು ಹೇಳುವರು. ಯೋನನು ಸಾರಿದ
ವಾಕ್ಯವನ್ನು ಅವರು ಕೇಳಿ ದೇವರ ಕಡೆಗೆ ತಿರುಗಿಕೊಂಡರು; ಆದರೆ ಇಲ್ಲಿ ಯೋನನಿ
ಗಿಂತಲೂ ಹೆಚ್ಚಿನವನಿದ್ದಾನೆ.

ಯಾರೂ ದೀಪಾಹಚ್ಚಿ ಮರೆಯಲ್ಲಾಗಲಿ ಕೊಳಗದ ಒಳಗಾಗಲಿ ಇಡುವದಿಲ್ಲ. 33
ಮನೆಯೊಳಕ್ಕೆ ಬರುವವರಿಗೆ ಬೆಳಕು ಕಾಣಿಸುವಂತೆ ಆ ದೀಪವನ್ನು ದೀಪಸ್ತಂಭದ
ಮೇಲೆಯೇ ಇಡುತ್ತಾರೆ[1]. ದೇಹಕ್ಕೆ ನಿನ್ನ ಕಣ್ಣೇ ದೀಪ; ನಿನ್ನ ಕಣ್ಣು ನೆಟ್ಟಗಿರುವಾಗ 34
ನಿನ್ನ ದೇಹವೆಲ್ಲಾ ಬೆಳಕಿನಿಂದ ತುಂಬಿಕೊಂಡಿರುವದು; ಅದು ಕೆಟ್ಟದ್ದಾಗಿರುವಾಗ ನಿನ್ನ
ದೇಹವು ಸಹ ಕತ್ತಲೆಯಿಂದ ತುಂಬಿಕೊಂಡಿರುವದು. ಆದದರಿಂದ ನಿನ್ನಲ್ಲಿರುವ 35
ಬೆಳಕು ಕತ್ತಲೆಯಾಗಿದೆಯೋ ಏನೋ ನೋಡು. ನಿನ್ನ ದೇಹವೆಲ್ಲಾ ಬೆಳಕಿನಿಂದ ತುಂಬಿ 36
ಕೊಂಡದ್ದಾಗಿ ಒಂದು ಭಾಗದಲ್ಲಿಯೂ ಕತ್ತಲೆಯಿಲ್ಲದ್ದಾಗಿದ್ದರೆ, ದೀಪವು ಹೊಳೆದು ನಿನಗೆ
ಬೆಳಕನ್ನು ಕೊಡುವ ಕಾಲದಲ್ಲಿ ಹ್ಯಾಗೋ ಹಾಗೆಯೇ ಅದು ಪೂರ್ಣವಾಗಿ ಬೆಳಕಿನಿಂದ
ತುಂಬಿಕೊಂಡಿರುವದು[2] ಅಂದನು.

---

1) ಲೂಕ ೮, ೧೬; ಮತ್ತಾಯ ೫, ೧೫.

2) ಮತ್ತಾಯ ೬, ೨೨. ೨೩.

## ಯೇಸು ಫರಿಸಾಯರ ದುರ್ಗುಣಗಳನ್ನು ಖಂಡಿಸಿದ್ದು.

(ಮತ್ತಾಯ 23, 1—36.)

37 ಆತನು ಮಾತಾಡುತ್ತಿರುವಾಗ ಒಬ್ಬ ಫರಿಸಾಯನು ಆತನನ್ನು ಊಟಕ್ಕೆ ಬರ
38 ಬೇಕೆಂದು ಕೇಳಿಕೊಳ್ಳಲು, ಆತನು ಒಳಕ್ಕೆ ಹೋಗಿ ಊಟಕ್ಕೆ ಕೂತುಕೊಂಡನು. ಆತನು ತೊಳಕೊಳ್ಳದೆ ಊಟಕ್ಕೆ ಕೂತದ್ದನ್ನು ಆ ಫರಿಸಾಯನು ಕಂಡು ಆಶ್ಚರ್ಯಪಟ್ಟನು.
39 ಸ್ವಾಮಿಯು ಅವನಿಗೆ—ಫರಿಸಾಯರಾದ ನೀವು ಪಂಚಪಾತ್ರೆ ಬಟ್ಟಲು ಇವುಗಳ ಹೊರ ಭಾಗವನ್ನು ಶುಚಿಮಾಡುತ್ತೀರಿ ಸರಿ; ಆದರೆ ನಿಮ್ಮ ಒಳಭಾಗವು ಸುಲಿಗೆಯಿಂದಲೂ
40 ಕೆಟ್ಟತನದಿಂದಲೂ ತುಂಬಿಹೋಗಿದೆ. ಬುದ್ಧಿಯಿಲ್ಲದವರೇ, ಹೊರಭಾಗವನ್ನು ಮಾಡಿ
41 ದಾತನು ಒಳಭಾಗವನ್ನೂ ಮಾಡಿದನಲ್ಲವೇ? ಹ್ಯಾಗೂ ಒಳಗಿರುವಂಥಾದ್ದನ್ನು ದಾನಾ ಕೊಡಿರಿ; ಆಗ ಸಕಲವೂ ನಿಮಗೆ ಶುದ್ಧವಾಗಿರುವದು.

42 ಅಯ್ಯೋ ಫರಿಸಾಯರೇ, ನೀವು ಮರುಗ ಸದಾಪು ಮುಂತಾದ ಸಕಲ ಪಲ್ಯಗಳಲ್ಲಿ ಹತ್ತರಲ್ಲೊಂದು ಪಾಲು ಕೊಡುತ್ತೀರಿ ಸರಿ; ಆದರೆ ನ್ಯಾಯವನ್ನೂ ದೇವರ ಪ್ರೀತಿಯ ನ್ನೂ ಒತ್ತಟ್ಟಿಗೆ ಬಿಟ್ಟಿದ್ಧೀರಿ; ಇವುಗಳನ್ನು ಅನುಸರಿಸಬೇಕಾಗಿತ್ತು, ಅವುಗಳನ್ನೂ ಬಿಡ
43 ಬಾರದು. ಅಯ್ಯೋ ಫರಿಸಾಯರೇ, ಸಭಾಮಂದಿರಗಳಲ್ಲಿ ಮೇಲಿನ ಸ್ಥಳಗಳೂ ಅಂಗಡಿ
44 ಬೀದಿಗಳಲ್ಲಿ ನಮಸ್ಕಾರಗಳೂ ನಿಮಗೆ ಇಷ್ಟ. ನಿಮ್ಮ ಗತಿಯನ್ನು ಏನು ಹೇಳಲಿ; ನೆಲಸಮವಾದ ಸಮಾಧಿಗಳ ಹಾಗಿದ್ಧೀರಿ; ಅವುಗಳ ಮೇಲೆ ತಿರುಗಾಡುವ ಜನರಿಗೆ ಇವು ಸಮಾಧಿಗಳೆಂದು ತಿಳಿಯದು ಎಂದು ಹೇಳಿದನು.

45 ಇದನ್ನು ಕೇಳಿ ಒಬ್ಬ ಧರ್ಮೋಪದೇಶಕನು ಆತನಿಗೆ—ಬೋಧಕನೇ, ಈ ಮಾತು
46 ಗಳನ್ನು ಹೇಳುವದರಿಂದ ನಮ್ಮನ್ನೂ ನಿಂದಿಸಿದ ಹಾಗಾಯಿತು ಎಂದು ಹೇಳಲು; ಆತನು— ಧರ್ಮೋಪದೇಶಕರೇ, ನಿಮ್ಮ ಗತಿಯನ್ನೂ ಏನು ಹೇಳಲಿ? ನೀವು ಜನರ ಮೇಲೆ ಹೊರಲಾರದ ಹೊರೆಗಳನ್ನು ಹೊರಿಸುತ್ತೀರಿ; ನೀವಾದರೋ ಆ ಹೊರೆಗಳನ್ನು ಒಂದು
47 ಬೆರಳಿನಿಂದಲೂ ಮುಟ್ಟುವದಿಲ್ಲ. ನಿಮ್ಮ ಗತಿಯನ್ನು ಏನು ಹೇಳಲಿ? ನೀವು ಪ್ರವಾದಿ
48 ಗಳ ಸಮಾಧಿಗಳನ್ನು ಕಟ್ಟುತ್ತೀರಿ; ಅವರನ್ನು ಕೊಂದವರು ನಿಮ್ಮ ಪಿತೃಗಳೇ. ಹೀಗಿರು ವದರಿಂದ ನಿಮ್ಮ ಪಿತೃಗಳು ಮಾಡಿದ್ದನ್ನು ನೀವೇ ತೋರಿಸುವದಲ್ಲದೆ ಅವರ ಕೃತ್ಯಗಳಿಗೆ ಒಪ್ಪಿಕೊಂಡ ಹಾಗಾಯಿತು. ಹ್ಯಾಗಂದರೆ, ಅವರು ಪ್ರವಾದಿಗಳನ್ನು ಕೊಂದರು,
49 ನೀವು ಸಮಾಧಿಗಳನ್ನೇ ಕಟ್ಟುತ್ತೀರಿ. ಆದ್ದರಿಂದ ದೇವರ ಜ್ಞಾನವು ಹೇಳಿದ್ದೇನಂದರೆ— ನಾನು ಅವರ ಬಳಿಗೆ ಪ್ರವಾದಿಗಳನ್ನೂ ಪ್ರೇಷಿತರನ್ನೂ ಕಳುಹಿಸುವೆನು; ಅವರಲ್ಲಿ
50-51 ಕೆಲವರನ್ನು ಕೊಲ್ಲುವರು; ಕೆಲವರನ್ನು ಹಿಂಸೆಪಡಿಸುವರು. ಹೀಗೆ ಲೋಕಾದಿ ಯಿಂದ ಹೇಬೆಲನ ರಕ್ತವು ಮೊದಲ್ಗೊಂಡು, ಯಜ್ಞವೇದಿಗೂ ದೇವಾಲಯಕ್ಕೂ ನಡುವೆ ಹತವಾದ ಜಕರೀಯನ ರಕ್ತದವರೆಗೂ[1] ಸುರಿಸಲ್ಪಟ್ಟ ಎಲ್ಲಾ ಪ್ರವಾದಿಗಳ ರಕ್ತಕ್ಕೂ ಈ ಸಂತತಿಯವರು ಉತ್ತರಕೊಡಬೇಕು ಎಂಬುವದೇ; ಹೌದು, ಈ ಸಂತತಿಯವರೇ

[1] ೨ ದಿನಚರ್ಯ ೨೪, ೨೦—೨೨.

ಉತ್ತರಕೊಡಬೇಕೆಂದು ನಿಮಗೆ ಹೇಳುತ್ತೇನೆ. ಅಯ್ಯೋ ಧರ್ಮೋಪದೇಶಕರೇ, ಜ್ಞಾನಕ್ಕೆ 52 ಸಾಧನವಾದ ಬೀಗದಕೈಯನ್ನು ತೆಗೆದುಬಿಟ್ಟಿರಿ. ನೀವೂ ಒಳಕ್ಕೆ ಹೋಗಲಿಲ್ಲ; ಒಳಕ್ಕೆ ಹೋಗುತ್ತಿರುವವರಿಗೂ ಅಡ್ಡೀಮಾಡಿದಿರಿ ಅಂದನು.

ಬಳಿಕ ಆತನು ಅಲ್ಲಿಂದ ಹೊರಗೆ ಬಂದಾಗ, ಶಾಸ್ತ್ರಿಗಳೂ ಫರಿಸಾಯರೂ ಆತನನ್ನು 53 ಕಠಿನವಾಗಿ ವಿರೋಧಿಸಿ, ಅನೇಕ ವಿಷಯಗಳನ್ನು ಕುರಿತು ಆತನನ್ನು ಅಡ್ಡಾದಿಡ್ಡೀ ಪ್ರಶ್ನೆ ಮಾಡುತ್ತಾ ಆತನ ಬಾಯಿಮಾತಿನಲ್ಲಿ ಏನಾದರೂ ಹಿಡಿಯಬೇಕೆಂದು ಆತನನ್ನು ಹೊಂಚಿ 54 ನೋಡುತ್ತಿದ್ದರು.

ಫರಿಸಾಯರ ಉಪದೇಶಕ್ಕೆ ಎಚ್ಚರಿಕೆಯಾಗಿರಬೇಕೆಂದು ಯೇಸು ಬೋಧಿಸಿದ್ದು.

(ಮತ್ತಾಯ 10, 26—33.)

ಇಷ್ಟರಲ್ಲಿ ಸಾವಿರಾರು ಜನರು ಒಬ್ಬರನ್ನೊಬ್ಬರು ತುಳಿಯುವಷ್ಟು ಕೂಡಿಬಂದಿರಲಾಗಿ, **12** ಆತನು ಮೊದಲು ತನ್ನ ಶಿಷ್ಯರಿಗೆ ಹೇಳುವದಕ್ಕೆ ತೊಡಗಿದ್ದೇನಂದರೆ—ಫರಿಸಾಯರ ಕಪಟವೆಂಬ ಹುಳಿಹಿಟ್ಟಿಗೆ ಎಚ್ಚರಿಕೆಯುಳ್ಳವರಾಗಿರ್ರಿ. ಬೈಲಿಗೆ ಬಾರದೆ ಮರೆಯಾದದ್ದು 2 ಯಾವದೂ ಇಲ್ಲ; ಯಾವ ಗುಟ್ಟೂ ಜನರಿಗೆ ಗೊತ್ತಾಗದೆ ಇರುವದಿಲ್ಲ. ಹೀಗಿರುವದ 3 ರಿಂದ ನೀವು ಕತ್ತಲಲ್ಲಿ ಹೇಳಿದಂಥಾದ್ದು ಬೆಳಕಿನಲ್ಲಿ ಕೇಳಲಾಗುವದು; ಮತ್ತು ನೀವು ಕೋಣೆಗಳೊಳಗೆ ಕಿವಿಮಾತು ಆಡಿದ್ದು ಮಾಳಿಗೆಗಳ ಮೇಲೆ ಸಾರಲಾಗುವದು.

ನನ್ನ ಸ್ನೇಹಿತರಾದ ನಿಮಗೆ ಹೇಳುತ್ತೇನೆ—ದೇಹವನ್ನು ಕೊಂದು, ಅದಕ್ಕಿಂತ ಹೆಚ್ಚಿನ 4 ದೇನೂ ಮಾಡಲಾರದವರಿಗೆ ಹೆದರಬೇಡಿರಿ. ನೀವು ಯಾರಿಗೆ ಹೆದರಬೇಕೋ ನಿಮಗೆ 5 ತಿಳಿಸುತ್ತೇನೆ; ಕೊಂದ ಮೇಲೆ ನರಕದೊಳಗೆ ಹಾಕುವ ಅಧಿಕಾರವುಳ್ಳವನಿಗೆ ಹೆದರ ಬೇಕು; ಹೌದು, ಆತನಿಗೇ ಹೆದರಬೇಕೆಂದು ನಿಮಗೆ ಹೇಳುತ್ತೇನೆ. ಐದು ಗುಬ್ಬಿ 6 ಗಳನ್ನು ಎರಡು ದುಡ್ಡಿಗೆ ಮಾರುತ್ತಾರಲ್ಲಾ? ಅವುಗಳಲ್ಲಿ ಒಂದಾದರೂ ದೇವರಿಗೆ ಮರೆತುಹೋಗುವದಿಲ್ಲ. ನಿಮ್ಮ ತಲೇಕೂದಲುಗಳು ಸಹ ಎಲ್ಲಾ ಎಣಿಕೆಯಾಗಿವೆ. 7 ಹೆದರಬೇಡಿರಿ; ನೂರಾರು ಗುಬ್ಬಿಗಳಿಗಿಂತ ನೀವು ಹೆಚ್ಚಿನವರು. ನಾನು ನಿಮಗೆ 8 ಹೇಳುತ್ತೇನೆ, ಯಾವನು ಮನುಷ್ಯರ ಮುಂದೆ ತಾನು ಯೇಸುವಿನವನೆಂದು ಒಪ್ಪಿ ಕೊಳ್ಳುವನೋ ಅವನನ್ನು ಮನುಷ್ಯಕುಮಾರನು ಸಹ ದೇವದೂತರ ಮುಂದೆ ತನ್ನವ ನೆಂದು ಒಪ್ಪಿಕೊಳ್ಳುವನು. ಆದರೆ ಯಾವನು ಮನುಷ್ಯರ ಮುಂದೆ ತಾನು ಯೇಸುವಿ 9 ನವನಲ್ಲವೆಂದು ಹೇಳುವನೋ ಅವನನ್ನು ನಾನು ದೇವದೂತರ ಮುಂದೆ ನನ್ನವನಲ್ಲವೆಂದು ಹೇಳುವೆನು. ಯಾವನಾದರೂ ಮನುಷ್ಯಕುಮಾರನ ಮೇಲೆ ಏನಾದರೂ ಮಾತಾಡಿ 10 ದರೆ, ಅದು ಅವನಿಗೆ ಕ್ಷಮಿಸಲ್ಪಡುವದು; ಆದರೆ ಪವಿತ್ರಾತ್ಮನ ಮೇಲೆ ದೂಷಣೆ ಮಾತಾ ಡುವವನಿಗೆ ಕ್ಷಮಿಸಲ್ಪಡುವದೇ ಇಲ್ಲ. ಅವರು ನಿಮ್ಮನ್ನು ಸಭಾಮಂದಿರದವರ 11 ಮುಂದಕ್ಕೂ ಅಧಿಕಾರಿಗಳ ಮುಂದಕ್ಕೂ ಅಧಿಪತಿಗಳ ಮುಂದಕ್ಕೂ ಹಿಡುಕೊಂಡು ಹೋಗುವಾಗ, ಹ್ಯಾಗೆ ಉತ್ತರಕೊಡಬೇಕು? ಏನು ಉತ್ತರಕೊಡಬೇಕು? ಏನು ಹೇಳಬೇಕು ಎಂದು ಚಿಂತೆಮಾಡಬೇಡಿರಿ. ಯಾಕಂದರೆ, ನೀವು ಹೇಳತಕ್ಕದ್ದನ್ನು 12 ಪವಿತ್ರಾತ್ಮನು ಆ ಗಳಿಗೆಯಲ್ಲಿಯೇ ನಿಮಗೆ ಕಲಿಸಿಕೊಡುವನು ಅಂದನು.

ಯೇಸು ಬುದ್ಧಿಯಿಲ್ಲದ ಐಶ್ವರ್ಯವಂತನ ಸಾಮ್ಯವನ್ನು ಹೇಳಿ ದ್ರವ್ಯಾಶೆಯ ವಿಷಯವಾಗಿಯೂ ಇಹಲೋಕದ ಚಿಂತೆಯ ವಿಷಯವಾಗಿಯೂ ಎಚ್ಚರಿಸಿದ್ದು.

(ಮತ್ತಾಯ 6, 25—33.)

13 ಆಗ ಜನರಲ್ಲಿ ಒಬ್ಬನು—ಬೋಧಕನೇ, ತಂದೆಯ ಆಸ್ತಿಯನ್ನು ನನಗೆ ಪಾಲುಮಾಡಿ
14 ಕೊಡುವಂತೆ ನನ್ನ ಅಣ್ಣನಿಗೆ ಹೇಳು ಎಂದು ಆತನನ್ನು ಕೇಳಿಕೊಳ್ಳಲು, ಆತನು—ಎಲಾ ಮನುಷ್ಯಾ, ನನ್ನನ್ನು ನಿಮಗೆ ನ್ಯಾಯಾಧಿಪತಿಯನ್ನಾಗಿ ಅಥವಾ ಪಾಲುಮಾಡುವವ
15 ನನ್ನಾಗಿ ನೇಮಿಸಿದವರ್ಯಾರು ಎಂದು ಅವನನ್ನು ಕೇಳಿ, ಜನರಿಗೆ—ಎಲ್ಲಾ ಲೋಭಕ್ಕೂ ಎಚ್ಚರಿಕೆಯಾಗಿದ್ದು ನಿಮ್ಮನ್ನು ಕಾಪಾಡಿಕೊಳ್ಳಿರಿ. ಒಬ್ಬನಿಗೆ ಎಷ್ಟು ಆಸ್ತಿಯಿದ್ದರೂ
16 ಅದು ಅವನಿಗೆ ಜೀವಾಧಾರವಾಗುವದಿಲ್ಲ ಎಂದು ಹೇಳಿ ಒಂದು ಸಾಮ್ಯವನ್ನು ಹೇಳಿದನು; ಅದೇನಂದರೆ, ಒಬ್ಬಾನೊಬ್ಬ ಐಶ್ವರ್ಯವಂತನ ಭೂಮಿಯು ಚನ್ನಾಗಿ ಬೆಳೆಯಿತು.
17 ಆಗ ಅವನು ತನ್ನೊಳಗೆ—ನಾನೇನು ಮಾಡಲಿ? ನನ್ನ ಬೆಳೆಯನ್ನು ತುಂಬಿಡುವದಕ್ಕೆ
18 ನನಗೆ ಸ್ಥಳವಿಲ್ಲವಲ್ಲಾ ಎಂದು ಆಲೋಚಿಸಿ—ಒಂದು ಕೆಲಸ ಮಾಡುತ್ತೇನೆ; ನನ್ನ ಕಣಜಗಳನ್ನು ಕೀಳಿಸಿ ಅವುಗಳಿಗಿಂತ ದೊಡ್ಡ ಕಣಜಗಳನ್ನು ಕಟ್ಟಿಸುವೆನು. ಅಲ್ಲಿ ನನ್ನ ಎಲ್ಲಾ
19 ದವಸಧಾನ್ಯಗಳನ್ನೂ ಸರಕುಗಳನ್ನೂ ತುಂಬಿಟ್ಟು, ನನ್ನ ಜೀವಾತ್ಮಕ್ಕೆ—ಜೀವವೇ, ಅನೇಕ ವರುಷಗಳಿಗೆ ಬೇಕಾದಷ್ಟು ಸರಕು ನಿನಗೆ ಬಿದ್ದದೆ; ವಿಶ್ರಮಿಸಿಕೋ, ಊಟಾಮಾಡು,
20 ಕುಡಿ, ಸುಖಪಡು ಎಂದು ಹೇಳುವೆನು ಅಂದುಕೊಂಡನು. ಆದರೆ ದೇವರು ಅವನಿಗೆ—ಬುದ್ಧಿಹೀನನು ನೀನು! ಈ ಹೊತ್ತು ರಾತ್ರಿ ನಿನ್ನ ಪ್ರಾಣವನ್ನು ನಿನ್ನ ಕಡೆಯಿಂದ ಕೇಳುವರು; ಆಗ ನೀನು ಸಿದ್ಧಮಾಡಿಟ್ಟಿರುವದು ಯಾರಿಗಾಗುವದು ಎಂದು ಹೇಳಿದನು.
21 ತನಗೋಸ್ಕರ ದ್ರವ್ಯವನ್ನಿಟ್ಟುಕೊಂಡು ದೇವರ ವಿಷಯಗಳಲ್ಲಿ ಐಶ್ವರ್ಯವಂತನಾಗದೆ ಇರುವವನು ಅವನಂತೆಯೇ ಇದ್ದಾನೆ ಅಂದನು.

22 ಇದಲ್ಲದೆ ಆತನು ತನ್ನ ಶಿಷ್ಯರಿಗೆ ಹೇಳಿದ್ದೇನಂದರೆ—ಈ ಕಾರಣದಿಂದ ಪ್ರಾಣಧಾರಣೆಗೆ ಏನು ಊಟಾಮಾಡಬೇಕು? ದೇಹರಕ್ಷಣೆಗೆ ಏನು ಹೊದ್ದುಕೊಳ್ಳಬೇಕು ಎಂದು
23 ಚಿಂತೆಮಾಡಬೇಡಿರಿ ಎಂಬದಾಗಿ ನಿಮಗೆ ಹೇಳುತ್ತೇನೆ. ಊಟಕ್ಕಿಂತ ಪ್ರಾಣವು, ಉಡು
24 ಪಿಗಿಂತ ದೇಹವು ಮೇಲಾದದ್ದಷ್ಟೆ. ಕಾಗೆಗಳನ್ನು ನೋಡಿರಿ; ಅವು ಬಿತ್ತುವದಿಲ್ಲ, ಕೊಯ್ಯುವದಿಲ್ಲ, ಅವುಗಳಿಗೆ ಉಗ್ರಾಣವೂ ಇಲ್ಲ, ಕಣಜವೂ ಇಲ್ಲ; ಆದಾಗ್ಯೂ ದೇವರು ಅವುಗಳನ್ನು ಸಾಕಿಸಲಹುತ್ತಾನೆ. ಹಕ್ಕಿಗಳಿಗಿಂತ ನೀವು ಎಷ್ಟೋ ಹೆಚ್ಚಿನವರಲ್ಲವೇ?
25 ಚಿಂತೆಮಾಡಿಮಾಡಿ ಒಂದು ಮೊಳ ಉದ್ದ ಬೆಳೆಯುವದು[1] ನಿಮ್ಮಲ್ಲಿ ಯಾರಿಂದಾದೀತು?
26 ಆದದರಿಂದ ಕೇವಲ ಅಲ್ಪವಾದದ್ದನ್ನಾದರೂ ಮಾಡುವದಕ್ಕೆ ನೀವು ಅಶಕ್ತರಾಗಿರಲಾಗಿ,
27 ಮಿಕ್ಕಾದ್ದರ ವಿಷಯದಲ್ಲಿ ಯಾಕೆ ಚಿಂತೆಮಾಡುತ್ತೀರಿ? ಹೂವುಗಳು ಬೆಳೆಯುವ ರೀತಿಯನ್ನು ಯೋಚನೆಗೆ ತಂದುಕೊಳ್ಳಿರಿ; ಅವು ದುಡಿಯುವದಿಲ್ಲ, ನೂಲುವದಿಲ್ಲ; ಆದಾಗ್ಯೂ ಈ ಹೂವುಗಳೊಳಗೆ ಒಂದಕ್ಕಿರುವಷ್ಟು ಅಲಂಕಾರವು ಅರಸನಾದ ಸೊಲೊಮೋನನಿಗೆ ಅವನು ತನ್ನ ಸಕಲ ವೈಭವದಿಂದಿರುವಾಗಲೂ ಇರಲಿಲ್ಲವೆಂದು ನಿಮಗೆ ಹೇಳುತ್ತೇನೆ.

[1] ಅಂದರೆ, ಆಯುಸ್ಸು ಹೆಚ್ಚುಮಾಡಿಕೊಳ್ಳುವದು.

ಎಲೈ ಅಲ್ಪವಿಶ್ವಾಸಿಗಳೇ, ಈಹೊತ್ತು ಇದ್ದು ನಾಳೆ ಒಲೆಯ ಪಾಲಾಗುವ ಅಡವಿಯ 28
ಹುಲ್ಲಿಗೆ ದೇವರು ಹೀಗೆ ಉಡಿಸಿದರೆ, ಅದಕ್ಕಿಂತಲೂ ಎಷ್ಟೋ ಹೆಚ್ಚಾಗಿ ನಿಮಗೆ ಉಡಿಸಿ
ತೊಡಿಸುವನಲ್ಲವೇ? ಏನು ಊಟಾಮಾಡಬೇಕು? ಏನು ಕುಡಿಯಬೇಕು ಎಂದು 29
ಹಂಬಲಿಸುತ್ತಾ ಇರಬೇಡಿರಿ, ಮತ್ತು ಅನುಮಾನ ಪಡಬೇಡಿರಿ. ಇವೆಲ್ಲವುಗಳ ವಿಷಯ 30
ದಲ್ಲಿ ಇಹಲೋಕದ ಜನಗಳು ಹಂಬಲಿಸುತ್ತಾರೆ; ಅವು ನಿಮಗೆ ಅವಶ್ಯವೆಂದು ನಿಮ್ಮ
ತಂದೆಗೆ ಗೊತ್ತುಂಟು. ನೀವಾದರೋ ಆತನ ರಾಜ್ಯವನ್ನು ಪಡಕೊಳ್ಳುವದಕ್ಕೆ ಪ್ರಯತ್ನಿ 31
ಸಿರಿ; ಇದರ ಕೂಡ ಅವೂ ನಿಮಗೆ ದೊರಕುವವು. ಚಿಕ್ಕ ಹಿಂಡೇ, ಹೆದರಬೇಡ; 32
ಆ ರಾಜ್ಯವನ್ನು ನಿಮಗೆ ದಯಪಾಲಿಸುವದಕ್ಕೆ ನಿಮ್ಮ ತಂದೆಯು ಸಂತೋಷವುಳ್ಳವನಾಗಿ
ದ್ದಾನೆ. ನಿಮಗಿರುವದನ್ನು ಮಾರಿಬಿಟ್ಟು ದಾನಾಕೊಡಿರಿ; ಹಳೇವಾಗದಂಥ ಹಮ್ಮಾಣಿ 33
ಗಳನ್ನು ಮಾಡಿಕೊಂಡು ಪರಲೋಕದಲ್ಲಿ ಲಯವಾಗದ ದ್ರವ್ಯವನ್ನು ಇಟ್ಟುಕೊಳ್ಳಿರಿ. ಅಲ್ಲಿ
ಕಳ್ಳನು ಸಮೀಪಕ್ಕೆ ಬರುವದಿಲ್ಲ; ನುಸಿ ಹಿಡಿಯುವದಿಲ್ಲ. ನಿಮ್ಮ ದ್ರವ್ಯವೆಲ್ಲಿರುವದೋ 34
ನಿಮ್ಮ ಮನಸ್ಸೂ ಅಲ್ಲೇ ಇರುವದಷ್ಟೆ.

ತನ್ನ ಶಿಷ್ಯರು ಯಾವಾಗಲೂ ಎಚ್ಚರವಾಗಿರಬೇಕೆಂಬದಾಗಿ ಯೇಸು ಎರಡು ಸಾಮ್ಯಗಳನ್ನು ಹೇಳಿದ್ದು.
(ಮತ್ತಾಯ 24, 42—51.)

ನಿಮ್ಮ ನಡುಗಳು ಕಟ್ಟಿರಲಿ; ನಿಮ್ಮ ದೀವಟಿಗೆಗಳು ಉರಿಯುತ್ತಾ ಇರಲಿ. ನೀವಂತೂ 35,36
ತಮ್ಮ ಒಡೆಯನು ಬಂದು ತಟ್ಟಿದ ಕೂಡಲೇ ಕದವನ್ನು ತೆರೆಯುವದಕ್ಕೆ ಸಿದ್ಧವಾಗಿದ್ದು,
ಮದುವೇ ಊಟವನ್ನು ಯಾವಾಗ ತೀರಿಸಿಕೊಂಡು ಬರುವನೋ ಎಂದು ಅವನನ್ನು
ಎದುರುನೋಡುತ್ತಿರುವ ಮನುಷ್ಯರಂತಿರ್ರಿ. ಒಡೆಯನು ಬಂದು ಯಾವ ಯಾವ 37
ಆಳುಗಳು ಎಚ್ಚರವಾಗಿರುವದನ್ನು ಕಂಡುಕೊಳ್ಳುವನೋ ಆ ಆಳುಗಳೇ ಧನ್ಯರು.
ಆತನೇ ನಡುಕಟ್ಟಿಕೊಂಡು, ಅವರನ್ನು ಊಟಕ್ಕೆ ಕುಂಡ್ರಿಸಿ, ಹತ್ತರಕ್ಕೆ ಬಂದು, ಅವರಿಗೆ
ಸೇವೆಮಾಡುವನು ಎಂದು ನಿಮಗೆ ಸತ್ಯವಾಗಿ ಹೇಳುತ್ತೇನೆ. ಎರಡನೇ ಜಾವದಲ್ಲಿ 38
ಯಾಗಲಿ ಮೂರನೇ ಜಾವದಲ್ಲಿಯಾಗಲಿ ಬಂದಾತನಿಗೆ ಹಾಗೆ ಕಾಣಿಸಿಕೊಂಡವರು
ಧನ್ಯರು. ಕಳ್ಳನು ಬರುವ ಗಳಿಗೆಯು ಮನೇಯಜಮಾನನಿಗೆ ತಿಳಿದಿದ್ದರೆ, ಅವನು 39
ಎಚ್ಚರವಾಗಿದ್ದು ತನ್ನ ಮನೆಗೆ ಕನ್ನಾಹಾಕಗೊಡಿಸುತ್ತಿರಲಿಲ್ಲವೆಂದು ತಿಳುಕೊಳ್ಳಿರಿ.
ನೀವೂ ಸಿದ್ಧವಾಗಿರ್ರಿ. ನೀವು ನೆನಸದ ಗಳಿಗೆಯಲ್ಲೇ ಮನುಷ್ಯಕುಮಾರನು ಬರುತ್ತಾನೆ 40
ಅಂದನು.

ಆಗ ಪೇತ್ರನು—ಸ್ವಾಮೀ, ನೀನು ಈ ಸಾಮ್ಯವನ್ನು ನಮಗೆ ಮಾತ್ರ ಹೇಳುತ್ತೀ 41
ಯೋ? ಎಲ್ಲರಿಗೂ ಹೇಳುತ್ತೀಯೋ ಎಂದು ಕೇಳಲು, ಸ್ವಾಮಿ ಹೇಳಿದ್ದೇನಂದರೆ— 42
ಹೊತ್ತುಹೊತ್ತಿಗೆ ಅಶನಕ್ಕೆ ಬೇಕಾದದ್ದನ್ನು ಅಳೆದುಕೊಡುವದಕ್ಕಾಗಿ ಯಜಮಾನನು
ತನ್ನ ಮನೆಯವರ ಮೇಲೆ ನೇಮಿಸಿದ ನಂಬಿಗಸ್ತನೂ ವಿವೇಕಿಯೂ ಆಗಿರುವ ಮನೆವಾರ್ತೆ
ಯವನು ಯಾರು? ಯಾವ ಆಳು ಹೀಗೆ ಮಾಡುವದನ್ನು ಯಜಮಾನನು ಬಂದು 43
ಕಾಣುವನೋ ಆ ಆಳು ಧನ್ಯನು. ಇಂಥವನನ್ನು ಅವನು ತನ್ನ ಎಲ್ಲಾ ಆಸ್ತಿಯ 44
ಮೇಲೆ ನೇಮಿಸುವನು ಎಂದು ನಿಮಗೆ ಸತ್ಯವಾಗಿ ಹೇಳುತ್ತೇನೆ. ಆದರೆ ಆ ಆಳು— 45

ನನ್ನ ಯಜಮಾನನು ಬರುವದಕ್ಕೆ ತಡವಾಗುತ್ತದೆ ಅಂತ ತನ್ನ ಮನಸ್ಸಿನಲ್ಲಿ ಅಂದು ಕೊಂಡು, ಗಂಡಾಳು ಹೆಣ್ಣಾಳುಗಳನ್ನು ಹೊಡೆಯುವದಕ್ಕೂ ತಿಂದು ಕುಡಿದು ಅಮಲೇರು
46 ವದಕ್ಕೂ ತೊಡಗಿದರೆ, ಅವನು ನೆನಸದ ದಿನದಲ್ಲಿಯೂ ಅವನಿಗೆ ತಿಳಿಯದ ಗಳಿಗೆಯಲ್ಲಿ ಯೂ ಆ ಆಳಿನ ಯಜಮಾನನು ಬಂದು, ಅವನನ್ನು ಚನ್ನಾಗಿ ಹೊಡಿಸಿ, ಅಪನಂಬಿಗಸ್ತ
47 ರಿಗೆ ಆಗತಕ್ಕ ಗತಿಯನ್ನು ಅವನಿಗೆ ನೇಮಿಸುವನು. ತನ್ನ ಯಜಮಾನನ ಚಿತ್ತವನ್ನು ತಿಳಿದ ಆಳು ಸಿದ್ಧಮಾಡದೆ ಹೋದರೆ ಅಥವಾ ಅವನ ಚಿತ್ತಕ್ಕನುಸಾರ ನಡೆಯದಿದ್ದರೆ,
48 ಅವನು ಬಹಳ ಪೆಟ್ಟು ತಿನ್ನುವನು. ತಿಳಿಯದೆ ಪೆಟ್ಟುಗಳಿಗೆ ಯೋಗ್ಯವಾದದ್ದನ್ನು ನಡಸಿ ದವನು ಸ್ವಲ್ಪ ಪೆಟ್ಟು ತಿನ್ನುವನು. ಯಾವನಿಗೆ ಬಹಳವಾಗಿ ಕೊಟ್ಟದೆಯೋ ಅವನ ಕಡೆಯಿಂದ ಬಹಳವಾಗಿ ನಿರೀಕ್ಷಿಸಲ್ಪಡುವದು; ಇದಲ್ಲದೆ ಯಾವನ ವಶಕ್ಕೆ ಬಹಳವಾಗಿ ಒಪ್ಪಿಸಿದೆಯೋ ಅವನ ಕಡೆಯಿಂದ ಇನ್ನೂ ಹೆಚ್ಚಾಗಿ ಕೇಳುವರು.

### ಯೇಸುವನ್ನು ಅನುಸರಿಸುವವರಿಗೆ ನೆಂಟರ ವಿರೋಧವಿರುವದೆಂತಲೂ ನೂತನ ಕಾಲದ ಸೂಚನೆಗಳನ್ನು ಗುರುತು ಹಿಡಿಯಬೇಕೆಂತಲೂ ಬೋಧೆ.

(ಮತ್ತಾಯ 10, 34—36; 16, 1—3.)

49 ನಾನು ಬೆಂಕಿಯನ್ನು ಭೂಮಿಯ ಮೇಲೆ ಹಾಕಬೇಕೆಂದು ಬಂದೆನು; ಅದು ಇಷ್ಟ
50 ರೊಳಗೆ ಹತ್ತಿಕೊಂಡಿದ್ದರೆ ನನಗೆ ಎಷ್ಟೋ ಸಂತೋಷ! ಆದರೆ ನಾನು ಹೊಂದತಕ್ಕ ದೀಕ್ಷಾಸ್ನಾನ ಒಂದುಂಟು. ಅದು ನೆರವೇರುವ ತನಕ ನಾನು ಎಷ್ಟೋ ಬಿಕ್ಕಟ್ಟಿನಲ್ಲಿ
51 ದ್ದೇನೆ. ನನ್ನನ್ನು ಭೂಲೋಕದಲ್ಲಿ ಒಕ್ಕಟ್ಟನ್ನು ಉಂಟುಮಾಡುವದಕ್ಕೆ ಬಂದವನೆಂದು ಭಾವಿಸುತ್ತೀರೋ? ಅದಕ್ಕೆ ಬರಲಿಲ್ಲ, ಭೇದವನ್ನು ಹುಟ್ಟಿಸುವದಕ್ಕೆ ಬಂದೆನೆಂದು ನಿಮಗೆ
52 ಹೇಳುತ್ತೇನೆ. ಹ್ಯಾಗಂದರೆ—ಇಂದಿನಿಂದ ಒಂದೇ ಮನೆಯಲ್ಲಿರುವ ಐದು ಮಂದಿಯೊ ಳಗೆ ಇಬ್ಬರಿಗೆ ವಿರೋಧವಾಗಿ ಮೂವರು, ಮೂವರಿಗೆ ವಿರೋಧವಾಗಿ ಇಬ್ಬರು, ಈ
53 ಮೇರೆಗೆ ಭೇದವುಳ್ಳವರಾಗಿರುವರು. ಮಗನಿಗೆ ವಿರೋಧವಾಗಿ ತಂದೆಯು, ತಂದೆಗೆ ವಿರೋಧವಾಗಿ ಮಗನು, ಮಗಳಿಗೆ ವಿರೋಧವಾಗಿ ತಾಯಿಯು, ತಾಯಿಗೆ ವಿರೋಧ ವಾಗಿ ಮಗಳು, ಸೊಸೆಗೆ ವಿರೋಧವಾಗಿ ಅತ್ತೆಯು, ಅತ್ತೆಗೆ ವಿರೋಧವಾಗಿ ಸೊಸೆಯು ಭೇದವುಳ್ಳವರಾಗಿರುವರು ಅಂದನು[1].
54 ಇದಲ್ಲದೆ ಆತನು ಜನರೆಲ್ಲರಿಗೂ ಹೇಳಿದ್ದೇನಂದರೆ—ಪಶ್ಚಿಮ ದಿಕ್ಕಿನಲ್ಲಿ ಮೋಡ ಏಳು ವದನ್ನು ನೀವು ನೋಡಿದ ಕೂಡಲೇ ಮಳೆ ಬರುತ್ತದೆ ಅನ್ನುತ್ತೀರಿ; ಹಾಗೇ ಆಗುತ್ತದೆ.
55 ದಕ್ಷಿಣ ದಿಕ್ಕಿನ ಗಾಳಿ ಬೀಸಲಾಗಿ, ಸೆಕೆ ಹುಟ್ಟುವದು ಅನ್ನುತ್ತೀರಿ; ಅದೂ ಆಗುತ್ತದೆ.
56 ಕಪಟಿಗಳು ನೀವು, ಭೂಮ್ಯಾಕಾಶಗಳ ಭಾವವನ್ನು ಶೋಧಿಸುವದಕ್ಕೆ ನಿಮಗೆ ಗೊತ್ತಿರು ವಲ್ಲಿ ಈ ಸಮಯವನ್ನು ಶೋಧಿಸುವದಕ್ಕೆ ನಿಮಗೆ ಯಾಕೆ ಗೊತ್ತಿಲ್ಲ?
57 ಇದಲ್ಲದೆ ಇಂಥಿಂಥಾದ್ದು ನ್ಯಾಯವಾದದ್ದೆಂದು ನೀವೇ ಯಾಕೆ ತೀರ್ಮಾನ ಮಾಡಿ
58 ಕೊಳ್ಳುವದಿಲ್ಲ? ನೀನು ವಾದಿಯ ಸಂಗಡ ನ್ಯಾಯಾಧಿಪತಿಯ ಮುಂದಕ್ಕೆ ಹೋಗುತ್ತಿರು

[1] ಮಾರ್ಕ ೭, ೬.

ವಾಗ ದಾರಿಯಲ್ಲಿಯೇ ತಂಟೇಹರಿಸಿಕೊಳ್ಳಲು ಪ್ರಯತ್ನಮಾಡು; ಇಲ್ಲದಿದ್ದರೆ, ಅವನು ನಿನ್ನನ್ನು ನ್ಯಾಯಾಧಿಪತಿಯ ಬಳಿಗೆ ಎಳಕೊಂಡು ಹೋದಾನು; ನ್ಯಾಯಾಧಿಪತಿಯು ನಿನ್ನನ್ನು ಸೆರೇಯಜಮಾನನ ವಶಕ್ಕೆ ಒಪ್ಪಿಸ್ಯಾನು; ಸೆರೇಯಜಮಾನನು ನಿನ್ನನ್ನು ಸೆರೆ ಮನೆಯಲ್ಲಿ ಹಾಕ್ಯಾನು. 59 ನೀನು ಒಂದು ಕಾಸನ್ನಾದರೂ ನಿಲ್ಲಿಸಿಕೊಳ್ಳದೆ ಎಲ್ಲಾ ಸಲ್ಲಿಸುವ ತನಕ ಅಲ್ಲಿಂದ ಬರುವದೇ ಇಲ್ಲವೆಂದು ನಿನಗೆ ಹೇಳುತ್ತೇನೆ[1] ಅಂದನು.

ಮನುಷ್ಯರು ದೇವರ ಕಡೆಗೆ ತಿರುಗದಿದ್ದರೆ ನಾಶವಾಗುತ್ತಾರೆಂದು ಬೋಧಿಸುವದಕ್ಕಾಗಿ ಯೇಸು ಗೊಡ್ಡು ಅಂಜೂರದ ಮರದ ಸಾಮ್ಯವನ್ನು ಹೇಳಿದ್ದು.

**13** ಅದೇ ಸಮಯದಲ್ಲಿ ಕೆಲವರು ಆತನ ಹತ್ತರದಲ್ಲಿದ್ದು—ಪಿಲಾತನು ಗಲಿಲಾಯದವರ ರಕ್ತವನ್ನು ಅವರು ಕೊಟ್ಟ ಬಲಿಗಳ ಸಂಗಡ ಬೆರಸಿದನೆಂದು ಆತನಿಗೆ ತಿಳಿಸಿದರು. 2 ಅದಕ್ಕೆ ಆತನು ಅವರಿಗೆ—ಆ ಗಲಿಲಾಯದವರು ಅಂಥಾ ಕೊಲೆಯನ್ನು ಅನುಭವಿಸಿದ್ದರಿಂದ ಅವರನ್ನು ಎಲ್ಲಾ ಗಲಿಲಾಯದವರಿಗಿಂತ ಪಾಪಿಷ್ಠರೆಂದು ಭಾವಿಸುತ್ತೀರೋ? 3 ಹಾಗೆ ಭಾವಿಸಕೂಡದೆಂದು ನಿಮಗೆ ಹೇಳುತ್ತೇನೆ. ದೇವರ ಕಡೆಗೆ ತಿರುಗಿಕೊಳ್ಳದಿದ್ದರೆ ನೀವೆಲ್ಲರೂ ಹಾಗೆಯೇ ಹಾಳಾಗಿ ಹೋಗುವಿರಿ. 4 ಇಲ್ಲವೆ ಸಿಲೊವಾಮಿನಲ್ಲಿ ಬುರುಜುಬಿದ್ದು ಸತ್ತ ಆ ಹದಿನೆಂಟು ಮಂದಿಯು ಯೆರೂಸಲೇಮಿನಲ್ಲಿ ವಾಸವಾಗಿರುವ ಎಲ್ಲಾ ಮನುಷ್ಯರಿಗಿಂತಲೂ ಅಪರಾಧಿಗಳೆಂದು ಭಾವಿಸುತ್ತೀರೋ? 5 ಹಾಗಲ್ಲವೆಂದು ನಿಮಗೆ ಹೇಳುತ್ತೇನೆ. ದೇವರ ಕಡೆಗೆ ತಿರುಗಿಕೊಳ್ಳದಿದ್ದರೆ ನೀವೆಲ್ಲರೂ ಅವರಂತೆ ಹಾಳಾಗಿ ಹೋಗುವಿರಿ ಎಂದು ಹೇಳಿದನು.

6 ಆ ಮೇಲೆ ಆತನು ಒಂದು ಸಾಮ್ಯವನ್ನು ಹೇಳಿದನು. ಅದೇನಂದರೆ—ಒಬ್ಬಾನೊಬ್ಬನು ತನ್ನ ದ್ರಾಕ್ಷೇತೋಟದಲ್ಲಿ ಒಂದು ಅಂಜೂರದ ಗಿಡವನ್ನು ನೆಡಿಸಿದ್ದನು. 7 ತರುವಾಯ ಅವನು ಅದರಲ್ಲಿ ಹಣ್ಣನ್ನು ಹುಡುಕುತ್ತಾ ಬಂದನು, ಸಿಕ್ಕಲಿಲ್ಲ. ಬಳಿಕ ಅವನು ತೋಟಮಾಡುವವನಿಗೆ—ನೋಡು, ನಾನು ಮೂರು ವರುಷದಿಂದಲೂ ಈ ಅಂಜೂರದ ಮರದಲ್ಲಿ ಹಣ್ಣನ್ನು ಹುಡುಕುತ್ತಾ ಬಂದಿದ್ದೇನೆ; ಆದರೂ ನನಗೆ ಸಿಕ್ಕಲಿಲ್ಲ. ಇದನ್ನು ಕಡಿದು ಹಾಕು; ಇದರಿಂದ ಭೂಮಿಯೂ ಯಾಕೆ ಬಂಜೆಯಾಗಬೇಕು ಎಂದು ಹೇಳಿದನು. 8 ಆದರೆ ತೋಟಮಾಡುವವನು—ಅಯ್ಯಾ, ಈ ವರುಷವೂ ಇದನ್ನು ಬಿಡು; 9 ಅಷ್ಟರಲ್ಲಿ ನಾನು ಇದರ ಸುತ್ತಲು ಅಗಿದು ಗೊಬ್ಬರ ಹಾಕುತ್ತೇನೆ; ಮುಂದೆ ಹಣ್ಣು ಬಿಟ್ಟರೆ ಸರಿ; ಇಲ್ಲದಿದ್ದರೆ ಇದನ್ನು ಕಡಿದು ಹಾಕಬಹುದು ಎಂದು ಉತ್ತರಕೊಟ್ಟನು.

ಯೇಸು ಸಬ್ಬತ್‌ದಿನದಲ್ಲಿ ಒಬ್ಬ ಹೆಂಗಸನ್ನು ಸ್ವಸ್ಥಮಾಡಿದ್ದು.

10 ಒಂದಾನೊಂದು ಸಬ್ಬತ್‌ದಿನದಲ್ಲಿ ಆತನು ಒಂದು ಸಭಾಮಂದಿರದೊಳಗೆ ಉಪದೇಶ ಮಾಡುತ್ತಾ ಇದ್ದನು. 11 ಅಲ್ಲಿ ಹದಿನೆಂಟು ವರುಷಗಳಿಂದ ದೆವ್ವ ಬಡಿದು ಮೈಯಲ್ಲಿ

[1] ಮತ್ತಾಯ ೫, ೨೫. ೨೬.

ರೋಗವುಳ್ಳ ಒಬ್ಬ ಸ್ತ್ರೀಯು ಇದ್ದಳು. ಆಕೆಯು ನಡುಬೊಗ್ಗಿಹೋಗಿ ಸ್ವಲ್ಪವಾದರೂ
12 ಮೈಯನ್ನು ಮೇಲಕ್ಕೆ ಎತ್ತಲಾರದೆ ಇದ್ದಳು. ಯೇಸು ಆಕೆಯನ್ನು ನೋಡಿ, ಹತ್ತರಕ್ಕೆ
13 ಕರೆದು ಆಕೆಗೆ—ಅಮ್ಮಾ, ನಿನಗೆ ರೋಗ ಬಿಡುಗಡೆಯಾಯಿತು ಎಂದು ಹೇಳಿ, ಆಕೆಯ
ಮೇಲೆ ತನ್ನ ಕೈಗಳನ್ನಿಟ್ಟನು; ಇಟ್ಟಕೂಡಲೇ ಆಕೆ ನೆಟ್ಟಗಾದಳು, ದೇವರನ್ನು ಕೊಂಡಾಡಿ
14 ದಳು. ಆದರೆ ಆ ಸಭಾಮಂದಿರದ ಅಧಿಕಾರಿಯು ನಡೆದ ಸಂಗತಿಯನ್ನು ನೋಡಿ
ಸಬ್ಬತ್‌ದಿನದಲ್ಲಿ ಯೇಸು ಸ್ವಸ್ಥಮಾಡಿದನಲ್ಲಾ ಎಂದು ರೋಷಗೊಂಡು ಜನರಿಗೆ—ಕೆಲಸ
ಮಾಡುವದಕ್ಕೆ ಆರು ದಿವಸಗಳು ಅವೆಯಷ್ಟೆ; ಆ ದಿವಸಗಳಲ್ಲಿ ಬಂದು ವಾಸಿಮಾಡಿಸಿ
15 ಕೊಳ್ಳಿರಿ; ಸಬ್ಬತ್‌ದಿನದಲ್ಲಿ ಮಾತ್ರ ಬೇಡ ಎಂದು ಹೇಳಿದನು. ಆ ಮಾತನ್ನು ಕೇಳಿ
ಸ್ವಾಮಿಯು ಅವನಿಗೆ—ಕಪಟಿಗಳು ನೀವು, ನಿಮ್ಮಲ್ಲಿ ಪ್ರತಿಯೊಬ್ಬನೂ ಸಬ್ಬತ್‌ದಿನದಲ್ಲಿ
ತನ್ನ ಎತ್ತನ್ನಾಗಲಿ ಕತ್ತೆಯನ್ನಾಗಲಿ ಗೋದಲಿಯಿಂದ ಬಿಚ್ಚಿ ನೀರು ಕುಡಿಸುವದಕ್ಕಾಗಿ ಹಿಡು
16 ಕೊಂಡು ಹೋಗುತ್ತಾನಲ್ಲವೇ? ಹಾಗಾದರೆ, ಹದಿನೆಂಟು ವರುಷಗಳ ತನಕ ಸೈತಾನನು
ಕಟ್ಟಿಹಾಕಿದ್ದವಳೂ ಅಬ್ರಹಾಮನ ವಂಶದವಳೂ ಆಗಿರುವ ಈಕೆಯನ್ನು ಸಬ್ಬತ್‌ದಿನದಲ್ಲಿ
17 ಈ ಕಟ್ಟಿನೊಳಗಿಂದ ಬಿಡಿಸಬಾರದೋ ಎಂದು ಉತ್ತರಕೊಟ್ಟನು. ಈ ಮಾತುಗಳನ್ನು
ಆತನು ಹೇಳುತ್ತಿರಲಾಗಿ, ಆತನ ವಿರೋಧಿಗಳೆಲ್ಲರೂ ನಾಚಿಕೊಂಡರು; ಗುಂಪುಕೂಡಿದ್ದ
ಜನರೆಲ್ಲಾ ಆತನಿಂದಾಗುತ್ತಿದ್ದ ಎಲ್ಲಾ ಮಹತ್ವದ ಕಾರ್ಯಗಳಿಗೆ ಸಂತೋಷಪಟ್ಟರು.

### ದೇವರ ರಾಜ್ಯವು ಸಾಸಿವೆಕಾಳಿಗೂ ಹುಳಿಹಿಟ್ಟಿಗೂ ಸಮಾನವಾಗಿದೆ ಎಂಬುವ ಬೋಧೆ.

(ಮತ್ತಾಯ 13, 31—33; ಮಾರ್ಕ 4, 30—32.)

18 ಆತನು ಹೇಳಿದ್ದೇನಂದರೆ—ದೇವರ ರಾಜ್ಯವು ಯಾವದಕ್ಕೆ ಹೋಲಿಕೆಯಾಗಿದೆ? ಅದನ್ನು
19 ನಾನು ಯಾವದಕ್ಕೆ ಹೋಲಿಸಲಿ? ಅದು ಸಾಸಿವೆಕಾಳಿಗೆ ಹೋಲಿಕೆಯಾಗಿದೆ. ಒಬ್ಬ
ಮನುಷ್ಯನು ಸಾಸಿವೆಕಾಳನ್ನು ತೆಗೆದುಕೊಂಡುಹೋಗಿ ತನ್ನ ತೋಟದಲ್ಲಿ ಹಾಕಿದನು;
ಅದು ಬೆಳೆದು ಮರವಾಯಿತು; ಮತ್ತು ಆಕಾಶದಲ್ಲಿ ಹಾರ್ಯಾಡುವ ಪಕ್ಷಿಗಳು ಅದರ
20 ಕೊಂಬೆಗಳಲ್ಲಿ ವಾಸಮಾಡಿದವು ಅಂದನು. ಆತನು ಇನ್ನೂ ಹೇಳಿದ್ದೇನಂದರೆ—ದೇವರ
21 ರಾಜ್ಯವನ್ನು ನಾನು ಯಾವದಕ್ಕೆ ಹೋಲಿಸಲಿ? ಅದು ಹುಳಿಹಿಟ್ಟಿಗೆ ಹೋಲಿಕೆಯಾಗಿದೆ.
ಅದನ್ನು ಒಬ್ಬ ಹೆಂಗಸು ತಕ್ಕೊಂಡು ಮೂರು ಸೇರು ಹಿಟ್ಟಿನಲ್ಲಿ ಕಲಸಿಡಲು ಆ ಹಿಟ್ಟೆಲ್ಲಾ
ಹುಳಿಯಾಯಿತು ಅಂದನು.

### ಇಕ್ಕಟ್ಟಾದ ಬಾಗಲಲ್ಲಿ ಪ್ರವೇಶಿಸಿರಿ ಎಂಬುವ ಬೋಧೆ.

(ಮತ್ತಾಯ 7, 13. 14; 8, 11. 12.)

22 ಆತನು ಊರೂರಿಗೂ ಗ್ರಾಮಗ್ರಾಮಕ್ಕೂ ಹೋಗಿ ಉಪದೇಶಮಾಡುತ್ತಾ, ಯೆರೂ
23 ಸಲೇಮಿಗೆ ಪ್ರಯಾಣಮಾಡುತ್ತಿದ್ದನು. ಆ ಕಾಲದಲ್ಲಿ ಒಬ್ಬನು—ಸ್ವಾಮಿಾ, ರಕ್ಷಣೆ
24 ಹೊಂದುವವರು ಸ್ವಲ್ಪಜನರೋ ಎಂದು ಕೇಳಲು, ಆತನು ಅವರಿಗೆ—ಇಕ್ಕಟ್ಟಾದ ಬಾಗಿಲಿ

ನಿಂದ ಒಳಕ್ಕೆ ಹೋಗುವದಕ್ಕೆ ಹೆಣಗಾಡಿರಿ. ಅನೇಕರು ಒಳಕ್ಕೆ ಹೋಗುವದಕ್ಕೆ ನೋಡುವರು, ಆದರೆ ಅವರಿಂದಾಗುವದಿಲ್ಲ ಎಂದು ನಿಮಗೆ ಹೇಳುತ್ತೇನೆ. ಮನೇ 25 ಯಜಮಾನನು ಎದ್ದು ಕದಾ ಹಾಕಿಕೊಂಡಮೇಲೆ ನೀವು ಹೊರಗೆ ನಿಂತುಕೊಂಡು ಕದಾ ತಟ್ಟಿ—ಸ್ವಾಮಿಾ, ನಮಗೆ ಕದಾ ತೆಗೆಯಿರಿ ಎಂದು ಹೇಳುವದಕ್ಕೆ ತೊಡಗುವಾಗ ಅವನು—ನೀವು ಎಲ್ಲಿಯವರೋ? ನಿಮ್ಮ ಗುರುತು ನನಗಿಲ್ಲ ಅಂದಾನು. ಅದಕ್ಕೆ ನೀವು— 26 ನಿನ್ನ ಸನ್ನಿಧಿಯಲ್ಲಿ ನಾವು ಊಟಾಮಾಡಿದೆವು, ಕುಡಿದೆವು, ನಮ್ಮ ಬೀದಿಗಳಲ್ಲಿ ನೀನು ಉಪದೇಶಮಾಡಿದಿ ಎಂದು ಹೇಳುವದಕ್ಕೆ ತೊಡಗೀರಿ; ಆದರೆ ಅವನು—ನೀವು ಎಲ್ಲಿ 27 ಯವರೋ ನಿಮ್ಮ ಗುರುತು ನನಗಿಲ್ಲ; ಅಧರ್ಮಮಾಡುವ ನೀವೆಲ್ಲರೂ ನನ್ನ ಕಡೆಯಿಂದ ಹೊರಟುಹೋಗಿರಿ ಎಂದು ನಿಮಗೆ ಹೇಳುತ್ತೇನೆ ಅನ್ನುವನು. ಅಬ್ರಹಾಮ ಇಸಾಕ 28 ಯಾಕೋಬ ಇವರು ಮತ್ತು ಎಲ್ಲಾ ಪ್ರವಾದಿಗಳು ದೇವರ ರಾಜ್ಯದಲ್ಲಿರುವದನ್ನೂ ನಿಮ್ಮನ್ನು ಮಾತ್ರ ಹೊರಗೆ ಹಾಕುವದನ್ನೂ ನೀವು ನೋಡುವಾಗ, ನಿಮಗೆ ಗೋಳಾ ಟವೂ ಕಟಕಟನೆ ಹಲ್ಲುಕಡಿಯೋಣವೂ ಉಂಟಾಗುವವು. ಇದಲ್ಲದೆ ಪೂರ್ವ ಪಶ್ಚಿಮ 29 ಉತ್ತರ ದಕ್ಷಿಣ ದಿಕ್ಕುಗಳಿಂದಲೂ ಜನರು ಬಂದು ದೇವರ ರಾಜ್ಯದಲ್ಲಿ ಊಟಕ್ಕೆ ಕೂಡ್ರು ವರು. ಇಗೋ, ಕಡೆಯವರಾಗಿರುವ ಕೆಲವರು ಮೊದಲಿನವರಾಗುವರು; ಮೊದಲಿ 30 ನವರಾಗಿರುವ ಕೆಲವರು ಕಡೆಯವರಾಗುವರು ಅಂದನು.

ಯೇಸು ಉಪರಾಜನಾದ ಹೆರೋದನನ್ನು ಕುರಿತು ಹೇಳಿದ್ದು; ಯೆರೂಸಲೇಮಿನ ವಿಷಯದಲ್ಲಿ ದುಃಖಪಟ್ಟದ್ದು.
(ಮತ್ತಾಯ 23, 37—39.)

ಅದೇ ಗಳಿಗೆಯಲ್ಲಿ ಕೆಲವು ಮಂದಿ ಫರಿಸಾಯರು ಹತ್ತರ ಬಂದು, ಆತನಿಗೆ—ನೀನು 31 ಇಲ್ಲಿಂದ ಹೊರಟುಹೋಗು, ಹೆರೋದನು ನಿನ್ನನ್ನು ಕೊಲ್ಲಬೇಕೆಂದಿದ್ದಾನೆ ಎಂದು ಹೇಳಲು, ಆತನು ಅವರಿಗೆ—ನೀವು ಹೋಗಿ—ಇಗೋ ನಾನು ಈಹೊತ್ತು ನಾಳೆ ದೆವ್ವ 32 ಗಳನ್ನು ಬಿಡಿಸುತ್ತಾ ರೋಗಗಳನ್ನು ವಾಸಿಮಾಡುತ್ತಾ ಇದ್ದು ಮೂರನೇ ದಿನದಲ್ಲಿ ಸಿದ್ಧಿಗೆ ಬರುತ್ತೇನೆ[1] ಎಂದು ಆ ನರಿಗೆ ಹೇಳಿರಿ. ಹ್ಯಾಗೂ ನಾನು ಈಹೊತ್ತು ನಾಳೆ 33 ನಾಡಿದು ಸಂಚಾರ ಮಾಡಬೇಕು; ಪ್ರವಾದಿಯಾದವನು ಯೆರೂಸಲೇಮಿನಲ್ಲಿಯೇ ಹೊರತು ಬೇರೆ ಪಟ್ಟದಲ್ಲಿ ಕೊಲ್ಲಲ್ಪಡಕೂಡದಷ್ಟೆ. ಯೆರೂಸಲೇಮೇ, ಯೆರೂಸ 34 ಲೇಮೇ, ಪ್ರವಾದಿಗಳ ಪ್ರಾಣಾ ತೆಗೆಯುವವಳೇ, ದೇವರು ನಿನ್ನ ಬಳಿಗೆ ಕಳುಹಿಸಿಕೊಟ್ಟವ ರನ್ನು ಕಲ್ಲೆಸೆದು ಕೊಲ್ಲುವವಳೇ, ಕೋಳಿ ತನ್ನ ಮರಿಗಳನ್ನು ರೆಕ್ಕೆಗಳ ಕೆಳಗೆ ಕೂಡಿಸಿ ಕೊಳ್ಳುವಂತೆ ನಿನ್ನ ಮಕ್ಕಳನ್ನು ಕೂಡಿಸಿಕೊಳ್ಳುವದಕ್ಕೆ ನನಗೆ ಎಷ್ಟೋ ಸಾರಿ ಮನ ಸ್ಸಿತ್ತು; ಆದರೆ ನಿಮಗೆ ಮನಸ್ಸಿಲ್ಲದೆ ಹೋಯಿತು. ನೋಡಿರಿ, ನಿಮ್ಮ ಆಲಯವು ನಿಮಗೆ 35 ಬರೀದಾಗಿ ಬಿಟ್ಟದೆ. ಈಗಿನಿಂದ—ಕರ್ತನ ಹೆಸರಿನಲ್ಲಿ ಬರುವವನಿಗೆ ಶುಭವಾಗಲಿ ಎಂದು ನೀವು ಹೇಳುವ ತನಕ ನೀವು ನನ್ನನ್ನು ನೋಡುವದೇ ಇಲ್ಲವೆಂದು ನಿಮಗೆ ಹೇಳು ತ್ತೇನೆ ಅಂದನು.

---

[1] ಅಥವಾ, ಕಾರ್ಯವನ್ನು ಮುಗಿಸಿರುವೆನು.

**ಒಬ್ಬ ಪ್ರಮುಖನ ಮನೆಯಲ್ಲಿ ಯೇಸು ಊಟಕ್ಕೆ ಕೂತಿದ್ದಾಗ, ಕರಿಸಿಕೊಂಡವರಿಗೂ ಕರೆದವರಿಗೂ ಆತನು ಸಾಮ್ಯರೂಪವಾಗಿ ಉಪದೇಶಮಾಡಿದ್ದು.**

**(ಮತ್ತಾಯ 22, 2—10 ಸರಿನೋಡಿರಿ.)**

**14** ಆತನು ಸಬ್ಬತ್‌ದಿನದಲ್ಲಿ ಫರಿಸಾಯರ ಮುಖ್ಯಸ್ಥರಲ್ಲಿ ಒಬ್ಬನ ಮನೆಗೆ ಊಟಕ್ಕೆ
2 ಹೋದಾಗ, ಅವರು ಆತನನ್ನು ಹೊಂಚಿನೋಡುತ್ತಿದ್ದರು. ಆಗ ಯೇಸು ತನ್ನೆದುರಿಗೆ
3 ಜಲೋದರವುಳ್ಳ ಒಬ್ಬ ಮನುಷ್ಯನಿರುವದನ್ನು ನೋಡಿ—ಸಬ್ಬತ್‌ದಿನದಲ್ಲಿ ಸ್ವಸ್ಥಮಾಡು
ವದು ಸರಿಯೋ? ಸರಿಯಲ್ಲವೋ ಎಂದು ಧರ್ಮೋಪದೇಶಕರನ್ನೂ ಫರಿಸಾಯರನ್ನೂ
4 ಕೇಳಿದನು. ಅವರು ಸುಮ್ಮನೇ ಇರಲು, ಆತನು ಅವನ ಕೈ ಹಿಡಿದು ಅವನಿಗೆ ವಾಸಿ
5 ಮಾಡಿ ಕಳುಹಿಸಿ—ನಿಮ್ಮಲ್ಲಿ ಯಾವನೊಬ್ಬನ ಮಗನಾಗಲಿ[1] ಎತ್ತಾಗಲಿ ಬಾವಿಯಲ್ಲಿ
ಬಿದ್ದರೆ, ಅವನು ತಡಮಾಡದೆ ಸಬ್ಬತ್‌ದಿನದಲ್ಲಾದರೂ ಮೇಲಕ್ಕೆ ತೆಗೆಯುವದಿಲ್ಲವೇ
6 ಎಂದು ಅವರನ್ನು ಕೇಳಿದನು. ಅವರು ಅದಕ್ಕೆ ಉತ್ತರಕೊಡಲಾರದೆ ಇದ್ದರು.
7 ಊಟಕ್ಕೆ ಕರಿಸಿಕೊಂಡವರು ಪಙ್ತಿಯ ಮೊದಲನೇ ಸ್ಥಾನವನ್ನು ಆರಿಸಿಕೊಳ್ಳುವದನ್ನು
8 ನೋಡಿ ಯೇಸು ಒಂದು ಸಾಮ್ಯವನ್ನು ಹೇಳಿದನು, ಏನಂದರೆ—ಯಾವನಾದರೂ
ನಿನ್ನನ್ನು ಮದುವೇ ಊಟಕ್ಕೆ ಕರೆದರೆ, ಪಙ್ತಿಯೊಳಗೆ ಮೊದಲನೇ ಸ್ಥಾನದಲ್ಲಿ ಕೂತು
ಕೊಳ್ಳಬೇಡ; ಒಂದು ವೇಳೆ ನಿನಗಿಂತ ಮಾನವುಳ್ಳವನನ್ನು ಅವನು ಕರೆದಿರಬಹುದು,
9 ಮತ್ತು ನಿನ್ನನ್ನೂ ಅವನನ್ನೂ ಕರೆದವನು ಬಂದು—ಇವನಿಗೆ ಸ್ಥಳಬಿಡು ಎಂದು ನಿನಗೆ
ಹೇಳುವಾಗ ನೀನು ನಾಚಿಕೊಂಡು ಕಡೇಸ್ಥಾನದಲ್ಲಿ ಕೂತುಕೊಳ್ಳುವದಕ್ಕೆ ಹೋಗುವಿ.
10 ಆದರೆ ಯಾವನಾದರೂ ನಿನ್ನನ್ನು ಕರೆದಾಗ, ನೀನು ಹೋಗಿ ಕಡೇಸ್ಥಾನದಲ್ಲಿ ಕೂತುಕೋ;
ಹೀಗೆ ಮಾಡಿದರೆ ನಿನ್ನನ್ನು ಕರೆದವನು ಬಂದು, ನಿನ್ನನ್ನು ನೋಡಿ—ಸ್ನೇಹಿತನೇ, ಇನ್ನೂ
ಮೇಲಕ್ಕೆ ಬಾ ಅನ್ನುವನು. ಆಗ ನಿನ್ನ ಸಂಗಡ ಕೂತಿರುವವರೆಲ್ಲರ ಮುಂದೆ ನಿನಗೆ
11 ಮಾನಬರುವದು. ತನ್ನನ್ನು ಹೆಚ್ಚಿಸಿಕೊಳ್ಳುವ ಪ್ರತಿಯೊಬ್ಬನು ತಗ್ಗಿಸಲ್ಪಡುವನು;
ತನ್ನನ್ನು ತಗ್ಗಿಸಿಕೊಳ್ಳುವವನು ಹೆಚ್ಚಿಸಲ್ಪಡುವನು ಅಂದನು.
12 ಆತನು ತನ್ನನ್ನು ಊಟಕ್ಕೆ ಕರೆದವನಿಗೆ ಸಹ ಒಂದು ಮಾತು ಹೇಳಿದನು, ಅದೇ
ನಂದರೆ—ನೀನು ಮಧ್ಯಾಹ್ನದ ಊಟಕ್ಕೆ ಅಥವಾ ಸಾಯಂಕಾಲದ ಊಟಕ್ಕೆ ನಿನ್ನ
ಸ್ನೇಹಿತರನ್ನಾಗಲಿ ನಿನ್ನ ಅಣ್ಣತಮ್ಮಂದಿರನ್ನಾಗಲಿ ನಿನ್ನ ಬಂಧುಬಾಂಧವರನ್ನಾಗಲಿ
ಐಶ್ವರ್ಯವಂತರಾದ ನೆರೆಯವರನ್ನಾಗಲಿ ಕರೆಯಬೇಡ. ಒಂದು ವೇಳೆ ಅವರು ಸಹ
ಪ್ರತಿಯಾಗಿ ನಿನ್ನನ್ನು ಕರೆದಾರು, ಮತ್ತು ನಿನಗೆ ಮುಯ್ಯಿಗೆಮುಯ್ಯಾಗುವದು.
13 ಆದರೆ ನೀನು ಔತಣಮಾಡಿಸುವಾಗ, ಬಡವರು ಊನವಾದವರು ಕುಂಟರು ಕುರುಡರು
14 ಇಂಥವರನ್ನು ಕರೆ; ಅವರು ನಿನಗೆ ಮುಯ್ಯಿಗೆಮುಯ್ಯಿ ಮಾಡುವದಕ್ಕೆ ಏನೂ ಇಲ್ಲ
ದವರಾಗಿದ್ದಾಗ್ಯೂ, ನೀತಿವಂತರು ಜೀವಿತರಾಗಿ ಎದ್ದುಬರುವಲ್ಲಿ ನಿನಗೆ ಮುಯ್ಯಿಗೆ
ಮುಯ್ಯಾಗುವದರಿಂದ ನೀನು ಧನ್ಯನಾಗುವಿ ಅಂದನು.

---

[1] ಕೆಲವು ಪ್ರತಿಗಳಲ್ಲಿ—ಕತ್ತೆಯಾಗಲಿ ಎಂದು ಬರೆದದೆ; ಲೂಕ ೧೩, ೧೫ ಸರಿನೋಡಿರಿ.

ಊಟಕ್ಕೆ ಕೂತವರಲ್ಲಿ ಒಬ್ಬನು ಈ ಮಾತುಗಳನ್ನು ಕೇಳಿ—ದೇವರ ರಾಜ್ಯದಲ್ಲಿ 15
ಊಟಮಾಡುವವನೇ ಧನ್ಯನು ಎಂದು ಹೇಳಲು, ಯೇಸು ಅವನಿಗೆ ಹೇಳಿದ್ದೇನಂದರೆ— 16
ಒಬ್ಬಾನೊಬ್ಬ ಮನುಷ್ಯನು ದೊಡ್ಡ ಅಡಿಗೇಮಾಡಿಸಿ ಅನೇಕರಿಗೆ ಊಟಕ್ಕೆ ಹೇಳಿಸಿದನು.
ಆ ಮೇಲೆ ಊಟದ ಹೊತ್ತಿಗೆ ಅವನು ಊಟಕ್ಕೆ ಹೇಳಿಸಿಕೊಂಡವರ ಬಳಿಗೆ—ಈಗ 17
ಸಿದ್ಧವಾಗಿದೆ, ಬರಬೇಕು ಎಂದು ಕರೆಯುವದಕ್ಕೆ ತನ್ನ ಆಳನ್ನು ಕಳುಹಿಸಿದನು. ಆದರೆ 18
ಅವರೆಲ್ಲರೂ ಕ್ಷಮಿಸಬೇಕೆಂದು ಒಂದೇ ಮನಸ್ಸಿನಿಂದ ಹೇಳುವದಕ್ಕೆ ತೊಡಗಿದರು.
ಮೊದಲನೆಯವನು ಆ ಆಳನ್ನು ನೋಡಿ—ಹೊಲವನ್ನು ಕ್ರಯಕ್ಕೆ ತಕ್ಕೊಂಡಿದ್ದೇನೆ,
ಅದನ್ನು ಹೋಗಿ ನೋಡುವದಕ್ಕೆ ನನಗೆ ಅಗತ್ಯವಿದೆ, ನನ್ನನ್ನು ಕ್ಷಮಿಸಬೇಕೆಂದು
ಕೇಳಿಕೊಂಡೆನೆಂಬದಾಗಿ ಹೇಳು ಅಂದನು. ಮತ್ತೊಬ್ಬನು—ನಾನು ಐದು ಜೋಡಿ 19
ಎತ್ತುಗಳನ್ನು ತಕ್ಕೊಂಡಿದ್ದೇನೆ, ಅವುಗಳನ್ನು ಪರೀಕ್ಷಿಸುವದಕ್ಕೆ ಹೋಗುತ್ತೇನೆ, ನನ್ನನ್ನು
ಕ್ಷಮಿಸಬೇಕೆಂದು ಕೇಳಿಕೊಂಡೆನೆಂಬದಾಗಿ ಹೇಳು ಅಂದನು. ಇನ್ನೊಬ್ಬನು—ನಾನು 20
ಮದುವೆಮಾಡಿಕೊಂಡಿದ್ದೇನೆ, ಆದ್ದರಿಂದ ನಾನು ಬರುವದಕ್ಕಾಗುವದಿಲ್ಲ ಅಂದನು.
ಆ ಆಳು ಬಂದು ತನ್ನ ಯಜಮಾನನಿಗೆ ಈ ಸಂಗತಿಗಳನ್ನು ತಿಳಿಸಲು, ಮನೇಯಜಮಾ 21
ನನು ಸಿಟ್ಟುಗೊಂಡು, ಆಳಿಗೆ—ನೀನು ತಟ್ಟನೆ ಈ ಊರಿನ ಬೀದಿಬೀದಿಗೂ ಸಂದುಸಂದಿಗೂ
ಹೋಗಿ, ಬಡವರು ಊನವಾದವರು ಕುರುಡರು ಕುಂಟರು ಇಂಥವರನ್ನು ಇಲ್ಲಿಗೆ
ಕರಕೊಂಡು ಬಾ ಎಂದು ಹೇಳಿದನು. ಬಳಿಕ ಆ ಆಳು—ಅಯ್ಯಾ, ನೀನು ಅಪ್ಪಣೆ 22
ಕೊಟ್ಟಂತೆ ಮಾಡಿದ್ದಾಯಿತು; ಆದರೂ ಇನ್ನೂ ಸ್ಥಳವದೆ ಅಂದನು. ಆಗ ಆ ಯಜ 23
ಮಾನನು ತನ್ನ ಆಳಿಗೆ ಹೇಳಿದ್ದು—ನೀನು ಹಾದಿಗಳಿಗೂ ಬೇಲಿಗಳ ಬಳಿಗೂ ಹೋಗಿ,
ಅಲ್ಲಿ ಸಿಕ್ಕಿದವರನ್ನು ಬಲವಂತಮಾಡಿ ಒಳಕ್ಕೆ ಕರಕೊಂಡು ಬಾ, ನನ್ನ ಮನೆ ತುಂಬಲಿ.
ಆದರೆ ಊಟಕ್ಕೆ ಹೇಳಿಸಿಕೊಂಡವರಲ್ಲಿ ಒಬ್ಬನಾದರೂ ನಾನು ಮಾಡಿಸಿದ ಅಡಿಗೆಯ 24
ಸವಿಯನ್ನು ನೋಡಬಾರದು ಎಂದು ನಿಮಗೆ ಹೇಳುತ್ತೇನೆ ಅಂದನು.

ಯೇಸು ತನ್ನನ್ನು ಅನುಸರಿಸುವವರು ತಕ್ಕ ಆಲೋಚನೆಮಾಡಿಕೊಂಡು ಬರಬೇಕೆಂದು
ಸಾಮ್ಯರೂಪವಾಗಿ ಉಪದೇಶಿಸಿದ್ದು.

(ಮತ್ತಾಯ **10**, 37—39.)

ಬಹು ಜನರು ಗುಂಪುಗುಂಪಾಗಿ ಯೇಸುವಿನ ಸಂಗಡ ಹೋಗುತ್ತಾ ಇರಲು, ಆತನು 25
ತಿರುಗಿಕೊಂಡು ಅವರಿಗೆ ಹೇಳಿದ್ದೇನಂದರೆ—ಯಾವನಾದರೂ ನನ್ನ ಬಳಿಗೆ ಬಂದು ತನ್ನ 26
ತಂದೆ ತಾಯಿ ಹೆಂಡತಿ ಮಕ್ಕಳು ಅಣ್ಣತಮ್ಮಂದಿರು ಅಕ್ಕತಂಗಿಯರು ಇವರನ್ನೂ ತನ್ನ
ಪ್ರಾಣವನ್ನು ಸಹ ಹಗೆಮಾಡದಿದ್ದರೆ, ಅವನು ನನ್ನ ಶಿಷ್ಯನಾಗಿರಲಾರನು. ಯಾವನಾ 27
ದರೂ ತನ್ನ ಶಿಲುಬೆಯನ್ನು ಹೊತ್ತುಕೊಂಡು ನನ್ನ ಹಿಂದೆ ಬಂದರೆ ಹೊರತು ಅವನು
ನನ್ನ ಶಿಷ್ಯನಾಗಿರಲಾರನು. ನಿಮ್ಮಲ್ಲಿ ಯಾವನಾದರೂ ಒಂದು ಬುರುಜನ್ನು ಕಟ್ಟಿಸ 28
ಬೇಕೆಂದು ಯೋಚಿಸಿದರೆ, ಅವನು ಮೊದಲು ಕೂತುಕೊಂಡು—ಅದಕ್ಕೆ ಎಷ್ಟು ಖರ್ಚು
ಹಿಡಿದೀತು, ಅದನ್ನು ತೀರಿಸುವದಕ್ಕೆ ಸಾಕಾಗುವಷ್ಟು ಹಣ ನನ್ನಲ್ಲಿ ಉಂಟೋ ಎಂದು

29 ಲೆಕ್ಕಮಾಡುವದಿಲ್ಲವೇ? ಹೀಗೆ ಲೆಕ್ಕಮಾಡದೆ ಅದಕ್ಕೆ ಅಸ್ತಿವಾರ ಹಾಕಿದ ಮೇಲೆ
30 ಆ ಕೆಲಸವನ್ನು ಪೂರೈಸಲಾರದೆ ಹೋದರೆ, ನೋಡುವವರೆಲ್ಲರು—ಈ ಮನುಷ್ಯನು ಕಟ್ಟಿಸುವದಕ್ಕಂತೂ ತೊಡಗಿದನು, ಕೆಲಸಾ ಪೂರೈಸಲಾರದೆ ಹೋದನು ಎಂದು ಅವ
31 ನನ್ನು ಹಾಸ್ಯಮಾಡ್ಯಾರು. ಇಲ್ಲವೆ ಯಾವ ಅರಸನಾದರೂ ಮತ್ತೊಬ್ಬ ಅರಸನ ಸಂಗಡ ಯುದ್ಧಮಾಡುವದಕ್ಕೆ ಹೋಗುವಾಗ ತನ್ನ ಮೇಲೆ ಇಪ್ಪತ್ತುಸಾವಿರ ದಂಡು ತೆಗೆದುಕೊಂಡು ಬರುವವನನ್ನು ತಾನು ಹತ್ತುಸಾವಿರ ದಂಡಿನಿಂದ ಎದುರಿಸುವದಕ್ಕೆ
32 ಶಕ್ತನಾಗುವೆನೋ ಇಲ್ಲವೋ ಎಂದು ಕೂತುಕೊಂಡು ಆಲೋಚಿಸುವದಿಲ್ಲವೇ? ತಾನು ಶಕ್ತನಲ್ಲದಿದ್ದರೆ, ಬರುವ ಅರಸನು ಇನ್ನೂ ದೂರದಲ್ಲಿರುವಾಗಲೇ ರಾಯಭಾರಿಗಳನ್ನು
33 ಕಳುಹಿಸಿ ಸಂಧಾನಕ್ಕೆ ಒಪ್ಪಂದವನ್ನು ಕೇಳಿಕೊಳ್ಳುವನು. ಹಾಗೆಯೇ ನಿಮ್ಮಲ್ಲಿ ಯಾವನೇ ಆಗಲಿ ತನಗಿರುವದನ್ನೆಲ್ಲಾ ಬಿಟ್ಟುಬಿಡದೆಹೋದರೆ, ಅವನು ನನ್ನ ಶಿಷ್ಯನಾಗಿರಲಾರನು.

34 ಉಪ್ಪಂತೂ ಒಳ್ಳೇ ಪದಾರ್ಥವೇ; ಆದರೆ ಉಪ್ಪು ಸಹ ಸಪ್ಪೆಯಾದರೆ ಅದಕ್ಕೆ ಇನ್ನ್ಯಾ
35 ತರಿಂದ ರುಚಿಬಂದೀತು? ಅದು ಭೂಮಿಗಾದರೂ ತಿಪ್ಪೆಗಾದರೂ ಉಪಯೋಗವಲ್ಲ; ಅದನ್ನು ಹೊರಗೆ ಬಿಸಾಡುತ್ತಾರೆ. ಕೇಳುವದಕ್ಕೆ ಕಿವಿಗಳುಳ್ಳವನು ಕೇಳಲಿ ಅಂದನು.

ದೇವರ ಕಡೆಗೆ ತಿರುಗಿದ ಪಾಪಿಯ ವಿಷಯದಲ್ಲಿ ಪರಲೋಕದಲ್ಲಿ ಆಗುವ ಸಂತೋಷವನ್ನು ಸೂಚಿಸುವ ಮೂರು ದೃಷ್ಟಾಂತಗಳು.

(ಮತ್ತಾಯ 18, 12—14.)

**15** ಯೇಸುವಿನ ಉಪದೇಶವನ್ನು ಕೇಳಬೇಕೆಂದು ಎಲ್ಲಾ ಸುಂಕದವರೂ ಪಾಪಿಗಳೂ
2 ಆತನ ಬಳಿಗೆ ಬರುತ್ತಾ ಇರಲು, ಫರಿಸಾಯರೂ ಶಾಸ್ತ್ರಿಗಳೂ—ಇವನು ಪಾಪಿಗಳನ್ನು ಸೇರಿಸಿಕೊಂಡು ಅವರ ಜೊತೆಯಲ್ಲಿ ಊಟಾಮಾಡುತ್ತಾನೆ ಎಂದು ಹೇಳಿಕೊಂಡು ಗುಣುಗುಟ್ಟುತ್ತಿದ್ದರು.

3, 4 ಆಗ ಆತನು ಅವರಿಗೆ ಒಂದು ಸಾಮ್ಯವನ್ನು ಹೇಳಿದನು. ಅದೇನಂದರೆ—ನಿಮ್ಮೊಳಗೆ ಯಾವ ಮನುಷ್ಯನಾದರೂ ತನಗೆ ನೂರು ಕುರಿಗಳಿರಲಾಗಿ ಅವುಗಳಲ್ಲಿ ಒಂದು ತಪ್ಪಿಸಿಕೊಂಡು ಹೋದರೆ, ಅವನು ತೊಂಭತ್ತೊಂಭತ್ತನ್ನು ಅಡವಿಯಲ್ಲಿ ಬಿಟ್ಟು ತಪ್ಪಿಸಿ
5 ಕೊಂಡದ್ದು ಸಿಕ್ಕುವ ತನಕ ಅದನ್ನು ಹುಡುಕಿಕೊಂಡು ಹೋಗದೆ ಇದ್ದಾನೇ? ಸಿಕ್ಕಿದ ಮೇಲೆ ಅವನು ಸಂತೋಷಪಡುತ್ತಾ ಅದನ್ನು ತನ್ನ ಹೆಗಲಿನ ಮೇಲೆ ಇಟ್ಟುಕೊಂಡು,
6 ಮನೆಗೆ ಬಂದು ಸ್ನೇಹಿತರನ್ನೂ ನೆರೆಹೊರೆಯವರನ್ನೂ ಕೂಡಿಸಿ—ತಪ್ಪಿಸಿಕೊಂಡು ಹೋಗಿದ್ದ ಕುರಿ ಸಿಕ್ಕಿತು, ನನ್ನ ಸಂಗಡ ಸಂತೋಷಿಸಿರಿ ಎಂದು ಅವರಿಗೆ ಹೇಳುವನಲ್ಲವೇ?
7 ಅದರಂತೆ, ದೇವರ ಕಡೆಗೆ ತಿರುಗಿಕೊಳ್ಳುವದಕ್ಕೆ ಅವಶ್ಯವಿಲ್ಲದ ತೊಂಭತ್ತೊಂಭತ್ತು ಮಂದಿ ನೀತಿವಂತರಿಗಿಂತ ದೇವರ ಕಡೆಗೆ ತಿರುಗಿಕೊಳ್ಳುವ ಒಬ್ಬ ಪಾಪಿಯ ವಿಷಯವಾಗಿ ಪರಲೋಕದಲ್ಲಿ ಸಂತೋಷವುಂಟಾಗುವದೆಂದು ನಿಮಗೆ ಹೇಳುತ್ತೇನೆ.

ಯಾವ ಹೆಂಗಸು ತನ್ನಲ್ಲಿ ಹತ್ತು ಪಾವಲಿಗಳಿರಲಾಗಿ ಒಂದು ಪಾವಲಿ ಹೋದರೆ, 8
ದೀಪಾಹಚ್ಚಿ ಮನೆಯನ್ನು ಗುಡಿಸಿ, ಸಿಕ್ಕುವ ತನಕ ಅದನ್ನು ಎಚ್ಚರದಿಂದ ಹುಡುಕದೆ
ಇದ್ದಾಳು? ಸಿಕ್ಕಿದ ಮೇಲೆ ಆಕೆಯು ತನ್ನ ಗೆಣತಿಯರನ್ನೂ ನೆರೆಹೊರೆಯವರನ್ನೂ 9
ಕೂಡಿಸಿ—ಹೋಗಿದ್ದ ಪಾವಲಿ ಸಿಕ್ಕಿತು, ನನ್ನ ಸಂಗಡ ಸಂತೋಷಿಸಿರಿ ಎಂದು ಹೇಳುವ
ಳಲ್ಲವೇ? ಅದರಂತೆ ಒಬ್ಬ ಪಾಪಿಯು ದೇವರ ಕಡೆಗೆ ತಿರುಗಿಕೊಳ್ಳುವ ವಿಷಯದಲ್ಲಿ 10
ದೇವದೂತರ ಮುಂದೆ ಸಂತೋಷವಾಗುವದೆಂದು ನಿಮಗೆ ಹೇಳುತ್ತೇನೆ ಅಂದನು.

ಇನ್ನೂ ಆತನು ಹೇಳಿದ್ದೇನಂದರೆ—ಒಬ್ಬಾನೊಬ್ಬ ಮನುಷ್ಯನಿಗೆ ಇಬ್ಬರು ಮಕ್ಕ 11
ಳಿದ್ದರು. ಅವರಲ್ಲಿ ಕಿರಿಯವನು ತಂದೆಗೆ—ಅಪ್ಪಾ, ಆಸ್ತಿಯಲ್ಲಿ ನನಗೆ ಬರತಕ್ಕ ಪಾಲನ್ನು 12
ಕೊಡು ಎಂದು ಕೇಳಿಕೊಳ್ಳಲು ತಂದೆಯು ಬದುಕನ್ನು ಅವರಿಗೆ ಹಂಚಿಕೊಟ್ಟನು. ಸ್ವಲ್ಪ 13
ದಿವಸದ ಮೇಲೆ ಆ ಕಿರೀಮಗನು ಎಲ್ಲಾ ಕೂಡಿಸಿಕೊಂಡು, ದೂರದೇಶಕ್ಕೆ ಹೊರಟು
ಹೋಗಿ, ಅಲ್ಲಿ ಪಟಿಂಗನಾಗಿ ಬದುಕಿ ತನ್ನ ಆಸ್ತಿಯನ್ನು ಸೂರೆಮಾಡಿಬಿಟ್ಟನು. ಹೀಗೆ 14
ಅವನು ಎಲ್ಲಾ ಹಾಳುಮಾಡಿಕೊಂಡ ಮೇಲೆ, ಆ ದೇಶದಲ್ಲೆಲ್ಲಾ ಘೋರವಾದ ಬರ
ಬಂದು ಏನೂ ಗತಿಯಿಲ್ಲದವನಾದನು. ಆಗ ಅವನು ಹೋಗಿ ಆ ದೇಶದ ನಿವಾಸಿ 15
ಗಳೊಳಗೆ ಒಬ್ಬನಲ್ಲಿ ಸೇರಿಕೊಂಡನು; ಆ ಮನುಷ್ಯನು ಹಂದಿಗಳನ್ನು ಮೇಯಿಸುವದಕ್ಕೆ
ಅವನನ್ನು ತನ್ನ ಹೊಲಗಳಿಗೆ ಕಳುಹಿಸಿದನು. ಹೀಗಿರಲಾಗಿ ಅವನು ಹಂದಿ ತಿನ್ನುತ್ತಿದ್ದ 16
ಕಾಯಿಗಳನ್ನಾದರೂ ತಿಂದು ಹಸಿವನ್ನು ತೀರಿಸಿಕೊಳ್ಳಬೇಕೆಂದು ಆಶೆಪಟ್ಟನು; ಆದರೂ
ಯಾರೂ ಅವನಿಗೆ ಕೊಡಲಿಲ್ಲ. ಆಗ ಅವನಿಗೆ ಬುದ್ಧಿಬಂದು, ಅವನು—ನನ್ನ ತಂದೆಯ 17
ಬಳಿಯಲ್ಲಿ ಎಷ್ಟೋ ಮಂದಿ ಕೂಲಿಯಾಳುಗಳಿಗೆ ಬೇಕಾದಷ್ಟು ಆಹಾರವದೆ; ನಾನಾ
ದರೋ ಇಲ್ಲಿ ಹಸಿವಿನಿಂದ ಸಾಯುತ್ತೇನೆ. ನಾನು ಎದ್ದು ನನ್ನ ತಂದೆಯ ಬಳಿಗೆ ಹೋಗಿ 18
ಅವನಿಗೆ—ಅಪ್ಪಾ, ಪರಲೋಕಕ್ಕೆ ವಿರೋಧವಾಗಿಯೂ ನಿನ್ನ ಮುಂದೆಯೂ ಪಾಪ
ಮಾಡಿದ್ಧೇನೆ; ಇನ್ನು ನಾನು ನಿನ್ನ ಮಗನೆನಿಸಿಕೊಳ್ಳುವದಕ್ಕೆ ಯೋಗ್ಯನಲ್ಲ; ನನ್ನನ್ನು 19
ನಿನ್ನ ಕೂಲಿಯಾಳುಗಳಲ್ಲಿ ಒಬ್ಬನಂತೆ ಮಾಡು ಎಂದು ಹೇಳುವೆನು ಅಂದುಕೊಂಡು,
ಎದ್ದು ತನ್ನ ತಂದೆಯ ಕಡೆಗೆ ಬಂದನು. ಅವನು ಇನ್ನೂ ದೂರದಲ್ಲಿರುವಾಗ ಅವನ 20
ತಂದೆಯು ಅವನನ್ನು ಕಂಡು, ಕನಿಕರಪಟ್ಟು ಓಡಿಬಂದು ಅವನ ಕೊರಳನ್ನು ಅಪ್ಪಿ
ಕೊಂಡು ಅವನಿಗೆ ಬಹಳವಾಗಿ ಮುದ್ದಿಟ್ಟನು. ಆದರೂ ಮಗನು ಅವನಿಗೆ—ಅಪ್ಪಾ, 21
ಪರಲೋಕಕ್ಕೆ ವಿರೋಧವಾಗಿಯೂ ನಿನ್ನ ಮುಂದೆಯೂ ಪಾಪಮಾಡಿದ್ಧೇನೆ; ಇನ್ನು
ನಾನು ನಿನ್ನ ಮಗನೆನಿಸಿಕೊಳ್ಳುವದಕ್ಕೆ ಯೋಗ್ಯನಲ್ಲ ಎಂದು ಹೇಳಲು, ತಂದೆಯು 22
ತನ್ನ ಆಳುಗಳಿಗೆ—ಶ್ರೇಷ್ಠವಾದ ನಿಲುವಂಗಿಯನ್ನು ತಟ್ಟನೆ ತಂದು ಇವನಿಗೆ ತೊಡಿಸಿರಿ;
ಇವನ ಕೈಗೆ ಉಂಗುರವನ್ನು ಇಡಿರಿ; ಕಾಲಿಗೆ ಜೋಡು ಮೆಡಿಸಿರಿ; ಕೊಬ್ಬಿಸಿದ ಆ ಕರು 23
ವನ್ನು ತಂದು ಕೊಯ್ಯಿರಿ; ಹಬ್ಬಾಮಾಡೋಣ, ಉಲ್ಲಾಸಪಡೋಣ. ಈ ನನ್ನ ಮಗನು 24
ಸತ್ತವನಾಗಿದ್ದನು, ತಿರಿಗಿ ಬದುಕಿ ಬಂದನು; ಪೋಲಿಹೋಗಿದ್ದನು[1], ಸಿಕ್ಕಿದನು
ಎಂದು ಹೇಳಿದನು. ಆಗ ಅವರು ಉಲ್ಲಾಸಪಡುವದಕ್ಕೆ ತೊಡಗಿದರು. ಆದರೆ ಅವನ 25

---

[1] ಅಥವಾ, ಕೆಟ್ಟುಹೋಗಿದ್ದನು.

ಹಿರೀಮಗನು ಹೊಲದಲ್ಲಿದ್ದನು. ಅವನು ಮನೆಯ ಹತ್ತಹತ್ತರಕ್ಕೆ ಬರುತ್ತಿರುವಾಗ
26 ವಾದ್ಯನರ್ತನಗಳನ್ನು ಕೇಳಿ, ಆಳುಗಳಲ್ಲಿ ಒಬ್ಬನನ್ನು ತನ್ನ ಬಳಿಗೆ ಕರೆದು—ಇದೇನು
27 ಎಂದು ವಿಚಾರಿಸಿದನು. ಆಳು ಅವನಿಗೆ—ನಿನ್ನ ತಮ್ಮ ಬಂದಿದ್ದಾನೆ; ಇವನು ಸುರಕ್ಷಿತ
ವಾಗಿ ಬಂದದ್ದರಿಂದ ನಿನ್ನ ತಂದೆಯು ಆ ಕೊಬ್ಬಿಸಿದ ಕರುವನ್ನು ಕೊಯ್ಸಿದ್ದಾನೆ ಎಂದು
28 ಹೇಳಿದನು. ಇದನ್ನು ಕೇಳಿ ಅವನಿಗೆ ಸಿಟ್ಟುಬಂದು ಒಳಕ್ಕೆ ಹೋಗಲೊಲ್ಲದೆ ಇದ್ದನು.
29 ಆಗ ಅವನ ತಂದೆಯು ಹೊರಗೆ ಬಂದು ಅವನನ್ನು ಬೇಡಿಕೊಂಡನು. ಆದರೆ ಅವನು
ತನ್ನ ತಂದೆಗೆ—ನೋಡು, ಇಷ್ಟು ವರುಷ ನಿನಗೆ ಸೇವೆಮಾಡಿದ್ದೇನೆ, ಮತ್ತು ನಾನು ನಿನ್ನ
ಒಂದಪ್ಪಣೆಯನ್ನಾದರೂ ಎಂದೂ ಮೀರಲಿಲ್ಲ; ಆದಾಗ್ಯೂ ನಾನು ನನ್ನ ಸ್ನೇಹಿತರ
ಸಂಗಡ ಉಲ್ಲಾಸಪಡುವದಕ್ಕಾಗಿ ನೀನು ಎಂದೂ ನನಗೆ ಒಂದು ಆಡನ್ನಾದರೂ ಕೊಡ
30 ಲಿಲ್ಲ. ಆದರೆ ಸೂಳೆಯರನ್ನು ಕಟ್ಟಿಕೊಂಡು ನಿನ್ನ ಬದುಕನ್ನು ನುಂಗಿಬಿಟ್ಟ ಈ ನಿನ್ನ
ಮಗನು ಬಂದಾಗ, ಕೊಬ್ಬಿಸಿದ ಕರುವನ್ನು ಇವನಿಗೆ ಕೊಯ್ಸಿದಿ ಎಂದು ಉತ್ತರಕೊ
31 ಟ್ಟನು. ಅದಕ್ಕೆ ತಂದೆಯು—ಕಂದಾ, ನೀನು ಯಾವಾಗಲೂ ನನ್ನ ಸಂಗಡ ಇದ್ದೀ,
32 ಮತ್ತು ನನ್ನದೆಲ್ಲಾ ನಿನ್ನದೇ. ಆದರೆ ಉಲ್ಲಾಸಪಡುವದೂ ಸಂತೋಷಗೊಳ್ಳುವದೂ
ನ್ಯಾಯವಾದದ್ದೇ; ಯಾಕಂದರೆ ಈ ನಿನ್ನ ತಮ್ಮ ಸತ್ತವನಾಗಿದ್ದನು, ತಿರಿಗಿ ಬದುಕಿ
ಬಂದನು; ಪೋಲಿಹೋಗಿದ್ದನು[1], ಸಿಕ್ಕಿದನು ಎಂದು ಹೇಳಿದನು.

ಮುಂದಿನ ಕಾಲಕ್ಕೆ ಸಿದ್ಧಮಾಡಿಕೊಂಡ ಕಳ್ಳನಾದ ಮನೆವಾರ್ತೆಯವನ ಸಾಮ್ಯ.

**16** ಯೇಸು ತನ್ನ ಶಿಷ್ಯರಿಗೂ ಹೇಳಿದ್ದೇನಂದರೆ—ಐಶ್ವರ್ಯವಂತನಾದ ಒಬ್ಬ ಮನುಷ್ಯ
ನಿಗೆ ಒಬ್ಬ ಮನೆವಾರ್ತೆಯವನಿದ್ದನು. ಇವನ ವಿಷಯವಾಗಿ ಯಜಮಾನನ ಬಳಿ
ಯಲ್ಲಿ—ಇವನು ನಿನ್ನ ಆಸ್ತಿಯನ್ನು ಹಾಳುಮಾಡುತ್ತಾ ಇದ್ದಾನೆ ಎಂದು ಯಾರೋ ದೂರು
2 ಹೇಳಿರಲಾಗಿ ಯಜಮಾನನು ಅವನನ್ನು ಕರೆದು—ಇದೇನು ನಾನು ನಿನ್ನ ವಿಷಯದಲ್ಲಿ
ಕೇಳುವ ಸಂಗತಿ? ನಿನ್ನ ಮನೆವಾರ್ತೆಯ ಲೆಕ್ಕವನ್ನು ಒಪ್ಪಿಸು; ನೀನು ಇನ್ನು ಮನೆ
3 ವಾರ್ತೆಯವನಾಗಿರುವದಕ್ಕಾಗುವದಿಲ್ಲ ಎಂದು ಹೇಳಿದನು. ಹೀಗಿರಲಾಗಿ ಆ ಮನೆ
ವಾರ್ತೆಯವನು—ನಾನೇನು ಮಾಡಲಿ? ನನ್ನ ಯಜಮಾನನು ನನ್ನಿಂದ ಈ ಮನೆವಾರ್ತೆ
ಕೆಲಸವನ್ನು ತೆಗೆದುಬಿಡುತ್ತಾನಲ್ಲಾ. ಅಗಿಯುವದಕ್ಕೆ ನನಗೆ ಬಲವಿಲ್ಲ; ಭಿಕ್ಷಾಬೇಡುವ
4 ದಕ್ಕೆ ನನಗೆ ನಾಚಿಕೆಯಾಗುತ್ತದೆ. ಈ ಮನೆವಾರ್ತೆಕೆಲಸದಿಂದ ನನ್ನನ್ನು ತೆಗೆದ ಮೇಲೆ
ಜನರು ನನ್ನನ್ನು ತಮ್ಮ ಮನೆಗಳೊಳಗೆ ಸೇರಿಸಿಕೊಳ್ಳುವಂತೆ ನಾನು ಮಾಡಬೇಕಾದದ್ದು
5 ಗೊತ್ತಾಯಿತು ಎಂದು ತನ್ನೊಳಗೆ ಅಂದುಕೊಂಡು, ತನ್ನ ಯಜಮಾನನ ಸಾಲಗಾರರಲ್ಲಿ
ಪ್ರತಿಯೊಬ್ಬನನ್ನೂ ಕರೆದು ಮೊದಲನೆಯವನನ್ನು—ನೀನು ನನ್ನ ಯಜಮಾನನಿಗೆ ಏನು
6 ಕೊಡಬೇಕು ಎಂದು ಕೇಳಲು, ಅವನು—ನೂರು ಬುದ್ದಲಿ[2] ಎಣ್ಣೆ ಅಂದಾಗ, ಅವ
ನಿಗೆ—ಈ ನಿನ್ನ ಪತ್ರವನ್ನು ತೆಗೆದುಕೊಂಡು ಬೇಗ ಕೂತುಕೊಂಡು ಐವತ್ತು ಬುದ್ದಲಿ ಅಂತ
7 ಬರಿ ಎಂದು ಹೇಳಿದನು. ಬಳಿಕ ಮತ್ತೊಬ್ಬನನ್ನು— ನೀನು ಏನು ಕೊಡಬೇಕು ಎಂದು

[1] ಅಥವಾ, ಕೆಟ್ಟುಹೋಗಿದ್ದನು. [2] ಹೆಚ್ಚು ಕಡಿಮೆ ೧೬೫೦ ಮಣ.

ಕೇಳಲು, ಅವನು—ನೂರು ಖಂಡಗ ಗೋದಿ ಅಂದಾಗ, ಅವನಿಗೆ—ಈ ನಿನ್ನ ಪತ್ರವನ್ನು ತೆಗೆದುಕೊಂಡು ಎಂಭತ್ತು ಖಂಡಗ ಅಂತ ಬರಿ ಎಂದು ಹೇಳಿದನು. 8 ಯಜಮಾನನು ಇದನ್ನು ಕೇಳಿ ಅನ್ಯಾಯಗಾರನಾದ ಆ ಮನೆವಾರ್ತೆಯವನನ್ನು—ಇವನು ಜಾಣತನ ಮಾಡಿದನು ಎಂದು ಹೊಗಳಿದನು. ಯಾಕಂದರೆ ಲೌಕಿಕರು ತಮ್ಮಂಥವರ ವಿಷಯದಲ್ಲಿ ಬೆಳಕಿನ ರಾಜ್ಯದವರಿಗಿಂತಲೂ ಜಾಣರಾಗಿದ್ಧಾರೆ. 9 ಅನ್ಯಾಯದ[1] ಧನದ ಮೂಲಕ ವಾಗಿ ನಿಮಗೆ ಸ್ನೇಹಿತರನ್ನು ಮಾಡಿಕೊಳ್ಳಿರಿ; ಹೀಗೆ ಮಾಡಿದರೆ, ಅದು ನಿಮ್ಮ ಕೈಬಿಟ್ಟು ಹೋದಾಗ ಅವರು ನಿಮ್ಮನ್ನು ಶಾಶ್ವತವಾದ ವಾಸಸ್ಥಾನಗಳಲ್ಲಿ ಸೇರಿಸಿಕೊಳ್ಳುವರು ಎಂದು ನಾನು ನಿಮಗೆ ಹೇಳುತ್ತೇನೆ. 10 ಸ್ವಲ್ಪವಾದದ್ದರಲ್ಲಿ ನಂಬಿಗಸ್ತನಾದವನು ಬಹಳ ವಾದದ್ದರಲ್ಲಿಯೂ ನಂಬಿಗಸ್ತನಾಗುವನು; ಸ್ವಲ್ಪವಾದದ್ದರಲ್ಲಿ ಅನ್ಯಾಯಗಾರನಾದವನು ಬಹಳವಾದದ್ದರಲ್ಲಿಯೂ ಅನ್ಯಾಯಗಾರನಾಗುವನು. 11 ಹೀಗಿರುವದರಿಂದ ಅನ್ಯಾಯದ[1] ಧನದ ವಿಷಯದಲ್ಲಿ ನೀವು ನಂಬಿಗಸ್ತರಲ್ಲದವರಾದರೆ ನಿಜವಾದ ಧನವನ್ನು ನಿಮ್ಮ ವಶಕ್ಕೆ ಯಾರು ಕೊಟ್ಟಾರು? 12 ಮತ್ತೊಬ್ಬನ ಸೊತ್ತಿನ ವಿಷಯದಲ್ಲಿ ನೀವು ನಂಬಿಗಸ್ತರಲ್ಲದವ ರಾದರೆ, ನಿಮ್ಮದನ್ನು ನಿಮಗೆ ಯಾರು ಕೊಟ್ಟಾರು? 13 ಯಾವ ಆಳಾದರೂ ಇಬ್ಬರು ಯಜಮಾನರಿಗೆ ಸೇವೆಮಾಡಲಾರನು; ಅವನು ಒಬ್ಬನನ್ನು ದ್ವೇಷಿಸಿ ಮತ್ತೊಬ್ಬನನ್ನು ಪ್ರೀತಿಸುವನು, ಇಲ್ಲವೆ ಒಬ್ಬನನ್ನು ಹೊಂದಿಕೊಂಡು ಮತ್ತೊಬ್ಬನನ್ನು ಅಲಕ್ಷ್ಯಮಾಡು ವನು. ನೀವು ದೇವರನ್ನೂ ಧನವನ್ನೂ ಒಟ್ಟಿಗೆ ಸೇವಿಸಲಾರಿರಿ ಅಂದನು.

### ಯೇಸು ನುಡಿದ ನಾನಾ ವಚನಗಳು.

14 ಫರಿಸಾಯರು ಈ ಮಾತುಗಳನ್ನೆಲ್ಲಾ ಕೇಳಿ, ತಾವು ಹಣದಾಸೆಯುಳ್ಳವರಾಗಿದ್ದದರಿಂದ ಹಾಸ್ಯಮಾಡಿದರು. 15 ಆಗ ಆತನು ಅವರಿಗೆ ಹೇಳಿದ್ದೇನಂದರೆ—ಮನುಷ್ಯರ ಮುಂದೆ ನೀತಿವಂತರೆಂದು ತೋರಿಸಿಕೊಳ್ಳುವವರು ನೀವು; ಆದರೆ ದೇವರು ನಿಮ್ಮ ಹೃದಯ ಗಳನ್ನು ತಿಳುಕೊಂಡಿದ್ಧಾನೆ. ಮನುಷ್ಯರಲ್ಲಿ ಶ್ರೇಷ್ಠವೆನಿಸಿಕೊಳ್ಳುವಂಥಾದ್ದು ದೇವರ ದೃಷ್ಟಿಯಲ್ಲಿ ಅಸಹ್ಯವಾಗಿದೆ.

16 ಧರ್ಮಶಾಸ್ತ್ರವೂ ಪ್ರವಾದಿಗಳೂ ಯೋಹಾನನ ತನಕವೇ. ಈಚೆಗೆ ದೇವರ ರಾಜ್ಯವು ಸಾರಲ್ಪಡುತ್ತಾ ಅದೆ. ಅದರಲ್ಲಿ ಸಕಲರೂ ಬಲಾತ್ಕಾರವಾಗಿ ನುಗ್ಗುತ್ತಾರೆ[2].

17 ಧರ್ಮಶಾಸ್ತ್ರದೊಳಗಿನ ಒಂದು ಗುಡಸಾದರೂ ಬಿದ್ದುಹೋಗುವದಕ್ಕಿಂತಲೂ ಆಕಾ ಶವೂ ಭೂಮಿಯೂ ಅಳಿದುಹೋಗುವದು ಸುಲಭ[3].

18 ತನ್ನ ಹೆಂಡತಿಯನ್ನು ಬಿಟ್ಟು ಮತ್ತೊಬ್ಬಳನ್ನು ಮದುವೆಮಾಡಿಕೊಳ್ಳುವ ಪ್ರತಿಯೊಬ್ಬನು ಹಾದರಮಾಡುವವನಾಗಿದ್ಧಾನೆ; ಮತ್ತು ಗಂಡಬಿಟ್ಟವಳನ್ನು ಮದುವೆಮಾಡಿಕೊಳ್ಳು ವವನು ಹಾದರಮಾಡುವವನಾಗಿದ್ಧಾನೆ[4].

---

1) ಅಥವಾ, ಪ್ರಾಪಂಚಿಕ.
2) ಮತ್ತಾಯ ೧೧, ೧೨. ೧೩.
3) ಮತ್ತಾಯ ೫, ೧೮.
4) ಮತ್ತಾಯ ೫, ೩೨; ೧೯, ೯.

ಭೋಗಪುರುಷನು ಭಿಕ್ಷಗಾರನು ಇವರ ದೃಷ್ಟಾಂತ.

19 ಐಶ್ವರ್ಯವಂತನಾದ ಒಬ್ಬ ಮನುಷ್ಯನಿದ್ದನು. ಅವನು ಸಕಲಾತಿ ನಯವಾದ ನಾರುಮಡಿ ಮುಂತಾದ ವಸ್ತ್ರಗಳನ್ನು ಧರಿಸಿಕೊಂಡು ಪ್ರತಿದಿನವೂ ವೈಭವದೊಡನೆ
20 ಸುಖಸಂತೋಷಪಡುತ್ತಿದ್ದನು. ಅವನ ಮನೇಬಾಗಲಲ್ಲಿ ಲಾಜರನೆಂಬ ಒಬ್ಬ ಭಿಕ್ಷ
21 ಗಾರನು ಬಿದ್ದುಕೊಂಡಿದ್ದನು. ಇವನು ಮೈತುಂಬಾ ಹುಣ್ಣಿದ್ದವನು; ಐಶ್ವರ್ಯವಂತನ ಮೇಜಿನಿಂದ ಬಿದ್ದ ಎಂಜಲನ್ನು ತಿಂದು ಹಸಿವು ತೀರಿಸಿಕೊಳ್ಳಬೇಕೆಂದಿದ್ದನು; ಇಷ್ಟು
22 ಮಾತ್ರವಲ್ಲದೆ ನಾಯಿಗಳು ಸಹ ಬಂದು ಅವನ ಹುಣ್ಣುಗಳನ್ನು ನೆಕ್ಕುವವು. ಹೀಗಿರುವಲ್ಲಿ ಸ್ವಲ್ಪಕಾಲದ ಮೇಲೆ ಆ ಭಿಕ್ಷಗಾರನು ಸತ್ತನು; ದೇವದೂತರು ಅವನನ್ನು ತೆಗೆದುಕೊಂಡುಹೋಗಿ ಅಬ್ರಹಾಮನ ಎದೆಗೆ ಒರಗಿಸಿದರು[1]. ಆ ಐಶ್ವರ್ಯವಂತನು ಸಹ
23 ಸತ್ತನು; ಅವನಿಗೆ ಉತ್ತರಕ್ರಿಯೆಗಳು ಆದವು. ಅವನು ಪಾತಾಳದೊಳಗೆ ಯಾತನೆ ಪಡುತ್ತಾ ಇರುವಲ್ಲಿ ಕಣ್ಣೆತ್ತಿ ದೂರದಿಂದ ಅಬ್ರಹಾಮನನ್ನೂ ಇವನ ಎದೆಗೆ ಒರಗಿ
24 ಕೊಂಡಿದ್ದ ಲಾಜರನನ್ನೂ ನೋಡಿ—ತಂದೆಯೇ, ಅಬ್ರಹಾಮನೇ, ನನ್ನ ಮೇಲೆ ದಯವಿಟ್ಟು ಲಾಜರನನ್ನು ಕಳುಹಿಸು; ಅವನು ತನ್ನ ತುದಿಬೆರಳನ್ನು ನೀರಿನಲ್ಲಿ ಅದ್ದಿ ನನ್ನ ನಾಲಿಗೆಯನ್ನು ತಣ್ಣಗೆ ಮಾಡಲಿ; ಈ ಉರಿಯಲ್ಲಿ ಸಂಕಟಪಡುತ್ತೇನೆ ಎಂದು ಕೂಗಿ ಹೇಳಿದನು.
25 ಆದರೆ ಅಬ್ರಹಾಮನು—ಕಂದಾ, ನೀನು ಆಶಿಸಿದ ಸುಖವನ್ನು ನಿನ್ನ ಜೀವಮಾನದಲ್ಲಿ ಹೊಂದಿದಿ; ಹಾಗೆಯೇ ಲಾಜರನು ಕಷ್ಟವನ್ನು ಹೊಂದಿದನು ಎಂಬುವದನ್ನು ನೆನಪಿಗೆ ತಂದುಕೋ. ಈಗಲಾದರೋ ಇಲ್ಲಿ ಇವನಿಗೆ ಸಮಾಧಾನ, ಆದರೆ ನಿನಗೆ ಸಂಕಟ.
26 ಇದು ಮಾತ್ರವಲ್ಲದೆ ನಮಗೂ ನಿಮಗೂ ನಡುವೆ ದೊಡ್ಡದೊಂದು ಡೊಂಗರ ಸ್ಥಾಪಿಸಿಯದೆ; ಆದಕಾರಣ ಈ ಕಡೆಯಿಂದ ನಿಮ್ಮ ಬಳಿಗೆ ಹೋಗಬೇಕೆಂದಿರುವವರು ಹೋಗಲಾರರು; ಮತ್ತು ಆ ಕಡೆಯಿಂದ ನಮ್ಮ ಬಳಿಗೆ ಯಾರೂ ದಾಟುವದಕ್ಕಾಗದು ಅಂದನು.
27 ಆಗ ಅವನು—ಅಪ್ಪಾ, ಹಾಗಾದರೆ ಲಾಜರನನ್ನು ನನ್ನ ತಂದೆಯ ಮನೆಗೆ ಕಳುಹಿಸ
28 ಬೇಕೆಂದು ನಿನ್ನನ್ನು ಬೇಡಿಕೊಳ್ಳುತ್ತೇನೆ. ನನಗೆ ಐದು ಮಂದಿ ಅಣ್ಣತಮ್ಮಂದಿರಿದ್ದಾರೆ; ಅವರು ಸಹ ಈ ಯಾತನೆಯ ಸ್ಥಳಕ್ಕೆ ಬಂದಾರು; ಬಾರದಂತೆ ಅವನು ತಾನು ಕಂಡ
29 ದ್ದನ್ನು ಅವರಿಗೆ ಚನ್ನಾಗಿ ಹೇಳಲಿ ಅಂದನು. ಆದರೆ ಅಬ್ರಹಾಮನು—ಮೋಶೆಯ ಧರ್ಮಶಾಸ್ತ್ರವೂ ಪ್ರವಾದಿಗಳ ಗ್ರಂಥಗಳೂ ಅವರಲ್ಲಿ ಅವೆ; ಅವುಗಳನ್ನು ಕೇಳಲಿ ಅನ್ನಲು,
30 ಅವನು—ತಂದೆಯೇ, ಅಬ್ರಹಾಮನೇ, ಹಾಗಲ್ಲ; ಸತ್ತವರ ಕಡೆಯಿಂದ ಒಬ್ಬನು ಅವರ
31 ಬಳಿಗೆ ಹೋದರೆ, ಅವರು ದೇವರ ಕಡೆಗೆ ತಿರುಗಿಕೊಳ್ಳುವರು ಅಂದನು. ಅಬ್ರಹಾಮನು ಅವನಿಗೆ—ಅವರು ಮೋಶೆಯ ಮಾತನ್ನೂ ಪ್ರವಾದಿಗಳ ಮಾತನ್ನೂ ಕೇಳದಿದ್ದರೆ, ಸತ್ತುಹೋಗಿದ್ದವನೊಬ್ಬನು ಜೀವಿತನಾಗಿ ಎದ್ದರೂ ಅವರು ಒಪ್ಪುವದಿಲ್ಲ ಎಂದು ಹೇಳಿದನು.

---

[1] ಅಂದರೆ, ಪರಲೋಕದಲ್ಲಿ ಸೇರಿಸಿದರು.

ಮತ್ತೊಬ್ಬರಿಗೆ ವಿಘ್ನವಾಗದೆ, ಅವರ ತಪ್ಪುಗಳನ್ನು ಕ್ಷಮಿಸಬೇಕೆಂಬುವ ಬೋಧೆ.

(ಮತ್ತಾಯ 18, 6. 7. 15. 21. 22.)

ಆತನು ತನ್ನ ಶಿಷ್ಯರಿಗೆ—ತೊಡಕುಗಳು ಬಾರದೆ ಇರಲಾರವು; ಆದಾಗ್ಯೂ ಅವು **17** ಯಾವನಿಂದ ಬರುತ್ತವೆಯೋ ಅವನ ಗತಿಯನ್ನು ಏನು ಹೇಳಲಿ? ಅವನು ಈ ಚಿಕ್ಕವ 2 ರಲ್ಲಿ ಒಬ್ಬನಿಗೆ ತೊಡಕನ್ನೊಡ್ಡುವದಕ್ಕಿಂತ ತನ್ನ ಕುತ್ತಿಗೆಗೆ ಬೀಸುವ ಕಲ್ಲನ್ನು ಕಟ್ಟಿಸಿ ಕೊಂಡು ಸಮುದ್ರದಲ್ಲಿ ಹಾಕಿಸಿಕೊಳ್ಳುವದೇ ಲೇಸು. ನಿಮ್ಮ ವಿಷಯದಲ್ಲಿ ಎಚ್ಚರಿಕೆ 3 ಯಾಗಿರ್ರಿ. ನಿನ್ನ ಸಹೋದರನು ತಪ್ಪುಮಾಡಿದರೆ, ಅವನನ್ನು ಗದರಿಸು; ಅವನು ಪಶ್ಚಾತ್ತಾಪಪಟ್ಟರೆ ಅವನ ತಪ್ಪನ್ನು ಕ್ಷಮಿಸಿಬಿಡು. ಅವನು ದಿನಕ್ಕೆ ಏಳುಸಾರಿ ನಿನಗೆ 4 ತಪ್ಪುಮಾಡಿ ಏಳುಸಾರಿಯೂ ನಿನ್ನ ಕಡೆಗೆ ತಿರುಗಿಕೊಂಡು—ನನಗೆ ಪಶ್ಚಾತ್ತಾಪವಾ ಯಿತು ಎಂದು ಹೇಳಿದರೆ, ಅವನ ತಪ್ಪನ್ನು ಕ್ಷಮಿಸಿಬಿಡು ಎಂದು ಹೇಳಿದನು.

ನಂಬಿಕೆಯ ಮಹತ್ವದ ವರ್ಣನೆ.

(ಮತ್ತಾಯ 17, 20; 21, 21.)

ಅಪೊಸ್ತಲರು ಸ್ವಾಮಿಗೆ—ನಮ್ಮ ನಂಬಿಕೆಯನ್ನು ಹೆಚ್ಚಿಸು ಎಂದು ಹೇಳಲು, 5 ಸ್ವಾಮಿಯು—ಸಾಸಿವೇಕಾಳಷ್ಟು ನಂಬಿಕೆ ನಿಮಗಿದ್ದರೆ, ನೀವು ಈ ಅತ್ತೀಮರಕ್ಕೆ— 6 ನೀನು ಬೇರುಸಹಿತ ಕಿತ್ತುಕೊಂಡುಹೋಗಿ ಸಮುದ್ರದಲ್ಲಿ ನಾಟಿಕೋ ಎಂದು ಹೇಳಿದರೂ ಅದು ನಿಮ್ಮ ಮಾತನ್ನು ಕೇಳುವದು.

ಮಾಡಬೇಕಾದದ್ದನ್ನು ಮಾಡುವದು ನಮ್ಮ ಕರ್ತವ್ಯವೇ ಹೊರತು ಪುಣ್ಯವಲ್ಲವೆಂಬ ಬೋಧೆ.

ನಿಮ್ಮಲ್ಲಿ ಯಾವನಿಗಾದರೂ ಉಳುವ ಅಥವಾ ಕುರಿಮೇಯಿಸುವ ಆಳಿರಲಾಗಿ, ಅವನು 7 ಹೊಲದಿಂದ ಮನೆಗೆ ಬಂದ ಆ ಆಳಿಗೆ—ನೀನು ತಟ್ಟನೆ ಬಂದು ಊಟಕ್ಕೆ ಕೂತುಕೋ ಎಂದು ಹೇಳ್ಯಾನೇ? ಹಾಗೆ ಹೇಳದೆ—ನೀನು ನನ್ನ ಊಟಕ್ಕೇನಾದರೂ ಸಿದ್ಧಮಾಡು, 8 ನಾನು ಊಟಾಮಾಡಿ ಕುಡಿಯುವ ತನಕ ನಡುಕಟ್ಟಿಕೊಂಡು ನನಗೆ ಸೇವೆ ಮಾಡು; ಆ ಮೇಲೆ ನೀನು ಊಟಾಮಾಡಿ ಕುಡಿ ಎಂದು ಹೇಳುವನಲ್ಲವೇ? ತನ್ನ ಅಪ್ಪಣೆ 9 ಯಂತೆ ನಡೆದ ಆ ಆಳಿಗೆ—ನಿನ್ನಿಂದ ಉಪಕಾರವಾಯಿತೆಂದು ಅವನಿಗೆ ಹೇಳುವನೇ? ಇದರಂತೆಯೇ ನಿಮ್ಮ ಸಂಗತಿ. ನೀವು ನಿಮಗೆ ಅಪ್ಪಣೆಯಾಗಿರುವದನ್ನೆಲ್ಲಾ ಮಾಡಿದ 10 ಮೇಲೆ—ನಾವು ಆಳುಗಳು, ಪ್ರಯೋಜನವಿಲ್ಲದವರು, ಮಾಡಬೇಕಾದದ್ದನ್ನೇ ಮಾಡಿ ದ್ದೇವೆ ಅನ್ನಿರಿ ಎಂದು ಹೇಳಿದನು.

ಯೇಸು ಹತ್ತುಮಂದಿ ಕುಷ್ಠರೋಗಿಗಳನ್ನು ಸ್ವಸ್ಥಮಾಡಿದಾಗ ಒಬ್ಬನು ಮಾತ್ರ ಉಪಕಾರಸ್ತುತಿಮಾಡಿದ್ದು.

ಆತನು ಯೆರೂಸಲೇಮಿಗೆ ಪ್ರಯಾಣಮಾಡುವಾಗ ಸಮಾರ್ಯ ಗಲಿಲಾಯ ಸೀಮೆ 11 ಗಳ ನಡುವೆ ಹಾದುಹೋದನು. ಒಂದು ಹಳ್ಳಿಗೆ ಬಂದಾಗ ಹತ್ತುಮಂದಿ ಕುಷ್ಠರೋಗಿ 12

13 ಗಳು ಆತನ ಎದುರಿಗೆ ಬಂದು, ದೂರದಲ್ಲಿ ನಿಂತು—ಯೇಸುವೇ, ಗುರುವೇ, ನಮ್ಮ
14 ಮೇಲೆ ದಯವಿಡು ಎಂದು ಕೂಗಿಹೇಳಿದರು. ಆತನು ಅವರನ್ನು ನೋಡಿ—ನೀವು
ಹೋಗಿ ಯಾಜಕರಿಗೆ ಮೈ ತೋರಿಸಿಕೊಳ್ಳಿರಿ ಎಂದು ಹೇಳಿದನು. ಅವರು ಹೋಗು
15 ತ್ತಿರುವಾಗಲೇ ಶುದ್ಧರಾದರು. ಅವರಲ್ಲಿ ಒಬ್ಬನು ತನಗೆ ಗುಣವಾದದ್ದನ್ನು ನೋಡಿ
16 ಮಹಾಶಬ್ದದಿಂದ ದೇವರನ್ನು ಕೊಂಡಾಡುತ್ತಾ ಹಿಂತಿರುಗಿ ಬಂದು, ಯೇಸುವಿನ ಪಾದ
ಗಳಿಗೆ ಅಡ್ಡಬಿದ್ದು ಆತನಿಗೆ ಉಪಕಾರಸ್ತುತಿಮಾಡಿದನು. ಅವನು ಸಮಾರ್ಯದವನು.
17 ಯೇಸು ಇದನ್ನು ನೋಡಿ—ಹತ್ತು ಮಂದಿ ಶುದ್ಧರಾದರಲ್ಲವೇ? ಮಿಕ್ಕ ಒಂಭತ್ತು ಮಂದಿ
18 ಎಲ್ಲಿ? ದೇವರನ್ನು ಸ್ತುತಿಸುವದಕ್ಕೆ ಈ ಅನ್ಯದೇಶದವನೇ ಹೊರತು ಇನ್ನ್ಯಾರೂ ಹಿಂತಿ
19 ರುಗಿ ಬರಲಿಲ್ಲವೇ ಎಂದು ಹೇಳಿ, ಅವನಿಗೆ—ಎದ್ದು ಹೋಗು, ನಿನ್ನ ನಂಬಿಕೆಯು ನಿನ್ನನ್ನು
ಸ್ವಸ್ಥಮಾಡಿಯದೆ ಎಂದು ಹೇಳಿದನು.

ದೇವರ ರಾಜ್ಯವು ಯಾವಾಗ ಮತ್ತು ಎಲ್ಲಿ ಬರುವದು ಎಂಬ ವಿಷಯವಾಗಿ ಯೇಸು ಉಪದೇಶಮಾಡಿದ್ದು.

20 ದೇವರ ರಾಜ್ಯವು ಯಾವಾಗ ಬರುವದೆಂದು ಫರಿಸಾಯರು ಆತನನ್ನು ಕೇಳಿದಾಗ,
21 ಆತನು ಅವರಿಗೆ—ದೇವರ ರಾಜ್ಯವು ಪ್ರತ್ಯಕ್ಷವಾಗಿ ಬರುವಂಥಾದ್ದಲ್ಲ. ಇಗೋ ಇಲ್ಲಿ
ಇದೆ, ಅಗೋ ಅಲ್ಲಿ ಅದೆ ಎಂದು ಹೇಳುವದಕ್ಕಾಗದು; ದೇವರ ರಾಜ್ಯವು ನಿಮ್ಮಲ್ಲಿಯೇ
ಅದೆ ಅಂತ ತಿಳುಕೊಳ್ಳಿರಿ ಎಂದು ಉತ್ತರಕೊಟ್ಟನು.
22 ಮತ್ತು ಆತನು ತನ್ನ ಶಿಷ್ಯರಿಗೆ ಹೇಳಿದ್ದೇನಂದರೆ—ಒಂದು ಕಾಲ ಬರುತ್ತದೆ, ಅದರಲ್ಲಿ
ನೀವು ಮನುಷ್ಯಕುಮಾರನ ದಿವಸಗಳೊಳಗೆ ಒಂದು ದಿನವನ್ನು ನೋಡಬೇಕೆಂದು
23 ಅಪೇಕ್ಷಿಸಿದರೂ ಅದನ್ನು ನೋಡದೆ ಇರುವಿರಿ. ಜನರು ನಿಮಗೆ—ಅಗೋ ಅಲ್ಲಿದ್ದಾನೆ,
ಇಗೋ ಇಲ್ಲಿದ್ದಾನೆ ಎಂದು ಕರೆದರೆ, ನೀವು ಅವರ ಹಿಂದೆ ಹೊರಟುಹೋಗಬೇಡಿರಿ;
24 ಯಾಕಂದರೆ ಮಿಂಚು ಮಿಂಚುತ್ತಾ ಆಕಾಶದಲ್ಲಿ ಒಂದು ಕಡೆಯಿಂದ ಮತ್ತೊಂದು
ಕಡೆಯ ವರೆಗೂ ಹ್ಯಾಗೆ ಹೊಳೆಯುವದೋ ಹಾಗೆಯೇ ಮನುಷ್ಯಕುಮಾರನು ತನ್ನ
25 ದಿನದಲ್ಲಿರುವನು. ಆದರೆ ಮೊದಲು ಆತನು ಅನೇಕ ಕಷ್ಟಗಳನ್ನನುಭವಿಸಿ ಈಗಿನ
26 ಕಾಲದ ಜನರಿಂದ ನಿರಾಕರಿಸಲ್ಪಡಬೇಕು. ನೋಹನ ದಿವಸಗಳಲ್ಲಿ ನಡೆದ ಹಾಗೆಯೇ
27 ಮನುಷ್ಯಕುಮಾರನ ದಿವಸಗಳಲ್ಲಿಯೂ ನಡೆಯುವದು. ನೋಹನು ನಾವೆಯಲ್ಲಿ
ಸೇರಿದ ದಿನದ ತನಕ ಅವರು ಊಟಾಮಾಡುತ್ತಿದ್ದರು, ಕುಡಿಯುತ್ತಿದ್ದರು, ಮದುವೆ
ಮಾಡಿಕೊಳ್ಳುತ್ತಿದ್ದರು, ಮದುವೆಮಾಡಿಕೊಡುತ್ತಿದ್ದರು. ಆಗ ಜಲಪ್ರಲಯವು ಬಂದು
28 ಜನರೆಲ್ಲರನ್ನು ನಾಶಮಾಡಿತು. ಮತ್ತು ಲೋಟನ ದಿವಸಗಳಲ್ಲಿ ನಡೆದ ಪ್ರಕಾರ ನಡೆಯು
ವದು. ಅವರು ಊಟಾಮಾಡುತ್ತಿದ್ದರು, ಕುಡಿಯುತ್ತಿದ್ದರು, ಕೊಳ್ಳುತ್ತಿದ್ದರು, ಮಾರು
29 ತ್ತಿದ್ದರು, ನೆಡುತ್ತಿದ್ದರು, ಕಟ್ಟುತ್ತಿದ್ದರು. ಆದರೆ ಲೋಟನು ಸೊದೋಮ್ ಊರನ್ನು
ಬಿಟ್ಟುಹೋದ ದಿವಸದಲ್ಲಿ ಆಕಾಶದಿಂದ ಬೆಂಕಿಗಂಧಕಗಳು ಸುರಿದು ಅವರೆಲ್ಲರನ್ನು
30 ನಾಶಮಾಡಿದವು. ಮನುಷ್ಯಕುಮಾರನು ಪ್ರತ್ಯಕ್ಷವಾಗುವ ದಿವಸದಲ್ಲಿ ಅದೇ ರೀತಿ
31 ಯಾಗಿ ಇರುವದು. ಆ ದಿನದಲ್ಲಿ ಮಾಳಿಗೆಯ ಮೇಲೆ ಇರುವವನು ಮನೆಯೊಳ

ಗಿರುವ ತನ್ನ ವಸ್ತ್ರಗಳನ್ನು ತೆಗೆದುಕೊಂಡುಹೋಗುವದಕ್ಕೆ ಇಳಿದು ಬರಬಾರದು;
ಅದೇ ಪ್ರಕಾರ ಹೊಲದಲ್ಲಿರುವವನು ಸಹ ತಿರಿಗಿ ಹಿಂದಕ್ಕೆ ಹೋಗಬಾರದು. ಲೋಟನ 32
ಹೆಂಡತಿಯನ್ನು ನೆನಪಿಗೆ ತಂದುಕೊಳ್ಳಿರಿ. ತನ್ನ ಪ್ರಾಣವನ್ನು ಉಳಿಸಿಕೊಳ್ಳಬೇಕೆಂಬಿರು 33
ವವನು ಅದರ ನಷ್ಟಪಡುವನು; ಪ್ರಾಣದ ನಷ್ಟಪಡುವವನು ಅದನ್ನು ಉಳಿಸಿಕೊಳ್ಳು
ವನು. ಆ ರಾತ್ರೆಯಲ್ಲಿ ಒಂದೇ ಮಂಚದ ಮೇಲೆ ಇಬ್ಬರಿರುವರು; ಒಬ್ಬನು ತೆಗೆದು 34
ಕೊಳ್ಳಲ್ಪಡುವನು, ಮತ್ತೊಬ್ಬನು ಬಿಡಲ್ಪಡುವನು. ಇಬ್ಬರು ಹೆಂಗಸರು ಒಂದೇ ಕಲ್ಲಲ್ಲಿ 35
ಬೀಸುತ್ತಿರುವರು; ಒಬ್ಬಳು ತೆಗೆದುಕೊಳ್ಳಲ್ಪಡುವಳು, ಮತ್ತೊಬ್ಬಳು ಬಿಡಲ್ಪಡುವಳು[1]
ಅಂದನು. ಈ ಮಾತಿಗೆ ಶಿಷ್ಯರು—ಸ್ವಾಮೀ, ಅದು ಎಲ್ಲಿ ಆಗುವದು ಎಂದು ಕೇಳಲು, 37
ಆತನು ಅವರಿಗೆ—ಹೆಣಬಿದ್ದಕಡೆಯೇ ಹದ್ದುಗಳು ಕೂಡುವವು ಎಂದು ಉತ್ತರಕೊಟ್ಟನು.

ಯೇಸು ಪ್ರಾರ್ಥನೆಯ ವಿಷಯದಲ್ಲಿ ಅನ್ಯಾಯಗಾರನಾದ ನ್ಯಾಯಾಧಿಪತಿಯ
ಸಾಮ್ಯದ ಮೂಲಕ ಉಪದೇಶಮಾಡಿದ್ದು.

ಬೇಸರಗೊಳ್ಳದೆ ಯಾವಾಗಲೂ ಪ್ರಾರ್ಥನೆಮಾಡುತ್ತಿರಬೇಕೆಂಬುವದಕ್ಕೆ ಆತನು **18**
ಅವರಿಗೆ ಒಂದು ಸಾಮ್ಯವನ್ನು ಹೇಳಿದನು. ಅದೇನಂದರೆ—ಒಂದಾನೊಂದು ಊರಿನಲ್ಲಿ 2
ಒಬ್ಬ ನ್ಯಾಯಾಧಿಪತಿ ಇದ್ದನು; ಅವನು ದೇವರಿಗೆ ಹೆದರದೆ ಮನುಷ್ಯರನ್ನು ಲಕ್ಷ್ಯ
ಮಾಡದೆ ಇದ್ದವನು. ಅದೇ ಊರಿನಲ್ಲಿ ಒಬ್ಬ ವಿಧವೆ ಇದ್ದಳು. ಆಕೆಯು ಅವನ 3
ಬಳಿಗೆ ಬಂದು—ನ್ಯಾಯವಿಚಾರಣೆಮಾಡಿ ನನ್ನ ವಿರೋಧಿಯಿಂದ ನನ್ನನ್ನು ಬಿಡಿಸು
ಎಂದು ಹೇಳಿಕೊಳ್ಳುತ್ತಿದ್ದಳು. ಅವನು ಸ್ವಲ್ಪಕಾಲ ಮನಸ್ಸುಕೊಡಲಿಲ್ಲ. ಆ ಮೇಲೆ 4
ಅವನು—ನಾನು ದೇವರಿಗೆ ಹೆದರುವವನಲ್ಲ, ಮನುಷ್ಯರನ್ನು ಲಕ್ಷ್ಯಮಾಡುವವನಲ್ಲ;
ಆದಾಗ್ಯೂ ಈ ವಿಧವೆ ನನ್ನನ್ನು ಕಾಡುತ್ತಾ ಬರುವದರಿಂದ ಈಕೆಯ ನ್ಯಾಯವನ್ನು 5
ವಿಚಾರಿಸಿ ತೀರ್ಪುಮಾಡುವೆನು; ಇಲ್ಲವಾದರೆ ಈಕೆಯು ಬಂದು ಬಂದು ಕಡೆಗೆ ನನ್ನನ್ನು
ದಣಿಸ್ಯಾಳು ಎಂದು ತನ್ನೊಳಗೆ ಅಂದುಕೊಂಡನು. ಸ್ವಾಮಿಯು ಈ ಸಾಮ್ಯವನ್ನು 6
ಹೇಳಿದ ಮೇಲೆ—ಅನ್ಯಾಯಗಾರನಾದ ಈ ನ್ಯಾಯಾಧಿಪತಿ ಅಂದುಕೊಂಡದ್ದನ್ನು ಆಲೋ
ಚಿಸಿಕೊಳ್ಳಿರಿ. ದೇವರಾದುಕೊಂಡವರು ಆತನಿಗೆ ಹಗಲುರಾತ್ರೆ ಮೊರೆಯಿಡುವಲ್ಲಿ ಆತನು 7
ಅವರ ವಿಷಯದಲ್ಲಿ ತಡೆಮಾಡಿದಾಗ್ಯೂ ಅವರ ನ್ಯಾಯವನ್ನು ತೀರಿಸದೆ ಇರುವನೇ?
ಅವರಿಗೆ ಬೇಗ ನ್ಯಾಯತೀರಿಸುವನೆಂದು ನಿಮಗೆ ಹೇಳುತ್ತೇನೆ. ಹೀಗಿದ್ದಾಗ್ಯೂ ಮನುಷ್ಯ 8
ಕುಮಾರನು ಬಂದಾಗ ಭೂಮಿಯ ಮೇಲೆ ನಂಬಿಕೆಯನ್ನು ಕಾಣುವನೋ? ಅಂದನು.

ಪ್ರಾರ್ಥನೆಮಾಡುವದಕ್ಕಾಗಿ ದೇವಾಲಯಕ್ಕೆ ಹೋದ ಫರಿಸಾಯನನ್ನೂ ಸುಂಕದವನನ್ನೂ ಕುರಿತದ್ದು.

ಇದಲ್ಲದೆ ತಾವೇ ನೀತಿವಂತರೆಂದು ತಮ್ಮಲ್ಲಿ ಭರವಸವಿಟ್ಟುಕೊಂಡು ಉಳಿದವರನ್ನು 9
ಉದಾಸೀನಮಾಡುವಂಥಾ ಕೆಲವರಿಗೆ ಒಂದು ಸಾಮ್ಯವನ್ನು ಹೇಳಿದನು. ಅದೇನಂದರೆ—

[1] ಕೆಲವು ಪ್ರತಿಗಳಲ್ಲಿ ೩೬ನೇ ವಚನವದೆ. ಅದೇನಂದರೆ—ಹೊಲದಲ್ಲಿ ಇಬ್ಬರಿರುವರು; ಒಬ್ಬನು ತಕ್ಕೊಳ್ಳಲ್ಪಡು
ವನು, ಮತ್ತೊಬ್ಬನು ಬಿಡಲ್ಪಡುವನು ಎಂಬುವದೇ.

10 ಪ್ರಾರ್ಥನೆಮಾಡಬೇಕೆಂದು ಇಬ್ಬರು ಮನುಷ್ಯರು ದೇವಾಲಯಕ್ಕೆ ಹೋದರು;
11 ಒಬ್ಬನು ಫರಿಸಾಯನು, ಒಬ್ಬನು ಸುಂಕದವನು. ಫರಿಸಾಯನು ನಿಂತುಕೊಂಡು
ಪ್ರಾರ್ಥಿಸುವಾಗ ತನ್ನೊಳಗೆ—ದೇವರೇ, ಸುಲುಕೊಳ್ಳುವವರೂ ಅನ್ಯಾಯಗಾರರೂ
ಹಾದರಮಾಡುವವರೂ ಆಗಿರುವ ಉಳಿದ ಜನರಂತೆ ನಾನಲ್ಲ, ಈ ಸುಂಕದವನಂತೆಯೂ
12 ಅಲ್ಲ; ಆದ್ದರಿಂದ ನಿನಗೆ ಸ್ತೋತ್ರಮಾಡುತ್ತೇನೆ. ವಾರಕ್ಕೆ ಎರಡಾವರ್ತಿ ಉಪವಾಸ
ಮಾಡುತ್ತೇನೆ; ನಾನು ಸಂಪಾದಿಸುವ ಎಲ್ಲಾದರಲ್ಲಿಯೂ ಹತ್ತರಲ್ಲೊಂದುಪಾಲು ಕೊಡು
13 ತ್ತೇನೆ ಅಂದುಕೊಂಡನು. ಆದರೆ ಆ ಸುಂಕದವನು ದೂರದಲ್ಲಿ ನಿಂತು, ಆಕಾಶದ ಕಡೆಗೆ
ಕಣ್ಣೆತ್ತಿ ನೋಡುವದಕ್ಕೂ ಮನಸ್ಸಿಲ್ಲದೆ, ಎದೆಯನ್ನು ಬಡುಕೊಳ್ಳುತ್ತಾ—ದೇವರೇ, ಪಾಪಿ
14 ಯಾದ ನನ್ನನ್ನು ಕರುಣಿಸು ಅಂದನು. ಇವನು ನೀತಿವಂತನೆಂದು ನಿರ್ಣಯಿಸಲ್ಪಟ್ಟ
ವನಾಗಿ ತನ್ನ ಮನೆಗೆ ಹೋದನು, ಆ ಫರಿಸಾಯನು ಅಂಥವನಾಗಿ ಹೋಗಲಿಲ್ಲ ಎಂದು
ನಿಮಗೆ ಹೇಳುತ್ತೇನೆ. ತನ್ನನ್ನು ಹೆಚ್ಚಿಸಿಕೊಳ್ಳುವವನು ತಗ್ಗಿಸಲ್ಪಡುವನು; ತನ್ನನ್ನು ತಗ್ಗಿಸಿ
ಕೊಳ್ಳುವವನು ಹೆಚ್ಚಿಸಲ್ಪಡುವನು ಅಂದನು.

### ಯೇಸು ಚಿಕ್ಕ ಮಕ್ಕಳನ್ನು ಆಶೀರ್ವದಿಸಿದ್ದು.

(ಮತ್ತಾಯ **19**, **13—15**; ಮಾರ್ಕ **10**, **13—16**.)

15 ಕೆಲವರು ತಮ್ಮ ಕೂಸುಗಳನ್ನು ಸಹ ಆತನ ಬಳಿಗೆ ತೆಗೆದುಕೊಂಡು ಬಂದು ಆತನು
16 ಅವುಗಳನ್ನು ಮುಟ್ಟಬೇಕೆಂದು ಕೇಳಲು, ಶಿಷ್ಯರು ಕಂಡು ಅವರನ್ನು ಗದರಿಸಿದರು. ಆದರೆ
ಯೇಸು ಆ ಕೂಸುಗಳನ್ನು ತನ್ನ ಬಳಿಗೆ ಕರತರಿಸಿ—ಚಿಕ್ಕ ಮಕ್ಕಳನ್ನು ನನ್ನ ಹತ್ತರಕ್ಕೆ
ಬರಗೊಡಿಸಿರಿ; ಅವುಗಳಿಗೆ ಅಡ್ಡಿಮಾಡಬೇಡಿರಿ; ದೇವರ ರಾಜ್ಯವು ಇಂಥವರದೇ.
17 ಯಾವನು ಶಿಶುಭಾವದಿಂದ ದೇವರ ರಾಜ್ಯವನ್ನು ಅಂಗೀಕರಿಸುವದಿಲ್ಲವೋ ಅವನು ಅದ
ರಲ್ಲಿ ಸೇರುವದೇ ಇಲ್ಲ ಎಂದು ನಿಮಗೆ ಸತ್ಯವಾಗಿ ಹೇಳುತ್ತೇನೆ ಅಂದನು.

### ನಿತ್ಯಜೀವವನ್ನು ಹ್ಯಾಗೆ ಪಡೆಯಬೇಕೆಂದು ಒಬ್ಬ ಐಶ್ವರ್ಯವಂತನು ಕೇಳಿದ್ದಕ್ಕೆ, ಯೇಸು ಹಣದ ಭ್ರಾಂತಿಯಿಂದಾಗುವ ಕೇಡನ್ನು ತೋರಿಸಿದ್ದು.

(ಮತ್ತಾಯ **19**, **16—29**; ಮಾರ್ಕ **10**, **17—30**.)

18 ಒಬ್ಬ ಅಧಿಕಾರಿಯು ಬಂದು—ಒಳ್ಳೇ ಬೋಧಕನೇ, ನಾನು ನಿತ್ಯಜೀವಕ್ಕೆ ಬಾಧ್ಯ
19 ನಾಗುವಂತೆ ಏನು ಮಾಡಬೇಕು ಎಂದು ಆತನನ್ನು ಕೇಳಲಾಗಿ ಯೇಸು ಅವನಿಗೆ—
ನನ್ನನ್ನು ಒಳ್ಳೆಯವನೆಂದು ಯಾಕೆ ಹೇಳುತ್ತೀ? ದೇವರೊಬ್ಬನೇ ಹೊರತು ಮತ್ತ್ಯಾವನೂ
20 ಒಳ್ಳೆಯವನಲ್ಲ. ವ್ಯಭಿಚಾರ ಮಾಡಬಾರದು; ನರಹತ್ಯ ಮಾಡಬಾರದು; ಕದಿಯ
ಬಾರದು; ಸುಳ್ಳುಸಾಕ್ಷಿ ಹೇಳಬಾರದು; ನಿನ್ನ ತಂದೆತಾಯಿಗಳನ್ನು ಸನ್ಮಾನಿಸಬೇಕು
21 ಎಂಬ ದೇವರಾಜ್ಞೆಗಳು ನಿನಗೆ ಗೊತ್ತಿವೆಯಷ್ಟೆ ಎಂದು ಹೇಳಿದನು. ಅದಕ್ಕವನು—
ನಾನು ಚಿಕ್ಕಂದಿನಿಂದಲೂ ಇವೆಲ್ಲಕ್ಕೂ ಸರಿಯಾಗಿ ನಡಕೊಂಡು ಬಂದಿದ್ದೇನೆ ಎಂದು

ಹೇಳಲು, ಯೇಸು ಅದನ್ನು ಕೇಳಿ ಅವನಿಗೆ—ಇನ್ನೂ ನಿನಗೆ ಒಂದು ಕಡಿಮೆಯಾಗಿದೆ; 22
ನಿನ್ನ ಬದುಕನ್ನೆಲ್ಲಾ ಮಾರಿ ಬಡವರಿಗೆ ಹಂಚಿಕೊಡು; ಪರಲೋಕದಲ್ಲಿ ನಿನಗೆ ಸಂಪತ್ತಿ
ರುವದು; ನೀನು ನನ್ನನ್ನು ಹಿಂಬಾಲಿಸು ಎಂದು ಹೇಳಿದನು. ಅವನು ಬಹಳ ಐಶ್ವರ್ಯ 23
ವಂತನಾಗಿದ್ದದರಿಂದ ಆ ಮಾತಿಗೆ ಬಹಳ ವ್ಯಸನಗೊಂಡನು. ಆಗ ಯೇಸು ಅವನನ್ನು 24
ನೋಡಿ—ಐಶ್ವರ್ಯವುಳ್ಳವರು ದೇವರ ರಾಜ್ಯದಲ್ಲಿ ಸೇರುವದು ಎಷ್ಟೋ ಕಷ್ಟ. ಐಶ್ವರ್ಯ 25
ವಂತನು ದೇವರ ರಾಜ್ಯದಲ್ಲಿ ಸೇರುವದಕ್ಕಿಂತ ಒಂಟೆಯು ಸೂಜೀಕಣ್ಣಿನೊಳಗೆ ನುಗ್ಗಿ
ಹೋಗುವದು ಸುಲಭ ಅಂದನು. ಈ ಮಾತನ್ನು ಕೇಳಿದವರು—ಹೀಗಿದ್ದರೆ ಯಾರಿಗೆ 26
ರಕ್ಷಣೆಯಾದೀತು ಎಂದು ಕೇಳಲು, ಆತನು—ಮನುಷ್ಯರಿಗೆ ಅಸಾಧ್ಯವಾದ ಕಾರ್ಯ 27
ಗಳು ದೇವರಿಗೆ ಸಾಧ್ಯವಾಗಿವೆ ಅಂದನು. ಆಗ ಪೇತ್ರನು—ಇಗೋ, ನಾವು ನಮ್ಮ 28
ನಮ್ಮ ಮನೆಮಾರುಗಳನ್ನು ಬಿಟ್ಟು ನಿನ್ನ ಹಿಂದೆ ಬಂದಿದ್ದೇವೆ ಎಂದು ಹೇಳಲು, ಆತನು— 29
ಯಾವನು ದೇವರ ರಾಜ್ಯದ ನಿಮಿತ್ತವಾಗಿ ಮನೆಯನ್ನಾಗಲಿ ಹೆಂಡತಿಯನ್ನಾಗಲಿ
ಅಣ್ಣತಮ್ಮಂದಿರನ್ನಾಗಲಿ ತಂದೆತಾಯಿಗಳನ್ನಾಗಲಿ ಮಕ್ಕಳನ್ನಾಗಲಿ ಬಿಟ್ಟುಬಿಟ್ಟಿರುವನೋ
ಅವನು ಈಗಿನ ಕಾಲದಲ್ಲಿ ಅವೆಲ್ಲಕ್ಕಿಂತಲೂ ಎಷ್ಟೋ ಹೆಚ್ಚಾದವುಗಳನ್ನೂ ಬರುವ 30
ಲೋಕದಲ್ಲಿ ನಿತ್ಯಜೀವವನ್ನೂ ಹೊಂದದೆ ಇರುವದಿಲ್ಲವೆಂದು ನಿಮಗೆ ಸತ್ಯವಾಗಿ ಹೇಳು
ತ್ತೇನೆ ಅಂದನು.

ಯೇಸು ತನ್ನ ಮರಣ ಪುನರುತ್ಥಾನಗಳನ್ನು ಮೂರನೇ ಸಾರಿ ಮುಂತಿಳಿಸಿದ್ದು.

(ಮತ್ತಾಯ 20, 17—19; ಮಾರ್ಕ 10, 32—34.)

ಆತನು ತನ್ನ ಹನ್ನೆರಡು ಮಂದಿ ಶಿಷ್ಯರನ್ನು ಹತ್ತರಕ್ಕೆ ಕರೆದು, ಅವರಿಗೆ—ನೋಡಿರಿ, 31
ನಾವು ಯೆರೂಸಲೇಮಿಗೆ ಹೋಗುತ್ತಾ ಇದ್ದೇವೆ; ಮತ್ತು ಮನುಷ್ಯಕುಮಾರನ ವಿಷ
ಯದಲ್ಲಿ ಪ್ರವಾದಿಗಳು ಬರೆದದ್ದೆಲ್ಲಾ ಅವನಲ್ಲಿ ನೆರವೇರುವದು. ಹ್ಯಾಗಂದರೆ—ಅವನನ್ನು 32
ಅನ್ಯರ ಕೈಗೆ ಒಪ್ಪಿಸುವರು, ಅಪಹಾಸ್ಯ ಮಾಡುವರು, ಬೈಯುವರು, ಉಗುಳುವರು,
ಕೊರಡೆಗಳಿಂದ ಹೊಡೆದು ಕೊಂದುಹಾಕುವರು; ಮತ್ತು ಮೂರನೇ ದಿನದಲ್ಲಿ ಅವನು 33
ಜೀವಿತನಾಗಿ ಎದ್ದು ಬರುವನು ಅಂದನು. ಅವರು ಈ ಸಂಗತಿಗಳಲ್ಲಿ ಒಂದನ್ನಾದರೂ 34
ಗ್ರಹಿಸಲಿಲ್ಲ, ಈ ಮಾತುಗಳು ಅವರಿಗೆ ಮರೆಯಾಗಿದ್ದವು, ಅವುಗಳ ಅರ್ಥ ಅವರಿಗೆ
ಗೊತ್ತಾಗಲಿಲ್ಲ.

ಒಬ್ಬ ಕುರುಡನನ್ನು ಸ್ವಸ್ಥಮಾಡಿದ್ದು.

(ಮತ್ತಾಯ 20, 29—34; ಮಾರ್ಕ 10, 46—52.)

ಆತನು ಯೆರಿಕೋ ಊರಿನ ಸಮೀಪಕ್ಕೆ ಬಂದಾಗ, ದಾರೀಮಗ್ಗುಲಲ್ಲಿ ಕೂತು 35
ಭಿಕ್ಷಬೇಡುತ್ತಿದ್ದ ಒಬ್ಬ ಕುರುಡನು ಗುಂಪಾಗಿ ಹೋಗುತ್ತಿದ್ದ ಜನರ ಶಬ್ದವನ್ನು ಕೇಳಿ, 36
ಇದೇನು ಎಂದು ವಿಚಾರಿಸಿದನು. ಅವರು ಅವನಿಗೆ—ನಜರೇತಿನ ಯೇಸು ಈ ಮಾರ್ಗ 37
ವಾಗಿ ಹೋಗುತ್ತಿದ್ದಾನೆ ಎಂದು ಅವರು ತಿಳಿಸಿದಾಗ, ಅವನು—ಯೇಸುವೇ, ದಾವೀದನ 38

39 ಕುಮಾರನೇ, ನನ್ನನ್ನು ಕರುಣಿಸು ಎಂದು ಕೂಗಿ ಹೇಳಿದನು. ಮುಂದೆ ಹೋಗುತ್ತಿದ್ದವರು ಸುಮ್ಮನಿರು ಎಂದು ಅವನನ್ನು ಗದರಿಸಲು, ಅವನು—ದಾವೀದನ ಕುಮಾರನೇ,
40 ನನ್ನನ್ನು ಕರುಣಿಸು ಎಂದು ಮತ್ತಷ್ಟು ಕೂಗಿಕೊಂಡನು. ಆಗ ಯೇಸು ನಿಂತು ಅವನನ್ನು ತನ್ನ ಬಳಿಗೆ ಕರತರುವದಕ್ಕೆ ಅಪ್ಪಣೆಕೊಟ್ಟನು. ಅವನು ಹತ್ತರಕ್ಕೆ ಬರಲು,
41 ಆತನು ಅವನನ್ನು—ನಾನು ನಿನಗೆ ಏನು ಮಾಡಬೇಕೆಂದು ಕೋರುತ್ತೀ ಎಂದು ಕೇಳಿದನು.
42 ಅವನು—ಸ್ವಾಮೀ, ನನಗೆ ಕಣ್ಣುಬರುವಂತೆ ಮಾಡಬೇಕು ಅಂದನು. ಯೇಸು ಅವನಿಗೆ—ನಿನಗೆ ಕಣ್ಣುಬರಲಿ; ನಿನ್ನ ನಂಬಿಕೆಯೇ ನಿನ್ನನ್ನು ಸ್ವಸ್ಥಮಾಡಿ ಅದೆ ಎಂದು
43 ಹೇಳಿದನು. ಹೇಳಿದ ಕೂಡಲೇ, ಅವನಿಗೆ ಕಣ್ಣುಬಂದವು; ಮತ್ತು ಅವನು ದೇವರನ್ನು ಕೊಂಡಾಡುತ್ತಾ ಆತನ ಹಿಂದೆ ಹೋದನು. ಜನರೆಲ್ಲರು ನಡೆದ ಸಂಗತಿಯನ್ನು ನೋಡಿ ದೇವರನ್ನು ಸ್ತುತಿಸಿದರು.

### ಯೇಸು ಸುಂಕದವನಾದ ಜಕ್ಕಾಯನ ಮನೆಗೆ ಹೋದದ್ದು.

**19** 2 ಆತನು ಯೆರಿಕೋ ಊರನ್ನು ಹೊಕ್ಕು ದಾಟಿಹೋಗುತ್ತಿದ್ದನು. ಅಲ್ಲಿ ಜಕ್ಕಾಯನೆಂಬ ಹೆಸರುಳ್ಳ ಒಬ್ಬ ಮನುಷ್ಯನಿದ್ದನು; ಅವನು ಸುಂಕದ ಗುತ್ತಿಗೆದಾರನು ಮತ್ತು
3 ಐಶ್ವರ್ಯವಂತನು. ಅವನು ಯೇಸು ಎಂಥವನೆಂದು ನೋಡಲಪೇಕ್ಷಿಸಿದಾಗ್ಯೂ ತಾನು
4 ಗಿಡ್ಡನಾದ್ದರಿಂದ ಜನರ ಗುಂಪಿನ ನಿಮಿತ್ತ ನೋಡಲಾರದೆ ಹೋದನು. ಆದಕಾರಣ ಆತನನ್ನು ನೋಡುವದಕ್ಕಾಗಿ ಮುಂದೆ ಓಡಿಹೋಗಿ, ಆತನು ಬರುತ್ತಿರುವ ಮಾರ್ಗದಲ್ಲಿದ್ದ
5 ಆಲದ ಮರವನ್ನು ಹತ್ತಿದನು. ಯೇಸು ಅಲ್ಲಿಗೆ ಬಂದು ಮೇಲಕ್ಕೆ ನೋಡಿ—ಜಕ್ಕಾಯನೇ, ತಟ್ಟನೆ ಇಳಿದು ಬಾ, ನಾನು ಈಹೊತ್ತು ನಿನ್ನ ಮನೆಯಲ್ಲಿ ಇಳುಕೊಳ್ಳಬೇಕು
6 ಎಂದು ಅವನಿಗೆ ಹೇಳಲು, ಅವನು ತಟ್ಟನೆ ಇಳಿದು ಬಂದು ಆತನನ್ನು ಸಂತೋಷದಿಂದ
7 ಸೇರಿಸಿಕೊಂಡನು. ಇದನ್ನು ನೋಡಿದವರೆಲ್ಲರು—ಈತನು ಪಾಪಿಯಾಗಿರುವವನ ಬಳಿ
8 ಯಲ್ಲಿ ಇಳುಕೊಳ್ಳುವದಕ್ಕೆ ಹೋಗಿದ್ದಾನೆ ಎಂದು ಗುಣುಗುಟ್ಟಿದರು. ಆದರೆ ಜಕ್ಕಾಯನು ನಿಂತುಕೊಂಡು ಸ್ವಾಮಿಗೆ—ಸ್ವಾಮೀ, ನೋಡು, ನನ್ನ ಆಸ್ತಿಯಲ್ಲಿ ಅರ್ಧವನ್ನು ಬಡವರಿಗೆ ಕೊಡುತ್ತೇನೆ; ಮತ್ತು ನಾನು ಅನ್ಯಾಯವಾಗಿ ಯಾರಿಂದ ಏನಾದರೂ ಎಳಕೊಂಡದ್ದೇಯಾದರೆ ನಾಲ್ಕರಷ್ಟು ಹಿಂದಕ್ಕೆ ಕೊಡುತ್ತೇನೆ ಎಂದು ಹೇಳಿದನು.
9 ಇದನ್ನು ಕೇಳಿ ಯೇಸು—ಈಹೊತ್ತು ಈ ಮನೆಗೆ ರಕ್ಷಣೆಯಾಯಿತು; ಇವನು ಸಹ
10 ಅಬ್ರಹಾಮನ ವಂಶಿಕನಲ್ಲವೇ. ಮನುಷ್ಯಕುಮಾರನು ಕೆಟ್ಟುಹೋಗಿರುವದನ್ನು ಹುಡುಕಿ ರಕ್ಷಿಸುವದಕ್ಕೆ ಬಂದನು ಎಂದು ಹೇಳಿದನು.

### ಹತ್ತು ಮೊಹರಿಗಳ ವಿಷಯವಾದ ಸಾಮ್ಯ.

(ಮತ್ತಾಯ **25**, 14—30.)

11 ಅವರು ಈ ಮಾತುಗಳನ್ನು ಕೇಳುತ್ತಿರಲಾಗಿ, ಯೇಸು ತಾನು ಯೆರೂಸಲೇಮಿಗೆ ಸಮೀಪವಾಗಿದ್ದದರಿಂದಲೂ ದೇವರ ರಾಜ್ಯವು ಕೂಡಲೇ ಪ್ರತ್ಯಕ್ಷವಾಗುವ ಹಾಗಿದೆ ಎಂದು

ಅವರು ಭಾವಿಸಿದ್ದದರಿಂದಲೂ ಇನ್ನೂ ಒಂದು ಸಾಮ್ಯವನ್ನು ಹೇಳಿದನು. ಅದೇ 12 ನಂದರೆ—ಶ್ರೀಮಂತನಾದ ಒಬ್ಬಾನೊಬ್ಬ ಮನುಷ್ಯನು ತಾನು ರಾಜ್ಯಾಧಿಕಾರವನ್ನು ಪಡೆದುಕೊಂಡು ಹಿಂತಿರುಗಿ ಬರಬೇಕೆಂದು ದೂರ ದೇಶಕ್ಕೆ ಹೊರಟನು. ಹೊರಡು 13 ವಾಗ ತನ್ನ ಆಳುಗಳಲ್ಲಿ ಹತ್ತು ಮಂದಿಯನ್ನು ಕರಸಿ, ಅವರಿಗೆ ಹತ್ತು ಮೊಹರಿಗಳನ್ನು ಕೊಟ್ಟು—ನಾನು ಬರುವ ತನಕ ವ್ಯಾಪಾರಮಾಡಿಕೊಂಡಿರ್ರಿ ಎಂದು ಹೇಳಿಹೋದನು. ಆದರೆ ಅವನ ಪಟ್ಟಣದ ನಿವಾಸಿಗಳು ಅವನನ್ನು ದ್ವೇಷಿಸಿ, ಅವನ ಹಿಂದೆ ರಾಯಭಾರಿಗ 14 ಳನ್ನು ಕಳುಹಿಸಿ, ಇವನು ನಮ್ಮ ಮೇಲೆ ದೊರೆತನ ಮಾಡುವದು ನಮಗೆ ಇಷ್ಟವಿಲ್ಲ ಎಂದು ಹೇಳಿಸಿದರು. ಆ ಮೇಲೆ ಅವನು ರಾಜ್ಯಾಧಿಕಾರವನ್ನು ಪಡಕೊಂಡು ಹಿಂತಿರುಗಿ 15 ಬಂದು, ತಾನು ಹಣವನ್ನು ಕೊಟ್ಟಿದ್ದ ಆಳುಗಳು ವ್ಯಾಪಾರದಿಂದ ಎಷ್ಟೆಷ್ಟು ಲಾಭ ಸಂಪಾದಿಸಿಕೊಂಡಿದ್ದಾರೆಂದು ತಿಳುಕೊಳ್ಳುವದಕ್ಕಾಗಿ ಅವರನ್ನು ತನ್ನ ಬಳಿಗೆ ಕರಿಸಿದನು. ಮೊದ 16 ಲನೆಯವನು ಆತನ ಮುಂದೆ ಬಂದು—ದೊರೆಯೇ, ನೀನು ಕೊಟ್ಟ ಮೊಹರಿಯಿಂದ ಹತ್ತು ಮೊಹರಿಗಳು ಸಂಪಾದನೆಯಾದವು ಅನ್ನಲು, ಅವನು ಅವನಿಗೆ—ಭಲಾ! ನೀನು 17 ಒಳ್ಳೇ ಆಳು; ನೀನು ಸ್ವಲ್ಪವಾದದ್ದರಲ್ಲಿ ನಂಬಿಕೆಯುಳ್ಳವನಾದ್ದರಿಂದ ಹತ್ತು ಗ್ರಾಮಗಳ ಮೇಲೆ ಅಧಿಕಾರಿಯಾಗಿರು ಎಂದು ಹೇಳಿದನು. ಎರಡನೆಯವನು ಬಂದು—ದೊರೆಯೇ, 18 ನೀನು ಕೊಟ್ಟ ಮೊಹರಿಯಿಂದ ಐದು ಮೊಹರಿಗಳು ದೊರಕಿದವು ಅನ್ನಲು, ಅವನು 19 ಇವನಿಗೆ—ನೀನು ಸಹ ಐದು ಗ್ರಾಮಗಳ ಮೇಲಿರು ಎಂದು ಹೇಳಿದನು. ಬಳಿಕ 20 ಮತ್ತೊಬ್ಬನು ಬಂದು—ದೊರೆಯೇ, ಇಗೋ ನೀನು ಕೊಟ್ಟ ಮೊಹರಿ. ನೀನು ಇಡದೆ 21 ಯಿರುವದನ್ನು ಎತ್ತಿಕೊಂಡು ಹೋಗುವ ಬಿತ್ತದೆಯಿರುವದನ್ನು ಕೊಯ್ಯುವ ಕಠಿನ ಮನುಷ್ಯನು ಎಂದು ನಿನಗೆ ಹೆದರಿಕೊಂಡು ಇದನ್ನು ವಸ್ತ್ರದಲ್ಲಿ ಕಟ್ಟಿ ಇಟ್ಟುಕೊಂಡೆನು ಅಂದನು. ಅದಕ್ಕೆ ಅವನು—ನೀನು ಕೆಟ್ಟ ಆಳು, ನಿನ್ನ ಮಾತಿನ ಮೇಲೆಯೇ ನಿನಗೆ 22 ತೀರ್ಪುಮಾಡುತ್ತೇನೆ. ನಾನು ಇಡದೆಯಿರುವದನ್ನು ಎತ್ತಿಕೊಂಡು ಹೋಗುವ ಬಿತ್ತದೆ ಯಿರುವದನ್ನು ಕೊಯ್ಯುವ ಕಠಿನ ಮನುಷ್ಯನು ಎಂದು ನಿನಗೆ ತಿಳಿದಿತ್ತಷ್ಟೆ. ಹಾಗಾ 23 ದರೆ ನೀನು ನನ್ನ ಹಣವನ್ನು ಸಾಹುಕಾರನ ಕೈಯಲ್ಲಿ ಯಾಕೆ ಕೊಡಲಿಲ್ಲ? ಆ ಮೇಲೆ ನಾನು ಬಂದು ಅದನ್ನು ಬಡ್ಡಿ ಸಹಿತ ತೆಗೆದುಕೊಳ್ಳುತ್ತಿದ್ದೆನು ಎಂದು ಹೇಳಿ, ಹತ್ತರ 24 ನಿಂತಿದ್ದವರಿಗೆ—ಆ ಮೊಹರಿಯನ್ನು ಇವನಿಂದ ತೆಗೆದುಕೊಂಡು ಹತ್ತು ಮೊಹರಿಗಳುಳ್ಳವನಿಗೆ ಕೊಡಿರಿ ಎಂದು ಹೇಳಿದನು. ಅವರು—ದೊರೆಯೇ, ಹತ್ತು ಮೊಹರಿಗಳು ಅವನಲ್ಲಿ 25 ಅವೆಯಲ್ಲಾ ಎಂದು ಅವನಿಗೆ ಹೇಳಿದರು. ಅದಕ್ಕವನು—ಯಾವನಿಗಿದೆಯೋ ಅವನಿಗೆ 26 ಕೊಡಲ್ಪಡುವದು, ಯಾವನಿಗಿಲ್ಲವೋ ಅವನಿಗಿದ್ದದ್ದೂ ಅವನ ಕಡೆಯಿಂದ ತೆಗೆಯಲ್ಪಡುವದು ಎಂದು ನಾನು ನಿಮಗೆ ಹೇಳುತ್ತೇನೆ; ಮತ್ತು ತಮ್ಮ ಮೇಲೆ ನಾನು ದೊರೆತನ 27 ಮಾಡುವದು ಇಷ್ಟವಿಲ್ಲವೆಂದು ಹೇಳಿದ ಆ ನನ್ನ ವೈರಿಗಳನ್ನು ಇಲ್ಲಿಗೆ ತಂದು ನನ್ನ ಮುಂದೆ ಸಂಹಾರ ಮಾಡಬೇಕು ಅಂದನು.

### ಯೇಸು ಅರಸನಂತೆ ಯೆರೂಸಲೇಮಿಗೆ ಪ್ರವೇಶಮಾಡಿದ್ದು. ದೇವಾಲಯದಲ್ಲಿದ್ದ ವ್ಯಾಪಾರಸ್ಥರನ್ನು ಹೊರಡಿಸಿದ್ದು.

**(ಮತ್ತಾಯ 21, 1—16; ಮಾರ್ಕ 11, 1—18; ಯೋಹಾನ 12, 12—16.)**

28 ಆತನು ಈ ಮಾತುಗಳನ್ನು ಹೇಳಿದ ಮೇಲೆ ಗಟ್ಟ್ಯಾಹತ್ತಿ ಯೆರೂಸಲೇಮಿಗೆ ಮುಂದೆ ಮುಂದೆ ಹೋದನು.

29 ಆ ಮೇಲೆ ಆತನು ಎಣ್ಣೇಮರಗಳ ತೋಪು ಎನ್ನಿಸಿಕೊಳ್ಳುವ ಗುಡ್ಡದಲ್ಲಿರುವ ಬೇತ್ಫ 30 ಗೆಗೂ ಬೇಥಾನ್ಯಕ್ಕೂ ಸಮಿಾಪಿಸಿದಾಗ ತನ್ನ ಶಿಷ್ಯರಲ್ಲಿ ಇಬ್ಬರನ್ನು ಕರೆದು—ನಿಮ್ಮೆದುರಿಗಿರುವ ಹಳ್ಳಿಗೆ ಹೋಗಿರಿ; ಅದರೊಳಗೆ ಹೋಗುತ್ತಿರುವಾಗಲೇ, ಕಟ್ಟಿರುವ ಒಂದು ಕತ್ತೇಮರಿಯನ್ನು ಕಾಣುವಿರಿ; ಇದು ವರೆಗೆ ಅದರ ಮೇಲೆ ಯಾರೂ ಹತ್ತಿಲ್ಲ; ಅದನ್ನು ಬಿಚ್ಚಿ 31 ಹಿಡುಕೊಂಡು ಬನ್ನಿರಿ. ಯಾಕೆ ಬಿಚ್ಚುತ್ತೀರಿ ಎಂದು ಯಾರಾದರೂ ನಿಮ್ಮನ್ನು ಕೇಳಿದರೆ, 32 ಇದು ಸ್ವಾಮಿಯವರಿಗೆ ಬೇಕಾಗಿದೆ ಅನ್ನಿರಿ ಎಂದು ಹೇಳಿ ಕಳುಹಿಸಿದನು. ಕಳು 33 ಹಿಸಿದವರು ಹೋಗಿ ಆತನು ತಮಗೆ ಹೇಳಿದಂತೆಯೇ ಕಂಡರು. ಅವರು ಆ ಕತ್ತೇಮರಿಯನ್ನು ಬಿಚ್ಚುತ್ತಿರುವಾಗ ಅದರ ಯಜಮಾನರು—ಈ ಕತ್ತೇಮರಿಯನ್ನು ಯಾಕೆ 34 ಬಿಚ್ಚುತ್ತೀರಿ ಎಂದು ಅವರನ್ನು ಕೇಳಲು, ಅವರು—ಇದು ಸ್ವಾಮಿಯವರಿಗೆ ಬೇಕಾಗಿದೆ 35 ಎಂದು ಹೇಳಿದರು. ತರುವಾಯ ಅದನ್ನು ಹಿಡುಕೊಂಡು ಯೇಸುವಿನ ಬಳಿಗೆ ತಂದು ತಮ್ಮ ಬಟ್ಟೆಗಳನ್ನು ಆ ಕತ್ತೇಮರಿಯ ಮೇಲೆ ಹಾಕಿ ಯೇಸುವನ್ನು ಕುಂಡ್ರಿಸಿದರು. 36 ಆತನು ಹೋಗುತ್ತಿರುವಾಗ ಅವರು ತಮ್ಮ ಬಟ್ಟೆಗಳನ್ನು ದಾರಿಯಲ್ಲಿ ಹಾಸಿದರು. 37 ಆತನು ಪಟ್ಟಣವನ್ನು ಸಮಿಾಪಿಸಿ ಎಣ್ಣೇಮರಗಳ ಗುಡ್ಡದಿಂದ ಇಳಿಯುವ ಸ್ಥಳಕ್ಕೆ ಬಂದಾಗ ಶಿಷ್ಯಮಂಡಲಿಯವರೆಲ್ಲಾ ಸಂತೋಷಪಡುತ್ತಾ ತಾವು ಕಂಡಿದ್ದ ಎಲ್ಲಾ ಮಹತ್ಕಾರ್ಯಗಳ ವಿಷಯದಲ್ಲಿ—

38 ಕರ್ತನ ಹೆಸರಿನಲ್ಲಿ ಬರುವ ಅರಸನಿಗೆ ಶುಭವಾಗಲಿ;
ಪರಲೋಕದಲ್ಲಿ ಮಂಗಳ,
ಮೇಲಣಲೋಕಗಳಲ್ಲಿ ಮಹಿಮೆ

39 ಎಂದು ಮಹಾ ಶಬ್ದದಿಂದ ದೇವರನ್ನು ಕೊಂಡಾಡುವದಕ್ಕೆ ತೊಡಗಿದರು. ಜನರ ಗುಂಪಿನೊಳಗಿದ್ದ ಫರಿಸಾಯರಲ್ಲಿ ಕೆಲವರು ಆತನಿಗೆ—ಬೋಧಕನೇ, ನಿನ್ನ ಶಿಷ್ಯರನ್ನು ಗದರಿಸು 40 ಎಂದು ಹೇಳಿದ್ದಕ್ಕೆ ಆತನು—ಇವರು ಸುಮ್ಮನಾದರೆ ಈ ಕಲ್ಲುಗಳೇ ಕೂಗುವವು ಎಂದು ನಿಮಗೆ ಹೇಳುತ್ತೇನೆ ಅಂದನು.

41 ತರುವಾಯ ಆತನು ಸಮಿಾಪಕ್ಕೆ ಬಂದಾಗ, ಪಟ್ಟಣವನ್ನು ನೋಡಿ, ಅದರ ವಿಷಯ 42 ವಾಗಿ ಅತ್ತು—ನೀನಾದರೂ ಸಮಾಧಾನಕ್ಕೆ[1] ಬೇಕಾದದ್ದನ್ನು ಇದೇ ದಿನದಲ್ಲಿ ತಿಳಿದುಕೊಂಡರೆ ಎಷ್ಟೋ ಒಳ್ಳೇದು. ಆದರೆ ಈಗ ಅದು ನಿನ್ನ ಕಣ್ಣಿಗೆ ಮರೆಯಾಗಿದೆ.

---

[1] ಅಥವಾ, ಸುಕ್ಷೇಮಕ್ಕೆ.

ದೇವರು ನಿನಗೆ ದರ್ಶನಕೊಟ್ಟ ಸಮಯವನ್ನು ನೀನು ತಿಳುಕೊಳ್ಳಲಿಲ್ಲವಾದ್ದರಿಂದ, ನಿನ್ನ 43-44 ವೈರಿಗಳು ಒಡ್ಡುಕಟ್ಟಿ, ನಿನ್ನ ಸುತ್ತಲೂ ಮುತ್ತಿಗೆ ಹಾಕಿ, ಎಲ್ಲಾ ಕಡೆಗಳಲ್ಲಿಯೂ ನಿನ್ನನ್ನು ಬಂದುಮಾಡಿ, ನಿನ್ನನ್ನೂ ನಿನ್ನೊಳಗಿರುವ ನಿನ್ನ ಜನರನ್ನೂ ನಿರ್ಮೂಲಮಾಡಿ ನಿನ್ನಲ್ಲಿ ಕಲ್ಲಿನ ಮೇಲೆ ಕಲ್ಲು ನಿಲ್ಲದಂತೆ ಮಾಡುವ ದಿವಸಗಳು ನಿನ್ನ ಮೇಲೆ ಬರುವವು ಅಂದನು.

ಬಳಿಕ ಆತನು ದೇವಾಲಯಕ್ಕೆ ಹೋಗಿ, ಮಾರುವವರನ್ನು ಹೊರಗೆ ಅಟ್ಟುವದಕ್ಕೆ 45 ಪ್ರಾರಂಭಿಸಿ ಅವರಿಗೆ—ನನ್ನ ಮನೆಯು ಪ್ರಾರ್ಥನೆಯ ಮನೆಯಾಗಿರಬೇಕು ಎಂದು[1] ಬರೆದ 46 ದೆಯಲ್ಲಾ; ಆದರೆ ನೀವು ಅದನ್ನು ಕಳ್ಳರ ಗವಿ ಮಾಡಿದ್ದೀರಿ[2] ಎಂದು ಅವರಿಗೆ ಹೇಳಿದನು.

ಮತ್ತು ಆತನು ದಿನಾಲು ದೇವಾಲಯದಲ್ಲಿ ಉಪದೇಶಮಾಡುತ್ತಿದ್ದನು. ಅಷ್ಟರಲ್ಲಿ 47 ಮಹಾಯಾಜಕರೂ ಶಾಸ್ತ್ರಿಗಳೂ ಪ್ರಜೆಗಳಲ್ಲಿ ಮುಖ್ಯಸ್ಥರೂ ಆತನನ್ನು ಕೊಲ್ಲುವದಕ್ಕೆ ಸಮಯ ನೋಡುತ್ತಿದ್ದರು. ಆದರೆ ಜನರೆಲ್ಲರು ಆತನನ್ನು ಅಂಟಿಕೊಂಡು ಉಪದೇಶ 48 ವನ್ನು ಗಮನಿಸಿ ಕೇಳುತ್ತಿದ್ದದರಿಂದ ಏನು ಮಾಡಬೇಕೋ ತೋರಲಿಲ್ಲ.

ಶಾಸ್ತ್ರಿಗಳು ಯೇಸುವಿನ ಅಧಿಕಾರವನ್ನು ವಿಚಾರಿಸಿದಾಗ, ಆತನು ತಕ್ಕ ಉತ್ತರಕೊಟ್ಟು ಅವರು ಮಾಡಿದ ದೇವದ್ರೋಹವನ್ನು ಸಾಮ್ಯಗಳಿಂದ ಸೂಚಿಸಿದ್ದು.

(ಮತ್ತಾಯ 21, 23—46; ಮಾರ್ಕ 11, 27—12, 12.)

ಆ ದಿವಸಗಳೊಳಗೆ ಒಂದು ದಿನ ಆತನು ದೇವಾಲಯದಲ್ಲಿ ಜನರಿಗೆ ಉಪದೇಶ **20** ಮಾಡುತ್ತಾ ಸುವಾರ್ತೆಯನ್ನು ಸಾರುತ್ತಾ ಇರುವಾಗ, ಮಹಾಯಾಜಕರೂ ಶಾಸ್ತ್ರಿಗಳೂ ಸಭೆಯ ಹಿರಿಯರನ್ನು ಕೂಡಿಕೊಂಡು ಫಕ್ಕನೆ ಬಂದು—ನೀನು ಇದನ್ನೆಲ್ಲಾ ಯಾವ 2 ಅಧಿಕಾರದಿಂದ ಮಾಡುತ್ತೀ? ಈ ಅಧಿಕಾರವನ್ನು ನಿನಗೆ ಕೊಟ್ಟವನ್ಯಾರು, ನಮಗೆ ಹೇಳು ಎಂದು ಆತನನ್ನು ಕೇಳಿದ್ದಕ್ಕೆ ಆತನು—ನಾನು ಸಹ ನಿಮ್ಮನ್ನು ಒಂದು ಮಾತು 3 ಕೇಳುತ್ತೇನೆ, ನನಗೆ ಉತ್ತರ ಹೇಳಿರಿ. ದೀಕ್ಷಾಸ್ನಾನ ಮಾಡಿಸುವ ಅಧಿಕಾರವು ಯೋ 4 ಹಾನನಿಗೆ ಪರಲೋಕದಿಂದ ಬಂತೋ ಮನುಷ್ಯರಿಂದ ಬಂತೋ ಎಂದು ಅವರನ್ನು ಕೇಳಿ ದನು. ಆಗ ಅವರು—ಪರಲೋಕದಿಂದ ಬಂತೆಂದು ನಾವು ಹೇಳಿದರೆ, ನೀವು ಅವನನ್ನು 5 ಯಾಕೆ ನಂಬಲಿಲ್ಲ ಅಂದಾನು; ಮನುಷ್ಯರಿಂದ ಬಂತೆಂದು ಹೇಳಿದರೆ, ಜನರೆಲ್ಲರೂ ಯೋ 6 ಹಾನನನ್ನು ಪ್ರವಾದಿಯೆಂದು ನಂಬಿರುವದರಿಂದ ಅವರು ನಮ್ಮನ್ನು ಕಲ್ಲೆಸೆದು ಕೊಂದಾರು ಎಂದು ತಮ್ಮತಮ್ಮೊಳಗೆ ಮಾತಾಡಿಕೊಂಡು, ಅದು ಎಲ್ಲಿಂದ ಬಂತೋ ನಾವರಿಯೆವು 7 ಎಂದು ಉತ್ತರಕೊಟ್ಟರು. ಆಗ ಯೇಸು ಅವರಿಗೆ—ಇದನ್ನೆಲ್ಲಾ ಯಾವ ಅಧಿಕಾರ 8 ದಿಂದ ಮಾಡುತ್ತೇನೋ ಅದನ್ನು ನಾನೂ ನಿಮಗೆ ಹೇಳುವದಿಲ್ಲ ಎಂದು ಹೇಳಿದನು.

ಆಗ ಆತನು ಜನರಿಗೆ ಒಂದು ಸಾಮ್ಯವನ್ನು ಹೇಳುವದಕ್ಕೆ ತೊಡಗಿದನು. ಅದೇ 9 ನಂದರೆ—ಒಬ್ಬ ಮನುಷ್ಯನು ಒಂದು ದ್ರಾಕ್ಷೇತೋಟವನ್ನು ಮಾಡಿ, ಅದನ್ನು ಒಕ್ಕಲಿ ಗರಿಗೆ ವಾರಕ್ಕೆ ಕೊಟ್ಟು, ಬೇರೊಂದು ದೇಶಕ್ಕೆ ಹೋಗಿ, ಅಲ್ಲಿ ಬಹುಕಾಲ ಇದ್ದನು. ಫಲಕಾಲ ಬಂದಾಗ, ದ್ರಾಕ್ಷೇತೋಟದ ಹುಟ್ಟುವಳಿಯ ಪಾಲನ್ನು ಕೇಳುವದಕ್ಕಾಗಿ 10

[1] ಯೆಶಾಯ ೫೬, ೭. [2] ಯೆರೆಮೀಯ ೭, ೧೧.

ಒಬ್ಬ ಆಳನ್ನು ಒಕ್ಕಲಿಗರ ಬಳಿಗೆ ಕಳುಹಿಸಿದನು. ಆದರೆ ಆ ಒಕ್ಕಲಿಗರು ಅವನನ್ನು
11 ಹೊಡೆದು ಬರಿಗೈಲಿ ಕಳುಹಿಸಿಬಿಟ್ಟರು. ಆ ಧಣಿಯು ಇನ್ನೊಬ್ಬ ಆಳನ್ನು ಕಳುಹಿಸ
ಲಾಗಿ ಅವರು ಅವನನ್ನೂ ಹೊಡೆದು ಅವಮಾನಪಡಿಸಿ ಬರಿಗೈಲಿ ಕಳುಹಿಸಿಬಿಟ್ಟರು.
12 ಆ ಮೇಲೆ ಮೂರನೆಯವನನ್ನೂ ಕಳುಹಿಸಲು, ಅವರು ಅವನನ್ನೂ ಗಾಯವಾಗುವಷ್ಟು
13 ಹೊಡೆದು ಹೊರಕ್ಕೆ ಅಟ್ಟಿದರು. ಆಗ ಆ ದ್ರಾಕ್ಷೇತೋಟದ ಧಣಿಯು—ನಾನೇನು
ಮಾಡಲಿ? ಪ್ರಿಯನಾಗಿರುವ ನನ್ನ ಮಗನನ್ನು ಕಳುಹಿಸುತ್ತೇನೆ, ಒಂದು ವೇಳೆ ಅವ
14 ನಿಗಾದರೂ ಮರ್ಯಾದೆ ತೋರಿಸ್ಯಾರು ಅಂದುಕೊಂಡು ಕಳುಹಿಸಿದನು. ಆದರೆ
ಆ ಒಕ್ಕಲಿಗರು ಅವನನ್ನು ಕಂಡು—ಇವನೇ ಬಾಧ್ಯಸ್ಥನು; ಇವನನ್ನು ಕೊಂದು
ಹಾಕೋಣ, ಇವನ ಸ್ವಾಸ್ಥ್ಯ ನಮ್ಮದಾಗಲಿ ಎಂದು ತಮ್ಮತಮ್ಮೊಳಗೆ ಮಾತಾಡಿಕೊಂಡು,
15 ಅವನನ್ನು ದ್ರಾಕ್ಷೇತೋಟದ ಹೊರಕ್ಕೆ ಅಟ್ಟಿಕೊಂಡುಹೋಗಿ ಕೊಂದುಹಾಕಿದರು.
16 ಹಾಗಾದರೆ ದ್ರಾಕ್ಷೇತೋಟದ ಧಣಿಯು ಅವರಿಗೆ ಏನು ಮಾಡುವನು? ಅವನು ಬಂದು
ಆ ಒಕ್ಕಲಿಗರನ್ನು ಸಂಹಾರಮಾಡಿ ಆ ದ್ರಾಕ್ಷೇತೋಟವನ್ನು ಬೇರೊಬ್ಬರಿಗೆ ಕೊಡುವನು
17 ಅಂದನು. ಇದನ್ನು ಜನರು ಕೇಳಿ—ಹಾಗಾಗಬಾರದು ಅಂದರು. ಆದರೆ ಆತನು
ಅವರನ್ನು ದೃಷ್ಟಿಸಿ ನೋಡಿ—ಹಾಗಾದರೆ

ಮನೇ ಕಟ್ಟುವವರು ಬೇಡವೆಂದು ಬಿಟ್ಟ ಕಲ್ಲೇ
ಮುಖ್ಯವಾದ ಮೂಲೇಗಲ್ಲಾಯಿತು[1]

18 ಎಂದು ಬರೆದಿರುವ ಮಾತೇನು? ಈ ಕಲ್ಲಿನ ಮೇಲೆ ಬೀಳುವ ಪ್ರತಿಯೊಬ್ಬನು ತುಂಡು
ತುಂಡಾಗುವನು; ಇದು ಯಾರ ಮೇಲೆ ಬೀಳುವದೋ ಅವನನ್ನು ಪುಡಿಪುಡಿ ಮಾಡು
ವದು ಅಂದನು.

19 ಶಾಸ್ತ್ರಿಗಳೂ ಮಹಾಯಾಜಕರೂ ಈ ಮಾತುಗಳನ್ನು ಕೇಳಿ, ತಮ್ಮನ್ನೇ ಕುರಿತು
ಈ ಸಾಮ್ಯವನ್ನು ಹೇಳಿದನೆಂದು ತಿಳಿದು, ಅದೇ ಗಳಿಗೆಯಲ್ಲಿ ಆತನನ್ನು ಹಿಡಿಯಬೇಕೆಂದು
ನೋಡಿದರು; ಆದರೆ ಜನರಿಗೆ ಹೆದರಿಕೊಂಡು ಬಿಟ್ಟರು.

ವಿರೋಧಿಗಳು ಯೇಸುವನ್ನು ಮಾತಿನಲ್ಲಿ ಸಿಕ್ಕಿಸುವದಕ್ಕೆ ಪ್ರಯತ್ನಮಾಡಿ ಸೋತುಹೋದದ್ದು.

(ಮತ್ತಾಯ **22**, **15—23**, **7**; ಮಾರ್ಕ **12**, **13—39**.)

20 ಅವರು ಯೇಸುವನ್ನು ಅಧಿಪತಿಯ ವಶಕ್ಕೂ ಅಧಿಕಾರಕ್ಕೂ ಒಪ್ಪಿಸಬೇಕೆಂದು
ಹೊಂಚಿನೋಡುವವರಾಗಿ, ನೀತಿವಂತರಂತೆ ನಟಿಸುತ್ತಿರುವ ಗೂಢಚಾರರನ್ನು ಮಾತಿನಲ್ಲಿ
21 ಆತನನ್ನು ಸಿಕ್ಕಿಸಿಕೊಳ್ಳುವದಕ್ಕೆ ಆತನ ಬಳಿಗೆ ಕಳುಹಿಸಿದರು. ಇವರು ಬಂದು—
ಬೋಧಕನೇ, ನೀನು ಸರಿಯಾಗಿ ಮಾತಾಡುತ್ತಾ ಉಪದೇಶಮಾಡುತ್ತೀ, ನೀನು
ಮುಖದಾಕ್ಷಿಣ್ಯವಿಲ್ಲದೆ ದೇವರ ಮಾರ್ಗವನ್ನು ಸತ್ಯವಾಗಿ ಬೋಧಿಸುತ್ತೀ ಎಂದು ನಾವು
22 ಬಲ್ಲೆವು. ನಾವು ಕೈಸರನಿಗೆ[2] ತೆರಿಗೆ ಕೊಡುವದು ಸರಿಯೋ? ಸರಿಯಲ್ಲವೋ ಎಂದು
23,24 ಆತನನ್ನು ಕೇಳಿದರು. ಆತನು ಅವರ ಕುಯುಕ್ತಿಯನ್ನು ತಿಳಿದು ಅವರಿಗೆ—ನನಗೆ

[1] ಕೀರ್ತನೆ ೧೧೮, ೨೨. [2] ಅಂದರೆ, ರೋಮ್‌ಸಾಮ್ರಾಜ್ಯದ ಚಕ್ರವರ್ತಿಗೆ.

ಒಂದು ಹಣವನ್ನು ತೋರಿಸಿರಿ. ಇದರಲ್ಲಿ ಯಾರ ತಲೆಯೂ ಮುದ್ರೆಯೂ ಅದೆ?
ಎಂದು ಹೇಳಲು, ಅವರು—ಕೈಸರನದು ಅಂದರು. ಆತನು ಅವರಿಗೆ—ಹಾಗಾದರೆ 25
ಕೈಸರನದನ್ನು ಕೈಸರನಿಗೆ ಕೊಡಿರಿ, ದೇವರದನ್ನು ದೇವರಿಗೆ ಕೊಡಿರಿ ಎಂದು ಹೇಳಿದನು.
ಆತನ ಮಾತಿನಲ್ಲಿ ಅವರು ಜನರ ಮುಂದೆ ಏನೂ ಹಿಡಿಯಲಾರದೆ, ಆತನು ಕೊಟ್ಟ 26
ಉತ್ತರಕ್ಕೆ ಆಶ್ಚರ್ಯಪಟ್ಟು ಸುಮ್ಮಗಾದರು.

ತರುವಾಯ ಪುನರುತ್ಥಾನವಿಲ್ಲವೆಂದು[1] ಹೇಳುವವರಾದ ಸದ್ದುಕಾಯರಲ್ಲಿ ಕೆಲವರು 27
ಬಂದು ಆತನಿಗೆ ಪ್ರಶ್ನೆಮಾಡಿದ್ದೇನಂದರೆ—ಬೋಧಕನೇ, ಅಣ್ಣನಾದವನು ಹೆಂಡತಿಯುಳ್ಳ 28
ವನಾಗಿದ್ದು ಮಕ್ಕಳಿಲ್ಲದೆ ಸತ್ತರೆ, ಅವನ ತಮ್ಮನು ಆಕೆಯನ್ನು ಮದುವೆಮಾಡಿಕೊಂಡು
ತನ್ನ ಅಣ್ಣನಿಗೆ ಸಂತಾನವನ್ನು ಪಡೆಯಬೇಕೆಂದು ಮೋಶೆಯು ನಮಗೆ ಬರೆದಿಟ್ಟನಷ್ಟೆ[2].
ಒಳ್ಳೇದು, ಏಳು ಮಂದಿ ಅಣ್ಣತಮ್ಮಂದಿರಿದ್ದರು. ಮೊದಲನೆಯವನು ಹೆಂಡತಿಯನ್ನು 29
ಮಾಡಿಕೊಂಡು ಮಕ್ಕಳಿಲ್ಲದೆ ಸತ್ತನು. ಎರಡನೆಯವನೂ ಆಕೆಯನ್ನು ಮದುವೆ 30
ಮಾಡಿಕೊಂಡನು. ಮೂರನೆಯವನೂ ಆಕೆಯನ್ನು ಮಾಡಿಕೊಂಡನು. ಇದೇ ರೀತಿ 31
ಯಾಗಿ ಏಳುಮಂದಿಯೂ ಮಾಡಿಕೊಂಡು ಮಕ್ಕಳನ್ನು ಪಡೆಯದೆ ಸತ್ತರು. ಕಡೆಗೆ 32
ಆ ಸ್ತ್ರೀಯೂ ಸತ್ತಳು. ಹಾಗಾದರೆ ಪುನರುತ್ಥಾನದಲ್ಲಿ ಆಕೆಯು ಅವರೊಳಗೆ ಯಾರ 33
ಹೆಂಡತಿಯಾಗಿರುವಳು? ಆಕೆಯನ್ನು ಏಳು ಮಂದಿಯೂ ಮಾಡಿಕೊಂಡಿದ್ದರಲ್ಲಾ ಅಂದರು.
ಯೇಸು ಅವರಿಗೆ—ಈ ಲೋಕದ ಜನರು ಮದುವೆಮಾಡಿಕೊಳ್ಳುತ್ತಾರೆ, ಮದುವೆಮಾಡಿ 34
ಕೊಡುತ್ತಾರೆ; ಆದರೆ ಆ ಲೋಕವನ್ನೂ ಸತ್ತವರಿಗುಂಟಾಗುವ ಪುನರುತ್ಥಾನವನ್ನೂ 35
ಪಡೆಯುವದಕ್ಕೆ ಯೋಗ್ಯರನ್ನಿಸಿಕೊಂಡಿರುವವರು ಮದುವೆಮಾಡಿಕೊಳ್ಳುವದೂ ಇಲ್ಲ,
ಮದುವೆಮಾಡಿಕೊಡುವದೂ ಇಲ್ಲ. ಅವರು ಇನ್ನೂ ಸಾಯುವದೇ ಇಲ್ಲ. ಅವರು 36
ಪುನರುತ್ಥಾನವನ್ನು ಹೊಂದಿದವರಾಗಿದ್ದು ದೇವದೂತರಿಗೆ ಸರಿಸಮಾನರೂ ದೇವರ
ಮಕ್ಕಳೂ ಆಗಿದ್ದಾರೆ. ಸತ್ತವರು ಬದುಕಿ ಏಳುತ್ತಾರೆಂಬುವದನ್ನು ಮೋಶೆಯಾದರೂ 37
ಸೂಚಿಸಿದ್ದಾನೆ. ಅವನು ಪೊದೆಯ ಸಂಗತಿ ಇರುವ ಅಧ್ಯಾಯದಲ್ಲಿ ಕರ್ತನನ್ನು ಅಬ್ರ
ಹಾಮನ ದೇವರೂ ಇಸಾಕನ ದೇವರೂ ಯಾಕೋಬನ ದೇವರೂ ಎಂದು[3] ಹೇಳಿ
ದ್ದಾನೆ. ದೇವರು ಜೀವಿತರಿಗೆ ದೇವರಾಗಿದ್ದಾನೆ ಹೊರತು ಜೀವವಿಲ್ಲದವರಿಗೆ ದೇವರಲ್ಲ. 38
ಆತನಿಗೆ ಎಲ್ಲರೂ ಜೀವಿಸುವವರೇ ಅಂದನು. ಶಾಸ್ತ್ರಿಗಳಲ್ಲಿ ಕೆಲವರು—ಬೋಧಕನೇ, 39
ಚನ್ನಾಗಿ ಹೇಳಿದಿ ಅಂದರು. ಆತನನ್ನು ಇನ್ನೇನು ಕೇಳುವದಕ್ಕೂ ಅವರಿಗೆ ಧೈರ್ಯ 40
ವಿಲ್ಲದೆ ಹೋಯಿತು.

ಆಗ ಆತನು ಅವರಿಗೆ ಒಂದು ಪ್ರಶ್ನೆಮಾಡಿದನು. ಅದೇನಂದರೆ—ಬರಬೇಕಾದ 41
ಕ್ರಿಸ್ತನು ದಾವೀದನ ಮಗನೆಂದು ಹೇಳುತ್ತಾರಲ್ಲಾ, ಅದು ಹ್ಯಾಗಾದೀತು?

ನಾನು ನಿನ್ನ ವಿರೋಧಿಗಳನ್ನು ನಿನ್ನ ಪಾದಪೀಠ ಮಾಡುವ ತನಕ 42-43
ನನ್ನ ಬಲಗಡೆಯಲ್ಲಿ ಕೂತುಕೊಂಡಿರು ಎಂದು
ಕರ್ತನು ನನ್ನ ಒಡೆಯನಿಗೆ ನುಡಿದನು

---

[1] ಪುನರುತ್ಥಾನವೆಂದರೆ, ಸತ್ತವರು ತಿರಿಗಿ ಜೀವಿತರಾಗಿ ಬರುವದು. [2] ದ್ವಿತೀಯ ನ್ಯಾಯ ೨೫, ೫.
[3] ಹೊರಡೋಣ ೩, ೬.

44 ಎಂಬದಾಗಿ ಕೀರ್ತನಾಗ್ರಂಥದಲ್ಲಿ ದಾವೀದನೇ ಹೇಳಿರುತ್ತಾನಷ್ಟೆ. ದಾವೀದನೇ ಆತನನ್ನು ಒಡೆಯನೆಂದು ಹೇಳಿದ ಮೇಲೆ, ಅವನಿಗೆ ಆತನು ಮಗನಾಗುವದು ಹ್ಯಾಗೆ ಎಂದು ಕೇಳಿದನು.

45,46 ಜನರೆಲ್ಲರು ಕೇಳುತ್ತಿರುವಲ್ಲಿ ಆತನು ತನ್ನ ಶಿಷ್ಯರಿಗೆ ಹೇಳಿದ್ದೇನಂದರೆ—ಶಾಸ್ತ್ರಿಗಳ ವಿಷಯದಲ್ಲಿ ಎಚ್ಚರಿಕೆಯಾಗಿರ್ರಿ. ಅವರು ನಿಲುವಂಗಿಗಳನ್ನು ತೊಟ್ಟುಕೊಂಡು ತಿರುಗಾಡುವದರಲ್ಲಿ ಮನಸ್ಸುಳ್ಳವರೂ, ಅಂಗಡಿಬೀದಿಗಳಲ್ಲಿ ನಮಸ್ಕಾರ, ಸಭಾಮಂದಿರಗಳಲ್ಲಿ ಮುಖ್ಯ ಪೀಠ, ಔತಣಪ್ರಸ್ತಗಳಲ್ಲಿ ಮೇಲ್ಪಂಙ್ತಿ, ಇವುಗಳ ಮೇಲೆ ಇಷ್ಟವುಳ್ಳವರೂ

47 ಆಗಿದ್ದಾರೆ. ಅವರು ವಿಧವೆಯರ ಮನೆಗಳನ್ನು ನುಂಗಿ ನಟನೆಗಾಗಿ ದೇವರಿಗೆ ಉದ್ದವಾದ ಪ್ರಾರ್ಥನೆಗಳನ್ನು ಮಾಡುತ್ತಾರೆ; ಇಂಥವರು ಹೆಚ್ಚಾದ ದಂಡನೆಯನ್ನು ಹೊಂದುವರು ಅಂದನು.

### ದೇವರಿಗೆ ಕಾಣಿಕೆಕೊಡುವವರ ತಾರತಮ್ಯವನ್ನು ಕುರಿತು ಮಾತಾಡಿದ್ದು.

(ಮಾರ್ಕ 12, 41—44.)

**21** ಯೇಸು ತಲೆಯೆತ್ತಿ ನೋಡಿ ಐಶ್ವರ್ಯವಂತರು ಕಾಣಿಕೆಗಳನ್ನು ಬೊಕ್ಕಸದಲ್ಲಿ ಹಾಕು

2 ವದನ್ನು ಕಂಡನು. ಆಗ ಒಬ್ಬ ಬಡ ವಿಧವೆ ಬಂದು ಎರಡುಕಾಸುಗಳನ್ನು ಹಾಕಲು

3 ಆತನು ಅದನ್ನು ನೋಡಿ—ಈ ಬಡ ವಿಧವೆ ಎಲ್ಲರಿಗಿಂತಲೂ ಹೆಚ್ಚು ಹಾಕಿದ್ದಾಳೆ ಎಂದು

4 ನಿಮಗೆ ಸತ್ಯವಾಗಿ ಹೇಳುತ್ತೇನೆ. ಅವರೆಲ್ಲರು ತಮಗೆ ಸಾಕಾಗಿ ಮಿಕ್ಕದ್ದರಲ್ಲಿ ಕಾಣಿಕೆ ಕೊಟ್ಟರು; ಈಕೆಯೋ ಬಡತನದಲ್ಲಿಯೂ ತನಗಿದ್ದ ಜೀವನವನ್ನೆಲ್ಲಾ ಕಾಣಿಕೆಯಾಗಿ ಕೊಟ್ಟುಬಿಟ್ಟಳು ಅಂದನು.

### ಯೇಸು ಯೆರೂಸಲೇಮಿನ ನಾಶವನ್ನು ಮುಂದಾಗಿ ತಿಳಿಸಿದ್ದು.

(ಮತ್ತಾಯ 24, 1—44; ಮಾರ್ಕ 13, 1—37.)

5 ಕೆಲವರು ದೇವಾಲಯದ ವಿಷಯದಲ್ಲಿ ಅದು ಅಂದವಾದ ಕಲ್ಲುಗಳಿಂದಲೂ ಹರ

6 ಕೆಯ ಒಡವೆಗಳಿಂದಲೂ ಅಲಂಕಾರವಾಗಿದೆ ಎಂದು ಹೇಳುತ್ತಿರುವಾಗ, ಆತನು—ನೀವು ಇವುಗಳನ್ನು ನೋಡುತ್ತೀರಲ್ಲಾ, ಇಲ್ಲಿ ಕಲ್ಲಿನ ಮೇಲೆ ಕಲ್ಲು ನಿಲ್ಲದೆ ಎಲ್ಲಾ ಕೆಡವಲ್ಪ

7 ಡುವ ದಿವಸಗಳು ಬರುವವು ಅಂದನು. ಅವರು—ಬೋಧಕನೇ, ಅದು ಯಾವಾಗ ಆಗುವದು? ಅದು ಸಂಭವಿಸುವದಕ್ಕೆ ಮುಂಚೆ ಯಾವ ಸೂಚನೆ ತೋರುವದು ಎಂದು

8 ಆತನನ್ನು ಕೇಳಲು, ಆತನು ಹೇಳಿದ್ದೇನಂದರೆ—ನೀವು ಮೋಸಹೋಗದಂತೆ ನೋಡಿಕೊಳ್ಳಿರಿ. ಅನೇಕರು ಬಂದು ನನ್ನ ಹೆಸರನ್ನು ಎತ್ತಿಕೊಂಡು, ನಾನು ಕ್ರಿಸ್ತನು ನಾನು ಕ್ರಿಸ್ತನು ಎಂತಲೂ, ಆ ಕಾಲ ಹತ್ತರವಾಯಿತು ಎಂತಲೂ ಹೇಳುವರು; ಅವರ ಹಿಂದೆ

9 ಹೋಗಬೇಡಿರಿ. ಇದಲ್ಲದೆ ಯುದ್ಧಗಳೂ ಗಲಿಬಿಲಿಗಳೂ ನಡೆಯುವದನ್ನು ಕೇಳುವಾಗ ನೀವು ದಿಗಿಲುಪಡಬೇಡಿರಿ; ಇದೆಲ್ಲಾ ಮೊದಲು ಆಗುವದು ಅಗತ್ಯ; ಆದಾಗ್ಯೂ ಕೂಡಲೇ ಅಂತ್ಯ ಬರುವದಿಲ್ಲ ಅಂದನು.

ಆಗ ಆತನು ಅವರಿಗೆ ಹೇಳಿದ್ದೇನಂದರೆ—ಜನಕ್ಕೆ ವಿರೋಧವಾಗಿ ಜನವೂ ರಾಜ್ಯಕ್ಕೆ 10
ವಿರೋಧವಾಗಿ ರಾಜ್ಯವೂ ಏಳುವವು; ಮತ್ತು ಮಹಾ ಭೂಕಂಪಗಳಾಗುವವು; ಅಲ್ಲಲ್ಲಿ 11
ಬರಗಳೂ ಉಪದ್ರಗಳೂ ಬರುವವು; ಉತ್ಪಾತಗಳೂ ಆಕಾಶದಲ್ಲಿ ಮಹಾ ಸೂಚನೆಗಳೂ
ತೋರುವವು. ಆದರೆ ಇವೆಲ್ಲಾ ನಡೆಯುವದಕ್ಕಿಂತ ಮುಂಚೆ ಅವರು ನಿಮ್ಮನ್ನು ಹಿಡಿದು 12
ಸಭಾಮಂದಿರಗಳ ಮತ್ತು ಸೆರೆಮನೆಗಳ ಅಧಿಕಾರಸ್ಥರ ವಶಕ್ಕೆ ಕೊಟ್ಟು ನನ್ನ ಹೆಸರಿನ
ನಿಮಿತ್ತವಾಗಿ ಅರಸರ ಮುಂದಕ್ಕೂ ಅಧಿಪತಿಗಳ ಮುಂದಕ್ಕೂ ತೆಗೆದುಕೊಂಡುಹೋಗಿ
ಹಿಂಸೆಪಡಿಸುವರು. ಇದು ಸಾಕ್ಷಿಹೇಳುವದಕ್ಕೆ ನಿಮಗೆ ಅನುಕೂಲವಾಗುವದು. 13
ಆದ್ದರಿಂದ ಏನು ಉತ್ತರಕೊಡಬೇಕೆಂಬ ವಿಷಯದಲ್ಲಿ ನಾವು ಮುಂದಾಗಿ ಯೋಚಿಸುವ 14
ದಿಲ್ಲವೆಂದು ನಿಮ್ಮ ಮನಸ್ಸಿನಲ್ಲಿ ನಿಶ್ಚಯಮಾಡಿಕೊಳ್ಳಿರಿ. ಯಾಕಂದರೆ, ನಿಮ್ಮ ವಿರೋಧಿ 15
ಗಳೆಲ್ಲರೂ ಎದುರುನಿಲ್ಲುವದಕ್ಕೂ ಎದುರುಮಾತಾಡುವದಕ್ಕೂ ಆಗದಂಥ ಬಾಯಿ
ಯನ್ನೂ ಬುದ್ಧಿಯನ್ನೂ ನಾನೇ ನಿಮಗೆ ಕೊಡುತ್ತೇನೆ. ಆದರೆ ತಂದೆತಾಯಿಗಳೂ 16
ಅಣ್ಣತಮ್ಮಂದಿರೂ ಬಂಧುಬಾಂಧವರೂ ಸ್ನೇಹಿತರೂ ನಿಮ್ಮನ್ನು ಒಪ್ಪಿಸಿಕೊಡುವರು;
ಮತ್ತು ನಿಮ್ಮಲ್ಲಿ ಕೆಲವರನ್ನು ಕೊಲ್ಲಿಸುವರು. ಇದಲ್ಲದೆ ನನ್ನ ಹೆಸರಿನ ನಿಮಿತ್ತವಾಗಿ 17
ಎಲ್ಲರೂ ನಿಮ್ಮನ್ನು ಹಗೆಮಾಡುವರು. ಆದಾಗ್ಯೂ ನಿಮ್ಮದೊಂದು ತಲೆಕೂದಲಾದರೂ 18
ನಾಶವಾಗುವದಿಲ್ಲ. ನಿಮ್ಮ ಸೈರಣೆಯಿಂದ ನಿಮ್ಮ ಪ್ರಾಣಗಳನ್ನು ಪಡಕೊಳ್ಳುವಿರಿ. 19
ಆದರೆ ದಂಡುಗಳು ಯೆರೂಸಲೇಮ್ ಪಟ್ಟಣಕ್ಕೆ ಮುತ್ತಿಗೆ ಹಾಕಿರುವದನ್ನು ನೀವು 20
ನೋಡುವಾಗ, ಅದು ಹಾಳಾಗುವ ಕಾಲ ಸಮೀಪವಾಯಿತೆಂದು ತಿಳುಕೊಳ್ಳಿರಿ.
ಆಗ ಯೂದಾಯದಲ್ಲಿರುವವರು ಬೆಟ್ಟಗಳಿಗೆ ಓಡಿಹೋಗಲಿ; ಆ ಪಟ್ಟಣದಲ್ಲಿರುವವರು 21
ಅದರೊಳಗಿಂದ ಹೊರಟುಹೋಗಲಿ; ಹಳ್ಳಿಯವರು ಅದರೊಳಕ್ಕೆ ಹೋಗದಿರಲಿ.
ಯಾಕಂದರೆ ಬರೆದಿರುವದೆಲ್ಲಾ ನೆರವೇರುವದಕ್ಕಾಗಿ ಅವು ದಂಡನೆಯ ದಿವಸಗಳಾಗಿವೆ. 22
ಆ ದಿನಗಳಲ್ಲಿ ಬಸುರಿಯರಿಗೂ ಮೊಲೆಕೂಸಿರುವ ಹೆಂಗಸರಿಗೂ ಆಗುವ ಕಷ್ಟವನ್ನು 23
ಏನು ಹೇಳಲಿ! ಈ ಸೀಮೆಯ ಮೇಲೆ ಮಹಾ ಸಂಕಟವೂ ಈ ಜನರಿಗೆ ಉಗ್ರದಂಡ
ನೆಯೂ ಆಗುವವು. ಅವರು ಕತ್ತಿಯ ಬಾಯಿಗೆ ಬೀಳುವರು; ಅವರನ್ನು ಅನ್ಯದೇಶಗಳಿ 24
ಗೆಲ್ಲಾ ಸೆರೇ ಹಿಡಿದುಕೊಂಡು ಹೋಗುವರು; ಅನ್ಯದೇಶದವರ ಸಮಯಗಳು ಪೂರೈಸುವ
ತನಕ ಯೆರೂಸಲೇಮ್ ಪಟ್ಟಣವು ಅನ್ಯದೇಶದವರಿಂದ ತುಳಿದಾಡಲ್ಪಡುತ್ತಿರುವದು.
ಇದಲ್ಲದೆ ಸೂರ್ಯ ಚಂದ್ರ ನಕ್ಷತ್ರಗಳಲ್ಲಿ ಸೂಚನೆಗಳು ತೋರುವವು. ಭೂಮಿಯ 25
ಮೇಲೆ ಸಮುದ್ರದ ಮತ್ತು ತೆರೆಗಳ ಘೋಷದ ನಿಮಿತ್ತವಾಗಿ ಜನಗಳಿಗೆ ದಿಕ್ಕುಕಾಣದೆ
ಸಂಕಟವು ಉಂಟಾಗುವದು. ಆಕಾಶದ ಶಕ್ತಿಗಳು ಕದಲುವದರಿಂದ ಮನುಷ್ಯರು 26
ಭಯಹಿಡಿದವರಾಗಿ ಲೋಕಕ್ಕೆ ಏನು ಬರುವದೋ ಎಂದು ಎದುರುನೋಡುತ್ತಾ
ಪ್ರಾಣಹೋದಂತಾಗುವರು. ಆಗ ಮನುಷ್ಯಕುಮಾರನು ಬಹು ಬಲದಿಂದಲೂ 27
ಮಹಿಮೆಯಿಂದಲೂ ಮೇಘದಲ್ಲಿ ಬರುವದನ್ನು ಕಾಣುವರು. ಆದರೆ ಇವು ಸಂಭವಿಸು 28
ವದಕ್ಕೆ ತೊಡಗುವಾಗ ಮೇಲಕ್ಕೆ ನೋಡಿರಿ, ನಿಮ್ಮ ತಲೆ ಎತ್ತಿರಿ; ನಿಮ್ಮ ಬಿಡುಗಡೆಯು
ಸಮೀಪವಾಗಿದೆ ಅಂದನು. ಆತನು ಅವರಿಗೆ ಒಂದು ದೃಷ್ಟಾಂತ ಕೊಟ್ಟು ಹೇಳಿದ್ದೇ 29
ನಂದರೆ—ಅಂಜೂರ ಮುಂತಾದ ಮರಗಳನ್ನೂ ನೋಡಿರಿ. ಅವು ಚಿಗುರಿದ ಕೂಡಲೆ, 30

ನೀವು ಅದನ್ನು ಕಂಡು, ಈಗ ಬೇಸಿಗೆಯು ಹತ್ತರವಾಯಿತೆಂದು ನೀವಾಗಿ ತಿಳುಕೊಳ್ಳು
31 ತ್ತೀರಲ್ಲಾ. ಹಾಗೆಯೇ ನೀವು ಇದೆಲ್ಲಾ ಆಗುವದನ್ನು ಕಾಣುವಾಗ, ದೇವರ ರಾಜ್ಯವು
32 ಹತ್ತರವಾಯಿತೆಂದು ತಿಳುಕೊಳ್ಳಿರಿ. ಎಲ್ಲಾ ಆಗುವ ತನಕ ಈ ಸಂತತಿಯು ಅಳಿದು
33 ಹೋಗುವದೇ ಇಲ್ಲವೆಂದು ನಿಮಗೆ ಸತ್ಯವಾಗಿ ಹೇಳುತ್ತೇನೆ. ಭೂಮ್ಯಾಕಾಶಗಳು ಅಳಿದುಹೋಗುವವು, ಆದರೆ ನನ್ನ ಮಾತುಗಳು ಅಳಿದುಹೋಗುವದೇ ಇಲ್ಲ.

34 ನಿಮ್ಮ ವಿಷಯದಲ್ಲಿ ಎಚ್ಚರಿಕೆಯಾಗಿರ್ರಿ. ಅತಿಭೋಜನದ ಮದಡಿನಿಂದಲೂ ಅಮಲಿ ನಿಂದಲೂ ಪ್ರಪಂಚದ ಚಿಂತೆಗಳಿಂದಲೂ ನಿಮ್ಮ ಹೃದಯಗಳು ಭಾರವಾಗಿರಲಾಗಿ, ಆ
35 ದಿವಸವು ನಿಮ್ಮ ಮೇಲೆ ಉರ್ಲಿನಂತೆ ಫಕ್ಕನೆ ಬಂದೀತು. ಆ ದಿವಸವು ಭೂನಿವಾಸಿ
36 ಗಳೆಲ್ಲರ ಮೇಲೆ ಬರುವದು. ಆದರೆ ಬರುವದಕ್ಕಿರುವ ಇವೆಲ್ಲವುಗಳೊಳಗಿಂದ ತಪ್ಪಿಸಿ ಕೊಳ್ಳುವದಕ್ಕೂ ಮನುಷ್ಯಕುಮಾರನ ಮುಂದೆ ನಿಂತುಕೊಳ್ಳುವದಕ್ಕೂ ನೀವು ಪೂರ್ಣ ಶಕ್ತರಾಗುವಂತೆ, ಎಲ್ಲಾ ಕಾಲದಲ್ಲಿಯೂ ದೇವರಿಗೆ ವಿಜ್ಞಾಪನೆಮಾಡಿಕೊಳ್ಳುತ್ತಾ ಎಚ್ಚರ ವಾಗಿರ್ರಿ ಅಂದನು.

### ಅಧಿಕಾರಿಗಳು ಯೇಸುವನ್ನು ಕೊಲ್ಲುವದಕ್ಕೆ ಉಪಾಯಮಾಡಿದ್ದು.

(ಮತ್ತಾಯ **26**, 1—5; 14—16; ಮಾರ್ಕ **14**, 1. 2. 10. 11.)

37 ಆತನು ಹಗಲು ದೇವಾಲಯದಲ್ಲಿ ಉಪದೇಶಮಾಡುತ್ತಾ ರಾತ್ರೆ ಪಟ್ಟಣದ ಹೊರಗೆ ಹೋಗಿ ಎಣ್ಣೇಮರಗಳ ತೋಪು ಎನ್ನಿಸಿಕೊಳ್ಳುವ ಗುಡ್ಡದಲ್ಲಿ ಇಳುಕೊಳ್ಳುತ್ತಾ ಇದ್ದನು.
38 ಜನರೆಲ್ಲರು ಆತನ ಉಪದೇಶವನ್ನು ಕೇಳಬೇಕೆಂದು ಬೆಳಿಗ್ಯೆ ಎದ್ದು ದೇವಾಲಯಕ್ಕೆ ಆತನ ಬಳಿಗೆ ಬರುತ್ತಿದ್ದರು.

**22** ಹುಳಿಯಿಲ್ಲದ ರೊಟ್ಟಿಯನ್ನು ತಿನ್ನುವ ಪಸ್ಕವೆಂಬ ಹಬ್ಬವು ಹತ್ತರವಾಯಿತು.
2 ಮಹಾಯಾಜಕರೂ ಶಾಸ್ತ್ರಿಗಳೂ ಯೇಸುವನ್ನು ಕೊಲ್ಲಬೇಕೆಂದಿದ್ದು ಜನರಿಗೆ ಹೆದರಿ
3 ತಕ್ಕ ಉಪಾಯವನ್ನು ಹುಡುಕುತ್ತಿದ್ದರು. ಆಗ ಸೈತಾನನು ಹನ್ನೆರಡು ಮಂದಿ ಶಿಷ್ಯರ
4 ಲೆಕ್ಕದಲ್ಲಿ ಸೇರಿದವನಾದ ಇಸ್ಕರಿಯೋತೆಂಬ ಯೂದನಲ್ಲಿ ಪ್ರವೇಶಿಸಲು, ಅವನು ಮಹಾ ಯಾಜಕರ ಬಳಿಗೂ ಕಾವಲಿನ ದಳವಾಯಿಗಳ ಬಳಿಗೂ ಹೋಗಿ ತಾನು ಯೇಸುವನ್ನು
5 ಹಿಡುಕೊಡುವ ಉಪಾಯವನ್ನು ಕುರಿತು ಅವರ ಸಂಗಡ ಮಾತಾಡಿದನು. ಅವರು
6 ಸಂತೋಷಪಟ್ಟು, ನಿನಗೆ ಹಣಾ ಕೊಡುತ್ತೇವೆಂದು ಒಪ್ಪಂದ ಮಾಡಲು, ಅವನು ಒಡಂಬಟ್ಟು ಆತನನ್ನು ಗದ್ದಲವಾಗದಂತೆ ಅವರಿಗೆ ಹಿಡುಕೊಡುವದಕ್ಕೆ ಅನುಕೂಲ ವಾದ ಸಮಯವನ್ನು ನೋಡುತ್ತಿದ್ದನು.

### ಯೇಸು ತನ್ನ ಶಿಷ್ಯರ ಸಂಗಡ ಕಡೇ ಭೋಜನಮಾಡಿದ್ದು.

(ಮತ್ತಾಯ **26**, 17—29; ಮಾರ್ಕ **14**, 12—25; ಯೋಹಾನ **13**, 1—17; 1 ಕೊರಿ. **11**, 23—25.)

7 ಹುಳಿಯಿಲ್ಲದ ರೊಟ್ಟಿಯನ್ನು ತಿನ್ನುವ ದಿವಸಗಳಲ್ಲಿ ಪಸ್ಕದ ಕುರಿಮರಿಯನ್ನು ಕೊಯ್ಯ
8 ಬೇಕಾಗಿದ್ದ ದಿವಸ ಬಂದಾಗ ಯೇಸು ಪೇತ್ರನಿಗೂ ಯೋಹಾನನಿಗೂ—ನೀವು ಹೋಗಿ

ನಾವು ಪಸ್ಕದ ಊಟಾಮಾಡುವದಕ್ಕಾಗಿ ಸಿದ್ಧಮಾಡಿರಿ ಎಂದು ಹೇಳಿದನು. ಅವರು— 9
ನಾವು ಎಲ್ಲಿ ಸಿದ್ಧಮಾಡಬೇಕನ್ನುತ್ತೀ ಎಂದು ಆತನನ್ನು ಕೇಳಲು, ಆತನು ಅವರಿಗೆ— 10
ನೋಡಿರಿ, ನೀವು ಪಟ್ಟಣದೊಳಕ್ಕೆ ಹೋದ ಮೇಲೆ, ಒಬ್ಬ ಮನುಷ್ಯನು ತುಂಬಿದ ಕೊಡ
ವನ್ನು ಹೊತ್ತುಕೊಂಡು ನಿಮ್ಮೆದುರಿಗೆ ಬರುವನು. ಅವನು ಹೋಗುವ ಮನೆಗೆ ನೀವು
ಅವನ ಹಿಂದೆ ಹೋಗಿ, ಆ ಮನೆಯ ಯಜಮಾನನಿಗೆ—ನಮ್ಮ ಬೋಧಕನು ತನ್ನ ಶಿಷ್ಯರ 11
ಸಂಗಡ ಪಸ್ಕದ ಊಟಾಮಾಡುವದಕ್ಕೆ ಭೋಜನಶಾಲೆ ಎಲ್ಲಿ ಎಂದು ನಿನ್ನನ್ನು ಕೇಳು
ತ್ತಾನೆ ಎಂಬದಾಗಿ ಹೇಳಿರಿ. ಅವನು ತಕ್ಕ ಸಾಮಾನಿಟ್ಟಿರುವ ಮೇಲಂತಸ್ತಿನ ದೊಡ್ಡ 12
ಕೊಠಡಿಯನ್ನು ನಿಮಗೆ ತೋರಿಸುವನು; ಅಲ್ಲಿ ಸಿದ್ಧಮಾಡಿರಿ ಎಂದು ಹೇಳಿಕಳುಹಿಸಿದನು.
ಅವರು ಹೊರಟು ಆತನು ತಮಗೆ ಹೇಳಿದಂತೆ ಅವನನ್ನು ಕಂಡು ಪಸ್ಕದ ಊಟಕ್ಕೆ ಸಿದ್ಧ 13
ಮಾಡಿದರು.

ಗಳಿಗೆ ಬಂದಾಗ ಆತನು ತನ್ನ ಹನ್ನೆರಡು ಮಂದಿ ಅಪೊಸ್ತಲರ ಸಂಗಡ ಊಟಕ್ಕೆ ಕೂತು 14
ಕೊಂಡನು. ಆಗ ಆತನು ಅವರಿಗೆ—ನಾನು ಶ್ರಮೆ ಅನುಭವಿಸುವದಕ್ಕಿಂತ ಮುಂಚೆ 15
ನಿಮ್ಮ ಸಂಗಡ ಈ ಪಸ್ಕದ ಊಟವನ್ನು ಮಾಡುವದಕ್ಕೆ ಕುತೂಹಲದಿಂದ ಅಪೇಕ್ಷಿಸಿದ್ದೇನೆ.
ನಾನು ನಿಮಗೆ ಹೇಳುತ್ತೇನೆ, ಇದು ದೇವರ ರಾಜ್ಯದಲ್ಲಿ ನೆರವೇರುವ ತನಕ ನಾನು ಇನ್ನು 16
ಮೇಲೆ ಪಸ್ಕದ ಊಟವನ್ನು ಮಾಡುವದೇ ಇಲ್ಲ ಎಂದು ಹೇಳಿದನು. ಆ ಮೇಲೆ ಆತನು 17
[ದ್ರಾಕ್ಷಾರಸ ತುಂಬಿದ] ಪಾತ್ರೆಯನ್ನು ತೆಗೆದುಕೊಂಡು ದೇವರ ಸ್ತೋತ್ರಾಮಾಡಿ—
ಇದನ್ನು ತಕ್ಕೊಂಡು ನಿಮ್ಮಲ್ಲಿ ಹಂಚಿಕೊಳ್ಳಿರಿ. ಇಂದಿನಿಂದ ದೇವರ ರಾಜ್ಯವು ಬರುವ 18
ತನಕ ನಾನು ದ್ರಾಕ್ಷಾರಸವನ್ನು ಕುಡಿಯುವದೇ ಇಲ್ಲವೆಂದು ನಿಮಗೆ ಹೇಳುತ್ತೇನೆ
ಅಂದನು. ಬಳಿಕ ಆತನು ರೊಟ್ಟಿಯನ್ನು ತೆಗೆದುಕೊಂಡು ದೇವರ ಸ್ತೋತ್ರಾಮಾಡಿ, 19
ಮುರಿದು ಅವರಿಗೆ ಕೊಟ್ಟು—ಇದು ನಿಮಗೋಸ್ಕರ ಕೊಟ್ಟಿರುವ ನನ್ನ ದೇಹ; ನನ್ನನ್ನು
ನೆನಸಿಕೊಳ್ಳುವದಕ್ಕೋಸ್ಕರ ಹೀಗೆ ಮಾಡಿರಿ[1] ಅಂದನು. ಊಟವಾದ ಮೇಲೆ ಆತನು 20
ಅದೇ ರೀತಿಯಾಗಿ ಪಾತ್ರೆಯನ್ನು ತೆಗೆದುಕೊಂಡು—ಈ ಪಾತ್ರೆಯು[2] ನಿಮಗೋಸ್ಕರ ಸುರಿ
ಸಲ್ಪಡುವ ನನ್ನ ರಕ್ತದಿಂದ ಸ್ಥಾಪಿತವಾಗುವ ಹೊಸ ಒಡಂಬಡಿಕೆಯನ್ನು ಸೂಚಿಸುತ್ತದೆ.
ಆದಾಗ್ಯೂ ನೋಡಿರಿ, ನನ್ನನ್ನು ಹಿಡುಕೊಡುವವನು ನನ್ನೊಡನೆ ಮೇಜಿನ ಮೇಲೆ ಕೈ 21
ಯಿಟ್ಟು ಊಟಮಾಡುತ್ತಿದ್ದಾನೆ. ಮನುಷ್ಯಕುಮಾರನಂತೂ ನೇಮಕವಾದ ಪ್ರಕಾರ 22
ಹೊರಟುಹೋಗುತ್ತಾನೆ ಸರಿ; ಆದರೆ ಆತನನ್ನು ಹಿಡುಕೊಡುವ ಮನುಷ್ಯನ ಗತಿಯನ್ನು
ಏನು ಹೇಳಲಿ ಅಂದನು. ಇದನ್ನು ಕೇಳಿ ಅವರು—ಇಂಥ ಕೆಲಸವನ್ನು ಮಾಡ 23
ಬೇಕೆಂದಿರುವವನು ನಮ್ಮಲ್ಲಿ ಯಾವನಾಗಿರಬಹುದು ಎಂದು ಒಬ್ಬರನ್ನೊಬ್ಬರು ಕೇಳು
ವದಕ್ಕೆ ತೊಡಗಿದರು.

ಇದಲ್ಲದೆ ತಮ್ಮಲ್ಲಿ ಯಾವನು ದೊಡ್ಡವನೆನಿಸಿಕೊಳ್ಳುವವನು ಎಂಬ ವಿಷಯದಲ್ಲಿ 24
ಅವರೊಳಗೆ ಚರ್ಚೆ ಹುಟ್ಟಿತು. ಆಗ ಆತನು ಅವರಿಗೆ—ಅನ್ಯದೇಶದ ಅರಸರು ತಮ್ಮ 25
ತಮ್ಮ ಜನಗಳ ಮೇಲೆ ದೊರೆತನಮಾಡುತ್ತಾರೆ, ಮತ್ತು ಅವರ ಮೇಲೆ ಅಧಿಕಾರ ನಡಸು
ವವರು ಧರ್ಮಿಷ್ಠರೆನ್ನಿಸಿಕೊಳ್ಳುತ್ತಾರೆ. ನೀವು ಹಾಗಿರಬಾರದು; ನಿಮ್ಮಲ್ಲಿ ಹೆಚ್ಚಿನವನು 26

[1] ಅಥವಾ, ಮುರಿದು ತಿನ್ನಿರಿ. [2] ಅಥವಾ, ಪಾತ್ರೆಯಲ್ಲಿರುವದು.

27 ಚಿಕ್ಕವನಂತಾಗಬೇಕು, ಮುಖ್ಯಸ್ಥನು ಸೇವಕನಂತಾಗಬೇಕು. ಯಾವನು ಹೆಚ್ಚಿನವನು?
ಊಟಕ್ಕೆ ಕೂತವನೋ ಸೇವೆಮಾಡುವವನೋ? ಊಟಕ್ಕೆ ಕೂತವನಲ್ಲವೇ? ಆದರೆ
28 ನಾನು ನಿಮ್ಮಲ್ಲಿ ಸೇವೆ ಮಾಡುವವನಂತಿದ್ದೇನೆ. ನೀವು ನನ್ನ ಕಷ್ಟಗಳಲ್ಲಿ ನನ್ನ ಸಂಗಡ
29 ಎಡೆಬಿಡದೆ ಇದ್ದವರು. ಆದದರಿಂದ ನನ್ನ ತಂದೆಯು ನನಗೆ ರಾಜ್ಯವನ್ನು ನೇಮಿಸಿದ
30 ಪ್ರಕಾರ ನಾನು ನಿಮಗೂ ನೇಮಿಸುತ್ತೇನೆ; ನನ್ನ ರಾಜ್ಯದಲ್ಲಿ ನೀವು ನನ್ನ ಮೇಜಿನ
ಮೇಲೆ ಊಟಮಾಡುವಿರಿ, ಕುಡಿಯುವಿರಿ; ಮತ್ತು ಸಿಂಹಾಸನಗಳ ಮೇಲೆ ಕೂತು
31 ಕೊಂಡು ಇಸ್ರಾಯೇಲಿನ ಹನ್ನೆರಡು ಕುಲಗಳಿಗೆ ನ್ಯಾಯತೀರಿಸುವಿರಿ. ಸೀಮೋನನೇ,
ಸೀಮೋನನೇ, ನೋಡು, ಸೈತಾನನು ನಿಮ್ಮನ್ನು ಗೋದಿಯಂತೆ ಒನೆಯಬೇಕೆಂದು
32 ಅಪ್ಪಣೆ ಕೇಳಿಕೊಂಡನು; ಆದರೆ ನಿನ್ನ ನಂಬಿಕೆ ಕುಂದಿಹೋಗಬಾರದೆಂದು ನಾನು
ನಿನ್ನ ವಿಷಯದಲ್ಲಿ ದೇವರಿಗೆ ವಿಜ್ಞಾಪನೆ ಮಾಡಿಕೊಂಡೆನು. ನೀನು ತಿರುಗಿಕೊಂಡ
33 ಮೇಲೆ ನಿನ್ನ ಸಹೋದರರನ್ನು ದೃಢಪಡಿಸು ಎಂದು ಹೇಳಿದನು. ಆದರೆ ಅವನು—
ಸ್ವಾಮೀ, ನಿನ್ನ ಸಂಗಡ ಸೆರೆಮನೆಗೆ ಹೋಗುವದಕ್ಕೂ ಸಾಯುವದಕ್ಕೂ ಸಿದ್ಧವಾಗಿದ್ದೇನೆ
34 ಅನ್ನಲು, ಆತನು—ಪೇತ್ರನೇ, ನನ್ನ ವಿಷಯದಲ್ಲಿ—ಇವನನ್ನು ಅರಿಯೆನೆಂದು ನೀನು
ಮೂರು ಸಾರಿ ಹೇಳಿದ ತನಕ ಈ ಹೊತ್ತು ಕೋಳಿ ಕೂಗುವದಿಲ್ಲವೆಂದು ನಿನಗೆ
ಹೇಳುತ್ತೇನೆ ಅಂದನು.

35 ಮತ್ತು ಆತನು—ನಿಮ್ಮನ್ನು ನಾನು ಹಮ್ಮಿಣಿ ಹಸಿಬೆ ಜೋಡುಗಳಿಲ್ಲದೆ ಕಳುಹಿಸಿ
ದಾಗ ನಿಮಗೆ ಏನಾದರೂ ಕೊರತೆಯಾಯಿತೋ ಎಂದು ಕೇಳಲು, ಅವರು ಏನೂ
36 ಇಲ್ಲವೆಂದು ಉತ್ತರಕೊಟ್ಟರು. ಅದಕ್ಕೆ ಆತನು—ಈಗಲಾದರೋ ಹಮ್ಮಿಣಿಯಿದ್ದವನು
ಅದನ್ನು ತಕ್ಕೊಳ್ಳಲಿ, ಹಸಿಬೆಯಿದ್ದವನು ಅದನ್ನು ತಕ್ಕೊಳ್ಳಲಿ, ಮತ್ತು ಕತ್ತಿಯಿಲ್ಲದವನು
37 ತನ್ನ ಮೇಲಂಗಿಯನ್ನು ಮಾರಿ ಒಂದು ಕತ್ತಿಯನ್ನು ಕೊಂಡುಕೊಳ್ಳಲಿ. ಯಾಕಂದರೆ—
ಆತನು ಅಪರಾಧಿಗಳಲ್ಲಿ ಒಬ್ಬನಂತೆ ಎಣಿಸಲ್ಪಟ್ಟನು ಎಂದು ಬರೆದಿರುವ ಮಾತು[1]
ನನ್ನಲ್ಲಿ ನೆರವೇರಬೇಕಾಗಿದೆ ಎಂದು ನಿಮಗೆ ಹೇಳುತ್ತೇನೆ; ನನ್ನ ವಿಷಯವಾದದ್ದು
38 ಕೊನೆಗಾಣಬೇಕು ಎಂದು ಹೇಳಿದನು. ಅವರು—ಸ್ವಾಮೀ, ಇಗೋ ಇಲ್ಲಿ ಎರಡು
ಕತ್ತಿಗಳಿವೆ ಅನ್ನಲು, ಆತನು ಅವರಿಗೆ—ಅಷ್ಟು ಸಾಕು ಅಂದನು.

ಯೇಸು ಗೆತ್ಸೇಮನೆತೋಟಕ್ಕೆ ಹೋಗಿ ಪ್ರಾರ್ಥಿಸಿದ್ದು; ಯೂದನು ಆತನನ್ನು ಶತ್ರುಗಳಿಗೆ ಹಿಡುಕೊಟ್ಟದ್ದು.

(ಮತ್ತಾಯ **26**, 36—56; ಮಾರ್ಕ **14**, 32—50; ಯೋಹಾನ **18**, 1—11.)

39 ತರುವಾಯ ಆತನು ಹೊರಟು ಪದ್ಧತಿಪ್ರಕಾರ ಎಣ್ಣೇಮರಗಳ ಗುಡ್ಡಕ್ಕೆ ಹೋದನು.
40 ಶಿಷ್ಯರೂ ಆತನ ಹಿಂದೆ ಹೋದರು. ಆತನು ಕ್ಲುಪ್ತಸ್ಥಳಕ್ಕೆ ಬಂದಾಗ, ಅವರಿಗೆ—
ನೀವು ಶೋಧನೆಗೆ ಒಳಗಾಗದಂತೆ ದೇವರನ್ನು ಪ್ರಾರ್ಥಿಸಿರಿ ಎಂದು ಹೇಳಿದನು.
41 ಆ ಮೇಲೆ ಆತನು ಅವರನ್ನು ಬಿಟ್ಟು ಕಲ್ಲೆಸುಗೆಯಷ್ಟು ದೂರ ಹೋಗಿ, ಮೊಣ
42 ಕಾಲೂರಿ—ತಂದೆಯೇ, ನಿನಗೆ ಇಷ್ಟವಿದ್ದರೆ ಈ ಪಾತ್ರೆಯನ್ನು[2] ನನ್ನಿಂದ ತೊಲಗಿಸು;

---

1) ಯೆಶಾಯ ೫೩, ೧೨.    2) ಅಂದರೆ, ಈ ಕಷ್ಟಾನುಭವವನ್ನು.

ಅವರು ಭಾವಿಸಿದ್ದದರಿಂದಲೂ ಇನ್ನೂ ಒಂದು ಸಾಮ್ಯವನ್ನು ಹೇಳಿದನು. ಅದೇ 12
ನಂದರೆ—ಶ್ರೀಮಂತನಾದ ಒಬ್ಬಾನೊಬ್ಬ ಮನುಷ್ಯನು ತಾನು ರಾಜ್ಯಾಧಿಕಾರವನ್ನು
ಪಡೆದುಕೊಂಡು ಹಿಂತಿರುಗಿ ಬರಬೇಕೆಂದು ದೂರ ದೇಶಕ್ಕೆ ಹೊರಟನು. ಹೊರಡು 13
ವಾಗ ತನ್ನ ಆಳುಗಳಲ್ಲಿ ಹತ್ತು ಮಂದಿಯನ್ನು ಕರಸಿ, ಅವರಿಗೆ ಹತ್ತು ಮೊಹರಿಗಳನ್ನು
ಕೊಟ್ಟು—ನಾನು ಬರುವ ತನಕ ವ್ಯಾಪಾರಮಾಡಿಕೊಂಡಿರ್ರಿ ಎಂದು ಹೇಳಿಹೋದನು.
ಆದರೆ ಅವನ ಪಟ್ಟಣದ ನಿವಾಸಿಗಳು ಅವನನ್ನು ದ್ವೇಷಿಸಿ, ಅವನ ಹಿಂದೆ ರಾಯಭಾರಿಗ 14
ಳನ್ನು ಕಳುಹಿಸಿ, ಇವನು ನಮ್ಮ ಮೇಲೆ ದೊರೆತನ ಮಾಡುವದು ನಮಗೆ ಇಷ್ಟವಿಲ್ಲ
ಎಂದು ಹೇಳಿಸಿದರು. ಆ ಮೇಲೆ ಅವನು ರಾಜ್ಯಾಧಿಕಾರವನ್ನು ಪಡಕೊಂಡು ಹಿಂತಿರುಗಿ 15
ಬಂದು, ತಾನು ಹಣವನ್ನು ಕೊಟ್ಟಿದ್ದ ಆಳುಗಳು ವ್ಯಾಪಾರದಿಂದ ಎಷ್ಟೆಷ್ಟು ಲಾಭ ಸಂಪಾ
ದಿಸಿಕೊಂಡಿದ್ದಾರೆಂದು ತಿಳುಕೊಳ್ಳುವದಕ್ಕಾಗಿ ಅವರನ್ನು ತನ್ನ ಬಳಿಗೆ ಕರಿಸಿದನು. ಮೊದ 16
ಲನೆಯವನು ಆತನ ಮುಂದೆ ಬಂದು—ದೊರೆಯೇ, ನೀನು ಕೊಟ್ಟ ಮೊಹರಿಯಿಂದ
ಹತ್ತು ಮೊಹರಿಗಳು ಸಂಪಾದನೆಯಾದವು ಅನ್ನಲು, ಅವನು ಅವನಿಗೆ—ಭಲಾ! ನೀನು 17
ಒಳ್ಳೇ ಆಳು; ನೀನು ಸ್ವಲ್ಪವಾದದ್ದರಲ್ಲಿ ನಂಬಿಕೆಯುಳ್ಳವನಾದ್ದರಿಂದ ಹತ್ತು ಗ್ರಾಮಗಳ
ಮೇಲೆ ಅಧಿಕಾರಿಯಾಗಿರು ಎಂದು ಹೇಳಿದನು. ಎರಡನೆಯವನು ಬಂದು—ದೊರೆಯೇ, 18
ನೀನು ಕೊಟ್ಟ ಮೊಹರಿಯಿಂದ ಐದು ಮೊಹರಿಗಳು ದೊರಕಿದವು ಅನ್ನಲು, ಅವನು 19
ಇವನಿಗೆ—ನೀನು ಸಹ ಐದು ಗ್ರಾಮಗಳ ಮೇಲಿರು ಎಂದು ಹೇಳಿದನು. ಬಳಿಕ 20
ಮತ್ತೊಬ್ಬನು ಬಂದು—ದೊರೆಯೇ, ಇಗೋ ನೀನು ಕೊಟ್ಟ ಮೊಹರಿ. ನೀನು ಇಡದೆ 21
ಯಿರುವದನ್ನು ಎತ್ತಿಕೊಂಡು ಹೋಗುವ ಬಿತ್ತದೆಯಿರುವದನ್ನು ಕೊಯ್ಯುವ ಕಠಿನ
ಮನುಷ್ಯನು ಎಂದು ನಿನಗೆ ಹೆದರಿಕೊಂಡು ಇದನ್ನು ವಸ್ತ್ರದಲ್ಲಿ ಕಟ್ಟಿ ಇಟ್ಟುಕೊಂಡೆನು
ಅಂದನು. ಅದಕ್ಕೆ ಅವನು—ನೀನು ಕೆಟ್ಟ ಆಳು, ನಿನ್ನ ಮಾತಿನ ಮೇಲೆಯೇ ನಿನಗೆ 22
ತೀರ್ಪುಮಾಡುತ್ತೇನೆ. ನಾನು ಇಡದೆಯಿರುವದನ್ನು ಎತ್ತಿಕೊಂಡು ಹೋಗುವ ಬಿತ್ತದೆ
ಯಿರುವದನ್ನು ಕೊಯ್ಯುವ ಕಠಿನ ಮನುಷ್ಯನು ಎಂದು ನಿನಗೆ ತಿಳಿದಿತ್ತಷ್ಟೆ. ಹಾಗಾ 23
ದರೆ ನೀನು ನನ್ನ ಹಣವನ್ನು ಸಾಹುಕಾರನ ಕೈಯಲ್ಲಿ ಯಾಕೆ ಕೊಡಲಿಲ್ಲ? ಆ ಮೇಲೆ
ನಾನು ಬಂದು ಅದನ್ನು ಬಡ್ಡಿ ಸಹಿತ ತೆಗೆದುಕೊಳ್ಳುತ್ತಿದ್ದೆನು ಎಂದು ಹೇಳಿ, ಹತ್ತರ 24
ನಿಂತಿದ್ದವರಿಗೆ—ಆ ಮೊಹರಿಯನ್ನು ಇವನಿಂದ ತೆಗೆದುಕೊಂಡು ಹತ್ತು ಮೊಹರಿಗಳುಳ್ಳವ
ನಿಗೆ ಕೊಡಿರಿ ಎಂದು ಹೇಳಿದನು. ಅವರು—ದೊರೆಯೇ, ಹತ್ತು ಮೊಹರಿಗಳು ಅವನಲ್ಲಿ 25
ಅವೆಯಲ್ಲಾ ಎಂದು ಅವನಿಗೆ ಹೇಳಿದರು. ಅದಕ್ಕವನು—ಯಾವನಿಗಿದೆಯೋ ಅವನಿಗೆ 26
ಕೊಡಲ್ಪಡುವದು, ಯಾವನಿಗಿಲ್ಲವೋ ಅವನಿಗಿದ್ದದ್ದೂ ಅವನ ಕಡೆಯಿಂದ ತೆಗೆಯಲ್ಪಡು
ವದು ಎಂದು ನಾನು ನಿಮಗೆ ಹೇಳುತ್ತೇನೆ; ಮತ್ತು ತಮ್ಮ ಮೇಲೆ ನಾನು ದೊರೆತನ 27
ಮಾಡುವದು ಇಷ್ಟವಿಲ್ಲವೆಂದು ಹೇಳಿದ ಆ ನನ್ನ ವೈರಿಗಳನ್ನು ಇಲ್ಲಿಗೆ ತಂದು ನನ್ನ ಮುಂದೆ
ಸಂಹಾರ ಮಾಡಬೇಕು ಅಂದನು.

### ಯೇಸು ಅರಸನಂತೆ ಯೆರೂಸಲೇಮಿಗೆ ಪ್ರವೇಶಮಾಡಿದ್ದು. ದೇವಾಲಯದಲ್ಲಿದ್ದ ವ್ಯಾಪಾರಸ್ಥರನ್ನು ಹೊರಡಿಸಿದ್ದು.

(ಮತ್ತಾಯ 21, 1—16; ಮಾರ್ಕ 11, 1—18; ಯೋಹಾನ 12, 12—16.)

28 ಆತನು ಈ ಮಾತುಗಳನ್ನು ಹೇಳಿದ ಮೇಲೆ ಗಟ್ಟ್ಯಾಹತ್ತಿ ಯೆರೂಸಲೇಮಿಗೆ ಮುಂದೆ ಮುಂದೆ ಹೋದನು.

29 ಆ ಮೇಲೆ ಆತನು ಎಣ್ಣೇಮರಗಳ ತೋಪು ಎನ್ನಿಸಿಕೊಳ್ಳುವ ಗುಡ್ಡದಲ್ಲಿರುವ ಬೇತ್ಫ 30 ಗೆಗೂ ಬೇಥಾನ್ಯಕ್ಕೂ ಸಮಿಾಪಿಸಿದಾಗ ತನ್ನ ಶಿಷ್ಯರಲ್ಲಿ ಇಬ್ಬರನ್ನು ಕರೆದು—ನಿಮ್ಮೆದುರಿಗಿರುವ ಹಳ್ಳಿಗೆ ಹೋಗಿರಿ; ಅದರೊಳಗೆ ಹೋಗುತ್ತಿರುವಾಗಲೇ, ಕಟ್ಟಿರುವ ಒಂದು ಕತ್ತೇಮರಿಯನ್ನು ಕಾಣುವಿರಿ; ಇದು ವರೆಗೆ ಅದರ ಮೇಲೆ ಯಾರೂ ಹತ್ತಿಲ್ಲ; ಅದನ್ನು ಬಿಚ್ಚಿ 31 ಹಿಡುಕೊಂಡು ಬನ್ನಿರಿ. ಯಾಕೆ ಬಿಚ್ಚುತ್ತೀರಿ ಎಂದು ಯಾರಾದರೂ ನಿಮ್ಮನ್ನು ಕೇಳಿದರೆ, 32 ಇದು ಸ್ವಾಮಿಯವರಿಗೆ ಬೇಕಾಗಿದೆ ಅನ್ನಿರಿ ಎಂದು ಹೇಳಿ ಕಳುಹಿಸಿದನು. ಕಳು 33 ಹಿಸಿದವರು ಹೋಗಿ ಆತನು ತಮಗೆ ಹೇಳಿದಂತೆಯೇ ಕಂಡರು. ಅವರು ಆ ಕತ್ತೇಮರಿಯನ್ನು ಬಿಚ್ಚುತ್ತಿರುವಾಗ ಅದರ ಯಜಮಾನರು—ಈ ಕತ್ತೇಮರಿಯನ್ನು ಯಾಕೆ 34 ಬಿಚ್ಚುತ್ತೀರಿ ಎಂದು ಅವರನ್ನು ಕೇಳಲು, ಅವರು—ಇದು ಸ್ವಾಮಿಯವರಿಗೆ ಬೇಕಾಗಿದೆ 35 ಎಂದು ಹೇಳಿದರು. ತರುವಾಯ ಅದನ್ನು ಹಿಡುಕೊಂಡು ಯೇಸುವಿನ ಬಳಿಗೆ ತಂದು ತಮ್ಮ ಬಟ್ಟೆಗಳನ್ನು ಆ ಕತ್ತೇಮರಿಯ ಮೇಲೆ ಹಾಕಿ ಯೇಸುವನ್ನು ಕುಂಡ್ರಿಸಿದರು. 36 ಆತನು ಹೋಗುತ್ತಿರುವಾಗ ಅವರು ತಮ್ಮ ಬಟ್ಟೆಗಳನ್ನು ದಾರಿಯಲ್ಲಿ ಹಾಸಿದರು. 37 ಆತನು ಪಟ್ಟಣವನ್ನು ಸಮಿಾಪಿಸಿ ಎಣ್ಣೇಮರಗಳ ಗುಡ್ಡದಿಂದ ಇಳಿಯುವ ಸ್ಥಳಕ್ಕೆ ಬಂದಾಗ ಶಿಷ್ಯಮಂಡಲಿಯವರೆಲ್ಲಾ ಸಂತೋಷಪಡುತ್ತಾ ತಾವು ಕಂಡಿದ್ದ ಎಲ್ಲಾ ಮಹತ್ಕಾರ್ಯಗಳ ವಿಷಯದಲ್ಲಿ—

38 ಕರ್ತನ ಹೆಸರಿನಲ್ಲಿ ಬರುವ ಅರಸನಿಗೆ ಶುಭವಾಗಲಿ;
ಪರಲೋಕದಲ್ಲಿ ಮಂಗಳ,
ಮೇಲಣಲೋಕಗಳಲ್ಲಿ ಮಹಿಮೆ

39 ಎಂದು ಮಹಾ ಶಬ್ದದಿಂದ ದೇವರನ್ನು ಕೊಂಡಾಡುವದಕ್ಕೆ ತೊಡಗಿದರು. ಜನರ ಗುಂಪಿನೊಳಗಿದ್ದ ಫರಿಸಾಯರಲ್ಲಿ ಕೆಲವರು ಆತನಿಗೆ—ಬೋಧಕನೇ, ನಿನ್ನ ಶಿಷ್ಯರನ್ನು ಗದರಿಸು 40 ಎಂದು ಹೇಳಿದ್ದಕ್ಕೆ ಆತನು—ಇವರು ಸುಮ್ಮನಾದರೆ ಈ ಕಲ್ಲುಗಳೇ ಕೂಗುವವು ಎಂದು ನಿಮಗೆ ಹೇಳುತ್ತೇನೆ ಅಂದನು.

41 ತರುವಾಯ ಆತನು ಸಮಿಾಪಕ್ಕೆ ಬಂದಾಗ, ಪಟ್ಟಣವನ್ನು ನೋಡಿ, ಅದರ ವಿಷಯ 42 ವಾಗಿ ಅತ್ತು—ನೀನಾದರೂ ಸಮಾಧಾನಕ್ಕೆ[1] ಬೇಕಾದದ್ದನ್ನು ಇದೇ ದಿನದಲ್ಲಿ ತಿಳಿದುಕೊಂಡರೆ ಎಷ್ಟೋ ಒಳ್ಳೇದು. ಆದರೆ ಈಗ ಅದು ನಿನ್ನ ಕಣ್ಣಿಗೆ ಮರೆಯಾಗಿದೆ.

[1] ಅಥವಾ, ಸುಕ್ಷೇಮಕ್ಕೆ.

ದೇವರು ನಿನಗೆ ದರ್ಶನಕೊಟ್ಟ ಸಮಯವನ್ನು ನೀನು ತಿಳುಕೊಳ್ಳಲಿಲ್ಲವಾದ್ದರಿಂದ, ನಿನ್ನ 43-44 ವೈರಿಗಳು ಒಡ್ಡುಕಟ್ಟಿ, ನಿನ್ನ ಸುತ್ತಲೂ ಮುತ್ತಿಗೆ ಹಾಕಿ, ಎಲ್ಲಾ ಕಡೆಗಳಲ್ಲಿಯೂ ನಿನ್ನನ್ನು ಬಂದುಮಾಡಿ, ನಿನ್ನನ್ನೂ ನಿನ್ನೊಳಗಿರುವ ನಿನ್ನ ಜನರನ್ನೂ ನಿರ್ಮೂಲಮಾಡಿ ನಿನ್ನಲ್ಲಿ ಕಲ್ಲಿನ ಮೇಲೆ ಕಲ್ಲು ನಿಲ್ಲದಂತೆ ಮಾಡುವ ದಿವಸಗಳು ನಿನ್ನ ಮೇಲೆ ಬರುವವು ಅಂದನು.

ಬಳಿಕ ಆತನು ದೇವಾಲಯಕ್ಕೆ ಹೋಗಿ, ಮಾರುವವರನ್ನು ಹೊರಗೆ ಅಟ್ಟುವದಕ್ಕೆ 45 ಪ್ರಾರಂಭಿಸಿ ಅವರಿಗೆ—ನನ್ನ ಮನೆಯು ಪ್ರಾರ್ಥನೆಯ ಮನೆಯಾಗಿರಬೇಕು ಎಂದು[1] ಬರೆದ 46 ದೆಯಲ್ಲಾ; ಆದರೆ ನೀವು ಅದನ್ನು ಕಳ್ಳರ ಗವಿ ಮಾಡಿದ್ಧೀರಿ[2] ಎಂದು ಅವರಿಗೆ ಹೇಳಿದನು.

ಮತ್ತು ಆತನು ದಿನಾಲು ದೇವಾಲಯದಲ್ಲಿ ಉಪದೇಶಮಾಡುತ್ತಿದ್ದನು. ಅಷ್ಟರಲ್ಲಿ 47 ಮಹಾಯಾಜಕರೂ ಶಾಸ್ತ್ರಿಗಳೂ ಪ್ರಜೆಗಳಲ್ಲಿ ಮುಖ್ಯಸ್ಥರೂ ಆತನನ್ನು ಕೊಲ್ಲುವದಕ್ಕೆ ಸಮಯ ನೋಡುತ್ತಿದ್ದರು. ಆದರೆ ಜನರೆಲ್ಲರು ಆತನನ್ನು ಅಂಟಿಕೊಂಡು ಉಪದೇಶ 48 ವನ್ನು ಗಮನಿಸಿ ಕೇಳುತ್ತಿದ್ದದರಿಂದ ಏನು ಮಾಡಬೇಕೋ ತೋರಲಿಲ್ಲ.

ಶಾಸ್ತ್ರಿಗಳು ಯೇಸುವಿನ ಅಧಿಕಾರವನ್ನು ವಿಚಾರಿಸಿದಾಗ, ಆತನು ತಕ್ಕ ಉತ್ತರಕೊಟ್ಟು ಅವರು ಮಾಡಿದ ದೇವದ್ರೋಹವನ್ನು ಸಾಮ್ಯಗಳಿಂದ ಸೂಚಿಸಿದ್ದು.

(ಮತ್ತಾಯ 21, 23—46; ಮಾರ್ಕ 11, 27—12, 12.)

ಆ ದಿವಸಗಳೊಳಗೆ ಒಂದು ದಿನ ಆತನು ದೇವಾಲಯದಲ್ಲಿ ಜನರಿಗೆ ಉಪದೇಶ **20** ಮಾಡುತ್ತಾ ಸುವಾರ್ತೆಯನ್ನು ಸಾರುತ್ತಾ ಇರುವಾಗ, ಮಹಾಯಾಜಕರೂ ಶಾಸ್ತ್ರಿಗಳೂ ಸಭೆಯ ಹಿರಿಯರನ್ನು ಕೂಡಿಕೊಂಡು ಫಕ್ಕನೆ ಬಂದು—ನೀನು ಇದನ್ನೆಲ್ಲಾ ಯಾವ 2 ಅಧಿಕಾರದಿಂದ ಮಾಡುತ್ತೀ? ಈ ಅಧಿಕಾರವನ್ನು ನಿನಗೆ ಕೊಟ್ಟವನ್ಯಾರು, ನಮಗೆ ಹೇಳು ಎಂದು ಆತನನ್ನು ಕೇಳಿದ್ದಕ್ಕೆ ಆತನು—ನಾನು ಸಹ ನಿಮ್ಮನ್ನು ಒಂದು ಮಾತು 3 ಕೇಳುತ್ತೇನೆ, ನನಗೆ ಉತ್ತರ ಹೇಳಿರಿ. ದೀಕ್ಷಾಸ್ನಾನ ಮಾಡಿಸುವ ಅಧಿಕಾರವು ಯೋ 4 ಹಾನನಿಗೆ ಪರಲೋಕದಿಂದ ಬಂತೋ ಮನುಷ್ಯರಿಂದ ಬಂತೋ ಎಂದು ಅವರನ್ನು ಕೇಳಿ ದನು. ಆಗ ಅವರು—ಪರಲೋಕದಿಂದ ಬಂತೆಂದು ನಾವು ಹೇಳಿದರೆ, ನೀವು ಅವನನ್ನು 5 ಯಾಕೆ ನಂಬಲಿಲ್ಲ ಅಂದಾನು; ಮನುಷ್ಯರಿಂದ ಬಂತೆಂದು ಹೇಳಿದರೆ, ಜನರೆಲ್ಲರೂ ಯೋ 6 ಹಾನನನ್ನು ಪ್ರವಾದಿಯೆಂದು ನಂಬಿರುವದರಿಂದ ಅವರು ನಮ್ಮನ್ನು ಕಲ್ಲೆಸೆದು ಕೊಂದಾರು ಎಂದು ತಮ್ಮತಮ್ಮೊಳಗೆ ಮಾತಾಡಿಕೊಂಡು, ಅದು ಎಲ್ಲಿಂದ ಬಂತೋ ನಾವರಿಯೆವು 7 ಎಂದು ಉತ್ತರಕೊಟ್ಟರು. ಆಗ ಯೇಸು ಅವರಿಗೆ—ಇದನ್ನೆಲ್ಲಾ ಯಾವ ಅಧಿಕಾರ 8 ದಿಂದ ಮಾಡುತ್ತೇನೋ ಅದನ್ನು ನಾನೂ ನಿಮಗೆ ಹೇಳುವದಿಲ್ಲ ಎಂದು ಹೇಳಿದನು.

ಆಗ ಆತನು ಜನರಿಗೆ ಒಂದು ಸಾಮ್ಯವನ್ನು ಹೇಳುವದಕ್ಕೆ ತೊಡಗಿದನು. ಅದೇ 9 ನಂದರೆ—ಒಬ್ಬ ಮನುಷ್ಯನು ಒಂದು ದ್ರಾಕ್ಷೇತೋಟವನ್ನು ಮಾಡಿ, ಅದನ್ನು ಒಕ್ಕಲಿ ಗರಿಗೆ ವಾರಕ್ಕೆ ಕೊಟ್ಟು, ಬೇರೊಂದು ದೇಶಕ್ಕೆ ಹೋಗಿ, ಅಲ್ಲಿ ಬಹುಕಾಲ ಇದ್ದನು. ಫಲಕಾಲ ಬಂದಾಗ, ದ್ರಾಕ್ಷೇತೋಟದ ಹುಟ್ಟುವಳಿಯ ಪಾಲನ್ನು ಕೇಳುವದಕ್ಕಾಗಿ 10

[1] ಯೆಶಾಯ ೫೬, ೭. [2] ಯೆರೆಮೀಯ ೭, ೧೧.

ಒಬ್ಬ ಆಳನ್ನು ಒಕ್ಕಲಿಗರ ಬಳಿಗೆ ಕಳುಹಿಸಿದನು. ಆದರೆ ಆ ಒಕ್ಕಲಿಗರು ಅವನನ್ನು
11 ಹೊಡೆದು ಬರಿಗೈಲಿ ಕಳುಹಿಸಿಬಿಟ್ಟರು. ಆ ಧಣಿಯು ಇನ್ನೊಬ್ಬ ಆಳನ್ನು ಕಳುಹಿಸ
ಲಾಗಿ ಅವರು ಅವನನ್ನೂ ಹೊಡೆದು ಅವಮಾನಪಡಿಸಿ ಬರಿಗೈಲಿ ಕಳುಹಿಸಿಬಿಟ್ಟರು.
12 ಆ ಮೇಲೆ ಮೂರನೆಯವನನ್ನೂ ಕಳುಹಿಸಲು, ಅವರು ಅವನನ್ನೂ ಗಾಯವಾಗುವಷ್ಟು
13 ಹೊಡೆದು ಹೊರಕ್ಕೆ ಅಟ್ಟಿದರು. ಆಗ ಆ ದ್ರಾಕ್ಷೇತೋಟದ ಧಣಿಯು—ನಾನೇನು
ಮಾಡಲಿ? ಪ್ರಿಯನಾಗಿರುವ ನನ್ನ ಮಗನನ್ನು ಕಳುಹಿಸುತ್ತೇನೆ, ಒಂದು ವೇಳೆ ಅವ
14 ನಿಗಾದರೂ ಮರ್ಯಾದೆ ತೋರಿಸ್ಯಾರು ಅಂದುಕೊಂಡು ಕಳುಹಿಸಿದನು. ಆದರೆ
ಆ ಒಕ್ಕಲಿಗರು ಅವನನ್ನು ಕಂಡು—ಇವನೇ ಬಾಧ್ಯಸ್ಥನು; ಇವನನ್ನು ಕೊಂದು
ಹಾಕೋಣ, ಇವನ ಸ್ವಾಸ್ತ್ಯ ನಮ್ಮದಾಗಲಿ ಎಂದು ತಮ್ಮತಮ್ಮೊಳಗೆ ಮಾತಾಡಿಕೊಂಡು,
15 ಅವನನ್ನು ದ್ರಾಕ್ಷೇತೋಟದ ಹೊರಕ್ಕೆ ಅಟ್ಟಿಕೊಂಡುಹೋಗಿ ಕೊಂದುಹಾಕಿದರು.
16 ಹಾಗಾದರೆ ದ್ರಾಕ್ಷೇತೋಟದ ಧಣಿಯು ಅವರಿಗೆ ಏನು ಮಾಡುವನು? ಅವನು ಬಂದು
ಆ ಒಕ್ಕಲಿಗರನ್ನು ಸಂಹಾರಮಾಡಿ ಆ ದ್ರಾಕ್ಷೇತೋಟವನ್ನು ಬೇರೊಬ್ಬರಿಗೆ ಕೊಡುವನು
17 ಅಂದನು. ಇದನ್ನು ಜನರು ಕೇಳಿ—ಹಾಗಾಗಬಾರದು ಅಂದರು. ಆದರೆ ಆತನು
ಅವರನ್ನು ದೃಷ್ಟಿಸಿ ನೋಡಿ—ಹಾಗಾದರೆ

ಮನೇ ಕಟ್ಟುವವರು ಬೇಡವೆಂದು ಬಿಟ್ಟ ಕಲ್ಲೇ
ಮುಖ್ಯವಾದ ಮೂಲೇಗಲ್ಲಾಯಿತು[1]

18 ಎಂದು ಬರೆದಿರುವ ಮಾತೇನು? ಈ ಕಲ್ಲಿನ ಮೇಲೆ ಬೀಳುವ ಪ್ರತಿಯೊಬ್ಬನು ತುಂಡು
ತುಂಡಾಗುವನು; ಇದು ಯಾರ ಮೇಲೆ ಬೀಳುವದೋ ಅವನನ್ನು ಪುಡಿಪುಡಿ ಮಾಡು
ವದು ಅಂದನು.

19 ಶಾಸ್ತ್ರಿಗಳೂ ಮಹಾಯಾಜಕರೂ ಈ ಮಾತುಗಳನ್ನು ಕೇಳಿ, ತಮ್ಮನ್ನೇ ಕುರಿತು
ಈ ಸಾಮ್ಯವನ್ನು ಹೇಳಿದನೆಂದು ತಿಳಿದು, ಅದೇ ಗಳಿಗೆಯಲ್ಲಿ ಆತನನ್ನು ಹಿಡಿಯಬೇಕೆಂದು
ನೋಡಿದರು; ಆದರೆ ಜನರಿಗೆ ಹೆದರಿಕೊಂಡು ಬಿಟ್ಟರು.

ವಿರೋಧಿಗಳು ಯೇಸುವನ್ನು ಮಾತಿನಲ್ಲಿ ಸಿಕ್ಕಿಸುವದಕ್ಕೆ ಪ್ರಯತ್ನಮಾಡಿ ಸೋತುಹೋದದ್ದು.

(ಮತ್ತಾಯ **22, 15—23, 7;** ಮಾರ್ಕ **12, 13—39.**)

20 ಅವರು ಯೇಸುವನ್ನು ಅಧಿಪತಿಯ ವಶಕ್ಕೂ ಅಧಿಕಾರಕ್ಕೂ ಒಪ್ಪಿಸಬೇಕೆಂದು
ಹೊಂಚಿನೋಡುವವರಾಗಿ, ನೀತಿವಂತರಂತೆ ನಟಿಸುತ್ತಿರುವ ಗೂಢಚಾರರನ್ನು ಮಾತಿನಲ್ಲಿ
21 ಆತನನ್ನು ಸಿಕ್ಕಿಸಿಕೊಳ್ಳುವದಕ್ಕೆ ಆತನ ಬಳಿಗೆ ಕಳುಹಿಸಿದರು. ಇವರು ಬಂದು—
ಬೋಧಕನೇ, ನೀನು ಸರಿಯಾಗಿ ಮಾತಾಡುತ್ತಾ ಉಪದೇಶಮಾಡುತ್ತೀ, ನೀನು
ಮುಖದಾಕ್ಷಿಣ್ಯವಿಲ್ಲದೆ ದೇವರ ಮಾರ್ಗವನ್ನು ಸತ್ಯವಾಗಿ ಬೋಧಿಸುತ್ತೀ ಎಂದು ನಾವು
22 ಬಲ್ಲೆವು. ನಾವು ಕೈಸರನಿಗೆ[2] ತೆರಿಗೆ ಕೊಡುವದು ಸರಿಯೋ? ಸರಿಯಲ್ಲವೋ ಎಂದು
23,24 ಆತನನ್ನು ಕೇಳಿದರು. ಆತನು ಅವರ ಕುಯುಕ್ತಿಯನ್ನು ತಿಳಿದು ಅವರಿಗೆ—ನನಗೆ

[1] ಕೀರ್ತನೆ ೧೧೮, ೨೨. [2] ಅಂದರೆ, ರೋಮ್‌ಸಾಮ್ರಾಜ್ಯದ ಚಕ್ರವರ್ತಿಗೆ.

ಒಂದು ಹಣವನ್ನು ತೋರಿಸಿರಿ. ಇದರಲ್ಲಿ ಯಾರ ತಲೆಯೂ ಮುದ್ರೆಯೂ ಅದೆ?
ಎಂದು ಹೇಳಲು, ಅವರು—ಕೈಸರನದು ಅಂದರು. ಆತನು ಅವರಿಗೆ—ಹಾಗಾದರೆ 25
ಕೈಸರನದನ್ನು ಕೈಸರನಿಗೆ ಕೊಡಿರಿ, ದೇವರದನ್ನು ದೇವರಿಗೆ ಕೊಡಿರಿ ಎಂದು ಹೇಳಿದನು.
ಆತನ ಮಾತಿನಲ್ಲಿ ಅವರು ಜನರ ಮುಂದೆ ಏನೂ ಹಿಡಿಯಲಾರದೆ, ಆತನು ಕೊಟ್ಟ 26
ಉತ್ತರಕ್ಕೆ ಆಶ್ಚರ್ಯಪಟ್ಟು ಸುಮ್ಮಗಾದರು.

ತರುವಾಯ ಪುನರುತ್ಥಾನವಿಲ್ಲವೆಂದು[1] ಹೇಳುವವರಾದ ಸದ್ದುಕಾಯರಲ್ಲಿ ಕೆಲವರು 27
ಬಂದು ಆತನಿಗೆ ಪ್ರಶ್ನೆಮಾಡಿದ್ದೇನಂದರೆ—ಬೋಧಕನೇ, ಅಣ್ಣನಾದವನು ಹೆಂಡತಿಯುಳ್ಳ 28
ವನಾಗಿದ್ದು ಮಕ್ಕಳಿಲ್ಲದೆ ಸತ್ತರೆ, ಅವನ ತಮ್ಮನು ಆಕೆಯನ್ನು ಮದುವೆಮಾಡಿಕೊಂಡು
ತನ್ನ ಅಣ್ಣನಿಗೆ ಸಂತಾನವನ್ನು ಪಡೆಯಬೇಕೆಂದು ಮೋಶೆಯು ನಮಗೆ ಬರೆದಿಟ್ಟನಷ್ಟೆ[2].
ಒಳ್ಳೇದು, ಏಳು ಮಂದಿ ಅಣ್ಣತಮ್ಮಂದಿರಿದ್ದರು. ಮೊದಲನೆಯವನು ಹೆಂಡತಿಯನ್ನು 29
ಮಾಡಿಕೊಂಡು ಮಕ್ಕಳಿಲ್ಲದೆ ಸತ್ತನು. ಎರಡನೆಯವನೂ ಆಕೆಯನ್ನು ಮದುವೆ 30
ಮಾಡಿಕೊಂಡನು. ಮೂರನೆಯವನೂ ಆಕೆಯನ್ನು ಮಾಡಿಕೊಂಡನು. ಇದೇ ರೀತಿ 31
ಯಾಗಿ ಏಳುಮಂದಿಯೂ ಮಾಡಿಕೊಂಡು ಮಕ್ಕಳನ್ನು ಪಡೆಯದೆ ಸತ್ತರು. ಕಡೆಗೆ 32
ಆ ಸ್ತ್ರೀಯೂ ಸತ್ತಳು. ಹಾಗಾದರೆ ಪುನರುತ್ಥಾನದಲ್ಲಿ ಆಕೆಯು ಅವರೊಳಗೆ ಯಾರ 33
ಹೆಂಡತಿಯಾಗಿರುವಳು? ಆಕೆಯನ್ನು ಏಳು ಮಂದಿಯೂ ಮಾಡಿಕೊಂಡಿದ್ದರಲ್ಲಾ ಅಂದರು.
ಯೇಸು ಅವರಿಗೆ—ಈ ಲೋಕದ ಜನರು ಮದುವೆಮಾಡಿಕೊಳ್ಳುತ್ತಾರೆ, ಮದುವೆಮಾಡಿ 34
ಕೊಡುತ್ತಾರೆ; ಆದರೆ ಆ ಲೋಕವನ್ನೂ ಸತ್ತವರಿಗುಂಟಾಗುವ ಪುನರುತ್ಥಾನವನ್ನೂ 35
ಪಡೆಯುವದಕ್ಕೆ ಯೋಗ್ಯರನ್ನಿಸಿಕೊಂಡಿರುವವರು ಮದುವೆಮಾಡಿಕೊಳ್ಳುವದೂ ಇಲ್ಲ,
ಮದುವೆಮಾಡಿಕೊಡುವದೂ ಇಲ್ಲ. ಅವರು ಇನ್ನೂ ಸಾಯುವದೇ ಇಲ್ಲ. ಅವರು 36
ಪುನರುತ್ಥಾನವನ್ನು ಹೊಂದಿದವರಾಗಿದ್ದು ದೇವದೂತರಿಗೆ ಸರಿಸಮಾನರೂ ದೇವರ
ಮಕ್ಕಳೂ ಆಗಿದ್ದಾರೆ. ಸತ್ತವರು ಬದುಕಿ ಏಳುತ್ತಾರೆಂಬುವದನ್ನು ಮೋಶೆಯಾದರೂ 37
ಸೂಚಿಸಿದ್ದಾನೆ. ಅವನು ಪೊದೆಯ ಸಂಗತಿ ಇರುವ ಅಧ್ಯಾಯದಲ್ಲಿ ಕರ್ತನನ್ನು ಅಬ್ರ
ಹಾಮನ ದೇವರೂ ಇಸಾಕನ ದೇವರೂ ಯಾಕೋಬನ ದೇವರೂ ಎಂದು[3] ಹೇಳಿ
ದ್ದಾನೆ. ದೇವರು ಜೀವಿತರಿಗೆ ದೇವರಾಗಿದ್ದಾನೆ ಹೊರತು ಜೀವವಿಲ್ಲದವರಿಗೆ ದೇವರಲ್ಲ. 38
ಆತನಿಗೆ ಎಲ್ಲರೂ ಜೀವಿಸುವವರೇ ಅಂದನು. ಶಾಸ್ತ್ರಿಗಳಲ್ಲಿ ಕೆಲವರು—ಬೋಧಕನೇ, 39
ಚನ್ನಾಗಿ ಹೇಳಿದಿ ಅಂದರು. ಆತನನ್ನು ಇನ್ನೇನು ಕೇಳುವದಕ್ಕೂ ಅವರಿಗೆ ಧೈರ್ಯ 40
ವಿಲ್ಲದೆ ಹೋಯಿತು.

ಆಗ ಆತನು ಅವರಿಗೆ ಒಂದು ಪ್ರಶ್ನೆಮಾಡಿದನು. ಅದೇನಂದರೆ—ಬರಬೇಕಾದ 41
ಕ್ರಿಸ್ತನು ದಾವೀದನ ಮಗನೆಂದು ಹೇಳುತ್ತಾರಲ್ಲಾ, ಅದು ಹ್ಯಾಗಾದೀತು?

ನಾನು ನಿನ್ನ ವಿರೋಧಿಗಳನ್ನು ನಿನ್ನ ಪಾದಪೀಠ ಮಾಡುವ ತನಕ 42-43
ನನ್ನ ಬಲಗಡೆಯಲ್ಲಿ ಕೂತುಕೊಂಡಿರು ಎಂದು
ಕರ್ತನು ನನ್ನ ಒಡೆಯನಿಗೆ ನುಡಿದನು

---

[1] ಪುನರುತ್ಥಾನವೆಂದರೆ, ಸತ್ತವರು ತಿರಿಗಿ ಜೀವಿತರಾಗಿ ಬರುವದು. [2] ದ್ವಿತೀಯ ನ್ಯಾಯ ೨೫, ೫.
[3] ಹೊರಡೋಣ ೩, ೬.

44 ಎಂಬದಾಗಿ ಕೀರ್ತನಾಗ್ರಂಥದಲ್ಲಿ ದಾವೀದನೇ ಹೇಳಿರುತ್ತಾನಷ್ಟೆ. ದಾವೀದನೇ ಆತನನ್ನು ಒಡೆಯನೆಂದು ಹೇಳಿದ ಮೇಲೆ, ಅವನಿಗೆ ಆತನು ಮಗನಾಗುವದು ಹ್ಯಾಗೆ ಎಂದು ಕೇಳಿದನು.

45,46 ಜನರೆಲ್ಲರು ಕೇಳುತ್ತಿರುವಲ್ಲಿ ಆತನು ತನ್ನ ಶಿಷ್ಯರಿಗೆ ಹೇಳಿದ್ದೇನಂದರೆ—ಶಾಸ್ತ್ರಿಗಳ ವಿಷಯದಲ್ಲಿ ಎಚ್ಚರಿಕೆಯಾಗಿರ್ರಿ. ಅವರು ನಿಲುವಂಗಿಗಳನ್ನು ತೊಟ್ಟುಕೊಂಡು ತಿರುಗಾಡುವದರಲ್ಲಿ ಮನಸ್ಸುಳ್ಳವರೂ, ಅಂಗಡಿಬೀದಿಗಳಲ್ಲಿ ನಮಸ್ಕಾರ, ಸಭಾಮಂದಿರಗಳಲ್ಲಿ ಮುಖ್ಯ ಪೀಠ, ಔತಣಪ್ರಸ್ತಗಳಲ್ಲಿ ಮೇಲ್ಪಂಙ್ತಿ, ಇವುಗಳ ಮೇಲೆ ಇಷ್ಟವುಳ್ಳವರೂ 47 ಆಗಿದ್ದಾರೆ. ಅವರು ವಿಧವೆಯರ ಮನೆಗಳನ್ನು ನುಂಗಿ ನಟನೆಗಾಗಿ ದೇವರಿಗೆ ಉದ್ದವಾದ ಪ್ರಾರ್ಥನೆಗಳನ್ನು ಮಾಡುತ್ತಾರೆ; ಇಂಥವರು ಹೆಚ್ಚಾದ ದಂಡನೆಯನ್ನು ಹೊಂದುವರು ಅಂದನು.

### ದೇವರಿಗೆ ಕಾಣಿಕೆಕೊಡುವವರ ತಾರತಮ್ಯವನ್ನು ಕುರಿತು ಮಾತಾಡಿದ್ದು.

(ಮಾರ್ಕ 12, 41—44.)

**21** ಯೇಸು ತಲೆಯೆತ್ತಿ ನೋಡಿ ಐಶ್ವರ್ಯವಂತರು ಕಾಣಿಕೆಗಳನ್ನು ಬೊಕ್ಕಸದಲ್ಲಿ ಹಾಕು 2 ವದನ್ನು ಕಂಡನು. ಆಗ ಒಬ್ಬ ಬಡ ವಿಧವೆ ಬಂದು ಎರಡುಕಾಸುಗಳನ್ನು ಹಾಕಲು 3 ಆತನು ಅದನ್ನು ನೋಡಿ—ಈ ಬಡ ವಿಧವೆ ಎಲ್ಲರಿಗಿಂತಲೂ ಹೆಚ್ಚು ಹಾಕಿದ್ದಾಳೆ ಎಂದು 4 ನಿಮಗೆ ಸತ್ಯವಾಗಿ ಹೇಳುತ್ತೇನೆ. ಅವರೆಲ್ಲರು ತಮಗೆ ಸಾಕಾಗಿ ಮಿಕ್ಕದ್ದರಲ್ಲಿ ಕಾಣಿಕೆ ಕೊಟ್ಟರು; ಈಕೆಯೋ ಬಡತನದಲ್ಲಿಯೂ ತನಗಿದ್ದ ಜೀವನವನ್ನೆಲ್ಲಾ ಕಾಣಿಕೆಯಾಗಿ ಕೊಟ್ಟುಬಿಟ್ಟಳು ಅಂದನು.

### ಯೇಸು ಯೆರೂಸಲೇಮಿನ ನಾಶವನ್ನು ಮುಂದಾಗಿ ತಿಳಿಸಿದ್ದು.

(ಮತ್ತಾಯ 24, 1—44; ಮಾರ್ಕ 13, 1—37.)

5 ಕೆಲವರು ದೇವಾಲಯದ ವಿಷಯದಲ್ಲಿ ಅದು ಅಂದವಾದ ಕಲ್ಲುಗಳಿಂದಲೂ ಹರ 6 ಕೆಯ ಒಡವೆಗಳಿಂದಲೂ ಅಲಂಕಾರವಾಗಿದೆ ಎಂದು ಹೇಳುತ್ತಿರುವಾಗ, ಆತನು—ನೀವು ಇವುಗಳನ್ನು ನೋಡುತ್ತೀರಲ್ಲಾ, ಇಲ್ಲಿ ಕಲ್ಲಿನ ಮೇಲೆ ಕಲ್ಲು ನಿಲ್ಲದೆ ಎಲ್ಲಾ ಕೆಡವಲ್ಪ 7 ಡುವ ದಿವಸಗಳು ಬರುವವು ಅಂದನು. ಅವರು—ಬೋಧಕನೇ, ಅದು ಯಾವಾಗ ಆಗುವದು? ಅದು ಸಂಭವಿಸುವದಕ್ಕೆ ಮುಂಚೆ ಯಾವ ಸೂಚನೆ ತೋರುವದು ಎಂದು 8 ಆತನನ್ನು ಕೇಳಲು, ಆತನು ಹೇಳಿದ್ದೇನಂದರೆ—ನೀವು ಮೋಸಹೋಗದಂತೆ ನೋಡಿಕೊಳ್ಳಿರಿ. ಅನೇಕರು ಬಂದು ನನ್ನ ಹೆಸರನ್ನು ಎತ್ತಿಕೊಂಡು, ನಾನು ಕ್ರಿಸ್ತನು ನಾನು ಕ್ರಿಸ್ತನು ಎಂತಲೂ, ಆ ಕಾಲ ಹತ್ತರವಾಯಿತು ಎಂತಲೂ ಹೇಳುವರು; ಅವರ ಹಿಂದೆ 9 ಹೋಗಬೇಡಿರಿ. ಇದಲ್ಲದೆ ಯುದ್ಧಗಳೂ ಗಲಿಬಿಲಿಗಳೂ ನಡೆಯುವದನ್ನು ಕೇಳುವಾಗ ನೀವು ದಿಗಿಲುಪಡಬೇಡಿರಿ; ಇದೆಲ್ಲಾ ಮೊದಲು ಆಗುವದು ಅಗತ್ಯ; ಆದಾಗ್ಯೂ ಕೂಡಲೇ ಅಂತ್ಯ ಬರುವದಿಲ್ಲ ಅಂದನು.

ಆಗ ಆತನು ಅವರಿಗೆ ಹೇಳಿದ್ದೇನಂದರೆ—ಜನಕ್ಕೆ ವಿರೋಧವಾಗಿ ಜನವೂ ರಾಜ್ಯಕ್ಕೆ 10
ವಿರೋಧವಾಗಿ ರಾಜ್ಯವೂ ಏಳುವವು; ಮತ್ತು ಮಹಾ ಭೂಕಂಪಗಳಾಗುವವು; ಅಲ್ಲಲ್ಲಿ 11
ಬರಗಳೂ ಉಪದ್ರಗಳೂ ಬರುವವು; ಉತ್ಪಾತಗಳೂ ಆಕಾಶದಲ್ಲಿ ಮಹಾ ಸೂಚನೆಗಳೂ
ತೋರುವವು. ಆದರೆ ಇವೆಲ್ಲಾ ನಡೆಯುವದಕ್ಕಿಂತ ಮುಂಚೆ ಅವರು ನಿಮ್ಮನ್ನು ಹಿಡಿದು 12
ಸಭಾಮಂದಿರಗಳ ಮತ್ತು ಸೆರೆಮನೆಗಳ ಅಧಿಕಾರಸ್ಥರ ವಶಕ್ಕೆ ಕೊಟ್ಟು ನನ್ನ ಹೆಸರಿನ
ನಿಮಿತ್ತವಾಗಿ ಅರಸರ ಮುಂದಕ್ಕೂ ಅಧಿಪತಿಗಳ ಮುಂದಕ್ಕೂ ತೆಗೆದುಕೊಂಡುಹೋಗಿ
ಹಿಂಸೆಪಡಿಸುವರು. ಇದು ಸಾಕ್ಷಿಹೇಳುವದಕ್ಕೆ ನಿಮಗೆ ಅನುಕೂಲವಾಗುವದು. 13
ಆದ್ದರಿಂದ ಏನು ಉತ್ತರಕೊಡಬೇಕೆಂಬ ವಿಷಯದಲ್ಲಿ ನಾವು ಮುಂದಾಗಿ ಯೋಚಿಸುವ 14
ದಿಲ್ಲವೆಂದು ನಿಮ್ಮ ಮನಸ್ಸಿನಲ್ಲಿ ನಿಶ್ಚಯಮಾಡಿಕೊಳ್ಳಿರಿ. ಯಾಕಂದರೆ, ನಿಮ್ಮ ವಿರೋಧಿ 15
ಗಳೆಲ್ಲರೂ ಎದುರುನಿಲ್ಲುವದಕ್ಕೂ ಎದುರುಮಾತಾಡುವದಕ್ಕೂ ಆಗದಂಥ ಬಾಯಿ
ಯನ್ನೂ ಬುದ್ಧಿಯನ್ನೂ ನಾನೇ ನಿಮಗೆ ಕೊಡುತ್ತೇನೆ. ಆದರೆ ತಂದೆತಾಯಿಗಳೂ 16
ಅಣ್ಣತಮ್ಮಂದಿರೂ ಬಂಧುಬಾಂಧವರೂ ಸ್ನೇಹಿತರೂ ನಿಮ್ಮನ್ನು ಒಪ್ಪಿಸಿಕೊಡುವರು;
ಮತ್ತು ನಿಮ್ಮಲ್ಲಿ ಕೆಲವರನ್ನು ಕೊಲ್ಲಿಸುವರು. ಇದಲ್ಲದೆ ನನ್ನ ಹೆಸರಿನ ನಿಮಿತ್ತವಾಗಿ 17
ಎಲ್ಲರೂ ನಿಮ್ಮನ್ನು ಹಗೆಮಾಡುವರು. ಆದಾಗ್ಯೂ ನಿಮ್ಮದೊಂದು ತಲೆಕೂದಲಾದರೂ 18
ನಾಶವಾಗುವದಿಲ್ಲ. ನಿಮ್ಮ ಸೈರಣೆಯಿಂದ ನಿಮ್ಮ ಪ್ರಾಣಗಳನ್ನು ಪಡಕೊಳ್ಳುವಿರಿ. 19
ಆದರೆ ದಂಡುಗಳು ಯೆರೂಸಲೇಮ್ ಪಟ್ಟಣಕ್ಕೆ ಮುತ್ತಿಗೆ ಹಾಕಿರುವದನ್ನು ನೀವು 20
ನೋಡುವಾಗ, ಅದು ಹಾಳಾಗುವ ಕಾಲ ಸಮೀಪವಾಯಿತೆಂದು ತಿಳುಕೊಳ್ಳಿರಿ.
ಆಗ ಯೂದಾಯದಲ್ಲಿರುವವರು ಬೆಟ್ಟಗಳಿಗೆ ಓಡಿಹೋಗಲಿ; ಆ ಪಟ್ಟಣದಲ್ಲಿರುವವರು 21
ಅದರೊಳಗಿಂದ ಹೊರಟುಹೋಗಲಿ; ಹಳ್ಳಿಯವರು ಅದರೊಳಕ್ಕೆ ಹೋಗದಿರಲಿ.
ಯಾಕಂದರೆ ಬರೆದಿರುವದೆಲ್ಲಾ ನೆರವೇರುವದಕ್ಕಾಗಿ ಅವು ದಂಡನೆಯ ದಿವಸಗಳಾಗಿವೆ. 22
ಆ ದಿನಗಳಲ್ಲಿ ಬಸುರಿಯರಿಗೂ ಮೊಲೆಕೂಸಿರುವ ಹೆಂಗಸರಿಗೂ ಆಗುವ ಕಷ್ಟವನ್ನು 23
ಏನು ಹೇಳಲಿ! ಈ ಸೀಮೆಯ ಮೇಲೆ ಮಹಾ ಸಂಕಟವೂ ಈ ಜನರಿಗೆ ಉಗ್ರದಂಡ
ನೆಯೂ ಆಗುವವು. ಅವರು ಕತ್ತಿಯ ಬಾಯಿಗೆ ಬೀಳುವರು; ಅವರನ್ನು ಅನ್ಯದೇಶಗಳಿ 24
ಗೆಲ್ಲಾ ಸೆರೇ ಹಿಡಿದುಕೊಂಡು ಹೋಗುವರು; ಅನ್ಯದೇಶದವರ ಸಮಯಗಳು ಪೂರೈಸುವ
ತನಕ ಯೆರೂಸಲೇಮ್ ಪಟ್ಟಣವು ಅನ್ಯದೇಶದವರಿಂದ ತುಳಿದಾಡಲ್ಪಡುತ್ತಿರುವದು.
ಇದಲ್ಲದೆ ಸೂರ್ಯ ಚಂದ್ರ ನಕ್ಷತ್ರಗಳಲ್ಲಿ ಸೂಚನೆಗಳು ತೋರುವವು. ಭೂಮಿಯ 25
ಮೇಲೆ ಸಮುದ್ರದ ಮತ್ತು ತೆರೆಗಳ ಘೋಷದ ನಿಮಿತ್ತವಾಗಿ ಜನಗಳಿಗೆ ದಿಕ್ಕುಕಾಣದೆ
ಸಂಕಟವು ಉಂಟಾಗುವದು. ಆಕಾಶದ ಶಕ್ತಿಗಳು ಕದಲುವದರಿಂದ ಮನುಷ್ಯರು 26
ಭಯಹಿಡಿದವರಾಗಿ ಲೋಕಕ್ಕೆ ಏನು ಬರುವದೋ ಎಂದು ಎದುರುನೋಡುತ್ತಾ
ಪ್ರಾಣಹೋದಂತಾಗುವರು. ಆಗ ಮನುಷ್ಯಕುಮಾರನು ಬಹು ಬಲದಿಂದಲೂ 27
ಮಹಿಮೆಯಿಂದಲೂ ಮೇಘದಲ್ಲಿ ಬರುವದನ್ನು ಕಾಣುವರು. ಆದರೆ ಇವು ಸಂಭವಿಸು 28
ವದಕ್ಕೆ ತೊಡಗುವಾಗ ಮೇಲಕ್ಕೆ ನೋಡಿರಿ, ನಿಮ್ಮ ತಲೆ ಎತ್ತಿರಿ; ನಿಮ್ಮ ಬಿಡುಗಡೆಯು
ಸಮೀಪವಾಗಿದೆ ಅಂದನು. ಆತನು ಅವರಿಗೆ ಒಂದು ದೃಷ್ಟಾಂತ ಕೊಟ್ಟು ಹೇಳಿದ್ದೇ 29
ನಂದರೆ—ಅಂಜೂರ ಮುಂತಾದ ಮರಗಳನ್ನೂ ನೋಡಿರಿ. ಅವು ಚಿಗುರಿದ ಕೂಡಲೆ, 30

ನೀವು ಅದನ್ನು ಕಂಡು, ಈಗ ಬೇಸಿಗೆಯು ಹತ್ತರವಾಯಿತೆಂದು ನೀವಾಗಿ ತಿಳುಕೊಳ್ಳು
31 ತ್ತೀರಲ್ಲಾ. ಹಾಗೆಯೇ ನೀವು ಇದೆಲ್ಲಾ ಆಗುವದನ್ನು ಕಾಣುವಾಗ, ದೇವರ ರಾಜ್ಯವು
32 ಹತ್ತರವಾಯಿತೆಂದು ತಿಳುಕೊಳ್ಳಿರಿ. ಎಲ್ಲಾ ಆಗುವ ತನಕ ಈ ಸಂತತಿಯು ಅಳಿದು
33 ಹೋಗುವದೇ ಇಲ್ಲವೆಂದು ನಿಮಗೆ ಸತ್ಯವಾಗಿ ಹೇಳುತ್ತೇನೆ. ಭೂಮ್ಯಾಕಾಶಗಳು
ಅಳಿದುಹೋಗುವವು, ಆದರೆ ನನ್ನ ಮಾತುಗಳು ಅಳಿದುಹೋಗುವದೇ ಇಲ್ಲ.

34 ನಿಮ್ಮ ವಿಷಯದಲ್ಲಿ ಎಚ್ಚರಿಕೆಯಾಗಿರ್ರಿ. ಅತಿಭೋಜನದ ಮದಡಿನಿಂದಲೂ ಅಮಲಿ
ನಿಂದಲೂ ಪ್ರಪಂಚದ ಚಿಂತೆಗಳಿಂದಲೂ ನಿಮ್ಮ ಹೃದಯಗಳು ಭಾರವಾಗಿರಲಾಗಿ, ಆ
35 ದಿವಸವು ನಿಮ್ಮ ಮೇಲೆ ಉರ್ಲಿನಂತೆ ಫಕ್ಕನೆ ಬಂದೀತು. ಆ ದಿವಸವು ಭೂನಿವಾಸಿ
36 ಗಳೆಲ್ಲರ ಮೇಲೆ ಬರುವದು. ಆದರೆ ಬರುವದಕ್ಕಿರುವ ಇವೆಲ್ಲವುಗಳೊಳಗಿಂದ ತಪ್ಪಿಸಿ
ಕೊಳ್ಳುವದಕ್ಕೂ ಮನುಷ್ಯಕುಮಾರನ ಮುಂದೆ ನಿಂತುಕೊಳ್ಳುವದಕ್ಕೂ ನೀವು ಪೂರ್ಣ
ಶಕ್ತರಾಗುವಂತೆ, ಎಲ್ಲಾ ಕಾಲದಲ್ಲಿಯೂ ದೇವರಿಗೆ ವಿಜ್ಞಾಪನೆಮಾಡಿಕೊಳ್ಳುತ್ತಾ ಎಚ್ಚರ
ವಾಗಿರ್ರಿ ಅಂದನು.

### ಅಧಿಕಾರಿಗಳು ಯೇಸುವನ್ನು ಕೊಲ್ಲುವದಕ್ಕೆ ಉಪಾಯಮಾಡಿದ್ದು.

(ಮತ್ತಾಯ 26, 1—5; 14—16; ಮಾರ್ಕ 14, 1. 2. 10. 11.)

37 ಆತನು ಹಗಲು ದೇವಾಲಯದಲ್ಲಿ ಉಪದೇಶಮಾಡುತ್ತಾ ರಾತ್ರೆ ಪಟ್ಟಣದ ಹೊರಗೆ
ಹೋಗಿ ಎಣ್ಣೇಮರಗಳ ತೋಪು ಎನ್ನಿಸಿಕೊಳ್ಳುವ ಗುಡ್ಡದಲ್ಲಿ ಇಳುಕೊಳ್ಳುತ್ತಾ ಇದ್ದನು.
38 ಜನರೆಲ್ಲರು ಆತನ ಉಪದೇಶವನ್ನು ಕೇಳಬೇಕೆಂದು ಬೆಳಿಗ್ಯೆ ಎದ್ದು ದೇವಾಲಯಕ್ಕೆ
ಆತನ ಬಳಿಗೆ ಬರುತ್ತಿದ್ದರು.

**22** ಹುಳಿಯಿಲ್ಲದ ರೊಟ್ಟಿಯನ್ನು ತಿನ್ನುವ ಪಸ್ಕವೆಂಬ ಹಬ್ಬವು ಹತ್ತರವಾಯಿತು.
2 ಮಹಾಯಾಜಕರೂ ಶಾಸ್ತ್ರಿಗಳೂ ಯೇಸುವನ್ನು ಕೊಲ್ಲಬೇಕೆಂದಿದ್ದು ಜನರಿಗೆ ಹೆದರಿ
3 ತಕ್ಕ ಉಪಾಯವನ್ನು ಹುಡುಕುತ್ತಿದ್ದರು. ಆಗ ಸೈತಾನನು ಹನ್ನೆರಡು ಮಂದಿ ಶಿಷ್ಯರ
4 ಲೆಕ್ಕದಲ್ಲಿ ಸೇರಿದವನಾದ ಇಸ್ಕರಿಯೋತೆಂಬ ಯೂದನಲ್ಲಿ ಪ್ರವೇಶಿಸಲು, ಅವನು ಮಹಾ
ಯಾಜಕರ ಬಳಿಗೂ ಕಾವಲಿನ ದಳವಾಯಿಗಳ ಬಳಿಗೂ ಹೋಗಿ ತಾನು ಯೇಸುವನ್ನು
5 ಹಿಡುಕೊಡುವ ಉಪಾಯವನ್ನು ಕುರಿತು ಅವರ ಸಂಗಡ ಮಾತಾಡಿದನು. ಅವರು
6 ಸಂತೋಷಪಟ್ಟು, ನಿನಗೆ ಹಣಾ ಕೊಡುತ್ತೇವೆಂದು ಒಪ್ಪಂದ ಮಾಡಲು, ಅವನು
ಒಡಂಬಟ್ಟು ಆತನನ್ನು ಗದ್ದಲವಾಗದಂತೆ ಅವರಿಗೆ ಹಿಡುಕೊಡುವದಕ್ಕೆ ಅನುಕೂಲ
ವಾದ ಸಮಯವನ್ನು ನೋಡುತ್ತಿದ್ದನು.

### ಯೇಸು ತನ್ನ ಶಿಷ್ಯರ ಸಂಗಡ ಕಡೇ ಭೋಜನಮಾಡಿದ್ದು.

(ಮತ್ತಾಯ 26, 17—29; ಮಾರ್ಕ 14, 12—25; ಯೋಹಾನ 13, 1—17; 1 ಕೊರಿ. 11, 23—25.)

7 ಹುಳಿಯಿಲ್ಲದ ರೊಟ್ಟಿಯನ್ನು ತಿನ್ನುವ ದಿವಸಗಳಲ್ಲಿ ಪಸ್ಕದ ಕುರಿಮರಿಯನ್ನು ಕೊಯ್ಯ
8 ಬೇಕಾಗಿದ್ದ ದಿವಸ ಬಂದಾಗ ಯೇಸು ಪೇತ್ರನಿಗೂ ಯೋಹಾನನಿಗೂ—ನೀವು ಹೋಗಿ

ನಾವು ಪಸ್ಕದ ಊಟಾಮಾಡುವದಕ್ಕಾಗಿ ಸಿದ್ಧಮಾಡಿರಿ ಎಂದು ಹೇಳಿದನು. ಅವರು— 9
ನಾವು ಎಲ್ಲಿ ಸಿದ್ಧಮಾಡಬೇಕನ್ನುತ್ತೀ ಎಂದು ಆತನನ್ನು ಕೇಳಲು, ಆತನು ಅವರಿಗೆ— 10
ನೋಡಿರಿ, ನೀವು ಪಟ್ಟಣದೊಳಕ್ಕೆ ಹೋದ ಮೇಲೆ, ಒಬ್ಬ ಮನುಷ್ಯನು ತುಂಬಿದ ಕೊಡ
ವನ್ನು ಹೊತ್ತುಕೊಂಡು ನಿಮ್ಮೆದುರಿಗೆ ಬರುವನು. ಅವನು ಹೋಗುವ ಮನೆಗೆ ನೀವು
ಅವನ ಹಿಂದೆ ಹೋಗಿ, ಆ ಮನೆಯ ಯಜಮಾನನಿಗೆ—ನಮ್ಮ ಬೋಧಕನು ತನ್ನ ಶಿಷ್ಯರ 11
ಸಂಗಡ ಪಸ್ಕದ ಊಟಾಮಾಡುವದಕ್ಕೆ ಭೋಜನಶಾಲೆ ಎಲ್ಲಿ ಎಂದು ನಿನ್ನನ್ನು ಕೇಳು
ತ್ತಾನೆ ಎಂಬದಾಗಿ ಹೇಳಿರಿ. ಅವನು ತಕ್ಕ ಸಾಮಾನಿಟ್ಟಿರುವ ಮೇಲಂತಸ್ತಿನ ದೊಡ್ಡ 12
ಕೊಠಡಿಯನ್ನು ನಿಮಗೆ ತೋರಿಸುವನು; ಅಲ್ಲಿ ಸಿದ್ಧಮಾಡಿರಿ ಎಂದು ಹೇಳಿಕಳುಹಿಸಿದನು.
ಅವರು ಹೊರಟು ಆತನು ತಮಗೆ ಹೇಳಿದಂತೆ ಅವನನ್ನು ಕಂಡು ಪಸ್ಕದ ಊಟಕ್ಕೆ ಸಿದ್ಧ 13
ಮಾಡಿದರು.

ಗಳಿಗೆ ಬಂದಾಗ ಆತನು ತನ್ನ ಹನ್ನೆರಡು ಮಂದಿ ಅಪೊಸ್ತಲರ ಸಂಗಡ ಊಟಕ್ಕೆ ಕೂತು 14
ಕೊಂಡನು. ಆಗ ಆತನು ಅವರಿಗೆ—ನಾನು ಶ್ರಮೆ ಅನುಭವಿಸುವದಕ್ಕಿಂತ ಮುಂಚೆ 15
ನಿಮ್ಮ ಸಂಗಡ ಈ ಪಸ್ಕದ ಊಟವನ್ನು ಮಾಡುವದಕ್ಕೆ ಕುತೂಹಲದಿಂದ ಅಪೇಕ್ಷಿಸಿದ್ದೇನೆ.
ನಾನು ನಿಮಗೆ ಹೇಳುತ್ತೇನೆ, ಇದು ದೇವರ ರಾಜ್ಯದಲ್ಲಿ ನೆರವೇರುವ ತನಕ ನಾನು ಇನ್ನು 16
ಮೇಲೆ ಪಸ್ಕದ ಊಟವನ್ನು ಮಾಡುವದೇ ಇಲ್ಲ ಎಂದು ಹೇಳಿದನು. ಆ ಮೇಲೆ ಆತನು 17
[ದ್ರಾಕ್ಷಾರಸ ತುಂಬಿದ] ಪಾತ್ರೆಯನ್ನು ತೆಗೆದುಕೊಂಡು ದೇವರ ಸ್ತೋತ್ರಾಮಾಡಿ—
ಇದನ್ನು ತಕ್ಕೊಂಡು ನಿಮ್ಮಲ್ಲಿ ಹಂಚಿಕೊಳ್ಳಿರಿ. ಇಂದಿನಿಂದ ದೇವರ ರಾಜ್ಯವು ಬರುವ 18
ತನಕ ನಾನು ದ್ರಾಕ್ಷಾರಸವನ್ನು ಕುಡಿಯುವದೇ ಇಲ್ಲವೆಂದು ನಿಮಗೆ ಹೇಳುತ್ತೇನೆ
ಅಂದನು. ಬಳಿಕ ಆತನು ರೊಟ್ಟಿಯನ್ನು ತೆಗೆದುಕೊಂಡು ದೇವರ ಸ್ತೋತ್ರಾಮಾಡಿ, 19
ಮುರಿದು ಅವರಿಗೆ ಕೊಟ್ಟು—ಇದು ನಿಮಗೋಸ್ಕರ ಕೊಟ್ಟಿರುವ ನನ್ನ ದೇಹ; ನನ್ನನ್ನು
ನೆನಸಿಕೊಳ್ಳುವದಕ್ಕೋಸ್ಕರ ಹೀಗೆ ಮಾಡಿರಿ[1] ಅಂದನು. ಊಟವಾದ ಮೇಲೆ ಆತನು 20
ಅದೇ ರೀತಿಯಾಗಿ ಪಾತ್ರೆಯನ್ನು ತೆಗೆದುಕೊಂಡು—ಈ ಪಾತ್ರೆಯು[2] ನಿಮಗೋಸ್ಕರ ಸುರಿ
ಸಲ್ಪಡುವ ನನ್ನ ರಕ್ತದಿಂದ ಸ್ಥಾಪಿತವಾಗುವ ಹೊಸ ಒಡಂಬಡಿಕೆಯನ್ನು ಸೂಚಿಸುತ್ತದೆ.
ಆದಾಗ್ಯೂ ನೋಡಿರಿ, ನನ್ನನ್ನು ಹಿಡುಕೊಡುವವನು ನನ್ನೊಡನೆ ಮೇಜಿನ ಮೇಲೆ ಕೈ 21
ಯಿಟ್ಟು ಊಟಮಾಡುತ್ತಿದ್ದಾನೆ. ಮನುಷ್ಯಕುಮಾರನಂತೂ ನೇಮಕವಾದ ಪ್ರಕಾರ 22
ಹೊರಟುಹೋಗುತ್ತಾನೆ ಸರಿ; ಆದರೆ ಆತನನ್ನು ಹಿಡುಕೊಡುವ ಮನುಷ್ಯನ ಗತಿಯನ್ನು
ಏನು ಹೇಳಲಿ ಅಂದನು. ಇದನ್ನು ಕೇಳಿ ಅವರು—ಇಂಥ ಕೆಲಸವನ್ನು ಮಾಡ 23
ಬೇಕೆಂದಿರುವವನು ನಮ್ಮಲ್ಲಿ ಯಾವನಾಗಿರಬಹುದು ಎಂದು ಒಬ್ಬರನ್ನೊಬ್ಬರು ಕೇಳು
ವದಕ್ಕೆ ತೊಡಗಿದರು.

ಇದಲ್ಲದೆ ತಮ್ಮಲ್ಲಿ ಯಾವನು ದೊಡ್ಡವನೆನಿಸಿಕೊಳ್ಳುವವನು ಎಂಬ ವಿಷಯದಲ್ಲಿ 24
ಅವರೊಳಗೆ ಚರ್ಚೆ ಹುಟ್ಟಿತು. ಆಗ ಆತನು ಅವರಿಗೆ—ಅನ್ಯದೇಶದ ಅರಸರು ತಮ್ಮ 25
ತಮ್ಮ ಜನಗಳ ಮೇಲೆ ದೊರೆತನಮಾಡುತ್ತಾರೆ, ಮತ್ತು ಅವರ ಮೇಲೆ ಅಧಿಕಾರ ನಡಸು
ವವರು ಧರ್ಮಿಷ್ಠರೆನ್ನಿಸಿಕೊಳ್ಳುತ್ತಾರೆ. ನೀವು ಹಾಗಿರಬಾರದು; ನಿಮ್ಮಲ್ಲಿ ಹೆಚ್ಚಿನವನು 26

[1] ಅಥವಾ, ಮುರಿದು ತಿನ್ನಿರಿ. [2] ಅಥವಾ, ಪಾತ್ರೆಯಲ್ಲಿರುವದು.

27 ಚಿಕ್ಕವನಂತಾಗಬೇಕು, ಮುಖ್ಯಸ್ಥನು ಸೇವಕನಂತಾಗಬೇಕು. ಯಾವನು ಹೆಚ್ಚಿನವನು? ಊಟಕ್ಕೆ ಕೂತವನೋ ಸೇವೆಮಾಡುವವನೋ? ಊಟಕ್ಕೆ ಕೂತವನಲ್ಲವೇ? ಆದರೆ
28 ನಾನು ನಿಮ್ಮಲ್ಲಿ ಸೇವೆ ಮಾಡುವವನಂತಿದ್ದೇನೆ. ನೀವು ನನ್ನ ಕಷ್ಟಗಳಲ್ಲಿ ನನ್ನ ಸಂಗಡ
29 ಎಡೆಬಿಡದೆ ಇದ್ದವರು. ಆದದರಿಂದ ನನ್ನ ತಂದೆಯು ನನಗೆ ರಾಜ್ಯವನ್ನು ನೇಮಿಸಿದ
30 ಪ್ರಕಾರ ನಾನು ನಿಮಗೂ ನೇಮಿಸುತ್ತೇನೆ; ನನ್ನ ರಾಜ್ಯದಲ್ಲಿ ನೀವು ನನ್ನ ಮೇಜಿನ ಮೇಲೆ ಊಟಾಮಾಡುವಿರಿ, ಕುಡಿಯುವಿರಿ; ಮತ್ತು ಸಿಂಹಾಸನಗಳ ಮೇಲೆ ಕೂತು
31 ಕೊಂಡು ಇಸ್ರಯೇಲಿನ ಹನ್ನೆರಡು ಕುಲಗಳಿಗೆ ನ್ಯಾಯತೀರಿಸುವಿರಿ. ಸೀಮೋನನೇ, ಸೀಮೋನನೇ, ನೋಡು, ಸೈತಾನನು ನಿಮ್ಮನ್ನು ಗೋದಿಯಂತೆ ಒನೆಯಬೇಕೆಂದು
32 ಅಪ್ಪಣೆ ಕೇಳಿಕೊಂಡನು; ಆದರೆ ನಿನ್ನ ನಂಬಿಕೆ ಕುಂದಿಹೋಗಬಾರದೆಂದು ನಾನು ನಿನ್ನ ವಿಷಯದಲ್ಲಿ ದೇವರಿಗೆ ವಿಜ್ಞಾಪನೆ ಮಾಡಿಕೊಂಡೆನು. ನೀನು ತಿರುಗಿಕೊಂಡ
33 ಮೇಲೆ ನಿನ್ನ ಸಹೋದರರನ್ನು ದೃಢಪಡಿಸು ಎಂದು ಹೇಳಿದನು. ಆದರೆ ಅವನು— ಸ್ವಾಮೀ, ನಿನ್ನ ಸಂಗಡ ಸೆರೆಮನೆಗೆ ಹೋಗುವದಕ್ಕೂ ಸಾಯುವದಕ್ಕೂ ಸಿದ್ಧವಾಗಿದ್ದೇನೆ
34 ಅನ್ನಲು, ಆತನು—ಪೇತ್ರನೇ, ನನ್ನ ವಿಷಯದಲ್ಲಿ—ಇವನನ್ನು ಅರಿಯೆನೆಂದು ನೀನು ಮೂರು ಸಾರಿ ಹೇಳಿದ ತನಕ ಈ ಹೊತ್ತು ಕೋಳಿ ಕೂಗುವದಿಲ್ಲವೆಂದು ನಿನಗೆ ಹೇಳುತ್ತೇನೆ ಅಂದನು.

35 ಮತ್ತು ಆತನು—ನಿಮ್ಮನ್ನು ನಾನು ಹಮ್ಮಿಣಿ ಹಸಿಬೆ ಜೋಡುಗಳಿಲ್ಲದೆ ಕಳುಹಿಸಿದಾಗ ನಿಮಗೆ ಏನಾದರೂ ಕೊರತೆಯಾಯಿತೋ ಎಂದು ಕೇಳಲು, ಅವರು ಏನೂ
36 ಇಲ್ಲವೆಂದು ಉತ್ತರಕೊಟ್ಟರು. ಅದಕ್ಕೆ ಆತನು—ಈಗಲಾದರೋ ಹಮ್ಮಿಣಿಯಿದ್ದವನು ಅದನ್ನು ತಕ್ಕೊಳ್ಳಲಿ, ಹಸಿಬೆಯಿದ್ದವನು ಅದನ್ನು ತಕ್ಕೊಳ್ಳಲಿ, ಮತ್ತು ಕತ್ತಿಯಿಲ್ಲದವನು
37 ತನ್ನ ಮೇಲಂಗಿಯನ್ನು ಮಾರಿ ಒಂದು ಕತ್ತಿಯನ್ನು ಕೊಂಡುಕೊಳ್ಳಲಿ. ಯಾಕಂದರೆ— ಆತನು ಅಪರಾಧಿಗಳಲ್ಲಿ ಒಬ್ಬನಂತೆ ಎಣಿಸಲ್ಪಟ್ಟನು ಎಂದು ಬರೆದಿರುವ ಮಾತು[1] ನನ್ನಲ್ಲಿ ನೆರವೇರಬೇಕಾಗಿದೆ ಎಂದು ನಿಮಗೆ ಹೇಳುತ್ತೇನೆ; ನನ್ನ ವಿಷಯವಾದದ್ದು
38 ಕೊನೆಗಾಣಬೇಕು ಎಂದು ಹೇಳಿದನು. ಅವರು—ಸ್ವಾಮೀ, ಇಗೋ ಇಲ್ಲಿ ಎರಡು ಕತ್ತಿಗಳಿವೆ ಅನ್ನಲು, ಆತನು ಅವರಿಗೆ—ಅಷ್ಟು ಸಾಕು ಅಂದನು.

ಯೇಸು ಗೆತ್ಸೇಮನೆತೋಟಕ್ಕೆ ಹೋಗಿ ಪ್ರಾರ್ಥಿಸಿದ್ದು; ಯೂದನು ಆತನನ್ನು ಶತ್ರುಗಳಿಗೆ ಹಿಡುಕೊಟ್ಟದ್ದು.

(ಮತ್ತಾಯ **26**, 36—56; ಮಾರ್ಕ **14**, 32—50; ಯೋಹಾನ **18**, 1—11.)

39 ತರುವಾಯ ಆತನು ಹೊರಟು ಪದ್ಧತಿಪ್ರಕಾರ ಎಣ್ಣೇಮರಗಳ ಗುಡ್ಡಕ್ಕೆ ಹೋದನು.
40 ಶಿಷ್ಯರೂ ಆತನ ಹಿಂದೆ ಹೋದರು. ಆತನು ಕ್ಲುಪ್ತಸ್ಥಳಕ್ಕೆ ಬಂದಾಗ, ಅವರಿಗೆ— ನೀವು ಶೋಧನೆಗೆ ಒಳಗಾಗದಂತೆ ದೇವರನ್ನು ಪ್ರಾರ್ಥಿಸಿರಿ ಎಂದು ಹೇಳಿದನು.
41 ಆ ಮೇಲೆ ಆತನು ಅವರನ್ನು ಬಿಟ್ಟು ಕಲ್ಲೆಸುಗೆಯಷ್ಟು ದೂರ ಹೋಗಿ, ಮೊಣ
42 ಕಾಲೂರಿ—ತಂದೆಯೇ, ನಿನಗೆ ಇಷ್ಟವಿದ್ದರೆ ಈ ಪಾತ್ರೆಯನ್ನು[2] ನನ್ನಿಂದ ತೊಲಗಿಸು;

[1] ಯೆಶಾಯ ೫೩, ೧೨.   [2] ಅಂದರೆ, ಈ ಕಷ್ಟಾನುಭವವನ್ನು.

ಹ್ಯಾಗೂ ನನ್ನ ಚಿತ್ತದ ಪ್ರಕಾರವಾಗದೆ, ನಿನ್ನ ಚಿತ್ತದ ಪ್ರಕಾರವೇ ಆಗಲಿ ಅಂದನು.
ಆಗ ಪರಲೋಕದಿಂದ ಬಂದ ಒಬ್ಬ ದೇವದೂತನು ಆತನಿಗೆ ಕಾಣಿಸಿಕೊಂಡು, ಆತನನ್ನು 43
ಬಲಪಡಿಸಿದನು. ಆತನು ಮನೋವ್ಯಥೆಯುಳ್ಳವನಾಗಿ ಇನ್ನೂ ಆಸಕ್ತಿಯಿಂದ ಪ್ರಾರ್ಥಿ 44
ಸುತ್ತಿರಲಾಗಿ, ಆತನ ಬೆವರು ಭೂಮಿಗೆ ಬೀಳುತ್ತಿರುವ ರಕ್ತದ ದೊಡ್ಡ ಹನಿಗಳೋ
ಪಾದಿಯಲ್ಲಿತ್ತು. ಆತನು ಪ್ರಾರ್ಥನೆ ಮುಗಿಸಿ ಎದ್ದು, ಶಿಷ್ಯರ ಕಡೆಗೆ ಹೋಗಿ, ದುಃಖ 45
ಭಾರದಿಂದ ಅವರಿಗೆ ನಿದ್ರೆಹತ್ತಿರುವದನ್ನು ಕಂಡು—ನೀವು ನಿದ್ರೆಮಾಡುವದೇನು? 46
ಏಳಿರಿ, ಶೋಧನೆಗೆ ಒಳಗಾಗದಂತೆ ಪ್ರಾರ್ಥಿಸಿರಿ ಎಂದು ಹೇಳಿದನು.

ಆತನು ಇನ್ನೂ ಮಾತಾಡುತ್ತಿರಲು ಜನರ ಗುಂಪು ಕಾಣಿಸಿತು. ಹನ್ನೆರಡು ಮಂದಿ 47
ಶಿಷ್ಯರಲ್ಲಿ ಒಬ್ಬನಾಗಿದ್ದ ಯೂದನೆಂಬವನು ಆ ಜನರ ಮುಂದೆಮುಂದೆ ನಡೆದನು.
ಅವನು ಯೇಸುವಿಗೆ ಮುದ್ದಿಡುವದಕ್ಕಾಗಿ ಆತನ ಬಳಿಗೆ ಬರಲು, ಯೇಸು ಅವನಿಗೆ— 48
ಯೂದನೇ, ಮುದ್ದಿಟ್ಟು ಮನುಷ್ಯಕುಮಾರನನ್ನು ಹಿಡುಕೊಡುತ್ತೀಯಾ ಎಂದು ಕೇಳಿ
ದನು. ಆತನ ಸುತ್ತಲಿದ್ದವರು ಮುಂದೆ ಆಗುವದನ್ನು ತಿಳಿದು—ಸ್ವಾಮೀ, ನಾವು 49
ಕತ್ತಿಯಿಂದ ಹೊಡೆಯೋಣೋ ಎಂದು ಕೇಳಿದರು. ಅವರಲ್ಲಿ ಒಬ್ಬನು ಮಹಾಯಾಜ 50
ಕನ ಆಳನ್ನು ಹೊಡೆದು, ಅವನ ಬಲಗಿವಿಯನ್ನು ಕಡಿದುಹಾಕಿದನು. ಆದರೆ ಯೇಸು— 51
ಇಷ್ಟಕ್ಕೇ ಬಿಡಿರಿ ಎಂದು ಹೇಳಿ, ಆ ಕಿವಿಯನ್ನು ಮುಟ್ಟಿ ಅವನಿಗೆ ವಾಸಿಮಾಡಿದನು.
ಬಳಿಕ ಯೇಸು ತನ್ನನ್ನು ಹಿಡಿಯುವದಕ್ಕೆ ಬಂದ ಮಹಾಯಾಜಕರಿಗೂ ದೇವಾಲಯದ 52
ಕಾವಲಿನ ದಳವಾಯಿಗಳಿಗೂ ಸಭೆಯ ಹಿರಿಯರಿಗೂ—ಕಳ್ಳನನ್ನು ಹಿಡಿಯುವದಕ್ಕೆ
ಬಂದಂತೆ ಕತ್ತಿಗಳನ್ನೂ ದೊಣ್ಣೆಗಳನ್ನೂ ತೆಗೆದುಕೊಂಡು ಬಂದಿರೋ? ನಾನು ದಿನಾಲು 53
ದೇವಾಲಯದಲ್ಲಿ ನಿಮ್ಮ ಸಂಗಡ ಇದ್ದಾಗ ನೀವು ನನ್ನ ಮೇಲೆ ಕೈಹಾಕಲಿಲ್ಲ; ಆದರೆ
ಇದು ನಿಮ್ಮ ಕಾಲ, ಇದು ಅಂಧಕಾರದ ದೊರೆತನ ಎಂದು ಹೇಳಿದನು.

ಪೇತ್ರನು ಯೇಸುವನ್ನು ನಾನರಿಯೆನೆಂದು ಹೇಳಿದ್ದು; ಹಿರೀಸಭೆಯವರು ಯೇಸುವನ್ನು ಮರಣದಂಡನೆಗೆ
ತಕ್ಕವನೆಂದು ತೀರ್ಪುಮಾಡಿ, ಅಧಿಪತಿಯ ಬಳಿಗೆ ತೆಗೆದುಕೊಂಡುಹೋದದ್ದು.

(ಮತ್ತಾಯ **26**, 57—75; ಮಾರ್ಕ **14**, 53—72; ಯೋಹಾನ **18**, 12—27.)

ಅವರು ಆತನನ್ನು ಹಿಡಿದು ಮಹಾಯಾಜಕನ ಮನೆಗೆ ತೆಗೆದುಕೊಂಡು ಹೋದರು; 54
ಪೇತ್ರನು ದೂರದಲ್ಲೇ ಹಿಂದೆಹಿಂದೆ ಬಂದನು. ಅಂಗಳದ ನಡುವೆ ಅವರು ಬೆಂಕೀ 55
ಹೊತ್ತಿಸಿ ಒಟ್ಟಾಗಿ ಕೂತುಕೊಳ್ಳಲು, ಅವರ ನಡುವೆ ಪೇತ್ರನೂ ಕೂತುಕೊಂಡನು.
ಅವನು ಬೆಳಕಿಗೆ ಮುಖವಾಗಿ ಕೂತಿರುವಾಗ, ಒಬ್ಬ ತೊತ್ತು ಅವನನ್ನು ಕಂಡು ಅವನನ್ನು 56
ದೃಷ್ಟಿಸಿ ನೋಡಿ—ಇವನು ಸಹ ಅವನ ಸಂಗಡ ಇದ್ದವನು ಅಂದಳು. ಆದರೆ 57
ಅವನು—ನಾನು ಅವನನ್ನು ಅರಿಯೆನಮ್ಮಾ ಎಂದು ಹೇಳಿದನು. ಸ್ವಲ್ಪ ಹೊತ್ತಿನ 58
ಮೇಲೆ ಒಬ್ಬನು ಅವನನ್ನು ಕಂಡು—ನೀನು ಸಹ ಅವರಲ್ಲೊಬ್ಬನು ಅನ್ನಲು, ಪೇತ್ರನು—
ಅಲ್ಲಪ್ಪಾ ಅಂದನು. ಹೆಚ್ಚುಕಡಿಮೆ ಒಂದು ತಾಸಿನ ಮೇಲೆ[1] ಇನ್ನೊಬ್ಬನು—ಇವನು 59

[1] ಅಂದರೆ, ಒಂದು ಘಂಟೇ ಹೊತ್ತಿನ ಮೇಲೆ.

ಗಲಿಲಾಯದವನು, ಸತ್ಯವಾಗಿ ಇವನು ಸಹ ಅವನ ಸಂಗಡ ಇದ್ದವನು ಎಂದು ದೃಢ
60 ವಾಗಿ ಹೇಳಿದನು. ಆದರೆ ಪೇತ್ರನು—ನೀನು ಹೇಳುವದೇನೋ ಅರಿಯೆನಪ್ಪಾ
61 ಅಂದನು. ಅವನು ಈ ಮಾತನ್ನು ಆಡುತ್ತಿರುವಾಗಲೇ ಕೋಳಿ ಕೂಗಿತು. ಸ್ವಾಮಿಯು
ಹಿಂತಿರುಗಿಕೊಂಡು ಪೇತ್ರನನ್ನು ನೋಡಿದನು. ಆಗ ಪೇತ್ರನು—ಈ ಹೊತ್ತು ಕೋಳಿ
ಕೂಗುವದಕ್ಕಿಂತ ಮುಂಚೆ ಮೂರು ಸಾರಿ ಇವನನ್ನು ಅರಿಯೆನೆಂದು ಹೇಳುವಿ ಎಂಬ
62 ದಾಗಿ ಸ್ವಾಮಿ ನುಡಿದ ಮಾತನ್ನು ನೆನಸಿ, ಹೊರಗೆ ಹೋಗಿ ಬಹು ವ್ಯಥೆಪಟ್ಟು ಅತ್ತನು.
63, 64 ಯೇಸುವನ್ನು ಹಿಡಿದವರು ಆತನನ್ನು ಹಾಸ್ಯಮಾಡುತ್ತಾ, ಆತನ ಕಣ್ಣುಕಟ್ಟಿ
ಹೊಡೆದು—ನಿನ್ನನ್ನು ಹೊಡೆದವನ್ಯಾರು? ಪ್ರವಾದನೆ ಹೇಳು ಎಂದು ಆತನನ್ನು ಕೇಳಿ
65 ದರು. ಆತನಿಗೆ ಇನ್ನೂ ಅನೇಕ ದೂಷಣೆಯ ಮಾತುಗಳನ್ನಾಡಿದರು.

66 ಬೆಳಗಾಗುವಾಗ ಯೆಹೂದ್ಯರ ಹಿರೀಸಭೆಯವರು ಅಂದರೆ ಮಹಾಯಾಜಕರೂ
ಶಾಸ್ತ್ರಿಗಳೂ ಕೂಡಿ ಆತನನ್ನು ತಮ್ಮ ನ್ಯಾಯವಿಚಾರಣಾಸಭೆಗೆ ತೆಗೆದುಕೊಂಡು ಬಂದು—
67 ನೀನು ಕ್ರಿಸ್ತನಾಗಿದ್ದರೆ ನಮಗೆ ಹೇಳು ಅಂದರು. ಆತನು ಅವರಿಗೆ—ನಾನು ನಿಮಗೆ
68 ಹೇಳಿದರೆ ನೀವು ನಂಬುವದಿಲ್ಲ, ನಾನು ನಿಮ್ಮನ್ನು ಏನಾದರೂ ಕೇಳಿದರೆ ನೀವು ಉತ್ತರ
69 ಕೊಡುವದಿಲ್ಲ. ಆದರೆ ಇಂದಿನಿಂದ ಮನುಷ್ಯಕುಮಾರನು ಸರ್ವಶಕ್ತನಾದ ದೇವರ
70 ಬಲಗಡೆಯಲ್ಲಿ ಕೂತಿರುವನು ಎಂದು ಹೇಳಿದನು. ಆಗ ಎಲ್ಲರು—ಹಾಗಾದರೆ ನೀನು
ದೇವರ ಕುಮಾರನೋ ಎಂದು ಕೇಳಲು, ಆತನು ಅವರಿಗೆ—ನನ್ನನ್ನು ಅವನೇ ಎಂದು
71 ನೀವೇ ಹೇಳುತ್ತೀರಿ ಎಂದು ಹೇಳಿದನು. ಅದಕ್ಕೆ ಅವರು—ನಮಗೆ ಬೇರೆ ಸಾಕ್ಷಿ
ಯಾಕೆ? ನಾವೇ ಇವನ ಬಾಯಿಂದ ಕೇಳಿದೆವಲ್ಲಾ ಅಂದರು.

ಪಿಲಾತನು ಯೇಸುವನ್ನು ವಿಚಾರಿಸಿ ಆತನಲ್ಲಿ ಅಪರಾಧವಿಲ್ಲವೆಂದು ಕಂಡರೂ
ಆತನಿಗೆ ಮರಣದಂಡನೆಯನ್ನು ವಿಧಿಸಿದ್ದು.
(ಮತ್ತಾಯ 27, 2. 11—31; ಮಾರ್ಕ 15, 1—20; ಯೋಹಾನ 18, 28—19, 16.)

**23** ಅಲ್ಲಿ ಕೂಡಿದ್ದವರೆಲ್ಲರು ಎದ್ದು ಆತನನ್ನು ಪಿಲಾತನ ಬಳಿಗೆ ತೆಗೆದುಕೊಂಡು
2 ಹೋಗಿ—ಇವನು ತಾನೇ ಕ್ರಿಸ್ತನೆಂಬ ಒಬ್ಬ ಅರಸನಾಗಿದ್ದೇನೆಂದು ಹೇಳುತ್ತಾ ಕೈಸರನಿಗೆ
ತೆರಿಗೆ ಕೊಡಬಾರದೆಂದು ಬೋಧಿಸುತ್ತಾ ನಮ್ಮ ದೇಶದವರ ಮನಸ್ಸು ಕೆಡಿಸುವದನ್ನು
ನಾವು ಕಂಡೆವು ಎಂಬದಾಗಿ ಆತನ ಮೇಲೆ ದೂರು ಹೇಳುವದಕ್ಕೆ ತೊಡಗಿದರು.
3 ಪಿಲಾತನು ಆತನನ್ನು—ನೀನು ಯೆಹೂದ್ಯರ ಅರಸನೋ ಎಂದು ಕೇಳಲು, ಆತನು—
4 ನೀನೇ ಹೇಳುತ್ತೀ ಎಂದು ಉತ್ತರಕೊಟ್ಟನು. ಪಿಲಾತನು ಮಹಾಯಾಜಕರಿಗೂ ಜನರ
ಗುಂಪಿಗೂ—ಈ ಮನುಷ್ಯನಲ್ಲಿ ನನಗೆ ಯಾವ ತಪ್ಪೂ ಕಾಣಿಸುವದಿಲ್ಲವೆಂದು ಹೇಳಿದನು.
5 ಅದಕ್ಕೆ ಅವರು—ಗಲಿಲಾಯದಲ್ಲಿ ಪ್ರಾರಂಭಮಾಡಿ ಇಲ್ಲಿಯ ವರೆಗೂ ಯೂದಾಯ
ಸೀಮೆಯಲ್ಲೆಲ್ಲಾ ಇವನು ಬೋಧನೆಮಾಡುತ್ತಾ ಜನರ ಮನಸ್ಸನ್ನು ಕದಲಿಸುತ್ತಾನೆ
6 ಎಂದು ಇನ್ನೂ ಒತ್ತಿಹೇಳಿದರು. ಇದನ್ನು ಪಿಲಾತನು ಕೇಳಿ—ಈ ಮನುಷ್ಯನು
7 ಗಲಿಲಾಯದವನೋ ಎಂದು ವಿಚಾರಿಸಿ, ಇವನು ಹೆರೋದನ ಅಧಿಕಾರಕ್ಕೆ ಒಳಪಟ್ಟ

ವನು ಎಂದು ತಿಳುಕೊಂಡು, ಆತನನ್ನು ಹೆರೋದನ ಬಳಿಗೆ ಕಳುಹಿಸಿದನು. ಹೆರೋದನು ಆ ದಿವಸಗಳಲ್ಲಿ ಯೆರೂಸಲೇಮಿನಲ್ಲೇ ಇದ್ದನು.

8 ಹೆರೋದನು ಯೇಸುವನ್ನು ನೋಡಿದಾಗ ಬಹಳ ಸಂತೋಷಪಟ್ಟನು; ಯಾಕಂದರೆ ಆತನ ವಿಷಯವಾಗಿ ಅನೇಕ ಸಂಗತಿಗಳನ್ನು ಕೇಳಿದ್ದರಿಂದ ಆತನನ್ನು ಕಾಣಬೇಕೆಂದು ಬಹುಕಾಲದಿಂದ ಅಪೇಕ್ಷಿಸಿದ್ದನು. ಆತನಿಂದ ಯಾವದಾದರೂ ಒಂದು ಸೂಚಕ ಕಾರ್ಯವಾಗುವದನ್ನು ನೋಡಬೇಕೆಂದು ನಿರೀಕ್ಷಿಸಿದನು. 9 ಆದರೆ ಅವನು ಅನೇಕ ಮಾತುಗಳಿಂದ ಆತನನ್ನು ಪ್ರಶ್ನೆಮಾಡಿದಾಗ್ಯೂ, ಆತನು ಅವನಿಗೆ ಏನೂ ಉತ್ತರ ಕೊಡಲಿಲ್ಲ. 10 ಮಹಾಯಾಜಕರೂ ಶಾಸ್ತ್ರಿಗಳೂ ನಿಂತುಕೊಂಡು ಆತನ ಮೇಲೆ ಬಹು ಬಲವಾಗಿ ದೂರು ಹೇಳುತ್ತಿದ್ದರು. 11 ಕಡೆಗೆ ಹೆರೋದನು ತನ್ನ ಸಿಪಾಯಿಗಳನ್ನು ಕೂಡಿಕೊಂಡು ಆತನನ್ನು ತಿರಸ್ಕರಿಸಿ ಹಾಸ್ಯಮಾಡಿ ಶೋಭಾಯಮಾನವಾದ ಉಡುಪನ್ನು ಹಾಕಿಸಿ, ಪಿಲಾತನ ಬಳಿಗೆ ತಿರಿಗಿ ಕಳುಹಿಸಿಕೊಟ್ಟನು. 12 ಅದೇ ದಿನದಲ್ಲಿ ಹೆರೋದನೂ ಪಿಲಾತನೂ ಒಬ್ಬರಿಗೊಬ್ಬರು ಸ್ನೇಹಿತರಾದರು; ಅದಕ್ಕಿಂತ ಮೊದಲು ವೈರಿಗಳಾಗಿದ್ದರು.

13 ತರುವಾಯ ಪಿಲಾತನು ಮಹಾಯಾಜಕರನ್ನೂ ಅಧಿಕಾರಿಗಳನ್ನೂ ಪ್ರಜೆಗಳನ್ನೂ ಒಟ್ಟಾಗಿ ಕರಸಿ, 14 ಅವರಿಗೆ—ಈ ಮನುಷ್ಯನು ಪ್ರಜೆಗಳನ್ನು ತಿರುಗಿಬೀಳುವಂತೆ ಮಾಡುವವನು ಎಂದು ಇವನನ್ನು ನನ್ನ ಬಳಿಗೆ ತಂದಿರಲ್ಲಾ; ನೀವು ಇವನ ಮೇಲೆ ತಂದ ದೂರುಗಳ ವಿಷಯವಾಗಿ ನಾನು ನಿಮ್ಮ ಮುಂದೆಯೇ ವಿಚಾರಣೆಮಾಡಿದಾಗ್ಯೂ ಇವನಲ್ಲಿ ಒಂದು ತಪ್ಪಾದರೂ ನನಗೆ ಕಾಣಲಿಲ್ಲ. 15 ಹೆರೋದನಿಗಾದರೂ ಕಾಣಲಿಲ್ಲ; ಅವನು ಇವನನ್ನು ಹಿಂತಿರುಗಿ ನಮ್ಮ ಬಳಿಗೆ ಕಳುಹಿಸಿದನಲ್ಲಾ. ಇವನು ಮರಣದಂಡನೆಗೆ ಯೋಗ್ಯವಾದದ್ದೇನೂ ಮಾಡಿದವನಲ್ಲವೆಂದಾಯಿತು. 16 ಆದ್ದರಿಂದ ನಾನು ಇವನನ್ನು ಹೊಡಿಸಿ ಬಿಟ್ಟುಬಿಡುತ್ತೇನೆ ಎಂದು ಹೇಳಿದನು[1]. 18 ಆದರೆ ಅವರು—ಇವನನ್ನು ಕೊಲ್ಲಿಸು, ನಮಗೆ ಬರಬ್ಬನನ್ನು ಬಿಡಿಸಿಕೊಡು ಎಂದು ಒಟ್ಟಾಗಿ ಕೂಗಿದರು. 19 ಈ ಬರಬ್ಬನನ್ನು ಆ ಪಟ್ಟಣದಲ್ಲಿ ನಡೆದ ಒಂದಾನೊಂದು ದಂಗೆಯ ನಿಮಿತ್ತವಾಗಿಯೂ ಕೊಲೆಯ ನಿಮಿತ್ತವಾಗಿಯೂ ಸೆರೆಮನೆಯಲ್ಲಿ ಹಾಕಿದ್ದರು. 20 ಪಿಲಾತನು ಯೇಸುವನ್ನು ಬಿಡಿಸಬೇಕೆಂದು ಮನಸ್ಸುಳ್ಳವನಾಗಿದ್ದು, ತಿರಿಗಿ ಅವರ ಸಂಗಡ ಮಾತಾಡಿದನು. 21 ಆದರೆ ಅವರು—ಇವನನ್ನು ಶಿಲುಬೆಗೆ ಹಾಕಿಸು, ಶಿಲುಬೆಗೆ ಹಾಕಿಸು ಎಂದು ಕೂಗಿದರು. 22 ಅವನು ಮೂರನೇ ಸಾರಿ—ಯಾಕೆ? ಇವನು ಕೆಟ್ಟದ್ದೇನು ಮಾಡಿದನು? ನಾನು ಇವನಲ್ಲಿ ಮರಣದಂಡನೆಗೆ ತಕ್ಕ ಅಪರಾಧವೇನೂ ಕಾಣಲಿಲ್ಲ; ಆದ್ದರಿಂದ ಇವನನ್ನು ಹೊಡಿಸಿ ಬಿಟ್ಟುಬಿಡುತ್ತೇನೆ ಎಂದು ಅವರಿಗೆ ಹೇಳಿದನು. 23 ಆದರೆ ಅವರು ದೊಡ್ಡ ಕೂಗಾಟ ಮಾಡುತ್ತಾ—ಇವನನ್ನು ಶಿಲುಬೆಗೆ ಹಾಕಿಸಬೇಕೆಂದು ಕೇಳಿಕೊಂಡು ಬಲವಂತಮಾಡಿದರು; ಅವರ ಕೂಗಾಟವು ಗೆದ್ದಿತು. 24 ಪಿಲಾತನು—ನೀವು ಕೇಳಿಕೊಂಡಂತೆ ಆಗಲಿ ಎಂದು ನಿರ್ಣಯಿಸಿ, 25 ದಂಗೆ ಕೊಲೆಗಳ ನಿಮಿತ್ತವಾಗಿ ಸೆರೆಮನೆಯಲ್ಲಿ ಬಿದ್ದ ಆ ಮನು

---

[1] ಕೆಲವು ಪ್ರತಿಗಳಲ್ಲಿ ೧೭ನೇ ವಚನ ಉಂಟು; ಅದರಲ್ಲಿ—ಅಧಿಪತಿಯು ಹಬ್ಬದಕಾಲದಲ್ಲಿ ಸೆರೆಯವರೊಳಗೆ ಒಬ್ಬನನ್ನು ಬಿಡಿಸಬೇಕಾಗಿತ್ತೆಂದು ಬರೆದದೆ.

ಷ್ಯನನ್ನು ಅವರು ಕೇಳಿಕೊಳ್ಳುತ್ತಿದ್ದ ಪ್ರಕಾರ ಬಿಡಿಸಿಕೊಟ್ಟು, ಯೇಸುವನ್ನು ಅವರ ಚಿತ್ತಾನುಸಾರ ಒಪ್ಪಿಸಿಬಿಟ್ಟನು.

ಯೇಸುವನ್ನು ಶಿಲುಬೆಗೆ ಹಾಕಿದ್ದು; ಆತನು ಪ್ರಾಣಾ ಬಿಟ್ಟದ್ದು.

(ಮತ್ತಾಯ 27, 32—56; ಮಾರ್ಕ 15, 21—41; ಯೋಹಾನ 19, 17—30.)

26 ಅವರು ಆತನನ್ನು ತೆಗೆದುಕೊಂಡು ಹೋಗುತ್ತಿರುವಾಗ, ಹೊಲದಿಂದ ಬರುತ್ತಿದ್ದ ಕುರೇನೆಯ ಸೀಮೋನನೆಂಬವನನ್ನು ಹಿಡಿದು ಶಿಲುಬೆಯನ್ನು ಅವನ ಮೇಲೆ ಇಟ್ಟು ಯೇಸುವಿನ ಹಿಂದೆ ಹೊತ್ತುಕೊಂಡು ಬರುವ ಹಾಗೆ ಮಾಡಿದರು.

27 ಜನರೂ ಸ್ತ್ರೀಯರೂ ದೊಡ್ಡ ಗುಂಪಾಗಿ ಆತನ ಹಿಂದೆ ಬಂದರು. ಆ ಸ್ತ್ರೀಯರು ಎದೆ 28 ಬಡುಕೊಳ್ಳುತ್ತಾ ಆತನ ವಿಷಯದಲ್ಲಿ ಗೋಳಾಡುತ್ತಾ ಇದ್ದರು. ಯೇಸು ಅವರ ಕಡೆಗೆ ತಿರುಗಿಕೊಂಡು—ಯೆರೂಸಲೇಮಿನ ಸ್ತ್ರೀಯರೇ, ನನಗೋಸ್ಕರ ಅಳಬೇಡಿರಿ, 29 ನಿಮಗೋಸ್ಕರವೂ ನಿಮ್ಮ ಮಕ್ಕಳಿಗೋಸ್ಕರವೂ ಅಳಿರಿ. ಯಾಕಂದರೆ ಬಂಜೆಯರೂ ಬಸುರಾಗದವರೂ ಮೊಲೆಕುಡಿಸದವರೂ ಧನ್ಯರು ಎಂದು ಜನರು ಹೇಳುವ ದಿವಸಗಳು 30 ಬರುತ್ತವೆ. ಆ ಕಾಲದಲ್ಲಿ ಜನರು—ಬೆಟ್ಟಗಳೇ, ನಮ್ಮ ಮೇಲೆ ಬೀಳಿರಿ; ಗುಡ್ಡಗಳೇ, 31 ನಮ್ಮನ್ನು ಮುಚ್ಚಿಕೊಳ್ಳಿರಿ ಅನ್ನುವರು. ಮರ ಹಸಿಯಾಗಿರುವಾಗ ಇಷ್ಟೆಲ್ಲಾ ಮಾಡಿದರೆ, ಮರ ಒಣಗಿರುವಾಗ ಏನಾಗಬಹುದು? ಅಂದನು.

32 ಆತನ ಸಂಗಡ ಕೊಲ್ಲುವದಕ್ಕಾಗಿ ದುಷ್ಕರ್ಮಿಗಳಾಗಿದ್ದ ಬೇರೆ ಇಬ್ಬರನ್ನೂ ತೆಗೆದುಕೊಂಡು ಹೋದರು.

33 ಅವರು ಕಪಾಲವೆಂಬ ಸ್ಥಳಕ್ಕೆ ಬಂದಾಗ, ಅಲ್ಲಿ ಆತನನ್ನೂ ಆ ದುಷ್ಕರ್ಮಿಗಳನ್ನೂ ಶಿಲುಬೆಗೆ ಹಾಕಿದರು, ಒಬ್ಬನನ್ನು ಆತನ ಬಲಗಡೆಯಲ್ಲಿ, ಒಬ್ಬನನ್ನು ಆತನ ಎಡಗಡೆ 34 ಯಲ್ಲಿ ಹಾಕಿದರು. ಆಗ ಯೇಸು—ತಂದೆಯೇ, ಅವರಿಗೆ ಕ್ಷಮಿಸು; ತಾವು ಏನು ಮಾಡುತ್ತೇವೆಂಬುವದನ್ನು ಅರಿಯರು ಅಂದನು. ಆ ಮೇಲೆ ಆತನ ಬಟ್ಟೆಗಳನ್ನು ಪಾಲು 35 ಮಾಡಿ ಚೀಟುಹಾಕಿದರು. ಜನರು ನೋಡುತ್ತಾ ನಿಂತರು. ಇದಲ್ಲದೆ ಅಧಿಕಾರಿಗಳು ಹಾಸ್ಯಮಾಡಿ—ಇವನು ಮತ್ತೊಬ್ಬರನ್ನು ರಕ್ಷಿಸಿದನು; ಇವನು ದೇವರಾರಿಸಿಕೊಂಡ 36 ಕ್ರಿಸ್ತನು ಆಗಿದ್ದರೆ, ತನ್ನನ್ನು ತಾನೇ ರಕ್ಷಿಸಿಕೊಳ್ಳಲಿ ಅಂದರು. ಸಿಪಾಯಿಗಳೂ ಆತನನ್ನು ಹಾಸ್ಯಮಾಡಿದರು; ಅವರು ಆತನ ಹತ್ತರ ಬಂದು ಹುಳಿಮದ್ಯವನ್ನು ತೋರಿಸಿ— 37,38 ನೀನು ಯೆಹೂದ್ಯರ ಅರಸನಾಗಿದ್ದರೆ ನಿನ್ನನ್ನು ನೀನೇ ರಕ್ಷಿಸಿಕೋ ಅಂದರು. ಇದಲ್ಲದೆ ಆತನ ಶಿಲುಬೆಯ ಮೇಲ್ಗಡೆಯಲ್ಲಿ—ಇವನು ಯೆಹೂದ್ಯರ ಅರಸನು ಎಂಬದಾಗಿ ಒಂದು ವಿಳಾಸವಿತ್ತು.

39 ತೂಗಹಾಕಿದ್ದ ಆ ದುಷ್ಕರ್ಮಿಗಳಲ್ಲಿ ಒಬ್ಬನು ಆತನನ್ನು ದೂಷಿಸಿ—ನೀನು ಬರಬೇ 40 ಕಾದ ಕ್ರಿಸ್ತನಲ್ಲವೇ? ನಿನ್ನನ್ನು ರಕ್ಷಿಸಿಕೋ, ನಮ್ಮನ್ನೂ ರಕ್ಷಿಸು ಎಂದು ಹೇಳಿದ್ದಕ್ಕೆ, ಎರಡನೆಯವನು ಅವನನ್ನು ಗದರಿಸಿ—ನೀನು ಇದೇ ದಂಡನೆಯಲ್ಲಿರುವಾಗಲೂ ದೇವರಿಗೆ ಹೆದರುವ 41 ದಿಲ್ಲವೋ? ನಾವಂತೂ ನ್ಯಾಯವಾಗಿ ದಂಡನೆಯಲ್ಲಿದ್ದೇವೆ, ನಾವು ಮಾಡಿದ್ದಕ್ಕೆ ತಕ್ಕ ಪ್ರತಿ

ಫಲವನ್ನು ಹೊಂದುತ್ತಾ ಇದ್ದೇವೆ; ಈತನಾದರೋ ಅಲ್ಲದ್ದೇನೂ ಮಾಡಲಿಲ್ಲ ಎಂದು ಹೇಳಿ—
ಯೇಸುವೇ, ನೀನು ನಿನ್ನ ರಾಜ್ಯವನ್ನು ಪಡೆದವನಾಗಿ ಬರುವಾಗ[1] ನನ್ನನ್ನು ನೆನಸಿಕೋ 42
ಅಂದನು. ಅದಕ್ಕೆ ಯೇಸು—ಈ ಹೊತ್ತೇ ನನ್ನ ಸಂಗಡ ಪರದೈಸಿನಲ್ಲಿರುವಿ ಎಂದು ನಿನಗೆ 43
ಸತ್ಯವಾಗಿ ಹೇಳುತ್ತೇನೆ ಎಂದು ಉತ್ತರಕೊಟ್ಟನು. ಇಷ್ಟರಲ್ಲಿ ಹೆಚ್ಚುಕಡಿಮೆ ಮಧ್ಯಾ 44
ಹ್ನವಾಯಿತು. ಆಗಲಿಂದ ಸೂರ್ಯನು ಕಾಂತಿಗುಂದಿ ಮೂರು ಘಂಟೆಯ[2] ತನಕ 45
ಆ ದೇಶದ ಮೇಲೆಲ್ಲಾ ಕತ್ತಲೆಯಾಯಿತು; ಇದಲ್ಲದೆ ದೇವಾಲಯದ ತೆರೆಯು ನಡುವೆ
ಹರಿದುಹೋಯಿತು. ಆ ಮೇಲೆ ಯೇಸು—ತಂದೆಯೇ, ನನ್ನ ಆತ್ಮವನ್ನು ನಿನ್ನ ಕೈಗೆ 46
ಒಪ್ಪಿಸಿಕೊಡುತ್ತೇನೆ ಎಂದು ಮಹಾಧ್ವನಿಯಿಂದ ಕೂಗಿದನು; ಇದನ್ನು ಹೇಳಿದ ಮೇಲೆ
ಪ್ರಾಣಾಬಿಟ್ಟನು. ಶತಾಧಿಪತಿಯು ನಡೆದ ಸಂಗತಿಯನ್ನು ನೋಡಿ—ಈ ಮನುಷ್ಯನು 47
ಸತ್ಪುರುಷನೇ ನಿಜ ಎಂದು ದೇವರನ್ನು ಕೊಂಡಾಡಿದನು. ಈ ನೋಟಕ್ಕಾಗಿ ಕೂಡಿ 48
ಬಂದಿದ್ದ ಜನರೆಲ್ಲರು ನಡೆದ ಸಂಗತಿಯನ್ನು ನೋಡಿ ಎದೆ ಬಡುಕೊಳ್ಳುತ್ತಾ ಹಿಂತಿರುಗಿ
ಹೋದರು. ಇದಲ್ಲದೆ ಆತನ ಪರಿಚಿತಿಯವರೆಲ್ಲರೂ ಗಲಿಲಾಯದಿಂದ ಆತನ ಹಿಂದೆ 49
ಬಂದಿದ್ದ ಸ್ತ್ರೀಯರೂ ದೂರದಲ್ಲಿ ನಿಂತು[3] ಈ ಸಂಗತಿಗಳನ್ನು ನೋಡುತ್ತಿದ್ದರು.

### ಯೇಸುವನ್ನು ಸಮಾಧಿಯಲ್ಲಿ ಇಟ್ಟದ್ದು.

(ಮತ್ತಾಯ **27**, 57—61; ಮಾರ್ಕ **15**, 42—47; ಯೋಹಾನ **19**, 38—42.)

ಅರಿಮಥಾಯವೆಂಬ ಯೆಹೂದ್ಯರದೊಂದು ಪಟ್ಟಣದ ಒಬ್ಬ ಮನುಷ್ಯನಿದ್ದನು; 50-51
ಅವನ ಹೆಸರು ಯೋಸೇಫನು. ಅವನು ಮಂತ್ರಾಲೋಚನಾಸಭೆಯವನು, ಉತ್ತಮನು,
ಸತ್ಪುರುಷನು, ದೇವರ ರಾಜ್ಯವನ್ನು ಎದುರುನೋಡುತ್ತಿದ್ದವನು; ಅವನು ಮಂತ್ರಿ
ಸಭೆಯವರ ಆಲೋಚನೆಗೂ ಕೃತ್ಯಕ್ಕೂ ಸಮ್ಮತಿಪಟ್ಟಿರಲಿಲ್ಲ. ಅವನು ಪಿಲಾತನ 52
ಬಳಿಗೆ ಹೋಗಿ ಯೇಸುವಿನ ದೇಹವನ್ನು ಕೇಳಿಕೊಂಡು, ಅದನ್ನು ಇಳಿಸಿ ನಾರುಮಡಿ 53
ಯಲ್ಲಿ ಸುತ್ತಿ ಬಂಡೆಯಲ್ಲಿ ತೋಡಿದ್ದ ಸಮಾಧಿಯಲ್ಲಿ ಇಟ್ಟನು. ಅದರಲ್ಲಿ ಅದುವರೆಗೂ
ಯಾರನ್ನೂ ಮಲಗಿಸಿರಲಿಲ್ಲ. ಆ ದಿವಸವು ಸೌರಣೇ ದಿವಸವಾಗಿತ್ತು; ಮತ್ತು ಸಬ್ಬತ್ 54
ದಿನ ಪ್ರಾರಂಭವಾಗುವದಕ್ಕೆ ಸ್ವಲ್ಪ ಹೊತ್ತು ಮಾತ್ರ ಇತ್ತು. ಹೀಗಿರುವಲ್ಲಿ ಗಲಿಲಾಯ 55
ದಿಂದ ಆತನ ಸಂಗಡ ಬಂದಿದ್ದ ಸ್ತ್ರೀಯರು ಜೊತೆಯಲ್ಲಿ ಹಿಂದೆಯೇ ಹೋಗಿ ಆ ಸಮಾಧಿ
ಯನ್ನೂ ಆತನ ದೇಹವನ್ನಿಟ್ಟ ರೀತಿಯನ್ನೂ ನೋಡಿ, ಹಿಂತಿರುಗಿ ಬಂದು ಪರಿಮಳದ್ರವ್ಯ 56
ಗಳನ್ನೂ ಸುಗಂಧತೈಲವನ್ನೂ ಸಿದ್ಧಮಾಡಿಕೊಂಡರು.

### ಯೇಸುವಿನ ಪುನರುತ್ಥಾನವು.

(ಮತ್ತಾಯ **28**, 1—8; ಮಾರ್ಕ **16**, 1—18; ಯೋಹಾನ **20**, 1—23; 1 ಕೊರಿಂಥ **15**, 5.)

ಆ ಸ್ತ್ರೀಯರು ಸಬ್ಬತ್‌ದಿನದಲ್ಲಿ ಧರ್ಮನಿಯಮದ ಪ್ರಕಾರ ವಿಶ್ರಮಿಸಿಕೊಂಡು,
ವಾರದ ಮೊದಲನೇ ದಿವಸದಲ್ಲಿ ಇನ್ನೂ ಮೊಬ್ಬಿರುವಾಗ ತಾವು ಸಿದ್ಧಮಾಡಿದ್ದ ಪರಿಮಳ **24**

[1] ಕೆಲವು ಪ್ರತಿಗಳಲ್ಲಿ ರಾಜ್ಯಾಧಿಕಾರಕ್ಕೆ ಬರುವಾಗ ಎಂದು ಬರೆದದೆ. [2] ಮೂಲ, ಒಂಭತ್ತು ತಾಸಿನ.
[3] ಕೀರ್ತನೆ ೮೮, ೮; ೩೮, ೧೧.

2 ದ್ರವ್ಯಗಳನ್ನು ತೆಗೆದುಕೊಂಡು ಸಮಾಧಿಗೆ ಬಂದರು. ಸಮಾಧಿಯ ಬಾಯಿಗೆ ಮುಚ್ಚಿದ
3 ಕಲ್ಲು ಉರುಳಿಬಿದ್ದಿರುವದನ್ನು ಕಂಡು, ಒಳಕ್ಕೆ ಹೋಗಿ ನೋಡುವಲ್ಲಿ ಯೇಸುಸ್ವಾಮಿಯ
4 ದೇಹವು ಕಾಣಲಿಲ್ಲ. ಈ ವಿಷಯದಲ್ಲಿ ಅವರಿಗೆ ಗಲಿಬಿಲಿ ಉಂಟಾದಾಗ, ಹೊಳೆ
ಯುವ ಉಡುಪನ್ನು ಧರಿಸಿದ್ದ ಇಬ್ಬರು ಪುರುಷರು ಅಕಸ್ಮಾತ್ತಾಗಿ ಅವರ ಬಳಿಯಲ್ಲಿ
5 ನಿಂತುಕೊಂಡರು. ಆ ಸ್ತ್ರೀಯರು ಭಯಹಿಡಿದವರಾಗಿ ತಮ್ಮ ಮುಖಗಳನ್ನು ನೆಲದ
ಕಡೆಗೆ ಬೊಗ್ಗಿಸಿಕೊಂಡಿರುವಾಗ, ಆ ಪುರುಷರು ಅವರಿಗೆ—ಸತ್ತವರೊಳಗೆ ಬದುಕಿರು
6-7 ವವನನ್ನು ಹುಡುಕುವದೇನು? ಆತನು ಇಲ್ಲಿಲ್ಲ, ಎದ್ದು ಹೋದನು. ಆತನು ಗಲಿಲಾ
ಯದಲ್ಲಿದ್ದಾಗ—ಮನುಷ್ಯಕುಮಾರನು ಪಾಪಿಗಳಾದ ಮನುಷ್ಯರ ಕೈಗೆ ಒಪ್ಪಿಸಲ್ಪಟ್ಟು
ಶಿಲುಬೆಗೆ ಹಾಕಲ್ಪಟ್ಟು ಮೂರನೇ ದಿನದಲ್ಲಿ ಎದ್ದು ಬರುವದು ಅಗತ್ಯವೆಂದು ನಿಮಗೆ
8 ಹೇಳಿದ್ದನ್ನು ನೆನಪಿಗೆ ತಂದುಕೊಳ್ಳಿರಿ ಎಂದು ಹೇಳಿದರು. ಸ್ತ್ರೀಯರು ಆತನ ಮಾತು
9 ಗಳನ್ನು ನೆನಪಿಗೆ ತಂದುಕೊಂಡು, ಸಮಾಧಿಯ ಬಳಿಯಿಂದ ಹಿಂತಿರುಗಿ ಹೋಗಿ,
ಆ ಸಂಗತಿಗಳನ್ನೆಲ್ಲಾ ಹನ್ನೊಂದು ಮಂದಿ ಶಿಷ್ಯರಿಗೂ ಉಳಿದವರೆಲ್ಲರಿಗೂ ತಿಳಿಸಿದರು.
10 ಆ ಸ್ತ್ರೀಯರು ಯಾರಂದರೆ, ಮಗ್ದಲದ ಮರಿಯಳು, ಯೊಹನ್ನಳು, ಯಾಕೋಬನ
ತಾಯಿಯಾದ ಮರಿಯಳು ಇವರೇ. ಇವರ ಜೊತೆಯಲ್ಲಿದ್ದ ಬೇರೆ ಸ್ತ್ರೀಯರು ಸಹ
11 ಅಪೊಸ್ತಲರಿಗೆ ಆ ಸಂಗತಿಗಳನ್ನು ಹೇಳಿದರು. ಅವರು ನಂಬಲಿಲ್ಲ; ಆ ಮಾತುಗಳು
12 ಅವರಿಗೆ ಬರೀ ಹರಟೆಯಾಗಿ ತೋರಿದವು. [ಆದರೆ ಪೇತ್ರನು ಎದ್ದು ಸಮಾಧಿಗೆ ಓಡಿ
ಹೋಗಿ, ಬೊಗ್ಗಿ ನೋಡಿ, ನಾರುಬಟ್ಟೆಗಳನ್ನು ಮಾತ್ರ ಕಂಡು, ನಡೆದ ಸಂಗತಿಗೆ ತನ್ನಲ್ಲಿ
ಆಶ್ಚರ್ಯಪಡುತ್ತಾ ಹೊರಟುಹೋದನು.][1]

13 ಅದೇ ದಿನದಲ್ಲಿ ಶಿಷ್ಯರಲ್ಲಿ ಇಬ್ಬರು ಯೆರೂಸಲೇಮಿಗೆ ಆರುವರೆ ಮೈಲು ದೂರದಲ್ಲಿದ್ದ
14 ಎಮ್ಮಾಹು ಎಂಬ ಹಳ್ಳಿಗೆ ಹೋಗುತ್ತಾ, ಸಂಭವಿಸಿದ ಈ ಎಲ್ಲಾ ಕಾರ್ಯಗಳ ವಿಷಯ
15 ವಾಗಿ ಸಂಭಾಷಣೆಮಾಡುತ್ತಿದ್ದರು. ಅವರು ಸಂಭಾಷಣೆಯಲ್ಲಿ ಚರ್ಚಿಸುತ್ತಿರುವಾಗ
16 ಯೇಸು ತಾನೇ ಹತ್ತರಕ್ಕೆ ಬಂದು ಅವರ ಜೊತೆಯಲ್ಲಿ ಹೋದನು. ಆದರೆ ಅವರು
17 ಆತನ ಗುರುತನ್ನು ಹಿಡಿಯಲಿಲ್ಲ; ಅವರ ಕಣ್ಣುಕಟ್ಟಿದ ಹಾಗಾಯಿತು. ಆತನು ಅವ
ರನ್ನು—ನೀವು ಮಾರ್ಗದಲ್ಲಿ ಹೋಗುತ್ತಾ ಚರ್ಚಿಸಿ ಮಾತಾಡಿಕೊಳ್ಳುವ ಈ ಸಂಗತಿ
18 ಗಳೇನು ಎಂದು ಕೇಳಲು, ಅವರು ದುಃಖದ ಮುಖವುಳ್ಳವರಾಗಿ ನಿಂತರು. ಅವರಲ್ಲಿ
ಕ್ಲೆಯೊಫನೆಂಬವನು ಆತನನ್ನು—ಯೆರೂಸಲೇಮಿಗೆ ಬಂದ ಪರಸ್ಥಳದವರೆಲ್ಲರಿಗೂ ಈ
ದಿವಸಗಳಲ್ಲಿ ಅದರೊಳಗೆ ನಡದಿರುವ ಸಂಗತಿಗಳು ಗೊತ್ತಿರಲಾಗಿ ನಿನಗೆ ಮಾತ್ರ ಗೊತ್ತಿ
19 ಲ್ಲವೋ ಎಂದು ಕೇಳಲು, ಆತನು ಅವರನ್ನು—ಯಾವ ಸಂಗತಿಗಳು ಎಂದು ಕೇಳಿದನು.
ಅದಕ್ಕೆ ಅವರು—ನಜರೇತಿನವನಾದ ಯೇಸುವಿನ ಸಂಗತಿಗಳೇ; ಆತನು ದೇವರ ಮುಂದೆ
ಮತ್ತು ಮನುಷ್ಯರ ಮುಂದೆ ಕೃತ್ಯದಲ್ಲಿಯೂ ಮಾತಿನಲ್ಲಿಯೂ ಸಮರ್ಥನಾದ ಪ್ರವಾದಿ
20 ಯಾಗಿದ್ದನು. ಆತನನ್ನು ಮಹಾಯಾಜಕರೂ ನಮ್ಮ ಅಧಿಕಾರಿಗಳೂ ಮರಣದಂಡ
21 ನೆಗೆ ಒಪ್ಪಿಸಿಕೊಟ್ಟು ಶಿಲುಬೆಗೆ ಹಾಕಿಸಿದರು. ನಾವಾದರೋ ಇಸ್ರಯೇಲ ಜನರನ್ನು

---

[1] ಈ ಅಧ್ಯಾಯದಲ್ಲಿ ಆವರಣಚಿನ್ನೆಗಳೊಳಗೆ ಇರುವ ಮಾತುಗಳು ಕೆಲವು ಪ್ರಾಚೀನ ಪ್ರತಿಗಳಲ್ಲಿ ಸಿಕ್ಕುವದಿಲ್ಲ.

ಬಿಡಿಸತಕ್ಕವನು ಆತನೇ ಎಂದು ನಿರೀಕ್ಷಿಸಿಕೊಂಡಿದ್ದೆವು. ಇದು ಮಾತ್ರವಲ್ಲದೆ ಆ
ಕಾರ್ಯಗಳು ನಡೆದು ಈ ಹೊತ್ತು ಮೂರನೇ ದಿನ; ಆದಾಗ್ಯೂ ನಮ್ಮಲ್ಲಿ ಕೆಲವು 22
ಮಂದಿ ಸ್ತ್ರೀಯರು ಬೆಳಗಾಗುವಾಗ ಸಮಾಧಿಯ ಬಳಿಯಲ್ಲಿ ಇದ್ದು, ಆತನ ದೇಹವನ್ನು 23
ಕಾಣದೆ ಅಲ್ಲಿಂದ ಬಂದು, ತಮಗೆ ದೇವದೂತರ ದರ್ಶನವಾಯಿತೆಂತಲೂ ಆತನು ಬದು
ಕುತ್ತಾನೆಂದು ಅವರು ಹೇಳಿದರೆಂತಲೂ ತಿಳಿಸಿ, ನಮಗೆ ಅತ್ಯಾಶ್ಚರ್ಯವನ್ನುಂಟುಮಾಡಿ
ದರು. ನಮ್ಮ ಸಂಗಡ ಇದ್ದವರಲ್ಲಿ ಕೆಲವರು ಸಮಾಧಿಗೆ ಹೋಗಿ, ಆ ಸ್ತ್ರೀಯರು 24
ಹೇಳಿದ ಪ್ರಕಾರವೇ ಕಂಡರು; ಆತನನ್ನು ಮಾತ್ರ ಕಾಣಲಿಲ್ಲ ಎಂದು ಹೇಳಿದರು.
ಆತನು ಅವರಿಗೆ—ಎಲಾ, ಬುದ್ಧಿಯಿಲ್ಲದವರೇ, ಪ್ರವಾದಿಗಳು ಹೇಳಿದ್ದೆಲ್ಲವನ್ನು ನಂಬು 25
ವದರಲ್ಲಿ ಮಂದಹೃದಯರೇ, ಕ್ರಿಸ್ತನು ಇಂಥಾ ಶ್ರಮಗಳನ್ನು ಅನುಭವಿಸಿ ತನ್ನ 26
ಮಹಾಪದವಿಗೆ ಸೇರುವದು ಅಗತ್ಯವಾಗಿತ್ತಲ್ಲವೇ ಎಂದು ಹೇಳಿ, ಮೋಶೆಯ ಮತ್ತು 27
ಎಲ್ಲಾ ಪ್ರವಾದಿಗಳ ಗ್ರಂಥಗಳು ಮೊದಲುಗೊಂಡು ಸಮಸ್ತ ಗ್ರಂಥಗಳಲ್ಲಿ ತನ್ನ ವಿಷಯ
ವಾಗಿರುವ ಸೂಚನೆಗಳನ್ನು ಅವರಿಗೆ ವಿವರಿಸಿದನು. ಅವರು ಹೋಗುತ್ತಿರುವ ಹಳ್ಳಿಯ 28
ಸಮೀಪಕ್ಕೆ ಬಂದಾಗ, ಆತನು ಇನ್ನೂ ಮುಂದಕ್ಕೆ ಹೋಗುವವನಂತೆ ಕಾಣಿಸಿದನು.
ಆದರೆ ಅವರು—ನಮ್ಮ ಸಂಗಡ ಇರು, ಸಂಜೆಯಾಯಿತು, ಹೊತ್ತು ಇಳಿಯುತ್ತಾ ಬಂತು 29
ಎಂದು ಆತನಿಗೆ ಹೇಳಿ ಬಲವಂತಮಾಡಲು, ಆತನು ಅವರ ಕೂಡ ಇರುವದಕ್ಕೆ
ಊರೊಳಕ್ಕೆ ಹೋದನು. ಆತನು ಅವರ ಸಂಗಡ ಊಟಕ್ಕೆ ಕೂತುಕೊಂಡಾಗ, ರೊಟ್ಟಿ 30
ಯನ್ನು ತೆಗೆದುಕೊಂಡು ದೇವರ ಸ್ತೋತ್ರಮಾಡಿ ಮುರಿದು ಅವರಿಗೆ ಕೊಡುತ್ತಿರ
ಲಾಗಿ ಅವರ ಕಣ್ಣುಗಳು ತೆರೆದವು, ಅವರು ಆತನ ಗುರುತನ್ನು ಹಿಡಿದರು; ಆತನು 31
ಅವರ ಕಣ್ಣಿಗೆ ಮಾಯವಾದನು. ಆಗ ಅವರು ಒಬ್ಬರಿಗೊಬ್ಬರು—ಆತನು ದಾರಿಯಲ್ಲಿ 32
ನಮ್ಮ ಸಂಗಡ ಮಾತಾಡಿದಾಗಲೂ ಗ್ರಂಥಗಳ ಅರ್ಥವನ್ನು ನಮಗೆ ಬಿಚ್ಚಿಹೇಳಿದಾಗಲೂ
ನಮ್ಮ ಹೃದಯವು ನಮ್ಮಲ್ಲಿ ಕುದಿಯಿತಲ್ಲವೇ ಎಂದು ಹೇಳಿಕೊಂಡು, ಅದೇ ಗಳಿಗೆ 33
ಯಲ್ಲಿ ಎದ್ದು ಯೆರೂಸಲೇಮಿಗೆ ಹಿಂತಿರುಗಿ ಹೋದರು. ಅಲ್ಲಿ ಹನ್ನೊಂದು ಮಂದಿ
ಶಿಷ್ಯರೂ ಅವರ ಸಂಗಡ ಇದ್ದವರೂ ಒಟ್ಟಾಗಿ ಕೂಡಿಕೊಂಡಿದ್ದು—ಸ್ವಾಮಿ ಎದ್ದದ್ದು 34
ನಿಜ, ಆತನು ಸೀಮೋನನಿಗೆ ಕಾಣಿಸಿಕೊಂಡನು ಎಂದು ಹೇಳುತ್ತಿದ್ದರು. ಇದನ್ನು 35
ಕಂಡು ಅವರು ದಾರಿಯಲ್ಲಿ ನಡೆದ ಸಂಗತಿಯನ್ನೂ ರೊಟ್ಟಿ ಮುರಿಯುವದರಲ್ಲಿ ತಾವು
ಆತನ ಗುರುತು ಹಿಡಿದೆವೆಂಬುವದನ್ನೂ ವಿವರಿಸಿದರು.

ಅವರು ಈ ಸಂಗತಿಗಳನ್ನು ಕುರಿತು ಮಾತಾಡುತ್ತಿರುವಾಗ, ಆತನೇ ಅವರ ನಡುವೆ 36
ನಿಂತು [—ನಿಮಗೆ ಮನಶ್ಶಾಂತಿಯಾಗಲಿ[1] ಎಂದು ಅವರಿಗೆ ಹೇಳಿದನು]. ಅವರು ದಿಗಿಲು 37
ಬಿದ್ದು ಭಯಹಿಡಿದವರಾಗಿ ತಾವು ಕಂಡದ್ದನ್ನು ಭೂತವೆಂದು ಭಾವಿಸಿದರು. ಆತನು 38
ಅವರಿಗೆ—ಯಾಕೆ ಕಳವಳಗೊಳ್ಳುತ್ತೀರಿ? ನಿಮ್ಮ ಹೃದಯದಲ್ಲಿ ಅನುಮಾನಗಳು ಹುಟ್ಟು
ವದ್ಯಾಕೆ? ನನ್ನ ಕೈಗಳನ್ನೂ ನನ್ನ ಕಾಲುಗಳನ್ನೂ ನೋಡಿರಿ, ನಾನೇ ಅಲ್ಲವೇ? ನನ್ನನ್ನು 39
ಮುಟ್ಟಿ ನೋಡಿರಿ, ನಿಮಗೆ ಕಾಣುವ ಪ್ರಕಾರ ನನಗೆ ಮಾಂಸವೂ ಎಲುಬುಗಳೂ

[1] ಅಥವಾ, ಶುಭವಾಗಲಿ.

40 ಉಂಟು; ಅವು ಭೂತಕ್ಕಿಲ್ಲ ಎಂದು ಹೇಳಿದನು. [ಇದನ್ನು ಹೇಳಿದ ಮೇಲೆ, ಆತನು ತನ್ನ
41 ಕೈಗಳನ್ನೂ ಕಾಲುಗಳನ್ನೂ ಅವರಿಗೆ ತೋರಿಸಿದನು.] ಆದರೆ ಅವರು ಸಂತೋಷದ ದೆಸೆ
ಯಿಂದ ಇನ್ನೂ ನಂಬದೆ ಆಶ್ಚರ್ಯಪಡುತ್ತಿರಲಾಗಿ, ಆತನು—ತಿನ್ನತಕ್ಕ ಪದಾರ್ಥವೇನಾ
42 ದರೂ ಇಲ್ಲಿ ನಿಮಗುಂಟೋ ಎಂದು ಅವರನ್ನು ಕೇಳಲು, ಅವರು ಸುಟ್ಟ ಮೀನಿನ
43 ಒಂದು ತುಂಡನ್ನು ಆತನಿಗೆ ಕೊಟ್ಟರು. ಆತನು ತಕ್ಕೊಂಡು ಅವರ ಮುಂದೆ ತಿಂದನು.
44 ತರುವಾಯ ಆತನು—ನಾನು ಇನ್ನೂ ನಿಮ್ಮ ಸಂಗಡ ಇದ್ದಾಗ ಇದೆಲ್ಲಾ ನಿಮಗೆ
ತಿಳಿಸಲಿಲ್ಲವೇ? ನನ್ನ ವಿಷಯವಾಗಿ ಮೋಶೆಯ ಧರ್ಮಶಾಸ್ತ್ರದಲ್ಲಿಯೂ ಪ್ರವಾದಿಗಳ
ಗ್ರಂಥಗಳಲ್ಲಿಯೂ ಕೀರ್ತನೆಗಳಲ್ಲಿಯೂ ಬರೆದಿರುವದೆಲ್ಲಾ ನೆರವೇರುವದು ಅಗತ್ಯವೆಂದು
45 ನಿಮಗೆ ಹೇಳಲಿಲ್ಲವೇ ಅಂದನು. ಆ ಮೇಲೆ ಅವರು ಶಾಸ್ತ್ರವಚನಗಳನ್ನು ತಿಳುಕೊಳ್ಳು
46 ವಂತೆ ಆತನು ಅವರ ಬುದ್ಧಿಯನ್ನು ತೆರೆದು ಅವರಿಗೆ—ಕ್ರಿಸ್ತನು ಶ್ರಮೆಪಟ್ಟು ಸತ್ತು ಮೂರನೇ
47 ದಿನದಲ್ಲಿ ಜೀವಿತನಾಗಿ ಎದ್ದುಬರುವನೆಂತಲೂ ಪಾಪಪರಿಹಾರಕ್ಕೋಸ್ಕರ ದೇವರ
ಕಡೆಗೆ ತಿರುಗಿಕೊಳ್ಳಬೇಕೆಂಬ ಮಾತು ಯೆರೂಸಲೇಮು ಮೊದಲುಗೊಂಡು ಸಮಸ್ತ
48 ದೇಶದವರಿಗೂ ಆತನ ಹೆಸರಿನಲ್ಲಿ ಸಾರಲ್ಪಡುವದೆಂತಲೂ ಬರೆದದೆ. ಇವುಗಳ ವಿಷಯ
49 ದಲ್ಲಿ ನೀವೇ ಸಾಕ್ಷಿ ಹೇಳುವವರಾಗಿದ್ದೀರಿ. ಇಗೋ ನನ್ನ ತಂದೆಯು ವಾಗ್ದಾನಮಾಡಿ
ದ್ದನ್ನು ನಿಮಗೆ ಕಳುಹಿಸಿಕೊಡುತ್ತೇನೆ. ದೇವರು ಮೇಲಣಲೋಕದಿಂದ ನಿಮಗೆ ಶಕ್ತಿ
ಯನ್ನು ಹೊದಿಸುವ ತನಕ ಈ ಪಟ್ಟಣದಲ್ಲೇ ಕಾದುಕೊಂಡಿರ್ರಿ ಎಂದು ಹೇಳಿದನು.

### ಯೇಸುವಿನ ಪರಲೋಕಾರೋಹಣವು.

(ಮಾರ್ಕ 16, 19. 20; ಅಪೊಸ್ತಲರ ಕೃತ್ಯ 1, 4—14.)

50 ಮತ್ತು ಆತನು ಅವರನ್ನು ಬೇಥಾನ್ಯದ ತನಕ ಕರಕೊಂಡು ಹೋಗಿ, ತನ್ನ ಕೈಗಳನ್ನು
51 ಎತ್ತಿ ಅವರನ್ನು ಆಶೀರ್ವದಿಸಿದನು. ಆಶೀರ್ವದಿಸುತ್ತಿರುವಾಗ ಆತನು ಅವರನ್ನು ಬಿಟ್ಟು
52 [ಪರಲೋಕಕ್ಕೆ ವೈಯಲ್ಪಟ್ಟನು]. ಅವರು [ಆತನನ್ನು ಆರಾಧಿಸಿ] ಬಹು ಸಂತೋಷ
53 ದಿಂದ ಯೆರೂಸಲೇಮಿಗೆ ಹಿಂತಿರುಗಿ ಹೋಗಿ, ಯಾವಾಗಲೂ ದೇವಾಲಯದಲ್ಲಿ ದೇವ
ರನ್ನು ಕೊಂಡಾಡುತ್ತಿದ್ದರು.



# THE GOSPEL ACCORDING TO SAINT JOHN

# ಯೋಹಾನನು ಬರೆದ ಸುವಾರ್ತೆ

ಅನಾದಿಯಿಂದಿದ್ದ ದೇವರ ವಾಕ್ಯವು ನರಾವತಾರ ಎತ್ತಿದ್ದು.

ಆದಿಯಲ್ಲಿ ವಾಕ್ಯವಿತ್ತು; ಆ ವಾಕ್ಯವು ದೇವರ ಬಳಿಯಲ್ಲಿತ್ತು; ಆ ವಾಕ್ಯವು ದೇವರಾ 1
ಗಿತ್ತು. ಆ ವಾಕ್ಯವೆಂಬವನು ಆದಿಯಲ್ಲಿ ದೇವರ ಬಳಿಯಲ್ಲಿದ್ದನು. ಆತನ ಮೂಲ 2,3
ಕವಾಗಿ ಸಮಸ್ತವು ಉಂಟಾಯಿತು; ಉಂಟಾಗಿರುವ ವಸ್ತುಗಳಲ್ಲಿ ಆತನಿಲ್ಲದೆ ಒಂದಾ
ದರೂ ಉಂಟಾಗಲಿಲ್ಲ. ಆತನಲ್ಲಿ ಜೀವವಿತ್ತು; ಆ ಜೀವವು ಮನುಷ್ಯರಿಗೆ ಬೆಳಕಾಗಿತ್ತು. 4
ಆ ಬೆಳಕು ಕತ್ತಲಲ್ಲಿ ಪ್ರಕಾಶಿಸುತ್ತದೆ; ಕತ್ತಲು ಅದನ್ನು ಮುಸುಕಲಿಲ್ಲ[1]. 5

ದೇವರು ಕಳುಹಿಸಿದ ಒಬ್ಬ ಮನುಷ್ಯನು ಬಂದನು; ಅವನ ಹೆಸರು ಯೋಹಾನನು. 6
ಈ ಯೋಹಾನನು ಸಾಕ್ಷಿಗಾಗಿ ಬಂದನು. ತನ್ನ ಮೂಲಕವಾಗಿ ಎಲ್ಲರು ನಂಬುವಂತೆ 7
ಅವನು ಆ ಬೆಳಕಿನ ವಿಷಯದಲ್ಲಿ ಸಾಕ್ಷಿಕೊಡುವದಕ್ಕೆ ಬಂದನು. ಅವನೇ ಆ ಬೆಳ 8
ಕಲ್ಲ, ಆ ಬೆಳಕಿನ ವಿಷಯದಲ್ಲಿ ಸಾಕ್ಷಿಕೊಡುವದಕ್ಕಾಗಿ ಬಂದವನು.

ನಿಜವಾದ ಬೆಳಕು ಲೋಕಕ್ಕೆ ಬರುವದಾಗಿತ್ತು; ಆ ಬೆಳಕೇ ಪ್ರತಿ ಮನುಷ್ಯನಿಗೂ 9
ಬೆಳಕನ್ನು ಕೊಡುವಂಥಾದ್ದು. ಆತನು ಲೋಕದಲ್ಲಿ ಇದ್ದನು; ಮತ್ತು ಲೋಕವು ಆತನ 10
ಮೂಲಕವಾಗಿ ಉಂಟಾಯಿತು; ಆದರೂ ಲೋಕವು ಆತನನ್ನು ಅರಿಯಲಿಲ್ಲ. ಆತನು ತನ್ನ 11
ಸ್ವಾಸ್ಥ್ಯಕ್ಕೆ ಬಂದನು; ಆದರೆ ಸ್ವಂತಜನರು ಆತನನ್ನು ಅಂಗೀಕರಿಸಲಿಲ್ಲ. ಯಾರ್ಯಾರು 12
ಆತನನ್ನು ಅಂಗೀಕರಿಸಿದರೋ, ಅಂದರೆ ಆತನ ಹೆಸರಿನಲ್ಲಿ ನಂಬಿಕೆಯಿಟ್ಟರೋ, ಅವರಿಗೆ
ದೇವರ ಮಕ್ಕಳಾಗುವ ಅಧಿಕಾರ ಕೊಟ್ಟನು. ಇವರು ರಕ್ತಸಂಬಂಧದಿಂದಾಗಲಿ ಕಾಮ 13
ದಿಂದಾಗಲಿ ಪುರುಷಸಂಕಲ್ಪದಿಂದಾಗಲಿ ಹುಟ್ಟಿದವರಲ್ಲ, ದೇವರಿಂದಲೇ ಹುಟ್ಟಿದವರು.

ಆ ವಾಕ್ಯವೆಂಬವನು ನರಾವತಾರ ಎತ್ತಿ ನಮ್ಮ ಮಧ್ಯದಲ್ಲಿ ವಾಸಮಾಡಿದನು. ನಾವು 14
ಆತನ ಮಹಿಮೆಯನ್ನು ನೋಡಿದೆವು; ಆ ಮಹಿಮೆಯು ತಂದೆಯ ಬಳಿಯಿಂದ ಬಂದ
ಒಬ್ಬನೇ ಮಗನಿಗೆ ಇರತಕ್ಕ ಮಹಿಮೆ. ಆತನು ಕೃಪೆಯಿಂದಲೂ ಸತ್ಯದಿಂದಲೂ ತುಂಬಿ
ದವನಾಗಿದ್ದನು.

---

[1] ಅಥವಾ, ಗ್ರಹಿಸಲಿಲ್ಲ.

15 ಯೋಹಾನನು ಆತನ ವಿಷಯವಾಗಿ ಸಾಕ್ಷಿಕೊಡುತ್ತಾನೆ; ಹ್ಯಾಗಂದರೆ—ನನ್ನ ಹಿಂದೆ ಬರುವವನು ನನಗಿಂತ ಮೊದಲೇ ಇದ್ದದರಿಂದ ನನಗೆ ಮುಂದಿನವನಾದನು ಎಂಬದಾಗಿ ನಾನು ಹೇಳಿದವನು ಈತನೇ ಎಂದು ಕೂಗಿ ಹೇಳಿದ್ದಾನೆ.
17 ಧರ್ಮಶಾಸ್ತ್ರವು ಮೋಶೆಯ ಮುಖಾಂತರ ಕೊಡಲ್ಪಟ್ಟಿತು; ಕೃಪೆಯೂ ಸತ್ಯವೂ
16 ಯೇಸು ಕ್ರಿಸ್ತನ ಮುಖಾಂತರ ಬಂದವು. ನಾವೆಲ್ಲರು ಆತನ ಪರಿಪೂರ್ಣತೆಯೊಳಗಿಂದ
18 ಕೃಪೆಯ ಮೇಲೆ ಕೃಪೆಯನ್ನು ಹೊಂದಿದೆವು. ದೇವರನ್ನು ಯಾರೂ ಎಂದೂ ಕಂಡಿಲ್ಲ; ಯಾವನು ಏಕಪುತ್ರನಾಗಿಯೂ ಸ್ವತಃ ದೇವರಾಗಿಯೂ ಇದ್ದು ತಂದೆಯ ಎದೆಯಲ್ಲಿದ್ದಾನೋ ಆತನೇ ತಿಳಿಯಪಡಿಸಿದನು.

### ಸ್ನಾನಿಕನಾದ ಯೋಹಾನನು ಯೇಸುವಿನ ವಿಷಯವಾಗಿ ಸಾಕ್ಷಿಹೇಳಿದ್ದು.

19 ಯೋಹಾನನು ಕೊಟ್ಟ ಸಾಕ್ಷಿ ಏನಂದರೆ—ಯೆಹೂದ್ಯರು ಯೆರೂಸಲೇಮಿನಿಂದ ಯಾಜಕರನ್ನೂ ಲೇವಿಯರನ್ನೂ ಅವನ ಬಳಿಗೆ ಕಳುಹಿಸಿ--ನೀನು ಯಾರೆಂದು ಕೇಳಿ
20 ದ್ದಕ್ಕೆ, ಅವನು ಮರೆಮಾಜದೆ—ನಾನು ಕ್ರಿಸ್ತನಲ್ಲವೆಂದು ಎಲ್ಲರ ಮುಂದೆ ಹೇಳಿದನು.
21 ಹಾಗಾದರೆ ನೀನು ಯಾರು? ಎಲೀಯನೋ?[1] ಎಂದು ಅವರು ಕೇಳಲು, ಅಲ್ಲವೆಂದನು.
22 ನೀನು ಬರಬೇಕಾದ ಆ ಪ್ರವಾದಿಯೋ?[2] ಅಂದದ್ದಕ್ಕೂ ಅಲ್ಲವೆಂದನು. ಆಗ ಅವರು—ನೀನು ಯಾರು? ನಮ್ಮನ್ನು ಕಳುಹಿಸಿದವರಿಗೆ ನಾವು ಉತ್ತರ ಹೇಳಬೇಕಲ್ಲಾ; ನಿನ್ನ ವಿಷಯವಾಗಿ ಏನು ಹೇಳುತ್ತೀ? ಎಂದು ಕೇಳಲು, ಅವನು—
23 ಕರ್ತನ ದಾರಿಯನ್ನು ನೆಟ್ಟಗೆ ಮಾಡಿರಿ ಎಂದು
ಅಡವಿಯಲ್ಲಿ ಕೂಗುವವನ ಶಬ್ದವದೆ[3]
ಎಂಬದಾಗಿ ಯೆಶಾಯಪ್ರವಾದಿಯು ಹೇಳಿದನಷ್ಟೆ; ಆ ಶಬ್ದವೇ ನಾನು ಎಂದು ಉತ್ತರ
24,25 ಕೊಟ್ಟನು. ಬಂದಿದ್ದವರು ಫರಿಸಾಯರ ಕಡೆಯವರಾಗಿದ್ದು—ನೀನು ಕ್ರಿಸ್ತನೂ ಎಲೀಯನೂ ಆ ಪ್ರವಾದಿಯೂ ಅಲ್ಲವಾದರೆ ಸ್ನಾನಮಾಡಿಸುವದೇನು? ಎಂದು ಅವ
26 ನನ್ನು ಕೇಳಿದರು. ಅದಕ್ಕೆ ಯೋಹಾನನು—ನಾನು ನೀರಿನಿಂದ ಸ್ನಾನಮಾಡಿಸುವವನು;
27 ಆದರೆ ನೀವು ಅರಿಯದೆ ಇರುವ ಒಬ್ಬಾತನು ನಿಮ್ಮ ಮಧ್ಯದಲ್ಲಿ ನಿಂತಿದ್ದಾನೆ; ಆತನೇ ನನ್ನ ಹಿಂದೆ ಬರತಕ್ಕವನು; ಆತನ ಕೆರದ ಬಾರನ್ನು ಬಿಚ್ಚುವದಕ್ಕಾದರೂ ನಾನು
28 ಯೋಗ್ಯನಲ್ಲ ಅಂದನು. ಇದೆಲ್ಲಾ ಯೊರ್ದನ್‌ಹೊಳೆಯ ಆಚೇಕಡೆಯಲ್ಲಿರುವ ಬೇಥಾನ್ಯದಲ್ಲಿ ನಡೆಯಿತು. ಅಲ್ಲಿ ಯೋಹಾನನು ಸ್ನಾನಕೊಡುತ್ತಿದ್ದನು.
29 ಮರುದಿನ ಯೋಹಾನನು ತನ್ನ ಕಡೆಗೆ ಬರುವ ಯೇಸುವನ್ನು ನೋಡಿ—ಅಗೋ, ದೇವರು ನೇಮಿಸಿದ ಯಜ್ಞಪಶುವು[4], ಲೋಕದ ಪಾಪವನ್ನು ನಿವಾರಣೆಮಾಡುವವನು.
30 ನನ್ನ ಹಿಂದೆ ಬರುವವನು ನನಗಿಂತ ಮೊದಲೇ ಇದ್ದದರಿಂದ ನನಗೆ ಮುಂದಿನವನಾದನು
31 ಎಂದು ನಾನು ಹೇಳಿದ ಮಾತು ಈತನ ವಿಷಯವಾಗಿಯೇ. ನನಗೂ ಆತನ ಗುರು

---

[1] ಮಲಕೀಯ ೪, ೫.
[2] ದ್ವಿತೀಯ ನ್ಯಾಯ ೧೮, ೧೫.
[3] ಯೆಶಾಯ ೪೦, ೩.
[4] ಮೂಲ, ಕುರಿಮರಿ. ಯೆಶಾಯ ೫೩, ೪—೧೨ ನೋಡಿರಿ.

ತಿರಲಿಲ್ಲ; ಆದರೆ ಆತನನ್ನು ಇಸ್ರಯೇಲ್ಯರಿಗೆ ತಿಳಿಯಪಡಿಸುವದಕ್ಕೋಸ್ಕರವೇ ನಾನು ನೀರಿನ ಸ್ನಾನವನ್ನು ಮಾಡಿಸುವವನಾಗಿ ಬಂದೆನು ಅಂದನು. 32 ಇದಲ್ಲದೆ ಯೋಹಾನನು ಸಾಕ್ಷಿಕೊಟ್ಟು ಹೇಳಿದ್ದೇನಂದರೆ—ದೇವರ ಆತ್ಮವು ಪಾರಿವಾಳದಂತೆ ಆಕಾಶದಿಂದ ಇಳಿದುಬರುವದನ್ನು ನೋಡಿದೆನು. ಅದು ಆತನ ಮೇಲೆ ನೆಲೆಗೊಂಡಿತು. 33 ನನಗೂ ಆತನ ಗುರುತಿರಲಿಲ್ಲ; ಆದರೆ ನೀರಿನ ಸ್ನಾನವನ್ನು ಮಾಡಿಸುವದಕ್ಕೆ ನನ್ನನ್ನು ಕಳುಹಿಸಿದಾತನು—ಯಾವನ ಮೇಲೆ ಆತ್ಮವು ಇಳಿದು ಬಂದು ಇರುವದನ್ನು ನೀನು ನೋಡುವಿಯೋ ಆತನೇ ಪವಿತ್ರಾತ್ಮದ ಸ್ನಾನವನ್ನು ಕೊಡುವವನು ಎಂದು ತಾನೇ ನನಗೆ ಹೇಳಿದನು. 34 ನಾನು ಅದನ್ನು ನೋಡಿ ಈತನೇ ದೇವಕುಮಾರನೆಂದು ಸಾಕ್ಷಿಕೊಟ್ಟಿದ್ದೇನೆ ಅಂದನು.

### ಯೇಸು ಪ್ರಥಮ ಶಿಷ್ಯರನ್ನು ಮಾಡಿಕೊಂಡದ್ದು.

35 ಮರುದಿನ ತಿರಿಗಿ ಯೋಹಾನನೂ ಅವನ ಶಿಷ್ಯರಲ್ಲಿ ಇಬ್ಬರೂ ನಿಂತುಕೊಂಡಿದ್ದಾಗ, 36 ಯೋಹಾನನು ಅಲ್ಲಿ ತಿರುಗಾಡುತ್ತಿರುವ ಯೇಸುವನ್ನು ನೋಡಿ—ಅಗೋ ದೇವರು ನೇಮಿಸಿದ ಯಜ್ಞಪಶುವು ಅಂದನು. 37 ಆ ಇಬ್ಬರು ಶಿಷ್ಯರು ಅದನ್ನು ಕೇಳಿ ಯೇಸುವಿನ ಹಿಂದೆ ಹೋದರು. 38 ಯೇಸು ಹಿಂತಿರುಗಿ, ಅವರು ತನ್ನ ಹಿಂದೆ ಬರುವದನ್ನು ಕಂಡು—ನಿಮಗೆ ಏನು ಬೇಕು ಎಂದು ಕೇಳಲು, ಅವರು—ರಬ್ಬಿಯೇ, ನೀನು ಇಳುಕೊಂಡಿರುವದು ಎಲ್ಲಿ? ಅಂದರು. (ರಬ್ಬಿ ಅಂದರೆ ಗುರು.) 39 ಆತನು—ಬಂದು ನೋಡಿರಿ ಅಂದಾಗ, ಅವರು ಬಂದು ಆತನು ಇಳುಕೊಂಡಿದ್ದ ಸ್ಥಳವನ್ನು ನೋಡಿ ಆ ದಿವಸ ಆತನ ಸಂಗಡ ಇದ್ದರು. ಆಗ ಹೆಚ್ಚುಕಡಿಮೆ ಹತ್ತು ತಾಸಾಗಿತ್ತು[1]. 40 ಯೋಹಾನನ ಮಾತನ್ನು ಕೇಳಿ ಯೇಸುವನ್ನು ಹಿಂಬಾಲಿಸಿದ ಆ ಇಬ್ಬರಲ್ಲಿ ಸೀಮೋನ್‌ಪೇತ್ರನ ತಮ್ಮನಾದ ಅಂದ್ರೆಯನು ಒಬ್ಬನು. 41 ಇವನು ಮೊದಲು ತನ್ನ ಅಣ್ಣನಾದ ಸೀಮೋನನನ್ನು ಕಂಡುಕೊಂಡು, ಅವನಿಗೆ—ಮೆಸ್ಸೀಯನು ನಮಗೆ ಸಿಕ್ಕಿದನು (ಎಂದು ಹೇಳಿ, ಅವನನ್ನು 42 ಯೇಸುವಿನ ಬಳಿಗೆ ಕರಕೊಂಡು ಬಂದನು. (ಮೆಸ್ಸೀಯನು ಅಂದರೆ ಕ್ರಿಸ್ತನು[2].) ಯೇಸು ಅವನನ್ನು ನೋಡಿ—ನೀನು ಯೋಹಾನನ ಮಗನಾದ ಸೀಮೋನನು; ಇನ್ನು ಮೇಲೆ ಕೇಫನೆನ್ನಿಸಿಕೊಳ್ಳುವಿ ಅಂದನು. (ಕೇಫನಂದರೆ ಪೇತ್ರ[3].)

43 ಮರುದಿನ ಯೇಸು ಗಲಿಲಾಯಕ್ಕೆ ಹೊರಟುಹೋಗಬೇಕೆಂದಿರುವಾಗ, ಫಿಲಿಪ್ಪನನ್ನು ಕಂಡು—ನನ್ನನ್ನು ಹಿಂಬಾಲಿಸು ಅಂದನು. 44 ಈ ಫಿಲಿಪ್ಪನು ಬೆತ್ಸಾಯಿದದವನು, ಅಂದರೆ ಅಂದ್ರೆಯ ಪೇತ್ರರ ಊರಿನವನು. 45 ಫಿಲಿಪ್ಪನು ನತಾನಯೇಲನನ್ನು ಕಂಡುಕೊಂಡು ಅವನಿಗೆ—ಯಾವನ ವಿಷಯವಾಗಿ ಮೋಶೆಯು ಧರ್ಮಶಾಸ್ತ್ರದಲ್ಲಿ ಬರೆದನೋ ಮತ್ತು ಪ್ರವಾದಿಗಳು ಬರೆದರೋ, ಆತನು ನಮಗೆ ಸಿಕ್ಕಿದನು; ಆತನು ಯಾರಂದರೆ, ಯೋಸೇಫನ ಮಗನಾದ ನಜರೇತಿನ ಯೇಸು ಎಂದು ಹೇಳಿದನು. 46 ನತಾನಯೇಲನು—

[1] ಅಂದರೆ ಸಾಯಂಕಾಲ ನಾಲ್ಕು ಘಂಟೆಯಾಗಿತ್ತು. [2] ಕ್ರಿಸ್ತನು ಅಂದರೆ ಪಟ್ಟಾಭಿಷೇಕಹೊಂದಿದವನು, ಬರಬೇಕಾದ ರಕ್ಷಕನು. [3] ಪೇತ್ರ ಅಂದರೆ ಗುಂಡು ಅಥವಾ ಬಂಡೆಗಲ್ಲು.

ಒಳ್ಳೇದೇನಾದರೂ ನಜರೇತಿನಿಂದ ಬರುವದುಂಟೇ? ಅಂದಾಗ, ಫಿಲಿಪ್ಪನು—ಬಂದು
47 ನೋಡು ಅಂದನು. ಯೇಸು ತನ್ನ ಕಡೆಗೆ ಬರುವ ನತಾನಯೇಲನನ್ನು ಕಂಡು ಅವನ ವಿಷಯವಾಗಿ—ಇಗೋ, ಇವನು ನಿಜವಾದ ಇಸ್ರಯೇಲ್ಯನು; ಇವನಲ್ಲಿ ಕಪಟವಿಲ್ಲ
48 ಅಂದನು. ನತಾನಯೇಲನು—ನನ್ನನ್ನು ನೀನು ಹ್ಯಾಗೆ ಬಲ್ಲೆ? ಎಂದು ಯೇಸುವನ್ನು ಕೇಳಿದ್ದಕ್ಕೆ, ಆತನು—ಫಿಲಿಪ್ಪನು ನಿನ್ನನ್ನು ಕರೆಯುವದಕ್ಕಿಂತ ಮುಂಚೆ, ನೀನು ಆ ಅಂಜೂ
49 ರದ ಮರದ ಕೆಳಗೆ ಇದ್ದಾಗ, ನಿನ್ನನ್ನು ನೋಡಿದೆನು, ಅಂದನು. ಅದಕ್ಕೆ ನತಾನ ಯೇಲನು—ಗುರುವೇ, ನೀನು ದೇವಕುಮಾರನು ಸರಿ; ನೀನೇ ಇಸ್ರಯೇಲಿನ ಅರಸನು
50 ಅಂದನು. ಅದಕ್ಕೆ ಯೇಸು—ಆ ಅಂಜೂರದ ಮರದ ಕೆಳಗೆ ನಿನ್ನನ್ನು ನೋಡಿದೆನೆಂದು ನಾನು ನಿನಗೆ ಹೇಳಿದಮಾತ್ರದಿಂದ, ನಂಬುತ್ತೀಯೋ? ಇದಕ್ಕಿಂತ ಹೆಚ್ಚಿನ ಕಾರ್ಯ
51 ಗಳನ್ನು ನೋಡುವಿ, ಅಂದನು. ಇದಲ್ಲದೆ ಅವನಿಗೆ—ನಾನು ನಿಮಗೆ ನಿಜನಿಜವಾಗಿ ಹೇಳುತ್ತೇನೆ, ಪರಲೋಕವು ತೆರೆದಿರುವದನ್ನೂ ಮನುಷ್ಯಕುಮಾರನ ಮೇಲೆ ದೇವ ದೂತರು ಏರಿಹೋಗುತ್ತಾ ಇಳಿದುಬರುತ್ತಾ ಇರುವದನ್ನೂ[1] ನೋಡುವಿರಿ, ಎಂದು ಹೇಳಿದನು.

### ಯೇಸು ಮಾಡಿದ ಮೊದಲನೇ ಅದ್ಭುತಕಾರ್ಯ.

**2** ಮೂರನೇ ದಿನದಲ್ಲಿ ಗಲಿಲಾಯದ ಕಾನಾ ಊರಿನಲ್ಲಿ ಒಂದು ಮದುವೆ ಆಯಿತು;
2 ಯೇಸುವಿನ ತಾಯಿ ಅಲ್ಲಿ ಇದ್ದಳು; ಯೇಸುವನ್ನೂ ಆತನ ಶಿಷ್ಯರನ್ನೂ ಮದುವೆಗೆ
3 ಕರೆದರು. ದ್ರಾಕ್ಷಾರಸವು ಸಾಲದೆಹೋಗಲಾಗಿ ಯೇಸುವಿನ ತಾಯಿ ಆತನಿಗೆ—
4 ಅವರಲ್ಲಿ ದ್ರಾಕ್ಷಾರಸವಿಲ್ಲ ಎಂದು ಹೇಳಿದಳು. ಯೇಸು ಆಕೆಗೆ—ಅಮ್ಮಾ, ನನ್ನ ಗೊಡವೆ
5 ನಿನಗ್ಯಾಕೆ? ನನ್ನ ಸಮಯವು ಇನ್ನೂ ಬಂದಿಲ್ಲ ಎಂದು ಹೇಳಲು, ಆತನ ತಾಯಿಯು ಕೆಲಸದವರಿಗೆ—ಆತನು ನಿಮಗೆ ಏನು ಹೇಳುವನೋ ಅದನ್ನು ಮಾಡಿರಿ ಅಂದಳು.
6 ಯೆಹೂದ್ಯರ ಶುದ್ಧಾಚಾರದ ಪದ್ಧತಿಯ ಪ್ರಕಾರ ಎರಡು ಮೂರು ಕೊಳಗ ನೀರು
7 ಹಿಡಿಯುವ ಆರು ಕಲ್ಲಿನ ಬಾನೆಗಳು ಅಲ್ಲಿ ಇಟ್ಟಿದ್ದವು. ಯೇಸು ಅವರಿಗೆ—ಆ ಬಾನೆಗಳಲ್ಲಿ ನೀರು ತುಂಬಿರಿ ಅನ್ನಲು, ಅವುಗಳನ್ನು ಕಂಠದ ಮಟ್ಟಿಗೆ ತುಂಬಿದರು.
8 ಆಗ ಅವರಿಗೆ—ಈಗ ಅದನ್ನು ತೋಡಿಕೊಂಡು ಹೋಗಿ ಔತಣದ ಪಾರುಪತ್ಯಗಾರ
9 ನಿಗೆ ಕೊಡಿರಿ ಎಂದು ಹೇಳಿದಾಗ, ತಕ್ಕೊಂಡು ಹೋಗಿ ಕೊಟ್ಟರು. ಅದು ಎಲ್ಲಿಂದ ಬಂತೋ ನೀರನ್ನು ತೋಡಿದ ಕೆಲಸದವರಿಗೆ ತಿಳಿದಿತ್ತೇ ಹೊರತು ಔತಣದ ಪಾರು ಪತ್ಯಗಾರನಿಗೆ ತಿಳಿಯದಿರಲಾಗಿ ಅವನು ಅಷ್ಟರೊಳಗೆ ದ್ರಾಕ್ಷಾರಸವಾದ ಆ ನೀರನ್ನು
10 ರುಚಿನೋಡಿದಾಗ ಮದಲಿಂಗನನ್ನು ಕರೆದು—ಎಲ್ಲರು ಹಿರಿದಿನ ದ್ರಾಕ್ಷಾರಸವನ್ನು ಮೊದಲು ಕೊಟ್ಟು, ಅಮಲೇರಿದ ಮೇಲೆ ಕಿರಿದಿನ ದ್ರಾಕ್ಷಾರಸವನ್ನು ಕೊಡುತ್ತಾರೆ; ನೀನು ಹಿರಿದಿನ ದ್ರಾಕ್ಷಾರಸವನ್ನು ಇದುವರೆಗೂ ಇಟ್ಟುಕೊಂಡಿದ್ದೀ ಅಂದನು.
11 ಯೇಸು ಈ ಮೊದಲನೇ ಸೂಚಕಕಾರ್ಯವನ್ನು ಗಲಿಲಾಯದ ಕಾನಾ ಊರಿ

[1] ಉತ್ಪತ್ತಿ ೨೮, ೧೨.

ನಲ್ಲಿ ಮಾಡಿ ತನ್ನ ಮಹಿಮೆಯನ್ನು ತೋರ್ಪಡಿಸಿದನು; ಮತ್ತು ಆತನ ಶಿಷ್ಯರು ಆತ ನಲ್ಲಿ ನಂಬಿಕೆಯಿಟ್ಟರು.

ಇದಾದ ಮೇಲೆ ಆತನೂ ಆತನ ತಾಯಿಯೂ ಅಣ್ಣತಮ್ಮಂದಿರೂ ಆತನ ಶಿಷ್ಯರೂ 12 ಘಟ್ಟಾ ಇಳಿದು ಕಪೆರ್ನೌಮಿಗೆ ಹೋಗಿ ಅಲ್ಲಿ ಕೆಲವು ದಿವಸ ಇದ್ದರು.

ಯೇಸು ದೇವಾಲಯದಲ್ಲಿ ವ್ಯಾಪಾರವನ್ನು ನಿಲ್ಲಿಸಿದ್ದು.

ಆಗ ಯೆಹೂದ್ಯರ ಪಸ್ಕಹಬ್ಬವು ಹತ್ತರ ಬಂದದರಿಂದ, ಯೇಸು ಯೆರೂಸಲೇಮಿಗೆ 13 ಹೋದನು. ಅಲ್ಲಿ ದೇವಾಲಯದೊಳಗೆ ದನ ಕುರಿ ಪಾರಿವಾಳ ಮಾರುವವರನ್ನೂ 14 ಕೂತಿರುವ ಚಿನಿವಾರರನ್ನೂ ಕಂಡು, ಹಗ್ಗದಿಂದ ಕೊರಡೇ ಮಾಡಿ ಅದರಿಂದ ಕುರಿ 15 ದನ ಸಹಿತ ಎಲ್ಲರನ್ನು ದೇವಾಲಯದ ಹೊರಕ್ಕೆ ಅಟ್ಟಿ, ಚಿನಿವಾರರ ರೊಕ್ಕವನ್ನು ಚೆಲ್ಲಿ ಮೇಜುಗಳನ್ನು ಕೆಡವಿದನು. ಪಾರಿವಾಳ ಮಾರುವವರಿಗೆ—ಇವುಗಳನ್ನು ಇಲ್ಲಿಂದ 16 ತಕ್ಕೊಂಡು ಹೋಗಿರಿ; ನನ್ನ ತಂದೆಯ ಮನೆಯನ್ನು ಸಂತೆ ಮಾಡಬೇಡಿರಿ ಎಂದು ಹೇಳಿ ದನು. ಆಗ—ನಿನ್ನ ಮನೆಯ ಮೇಲಣ ಅಭಿಮಾನವು ನನ್ನನ್ನು ಪರವಶಮಾಡುವದು 17 ಎಂದು[1] ಬರೆದ ಮಾತು ಶಿಷ್ಯರ ನೆನಪಿಗೆ ಬಂತು. ಯೆಹೂದ್ಯರು ಆತನನ್ನು— 18 ನಿನಗೆ ಇದನ್ನೆಲ್ಲಾ ಮಾಡುವ ಅಧಿಕಾರ ಉಂಟೆಂಬುವದಕ್ಕೆ ಏನು ಸೂಚಕಕಾರ್ಯವನ್ನು ತೋರಿಸುತ್ತೀ? ಎಂದು ಕೇಳಿದ್ದಕ್ಕೆ, ಯೇಸು—ಈ ದೇವಾಲಯವನ್ನು ಕೆಡವಿ 19 ಬಿಡಿರಿ; ನಾನು ಮೂರು ದಿನದಲ್ಲಿ ಅದನ್ನು ಎಬ್ಬಿಸುವೆನು ಅಂದನು. ಅದಕ್ಕೆ ಯೆಹೂ 20 ದ್ಯರು—ಈ ದೇವಾಲಯವನ್ನು ಕಟ್ಟುವದಕ್ಕೆ ನಾಲ್ವತ್ತಾರು ವರುಷ ಹಿಡಿಯಿತು; ನೀನು ಮೂರು ದಿನದಲ್ಲಿ ಅದನ್ನು ಎಬ್ಬಿಸುವಿಯೋ? ಅಂದರು. ಆದರೆ ಆತನು ತನ್ನ ದೇಹ 21 ವೆಂಬ ದೇವಾಲಯದ ವಿಷಯವಾಗಿ ಆ ಮಾತನ್ನು ಹೇಳಿದ್ದನು. ಆದದರಿಂದ ಆತನು 22 ಸತ್ತು ಬದುಕಿ ಎದ್ದಮೇಲೆ ಈ ಮಾತು ಆತನ ಶಿಷ್ಯರ ನೆನಪಿಗೆ ಬಂದು, ಶಾಸ್ತ್ರದಲ್ಲಿ ಬರೆದದ್ದನ್ನೂ ಆತನ ಮಾತನ್ನೂ ಅವರು ನಂಬುವವರಾದರು.

ಯೇಸು ಒಬ್ಬ ಶಾಸ್ತ್ರಿಗೆ ಪುನರ್ಜನ್ಮದ ವಿಷಯವಾಗಿ ಉಪದೇಶಮಾಡಿದ್ದು.

ಆತನು ಪಸ್ಕಹಬ್ಬದ ಜಾತ್ರೆಯಲ್ಲಿ ಯೆರೂಸಲೇಮಿನೊಳಗೆ ಇದ್ದಾಗ, ಬಹು ಜನರು 23 ಆತನು ಮಾಡಿದ ಸೂಚಕಕಾರ್ಯಗಳನ್ನು ನೋಡಿ ಆತನ ಹೆಸರಿನಲ್ಲಿ ನಂಬಿಕೆಯಿಟ್ಟರು. ಆದರೆ ಯೇಸು ಎಲ್ಲರನ್ನೂ ಬಲ್ಲವನಾದ್ದರಿಂದ ಅವರಿಗೆ ವಶವಾಗಲಿಲ್ಲ. ಆತನು ಪ್ರತಿ 24,25 ಮನುಷ್ಯನ ಅಂತರ್ಯವನ್ನು ತಿಳಿದವನಾದ ಕಾರಣ ಯಾವನೂ ಯಾವ ಮನುಷ್ಯನ ವಿಷಯದಲ್ಲಿಯೂ ಆತನಿಗೆ ಸಾಕ್ಷಿ ಕೊಡಬೇಕಾದ ಅವಶ್ಯವಿರಲಿಲ್ಲ.

ಫರಿಸಾಯರಲ್ಲಿ ಯೆಹೂದ್ಯರ ಹಿರೀಸಭೆಯವನಾದ ನಿಕೊದೇಮನೆಂಬ ಒಬ್ಬ ಮನು **3** ಷ್ಯನಿದ್ದನು. ಅವನು ರಾತ್ರಿಯಲ್ಲಿ ಯೇಸುವಿನ ಬಳಿಗೆ ಬಂದು, ಆತನಿಗೆ—ಗುರುವೇ, 2

[1] ಕೀರ್ತನೆ ೬೯, ೯.

ನೀನು ದೇವರ ಕಡೆಯಿಂದ ಬಂದ ಬೋಧಕನೆಂದು ಬಲ್ಲೆವು. ನೀನು ಮಾಡುವಂಥಾ ಈ ಸೂಚಕಕಾರ್ಯಗಳನ್ನು ದೇವರ ಸಹಾಯವಿಲ್ಲದೆ ಮಾಡುವದು ಯಾರಿಂದಲಾಗದು
3 ಎಂದು ಹೇಳಿದನು. ಅದಕ್ಕೆ ಯೇಸು—ನಾನು ನಿನಗೆ ನಿಜನಿಜವಾಗಿ ಹೇಳುತ್ತೇನೆ, ಒಬ್ಬನು ಹೊಸದಾಗಿ[1] ಹುಟ್ಟದಿದ್ದರೆ ಅವನು ದೇವರ ರಾಜ್ಯವನ್ನು ಕಾಣಲಾರನು
4 ಅಂದನು. ನಿಕೊದೇಮನು ಆತನನ್ನು—ಮನುಷ್ಯನು ಮುದುಕನಾದ ಮೇಲೆ ಹುಟ್ಟುವದು ಹ್ಯಾಗೆ? ಅವನು ತನ್ನ ತಾಯಿಯ ಗರ್ಭದಲ್ಲಿ ತಿರಿಗಿ ಸೇರಿ ಹುಟ್ಟುವದಾದೀತೇ?
5 ಎಂದು ಕೇಳಿದನು. ಅದಕ್ಕೆ ಯೇಸು—ನಾನು ನಿನಗೆ ನಿಜನಿಜವಾಗಿ ಹೇಳುತ್ತೇನೆ, ಒಬ್ಬನು ನೀರಿನಿಂದಲೂ ಆತ್ಮದಿಂದಲೂ ಹುಟ್ಟದಿದ್ದರೆ ದೇವರ ರಾಜ್ಯಕ್ಕೆ ಸೇರಲಾರನು.
6,7 ದೇಹದಿಂದ ಹುಟ್ಟಿದ್ದು ದೇಹವೇ; ಆತ್ಮದಿಂದ ಹುಟ್ಟಿದ್ದು ಆತ್ಮವೇ. ನೀವು ಹೊಸದಾಗಿ[1]
8 ಹುಟ್ಟಬೇಕು ಎಂದು ನಾನು ನಿನಗೆ ಹೇಳಿದ್ದರಿಂದ ಆಶ್ಚರ್ಯಪಡಬೇಡ. ಗಾಳಿಯು ಮನಸ್ಸು ಬಂದ ಕಡೆ ಬೀಸುತ್ತದೆ; ಅದರ ಸಪ್ಪಳವನ್ನು ಕೇಳುತ್ತೀ; ಆದರೆ ಅದು ಎಲ್ಲಿಂದ ಬರುತ್ತದೋ ಎಲ್ಲಿಗೆ ಹೋಗುತ್ತದೋ ನಿನಗೆ ತಿಳಿಯದು; ಆತ್ಮದಿಂದ ಹುಟ್ಟಿದವರೆಲ್ಲರು
9 ಅದರಂತೆಯೇ ಅಂದನು. ಅದಕ್ಕೆ ನಿಕೊದೇಮನು—ಇದು ಆಗುವದು ಹ್ಯಾಗೆ? ಅಂದಾಗ,
10 ಯೇಸು ಅವನಿಗೆ ಹೇಳಿದ್ದೇನಂದರೆ—ಇಸ್ರಯೇಲ ಜನಕ್ಕೆ ಬೋಧಕನಾಗಿರುವ ನಿನಗೆ
11 ಇದು ತಿಳಿಯುವದಿಲ್ಲವೋ? ನಿನಗೆ ನಿಜನಿಜವಾಗಿ ಹೇಳುತ್ತೇನೆ, ತಿಳಿದದ್ದನ್ನು ಹೇಳುತ್ತೇವೆ, ನೋಡಿದ್ದಕ್ಕೆ ಸಾಕ್ಷಿಕೊಡುತ್ತೇವೆ; ನೀವು ನಮ್ಮ ಸಾಕ್ಷಿಯನ್ನು ಒಪ್ಪುವದಿಲ್ಲ.
12 ನಾನು ಭೂಲೋಕದಲ್ಲಿ ನಡೆಯುವ ಕಾರ್ಯಗಳನ್ನು ಕುರಿತು ನಿಮಗೆ ಹೇಳುವಾಗ ನೀವು ನಂಬದೆಹೋದರೆ ಪರಲೋಕದ ಕಾರ್ಯಗಳನ್ನು ಕುರಿತು ನಿಮಗೆ ಹೇಳಿದರೆ
13 ಹ್ಯಾಗೆ ನಂಬೀರಿ? ಪರಲೋಕದಿಂದ ಇಳಿದುಬಂದವನೇ ಅಂದರೆ ಮನುಷ್ಯಕುಮಾರನೇ[2]
14 ಹೊರತು, ಮತ್ತ್ಯಾರೂ ಪರಲೋಕಕ್ಕೆ ಏರಿಹೋದವನಲ್ಲ. ಇದಲ್ಲದೆ [ಜನರು ನೋಡಿ ಜೀವದಿಂದುಳಿಯಬೇಕೆಂದು] ಮೋಶೆಯು ಅಡವಿಯಲ್ಲಿ ಆ ಸರ್ಪವನ್ನು ಎತ್ತರದಲ್ಲಿಟ್ಟ
15 ಹಾಗೆಯೇ[3] ಮನುಷ್ಯಕುಮಾರನು ತನ್ನನ್ನು ನಂಬುವವರೆಲ್ಲರೂ ನಿತ್ಯಜೀವವನ್ನು ಪಡೆಯಬೇಕೆಂದು ಎತ್ತರದಲ್ಲಿಡಲ್ಪಡಬೇಕು.

16 ದೇವರು ಲೋಕದ ಮೇಲೆ ಎಷ್ಟೋ ಪ್ರೀತಿಯನ್ನಿಟ್ಟು, ತನ್ನ ಒಬ್ಬನೇ ಮಗನನ್ನು ಕೊಟ್ಟನು; ಆತನನ್ನು ನಂಬುವ ಒಬ್ಬನಾದರೂ ನಾಶವಾಗದೆ ಎಲ್ಲರೂ ನಿತ್ಯಜೀವವನ್ನು
17 ಪಡೆಯಬೇಕೆಂದು ಆತನನ್ನು ಕೊಟ್ಟನು. ದೇವರು ತನ್ನ ಮಗನ ಮುಖಾಂತರ ಲೋಕಕ್ಕೆ ರಕ್ಷಣೆಯಾಗಬೇಕೆಂದು ಆತನನ್ನು ಕಳುಹಿಸಿಕೊಟ್ಟನೇ ಹೊರತು ತೀರ್ಪುಮಾಡುವದ
18 ಕ್ಕಾಗಿ ಕಳುಹಿಸಲಿಲ್ಲ. ಆತನನ್ನು ನಂಬುವವನಿಗೆ ತೀರ್ಪು ಆಗುವದಿಲ್ಲ; ಆದರೆ ನಂಬದವನಿಗೆ ದೇವರ ಒಬ್ಬನೇ ಮಗನ ಹೆಸರನ್ನು ನಂಬದೆ ಹೋದದರಿಂದ ಆಗಲೇ ತೀರ್ಪು
19 ಆಗಿಹೋಯಿತು. ಆ ತೀರ್ಪು ಏನಂದರೆ—ಬೆಳಕು ಲೋಕಕ್ಕೆ ಬಂದಿದ್ದರೂ ಮನುಷ್ಯರ ಕೃತ್ಯಗಳು ಕೆಟ್ಟವುಗಳಾಗಿರುವದರಿಂದ ಅವರು ಬೆಳಕಿಗಿಂತ ಕತ್ತಲೆಯನ್ನೇ ಹೆಚ್ಚಾಗಿ
20 ಪ್ರೀತಿಸಿದರು. ಕೆಟ್ಟದ್ದನ್ನು ಮಾಡುವವರು ಬೆಳಕನ್ನು ಸಹಿಸುವದಿಲ್ಲ, ತಮ್ಮ ಕೃತ್ಯಗಳು

---

[1] ಅಥವಾ, ಮೇಲಿನಿಂದ. [2] ಕೆಲವು ಪ್ರತಿಗಳಲ್ಲಿ—ಪರಲೋಕದಲ್ಲಿರುವ ಮನುಷ್ಯಕುಮಾರನೇ ಎಂದು ಬರೆದದೆ. [3] ಅಂಕೆಗಳು ೨೧, ೮. ೯.

ದುಷ್ಕೃತ್ಯಗಳಾಗಿ ತೋರಿಬಂದಾವೆಂದು ಬೆಳಕಿಗೆ ಬರುವದಿಲ್ಲ; ಆದರೆ ಸತ್ಯವನ್ನು ಅನು 21 ಸರಿಸಿ ನಡೆಯುವವನು, ತಾನು ದೇವರಿಂದ ನಡಿಸಿಕೊಂಡು ತನ್ನ ಕೃತ್ಯಗಳನ್ನು ಮಾಡಿ ದ್ದೇನೆಂದು ತೋರಿಬರುವಂತೆ ಬೆಳಕಿಗೆ ಬರುತ್ತಾನೆ.

ಸ್ನಾನಿಕನಾದ ಯೋಹಾನನು ಯೇಸುವಿನ ವಿಷಯವಾಗಿ ತಿರಿಗಿ ಸಾಕ್ಷಿ ಹೇಳಿದ್ದು.

ಆ ಮೇಲೆ ಯೇಸು ತನ್ನ ಶಿಷ್ಯರೊಡನೆ ಯೂದಾಯ ದೇಶಕ್ಕೆ ಬಂದು ಅಲ್ಲಿ ಅವರ 22 ಕೂಡ ಇದ್ದು ದೀಕ್ಷಾಸ್ನಾನಮಾಡಿಸುತ್ತಿದ್ದನು. ಯೋಹಾನನೂ ಸಲೀಮೂರಿನ ಹತ್ತರ 23 ವಿರುವ ಐನೋನೆಂಬ ಸ್ಥಳದಲ್ಲಿದ್ದು ದೀಕ್ಷಾಸ್ನಾನಮಾಡಿಸುತ್ತಿದ್ದನು; ಅಲ್ಲಿ ಬಹಳ ನೀರಿತ್ತು; ಜನರು ಬಂದು ಸ್ನಾನಮಾಡಿಸಿಕೊಳ್ಳುತ್ತಾ ಇದ್ದರು; ಆ ಕಾಲದಲ್ಲಿ ಯೋಹಾ 24 ನನು ಇನ್ನೂ ಸೆರೆಯಲ್ಲಿ ಹಾಕಲ್ಪಟ್ಟಿರಲಿಲ್ಲ. ಹೀಗಿರಲಾಗಿ, ಯೋಹಾನನ ಶಿಷ್ಯರಲ್ಲಿ 25 ಕೆಲವರಿಗೂ ಒಬ್ಬ ಯೆಹೂದ್ಯನಿಗೂ ಶುದ್ಧಾಚಾರವನ್ನು ಕುರಿತು ವಿಚಾರ ನಡೆಯಿತು. ಆಗ ಅವರು ಯೋಹಾನನ ಬಳಿಗೆ ಬಂದು, ಅವನಿಗೆ—ಗುರುವೇ, ಯೊರ್ದನ್‌ಹೊಳೆಯ 26 ಆಚೆ ನಿನ್ನ ಬಳಿಯಲ್ಲಿದ್ದ ಒಬ್ಬನ ವಿಷಯದಲ್ಲಿ ನೀನು ಸಾಕ್ಷಿಕೊಟ್ಟಿಯಲ್ಲಾ; ಅವನೂ ಸ್ನಾನಮಾಡಿಸುತ್ತಾನೆ, ಅವನ ಬಳಿಗೆ ಎಲ್ಲರು ಹೋಗುತ್ತಾರೆ ಎಂದು ಹೇಳಲು, 27 ಯೋಹಾನನು—ಪರಲೋಕದಿಂದ ಅನುಗ್ರಹಿಸೋಣವಾದದ್ದನ್ನೇ ಹೊರತು ಮನುಷ್ಯನು ಹೆಚ್ಚೇನು ಹೊಂದಲಾರನು. ನಾನು ಕ್ರಿಸ್ತನಲ್ಲ, ಆತನ ಮುಂದೆ ಕಳುಹಿಸಲ್ಪಟ್ಟವ 28 ನಾಗಿದ್ದೇನೆ ಎಂದು ನಾನು ಹೇಳಿದ್ದಕ್ಕೆ ನೀವೇ ಸಾಕ್ಷಿ. ಮದಲಗಿತ್ತಿಯುಳ್ಳವನೇ ಮದ 29 ಲಿಂಗನು; ಆದರೂ ಮದಲಿಂಗನ ಗೆಳೆಯನು ಅವನ ಹತ್ತರ ನಿಂತುಕೊಂಡು ಅವನ ಮಾತುಗಳನ್ನು ಕೇಳಿ ಮದಲಿಂಗನ ಧ್ವನಿಗೆ ಬಹು ಸಂತೋಷ ಪಡುತ್ತಾನಲ್ಲವೇ? ಇದ ರಂತೆ ನನಗಿರುವ ಸಂತೋಷ; ಅದು ನೆರವೇರಿತು. ಆತನು ವೃದ್ಧಿಯಾಗ ಬೇಕು; 30 ನಾನು ಕಡಿಮೆಯಾಗ ಬೇಕು ಅಂದನು.

ಮೇಲಣಿಂದ ಬರುವವನು ಎಲ್ಲರ ಮೇಲೆ ಇದ್ದಾನೆ; ಭೂಲೋಕದಿಂದ ಹುಟ್ಟಿದವನು 31 ಭೂಲೋಕದವನಾಗಿದ್ದು ಭೂಲೋಕದ ಮಾತನ್ನು ಆಡುತ್ತಾನೆ; ಪರಲೋಕದಿಂದ ಬರು ವವನು ಎಲ್ಲರ ಮೇಲೆ ಇದ್ದಾನೆ. ತಾನು ನೋಡಿ ಕೇಳಿದ್ದಕ್ಕೆ ಸಾಕ್ಷಿಕೊಡುತ್ತಾನೆ; 32 ಆದರೆ ಅವನ ಸಾಕ್ಷಿಯನ್ನು ಯಾರೂ ಒಪ್ಪುವದಿಲ್ಲ. ಅವನ ಸಾಕ್ಷಿಯನ್ನು ಒಪ್ಪಿದ 33 ವನು, ದೇವರು ಸತ್ಯವಂತನೆಂಬ ಮಾತಿಗೆ ಮುದ್ರೆಹಾಕಿದವನಾಗಿದ್ದಾನೆ. ಹ್ಯಾಗಂದರೆ 34 ದೇವರು ಯಾರನ್ನು ಕಳುಹಿಸಿದ್ದಾನೋ ಅವನಿಗೆ ಆತ್ಮವರವನ್ನು ಅಳತೆಮಾಡದೆ ಅನು ಗ್ರಹಿಸುವದರಿಂದ ಅವನು ದೇವರ ಮಾತುಗಳನ್ನೇ ಆಡುತ್ತಾನೆ. ತಂದೆಯಾದ ದೇವರು 35 ತನ್ನ ಮಗನನ್ನು ಪ್ರೀತಿಸಿ ಎಲ್ಲವನ್ನೂ ಆತನ ಕೈಯಲ್ಲಿ ಕೊಟ್ಟಿದ್ದಾನೆ. ಆತನ ಮಗ 36 ನನ್ನು ನಂಬುವವನಿಗೆ ನಿತ್ಯಜೀವ ಉಂಟು; ಮಗನಿಗೆ ಒಳಗಾಗದವನು ಜೀವವನ್ನು ಕಾಣುವದೇ ಇಲ್ಲ; ದೇವರ ಕೋಪವು ಅವನ ಮೇಲೆ ನೆಲೆಗೊಂಡಿರುವದು.

### ಯೇಸು ಸಮಾರ್ಯದ ಹೆಂಗಸಿನ ಸಂಗಡ ಸಂಭಾಷಣೆ ಮಾಡಿದ್ದು.

**4** ಯೇಸು ಯೋಹಾನನಿಗಿಂತ ಹೆಚ್ಚು ಶಿಷ್ಯರನ್ನು ಮಾಡಿಕೊಂಡು ಅವರಿಗೆ ದೀಕ್ಷಾಸ್ನಾನ
ಮಾಡಿಸುತ್ತಾನೆಂಬ ಸುದ್ದಿಯನ್ನು ಫರಿಸಾಯರು ಕೇಳಿದರೆಂದು ಕರ್ತನಿಗೆ ತಿಳಿದಾಗ,
2-3 ಆತನು ಯೂದಾಯವನ್ನು ಬಿಟ್ಟು ಗಲಿಲಾಯಕ್ಕೆ ತಿರಿಗಿ ಹೋದನು. (ಆದಾಗ್ಯೂ
4 ಸ್ನಾನಮಾಡಿಸುತ್ತಿದ್ದವನು ಯೇಸುವಲ್ಲ; ಆತನ ಶಿಷ್ಯರೇ ಮಾಡಿಸುತ್ತಿದ್ದರು.) ಆತನು
5 ಸಮಾರ್ಯಸೀಮೆಯನ್ನು ಹಾದುಹೋಗಬೇಕಾಯಿತು. ಹೋಗುವಾಗ ಸಮಾರ್ಯ
ಸೀಮೆಗೆ ಸೇರಿದ ಸುಖರೆಂಬ ಊರಿಗೆ ಬಂದನು. ಅದು ಯಾಕೋಬನು ತನ್ನ ಮಗ
6 ನಾದ ಯೋಸೇಫನಿಗೆ ಕೊಟ್ಟ ಭೂಮಿಯ ಹತ್ತರದಲ್ಲಿತ್ತು; ಅಲ್ಲಿ ಯಾಕೋಬನು ತೆಗೆ
ಸಿದ ಬಾವಿಯಿತ್ತು. ಯೇಸು ದಾರೀನಡೆದು ದಣಿದು ಆ ಬಾವಿಯ ಬಳಿಯಲ್ಲಿ ಹಾಗೆ
7-8 ಕೂತುಕೊಂಡನು; ಹೆಚ್ಚುಕಡಿಮೆ ಮಧ್ಯಾಹ್ನವಾಗಿತ್ತು. ಆತನ ಶಿಷ್ಯರು ಊಟಕ್ಕೆ
ಬೇಕಾದದ್ದನ್ನು ಕೊಂಡುಕೊಳ್ಳುವದಕ್ಕಾಗಿ ಊರೊಳಗೆ ಹೋಗಿರಲು ಸಮಾರ್ಯದವ
ಳಾದ ಒಬ್ಬ ಹೆಂಗಸು ನೀರು ಸೇದುವದಕ್ಕೆ ಬಂದಳು. ಯೇಸು ಆಕೆಯನ್ನು—ಅಮ್ಮಾ,
9 ನೀರು ಕುಡಿಯುವದಕ್ಕೆ ಕೊಡು ಎಂದು ಕೇಳಿದನು. ಯೆಹೂದ್ಯರಿಗೂ ಸಮಾರ್ಯ
ರಿಗೂ ಬಳಿಕೆಯಿಲ್ಲದಿರಲಾಗಿ, ಆ ಸಮಾರ್ಯದವಳು ಆತನಿಗೆ—ಯೆಹೂದ್ಯನಾದ ನೀನು
10 ಸಮಾರ್ಯದವಳಾದ ನನ್ನನ್ನು ನೀರು ಬೇಡುವದು ಹ್ಯಾಗೆ ಎಂದು ಹೇಳಿದಳು. ಅದಕ್ಕೆ
ಯೇಸು—ದೇವರು ಕೊಡುವ ವರವೇನೆಂಬುವದೂ ಕುಡಿಯುವದಕ್ಕೆ ನೀರು ಕೊಡು
ಎಂದು ನಿನಗೆ ಹೇಳಿದವನು ಯಾರೆಂಬುವದೂ ನಿನಗೆ ತಿಳಿದಿದ್ದರೆ, ನೀನು ಅವನನ್ನು ಬೇಡಿ
11 ಕೊಳ್ಳುತ್ತಿದ್ದಿ, ಅವನು ನಿನಗೆ ಜೀವಕರವಾದ ನೀರನ್ನು ಕೊಡುತ್ತಿದ್ದನು ಅಂದನು. ಆ
ಹೆಂಗಸು ಆತನಿಗೆ—ಅಯ್ಯಾ, ಸೇದುವದಕ್ಕೆ ನಿನ್ನಲ್ಲಿ ಏನೂ ಇಲ್ಲ, ಬಾವಿ ಆಳವಾಗಿದೆ;
12 ಹೀಗಿರುವಾಗ ಆ ಜೀವಕರವಾದ ನೀರು ನಿನಗೆ ಎಲ್ಲಿಂದ ಬಂತು? ನಮ್ಮ ಹಿರಿಯನಾದ
ಯಾಕೋಬನಿಗಿಂತ ನೀನು ದೊಡ್ಡವನೋ? ಅವನೇ ಈ ಬಾವಿಯನ್ನು ನಮಗೆ ಕೊಟ್ಟವನು;
ಅವನೂ ಅವನ ಮಕ್ಕಳೂ ಅವನು ಸಾಕಿದೆಲ್ಲವು ಸಹಿತವಾಗಿ ಇದೇ ಬಾವಿಯ ನೀರು
13 ಕುಡಿದರು ಅನ್ನಲು, ಯೇಸು ಆಕೆಗೆ—ಈ ನೀರನ್ನು ಕುಡಿಯುವವರೆಲ್ಲರಿಗೆ ತಿರಿಗಿ ನೀರ
14 ಡಿಕೆಯಾಗುವದು; ನಾನು ಕೊಡುವ ನೀರನ್ನು ಕುಡಿದವನಿಗೆ ಎಂದಿಗೂ ನೀರಡಿಕೆಯಾ
ಗುವದಿಲ್ಲ; ನಾನು ಅವನಿಗೆ ಕೊಡುವ ನೀರು ಅವನಲ್ಲಿ ಉಕ್ಕುವ ಒರತೆಯಾಗಿದ್ದು ನಿತ್ಯ
15 ಜೀವವನ್ನು ಉಂಟುಮಾಡುವದು ಎಂದು ಹೇಳಿದನು. ಆ ಹೆಂಗಸು—ಅಯ್ಯಾ, ನನಗೆ
ಆ ನೀರನ್ನು ಕೊಡು; ಕೊಟ್ಟರೆ ಇನ್ನು ಮೇಲೆ ನನಗೆ ನೀರಡಿಕೆಯಾಗಲಿಕ್ಕಿಲ್ಲ; ನೀರು
16 ಸೇದುವದಕ್ಕೆ ಇಷ್ಟು ದೂರ ಬರಬೇಕಾದದ್ದೂ ಇರುವದಿಲ್ಲ ಅನ್ನಲು, ಯೇಸು ಅವ
17 ಳಿಗೆ—ಹೋಗಿ ನಿನ್ನ ಗಂಡನನ್ನು ಇಲ್ಲಿಗೆ ಕರಕೊಂಡು ಬಾ ಎಂದು ಹೇಳಿದನು. ಅದಕ್ಕೆ
ಆ ಹೆಂಗಸು—ನನಗೆ ಗಂಡನಿಲ್ಲ ಅಂದಳು. ಯೇಸು ಆಕೆಗೆ—ನನಗೆ ಗಂಡನಿಲ್ಲವೆಂದು
18 ನೀನು ಹೇಳಿದ್ದು ಸರಿಯಾದ ಮಾತು; ನಿನಗೆ ಐದುಮಂದಿ ಗಂಡಂದಿರಿದ್ದರು, ಈಗ ಇರು
19 ವವನು ನಿನಗೆ ಗಂಡನಲ್ಲ; ನೀನು ಹೇಳಿದ್ದು ನಿಜವಾದ ಸಂಗತಿ ಅಂದನು. ಆ ಹೆಂಗಸು
20 ಆತನಿಗೆ—ಅಯ್ಯಾ, ನೀನು ಪ್ರವಾದಿಯೆಂದು ನನಗೆ ಕಾಣುತ್ತದೆ. ನಮ್ಮ ಹಿರಿಯರು

ಈ ಬೆಟ್ಟದಲ್ಲಿ ದೇವಾರಾಧನೆಮಾಡುತ್ತಿದ್ದರು; ಆದರೆ ನೀವು ಆರಾಧನೆ ಮಾಡತಕ್ಕ ಸ್ಥಳವು ಯೆರೂಸಲೇಮಿನಲ್ಲಿ ಅದೆ ಅನ್ನುತ್ತೀರಿ ಎಂದು ಹೇಳಿದಾಗ, ಯೇಸು ಆಕೆಗೆ— 21 ಅಮ್ಮಾ, ನಾನು ಹೇಳುವ ಮಾತನ್ನು ನಂಬು; ಒಂದು ಕಾಲ ಬರುತ್ತದೆ, ಆ ಕಾಲದಲ್ಲಿ ನೀವು ತಂದೆಯನ್ನು ಆರಾಧಿಸಬೇಕಾದರೆ ಈ ಬೆಟ್ಟಕ್ಕೂ ಹೋಗುವದಿಲ್ಲ, ಯೆರೂಸಲೇಮಿಗೂ ಹೋಗುವದಿಲ್ಲ. 22 ಬರಬೇಕಾದ ರಕ್ಷಣೆಯು ಯೆಹೂದ್ಯರೊಳಗಿಂದ ಬರುತ್ತದಷ್ಟೆ. ಆದದರಿಂದ ನಾವು ಅರಿತಿರುವದನ್ನೇ ಆರಾಧಿಸುವವರಾಗಿದ್ದೇವೆ; ನೀವು ಅರಿಯದೆ ಇರುವಂಥಾದ್ದನ್ನು ಆರಾಧಿಸುವವರು. 23 ಅದಿರಲಿ; ಸತ್ಯಭಾವದಿಂದ ದೇವಾರಾಧನೆಮಾಡುವವರು ಆತ್ಮೀಯ ರೀತಿಯಲ್ಲಿ ಸತ್ಯಕ್ಕೆ ತಕ್ಕ ಹಾಗೆ ತಂದೆಯನ್ನು ಆರಾಧಿಸುವ ಕಾಲ ಬರುತ್ತದೆ; ಅದು ಈಗಲೇ ಬಂದದೆ; ತಂದೆಯು ತನ್ನನ್ನು ಆರಾಧಿಸುವವರು ಇಂಥವರೇ ಆಗಿರಬೇಕೆಂದು ಅಪೇಕ್ಷಿಸುತ್ತಾನಲ್ಲವೇ. 24 ದೇವರು ಆತ್ಮಸ್ವರೂಪನು; ಆತನನ್ನು ಆರಾಧಿಸುವವರು ಆತ್ಮೀಯ ರೀತಿಯಲ್ಲಿ ಸತ್ಯಕ್ಕೆ ತಕ್ಕ ಹಾಗೆ ಆರಾಧಿಸಬೇಕು ಅಂದನು. 25 ಆ ಹೆಂಗಸು ಆತನಿಗೆ—ಮೆಸ್ಸೀಯನು ಅಂದರೆ ಕ್ರಿಸ್ತನು ಬರುತ್ತಾನೆಂದು ಬಲ್ಲೆನು; ಆತನು ಬಂದ ಮೇಲೆ ನಮಗೆ ಎಲ್ಲಾ ತಿಳಿಸುವನು ಎಂದು ಹೇಳಲು, 26 ಯೇಸು ಆಕೆಗೆ—ನಿನ್ನ ಸಂಗಡ ಮಾತಾಡುತ್ತಿರುವ ನಾನೇ ಆ ಮೆಸ್ಸೀಯನು ಎಂದು ಹೇಳಿದನು.

27 ಅಷ್ಟರೊಳಗೆ ಆತನ ಶಿಷ್ಯರು ಬಂದು ಆತನು ಒಬ್ಬ ಹೆಂಗಸಿನ ಸಂಗಡ ಮಾತಾಡುತ್ತಿರುವದನ್ನು ಕಂಡು ಆಶ್ಚರ್ಯಪಟ್ಟರು. ಆದಾಗ್ಯೂ—ನಿನಗೆ ಏನು ಬೇಕು? ಆಕೆಯ ಸಂಗಡ ಯಾಕೆ ಮಾತಾಡುತ್ತೀ? ಎಂದು ಒಬ್ಬರೂ ಕೇಳಲಿಲ್ಲ. 28 ಆಗ ಆ ಹೆಂಗಸು ತನ್ನ ಕೊಡವನ್ನು ಅಲ್ಲೇ ಬಿಟ್ಟು, ಊರೊಳಕ್ಕೆ ಹೋಗಿ ಜನರಿಗೆ— 29 ಅಲ್ಲಿ ಒಬ್ಬನಿದ್ದಾನೆ, ನಾನು ಇದುವರೆಗೆ ಮಾಡಿದ್ದನ್ನೆಲ್ಲಾ ನನಗೆ ಹೇಳಿದನು; ಬಂದು ಅವನನ್ನು ನೋಡಿರಿ; ಬರತಕ್ಕ ಕ್ರಿಸ್ತನು ಅವನೇ ಏನೋ? ಎಂದು ಹೇಳಲು, 30 ಆತನ ಬಳಿಗೆ ಬರುವದಕ್ಕೆ ಊರೊಳಗಿಂದ ಹೊರಟರು.

31 ಅಷ್ಟರೊಳಗೆ ಶಿಷ್ಯರು—ಗುರುವೇ, ಊಟಾಮಾಡು ಎಂದು ಆತನನ್ನು ಬೇಡಿಕೊಂಡರು. 32 ಆದರೆ ಆತನು ಅವರಿಗೆ—ನಿಮಗೆ ತಿಳಿಯದಂಥ ಆಹಾರವು ನನಗುಂಟು ಎಂದು ಹೇಳಲು, 33 ಶಿಷ್ಯರು—ಆತನಿಗೆ ಯಾರಾದರೂ ಊಟಕ್ಕೆ ತಂದುಕೊಟ್ಟರೋ ಏನೋ? ಎಂದು ತಮ್ಮತಮ್ಮೊಳಗೆ ಮಾತಾಡಿಕೊಂಡರು. 34 ಯೇಸು ಅವರಿಗೆ—ನನ್ನನ್ನು ಕಳುಹಿಸಿದಾತನ ಚಿತ್ತದಂತೆ ಮಾಡಿ, ಆತನ ಕೆಲಸವನ್ನು ಪೂರೈಸುವದೇ ನನ್ನ ಆಹಾರವು. 35 ಇನ್ನು ನಾಲ್ಕು ತಿಂಗಳಿಗೆ ಸುಗ್ಗಿ ಬರುವದೆಂದು ನೀವು ಹೇಳುವದುಂಟಷ್ಟೆ. ನಿಮ್ಮ ಕಣ್ಣೆತ್ತಿ ಹೊಲಗಳನ್ನು ನೋಡಿರಿ; ಅವು ಬೆಳ್ಳಗಾಗಿ ಕೊಯ್ಲಿಗೆ ಬಂದವೆಂದು ನಿಮಗೆ ಹೇಳುತ್ತೇನೆ. 36 ಕೊಯ್ಯುವವನಿಗೆ ಈಗಲೇ ಕೂಲಿ ದೊರೆಯುತ್ತದೆ; ಅವನು ನಿತ್ಯಜೀವಕ್ಕೆ ಫಲವನ್ನು ಕೂಡಿಸಿಡುತ್ತಾನೆ; ಹೀಗೆ ಬಿತ್ತುವವನಿಗೂ ಕೊಯ್ಯುವವನಿಗೂ ಕೂಡ ಸಂತೋಷವಾಗುವದು. 37,38 ಬಿತ್ತುವವನೊಬ್ಬ ಕೊಯ್ಯುವವನೊಬ್ಬ ಎಂಬ ಗಾದೆಯಂತೆ ಆಯಿತು. ನೀವು ಕಷ್ಟ ಮಾಡದಂಥಾ ಬೆಳೆಯನ್ನು ಕೊಯ್ಯುವದಕ್ಕೆ ನಾನು ನಿಮ್ಮನ್ನು ಕಳುಹಿಸಿದೆನು; ಬೇರೊಬ್ಬರು ಕಷ್ಟ ಮಾಡಿದ್ದಾರೆ; ನೀವು ನಡುವೆ ಅವರ ಕಷ್ಟದಲ್ಲಿ ಸೇರಿದ್ದೀರಿ ಎಂದು ಹೇಳಿದನು.

39 ನಾನು ಮಾಡಿದ್ದನ್ನೆಲ್ಲಾ ಆತನು ನನಗೆ ಹೇಳಿದನೆಂಬದಾಗಿ ಸಾಕ್ಷಿಕೊಡುತ್ತಿರುವ ಆ ಹೆಂಗಸಿನ ಮಾತಿನ ಮೇಲೆ ಆ ಊರಿನ ಸಮಾರ್ಯರಲ್ಲಿ ಅನೇಕರು ಆತನನ್ನು ನಂಬು
40 ವವರಾದರು. ಆದ್ದರಿಂದ ಆ ಸಮಾರ್ಯರು ಆತನ ಬಳಿಗೆ ಬಂದು—ನೀನು ನಮ್ಮಲ್ಲಿ ಇರಬೇಕೆಂದು ಆತನನ್ನು ಬೇಡಿಕೊಳ್ಳಲು, ಆತನು ಎರಡು ದಿವಸ ಅವರಲ್ಲೇ ಇದ್ದನು.
41,42 ಹೆಚ್ಚು ಜನರು ಆತನ ವಾಕ್ಯವನ್ನು ಕೇಳಿ ನಂಬಿ, ಆ ಹೆಂಗಸಿಗೆ—ನಾವು ಆತನನ್ನು ನಂಬಿರುವದು ಇನ್ನು ನಿನ್ನ ಮಾತಿನ ಮೇಲೆ ಅಲ್ಲ; ನಾವು ಕಿವಿಯಾರ ಕೇಳಿ, ಈತನು ಲೋಕರಕ್ಷಕನೇ ಹೌದೆಂದು ತಿಳುಕೊಂಡಿದ್ದೇವೆ ಎಂದು ಹೇಳಿದರು.

### ಯೇಸು ಒಬ್ಬ ಪ್ರಧಾನನ ಮಗನನ್ನು ಮಾತಿನಿಂದಲೇ ಸ್ವಸ್ಥಮಾಡಿದು.

43 ಆ ಎರಡು ದಿವಸಗಳಾದ ಮೇಲೆ ಆತನು ಅಲ್ಲಿಂದ ಹೊರಟು ಗಲಿಲಾಯಕ್ಕೆ ಹೋದನು.
44 ಯಾಕಂದರೆ ಪ್ರವಾದಿಗೆ ಸ್ವಂತ ಊರಿನಲ್ಲಿ ಮರ್ಯಾದೆಯಿಲ್ಲವೆಂದು ಯೇಸು ತಾನೇ
45 ಹೇಳಿದನು. ಗಲಿಲಾಯದವರು ತಾವೂ ಯೆರೂಸಲೇಮಿನ ಜಾತ್ರೆಗೆ ಹೋಗಿ ಆತನು ಅಲ್ಲಿ ಮಾಡಿದ್ದನ್ನೆಲ್ಲಾ ನೋಡಿದ್ದರಿಂದ ಆತನು ಗಲಿಲಾಯಕ್ಕೆ ಬಂದಾಗ ಆತನನ್ನು ಆದರದಿಂದ ಅಂಗೀಕರಿಸಿದರು.

46 ಹೀಗಿರಲಾಗಿ ಯೇಸು, ತಾನು ನೀರನ್ನು ದ್ರಾಕ್ಷಾರಸವಾಗಿ ಮಾಡಿದ ಗಲಿಲಾಯದ ಕಾನಾಊರಿಗೆ ಮತ್ತೂ ಬಂದನು. ಅಲ್ಲಿದ್ದಾಗ, ಅರಮನೆಯ ಒಬ್ಬ ಪ್ರಧಾನನ ಮಗನು
47 ಕಪೆರ್ನೌಮಿನಲ್ಲಿ ಅಸ್ವಸ್ಥನಾಗಿದ್ದನು. ಯೇಸು ಯೂದಾಯದಿಂದ ಗಲಿಲಾಯಕ್ಕೆ ಬಂದ ಸುದ್ದಿಯನ್ನು ಆ ಪ್ರಧಾನನು ಕೇಳಿದಾಗ, ತನ್ನ ಮಗನು ಸಾಯುವ ಹಾಗಿದ್ದದರಿಂದ ಯೇಸುವಿನ ಬಳಿಗೆ ಹೋಗಿ—ನೀನು ಇಳಿದು ಬಂದು ನನ್ನ ಮಗನನ್ನು ಸ್ವಸ್ಥಮಾಡ
48 ಬೇಕೆಂದು ಬೇಡಿಕೊಂಡನು; ಯೇಸು ಅವನಿಗೆ—ನೀವು ಸೂಚಕಕಾರ್ಯಗಳನ್ನೂ
49 ಅದ್ಭುತಕಾರ್ಯಗಳನ್ನೂ ನೋಡದಿದ್ದರೆ ನಂಬುವದೇ ಇಲ್ಲವೆಂದು ಹೇಳಿದನು. ಆ ಪ್ರಧಾನನು—ಸ್ವಾಮಿಾ, ನನ್ನ ಮಗನು ಸಾಯುವದಕ್ಕೆ ಮುಂಚೆ ನೀನು ಬರಬೇಕು ಅನ್ನಲು,
50 ಯೇಸು ಅವನಿಗೆ—ನಿನ್ನ ಮಗನು ಬದುಕುತ್ತಾನೆ ಹೋಗು ಎಂದು ಉತ್ತರಕೊಟ್ಟನು.
51 ಆ ಗೃಹಸ್ಥನು ಯೇಸು ತನಗೆ ಹೇಳಿದ ಮಾತನ್ನು ನಂಬಿ ಹೊರಟುಹೋದನು. ಅವನು ಇನ್ನೂ ಘಟ್ಟಾಯಿಳಿದು ಹೋಗುತ್ತಿರುವಲ್ಲಿ, ಅವನ ಆಳುಗಳು ಅವನೆದುರಿಗೆ ಬಂದು—
52 ನಿನ್ನ ಮಗನು ಬದುಕಿಕೊಂಡನು ಅಂದರು. ಯಾವ ತಾಸಿನಲ್ಲಿ ಅವನಿಗೆ ರೋಗವು ಇಳಿತರವಾಯಿತೆಂದು ಅವನು ಅವರನ್ನು ಕೇಳಿದಾಗ, ಅವರು—ನಿನ್ನೆ ಏಳನೇ ತಾಸಿನಲ್ಲಿ[1]
53 ಜ್ವರವು ಅವನನ್ನು ಬಿಟ್ಟಿತು ಅಂದರು. ಆಗ, ನಿನ್ನ ಮಗನು ಬದುಕುತ್ತಾನೆಂದು ಯೇಸು ತನಗೆ ಹೇಳಿದ ತಾಸಿನಲ್ಲಿಯೇ ಅದಾಯಿತೆಂದು ತಂದೆಯು ತಿಳುಕೊಂಡದರಿಂದ, ಅವನೂ
54 ಅವನ ಮನೆಯವರೆಲ್ಲರೂ ಆತನನ್ನು ನಂಬಿದರು. ಯೇಸು ಯೂದಾಯದಿಂದ ಗಲಿಲಾಯಕ್ಕೆ ಬಂದ ಮೇಲೆ ಈ ಎರಡನೇ ಸೂಚಕಕಾರ್ಯವನ್ನು ಮಾಡಿದನು.

---

[1] ಅಂದರೆ ಮಧ್ಯಾಹ್ನದ ಒಂದು ಘಂಟೆಯಲ್ಲಿ.

ಯೇಸು ಸಬ್ಬತ್‌ದಿನದಲ್ಲಿ ಒಬ್ಬ ರೋಗಿಯನ್ನು ಸ್ವಸ್ಥಮಾಡಿದ್ದರಿಂದ ಯೆಹೂದ್ಯರು
ಆತನನ್ನು ವಿರೋಧಿಸಿದ್ದು.

**5** ಇದಾದ ಮೇಲೆ ಯೆಹೂದ್ಯರದೊಂದು ಜಾತ್ರೆ ಬಂದದರಿಂದ, ಯೇಸು ಯೆರೂಸಲೇಮಿಗೆ ಹೋದನು. 2 ಯೆರೂಸಲೇಮಿನಲ್ಲಿ ಕುರೀ ಅಗಸೇಬಾಗಲಿನ ಹತ್ತರದಲ್ಲಿ ಒಂದು ಕೊಳವಿದೆ; ಇದಕ್ಕೆ ಇಬ್ರೀಯ ಮಾತಿನಲ್ಲಿ ಬೇತ್ಸಥಾ[1] ಎಂದು ಹೆಸರು. 3 ಅಲ್ಲಿ ಐದು ಮಂಟಪಗಳವೆ; ಇವುಗಳಲ್ಲಿ ಬಹುಮಂದಿ ರೋಗಿಗಳೂ ಕುರುಡರೂ ಕುಂಟರೂ ಮೈ ಒಣಗಿದವರೂ ಬಿದ್ದುಕೊಂಡಿರುವರು[2]. 5 ಅಲ್ಲಿ ಮೂವತ್ತೆಂಟು ವರುಷದಿಂದ ರೋಗಿಯಾಗಿದ್ದ ಒಬ್ಬ ಮನುಷ್ಯನಿದ್ದನು. 6 ಅವನು ಬಿದ್ದಿರುವದನ್ನು ಯೇಸು ಕಂಡು, ಇವನು ಹೀಗಾಗಿ ಬಹುಕಾಲವಾಗಿದೆ ಎಂದು ತಿಳಿದು—ನಿನಗೆ ಸ್ವಸ್ಥವಾಗಲಿಕ್ಕೆ ಮನಸ್ಸುಂಟೋ? ಎಂದು ಅವನನ್ನು ಕೇಳಿದ್ದಕ್ಕೆ, 7 ಆ ರೋಗಿಯು—ಸ್ವಾಮಿ, ನೀರು ಉಕ್ಕುವಾಗ ನನ್ನನ್ನು ಕೊಳದೊಳಗೆ ಇಳಿಸುವವರು ಒಬ್ಬರೂ ಇಲ್ಲ; ನಾನು ಬರುವದರೊಳಗೆ ನನಗಿಂತ ಮುಂದಾಗಿ ಮತ್ತೊಬ್ಬನು ಇಳಿಯುತ್ತಾನೆ ಅಂದನು. 8 ಯೇಸು ಅವನಿಗೆ—ಎದ್ದು ನಿನ್ನ ಹಾಸಿಗೆಯನ್ನು ಹೊತ್ತುಕೊಂಡು ನಡೆ ಎಂದು ಹೇಳಿದನು. 9 ಆ ಕ್ಷಣವೇ ಆ ಮನುಷ್ಯನು ಸ್ವಸ್ಥನಾಗಿ, ತನ್ನ ಹಾಸಿಗೆಯನ್ನು ಹೊತ್ತುಕೊಂಡು ನಡೆದನು.

10 ಆದರೆ ಆ ದಿವಸ ಸಬ್ಬತ್‌ದಿನವಾಗಿತ್ತು; ಹೀಗಿರುವದರಿಂದ ಯೆಹೂದ್ಯರು ಸ್ವಸ್ಥವಾದವನಿಗೆ—ಈ ಹೊತ್ತು ಸಬ್ಬತ್‌ದಿನವಾಗಿದೆ; ನೀನು ಹಾಸಿಗೆಯನ್ನು ಹೊರುವದು ಸರಿಯಲ್ಲವೆಂದು ಹೇಳಿದ್ದಕ್ಕೆ, 11 ಅವನು—ನನ್ನನ್ನು ಸ್ವಸ್ಥಮಾಡಿದವನೇ ನಿನ್ನ ಹಾಸಿಗೆಯನ್ನು ಹೊತ್ತುಕೊಂಡು ನಡೆ ಎಂದು ನನಗೆ ಹೇಳಿದನು ಅಂದನು. 12 ಹೊತ್ತುಕೊಂಡು ನಡೆ ಎಂದು ನಿನಗೆ ಹೇಳಿದ ಮನುಷ್ಯನು ಯಾರೆಂದು ಅವನನ್ನು ಕೇಳಿದರು. 13 ಆದರೆ ಅವನ್ಯಾರೆಂಬುವದು ಸ್ವಸ್ಥವಾದವನಿಗೆ ತಿಳಿದಿರಲಿಲ್ಲ; ಆ ಸ್ಥಳದಲ್ಲಿ ಜನರ ಗುಂಪು ಇದ್ದದರಿಂದ ಯೇಸು ಸರಕೊಂಡುಹೋಗಿದ್ದನು. 14 ಇದಾದ ಮೇಲೆ ಯೇಸು ಅವನನ್ನು ದೇವಾಲಯದಲ್ಲಿ ಕಂಡು—ನಿನಗೆ ಸ್ವಸ್ಥವಾಯಿತಲ್ಲಾ; ಇನ್ನು ಮೇಲೆ ಪಾಪ ಮಾಡಬೇಡ; ನಿನಗೆ ಹೆಚ್ಚಿನ ಕೇಡು ಬಂದೀತು ಅಂದನು. 15 ಆ ಮನುಷ್ಯನು ಅಲ್ಲಿಂದ ಹೋಗಿ—ನನ್ನನ್ನು ಸ್ವಸ್ಥಮಾಡಿದವನು ಯೇಸುವೇ ಎಂದು ಯೆಹೂದ್ಯರಿಗೆ ತಿಳಿಸಿದನು. 16 ಆದಕಾರಣ ಯೆಹೂದ್ಯರು—ಯೇಸು ಸಬ್ಬತ್‌ದಿನದಲ್ಲಿ ಇಂಥಾ ಕೆಲಸಗಳನ್ನು ಮಾಡುತ್ತಾನಲ್ಲಾ ಎಂದು ಆತನನ್ನು ಹಿಂಸಿಸುವವರಾದರು. 17 ಅದಕ್ಕೆ ಯೇಸು—ನನ್ನ ತಂದೆಯು ಇಂದಿನವರೆಗೂ ಕೆಲಸಮಾಡುತ್ತಾನೆ, ನಾನೂ ಕೆಲಸಮಾಡುತ್ತೇನೆ ಅಂದನು. 18 ಈ ಮಾತನ್ನು ಹೇಳಿದ್ದರಿಂದ ಆತನು ಸಬ್ಬತ್‌ದಿನವನ್ನು ಅಲಕ್ಷ್ಯಮಾಡಿದ್ದಲ್ಲದೆ ದೇವರನ್ನು ತನ್ನ ತಂದೆ

---

[1] ಕೆಲವು ಪ್ರತಿಗಳಲ್ಲಿ ಬೇತ್ಸಾಯಿದವೆಂದು, ಬೇರೆ ಕೆಲವು ಪ್ರತಿಗಳಲ್ಲಿ ಬೇಥೆಸ್ದ ಎಂದು ಬರೆದದೆ.

[2] ಕೆಲವು ಪ್ರತಿಗಳಲ್ಲಿ ಇನ್ನೂ ಬರೆದಿರುವದೇನಂದರೆ—ಇವರು ನೀರು ಉಕ್ಕುವದನ್ನು ಕಾದುಕೊಂಡಿರುವರು.

[4] ಒಬ್ಬ ದೇವದೂತನು ಆಗಾಗ್ಯೆ ಕೊಳದಲ್ಲಿ ಇಳಿದುಬಂದು ನೀರನ್ನು ಉಕ್ಕಿಸುವನು; ನೀರನ್ನು ಉಕ್ಕಿಸಿದ ಮೇಲೆ ಮೊದಲು ಒಳಗೆ ಹೋದವನು ಯಾವ ರೋಗದಲ್ಲಿ ಬಿದ್ದಿದ್ದರೂ ಸ್ವಸ್ಥವಾಗುವನು.

ಎಂದು ಹೇಳಿ ತನ್ನನ್ನು ದೇವರಿಗೆ ಸರಿಗಟ್ಟಿಕೊಂಡನೆಂದು ಯೆಹೂದ್ಯರು ಆತನನ್ನು ಕೊಲ್ಲು ವದಕ್ಕೆ ಮತ್ತಷ್ಟು ಪ್ರಯತ್ನಮಾಡಿದರು.

ದೇವಕುಮಾರನ ಅಧಿಕಾರವನ್ನು ಕುರಿತು ಮತ್ತು ಆತನಿಗಿರುವ ಸಾಕ್ಷಿಯನ್ನು ಕುರಿತು ಯೇಸು ಮಾಡಿದ ಉಪದೇಶ.

19 ಅದಕ್ಕೆ ಯೇಸು ಅವರಿಗೆ ಹೇಳಿದ್ದೇನಂದರೆ—ನಿಮಗೆ ನಿಜನಿಜವಾಗಿ ಹೇಳುತ್ತೇನೆ, ತಂದೆಯು ಮಾಡುವದನ್ನು ಕಂಡು ಮಗನು ಮಾಡುತ್ತಾನೆ ಹೊರತು ತನ್ನಷ್ಟಕ್ಕೆ ತಾನೇ ಏನೂ ಮಾಡಲಾರನು; ಆತನು ಮಾಡುವದನ್ನೆಲ್ಲಾ ಹಾಗೆಯೇ ಮಗನೂ ಮಾಡುತ್ತಾನೆ.
20 ತಂದೆಯು ಮಗನ ಮೇಲೆ ಮಮತೆಯಿಟ್ಟು ತಾನು ಮಾಡುವವುಗಳನ್ನೆಲ್ಲಾ ಅವನಿಗೆ ತೋರಿಸುತ್ತಾನೆ. ಇದಲ್ಲದೆ ಇವುಗಳಿಗಿಂತ ದೊಡ್ಡ ಕೆಲಸಗಳನ್ನು ಅವನಿಗೆ ತೋರಿಸು
21 ವನು; ಅವುಗಳನ್ನು ನೋಡಿ ನಿಮಗೆ ಆಶ್ಚರ್ಯವಾಗುವದು. ತಂದೆಯು ಹ್ಯಾಗೆ ಸತ್ತವರನ್ನು ಎಬ್ಬಿಸಿ ಬದುಕಿಸುತ್ತಾನೋ ಹಾಗೆಯೇ ಮಗನು ಸಹ ತನಗೆ ಬೇಕಾದವ
22 ರನ್ನು ಬದುಕಿಸುತ್ತಾನೆಂದು ತಿಳುಕೊಳ್ಳಿರಿ. ಇದಲ್ಲದೆ ತಂದೆಯು ಯಾರಿಗೂ ತೀರ್ಪು ಮಾಡುವದೂ ಇಲ್ಲ; ತೀರ್ಪುಮಾಡುವ ಅಧಿಕಾರವನ್ನೆಲ್ಲಾ ಮಗನಿಗೆ ಕೊಟ್ಟಿದ್ದಾನೆ;
23 ಎಲ್ಲರು ತನಗೆ ಮಾನಕೊಡುವ ಪ್ರಕಾರವೇ ಮಗನಿಗೂ ಮಾನಕೊಡಬೇಕೆಂದು ತಂದೆಯು ಇಚ್ಛೈಸುತ್ತಾನೆ. ಮಗನಿಗೆ ಮಾನಕೊಡದವನು ಅವನನ್ನು ಕಳುಹಿಸಿಕೊಟ್ಟ
24 ತಂದೆಗೂ ಮಾನಕೊಡದವನಾಗಿದ್ದಾನೆ. ನಿಮಗೆ ನಿಜನಿಜವಾಗಿ ಹೇಳುತ್ತೇನೆ, ನನ್ನ ವಾಕ್ಯವನ್ನು ಕೇಳಿ ನನ್ನನ್ನು ಕಳುಹಿಸಿದಾತನನ್ನು ನಂಬುವವನು ನಿತ್ಯಜೀವವನ್ನು ಹೊಂದಿ ದ್ದಾನೆ. ಅವನು ತೀರ್ಪಿಗೆ ಗುರಿಯಾಗುವದಿಲ್ಲ; ಮರಣದಿಂದ ಪಾರಾಗಿ ಜೀವಕ್ಕೆ
25 ಸೇರಿದ್ದಾನೆ. ನಿಮಗೆ ನಿಜನಿಜವಾಗಿ ಹೇಳುತ್ತೇನೆ, ಸತ್ತವರು ದೇವಕುಮಾರನ ಧ್ವನಿ ಯನ್ನು ಕೇಳುವ ಕಾಲ ಬರುತ್ತದೆ, ಈಗಲೇ ಬಂದದೆ; ಕೇಳಿದವರು ಬದುಕುವರು.
26 ತಂದೆಯು ತಾನು ಹ್ಯಾಗೆ ಸ್ವತಃ ಜೀವವುಳ್ಳವನಾಗಿದ್ದಾನೋ ಹಾಗೆಯೇ ಮಗನೂ
27 ಸ್ವತಃ ಜೀವವುಳ್ಳವನಾಗಿರುವಂತೆ ಮಾಡಿದನು. ಮತ್ತು ಮಗನು ಮನುಷ್ಯಕುಮಾರ
28 ನಾಗಿರುವದರಿಂದ ತೀರ್ಪುಮಾಡುವ ಅಧಿಕಾರವನ್ನೂ ಅವನಿಗೆ ಕೊಟ್ಟನು. ಅದಕ್ಕೆ
29 ಆಶ್ಚರ್ಯಪಡಬೇಡಿರಿ; ಸಮಾಧಿಗಳಲ್ಲಿರುವವರೆಲ್ಲರು ಆತನ ಧ್ವನಿಯನ್ನು ಕೇಳಿ ಎದ್ದು ಹೊರಗೆ ಬರುವ ಕಾಲ ಬರುತ್ತದೆ. ಒಳ್ಳೇದನ್ನು ಮಾಡಿದವರಿಗೆ ಜೀವಕ್ಕಾಗಿ ಪುನರು ತ್ಥಾನವಾಗುವದು; ಕೆಟ್ಟದ್ದನ್ನು ನಡಸಿದವರಿಗೆ ತೀರ್ಪಿಗಾಗಿ ಪುನರುತ್ಥಾನವಾಗುವದು.
30 ನನ್ನಷ್ಟಕ್ಕೆ ನಾನೇ ಏನೂ ಮಾಡಲಾರೆನು; ತಂದೆ ಹೇಳಿದ್ದನ್ನು ಕೇಳಿ ನ್ಯಾಯತೀರಿ ಸುತ್ತೇನೆ; ಮತ್ತು ಸ್ವಂತ ಚಿತ್ತ ನೆರವೇರಬೇಕೆಂದು ಅಪೇಕ್ಷಿಸದೆ ನನ್ನನ್ನು ಕಳುಹಿಸಿದಾತನ ಚಿತ್ತ ನೆರವೇರಬೇಕೆಂದು ಅಪೇಕ್ಷಿಸುವದರಿಂದ ನಾನು ಮಾಡುವ ತೀರ್ಪು ನ್ಯಾಯವಾಗಿದೆ.
31,32 ನನ್ನ ವಿಷಯವಾಗಿ ನಾನೇ ಸಾಕ್ಷಿಹೇಳಿಕೊಂಡರೆ ನನ್ನ ಸಾಕ್ಷಿ ನಿಜವಾಗದು. ನನ್ನ ವಿಷಯವಾಗಿ ಸಾಕ್ಷಿಹೇಳುವವನು ಮತ್ತೊಬ್ಬನಿದ್ದಾನೆ; ಆತನು ನನ್ನ ವಿಷಯವಾಗಿ
33 ಹೇಳುವ ಸಾಕ್ಷಿ ನಿಜವೆಂದು ಬಲ್ಲೆನು. ನೀವು ಯೋಹಾನನ ಬಳಿಯಲ್ಲಿ ಕೇಳಿಕೊಂಡು
34 ಬರುವದಕ್ಕೆ ಕಳುಹಿಸಿದಿರಿ; ಅವನು ಸತ್ಯಕ್ಕೆ ಸಾಕ್ಷಿಹೇಳಿದನು. ನಾನಂತೂ ನನಗೆ

ಬೇಕಾದ ಸಾಕ್ಷಿಯನ್ನು ಮನುಷ್ಯರಿಂದ ತಕ್ಕೊಳ್ಳುವದಿಲ್ಲ; ಆದರೂ ನಿಮಗೆ ರಕ್ಷಣೆ ಆಗಬೇಕೆಂದು ಇದನ್ನು ಹೇಳಿದ್ಧೇನೆ. ಯೋಹಾನನು ಉರಿಯುವ ದೀಪದೋಪಾದಿ 35 ಯಲ್ಲಿ ಪ್ರಕಾಶಿಸಿದನು. ಅವನು ಕೊಡುವ ಬೆಳಕಿನಲ್ಲಿ ಸ್ವಲ್ಪ ಕಾಲ ವಿನೋದಗೊಳ್ಳು ವದಕ್ಕೆ ಮನಸ್ಸು ಮಾಡಿದಿರಿ. ನನಗಂತೂ ಯೋಹಾನನ ಸಾಕ್ಷಿಗಿಂತ ಹೆಚ್ಚಿನ ಸಾಕ್ಷಿ 36 ಉಂಟು; ಹ್ಯಾಗಂದರೆ ಪೂರೈಸುವದಕ್ಕೆ ತಂದೆ ನನಗೆ ಕೊಟ್ಟಿರುವ ಕೆಲಸಗಳು, ಅಂದರೆ ನಾನು ಮಾಡುವ ಕೆಲಸಗಳೇ, ತಂದೆಯು ನನ್ನನ್ನು ಕಳುಹಿಸಿಕೊಟ್ಟನೆಂಬದಾಗಿ ನನ್ನ ವಿಷಯದಲ್ಲಿ ಸಾಕ್ಷಿಕೊಡುತ್ತವೆ. ಇದಲ್ಲದೆ ನನ್ನನ್ನು ಕಳುಹಿಸಿಕೊಟ್ಟ ತಂದೆಯು 37 ನನ್ನ ವಿಷಯವಾಗಿ ಸಾಕ್ಷಿಹೇಳಿದ್ದಾನೆ. ನೀವು ಎಂದಾದರೂ ಆತನ ಧ್ವನಿಯನ್ನು ಕೇಳಿದ್ದೂ ಇಲ್ಲ, ಆತನ ರೂಪವನ್ನು ನೋಡಿದ್ದೂ ಇಲ್ಲ, ಆತನ ವಾಕ್ಯವು ನಿಮ್ಮಲ್ಲಿ 38 ನೆಲೆಗೊಂಡದ್ದೂ ಇಲ್ಲ; ಆತನು ಕಳುಹಿಸಿಕೊಟ್ಟವನ ಮಾತನ್ನು ನೀವು ನಂಬದೆ ಇದ್ದೀ ರಷ್ಟೆ. ಶಾಸ್ತ್ರಗಳಿಂದ ನಿತ್ಯಜೀವವು ದೊರೆಯುತ್ತದೆಂದು ನೀವು ನೆನಸಿ ಅವುಗಳನ್ನು 39 ವಿಚಾರಿಸುತ್ತೀರಲ್ಲಾ; ಅವುಗಳೂ ನನ್ನ ವಿಷಯದಲ್ಲಿ ಸಾಕ್ಷಿಕೊಡುವವುಗಳಾಗಿವೆ. ಆದಾಗ್ಯೂ ಜೀವಹೊಂದುವದಕ್ಕಾಗಿ ನನ್ನ ಬಳಿಗೆ ಬರುವದಕ್ಕೆ ನಿಮಗೆ ಮನಸ್ಸಿಲ್ಲ. 40

ನಾನು ಮನುಷ್ಯರಿಂದಾಗುವ ಮಾನವನ್ನು ಅಂಗೀಕರಿಸುವದಿಲ್ಲ. ಆದರೆ ನಿಮ್ಮನ್ನು 41,42 ನಾನು ಬಲ್ಲೆನು, ದೇವರಲ್ಲಿ ನಿಮಗೆ ಪ್ರೀತಿಯಿಲ್ಲವೆಂದು ನನಗೆ ತಿಳಿದದೆ. ನಾನು ನನ್ನ 43 ತಂದೆಯ ಹೆಸರಿನ ಮೇಲೆ ಬಂದಿದ್ಧೇನೆ; ನನ್ನನ್ನು ನೀವು ಒಪ್ಪಿಕೊಳ್ಳುವದಿಲ್ಲ; ಮತ್ತೊ ಬ್ಬನು ಸ್ವಂತ ಹೆಸರಿನ ಮೇಲೆ ಬಂದರೆ ಅವನನ್ನು ಒಪ್ಪಿಕೊಳ್ಳುವಿರಿ. ಒಬ್ಬನೇ ದೇವ 44 ರಿಂದ ಬರುವಂಥಾ ಮಾನವನ್ನು ಅಪೇಕ್ಷಿಸದೆ ಒಬ್ಬರಿಂದೊಬ್ಬರು ಮಾನವನ್ನು ಅಂಗೀ ಕರಿಸುವವರಾದ ನೀವು ಹ್ಯಾಗೆ ನಂಬೀರಿ? ನಾನು ತಂದೆಯ ಮುಂದೆ ನಿಮ್ಮ ಮೇಲೆ 45 ತಪ್ಪುಹೊರಿಸುವೆನೆಂದು ನೆನಸಬೇಡಿರಿ; ನೀವು ಆಶ್ರಯಿಸಿಕೊಂಡಿರುವ ಮೋಶೆಯೇ ನಿಮ್ಮ ಮೇಲೆ ತಪ್ಪುಹೊರಿಸುವವನು. ಅವನು ನನ್ನ ವಿಷಯವಾಗಿ ಬರೆದನು; ಆದದರಿಂದ 46 ನೀವು ಮೋಶೆಯ ಮಾತನ್ನು ನಂಬುವವರಾಗಿದ್ದರೆ ನನ್ನ ಮಾತನ್ನೂ ನಂಬುತ್ತಿದ್ದಿರಿ. ಅವನು ಬರೆದ ಮಾತುಗಳನ್ನು ನೀವು ನಂಬದಿದ್ದರೆ, ನಾನು ಹೇಳುವ ಮಾತುಗಳನ್ನು 47 ಹ್ಯಾಗೆ ನಂಬೀರಿ? ಅಂದನು.

ಯೇಸು ಐದು ಸಾವಿರ ಜನರಿಗೆ ಆಶ್ಚರ್ಯವಾಗಿ ಊಟಮಾಡಿಸಿದ್ದು; ಸಮುದ್ರದ ಮೇಲೆ ನಡೆದದ್ದು.

(ಮತ್ತಾಯ 14, 13—33; ಮಾರ್ಕ 6, 32—51; ಲೂಕ 9, 10—17.)

ತರುವಾಯ ಯೇಸು ಗಲಿಲಾಯದ ಸಮುದ್ರದ ಆಚೆಗೆ ಹೋದನು; ಅದಕ್ಕೆ ತಿಬೇ **6** ರಿಯದ ಸಮುದ್ರವೆಂತಲೂ ಹೇಳುತ್ತಾರೆ. ಬಹು ಜನರ ಗುಂಪು ರೋಗಿಗಳಲ್ಲಿ ಆತನು 2 ನಡಸಿದ ಸೂಚಕಕಾರ್ಯಗಳನ್ನು ನೋಡಿದ್ದರಿಂದ, ಆತನ ಹಿಂದೆ ಹೋಗುತ್ತಿತ್ತು. ಆದರೆ ಯೇಸು ಬೆಟ್ಟವನ್ನೇರಿ ಅಲ್ಲಿ ತನ್ನ ಶಿಷ್ಯರ ಸಂಗಡ ಕೂತುಕೊಂಡನು. ಆ ಕಾಲ 3, 4 ದಲ್ಲಿ ಯೆಹೂದ್ಯರ ಪಸ್ಕಹಬ್ಬವು ಹತ್ತಿರವಾಗಿತ್ತು. ಹೀಗಿರಲಾಗಿ ಯೇಸು ಕಣ್ಣೆತ್ತಿ 5 ನೋಡಿದಾಗ ಬಹು ಜನರ ಗುಂಪು ತನ್ನ ಬಳಿಗೆ ಬರುವದನ್ನು ಕಂಡು—ಇವರ ಊಟಕ್ಕೆ

6 ನಾವು ಎಲ್ಲಿಂದ ರೊಟ್ಟೀ ಕೊಂಡುತರೋಣ? ಎಂದು ಫಿಲಿಪ್ಪನನ್ನು ಕೇಳಿದನು. ತಾನು ಮಾಡಬೇಕೆಂದಿದ್ದದ್ದು ತನಗೆ ತಿಳಿದಿದ್ದರೂ ಅವನನ್ನು ಪರೀಕ್ಷಿಸುವದಕ್ಕೆ ಈ ಮಾತನ್ನು
7 ಹೇಳಿದನು. ಅದಕ್ಕೆ ಫಿಲಿಪ್ಪನು—ಒಬ್ಬೊಬ್ಬನಿಗೆ ಸ್ವಲ್ಪಸ್ವಲ್ಪ ಸಿಕ್ಕಬೇಕಾದರೆ ಇನ್ನೂರು
8 ಹಣದ ರೊಟ್ಟಿಯಾದರೂ ಸಾಲದು ಅಂದನು. ಆಗ ಆತನ ಶಿಷ್ಯರಲ್ಲಿ ಒಬ್ಬನಾಗಿರುವ
9 ಸೀಮೋನ್‌ಪೇತ್ರನ ತಮ್ಮನಾದ ಅಂದ್ರೆಯನು ಆತನಿಗೆ—ಇಲ್ಲಿರುವ ಒಬ್ಬ ಹುಡುಗನ ಬಳಿಯಲ್ಲಿ ಐದು ಜವೆಗೋದಿಯ ರೊಟ್ಟಿಗಳೂ ಎರಡು ಮೀನುಗಳೂ ಅವೆ; ಆದರೆ ಇಷ್ಟು
10 ಜನರಿಗೆ ಅವು ಯಾತಕ್ಕಾದಾವು? ಎಂದು ಹೇಳಲಾಗಿ, ಯೇಸು—ಆ ಜನರನ್ನು ಊಟಕ್ಕೆ ಕೂಡ್ರಿಸಿರಿ ಅಂದನು. ಆ ಸ್ಥಳದಲ್ಲಿ ಬಹಳ ಹುಲ್ಲು ಬೆಳದಿತ್ತು; ಜನರು ಕೂತು
11 ಕೊಂಡರು. ಗಂಡಸರ ಸಂಖ್ಯೆ ಹೆಚ್ಚುಕಡಿಮೆ ಐದುಸಾವಿರವಿತ್ತು. ತರುವಾಯ ಯೇಸು ಆ ರೊಟ್ಟಿಗಳನ್ನು ತೆಗದುಕೊಂಡು ದೇವರ ಸ್ತೋತ್ರಮಾಡಿ ಕೂತುಕೊಂಡವ ರಿಗೆ ಹಂಚಿಕೊಟ್ಟನು; ಅದರಂತೆ ಮೀನುಗಳಲ್ಲಿಯೂ ಅವರಿಗೆ ಬೇಕಾದಷ್ಟು ಹಂಚಿ
12 ಕೊಟ್ಟನು. ಅವರಿಗೆ ತೃಪ್ತಿಯಾದ ಮೇಲೆ ಯೇಸು ತನ್ನ ಶಿಷ್ಯರಿಗೆ—ಮಿಕ್ಕ ತುಂಡು ಗಳನ್ನು ಕೂಡಿಸಿರಿ; ಇದರಲ್ಲಿ ಯಾವದೂ ವ್ಯರ್ಥವಾಗಬಾರದು ಎಂದು ಹೇಳಿದನು.
13 ಅವರು ಕೂಡಿಸಲಾಗಿ ಆ ಐದು ಜವೆಗೋದಿಯ ರೊಟ್ಟಿಗಳಲ್ಲಿ ಜನರು ತಿಂದು ಮಿಕ್ಕ
14 ತುಂಡುಗಳಿಂದ ಹನ್ನೆರಡು ಪುಟ್ಟಿ ತುಂಬಿದವು. ಆತನು ಮಾಡಿದ ಈ ಸೂಚಕಕಾರ್ಯ ವನ್ನು ಆ ಜನರು ನೋಡಿ—ಲೋಕಕ್ಕೆ ಬರಬೇಕಾದ ಪ್ರವಾದಿ[1] ಈತನೇ ನಿಜ ಎಂದು ಹೇಳಿಕೊಂಡರು.

15 ಆಗ ಯೇಸು—ಅವರು ಬಂದು ತನ್ನನ್ನು ಹಿಡುಕೊಂಡುಹೋಗಿ ಅರಸನನ್ನಾಗ ಮಾಡಬೇಕೆಂಬ ಯೋಚನೆಯಲ್ಲಿದ್ದಾರೆಂದು ತಿಳಿದುಕೊಂಡು, ತಿರಿಗಿ ತಾನೊಬ್ಬನೇ ಒಂಟಿ
16 ಗನಾಗಿ ಬೆಟ್ಟಕ್ಕೆ ಹೋಗಿಬಿಟ್ಟನು. ಸಂಜೆಯಾದಾಗ ಆತನ ಶಿಷ್ಯರು ಸಮುದ್ರಕ್ಕೆ
17 ಇಳಿದು ಹಡಗನ್ನು ಹತ್ತಿ ಸಮುದ್ರಮಾರ್ಗವಾಗಿ ಕಪೆರ್ನೌಮಿನ ಕಡೆಗೆ ಹೊರಟರು.
18 ಆಗಲೇ ಕತ್ತಲಾಗಿತ್ತು, ಮತ್ತು ಯೇಸು ಅವರ ಬಳಿಗೆ ಇನ್ನೂ ಬಂದಿರಲಿಲ್ಲ. ಇದಲ್ಲದೆ
19 ಬಿರುಗಾಳಿ ಬೀಸುವದರಿಂದ ಸಮುದ್ರವು ಅಲ್ಲಕಲ್ಲೋಲವಾಗಿತ್ತು. ಹೀಗಿರಲಾಗಿ ಅವರು ಹುಟ್ಟುಹಾಕುತ್ತಾ ಹೆಚ್ಚುಕಡಿಮೆ ಒಂದು ಹರದಾರಿ[2] ದೂರ ಹೋದ ಬಳಿಕ, ಯೇಸು ಸಮುದ್ರದ ಮೇಲೆ ನಡೆಯುತ್ತಾ ಹಡಗದ ಸಮೀಪಕ್ಕೆ ಬರುವದನ್ನು ನೋಡಿ ಅಂಜಿದರು.
20,21 ಆದರೆ ಆತನು—ಅಂಜಬೇಡಿರಿ, ನಾನು, ಅಂದನು. ಆಗ ಆತನನ್ನು ಹಡಗಿನೊಳಗೆ ಕರಕೊಳ್ಳುವದಕ್ಕೆ ಮನಸ್ಸಾಗಿದ್ದರು; ಮತ್ತು ಆ ಕ್ಷಣವೇ ಆ ಹಡಗು ಅವರು ಹೋಗ ಬೇಕೆಂದಿದ್ದ ಭೂಮಿಗೆ ಮುಟ್ಟಿತು.

ಯೇಸು ತಾನೇ ಜೀವಕರವಾದ ರೊಟ್ಟಿ ಎಂದು ಬೋಧಿಸಿದ್ದರಿಂದ ಆತನ ಶಿಷ್ಯರಲ್ಲಿ ಅನೇಕರು ಹಿಂಜರಿದದ್ದು.

22 ಮರುದಿವಸ ಸಮುದ್ರದ ಆಚೇಕಡೆಯಲ್ಲಿ ನಿಂತುಕೊಂಡಿದ್ದ ಜನರು ಯೇಸುವನ್ನು ಹುಡುಕುತ್ತಿದ್ದರು; ಇಲ್ಲಿ ಒಂದೇ ಹಡಗು ಇದ್ದ ಹೊರತು ಬೇರೆ ದೋಣಿಯು ಇರಲಿಲ್ಲ

[1] ದ್ವಿತೀಯ ನ್ಯಾಯ ೨೮, ೧೫—೨೨.
[2] ಮೂಲ, ಇಪ್ಪತ್ತೈದು ಮೂವತ್ತು ಸ್ತಾದ್ಯಗಳು.

ವೆಂದೂ ಶಿಷ್ಯರು ಮಾತ್ರ ಹೊರಟುಹೋದದ್ದಲ್ಲದೆ ಯೇಸು ತನ್ನ ಶಿಷ್ಯರ ಸಂಗಡ
ಆ ಹಡಗನ್ನು ಹತ್ತಲಿಲ್ಲವೆಂದೂ ಅವರಿಗೆ ತಿಳಿದಿತ್ತು. ಆದರೆ ಅಷ್ಟರೊಳಗೆ ಬೇರೆ 23
ದೋಣಿಗಳು ತಿಬೇರಿಯದಿಂದ ಹೊರಟು ಸ್ವಾಮಿಯು ಸ್ತೋತ್ರಮಾಡಿ ಜನರಿಗೆ ರೊಟ್ಟೀ
ಊಟಾಮಾಡಿಸಿದ ಸ್ಥಳದ ಸಮೀಪಕ್ಕೆ ಬಂದಿದ್ದವು. ಹೀಗಿರಲಾಗಿ, ಯೇಸು ಇಲ್ಲಿ 24
ಇಲ್ಲ, ಆತನ ಶಿಷ್ಯರೂ ಇಲ್ಲ ಎಂದು ಆ ಜನರು ನೋಡಿ, ತಾವೇ ಆ ಸಣ್ಣ ದೋಣಿಗಳನ್ನು
ಹತ್ತಿ ಯೇಸುವನ್ನು ಹುಡುಕುತ್ತಾ ಕಪೆರ್ನೌಮಿಗೆ ಬಂದರು. ಮತ್ತು ಸಮುದ್ರದ 25
ಆಚೇಕಡೆಯಲ್ಲಿ ಆತನನ್ನು ಕಂಡುಕೊಂಡು—ಗುರುವೇ, ಯಾವಾಗ ಇಲ್ಲಿಗೆ ಬರೋಣ
ವಾಯಿತು? ಎಂದು ಕೇಳಿದ್ದಕ್ಕೆ, ಯೇಸು ಅವರಿಗೆ—ನಿಮಗೆ ನಿಜನಿಜವಾಗಿ ಹೇಳುತ್ತೇನೆ, 26
ನೀವು ನನ್ನನ್ನು ಹುಡುಕುವದು ಸೂಚಕಕಾರ್ಯಗಳನ್ನು ನೋಡಿದ್ದರಿಂದಲ್ಲ, ಆ ರೊಟ್ಟೀ
ತಿಂದು ಹೊಟ್ಟೀ ತುಂಬಿಸಿಕೊಂಡಿದ್ದರಿಂದಲೇ. ದುಡಿಯಿರಿ; ಕೆಟ್ಟುಹೋಗುವ ಆಹಾರ 27
ಕ್ಕಾಗಿ ದುಡಿಯಬೇಡಿರಿ, ನಿತ್ಯಜೀವಕ್ಕೆ ಉಳಿಯುವ ಆಹಾರಕ್ಕಾಗಿ ದುಡಿಯಿರಿ; ಇಂಥಾ
ಆಹಾರವನ್ನು ಮನುಷ್ಯಕುಮಾರನು ನಿಮಗೆ ಕೊಡುವನು; ಇದಕ್ಕಾಗಿ ತಂದೆಯಾದ
ದೇವರು ಆತನನ್ನು ನೇಮಿಸಿ ಮುದ್ರೆಹಾಕಿದ್ದಾನೆ ಅಂದನು.

ಅವರು—ದೇವರಿಗೆ ಮೆಚ್ಚಿಕೆಯಾದ ಕೆಲಸಗಳನ್ನು ನಾವು ನಡಸಬೇಕಾದರೆ ಏನು 28
ಮಾಡಬೇಕೆಂದು ಆತನನ್ನು ಕೇಳಿದ್ದಕ್ಕೆ, ಯೇಸು—ದೇವರು ಮೆಚ್ಚಿಕೊಂಡ ಕೆಲಸ 29
ಯಾವದಂದರೆ, ಆತನನ್ನು ಕಳುಹಿಸಿಕೊಟ್ಟವನನ್ನು ನೀವು ನಂಬುವದೇ ಅಂದನು.
ಅವರು ಆತನನ್ನು—ಹಾಗಾದರೆ ನಾವು ನೋಡಿ ನಿನ್ನ ಮಾತನ್ನು ನಂಬುವಂತೆ ಏನು 30
ಸೂಚಕಕಾರ್ಯ ಮಾಡುತ್ತೀ? ನಮ್ಮ ಹಿರಿಯರು ಅಡವಿಯಲ್ಲಿ ಮನ್ನಾ ತಿಂದರು[1]; 31
ಪರಲೋಕದಿಂದ ರೊಟ್ಟಿಯನ್ನು ಅವರಿಗೆ ತಿನ್ನುವದಕ್ಕೆ ಕೊಟ್ಟನು ಎಂದು[2] ಶಾಸ್ತ್ರದಲ್ಲಿ
ಬರೆದದೆಯಲ್ಲಾ, ನೀನು ಏನು ಕೆಲಸ ನಡಿಸುತ್ತೀ? ಎಂದು ಕೇಳಿದಾಗ, ಯೇಸು 32
ಅವರಿಗೆ—ನಿಮಗೆ ನಿಜನಿಜವಾಗಿ ಹೇಳುತ್ತೇನೆ, ಮೋಶೆಯು ನಿಮಗೆ ಪರಲೋಕದಿಂದ
ರೊಟ್ಟೀ ಕೊಟ್ಟವನಲ್ಲ; ನನ್ನ ತಂದೆಯು ಪರಲೋಕದಿಂದ ಬರುವ ನಿಜವಾದ ರೊಟ್ಟಿ
ಯನ್ನು ನಿಮಗೆ ಕೊಡುತ್ತಾನೆ. ದೇವರು ಕೊಡುವ ಆ ರೊಟ್ಟಿ ಯಾವದಂದರೆ, 33
ಪರಲೋಕದಿಂದ ಇಳಿದುಬಂದು ಲೋಕಕ್ಕೆ ಜೀವವನ್ನು ಉಂಟುಮಾಡುವಂಥಾದ್ದೇ
ಎಂದು ಹೇಳಿದನು. ಆಗ ಅವರು—ಸ್ವಾಮೀ, ಆ ರೊಟ್ಟಿಯನ್ನು ನಮಗೆ ಯಾವಾ 34
ಗಲೂ ಕೊಡು ಅನ್ನಲು, ಯೇಸು ಅವರಿಗೆ—ಜೀವಕೊಡುವ ರೊಟ್ಟಿ ನಾನೇ; ನನ್ನ 35
ಬಳಿಗೆ ಬರುವವನಿಗೆ ಎಂದಿಗೂ ಹಸಿವೆಯಾಗುವದಿಲ್ಲ, ನನ್ನನ್ನು ನಂಬುವವನಿಗೆ ಎಂದಿಗೂ
ನೀರಡಿಕೆಯಾಗುವದಿಲ್ಲ. ಆದರೆ ನೀವು ನನ್ನನ್ನು ನೋಡಿದ್ದರೂ ನಂಬದೆ ಇದ್ದೀರಿ 36
ಎಂದು ನಿಮಗೆ ಹೇಳಿದೆನಲ್ಲವೇ. ತಂದೆಯು ನನಗೆ ಕೊಡುವಂಥವರೆಲ್ಲರು ನನ್ನ ಬಳಿಗೆ 37
ಬರುವರು; ಮತ್ತು ನನ್ನ ಬಳಿಗೆ ಬರುವವನನ್ನು ನಾನು ತಳ್ಳಿಬಿಡುವದೇ ಇಲ್ಲ. ನನ್ನ 38
ಚಿತ್ತದಂತೆ ನಡೆಯುವದಕ್ಕಾಗಿ ನಾನು ಬಂದಿಲ್ಲ, ನನ್ನನ್ನು ಕಳುಹಿಸಿದಾತನ ಚಿತ್ತವನ್ನೇ
ನೆರವೇರಿಸುವದಕ್ಕೆ ಪರಲೋಕದಿಂದ ಬಂದೆನು. ನನ್ನನ್ನು ಕಳುಹಿಸಿದಾತನ ಚಿತ್ತವು 39

---

[1] ಹೊರಡೋಣ ೧೬, ೪. ೧೫.

[2] ಕೀರ್ತನೆ ೭೮, ೨೪.

ಏನಂದರೆ, ಆತನು ನನಗೆ ಕೊಟ್ಟವರಲ್ಲಿ ಒಬ್ಬನನ್ನೂ ನಾನು ಕೆಡಗೊಡಿಸದೆ, ಅವನನ್ನು
40 ಕಡೇದಿನದಲ್ಲಿ ಎಬ್ಬಿಸಬೇಕೆಂಬುವದೇ. ಮಗನನ್ನು ನೋಡಿ ಆತನನ್ನು ನಂಬುವ ಪ್ರತಿ
ಯೊಬ್ಬನಿಗೆ ನಿತ್ಯಜೀವವು ಸಿಕ್ಕಬೇಕೆಂಬುವದೇ ನನ್ನ ತಂದೆಯ ಚಿತ್ತವಾಗಿದೆ; ಮತ್ತು
ನಾನು ಕಡೇದಿನದಲ್ಲಿ ಅವನನ್ನು ಎಬ್ಬಿಸುವೆನು ಎಂದು ಹೇಳಿದನು.

41 ಆತನು—ಪರಲೋಕದಿಂದ ಇಳಿದುಬಂದ ರೊಟ್ಟಿ ನಾನೇ ಎಂದು ಹೇಳಿದ್ದಕ್ಕೆ, ಯೆಹೂ
42 ದ್ಯರು ಆತನ ವಿಷಯವಾಗಿ ಗುಣುಗುಟ್ಟಿ—ಇವನು ಯೋಸೇಫನ ಮಗನಾದ ಯೇಸು
ಅಲ್ಲವೇ? ಇವನ ತಂದೆತಾಯಿಗಳನ್ನು ನಾವು ಬಲ್ಲೆವಲ್ಲವೇ? ಈಗ ಇವನು ಪರಲೋಕ
43 ದಿಂದ ಇಳಿದುಬಂದಿದ್ದೇನೆಂದು ಹೇಳುವದು ಹ್ಯಾಗೆ? ಅಂದರು. ಅದಕ್ಕೆ ಯೇಸು
44 ಅವರಿಗೆ—ನಿಮ್ಮನಿಮ್ಮೊಳಗೆ ಗುಣುಗುಟ್ಟಬೇಡಿರಿ. ನನ್ನನ್ನು ಕಳುಹಿಸಿಕೊಟ್ಟಂಥಾ ತಂದೆ
ಯು ಎಳೆಯದ ಹೊರತು ಯಾವನೂ ನನ್ನ ಬಳಿಗೆ ಬರಲಾರನು; ಮತ್ತು ನಾನು
45 ಅವನನ್ನು ಕಡೇದಿನದಲ್ಲಿ ಎಬ್ಬಿಸುವೆನು. ಅವರೆಲ್ಲರು ದೇವರಿಂದ ಕಲಿತವರಾಗಿರುವರು
ಎಂದು ಪ್ರವಾದಿಗಳ ಗ್ರಂಥದಲ್ಲಿ[1] ಬರೆದದೆ; ತಂದೆಯಿಂದ ಕೇಳಿ ಕಲಿತವರೆಲ್ಲರು ನನ್ನ
46 ಬಳಿಗೆ ಬರುತ್ತಾರೆ. ಯಾವನಾದರೂ ತಂದೆಯನ್ನು ನೋಡಿದ್ದಾನೆಂದು ತಿಳಿಯಬೇಡಿರಿ;
47 ದೇವರ ಬಳಿಯಿಂದ ಬಂದವನೊಬ್ಬನೇ ತಂದೆಯನ್ನು ನೋಡಿದ್ದಾನೆ. ನಂಬಿದವನು
48 ನಿತ್ಯಜೀವವನ್ನು ಹೊಂದಿದ್ದಾನೆಂದು ನಿಮಗೆ ನಿಜನಿಜವಾಗಿ ಹೇಳುತ್ತೇನೆ. ಜೀವಕೊಡುವ
49 ರೊಟ್ಟಿ ನಾನೇ. ನಿಮ್ಮ ಹಿರಿಯರು ಅಡವಿಯಲ್ಲಿ ಮನ್ನಾ ತಿಂದರೂ ಸತ್ತುಹೋದರು;
50 ಪರಲೋಕದಿಂದ ಇಳಿದುಬರುವ ರೊಟ್ಟಿ ಎಂಥಾದ್ದಂದರೆ, ಅದನ್ನು ತಿಂದವನು ಸಾಯು
51 ವದಿಲ್ಲ. ಪರಲೋಕದಿಂದ ಇಳಿದುಬರುವ ಜೀವವುಳ್ಳ ರೊಟ್ಟಿಯು ನಾನೇ; ಈ ರೊಟ್ಟಿ
ಯನ್ನು ಯಾವನಾದರೂ ತಿಂದರೆ, ಅವನು ಸದಾಕಾಲ ಬದುಕುವನು. ಮತ್ತು ನಾನು
ಕೊಡುವ ರೊಟ್ಟಿ ನನ್ನ ಮಾಂಸವೇ; ಅದನ್ನು ಲೋಕದ ಜೀವಕ್ಕೋಸ್ಕರ ಕೊಡುವೆನು
ಎಂದು ಹೇಳಿದನು.

52 ಆಗ ಯೆಹೂದ್ಯರು—ಇವನು ತನ್ನ ಮಾಂಸವನ್ನು ನಮಗೆ ಹ್ಯಾಗೆ ತಿನ್ನುವದಕ್ಕೆ
53 ಕೊಟ್ಟಾನು ಎಂದು ತಮ್ಮತಮ್ಮೊಳಗೆ ವಾಗ್ವಾದಮಾಡುತ್ತಿರಲು, ಯೇಸು ಅವರಿಗೆ—ನಿಮಗೆ
ನಿಜನಿಜವಾಗಿ ಹೇಳುತ್ತೇನೆ, ನೀವು ಮನುಷ್ಯಕುಮಾರನ ಮಾಂಸವನ್ನು ತಿನ್ನದೆ ಅವನ
54 ರಕ್ತವನ್ನು ಕುಡಿಯದೆ ಹೋದರೆ ನಿಮ್ಮೊಳಗೆ ಜೀವವಿಲ್ಲ; ನನ್ನ ಮಾಂಸವನ್ನು ತಿಂದು
ನನ್ನ ರಕ್ತವನ್ನು ಕುಡಿಯುವವನು ನಿತ್ಯಜೀವವನ್ನು ಹೊಂದಿದ್ದಾನೆ; ಮತ್ತು ನಾನು
55 ಅವನನ್ನು ಕಡೇದಿನದಲ್ಲಿ ಎಬ್ಬಿಸುವೆನು. ಯಾಕಂದರೆ ನನ್ನ ಮಾಂಸವೇ ನಿಜವಾದ
56 ಆಹಾರ, ನನ್ನ ರಕ್ತವೇ ನಿಜವಾದ ಪಾನ; ನನ್ನ ಮಾಂಸವನ್ನು ತಿಂದು ನನ್ನ ರಕ್ತವನ್ನು
57 ಕುಡಿಯುವವನು ನನ್ನಲ್ಲಿ ಇರುತ್ತಾನೆ;* ನಾನು ಅವನಲ್ಲಿ ಇರುತ್ತೇನೆ. ಜೀವಸ್ವರೂಪ
ನಾದ ತಂದೆಯು ನನ್ನನ್ನು ಕಳುಹಿಸಿಕೊಟ್ಟಿರಲಾಗಿ ನಾನು ತಂದೆಯಿಂದ ಜೀವಿಸುತ್ತೇನೆ;
58 ಅದರಂತೆ ನನ್ನನ್ನು ತಿನ್ನುವವನೇ ನನ್ನಿಂದ ಜೀವಿಸುವನು. ಪರಲೋಕದಿಂದ ಇಳಿದು
ಬಂದ ರೊಟ್ಟಿ ಇದೇ. ನಿಮ್ಮ ಹಿರಿಯರು ಮನ್ನಾ ತಿಂದರೂ ಸತ್ತರು; ಇದು ಹಾಗಲ್ಲ;

---

1) ಯೆಶಾಯ ೫೪, ೧೩.

ಈ ರೊಟ್ಟಿಯನ್ನು ತಿನ್ನುವವನು ಸದಾಕಾಲ ಜೀವಿಸುವನು ಎಂದು ಹೇಳಿದನು. ಕಪೆರ್ನೌ 59
ಮಿನ ಸಭಾಮಂದಿರದಲ್ಲಿ ಉಪದೇಶಮಾಡುವಾಗ ಇದನ್ನು ಹೇಳಿದನು.

ಆತನ ಶಿಷ್ಯರಲ್ಲಿ ಅನೇಕರು ಇದನ್ನು ಕೇಳಿ—ಇದು ಕಠಿಣವಾದ ಮಾತು, ಇದನ್ನು 60
ಯಾರು ಕೇಳ್ಯಾರು? ಅಂದುಕೊಂಡರು. ಯೇಸು, ತನ್ನ ಶಿಷ್ಯರು ಇದಕ್ಕೆ ಗುಣುಗುಟ್ಟು 61
ತ್ತಾರೆಂದು ತನ್ನಲ್ಲಿ ತಿಳುಕೊಂಡು, ಅವರಿಗೆ—ಈ ಮಾತಿನಿಂದ ನಿಮಗೆ ಬೇಸರವಾಯಿತೋ?
ಹಾಗಾದರೆ ಮನುಷ್ಯಕುಮಾರನು ತಾನು ಮೊದಲು ಇದ್ದಲ್ಲಿಗೆ ಏರಿಹೋಗುವದನ್ನು 62
ನೀವು ನೋಡಿದರೆ ಏನನ್ನುವಿರಿ? ಬದುಕಿಸುವಂಥಾದ್ದು ಆತ್ಮವೇ; ಮಾಂಸವು ಯಾವ 63
ದಕ್ಕೂ ಬರುವದಿಲ್ಲ. ನಾನು ನಿಮಗೆ ಹೇಳಿರುವ ಮಾತುಗಳೇ ಆತ್ಮವಾಗಿಯೂ ಜೀವ
ವಾಗಿಯೂ ಅವೆ. ಆದರೆ ನಿಮ್ಮಲ್ಲಿ ಕೆಲವರು ನಂಬದವರಾಗಿದ್ಧಾರೆ ಅಂದನು. ನಂಬ 64
ದವರು ಇಂಥವರು, ತನ್ನನ್ನು ಹಿಡುಕೊಡುವವನು ಇಂಥವನು ಎಂಬುವದು ಯೇಸುವಿಗೆ
ಮೊದಲಿನಿಂದ ತಿಳಿದಿತ್ತು. ಮತ್ತು ಆತನು—ತಂದೆಯ ಅನುಗ್ರಹವಿಲ್ಲದೆ ಯಾರೂ ನನ್ನ ಬಳಿಗೆ 65
ಬರಲಾರರು ಎಂಬುವದನ್ನು[1] ನಾನು ನಿಮಗೆ ಅದರ ದೆಸೆಯಿಂದಲೇ ಹೇಳಿದೆನು ಅಂದನು.

ಅಂದಿನಿಂದ ಆತನ ಶಿಷ್ಯರಲ್ಲಿ ಅನೇಕರು ಹಿಂಜರಿದು ಆತನ ಕೂಡ ಸಂಚಾರಮಾಡು 66
ವದನ್ನು ಬಿಟ್ಟರು. ಯೇಸು ಇದನ್ನು ನೋಡಿ, ತನ್ನ ಹನ್ನೆರಡು ಮಂದಿಯನ್ನು—ನೀವು 67
ಸಹ ಹೋಗಬೇಕೆಂದಿದ್ಧೀರಾ? ಎಂದು ಕೇಳಿದ್ದಕ್ಕೆ, ಸೀಮೋನ್ ಪೇತ್ರನು—ಸ್ವಾಮಿ, 68
ನಿನ್ನನ್ನು ಬಿಟ್ಟು ನಾವು ಇನ್ನ್ಯಾರ ಬಳಿಗೆ ಹೋಗೋಣ? ನಿನ್ನಲ್ಲಿ ನಿತ್ಯಜೀವವನ್ನು
ಉಂಟುಮಾಡುವ ವಾಕ್ಯಗಳುಂಟು; ನೀನು ದೇವರು ಪ್ರತಿಷ್ಠಿಸಿದವನೇ ಎಂದು ನಾವು 69
ನಂಬಿದ್ದೇವೆ ಮತ್ತು ತಿಳಿದಿದ್ದೇವೆ ಅಂದನು. ಅದಕ್ಕೆ ಯೇಸು—ಹನ್ನೆರಡು ಮಂದಿಯಾದ 70
ನಿಮ್ಮನ್ನು ನಾನು ಆರಿಸಿ ತೆಗೆದುಕೊಂಡೆನಲ್ಲವೋ? ನಿಮ್ಮಲ್ಲಿಯೂ ಒಬ್ಬನು ಕೆಡಕನಾಗಿ
ದ್ಧಾನೆ ಅಂದನು. ಈ ಮಾತಿನಿಂದ ಆತನು ಸೀಮೋನನ ಮಗನಾದ ಇಸ್ಕರಿಯೋತ 71
ಯೂದನನ್ನು ಸೂಚಿಸಿದನು. ಇವನು ಆ ಹನ್ನೆರಡು ಮಂದಿಯಲ್ಲಿ ಒಬ್ಬನಾಗಿದ್ದು
ಮುಂದೆ ಆತನನ್ನು ಹಿಡುಕೊಡುವವನಾದನು.

ಯೇಸು ಪರ್ಣಶಾಲೆಗಳ ಜಾತ್ರೆಗೆ ಹೋಗಿ, ಉಪದೇಶಮಾಡಿದ್ದು; ಆತನ ವಿಷಯವಾಗಿ ಜನರಲ್ಲಿ ವಾಗ್ವಾದ ನಡೆದದ್ದು; ಅಧಿಕಾರಸ್ಥರು ಆತನನ್ನು ಹಿಡಿಯುವದಕ್ಕೆ ಪ್ರಯತ್ನಮಾಡಿದ್ದು.

ಈ ಸಂಗತಿಗಳಾದ ಮೇಲೆ ಯೇಸು ಗಲಿಲಾಯದಲ್ಲಿ ಸಂಚಾರಮಾಡುತ್ತಿದ್ದನು; **7**
ಯೆಹೂದ್ಯರು ಆತನನ್ನು ಕೊಲ್ಲುವ ಪ್ರಯತ್ನದಲ್ಲಿದ್ದದರಿಂದ, ಆತನಿಗೆ ಯೂದಾಯದಲ್ಲಿ
ಸಂಚಾರಮಾಡುವ ಮನಸ್ಸಿರಲಿಲ್ಲ. ಪರ್ಣಶಾಲೆಗಳ ಹಬ್ಬವೆಂಬ ಯೆಹೂದ್ಯರದೊಂದು 2
ಜಾತ್ರೆಯು ಸಮೀಪವಾದಾಗ ಆತನ ಅಣ್ಣತಮ್ಮಂದಿರು ಆತನಿಗೆ—ನೀನು ಮಾಡುವ 3
ಕಾರ್ಯಗಳನ್ನು ನಿನ್ನ ಶಿಷ್ಯರು ಸಹ ನೋಡುವಂತೆ ಇಲ್ಲಿಂದ ಹೊರಟು ಯೂದಾಯಕ್ಕೆ
ಹೋಗು; ಪ್ರಸಿದ್ಧಿಗೆ ಬರಬೇಕೆಂದಿರುವ ಯಾವನಾದರೂ ತಾನು ಮಾಡುವದನ್ನು ಮರೆ 4
ಯಲ್ಲಿ ಮಾಡುವದಿಲ್ಲವಲ್ಲಾ; ನೀನು ಇಂಥಾ ಕಾರ್ಯಗಳನ್ನು ಮಾಡುವವನಾದ್ದರಿಂದ
ಲೋಕಕ್ಕೆ ತಿಳಿಯಪಡಿಸಿಕೋ ಎಂದು ಹೇಳಿದರು. ಯಾಕಂದರೆ ಆತನ ಅಣ್ಣ 5

[1] ಯೋಹಾನ ೬, ೪೪.

6 ತಮ್ಮಂದಿರು ಸಹ ಆತನನ್ನು ನಂಬದೆ ಇದ್ದರು. ಯೇಸು ಅವರಿಗೆ—ನನ್ನ ಸಮಯವು
7 ಇನ್ನೂ ಬಂದಿಲ್ಲ; ನಿಮ್ಮ ಸಮಯವು ಯಾವಾಗಲೂ ಸಿದ್ಧವಾಗಿದೆ. ಲೋಕವು
ನಿಮ್ಮನ್ನು ಹಗೆ ಮಾಡಲಾರದು; ಆದರೆ ನಾನು ಅದರ ಕ್ರಿಯೆಗಳು ಕೆಟ್ಟವುಗಳೆಂದು
8 ಸಾಕ್ಷಿಹೇಳುವದರಿಂದ ನನ್ನನ್ನು ಹಗೆಮಾಡುತ್ತದೆ. ನೀವೇ ಜಾತ್ರೆಗೆ ಹೋಗಿರಿ; ನನ್ನ
ಸಮಯವು ಇನ್ನೂ ಒದಗದೆ ಇರುವದರಿಂದ ನಾನು ಈ ಜಾತ್ರೆಗೆ ಈಗ ಹೋಗುವದಿಲ್ಲ
9 ವೆಂದು ಹೇಳಿದನು. ಇದನ್ನು ಹೇಳಿ ಗಲಿಲಾಯದಲ್ಲಿಯೇ ನಿಂತನು.

10 ಆದರೆ ಆತನ ಅಣ್ಣತಮ್ಮಂದಿರು ಜಾತ್ರೆಗೆ ಹೋದ ಮೇಲೆ ಆತನು ಸಹ ಹೋದನು;
11 ಜನರಿಗೆ ಕಾಣುವಂತೆ ಹೋಗದೆ ಮರೆಯಾಗಿ ಹೋದನು. ಜಾತ್ರೆಯಲ್ಲಿ ಯೆಹೂ
12 ದ್ಯರು—ಅವನು ಎಲ್ಲಿದ್ದಾನೆಂದು ಆತನನ್ನು ಹುಡುಕುತ್ತಿದ್ದರು. ಮತ್ತು ಜನರ ಗುಂಪು
ಗಳಲ್ಲಿ ಆತನ ವಿಷಯವಾಗಿ ಬಹಳ ಗುಜುಗುಜು ಮಾತು ನಡೆಯುತ್ತಿತ್ತು. ಕೆಲವರು—
ಆತನು ಒಳ್ಳೆಯವನು ಅಂದರು; ಇನ್ನು ಕೆಲವರು—ಅಲ್ಲ, ಜನರನ್ನು ತಪ್ಪಾದ ಮಾರ್ಗಕ್ಕೆ
13 ಎಳೆಯುತ್ತಾನೆ ಅಂದರು. ಆದಾಗ್ಯೂ ಯೆಹೂದ್ಯರ ಭಯದಿಂದ ಯಾರೂ ಆತನ
ವಿಷಯದಲ್ಲಿ ಧಾರಾಳವಾಗಿ ಮಾತಾಡಲಿಲ್ಲ.

14 ಜಾತ್ರೆಯ ಮಧ್ಯಕಾಲದಲ್ಲಿ ಯೇಸು ದೇವಾಲಯಕ್ಕೆ ಹೋಗಿ ಬೋಧಿಸುತ್ತಿದ್ದನು.
15 ಯೆಹೂದ್ಯರು ಅದಕ್ಕೆ ಆಶ್ಚರ್ಯಪಟ್ಟು—ವಿದ್ಯಾಭ್ಯಾಸ ಮಾಡದಿರುವ ಈತನಿಗೆ ಶಾಸ್ತ್ರ
16 ಗಳು ತಿಳಿದಿರುವದು ಹ್ಯಾಗೆ ಎಂದು ಹೇಳುತ್ತಿದ್ದರು. ಅದಕ್ಕೆ ಯೇಸು—ನಾನು ಹೇಳುವ
17 ಬೋಧನೆಯು ನನ್ನದಲ್ಲ, ನನ್ನನ್ನು ಕಳುಹಿಸಿದಾತನದು. ಆತನ ಚಿತ್ತದಂತೆ ನಡೆಯು
ವದಕ್ಕೆ ಯಾರಿಗೆ ಮನಸ್ಸದೆಯೋ, ಅವರಿಗೆ ಈ ಬೋಧನೆಯು ದೇವರಿಂದ ಬಂದದ್ದೋ,
18 ನಾನೇ ಕಲ್ಪಿಸಿ ಹೇಳಿದ್ದೋ ಗೊತ್ತಾಗುವದು. ಕಲ್ಪಿಸಿ ಹೇಳುವವನು ತನಗೆ ಮಾನ
ಬರಬೇಕೆಂದು ಅಪೇಕ್ಷಿಸುತ್ತಾನೆ; ತನ್ನನ್ನು ಕಳುಹಿಸಿದವನಿಗೆ ಮಾನ ಬರಬೇಕೆಂದು
19 ಅಪೇಕ್ಷಿಸುವವನು ಸತ್ಯವಂತನು, ಅಧರ್ಮವು ಅವನಲ್ಲಿ ಇಲ್ಲ. ಮೋಶೆಯು ನಿಮಗೆ
ಧರ್ಮಶಾಸ್ತ್ರವನ್ನು ಕೊಟ್ಟಿದ್ದರೂ ನಿಮ್ಮಲ್ಲಿ ಒಬ್ಬನಾದರೂ ಧರ್ಮಶಾಸ್ತ್ರದಂತೆ ನಡೆಯು
ವದಿಲ್ಲವಲ್ಲಾ; ಯಾಕೆ ನನ್ನನ್ನು ಕೊಲ್ಲುವದಕ್ಕೆ ನೋಡುತ್ತೀರಿ? ಎಂದು ಹೇಳಿದನು.
20 ಅದಕ್ಕೆ ಆ ಜನರು—ನಿನಗೆ ದೆವ್ವ ಹಿಡಿದದೆ; ಯಾರು ನಿನ್ನನ್ನು ಕೊಲ್ಲುವದಕ್ಕೆ ನೋಡು
21 ತ್ತಾರೆ? ಅಂದರು. ಯೇಸು ಅವರಿಗೆ—ಒಂದೇ ಕ್ರಿಯೆಯನ್ನು ಮಾಡಿದೆನು; ಅದಕ್ಕೆ
22 ನೀವೆಲ್ಲರು ಬೆರಗಾಗಿದ್ದೀರಿ. ಮೋಶೆಯು ನಿಮಗೆ ಸುನ್ನತಿಯೆಂಬ ಸಂಸ್ಕಾರವನ್ನು ನೇಮಿ
ಸಿದನು. ಅದು ಮೋಶೆಯಿಂದ ಬಂದದ್ದೆಂದು ನಾನು ಹೇಳುವದಿಲ್ಲ, ಮೂಲಪುರುಷರ
ಕಾಲದಿಂದ ಬಂದದ್ದು. ಮತ್ತು ಆ ಸುನ್ನತಿಯನ್ನು ಸಬ್ಬತ್‌ದಿನದಲ್ಲಿಯೂ ಮಾಡುತ್ತೀರಿ.
23 ಮೋಶೆಯ ನೇಮವನ್ನು ಮೀರಬಾರದೆಂದು ಒಬ್ಬನು ಸಬ್ಬತ್‌ದಿನದಲ್ಲಿ ಸುನ್ನತೀ ಮಾಡಿಸಿ
ಕೊಳ್ಳುವದಾದರೆ, ನಾನು ಸಬ್ಬತ್‌ದಿನದಲ್ಲಿ ಒಬ್ಬ ಮನುಷ್ಯನನ್ನು ಸಂಪೂರ್ಣವಾಗಿ ಸ್ವಸ್ಥ
24 ಮಾಡಿದ್ದಕ್ಕೆ ನನ್ನ ಮೇಲೆ ಕೋಪಗೊಳ್ಳುತ್ತೀರೋ? ಕಣ್ಣಿಗೆ ತೋರಿದ್ದರ ಮೇಲೆ ತೀರ್ಪು
ಮಾಡಬೇಡಿರಿ; ನ್ಯಾಯವಾದ ತೀರ್ಪುಮಾಡಿರಿ ಎಂದು ಹೇಳಿದನು.

25 ಯೆರೂಸಲೇಮಿನವರಲ್ಲಿ ಕೆಲವರು—ಇವನನ್ನಲ್ಲವೇ ಅವರು ಕೊಲ್ಲಬೇಕೆಂದಿರುವದು?
26 ನೋಡಿರಿ, ಇವನು ಧಾರಾಳವಾಗಿ ಮಾತಾಡುತ್ತಾನೆ, ಅವರು ಅವನಿಗೆ ಏನೂ ಹೇಳುವ

ದಿಲ್ಲ. ಹಿರೀಸಭೆಯವರು ಇವನೇ ಬರಬೇಕಾದ ಕ್ರಿಸ್ತನೆಂದು ನಿಶ್ಚಯಮಾಡಿಕೊಂಡಿದ್ದಾ
ರೇನೋ? ಆದಾಗ್ಯೂ ಇವನು ಎಲ್ಲಿಯವನೆಂದು ಬಲ್ಲೆವು; ಕ್ರಿಸ್ತನು ಬರುವಾಗ ಅವನು 27
ಎಲ್ಲಿಯವನೋ ಒಬ್ಬರಿಗೂ ತಿಳಿಯುವದಿಲ್ಲವೆಂದು ಮಾತಾಡಿಕೊಳ್ಳುತ್ತಿದ್ದರು. ಯೇಸು 28
ಇದನ್ನು ತಿಳಿದು ದೇವಾಲಯದಲ್ಲಿ ಉಪದೇಶಮಾಡುವಾಗ—ನನ್ನನ್ನು ಬಲ್ಲಿರಿ, ನಾನು
ಎಲ್ಲಿಯವನೆಂದು ಬಲ್ಲಿರಿ ನಿಜವೇ, ಆದಾಗ್ಯೂ ನಾನು ನನ್ನಷ್ಟಕ್ಕೆ ಬಂದವನಲ್ಲ,
ನನ್ನನ್ನು ಕಳುಹಿಸಿದಾತನು ನಿಜವಾದವನು; ನೀವು ಆತನನ್ನು ಅರಿತವರಲ್ಲ. ನಾನು ಆತ 29
ನನ್ನು ಬಲ್ಲೆನು; ಆತನ ಕಡೆಯಿಂದ ಬಂದವನಾದ್ದರಿಂದಲೂ ನನ್ನನ್ನು ಆತನೇ ಕಳುಹಿಸಿ
ದ್ದರಿಂದಲೂ ಆತನನ್ನು ಬಲ್ಲೆನೆಂದು ಕೂಗಿ ಹೇಳಿದನು. ಇದಕ್ಕಾಗಿ ಆತನನ್ನು ಹಿಡಿಯುವ 30
ದಕ್ಕೆ ನೋಡುತ್ತಿದ್ದರು; ಆದರೆ ಆತನ ಕಾಲ ಇನ್ನೂ ಬಾರದೆ ಇದ್ದ ಕಾರಣ ಯಾರೂ ಆತನ
ಮೇಲೆ ಕೈಹಾಕಲಿಲ್ಲ. ಜನರಲ್ಲಿ ಅನೇಕರು ಆತನನ್ನು ನಂಬಿ—ಕ್ರಿಸ್ತನು ಬಂದಾಗ ಈತನು 31
ಮಾಡಿದ್ದಕ್ಕಿಂತ ಹೆಚ್ಚು ಸೂಚಕಕಾರ್ಯಗಳನ್ನು ಮಾಡ್ಯಾನೋ ಎಂದು ಹೇಳಿದರು.

ಜನರು ಆತನ ವಿಷಯವಾಗಿ ಗುಜುಗುಜು ಆಡಿದ ಈ ಮಾತುಗಳನ್ನು ಫರಿಸಾಯರು 32
ಕೇಳಲು, ಮಹಾಯಾಜಕರೂ ಫರಿಸಾಯರೂ ಆತನನ್ನು ಹಿಡಿಯುವದಕ್ಕೆ ಓಲೇಕಾರ
ರನ್ನು ಕಳುಹಿಸಿದರು. ಆಗ ಯೇಸು—ಇನ್ನು ಸ್ವಲ್ಪ ಕಾಲ ನಾನು ನಿಮ್ಮಲ್ಲಿ ಇದ್ದು, 33
ಆ ಮೇಲೆ ನನ್ನನ್ನು ಕಳುಹಿಸಿದವನ ಬಳಿಗೆ ಹೊರಟುಹೋಗುತ್ತೇನೆ. ನೀವು ನನ್ನನ್ನು 34
ಹುಡುಕುವಿರಿ, ಆದರೆ ನನ್ನನ್ನು ಕಂಡುಕೊಳ್ಳದೆ ಹೋಗುವಿರಿ, ನಾನು ಇರುವಲ್ಲಿಗೆ ನೀವು
ಬರಲಾರಿರಿ ಅಂದನು. ಅದಕ್ಕೆ ಯೆಹೂದ್ಯರು—ಇವನು ನಮಗೆ ಸಿಕ್ಕದ ಹಾಗೆ ಎಲ್ಲಿ 35
ಹೋಗಬೇಕೆಂದಿರುತ್ತಾನೆ? ಗ್ರೀಕರೊಳಗೆ ಚದರಿಕೊಂಡಿರುವ ನಮ್ಮವರ ಬಳಿಗೆ ಹೋಗಿ,
ಆ ಗ್ರೀಕರಿಗೆ ಉಪದೇಶ ಮಾಡಬೇಕೆಂದಿರುತ್ತಾನೋ? ನನ್ನನ್ನು ಹುಡುಕುವಿರಿ, ಆದರೆ 36
ನನ್ನನ್ನು ಕಂಡುಕೊಳ್ಳದೆ ಹೋಗುವಿರಿ, ನಾನು ಇರುವಲ್ಲಿಗೆ ನೀವು ಬರಲಾರಿರಿ ಎಂದು
ಅವನು ಹೇಳಿದ ಮಾತು ಏನಿದ್ದೀತು? ಎಂಬದಾಗಿ ತಮ್ಮತಮ್ಮೊಳಗೆ ಮಾತಾಡಿಕೊಂಡರು.

ಆ ಜಾತ್ರೆಯ ಮಹಾದಿವಸವಾದ ಕಡೇ ದಿನದಲ್ಲಿ ಯೇಸು ನಿಂತುಕೊಂಡು—ಯಾವ 37
ನಿಗಾದರೂ ನೀರಡಿಕೆಯಾಗಿದ್ದರೆ ಅವನು ನನ್ನ ಬಳಿಗೆ ಬಂದು ಕುಡಿಯಲಿ. ನನ್ನನ್ನು 38
ನಂಬಿದವನ ಹೊಟ್ಟೆಯೊಳಗಿಂದ, ಶಾಸ್ತ್ರದಲ್ಲಿ ಹೇಳಿರುವ ಪ್ರಕಾರ, ಜೀವಕರವಾದ ನೀರಿನ
ಹೊಳೆಗಳು ಹರಿಯುವವು ಎಂದು ಕೂಗಿ ಹೇಳಿದನು. ಇದನ್ನು ಯೇಸು ತನ್ನನ್ನು 39
ನಂಬಿದವರು ಹೊಂದಲಿರುವ ಪವಿತ್ರಾತ್ಮವರವನ್ನು ಕುರಿತು ಹೇಳಿದನು; ಆತನು ಇನ್ನೂ
ತನ್ನ ಮಹಿಮೆಯ ಪದವಿಯನ್ನು ಹೊಂದದೆ ಇದ್ದ ಕಾರಣ ಪವಿತ್ರಾತ್ಮವು ಇನ್ನೂ ಬಂದಿ
ದ್ದಿಲ್ಲ. ಜನರಲ್ಲಿ ಕೆಲವರು ಆ ಮಾತುಗಳನ್ನು ಕೇಳಿ—ನಿಜವಾಗಿ ಈತನು ಬರಬೇಕಾದ 40
ಪ್ರವಾದಿ ಅಂದರು; ಮತ್ತು ಕೆಲವರು—ಈತನು ಬರಬೇಕಾದ ಕ್ರಿಸ್ತನು ಅಂದರು. 41
ಇನ್ನೂ ಕೆಲವರು—ಕ್ರಿಸ್ತನು ಗಲಿಲಾಯದಿಂದ ಬರುವದು ಹ್ಯಾಗೆ? ದಾವೀದನ ಸಂತಾ 42
ನದಿಂದಲೂ ದಾವೀದನು ಇದ್ದ ಬೆತ್ಲೆಹೇಮೆಂಬ ಗ್ರಾಮದಿಂದಲೂ ಕ್ರಿಸ್ತನು ಬರುವನು
ಎಂಬದಾಗಿ[1] ಶಾಸ್ತ್ರದಲ್ಲಿ ಉಂಟಲ್ಲವೇ ಎಂದು ಹೇಳಿದರು. ಹೀಗೆ ಜನರಲ್ಲಿ ಆತನನ್ನು 43

1) ಯೆರೆಮೀಯ ೨೩, ೫; ಮೀಕ ೫, ೨.

44 ಕುರಿತು ಭೇದ ಉಂಟಾಯಿತು. ಅವರಲ್ಲಿ ಕೆಲವರು ಆತನನ್ನು ಹಿಡಿಯಬೇಕೆಂದಿದ್ದಾಗ್ಯೂ ಒಬ್ಬರೂ ಆತನ ಮೇಲೆ ಕೈಹಾಕಲಿಲ್ಲ.

45 ಬಳಿಕ ಆ ಓಲೇಕಾರರು ಮಹಾಯಾಜಕರ ಮತ್ತು ಫರಿಸಾಯರ ಬಳಿಗೆ ಬಂದಾಗ, ಇವರು—ನೀವು ಯಾಕೆ ಅವನನ್ನು ಹಿಡತರಲಿಲ್ಲ? ಎಂದು ಅವರನ್ನು ಕೇಳಿದ್ದಕ್ಕೆ,
46 ಆ ಓಲೇಕಾರರು—ಈ ಮನುಷ್ಯನು ಮಾತಾಡುವ ರೀತಿಯಲ್ಲಿ ಯಾರೂ ಎಂದೂ ಮಾತಾ
47 ಡಿದ್ದಿಲ್ಲ ಎಂದು ಉತ್ತರಕೊಟ್ಟರು. ಅದಕ್ಕೆ ಫರಿಸಾಯರು—ನೀವೂ ಮರುಳಾದಿರಾ?
48 ಹಿರೀಸಭೆಯವರಲ್ಲಿಯಾಗಲಿ ಫರಿಸಾಯರಲ್ಲಿಯಾಗಲಿ ಯಾರಾದರೂ ಅವನನ್ನು ನಂಬಿ
49,50 ದ್ದಾರೋ? ಧರ್ಮಶಾಸ್ತ್ರವನ್ನರಿಯದಂಥ ಈ ಹೆಡ್ಡರು ಶಾಪಗ್ರಸ್ತರೇ ಅಂದರು. ಮುಂಚೆ ಯೇಸುವಿನ ಬಳಿಗೆ ಬಂದಿದ್ದ ನಿಕೊದೇಮನು ಅವರಲ್ಲಿ ಒಬ್ಬನಾಗಿದ್ದನು; ಅವನು ಅವ
51 ರಿಗೆ—ನಮ್ಮ ಧರ್ಮಶಾಸ್ತ್ರವು ಮೊದಲು ಒಬ್ಬನನ್ನು ವಿಚಾರಿಸಿ ಅವನು ಮಾಡುವದೇನೆಂದು ತಿಳುಕೊಳ್ಳದೆ ಅವನ ವಿಷಯವಾಗಿ ತೀರ್ಪುಮಾಡುವದುಂಟೇ? ಎಂದು ಹೇಳಿ
52 ದ್ದಕ್ಕೆ, ಅವರು—ನೀನೂ ಗಲಿಲಾಯದವನೋ? ಗಲಿಲಾಯದಲ್ಲಿ ಪ್ರವಾದಿ ಹುಟ್ಟುವದೇ ಇಲ್ಲ, ವಿಚಾರಿಸಿ ನೋಡು ಅಂದರು.

ಫರಿಸಾಯರು ವ್ಯಭಿಚಾರಿಣಿಯಾದ ಒಬ್ಬ ಹೆಂಗಸನ್ನು ಯೇಸುವಿನ ಮುಂದೆ ತೀರ್ಪಿಗಾಗಿ ನಿಲ್ಲಿಸಿದ್ದು[1].

**8** 53 [ಎಲ್ಲರು ತಮ್ಮ ತಮ್ಮ ಮನೆಗೆ ಹೋದರು. (1) ಯೇಸು ಎಣ್ಣೇಮರಗಳ ಗುಡ್ಡಕ್ಕೆ
2 ಹೋದನು. ಬೆಳಿಗ್ಗೆ ಆತನು ತಿರಿಗಿ ದೇವಾಲಯಕ್ಕೆ ಬಂದಾಗ ಜನರೆಲ್ಲರು ಆತನ
3 ಬಳಿಗೆ ಬಂದರು; ಆತನು ಕೂತುಕೊಂಡು ಅವರಿಗೆ ಉಪದೇಶಮಾಡುತ್ತಿರುವಲ್ಲಿ, ಶಾಸ್ತ್ರಿಗಳೂ ಫರಿಸಾಯರೂ ವ್ಯಭಿಚಾರದಲ್ಲಿ ಸಿಕ್ಕಿದ ಒಬ್ಬ ಹೆಂಗಸನ್ನು ಆತನ ಬಳಿಗೆ ತಂದು,
4 ಆಕೆಯನ್ನು ನಡುವೆ ನಿಲ್ಲಿಸಿ—ಬೋಧಕನೇ, ಈ ಹೆಂಗಸು ವ್ಯಭಿಚಾರ ಮಾಡುತ್ತಿರುವಾ
5 ಗಲೇ ಕೈಗೆ ಸಿಕ್ಕಿದಳು. ಇಂಥವರನ್ನು ಕಲ್ಲೆಸೆದು ಕೊಲ್ಲಬೇಕೆಂದು ಮೋಶೆಯು ಧರ್ಮಶಾಸ್ತ್ರದಲ್ಲಿ ನಮಗೆ ಅಪ್ಪಣೆಕೊಟ್ಟಿದ್ದಾನೆ[2]; ಈಕೆಯ ವಿಷಯದಲ್ಲಿ ನೀನು ಏನು ಹೇಳುತ್ತೀ
6 ಎಂದು ಆತನನ್ನು ಕೇಳಿದರು. ಆತನ ಮೇಲೆ ತಪ್ಪು ಹೊರಿಸುವದಕ್ಕೆ ಏನಾದರೂ ಒಂದು ನಿಮಿತ್ತ ಬೇಕಾಗಿದ್ದದರಿಂದ, ಈತನು ಏನನ್ನುತ್ತಾನೋ ನೋಡೋಣ ಎಂದು ಹಾಗೆ ಕೇಳಿದರು. ಆದರೆ ಯೇಸು ಬೊಗ್ಗಿಕೊಂಡು ಬೆರಳಿನಿಂದ ನೆಲದ ಮೇಲೆ ಬರೆಯುತ್ತಾ
7 ಇದ್ದನು. ಅವರು ಆತನನ್ನು ಬಿಡದೆ ಕೇಳುತ್ತಿರುವಾಗ, ಆತನು ನೆಟ್ಟಗೆ ಕೂತುಕೊಂಡು ಅವರಿಗೆ—ನಿಮ್ಮಲ್ಲಿ ಪಾಪವಿಲ್ಲದವನು ಯಾರೋ ಅವನೇ ಮೊದಲು ಆಕೆಯ ಮೇಲೆ
8 ಕಲ್ಲನ್ನು ಹಾಕಲಿ ಎಂದು ಹೇಳಿ, ತಿರಿಗಿ ಬೊಗ್ಗಿಕೊಂಡು ನೆಲದ ಮೇಲೆ ಬರೆಯುತ್ತಾ
9 ಇದ್ದನು. ಆ ಮಾತನ್ನು ಕೇಳಿ, ತಾವೇ ಪಾಪಿಗಳೆಂದು ಮನಸ್ಸಿನಲ್ಲಿ ತಿಳುಕೊಂಡು, ಹಿರಿಯರು ಮೊದಲ್ಗೊಂಡು ಕಿರಿಯರ ವರೆಗೂ ಒಬ್ಬರ ಹಿಂದೊಬ್ಬರು ಹೊರಗೆ ಹೋದರು; ಯೇಸು ಒಬ್ಬನೇ ಉಳಿದನು, ಮತ್ತು ನಡುವೆ ನಿಂತಿದ್ದ ಹೆಂಗಸು ಅಲ್ಲೇ ಇದ್ದಳು.

[1] ೭, ೫೩ ಮೊದಲುಗೊಂಡು ೮, ೧೧ರ ತನಕ ಬರೆದಿರುವ ವಚನಗಳು ಕೆಲವು ಪ್ರಾಚೀನ ಪ್ರತಿಗಳಲ್ಲಿ ಸಿಕ್ಕುವದಿಲ್ಲ; ಕೆಲವು ಪ್ರತಿಗಳಲ್ಲಿ ಹೆಚ್ಚು ಕಡಿಮೆ ಉಂಟು.

[2] ದ್ವಿತೀಯ. ನ್ಯಾಯ ೨೨, ೨೨. ೨೪.

ಯೇಸು ನೆಟ್ಟಗೆ ಕೂತುಕೊಂಡು ಆ ಸ್ತ್ರೀಯನ್ನೇ ಹೊರತು ಯಾರನ್ನೂ ನೋಡದೆ, 10 ಆಕೆಗೆ—ಅಮ್ಮಾ, ನಿನ್ನ ಮೇಲೆ ತಪ್ಪುಹೊರಿಸುವವರು ಎಲ್ಲಿದ್ದಾರೆ? ನಿನಗೆ ಯಾರೂ ಶಿಕ್ಷೆ ಯನ್ನು ವಿಧಿಸಲಿಲ್ಲವೋ? ಅಂದನು. ಯಾರೂ ವಿಧಿಸಲಿಲ್ಲ, ಸ್ವಾಮೀ, ಅಂದಳು. 11 ಯೇಸು ಆಕೆಗೆ—ನಾನೂ ನಿನಗೆ ಶಿಕ್ಷೆ ವಿಧಿಸುವದಿಲ್ಲ; ಹೋಗು, ಇನ್ನು ಮೇಲೆ ಪಾಪ ಮಾಡಬೇಡ ಎಂದು ಹೇಳಿದನು.]

ಯೇಸು ತನ್ನ ದೈವತ್ವವನ್ನು ಸೂಚಿಸಿದಾಗ ಯೆಹೂದ್ಯರು ಆತನ ಸಂಗಡ ವಿವಾದಮಾಡಿ ಆತನನ್ನು ಕೊಲ್ಲುವದಕ್ಕೆ ಪ್ರಯತ್ನಿಸಿದ್ದು.

ಯೇಸು ತಿರಿಗಿ ಅವರ ಸಂಗಡ ಮಾತಾಡಲಾರಂಭಿಸಿ—ನಾನೇ ಲೋಕಕ್ಕೆ ಬೆಳಕು; 12 ನನ್ನನ್ನು ಅನುಸರಿಸುವವನು ಕತ್ತಲೆಯಲ್ಲಿ ನಡೆಯದೆ ಜೀವಕೊಡುವ ಬೆಳಕನ್ನು ಹೊಂದಿ ದವನಾಗಿರುವನು ಎಂದು ಹೇಳಿದನು. ಇದನ್ನು ಕೇಳಿ ಫರಿಸಾಯರು ಆತನಿಗೆ—ನಿನ್ನ 13 ವಿಷಯವಾಗಿ ನೀನೇ ಸಾಕ್ಷಿ ಹೇಳಿಕೊಳ್ಳುತ್ತೀ; ನಿನ್ನ ಸಾಕ್ಷಿ ನಿಜವಾಗದು ಎಂದು ಹೇಳಲು, ಯೇಸು ಅವರಿಗೆ—ನಾನು ಎಲ್ಲಿಂದ ಬಂದವನಾಗಿಯೂ ಎಲ್ಲಿಗೆ ಹೋಗುವವ 14 ನಾಗಿಯೂ ಇದ್ದೇನೆಂಬುವದು ನನಗೆ ಗೊತ್ತಿರುವದರಿಂದ ನನ್ನ ವಿಷಯವಾಗಿ ನಾನೇ ಸಾಕ್ಷಿ ಹೇಳಿಕೊಂಡರೂ ನನ್ನ ಸಾಕ್ಷಿ ನಿಜವಾಗಿರುವದು. ನೀವಾದರೋ ನಾನು ಎಲ್ಲಿಂದ ಬಂದ ವನು, ಎಲ್ಲಿಗೆ ಹೋಗುವವನು ಎಂಬದನ್ನು ತಿಳಿಯದವರು. ನೀವು ಹೊರಗಿನ ತೋರಿ 15 ಕೆಯ ಪ್ರಕಾರ ತೀರ್ಪುಮಾಡುವವರು; ನಾನು ಯಾವನಿಗೂ ತೀರ್ಪುಮಾಡುವದಿಲ್ಲ. ತೀರ್ಪುಮಾಡಿದಾಗ್ಯೂ ನನ್ನ ತೀರ್ಪು ಸರಿಯಾದದ್ದೇ; ಯಾಕಂದರೆ ನಾನು ಒಂಟಿಗನಲ್ಲ; 16 ನಾನೂ ನನ್ನನ್ನು ಕಳುಹಿಸಿಕೊಟ್ಟ ತಂದೆಯೂ ಇಬ್ಬರು ಇದ್ದೇವೆ. ಇಬ್ಬರ ಸಾಕ್ಷಿ 17 ನಿಜವಾಗುತ್ತದೆಂಬದಾಗಿ[1] ನಿಮ್ಮ ಧರ್ಮಶಾಸ್ತ್ರದಲ್ಲೇ ಬರೆದದೆ. ನನ್ನನ್ನು ಕುರಿತು 18 ನಾನು ಸಾಕ್ಷಿಹೇಳುವವನಾಗಿದ್ದೇನೆ, ಅದಲ್ಲದೆ ನನ್ನನ್ನು ಕಳುಹಿಸಿದ ತಂದೆಯೂ ನನ್ನ ವಿಷಯವಾಗಿ ಸಾಕ್ಷಿಹೇಳುತ್ತಾನೆ ಅಂದನು. ಅವರು—ನಿನ್ನ ತಂದೆ ಎಲ್ಲಿದ್ದಾನೆ? 19 ಎಂದು ಕೇಳಲು, ಯೇಸು—ನೀವು ನನ್ನನ್ನೂ ತಿಳಿದಿಲ್ಲ, ನನ್ನ ತಂದೆಯನ್ನೂ ತಿಳಿದಿಲ್ಲ; ನನ್ನನ್ನು ತಿಳಿದಿದ್ದರೆ, ನನ್ನ ತಂದೆಯನ್ನೂ ತಿಳಿದಿರುವಿರಿ ಅಂದನು. ಯೇಸು ದೇವಾಲಯ 20 ದೊಳಗೆ ಕಾಣಿಕೆಯ ಪೆಟ್ಟಿಗೆಗಳು ಇರುವ ಅಂಗಳದಲ್ಲಿ ಉಪದೇಶಮಾಡುತ್ತಿರುವಾಗ ಈ ಮಾತುಗಳನ್ನು ಹೇಳಿದನು. ಆತನ ಕಾಲ ಇನ್ನೂ ಬಾರದೆ ಇದ್ದ ಕಾರಣ ಯಾರೂ ಆತನನ್ನು ಹಿಡಿಯಲಿಲ್ಲ.

ಯೇಸು ತಿರಿಗಿ ಅವರಿಗೆ—ನಾನು ಹೋಗುತ್ತೇನೆ; ನೀವು ನನ್ನನ್ನು ಹುಡುಕುವಿರಿ; 21 ಮತ್ತು ನಿಮ್ಮ ಪಾಪದಲ್ಲೇ ಸಾಯುವಿರಿ. ನಾನು ಹೋಗುವಲ್ಲಿಗೆ ನೀವು ಬರಲಾರಿರಿ ಅಂದನು. ಆ ಮಾತಿಗೆ ಯೆಹೂದ್ಯರು—ನಾನು ಹೋಗುವಲ್ಲಿಗೆ ನೀವು ಬರಲಾರಿರೆಂದು 22 ಹೇಳುತ್ತಾನಲ್ಲಾ? ಇವನು ತನ್ನನ್ನು ತಾನೇ ಕೊಂದುಕೊಳ್ಳಬೇಕೆಂದಿದ್ದಾನೋ ಎಂದು ಮಾತಾಡಿಕೊಂಡರು. ಆತನು ಅವರಿಗೆ—ನೀವು ಕೆಳಗಿನವರು, ನಾನು ಮೇಲಿನವನು; 23

[1] ದ್ವಿತೀಯ ನ್ಯಾಯ ೧೯, ೧೫.

24 ನೀವು ಈ ಲೋಕದವರು, ನಾನು ಈ ಲೋಕದವನಲ್ಲ. ಆದದರಿಂದ ನೀವು ನಿಮ್ಮ ಪಾಪಗಳಲ್ಲಿಯೇ ಸಾಯುವಿರೆಂದು ನಿಮಗೆ ಹೇಳಿದೆನು; ನನ್ನನ್ನು ಆತನೆಂದು[1] ನೀವು
25 ನಂಬದೆ ಹೋದರೆ ನಿಮ್ಮ ಪಾಪಗಳಲ್ಲಿಯೇ ಸಾಯುವಿರೆಂದು ಹೇಳಿದನು. ಆಗ ಅವರು—
26 ನೀನು ಯಾರು? ಅಂದಾಗ, ಯೇಸು—ನಾನು ನಿಮಗೆ[2] ಹೇಳಿದಂಥಾದ್ದೇ. ನಿಮ್ಮ ವಿಷಯವಾಗಿ ಮಾತಾಡುವದಕ್ಕೂ ನಿಮ್ಮ ಮೇಲೆ ತೀರ್ಪುಮಾಡುವದಕ್ಕೂ ಅನೇಕ ಸಂಗತಿಗಳು ನನಗುಂಟು; ಆದರೆ ನನ್ನನ್ನು ಕಳುಹಿಸಿಕೊಟ್ಟವನು ಸತ್ಯವಂತನು; ಆತ
27 ನಿಂದ ನಾನು ಕೇಳಿದವುಗಳನ್ನೇ ಲೋಕಕ್ಕೆ ಹೇಳುತ್ತೇನೆ ಅಂದನು. ಆತನು ತಂದೆ
28 ಯನ್ನು ಸೂಚಿಸಿ ಇದನ್ನು ಹೇಳಿದನೆಂದು ಅವರಿಗೆ ಗೊತ್ತಾಗಲಿಲ್ಲ. ಹೀಗಿರಲಾಗಿ ಯೇಸು—ನೀವು ಮನುಷ್ಯಕುಮಾರನನ್ನು ಎತ್ತರದಲ್ಲಿಟ್ಟಾಗ, ಇವನೇ ಆತನೆಂದೂ ತನ್ನಷ್ಟಕ್ಕೆ ತಾನೇ ಏನೂ ಮಾಡದೆ ತಂದೆಯು ತನಗೆ ಬೋಧಿಸಿದ ಹಾಗೆ ಅದನ್ನೆಲ್ಲಾ
29 ಮಾತಾಡಿದನೆಂದೂ ನನ್ನ ವಿಷಯವಾಗಿ ನಿಮಗೆ ತಿಳಿಯುವದು. ನನ್ನನ್ನು ಕಳುಹಿಸಿ ಕೊಟ್ಟವನು ನನ್ನ ಸಂಗಡ ಇದ್ದಾನೆ, ನಾನು ಆತನಿಗೆ ಮೆಚ್ಚಿಕೆಯಾದದ್ದನ್ನು ಯಾವಾಗ್ಲೂ ಮಾಡುವದರಿಂದ ಆತನು ನನ್ನನ್ನು ಒಂಟಿಗನಾಗಿ ಬಿಡಲಿಲ್ಲ ಅಂದನು.
30, 31 ಆತನು ಈ ಮಾತುಗಳನ್ನಾಡುವಾಗ ಅನೇಕರು ಆತನನ್ನು ನಂಬಿದರು. ಆಗ ಯೇಸು ತನ್ನನ್ನು ನಂಬಿದ ಯೆಹೂದ್ಯರಿಗೆ—ನೀವು ನನ್ನ ವಾಕ್ಯದಲ್ಲಿ ನೆಲೆಗೊಂಡವರಾದರೆ ನಿಜ
32 ವಾಗಿ ನನ್ನ ಶಿಷ್ಯರಾಗಿದ್ದು, ಸತ್ಯವನ್ನು ತಿಳಿದುಕೊಳ್ಳುವಿರಿ; ಮತ್ತು ಸತ್ಯವು ನಿಮ್ಮನ್ನು
33 ಬಿಡುಗಡೆ ಮಾಡುವದು ಎಂದು ಹೇಳಿದನು. ಅದಕ್ಕವರು—ನಾವು ಅಬ್ರಹಾಮನ ಸಂತಾನದವರು; ನಾವು ಯಾರಿಗೂ ಎಂದೂ ದಾಸರಾಗಿಲ್ಲ; ನಿಮಗೆ ಬಿಡುಗಡೆಯಾಗುವ
34 ದೆಂದು ನೀನು ಹೇಳುವದು ಹ್ಯಾಗೆ? ಅಂದರು. ಅದಕ್ಕೆ ಯೇಸು—ನಿಮಗೆ ನಿಜನಿಜ
35 ವಾಗಿ ಹೇಳುತ್ತೇನೆ, ಪಾಪಮಾಡುವವರೆಲ್ಲರು ಪಾಪಕ್ಕೆ ದಾಸರಾಗಿದ್ದಾರೆ. ದಾಸನು
36 ಮನೆಯಲ್ಲಿ ಶಾಶ್ವತವಾಗಿ ಇರುವದಿಲ್ಲ; ಮಗನು ಶಾಶ್ವತವಾಗಿ ಇರುವನು; ಆದದರಿಂದ ಮಗನು ನಿಮ್ಮನ್ನು ಬಿಡುಗಡೆ ಮಾಡಿದರೆ ನಿಜವಾಗಿ ನಿಮಗೆ ಬಿಡುಗಡೆಯಾಗುವದು.
37 ನೀವು ಅಬ್ರಹಾಮನ ಸಂತಾನದವರು ನಿಜ; ಆದರೂ ನನ್ನ ವಾಕ್ಯವು ನಿಮ್ಮಲ್ಲಿ ಸಾಗದೆ
38 ಇರುವ ಕಾರಣ ನನ್ನನ್ನು ಕೊಲ್ಲುವದಕ್ಕೆ ನೋಡುತ್ತೀರಿ. ನಾನು ತಂದೆಯ ಬಳಿಯಲ್ಲಿ ನೋಡಿದ್ದನ್ನು ಹೇಳುತ್ತೇನೆ; ನೀವೂ ತಂದೆಯಿಂದ ಕೇಳಿದ್ದನ್ನು ಮಾಡಿರಿ[3] ಅಂದನು.
39 ಅದಕ್ಕವರು—ನಮ್ಮ ತಂದೆಯು ಅಬ್ರಹಾಮನೇ ಅಂದಾಗ, ಯೇಸು ಅವರಿಗೆ—ನೀವು ಅಬ್ರಹಾಮನ ಮಕ್ಕಳಾಗಿದ್ದರೆ ಅಬ್ರಹಾಮನು ಮಾಡಿದಂಥಾ ಕೃತ್ಯಗಳನ್ನು ಮಾಡು
40 ತ್ತಿದ್ದಿರಿ. ನೀವು ಹಾಗೆ ಮಾಡದೆ, ದೇವರಿಂದ ಕೇಳಿದ ಸತ್ಯವನ್ನು ನಿಮಗೆ ಹೇಳಿದವ ನಾದ ನನ್ನನ್ನು ಕೊಲ್ಲುವದಕ್ಕೆ ನೋಡುತ್ತೀರಿ; ಅಬ್ರಹಾಮನು ಹೀಗೆ ಮಾಡಲಿಲ್ಲ.
41 ನೀವು ನಿಮ್ಮ ತಂದೆಯ ಕೃತ್ಯಗಳನ್ನು ಮಾಡುತ್ತೀರಿ ಅಂದನು. ಅದಕ್ಕವರು—ನಾವು ಹಾದರಕ್ಕೆ ಹುಟ್ಟಿದವರಲ್ಲ; ನಮಗೆ ಒಬ್ಬನೇ ತಂದೆ, ಆತನು ದೇವರೇ ಅಂದರು.
42 ಯೇಸು ಅವರಿಗೆ—ದೇವರು ನಿಮ್ಮ ತಂದೆಯಾಗಿದ್ದರೆ, ನನ್ನನ್ನು ಪ್ರೀತಿಸುತ್ತಿದ್ದಿರಿ;

[1] ಆತನಂದರೆ, ಬರಬೇಕಾದ ಕ್ರಿಸ್ತನು. [2] ಅಥವಾ, ನಾನು ಮೊದಲಿಂದಲೂ.
[3] ಅಥವಾ, ನಿಮ್ಮ ತಂದೆಯಿಂದ ಕೇಳಿದ್ದನ್ನು ಮಾಡುವವರಾಗಿದ್ದೀರಿ.

ಯಾಕಂದರೆ ನಾನು ದೇವರಿಂದಲೇ ಹೊರಟು ಲೋಕಕ್ಕೆ ಬಂದವನಾಗಿದ್ದೇನೆ. ನನ್ನಷ್ಟಕ್ಕೆ ನಾನೇ ಬರಲಿಲ್ಲ; ಆತನೇ ನನ್ನನ್ನು ಕಳುಹಿಸಿದ್ದಾನೆ. 43 ನೀವು ನನ್ನ ಮಾತನ್ನು ಗ್ರಹಿಸದೆ ಇರುವದಕ್ಕೆ ಕಾರಣವೇನು? ನನ್ನ ಬೋಧನೆಗೆ ಕಿವಿಗೊಡಲಾರದೆ ಇರುವದೇ ಕಾರಣ. 44 ಸೈತಾನನು ನಿಮ್ಮ ತಂದೆ; ನೀವು ಆ ತಂದೆಯಿಂದ ಹುಟ್ಟಿದವರಾಗಿದ್ದು, ನಿಮ್ಮ ತಂದೆಯ ದುರಿಚ್ಛೆಗಳನ್ನೇ ನಡಸಬೇಕೆಂದಿದ್ದೀರಿ. ಅವನು ಆದಿಯಿಂದಲೂ ಕೊಲೆಗಾರನಾಗಿದ್ದು ಸತ್ಯದಲ್ಲಿ ನಿಲ್ಲಲಿಲ್ಲ; ಅವನಲ್ಲಿ ಸತ್ಯವು ಇಲ್ಲವೇ ಇಲ್ಲ. ಅವನು ಸುಳ್ಳಾಡುವಾಗ ಸ್ವಭಾವಾನುಸಾರವಾಗಿ ಮಾತಾಡುತ್ತಾನೆ; ಅವನು ಸುಳ್ಳುಗಾರನೂ ಸುಳ್ಳಿಗೆ ಮೂಲಪುರುಷನೂ ಆಗಿದ್ದಾನೆ. 45 ನಾನು ಸತ್ಯವನ್ನು ಹೇಳುವವನಾದ್ದರಿಂದ ನೀವು ನನ್ನನ್ನು ನಂಬುವದಿಲ್ಲ. 46 ನನ್ನಲ್ಲಿ ಪಾಪವನ್ನು ತೋರಿಸಿಕೊಡುವವರು ನಿಮ್ಮೊಳಗೆ ಯಾರಿದ್ದಾರೆ? ನಾನು ಸತ್ಯವನ್ನು ಹೇಳುವವನಾಗಿರುವಲ್ಲಿ ನೀವು ನನ್ನ ಮಾತನ್ನು ನಂಬದೆ ಇರುವದು ಯಾಕೆ? 47 ದೇವರಿಂದ ಹುಟ್ಟಿದವನು ದೇವರ ಮಾತುಗಳನ್ನು ಕೇಳುತ್ತಾನೆ. ನೀವು ದೇವರಿಂದ ಹುಟ್ಟದ ಕಾರಣದಿಂದ ಅವುಗಳನ್ನು ಕೇಳುವದಿಲ್ಲ ಎಂದು ಹೇಳಿದನು.

48 ಅದಕ್ಕೆ ಯೆಹೂದ್ಯರು—ನೀನು ಸಮಾರ್ಯನೂ ದೆವ್ವಹಿಡಿದವನೂ ಆಗಿದ್ದೀ ಎಂದು ನಾವು ಹೇಳುವದು ಸರಿಯಲ್ಲವೋ? ಎಂದು ಹೇಳಲು, 49 ಯೇಸು—ನಾನು ದೆವ್ವಹಿಡಿದವನಲ್ಲ, ನನ್ನ ತಂದೆಯನ್ನು ಸನ್ಮಾನಿಸುವವನಾಗಿದ್ದೇನೆ; ಆದರೂ ನೀವು ನನ್ನನ್ನು ಅವಮಾನಪಡಿಸುತ್ತೀರಿ. 50 ನನಗೆ ಮಾನ ಬರಬೇಕೆಂದು ನಾನು ಅಪೇಕ್ಷಿಸುವದಿಲ್ಲ; ನನಗೆ ಮಾನ ಬರಬೇಕೆಂದು ಅಪೇಕ್ಷಿಸುವವನು ಒಬ್ಬನಿದ್ದಾನೆ; ಆತನೇ ನ್ಯಾಯತೀರಿಸುವನು. 51 ನಿಮಗೆ ನಿಜನಿಜವಾಗಿ ಹೇಳುತ್ತೇನೆ, ಯಾವನಾದರೂ ನನ್ನ ವಾಕ್ಯವನ್ನು ಕೈಕೊಂಡು ನಡೆದರೆ, ಅವನು ಎಂದಿಗೂ ಸಾವನ್ನು ಕಾಣುವದಿಲ್ಲ ಅಂದನು. 52 ಅದಕ್ಕೆ ಯೆಹೂದ್ಯರು—ನೀನು ದೆವ್ವಹಿಡಿದವನೆಂದು ಈಗ ನಮಗೆ ತಿಳಿಯಿತು; ಅಬ್ರಹಾಮನು ಸತ್ತನು, ಪ್ರವಾದಿಗಳೂ ಸತ್ತರು; ಆದರೆ ನೀನು—ನನ್ನ ವಾಕ್ಯವನ್ನು ಕೈಕೊಂಡು ನಡೆಯುವವನು ಎಂದಿಗೂ ಸಾವನ್ನು ಅನುಭವಿಸುವದಿಲ್ಲವೆಂದು ಹೇಳುತ್ತೀ. 53 ನಮ್ಮ ಮೂಲಪುರುಷನಾದ ಅಬ್ರಹಾಮನಿಗಿಂತ ನೀನು ದೊಡ್ಡವನೋ? ಅವನೂ ಸತ್ತುಹೋದನು, ಪ್ರವಾದಿಗಳೂ ಸತ್ತುಹೋದರು; ನಿನ್ನನ್ನು ಯಾರೆಂತ ಮಾಡಿಕೊಳ್ಳುತ್ತೀ ಎಂದು ಹೇಳಲು, 54 ಯೇಸು—ನನ್ನನ್ನು ನಾನೇ ಮಹಿಮೆಪಡಿಸಿಕೊಂಡರೆ ನನ್ನ ಮಹಿಮೆ ಹುರುಳಿಲ್ಲದ್ದು; ನನ್ನನ್ನು ಮಹಿಮೆಪಡಿಸುವವನು ನನ್ನ ತಂದೆಯೇ. ನೀವು ಆತನನ್ನು ನಮ್ಮ ದೇವರು ಅನ್ನುತ್ತೀರಿ; 55 ಆದಾಗ್ಯೂ ನೀವು ಆತನನ್ನು ತಿಳಿಯದೆ ಇದ್ದೀರಿ. ನಾನಂತು ಆತನನ್ನು ಬಲ್ಲೆನು; ಆತನನ್ನು ಅರಿಯೆನೆಂದು ಹೇಳಿದರೆ ನಿಮ್ಮ ಹಾಗೆ ಸುಳ್ಳುಗಾರನಾಗುವೆನು; ಆದರೆ ಆತನನ್ನು ತಿಳಿದಿದ್ದೇನೆ, ಆತನ ವಾಕ್ಯವನ್ನು ಕೈಕೊಂಡು ನಡೆಯುತ್ತೇನೆ. 56 ನಿಮ್ಮ ಮೂಲಪುರುಷನಾದ ಅಬ್ರಹಾಮನು ನನ್ನ ದಿನವನ್ನು ತಾನು ನೋಡ್ಯೇನೆಂದು ಉಲ್ಲಾಸಪಟ್ಟನು; ಅದನ್ನು ನೋಡಿ ಸಂತೋಷಗೊಂಡನು ಅಂದನು. 57 ಅದಕ್ಕೆ ಯೆಹೂದ್ಯರು—ನಿನಗೆ ಇನ್ನೂ ಐವತ್ತು ವರುಷವಾಗಿಲ್ಲ; ಅಬ್ರಹಾಮನನ್ನು ನೋಡಿದ್ದೀಯಾ? ಅಂದಾಗ, 58 ಯೇಸು—ನಿಮಗೆ ನಿಜನಿಜವಾಗಿ ಹೇಳುತ್ತೇನೆ, ಅಬ್ರಹಾಮನು ಹುಟ್ಟುವದಕ್ಕಿಂತ ಮುಂಚಿನಿಂದಲೂ

59 ನಾನು ಇದ್ದೇನೆ ಅಂದನು. ಅವರು ಈ ಮಾತನ್ನು ಕೇಳಿ ಆತನನ್ನು ಕೊಲ್ಲುವದಕ್ಕಾಗಿ ಕಲ್ಲುತಕ್ಕೊಳ್ಳಲು, ಯೇಸು ಅಡಗಿಕೊಂಡು ದೇವಾಲಯದೊಳಗಿಂದ ಹೊರಟುಹೋದನು.

ಯೇಸು ಸಬ್ಬತ್‌ದಿನದಲ್ಲಿ ಹುಟ್ಟುಕುರುಡನಿಗೆ ಕಣ್ಣು ಕೊಟ್ಟದ್ದು; ಫರಿಸಾಯರು ಆ ಕುರುಡನನ್ನು ಬಹಿಷ್ಕರಿಸಿದ್ದು.

**9** 2 ಯೇಸು ಹಾದುಹೋಗುತ್ತಿರುವಾಗ ಒಬ್ಬ ಹುಟ್ಟುಕುರುಡನನ್ನು ಕಂಡನು. ಆತನ ಶಿಷ್ಯರು—ಗುರುವೇ, ಇವನು ಕುರುಡನಾಗಿ ಹುಟ್ಟಿರುವದಕ್ಕೆ ಯಾರು ಪಾಪಮಾಡಿದರು? ಇವನೋ? ಇವನ ತಂದೆತಾಯಿಗಳೋ? ಎಂದು ಆತನನ್ನು ಕೇಳಿದ್ದಕ್ಕೆ, 3 ಯೇಸು—ಇವನೂ ಪಾಪಮಾಡಲಿಲ್ಲ, ಇವನ ತಂದೆತಾಯಿಗಳೂ ಪಾಪಮಾಡಲಿಲ್ಲ; 4 ದೇವರ ಕ್ರಿಯೆಗಳು ಇವನಲ್ಲಿ ತೋರಿಬರುವದಕ್ಕೆ ಇದಾಯಿತು. ನನ್ನನ್ನು ಕಳುಹಿಸಿದಾತನ ಕಾರ್ಯಗಳನ್ನು ನಾವು ಹಗಲಿರುವಾಗಲೇ ನಡಸಬೇಕು. ರಾತ್ರಿ ಬರುತ್ತದೆ, 5 ಅದು ಬಂದ ಮೇಲೆ ಯಾರೂ ಕೆಲಸ ಮಾಡಲಾರರು. ನಾನು ಲೋಕದಲ್ಲಿರುವಾಗ 6 ಲೋಕಕ್ಕೆ ಬೆಳಕಾಗಿದ್ದೇನೆ ಅಂದನು. ಇದನ್ನು ಹೇಳಿ, ನೆಲದ ಮೇಲೆ ಉಗುಳಿ, ಆ 7 ಉಗುಳಿನಿಂದ ಕೆಸರು ಮಾಡಿ, ಆ ಕೆಸರನ್ನು ಅವನ ಕಣ್ಣುಗಳಿಗೆ ಹಚ್ಚಿ—ನೀನು ಸಿಲೋವ ಕೊಳಕ್ಕೆ ಹೋಗಿ ತೊಳಕೋ ಅಂದನು. (ಸಿಲೋವ ಎಂಬ ಮಾತಿಗೆ ಕಳುಹಿಸಲ್ಪಟ್ಟವನು ಎಂದರ್ಥ.) ಅವನು ಹೋಗಿ ತೊಳಕೊಂಡು ಕಣ್ಣು ಹೊಂದಿದವನಾಗಿ ಬಂದನು.

8 ಆಗ ನೆರೆಹೊರೆಯವರೂ ಅವನು ಭಿಕ್ಷಗಾರನಾಗಿದ್ದದ್ದನ್ನು ಮೊದಲು ನೋಡಿ 9 ದವರೂ—ಇವನು ಕೂತಿದ್ದ ಆ ಭಿಕ್ಷುಕನಲ್ಲವೇ ಅಂದರು. ಕೆಲವರು—ಹೌದು, ಅವನೇ ಅಂದರು; ಇನ್ನೂ ಕೆಲವರು—ಅವನಲ್ಲ, ಅವನ ಹಾಗಿದ್ದಾನೆ ಅಂದರು. ಅವನಾದರೆ— 10 ನಾನೇ ಅವನು ಅಂದನು. ಆಗ ಅವರು—ನಿನಗೆ ಕಣ್ಣು ಹ್ಯಾಗೆ ಬಂದವು? ಎಂದು 11 ಅವನನ್ನು ಕೇಳಿದ್ದಕ್ಕೆ, ಅವನು—ಯೇಸು ಎಂಬವನಿದ್ದಾನಲ್ಲಾ, ಅವನು ಕೆಸರು ಮಾಡಿ ನನ್ನ ಕಣ್ಣಿಗೆ ಹಚ್ಚಿ, ಸಿಲೋವ ಕೊಳಕ್ಕೆ ಹೋಗಿ ತೊಳಕೋ ಎಂದು ಹೇಳಿದನು; 12 ನಾನು ಹೋಗಿ ತೊಳಕೊಂಡೆನು; ಕಣ್ಣು ಬಂದವು ಅಂದನು. ಅವರು—ಅವನೆಲ್ಲಿದ್ದಾನೆ ಎಂದು ಅವನನ್ನು ಕೇಳಿದ್ದಕ್ಕೆ, ಅವನು—ನನಗೆ ಗೊತ್ತಿಲ್ಲ ಅಂದನು.

13 ಮುಂಚೆ ಕುರುಡನಾಗಿದ್ದ ಇವನನ್ನು ಫರಿಸಾಯರ ಬಳಿಗೆ ಕರಕೊಂಡು ಹೋದರು. 14 ಯೇಸು ಕೆಸರು ಮಾಡಿ ಅವನಿಗೆ ಕಣ್ಣು ಕೊಟ್ಟ ದಿವಸವು ಸಬ್ಬತ್‌ದಿವಸವಾಗಿತ್ತು. 15 ಆದಕಾರಣ ಆ ಫರಿಸಾಯರು ಸಹ ಅವನನ್ನು ವಿಚಾರಿಸಿ—ನಿನಗೆ ಹ್ಯಾಗೆ ಕಣ್ಣು ಬಂದವು ಎಂದು ಕೇಳಿದರು. ಅವನು ಅವರಿಗೆ—ಕೆಸರನ್ನು ನನ್ನ ಕಣ್ಣಿನ ಮೇಲೆ ಇಟ್ಟನು, ನಾನು ತೊಳಕೊಂಡೆನು, ಕಣ್ಣು ಕಾಣುತ್ತವೆ ಎಂದು ಉತ್ತರಕೊಟ್ಟನು. 16 ಆ ಫರಿಸಾಯರಲ್ಲಿ ಕೆಲವರು—ಈ ಮನುಷ್ಯನು ದೇವರಿಂದ ಬಂದವನಲ್ಲ; ಅವನು ಸಬ್ಬತ್‌ದಿವಸವನ್ನು ಲಕ್ಷ್ಯಮಾಡುವದಿಲ್ಲವಲ್ಲಾ ಅಂದರು. ಇನ್ನು ಕೆಲವರು—ಇಂಥಾ ಮಹತ್ತುಗಳನ್ನು ಮಾಡುವದು ಭಕ್ತಿಹೀನನ ಕೈಯಿಂದ ಹ್ಯಾಗಾದೀತು? ಅಂದರು. 17 ಹೀಗೆ ಅವರಲ್ಲಿ ಭೇದವಾಯಿತು. ಹೀಗಿರಲಾಗಿ ಅವರು ತಿರಿಗಿ ಆ ಕುರುಡನನ್ನು—

ಅವನು ನಿನಗೆ ಕಣ್ಣು ಕೊಟ್ಟದ್ದರಿಂದ ನೀನು ಅವನ ವಿಷಯವಾಗಿ ಏನು ಹೇಳುತ್ತೀ ಎಂದು ಕೇಳಿದಾಗ, ಅವನು—ಆತನು ಪ್ರವಾದಿ ಅನ್ನುತ್ತೇನೆ ಎಂದು ಹೇಳಿದನು.

ಆದರೆ ಕಣ್ಣು ಬಂದವನ ವಿಷಯವಾಗಿ ಆ ಯೆಹೂದ್ಯರು—ಇವನು ಕುರುಡನಾಗಿದ್ದು ಈಗ ಕಣ್ಣುಳ್ಳವನಾದನೆಂದು ನಂಬದೆ, ಅವನ ತಂದೆತಾಯಿಗಳನ್ನು ಕರಸಿ— 18 ಕುರುಡನಾಗಿ ಹುಟ್ಟಿದನೆಂದು ನೀವು ಹೇಳುವಂಥ ನಿಮ್ಮ ಮಗನು ಇವನೋ? ಈಗ 19 ಇವನಿಗೆ ಕಣ್ಣು ಹ್ಯಾಗೆ ಬಂದವು ಎಂದು ಅವರನ್ನು ಕೇಳಿದರು. ಅವನ ತಂದೆತಾಯಿ 20 ಗಳು—ಇವನು ನಮ್ಮ ಮಗನೆಂದೂ ಕುರುಡನಾಗಿ ಹುಟ್ಟಿದನೆಂದೂ ಬಲ್ಲೆವು; ಈಗ 21 ಹ್ಯಾಗೆ ಕಣ್ಣು ಬಂದವೋ ಅರಿಯೆವು; ಕಣ್ಣು ಕೊಟ್ಟವನು ಯಾರೋ ಅರಿಯೆವು; ಇವನನ್ನೇ ಕೇಳಿರಿ; ಪ್ರಾಯದವನಾಗಿದ್ದಾನಲ್ಲಾ; ಇವನೇ ತನ್ನ ವಿಷಯವಾಗಿ ಹೇಳು ವನು ಎಂದು ಉತ್ತರಕೊಟ್ಟರು. ಅವನ ತಂದೆತಾಯಿಗಳು ಯೆಹೂದ್ಯರಿಗೆ ಅಂಜಿದ 22 ಕಾರಣ ಈ ಪ್ರಕಾರ ಹೇಳಿದರು. ಯಾಕಂದರೆ—ಯಾರಾದರೂ ಯೇಸುವನ್ನು ಕ್ರಿಸ್ತ ನೆಂದು ಒಪ್ಪಿಕೊಂಡು ಹೇಳಿದರೆ ಅಂಥವನಿಗೆ ಬಹಿಷ್ಕಾರ ಹಾಕಬೇಕೆಂದು ಯೆಹೂದ್ಯರು ಅದಕ್ಕೆ ಮುಂಚೆ ಗೊತ್ತುಮಾಡಿಕೊಂಡಿದ್ದರು. ಇವನು ಪ್ರಾಯದವನು, ಇವನನ್ನೇ 23 ಕೇಳಿರಿ ಎಂದು ಅವನ ತಂದೆತಾಯಿಗಳು ಹೇಳಿದ್ದಕ್ಕೆ ಇದೇ ಕಾರಣ.

ಆದಕಾರಣ ಅವರು ಕುರುಡನಾಗಿದ್ದ ಆ ಮನುಷ್ಯನನ್ನು ಎರಡನೇ ಸಾರಿ ಕರೆದು— 24 ನೀನು ದೇವರಿಗೆ ಮಾನಬರುವಂತೆ ಹೇಳು; ಆ ಮನುಷ್ಯನು ಭಕ್ತಿಹೀನನೆಂದು ನಾವು ಬಲ್ಲೆವು ಎಂದು ಹೇಳಲು, ಅವನು—ಆತನು ಭಕ್ತಿಹೀನನೋ ಏನೋ ನಾನರಿಯೆ, 25 ಒಂದು ಮಾತ್ರ ಬಲ್ಲೆ, ಕುರುಡನಾಗಿದ್ದೆನು, ಈಗ ಕಣ್ಣು ಕಾಣುತ್ತವೆ ಅಂದನು. ಅವರು 26 ಅವನನ್ನು—ನಿನಗೆ ಏನು ಮಾಡಿದನು? ನಿನಗೆ ಹ್ಯಾಗೆ ಕಣ್ಣು ಕೊಟ್ಟನು ಎಂದು ಕೇಳಿ ದ್ದಕ್ಕೆ, ಅವನು—ನಿಮಗೆ ಆಗಲೇ ಹೇಳಿದೆನಲ್ಲಾ, ನೀವು ಕೇಳಲಿಲ್ಲ; ಯಾಕೆ ತಿರಿಗಿ ಕೇಳ 27 ಬೇಕೆಂದಿದ್ದೀರಿ? ಆತನ ಶಿಷ್ಯರಾಗುವದಕ್ಕೆ ನಿಮಗೂ ಮನಸ್ಸದೆಯೋ? ಅಂದನು. ಅದಕ್ಕೆ ಅವರು ಅವನನ್ನು ಬೈದು—ನೀನು ಆ ಮನುಷ್ಯನ ಶಿಷ್ಯ; ನಾವು ಮೋಶೆಯ 28 ಶಿಷ್ಯರು; ಮೋಶೆಯ ಸಂಗಡ ದೇವರು ಮಾತಾಡಿದನೆಂದು ನಾವು ಬಲ್ಲೆವು; ಆದರೆ 29 ಇವನು ಎಲ್ಲಿಯವನೋ ಅರಿಯೆವು ಅಂದರು. ಅದಕ್ಕೆ ಆ ಮನುಷ್ಯನು—ಆತನು 30 ನನಗೆ ಕಣ್ಣು ಕೊಟ್ಟರೂ ಆತನು ಎಲ್ಲಿಯವನೋ ನಿಮಗೆ ಗೊತ್ತಿಲ್ಲದೆ ಇರುವದು ಆಶ್ಚರ್ಯವಲ್ಲವೇ. ಭಕ್ತಿಹೀನರ ಪ್ರಾರ್ಥನೆಯನ್ನು ದೇವರು ಕೇಳುವದಿಲ್ಲ; ಯಾವನು 31 ಭಕ್ತನಾಗಿದ್ದು ಆತನ ಚಿತ್ತದಂತೆ ನಡೆಯುತ್ತಾನೋ ಅವನ ಪ್ರಾರ್ಥನೆಯನ್ನು ಕೇಳುತ್ತಾ ನೆಂದು ಬಲ್ಲೆವು. ಹುಟ್ಟುಕುರುಡನಿಗೆ ಯಾರಾದರೂ ಕಣ್ಣು ಕೊಟ್ಟ ಸಂಗತಿಯನ್ನು 32 ಲೋಕಾದಿಯಿಂದ ಒಬ್ಬರೂ ಕೇಳಿದ್ದಿಲ್ಲ; ಈತನು ದೇವರಿಂದ ಬಂದವನಲ್ಲದಿದ್ದರೆ ಏನೂ 33 ಮಾಡಲಾರದೆ ಇರುತ್ತಿದ್ದನು ಅಂದನು. ಈ ಮಾತಿಗೆ ಅವರು—ನೀನು ಕೇವಲ ಪಾಪ 34 ದಲ್ಲಿ ಹುಟ್ಟಿದವನು, ನಮಗೆ ಉಪದೇಶಮಾಡುತ್ತೀಯೋ ಎಂದು ಹೇಳಿ, ಅವನನ್ನು ಹೊರಗೆ ಹಾಕಿದರು.

ಯೇಸು ಆ ಬಹಿಷ್ಕಾರದವನನ್ನು ಹುಡುಕಿದ್ದು; ಒಳ್ಳೇ ಕುರುಬನ ವಿಷಯವಾಗಿಯೂ ಕಳ್ಳಕುರುಬರ ವಿಷಯವಾಗಿಯೂ ಉಪಮಾನ ಹೇಳಿದ್ದು.

35 ಅವನನ್ನು ಹೊರಗೆ ಹಾಕಿದರೆಂದು ಯೇಸು ಕೇಳಿ, ಅವನನ್ನು ಕಂಡುಕೊಂಡು—
36 ನೀನು ಮನುಷ್ಯಕುಮಾರನನ್ನು[1] ನಂಬುತ್ತೀಯೋ ಎಂದು ಕೇಳಿದನು. ಅದಕ್ಕವನು—
37 ಆತನು ಯಾರು, ಸ್ವಾಮಿ? ತಿಳಿಸಿದರೆ ಆತನನ್ನು ನಂಬುತ್ತೇನೆ ಅಂದಾಗ, ಯೇಸು—ನೀನು ಅವನನ್ನು ಕಂಡಿದ್ದೀ; ನಿನ್ನ ಸಂಗಡ ಮಾತಾಡುತ್ತಿರುವ ನಾನೇ ಅವನು ಅಂದನು.
38 ಅವನು—ನಂಬುತ್ತೇನೆ, ಸ್ವಾಮಿ, ಎಂದು ಹೇಳಿ, ಆತನಿಗೆ ಅಡ್ಡಬಿದ್ದನು.

39 ಆಗ ಯೇಸು—ನಾನು ನ್ಯಾಯತೀರ್ಪಿಗಾಗಿ ಈ ಲೋಕಕ್ಕೆ ಬಂದಿದ್ದೇನೆ; ಆ ತೀರ್ಪು ಏನಂದರೆ, ಕಣ್ಣಿಲ್ಲದವರಿಗೆ ಕಣ್ಣು ಬರುವವು, ಕಣ್ಣಿದ್ದವರು ಕುರುಡರಾಗುವರು ಅಂದನು.
40 ಇದನ್ನು ಆತನ ಸಂಗಡ ಇದ್ದ ಫರಿಸಾಯರು ಕೇಳಿ— ನಾವೂ ಕುರುಡರೇನು? ಎಂದು
41 ಕೇಳಿದಾಗ, ಯೇಸು ಅವರಿಗೆ—ನೀವು ಕುರುಡರಾಗಿದ್ದರೆ ನಿಮಗೆ ಪಾಪವು ಇರುತ್ತಿರಲಿಲ್ಲ; ನಮಗೆ ಕಣ್ಣು ಕಾಣುತ್ತವೆ ಅನ್ನುತ್ತೀರಾದ್ದರಿಂದ ನಿಮ್ಮ ಪಾಪವು ಉಳಿದದೆ.

**10** ನಿಮಗೆ ನಿಜನಿಜವಾಗಿ ಹೇಳುತ್ತೇನೆ, ಕುರೀಹಟ್ಟಿಯೊಳಗೆ ಬಾಗಲಿಂದ ಬಾರದೆ ಮತ್ತೆಲ್ಲಿಂದಾದರೂ ಹತ್ತಿಬರುವವನು ಕಳ್ಳನೂ ಸುಲುಕೊಳ್ಳುವವನೂ ಆಗಿದ್ದಾನೆ.
2,3 ಬಾಗಲಿಂದ ಒಳಗೆ ಬರುವವನು ಆ ಕುರಿಗಳ ಕುರುಬನು. ಬಾಗಲು ಕಾಯುವವನು ಅವನಿಗೆ ಬಾಗಲನ್ನು ತೆರೆಯುತ್ತಾನೆ, ಕುರಿಗಳು ಅವನ ಸ್ವರಕ್ಕೆ ಕಿವಿಕೊಡುತ್ತವೆ.
4 ಅವನು ತನ್ನ ಕುರಿಗಳನ್ನು ಹೆಸರು ಹೇಳಿ ಕರೆದು ಹೊರಗೆ ಬಿಡುತ್ತಾನೆ. ಸ್ವಂತ ಕುರಿಗಳನ್ನೆಲ್ಲಾ ಹೊರಗೆ ಬಿಟ್ಟ ಮೇಲೆ ತಾನು ಅವುಗಳ ಮುಂದೆ ಹೋಗುತ್ತಾನೆ; ಕುರಿಗಳು
5 ಅವನ ಸ್ವರವನ್ನು ತಿಳುಕೊಂಡು ಅವನ ಹಿಂದೆ ಹೋಗುತ್ತವೆ. ಅವು ಅನ್ಯರ ಸ್ವರವನ್ನು ತಿಳಿಯುವದಿಲ್ಲ; ಅನ್ಯನ ಹಿಂದೆ ಹೋಗದೆ ಅವನ ಬಳಿಯಿಂದ ಓಡಿಹೋಗುತ್ತವೆ.
6 ಈ ಉಪಮಾನವನ್ನು ಯೇಸು ಅವರಿಗೆ ಹೇಳಿದನು; ಆದರೂ ಆತನ ಮಾತಿನ ಅರ್ಥವನ್ನು ಅವರು ಗ್ರಹಿಸಲಿಲ್ಲ.

7 ಆದಕಾರಣ ಯೇಸು ಮತ್ತೂ ಅವರಿಗೆ—ನಿಮಗೆ ನಿಜನಿಜವಾಗಿ ಹೇಳುತ್ತೇನೆ,
8 ಕುರಿಗಳಿಗೆ ನಾನೇ ಬಾಗಲಾಗಿದ್ದೇನೆ. ನನಗಿಂತ ಮುಂಚೆ ಬಂದವರೆಲ್ಲರು ಕಳ್ಳರೂ
9 ಸುಲುಕೊಳ್ಳುವವರೂ ಆಗಿದ್ದಾರೆ; ಆದರೆ ಕುರಿಗಳು ಅವರಿಗೆ ಕಿವಿಗೊಡಲಿಲ್ಲ. ನಾನೇ ಆ ಬಾಗಲು; ನನ್ನ ಮುಖಾಂತರವಾಗಿ ಯಾವನಾದರೂ ಒಳಗೆ ಹೋದರೆ, ಸುರಕ್ಷಿತವಾಗಿದ್ದು ಒಳಗೆ ಹೋಗುವನು, ಹೊರಗೆ ಬರುವನು, ಮೇವನ್ನು ಕಂಡುಕೊಳ್ಳುವನು.
10 ಕಳ್ಳನು ಕದ್ದುಕೊಳ್ಳುವದಕ್ಕೂ ಕೊಯ್ಯುವದಕ್ಕೂ ಹಾಳುಮಾಡುವದಕ್ಕೂ ಬರುತ್ತಾನೆ ಹೊರತು ಮತ್ತ್ಯಾವದಕ್ಕೂ ಬರುವದಿಲ್ಲ; ನಾನಾದರೋ ಅವುಗಳಿಗೆ ಜೀವವು ಇರಬೇಕೆಂತಲೂ ಸಮೃದ್ಧಿಯು[2] ಇರಬೇಕೆಂತಲೂ ಬಂದೆನು.

11 ನಾನೇ ಒಳ್ಳೇ ಕುರುಬನು; ಒಳ್ಳೇ ಕುರುಬನು ತನ್ನ ಕುರಿಗಳಿಗೋಸ್ಕರ ತನ್ನ ಪ್ರಾಣ
12 ವನ್ನು ಕೊಡುತ್ತಾನೆ. ಕೂಲಿಯಾಳು ಕುರುಬನೂ ಕುರಿಗಳ ಒಡೆಯನೂ ಆಗಿರದೆ,

[1] ಕೆಲವು ಪ್ರತಿಗಳಲ್ಲಿ—ದೇವಕುಮಾರನೆಂದು ಬರೆದದೆ.

[2] ಅಥವಾ, ಅದು ಸಮೃದ್ಧಿಯಾಗಿ.

ತೋಳ ಬರುವದನ್ನು ಕಾಣುತ್ತಲೇ ಕುರಿಗಳನ್ನು ಬಿಟ್ಟು ಓಡಿಹೋಗುತ್ತಾನೆ; ತೋಳವು
ಅವುಗಳನ್ನು ಹಿಡುಕೊಂಡು ಹಿಂಡನ್ನು ಚದರಿಸುತ್ತದೆ. ಅವನು ಕೂಲಿಯಾಳು; ಕುರಿ 13
ಗಳ ಚಿಂತೆ ಅವನಿಗಿಲ್ಲ. ನಾನೇ ಒಳ್ಳೇ ಕುರುಬನು; ತಂದೆಯು ನನ್ನನ್ನು ನಾನು ತಂದೆ 14-15
ಯನ್ನು ತಿಳಿದಿರುವಂತೆಯೇ ನಾನು ನನ್ನ ಕುರಿಗಳನ್ನು ತಿಳಿದಿದ್ದೇನೆ; ನನ್ನ ಕುರಿಗಳು
ನನ್ನನ್ನು ತಿಳಿದವೆ; ಮತ್ತು ಕುರಿಗಳಿಗೋಸ್ಕರ ನನ್ನ ಪ್ರಾಣವನ್ನು ಕೊಡುತ್ತೇನೆ.
ಇದಲ್ಲದೆ ಈ ಹಟ್ಟಿಗೆ ಸೇರದಿರುವ ಇನ್ನು ಬೇರೆ ಕುರಿಗಳು ನನಗೆ ಅವೆ, ಅವುಗಳನ್ನೂ 16
ನಾನು ತರಬೇಕು; ಅವು ನನ್ನ ಸ್ವರಕ್ಕೆ ಕಿವಿಗೊಡುವವು; ಆಗ ಒಂದೇ ಹಿಂಡು ಆಗು
ವದು, ಒಬ್ಬನೇ ಕುರುಬನಿರುವನು. ನಾನು ತಿರಿಗಿ ಪಡಕೊಳ್ಳುತ್ತೇನೆಂದು ನನ್ನ 17
ಪ್ರಾಣವನ್ನು ಕೊಡುತ್ತೇನೆ; ಅದರ ನಿಮಿತ್ತವಾಗಿ ತಂದೆಯು ನನ್ನನ್ನು ಪ್ರೀತಿಸುತ್ತಾನೆ.
ನನ್ನ ಪ್ರಾಣವನ್ನು ಯಾರೂ ನನ್ನಿಂದ ತೆಗೆಯರು, ನನ್ನಷ್ಟಕ್ಕೆ ನಾನೇ ಅದನ್ನು ಕೊಡು 18
ತ್ತೇನೆ; ಅದನ್ನು ಕೊಡುವದಕ್ಕೆ ನನಗೆ ಅಧಿಕಾರ ಉಂಟು, ಅದನ್ನು ತಿರಿಗಿ ಪಡಕೊಳ್ಳು
ವದಕ್ಕೆ ನನಗೆ ಅಧಿಕಾರ ಉಂಟು; ಈ ಅಪ್ಪಣೆಯನ್ನು ನನ್ನ ತಂದೆಯಿಂದ ಹೊಂದಿದ್ದೇನೆ
ಅಂದನು.

ಈ ಮಾತುಗಳ ದೆಸೆಯಿಂದ ಯೆಹೂದ್ಯರಲ್ಲಿ ತಿರಿಗಿ ಭೇದವಾಯಿತು. ಅವರಲ್ಲಿ 19, 20
ಅನೇಕರು—ಅವನಿಗೆ ದೆವ್ವ ಹಿಡಿದದೆ, ಹುಚ್ಚು ಹಿಡಿದದೆ, ಯಾಕೆ ಅವನ ಮಾತು ಕೇಳು
ತ್ತೀರಿ? ಅಂದರು. ಮತ್ತು ಕೆಲವರು—ಇವು ದೆವ್ವಹಿಡಿದವನ ಮಾತುಗಳಲ್ಲ; ದೆವ್ವವು 21
ಕುರುಡರಿಗೆ ಕಣ್ಣು ಕೊಡಬಲ್ಲದೇ? ಅಂದರು.

ಯೇಸು ಪ್ರತಿಷ್ಠೆಯ ಹಬ್ಬದಲ್ಲಿ ತಾನು ದೇವರ ಮಗನೆಂದು ಸೂಚಿಸಲು, ಯೆಹೂದ್ಯರು ಆತನನ್ನು
ಹಿಡಿಯುವದಕ್ಕೆ ತಿರಿಗಿ ಪ್ರಯತ್ನ ಮಾಡಿದ್ದು.

ಆ ಕಾಲದಲ್ಲಿ ದೇವಾಲಯಪ್ರತಿಷ್ಠೆಯ ಹಬ್ಬವು ಯೆರೂಸಲೇಮಿನಲ್ಲಿ ನಡೆಯಿತು; 22
ಆಗ ಚಳಿಕಾಲವಾಗಿತ್ತು. ಯೇಸು ದೇವಾಲಯದೊಳಗೆ ಸೊಲೊಮೋನನ ಮಂಟಪ 23
ದಲ್ಲಿ ತಿರುಗಾಡುತ್ತಾ ಇರುವಾಗ, ಯೆಹೂದ್ಯರು ಆತನನ್ನು ಸುತ್ತಿಕೊಂಡು—ಇನ್ನು 24
ಎಷ್ಟು ಕಾಲ ನಮ್ಮಲ್ಲಿ ಅನುಮಾನ ಹುಟ್ಟಿಸುತ್ತೀ? ನೀನು ಕ್ರಿಸ್ತನಾಗಿದ್ದರೆ ಅದನ್ನು
ನಮಗೆ ಸ್ಪಷ್ಟವಾಗಿ ಹೇಳು ಅಂದರು. ಅದಕ್ಕೆ ಯೇಸು—ನಿಮಗೆ ಹೇಳಿದೆನು, ಆದರೆ 25
ನೀವು ನಂಬದೆ ಇದ್ದೀರಿ; ನನ್ನ ತಂದೆಯ ಹೆಸರಿನಲ್ಲಿ ನಾನು ಮಾಡುವ ಕ್ರಿಯೆಗಳೇ ನನಗೆ
ಸಾಕ್ಷಿಯಾಗಿವೆ. ಆದರೂ ನೀವು ನನ್ನ ಕುರಿಗಳಿಗೆ ಸೇರಿದವರಲ್ಲವಾದ್ದರಿಂದ ನಂಬದೆ 26
ಇದ್ದೀರಿ. ನನ್ನ ಕುರಿಗಳು ನನ್ನ ಸ್ವರಕ್ಕೆ ಕಿವಿಗೊಡುತ್ತವೆ; ನಾನು ಅವುಗಳನ್ನು ಬಲ್ಲೆನು; 27
ಅವು ನನ್ನ ಹಿಂದೆ ಬರುತ್ತವೆ. ನಾನು ಅವುಗಳಿಗೆ ನಿತ್ಯಜೀವವನ್ನು ಕೊಡುತ್ತೇನೆ; ಅವು 28
ಎಂದಿಗೂ ನಾಶವಾಗುವದೇ ಇಲ್ಲ; ಅವುಗಳನ್ನು ಯಾರೂ ನನ್ನ ಕೈಯೊಳಗಿಂದ ಕಸ
ಕೊಳ್ಳರು. ನನ್ನ ತಂದೆಯು ನನಗೆ ಕೊಟ್ಟದ್ದು ಎಲ್ಲಾದ್ದಕ್ಕಿಂತ ದೊಡ್ಡದು; ಅದನ್ನು[1] 29

---

[1] ಕೆಲವು ಪ್ರತಿಗಳಲ್ಲಿ--ಅವುಗಳನ್ನು ನನಗೆ ಕೊಟ್ಟ ನನ್ನ ತಂದೆಯು ಎಲ್ಲರಿಗಿಂತ ದೊಡ್ಡವನಾಗಿದ್ದಾನೆ; ಅವು
ಗಳನ್ನು.

30 ತಂದೆಯ ಕೈಯೊಳಗಿಂದ ಯಾರೂ ಕಸಕೊಳ್ಳಲಾರರು. ನಾನೂ ತಂದೆಯೂ ಒಂದಾಗಿ
ದ್ದೇವೆ ಅಂದನು.

31 ಯೆಹೂದ್ಯರು ಆತನನ್ನು ಹೊಡೆದು ಕೊಲ್ಲಬೇಕೆಂದು ತಿರಿಗಿ ಕಲ್ಲುಗಳನ್ನು ತೆಗೆದು
32 ಕೊಂಡು ಬರಲು, ಯೇಸು ಅವರನ್ನು—ತಂದೆಯ ಕಡೆಯಿಂದ ಅನೇಕ ಒಳ್ಳೇ ಕ್ರಿಯೆಗ
ಳನ್ನು ನಿಮಗೆ ತೋರಿಸಿದೆನು; ಅವುಗಳಲ್ಲಿ ಯಾವ ಕ್ರಿಯೆಯ ದೆಸೆಯಿಂದ ನನ್ನ ಮೇಲೆ
33 ಕಲ್ಲೆಸೆಯುತ್ತೀರಿ ಎಂದು ಕೇಳಿದ್ದಕ್ಕೆ, ಯೆಹೂದ್ಯರು—ನಾವು ನಿನ್ನ ಮೇಲೆ ಕಲ್ಲೆಸೆಯು
ವದು ಒಳ್ಳೇ ಕಾರ್ಯದ ದೆಸೆಯಿಂದಲ್ಲ, ದೇವದೂಷಣೆಯ ದೆಸೆಯಿಂದಲೂ ನೀನು
ಮನುಷ್ಯನಾಗಿದ್ದು ನಿನ್ನನ್ನು ನೀನೇ ದೇವರನ್ನು ಮಾಡಿಕೊಳ್ಳುವದರ ದೆಸೆಯಿಂದಲೂ
34 ನಿನ್ನ ಮೇಲೆ ಕಲ್ಲೆಸೆಯುತ್ತೇವೆ ಅಂದರು. ಅದಕ್ಕೆ ಯೇಸು—ನೀವು ದೇವರುಗಳೇ
ಎಂದು ನಾನು ಹೇಳಿದೆನು ಎಂಬದಾಗಿ[1] ನಿಮ್ಮ ಧರ್ಮಶಾಸ್ತ್ರದಲ್ಲಿ ಬರೆದದೆಯಲ್ಲಾ;
35 ಶಾಸ್ತ್ರವು ಸುಳ್ಳಾಗಲಾರದಷ್ಟೆ; ಹಾಗಾದರೆ ದೇವರವಾಕ್ಯವನ್ನು ಹೊಂದಿದವರನ್ನು
36 ದೇವರುಗಳೆಂದು ಆತನು ಹೇಳಿರುವಲ್ಲಿ, ತಂದೆಯು ಪ್ರತಿಷ್ಠೆಮಾಡಿ ಲೋಕಕ್ಕೆ ಕಳುಹಿಸಿ
ಕೊಟ್ಟವನಾದ ನಾನು ದೇವರ ಮಗನಾಗಿದ್ದೇನೆಂದು ಹೇಳಿದ್ದಕ್ಕೆ, ನೀನು ದೇವದೂಷಣೆ
37 ಮಾಡುತ್ತೀ ಅನ್ನುತ್ತೀರೋ? ನಾನು ನನ್ನ ತಂದೆಯ ಕ್ರಿಯೆಗಳನ್ನು ಮಾಡದಿದ್ದರೆ ನನ್ನ
38 ಮಾತನ್ನು ನಂಬಬೇಡಿರಿ; ಮಾಡಿದರೆ, ನನ್ನ ಮಾತನ್ನು ನಂಬದೆ ಇದ್ದಾಗ್ಯೂ, ಆ ಕ್ರಿಯೆ
ಗಳ ಸಾಕ್ಷಿಯನ್ನಾದರೂ ನಂಬಿರಿ; ಆಗ ನನ್ನಲ್ಲಿ ತಂದೆಯು ಇದ್ದಾನೆಂತಲೂ ತಂದೆಯಲ್ಲಿ
ನಾನು ಇದ್ದೇನೆಂತಲೂ ನೀವು ತಿಳುಕೊಂಡು ಮನನಮಾಡಿಕೊಳ್ಳುವಿರಿ ಅಂದನು.
39 ಅವರು ತಿರಿಗಿ ಆತನನ್ನು ಹಿಡಿಯುವದಕ್ಕೆ ನೋಡಿದರು; ಆದರೆ ಅವರ ಕೈಗೆ ತಪ್ಪಿಸಿ
ಕೊಂಡು ಹೋದನು.

40 ಆ ಮೇಲೆ ಆತನು ಯೊರ್ದನ್‌ಹೊಳೆಯ ಆಚೆ, ಯೋಹಾನನು ಮೊದಲು ಸ್ನಾನ
41 ಮಾಡಿಸುತ್ತಿದ್ದ ಸ್ಥಳಕ್ಕೆ ತಿರಿಗಿ ಹೋಗಿ, ಅಲ್ಲಿ ಇದ್ದನು. ಅನೇಕರು ಆತನ ಬಳಿಗೆ
ಬಂದು—ಯೋಹಾನನು ಒಂದು ಸೂಚಕಕಾರ್ಯವನ್ನೂ ಮಾಡಲಿಲ್ಲ; ಆದರೆ ಈತನ
ವಿಷಯವಾಗಿ ಯೋಹಾನನು ಹೇಳಿದ್ದೆಲ್ಲಾ ನಿಜವಾಗಿತ್ತು ಎಂದು ಮಾತಾಡುತ್ತಿದ್ದರು.
42 ಅಲ್ಲಿ ಅನೇಕರು ಆತನನ್ನು ನಂಬಿದರು.

ಯೇಸು ಸತ್ತುಹೋಗಿದ್ದ ಲಾಜರನೆಂಬವನನ್ನು ಬದುಕಿಸಿದ್ದು.

**11** ಬೇಥಾನ್ಯದ ಲಾಜರನೆಂಬವನೊಬ್ಬನು ಅಸ್ವಸ್ಥನಾಗಿದ್ದನು. ಅದು ಮಾರ್ಥಳು ಮರಿ
2 ಯಳು ಎಂಬ ಅಕ್ಕತಂಗಿಯರು ಇದ್ದ ಊರು. ಈ ಮರಿಯಳು ಯೇಸುಸ್ವಾಮಿಗೆ
ತೈಲವನ್ನು ಎರೆದು ಆತನ ಪಾದಗಳನ್ನು ತನ್ನ ತಲೇಕೂದಲಿಂದ ಒರಸಿದವಳು. ಈಕೆಯ
3 ತಮ್ಮನಾದ ಲಾಜರನೇ ಅಸ್ವಸ್ಥನಾಗಿದ್ದನು. ಹೀಗಿರಲಾಗಿ ಅವನ ಅಕ್ಕಂದಿರು—
ಸ್ವಾಮೀ, ನಿನ್ನ ಪ್ರಿಯ ಮಿತ್ರನು ಅಸ್ವಸ್ಥನಾಗಿದ್ದಾನೆ ಎಂಬದಾಗಿ ಯೇಸುವಿನ
4 ಬಳಿಗೆ ಹೇಳಿಕಳುಹಿಸಿದರು. ಯೇಸು ಅದನ್ನು ಕೇಳಿ—ಈ ರೋಗವು ಮರಣಕ್ಕಾಗಿ

[1] ಕೀರ್ತನೆ ೮೨, ೬.

ಬಂದದ್ದಲ್ಲ; ಇದರಿಂದ ದೇವಕುಮಾರನಿಗೆ ಮಹಿಮೆ ಉಂಟಾಗುವಂತೆ, ದೇವರ ಮಹಿಮೆ
ಗೋಸ್ಕರ ಬಂದದ್ದು ಅಂದನು. ಮಾರ್ಥಳಲ್ಲಿಯೂ ಆಕೆಯ ತಂಗಿಯಲ್ಲಿಯೂ ಲಾಜ 5
ರನಲ್ಲಿಯೂ ಯೇಸುವಿಗೆ ಪ್ರೀತಿ ಇತ್ತು. ಆದರೂ ಲಾಜರನು ಅಸ್ವಸ್ಥನಾಗಿದ್ದಾನೆಂದು 6
ಆತನು ಕೇಳಿದ ಮೇಲೆ ಎರಡು ದಿನ ತಾನಿದ್ದ ಸ್ಥಳದಲ್ಲೇ ನಿಂತನು. ಬಳಿಕ ಶಿಷ್ಯರಿಗೆ— 7
ತಿರಿಗಿ ಯೂದಾಯಕ್ಕೆ ಹೋಗೋಣ ಎಂದು ಹೇಳಿದನು. ಶಿಷ್ಯರು—ಗುರುವೇ, 8
ಯೆಹೂದ್ಯರು ಆಗಲೇ ನಿನ್ನನ್ನು ಕಲ್ಲೆಸೆದು ಕೊಲ್ಲಬೇಕೆಂದಿದ್ದರು; ತಿರಿಗಿ ಅಲ್ಲಿಗೇ
ಹೋಗುತ್ತೀಯಾ? ಅನ್ನಲು, ಯೇಸು—ಹಗಲಿಗೆ ಹನ್ನೆರಡು ತಾಸು ಉಂಟಲ್ಲವೇ? 9
ಒಬ್ಬನು ಹಗಲಲ್ಲಿ ತಿರುಗಾಡಿದರೆ ಈ ಲೋಕದ ಬೆಳಕು ಕಾಣಿಸುವದರಿಂದ ಅವನು
ಎಡವುವದಿಲ್ಲ; ರಾತ್ರಿಯಲ್ಲಿ ತಿರುಗಾಡಿದರೆ ಅವನಿಗೆ ಬೆಳಕಿಲ್ಲದ್ದರಿಂದ ಎಡವುವನು 10
ಎಂದು ಉತ್ತರಕೊಟ್ಟನು. ಈ ಮಾತುಗಳನ್ನು ಹೇಳಿದ ಮೇಲೆ, ಅವರಿಗೆ—ನಮ್ಮ 11
ಮಿತ್ರನಾದ ಲಾಜರನು ನಿದ್ರೆಮಾಡುತ್ತಾನೆ; ನಾನು ಅವನನ್ನು ನಿದ್ರೆಯಿಂದ ಎಬ್ಬಿಸುವದ
ಕ್ಕಾಗಿ ಹೋಗುತ್ತೇನೆ ಎಂದು ಹೇಳಿದನು. ಅದಕ್ಕೆ ಶಿಷ್ಯರು—ಸ್ವಾಮೀ, ಅವನು ನಿದ್ರೆ 12
ಮಾಡುತ್ತಿದ್ದರೆ ಸ್ವಸ್ಥನಾಗುವನು ಅಂದರು. ಯೇಸು ಅವನ ಮರಣವನ್ನು ಸೂಚಿಸಿ 13
ಅದನ್ನು ಹೇಳಿದ್ದನು; ಆದರೆ ಅವರು ನಿದ್ರೆಯ ವಿಶ್ರಾಂತಿಯನ್ನು ಕುರಿತು ಹೇಳುತ್ತಾ
ನೆಂದು ನೆನಸಿದರು. ಆಗ ಯೇಸು ಸ್ಪಷ್ಟವಾಗಿ ಅವರಿಗೆ—ಲಾಜರನು ಸತ್ತುಹೋದನು; 14
ಮತ್ತು ನಾನು ಅಲ್ಲಿ ಇಲ್ಲದೆ ಇದ್ದದ್ದಕ್ಕೆ ನಿಮ್ಮ ನಿಮಿತ್ತವಾಗಿ ಸಂತೋಷ ಪಡುತ್ತೇನೆ, 15
ಯಾಕಂದರೆ ಅದರಿಂದ ನೀವು ನಂಬುವದಕ್ಕೆ ಮಾರ್ಗವಾಯಿತು; ಆದರೆ ಅವನ ಬಳಿಗೆ
ಹೋಗೋಣ ಎಂದು ಹೇಳಿದನು. ಆಗ ದಿದುಮನೆಂಬ ತೋಮನು ಜೊತೇಶಿಷ್ಯರಿಗೆ— 16
ನಾವು ಸಹ ಹೋಗಿ ಆತನೊಡನೆ ಸಾಯೋಣ ಎಂದು ಹೇಳಿದನು.

ಯೇಸು ಬಂದಾಗ, ಲಾಜರನನ್ನು ಸಮಾಧಿಯಲ್ಲಿಟ್ಟು ನಾಲ್ಕು ದಿವಸವಾಯಿತೆಂದು 17
ಆತನಿಗೆ ತಿಳಿದುಬಂತು. ಬೇಥಾನ್ಯವು ಯೆರೂಸಲೇಮಿಗೆ ಸಮೀಪವಾಗಿತ್ತು; ಇದಕ್ಕೂ 18
ಅದಕ್ಕೂ ಹೆಚ್ಚುಕಡಿಮೆ ಒಂದು ಹರದಾರಿ[1] ಅಂತರ. ಆದದರಿಂದ ಯೆಹೂದ್ಯರಲ್ಲಿ 19
ಅನೇಕರು ಮಾರ್ಥಳ ಮತ್ತು ಮರಿಯಳ ಬಳಿಗೆ ಅವರನ್ನು ತಮ್ಮನ ವಿಷಯದಲ್ಲಿ
ಸಂತೈಸಬೇಕೆಂದು ಬಂದಿದ್ದರು. ಹೀಗಿರುವಲ್ಲಿ ಮಾರ್ಥಳು ಯೇಸು ಬರುತ್ತಾನೆಂದು 20
ಕೇಳಿ ಆತನನ್ನು ಎದುರುಗೊಳ್ಳುವದಕ್ಕೆ ಹೋದಳು; ಆದರೆ ಮರಿಯಳು ಮನೆಯಲ್ಲೇ
ಕೂತುಕೊಂಡಿದ್ದಳು. ಮತ್ತು ಮಾರ್ಥಳು ಯೇಸುವಿಗೆ—ಸ್ವಾಮೀ, ನೀನು ಇಲ್ಲಿ 21
ಇರುತ್ತಿದ್ದರೆ, ನನ್ನ ತಮ್ಮನು ಸಾಯುತ್ತಿರಲಿಲ್ಲ; ಈಗಲಾದರೂ ದೇವರನ್ನು ಏನು ಬೇಡಿ 22
ಕೊಳ್ಳುತ್ತೀಯೋ ಅದನ್ನು ದೇವರು ನಿನಗೆ ಅನುಗ್ರಹಿಸುವನೆಂದು ಬಲ್ಲೆನು ಎಂದು ಹೇಳಿ
ದಳು. ಯೇಸು ಆಕೆಗೆ—ನಿನ್ನ ತಮ್ಮನು ಎದ್ದುಬರುವನೆಂದು ಹೇಳಿದನು. ಮಾರ್ಥ 23,24
ಳು—ಸತ್ತವರಿಗೆ ಕಡೇ ದಿನದಲ್ಲಿ ಪುನರುತ್ಥಾನವಾಗುವಾಗ ಅವನೂ ಎದ್ದುಬರುವನೆಂದು
ನಾನು ಬಲ್ಲೆನು ಅಂದಳು. ಯೇಸು ಆಕೆಗೆ—ನಾನೇ ಪುನರುತ್ಥಾನವೂ ಜೀವವೂ ಆಗಿ 25
ದ್ದೇನೆ; ನನ್ನನ್ನು ನಂಬುವವನು ಸತ್ತರೂ ಬದುಕುವನು; ಮತ್ತು ಬದುಕುತ್ತಾ ನನ್ನನ್ನು 26

---

[1] ಮೂಲ: ಹದಿನೈದು ಸ್ತಾದ್ಯಗಳು.

ನಂಬುವ ಪ್ರತಿಯೊಬ್ಬನು ಎಂದಿಗೂ ಸಾಯುವದಿಲ್ಲ; ಇದನ್ನು ನಂಬುತ್ತೀಯಾ? ಎಂದು
27 ಹೇಳಿದನು. ಆಕೆ—ಹೌದು, ಸ್ವಾಮಿಾ, ಲೋಕಕ್ಕೆ ಬರಬೇಕಾದ ದೇವಕುಮಾರನಾದ
ಕ್ರಿಸ್ತನು ನೀನೇ ಎಂದು ನಂಬಿದ್ದೇನೆ ಅಂದಳು.
28 ಇದನ್ನು ಹೇಳಿ ಆಕೆ ಹೋಗಿ ತನ್ನ ತಂಗಿಯಾದ ಮರಿಯಳನ್ನು ಗುಪ್ತವಾಗಿ ಕರೆದು—
29 ಗುರುವು ಬಂದಿದ್ದಾನೆ, ನಿನ್ನನ್ನು ಕರೆಯುತ್ತಾನೆ ಅಂದಳು. ಮರಿಯಳು ಇದನ್ನು
30 ಕೇಳುತ್ತಲೇ ತಟ್ಟನೆ ಎದ್ದು ಆತನ ಬಳಿಗೆ ಹೋದಳು. ಯೇಸು ಇನ್ನೂ ಊರೊಳಗೆ
31 ಬಾರದೆ ಮಾರ್ಥಳು ಆತನಿಗೆದುರಾಗಿ ಬಂದ ಸ್ಥಳದಲ್ಲೇ ಇದ್ದನು. ಮರಿಯಳ ಕೂಡ
ಮನೆಯಲ್ಲಿ ಇದ್ದುಕೊಂಡು ಆಕೆಯನ್ನು ಸಂತೈಸುತ್ತಿದ್ದ ಯೆಹೂದ್ಯರು—ಆಕೆ ತಟ್ಟನೆ
ಎದ್ದು ಹೊರಗೆ ಹೋಗುವದನ್ನು ಕಂಡು, ಈಕೆ ಅಳುವದಕ್ಕಾಗಿ ಸಮಾಧಿಗೆ ಹೋಗು
32 ತ್ತಾಳೆಂದು ನೆನಸಿ, ಆಕೆಯ ಹಿಂದೆ ಹೋದರು. ಮರಿಯಳು ಯೇಸು ಇದ್ದಲ್ಲಿಗೆ ಬಂದು,
ಆತನನ್ನು ಕಂಡು ಆತನ ಪಾದಕ್ಕೆ ಬಿದ್ದು—ಸ್ವಾಮಿಾ, ನೀನು ಇಲ್ಲಿ ಇರುತ್ತಿದ್ದರೆ ನನ್ನ
33 ತಮ್ಮನು ಸಾಯುತ್ತಿರಲಿಲ್ಲ ಅಂದಳು. ಆಕೆ ಗೋಳಾಡುವದನ್ನೂ ಆಕೆಯ ಸಂಗಡ
ಬಂದ ಯೆಹೂದ್ಯರು ಗೋಳಾಡುವದನ್ನೂ ಯೇಸು ಕಂಡಾಗ ಆತ್ಮದಲ್ಲಿ ನೊಂದುಕೊಂಡು
34 ತತ್ತರಿಸಿ—ಅವನನ್ನು ಎಲ್ಲಿ ಇಟ್ಟಿದ್ದೀರಿ ಎಂದು ಕೇಳಿದನು. ಅವರು—ಸ್ವಾಮಿಾ, ಬಂದು
35,36 ನೋಡು ಅಂದರು. ಯೇಸು ಕಣ್ಣೀರು ಬಿಟ್ಟನು. ಯೆಹೂದ್ಯರು ನೋಡಿ—
ಆಹಾ, ಈತನು ಅವನ ಮೇಲೆ ಎಷ್ಟೋ ಮಮತೆ ಇಟ್ಟಿದ್ದನು ಅಂದುಕೊಂಡರು.
37 ಅವರಲ್ಲಿ ಕೆಲವರು—ಈತನು ಆ ಕುರುಡನಿಗೆ ಕಣ್ಣು ಕೊಟ್ಟನಲ್ಲಾ; ಈ ಮನುಷ್ಯನನ್ನು
38 ಸಾಯದ ಹಾಗೆ ಮಾಡಲಾರದೆ ಇದ್ದನೇ? ಅಂದರು. ಯೇಸು ತನ್ನಲ್ಲಿ ತಿರಿಗಿ ನೊಂದು
ಕೊಳ್ಳುತ್ತಾ ಸಮಾಧಿಯ ಬಳಿಗೆ ಬಂದನು. ಅದು ಗವಿಯಾಗಿತ್ತು, ಅದರ ಬಾಯಿಗೆ
39 ಒಂದು ಕಲ್ಲು ಆನಿಸಿತ್ತು. ಯೇಸು—ಆ ಕಲ್ಲನ್ನು ತೆಗೆದುಹಾಕಿರಿ ಅನ್ನಲು, ತೀರಿ
ಹೋದವನ ಅಕ್ಕನಾದ ಮಾರ್ಥಳು—ಸ್ವಾಮಿಾ, ಅವನು ಸತ್ತು ನಾಲ್ಕು ದಿವಸವಾಯಿತು;
40 ಈಗ ನಾತ ಹುಟ್ಟಿದೆ ಅಂದಳು. ಯೇಸು ಆಕೆಗೆ—ನೀನು ನಂಬಿದರೆ ದೇವರ
ಮಹಿಮೆಯನ್ನು ಕಾಣುವಿ ಎಂದು ನಾನು ನಿನಗೆ ಹೇಳಲಿಲ್ಲವೇ? ಎಂದು ಉತ್ತರ
41 ಕೊಟ್ಟನು. ಆಗ ಕಲ್ಲನ್ನು ತೆಗೆದುಹಾಕಿದರು. ಮತ್ತು ಯೇಸು ಕಣ್ಣೆತ್ತಿ ಮೇಲಕ್ಕೆ
ನೋಡಿ—ತಂದೆಯೇ, ನೀನು ನನ್ನ ಪ್ರಾರ್ಥನೆಯನ್ನು ಕೇಳಿದ್ದಕ್ಕೆ ನಿನ್ನನ್ನು ಕೊಂಡಾ
42 ಡುತ್ತೇನೆ; ನೀನು ಯಾವಾಗಲೂ ನನ್ನ ಪ್ರಾರ್ಥನೆಯನ್ನು ಕೇಳುವವನಾಗಿದ್ದೀ ಎಂದು
ನನಗೆ ಗೊತ್ತೇ ಇದೆ; ಆದಾಗ್ಯೂ ನೀನೇ ನನ್ನನ್ನು ಕಳುಹಿಸಿಕೊಟ್ಟಿ ಎಂದು ಸುತ್ತಲು
ನಿಂತಿರುವ ಜನರು ನಂಬುವಂತೆ ಅವರಿಗೋಸ್ಕರ ಈ ಮಾತುಗಳನ್ನಾಡಿದೆನೆಂದು ಹೇಳಿ
43 ದನು. ಅದನ್ನು ಹೇಳಿದ ಮೇಲೆ ದೊಡ್ಡ ಶಬ್ದದಿಂದ—ಲಾಜರನೇ, ಹೊರಗೆ ಬಾ ಎಂದು
44 ಕೂಗಿದನು. ಸತ್ತಿದ್ದವನು ಹೊರಗೆ ಬಂದನು; ಅವನ ಕೈಕಾಲುಗಳು ಬಟ್ಟೆಗಳಿಂದ
ಕಟ್ಟಿದ್ದವು, ಅವನ ಮುಖವು ಕೈಪಾವಡದಿಂದ ಸುತ್ತಿತ್ತು. ಯೇಸು ಅವರಿಗೆ—ಅವನನ್ನು
ಬಿಚ್ಚಿರಿ, ಹೋಗಲಿ ಎಂದು ಹೇಳಿದನು.

ಯೆಹೂದ್ಯರ ಹಿರೀಸಭೆಯವರು ಯೇಸುವನ್ನು ಕೊಲ್ಲಬೇಕೆಂದು ಆಲೋಚನೆ ಮಾಡಿಕೊಂಡದ್ದು.

ಮರಿಯಳ ಬಳಿಗೆ ಬಂದ ಯೆಹೂದ್ಯರು ಆತನು ಮಾಡಿದ ಕಾರ್ಯವನ್ನು ನೋಡಿ 45
ದಾಗ, ಅವರಲ್ಲಿ ಅನೇಕರು ಆತನನ್ನು ನಂಬಿದರು; ಆದರೆ ಕೆಲವರು ಫರಿಸಾಯರ 46
ಬಳಿಗೆ ಹೋಗಿ ಯೇಸು ಮಾಡಿದ್ದನ್ನು ಅವರಿಗೆ ತಿಳಿಸಿದರು.
ಆಗ ಮಹಾಯಾಜಕರೂ ಫರಿಸಾಯರೂ ಹಿರೀಸಭೆಯನ್ನು ಕೂಡಿಸಿ—ನಾವು ಮಾಡು 47
ವದು ಇದೇನು? ಈ ಮನುಷ್ಯನು ಬಹು ಸೂಚಕಕಾರ್ಯಗಳನ್ನು ಮಾಡುತ್ತಾನಲ್ಲಾ;
ನಾವು ಅವನನ್ನು ಹೀಗೆಯೇ ಬಿಟ್ಟರೆ ಎಲ್ಲರೂ ಅವನನ್ನು ನಂಬ್ಯಾರು; ಮತ್ತು ರೋಮ್ 48
ರಾಜ್ಯದವರು ಬಂದು ನಮ್ಮ ಸ್ಥಾನವನ್ನೂ ಜನವನ್ನೂ ಸೆಳಕೊಂಡಾರು ಅಂದರು.
ಆದರೆ ಅವರಲ್ಲಿ ಕಾಯಫನೆಂಬವನೊಬ್ಬನು ಆ ವರುಷಕ್ಕೆ ಮಹಾಯಾಜಕನಾಗಿದ್ದು, 49
ಅವರಿಗೆ—ನಿಮಗೇನೂ ತಿಳಿಯುವದಿಲ್ಲ; ಜನವೆಲ್ಲಾ ನಾಶವಾಗುವದಕ್ಕಿಂತ ಒಬ್ಬ ಮನು 50
ಷ್ಯನು ಜನಕ್ಕೋಸ್ಕರ ಸಾಯುವದು ನಿಮಗೆ ಹಿತವೆಂದು ನೀವು ಆಲೋಚಿಸುವದೂ
ಇಲ್ಲ ಎಂಬದಾಗಿ ಹೇಳಿದನು. ಇದನ್ನು ಅವನು ತನ್ನಷ್ಟಕ್ಕೆ ತಾನೇ ಹೇಳಲಿಲ್ಲ; ಆದರೆ 51
ತಾನು ಆ ವರುಷ ಮಹಾಯಾಜಕನಾಗಿದ್ದದರಿಂದ ದೇವಪ್ರೇರಣೆಯಿಂದ ಮಾತಾಡಿ,
ಯೇಸು ಆ ಜನಕ್ಕೋಸ್ಕರ ಸಾಯುವದಕ್ಕಿದ್ದನೆಂದು ಹೇಳಿದನು. ಯೇಸು ಆ ಜನ 52
ಕ್ಕೋಸ್ಕರ ಮಾತ್ರವಲ್ಲದೆ ಚದರಿರುವ ದೇವರ ಮಕ್ಕಳನ್ನು ಒಟ್ಟುಗೂಡಿಸುವದಕ್ಕೆ
ಸಹ ಸಾಯುವದಕ್ಕಿದ್ದನು. ಆ ದಿನದಿಂದ ಆತನನ್ನು ಕೊಲ್ಲುವದಕ್ಕೆ ಆಲೋಚಿಸುತ್ತಿದ್ದರು. 53
ಹೀಗಿರಲಾಗಿ ಯೇಸು ಇನ್ನೂ ಯೆಹೂದ್ಯರೊಳಗೆ ಬಹಿರಂಗವಾಗಿ ತಿರುಗಾಡದೆ, 54
ಅಲ್ಲಿಂದ ಅಡವಿಯ ಹತ್ತರದ ಪ್ರದೇಶಕ್ಕೆ ಹೋಗಿ, ಎಫ್ರಾಯಿಮ್ ಎಂಬ ಊರಲ್ಲಿ
ಶಿಷ್ಯರ ಸಂಗಡ ಇದ್ದನು.

ಯೇಸು ಪಸ್ಕಹಬ್ಬಕ್ಕೆ ಬಂದಾಗ, ಮರಿಯಳು ಆತನ ಪಾದಗಳ ಮೇಲೆ ಪರಿಮಳತೈಲವನ್ನು ಸುರಿಸಿದ್ದು.

ಆಗ ಯೆಹೂದ್ಯರ ಪಸ್ಕಹಬ್ಬ ಹತ್ತರವಾಗಿರಲಾಗಿ, ಬಹು ಜನರು ತಮ್ಮನ್ನು 55
ಶುದ್ಧಿಮಾಡಿಕೊಳ್ಳುವದಕ್ಕಾಗಿ ಹಬ್ಬಕ್ಕಿಂತ ಮುಂಚೆ ಹಳ್ಳಿಗಳಿಂದ ಯೆರೂಸಲೇಮಿಗೆ
ಬಂದರು. ಅವರು ಯೇಸುವನ್ನು ಹುಡುಕುತ್ತಾ ದೇವಾಲಯದಲ್ಲಿ ನಿಂತುಕೊಂಡು— 56
ಅವನು ಹಬ್ಬಕ್ಕೆ ಬಾರದೆ ಇದ್ದಾನೋ? ನಿಮಗೆ ಹ್ಯಾಗೆ ಕಾಣುತ್ತದೆ ಎಂದು ತಮ್ಮಲ್ಲಿ
ಮಾತಾಡಿಕೊಳ್ಳುತ್ತಾ ಇದ್ದರು. ಆದರೆ ಮಹಾಯಾಜಕರೂ ಫರಿಸಾಯರೂ ಆತನನ್ನು 57
ಹಿಡಿಯಬೇಕೆಂಬದಾಗಿ ಯೋಚಿಸಿ—ಅವನಿರುವ ಸ್ಥಳವು ಯಾರಿಗಾದರೂ ತಿಳಿದರೆ
ಅದನ್ನು ತಮಗೆ ತಿಳಿಸಬೇಕೆಂದು ಅಪ್ಪಣೆ ಕೊಟ್ಟಿದ್ದರು.
ಪಸ್ಕಹಬ್ಬವು ಇನ್ನು ಆರು ದಿವಸ ಮುಂದೆ ಇರಲಾಗಿ, ಯೇಸು ಬೇಥಾನ್ಯ ಊರಿಗೆ **12**
ಬಂದನು. ಸತ್ತಿದ್ದು ಯೇಸುವಿನಿಂದ ಎಬ್ಬಿಸಲ್ಪಟ್ಟ ಲಾಜರನು ಅಲ್ಲಿದ್ದನು. ಯೇಸುವಿಗೆ 2
ಅಲ್ಲಿ ಔತಣ ಮಾಡಿಸಲು ಮಾರ್ಥಳು ನೆರವಾಗಿದ್ದಳು; ಲಾಜರನು ಆತನ ಸಂಗಡ
ಊಟಕ್ಕೆ ಕೂತವರಲ್ಲಿ ಒಬ್ಬನು. ಆಗ ಮರಿಯಳು ಬಹು ಬೆಲೆಯುಳ್ಳ ಅಚ್ಚ ಜಟಾ 3

ಮಾಂಸಿ ತೈಲವನ್ನು ಒಂದು ಸೇರಷ್ಟು ತಂದು, ಯೇಸುವಿನ ಪಾದಕ್ಕೆ ಎರೆದು, ತನ್ನ ತಲೇಕೂದಲಿಂದ ಆತನ ಪಾದಗಳನ್ನು ಒರಸಿದಳು. ಆ ತೈಲದ ಪರಿಮಳವು ಮನೆಯ
4 ಲ್ಲೆಲ್ಲಾ ತುಂಬಿಕೊಂಡಿತು. ಆದರೆ ಆತನ ಶಿಷ್ಯರಲ್ಲಿ ಒಬ್ಬನು, ಅಂದರೆ ಆತನನ್ನು ಹಿಡು
5 ಕೊಡುವದಕ್ಕಿದ್ದ ಇಸ್ಕರಿಯೋತ ಯೂದನೆಂಬವನು—ಯಾಕೆ ಈ ತೈಲವನ್ನು ಮುನ್ನೂರು
6 ಹಣಕ್ಕೆ ಮಾರಿ ಬಡವರಿಗೆ ಕೊಡಲಿಲ್ಲ ಅಂದನು. ಅವನು ಬಡವರಿಗೋಸ್ಕರ ಚಿಂತಿಸಿ ಇದನ್ನು ಹೇಳಲಿಲ್ಲ; ಅವನು ಕಳ್ಳನಾಗಿದ್ದು ತನ್ನ ವಶದಲ್ಲಿದ್ದ ಅವರ ಹಣದ
7 ಚೀಲದಲ್ಲಿ ಹಾಕಿದ್ದನ್ನು ತಕ್ಕೊಳ್ಳುವವನಾಗಿದ್ದದರಿಂದಲೇ ಹೇಳಿದನು. ಆಗ ಯೇಸು— ಆಕೆಯನ್ನು ತಡೆಯ ಬೇಡ; ನನ್ನನ್ನು ಹೂಣಿಡುವ ದಿವಸಕ್ಕಾಗಿ ಅದನ್ನು ಇಟ್ಟುಕೊಳ್ಳಲಿ.
8 ಬಡವರು ಯಾವಾಗಲೂ ನಿಮ್ಮ ಬಳಿಯಲ್ಲಿ ಇರುತ್ತಾರೆ, ಆದರೆ ನಾನು ಯಾವಾಗಲೂ ನಿಮ್ಮ ಬಳಿಯಲ್ಲಿ ಇರುವದಿಲ್ಲ ಎಂದು ಹೇಳಿದನು.

9 ಯೆಹೂದ್ಯರ ಜನಸಮೂಹವು ಆತನು ಅಲ್ಲಿ ಇದ್ದಾನೆಂದು ತಿಳಿದು, ಯೇಸುವನ್ನು ನೋಡುವದಕ್ಕಾಗಿ ಮಾತ್ರವಲ್ಲದೆ, ಸತ್ತಿದ್ದು ಆತನಿಂದ ಎಬ್ಬಿಸಲ್ಪಟ್ಟ ಲಾಜರನನ್ನು ಸಹ
10 ನೋಡಬೇಕೆಂಬದಾಗಿ ಬಂದರು. ಆದರೆ ಮಹಾಯಾಜಕರು ಲಾಜರನನ್ನೂ ಕೊಲ್ಲ
11 ಬೇಕೆಂದು ಆಲೋಚಿಸಿದರು. ಯಾಕಂದರೆ ಅವನ ದೆಸೆಯಿಂದ ಯೆಹೂದ್ಯರಲ್ಲಿ ಅನೇಕರು ಹೋಗಿ ಯೇಸುವನ್ನು ನಂಬುವವರಾದರು.

### ಯೇಸು ಯೆರೂಸಲೇಮಿನಲ್ಲಿ ಅರಸನಂತೆ ಪ್ರವೇಶ ಮಾಡಿದ್ದು.

(ಮತ್ತಾಯ 21, 4—9; ಮಾರ್ಕ 11, 7—10; ಲೂಕ 19, 35—38.)

12 ಮರುದಿವಸ ಜಾತ್ರೆಗೆ ಬಂದಿದ್ದ ಜನಸಮೂಹವು ಯೇಸು ಯೆರೂಸಲೇಮಿಗೆ ಬರು
13 ತ್ತಾನೆಂದು ಕೇಳಿ, ಖರ್ಜೂರದ ಗರಿಗಳನ್ನು ತಕ್ಕೊಂಡು ಆತನನ್ನು ಎದುರುಗೊಳ್ಳುವದಕ್ಕೆ ಹೊರಗೆ ಬಂದು—

ಜಯ[1], ಕರ್ತನ ಹೆಸರಿನಲ್ಲಿ ಬರುವವನಿಗೆ ಶುಭವಾಗಲಿ[2];
ಇಸ್ರಯೇಲಿನ ಅರಸನಿಗೆ ಶುಭವಾಗಲಿ

14 ಎಂದು ಆರ್ಭಟಿಸಿ ಹೇಳಿದರು. ಮತ್ತು ಯೇಸು ಕತ್ತೇಮರಿಯನ್ನು ತರಿಸಿಕೊಂಡು ಅದರ ಮೇಲೆ ಕೂತುಕೊಂಡನು. ಇದರಿಂದ—

15 ಚಿಯೋನಪಟ್ಟಣವೆಂಬ ಕನ್ಯೆಯೇ, ಹೆದರಬೇಡ;
ಇಗೋ, ನಿನ್ನ ಅರಸನು ಕತ್ತೇಮರಿಯ ಮೇಲೆ ಕೂತುಕೊಂಡು ಬರುತ್ತಾನೆ[3]

16 ಎಂಬ ಶಾಸ್ತ್ರದ ಮಾತು ನೆರವೇರಿತು. ಇದು ಆತನ ಶಿಷ್ಯರಿಗೆ ಮೊದಲು ತಿಳಿದಿರಲಿಲ್ಲ. ಆದರೆ ಯೇಸು ತನ್ನ ಮಹಿಮೆಯ ಪದವಿಗೆ ಬಂದ ಮೇಲೆ, ಇದು ಆತನ ವಿಷಯವಾಗಿಯೇ ಬರೆದದೆ ಎಂದೂ ಆತನಿಗೆ ನಾವು ಅದನ್ನೆಲ್ಲಾ ಮಾಡಿದೆವೆಂದೂ ಅವರ ನೆನಪಿಗೆ ಬಂತು.
17 ಇದಲ್ಲದೆ ಆತನು ಲಾಜರನನ್ನು ಸಮಾಧಿಯೊಳಗಿಂದ ಕರೆದು ಬದುಕಿಸಿದ ವೇಳೆಯಲ್ಲಿ

1) ಮೂಲ: ಹೊಸನ್ನ, ಅಂದರೆ ಪ್ರಸನ್ನನಾಗು. 2) ಕೀರ್ತನೆ ೧೧೮, ೨೫. ೨೬.
3) ಜಕರೀಯ ೯, ೯.

ಆತನ ಸಂಗಡ ಇದ್ದ ಜನರು ಅದನ್ನು ಸಾರುತ್ತಿದ್ದರು. ಆತನು ಈ ಸೂಚಕಕಾರ್ಯ 18 ವನ್ನು ಮಾಡಿದನೆಂದು ಕೇಳಿದ ಕಾರಣದಿಂದಲೂ ಜನರು ಆತನನ್ನು ಎದುರುಗೊಳ್ಳುವ ದಕ್ಕೆ ಹೋಗಿದ್ದರು. ಹೀಗಿರಲಾಗಿ ಫರಿಸಾಯರು—ನಿಮ್ಮ ಯತ್ನವೇನೂ ಸಾಗಲಿಲ್ಲ, 19 ನೋಡಿರಿ; ಲೋಕವೆಲ್ಲಾ ಆತನ ಹಿಂದೆ ಹೋಯಿತಲ್ಲಾ ಎಂದು ಒಬ್ಬರಿಗೊಬ್ಬರು ಮಾತಾ ಡಿಕೊಂಡರು.

ಯೇಸು ತಾನು ಸಾಯುವದರಿಂದ ಎಲ್ಲರನ್ನು ತನ್ನ ಕಡೆಗೆ ಎಳಕೊಳ್ಳುವೆನೆಂದು ಹೇಳಿದ್ದು.

ಇದಲ್ಲದೆ ದೇವಾರಾಧನೆ ಮಾಡಬೇಕೆಂದು ಜಾತ್ರೆಗೆ ಬಂದವರಲ್ಲಿ ಕೆಲವು ಮಂದಿ 20 ಗ್ರೀಕರಿದ್ದರು. ಇವರು ಗಲಿಲಾಯದಲ್ಲಿರುವ ಬೆತ್ಸಾಯಿದ ಊರಿನ ಫಿಲಿಪ್ಪನ ಬಳಿಗೆ 21 ಬಂದು—ಅಯ್ಯಾ, ಯೇಸುವನ್ನು ನೋಡಬೇಕೆಂದಿದ್ದೇವೆಂದು ಅವನನ್ನು ಬೇಡಿ ಕೊಂಡರು. ಫಿಲಿಪ್ಪನು ಬಂದು ಅಂದ್ರೆಯನಿಗೆ ಹೇಳಿದನು; ಅಂದ್ರೆಯನೂ ಫಿಲಿಪ್ಪನೂ 22 ಯೇಸುವಿಗೆ ಹೇಳಿದರು. ಆಗ ಯೇಸು ಅವರಿಗೆ ಉತ್ತರಕೊಟ್ಟು ಹೇಳಿದ್ದೇನಂದರೆ— 23 ಮನುಷ್ಯಕುಮಾರನು ತನ್ನ ಮಹಿಮೆಯ ಪದವಿಯನ್ನು ಹೊಂದುವ ಸಮಯ ಬಂದದೆ. ನಿಮಗೆ ನಿಜನಿಜವಾಗಿ ಹೇಳುತ್ತೇನೆ, ಗೋದಿಯ ಕಾಳು ಭೂಮಿಯಲ್ಲಿ ಬಿದ್ದು ಸ್ಸಾಯದಿ 24 ದ್ದರೆ ಒಂದೇಯಾಗಿ ಉಳಿಯುವದು; ಸತ್ತರೆ ಬಹಳ ಫಲಕೊಡುವದು. ತನ್ನ ಪ್ರಾಣದ 25 ಮೇಲೆ ಮಮತೆಯಿಡುವವನು ಅದನ್ನು ಕಳಕೊಳ್ಳುವನು, ಇಹಲೋಕದಲ್ಲಿ ತನ್ನ ಪ್ರಾಣ ವನ್ನು ಹಗೆಮಾಡುವವನು ನಿತ್ಯಜೀವಕ್ಕಾಗಿ ಅದನ್ನು ಕಾಪಾಡಿಕೊಳ್ಳುವನು. ಯಾವ 26 ನಾದರೂ ನನ್ನ ಸೇವೆಯನ್ನು ಮಾಡುವವನಾದರೆ ನನ್ನ ಹಿಂದೆ ಬರಲಿ; ಮತ್ತು ಎಲ್ಲಿ ನಾನು ಇರುತ್ತೇನೋ ಅಲ್ಲಿ ನನ್ನ ಸೇವಕನು ಸಹ ಇರುವನು. ಯಾವನಾದರೂ ನನ್ನ ಸೇವೆಯನ್ನು ಮಾಡುವವನಾದರೆ ತಂದೆಯು ಅವನಿಗೆ ಬಹುಮಾನ ಮಾಡುವನು. ಈಗ 27 ನನ್ನ ಪ್ರಾಣವು ತತ್ತರಿಸುತ್ತದೆ; ಮತ್ತು ನಾನೇನು ಹೇಳಲಿ? ತಂದೆಯೇ, ಈ ಕಾಲದೊಳ ಗಿಂದ ನನ್ನನ್ನು ತಪ್ಪಿಸು. ಆದರೆ ಇದಕ್ಕಾಗಿಯೇ ಈ ಕಾಲ ಸೇರಿದೆನು. ತಂದೆಯೇ, 28 ನಿನ್ನ ಹೆಸರನ್ನು ಮಹಿಮೆಪಡಿಸಿಕೋ ಅಂದನು. ಅದಕ್ಕೆ—ಮಹಿಮೆ ಪಡಿಸಿದ್ದೇನೆ, ತಿರಿಗಿ ಮಹಿಮೆ ಪಡಿಸುವೆನು ಎಂದು ಆಕಾಶವಾಣಿಯಾಯಿತು. ಅಲ್ಲಿ ನಿಂತುಕೊಂಡಿದ್ದ 29 ಜನರು ಅದನ್ನು ಕೇಳಿ—ಗುಡುಗಿತು ಅಂದರು. ಇನ್ನು ಕೆಲವರು—ದೇವದೂತನು ಈತನ ಸಂಗಡ ಮಾತಾಡಿದನು ಅಂದರು. ಆದರೆ ಯೇಸು ಅವರಿಗೆ—ಈ ಆಕಾಶ 30 ವಾಣಿ ನನಗಾಗಿ ಆಗಲಿಲ್ಲ; ನಿಮಗಾಗಿ ಆಯಿತು. ಈಗ ಈ ಲೋಕಕ್ಕೆ ತೀರ್ಪು ಆಗು 31 ತ್ತದೆ; ಈಗ ಇಹಲೋಕಾಧಿಪತಿಯು ಹೊರಗೆ ನೂಕಲ್ಪಡುವನು. ಆದರೆ ನಾನು 32 ಭೂಮಿಯಲ್ಲಿಂದ ಮೇಲಕ್ಕೆ ಎತ್ತಲ್ಪಟ್ಟಾಗ ಎಲ್ಲರನ್ನೂ ನನ್ನ ಬಳಿಗೆ ಎಳಕೊಳ್ಳುವೆನು ಎಂದು ಹೇಳಿದನು. ಮಾತಿನಿಂದ ತಾನು ಇಂಥಾ ಸಾವು ಸಾಯತಕ್ಕವನೆಂದು 33 ಸೂಚಿಸಿದನು. ಅದಕ್ಕೆ ಆ ಜನರು—ಕ್ರಿಸ್ತನು ಸದಾಕಾಲವೂ ಇರುತ್ತಾನೆಂದು[1] ಧರ್ಮ 34 ಶಾಸ್ತ್ರದಲ್ಲಿ ಕೇಳಿದ್ದೇವೆ; ಹಾಗಾದರೆ ಮನುಷ್ಯಕುಮಾರನು ಮೇಲಕ್ಕೆ ಎತ್ತಲ್ಪಡಬೇಕೆಂದು

[1] ಕೀರ್ತನೆ ೮೯, ೩೬. ೩೭; ೧೧೦, ೪ ಇವೇ ಮುಂತಾದ ವಚನಗಳಲ್ಲಿ.

35 ನೀನು ಹೇಳುವದು ಹ್ಯಾಗೆ? ಆ ಮನುಷ್ಯಕುಮಾರನು ಯಾರು? ಅಂದರು. ಯೇಸು ಅವರಿಗೆ—ಇನ್ನು ಸ್ವಲ್ಪ ಕಾಲವೇ ಬೆಳಕು ನಿಮ್ಮಲ್ಲಿ ಇರುತ್ತದೆ; ಕತ್ತಲೆಯು ನಿಮ್ಮನ್ನು ಮುಸುಕಿಕೊಳ್ಳದಂತೆ ಬೆಳಕು ನಿಮಗೆ ಇರುವಾಗಲೇ ಸಂಚಾರ ಮಾಡಿರಿ. ಕತ್ತಲೆಯಲ್ಲಿ 36 ಸಂಚಾರ ಮಾಡುವವನಿಗೆ ತಾನು ಎಲ್ಲಿ ಹೋಗುತ್ತೇನೆಂದು ತಿಳಿಯದು. ನಿಮಗೆ ಬೆಳಕು ಇರುವಾಗಲೇ ಬೆಳಕನ್ನು ನಂಬಿರಿ; ನಂಬಿದರೆ ನೀವು ಬೆಳಕಿನವರಾಗುವಿರಿ ಎಂದು ಹೇಳಿದನು. ಇದನ್ನು ಯೇಸು ಹೇಳಿದ ಮೇಲೆ ಅವರನ್ನು ಬಿಟ್ಟುಹೋಗಿ ಅಡಗಿಕೊಂಡನು.

### ಯೇಸು ಯೆಹೂದ್ಯರೊಳಗೆ ನಡಸಿದ ಕೆಲಸದ ಫಲ.

37 ಆತನು ಅವರ ಮುಂದೆ ಅಷ್ಟು ಸೂಚಕಕಾರ್ಯಗಳನ್ನು ಮಾಡಿದಾಗ್ಯೂ, ಅವರು 38 ಆತನನ್ನು ನಂಬಲಿಲ್ಲ. ಇದರಿಂದ ಪ್ರವಾದಿಯಾದ ಯೆಶಾಯನು ನುಡಿದ ಮಾತು ನೆರವೇರಿತು; ಅದೇನಂದರೆ—

ಕರ್ತನೇ, ನಮ್ಮ ಉಪದೇಶವನ್ನು ಯಾರು ನಂಬಿದರು?
ಕರ್ತನ ಭುಜಬಲವು ಯಾರಿಗೆ ಪ್ರಕಟವಾಯಿತು?[1]

39 ಎಂಬುವದು. ಅವರು ನಂಬಲಾರದೆ ಹೋದ ಕಾರಣವನ್ನು ಯೆಶಾಯನು ಮತ್ತೊಂದು ಮಾತಿನಲ್ಲಿ ಸೂಚಿಸಿದ್ದಾನೆ; ಅದೇನಂದರೆ—

40 ಅವರು ಕಣ್ಣಿನಿಂದ ಕಾಣದೆ, ಹೃದಯದಿಂದ ತಿಳಿಯದೆ,
ತಿರುಗಿಕೊಳ್ಳದೆ, ತನ್ನಿಂದ ಸ್ವಸ್ಥತೆಯನ್ನು ಹೊಂದದೆ ಇರುವಂತೆ,
ಆತನು ಅವರ ಕಣ್ಣುಗಳನ್ನು ಕುರುಡು ಮಾಡಿ
ಅವರ ಹೃದಯವನ್ನು ಕಠಿನಮಾಡಿದನು[2]

41 ಎಂಬುವದೇ. ಯೆಶಾಯನು ಆತನ ಮಹಿಮೆಯನ್ನು ನೋಡಿದ್ದರಿಂದ[3] ಆತನ ವಿಷಯ 42 ದಲ್ಲಿ ಮಾತಾಡುತ್ತಿರುವಾಗ ಆ ಮಾತನ್ನು ನುಡಿದನು. ಆದಾಗ್ಯೂ ಹಿರೀಸಭೆಯವರಲ್ಲಿಯೂ ಅನೇಕರು ಆತನನ್ನು ನಂಬಿದರು. ಆದರೆ ತಮಗೆ ಸಭೆಯಿಂದ ಬಹಿಷ್ಕಾರವಾದೀತೆಂದು ಫರಿಸಾಯರಿಗೆ ಅಂಜಿಕೊಂಡು ಅದನ್ನು ಜನರ ಮುಂದೆ ಹೇಳಲಿಲ್ಲ. 43 ಯಾಕಂದರೆ ದೇವರಿಂದ ಬರುವ ಮಾನಕ್ಕಿಂತ ಮನುಷ್ಯರಿಂದ ಬರುವ ಮಾನವೇ ಅವರಿಗೆ ಇಷ್ಟವಾಗಿತ್ತು.

44 ಯೇಸು ಕೂಗಿ ಹೇಳಿದ ಮಾತು ಏನಂದರೆ—ನನ್ನನ್ನು ನಂಬಿದವನು ನನ್ನನ್ನೇ ನಂಬು 45 ವವನಲ್ಲ; ನನ್ನನ್ನು ಕಳುಹಿಸಿಕೊಟ್ಟವನನ್ನು ನಂಬುವವನಾಗಿದ್ದಾನೆ. ಮತ್ತು ನನ್ನನ್ನು 46 ನೋಡುವವನು ನನ್ನನ್ನು ಕಳುಹಿಸಿಕೊಟ್ಟವನನ್ನು ನೋಡುವವನಾಗಿದ್ದಾನೆ. ನನ್ನನ್ನು ನಂಬುವ ಒಬ್ಬನಾದರೂ ಕತ್ತಲಲ್ಲಿ ಇರಬಾರದೆಂದು ನಾನು ಬೆಳಕಾಗಿ ಲೋಕಕ್ಕೆ 47 ಬಂದಿದ್ದೇನೆ. ಯಾವನಾದರೂ ನನ್ನ ಮಾತುಗಳನ್ನು ಕೇಳಿದಾಗ್ಯೂ ಕೈಕೊಂಡು ನಡೆಯದೆ ಹೋದರೆ, ನಾನೇ ಅವನಿಗೆ ತೀರ್ಪುಮಾಡುವದಿಲ್ಲ; ಲೋಕಕ್ಕೆ ತೀರ್ಪು

[1] ಯೆಶಾಯ ೫೩, ೧. [2] ಯೆಶಾಯ ೬, ೯ ೧೦. [3] ಯೆಶಾಯ ೬, ೧.

ಮಾಡುವದಕ್ಕಾಗಿ ನಾನು ಬಂದಿಲ್ಲ; ಲೋಕವನ್ನು ರಕ್ಷಿಸುವದಕ್ಕಾಗಿ ಬಂದಿದ್ದೇನೆ. 48 ನನ್ನನ್ನು ಲಕ್ಷ್ಯಮಾಡದೆ ನನ್ನ ಮಾತುಗಳನ್ನು ಅಂಗೀಕರಿಸದೆ ಇರುವವನಿಗೆ ತೀರ್ಪು ಮಾಡುವಂಥಾದ್ದು ಒಂದು ಇದೆ, ಅದು ಯಾವದಂದರೆ, ನಾನು ಆಡಿದ ಮಾತು; ಅದೇ ಅವನಿಗೆ ಕಡೇ ದಿನದಲ್ಲಿ ತೀರ್ಪುಮಾಡುವದು. 49 ಯಾಕಂದರೆ ನನ್ನಷ್ಟಕ್ಕೆ ನಾನೇ ಮಾತಾಡಿದವನಲ್ಲ; ನನ್ನನ್ನು ಕಳುಹಿಸಿಕೊಟ್ಟ ತಂದೆಯೇ—ನೀನು ಇಂಥಿಂಥಾದ್ದನ್ನು ಹೇಳಬೇಕು, ಹೀಗೆ ಹೀಗೆ ಮಾತಾಡಬೇಕು ಎಂಬದಾಗಿ ನನಗೆ ಆಜ್ಞೆಕೊಟ್ಟಿದ್ದಾನೆ. 50 ಆತನ ಆಜ್ಞೆ ನಿತ್ಯಜೀವವಾಗಿದೆ ಎಂದು ಬಲ್ಲೆನು. ಆದದರಿಂದ ನಾನು ಮಾತಾಡುವದನ್ನೆಲ್ಲಾ ತಂದೆ ನನಗೆ ಹೇಳಿದ ಮೇರೆಗೆ ಮಾತಾಡುತ್ತೇನೆ ಅಂದನು.

### ಯೇಸು ತನ್ನ ಶಿಷ್ಯರ ಕಾಲುಗಳನ್ನು ತೊಳೆದದ್ದು; ತನಗೆ ದ್ರೋಹಮಾಡುವವನನ್ನು ಕುರಿತು ಸೂಚಿಸಿದ್ದು.

**13** ಪಸ್ಕಹಬ್ಬದ ಮುಂದೆ ಯೇಸು ತಾನು ಈ ಲೋಕವನ್ನು ಬಿಟ್ಟು ತಂದೆಯ ಬಳಿಗೆ ಹೋಗಬೇಕಾದ ಕಾಲ ಬಂತೆಂದು ತಿಳುಕೊಂಡು, ಲೋಕದಲ್ಲಿರುವ ತನ್ನವರನ್ನು ಪ್ರೀತಿಸಿ ಪರಿಪೂರ್ಣವಾಗಿ ಅವರನ್ನು ಪ್ರೀತಿಸುತ್ತಾ ಬಂದನು. 2 ಅವರು ಊಟಕ್ಕೆ ಕೂತುಕೊಂಡಿದ್ದರು; ಅಷ್ಟರೊಳಗೆ ಸೈತಾನನು ಸೀಮೋನನ ಮಗನಾದ ಇಸ್ಕರಿಯೋತ ಯೂದನ ಮನಸ್ಸಿನಲ್ಲಿ ಯೇಸುವನ್ನು ಹಿಡುಕೊಡಬೇಕೆಂಬ ಆಲೋಚನೆಯನ್ನು ಹುಟ್ಟಿಸಿದ್ದನು. 3 ಯೇಸು ತನ್ನ ಕೈಯಲ್ಲಿ ತಂದೆ ಎಲ್ಲವನ್ನು ಕೊಟ್ಟಿದ್ದಾನೆಂತಲೂ ತಾನು ದೇವರ ಬಳಿಯಿಂದ ಹೊರಟುಬಂದಿದ್ದು ಮತ್ತೆ ದೇವರ ಬಳಿಗೆ ಹೋಗುತ್ತೇನೆಂತಲೂ ತಿಳುಕೊಂಡವನಾಗಿ, 4 ಊಟವನ್ನು ಬಿಟ್ಟು ಎದ್ದು, ಹೊದ್ದಿದ್ದ ಮೇಲ್ಹೊದಿಕೆಯನ್ನು ತೆಗೆದಿಟ್ಟು, ಕೈಪಾವುಡವನ್ನು ತಕ್ಕೊಂಡು ನಡುವಿಗೆ ಕಟ್ಟಿಕೊಂಡನು. 5 ಆಗ ಬೋಗುಣಿಯಲ್ಲಿ ನೀರು ಹಾಕಿಕೊಂಡು, ಶಿಷ್ಯರ ಕಾಲುಗಳನ್ನು ತೊಳೆಯುವದಕ್ಕೂ ನಡುವಿಗೆ ಕಟ್ಟಿಕೊಂಡಿದ್ದ ಕೈಪಾವುಡದಿಂದ ಒರಸುವದಕ್ಕೂ ಪ್ರಾರಂಭಿಸಿದನು. 6 ಹೀಗೆ ಸೀಮೋನ ಪೇತ್ರನ ಬಳಿಗೆ ಬರಲು, ಇವನು ಆತನಿಗೆ—ಸ್ವಾಮೀ, ನೀನು ನನ್ನ ಕಾಲುಗಳನ್ನು ತೊಳೆಯಬೇಕೇ? ಎಂದು ಹೇಳಿದನು. 7 ಅದಕ್ಕೆ ಯೇಸು—ನಾನು ಮಾಡುವದು ಈಗ ನಿನಗೆ ತಿಳಿಯುವದಿಲ್ಲ, ಇನ್ನು ಮೇಲೆ ನಿನಗೆ ತಿಳಿಯುವದು ಅಂದನು. 8 ಪೇತ್ರನು—ನೀನು ನನ್ನ ಕಾಲುಗಳನ್ನು ಎಂದಿಗೂ ತೊಳೆಯಬಾರದು ಎಂದು ಹೇಳಿದ್ದಕ್ಕೆ, ಯೇಸು—ನಾನು ನಿನ್ನನ್ನು ತೊಳೆಯದಿದ್ದರೆ ನನ್ನ ಸಂಗಡ ನಿನಗೆ ಪಾಲಿಲ್ಲ ಅಂದನು. 9 ಸೀಮೋನ ಪೇತ್ರನು—ಸ್ವಾಮೀ, ನನ್ನ ಕಾಲುಗಳನ್ನು ಮಾತ್ರವಲ್ಲದೆ ಕೈಗಳನ್ನೂ ತಲೆಯನ್ನೂ ಸಹ ತೊಳೆಯಬೇಕು ಅಂದನು. 10 ಯೇಸು ಅವನಿಗೆ—ಸ್ನಾನಮಾಡಿಕೊಂಡವನ ಕಾಲುಗಳನ್ನು ತೊಳೆಯುವದಲ್ಲದೆ ಬೇರೇನೂ ತೊಳೆಯಬೇಕಾಗಿರುವದಿಲ್ಲ, ಅವನ ಮೈಯೆಲ್ಲಾ ಶುದ್ಧವಾಗಿದೆ. ನೀವೂ ಶುದ್ಧರಾಗಿದ್ದೀರಿ; ಆದರೆ ನಿಮ್ಮಲ್ಲಿ ಎಲ್ಲರೂ ಶುದ್ಧರಲ್ಲವೆಂದು ಹೇಳಿದನು. 11 ಯೇಸು ತನ್ನನ್ನು ಹಿಡುಕೊಡುವವನು ಇಂಥವನೇ ಎಂದು ತಿಳಿದಿದ್ದರಿಂದ, ನಿಮ್ಮಲ್ಲಿ ಎಲ್ಲರೂ ಶುದ್ಧರಲ್ಲವೆಂದನು.

12 ಆತನು ಅವರ ಕಾಲುಗಳನ್ನು ತೊಳೆದ ಮೇಲೆ, ತನ್ನ ಮೇಲ್ಹೊದಿಕೆಯನ್ನು ಹಾಕಿ
ಕೊಂಡು ತಿರಿಗಿ ಕೂತುಕೊಂಡು ಅವರಿಗೆ ಹೇಳಿದ್ದೇನಂದರೆ—ನಾನು ನಿಮಗೆ ಮಾಡಿದ್ದು
13 ಏನೆಂದು ಗೊತ್ತಾಯಿತೋ? ನೀವು ನನ್ನನ್ನು ಗುರುವೆಂದೂ ಸ್ವಾಮಿಯೆಂದೂ ಕರೆಯು
14 ತ್ತೀರಿ; ನೀವು ಕರೆಯುವದು ಸರಿ; ನಾನು ಅಂಥವನೇ ಹೌದು. ಸ್ವಾಮಿಯೂ ಗುರುವೂ
ಆಗಿರುವ ನಾನು ನಿಮ್ಮ ಕಾಲುಗಳನ್ನು ತೊಳೆದಿರಲಾಗಿ, ನೀವು ಸಹ ಒಬ್ಬರ ಕಾಲನ್ನು
15 ಒಬ್ಬರು ತೊಳೆಯುವ ಹಂಗಿನವರಾಗಿದ್ದೀರಿ. ನಾನು ನಿಮಗೆ ಮಾಡಿದ ಮೇರೆಗೆ ನೀವು
16 ಸಹ ಮಾಡುವಂತೆ ನಿಮಗೆ ಮಾದರಿಯನ್ನು ತೋರಿಸಿದ್ದೇನೆ. ನಿಮಗೆ ನಿಜನಿಜವಾಗಿ
ಹೇಳುತ್ತೇನೆ, ಆಳು ಯಜಮಾನನಿಗಿಂತ ದೊಡ್ಡವನಲ್ಲ, ಕಳುಹಿಸಲ್ಪಟ್ಟವನು ಕಳುಹಿಸಿ
17 ದವನಿಗಿಂತ ದೊಡ್ಡವನಲ್ಲ. ನೀವು ಇದನ್ನು ತಿಳುಕೊಂಡು ಇದರಂತೆ ಮಾಡಿದರೆ ನೀವು
18 ಧನ್ಯರು. ನಾನು ನಿಮ್ಮೆಲ್ಲರನ್ನು ಕುರಿತು ಈ ಮಾತನ್ನು ಹೇಳಲಿಲ್ಲ; ನಾನು ಆದು
ಕೊಂಡವರನ್ನು ನಾನು ಬಲ್ಲೆನು; ಆದರೆ—ನನ್ನ ಕೂಡ ಊಟಮಾಡುವವನೇ ನನ್ನ ಮೇಲೆ
19 ತಿರುಗಿಬಿದ್ದನು ಎಂಬ ಶಾಸ್ತ್ರದ ಮಾತು[1] ನೆರವೇರಬೇಕಾಗಿದೆ. ಅದು ನಡೆಯುವಾಗ
ನನ್ನನ್ನೇ ಆತನೆಂದು ನೀವು ನಂಬುವಂತೆ, ಅದು ನಡೆಯುವದಕ್ಕಿಂತ ಮುಂಚೆ ಅದನ್ನು
20 ಇಂದಿನಿಂದ ನಿಮಗೆ ಹೇಳುತ್ತೇನೆ. ನಿಮಗೆ ನಿಜನಿಜವಾಗಿ ಹೇಳುತ್ತೇನೆ, ನಾನು ಕಳು
ಹಿಸಿಕೊಟ್ಟವನನ್ನು ಅಂಗೀಕರಿಸುವವನು ನನ್ನನ್ನು ಅಂಗೀಕರಿಸುವವನಾಗಿದ್ದಾನೆ; ನನ್ನನ್ನು
ಅಂಗೀಕರಿಸುವವನು ನನ್ನನ್ನು ಕಳುಹಿಸಿಕೊಟ್ಟವನನ್ನು ಅಂಗೀಕರಿಸುವವನಾಗಿದ್ದಾನೆ.

21 ಇದನ್ನು ಹೇಳಿ ಯೇಸು ಆತ್ಮದಲ್ಲಿ ತತ್ತರಗೊಂಡು—ನಿಮಗೆ ನಿಜನಿಜವಾಗಿ ಹೇಳು
ತ್ತೇನೆ, ನಿಮ್ಮಲ್ಲಿ ಒಬ್ಬನು ನನ್ನನ್ನು ಹಿಡುಕೊಡುವನೆಂದು ಸ್ಪಷ್ಟವಾಗಿ ಹೇಳಿದನು.
22 ಈತನು ಯಾರ ವಿಷಯವಾಗಿ ಈ ಮಾತನ್ನು ಹೇಳುತ್ತಾನೆಂದು ಶಿಷ್ಯರು ಅನುಮಾನ
23 ಪಟ್ಟು ಒಬ್ಬರನ್ನೊಬ್ಬರು ನೋಡುವವರಾದರು. ಶಿಷ್ಯರೊಳಗೆ ಯೇಸುವಿಗೆ ಪ್ರಿಯನಾ
24 ಗಿದ್ದ ಒಬ್ಬನು ಆತನ ಎದೆಯ ಹತ್ತರ ಒರಗಿಕೊಂಡಿದ್ದನು; ಇವನಿಗೆ ಸೀಮೋನ ಪೇತ್ರನು
25 ಸನ್ನೆ ಮಾಡಿ—ಯಾರನ್ನು ಕುರಿತು ಮಾತಾಡಿದನು, ತಿಳಿಸು ಎಂದು ಹೇಳಿದನು. ಅವನು
ಹಾಗೆಯೇ ಯೇಸುವಿನ ಎದೆಯ ಕಡೆಗೆ ಬಾಗಿ—ಸ್ವಾಮಿ, ಅವನು ಯಾರು? ಅಂತ
26 ಕೇಳಿದನು. ಅದಕ್ಕೆ ಯೇಸು—ನಾನು ಈ ತುತ್ತನ್ನು ಅದ್ದಿ ಯಾರಿಗೆ ಕೊಡುತ್ತೇನೋ
ಅವನೇ ಎಂದು ಹೇಳಿ, ಆ ತುತ್ತನ್ನು ಅದ್ದಿ ತೆಗೆದು ಇಸ್ಕರಿಯೋತ ಸೀಮೋನನ ಮಗ
27 ನಾದ ಯೂದನಿಗೆ ಕೊಟ್ಟನು. ಅವನು ಆ ತುತ್ತನ್ನು ತೆಗೆದುಕೊಂಡ ಕೂಡಲೆ ಸೈತಾ
ನನು ಅವನೊಳಗೆ ಹೊಕ್ಕನು. ಆಗ ಯೇಸು ಅವನಿಗೆ—ನೀನು ಮಾಡುವದನ್ನು
28 ಬೇಗನೆ ಮಾಡಿಬಿಡು ಎಂದು ಹೇಳಿದನು. ಆತನು ಅವನಿಗೆ ಇದನ್ನು ಯಾತಕ್ಕಾಗಿ
29 ಹೇಳಿದನೆಂಬುವದು ಊಟಕ್ಕೆ ಕೂತವರಲ್ಲಿ ಯಾರಿಗೂ ಗೊತ್ತಾಗಲಿಲ್ಲ; ಅವರಲ್ಲಿ ಕೆಲ
ವರು—ಯೂದನ ವಶದಲ್ಲಿ ಹಣದ ಚೀಲವಿದ್ದದರಿಂದ, ಹಬ್ಬಕ್ಕಾಗಿ ನಮಗೆ ಬೇಕಾದ
ದ್ದನ್ನು ಕೊಂಡುಕೋ ಎಂಬದಾಗಿಯೋ, ಬಡವರಿಗೆ ಏನಾದರೂ ಕೊಡು ಎಂಬದಾ
30 ಗಿಯೋ ಯೇಸು ಅವನಿಗೆ ಹೇಳುತ್ತಾನೆ ಎಂದು ನೆನಸಿದರು. ಅವನು ಆ ತುತ್ತನ್ನು
ತೆಗೆದುಕೊಂಡು, ಕೂಡಲೇ ಹೊರಗೆ ಹೋದನು. ಆಗ ರಾತ್ರಿಯಾಗಿತ್ತು.

---

1) ಕೀರ್ತನೆ ೪೧, ೯.

ಯೇಸು ತಾನು ಶ್ರಮೆ ಅನುಭವಿಸುವದಕ್ಕಿಂತ ಮುಂಚೆ ಶಿಷ್ಯರಿಗೆ ಹೇಳಿದ ಕಡೇ ಮಾತುಗಳು.

ಅವನು ಹೊರಗೆ ಹೋದ ಮೇಲೆ, ಯೇಸು—ಈಗ ಮನುಷ್ಯಕುಮಾರನು ಮಹಿಮೆ 31
ಪಟ್ಟಿದ್ದಾನೆ, ಮತ್ತು ದೇವರು ಆತನಲ್ಲಿ ಮಹಿಮೆಪಟ್ಟಿದ್ದಾನೆ. ದೇವರು ಆತನಲ್ಲಿ ಮಹಿಮೆ 32
ಪಟ್ಟಿರಲಾಗಿ ತನ್ನಲ್ಲಿ ದೇವರು ಆತನನ್ನೂ ಮಹಿಮೆಪಡಿಸುವನು, ಕೂಡಲೇ ಮಹಿಮೆ
ಪಡಿಸುವನು. ಪ್ರಿಯ ಮಕ್ಕಳೇ, ಇನ್ನು ಸ್ವಲ್ಪಕಾಲವೇ ನಿಮ್ಮ ಸಂಗಡ ಇರುತ್ತೇನೆ. 33
ನನ್ನನ್ನು ಹುಡುಕುವಿರಿ, ಆದರೆ ನಾನು ಹೋಗುವಲ್ಲಿಗೆ ನೀವು ಬರಲಾರಿರಿ ಎಂದು ನಾನು
ಯೆಹೂದ್ಯರಿಗೆ ಹೇಳಿದಂತೆ ಈಗ ನಿಮಗೂ ಹೇಳುತ್ತೇನೆ. ನಾನು ನಿಮಗೆ ಒಂದು 34
ಹೊಸ ಆಜ್ಞೆಯನ್ನು ಕೊಡುತ್ತೇನೆ; ಏನಂದರೆ, ನೀವು ಒಬ್ಬರನ್ನೊಬ್ಬರು ಪ್ರೀತಿಸಬೇಕು;
ನಾನು ನಿಮ್ಮನ್ನು ಪ್ರೀತಿಸಿದ ಮೇರೆಗೆ ನೀವು ಸಹ ಒಬ್ಬರನ್ನೊಬ್ಬರು ಪ್ರೀತಿಸಬೇಕು
ಎಂಬುವದೇ. ನಿಮ್ಮೊಳಗೆ ಒಬ್ಬರ ಮೇಲೊಬ್ಬರಿಗೆ ಪ್ರೀತಿಯಿದ್ದರೆ, ಎಲ್ಲರೂ ನಿಮ್ಮನ್ನು 35
ನನ್ನ ಶಿಷ್ಯರೆಂದು ತಿಳುಕೊಳ್ಳುವರು ಅಂದನು.

ಸೀಮೋನ ಪೇತ್ರನು ಆತನನ್ನು—ಸ್ವಾಮಿಾ, ಎಲ್ಲಿಗೆ ಹೋಗುತ್ತೀ? ಎಂದು ಕೇಳಿದ್ದಕ್ಕೆ, 36
ಯೇಸು—ನಾನು ಹೋಗುವಲ್ಲಿಗೆ ನೀನು ಈಗ ನನ್ನ ಹಿಂದೆ ಬರಲಾರಿ, ತರುವಾಯ ನನ್ನ
ಹಿಂದೆ ಬರುವಿ ಅಂದನು. ಪೇತ್ರನು ಆತನಿಗೆ—ಸ್ವಾಮಿಾ, ನಾನು ಯಾಕೆ ಈಗ ನಿನ್ನ 37
ಹಿಂದೆ ಬರಲಾರೆನು? ನಿನಗಾಗಿ ನನ್ನ ಪ್ರಾಣವನ್ನಾದರೂ ಕೊಟ್ಟೇನು ಎಂದು ಹೇಳಲು,
ಯೇಸು—ನನಗಾಗಿ ಪ್ರಾಣ ಕೊಟ್ಟೀಯಾ? ನಿನಗೆ ನಿಜನಿಜವಾಗಿ ಹೇಳುತ್ತೇನೆ, ನೀನು 38
ನನ್ನ ವಿಷಯವಾಗಿ, ಅವನನ್ನು ಅರಿಯೆನೆಂದು ಮೂರು ಸಾರಿ ಹೇಳುವ ತನಕ ಕೋಳಿ
ಕೂಗುವದೇ ಇಲ್ಲ ಅಂದನು.

ನಿಮ್ಮ ಹೃದಯವು ಕಳವಳಗೊಳ್ಳದೆ ಇರಲಿ; ದೇವರನ್ನು ನಂಬಿರಿ, ನನ್ನನ್ನೂ ನಂಬಿರಿ. **14**
ನನ್ನ ತಂದೆಯ ಮನೆಯಲ್ಲಿ ಬಹಳ ಬಿಡಾರಗಳು ಅವೆ; ಇಲ್ಲದಿದ್ದರೆ ನಿಮಗೆ ಹೇಳುತ್ತಿ 2
ದ್ದೆನು; ನಿಮಗೆ ಸ್ಥಳವನ್ನು ಸಿದ್ಧಮಾಡುವದಕ್ಕೆ ಹೋಗುತ್ತೇನಲ್ಲಾ. ನಾನು ಹೋಗಿ 3
ನಿಮಗೆ ಸ್ಥಳವನ್ನು ಸಿದ್ಧಮಾಡಿದ ಮೇಲೆ, ತಿರಿಗಿ ಬಂದು ನಿಮ್ಮನ್ನು ಕರಕೊಂಡು ಹೋಗಿ
ನನ್ನ ಬಳಿಗೆ ಸೇರಿಸಿಕೊಳ್ಳುವೆನು; ಯಾಕಂದರೆ ನಾನಿರುವ ಸ್ಥಳದಲ್ಲಿ ನೀವು ಸಹ ಇರ
ಬೇಕು. ಮತ್ತು ನಾನು ಹೋಗುವ ಸ್ಥಳದ ಮಾರ್ಗವು ನಿಮಗೆ ತಿಳಿದದೆ ಅಂದನು. 4

ತೋಮನು ಆತನನ್ನು—ಸ್ವಾಮಿಾ, ನೀನು ಎಲ್ಲಿಗೆ ಹೋಗುತ್ತೀಯೋ ನಮಗೆ ತಿಳಿ 5
ಯದು; ಮಾರ್ಗವು ಹ್ಯಾಗೆ ತಿಳಿದೀತು ಎಂದು ಕೇಳಲು, ಯೇಸು ಅವನಿಗೆ—ನಾನೇ 6
ಮಾರ್ಗವೂ ಸತ್ಯವೂ ಜೀವವೂ ಆಗಿದ್ದೇನೆ; ನನ್ನ ಮೂಲಕವಾಗಿ ಹೊರತು ಯಾರೂ
ತಂದೆಯ ಬಳಿಗೆ ಬರುವದಿಲ್ಲ. ನೀವು ನನ್ನನ್ನು ಅರಿತಿದ್ದರೆ ನನ್ನ ತಂದೆಯನ್ನೂ ಅರಿಯು 7
ತ್ತಿದ್ದಿರಿ; ಈಗಿನಿಂದ ಆತನನ್ನು ಅರಿತುಕೊಂಡಿದ್ದೀರಿ; ಆತನನ್ನು ನೋಡಿದ್ದೀರಲ್ಲಾ ಎಂದು
ಹೇಳಿದನು.

ಫಿಲಿಪ್ಪನು—ಸ್ವಾಮಿಾ, ನಮಗೆ ತಂದೆಯನ್ನು ತೋರಿಸು, ನಮಗೆ ಅಷ್ಟೇ ಸಾಕು 8
ಅಂದನು. ಯೇಸು ಅವನಿಗೆ—ಫಿಲಿಪ್ಪನೇ, ನಾನು ಇಷ್ಟು ದಿವಸ ನಿಮ್ಮ ಸಂಗಡ 9
ಇದ್ದಾಗ್ಯೂ ನೀನು ಇನ್ನೂ ನನ್ನನ್ನು ಅರಿತುಕೊಳ್ಳಲಿಲ್ಲವೇ? ನನ್ನನ್ನು ನೋಡಿದವನು

ತಂದೆಯನ್ನು ನೋಡಿದ್ದಾನೆ. ನಮಗೆ ತಂದೆಯನ್ನು ತೋರಿಸೆಂದು ನೀನು ಹೇಳುವದು
10 ಹ್ಯಾಗೆ? ನಾನು ತಂದೆಯಲ್ಲಿದ್ದೇನೆ, ತಂದೆಯು ನನ್ನಲ್ಲಿ ಇದ್ದಾನೆ ಎಂದು ನೀನು ನಂಬುವ ದಿಲ್ಲವೋ? ನಾನು ನಿಮಗೆ ಹೇಳುವ ಮಾತುಗಳನ್ನು ನನ್ನಷ್ಟಕ್ಕೆ ನಾನೇ ಆಡುವದಿಲ್ಲ;
11 ತಂದೆಯು ನನ್ನಲ್ಲಿ ಇದ್ದುಕೊಂಡು ತನ್ನ ಕ್ರಿಯೆಗಳನ್ನು ನಡಸುತ್ತಾನೆ. ನಾನು ತಂದೆಯಲ್ಲಿ ಇದ್ದೇನೆ, ತಂದೆಯು ನನ್ನಲ್ಲಿ ಇದ್ದಾನೆಂಬುವ ನನ್ನ ಮಾತನ್ನು ನಂಬಿರಿ; ಇಲ್ಲದಿದ್ದರೆ ಆ ಕ್ರಿಯೆಗಳನ್ನೇ ನೋಡಿ ನನ್ನ ಮಾತನ್ನು ನಂಬಿರಿ.

12 ನಿಮಗೆ ನಿಜನಿಜವಾಗಿ ಹೇಳುತ್ತೇನೆ, ನನ್ನನ್ನು ನಂಬುವವನು ನಾನು ನಡಸುವ ಕ್ರಿಯೆ ಗಳನ್ನು ತಾನೂ ನಡಸುವನು; ಮತ್ತು ಅವುಗಳಿಗಿಂತ ಮಹತ್ತಾದ ಕ್ರಿಯೆಗಳನ್ನು
13 ನಡಸುವನು. ಯಾಕಂದರೆ ನಾನು ತಂದೆಯ ಬಳಿಗೆ ಹೋಗುತ್ತೇನೆ. ಇದಲ್ಲದೆ ನೀವು ನನ್ನ ಹೆಸರಿನಲ್ಲಿ ಏನೇನು ಬೇಡಿಕೊಳ್ಳುವಿರೋ, ಅದನ್ನು ನೆರವೇರಿಸುವೆನು; ಹೀಗೆ
14 ಮಗನ ಮೂಲಕವಾಗಿ ತಂದೆಗೆ ಮಹಿಮೆ ಉಂಟಾಗುವದು. ನೀವು ನನ್ನ ಹೆಸರಿನಲ್ಲಿ ನನ್ನನ್ನು ಏನಾದರೂ ಬೇಡಿಕೊಂಡರೆ, ಅದನ್ನು ನೆರವೇರಿಸುವೆನು.

15 ನೀವು ನನ್ನನ್ನು ಪ್ರೀತಿಸುವವರಾದರೆ, ನನ್ನ ಆಜ್ಞೆಗಳನ್ನು ಕೈಕೊಂಡು ನಡೆಯುವಿರಿ.
16 ಆಗ ನಾನು ತಂದೆಯನ್ನು ಕೇಳಿಕೊಳ್ಳುವೆನು; ಆತನು ನಿಮಗೆ ಬೇರೊಬ್ಬ ಸಹಾಯಕ
17 ನನ್ನು ಸದಾಕಾಲ ನಿಮ್ಮ ಸಂಗಡ ಇರುವದಕ್ಕೆ ಕೊಡುವನು. ಆ ಸಹಾಯಕನು ಯಾರಂದರೆ, ಸತ್ಯದ[1] ಆತ್ಮನೇ. ಲೋಕವು ಆತನನ್ನು ನೋಡದೆಯೂ ತಿಳಿಯದೆಯೂ ಇರುವದರಿಂದ ಆತನನ್ನು ಹೊಂದಲಾರದು. ನೀವು ಆತನನ್ನು ಬಲ್ಲಿರಿ; ಹ್ಯಾಗಂದರೆ ನಿಮ್ಮ ಬಳಿಯಲ್ಲಿ ವಾಸಮಾಡುತ್ತಾನೆ, ಮತ್ತು ನಿಮ್ಮೊಳಗೆ ಇರುವನು.

18, 19 ನಾನು ನಿಮ್ಮನ್ನು ಅನಾಥರಾಗಿ ಬಿಡುವದಿಲ್ಲ; ನಿಮ್ಮ ಬಳಿಗೆ ಬರುತ್ತೇನೆ. ಇನ್ನು ಸ್ವಲ್ಪಕಾಲವಾದ ಮೇಲೆ ಲೋಕವು ನನ್ನನ್ನು ನೋಡುವದಿಲ್ಲ, ಆದರೆ ನೀವು ನನ್ನನ್ನು
20 ನೋಡುವಿರಿ; ನಾನು ಬದುಕುವದರಿಂದ ನೀವೂ ಬದುಕುವಿರಿ. ನಾನು ನನ್ನ ತಂದೆ ಯಲ್ಲಿಯೂ ನೀವು ನನ್ನಲ್ಲಿಯೂ ನಾನು ನಿಮ್ಮಲ್ಲಿಯೂ ಇರುವದನ್ನು ನೀವು ಆ ದಿನದಲ್ಲಿ
21 ತಿಳಿದುಕೊಳ್ಳುವಿರಿ. ನನ್ನ ಆಜ್ಞೆಗಳನ್ನು ಹೊಂದಿ ಅವುಗಳನ್ನು ಕೈಕೊಂಡು ನಡೆಯುವ ವನೇ ನನ್ನನ್ನು ಪ್ರೀತಿಸುವವನು. ನನ್ನನ್ನು ಪ್ರೀತಿಸುವವನು ನನ್ನ ತಂದೆಗೆ ಪ್ರಿಯ ನಾಗಿರುವನು; ನಾನೂ ಅವನನ್ನು ಪ್ರೀತಿಸಿ ಅವನಿಗೆ ಕಾಣಿಸಿಕೊಳ್ಳುವೆನು ಎಂದು ಹೇಳಿದನು.

22 ಯೂದನು (ಇವನು ಇಸ್ಕರಿಯೋತನಲ್ಲ)—ಸ್ವಾಮಿಾ, ನೀನು ಲೋಕಕ್ಕೆ ಕಾಣಿಸಿ ಕೊಳ್ಳದೆ ನಮಗೆ ಮಾತ್ರ ಕಾಣಿಸಿಕೊಳ್ಳುವದಕ್ಕೆ ಏನು ಸಂಭವಿಸಿತು ಎಂದು ಕೇಳಿದ್ದಕ್ಕೆ,
23 ಯೇಸು ಅವನಿಗೆ—ಯಾರಾದರೂ ನನ್ನನ್ನು ಪ್ರೀತಿಸುವವನಾದರೆ ನನ್ನ ಮಾತನ್ನು ಕೈಕೊಂಡು ನಡೆಯುವನು; ಅವನನ್ನು ನನ್ನ ತಂದೆಯು ಪ್ರೀತಿಸುವನು, ಮತ್ತು ನಾವಿ ಬ್ಬರೂ ಅವನ ಬಳಿಗೆ ಬಂದು ಅವನ ಬಳಿಯಲ್ಲಿ ಬಿಡಾರವನ್ನು ಮಾಡಿಕೊಳ್ಳು
24 ವೆವು. ನನ್ನನ್ನು ಪ್ರೀತಿಸದೆ ಇರುವವನು ನನ್ನ ಮಾತುಗಳನ್ನು ಕೈಕೊಂಡು

---

[1] ಅಥವಾ, ಸತ್ಯವನ್ನು ತಿಳಿಸುವ.

ನಡೆಯುವದಿಲ್ಲ; ನೀವು ಆಲಿಸುವ ಮಾತು ನನ್ನದಲ್ಲ, ನನ್ನನ್ನು ಕಳುಹಿಸಿದ ತಂದೆಯ ಮಾತೇ.

ಈ ಮಾತುಗಳನ್ನು ನಾನು ಇನ್ನೂ ನಿಮ್ಮ ಬಳಿಯಲ್ಲಿರುವಾಗ ನಿಮಗೆ ಹೇಳಿದ್ದೇನೆ. 25 ಆದರೆ ಆ ಸಹಾಯಕನು, ಅಂದರೆ ನನ್ನ ಹೆಸರಿನಲ್ಲಿ ತಂದೆಯು ಕಳುಹಿಸಿಕೊಡುವ ಪವಿ 26 ತ್ರಾತ್ಮನೇ, ನಿಮಗೆ ಎಲ್ಲವನ್ನು ಉಪದೇಶಿಸಿ ನಾನು ನಿಮಗೆ ಹೇಳಿದ್ದನ್ನೆಲ್ಲಾ ನಿಮ್ಮ ನೆನಪಿಗೆ ತರುವನು.

ಶಾಂತಿಯನ್ನು ನಿಮಗೆ ಬಿಟ್ಟುಹೋಗುತ್ತೇನೆ, ನನ್ನಲ್ಲಿರುವಂಥ ಶಾಂತಿಯನ್ನು ನಿಮಗೆ 27 ಕೊಡುತ್ತೇನೆ; ಲೋಕವು ಕೊಡುವ ರೀತಿಯಿಂದ ನಾನು ನಿಮಗೆ ಕೊಡುವದಿಲ್ಲ. ನಿಮ್ಮ ಹೃದಯವು ಕಳವಳಗೊಳ್ಳದಿರಲಿ, ಹೆದರದಿರಲಿ. ನಾನು ಹೋಗಿ ತಿರಿಗಿ 28 ನಿಮ್ಮ ಬಳಿಗೆ ಬರುತ್ತೇನೆಂದು ನಿಮಗೆ ಹೇಳಿದ್ದನ್ನು ಕೇಳಿದಿರಿ. ನೀವು ನನ್ನನ್ನು ಪ್ರೀತಿಸುವವರಾಗಿದ್ದರೆ ನಾನು ತಂದೆಯ ಬಳಿಗೆ ಹೋಗುವ ವಿಷಯದಲ್ಲಿ ಸಂತೋಷ ಪಡುತ್ತಿದ್ದಿರಿ; ಯಾಕಂದರೆ ತಂದೆಯು ನನಗಿಂತ ದೊಡ್ಡವನು. ಅದೆಲ್ಲಾ ನಡೆಯು 29 ವಾಗ ನೀವು ನನ್ನನ್ನು ನಂಬುವಂತೆ ಅದು ನಡೆಯುವದಕ್ಕಿಂತ ಮುಂಚೆಯೇ ಈಗ ನಿಮಗೆ ಹೇಳಿದ್ದೇನೆ. ಇನ್ನು ನಾನು ನಿಮ್ಮ ಸಂಗಡ ಬಹಳ ಮಾತುಗಳನ್ನಾಡು 30 ವದಿಲ್ಲ, ಯಾಕಂದರೆ ಇಹಲೋಕಾಧಿಪತಿಯು ಬರುತ್ತಾನೆ. ಅವನಿಗೆ ಸಮ್ಮಂಥ ಪಟ್ಟದ್ದು ಯಾವದೊಂದೂ ನನ್ನಲ್ಲಿಲ್ಲ; ಆದಾಗ್ಯೂ ನಾನು ತಂದೆಯನ್ನು ಪ್ರೀತಿಸು 31 ತ್ತೇನೆಂಬುವದು ಲೋಕಕ್ಕೆ ತಿಳಿದಿರಬೇಕೆಂದು ತಂದೆಯು ನನಗೆ ಕೊಟ್ಟ ಆಜ್ಞೆಯ ಮೇರೆಗೆ ಇದನ್ನು ಮಾಡುತ್ತೇನೆ. ಏಳಿರಿ, ಇಲ್ಲಿಂದ ಹೋಗೋಣ.

**15** ನಾನೇ ನಿಜವಾದ ದ್ರಾಕ್ಷೇಬಳ್ಳಿ. ನನ್ನ ತಂದೆ ತೋಟಗಾರನು. ನನ್ನಲ್ಲಿದ್ದು ಫಲ 2 ಕೊಡದಿರುವ ಪ್ರತಿಯೊಂದು ಕೊಂಬೆಯನ್ನು ಆತನು ತೆಗೆದುಹಾಕುತ್ತಾನೆ; ಫಲ ಕೊಡುವ ಪ್ರತಿಯೊಂದು ಕೊಂಬೆಯು ಹೆಚ್ಚು ಫಲ ಕೊಡುವ ಹಾಗೆ, ಅದನ್ನು ಶುದ್ಧಿಮಾಡು ತ್ತಾನೆ. ನಾನು ನಿಮಗೆ ಹೇಳಿದ ವಾಕ್ಯದ ದೆಸೆಯಿಂದ ಈಗ ಶುದ್ಧರಾಗಿದ್ದೀರಿ. 3 ನೀವು ನನ್ನಲ್ಲಿ ನೆಲೆಗೊಂಡಿರ್ರಿ, ನಾನೂ ನಿಮ್ಮಲ್ಲಿ ನೆಲೆಗೊಂಡಿರುವೆನು. ಕೊಂಬೆಯು 4 ಬಳ್ಳಿಯಲ್ಲಿ ನೆಲೆಗೊಂಡಿರದಿದ್ದರೆ ಹ್ಯಾಗೆ ತನ್ನಷ್ಟಕ್ಕೆ ತಾನೇ ಫಲ ಕೊಡಲಾರದೋ, ಹಾಗೆಯೇ ನೀವು ನನ್ನಲ್ಲಿ ನೆಲೆಗೊಂಡಿರದಿದ್ದರೆ ಫಲ ಕೊಡಲಾರಿರಿ. ನಾನು ದ್ರಾಕ್ಷೇಬಳ್ಳಿ, 5 ನೀವು ಕೊಂಬೆಗಳು; ಒಬ್ಬನು ನನ್ನಲ್ಲಿಯೂ ನಾನು ಅವನಲ್ಲಿಯೂ ನೆಲೆಗೊಂಡಿದ್ದರೆ ಅವನೇ ಬಹಳ ಫಲ ಕೊಡುವನು; ನೀವು ನನ್ನನ್ನು ಬಿಟ್ಟು ಏನೂ ಮಾಡಲಾರಿರಿ. ಯಾವನು ನನ್ನಲ್ಲಿ ನೆಲೆಗೊಂಡಿರುವದಿಲ್ಲವೋ ಅವನು ಆ ಕೊಂಬೆಯಂತೆ ಹೊರಕ್ಕೆ 6 ಬಿಸಾಡಲ್ಪಟ್ಟು ಒಣಗಿಹೋಗುವನು; ಅಂಥ ಕೊಂಬೆಗಳನ್ನು ಕೂಡಿಸಿ ಬೆಂಕಿಯಲ್ಲಿ ಹಾಕುತ್ತಾರೆ, ಅವು ಸುಟ್ಟುಹೋಗುತ್ತವೆ. ನೀವು ನನ್ನಲ್ಲಿಯೂ ನನ್ನ ವಾಕ್ಯಗಳು 7 ನಿಮ್ಮಲ್ಲಿಯೂ ನೆಲೆಗೊಂಡಿದ್ದರೆ ಏನು ಬೇಕಾದರೂ ಬೇಡಿಕೊಳ್ಳಿರಿ, ಅದು ನಿಮಗೆ ದೊರೆಯುವದು. ನೀವು ಬಹಳ ಫಲ ಕೊಡುವದರಿಂದಲೇ ನನ್ನ ತಂದೆಗೆ ಮಹಿಮೆ 8 ಉಂಟಾಗುವದು; ಮತ್ತು ನನ್ನ ಶಿಷ್ಯರಾಗುವಿರಿ.

ತಂದೆ ನನ್ನನ್ನು ಪ್ರೀತಿಸಿದ ಹಾಗೆಯೇ ನಾನೂ ನಿಮ್ಮನ್ನು ಪ್ರೀತಿಸಿದ್ದೇನೆ; ನನ್ನ ಪ್ರೀತಿ 9

10 ಯಲ್ಲಿ ನೆಲೆಗೊಂಡಿರ್ರಿ. ನಾನು ನನ್ನ ತಂದೆಯ ಆಜ್ಞೆಗಳನ್ನು ಕೈಕೊಂಡು ನಡೆದು
ಆತನ ಪ್ರೀತಿಯಲ್ಲಿ ನೆಲೆಗೊಂಡಿರುವ ಮೇರೆಗೆ, ನೀವು ನನ್ನ ಆಜ್ಞೆಗಳನ್ನು ಕೈಕೊಂಡು
ನಡೆದರೆ ನನ್ನ ಪ್ರೀತಿಯಲ್ಲಿ ನೆಲೆಗೊಂಡಿರುವಿರಿ.

11 ನನ್ನಲ್ಲಿರುವ ಆನಂದವು ನಿಮ್ಮಲ್ಲಿಯೂ ಇರಬೇಕೆಂತಲೂ ನಿಮ್ಮ ಆನಂದವು ಪರಿಪೂರ್ಣ
12 ವಾಗಬೇಕೆಂತಲೂ ಇದನ್ನೆಲ್ಲಾ ನಿಮಗೆ ಹೇಳಿದ್ದೇನೆ. ನಾನು ನಿಮ್ಮನ್ನು ಪ್ರೀತಿಸಿದ
ಮೇರೆಗೆ ನೀವು ಒಬ್ಬರನ್ನೊಬ್ಬರು ಪ್ರೀತಿಸಬೇಕೆಂಬುವದೇ ನಾನು ಕೊಡುವ ಆಜ್ಞೆ
13 ಯಾಗಿದೆ. ಪ್ರಾಣವನ್ನೇ ಸ್ನೇಹಿತರಿಗೋಸ್ಕರ ಕೊಡುವ ಪ್ರೀತಿಗಿಂತ ಹೆಚ್ಚಿನ ಪ್ರೀತಿಯು
14 ಯಾವದೂ ಇಲ್ಲ. ನಾನು ನಿಮಗೆ ಕೊಟ್ಟ ಆಜ್ಞೆಗಳಿಗೆ ಸರಿಯಾಗಿ ನೀವು ನಡೆದರೆ
15 ನೀವು ನನ್ನ ಸ್ನೇಹಿತರು. ಇನ್ನು ಮೇಲೆ ನಾನು ನಿಮ್ಮನ್ನು ಆಳುಗಳನ್ನುವದಿಲ್ಲ; ಯಜ
ಮಾನನು ಮಾಡುವಂಥಾದ್ದು ಆಳಿಗೆ ತಿಳಿಯುವದಿಲ್ಲ. ನಿಮ್ಮನ್ನು ಸ್ನೇಹಿತರೆಂದು ಹೇಳಿ
16 ದ್ದೇನೆ; ತಂದೆಯ ಕಡೆಯಿಂದ ನಾನು ಕೇಳಿದ್ದನ್ನೆಲ್ಲಾ ನಿಮಗೆ ತಿಳಿಸಿದ್ದೇನೆ. ನೀವು
ನನ್ನನ್ನು ಆರಿಸಿ ತೆಗೆದುಕೊಂಡಿಲ್ಲ; ನಾನು ನಿಮ್ಮನ್ನು ಆರಿಸಿ ತೆಗೆದುಕೊಂಡೆನು.
ನೀವು ಹೊರಟುಹೋಗಿ ಫಲಕೊಡುವವರಾಗಬೇಕೆಂತಲೂ ನೀವು ಕೊಡುವ ಫಲವು
ನಿಲ್ಲುವಂಥಾದ್ದಾಗಬೇಕೆಂತಲೂ ನಿಮ್ಮನ್ನು ನೇಮಿಸಿದ್ದೇನೆ. ಹೀಗಿರಲಾಗಿ, ನನ್ನ ಹೆಸರಿನಲ್ಲಿ
ತಂದೆಯನ್ನು ಏನೇನು ಬೇಡಿಕೊಳ್ಳುವಿರೋ ಅದನ್ನು ಆತನು ನಿಮಗೆ ಕೊಡುವನು.

17 ನೀವು ಒಬ್ಬರನ್ನೊಬ್ಬರು ಪ್ರೀತಿಸಬೇಕೆಂತಲೇ ಇವುಗಳನ್ನು ನಿಮಗೆ ಆಜ್ಞಾಪಿಸುತ್ತೇನೆ.
18 ಲೋಕವು ನಿಮ್ಮ ಮೇಲೆ ದ್ವೇಷ ಮಾಡುವದಾದರೆ, ಅದು ಮೊದಲು ನನ್ನ ಮೇಲೆ
19 ದ್ವೇಷ ಮಾಡಿತೆಂದು ತಿಳುಕೊಳ್ಳಿರಿ. ನೀವು ಲೋಕದ ಕಡೆಯವರಾಗಿರುತ್ತಿದ್ದರೆ
ಲೋಕವು ನಿಮ್ಮ ಮೇಲೆ ತನ್ನವರೆಂದು ಮಮತೆ ಇಡುತ್ತಿತ್ತು; ಆದರೆ ನೀವು ಲೋಕದ
ಕಡೆಯವರಲ್ಲದೆ ಇರುವದರಿಂದಲೂ ನಾನು ನಿಮ್ಮನ್ನು ಲೋಕದೊಳಗಿಂದ ಆರಿಸಿ ತೆಗೆದು
20 ಕೊಂಡಿರುವದರಿಂದಲೂ ಲೋಕವು ನಿಮ್ಮ ಮೇಲೆ ದ್ವೇಷ ಮಾಡುತ್ತದೆ. ಆಳು ತನ್ನ
ಯಜಮಾನನಿಗಿಂತ ಅಧಿಕನಲ್ಲವೆಂಬದಾಗಿ ನಾನು ನಿಮಗೆ ಹೇಳಿದ ಮಾತನ್ನು ಜ್ಞಾಪಕ
ಮಾಡಿಕೊಳ್ಳಿರಿ. ಅವರು ನನ್ನನ್ನು ಹಿಂಸೆಪಡಿಸಿದರೆ ನಿಮ್ಮನ್ನು ಸಹ ಹಿಂಸೆಪಡಿಸುವರು;
ಅವರು ನನ್ನ ಮಾತನ್ನು ಕೈಕೊಂಡು ನಡೆದರೆ ನಿಮ್ಮ ಮಾತನ್ನು ಸಹ ಕೈಕೊಂಡು
21 ನಡೆಯುವರು. ಆದರೆ ಅವರು ನನ್ನನ್ನು ಕಳುಹಿಸಿಕೊಟ್ಟವನನ್ನು ತಿಳಿಯದವರಾದ್ದರಿಂದ
22 ಇದನ್ನೆಲ್ಲಾ ನನ್ನ ಹೆಸರಿನ ನಿಮಿತ್ತ ನಿಮಗೆ ಮಾಡುವರು. ನಾನು ಬಂದು ಅವರ
ಕೂಡ ಮಾತಾಡದಿದ್ದರೆ ಅವರಿಗೆ ಪಾಪವು ಇರುತ್ತಿದ್ದಿಲ್ಲ; ಆದರೆ ಅವರು ಮಾಡಿದ
23 ಪಾಪಕ್ಕಾಗಿ ಅವರಿಗೆ ಈಗ ನೆವವಿಲ್ಲ. ನನ್ನ ಮೇಲೆ ದ್ವೇಷ ಮಾಡುವವನು ನನ್ನ
24 ತಂದೆಯ ಮೇಲೆಯೂ ದ್ವೇಷ ಮಾಡುವವನಾಗಿದ್ದಾನೆ. ಮತ್ತ್ಯಾರೂ ನಡಸದ ಕ್ರಿಯೆ
ಗಳನ್ನು ನಾನು ಅವರಲ್ಲಿ ನಡಸದೆ ಇದ್ದರೆ ಅವರಿಗೆ ಪಾಪವು ಇರುತ್ತಿದ್ದಿಲ್ಲ; ಆದರೆ ಈಗ
ಅವರು ನೋಡಿದ್ದಾರೆ, ಆದಾಗ್ಯೂ ನನ್ನ ಮೇಲೆಯೂ ನನ್ನ ತಂದೆಯ ಮೇಲೆಯೂ
25 ದ್ವೇಷ ಮಾಡಿದ್ದಾರೆ. ಅವರು ನನ್ನ ಮೇಲೆ ಸುಮ್ಮನೆ ದ್ವೇಷ ಮಾಡಿದರು ಎಂಬದಾಗಿ[1]
ಅವರ ಧರ್ಮಶಾಸ್ತ್ರದಲ್ಲಿ ಬರೆದಿರುವ ಮಾತು ನೆರವೇರುವಂತೆ ಹೀಗಾಯಿತು.

[1] ಕೀರ್ತನೆ ೭, ೪; ೩೫, ೧೯; ೬೯, ೪ ಇವೇ ಮುಂತಾದ ವಚನಗಳಲ್ಲಿ.

ಆದರೆ ತಂದೆಯ ಬಳಿಯಿಂದ ನಾನು ನಿಮಗೆ ಕಳುಹಿಸಿಕೊಡುವ ಸಹಾಯಕನು, 26
ಅಂದರೆ ತಂದೆಯ ಬಳಿಯಿಂದ ಹೊರಡುವ ಸತ್ಯದ ಆತ್ಮನು, ಬಂದಾಗ ಆತನು ನನ್ನನ್ನು
ಕುರಿತು ಸಾಕ್ಷಿಹೇಳುವನು. ಮೊದಲಿನಿಂದ ನನ್ನ ಸಂಗಡ ಇದ್ದ ನೀವೂ ಸಾಕ್ಷಿಗಳಾಗಿದ್ದೀರಿ. 27

ನೀವು ಧೈರ್ಯಗೆಟ್ಟು ಹಿಂಜರಿಯಬಾರದೆಂದು ಇದನ್ನೆಲ್ಲಾ ನಿಮಗೆ ಹೇಳಿದ್ದೇನೆ. **16**
ನಿಮಗೆ ಬಹಿಷ್ಕಾರ ಹಾಕುವರು; ಅದಲ್ಲದೆ ನಿಮ್ಮನ್ನು ಕೊಲ್ಲುವವನು ತಾನು ದೇವರಿಗೆ 2
ಯಜ್ಞವನ್ನು ಮಾಡಿದ್ದೇನೆಂದು ನೆನಸುವ ಕಾಲ ಬರುತ್ತದೆ. ಅವರು ತಂದೆಯನ್ನಾದರೂ 3
ನನ್ನನ್ನಾದರೂ ತಿಳಿಯದವರಾಗಿರುವದರಿಂದ ಇಂಥಾದ್ದನ್ನು ನಿಮಗೆ ಮಾಡುವರು.
ಆ ಕಾಲ ಬಂದಾಗ, ಆತನು ನಮಗೆ ಇಂಥಿಂಥಾದ್ದನ್ನು ಹೇಳಿದನಲ್ಲಾ ಎಂದು ನೀವು 4
ನೆನಪಿಗೆ ತರುವಂತೆ ನಿಮ್ಮ ಸಂಗಡ ಈ ಮಾತುಗಳನ್ನು ಆಡಿದ್ದೇನೆ.

ನಾನು ನಿಮ್ಮ ಸಂಗಡ ಇದ್ದರಿಂದ ಮೊದಲು ಇವುಗಳನ್ನು ನಿಮಗೆ ಹೇಳಲಿಲ್ಲ.
ಆದರೆ ಈಗ ನಾನು ನನ್ನನ್ನು ಕಳುಹಿಸಿಕೊಟ್ಟವನ ಬಳಿಗೆ ಹೋಗುತ್ತೇನೆ. ನೀನು 5
ಎಲ್ಲಿಗೆ ಹೋಗುತ್ತೀ ಎಂದು ನಿಮ್ಮಲ್ಲಿ ಒಬ್ಬನಾದರೂ ನನ್ನನ್ನು ಕೇಳುವದಿಲ್ಲ; ಆದರೆ 6
ನಾನು ಈ ಮಾತುಗಳನ್ನು ನಿಮಗೆ ಹೇಳಿದ್ದರಿಂದ ನಿಮ್ಮ ಹೃದಯವು ದುಃಖದಿಂದ
ತುಂಬಿಯದೆ. ಆದರೂ ನಾನು ನಿಮಗೆ ಸತ್ಯವನ್ನು ಹೇಳುತ್ತೇನೆ, ಕೇಳಿರಿ; ನಾನು 7
ಹೋಗುವದು ನಿಮಗೆ ಹಿತಕರವಾಗಿದೆ; ಹ್ಯಾಗಂದರೆ ನಾನು ಹೋಗದಿದ್ದರೆ ಆ ಸಹಾ
ಯಕನು ನಿಮ್ಮ ಬಳಿಗೆ ಬರುವದಿಲ್ಲ; ನಾನು ಹೋದರೆ ಆತನನ್ನು ನಿಮ್ಮ ಬಳಿಗೆ ಕಳು
ಹಿಸಿಕೊಡುತ್ತೇನೆ. ಆತನು ಬಂದು, ಪಾಪ ನೀತಿ ನ್ಯಾಯತೀರ್ವಿಕೆ ಈ ವಿಷಯಗಳಲ್ಲಿ 8
ಲೋಕಕ್ಕೆ ಅರುಹನ್ನು ಹುಟ್ಟಿಸುವನು. ಅವರು ನನ್ನನ್ನು ನಂಬದೆ ಇರುವದರಿಂದ 9
ಪಾಪದ ವಿಷಯದಲ್ಲಿಯೂ, ನಾನು ತಂದೆಯ ಬಳಿಗೆ ಹೋಗಿ ಇನ್ನು ಮೇಲೆ ನಿಮಗೆ 10
ಕಾಣಿಸದೆ ಇರುವದರಿಂದ ನೀತಿಯ ವಿಷಯದಲ್ಲಿಯೂ, ಇಹಲೋಕಾಧಿಪತಿಗೆ ನ್ಯಾಯ 11
ತೀರ್ವಿಕೆಯಾದ್ದರಿಂದ ನ್ಯಾಯತೀರ್ವಿಕೆಯ ವಿಷಯದಲ್ಲಿಯೂ ಲೋಕಕ್ಕೆ ಅರುಹನ್ನು
ಹುಟ್ಟಿಸುವನು.

ನಾನು ನಿಮಗೆ ಹೇಳಬೇಕಾದದ್ದು ಇನ್ನೂ ಬಹಳ ಉಂಟು; ಆದರೆ ಸದ್ಯಕ್ಕೆ ಅದನ್ನು 12
ಗ್ರಹಿಸಲಾರಿರಿ. ಸತ್ಯದ ಆತ್ಮನು ಬಂದಾಗ ಆತನು ನಿಮ್ಮನ್ನು ನಡಸಿಕೊಂಡು ಹೋಗಿ 13
ಸಕಲ ವಿಷಯದಲ್ಲಿಯೂ ಸತ್ಯಕ್ಕೆ ಸೇರಿಸುವನು. ಆತನು ತನ್ನಷ್ಟಕ್ಕೆ ತಾನೇ ಮಾತಾ
ಡದೆ ಕೇಳಿದ ಮಾತುಗಳನ್ನೇ ಆಡುವನು; ಮತ್ತು ಮುಂದಾಗುವ ಸಂಗತಿಗಳನ್ನು
ನಿಮಗೆ ತಿಳಿಸುವನು. ಆತನು ನನ್ನದರೊಳಗಿಂದ ತೆಗೆದುಕೊಂಡು ನಿಮಗೆ ತಿಳಿಸುತ್ತಾ 14
ನನ್ನನ್ನೇ ಮಹಿಮೆಪಡಿಸುವನು. ತಂದೆಗೆ ಇರುವದೆಲ್ಲಾ ನನ್ನದು; ಆದದರಿಂದಲೇ 15
ನನ್ನದರೊಳಗಿಂದ ತೆಗೆದುಕೊಂಡು ನಿಮಗೆ ತಿಳಿಸುವನೆಂದು ಹೇಳಿದೆನು. ಸ್ವಲ್ಪಕಾಲ 16
ವಾದ ಮೇಲೆ ನಾನು ನಿಮಗೆ ಕಾಣುವದಿಲ್ಲ; ಅನಂತರ ಸ್ವಲ್ಪಕಾಲವಾದ ಮೇಲೆ ನನ್ನನ್ನು
ನೋಡುವಿರಿ ಅಂದನು.

ಇದನ್ನು ಕೇಳಿ ಆತನ ಶಿಷ್ಯರಲ್ಲಿ ಕೆಲವರು—ಇದೇನು ಈತನು ಹೇಳುವ ಮಾತು? 17
ಸ್ವಲ್ಪಕಾಲವಾದ ಮೇಲೆ ನಾನು ನಿಮಗೆ ಕಾಣುವದಿಲ್ಲ, ಅನಂತರ ಸ್ವಲ್ಪಕಾಲವಾದ
ಮೇಲೆ ನನ್ನನ್ನು ನೋಡುವಿರಿ ಅನ್ನುತ್ತಾನೆ; ಮತ್ತು ನಾನು ತಂದೆಯ ಬಳಿಗೆ ಹೋಗು

18 ವದರಿಂದ ಅನ್ನುತ್ತಾನೆ ಎಂದು ತಮ್ಮತಮ್ಮೊಳಗೆ ಮಾತಾಡಿಕೊಂಡು—ಸ್ವಲ್ಪಕಾಲವೆಂದು ಈತನು ಹೇಳುವ ಈ ಮಾತೇನು? ಏನು ಮಾತಾಡುತ್ತಾನೋ ನಮಗೆ ತಿಳಿಯದು
19 ಅಂದುಕೊಳ್ಳುತ್ತಿದ್ದರು. ಯೇಸು ತನ್ನನ್ನು ಕೇಳಬೇಕೆಂದಿದ್ದಾರೆಂದು ತಿಳಿದು, ಅವರಿಗೆ—ಸ್ವಲ್ಪಕಾಲವಾದ ಮೇಲೆ ನಾನು ನಿಮಗೆ ಕಾಣುವದಿಲ್ಲ, ಇನ್ನು ಸ್ವಲ್ಪಕಾಲವಾದ ಮೇಲೆ ನನ್ನನ್ನು ನೋಡುವಿರಿ ಎಂದು ನಾನು ಹೇಳಿದ್ದಕ್ಕೆ ನೀವು ನಿಮ್ಮನಿಮ್ಮೊಳಗೆ ವಿಚಾರಿಸಿ
20 ಕೊಳ್ಳುತ್ತೀರಾ? ನಿಮಗೆ ನಿಜನಿಜವಾಗಿ ಹೇಳುತ್ತೇನೆ, ನೀವು ಅಳುತ್ತಾ ಗೋಳಾಡುತ್ತಾ ಇರುವಿರಿ, ಆದರೆ ಲೋಕವು ಸಂತೋಷಿಸುವದು; ನಿಮಗೆ ದುಃಖವಾಗುವದು, ಆದರೆ
21 ನಿಮ್ಮ ದುಃಖವು ಹೋಗಿ ಆನಂದ ಬರುವದು. ಒಬ್ಬ ಸ್ತ್ರೀ ಹೆರುವಾಗ ತನ್ನ ಬೇನೆಯ ಕಾಲ ಬಂತೆಂದು ಆಕೆಗೆ ದುಃಖವಾಗುತ್ತದೆ; ಆದರೆ ಕೂಸನ್ನು ಹೆತ್ತ ಮೇಲೆ, ಲೋಕದಲ್ಲಿ
22 ಒಬ್ಬ ಮನುಷ್ಯನು ಹುಟ್ಟಿದನೆಂಬ ಆನಂದದಿಂದ ಆ ಬೇನೆಯನ್ನು ನೆನಸುವದಿಲ್ಲ. ಹಾಗೆಯೇ ನಿಮಗೂ ಈಗ ದುಃಖವಿದ್ದಾಗ್ಯೂ ನಾನು ನಿಮ್ಮನ್ನು ತಿರಿಗಿ ನೋಡುವೆನು, ಆಗ ನಿಮ್ಮ ಹೃದಯಕ್ಕೆ ಆನಂದವಾಗುವದು, ಮತ್ತು ನಿಮ್ಮ ಆನಂದವನ್ನು ಯಾರೂ ನಿಮ್ಮಿಂದ ತೆಗೆ
23 ಯುವದಿಲ್ಲ. ಆ ದಿನದಲ್ಲಿ ನೀವು ನನಗೆ ಯಾವ ಪ್ರಶ್ನೆಯನ್ನೂ ಮಾಡುವದಿಲ್ಲ.
ನಿಮಗೆ ನಿಜನಿಜವಾಗಿ ಹೇಳುತ್ತೇನೆ, ನೀವು ತಂದೆಯನ್ನು ಏನಾದರೂ ಬೇಡಿಕೊಂಡರೆ
24 ಅದನ್ನು ಆತನು ನನ್ನ ಹೆಸರಿನ ಮೇಲೆ ನಿಮಗೆ ಕೊಡುವನು. ನೀವು ಇದುವರೆಗೆ ನನ್ನ ಹೆಸರಿನ ಮೇಲೆ ಯಾವದೊಂದನ್ನೂ ಬೇಡಿಕೊಂಡಿಲ್ಲ; ಬೇಡಿಕೊಳ್ಳಿರಿ, ನಿಮಗೆ ಸಿಕ್ಕುವದು; ಆಗ ನಿಮ್ಮ ಆನಂದವು ಪರಿಪೂರ್ಣವಾಗುವದು.

25 ಈ ಸಂಗತಿಗಳನ್ನು ಗೂಢಾರ್ಥವಾಗಿ ನಿಮಗೆ ಹೇಳಿದ್ದೇನೆ; ಆದರೆ ಇನ್ನು ಮೇಲೆ ಸಾಮ್ಯರೂಪವಾಗಿ ನಿಮ್ಮ ಸಂಗಡ ಮಾತಾಡದೆ ತಂದೆಯ ವಿಷಯದಲ್ಲಿ ಸ್ಪಷ್ಟವಾಗಿ ತಿಳಿ
26 ಸುವ ಕಾಲ ಬರುತ್ತದೆ. ಆ ದಿನದಲ್ಲಿ ನನ್ನ ಹೆಸರಿನ ಮೇಲೆ ಬೇಡಿಕೊಳ್ಳುವಿರಿ. ನಾನು
27 ತಂದೆಯನ್ನು ನಿಮಗೋಸ್ಕರ ಕೇಳಿಕೊಳ್ಳುವೆನೆಂತ ನಿಮಗೆ ಹೇಳುವದಿಲ್ಲ; ನೀವು ನನ್ನ ಮೇಲೆ ಮಮತೆಯಿಟ್ಟು ನನ್ನನ್ನು ತಂದೆಯ ಬಳಿಯಿಂದ ಹೊರಟುಬಂದವನೆಂದು ನಂಬಿ
28 ದ್ದರಿಂದ ತಂದೆಯು ತಾನೇ ನಿಮ್ಮ ಮೇಲೆ ಮಮತೆ ಇಡುತ್ತಾನಲ್ಲವೇ. ತಂದೆಯ ಬಳಿ ಯಿಂದ ಹೊರಟು ಈ ಲೋಕಕ್ಕೆ ಬಂದಿದ್ದೇನೆ; ಇನ್ನು ಲೋಕವನ್ನು ಬಿಟ್ಟು ತಂದೆಯ ಬಳಿಗೆ ಹೋಗುತ್ತೇನೆ ಅಂದನು.

29 ಅದಕ್ಕೆ ಶಿಷ್ಯರು—ನೀನು ಹೇಳುವ ಸಂಗತಿಯನ್ನು ಈಗ ಗೂಢಾರ್ಥವಾಗಿ ಹೇಳದೆ,
30 ಸ್ಪಷ್ಟವಾಗಿ ಮಾತಾಡುತ್ತೀಯಲ್ಲಾ; ನೀನು ಸಮಸ್ತವನ್ನು ತಿಳಿದವನೆಂದೂ ನಿನಗೆ ಪ್ರಶ್ನೆ ಮಾಡಬೇಕಾದ ಅವಶ್ಯವಿಲ್ಲವೆಂದೂ ಈಗ ತಿಳಿಯಿತು; ಇದರಿಂದ ನಿನ್ನನ್ನು ದೇವರ ಬಳಿ
31 ಯಿಂದ ಬಂದವನೆಂದು ನಂಬುತ್ತೇವೆ ಅಂದದ್ದಕ್ಕೆ, ಯೇಸು—ಈಗ ನಂಬುತ್ತೀರೋ?
32 ನೋಡಿರಿ, ನಿಮ್ಮಲ್ಲಿ ಒಬ್ಬೊಬ್ಬನು ತನ್ನತನ್ನ ಸ್ಥಳಕ್ಕೆ ಚದರಿಹೋಗಿ ನನ್ನನ್ನು ಒಂಟಿಗನಾಗಿ ಬಿಡುವ ಕಾಲ ಬರುವದು, ಈಗ ಬಂದದೆ. ಆದರೆ ನಾನು ಒಂಟಿಗನಲ್ಲ, ತಂದೆಯು ನನ್ನ
33 ಸಂಗಡ ಇದ್ದಾನೆ. ನೀವು ನನ್ನಲ್ಲಿದ್ದು ಮನಶ್ಶಾಂತಿಯನ್ನು ಹೊಂದಿದವರಾಗಿರಬೇಕೆಂದು ಇದನ್ನೆಲ್ಲಾ ನಿಮಗೆ ಹೇಳಿದ್ದೇನೆ. ಲೋಕದಲ್ಲಿ ನಿಮಗೆ ಸಂಕಟ ಉಂಟು; ಧೈರ್ಯವಾಗಿರಿ, ನಾನು ಲೋಕವನ್ನು ಜಯಿಸಿದ್ದೇನೆ ಎಂದು ಹೇಳಿದನು.

ಯೇಸು ತನ್ನ ಶಿಷ್ಯರಿಗಾಗಿಯೂ ತನ್ನ ಎಲ್ಲಾ ಭಕ್ತರಿಗಾಗಿಯೂ ದೇವರಿಗೆ ಮಾಡಿದ ವಿಜ್ಞಾಪನೆ.

ಯೇಸು ಈ ಮಾತುಗಳನ್ನಾಡಿದ ಮೇಲೆ ಆಕಾಶದ ಕಡೆಗೆ ಕಣ್ಣೆತ್ತಿ ಹೇಳಿದ್ದೇನಂದರೆ— **17**
ತಂದೆಯೇ, ಕಾಲ ಬಂದದೆ; ನಿನ್ನ ಮಗನನ್ನು ಮಹಿಮೆಪಡಿಸು, ಆಗ ಮಗನು ನಿನ್ನನ್ನು
ಮಹಿಮೆಪಡಿಸುವದಕ್ಕಾಗುವದು. ನೀನು ಅವನಿಗೆ ಯಾರ್ಯಾರನ್ನು ಕೊಟ್ಟಿದ್ದೀಯೋ, 2
ಅವರೆಲ್ಲರಿಗೆ ಅವನು ನಿತ್ಯಜೀವವನ್ನು ಕೊಡಬೇಕೆಂದು ಅವನಿಗೆ ಎಲ್ಲಾ ಮನುಷ್ಯರ
ಮೇಲೆ ಅಧಿಕಾರವನ್ನು ಕೊಟ್ಟೆಯಲ್ಲಾ. ಒಬ್ಬನೇ ಸತ್ಯದೇವರಾಗಿರುವ ನಿನ್ನನ್ನೂ ನೀನು 3
ಕಳುಹಿಸಿಕೊಟ್ಟ ಯೇಸು ಕ್ರಿಸ್ತನನ್ನೂ ತಿಳಿಯುವದೇ ನಿತ್ಯಜೀವವು. ಮಾಡಬೇಕೆಂದು 4
ನೀನು ನನಗೆ ಕೊಟ್ಟ ಕೆಲಸವನ್ನು ನಾನು ನೆರವೇರಿಸಿ, ನಿನ್ನನ್ನು ಭೂಲೋಕದಲ್ಲಿ ಮಹಿಮೆ
ಪಡಿಸಿದೆನು. ಈಗ, ತಂದೆಯೇ, ನೀನು ನಿನ್ನ ಬಳಿಯಲ್ಲಿ ನನ್ನನ್ನು ಮಹಿಮೆಪಡಿಸು; ಲೋಕ 5
ಉಂಟಾಗುವದಕ್ಕಿಂತ ಮುಂಚೆ ನಿನ್ನ ಬಳಿಯಲ್ಲಿ ನನಗಿದ್ದ ಮಹಿಮೆಯಿಂದಲೇ ನನ್ನನ್ನು
ಮಹಿಮೆಪಡಿಸು.

ಲೋಕದೊಳಗಿಂದ ನೀನು ನನಗೆ ಕೊಟ್ಟ ಮನುಷ್ಯರಿಗೆ ನಿನ್ನ ಹೆಸರನ್ನು ತಿಳಿಯಪಡಿ 6
ಸಿದೆನು. ಇವರು ನಿನ್ನವರಾಗಿದ್ದರು, ನೀನು ಇವರನ್ನು ನನಗೆ ಕೊಟ್ಟೆ; ಮತ್ತು ಇವರು
ನಿನ್ನ ವಾಕ್ಯವನ್ನು ಕೈಕೊಂಡು ನಡೆದಿದ್ದಾರೆ. ನೀನು ನನಗೆ ಕೊಟ್ಟದ್ದೆಲ್ಲಾ ನಿನ್ನಿಂದಲೇ 7
ಬಂದದೆ ಎಂದು ಈಗ ಇವರು ತಿಳುಕೊಂಡಿದ್ದಾರೆ. ಹ್ಯಾಗಂದರೆ ನೀನು ನನಗೆ ಕೊಟ್ಟ 8
ಮಾತುಗಳನ್ನು ನಾನು ಇವರಿಗೆ ಕೊಟ್ಟಿದ್ದೇನೆ; ಇವರು ಆ ಮಾತುಗಳನ್ನು ಕೈಕೊಂಡು
ನನ್ನನ್ನು ನಿನ್ನ ಬಳಿಯಿಂದ ಹೊರಟುಬಂದವನೆಂದು ನಿಜವಾಗಿ ತಿಳಿದು, ನೀನೇ ನನ್ನನ್ನು
ಕಳುಹಿಸಿಕೊಟ್ಟಿರುವದಾಗಿ ನಂಬಿದ್ದಾರೆ. ನಾನು ಇವರಿಗೋಸ್ಕರ ಕೇಳಿಕೊಳ್ಳುತ್ತೇನೆ; 9
ಲೋಕಕ್ಕೋಸ್ಕರ ಕೇಳಿಕೊಳ್ಳದೆ ನೀನು ನನಗೆ ಕೊಟ್ಟವರಗೋಸ್ಕರವೇ ಕೇಳಿಕೊಳ್ಳು
ತ್ತೇನೆ; ನಿನ್ನವರಾಗಿದ್ದಾರೆ. ನನ್ನದೆಲ್ಲಾ ನಿನ್ನದೇ, ನಿನ್ನದೆಲ್ಲಾ ನನ್ನದೇ; ಮತ್ತು ಇವರಿಂದ 10
ನನಗೆ ಮಹಿಮೆ ಉಂಟಾಗಿದೆ. ಇನ್ನು ನಾನು ಲೋಕದಲ್ಲಿ ಇರುವದಿಲ್ಲ, ಇವರು 11
ಲೋಕದಲ್ಲಿ ಇರುತ್ತಾರೆ, ನಾನು ನಿನ್ನ ಬಳಿಗೆ ಬರುತ್ತೇನೆ. ಪವಿತ್ರನಾದ ತಂದೆಯೇ,
ನಾವು ಒಂದಾಗಿರುವ ಹಾಗೆ ಇವರೂ ಒಂದಾಗಿರಬೇಕೆಂದು ನೀನು ನನಗೆ ಕೊಟ್ಟ ನಿನ್ನ
ಹೆಸರಿನಲ್ಲಿ ಇವರನ್ನು ಕಾಯಬೇಕು. ನಾನು ಇವರ ಸಂಗಡ ಇದ್ದಾಗ, ನೀನು ನನಗೆ 12
ಕೊಟ್ಟಿರುವ ನಿನ್ನ ಹೆಸರಿನಲ್ಲಿ ಇವರನ್ನು ಕಾಯುತ್ತಾ ಬಂದೆನು, ಇವರನ್ನು ಕಾಪಾಡಿದೆನು;
ಶಾಸ್ತ್ರದ ಮಾತು ನೆರವೇರುವಂತೆ ನಾಶಕ್ಕೆ ಗುರಿಯಾದ ಆ ಮನುಷ್ಯನೇ ಹೊರತು ಇವ
ರಲ್ಲಿ ಮತ್ತಾರೂ ನಾಶವಾಗಲಿಲ್ಲ. ಆದರೆ ಈಗ ನಿನ್ನ ಬಳಿಗೆ ಬರುವವನಾಗಿದ್ದೇನೆ; 13
ಆದದರಿಂದ ಇವರಲ್ಲಿ ನನ್ನ ಆನಂದವು ಪರಿಪೂರ್ಣವಾಗಿರುವಂತೆ, ಲೋಕದಲ್ಲಿದ್ದು ಈ
ಮಾತುಗಳನ್ನು ಆಡುತ್ತೇನೆ. ನಾನು ನಿನ್ನ ವಾಕ್ಯವನ್ನು ಇವರಿಗೆ ಕೊಟ್ಟಿದ್ದೇನೆ; ನಾನು 14
ಲೋಕದವನಲ್ಲದೆ ಇರುವ ಪ್ರಕಾರ ಇವರೂ ಲೋಕದವರಲ್ಲ; ಆದಕಾರಣ ಲೋಕವು
ಇವರ ಮೇಲೆ ದ್ವೇಷ ಮಾಡಿ ಅದೆ. ಇವರನ್ನು ಲೋಕದೊಳಗಿಂದ ತೆಗೆದುಕೊಂಡು 15
ಹೋಗಬೇಕೆಂದು ನಾನು ಕೇಳಿಕೊಳ್ಳುವದಿಲ್ಲ; ಕೆಡಕನಿಂದ ತಪ್ಪಿಸಿ ಕಾಪಾಡಬೇಕೆಂದು
ಕೇಳಿಕೊಳ್ಳುತ್ತೇನೆ. ನಾನು ಲೋಕದವನಲ್ಲದೆ ಇರುವ ಪ್ರಕಾರ ಇವರು ಲೋಕ 16

17 ದವರಲ್ಲ. ಇವರನ್ನು ಸತ್ಯದಲ್ಲಿ ಸೇರಿಸಿ ಪ್ರತಿಷ್ಠೆ ಪಡಿಸು; ನಿನ್ನ ವಾಕ್ಯವೇ ಸತ್ಯವು.
18 ನೀನು ನನ್ನನ್ನು ಲೋಕಕ್ಕೆ ಕಳುಹಿಸಿಕೊಟ್ಟಂತೆ ನಾನೂ ಇವರನ್ನು ಲೋಕಕ್ಕೆ ಕಳುಹಿಸಿ
19 ಕೊಟ್ಟೆನು. ಇವರು ನಿಜವಾಗಿ ಪ್ರತಿಷ್ಠಿತರಾಗಬೇಕೆಂದು ಇವರಿಗೋಸ್ಕರ ನಾನು ನನ್ನನ್ನು ಪ್ರತಿಷ್ಠೆಪಡಿಸಿಕೊಳ್ಳುತ್ತೇನೆ.

20 ಆದರೆ ಇವರಿಗೋಸ್ಕರ ಮಾತ್ರವಲ್ಲದೆ, ಇವರ ವಾಕ್ಯದಿಂದ ನನ್ನನ್ನು ನಂಬುವವರಿ
21 ಗೋಸ್ಕರ ಸಹ ಕೇಳಿಕೊಳ್ಳುತ್ತೇನೆ. ನೀನು ನನ್ನನ್ನು ಕಳುಹಿಸಿಕೊಟ್ಟಿದ್ದೀ ಎಂದು ಲೋಕವು ನಂಬುವದಕ್ಕಾಗಿ ಅವರೆಲ್ಲರೂ ಒಂದಾಗಿರಬೇಕೆಂತಲೂ ತಂದೆಯೇ, ನೀನು ನನ್ನಲ್ಲಿಯೂ ನಾನು ನಿನ್ನಲ್ಲಿಯೂ ಇರುವ ಪ್ರಕಾರ ಅವರೂ ನಮ್ಮಲ್ಲಿ ಇರಬೇಕೆಂತಲೂ
22 ಕೇಳಿಕೊಳ್ಳುತ್ತೇನೆ. ನಾವು ಒಂದಾಗಿರುವ ಪ್ರಕಾರ ಅವರೂ ಒಂದಾಗಿರಬೇಕೆಂದು
23 ನೀನು ನನಗೆ ಕೊಟ್ಟಿರುವ ಮಹಿಮೆಯನ್ನು ನಾನು ಅವರಿಗೆ ಕೊಟ್ಟಿದ್ದೇನೆ. ನಾನು ಅವರಲ್ಲಿಯೂ ನೀನು ನನ್ನಲ್ಲಿಯೂ ಇರಲಾಗಿ ಅವರ ಐಕ್ಯವು ಪೂರ್ಣ ಸಿದ್ಧಿಗೆ ಬರುವ ದರಿಂದ ನೀನು ನನ್ನನ್ನು ಕಳುಹಿಸಿಕೊಟ್ಟಿದ್ದೀ ಎಂದೂ ನೀನು ನನ್ನನ್ನು ಪ್ರೀತಿಸಿದಂತೆ ಅವ
24 ರನ್ನೂ ಪ್ರೀತಿಸಿದ್ದೀ ಎಂದೂ ಲೋಕಕ್ಕೆ ತಿಳಿದುಬರುವದು. ತಂದೆಯೇ, ನೀನು ಯಾರನ್ನು ನನಗೆ ಕೊಟ್ಟಿಯೋ ಅವರು ನಾನಿರುವ ಸ್ಥಳದಲ್ಲಿ ನನ್ನ ಕೂಡ ಇದ್ದುಕೊಂಡು, ಲೋಕವು ಹುಟ್ಟುವದಕ್ಕಿಂತ ಮುಂಚೆಯೇ ನೀನು ನನ್ನನ್ನು ಪ್ರೀತಿಸಿ ನನಗೆ ಕೊಟ್ಟಿರುವ
25 ಮಹಿಮೆಯನ್ನು ನೋಡಬೇಕೆಂದು ಇಚ್ಛೈಸುತ್ತೇನೆ. ನೀತಿಸ್ವರೂಪನಾದ ತಂದೆಯೇ, ಲೋಕವಂತೂ ನಿನ್ನನ್ನು ತಿಳಿಯಲಿಲ್ಲ, ಆದರೆ ನಾನು ನಿನ್ನನ್ನು ತಿಳಿದಿದ್ದೇನೆ; ಮತ್ತು
26 ಇವರು ನೀನೇ ನನ್ನನ್ನು ಕಳುಹಿಸಿಕೊಟ್ಟಿರುವದಾಗಿ ತಿಳುಕೊಂಡಿದ್ದಾರೆ. ನಾನು ಅವರಿಗೆ ನಿನ್ನ ಹೆಸರನ್ನು ತಿಳಿಸಿದ್ದೇನೆ, ಇನ್ನೂ ತಿಳಿಸುವೆನು. ನೀನು ನನ್ನ ಮೇಲೆ ಇಟ್ಟಂಥಾ ಪ್ರೀತಿಯು ಅವರಲ್ಲಿ ಇರಬೇಕೆಂದೂ ನಾನೂ ಅವರಲ್ಲಿ ಇರಬೇಕೆಂದೂ ಪ್ರಾರ್ಥಿಸುತ್ತೇನೆ ಅಂದನು.

ಇಸ್ಕರಿಯೋತ ಯೂದನು ಯೇಸುವನ್ನು ವೈರಿಗಳಿಗೆ ಹಿಡುಕೊಟ್ಟದ್ದು.

(ಮತ್ತಾಯ 26, 47—56; ಮಾರ್ಕ 14, 43—50; ಲೂಕ 22, 47—53.)

18 ಯೇಸು ಇದನ್ನು ಹೇಳಿದ ಮೇಲೆ ತನ್ನ ಶಿಷ್ಯರ ಸಂಗಡ ಕೆದ್ರೋನ್ ಹಳ್ಳದ ಆಚೆಗೆ ಹೊರಟುಹೋದನು. ಅಲ್ಲಿ ಒಂದು ತೋಟವಿತ್ತು; ಅದರೊಳಕ್ಕೆ ಆತನೂ ಆತನ ಶಿಷ್ಯರೂ
2 ಹೋದರು. ಯೇಸೂ ಆತನ ಶಿಷ್ಯರೂ ಆಗಾಗ್ಯೆ ಅಲ್ಲಿ ಕೂಡುತ್ತಾ ಇದ್ದದರಿಂದ ಆತ
3 ನನ್ನು ಹಿಡುಕೊಟ್ಟ ಯೂದನಿಗೂ ಆ ಸ್ಥಳವು ಗೊತ್ತಾಗಿತ್ತು. ಹೀಗಿರಲಾಗಿ ಯೂದನು ಸಿಪಾಯಿಗಳ ಪಟಾಲಮನ್ನೂ ಮಹಾಯಾಜಕರು ಮತ್ತು ಫರಿಸಾಯರು ಕೊಟ್ಟ ಓಲೇ ಕಾರರನ್ನೂ ಕರಕೊಂಡು, ದೀವಿಟಿಗಳನ್ನೂ ಪಂಜುಗಳನ್ನೂ ಆಯುಧಗಳನ್ನೂ ಹಿಡಸಿ
4 ಕೊಂಡು ಅಲ್ಲಿಗೆ ಬಂದನು. ಆಗ ಯೇಸು ತನ್ನ ಮೇಲೆ ಬರುವದನ್ನೆಲ್ಲಾ ತಿಳಿದು, ಹೊರಗೆ ಹೋಗಿ—ನೀವು ಯಾರನ್ನು ಹುಡುಕುತ್ತೀರಿ ಎಂದು ಅವರನ್ನು ಕೇಳಿದನು.

ಅದಕ್ಕೆ ಅವರು--ನಜರೇತಿನ ಯೇಸುವನ್ನು ಹುಡುಕುತ್ತೇವೆ ಅನ್ನಲು, ಯೇಸು ಅವ 5
ರಿಗೆ—ನಾನೇ ಅವನು ಎಂದು ಹೇಳಿದನು. ಆತನನ್ನು ಹಿಡುಕೊಡುವ ಯೂದನು ಸಹ
ಅವರ ಸಂಗಡ ನಿಂತಿದ್ದನು. ಆತನು ಅವರಿಗೆ—ನಾನೇ ಅವನು ಎಂದು ಹೇಳಿದಾಗ, 6
ಅವರು ಹಿಂದಕ್ಕೆ ಸರಿದು ನೆಲದ ಮೇಲೆ ಬಿದ್ದರು. ಆತನು—ಯಾರನ್ನು ಹುಡುಕುತ್ತೀ 7
ರೆಂದು ತಿರಿಗಿ ಅವರನ್ನು ಕೇಳಲು, ಅವರು—ನಜರೇತಿನ ಯೇಸುವನ್ನು ಹುಡುಕುತ್ತೇವೆ
ಅಂದರು. ಅದಕ್ಕೆ ಯೇಸು—ನಾನೇ ಅವನೆಂದು ನಿಮಗೆ ಹೇಳಿದೆನಲ್ಲಾ; ನೀವು ನನ್ನನ್ನೇ 8
ಹುಡುಕುವವರಾದರೆ ಇವರು ಹೋಗಬಿಡಿರಿ ಅಂದನು. ನೀನು ನನಗೆ ಕೊಟ್ಟವರಲ್ಲಿ 9
ಒಬ್ಬರನ್ನಾದರೂ ನಾನು ಕಳಕೊಳ್ಳಲಿಲ್ಲವೆಂದು ಆತನು ಹೇಳಿದ ಮಾತು ಹೀಗೆ ನೆರವೇ
ರಿತು. ಸೀಮೋನ ಪೇತ್ರನಲ್ಲಿ ಒಂದು ಕತ್ತಿ ಇತ್ತು; ಅದನ್ನು ಅವನು ಹಿರಿದು ಮಹಾ 10
ಯಾಜಕನ ಆಳನ್ನು ಹೊಡೆದು ಅವನ ಬಲಕಿವಿಯನ್ನು ಕತ್ತರಿಸಿದನು. ಆ ಆಳಿನ
ಹೆಸರು ಮಲ್ಕನು. ಆಗ ಯೇಸು ಪೇತ್ರನಿಗೆ—ಕತ್ತಿಯನ್ನು ಒರೆಯಲ್ಲಿ ಹಾಕು; ತಂದೆ 11
ನನಗೆ ಕೊಟ್ಟಿರುವ ಪಾತ್ರೆಯಲ್ಲಿ ನಾನು ಕುಡಿಯಬಾರದೋ ಎಂದು ಹೇಳಿದನು.

ಮಹಾಯಾಜಕನು ಯೇಸುವನ್ನು ವಿಚಾರಿಸಿದ್ದು; ಪೇತ್ರನು ಆತನನ್ನು ನಾನರಿಯೆನೆಂದು ಸುಳ್ಳು ಹೇಳಿದ್ದು.
(ಮತ್ತಾಯ **26**, 69—75; ಮಾರ್ಕ **14**, 66—72; ಲೂಕ **22**, 55—62.)

ಆ ಮೇಲೆ ಆ ಸಿಪಾಯಿಗಳೂ ಸಹಸ್ರಾಧಿಪತಿಯೂ ಯೆಹೂದ್ಯರ ಓಲೇಕಾರರೂ 12
ಯೇಸುವನ್ನು ಹಿಡುಕೊಂಡು ಕಟ್ಟಿ, ಮೊದಲು ಅನ್ನನ ಬಳಿಗೆ ಕರಕೊಂಡು ಹೋದರು. 13
ಇವನು ಆ ವರುಷದಲ್ಲಿ ಮಹಾಯಾಜಕನಾಗಿದ್ದ ಕಾಯಫನ ಮಾವನಾಗಿದ್ದನು.
ಆ ಕಾಯಫನೇ—ಒಬ್ಬ ಮನುಷ್ಯನು ಜನಕ್ಕೋಸ್ಕರ ಸಾಯುವದು ಹಿತಕರವೆಂದು 14
ಯೆಹೂದ್ಯರಿಗೆ ಆಲೋಚನೆ ಕೊಟ್ಟವನು.

ಸೀಮೋನ ಪೇತ್ರನೂ ಮತ್ತೊಬ್ಬ ಶಿಷ್ಯನೂ ಯೇಸುವಿನ ಹಿಂದೆ ಹೋದರು. ಆ ಶಿಷ್ಯ 15
ನಿಗೆ ಮಹಾಯಾಜಕನ ಪರಿಚಿತಿ ಇದ್ದದರಿಂದ ಯೇಸುವಿನ ಕೂಡ ಮಹಾಯಾಜಕನ
ಅಂಗಳದೊಳಕ್ಕೆ ಹೋದನು; ಪೇತ್ರನು ಹೊರಗೆ ಬಾಗಲ ಹತ್ತರ ನಿಂತಿದ್ದರಿಂದ ಮಹಾ 16
ಯಾಜಕನ ಪರಿಚಿತನಾದ ಆ ಶಿಷ್ಯನು ಹೊರಗೆ ಬಂದು, ಬಾಗಲುಕಾಯುವವಳ
ಸಂಗಡ ಮಾತಾಡಿ, ಪೇತ್ರನನ್ನು ಒಳಕ್ಕೆ ಕರಕೊಂಡು ಹೋದನು. ಆಗ ಬಾಗಲು 17
ಕಾಯುವವಳು ಪೇತ್ರನನ್ನು ನೋಡಿ—ನೀನೂ ಈ ಮನುಷ್ಯನ ಶಿಷ್ಯರಲ್ಲಿ ಒಬ್ಬನೇನು?
ಅನ್ನಲು, ಅವನು—ಅಲ್ಲ ಅಂದನು. ಆಗ ಚಳಿಯಾಗಿದ್ದದರಿಂದ ಆಳುಗಳೂ ಓಲೇ 18
ಕಾರರೂ ಇದ್ದಲಿನ ಬೆಂಕಿ ಮಾಡಿ ಚಳಿಕಾಸಿಕೊಳ್ಳುತ್ತಾ ನಿಂತಿರಲಾಗಿ, ಪೇತ್ರನೂ ಅವರ
ಸಂಗಡ ನಿಂತುಕೊಂಡು ಚಳಿಕಾಸಿಕೊಳ್ಳುತ್ತಿದ್ದನು.

ಅಷ್ಟರೊಳಗೆ ಮಹಾಯಾಜಕನು ಯೇಸುವನ್ನು ಆತನ ಶಿಷ್ಯರ ವಿಷಯವಾಗಿಯೂ 19
ಉಪದೇಶದ ವಿಷಯವಾಗಿಯೂ ವಿಚಾರಿಸಿದನು. ಅದಕ್ಕೆ ಯೇಸು—ನಾನು ಧಾರಾಳ 20
ವಾಗಿ ಲೋಕದ ಮುಂದೆ ಮಾತಾಡಿದ್ದೇನೆ; ಯೆಹೂದ್ಯರೆಲ್ಲಾ ಕೂಡುವಂಥ ಸಭಾ

ಮಂದಿರಗಳಲ್ಲಿಯೂ ದೇವಾಲಯದಲ್ಲಿಯೂ ಯಾವಾಗಲೂ ಉಪದೇಶಮಾಡುತ್ತಾ
21 ಬಂದೆನು; ಮರೆಯಾಗಿ ಯಾವದನ್ನೂ ಮಾತಾಡಲಿಲ್ಲ. ನನ್ನನ್ನು ಯಾಕೆ ವಿಚಾರಿಸುತ್ತೀ?
ನಾನು ಏನೇನು ಮಾತಾಡಿದೆನೋ ಅದನ್ನು ಕೇಳಿದವರಲ್ಲಿ ವಿಚಾರಿಸು; ನಾನು ಹೇಳಿದ್ದು
22 ಇವರಿಗೆ ತಿಳಿದಿದೆಯಲ್ಲಾ ಎಂದು ಉತ್ತರಕೊಟ್ಟನು. ಯೇಸು ಈ ಮಾತನ್ನು ಹೇಳಿ
ದಾಗ, ಹತ್ತರ ನಿಂತಿದ್ದ ಓಲೇಕಾರರಲ್ಲಿ ಒಬ್ಬನು—ಮಹಾಯಾಜಕನಿಗೆ ಹೀಗೆ ಉತ್ತರ
23 ಕೊಡುತ್ತೀಯಾ ಎಂದು ಹೇಳಿ ಆತನ ಕೆನ್ನೆಗೆ ಒಂದು ಏಟು ಹಾಕಿದನು. ಯೇಸು
ಅವನಿಗೆ—ನಾನು ಮಾತಾಡಿದ್ದರಲ್ಲಿ ಏನಾದರೂ ದೋಷವಿದ್ದರೆ ಆ ದೋಷ ಇಂಥಾ
ದ್ದೆಂದು ಸಾಕ್ಷಿಹೇಳು; ನಾನು ಮಾತಾಡಿದ್ದು ಸರಿಯಾಗಿದ್ದರೆ ನನ್ನನ್ನು ಯಾಕೆ ಹೊಡೆ
24 ಯುತ್ತೀ ಎಂದು ಹೇಳಿದನು. ಆಗ ಅನ್ನನು ಆತನನ್ನು ಕಟ್ಟಿಸಿ ಮಹಾಯಾಜಕನಾದ
ಕಾಯಫನ ಬಳಿಗೆ ಕಳುಹಿಸಿಕೊಟ್ಟನು.

25 ಇತ್ತಲಾಗಿ ಸೀಮೋನ ಪೇತ್ರನು ನಿಂತುಕೊಂಡು ಚಳಿಕಾಸಿಕೊಳ್ಳುತ್ತಾ ಇದ್ದನು.
ಆಗ ಅಲ್ಲಿದ್ದವರು ಅವನನ್ನು—ನೀನು ಅವನ ಶಿಷ್ಯರಲ್ಲಿ ಒಬ್ಬನೇನು? ಎಂದು ಕೇಳಲು,
26 ಅವನು—ಅಲ್ಲವೆಂದನು. ಮಹಾಯಾಜಕನ ಆಳುಗಳಲ್ಲಿ ಪೇತ್ರನು ಕಿವಿಕತ್ತರಿಸಿದವನ
ಬಂಧುವಾಗಿದ್ದ ಒಬ್ಬನು—ನಾನು ನಿನ್ನನ್ನು ತೋಟದಲ್ಲಿ ಅವನ ಸಂಗಡ ಕಂಡೆನಲ್ಲವೇ?
27 ಅಂದನು. ಅದಕ್ಕೆ ಪೇತ್ರನು ತಿರಿಗಿ ಅಲ್ಲವೆಂದನು. ಕೂಡಲೇ ಕೋಳಿ ಕೂಗಿತು.

ಪಿಲಾತನು ಯೇಸುವನ್ನು ವಿಚಾರಿಸಿ, ಆತನಿಗೆ ಮರಣವನ್ನು ವಿಧಿಸಿದ್ದು.

(ಮತ್ತಾಯ **27**, 11—26; ಮಾರ್ಕ **15**, 2—15; ಲೂಕ **23**, 1—25.)

28 ಆ ಮೇಲೆ ಅವರು ಯೇಸುವನ್ನು ಕಾಯಫನ ಬಳಿಯಿಂದ ಅರಮನೆಗೆ ಕರಕೊಂಡು
ಹೋದರು. ಆಗ ಮುಂಜಾನೆ ಆಗಿತ್ತು. ಅವರು ತಮಗೆ ಮೈಲಿಗೆ ತಟ್ಟಿ ಪಸ್ಕದ
ಊಟವನ್ನು ಮಾಡುವದಕ್ಕೆ ಅಡ್ಡಿಯಾದೀತೆಂದು ಅರಮನೆಯೊಳಕ್ಕೆ ಹೋಗಲಿಲ್ಲ.
29 ಹೀಗಿರಲಾಗಿ ಪಿಲಾತನು ಹೊರಕ್ಕೆ ಅವರ ಬಳಿಗೆ ಬಂದು—ಈ ಮನುಷ್ಯನ ಮೇಲೆ
30 ಏನು ದೂರು ತರುತ್ತೀರಿ ಎಂದು ಕೇಳಿದನು. ಅವರು ಅವನಿಗೆ—ಇವನು ದುಷ್ಕರ್ಮಿ
ಯಲ್ಲದಿದ್ದರೆ ನಾವು ಇವನನ್ನು ನಿನಗೆ ಒಪ್ಪಿಸಿಕೊಡುತ್ತಿದ್ದಿಲ್ಲವೆಂದು ಉತ್ತರಕೊಟ್ಟರು.
31 ಆಗ ಪಿಲಾತನು ಅವರಿಗೆ—ನೀವೇ ಅವನನ್ನು ತಕ್ಕೊಂಡುಹೋಗಿ ನಿಮ್ಮ ಧರ್ಮಶಾಸ್ತ್ರದ
ಪ್ರಕಾರ ಅವನಿಗೆ ತೀರ್ಪುಮಾಡಿರಿ ಎಂದು ಹೇಳಿದನು. ಅದಕ್ಕೆ ಯೆಹೂದ್ಯರು—
32 ಮರಣದಂಡನೆಯನ್ನು ವಿಧಿಸುವ ಅಧಿಕಾರವು ನಮಗಿಲ್ಲ ಅಂದರು. ಇದರಿಂದ ಯೇಸು
ತಾನು ಎಂಥಾ ಸಾವು ಸಾಯುವೆನೆಂದು ಸೂಚಿಸಿಹೇಳಿದ ಮಾತು ನೆರವೇರಿತು.

33 ಆಗ ಪಿಲಾತನು ತಿರಿಗಿ ಅರಮನೆಯೊಳಕ್ಕೆ ಹೋಗಿ, ಯೇಸುವನ್ನು ಕರೆದು, ಆತ
34 ನನ್ನು—ಯೆಹೂದ್ಯರ ಅರಸನು ನೀನೋ ಎಂದು ಕೇಳಿದನು. ಯೇಸು—ನಿನ್ನಷ್ಟಕ್ಕೆ
ನೀನೇ ಇದನ್ನು ಹೇಳುತ್ತೀಯೋ? ಮತ್ತೊಬ್ಬರು ನನ್ನ ವಿಷಯದಲ್ಲಿ ನಿನಗೆ ಹೇಳಿ
35 ದ್ದಾರೋ ಎಂದು ಕೇಳಲು, ಪಿಲಾತನು—ನಾನೇನು ಯೆಹೂದ್ಯನೇ? ನಿನ್ನ ಸ್ವಂತ
ಜನವೂ ಮಹಾಯಾಜಕರೂ ನಿನ್ನನ್ನು ನನಗೆ ಒಪ್ಪಿಸಿದ್ದಾರೆ; ನೀನು ಏನು ಮಾಡಿದ್ದೀ

ಎಂದು ಕೇಳಿದ್ದಕ್ಕೆ, ಯೇಸು—ನನ್ನ ರಾಜ್ಯವು ಈ ಲೋಕದ್ದಲ್ಲ; ನನ್ನ ರಾಜ್ಯವು 36
ಈ ಲೋಕದ್ದಾಗಿದ್ದರೆ ನಾನು ಯೆಹೂದ್ಯರ ಕೈಯಲ್ಲಿ ಬೀಳದಂತೆ ನನ್ನ ಪರಿವಾರದವರು
ಕಾದಾಡುತ್ತಿದ್ದರು; ಆದರೆ ನನ್ನ ರಾಜ್ಯವು ಇಲ್ಲಿಯದಲ್ಲವೆಂದು ಉತ್ತರಕೊಟ್ಟನು.
ಅದಕ್ಕೆ ಪಿಲಾತನು—ಹಾಗಾದರೆ ನೀನು ಅರಸನು ಹೌದಲ್ಲವೇ? ಅಂದನು. ಯೇಸು 37
ಅವನಿಗೆ—ನನ್ನನ್ನು ಅರಸನೆಂದು ನೀನೇ ಹೇಳುತ್ತೀ. ನಾನು ಸತ್ಯದ ವಿಷಯದಲ್ಲಿ
ಸಾಕ್ಷಿ ಹೇಳುವದಕ್ಕೋಸ್ಕರ ಹುಟ್ಟಿದವನು, ಅದಕ್ಕೋಸ್ಕರವೇ ಈ ಲೋಕಕ್ಕೆ ಬಂದಿದ್ದೇನೆ.
ಸತ್ಯಪರರು ನನ್ನ ಮಾತಿಗೆ ಕಿವಿಕೊಡುತ್ತಾರೆ ಎಂದು ಉತ್ತರಕೊಟ್ಟನು. ಪಿಲಾತನು— 38
ಸತ್ಯವಂದರೇನು? ಅಂದನು.

ಇದನ್ನು ಹೇಳಿ ಪಿಲಾತನು ತಿರಿಗಿ ಯೆಹೂದ್ಯರ ಬಳಿಗೆ ಹೊರಕ್ಕೆ ಬಂದು—ನನಗೆ
ಅವನಲ್ಲಿ ಯಾವ ಅಪರಾಧವೂ ಕಾಣಿಸುವದಿಲ್ಲ. ಆದರೆ ಪಸ್ಕಹಬ್ಬದಲ್ಲಿ ನಾನು ಒಬ್ಬ 39
ನನ್ನು ನಿಮಗೆ ಬಿಟ್ಟುಕೊಡುವ ಪದ್ಧತಿ ಉಂಟಷ್ಟೆ; ನಾನು ಯೆಹೂದ್ಯರ ಅರಸನನ್ನು
ಬಿಟ್ಟುಕೊಡುವದು ನಿಮಗೆ ಇಷ್ಟವೋ ಎಂದು ಅವರನ್ನು ಕೇಳಿದನು. ಅದಕ್ಕೆ ಅವರು— 40
ಇವನನ್ನು ಬೇಡ, ಬರಬ್ಬನನ್ನು ಬಿಟ್ಟುಕೊಡಬೇಕು ಎಂದು ತಿರಿಗಿ ಕೂಗಿ ಹೇಳಿದರು.
ಈ ಬರಬ್ಬನು ಕಳ್ಳನಾಗಿದ್ದನು.

ಆ ಮೇಲೆ ಪಿಲಾತನು ಯೇಸುವನ್ನು ಕೊರಡೆಯಿಂದ ಹೊಡಿಸಿದನು. ಮತ್ತು 2 **19**
ಸಿಪಾಯಿಗಳು ಮುಳ್ಳುಬಳ್ಳಿಯಿಂದ ಕಿರೀಟವನ್ನು ಹೆಣೆದು ಆತನ ತಲೆಯ ಮೇಲೆ ಇಟ್ಟರು;
ಕೆಂಪು ಒಲ್ಲಿಯನ್ನು ಆತನಿಗೆ ಹೊದ್ದಿಸಿದರು; ಮತ್ತು ಆತನ ಬಳಿಗೆ ಬಂದು—ಯೆಹೂದ್ಯರ 3
ಅರಸನೇ, ನಮಸ್ಕಾರ! ಎಂದು ಹೇಳಿ, ಆತನ ಕೆನ್ನೆಗೆ ಏಟು ಹಾಕಿದರು. ತರುವಾಯ 4
ಪಿಲಾತನು ತಿರಿಗಿ ಹೊರಗೆ ಬಂದು, ಯೆಹೂದ್ಯರಿಗೆ—ನನಗೆ ಅವನಲ್ಲಿ ಯಾವ ಅಪರಾ
ಧವೂ ಕಾಣಿಸಲಿಲ್ಲವೆಂಬುವದು ನಿಮಗೆ ತಿಳಿಯುವಂತೆ ಅವನನ್ನು ನಿಮ್ಮ ಬಳಿಗೆ ಹೊರಗೆ
ತರುತ್ತೇನೆ, ನೋಡಿರಿ ಎಂದು ಹೇಳಿದನು. ಆಗ ಯೇಸು ಮುಳ್ಳಿನ ಕಿರೀಟವನ್ನೂ 5
ಕೆಂಪು ಒಲ್ಲಿಯನ್ನೂ ಧರಿಸಿದವನಾಗಿ ಹೊರಕ್ಕೆ ಬಂದನು. ಪಿಲಾತನು ಅವರಿಗೆ—
ಇಗೋ, ಈ ಮನುಷ್ಯನು! ಅಂದನು. ಮಹಾಯಾಜಕರೂ ಓಲೇಕಾರರೂ ಆತನನ್ನು 6
ಕಾಣುತ್ತಲೇ—ಶಿಲುಬೆಗೆ ಹಾಕಿಸು, ಶಿಲುಬೆಗೆ ಹಾಕಿಸು ಎಂದು ಕೂಗಿದರು. ಪಿಲಾತನು
ಅವರಿಗೆ—ಬೇಕಾದರೆ ನೀವೇ ಅವನನ್ನು ತಕ್ಕೊಂಡುಹೋಗಿ ಶಿಲುಬೆಗೆ ಹಾಕಿಸಿರಿ;
ನನಗೆ ಅವನಲ್ಲಿ ಅಪರಾಧವು ಕಾಣಿಸಲಿಲ್ಲವೆಂದು ಹೇಳಿದನು. ಯೆಹೂದ್ಯರು ಅವನಿಗೆ— 7
ನಮಗೆ ಒಂದು ನೇಮ ಉಂಟು[1], ಆ ನೇಮದ ಪ್ರಕಾರ ಇವನು ಸಾಯತಕ್ಕವನು;
ಯಾಕಂದರೆ ಅವನು ತನ್ನನ್ನು ದೇವರ ಮಗನಾಗಿ ಮಾಡಿಕೊಂಡಿದ್ದಾನೆ ಎಂದು ಉತ್ತರ
ಕೊಟ್ಟರು. ಪಿಲಾತನು ಈ ಮಾತನ್ನು ಕೇಳಿ ಮತ್ತಷ್ಟು ಹೆದರಿಕೊಂಡು, ತಿರಿಗಿ ಅರಮನೆ 8,9
ಯೊಳಕ್ಕೆ ಹೋಗಿ—ನೀನು ಎಲ್ಲಿಂದ ಬಂದವನು ಎಂದು ಯೇಸುವನ್ನು ಕೇಳಿದನು.
ಆದರೆ ಯೇಸು ಅವನಿಗೆ ಉತ್ತರಕೊಡಲಿಲ್ಲ. ಪಿಲಾತನು—ನನ್ನ ಸಂಗಡಲೂ ನೀನು 10
ಮಾತಾಡುವದಿಲ್ಲವೋ? ನಿನ್ನನ್ನು ಬಿಡಿಸುವ ಅಧಿಕಾರವೂ ನಿನ್ನನ್ನು ಶಿಲುಬೆಗೆ ಹಾಕಿ

[1] ಲೇವಿಕ ೨೪, ೧೬.

ಸುವ ಅಧಿಕಾರವೂ ನನಗೆ ಉಂಟೆಂಬುವದು ನಿನಗೆ ಗೊತ್ತಿಲ್ಲವೋ ಎಂದು ಆತನನ್ನು
11 ಕೇಳಿದನು. ಅದಕ್ಕೆ ಯೇಸು—ಮೇಲಣಿಂದ ನಿನಗೆ ಕೊಡಲ್ಪಡದಿದ್ದರೆ ನನ್ನ ಮೇಲೆ ನಿನಗೆ ಯಾವ ಅಧಿಕಾರವೂ ಇರುತ್ತಿರಲಿಲ್ಲ. ಆದಕಾರಣ ನನ್ನನ್ನು ನಿನಗೆ ಒಪ್ಪಿಸಿ ದವನಿಗೆ ಹೆಚ್ಚಿನ ಪಾಪ ಉಂಟು ಅಂದನು.

12 ಈ ಮಾತಿನ ದೆಸೆಯಿಂದ ಪಿಲಾತನು ಆತನನ್ನು ಬಿಡಿಸುವದಕ್ಕೆ ಪ್ರಯತ್ನಿಸಿದನು. ಆದರೆ ಯೆಹೂದ್ಯರು—ನೀನು ಇವನನ್ನು ಬಿಡಿಸಿದರೆ ನೀನು ಕೈಸರನಿಗೆ ಮಿತ್ರನಲ್ಲ; ತನ್ನನ್ನು ಅರಸನಾಗಿ ಮಾಡಿಕೊಳ್ಳುವವನು ಕೈಸರನಿಗೆ ವಿರೋಧಿ ಎಂದು ಕೂಗಿ ಹೇಳಿ
13 ದರು. ಈ ಮಾತುಗಳನ್ನು ಪಿಲಾತನು ಕೇಳಿ, ಯೇಸುವನ್ನು ಹೊರಕ್ಕೆ ಕರತರಿಸಿ, ಇಬ್ರೀಯ ಮಾತಿನಲ್ಲಿ ಗಬ್ಬಥಾಯೆನ್ನಿಸಿಕೊಳ್ಳುವ ಕಲ್ಲುಹಾಸಿದ ಕಟ್ಟೆ ಎಂಬ ಹೆಸರುಳ್ಳ
14 ಸ್ಥಳಕ್ಕೆ ಹೋಗಿ, ನ್ಯಾಯಪೀಠದ ಮೇಲೆ ಕೂತುಕೊಂಡನು. ಪಸ್ಕಹಬ್ಬದ ಸೌರಣೇ ದಿವಸದಲ್ಲಿ ಹೆಚ್ಚುಕಡಿಮೆ ಆರು ಘಂಟೆಯಾಗಿತ್ತು. ಅವನು ಯೆಹೂದ್ಯರಿಗೆ—ಇಗೋ,
15 ನಿಮ್ಮ ಅರಸನು! ಎಂದು ಹೇಳಿದನು. ಅದಕ್ಕೆ ಅವರು—ಅವನನ್ನು ಕೊಲ್ಲಿಸು, ಕೊಲ್ಲಿಸು, ಶಿಲುಬೆಗೆ ಹಾಕಿಸು ಎಂದು ಕೂಗಿದರು. ಪಿಲಾತನು—ನಿಮ್ಮ ಅರಸನನ್ನು ಶಿಲುಬೆಗೆ ಹಾಕಿಸಲೋ? ಅಂದದ್ದಕ್ಕೆ, ಮಹಾಯಾಜಕರು—ಕೈಸರನೇ ಹೊರತು ನಮಗೆ ಬೇರೆ
16 ಅರಸನಿಲ್ಲ ಎಂದು ಉತ್ತರಕೊಟ್ಟರು. ಆಗ ಅವನು ಆತನನ್ನು ಶಿಲುಬೆಗೆ ಹಾಕಿಸು ವದಕ್ಕೆ ಅವರ ವಶಕ್ಕೆ ಕೊಟ್ಟನು.

### ಯೇಸುವನ್ನು ಶಿಲುಬೆಗೆ ಹಾಕಿದ್ದೂ ಹೂಣಿಟ್ಟದ್ದೂ.

(ಮತ್ತಾಯ **27**, 33—50; 57—61; ಮಾರ್ಕ **15**, 22—37; 42—47; ಲೂಕ **23**, 33—46; 50—56.)

17 ಅವರು ಯೇಸುವನ್ನು ತೆಗೆದುಕೊಂಡು ಹೋದರು; ಆತನು ತನ್ನ ಶಿಲುಬೆಯನ್ನು ತಾನೇ ಹೊತ್ತುಕೊಂಡು ಕಪಾಲಸ್ಥಳವೆಂಬ ಸ್ಥಾನಕ್ಕೆ ಹೋದನು. ಇದಕ್ಕೆ ಇಬ್ರೀಯ ಮಾತಿ
18 ನಲ್ಲಿ ಗೊಲ್ಗೊಥಾ ಎಂದು ಹೆಸರು. ಅಲ್ಲಿ ಆತನನ್ನೂ ಆತನ ಸಂಗಡ ಇನ್ನಿಬ್ಬರನ್ನೂ ಶಿಲುಬೆಗೆ ಹಾಕಿದರು; ಅವರಲ್ಲಿ ಆ ಕಡೆ ಒಬ್ಬನನ್ನು ಈ ಕಡೆ ಒಬ್ಬನನ್ನು ನಡುವೆ ಯೇಸುವನ್ನು ಇಟ್ಟರು.

19 ಇದಲ್ಲದೆ ಪಿಲಾತನು ಒಂದು ವಿಳಾಸವನ್ನು ಬರೆದು ಆತನ ಶಿಲುಬೆಯ ಮೇಲ್ಗಡೆ ಹಚ್ಚಿಸಿದನು. ಬರದದ್ದು ಏನಂದರೆ—

ಇವನು ನಜರೇತಿನ ಯೇಸು, ಯೆಹೂದ್ಯರ ಅರಸನು

20 ಎಂಬುವದೇ. ಅವರು ಯೇಸುವನ್ನು ಶಿಲುಬೆಗೆ ಹಾಕಿದ ಸ್ಥಳವು ಪಟ್ಟಣಕ್ಕೆ ಹತ್ತಿರ ವಾಗಿದ್ದದರಿಂದ ಯೆಹೂದ್ಯರಲ್ಲಿ ಬಹಳ ಮಂದಿ ಆ ವಿಳಾಸವನ್ನು ಓದಿದರು. ಅದು
21 ಇಬ್ರೀಯ ಲಾತೀನ್ ಗ್ರೀಕ್ ಭಾಷೆಗಳಲ್ಲಿ ಬರೆದಿತ್ತು. ಹೀಗಿರಲಾಗಿ ಯೆಹೂದ್ಯರ ಮಹಾಯಾಜಕರು ಪಿಲಾತನಿಗೆ—ಯೆಹೂದ್ಯರ ಅರಸನು ಎಂದು ಬರೆಯದೆ ನಾನು

ಯೆಹೂದ್ಯರ ಅರಸನೆಂದು ಹೇಳಿದವನು ಎಂಬದಾಗಿ ಬರೆಯಬೇಕೆಂತ ಹೇಳಿದರು.
ಅದಕ್ಕೆ ಪಿಲಾತನು—ನಾನು ಬರೆದದ್ದು ಬರೆದಾಯಿತು ಅಂದನು. 22

ಸಿಪಾಯಿಗಳು ಯೇಸುವನ್ನು ಶಿಲುಬೆಗೆ ಹಾಕಿದ ಮೇಲೆ, ಅವರು ಆತನ ಮೇಲು 23
ಹೊದಿಕೆಗಳನ್ನು ತಕ್ಕೊಂಡು, ನಾಲ್ಕು ಪಾಲು ಮಾಡಿ, ಒಬ್ಬೊಬ್ಬ ಸಿಪಾಯಿಗೆ ಒಂದೊಂದು
ಪಾಲಿನ ಪ್ರಕಾರ ಹಂಚಿಕೊಂಡರು. ಆತನ ಒಳಂಗಿಯನ್ನು ಸಹ ತಕ್ಕೊಂಡರು; ಆದರೆ
ಆ ಅಂಗಿಗೆ ಹೊಲಿಗೆ ಇರಲಿಲ್ಲ, ಅದು ಮೇಲಿನಿಂದ ಅಖಂಡವಾಗಿ ಹೆಣೆದದ್ದಾಗಿತ್ತು.
ಅದನ್ನು ನೋಡಿ ಅವರು—ನಾವು ಇದನ್ನು ಹರಿಯಬಾರದು; ಚೀಟುಹಾಕಿ ಇದು 24
ಯಾರಿಗೆ ಬರುವದೋ ನೋಡೋಣ ಎಂದು ಮಾತಾಡಿಕೊಂಡರು. ಇದರಿಂದ—

ನನ್ನ ಮೇಲುಹೊದಿಕೆಗಳನ್ನು ತಮ್ಮೊಳಗೆ ಪಾಲು ಮಾಡಿಕೊಂಡರು,
ನನ್ನ ಅಂಗಿಗೋಸ್ಕರ ಚೀಟುಹಾಕಿದರು[1]

ಎಂಬ ಶಾಸ್ತ್ರದ ಮಾತು ನೆರವೇರಿತು. ಸಿಪಾಯಿಗಳು ಇದನ್ನೆಲ್ಲಾ ಮಾಡಿದರು.

ಯೇಸುವಿನ ಶಿಲುಬೆಯ ಬಳಿಯಲ್ಲಿ ಆತನ ತಾಯಿಯೂ ಆತನ ತಾಯಿಯ ತಂಗಿಯೂ 25
ಕ್ಲೋಪನ ಹೆಂಡತಿಯಾದ ಮರಿಯಳೂ ಮಗ್ದಲದ ಮರಿಯಳೂ ನಿಂತಿದ್ದರು. ಯೇಸು 26
ತನ್ನ ತಾಯಿಯನ್ನೂ ಹತ್ತರದಲ್ಲಿ ನಿಂತಿದ್ದ ತನ್ನ ಪ್ರೀತಿಯ ಶಿಷ್ಯನನ್ನೂ ನೋಡಿ,
ತಾಯಿಗೆ—ಅಮ್ಮಾ, ಇಗೋ ನಿನ್ನ ಮಗನು ಎಂದು ಹೇಳಿದನು. ತರುವಾಯ ಆ ಶಿಷ್ಯ 27
ನಿಗೆ—ಇಗೋ ನಿನ್ನ ತಾಯಿ ಎಂದು ಹೇಳಿದನು. ಆ ಹೊತ್ತಿನಿಂದ ಆ ಶಿಷ್ಯನು ಆಕೆ
ಯನ್ನು ತನ್ನ ಮನೆಯಲ್ಲೇ ಇರಿಸಿಕೊಂಡನು.

ಇದಾದ ಮೇಲೆ ಯೇಸು, ಈಗ ಎಲ್ಲಾ ತೀರಿತೆಂದು ತಿಳಿದು, ಶಾಸ್ತ್ರದ ಮಾತು ನೆರ 28
ವೇರುವಂತೆ[2]—ನನಗೆ ನೀರಡಿಕೆ ಆಗಿದೆ ಅಂದನು. ಅಲ್ಲಿ ಹುಳಿರಸ ತುಂಬಿದ ಗಡಿಗೆ 29
ಇಟ್ಟಿರಲಾಗಿ ಅವರು ಸ್ಪಂಜನ್ನು ಹುಳಿರಸದಿಂದ ತುಂಬಿಸಿ, ಹಿಸೋಪ್‌ಗಿಡದ ಕೋಲಿಗೆ
ಸಿಕ್ಕಿಸಿ, ಆತನ ಬಾಯಿಗೆ ಮುಟ್ಟಿಸಿದರು. ಯೇಸು ಆ ಹುಳಿರಸವನ್ನು ತಕ್ಕೊಂಡ 30
ಮೇಲೆ—ತೀರಿತು ಎಂದು ಹೇಳಿ ತಲೇ ಬಾಗಿಸಿ, ಆತ್ಮವನ್ನು ಒಪ್ಪಿಸಿಕೊಟ್ಟನು.

ಆ ಹೊತ್ತು ಸೌರಣೇ ದಿವಸವಾಗಿದ್ದದರಿಂದ ಯೆಹೂದ್ಯರು—ಸಬ್ಬತ್‌ದಿನದಲ್ಲಿ 31
ಶವಗಳು ಶಿಲುಬೆಯ ಮೇಲೆ ಇರಬಾರದೆಂದು, ಪಿಲಾತನನ್ನು—ಅವರ ಕಾಲುಗಳನ್ನು
ಮುರಿಸಿ ಅವರನ್ನು ತೆಗಸಿಹಾಕಬೇಕೆಂಬದಾಗಿ ಕೇಳಿಕೊಂಡರು; ಯಾಕಂದರೆ ಆ ಸಬ್ಬತ್
ದಿನವು ಬಹು ವಿಶೇಷವಾದದ್ದು. ಆದದರಿಂದ ಸಿಪಾಯಿಗಳು ಬಂದು ಮೊದಲನೆಯವನ 32
ಕಾಲುಗಳನ್ನೂ ಅವನ ಜೊತೆಯಲ್ಲಿ ಶಿಲುಬೆಗೆ ಹಾಕಿಸಿಕೊಂಡಿದ್ದ ಮತ್ತೊಬ್ಬನ ಕಾಲು
ಗಳನ್ನೂ ಮುರಿದರು. ಆದರೆ ಯೇಸುವಿನ ಬಳಿಗೆ ಬಂದಾಗ, ಆತನು ಆಗಲೇ ಸತ್ತಿರು 33
ವದನ್ನು ಅವರು ಕಂಡು, ಆತನ ಕಾಲುಗಳನ್ನು ಮುರಿಯಲಿಲ್ಲ. ಆದಾಗ್ಯೂ ಸಿಪಾಯಿ 34
ಗಳಲ್ಲಿ ಒಬ್ಬನು ಈಟಿಯಿಂದ ಆತನ ಪಕ್ಕೆಯನ್ನು ತಿವಿದನು; ತಿವಿದ ಕೂಡಲೇ ರಕ್ತವೂ
ನೀರೂ ಹೊರಟಿತು. ಅದನ್ನು ಕಂಡವನೇ ಸಾಕ್ಷಿ ಹೇಳಿದ್ದಾನೆ, ಅವನ ಸಾಕ್ಷಿ ಸತ್ಯವೇ; 35
ತಾನು ಹೇಳುವದು ಸತ್ಯವೆಂದು ಅವನು[3] ಬಲ್ಲನು; ನೀವು ಸಹ ನಂಬಬೇಕೆಂದು

---

[1] ಕೀರ್ತನೆ ೨೨, ೧೮. [2] ಕೀರ್ತನೆ ೬೯, ೨೧. [3] ಅಥವಾ, ಆತನು.

36 ಇದನ್ನು ಹೇಳಿದ್ದಾನೆ. ಯಾಕಂದರೆ—ಆತನ ಎಲುಬುಗಳಲ್ಲಿ ಒಂದನ್ನೂ ಮುರಿಯ
37 ಬಾರದೆಂದು[1] ಶಾಸ್ತ್ರದಲ್ಲಿ ಬರೆದ ಮಾತು ನೆರವೇರುವಂತೆ ಇದಾಯಿತು; ಮತ್ತು—
ಅವರು ತಾವು ತಿವಿದವನನ್ನು ನೋಡುವರು ಎಂದು[2] ಶಾಸ್ತ್ರದಲ್ಲಿ ಮತ್ತೊಂದು ಮಾತು
ಹೇಳಿ ಅದೆ.

38 ಇದಾದ ಮೇಲೆ ಯೆಹೂದ್ಯರ ಭಯದಿಂದ ಗುಪ್ತವಾಗಿ ಯೇಸುವಿನ ಶಿಷ್ಯನಾಗಿದ್ದ
ಅರಿಮಥಾಯದ ಯೋಸೇಫನು—ಯೇಸುವಿನ ದೇಹವನ್ನು ತೆಗೆದುಕೊಂಡು ಹೋಗು
ವದಕ್ಕೆ ಅಪ್ಪಣೆಯಾಗಬೇಕೆಂದು ಪಿಲಾತನನ್ನು ಬೇಡಿಕೊಂಡನು. ಪಿಲಾತನು ಅಪ್ಪಣೆ
39 ಕೊಡಲಾಗಿ, ಅವನು ಬಂದು ಆತನ ದೇಹವನ್ನು ತೆಗೆದುಕೊಂಡು ಹೋದನು. ಇದಲ್ಲದೆ
ಮೊದಲು ಒಂದು ಸಾರಿ ರಾತ್ರಿವೇಳೆಯಲ್ಲಿ ಯೇಸುವಿನ ಬಳಿಗೆ ಬಂದಿದ್ದ ನಿಕೊದೇಮನು
ಸಹ ರಕ್ತಬೋಳ ಅಗರುಗಳನ್ನು ಕಲಸಿದ ಚೂರ್ಣವನ್ನು ನೂರು ಸೇರಿನಷ್ಟು ತಕ್ಕೊಂಡು
40 ಅಲ್ಲಿಗೆ ಬಂದನು. ಅವರು ಯೇಸುವಿನ ದೇಹವನ್ನು ತಕ್ಕೊಂಡು ಯೆಹೂದ್ಯರಲ್ಲಿ
ಹೂಣಿಡುವ ಪದ್ಧತಿಯ ಪ್ರಕಾರ ಅದನ್ನು ಆ ಸುಗಂಧದ್ರವ್ಯಗಳ ಸಹಿತವಾಗಿ ನಾರು
41 ಬಟ್ಟೆಯಲ್ಲಿ ಸುತ್ತಿದರು. ಆತನನ್ನು ಶಿಲುಬೆಗೆ ಹಾಕಿದ ಸ್ಥಳದಲ್ಲಿ ಒಂದು ತೋಟವಿತ್ತು;
ಆ ತೋಟದಲ್ಲಿ ಒಂದು ಹೊಸ ಸಮಾಧಿ ಇತ್ತು; ಅದರಲ್ಲಿ ಅದುವರೆಗೆ ಯಾರನ್ನೂ
42 ಇಟ್ಟಿದ್ದಿಲ್ಲ. ಆ ಹೊತ್ತು ಯೆಹೂದ್ಯರ ಸೌರಣೇ ದಿವಸವಾದದ್ದರಿಂದ, ಆ ಸಮಾಧಿ
ಹತ್ತರವಿರುತ್ತದೆಂದು ಯೇಸುವನ್ನು ಅಲ್ಲೇ ಇಟ್ಟರು.

### ಯೇಸು ಜೀವಿಸಿಬಂದು ತನ್ನ ಶಿಷ್ಯರಿಗೆ ಕಾಣಿಸಿಕೊಂಡದ್ದು.

**20** ವಾರದ ಮೊದಲನೇ ದಿನದಲ್ಲಿ ಮಗ್ದಲದ ಮರಿಯಳು ಮುಂಜಾನೆ ಇನ್ನೂ ಕತ್ತಲೆ
ಇರುವಾಗಲೇ ಸಮಾಧಿಯ ಬಳಿಗೆ ಹೋಗಿ, ಸಮಾಧಿಯ ಕಲ್ಲು ತೆಗೆದಿರುವದನ್ನು
2 ಕಂಡಳು. ಆಕೆ ಸೀಮೋನ ಪೇತ್ರನ ಬಳಿಗೂ ಯೇಸುವಿಗೆ ಪ್ರಿಯನಾಗಿದ್ದ ಆ ಮತ್ತೊಬ್ಬ
ಶಿಷ್ಯನ ಬಳಿಗೂ ಓಡಿ ಬಂದು, ಅವರಿಗೆ—ಸ್ವಾಮಿಯನ್ನು ಸಮಾಧಿಯೊಳಗಿಂದ ತೆಗೆದು
ಕೊಂಡು ಹೋಗಿ ಆತನನ್ನು ಎಲ್ಲಿಟ್ಟಿದ್ದಾರೋ ನಮಗೆ ಗೊತ್ತಿಲ್ಲವೆಂದು ಹೇಳಿದಳು.
3 ಆಗ ಪೇತ್ರನೂ ಆ ಮತ್ತೊಬ್ಬ ಶಿಷ್ಯನೂ ಹೊರಟು ಸಮಾಧಿಯ ಕಡೆಗೆ ಹೋದರು.
4 ಅವರಿಬ್ಬರೂ ಜೊತೆಯಾಗಿ ಓಡಿದರು; ಆದರೆ ಆ ಮತ್ತೊಬ್ಬ ಶಿಷ್ಯನು ಪೇತ್ರನಿಗಿಂತ
5 ಮುಂದೆ ಓಡಿ, ಮೊದಲೇ ಸಮಾಧಿಗೆ ಮುಟ್ಟಿ, ಬೊಗ್ಗಿ ನೋಡಿ, ಆ ನಾರುಬಟ್ಟೆಗಳು
6 ಬಿದ್ದಿರುವದನ್ನು ಕಂಡನು; ಆದರೆ ಒಳಕ್ಕೆ ಹೋಗಲಿಲ್ಲ. ಸೀಮೋನ ಪೇತ್ರನು ಅವನ
ಹಿಂದೆ ಬಂದು ಸಮಾಧಿಯೊಳಕ್ಕೆ ಹೋಗಿ, ಆ ನಾರುಬಟ್ಟೆಗಳು ಬಿದ್ದಿರುವದನ್ನೂ
7 ಆತನ ತಲೆಯ ಮೇಲಿದ್ದ ಕೈಪಾವುಡವು ಆ ನಾರುಬಟ್ಟೆಗಳ ಕೂಡ ಇರದೆ, ಸುತ್ತಿ
8 ಒಂದು ಕಡೆಯಲ್ಲಿ ಬೇರೇ ಇರುವದನ್ನೂ ನೋಡಿದನು. ಆಗ ಸಮಾಧಿಯ ಬಳಿಗೆ
ಮೊದಲು ಬಂದಿದ್ದ ಆ ಮತ್ತೊಬ್ಬ ಶಿಷ್ಯನು ಸಹ ಒಳಕ್ಕೆ ಹೋಗಿ ನೋಡಿ ನಂಬಿದನು.

---

1) ಹೊರಡೋಣ ೧೨, ೪೬; ಕೀರ್ತನೆ ೩೪, ೨೦. 2) ಜಕರೀಯ ೧೨, ೧೦.

ಆತನು ಸತ್ತ ಮೇಲೆ ಜೀವದಿಂದೆದ್ದು ಬರಬೇಕೆಂಬದಾಗಿ ಶಾಸ್ತ್ರದಲ್ಲಿ ಬರೆದಿರುವ ಮಾತು[1] 9 ಅವರಿಗೆ ಇನ್ನೂ ತಿಳಿದಿರಲಿಲ್ಲ. ತರುವಾಯ ಆ ಶಿಷ್ಯರು ತಿರಿಗಿ ತಮ್ಮವರ ಬಳಿಗೆ 10 ಹೋದರು.

ಆದರೆ ಮರಿಯಳು ಹೊರಗೆ ಸಮಾಧಿಯ ಬಳಿಯಲ್ಲಿ ಅಳುತ್ತಾ ನಿಂತಿದ್ದಳು. ಹೀಗೆ 11 ಆಕೆ ಅಳುತ್ತಿರುವಾಗ, ಸಮಾಧಿಯೊಳಗೆ ಬೊಗ್ಗಿ ನೋಡಲು, ಯೇಸುವಿನ ದೇಹವು 12 ಇಟ್ಟಿದ್ದ ಸ್ಥಳದಲ್ಲಿ ಬೆಳ್ಳಗಿರುವ ವಸ್ತ್ರಗಳನ್ನು ಹೊದ್ದುಕೊಂಡ ಇಬ್ಬರು ದೇವದೂತರನ್ನು ಕಂಡಳು; ಅವರಲ್ಲಿ ಒಬ್ಬನು ತಲೆ ಇದ್ದ ಕಡೆಯಲ್ಲಿ, ಒಬ್ಬನು ಕಾಲಿದ್ದ ಕಡೆಯಲ್ಲಿ ಕೂತಿದ್ದರು. ಅವರು ಆಕೆಯನ್ನು—ಅಮ್ಮಾ, ನೀನು ಯಾಕೆ ಅಳುತ್ತೀ ಎಂದು ಕೇಳಲು, 13 ಆಕೆ—ನನ್ನ ಕರ್ತನನ್ನು ತೆಗೆದುಕೊಂಡು ಹೋಗಿದ್ದಾರೆ; ಆತನನ್ನು ಎಲ್ಲಿ ಇಟ್ಟಿದ್ದಾರೋ ನನಗೆ ಗೊತ್ತಿಲ್ಲ ಅಂದಳು. ಇದನ್ನು ಹೇಳಿ ತಿರುಗಿಕೊಂಡು ಯೇಸು ನಿಂತಿರುವದನ್ನು 14 ಕಂಡಳು, ಆದರೆ ಆತನು ಯೇಸು ಅಂತ ಆಕೆಗೆ ತಿಳಿಯಲಿಲ್ಲ. ಯೇಸು ಆಕೆಯನ್ನು— 15 ಅಮ್ಮಾ, ಯಾಕೆ ಅಳುತ್ತೀ? ಯಾರನ್ನು ಹುಡುಕುತ್ತೀ? ಎಂದು ಕೇಳಲು, ಆಕೆ ಆತನನ್ನು ತೋಟಗಾರನೆಂದು ನೆನಸಿ, ಆತನಿಗೆ—ಅಯ್ಯಾ, ನೀನು ಆತನನ್ನು ಎತ್ತಿಕೊಂಡು ಹೋಗಿದ್ದರೆ, ಎಲ್ಲಿ ಇಟ್ಟಿದ್ದೀ ನನಗೆ ಹೇಳು; ನಾನು ತೆಗೆದುಕೊಂಡು ಹೋಗುತ್ತೇನೆ ಎಂದು ಹೇಳಿದಳು. ಯೇಸು ಆಕೆಗೆ—ಮರಿಯಳೇ, ಎಂದು ಹೇಳಿದನು. ಆಕೆ ತಿರುಗಿಕೊಂಡು 16 ಇಬ್ರೀಯ ಮಾತಿನಲ್ಲಿ—ರಬ್ಬೂನಿ, ಅಂದಳು. (ರಬ್ಬೂನಿ ಅಂದರೆ ಗುರುವೇ ಎಂದು ಅರ್ಥ.) ಯೇಸು ಆಕೆಗೆ—ನನ್ನನ್ನು ಹಿಡಿಯಬೇಡ; ಯಾಕಂದರೆ ನಾನು ಇನ್ನೂ ತಂದೆಯ 17 ಬಳಿಗೆ ಏರಿಹೋದವನಲ್ಲ. ನೀನು ನನ್ನ ಸಹೋದರರ ಬಳಿಗೆ ಹೋಗಿ—ನಾನು ನನ್ನ ತಂದೆಯೂ ನಿಮ್ಮ ತಂದೆಯೂ ನನ್ನ ದೇವರೂ ನಿಮ್ಮ ದೇವರೂ ಆಗಿರುವಾತನ ಬಳಿಗೆ ಏರಿಹೋಗುತ್ತೇನೆ ಎಂದು ಅವರಿಗೆ ಹೇಳು ಅಂದನು. ಮಗ್ದಲದ ಮರಿಯಳು 18 ಹೋಗಿ—ನಾನು ಸ್ವಾಮಿಯವರನ್ನು ನೋಡಿದ್ದೇನೆ; ಆತನು ಇಂಥಿಂಥಾದ್ದನ್ನು ನನಗೆ ಹೇಳಿದನು ಎಂದು ಶಿಷ್ಯರಿಗೆ ತಿಳಿಸಿದಳು.

ಅದೇ ದಿವಸದ, ಅಂದರೆ ವಾರದ ಮೊದಲನೇ ದಿವಸದ, ಸಂಜೆಯಲ್ಲಿ ಶಿಷ್ಯರು 19 ಯೆಹೂದ್ಯರ ಭಯದಿಂದ ತಾವು ಇದ್ದ ಮನೆಯ ಬಾಗಲುಗಳನ್ನು ಮುಚ್ಚಿಕೊಂಡಿರಲು, ಯೇಸು ಬಂದು, ನಡುವೆ ನಿಂತು—ನಿಮಗೆ ಸಮಾಧಾನವಾಗಲಿ[2] ಅಂದನು. ಇದನ್ನು 20 ಹೇಳಿದ ಮೇಲೆ, ಅವರಿಗೆ ತನ್ನ ಕೈಗಳನ್ನೂ ಪಕ್ಕೆಯನ್ನೂ ತೋರಿಸಿದನು. ಶಿಷ್ಯರು ಸ್ವಾಮಿಯನ್ನು ನೋಡಿದ್ದರಿಂದ ಸಂತೋಷ ಪಟ್ಟರು. ಯೇಸು ಅವರಿಗೆ—ನಿಮಗೆ 21 ಸಮಾಧಾನವಾಗಲಿ[2] ಎಂದು ತಿರಿಗಿ ಹೇಳಿ—ತಂದೆ ನನ್ನನ್ನು ಕಳುಹಿಸಿಕೊಟ್ಟ ಹಾಗೆಯೇ, ನಾನೂ ನಿಮ್ಮನ್ನು ಕಳುಹಿಸಿಕೊಡುತ್ತೇನೆ ಅಂದನು. ಇದನ್ನು ಹೇಳಿ, ಅವರ ಮೇಲೆ 22 ಊದಿ, ಅವರಿಗೆ—ಪವಿತ್ರಾತ್ಮವರವನ್ನು ತಕ್ಕೊಳ್ಳಿರಿ; ನೀವು ಯಾರ ಪಾಪಗಳನ್ನು ಕ್ಷಮಿಸಿ 23 ಬಿಡುತ್ತೀರೋ ಅವರಿಗೆ ಅವುಗಳ ಕ್ಷಮಾಪಣೆಯಾಗುತ್ತದೆ; ಯಾರ ಪಾಪಗಳನ್ನು ಕ್ಷಮಿಸದೆ ಉಳಿಸುತ್ತೀರೋ ಅವರಿಗೆ ಅವುಗಳು ಉಳಿಯುತ್ತವೆ ಅಂದನು.

---

1) ಕೀರ್ತನೆ ೧೬, ೧೦.

2) ಅಥವಾ, ಶುಭವಾಗಲಿ.

24 ಯೇಸು ಬಂದಾಗ ಹನ್ನೆರಡು ಮಂದಿ ಶಿಷ್ಯರೊಳಗೆ ಒಬ್ಬನಾದ ದಿದುಮನೆನ್ನಿಸಿ
25 ಕೊಳ್ಳುವ ತೋಮನು ಅವರ ಸಂಗಡ ಇರಲಿಲ್ಲ. ಆದದರಿಂದ ಉಳಿದ ಶಿಷ್ಯರು—ನಾವು ಸ್ವಾಮಿಯನ್ನು ನೋಡಿದ್ದೇವೆ ಎಂದು ಅವನಿಗೆ ಹೇಳಿದರು. ಅದಕ್ಕೆ ಅವನು—ನಾನು ಆತನ ಕೈಗಳಲ್ಲಿ ಮೊಳೆಗಳಿಂದಾದ ಘಾಯವನ್ನು ನೋಡಿ, ಆ ಮೊಳೆಯ ಘಾಯದಲ್ಲಿ ನನ್ನ ಬೆರಳನ್ನು ಇಟ್ಟು, ಆತನ ಪಕ್ಕೆಯಲ್ಲಿ ನನ್ನ ಕೈಯನ್ನು ಹಾಕಿದರೆ ಹೊರತು ನಿಮ್ಮ ಮಾತನ್ನು ನಂಬುವದೇ ಇಲ್ಲ ಅಂದನು.

26 ಎಂಟು ದಿವಸಗಳಾದ ಮೇಲೆ, ಆತನ ಶಿಷ್ಯರು ತಿರಿಗಿ ಒಳಗಿದ್ದಾಗ, ತೋಮನೂ ಅವರ ಸಂಗಡ ಇದ್ದನು. ಬಾಗಲುಗಳು ಮುಚ್ಚಿದ್ದವು. ಆಗ ಯೇಸು ಬಂದು ನಡುವೆ
27 ನಿಂತು—ನಿಮಗೆ ಸಮಾಧಾನವಾಗಲಿ[1] ಅಂದನು. ಆ ಮೇಲೆ ತೋಮನಿಗೆ—ನಿನ್ನ ಬೆರಳನ್ನು ಈ ಕಡೆ ಚಾಚಿ, ನನ್ನ ಕೈಗಳನ್ನು ಮುಟ್ಟಿ ನೋಡು; ನಿನ್ನ ಕೈ ಚಾಚಿ ನನ್ನ ಪಕ್ಕೆಯಲ್ಲಿ
28 ಹಾಕು; ನಂಬದವನಾಗಿರಬೇಡ, ನಂಬುವವನಾಗು ಎಂದು ಹೇಳಿದನು. ತೋಮನು ಆತ
29 ನಿಗೆ—ನನ್ನ ಸ್ವಾಮಿ, ನನ್ನ ದೇವರು! ಎಂದು ಹೇಳಿದನು. ಯೇಸು ಅವನಿಗೆ—ನೀನು ನನ್ನನ್ನು ನೋಡಿದ್ದರಿಂದ ನಂಬಿದ್ದೀ; ನೋಡದೆ ನಂಬಿದವರು ಧನ್ಯರು ಎಂದು ಹೇಳಿದನು.

30 ಯೇಸು ಇನ್ನು ಬೇರೆ ಎಷ್ಟೋ ಸೂಚಕಕಾರ್ಯಗಳನ್ನು ತನ್ನ ಶಿಷ್ಯರ ಮುಂದೆ
31 ಮಾಡಿದನು. ಅವುಗಳು ಈ ಗ್ರಂಥದಲ್ಲಿ ಬರೆದಿರುವದಿಲ್ಲ. ಆದರೆ ಯೇಸು ದೇವ ಕುಮಾರನಾದ ಕ್ರಿಸ್ತನೆಂದು ನೀವು ನಂಬುವಂತೆಯೂ, ನಂಬಿ ಆತನ ಹೆಸರಿನ ಮೂಲಕವಾಗಿ ಜೀವವನ್ನು ಪಡಕೊಳ್ಳುವಂತೆಯೂ ಇಷ್ಟೆಲ್ಲಾ ಬರೆದದೆ.

ಯೇಸು ಗಲಿಲಾಯದ ಸಮುದ್ರದ ಬಳಿಯಲ್ಲಿ ತನ್ನ ಶಿಷ್ಯರಿಗೆ ತಿರಿಗಿ ದರ್ಶನ ಕೊಟ್ಟದ್ದು. ಸಮಾಪ್ತಿಯ ವಚನಗಳು.

**21** ತರುವಾಯ ಯೇಸು ತಿಬೇರಿಯ ಸಮುದ್ರದ ಬಳಿಯಲ್ಲಿ ಶಿಷ್ಯರಿಗೆ ತಿರಿಗಿ ತನ್ನನ್ನು
2 ತೋರಿಸಿಕೊಂಡನು. ತನ್ನನ್ನು ತೋರಿಸಿಕೊಂಡ ರೀತಿ ಯಾವದಂದರೆ—ಸೀಮೋನ ಪೇತ್ರನೂ ದಿದುಮನೆಂಬ ತೋಮನೂ ಗಲಿಲಾಯದ ಕಾನಾ ಊರಿನ ನತಾನಯೇಲನೂ
3 ಜೆಬೆದಾಯನ ಕುಮಾರರೂ ಆತನ ಶಿಷ್ಯರಲ್ಲಿ ಇನ್ನಿಬ್ಬರೂ ಕೂಡಿದ್ದರು. ಅವರಿಗೆ ಸೀಮೋನ ಪೇತ್ರನು—ನಾನು ಮೀನು ಹಿಡಿಯುವದಕ್ಕೆ ಹೋಗುತ್ತೇನೆಂದು ಹೇಳಲು, ಅವರು—ನಾವೂ ನಿನ್ನ ಸಂಗಡ ಬರುತ್ತೇವೆ ಅಂದರು. ಅವರು ಹೊರಟು ದೋಣಿ
4 ಯನ್ನು ಹತ್ತಿದರು. ಆದರೆ ಆ ರಾತ್ರಿಯಲ್ಲಿ ಒಂದು ಮೀನೂ ಸಿಕ್ಕಲಿಲ್ಲ. ಬೆಳಗಾಗುವಾಗ ಯೇಸು ದಡದಲ್ಲಿ ನಿಂತಿದ್ದನು; ಆದಾಗ್ಯೂ ಶಿಷ್ಯರು ಆತನನ್ನು ಯೇಸುವೆಂದು
5 ತಿಳಿಯಲಿಲ್ಲ. ಆಗ ಯೇಸು ಅವರನ್ನು—ಮಕ್ಕಳಿರಾ, ಊಟಕ್ಕೆ ನಿಮಗೆ ಏನೂ ಇಲ್ಲವೇ
6 ಎಂದು ಕೇಳಲು, ಅವರು ಇಲ್ಲವೆಂದು ಉತ್ತರಕೊಟ್ಟರು. ಆತನು ಅವರಿಗೆ—ನೀವು ದೋಣಿಯ ಬಲಗಡೆಯಲ್ಲಿ ಬಲೆ ಬೀಸಿದರೆ ಸಿಕ್ಕುವದು ಎಂದು ಹೇಳಿದನು. ಅವರು ಹಾಗೆ ಬೀಸಿದಾಗ ಮೀನುಗಳು ಬಹಳ ಹೆಚ್ಚಾಗಿ ಸಿಕ್ಕಿದ್ದರಿಂದ ಬಲೆಯನ್ನು ಎಳೆಯು
7 ವದಕ್ಕೆ ಆಗದೆ ಹೋಯಿತು. ಆಗ ಯೇಸುವಿಗೆ ಪ್ರಿಯನಾಗಿದ್ದ ಶಿಷ್ಯನು ಪೇತ್ರನಿಗೆ—

[1] ಅಥವಾ, ಶುಭವಾಗಲಿ.

ಅವರು ಸ್ವಾಮಿಯವರು ಎಂದು ಹೇಳಿದನು. ಸ್ವಾಮಿಯವರೆಂದು ಸೀಮೋನ ಪೇತ್ರನು ಕೇಳಿ, ಮೈಮೇಲೆ ಬಟ್ಟೆಯಿಲ್ಲದವನಾಗಿದ್ದರಿಂದ, ಬಲ್ಲಿಯನ್ನು ಸುತ್ತಿಕೊಂಡು, ಸಮುದ್ರದಲ್ಲಿ ದುಮುಕಿದನು. 8 ದಡವು ದೂರವಾಗಿರದೆ ಹೆಚ್ಚು ಕಡಿಮೆ ಇನ್ನೂರು ಮೊಳದಲ್ಲಿದ್ದರಿಂದ ಉಳಿದ ಶಿಷ್ಯರು ಮೀನು ತುಂಬಿದ ಆ ಬಲೆಯನ್ನು ಎಳೆಯುತ್ತಾ ದೋಣಿಯಲ್ಲಿಯೇ ಬಂದರು. 9 ಅವರು ಭೂಮಿಗೆ ಇಳಿದಾಗ, ಕೆಂಡಗಳನ್ನೂ ಅವುಗಳ ಮೇಲೆ ಇಟ್ಟಿದ್ದ ಮೀನುಗಳನ್ನೂ ರೊಟ್ಟಿಸಹಿತವಾಗಿ ಕಂಡರು. 10 ಯೇಸು ಅವರಿಗೆ—ನೀವು ಈಗ ಹಿಡಿದ ಮೀನುಗಳಲ್ಲಿ ಕೆಲವನ್ನು ತನ್ನಿರಿ ಎಂದು ಹೇಳಲು, 11 ಸೀಮೋನ ಪೇತ್ರನು ದೋಣಿಯನ್ನು ಹತ್ತಿ ಬಲೆಯನ್ನು ಭೂಮಿಗೆ ಎಳಕೊಂಡು ಬಂದನು. ಅದು ನೂರೈವತ್ತುಮೂರು ದೊಡ್ಡ ಮೀನುಗಳಿಂದ ತುಂಬಿತ್ತು. ಅಷ್ಟು ಮೀನುಗಳು ಇದ್ದಾಗ್ಯೂ ಬಲೆ ಹರಿಯಲಿಲ್ಲ. 12 ಯೇಸು ಅವರಿಗೆ—ಬಂದು ಊಟಮಾಡಿರಿ ಎಂದು ಹೇಳಿದನು. ಶಿಷ್ಯರು ಆತನನ್ನು ಸ್ವಾಮಿಯವರೆಂದು ತಿಳಿದಿದ್ದರಿಂದ, ನೀನ್ಯಾರೆಂದು ವಿಚಾರಿಸುವದಕ್ಕೆ ಅವರಲ್ಲಿ ಒಬ್ಬರೂ ಧೈರ್ಯಪಡಲಿಲ್ಲ. 13 ಯೇಸು ಬಂದು, ರೊಟ್ಟಿಯನ್ನು ತೆಗೆದುಕೊಂಡು ಅವರಿಗೆ ಕೊಟ್ಟನು; ಹಾಗೆಯೇ ಮೀನನ್ನೂ ಕೊಟ್ಟನು. 14 ಯೇಸು ಸತ್ತು ಜೀವದಿಂದೆದ್ದ ಮೇಲೆ, ಶಿಷ್ಯರಿಗೆ ಕಾಣಿಸಿಕೊಂಡದ್ದು ಇದೇ ಮೂರನೇ ಸಾರಿ.

15 ಅವರು ಊಟಮಾಡಿದ ಮೇಲೆ ಯೇಸು ಸೀಮೋನ ಪೇತ್ರನನ್ನು—ಯೋಹಾನನ ಮಗನಾದ ಸೀಮೋನನೇ, ನೀನು ಇವರಿಗಿಂತ ಹೆಚ್ಚಾಗಿ ನನ್ನ ಮೇಲೆ ಪ್ರೀತಿ ಇಟ್ಟಿದ್ದೀಯೋ ಎಂದು ಕೇಳಲು, ಅವನು—ಹೌದು, ಸ್ವಾಮೀ, ನಿನ್ನ ಮೇಲೆ ಮಮತೆ ಇಟ್ಟಿದ್ದೇನೆಂಬುವದನ್ನು ನೀನೇ ಬಲ್ಲೆ ಅಂದನು. ಆತನು ಅವನಿಗೆ—ನನ್ನ ಕುರಿಮರಿಗಳನ್ನು ಮೇಯಿಸು ಎಂದು ಹೇಳಿದನು. 16 ಆತನು ತಿರಿಗಿ ಎರಡನೇ ಸಾರಿ ಅವನನ್ನು—ಯೋಹಾನನ ಮಗನಾದ ಸೀಮೋನನೇ, ನನ್ನ ಮೇಲೆ ಪ್ರೀತಿ ಇಟ್ಟಿದ್ದೀಯೋ ಎಂದು ಕೇಳಲು, ಅವನು—ಹೌದು, ಸ್ವಾಮೀ, ನಿನ್ನ ಮೇಲೆ ಮಮತೆ ಇಟ್ಟಿದ್ದೇನೆಂಬುವದನ್ನು ನೀನೇ ಬಲ್ಲೆ ಅಂದನು. ಆತನು ಅವನಿಗೆ—ನನ್ನ ಕುರಿಗಳನ್ನು ಕಾಯಿ ಎಂದು ಹೇಳಿದನು. 17 ಆತನು ಮೂರನೇ ಸಾರಿ—ಯೋಹಾನನ ಮಗನಾದ ಸೀಮೋನನೇ, ನನ್ನ ಮೇಲೆ ಮಮತೆ ಇಟ್ಟಿದ್ದೀಯೋ ಎಂದು ಕೇಳಿದನು. ಮೂರನೇ ಸಾರಿ ಆತನು—ನನ್ನ ಮೇಲೆ ಮಮತೆ ಇಟ್ಟಿದ್ದೀಯೋ ಎಂದು ತನ್ನನ್ನು ಕೇಳಿದ್ದಕ್ಕೆ ಪೇತ್ರನು ದುಃಖಪಟ್ಟು—ಸ್ವಾಮೀ, ನೀನು ಎಲ್ಲಾ ಬಲ್ಲೆ; ನಿನ್ನ ಮೇಲೆ ನಾನು ಮಮತೆ ಇಟ್ಟಿದ್ದೇನೆಂಬುವದು ನಿನಗೆ ತಿಳಿದದೆ ಅಂದನು. ಅವನಿಗೆ ಯೇಸು—ನನ್ನ ಕುರಿಗಳನ್ನು ಮೇಯಿಸು. 18 ನಿನಗೆ ನಿಜನಿಜವಾಗಿ ಹೇಳುತ್ತೇನೆ, ನೀನು ಯೌವನಸ್ಥನಾಗಿದ್ದಾಗ ನೀನೇ ನಡುವನ್ನು ಕಟ್ಟಿಕೊಂಡು ಇಷ್ಟಬಂದ ಕಡೆಗೆ ತಿರುಗಾಡುತ್ತಿದ್ದಿ; ಆದರೆ ನೀನು ಮುದುಕನಾದಾಗ, ನಿನ್ನ ಕೈಗಳನ್ನು ಚಾಚುವಿ, ಮತ್ತೊಬ್ಬನು ನಿನ್ನ ನಡುವನ್ನು ಕಟ್ಟಿಕೊಂಡು ನಿನಗೆ ಇಷ್ಟವಿಲ್ಲದ ಕಡೆಗೆ ನಿನ್ನನ್ನು ತೆಗೆದುಕೊಂಡು ಹೋಗುವನು ಎಂದು ಹೇಳಿದನು. 19 ಅವನು ಎಂಥಾ ಸಾವಿನಿಂದ ದೇವರನ್ನು ಮಹಿಮೆಪಡಿಸುವನು ಎಂಬುವದನ್ನು ಆತನು ಈ ಮಾತಿನಿಂದ ಸೂಚಿಸಿದನು. ಇದನ್ನು ಹೇಳಿ, ಆತನು ಅವನಿಗೆ—ನನ್ನನ್ನು ಹಿಂಬಾಲಿಸು ಎಂದು ಹೇಳಿದನು.

20 ಪೇತ್ರನು ತಿರುಗಿಕೊಂಡು ಯೇಸುವಿಗೆ ಪ್ರಿಯನಾಗಿದ್ದ ಶಿಷ್ಯನು ಹಿಂದೆ ಬರುವದನ್ನು ಕಂಡನು. ಆ ಶಿಷ್ಯನು ಊಟದಲ್ಲಿ ಯೇಸುವಿನ ಎದೆಯ ಕಡೆಗೆ ಬಾಗಿ—ಸ್ವಾಮಿಾ, 21 ನಿನ್ನನ್ನು ಹಿಡುಕೊಡುವವನು ಯಾರು ಎಂದು ಕೇಳಿದವನೇ. ಇವನನ್ನು ಪೇತ್ರನು 22 ಕಂಡು, ಯೇಸುವನ್ನು—ಸ್ವಾಮಿಾ, ಇವನ ವಿಷಯವೇನು ಎಂದು ಕೇಳಲು, ಯೇಸು ಅವನಿಗೆ—ನಾನು ಬರುವ ತನಕ ಇವನು ಇರಬೇಕೆಂದು ನನಗೆ ಮನಸ್ಸಿದ್ದರೆ, ಅದು ನಿನ 23 ಗೇನು? ನೀನು ನನ್ನನ್ನು ಹಿಂಬಾಲಿಸು ಎಂದು ಹೇಳಿದನು. ಇದರ ದೆಸೆಯಿಂದ ಆ ಶಿಷ್ಯನು ಸಾಯುವದಿಲ್ಲವೆಂಬ ಮಾತು ಸಹೋದರರಲ್ಲಿ ಹಬ್ಬಿತು. ಆದರೆ ಅವನು ಸಾಯುವ ದಿಲ್ಲವೆಂದು ಯೇಸು ಅವನಿಗೆ ಹೇಳಲಿಲ್ಲ; ನಾನು ಬರುವ ತನಕ ಅವನು ಇರಬೇಕೆಂದು ನನಗೆ ಮನಸ್ಸಿದ್ದರೆ, ಅದು ನಿನಗೇನು ಎಂತಲೇ ಆತನು ಹೇಳಿದನು.

24 ಈ ಸಂಗತಿಗಳನ್ನು ಬರೆದು ಇವುಗಳ ವಿಷಯವಾಗಿ ಸಾಕ್ಷಿ ಹೇಳುವ ಶಿಷ್ಯನು ಇವನೇ. ಇವನ ಸಾಕ್ಷಿ ಸತ್ಯವೆಂದು ನಾವು ಬಲ್ಲೆವು.

25 ಇದಲ್ಲದೆ ಯೇಸು ಮಾಡಿದ್ದು ಇನ್ನೂ ಬಹಳವಿದೆ; ಅದನ್ನೆಲ್ಲಾ ಒಂದೊಂದಾಗಿ ಬರೆಯುವದಾದರೆ, ಬರೆಯಬೇಕಾದ ಪುಸ್ತಕಗಳನ್ನು ಲೋಕವೇ ಹಿಡಿಸದೆ ಹೋದೀತೆಂದು ನಾನು ನೆನಸುತ್ತೇನೆ.

# THE ACTS OF THE APOSTLES

# ಅಪೊಸ್ತಲರ ಕೃತ್ಯಗಳು

### ಯೇಸು ಪರಲೋಕಕ್ಕೆ ಏರಿಹೋದದ್ದು.

ಥೆಯೊಫಿಲನೇ, ನಾನು ಮೊದಲು ಬರೆದ ಚರಿತ್ರೆಯಲ್ಲಿ ಯೇಸು ಮಾಡುವದಕ್ಕೂ 1
ಉಪದೇಶಿಸುವದಕ್ಕೂ ಪ್ರಾರಂಭಿಸಿದ್ದೆಲ್ಲವನ್ನು ಹೇಳಿ, ತಾನು ಆರಿಸಿಕೊಂಡಿದ್ದ ಅಪೊಸ್ತಲ 2
ರಿಗೆ ಪವಿತ್ರಾತ್ಮದ ಮೂಲಕ ಆಜ್ಞೆಕೊಟ್ಟು ಮೇಲಣಲೋಕವನ್ನೇರಿದ ದಿನದ ವರೆಗೆ
ವಿವರಿಸಿದೆನಷ್ಟೆ. ಆತನು ಬಾಧೆಪಟ್ಟು ಸತ್ತ ಮೇಲೆ ತನ್ನನ್ನು ಜೀವಂತನೆಂದು ಅನೇಕ 3
ಪ್ರಮಾಣಗಳಿಂದ ಅಪೊಸ್ತಲರಿಗೆ ತೋರಿಸಿಕೊಂಡನು. ನಾಲ್ವತ್ತು ದಿವಸಗಳ ತನಕ
ಅವರಿಗೆ ಕಾಣಿಸಿಕೊಳ್ಳುತ್ತಾ ದೇವರ ರಾಜ್ಯದ ವಿಷಯವಾದ ಸಂಗತಿಗಳನ್ನು ಹೇಳುತ್ತಾ
ಇದ್ದನು.

ಹೀಗಿರಲಾಗಿ ಆತನು ಅವರೊಂದಿಗೆ ಕೂಡಿದ್ದಾಗ್ಯೆ ಅವರಿಗೆ—ಯೋಹಾನನಂತೂ 4-5
ನೀರಿನಲ್ಲಿ ದೀಕ್ಷಾಸ್ನಾನ ಮಾಡಿಸಿದನು, ನಿಮಗಾದರೋ ಇನ್ನು ಸ್ವಲ್ಪ ದಿವಸಗಳೊಳ
ಗಾಗಿ ಪವಿತ್ರಾತ್ಮದಲ್ಲಿ ಸ್ನಾನವಾಗುವದು. ಆದಕಾರಣ ನೀವು ಯೆರೂಸಲೇಮನ್ನು
ಬಿಟ್ಟುಹೋಗದೆ, ತಂದೆ ಮಾಡಿದಂಥಾ ನೀವು ನನ್ನಿಂದ ಕೇಳಿದಂಥಾ ವಾಗ್ದಾನಕ್ಕೆ[1]
ಕಾದುಕೊಂಡಿರ್ರಿ ಎಂದು ಅಪ್ಪಣೆ ಕೊಟ್ಟನು. ಕೂಡಿಬಂದವರು ಆತನನ್ನು—ಸ್ವಾಮಿ, 6
ನೀನು ಇದೇ ಕಾಲದಲ್ಲಿ ಇಸ್ರಯೇಲ ಜನರಿಗೆ ರಾಜ್ಯವನ್ನು ತಿರಿಗಿ ಸ್ಥಾಪಿಸಿಕೊಡು
ವಿಯೋ? ಎಂದು ಕೇಳಲು, ಆತನು ಅವರಿಗೆ—ತಂದೆಯು ಸ್ವಂತ ಅಧಿಕಾರದಲ್ಲಿಟ್ಟು 7
ಕೊಂಡಿರುವ ಕಾಲಗಳನ್ನೂ ಸಮಯಗಳನ್ನೂ ತಿಳುಕೊಳ್ಳುವದು ನಿಮ್ಮ ಕೆಲಸವಲ್ಲ.
ಆದರೆ ಪವಿತ್ರಾತ್ಮ ನಿಮ್ಮ ಮೇಲೆ ಬರಲು, ನೀವು ಬಲವನ್ನು ಹೊಂದಿ ಯೆರೂಸಲೇಮಿ 8
ನಲ್ಲಿಯೂ ಎಲ್ಲಾ ಯೂದಾಯ ಸಮಾರ್ಯ ಸೀಮೆಗಳಲ್ಲಿಯೂ ಭೂಲೋಕದ ಕಟ್ಟ
ಕಡೆಯ ವರೆಗೂ ನನಗೆ ಸಾಕ್ಷಿಗಳಾಗಿರಬೇಕು ಅಂದನು. ಈ ಮಾತುಗಳನ್ನು ಹೇಳಿದ 9
ಳಿಕ, ಅವರು ನೋಡುತ್ತಾ ಇದ್ದ ಹಾಗೆ, ಆತನು ಏರಿಸಲ್ಪಟ್ಟನು; ಮೋಡವು ಆತನನ್ನು

---

[1] ಲೂಕ ೨೪, ೪೯.

10 ಕವಿದುಕೊಂಡದ್ದರಿಂದ, ಅವರ ಕಣ್ಣಿಗೆ ಮರೆಯಾದನು. ಆತನು ಹೋಗುತ್ತಿರುವಾಗ ಅವರು ಆಕಾಶದ ಕಡೆಗೆ ದೃಷ್ಟಿಸಿ ನೋಡುತ್ತಾ ಇರಲಾಗಿ, ಶುಭ್ರವಸ್ತ್ರಧಾರಿಗಳಾದ
11 ಇಬ್ಬರು-ಪುರುಷರು ಫಕ್ಕನೆ ಅವರ ಹತ್ತರ ನಿಂತುಕೊಂಡು—ಗಲಿಲಾಯದವರೇ, ನೀವು ಯಾಕೆ ಆಕಾಶದ ಕಡೆಗೆ ನೋಡುತ್ತಾ ನಿಂತಿದ್ದೀರಿ? ನಿಮ್ಮ ಬಳಿಯಿಂದ ಆಕಾಶದೊಳಕ್ಕೆ ಸೇರಿಸಲ್ಪಟ್ಟಿರುವ ಈ ಯೇಸು ಯಾವ ರೀತಿಯಲ್ಲಿ ಆಕಾಶದೊಳಕ್ಕೆ ಹೋಗಿರುವದನ್ನು ನೀವು ಕಂಡಿರೋ ಅದೇ ರೀತಿಯಲ್ಲಿ ಬರುವನು ಎಂದು ಹೇಳಿದರು.

12 ಆಗ ಅವರು ಎಣ್ಣೇಮರಗಳ ತೋಪು ಎನ್ನಿಸಿಕೊಳ್ಳುವ ಗುಡ್ಡದಿಂದ ಯೆರೂಸಲೇಮಿಗೆ ಹಿಂತಿರುಗಿ ಬಂದರು. ಆ ಗುಡ್ಡಕ್ಕೂ ಯೆರೂಸಲೇಮಿಗೂ ಸಬ್ಬತ್‌ದಿನದಲ್ಲಿ ಪ್ರಯಾಣ
13 ಮಾಡುವಷ್ಟು ದೂರ[1]. ಅವರು ಅಲ್ಲಿಗೆ ಬಂದು, ತಾವು ಇರುತ್ತಿದ್ದ ಮೇಲಂತಸ್ತಿಗೆ ಹೋದರು; ಯಾರ್ಯಾರಂದರೆ—ಪೇತ್ರ, ಯೋಹಾನ, ಯಾಕೋಬ, ಅಂದ್ರೆಯ, ಫಿಲಿಪ್ಪ, ತೋಮ, ಬಾರ್ತೊಲೊಮಾಯ, ಮತ್ತಾಯ, ಅಲ್ಫಾಯನ ಯಾಕೋಬ, ಮತಾಭಿಮಾನಿ
14 ಅನ್ನಿಸಿಕೊಂಡ ಸೀಮೋನ, ಯಾಕೋಬನ ಯೂದ, ಇವರೇ. ಇವರೆಲ್ಲರು ಏಕಮನಸ್ಸಾಗಿ ದೇವರ ಪ್ರಾರ್ಥನೆಯಲ್ಲಿ ನಿರತರಾಗಿದ್ದರು. ಕೆಲವು ಮಂದಿ ಹೆಂಗಸರೂ ಯೇಸುವಿನ ತಾಯಿಯಾದ ಮರಿಯಳೂ ಆತನ ತಮ್ಮಂದಿರೂ ಅವರ ಸಂಗಡ ಇದ್ದರು.

### ಯೂದನಿಗೆ ಬದಲಾಗಿ ಬೇರೊಬ್ಬನನ್ನು ಅಪೊಸ್ತಲನಾಗಿ ಆರಿಸಿಕೊಂಡದ್ದು.

15 ಆ ದಿವಸಗಳಲ್ಲಿ ಸುಮಾರು ನೂರಿಪ್ಪತ್ತು ಮಂದಿ ಸಹೋದರರು ಕೂಡಿಬಂದಿರಲಾಗಿ,
16 ಪೇತ್ರನು ಅವರ ಮಧ್ಯದಲ್ಲಿ ಎದ್ದು ನಿಂತು ಹೀಗಂದನು—ಸಹೋದರರೇ, ಯೇಸುವನ್ನು ಹಿಡಿದುಕೊಂಡವರಿಗೆ ದಾರೀತೋರಿಸಿದ ಯೂದನ ವಿಷಯವಾಗಿ ಪವಿತ್ರಾತ್ಮನು ದಾವೀದನ ಬಾಯಿಂದ ಮೊದಲೇ ಹೇಳಿಸಿದ ಶಾಸ್ತ್ರವಚನವು[2] ನೆರವೇರುವದು ಅವಶ್ಯವಾಗಿತ್ತು.
17 ಯೂದನು ನಮ್ಮ ಲೆಕ್ಕದಲ್ಲಿ ಸೇರಿ ಈ ಸೇವೆಯಲ್ಲಿ ಪಾಲು ಹೊಂದಿದವನಾಗಿದ್ದನು.
18 (ಈ ಮನುಷ್ಯನು ತನ್ನ ದ್ರೋಹದಿಂದ ಸಂಪಾದಿಸಿದ ಹಣಕ್ಕೆ ಒಂದು ಹೊಲವನ್ನು ಕೊಂಡುಕೊಂಡನು; ಮತ್ತು ತಲೆಕೆಳಗಾಗಿ ಬಿದ್ದು, ಅವನ ಹೊಟ್ಟೆ ಒಡೆದು ಕರುಳು
19 ಗಳೆಲ್ಲಾ ಹೊರಗೆ ಸುರಿದವು. ಇದು ಯೆರೂಸಲೇಮ್ ಪಟ್ಟಣದ ನಿವಾಸಿಗಳಿಗೆಲ್ಲಾ ತಿಳಿದುಬಂದದರಿಂದ, ಆ ಹೊಲಕ್ಕೆ ಅವರ ಮಾತಿನಲ್ಲಿ ಅಕೆಲ್ದಮಾ, ಅಂದರೆ ಜೀವಹತ್ಯದ
20 ಹೊಲ ಎಂಬ ಹೆಸರು ಬಂತು.) ಅವನ ವಿಷಯವಾಗಿ—ಅವನ ಮನೆ ಹಾಳಾಗಲಿ, ಅದರಲ್ಲಿ ವಾಸಮಾಡುವದಕ್ಕೆ ಒಬ್ಬರೂ ಇಲ್ಲದೆ ಹೋಗಲಿ ಎಂತಲೂ[3], ಅವನ ಉದ್ಯೋಗವನ್ನು ಮತ್ತೊಬ್ಬನು ತಕ್ಕೊಳ್ಳಲಿ ಎಂತಲೂ[4] ಕೀರ್ತನೆಗಳ ಗ್ರಂಥದಲ್ಲಿ ಬರೆದದೆ.
21-22 ಆದದರಿಂದ ಕರ್ತನಾದ ಯೇಸು ನಮ್ಮಲ್ಲಿ ಬರುತ್ತಾ ಹೋಗುತ್ತಾ ಇದ್ದ ಕಾಲವೆಲ್ಲಾ, ಅಂದರೆ ಯೋಹಾನನು ದೀಕ್ಷಾಸ್ನಾನಮಾಡಿಸಿದ್ದು ಮೊದಲುಗೊಂಡು ಯೇಸು ನಮ್ಮ ಬಳಿಯಿಂದ ಮೇಲಣಲೋಕವನ್ನೇರಿದ ದಿನದ ವರೆಗೂ, ನಮ್ಮ ಜೊತೆಯಲ್ಲಿದ್ದವ

---

[1] ಅಂದರೆ, ಹೆಚ್ಚು ಕಡಿಮೆ ಮುಕ್ಕಾಲು ಮೈಲಿ.
[2] ಕೀರ್ತನೆ ೪೧, ೯.
[3] ಕೀರ್ತನೆ ೬೯, ೨೫.
[4] ಕೀರ್ತನೆ ೧೦೯, ೮.

ರೊಳಗೆ ಒಬ್ಬನು ನಮ್ಮೊಂದಿಗೆ ಆತನ ಪುನರುತ್ಥಾನದ ವಿಷಯದಲ್ಲಿ ಸಾಕ್ಷಿಹೇಳುವವನಾಗ
ಬೇಕು ಅಂದನು. ಈ ಮಾತುಗಳನ್ನು ಕೇಳಿ ಅವರು ಯೂಸ್ತನೆನ್ನಿಸಿಕೊಳ್ಳುವ ಬಾರ್ಸಬ 23
ನೆಂಬ ಯೋಸೇಫನನ್ನೂ ಮತ್ತೀಯನನ್ನೂ ನಿಲ್ಲಿಸಿ, ಪ್ರಾರ್ಥನೆ ಮಾಡುತ್ತಾ—ಕರ್ತನೇ, 24-25
ಎಲ್ಲರ ಹೃದಯವನ್ನು ಬಲ್ಲಾತನೇ, ಯೂದನು ಅಪೊಸ್ತಲತನವೆಂಬ ಈ ಸೇವಾಸ್ಥಾನ
ದಿಂದ ಭ್ರಷ್ಟನಾಗಿ ತನಗೆ ತಕ್ಕ ಸ್ಥಳಕ್ಕೆ ಹೋಗಿರುವದರಿಂದ, ಆ ಸ್ಥಾನವನ್ನು ಹೊಂದುವ
ದಕ್ಕೆ ಈ ಇಬ್ಬರಲ್ಲಿ ನೀನು ಆರಿಸಿಕೊಂಡವನನ್ನು ತೋರಿಸಿಕೊಡು ಎಂದು ಹೇಳಿದರು.
ಆ ಮೇಲೆ ಅವರಿಗೋಸ್ಕರ ಚೀಟುಹಾಕಿದರು. ಚೀಟು ಮತ್ತೀಯನಿಗೆ ಬಂದದರಿಂದ 26
ಅವನು ಹನ್ನೊಂದು ಮಂದಿ ಅಪೊಸ್ತಲರ ಸಂಗಡ ಸೇರಿ ಎಣಿಸಲ್ಪಟ್ಟನು.

ಪವಿತ್ರಾತ್ಮವರವು ಬಂದದ್ದು; ಮೂರು ಸಾವಿರ ಜನ ಶಿಷ್ಯರ ಮಂಡಲಿಗೆ ಸೇರಿದ್ದು.

ಪಂಚಾಶತ್ತಮ ದಿನದ ಹಬ್ಬವು ಬಂದಿರಲಾಗಿ, ಅವರೆಲ್ಲರು ಒಂದೇ ಸ್ಥಳದಲ್ಲಿ ಕೂಡಿ **2**
ದ್ದರು. ಆಗ ಬಿರುಗಾಳಿ ಬೀಸುತ್ತದೋ ಎಂಬಂತೆ ಫಕ್ಕನೆ ಆಕಾಶದೊಳಗಿಂದ ಒಂದು 2
ಶಬ್ದವುಂಟಾಗಿ, ಅವರು ಕೂತಿದ್ದ ಮನೆಯನ್ನೆಲ್ಲಾ ತುಂಬಿಕೊಂಡಿತು. ಅದಲ್ಲದೆ ಉರಿ 3
ಯಂತಿದ್ದ ನಾಲಿಗೆಗಳು ವಿಂಗಡಿಸಿಕೊಳ್ಳುವ ಹಾಗೆ ಅವರಿಗೆ ಕಾಣಿಸಿ ಅವರಲ್ಲಿ ಒಬ್ಬೊ
ಬ್ಬರ ಮೇಲೆ ಒಂದೊಂದಾಗಿ ಕೂತುಕೊಂಡವು. ಆಗ ಅವರೆಲ್ಲರು ಪವಿತ್ರಾತ್ಮಭರಿತ 4
ರಾಗಿ, ಆ ಆತ್ಮ ತಮತಮಗೆ ನುಡಿಯುವ ಶಕ್ತಿಯನ್ನು ಕೊಡುವ ಪ್ರಕಾರ ಬೇರೆಬೇರೆ ಭಾಷೆ
ಗಳಿಂದ ಮಾತಾಡುವದಕ್ಕೆ ಪ್ರಾರಂಭಿಸಿದರು.

ಆಕಾಶದ ಕೆಳಗಿರುವ[1] ಎಲ್ಲಾ ದೇಶದವರೊಳಗಿಂದ ಬಂದ ಸದ್ಭಕ್ತರಾದ ಯೆಹೂ 5
ದ್ಯರು ಯೆರೂಸಲೇಮಿನಲ್ಲಿ ವಾಸವಾಗಿದ್ದರು. ಆ ಸಪ್ಪಳವಾದಾಗ, ಜನರು ಗುಂಪು 6
ಗುಂಪಾಗಿ ಕೂಡಿಬಂದು, ಪ್ರತಿಯೊಬ್ಬರು ತಮ್ಮತಮ್ಮ ಭಾಷೆಯಲ್ಲೇ ಇವರು ಮಾತಾಡು
ವದನ್ನು ಕೇಳಿ ಭ್ರಮೆಗೊಂಡರು. ಎಲ್ಲರು ಆಶ್ಚರ್ಯದಿಂದ ಬೆರಗಾಗಿ—ಇಗೋ, 7
ಮಾತಾಡುತ್ತಿರುವ ಇವರೆಲ್ಲರು ಗಲಿಲಾಯದವರಲ್ಲವೇ? ನಾವು ಪ್ರತಿಯೊಬ್ಬರು ನಮ್ಮ 8
ನಮ್ಮ ಹುಟ್ಟುಭಾಷೆಯಲ್ಲಿ ಇವರು ಮಾತಾಡುವದನ್ನು ಕೇಳುತ್ತೇವಲ್ಲಾ, ಇದು ಹ್ಯಾಗೆ?
ಪಾರ್ಥ್ಯರೂ ಮೇದ್ಯರೂ ಏಲಾಮ್ಯರೂ ಮೆಸೊಪೊತಾಮ್ಯ, ಯೂದಾಯ, ಕಪ್ಪದೋಕ್ಯ, 9
ಪೊಂತ, ಆಸ್ಯ, ಫ್ರುಗ್ಯ, ಪಂಫುಲ್ಯ, ಐಗುಪ್ತ, ಕುರೇನೆಯ ಮಗ್ಗುಲಲ್ಲಿರುವ ಲಿಬ್ಯ, ಈ 10
ಸೀಮೆಗಳಲ್ಲಿ ವಾಸವಾಗಿರುವವರೂ ರೋಮಾಪುರದಿಂದ ಬಂದು ಇಳಿದಿರುವ ಯೆಹೂ
ದ್ಯರೂ ಯೆಹೂದ್ಯ ಮತಾವಲಂಬಿಗಳೂ ಕ್ರೇತ್ಯರೂ ಅರಬೀದೇಶದವರೂ ಆಗಿರುವ 11
ನಾವು ನಮ್ಮನಮ್ಮ ಭಾಷೆಗಳಲ್ಲಿ ಇವರು ದೇವರ ಮಹತ್ತುಗಳ ವಿಷಯವಾಗಿ ಹೇಳುವ
ದನ್ನು ಕೇಳುತ್ತೇವೆ ಅಂದುಕೊಂಡರು. ಎಲ್ಲರು ಬೆರಗಾಗಿ ಕಳವಳಗೊಂಡು—ಇದೇ 12
ನಾಗಿರಬಹುದು ಎಂದು ಒಬ್ಬರನ್ನೊಬ್ಬರು ಕೇಳುತ್ತಿದ್ದರು. ಕೆಲವರು—ಇವರು 13
ಮದ್ಯಪಾನ ಮಾಡಿ ಮತ್ತರಾಗಿದ್ದಾರೆಂದು ಹಾಸ್ಯಮಾಡಿದರು.

---

[1] ಅಂದರೆ, ಲೋಕದಲ್ಲಿರುವ.

14 ಆಗ ಪೇತ್ರನು ಹನ್ನೊಂದು ಮಂದಿ ಅಪೊಸ್ತಲರ ಸಹಿತ ಎದ್ದು ನಿಂತು ಘಟ್ಟಿಯಾದ ಧ್ವನಿಯಿಂದ ಅವರಿಗೆ ಹೀಗೆ ಪ್ರಸಂಗಮಾಡಿದನು--ಯೆಹೂದ್ಯರೇ, ಯೆರೂಸಲೇಮಿನಲ್ಲಿ ವಾಸವಾಗಿರುವ ಎಲ್ಲಾ ಜನರೇ, ಈ ಸಂಗತಿಯು ಏನೆಂದು ನಿಮಗೆ ಗೊತ್ತಾಗುವ ಹಾಗೆ 15 ನನ್ನ ಮಾತಿಗೆ ಕಿವಿಗೊಡಿರಿ; ನೀವು ಭಾವಿಸಿದಂತೆ ಇವರು ಅಮಲೇರಿದವರಲ್ಲ; ಈಗ 16 ಹಗಲಿನ ಮೂರನೇ[1] ತಾಸಾಗಿದೆಯಷ್ಟೆ. ಆದರೆ ಇದು ಪ್ರವಾದಿಯಾದ ಯೋವೇಲನ ಮೂಲಕವಾಗಿ ಹೇಳಿಸಿದ ಸಂಗತಿ. ಅದೇನಂದರೆ—

17 ಕಡೇ ದಿವಸಗಳಲ್ಲಿ ನಾನು ಎಲ್ಲಾ ಮನುಷ್ಯರ ಮೇಲೆ ನನ್ನ ಆತ್ಮವನ್ನು ಸುರಿಸುವೆನು;
ನಿಮ್ಮಲ್ಲಿರುವ ಗಂಡಸರೂ ಹೆಂಗಸರೂ ಪ್ರವಾದಿಸುವರು;
ನಿಮ್ಮ ಯೌವನಸ್ಥರಿಗೆ ದಿವ್ಯದರ್ಶನಗಳಾಗುವವು;
ನಿಮ್ಮ ಹಿರಿಯರಿಗೆ ಕನಸುಗಳು ಬೀಳುವವು;

18 ಇದಲ್ಲದೆ, ಆ ದಿನಗಳಲ್ಲಿ, ನನ್ನ ಭಕ್ತರಾಗಿರುವ ದಾಸದಾಸಿಯರ ಮೇಲೆಯೂ ನನ್ನ ಆತ್ಮವನ್ನು ಸುರಿಸುವೆನು;
ಅವರೂ ಪ್ರವಾದಿಸುವರು.

19-20 ಕರ್ತನ ಆಗಮನದ ಗಂಭೀರವಾದ ಮಹಾದಿನವು ಬರುವದಕ್ಕೆ ಮುಂಚೆ,
ಮೇಲೆ ಆಕಾಶದಲ್ಲಿ ಅದ್ಭುತಕಾರ್ಯಗಳನ್ನೂ
ಕೆಳಗೆ ಭೂಮಿಯಲ್ಲಿ ಸೂಚಕಕಾರ್ಯಗಳನ್ನೂ ಉಂಟುಮಾಡುವೆನು.
ರಕ್ತ, ಬೆಂಕಿ, ಹಬೆಯಂತೆ ಏರುವ ಹೊಗೆ, ಇವು ಉಂಟಾಗುವವು.
ಸೂರ್ಯನು ಕತ್ತಲಾಗುವನು, ಚಂದ್ರನು ರಕ್ತವಾಗುವನು;

21 ಆದಾಗ್ಯೂ ಕರ್ತನ ನಾಮವನ್ನು ಹೇಳಿಕೊಳ್ಳುವವರೆಲ್ಲರಿಗೆ ರಕ್ಷಣೆಯಾಗುವದೆಂದು ದೇವರು ಹೇಳುತ್ತಾನೆ ಎಂಬುವದೇ[2].

22 ಇಸ್ರಯೇಲ ಜನರೇ, ನನ್ನ ಮಾತುಗಳನ್ನು ಲಾಲಿಸಿರಿ—ನಜರೇತಿನ ಯೇಸು ಇದ್ದನಲ್ಲಾ, ದೇವರು ನಿಮಗೂ ತಿಳಿದಿರುವಂತೆ ಆತನ ಕೈಯಿಂದ ಮಹತ್ತುಗಳನ್ನೂ ಅದ್ಭುತಗಳನ್ನೂ ಸೂಚಕಕಾರ್ಯಗಳನ್ನೂ ನಿಮ್ಮಲ್ಲಿ ನಡಿಸಿ ಆತನನ್ನು ತನಗೆ ಮೆಚ್ಚಿಕೆಯಾದವ 23 ನೆಂದು ನಿಮಗೆ ತೋರಿಸಿಕೊಟ್ಟನು. ಆ ಯೇಸು ದೇವರ ಸ್ಥಿರಸಂಕಲ್ಪಕ್ಕೂ ಭವಿಷ್ಯದ್ ಜ್ಞಾನಕ್ಕೂ ಅನುಸಾರವಾಗಿ ಒಪ್ಪಿಸಲ್ಪಟ್ಟಿರಲು, ನೀವು ಅನ್ಯಜನರ ಕೈಯಿಂದ ಆತನನ್ನು 24 ಶಿಲುಬೆಗೆ ಹಾಕಿಸಿ ಕೊಂದಿರಿ. ಆತನನ್ನು ದೇವರು ಮರಣವೇದನೆಗಳಿಂದ[3] ಬಿಡಿಸಿ ಎಬ್ಬಿಸಿದನು; ಯಾಕಂದರೆ ಮರಣವು ಆತನನ್ನು ಹಿಡುಕೊಂಡಿರುವದು ಅಸಾಧ್ಯ 25 ವಾಗಿತ್ತು. ಆತನ ವಿಷಯದಲ್ಲಿ ದಾವೀದನು—

ಕರ್ತನು ಯಾವಾಗಲೂ ಸನ್ನಿದುರಿನಲ್ಲಿರುವದನ್ನು ನೋಡುತ್ತಿದ್ದೆನು.
ನಾನು ಚಂಚಲವಾಗದಂತೆ ಆತನು ನನ್ನ ಬಲಗಡೆಯಲ್ಲಿಯೇ ಇದ್ದಾನೆ.

26 ಆದಕಾರಣ ನನ್ನ ಹೃದಯಕ್ಕೆ ಆನಂದವಾಯಿತು;

---

[1] ಅಂದರೆ, ಬೆಳಗ್ಗೆ ಒಂಭತ್ತು ಘಂಟೆ. [2] ಯೋವೇಲ ೨, ೨೮—೩೨.
[3] ಅಥವಾ, ಮರಣಬಂಧನಗಳಿಂದ; ಕೀರ್ತನೆ ೧೮, ೫; ೧೧೬, ೩ ನೋಡಿ.

ನನ್ನ ನಾಲಿಗೆಯು ಉಲ್ಲಾಸಧ್ವನಿಯನ್ನು ಮಾಡಿತು.
ನನ್ನ ಶರೀರವಾದರೂ ನಿರೀಕ್ಷೆಯಿಂದ ಭರವಸವುಳ್ಳದ್ದಾಗಿ ಇರುವದು;
ಯಾಕಂದರೆ ನೀನು ನನ್ನ ಜೀವಾತ್ಮವನ್ನು ಪಾತಾಳದಲ್ಲಿ ಬಿಡುವದಿಲ್ಲ, 27
ನಿನ್ನ ಪ್ರಿಯನನ್ನು ಕೊಳೆಯುವ ಅವಸ್ಥೆಯನ್ನನುಭವಿಸುವದಕ್ಕೆ ಬಿಡುವದಿಲ್ಲ.
ಜೀವಮಾರ್ಗಗಳನ್ನು ನನಗೆ ತಿಳಿಯಪಡಿಸಿದ್ದೀ; 28
ನಿನ್ನ ಸಮ್ಮುಖದಲ್ಲಿ ನನ್ನನ್ನು ಆನಂದಭರಿತನಾಗಮಾಡುವಿ[1]

ಎಂದು ಹೇಳಿದ್ದಾನೆ. ಸಹೋದರರೇ, ಮೂಲಪಿತೃವಾದ ದಾವೀದನ ವಿಷಯದಲ್ಲಿ ನಾನು 29 ಧೈರ್ಯದಿಂದ ನಿಮ್ಮ ಸಂಗಡ ಮಾತಾಡಬಹುದು, ಏನಂದರೆ—ಅವನು ತೀರಿಹೋಗಿ ಹೂಣಲ್ಪಟ್ಟನು; ಅವನ ಸಮಾಧಿ ಈ ದಿನದ ವರೆಗೂ ನಮ್ಮಲ್ಲಿ ಅದೆ. ಅವನು ಪ್ರವಾದಿ 30 ಯಾಗಿದ್ದು—ನಿನ್ನ ಸಂತತಿಯವರೊಳಗೆ ಒಬ್ಬನನ್ನು ನಾನು ನಿನ್ನ ಸಿಂಹಾಸನದ ಮೇಲೆ ಕೂಡ್ರಿಸುವೆನೆಂದು[2] ತನಗೆ ದೇವರು ಆಣೆಯಿಟ್ಟು ಹೇಳಿದ್ದನ್ನು ಬಲ್ಲವನಾಗಿ, ಮುಂದಾಗು 31 ವದನ್ನು ಕಂಡು, ಕ್ರಿಸ್ತನ ಪುನರುತ್ಥಾನವನ್ನೇ ಕುರಿತು—ಆತನು ಪಾತಾಳದಲ್ಲಿ ಬಿಡಲ್ಪಡಲಿಲ್ಲವೆಂತಲೂ ಆತನ ಶರೀರವು ಕೊಳೆಯುವ ಅವಸ್ಥೆಯನ್ನನುಭವಿಸುವದಿಲ್ಲವೆಂತಲೂ ಹೇಳಿದನು. ಈ ಯೇಸುವನ್ನೇ ದೇವರು ಎಬ್ಬಿಸಿದನು; ಇದಕ್ಕೆ ನಾವೆಲ್ಲರು ಸಾಕ್ಷಿ 32 ಗಳಾಗಿದ್ದೇವೆ. ಆತನು ದೇವರ ಬಲಗೈಯಿಂದ ಉನ್ನತ ಸ್ಥಾನಕ್ಕೆ ಏರಿಸಲ್ಪಟ್ಟು ವಾಗ್ದಾನ 33 ವಾಗಿದ್ದ ಪವಿತ್ರಾತ್ಮವರವನ್ನು ತಂದೆಯಿಂದ ಹೊಂದಿ, ನೀವು ನೋಡಿ ಕೇಳುವದನ್ನು ಸುರಿಸಿದ್ದಾನೆ. ದಾವೀದನು ಆಕಾಶಕ್ಕೆ ಏರಿಹೋಗಲಿಲ್ಲವಲ್ಲಾ. ತಾನೇ ಹೇಳುವ 34-35 ಮಾತೇನಂದರೆ—

ನಾನು ನಿನ್ನ ವಿರೋಧಿಗಳನ್ನು ನಿನ್ನ ಪಾದಪೀಠ ಮಾಡುವ ತನಕ
ನನ್ನ ಬಲಗಡೆಯಲ್ಲಿ ಕೂತುಕೊಂಡಿರು ಎಂದು
ಕರ್ತನು ನನ್ನ ಒಡೆಯನಿಗೆ ನುಡಿದನು[3]

ಎಂಬುವದೇ. ಆದದರಿಂದ ನೀವು ಶಿಲುಬೆಗೆ ಹಾಕಿಸಿದ ಈ ಯೇಸುವನ್ನೇ ದೇವರು 36 ಒಡೆಯನನ್ನಾಗಿಯೂ ಕ್ರಿಸ್ತನನ್ನಾಗಿಯೂ ಮಾಡಿದ್ದಾನೆಂಬುವದು ಇಸ್ರಯೇಲ ಕುಲದವರಿಗೆಲ್ಲಾ ನಿಸ್ಸಂದೇಹವಾಗಿ ತಿಳಿದಿರಲಿ ಎಂದು ಹೇಳಿದನು.

ಇದನ್ನು ಅವರು ಕೇಳಿ ಹೃದಯದಲ್ಲಿ ಅಲುಗು ನೆಟ್ಟಂತಾಗಿ ಪೇತ್ರನನ್ನೂ ಉಳಿದ 37 ಅಪೊಸ್ತಲರನ್ನೂ—ಸಹೋದರರೇ, ನಾವೇನು ಮಾಡಬೇಕು ಎಂದು ಕೇಳಲು, ಪೇತ್ರನು 38 ಅವರಿಗೆ—ನಿಮ್ಮ ಪಾಪಗಳು ಪರಿಹಾರವಾಗುವದಕ್ಕಾಗಿ ನಿಮ್ಮಲ್ಲಿ ಪ್ರತಿಯೊಬ್ಬರು ದೇವರ ಕಡೆಗೆ ತಿರುಗಿಕೊಂಡು ಯೇಸು ಕ್ರಿಸ್ತನ ಹೆಸರಿನ ಮೇಲೆ[4] ದೀಕ್ಷಾಸ್ನಾನಮಾಡಿಸಿ ಕೊಳ್ಳಿರಿ, ಆಗ ನೀವು ಪವಿತ್ರಾತ್ಮದಾನವನ್ನು ಹೊಂದುವಿರಿ; ಆ ವಾಗ್ದಾನವು ನಿಮಗೂ 39 ನಿಮ್ಮ ಮಕ್ಕಳಿಗೂ ದೂರವಾಗಿರುವವರೆಲ್ಲರಿಗೂ[5] ಅಂತೂ ನಮ್ಮ ದೇವರಾಗಿರುವ ಕರ್ತನು ತನ್ನ ಕಡೆಗೆ ಕರೆಯುವವರೆಲ್ಲರಿಗೆ[6] ಮಾಡೋಣವಾಗಿದೆ ಎಂದು ಹೇಳಿದನು. ಬೇರೆ ಅನೇಕವಾದ ಮಾತುಗಳಿಂದ ಅವನು ಖಂಡಿತವಾಗಿ ಸಾಕ್ಷಿ ನುಡಿದು—ವಕ್ರಬುದ್ಧಿ 40

---

1) ಕೀರ್ತನೆ ೧೬, ೮—೧೧. 2) ಕೀರ್ತನೆ ೧೩೨, ೧೧. 3) ಕೀರ್ತನೆ ೧೧೦, ೧.
4) ಅಥವಾ, ಯೇಸುವನ್ನೇ ಕ್ರಿಸ್ತನೆಂದು ಹೇಳಿ. 5) ಯೆಶಾಯ ೫೭, ೧೯. 6) ಯೋವೇಲ ೨, ೩೨.

41 ಯುಳ್ಳ ಈ ಸಂತತಿಯವರಿಂದ ತಪ್ಪಿಸಿಕೊಳ್ಳಿರಿ ಎಂದು ಅವರನ್ನು ಎಚ್ಚರಿಸಿದನು. ಅವನ ಮಾತಿಗೆ ಒಪ್ಪಿಕೊಂಡವರು ದೀಕ್ಷಾಸ್ನಾನಮಾಡಿಸಿಕೊಂಡರು. ಆ ದಿವಸ ಸುಮಾರು
42 ಮೂರು ಸಾವಿರ ಜನರು ಅವರಲ್ಲಿ ಸೇರಿದರು. ಇವರು ಅಪೊಸ್ತಲರ ಬೋಧನೆಯನ್ನು ಕೇಳುವದರಲ್ಲಿಯೂ ಸಹೋದರರ ಅನ್ಯೋನ್ಯತೆಯಲ್ಲಿಯೂ ರೊಟ್ಟಿಮುರಿಯುವದರ ಲ್ಲಿಯೂ ಪ್ರಾರ್ಥನೆಗಳಲ್ಲಿಯೂ ನಿರತರಾಗಿದ್ದರು.

43 ಎಲ್ಲರಿಗೂ ಭಯ ಉಂಟಾಯಿತು; ಇದಲ್ಲದೆ ಅನೇಕ ಅದ್ಭುತಕಾರ್ಯಗಳೂ ಸೂಚ
44 ಕಕಾರ್ಯಗಳೂ ಅಪೊಸ್ತಲರ ಕೈಯಿಂದ ನಡೆದವು. ನಂಬಿದವರೆಲ್ಲರು ಒಗ್ಗಟ್ಟಾಗಿದ್ದು
45 ತಮ್ಮದೆಲ್ಲವನ್ನೂ ಹುದುವಾಗಿ ಅನುಭೋಗಿಸುತ್ತಾ ತಮ್ಮತಮ್ಮ ಚರಸ್ಥಿರಸೊತ್ತುಗಳನ್ನು ಮಾರಿ, ಬಂದ ಹಣವನ್ನು ಎಲ್ಲರಿಗೂ ಅವರವರ ಅಗತ್ಯವಿದ್ದ ಹಾಗೆ ಹಂಚಿಕೊಡುತ್ತಾ
46 ಇದ್ದರು. ಅವರು ದಿನಾಲು ಏಕಮನಸ್ಸಿನಿಂದ ದೇವಾಲಯದಲ್ಲಿ ಕೂಡುತ್ತಾ ಮನೆ ಮನೆಗಳಲ್ಲಿ ರೊಟ್ಟಿಮುರಿದು ಉಲ್ಲಾಸದಿಂದಲೂ ಸರಲ ಹೃದಯದಿಂದಲೂ ಊಟಾ
47 ಮಾಡುತ್ತಾ ಇದ್ದರು; ದೇವರನ್ನು ಕೊಂಡಾಡುವವರಾಗಿಯೂ ಜನರೆಲ್ಲರ ದಯವನ್ನು ಹೊಂದುವವರಾಗಿಯೂ ಇದ್ದರು. ಕರ್ತನು ರಕ್ಷಣೆಯ ಮಾರ್ಗದಲ್ಲಿರುವವರನ್ನು ದಿನಾಲು ಅವರ ಮಂಡಲಿಗೆ ಸೇರಿಸುತ್ತಿದ್ದನು.

ಹುಟ್ಟುಕುಂಟನು ಪೇತ್ರನ ಮೂಲಕ ನಡೆಯುವ ಶಕ್ತಿಯನ್ನು ಹೊಂದಿದ್ದು. ಪೇತ್ರನು ಯೇಸುವಿನ ಮಹಿಮೆಯ ವಿಷಯದಲ್ಲಿ ಉಪನ್ಯಾಸಮಾಡಿದ್ದು.

**3** ಒಂದಾನೊಂದು ದಿವಸ ಪೇತ್ರ ಯೋಹಾನರು ಒಂಭತ್ತನೇ ತಾಸಿನಲ್ಲಿ[1] ನಡೆಯತಕ್ಕ
2 ಪ್ರಾರ್ಥನೆಗಾಗಿ ದೇವಾಲಯಕ್ಕೆ ಹೋಗುತ್ತಿರಲು, ಹುಟ್ಟುಕುಂಟನಾಗಿದ್ದ ಒಬ್ಬ ಮನು ಷ್ಯನನ್ನು ಯಾರೋ ಹೊತ್ತುಕೊಂಡು ಬಂದರು. ದೇವಾಲಯದೊಳಕ್ಕೆ ಹೋಗುವವ ರಿಂದ ಭಿಕ್ಷಬೇಡುವದಕ್ಕಾಗಿ ಅವನನ್ನು ದೇವಾಲಯದ ಸುಂದರದ್ವಾರವೆಂಬ ಬಾಗಿಲಿ
3 ನಲ್ಲಿ ದಿನಾಲು ಕೂಡ್ರಿಸುತ್ತಿದ್ದರು. ಅವನು ದೇವಾಲಯದೊಳಕ್ಕೆ ಹೋಗುತ್ತಿರುವ
4 ಪೇತ್ರ ಯೋಹಾನರನ್ನು ಕಂಡು, ಭಿಕ್ಷಾಕೊಡಬೇಕು ಎಂದು ಕೇಳಲು, ಪೇತ್ರ ಯೋಹಾ ನರಿಬ್ಬರೂ ಅವನನ್ನು ದೃಷ್ಟಿಸಿ ನೋಡಿದರು. ಪೇತ್ರನು—ನಮ್ಮನ್ನು ನೋಡು ಅಂದನು.
5 ಅವನು ಅವರಿಂದ ಏನಾದರೂ ದೊರಕೀತೆಂದು ನಿರೀಕ್ಷಿಸಿ ಅವರನ್ನು ಲಕ್ಷ್ಯವಿಟ್ಟು
6 ನೋಡಿದನು. ಆಗ ಪೇತ್ರನು—ಬೆಳ್ಳಿಭಂಗಾರವಂತೂ ನನ್ನಲ್ಲಿಲ್ಲ, ನನ್ನಲ್ಲಿರುವದನ್ನು ನಿನಗೆ ಕೊಡುತ್ತೇನೆ. ನಜರೇತಿನ ಯೇಸುಕ್ರಿಸ್ತನ ಹೆಸರಿನಲ್ಲೇ ಎದ್ದು ನಡೆದಾಡು
7 ಎಂದು ಹೇಳಿ ಅವನನ್ನು ಬಲಗೈಹಿಡಿದು ಎತ್ತಿದನು. ಆ ಕ್ಷಣವೇ ಅವನ ಕಾಲುಗಳಿಗೂ
8 ಹರಡುಗಳಿಗೂ ಬಲಬಂತು; ಅವನು ಹಾರಿ ನಿಂತು ನಡೆದಾಡಿದನು; ನಡೆಯುತ್ತಾ ಹಾರುತ್ತಾ ದೇವರನ್ನು ಕೊಂಡಾಡುತ್ತಾ ಅವರ ಜೊತೆಯಲ್ಲಿ ದೇವಾಲಯದೊಳಗೆ
9 ಹೋದನು. ಅವನು ನಡೆಯುತ್ತಾ ದೇವರನ್ನು ಕೊಂಡಾಡುತ್ತಾ ಇರುವದನ್ನು ಜನ
10 ರೆಲ್ಲರು ನೋಡಿ, ಇವನು ದೇವಾಲಯದ ಸುಂದರದ್ವಾರವೆಂಬ ಬಾಗಿಲಿನಲ್ಲಿ ಕೂತು

[1] ಅಂದರೆ, ಸಾಯಂಕಾಲ ಮೂರು ಘಂಟೆಗೆ.

ಭಿಕ್ಷಾಬೇಡುತ್ತಿದ್ದವನೆಂದು ಗುರುತು ಹಿಡಿದು, ಅವನಿಗೆ ಸಂಭವಿಸಿದ್ದಕ್ಕೆ ವಿಸ್ಮಯ ಹಿಡಿದವರಾಗಿ ಬಹಳ ಬೆರಗಾದರು.

11 ಅವನು ಪೇತ್ರ ಯೋಹಾನರನ್ನು ಹಿಡುಕೊಂಡೇ ಇರುವಾಗ ಆಶ್ಚರ್ಯಪಡುತ್ತಿರುವ ಆ ಜನರೆಲ್ಲರು ಅವರ ಬಳಿಗೆ ಸೊಲೊಮೋನನದೆಂಬ ಹೆಸರುಳ್ಳ ಮಂಟಪಕ್ಕೆ ಗುಂಪು ಗುಂಪಾಗಿ ಓಡಿಬಂದರು. 12 ಪೇತ್ರನು ಇದನ್ನು ನೋಡಿ ಜನರಿಗೆ—ಇಸ್ರಾಯೇಲ ಜನರೇ, ನೀವು ಯಾಕೆ ಇದಕ್ಕೆ ಆಶ್ಚರ್ಯಪಡುತ್ತೀರಿ? ನೀವು ನಮ್ಮ ಮೇಲೆ ದೃಷ್ಟಿಯಿಟ್ಟು ನೋಡುವದೇನು? ನಾವು ಸ್ವಂತ ಶಕ್ತಿಯಿಂದಾಗಲಿ ದೇವಭಕ್ತಿಯಿಂದಾಗಲಿ ಇವನನ್ನು ನಡೆಯುವಂತೆ ಮಾಡಿದೆವೆಂದು ಭಾವಿಸಬೇಡಿರಿ. 13 ನಮ್ಮ ಪಿತೃಗಳಾದ ಅಬ್ರಹಾಮ ಇಸಾಕ ಯಾಕೋಬರ ದೇವರು ತನ್ನ ಸೇವಕನಾದ ಯೇಸುವನ್ನು ಮಹಿಮೆಪಡಿಸಿದ್ದಾನೆ. ನೀವಂತೂ ಆತನನ್ನು ಹಿಡಿದುಕೊಟ್ಟಿರಿ; ಮತ್ತು ಪಿಲಾತನು ಆತನನ್ನು ಬಿಡಿಸಬೇಕೆಂದು ನಿರ್ಣಯಿಸಿದಾಗ ಆತನನ್ನು ಬೇಡವೆಂದಿರಿ. 14 ನೀವು ಪರಿಶುದ್ಧನೂ ನೀತಿವಂತನೂ ಆಗಿರುವ ಪುರುಷನನ್ನು ಬೇಡವೆಂದು ಹೇಳಿ ಕೊಲೆಗಾರನಾದ ಮನುಷ್ಯನನ್ನು ಬಿಡಿಸಿಕೊಡಬೇಕೆಂದು ಬೇಡಿಕೊಂಡು, ಜೀವನಾಯಕನನ್ನು ಕೊಲ್ಲಿಸಿದಿರಿ. 15 ಆದರೆ ದೇವರು ಆತನನ್ನು ಸತ್ತವರೊಳಗಿಂದ ಎಬ್ಬಿಸಿದನು; ಈ ವಿಷಯದಲ್ಲಿ ನಾವೇ ಸಾಕ್ಷಿಗಳು. 16 ನೀವು ನೋಡುವಂಥಾ ನಿಮಗೆ ಗುರುತಿರುವಂಥಾ ಈ ಮನುಷ್ಯನು ನೆಟ್ಟಗಾದದ್ದಕ್ಕೆ ಆತನ ಹೆಸರಿನಲ್ಲಿ ಇಟ್ಟ ನಂಬಿಕೆಯೇ ಕಾರಣ; ಆ ಹೆಸರೇ ಇವನನ್ನು ಬಲಪಡಿಸಿತು. ಆತನ ಮೂಲಕ ಉಂಟಾಗಿರುವ ನಂಬಿಕೆಯೇ ಇವನಿಗೆ ನಿಮ್ಮೆಲ್ಲರ ಮುಂದೆ ಪೂರ್ಣಕ್ಷೇಮವನ್ನು ಕೊಟ್ಟಿತು.

17 ಸಹೋದರರೇ, ಅದಿರಲಿ, ನೀವು ಆ ಕಾರ್ಯವನ್ನು ತಿಳಿಯದೆ ಮಾಡಿದಿರೆಂದು ಬಲ್ಲೆನು; ನಿಮ್ಮ ಅಧಿಕಾರಿಗಳೂ ತಿಳಿಯದೆ ಮಾಡಿದರು. 18 ಆದರೆ ದೇವರು ತಾನು ನೇಮಿಸಿದ ಕ್ರಿಸ್ತನು ಬಾಧೆಯನ್ನನುಭವಿಸಿ ಸಾಯಬೇಕೆಂಬದಾಗಿ ಎಲ್ಲಾ ಪ್ರವಾದಿಗಳ ಬಾಯಿಂದ ಮುಂಚಿತವಾಗಿ ಹೇಳಿಸಿದ ಮಾತನ್ನು ಹೀಗೆ ನೆರವೇರಿಸಿದನು. 19 ಆದದರಿಂದ ದೇವರು ನಿಮ್ಮ ಪಾಪಗಳನ್ನು ಅಳಿಸಿಬಿಡುವ ಹಾಗೆ, ನೀವು ಪಶ್ಚಾತ್ತಾಪ ಪಟ್ಟು ಆತನ ಕಡೆಗೆ ತಿರುಗಿಕೊಳ್ಳಿರಿ. ತಿರುಗಿದರೆ, ದೇವರ ಸನ್ನಿಧಾನದಿಂದ ವಿಶ್ರಾಂತಿಕಾಲಗಳು ಒದಗಿ, 20 ಆತನು ನಿಮಗೆ ನೇಮಕವಾಗಿರುವ ಕ್ರಿಸ್ತನಾದ ಯೇಸುವನ್ನು ಕಳುಹಿಸಿಕೊಡುವನು. 21 ಆದರೆ ಸಮಸ್ತವನ್ನು ಸರಿಮಾಡುವ ಕಾಲವು ಬರುವ ತನಕ ಪರಲೋಕವೇ ಆ ಕ್ರಿಸ್ತನ ಸ್ಥಾನವಾಗಿರಬೇಕು. ಆ ಕಾಲದ ವಿಷಯವಾಗಿ ದೇವರು ಪೂರ್ವದಲ್ಲಿದ್ದ ತನ್ನ ಪರಿಶುದ್ಧ ಪ್ರವಾದಿಗಳ ಬಾಯಿಂದ ಹೇಳಿಸಿದ್ದಾನೆ. 22 ಮೋಶೆಯು ಹೇಳಿದ್ದೇನಂದರೆ,—ದೇವರಾಗಿರುವ ಕರ್ತನು ನನ್ನನ್ನು ಏರ್ಪಡಿಸಿದಂತೆ ನಿಮ್ಮ ಸಹೋದರರಲ್ಲಿ ಮತ್ತೊಬ್ಬ ಪ್ರವಾದಿಯನ್ನು ನಿಮಗೆ ಏರ್ಪಡಿಸಿಕೊಡುವನು, ಆತನು ನಿಮಗೆ ಹೇಳುವ ಎಲ್ಲಾ ಮಾತುಗಳನ್ನು ಕೇಳಬೇಕು; 23 ಆ ಪ್ರವಾದಿಯ ಮಾತನ್ನು ಕೇಳದಿರುವ ಪ್ರತಿಯೊಬ್ಬನು ನಮ್ಮ ಜನರೊಳಗಿಂದ ಸಂಪೂರ್ಣವಾಗಿ ನಾಶವಾಗುವನು ಎಂಬುವದೇ[1].

[1] ದ್ವಿತೀಯ ನ್ಯಾಯ ೧೮, ೧೫.

24 ಇದಲ್ಲದೆ ಸಮುವೇಲನೂ ಅವನ ತರುವಾಯ ಬಂದು ಪ್ರವಾದಿಸಿದ ಎಲ್ಲಾ ಪ್ರವಾದಿ
25 ಗಳೂ ಸಹ ಈಗಿನ ದಿನಗಳ ವಿಷಯದಲ್ಲಿ ತಿಳಿಸಿದರು. ನೀವು ಪ್ರವಾದಿಗಳ ಶಿಷ್ಯರೂ
ದೇವರು ನಮ್ಮ ಪಿತೃಗಳ ಸಂಗಡ ಮಾಡಿದ ಒಡಂಬಡಿಕೆಗೆ ಬಾಧ್ಯರೂ ಆಗಿದ್ದೀರಿ.
ಆತನು ಅಬ್ರಹಾಮನಿಗೆ—ನಿನ್ನ ಸಂತಾನದಲ್ಲಿ ಭೂಲೋಕದ ಎಲ್ಲಾ ಗೋತ್ರದವರಿಗೆ
ಸೌಭಾಗ್ಯವು ಹುಟ್ಟಿಬರುವದೆಂದು[1] ಹೇಳಿ ಆ ಒಡಂಬಡಿಕೆಯನ್ನು ಮಾಡಿದನಲ್ಲಾ.
26 ಮೊದಲು ನಿಮಗಾಗಿಯೇ ದೇವರು ತನ್ನ ಸೇವಕನನ್ನು ಏರ್ಪಡಿಸಿ, ಈತನು ನಿಮ್ಮಲ್ಲಿ
ಪ್ರತಿಯೊಬ್ಬನನ್ನು ಅವನವನ ಕೆಟ್ಟ ನಡತೆಗಳಿಂದ ತಿರುಗಿಸಿ ನಿಮ್ಮನ್ನು ಆಶೀರ್ವದಿಸ
ಬೇಕೆಂದು ಆತನನ್ನು ಕಳುಹಿಸಿಕೊಟ್ಟಿದ್ದಾನೆ ಎಂದು ಹೇಳಿದನು.

ಯೆಹೂದ್ಯರ ಅಧಿಕಾರಿಗಳು ಪೇತ್ರ ಯೋಹಾನರನ್ನು ಹಿಡಿಸಿ ಯೇಸುವಿನ ಹೆಸರನ್ನು ಎತ್ತಬಾರದೆಂದು
ಆಜ್ಞೆಮಾಡಲು, ಅವರು ಧೈರ್ಯವಾಗಿ ಉತ್ತರಕೊಟ್ಟದ್ದು.

**4** 2 ಅಪೊಸ್ತಲರು ಜನರಿಗೆ ಉಪದೇಶಮಾಡುತ್ತಾ, ಸತ್ತವರು ಜೀವಿತರಾಗಿ ಏಳುವರು
ಎಂಬುವದನ್ನು ಯೇಸುವಿನ ದೃಷ್ಟಾಂತದಿಂದ ಸಾರುತ್ತಾ ಇದ್ದದ್ದಕ್ಕೆ ಯಾಜಕರೂ ದೇವಾ
ಲಯದ ಅಧಿಪತಿಯೂ ಸದ್ದುಕಾಯರೂ ಅಸಮಾಧಾನಪಟ್ಟು, ಅಪೊಸ್ತಲರು ಜನರ
3 ಸಂಗಡ ಮಾತಾಡುತ್ತಿರುವಾಗಲೇ ಬಂದು ಅವರನ್ನು ಹಿಡಿದು, ಆಗಲೇ ಸಾಯಂಕಾಲ
4 ವಾಗಿದ್ದದರಿಂದ ಮರುದಿನದ ವರೆಗೆ ಕಾವಲಲ್ಲಿಟ್ಟರು. ಆದರೆ ವಾಕ್ಯವನ್ನು ಕೇಳಿದವರಲ್ಲಿ
ಅನೇಕರು ನಂಬಿದರು; ಗಂಡಸರ ಸಂಖ್ಯೆ ಸುಮಾರು ಐದು ಸಾವಿರ ತನಕ ಬೆಳೆಯಿತು.
5 ಮರುದಿನ ಯೆಹೂದ್ಯರ ಅಧಿಕಾರಿಗಳೂ ಹಿರಿಯರೂ ಶಾಸ್ತ್ರಿಗಳೂ ಯೆರೂಸಲೇಮಿ
6 ನಲ್ಲಿ ಕೂಡಿಬಂದರು. ಅನ್ನನೆಂಬ ಮಹಾಯಾಜಕನೂ ಕಾಯಫನೂ ಯೋಹಾನನೂ
7 ಅಲೆಕ್ಸಾಂದ್ರನೂ ಮಹಾಯಾಜಕನ ಸಂಬಂಧಿಗಳೆಲ್ಲರೂ ಇದ್ದರು. ಇವರು ಪೇತ್ರ
ಯೋಹಾನರನ್ನು ನಡುವೆ ನಿಲ್ಲಿಸಿ—ನೀವು ಎಂಥಾ ಶಕ್ತಿಯಿಂದ ಇಲ್ಲವೆ ಎಂಥಾ ಹೆಸರಿ
8 ನಿಂದ ಇದನ್ನು ಮಾಡಿದಿರಿ ಎಂದು ಕೇಳಲು, ಪೇತ್ರನು ಪವಿತ್ರಾತ್ಮಭರಿತನಾಗಿ ಅವರಿಗೆ—
9 ಜನರ ಅಧಿಕಾರಿಗಳೇ, ಹಿರಿಯರೇ, ಒಬ್ಬ ಅಂಗಹೀನನಿಗೆ ಆದ ಉಪಕಾರದ ವಿಷಯ
ದಲ್ಲಿ ಅವನಿಗೆ ಯಾತರಿಂದ ನೆಟ್ಟಗಾಯಿತು ಎಂಬದಾಗಿ ನಮ್ಮನ್ನು ಈಹೊತ್ತು ವಿಚಾರಣೆ
10 ಮಾಡುವದಾದರೆ, ನಿಮ್ಮೆಲ್ಲರಿಗೂ ಇಸ್ರಾಯೇಲ ಜನರೆಲ್ಲರಿಗೂ ತಿಳಿಯಬೇಕಾದದ್ದೇನಂದರೆ—
ನೀವು ಶಿಲುಬೆಗೆ ಹಾಕಿಸಿದಂಥಾ ಮತ್ತು ದೇವರು ಸತ್ತವರೊಳಗಿಂದ ಎಬ್ಬಿಸಿದಂಥಾ
ನಜರೇತಿನ ಯೇಸು ಕ್ರಿಸ್ತನ ಹೆಸರಿನಿಂದಲೇ ಈ ಮನುಷ್ಯನು ನಿಮ್ಮೆದುರಿನಲ್ಲಿ ಸ್ವಸ್ಥನಾಗಿ
11 ನಿಂತಿರುತ್ತಾನೆ. ಮಂದಿರವನ್ನು ಕಟ್ಟುವವರಾದ ನೀವು ಹೀನೈಸಿದ ಕಲ್ಲು ಆತನು;
12 ಆತನೇ ಮುಖ್ಯವಾದ ಮೂಲೆಗಲ್ಲಾದನು[2]. ಬರಬೇಕಾದ ರಕ್ಷಣೆಯು ಇನ್ನಾರಲ್ಲಿ
ಯೂ ಸಿಕ್ಕುವದಿಲ್ಲ; ಆ ಹೆಸರಿನಿಂದಲೇ ಹೊರತು ಆಕಾಶದ ಕೆಳಗೆ ಮನುಷ್ಯರೊಳಗೆ
ಕೊಡಲ್ಪಟ್ಟಿರುವ ಬೇರೆ ಯಾವ ಹೆಸರಿನಿಂದಲೂ ನಮಗೆ ರಕ್ಷಣೆಯಾಗುವದಿಲ್ಲ ಎಂದು
ಹೇಳಿದನು.

[1] ಉತ್ಪತ್ತಿ ೧೨, ೩.    [2] ಕೀರ್ತನೆ ೧೧೮, ೧೨; ಲೂಕ ೨೦, ೧೭.

ಪೇತ್ರ ಯೋಹಾನರು ಧೈರ್ಯದಿಂದ ಮಾತಾಡುವದನ್ನು ಆ ಸಭಿಕರು ನೋಡಿ, 13 ಅವರು ಶಾಸ್ತ್ರಾಭ್ಯಾಸಮಾಡದ ಸಾಧಾರಣರೆಂದು ತಿಳಿದು ಆಶ್ಚರ್ಯಪಟ್ಟರು. ಇವರು ಯೇಸುವಿನ ಸಂಗಡ ಇದ್ದವರೆಂದು ಗುರುತು ಹಿಡಿದರು; ಮತ್ತು ಕ್ಷೇಮಹೊಂದಿದ 14 ಆ ಮನುಷ್ಯನು ಅವರ ಕೂಡ ನಿಂತಿರುವದನ್ನು ನೋಡಿ, ಪ್ರತಿಯಾಗಿ ಏನೂ ಮಾತಾಡ ಲಾರದೆ ಇದ್ದರು. ಆ ಮೇಲೆ ಸಭೆಯಿಂದ ಸ್ವಲ್ಪ ಹೊರಗೆ ಹೋಗಿರೆಂದು ಅವರಿಗೆ ಅಪ್ಪಣೆ 15 ಕೊಟ್ಟು—ಈ ಮನುಷ್ಯರಿಗೆ ನಾವೇನು ಮಾಡೋಣ? ಪ್ರಸಿದ್ಧವಾದ ಒಂದು ಸೂಚಕ 16 ಕಾರ್ಯವು ಇವರ ಮೂಲಕವಾಗಿ ನಡೆಯಿತೆಂಬುವದು ಯೆರೂಸಲೇಮಿನಲ್ಲಿ ವಾಸ ಮಾಡುವವರೆಲ್ಲರಿಗೂ ಗೊತ್ತಾಗಿದೆಯಷ್ಟೆ; ಅದು ಆಗಲಿಲ್ಲವೆನ್ನುವದಕ್ಕಾಗದು. ಆದರೆ 17 ಇದು ಜನರಲ್ಲಿ ಇನ್ನೂ ಹಬ್ಬದಂತೆ, ಮುಂದೆ ಆ ಹೆಸರನ್ನು ಎತ್ತಿ ಯಾರ ಸಂಗಡಲೂ ಮಾತಾಡಬಾರದೆಂದು ಅವರನ್ನು ಬೆದರಿಸೋಣ ಎಂಬದಾಗಿ ಒಬ್ಬರ ಕೂಡೊಬ್ಬರು ಆಲೋಚನೆ ಮಾಡಿಕೊಂಡು, ಅವರನ್ನು ಕರಸಿ—ಆ ಯೇಸುವಿನ ಹೆಸರನ್ನು ಎತ್ತಿ 18 ಹ್ಯಾಗೂ ಮಾತಾಡಬಾರದು, ಉಪದೇಶಮಾಡಲೂ ಬಾರದು ಎಂದು ಅವರಿಗೆ ಖಂಡಿತ ವಾಗಿ ಅಪ್ಪಣೆಕೊಟ್ಟರು. ಅದಕ್ಕೆ ಪೇತ್ರ ಯೋಹಾನರು ಅವರಿಗೆ—ದೇವರ ಮಾತನ್ನು 19 ಕೇಳುವದಕ್ಕಿಂತಲೂ ನಿಮ್ಮ ಮಾತನ್ನು ಕೇಳುವದು ದೇವರ ಮುಂದೆ ನ್ಯಾಯವೋ ಏನು? ನೀವೇ ತೀರ್ಪುಮಾಡಿಕೊಳ್ಳಿರಿ; ನಾವಂತೂ ಕಂಡು ಕೇಳಿದ್ದನ್ನು ಹೇಳದೆ ಇರ 20 ಲಾರೆವು ಎಂದು ಉತ್ತರಕೊಟ್ಟರು. ನಡೆದಿದ್ದ ಕಾರ್ಯಕ್ಕೋಸ್ಕರ ಜನರೆಲ್ಲರು ದೇವ 21 ರನ್ನು ಕೊಂಡಾಡುತ್ತಾ ಇದ್ದಕಾರಣ, ಅವರ ದೆಸೆಯಿಂದ ಸಭಿಕರು ಅಪೊಸ್ತಲರನ್ನು ದಂಡಿಸತಕ್ಕ ಉಪಾಯವನ್ನು ಕಾಣದೆ, ಅವರನ್ನು ಇನ್ನಷ್ಟು ಬೆದರಿಸಿ ಬಿಟ್ಟುಬಿಟ್ಟರು. ಈ ಸೂಚಕಕಾರ್ಯದಿಂದ ಸ್ವಸ್ಥತೆ ಹೊಂದಿದ ಆ ಮನುಷ್ಯನಿಗೆ ನಾಲ್ವತ್ತು ವರುಷಕ್ಕಿಂತ 22 ಹೆಚ್ಚು ವಯಸ್ಸಾಗಿತ್ತು.

ಇವರು ಬಿಡುಗಡೆ ಹೊಂದಿ ಸ್ವಂತ ಜನರ ಬಳಿಗೆ ಹೋಗಿ, ಮಹಾಯಾಜಕರೂ ಹಿರಿ 23 ಯರೂ ತಮಗೆ ಹೇಳಿದ ಮಾತುಗಳನ್ನೆಲ್ಲಾ ತಿಳಿಸಿದರು. ಅವರು ಕೇಳಿ, ಏಕಮನ 24 ಸ್ಸಾಗಿ ದೇವರನ್ನು ಘಟ್ಟಿಯಾದ ಧ್ವನಿಯಿಂದ ಹೀಗೆ ಪ್ರಾರ್ಥಿಸಿದರು—ಒಡೆಯನೇ, ಭೂಮ್ಯಾಕಾಶಗಳನ್ನೂ ಸಮುದ್ರವನ್ನೂ ಅವುಗಳಲ್ಲಿರುವ ಸಮಸ್ತವನ್ನೂ ಉಂಟು ಮಾಡಿದಾತನೇ, ನೀನು ಪವಿತ್ರಾತ್ಮಮೂಲಕವಾಗಿ ನಿನ್ನ ಸೇವಕನಾಗಿದ್ದ ನಮ್ಮ 25 ಪಿತೃವಾದ ದಾವೀದನ ಬಾಯಿಂದ—

ಅನ್ಯರು ಯಾಕೆ ರೇಗಿದರು?
ಜನಗಳು ವ್ಯರ್ಥಕಾರ್ಯಗಳನ್ನು ಯಾಕೆ ಯೋಚಿಸಿದರು?
ಕರ್ತನಿಗೆ ವಿರೋಧವಾಗಿಯೂ ಆತನ ಅಭಿಷಿಕ್ತನಿಗೆ ವಿರೋಧವಾಗಿಯೂ 26
ಭೂಪತಿಗಳು ಸನ್ನದ್ಧರಾಗಿ ನಿಂತರು,
ಅಧಿಕಾರಿಗಳು ಏಕವಾಗಿ ಕೂಡಿಕೊಂಡರು[1]

ಎಂದು ಹೇಳಿಸಿದಿಯಲ್ಲವೇ. ಆ ಮಾತಿಗೆ ಅನುಸಾರವಾಗಿಯೇ ಈ ಪಟ್ಟಣದಲ್ಲಿ 27

---

[1] ಕೀರ್ತನೆ ೨, ೧.

ಹೆರೋದನೂ ಪೊಂತ್ಯಪಿಲಾತನೂ ನೀನು ಅಭಿಷೇಕಿಸಿದ ನಿನ್ನ ಪವಿತ್ರ ಸೇವಕನಾದ ಯೇಸುವಿಗೆ ವಿರೋಧವಾಗಿ ಅನ್ಯಜನರ ಮತ್ತು ಇಸ್ರಯೇಲ ಜನರ ಸಹಿತವಾಗಿ ಕೂಡಿ
28 ಕೊಂಡು ನಿನ್ನ ಕೈಯೂ ನಿನ್ನ ಸಂಕಲ್ಪವೂ ಮೊದಲು ನೇಮಿಸಿದ್ದನ್ನೇ ನಡಿಸಿದರು.
29-30 ಕರ್ತನೇ, ಈಗ ನೀನು ಅವರ ಬೆದರಿಸುವಿಕೆಗಳನ್ನು ನೋಡಿ, ನಿನ್ನ ಪವಿತ್ರ ಸೇವಕ ನಾದ ಯೇಸುವಿನ ಹೆಸರಿನ ಮೂಲಕವಾಗಿ ರೋಗಪರಿಹಾರವೂ ಸೂಚಕಕಾರ್ಯಗಳೂ ಅದ್ಭುತಕಾರ್ಯಗಳೂ ಉಂಟಾಗುವಂತೆ ನಿನ್ನ ಕೈ ಚಾಚುತ್ತಿರುವಲ್ಲಿ, ನಿನ್ನ ದಾಸರು
31 ನಿನ್ನ ವಾಕ್ಯವನ್ನು ಧೈರ್ಯದಿಂದ ಹೇಳುವ ಹಾಗೆ ಅನುಗ್ರಹಿಸು ಅಂದರು. ಹೀಗೆ ಪ್ರಾರ್ಥನೆ ಮಾಡಿದ ಮೇಲೆ, ಅವರು ಕೂಡಿದ್ದ ಸ್ಥಳವು ನಡುಗಿತು, ಅವರೆಲ್ಲರು ಪವಿತ್ರಾತ್ಮ ಭರಿತರಾಗಿ ದೇವರ ವಾಕ್ಯವನ್ನು ಧೈರ್ಯದಿಂದ ಹೇಳುವವರಾದರು.

ಶಿಷ್ಯರಲ್ಲಿ ಅನೇಕರು ತಮ್ಮ ಆಸ್ತಿಯನ್ನು ಮಾರಿ, ಬಂದ ಹಣವನ್ನು ಹುದುವಾಗಿ ಅನುಭೋಗಿಸುವದಕ್ಕೆ ಕೊಡಲು, ಅನನೀಯನೂ ಸಪ್ಫೈರಳೂ ಮೋಸಮಾಡಿ ಸತ್ತದ್ದು.

32 ನಂಬಿದ್ದ ಮಂಡಲಿಯವರ ಹೃದಯವೂ ಪ್ರಾಣವೂ ಒಂದೇ ಆಗಿತ್ತು. ಇದಲ್ಲದೆ ಒಬ್ಬನಾದರೂ ತನಗಿದ್ದ ಆಸ್ತಿಯಲ್ಲಿ ಯಾವದೊಂದನ್ನೂ ಸ್ವಂತವಾದದ್ದೆಂದು ಹೇಳಲಿಲ್ಲ.
33 ಎಲ್ಲವೂ ಅವರಿಗೆ ಹುದುವಾಗಿ ಇತ್ತು. ಮತ್ತು ಕರ್ತನಾದ ಯೇಸು ಜೀವಂತನಾಗಿ ಎದ್ದುಬಂದನೆಂಬುವದಕ್ಕೆ ಅಪೊಸ್ತಲರು ಬಹು ಬಲವಾಗಿ ಸಾಕ್ಷಿಹೇಳುತ್ತಿದ್ದರು. ಬಹಳ
34 ದಯವು ಅವರೆಲ್ಲರ ಮೇಲೆ ಇತ್ತು. ಅವರಲ್ಲಿ ಕೊರತೆಪಡುವವನು ಒಬ್ಬನೂ ಇರಲಿಲ್ಲ, ಯಾಕಂದರೆ ಹೊಲಮನೆಗಳಿದ್ದವರು ಅವುಗಳನ್ನು ಮಾರಿ, ಬಂದ ಕ್ರಯವನ್ನು ತಂದು
35 ಅಪೊಸ್ತಲರ ಪಾದಗಳ ಬಳಿಯಲ್ಲಿ ಇಡುತ್ತಿದ್ದರು; ಅದನ್ನು ಪ್ರತಿಯೊಬ್ಬನಿಗೆ ಅವನವನ ಅವಶ್ಯದಂತೆ ಹಂಚಿಕೊಡುತ್ತಿದ್ದರು.
36 ಈ ಪ್ರಕಾರ ಮಾಡಿದವರೊಳಗೆ ಕುಪ್ರದ್ವೀಪದಲ್ಲಿ[1] ಹುಟ್ಟಿದ ಲೇವ್ಯನಾಗಿದ್ದ ಯೋಸೇಫನೆಂಬವನು ಒಬ್ಬನು. ಅವನಿಗೆ ಅಪೊಸ್ತಲರು ಬಾರ್ನಬ ಅಂದರೆ ಧೈರ್ಯದಾಯಕ
37 ಎಂದು ಹೆಸರಿಟ್ಟಿದ್ದರು. ಅವನು ತನಗಿದ್ದ ಭೂಮಿಯನ್ನು ಮಾರಿ, ಬಂದ ಹಣವನ್ನು ತಂದು ಅಪೊಸ್ತಲರ ಪಾದಗಳ ಬಳಿಯಲ್ಲಿ ಇಟ್ಟನು.
**5** ಆದರೆ ಅನನೀಯನೆಂಬ ಒಬ್ಬ ಮನುಷ್ಯನು ಸಪ್ಫೈರಳೆಂಬ ತನ್ನ ಹೆಂಡತಿಯ ಸಮೇತ
2 ಒಂದು ಭೂಮಿಯನ್ನು ಮಾರಿ, ಹೆಂಡತಿಯ ಸಮ್ಮತಿಯಿಂದ ಅದರ ಕ್ರಯದಲ್ಲಿ ಒಂದು ಭಾಗವನ್ನು ಬಚ್ಚಿಟ್ಟುಕೊಂಡು, ಒಂದು ಭಾಗವನ್ನು ತಂದು ಅಪೊಸ್ತಲರ ಪಾದಗಳ
3 ಬಳಿಯಲ್ಲಿ ಇಟ್ಟನು. ಆಗ ಪೇತ್ರನು—ಅನನೀಯಾ, ಸೈತಾನನು ನಿನ್ನ ಹೃದಯದಲ್ಲಿ ತುಂಬಿಕೊಂಡದ್ದೇನು? ನೀನು ಯಾಕೆ ಆ ಹೊಲದ ಕ್ರಯದಲ್ಲಿ ಕೆಲವನ್ನು ಬಚ್ಚಿಟ್ಟು
4 ಕೊಂಡು ಪವಿತ್ರಾತ್ಮನನ್ನು ವಂಚಿಸಬೇಕೆಂದಿದ್ದೀ? ಆ ಆಸ್ತಿ ಇದ್ದಾಗ ನಿನ್ನದಾಗಿಯೇ ಇತ್ತಲ್ಲವೇ? ಮಾರಿದ ಮೇಲೆಯೂ ಬಂದ ಹಣವು ನಿನ್ನ ಅಧೀನದಲ್ಲೇ ಇತ್ತಲ್ಲವೇ? ನೀನು ಈ ಕಾರ್ಯವನ್ನು ನಿನ್ನ ಹೃದಯದಲ್ಲಿ ಯೋಚಿಸಿಕೊಂಡದ್ದು ಯಾಕೆ? ನೀನು

[1] ಅಂದರೆ, ಸೈಪ್ರಸ್‌ದ್ವೀಪದಲ್ಲಿ.

ಸುಳ್ಳಾಡಿದ್ದು ಮನುಷ್ಯರಿಗಲ್ಲ, ದೇವರಿಗೆ ಆಡಿದಿ ಅಂದನು. ಈ ಮಾತುಗಳನ್ನು ಅನನೀ 5
ಯನು ಕೇಳಿದ ಕೂಡಲೆ ಬಿದ್ದು ಪ್ರಾಣಾಬಿಟ್ಟನು; ಕೇಳಿದವರೆಲ್ಲರಿಗೂ ಮಹಾ ಭಯ
ಹಿಡಿಯಿತು. ಆಗ ಯೌವನಸ್ಥರು ಎದ್ದು ಅವನನ್ನು ವಸ್ತ್ರದಲ್ಲಿ ಸುತ್ತಿ ಹೊತ್ತುಕೊಂಡು 6
ಹೋಗಿ ಹೂಣಿಟ್ಟರು.

ಸುಮಾರು ಮೂರು ತಾಸಾದ ಮೇಲೆ ಅವನ ಹೆಂಡತಿಯು ನಡೆದ ಸಂಗತಿಯನ್ನು 7
ತಿಳಿಯದೆ ಒಳಗೆ ಬಂದಳು. ಪೇತ್ರನು ಆಕೆಯನ್ನು ನೋಡಿ—ನೀವು ಆ ಹೊಲವನ್ನು 8
ಮಾರಿದ್ದು ಇಷ್ಟೇ ಹಣಕ್ಕೋ? ನನಗೆ ಹೇಳು ಎಂದು ಕೇಳಲು, ಆಕೆಯು—ಹೌದು,
ಇಷ್ಟಕ್ಕೇ ಅಂದಳು. ಆಗ ಪೇತ್ರನು ಆಕೆಗೆ—ನೀವಿಬ್ಬರೂ ಕರ್ತನ ಆತ್ಮವನ್ನು 9
ಪರೀಕ್ಷಿಸುವದಕ್ಕೆ ಯಾಕೆ ಒಡಂಬಟ್ಟಿರಿ? ಅಗೋ, ನಿನ್ನ ಗಂಡನನ್ನು ಹೂಣಿಟ್ಟವರು
ಬಂದು ಬಾಗಿಲಲ್ಲಿ ಕಾಲಿಟ್ಟಿದ್ದಾರೆ, ನಿನ್ನನ್ನೂ ಹೊತ್ತುಕೊಂಡು ಹೋಗುವರು ಎಂದು
ಹೇಳಿದನು. ಕೂಡಲೆ ಆಕೆಯು ಅವನ ಪಾದಗಳ ಮುಂದೆ ಬಿದ್ದು ಪ್ರಾಣಾಬಿಟ್ಟಳು. 10
ಆ ಯೌವನಸ್ಥರು ಒಳಗೆ ಬಂದು, ಆಕೆಯು ಸತ್ತಿರುವದನ್ನು ಕಂಡು, ಆಕೆಯನ್ನು
ಹೊತ್ತುಕೊಂಡು ಹೋಗಿ, ಗಂಡನ ಮಗ್ಗುಲಲ್ಲಿ ಹೂಣಿಟ್ಟರು. ಮತ್ತು ಸರ್ವಸಭೆಗೂ 11
ಈ ಸಂಗತಿಗಳನ್ನು ಕೇಳಿದವರೆಲ್ಲರಿಗೂ ಮಹಾ ಭಯಹಿಡಿಯಿತು.

### ಅಧಿಕಾರಿಗಳು ಅಪೊಸ್ತಲರನ್ನು ಸೆರೆಯಲ್ಲಿ ಹಾಕಿಸಲು ದೇವದೂತನು ಅವರನ್ನು ಬಿಡಿಸಿದ್ದು; ಅವರ ವಿಷಯದಲ್ಲಿ ಗಮಲಿಯೇಲನು ಹೇಳಿದ ಆಲೋಚನೆ.

ಇದಲ್ಲದೆ, ಅಪೊಸ್ತಲರ ಕೈಯಿಂದ ಅನೇಕ ಸೂಚಕಕಾರ್ಯಗಳೂ ಅದ್ಭುತಕಾರ್ಯ 12
ಗಳೂ ಜನರಲ್ಲಿ ನಡೆಯುತ್ತಾ ಇದ್ದವು. ಮತ್ತು ಎಲ್ಲರು ಒಗ್ಗಟ್ಟಾಗಿ ಸೊಲೊಮೋನನ
ಮಂಟಪದಲ್ಲಿ ಇರುತ್ತಿದ್ದರು. ಅವರ ಜೊತೆಯಲ್ಲಿರುವದಕ್ಕೆ ಮಿಕ್ಕಾದವರೊಳಗೆ ಒಬ್ಬ 13
ರಿಗೂ ಧೈರ್ಯವಿರಲಿಲ್ಲ. ಆದರೂ ಜನರು ಅವರನ್ನು ಬಹಳವಾಗಿ ಕೊಂಡಾಡುತ್ತಿದ್ದರು;
ಮತ್ತು ಇನ್ನು ಎಷ್ಟೋ ಮಂದಿ ಗಂಡಸರೂ ಹೆಂಗಸರೂ ಕರ್ತನಲ್ಲಿ ನಂಬಿಕೆಯಿಡುವವ 14
ರಾಗಿ, ಅವರ ಮಂಡಲಿಯಲ್ಲಿ ಸೇರಿಕೊಳ್ಳುತ್ತಿದ್ದರು. ಹೀಗಿರುವದರಿಂದ ಜನರು ರೋಗಿ 15
ಗಳನ್ನು ದೋಲಿಗಳ ಮೇಲೆಯೂ ಹಾಸಿಗೆಗಳ ಮೇಲೆಯೂ ಇಟ್ಟು, ಪೇತ್ರನು ಬರುವಾಗ್ಯೆ
ಅವನ ನೆರಳು ಇವರಲ್ಲಿ ಯಾವನ ಮೇಲಾದರೂ ಬೀಳಲಿ ಎಂದು ಅವರನ್ನು ಬೀದಿಗೆ
ತೆಗೆದುಕೊಂಡುಬರುತ್ತಿದ್ದರು. ಯೆರೂಸಲೇಮಿನ ಸುತ್ತಲಿರುವ ಊರುಗಳ ಜನರು ಸಹ 16
ರೋಗಿಗಳನ್ನೂ ದೆವ್ವಗಳ ಕಾಟವಿದ್ದವರನ್ನೂ ಹೊತ್ತುಕೊಂಡು ಗುಂಪುಗುಂಪಾಗಿ ಬರು
ತ್ತಿದ್ದರು; ಅವರೆಲ್ಲರಿಗೂ ವಾಸಿಯಾಗುವದು.

ಹೀಗಿರುವಲ್ಲಿ ಮಹಾಯಾಜಕನೂ ಸದ್ದುಕಾಯರ ಮತಕ್ಕೆ ಸೇರಿದವರಾದ ಅವನ 17
ಜೊತೆಯಲ್ಲಿದ್ದವರೆಲ್ಲರೂ ಎದ್ದು, ಮತಾಭಿಮಾನದಿಂದ ತುಂಬಿದವರಾಗಿ, ಅಪೊಸ್ತಲರನ್ನು 18
ಹಿಡಿದು, ಪಟ್ಟಣದ ಕಾವಲಿನಲ್ಲಿಟ್ಟರು. ಆದರೆ ಕರ್ತನ ದೂತನು ರಾತ್ರಿಯಲ್ಲಿ ಸೆರೆಮ 19
ನೆಯ ಬಾಗಿಲುಗಳನ್ನು ತೆರೆದು, ಅವರನ್ನು ಹೊರಕ್ಕೆ ಕರೆದುಕೊಂಡು ಬಂದು—ನೀವು 20
ಹೋಗಿ, ದೇವಾಲಯದಲ್ಲಿ ನಿಂತುಕೊಂಡು, ಈ ಸಜ್ಜೀವವಿಷಯವಾದ ಮಾತುಗಳನ್ನೆಲ್ಲಾ

21 ಜನರಿಗೆ ಹೇಳಿರಿ ಅಂದನು. ಅವರು ಈ ಆಜ್ಞೆಯನ್ನು ಹೊಂದಿ ಬೆಳಕುಹರಿಯು
ವಾಗಲೇ ದೇವಾಲಯದೊಳಗೆ ಹೋಗಿ ಉಪದೇಶಮಾಡಿದರು. ಇತ್ತಲಾಗಿ ಮಹಾ
ಯಾಜಕನೂ ಅವನ ಜೊತೆಯಲ್ಲಿದ್ದವರೂ ಬಂದು, ಹಿರೀಸಭೆಯನ್ನೂ ಇಸ್ರಯೇಲ್ಯರ
ಯಜಮಾನರ ಸಭೆಯೆಲ್ಲವನ್ನೂ ಕೂಡಿಸಿ, ಅವರನ್ನು ಕರತರುವದಕ್ಕೆ ಸೆರೆಮನೆಗೆ
22 ಕಳುಹಿಸಿದರು. ಓಲೇಕಾರರು ಹೋಗಿ, ಅವರನ್ನು ಸೆರೆಮನೆಯಲ್ಲಿ ಕಾಣದೆ, ಹಿಂತಿರಿಗಿ
23 ಬಂದು—ಕಾವಲಿನ ಮನೆ ಪೂರ್ಣ ಭದ್ರವಾಗಿ ಮುಚ್ಚಿರುವದನ್ನೂ ಕಾವಲುಗಾರರು
ಬಾಗಿಲುಗಳಲ್ಲಿ ನಿಂತಿರುವದನ್ನೂ ಕಂಡೆವು; ಆದರೆ ತೆರೆದಾಗ ಒಳಗೆ ಒಬ್ಬರನ್ನೂ ಕಾಣ
ಲಿಲ್ಲ ಎಂದು ತಿಳಿಸಿದರು.

24 ದೇವಾಲಯದ ಅಧಿಪತಿಯೂ ಮಹಾಯಾಜಕರೂ ಈ ಮಾತುಗಳನ್ನು ಕೇಳಿ,
25 ಇದರಿಂದ ಏನಾದೀತೋ ಎಂದು ಕಳವಳಪಟ್ಟರು. ಹೀಗಿರಲಾಗಿ ಯಾರೋ ಒಬ್ಬನು
ಬಂದು—ಅಗೋ, ನೀವು ಸೆರೆಮನೆಯಲ್ಲಿಟ್ಟಿದ್ದ ಆ ಮನುಷ್ಯರು ದೇವಾಲಯದಲ್ಲಿ ನಿಂತು
26 ಕೊಂಡು ಜನರಿಗೆ ಉಪದೇಶಮಾಡುತ್ತಿದ್ದಾರೆಂದು ಅವರಿಗೆ ತಿಳಿಸಿದನು. ಆಗ ಅಧಿ
ಪತಿಯು ಓಲೇಕಾರರ ಸಂಗಡ ಹೋಗಿ, ಅವರನ್ನು ಕರೆದುಕೊಂಡು ಬಂದನು; ಆದರೆ
27 ತಮಗೆ ಜನರು ಕಲ್ಲೆಸೆದಾರೆಂದು ಹೆದರಿ, ಬಲಾತ್ಕಾರ ಮಾಡಲಿಲ್ಲ. ಅವರನ್ನು ಕರತಂದು
ಹಿರೀಸಭೆಯ ಮುಂದೆ ನಿಲ್ಲಿಸಲು, ಮಹಾಯಾಜಕನು ಅವರನ್ನು ವಿಚಾರಣೆಮಾಡುತ್ತಾ—
28 ನೀವು ಈ ಹೆಸರನ್ನು ಎತ್ತಿ ಉಪದೇಶಮಾಡಲೇ ಬಾರದೆಂದು ನಾವು ನಿಮಗೆ ಖಂಡಿತ
ವಾಗಿ ಅಪ್ಪಣೆಕೊಟ್ಟೆವಲ್ಲಾ; ಆದಾಗ್ಯೂ ನೀವು ಯೆರೂಸಲೇಮನ್ನು ನಿಮ್ಮ ಉಪದೇಶ
ದಿಂದ ತುಂಬಿಸಿದಿರಿ, ಮತ್ತು ಆ ಮನುಷ್ಯನನ್ನು ಕೊಲ್ಲಿಸಿದ್ದಕ್ಕೆ ನಮ್ಮನ್ನು ಹೊಣೆ
29 ಮಾಡಬೇಕೆಂದಿದ್ದೀರಿ ಎಂದು ಹೇಳಿದ್ದಕ್ಕೆ, ಪೇತ್ರನೂ ಉಳಿದ ಅಪೊಸ್ತಲರೂ—ಮನು
30 ಷ್ಯರಿಗಿಂತಲೂ ದೇವರಿಗೆ ಹೆಚ್ಚಾಗಿ ವಿಧೇಯರಾಗಿರಬೇಕಲ್ಲಾ. ನೀವು ಮರದ ಕಂಭಕ್ಕೆ
31 ತೂಗಹಾಕಿ ಕೊಂದ ಯೇಸುವನ್ನು ನಮ್ಮ ಪಿತೃಗಳ ದೇವರು ಎಬ್ಬಿಸಿದನು. ದೇವರು
ಆತನನ್ನೇ ಇಸ್ರಯೇಲ ಜನರಿಗೆ ಮಾನಸಾಂತರವನ್ನೂ ಪಾಪಪರಿಹಾರವನ್ನೂ ದಯ
ಪಾಲಿಸುವದಕ್ಕಾಗಿ ನಾಯಕನೆಂತಲೂ ರಕ್ಷಕನೆಂತಲೂ ತನ್ನ ಬಲಗೈಯಿಂದ ಉನ್ನತ
32 ಸ್ಥಾನಕ್ಕೆ ಏರಿಸಿದನು. ಈ ಕಾರ್ಯಗಳಿಗೆ ನಾವು ಸಾಕ್ಷಿ; ದೇವರು ತನಗೆ ವಿಧೇಯ
ರಾಗಿರುವವರಿಗೆ ದಯಪಾಲಿಸಿರುವ ಪವಿತ್ರಾತ್ಮನೂ ಸಾಕ್ಷಿ ಎಂದು ಹೇಳಿದರು.

33 ಸಭಿಕರು ಈ ಮಾತನ್ನು ಕೇಳಿ, ರೌದ್ರವಾಗಿ, ಅವರನ್ನು ಕೊಲ್ಲಿಸಬೇಕೆಂದು ಯೋಚಿಸಿ
34 ದರು; ಆದರೆ ಎಲ್ಲಾ ಜನರಿಂದ ಮಾನಹೊಂದಿದ ನ್ಯಾಯಶಾಸ್ತ್ರಿಯಾದ ಗಮಲಿಯೇಲ
ನೆಂಬ ಒಬ್ಬ ಫರಿಸಾಯನು ಹಿರೀಸಭೆಯಲ್ಲಿ ಎದ್ದುನಿಂತು, ಈ ಮನುಷ್ಯರನ್ನು ಸ್ವಲ್ಪ
35 ಹೊತ್ತು ಹೊರಗೆ ಕಳುಹಿಸಬೇಕೆಂದು ಅಪ್ಪಣೆಕೊಟ್ಟು, ಸಭೆಯವರಿಗೆ—ಇಸ್ರಯೇಲ
ಜನರೇ, ನೀವು ಈ ಮನುಷ್ಯರ ವಿಷಯದಲ್ಲಿ ಮಾಡಬೇಕೆಂದಿರುವದನ್ನು ಕುರಿತು ಎಚ್ಚರಿಕೆ
36 ಯುಳ್ಳವರಾಗಿರ್ರಿ. ಇದಕ್ಕಿಂತ ಮುಂಚೆ ಥೈದನು ಎದ್ದು, ತಾನು ದೊಡ್ಡ ಮನುಷ್ಯ
ನೆಂದು ಹೇಳಿಕೊಂಡನು. ಅವನ ಪಕ್ಷಕ್ಕೆ ಸುಮಾರು ನಾನೂರು ಜನರು ಸೇರಿಕೊಂಡರು.
ಅವನು ಕೊಲ್ಲಲ್ಪಟ್ಟನು, ಮತ್ತು ಅವನನ್ನು ನಂಬಿದವರೆಲ್ಲರು ಚದರಿಸಲ್ಪಟ್ಟು ಇಲ್ಲವಾ
37 ದರು. ಅವನ ತರುವಾಯ ಖಾನೇಷುಮಾರಿಯ ಕಾಲದಲ್ಲಿ ಗಲಿಲಾಯದ ಯೂದನು

ಸುಳ್ಳಾಡಿದ್ದು ಮನುಷ್ಯರಿಗಲ್ಲ, ದೇವರಿಗೆ ಆಡಿದಿ ಅಂದನು. ಈ ಮಾತುಗಳನ್ನು ಅನನೀ 5
ಯನು ಕೇಳಿದ ಕೂಡಲೆ ಬಿದ್ದು ಪ್ರಾಣಾಬಿಟ್ಟನು; ಕೇಳಿದವರೆಲ್ಲರಿಗೂ ಮಹಾ ಭಯ
ಹಿಡಿಯಿತು. ಆಗ ಯೌವನಸ್ಥರು ಎದ್ದು ಅವನನ್ನು ವಸ್ತ್ರದಲ್ಲಿ ಸುತ್ತಿ ಹೊತ್ತುಕೊಂಡು 6
ಹೋಗಿ ಹೂಣಿಟ್ಟರು.

ಸುಮಾರು ಮೂರು ತಾಸಾದ ಮೇಲೆ ಅವನ ಹೆಂಡತಿಯು ನಡೆದ ಸಂಗತಿಯನ್ನು 7
ತಿಳಿಯದೆ ಒಳಗೆ ಬಂದಳು. ಪೇತ್ರನು ಆಕೆಯನ್ನು ನೋಡಿ—ನೀವು ಆ ಹೊಲವನ್ನು 8
ಮಾರಿದ್ದು ಇಷ್ಟೇ ಹಣಕ್ಕೋ? ನನಗೆ ಹೇಳು ಎಂದು ಕೇಳಲು, ಆಕೆಯು—ಹೌದು,
ಇಷ್ಟಕ್ಕೇ ಅಂದಳು. ಆಗ ಪೇತ್ರನು ಆಕೆಗೆ—ನೀವಿಬ್ಬರೂ ಕರ್ತನ ಆತ್ಮವನ್ನು 9
ಪರೀಕ್ಷಿಸುವದಕ್ಕೆ ಯಾಕೆ ಒಡಂಬಟ್ಟಿರಿ? ಅಗೋ, ನಿನ್ನ ಗಂಡನನ್ನು ಹೂಣಿಟ್ಟವರು
ಬಂದು ಬಾಗಿಲಲ್ಲಿ ಕಾಲಿಟ್ಟಿದ್ದಾರೆ, ನಿನ್ನನ್ನೂ ಹೊತ್ತುಕೊಂಡು ಹೋಗುವರು ಎಂದು
ಹೇಳಿದನು. ಕೂಡಲೆ ಆಕೆಯು ಅವನ ಪಾದಗಳ ಮುಂದೆ ಬಿದ್ದು ಪ್ರಾಣಾಬಿಟ್ಟಳು. 10
ಆ ಯೌವನಸ್ಥರು ಒಳಗೆ ಬಂದು, ಆಕೆಯು ಸತ್ತಿರುವದನ್ನು ಕಂಡು, ಆಕೆಯನ್ನು
ಹೊತ್ತುಕೊಂಡು ಹೋಗಿ, ಗಂಡನ ಮಗ್ಗುಲಲ್ಲಿ ಹೂಣಿಟ್ಟರು. ಮತ್ತು ಸರ್ವಸಭೆಗೂ 11
ಈ ಸಂಗತಿಗಳನ್ನು ಕೇಳಿದವರೆಲ್ಲರಿಗೂ ಮಹಾ ಭಯಹಿಡಿಯಿತು.

### ಅಧಿಕಾರಿಗಳು ಅಪೊಸ್ತಲರನ್ನು ಸೆರೆಯಲ್ಲಿ ಹಾಕಿಸಲು ದೇವದೂತನು ಅವರನ್ನು ಬಿಡಿಸಿದ್ದು; ಅವರ ವಿಷಯದಲ್ಲಿ ಗಮಲಿಯೇಲನು ಹೇಳಿದ ಆಲೋಚನೆ.

ಇದಲ್ಲದೆ, ಅಪೊಸ್ತಲರ ಕೈಯಿಂದ ಅನೇಕ ಸೂಚಕಕಾರ್ಯಗಳೂ ಅದ್ಭುತಕಾರ್ಯ 12
ಗಳೂ ಜನರಲ್ಲಿ ನಡೆಯುತ್ತಾ ಇದ್ದವು. ಮತ್ತು ಎಲ್ಲರು ಒಗ್ಗಟ್ಟಾಗಿ ಸೊಲೊಮೋನನ
ಮಂಟಪದಲ್ಲಿ ಇರುತ್ತಿದ್ದರು. ಅವರ ಜೊತೆಯಲ್ಲಿರುವದಕ್ಕೆ ಮಿಕ್ಕಾದವರೊಳಗೆ ಒಬ್ಬ 13
ರಿಗೂ ಧೈರ್ಯವಿರಲಿಲ್ಲ. ಆದರೂ ಜನರು ಅವರನ್ನು ಬಹಳವಾಗಿ ಕೊಂಡಾಡುತ್ತಿದ್ದರು;
ಮತ್ತು ಇನ್ನು ಎಷ್ಟೋ ಮಂದಿ ಗಂಡಸರೂ ಹೆಂಗಸರೂ ಕರ್ತನಲ್ಲಿ ನಂಬಿಕೆಯಿಡುವವ 14
ರಾಗಿ, ಅವರ ಮಂಡಲಿಯಲ್ಲಿ ಸೇರಿಕೊಳ್ಳುತ್ತಿದ್ದರು. ಹೀಗಿರುವದರಿಂದ ಜನರು ರೋಗಿ 15
ಗಳನ್ನು ದೋಲಿಗಳ ಮೇಲೆಯೂ ಹಾಸಿಗೆಗಳ ಮೇಲೆಯೂ ಇಟ್ಟು, ಪೇತ್ರನು ಬರುವಾಗ್ಯೆ
ಅವನ ನೆರಳು ಇವರಲ್ಲಿ ಯಾವನ ಮೇಲಾದರೂ ಬೀಳಲಿ ಎಂದು ಅವರನ್ನು ಬೀದಿಗೆ
ತೆಗೆದುಕೊಂಡುಬರುತ್ತಿದ್ದರು. ಯೆರೂಸಲೇಮಿನ ಸುತ್ತಲಿರುವ ಊರುಗಳ ಜನರು ಸಹ 16
ರೋಗಿಗಳನ್ನೂ ದೆವ್ವಗಳ ಕಾಟವಿದ್ದವರನ್ನೂ ಹೊತ್ತುಕೊಂಡು ಗುಂಪುಗುಂಪಾಗಿ ಬರು
ತ್ತಿದ್ದರು; ಅವರೆಲ್ಲರಿಗೂ ವಾಸಿಯಾಗುವದು.

ಹೀಗಿರುವಲ್ಲಿ ಮಹಾಯಾಜಕನೂ ಸದ್ದುಕಾಯರ ಮತಕ್ಕೆ ಸೇರಿದವರಾದ ಅವನ 17
ಜೊತೆಯಲ್ಲಿದ್ದವರೆಲ್ಲರೂ ಎದ್ದು, ಮತಾಭಿಮಾನದಿಂದ ತುಂಬಿದವರಾಗಿ, ಅಪೊಸ್ತಲರನ್ನು 18
ಹಿಡಿದು, ಪಟ್ಟಣದ ಕಾವಲಿನಲ್ಲಿಟ್ಟರು. ಆದರೆ ಕರ್ತನ ದೂತನು ರಾತ್ರಿಯಲ್ಲಿ ಸೆರೆಮ 19
ನೆಯ ಬಾಗಿಲುಗಳನ್ನು ತೆರೆದು, ಅವರನ್ನು ಹೊರಕ್ಕೆ ಕರೆದುಕೊಂಡು ಬಂದು—ನೀವು 20
ಹೋಗಿ, ದೇವಾಲಯದಲ್ಲಿ ನಿಂತುಕೊಂಡು, ಈ ಸಜ್ಜೀವವಿಷಯವಾದ ಮಾತುಗಳನ್ನೆಲ್ಲಾ

21 ಜನರಿಗೆ ಹೇಳಿರಿ ಅಂದನು. ಅವರು ಈ ಆಜ್ಞೆಯನ್ನು ಹೊಂದಿ ಬೆಳಕುಹರಿಯು ವಾಗಲೇ ದೇವಾಲಯದೊಳಗೆ ಹೋಗಿ ಉಪದೇಶಮಾಡಿದರು. ಇತ್ತಲಾಗಿ ಮಹಾ ಯಾಜಕನೂ ಅವನ ಜೊತೆಯಲ್ಲಿದ್ದವರೂ ಬಂದು, ಹಿರೀಸಭೆಯನ್ನೂ ಇಸ್ರಯೇಲ್ಯರ ಯಜಮಾನರ ಸಭೆಯೆಲ್ಲವನ್ನೂ ಕೂಡಿಸಿ, ಅವರನ್ನು ಕರತರುವದಕ್ಕೆ ಸೆರೆಮನೆಗೆ 22 ಕಳುಹಿಸಿದರು. ಓಲೇಕಾರರು ಹೋಗಿ, ಅವರನ್ನು ಸೆರೆಮನೆಯಲ್ಲಿ ಕಾಣದೆ, ಹಿಂತಿರಿಗಿ 23 ಬಂದು—ಕಾವಲಿನ ಮನೆ ಪೂರ್ಣ ಭದ್ರವಾಗಿ ಮುಚ್ಚಿರುವದನ್ನೂ ಕಾವಲುಗಾರರು ಬಾಗಿಲುಗಳಲ್ಲಿ ನಿಂತಿರುವದನ್ನೂ ಕಂಡೆವು; ಆದರೆ ತೆರೆದಾಗ ಒಳಗೆ ಒಬ್ಬರನ್ನೂ ಕಾಣ ಲಿಲ್ಲ ಎಂದು ತಿಳಿಸಿದರು.

24 ದೇವಾಲಯದ ಅಧಿಪತಿಯೂ ಮಹಾಯಾಜಕರೂ ಈ ಮಾತುಗಳನ್ನು ಕೇಳಿ, 25 ಇದರಿಂದ ಏನಾದೀತೋ ಎಂದು ಕಳವಳಪಟ್ಟರು. ಹೀಗಿರಲಾಗಿ ಯಾರೋ ಒಬ್ಬನು ಬಂದು—ಅಗೋ, ನೀವು ಸೆರೆಮನೆಯಲ್ಲಿಟ್ಟಿದ್ದ ಆ ಮನುಷ್ಯರು ದೇವಾಲಯದಲ್ಲಿ ನಿಂತು 26 ಕೊಂಡು ಜನರಿಗೆ ಉಪದೇಶಮಾಡುತ್ತಿದ್ದಾರೆಂದು ಅವರಿಗೆ ತಿಳಿಸಿದನು. ಆಗ ಅಧಿ ಪತಿಯು ಓಲೇಕಾರರ ಸಂಗಡ ಹೋಗಿ, ಅವರನ್ನು ಕರೆದುಕೊಂಡು ಬಂದನು; ಆದರೆ 27 ತಮಗೆ ಜನರು ಕಲ್ಲೆಸೆದಾರೆಂದು ಹೆದರಿ, ಬಲಾತ್ಕಾರ ಮಾಡಲಿಲ್ಲ. ಅವರನ್ನು ಕರತಂದು ಹಿರೀಸಭೆಯ ಮುಂದೆ ನಿಲ್ಲಿಸಲು, ಮಹಾಯಾಜಕನು ಅವರನ್ನು ವಿಚಾರಣೆಮಾಡುತ್ತಾ— 28 ನೀವು ಈ ಹೆಸರನ್ನು ಎತ್ತಿ ಉಪದೇಶಮಾಡಲೇ ಬಾರದೆಂದು ನಾವು ನಿಮಗೆ ಖಂಡಿತ ವಾಗಿ ಅಪ್ಪಣೆಕೊಟ್ಟೆವಲ್ಲಾ; ಆದಾಗ್ಯೂ ನೀವು ಯೆರೂಸಲೇಮನ್ನು ನಿಮ್ಮ ಉಪದೇಶ ದಿಂದ ತುಂಬಿಸಿದಿರಿ, ಮತ್ತು ಆ ಮನುಷ್ಯನನ್ನು ಕೊಲ್ಲಿಸಿದ್ದಕ್ಕೆ ನಮ್ಮನ್ನು ಹೊಣೆ 29 ಮಾಡಬೇಕೆಂದಿದ್ದೀರಿ ಎಂದು ಹೇಳಿದ್ದಕ್ಕೆ, ಪೇತ್ರನೂ ಉಳಿದ ಅಪೊಸ್ತಲರೂ—ಮನು 30 ಷ್ಯರಿಗಿಂತಲೂ ದೇವರಿಗೆ ಹೆಚ್ಚಾಗಿ ವಿಧೇಯರಾಗಿರಬೇಕಲ್ಲಾ. ನೀವು ಮರದ ಕಂಭಕ್ಕೆ 31 ತೂಗಹಾಕಿ ಕೊಂದ ಯೇಸುವನ್ನು ನಮ್ಮ ಪಿತೃಗಳ ದೇವರು ಎಬ್ಬಿಸಿದನು. ದೇವರು ಆತನನ್ನೇ ಇಸ್ರಯೇಲ ಜನರಿಗೆ ಮಾನಸಾಂತರವನ್ನೂ ಪಾಪಪರಿಹಾರವನ್ನೂ ದಯ ಪಾಲಿಸುವದಕ್ಕಾಗಿ ನಾಯಕನೆಂತಲೂ ರಕ್ಷಕನೆಂತಲೂ ತನ್ನ ಬಲಗೈಯಿಂದ ಉನ್ನತ 32 ಸ್ಥಾನಕ್ಕೆ ಏರಿಸಿದನು. ಈ ಕಾರ್ಯಗಳಿಗೆ ನಾವು ಸಾಕ್ಷಿ; ದೇವರು ತನಗೆ ವಿಧೇಯ ರಾಗಿರುವವರಿಗೆ ದಯಪಾಲಿಸಿರುವ ಪವಿತ್ರಾತ್ಮನೂ ಸಾಕ್ಷಿ ಎಂದು ಹೇಳಿದರು.

33 ಸಭಿಕರು ಈ ಮಾತನ್ನು ಕೇಳಿ, ರೌದ್ರವಾಗಿ, ಅವರನ್ನು ಕೊಲ್ಲಿಸಬೇಕೆಂದು ಯೋಚಿಸಿ 34 ದರು; ಆದರೆ ಎಲ್ಲಾ ಜನರಿಂದ ಮಾನಹೊಂದಿದ ನ್ಯಾಯಶಾಸ್ತ್ರಿಯಾದ ಗಮಲಿಯೇಲ ನೆಂಬ ಒಬ್ಬ ಫರಿಸಾಯನು ಹಿರೀಸಭೆಯಲ್ಲಿ ಎದ್ದುನಿಂತು, ಈ ಮನುಷ್ಯರನ್ನು ಸ್ವಲ್ಪ 35 ಹೊತ್ತು ಹೊರಗೆ ಕಳುಹಿಸಬೇಕೆಂದು ಅಪ್ಪಣೆಕೊಟ್ಟು, ಸಭೆಯವರಿಗೆ—ಇಸ್ರಯೇಲ ಜನರೇ, ನೀವು ಈ ಮನುಷ್ಯರ ವಿಷಯದಲ್ಲಿ ಮಾಡಬೇಕೆಂದಿರುವದನ್ನು ಕುರಿತು ಎಚ್ಚರಿಕೆ 36 ಯುಳ್ಳವರಾಗಿರ್ರಿ. ಇದಕ್ಕಿಂತ ಮುಂಚೆ ಥೈದನು ಎದ್ದು, ತಾನು ದೊಡ್ಡ ಮನುಷ್ಯ ನೆಂದು ಹೇಳಿಕೊಂಡನು. ಅವನ ಪಕ್ಷಕ್ಕೆ ಸುಮಾರು ನಾನೂರು ಜನರು ಸೇರಿಕೊಂಡರು. ಅವನು ಕೊಲ್ಲಲ್ಪಟ್ಟನು, ಮತ್ತು ಅವನನ್ನು ನಂಬಿದವರೆಲ್ಲರು ಚದರಿಸಲ್ಪಟ್ಟು ಇಲ್ಲವಾ 37 ದರು. ಅವನ ತರುವಾಯ ಖಾನೇಷುಮಾರಿಯ ಕಾಲದಲ್ಲಿ ಗಲಿಲಾಯದ ಯೂದನು

ಎದ್ದು, ಜನರನ್ನು ತನ್ನ ಸಹಿತ ತಿರುಗಿಬೀಳುವದಕ್ಕೆ ಪ್ರೇರೇಪಿಸಿದನು. ಅವನೂ ಹಾಳಾದನು; ಮತ್ತು ಅವನನ್ನು ನಂಬಿದವರೆಲ್ಲರು ಚದರಿಹೋದರು. 38 ಹೀಗಿರುವದರಿಂದ ನಾನು ನಿಮಗೆ ಹೇಳುವದೇನಂದರೆ, ನೀವು ಆ ಮನುಷ್ಯರ ಗೊಡವೆಗೆ ಹೋಗಬೇಡಿರಿ, ಅವರನ್ನು ಬಿಡಿರಿ; ಯಾಕಂದರೆ ಈ ಯೋಚನೆಯು ಅಥವಾ ಈ ಕೆಲಸವು ಮನುಷ್ಯರಿಂದಾಗಿದ್ದರೆ ತಾನೇ ಕೆಡುವದು; 39 ಅದು ದೇವರಿಂದಾಗಿದ್ದರೆ, ಅದನ್ನು ಕೆಡಿಸುವದಕ್ಕೆ ನಿಮ್ಮಿಂದ ಆಗುವದಿಲ್ಲ. ನೀವು ಒಂದು ವೇಳೆ ದೇವರ ಮೇಲೆ ಯುದ್ಧಮಾಡುವವರಾಗಿ ಕಾಣಿಸಿಕೊಂಡೀರಿ ಎಂದು ಹೇಳಿದನು.

40 ಅವರು ಅವನ ಮಾತಿಗೆ ಒಪ್ಪಿ ಅಪೊಸ್ತಲರನ್ನು ಕರೆಸಿ, ಹೊಡಿಸಿ, ಯೇಸುವಿನ ಹೆಸರನ್ನು ಹೇಳಿ ಮಾತಾಡಬಾರದೆಂದು ಅಪ್ಪಣೆಕೊಟ್ಟು, ಅವರನ್ನು ಬಿಟ್ಟುಬಿಟ್ಟರು. 41 ಅಪೊಸ್ತಲರು ತಾವು ಆ ಹೆಸರಿನ ನಿಮಿತ್ತವಾಗಿ ಅವಮಾನಪಡುವದಕ್ಕೆ ಯೋಗ್ಯರೆನ್ನಿಸಿಕೊಂಡೆವೆಂದು ಸಂತೋಷಿಸುತ್ತಾ ಹಿರೀಸಭೆಯ ಎದುರಿನಿಂದ ಹೊರಟುಹೋಗಿ, 42 ಪ್ರತಿದಿನ ಎಡೆಬಿಡದೆ ದೇವಾಲಯದಲ್ಲಿಯೂ ಮನೆಮನೆಯಲ್ಲಿಯೂ ಉಪದೇಶಮಾಡುತ್ತಾ ಕ್ರಿಸ್ತನಾದ ಯೇಸುವಿನ ವಿಷಯವಾದ ಶುಭವರ್ತಮಾನವನ್ನು ಸಾರುತ್ತಾ ಇದ್ದರು.

### ಸಭೆಯಲ್ಲಿ ಲೌಕಿಕ ಕಾರ್ಯಗಳನ್ನು ನಡಿಸುವದಕ್ಕೆ ಅಪೊಸ್ತಲರು ಏಳು ಮಂದಿ ಸಹಾಯಕರನ್ನು ನೇಮಿಸಿದ್ದು.

**6** ಆ ದಿವಸಗಳಲ್ಲಿ ಶಿಷ್ಯರು ಹೆಚ್ಚುತ್ತಾ ಬರಲಾಗಿ, ಅವರೊಳಗೆ ಗ್ರೀಕಭಾಷೆಯವರು ಇಬ್ರೀಯ ಭಾಷೆಯವರ ಮೇಲೆ—ದಿನದಿನದ ಉಪಚಾರದಲ್ಲಿ ನಮ್ಮ ವಿಧವೆಯರನ್ನು ಸರಿಯಾಗಿ ಪರಾಂಬರಿಸುವದಿಲ್ಲವೆಂದು ಗುಣುಗುಟ್ಟಿದರು. 2 ಆಗ ಹನ್ನೆರಡು ಮಂದಿ ಅಪೊಸ್ತಲರು ಶಿಷ್ಯಮಂಡಲಿಯನ್ನು ಕೂಡಿಸಿ—ನಾವು ದೇವರ ವಾಕ್ಯೋಪದೇಶವನ್ನು ಬಿಟ್ಟು ಉಪಚಾರಮಾಡುತ್ತಿರುವದು ತಕ್ಕದ್ದಲ್ಲವಲ್ಲಾ; 3 ಆದದರಿಂದ ಸಹೋದರರೇ, ಸಂಭಾವಿತರಾಗಿಯೂ, ಪವಿತ್ರಾತ್ಮದಿಂದಲೂ ಜ್ಞಾನದಿಂದಲೂ ತುಂಬಿದವರಾಗಿಯೂ ಇರುವ ಏಳು ಮಂದಿಯನ್ನು ನಿಮ್ಮೊಳಗಿಂದ ನೋಡಿ ಆರಿಸಿಕೊಳ್ಳಿರಿ; ಅವರನ್ನು ಈ ಕೆಲಸದ ಮೇಲೆ ನೇಮಿಸುವೆವು. 4 ನಾವಾದರೋ ಪ್ರಾರ್ಥನೆಯನ್ನೂ ವಾಕ್ಯೋಪದೇಶವನ್ನೂ ಮಾಡುವದರಲ್ಲಿ ನಿರತರಾಗಿರುವೆವು ಎಂದು ಹೇಳಿದರು. 5 ಈ ಮಾತು ಸರ್ವಮಂಡಲಿಗೆ ಒಳ್ಳೇದೆಂದು ತೋಚಿತು. ಅವರು ನಂಬಿಕೆಯಿಂದಲೂ ಪವಿತ್ರಾತ್ಮದಿಂದಲೂ ತುಂಬಿದ ಮನುಷ್ಯನಾದ ಸ್ತೆಫನನನ್ನೂ, ಫಿಲಿಪ್ಪ, ಪ್ರೊಖೋರ, ನಿಕನೋರ, ತಿಮೋನ, ಪರ್ಮೆನ, ಯೆಹೂದ್ಯಮತಾವಲಂಬಿಯಾದ ಅಂತಿಯೋಕ್ಯದ ನಿಕೊಲಾಯ ಎಂಬವರನ್ನೂ ಆರಿಸಿಕೊಂಡು, ಅಪೊಸ್ತಲರ ಮುಂದೆ ನಿಲ್ಲಿಸಿದರು. 6 ಅಪೊಸ್ತಲರು ಪ್ರಾರ್ಥನೆ ಮಾಡಿ, ಅವರ ಮೇಲೆ ಕೈಗಳನ್ನಿಟ್ಟು ನೇಮಿಸಿದರು.

7 ಮತ್ತು ದೇವರ ವಾಕ್ಯವು ಪ್ರಬಲವಾಯಿತು. ಶಿಷ್ಯರ ಸಂಖ್ಯೆಯು ಯೆರೂಸಲೇಮಿನಲ್ಲಿ ಬಹಳವಾಗಿ ಹೆಚ್ಚುತ್ತಾ ಬಂತು. ಯಾಜಕರಲ್ಲಿಯೂ ಬಹು ಜನರು ಕ್ರಿಸ್ತನಂಬಿಕೆಗೆ ಒಳಗಾಗುತ್ತಾ ಇದ್ದರು.

ದೇವದೂಷಣೆ ಮಾಡಿದನೆಂದು ಕೆಲವರು ಸ್ತೆಫನನ ಮೇಲೆ ತಪ್ಪುಹೊರಿಸಿದ್ದು; ಅವನು ಪ್ರತಿವಾದ ಮಾಡಿದ ಮೇಲೆ ಮರಣದಂಡನೆಯನ್ನು ಹೊಂದಿದ್ದು.

8 ಸ್ತೆಫನನು ದೇವಕೃಪೆಯಿಂದಲೂ ಸಾಮರ್ಥ್ಯದಿಂದಲೂ ತುಂಬಿದವನಾಗಿ ಜನರಲ್ಲಿ ಮಹಾ ಅದ್ಭುತಕಾರ್ಯಗಳನ್ನೂ ಸೂಚಕಕಾರ್ಯಗಳನ್ನೂ ಮಾಡುತ್ತಾ ಇದ್ದನು.
9 ಆದರೆ ಲಿಬೆರ್ತೀನರೆಂಬವರ ಸಮಾಜದವರಲ್ಲಿಯೂ ಕುರೇನ್ಯದವರ ಮತ್ತು ಅಲೆಕ್ಸಾಂದ್ರಿಯದವರ ಸಮಾಜದವರಲ್ಲಿಯೂ ಕಿಲಿಕ್ಯ ಆಸ್ಯ ಸೀಮೆಗಳಿಂದ ಬಂದವರ ಸಮಾಜದವರಲ್ಲಿಯೂ ಕೆಲವರು ಎದ್ದು, ಸ್ತೆಫನನ ಸಂಗಡ ತರ್ಕಮಾಡುತ್ತಾ ಇರಲು, ಅವನ ಮಾತಿ
10 ನಲ್ಲಿ ಕಂಡುಬಂದ ಜ್ಞಾನವನ್ನೂ ಪವಿತ್ರಾತ್ಮಶಕ್ತಿಯನ್ನೂ ಎದುರಿಸಲಾರದೆ ಹೋದರು.
11 ಆಗ ಅವರು ಕೆಲವು ಮನುಷ್ಯರಿಗೆ—ಇವನು ಮೋಶೆಗೆ ವಿರೋಧವಾಗಿಯೂ ದೇವರಿಗೆ ವಿರೋಧವಾಗಿಯೂ ದೂಷಣೆಯ ಮಾತುಗಳನ್ನಾಡುವದನ್ನು ಕೇಳಿದೆವೆಂದು ಹೇಳಿರಿ
12 ಎಂಬದಾಗಿ ಬೋಧಿಸಿ, ಜನರನ್ನೂ ಹಿರಿಯರನ್ನೂ ಶಾಸ್ತ್ರಿಗಳನ್ನೂ ರೇಗಿಸಿದರು; ಮತ್ತು
13 ಬಂದು, ಅವನನ್ನು ಹಿಡಿದು, ಹಿರೀಸಭೆಗೆ ತೆಗೆದುಕೊಂಡು ಹೋಗಿ, ಸುಳ್ಳುಸಾಕ್ಷಿಗಳನ್ನು ಕರತಂದು ನಿಲ್ಲಿಸಿದರು. ಆ ಸಾಕ್ಷಿಗಳು—ಈ ಮನುಷ್ಯನು ಈ ಪರಿಶುದ್ಧವಾದ ಸ್ಥಳಕ್ಕೆ ವಿರೋಧವಾಗಿಯೂ ಧರ್ಮಶಾಸ್ತ್ರಕ್ಕೆ ವಿರೋಧವಾಗಿಯೂ ಮಾತಾಡುವದನ್ನು ಬಿಡು
14 ವದೇ ಇಲ್ಲ. ಆ ನಜರೇತಿನ ಯೇಸು ಈ ದೇವಾಲಯವನ್ನು ಕೆಡವಿ, ಮೋಶೆ ನಮಗೆ ನೇಮಿಸಿರುವ ಆಚಾರಗಳನ್ನು ಬೇರೆ ಮಾಡುವನೆಂಬದಾಗಿ ಇವನು ಹೇಳುವದನ್ನು ನಾವು
15 ಕೇಳಿದ್ದೇವೆ ಅಂದರು. ಆಗ ಹಿರೀಸಭೆಯಲ್ಲಿ ಕೂತಿದ್ದವರೆಲ್ಲರು ಅವನನ್ನು ದೃಷ್ಟಿಸಿ ನೋಡಿ, ಅವನ ಮುಖವು ದೇವದೂತನ ಮುಖದಂತೆ ಇರುವದನ್ನು ಕಂಡರು.

**7** ಆಗ ಮಹಾಯಾಜಕನು—ಈ ಮಾತುಗಳು ಹೌದೋ ಎಂದು ಕೇಳಿದ್ದಕ್ಕೆ,
2 ಅವನು ಹೇಳಿದ್ದೇನಂದರೆ—ಸಹೋದರರೇ, ತಂದೆಗಳೇ, ಕೇಳಿರಿ—ನಮ್ಮ ಮೂಲಪುರುಷನಾದ ಅಬ್ರಹಾಮನು ಖಾರಾನಿನಲ್ಲಿ ವಾಸಮಾಡಿದ್ದಕ್ಕಿಂತ ಮುಂಚೆ ಮೆಸೊಪೊತಾಮ್ಯದಲ್ಲಿ
3 ದ್ದಾಗ ಪ್ರಭಾವಸ್ವರೂಪನಾದ ದೇವರು ಅವನಿಗೆ ಕಾಣಿಸಿಕೊಂಡು—ನಿನ್ನ ದೇಶವನ್ನೂ ನಿನ್ನ ಬಂಧುಬಳಗವನ್ನೂ ಬಿಟ್ಟು, ನಾನು ನಿನಗೆ ತೋರಿಸುವ ದೇಶಕ್ಕೆ ಹೊರಟುಹೋಗು
4 ಎಂದು ಹೇಳಿದನು[1]. ಆಗ ಅವನು ಕಸ್ದೀಯರ ದೇಶದಿಂದ ಹೊರಟುಹೋಗಿ, ಖಾರಾನಿನಲ್ಲಿ ವಾಸವಾಗಿದ್ದನು. ಅವನ ತಂದೆ ಸತ್ತ ಮೇಲೆ ದೇವರು ಅವನನ್ನು ಅಲ್ಲಿಂದ
5 ನೀವು ಈಗ ವಾಸವಾಗಿರುವ ಈ ದೇಶಕ್ಕೆ ಬರಮಾಡಿದನು. ಇದರಲ್ಲಿ ಅವನಿಗೆ ಕಾಲಿಡುವಷ್ಟು ಭೂಮಿಯನ್ನು ಸ್ವಾಸ್ಥ್ಯವಾಗಿ ಕೊಡದೆ ಅವನಿಗೆ ಮಕ್ಕಳು ಇನ್ನೂ ಇಲ್ಲದಿರುವಾಗ—ಈ ದೇಶವನ್ನು ನಿನಗೂ ನಿನ್ನ ಹಿಂದೆ ಬರುವ ನಿನ್ನ ಸಂತಾನದವರಿಗೂ ಸ್ವಾಸ್ತಿ
6 ಯಾಗಿ ಕೊಡುವೆನು ಎಂದು ಅವನಿಗೆ ವಾಗ್ದಾನಮಾಡಿದನು. ಇದಲ್ಲದೆ ದೇವರು ಹೇಳಿದ್ದೇನಂದರೆ—ನಿನ್ನ ಸಂತಾನದವರು ಅನ್ಯದೇಶದಲ್ಲಿ ಇಳುಕೊಳ್ಳುವರು. ಆ ಅನ್ಯದೇಶದವರು ಅವರನ್ನು ದಾಸರಾಗ ಮಾಡಿಕೊಂಡು ನಾನೂರು ವರುಷಗಳ ತನಕ ಕ್ರೂರ
7 ವಾಗಿ ನಡಸುವರು. ಮತ್ತು ನಿನ್ನ ಸಂತಾನದವರು ದಾಸರಾಗಿ ಸೇವಿಸುವ ಅನ್ಯ

[1] ಉತ್ಪತ್ತಿ ೧೨, ೧.

ಜನರಿಗೆ ನಾನೇ ನ್ಯಾಯತೀರಿಸುವೆನು. ಆ ಮೇಲೆ ಅವರು ಹೊರಟುಬಂದು ಈ ಸ್ಥಳದಲ್ಲಿ ನನಗೆ ಸೇವೆ ಮಾಡುವರು ಎಂಬುವದೇ[1]. ಇದಲ್ಲದೆ ದೇವರು ಅವನ ಸಂಗಡ 8 ಒಡಂಬಡಿಕೆಯನ್ನು ಮಾಡಿಕೊಂಡು, ಅದಕ್ಕೆ ಗುರುತಾಗಿ ಸುನ್ನತಿಯನ್ನು ನೇಮಿಸಿದನು[2]. ಅದಕ್ಕನುಸಾರವಾಗಿ ಅಬ್ರಹಾಮನು ಇಸಾಕನನ್ನು ಪಡೆದು, ಎಂಟನೇ ದಿವಸದಲ್ಲಿ ಅವನಿಗೆ ಸುನ್ನತಿ ಮಾಡಿದನು. ಮುಂದೆ ಇಸಾಕನು ಯಾಕೋಬನನ್ನು ಪಡೆದನು, ಯಾಕೋಬನು ಹನ್ನೆರಡು ಮಂದಿ ಮೂಲಪಿತೃಗಳನ್ನು ಪಡೆದನು.

ಮೂಲಪಿತೃಗಳು ಹೊಟ್ಟೇಕಿಚ್ಚಿನಿಂದ ಯೋಸೇಫನನ್ನು ಐಗುಪ್ತದೇಶಕ್ಕೆ ಮಾರಿ 9 ಬಿಟ್ಟರು. ಅಲ್ಲಿ ದೇವರು ಅವನ ಸಂಗಡ ಇದ್ದು, ಅವನಿಗೆ ಬಂದ ಎಲ್ಲಾ ಸಂಕಟಗಳಿಂದ 10 ಅವನನ್ನು ಬಿಡಿಸಿ, ಐಗುಪ್ತದೇಶದ ಅರಸನಾದ ಫರೋಹನನ ಸಮ್ಮುಖದಲ್ಲಿ ದಯಾಪಾತ್ರನಾಗಿಯೂ ಜ್ಞಾನವುಳ್ಳವನಾಗಿಯೂ ಇರುವಂತೆ ಅನುಗ್ರಹಿಸಿದನು. ಫರೋಹನನು ಅವನನ್ನು ಐಗುಪ್ತದೇಶದ ಮೇಲೆಯೂ ತನ್ನ ಎಲ್ಲಾ ಮನೆಯ ಮೇಲೆಯೂ ಅಧಿಕಾರಿಯಾಗಿ ಇಟ್ಟನು. ಆಗ ಐಗುಪ್ತ ಕಾನಾನದೇಶಗಳಲ್ಲಿ ಎಲ್ಲೆಲ್ಲಿಯೂ ಬರ ಬಂದು ದೊಡ್ಡ 11 ಸಂಕಟವಾಯಿತು; ನಮ್ಮ ಪಿತೃಗಳಿಗೆ ಕಾಳುಕಡ್ಡಿ ಸಿಕ್ಕಲಿಲ್ಲ. ಆದರೆ ಐಗುಪ್ತದೇಶ 12 ದಲ್ಲಿ ದವಸಧಾನ್ಯ ಉಂಟೆಂದು ಯಾಕೋಬನು ಕೇಳಿ, ನಮ್ಮ ಪಿತೃಗಳನ್ನು ಮೊದಲು ಒಂದು ಸಾರಿ ಅಲ್ಲಿಗೆ ಕಳುಹಿಸಿದನು. ಅವರು ಎರಡನೇ ಸಾರಿ ಬಂದಾಗ ಯೋಸೇ 13 ಫನು ತನ್ನ ಅಣ್ಣತಮ್ಮಂದಿರಿಗೆ ತನ್ನ ಗುರುತು ಸಿಕ್ಕುವಂತೆ ಮಾಡಿದನು. ಮತ್ತು ಯೋಸೇಫನ ವಂಶವು ಫರೋಹನನಿಗೆ ತಿಳಿಯಬಂತು. ಆ ಮೇಲೆ ಯೋಸೇಫನು ತನ್ನ ತಂದೆಯಾದ 14 ಯಾಕೋಬನನ್ನೂ ತನ್ನ ಎಲ್ಲಾ ಬಂಧುಬಳಗವನ್ನೂ ಒಟ್ಟಿಗೆ ಎಪ್ಪತ್ತೈದು ಮಂದಿಯನ್ನು ಕರಸಿಕೊಳ್ಳಲಾಗಿ[3] ಯಾಕೋಬನು ಐಗುಪ್ತದೇಶಕ್ಕೆ ಇಳಿದುಹೋದನು. ಅಲ್ಲಿ ಅವನೂ 15 ನಮ್ಮ ಪಿತೃಗಳೂ ತೀರಿಹೋದರು. ಅವರನ್ನು ಶೇಕೆಮಿಗೆ ತೆಗೆದುಕೊಂಡು ಹೋಗಿ, 16 ಅಲ್ಲಿ ಹಮ್ಮೋರನ ಮಕ್ಕಳಿಂದ ಅಬ್ರಹಾಮನು ಬೆಳ್ಳೀಕೊಟ್ಟು ಕೊಂಡುಕೊಂಡಿದ್ದ ಸಮಾಧಿಯೊಳಗೆ ಇಟ್ಟರು.

ಆದರೆ ದೇವರು ಅಬ್ರಹಾಮನಿಗೆ ವಾಗ್ದಾನಮಾಡಿದ್ದ ಕಾಲವು ಹತ್ತರಕ್ಕೆ ಬರುತ್ತಿರು 17 ವಾಗ ನಮ್ಮ ಜನರು ಐಗುಪ್ತದೇಶದಲ್ಲಿ ಹೆಚ್ಚಿ ಬಹಳವಾದರು. ಕಡೆಗೆ ಯೋಸೇಫನನ್ನು 18 ಅರಿಯದಿದ್ದ ಬೇರೊಬ್ಬ ಅರಸನು ರಾಜ್ಯಾಧಿಕಾರಕ್ಕೆ ಬಂದನು. ಈ ಅರಸನು ಕುಯು 19 ಕ್ತಿಯಿಂದ ನಮ್ಮ ಜನರನ್ನು ತಗ್ಗಿಸಿ, ಅವರ ಮಕ್ಕಳನ್ನು ಜೀವದಿಂದುಳಿಸಬಾರದೆಂದು ಹೊರಗೆ ಹಾಕಿಸಿ ನಮ್ಮ ಪಿತೃಗಳನ್ನು ಕ್ರೂರವಾಗಿ ನಡಸಿದನು. ಆ ಸಮಯದಲ್ಲೇ 20 ಮೋಶೆಯು ಹುಟ್ಟಿದನು. ಅವನು ದಿವ್ಯ ಸುಂದರನಾಗಿದ್ದನು; ಮತ್ತು ತಂದೆಯ ಮನೆಯಲ್ಲಿ ಮೂರು ತಿಂಗಳು ಸಾಕಲ್ಪಟ್ಟನು. ಆ ಮೇಲೆ ಅವನನ್ನು ಹೊರಗೆ ಹಾಕಿ 21 ದಾಗ, ಫರೋಹನನ ಮಗಳು ಅವನನ್ನು ಎತ್ತಿಕೊಂಡು ಹೋಗಿ, ತನ್ನ ಮಗನಾಗಿ ಸಾಕಿದಳು. ಮೋಶೆಯು ಐಗುಪ್ತದೇಶದವರ ಸರ್ವ ವಿದ್ಯೆಗಳಲ್ಲಿಯೂ ಉಪದೇಶಹೊಂದಿ, 22 ಮಾತುಗಳಲ್ಲಿಯೂ ಕಾರ್ಯಗಳಲ್ಲಿಯೂ ಸಮರ್ಥನಾದನು. ಅವನಿಗೆ ನಾಲ್ವತ್ತು ವರುಷ 23

---

1) ಉತ್ಪತ್ತಿ ೧೫, ೧೩. ೧೪.   2) ಉತ್ಪತ್ತಿ ೧೭, ೧೦.   3) ಉತ್ಪತ್ತಿ ೪೬, ೧—೯.

ವಯಸ್ಸು ತುಂಬುತ್ತಾ ಇರಲು, ಇಸ್ರಯೇಲ ವಂಶಸ್ಥರಾದ ತನ್ನ ಸಹೋದರರನ್ನು
24 ಹೋಗಿನೋಡಬೇಕೆಂಬ ಆಶೆಯು ಅವನ ಹೃದಯದಲ್ಲಿ ಹುಟ್ಟಿತು. ಅವರಲ್ಲಿ ಒಬ್ಬ
ನಿಗೆ ಅನ್ಯಾಯವಾಗುವದನ್ನು ಅವನು ನೋಡಿ, ಅವನಿಗೆ ಆಶ್ರಯಕೊಟ್ಟು, ಪೀಡಿಸುವ
25 ಐಗುಪ್ತ್ಯನನ್ನು ಹೊಡೆದು ಮುಯ್ಯಿಗೆ ಮುಯ್ಯಿ ತೀರಿಸಿದನು. ದೇವರು ತನ್ನ ಕೈಯಿಂದ
ಬಿಡುಗಡೆಯನ್ನು ಉಂಟುಮಾಡುತ್ತಾನೆಂಬುವದು ತನ್ನ ಸಹೋದರರಿಗೆ ತಿಳಿದುಬರುವ
26 ದೆಂದು ಭಾವಿಸಿದನು; ಆದರೆ ಅವರು ಹಾಗೆ ತಿಳುಕೊಳ್ಳಲಿಲ್ಲ. ಮರುದಿನ ತಾವು
ತಾವೇ ಹೊಡೆದಾಡಿಕೊಳ್ಳುತ್ತಿರುವಾಗ, ಅವನು ಎದುರಾಗಿ ಬಂದು—ಜನರೇ, ನೀವು
ಸಹೋದರರಲ್ಲವೇ? ನೀವ್ಯಾಕೆ ಒಬ್ಬರಿಗೊಬ್ಬರು ಅನ್ಯಾಯಮಾಡುತ್ತೀರಿ ಎಂದು
27 ಹೇಳಿ, ಅವರನ್ನು ಸಮಾಧಾನಪಡಿಸಬೇಕೆಂದಿದ್ದನು. ಆದರೆ ತನ್ನ ಸ್ವಕುಲದವನಿಗೆ
ಅನ್ಯಾಯಮಾಡುತ್ತಿದ್ದವನು—ನಿನ್ನನ್ನು ನಮ್ಮ ಮೇಲೆ ಅಧಿಕಾರಿಯಾಗಿಯೂ ನ್ಯಾಯಾ
28 ಧಿಪತಿಯಾಗಿಯೂ ಇಟ್ಟವರ್ಯಾರು? ನೀನು ನಿನ್ನೆ ಆ ಐಗುಪ್ತ್ಯನನ್ನು ಕೊಂದಂತೆ
29 ನನ್ನನ್ನೂ ಕೊಲ್ಲಬೇಕೆಂದಿದ್ದೀಯೋ ಎಂದು ಅವನನ್ನು ನೂಕಿಬಿಟ್ಟನು. ಈ ಮಾತನ್ನು
ಕೇಳಿ ಮೋಶೆಯು ಓಡಿಹೋಗಿ, ಮಿದ್ಯಾನ್‌ದೇಶದಲ್ಲಿ ಪ್ರವಾಸಿಯಾದನು. ಅಲ್ಲಿ ಇಬ್ಬರು
ಗಂಡುಮಕ್ಕಳನ್ನು ಪಡೆದನು.

30 ನಾಲ್ವತ್ತು ವರುಷ ತುಂಬಿದ ಮೇಲೆ ಅವನಿಗೆ ದೇವದೂತನು ಸೀನಾಯಿಬೆಟ್ಟದ
ಅಡವಿಯಲ್ಲಿ ಬೆಂಕಿಯಿಂದ ಉರಿಯುವ ಮುಳ್ಳಿನ ಪೊದೆಯಲ್ಲಿ ಕಾಣಿಸಿಕೊಂಡನು.
31 ಮೋಶೆಯು ಅದನ್ನು ಕಂಡು, ಆ ನೋಟಕ್ಕೆ ಆಶ್ಚರ್ಯಪಟ್ಟು, ಚನ್ನಾಗಿ ನೋಡಬೇಕೆಂದು
32 ಹತ್ತರ ಬರಲು—ನಾನು ನಿನ್ನ ಪಿತೃಗಳಾದ ಅಬ್ರಹಾಮ ಇಸಾಕ ಯಾಕೋಬರ ದೇವರು
ಎಂದು ಕರ್ತನ ಶಬ್ದವುಂಟಾಯಿತು[1]. ಆಗ ಮೋಶೆಯು ನಡುಗುತ್ತಾ ಸ್ಥಿರವಾಗಿ
33 ನೋಡುವದಕ್ಕೆ ಧೈರ್ಯವಿಲ್ಲದವನಾದನು. ಮತ್ತು ಕರ್ತನು ಅವನಿಗೆ—ನಿನ್ನ ಕಾಲಲ್ಲಿ
ರುವ ಕೆರಗಳನ್ನು ತೆಗೆದುಹಾಕು; ನೀನು ನಿಂತಿರುವ ಸ್ಥಳವು ಪರಿಶುದ್ಧಭೂಮಿಯಾಗಿದೆ.
34 ಐಗುಪ್ತದೇಶದಲ್ಲಿರುವ ನನ್ನ ಜನರ ಕಷ್ಟವನ್ನು ನೋಡೇ ನೋಡಿದ್ದೇನೆ; ಅವರ ಮೊರೆ
ಯನ್ನು ಕೇಳಿ, ಅವರನ್ನು ಬಿಡಿಸುವದಕ್ಕೆ ಇಳಿದುಬಂದಿದ್ದೇನೆ; ಈಗ ನಿನ್ನನ್ನು ಐಗುಪ್ತ
ದೇಶಕ್ಕೆ ಕಳುಹಿಸುತ್ತೇನೆ, ಬಾ, ಎಂದು ಹೇಳಿದನು.

35 ಅವರು ಯಾವ ಮೋಶೆಯನ್ನು—ನಿನ್ನನ್ನು ಅಧಿಕಾರಿಯಾಗಿಯೂ ನ್ಯಾಯಾಧಿಪತಿ
ಯಾಗಿಯೂ ಇಟ್ಟವರ್ಯಾರೆಂದು ಹೇಳಿ ಬೇಡವೆಂದರೋ ಅವನನ್ನೇ ದೇವರು ಪೊದೆಯಲ್ಲಿ
ಕಾಣಿಸಿಕೊಂಡ ದೂತನ ಕೈಯಿಂದ ಅಧಿಕಾರಿಯಾಗಿಯೂ ಬಿಡುಗಡೆ ಮಾಡುವವ
36 ನಾಗಿಯೂ ನೇಮಿಸಿದನು. ಅವನೇ ಐಗುಪ್ತದಲ್ಲಿಯೂ ಕೆಂಪು ಸಮುದ್ರದಲ್ಲಿಯೂ
ನಾಲ್ವತ್ತುವರುಷ ಅಡವಿಯಲ್ಲಿಯೂ ಅದ್ಭುತಕಾರ್ಯಗಳನ್ನೂ ಸೂಚಕಕಾರ್ಯಗಳನ್ನೂ
37 ಮಾಡುತ್ತಾ ಅವರನ್ನು ನಡಿಸಿಕೊಂಡುಬಂದವನು. ಆ ಮೋಶೆಯೇ—ದೇವರು ನನ್ನನ್ನು
ಏರ್ಪಡಿಸಿದಂತೆ ನಿಮ್ಮ ಸಹೋದರರಲ್ಲಿ ಮತ್ತೊಬ್ಬ ಪ್ರವಾದಿಯನ್ನು ನಿಮಗೆ ಏರ್ಪಡಿಸಿ
38 ಕೊಡುವನು ಎಂದು[2] ಇಸ್ರಯೇಲ ಜನರಿಗೆ ಹೇಳಿದವನು. ಅವನೇ ಸೀನಾಯಿಬೆಟ್ಟದಲ್ಲಿ

---

1) ಹೊರಹೋಣ ೩, ೧—೬. 2) ದ್ವಿತೀಯ ನ್ಯಾಯ ೧೮, ೧೫.

ತನ್ನೊಡನೆ ಮಾತಾಡಿದ ದೂತನಿಗೂ ನಮ್ಮ ಪಿತೃಗಳಿಗೂ ಅಡವಿಯಲ್ಲಿದ್ದ ಸಭೆಯೊಳಗೆ ಮಧ್ಯಸ್ಥನಾಗಿದ್ದು, ಜೀವಕರವಾದ ದೇವೋಕ್ತಿಗಳನ್ನು ಹೊಂದಿ ನಮಗೆ ಕೊಟ್ಟವನು. ಆದರೆ ನಮ್ಮ ಪಿತೃಗಳು ಅವನ ಮಾತುಗಳನ್ನು ಕೇಳುವದಕ್ಕೆ ಮನಸ್ಸಿಲ್ಲದವರಾಗಿ ಅವ 39 ನನ್ನು ತಳ್ಳಿಬಿಟ್ಟು, ತಿರಿಗಿ ಐಗುಪ್ತದೇಶದ ಕಡೆಗೆ ಮನಸ್ಸಿಟ್ಟರು. ಅವರು ಆರೋನನಿಗೆ— 40 ಐಗುಪ್ತದೇಶದೊಳಗಿಂದ ನಮ್ಮನ್ನು ಕರಕೊಂಡು ಬಂದ ಆ ಮೋಶೆಗೆ ಏನಾಯಿತೋ ನಮಗೆ ತಿಳಿಯದು; ನಮ್ಮ ಮುಂದೆ ಹೋಗುವದಕ್ಕೆ ದೇವರುಗಳನ್ನು ನಮಗೆ ಮಾಡಿ ಕೊಡು ಎಂದು ಹೇಳಿದರು. ಆ ದಿನಗಳಲ್ಲಿ ಅವರು ಒಂದು ಬಸವನನ್ನು ಮಾಡಿ, 41 ಆ ವಿಗ್ರಹಕ್ಕೆ ಬಲಿಯನ್ನರ್ಪಿಸಿ, ತಮ್ಮ ಕೈಗಳಿಂದ ಮಾಡಿದ ವಸ್ತುಗಳಲ್ಲಿ ಉಲ್ಲಾಸ ಪಟ್ಟರು. ಆದರೆ ದೇವರು ಅವರಿಗೆ ವಿಮುಖನಾಗಿ ಆಕಾಶದಲ್ಲಿರುವ ನಕ್ಷತ್ರರಾಶಿಯನ್ನು 42 ಪೂಜಿಸುವದಕ್ಕೆ ಅವರನ್ನು ಒಪ್ಪಿಸಿಬಿಟ್ಟನು. ಪ್ರವಾದಿಗಳ ಗ್ರಂಥದಲ್ಲಿ ಬರೆದಿರುವ ದೇನಂದರೆ—

ಇಸ್ರಾಯೇಲ ಮನೆತನದವರೇ, ಅಡವಿಯಲ್ಲಿ ನಾಲ್ವತ್ತು ವರುಷ
ನೀವು ನನಗೆ ಯಜ್ಞಗಳನ್ನೂ ಬಲಿಗಳನ್ನೂ ಅರ್ಪಿಸಿದಿರೋ? ಇಲ್ಲವಲ್ಲಾ;
ಅದಕ್ಕೆ ಬದಲಾಗಿ ನೀವು ಪೂಜಿಸಬೇಕೆಂದು ಮಾಡಿಕೊಂಡ ಮೂರ್ತಿಗಳನ್ನು 43
ಅಂದರೆ ಮೊಲೋಖನ ಗುಡಾರವನ್ನೂ ರೊಂಫಾ[1] ದೇವತೆಯ ನಕ್ಷತ್ರ
ರೂಪವನ್ನೂ ಹೊತ್ತುಕೊಂಡು ಹೋದಿರಿ.
ಆದದರಿಂದ ನಾನು ನಿಮ್ಮನ್ನು ಬಾಬೇಲಿನ ಆಚೆಗೆ ಸೆರೆಯಾಗಿ ಹೋಗುವಂತೆ
ಮಾಡುವೆನು[2]

ಎಂಬುವದು.

ದೇವದರ್ಶನಗುಡಾರವು ಅಡವಿಯೊಳಗೆ ನಮ್ಮ ಪಿತೃಗಳ ಬಳಿಯಲ್ಲಿ ಇತ್ತು. 44 ಮೋಶೆಯ ಸಂಗಡ ಮಾತಾಡಿದವನು—ನೀನು ನೋಡಿದ ಮಾದರಿಯ ಪ್ರಕಾರವೇ ಅದನ್ನು ಮಾಡಬೇಕೆಂದು ನೇಮಿಸಿದ್ದನು[3]. ನಮ್ಮ ಹಿರಿಯರು ಅದನ್ನು ತಮ್ಮ ತಂದೆಗಳಿಂದ 45 ಹೊಂದಿದರು; ಅವರು ಯೆಹೋಷುವನ ಹಿಂದೆ ಬಂದು ದೇವರು ತಮ್ಮ ಮುಂದೆ ಹೊರಿಸಿದ ಅನ್ಯಜನಗಳ ದೇಶವನ್ನು ಸ್ವಾಧೀನಮಾಡಿಕೊಂಡಾಗ ಆ ಗುಡಾರವನ್ನು ಕೂಡ ತಂದರು. ಅದು ದಾವೀದನ ಕಾಲದ ವರೆಗೂ ಇಲ್ಲೇ ಇತ್ತು. ದಾವೀದನು 46 ದೇವರ ಸನ್ನಿಧಾನದಲ್ಲಿ ಕೃಪೆ ಹೊಂದಿ ಯಾಕೋಬನ ವಂಶದವರಿಗೋಸ್ಕರ[4] ದೇವಾ ಲಯವನ್ನು ಕಟ್ಟಿಸುವದಕ್ಕೆ ಅಪ್ಪಣೆಯಾಗಬೇಕೆಂದು ಕೇಳಿಕೊಂಡನು. ಆದರೆ ಆತನಿ 47 ಗೋಸ್ಕರ ಮನೆಯನ್ನು ಕಟ್ಟಿಸಿದವನು ಸೊಲೊಮೋನನು. ಆದಾಗ್ಯೂ ಪರಾತ್ಪರನು 48 ಕೈಯಿಂದ ಕಟ್ಟಿದ ಮನೆಗಳಲ್ಲಿ ವಾಸಮಾಡುವವನಲ್ಲ.

ಆಕಾಶವು ನನಗೆ ಸಿಂಹಾಸನವು, 49
ಭೂಮಿಯು ನನಗೆ ಪಾದಪೀಠವು.
ನನಗೆ ಎಂಥಾ ಮನೆಯನ್ನು ಕಟ್ಟಿಕೊಡುವಿರಿ?

---

1) ಅಂದರೆ, ಶನಿ. 2) ಆಮೋಸ ೫, ೨೫—೨೭. 3) ಹೊರಡೋಣ ೨೫, ೪೦.
4) ಕೆಲವು ಪ್ರತಿಗಳಲ್ಲಿ—ಯಾಕೋಬನ ದೇವರಿಗೋಸ್ಕರವೆಂದು ಬರೆದದೆ.

ನಾನು ವಿಶ್ರಾಂತಿಗೊಳ್ಳುವ ಸ್ಥಳವು ಯಾವದು?
50 ಇವುಗಳೆಲ್ಲಾ ನನ್ನ ಕೈಯಿಂದ ಉಂಟಾದವಲ್ಲಾ
ಎಂಬದಾಗಿ ಕರ್ತನು ಹೇಳುತ್ತಾನೆಂದು[1]
ಪ್ರವಾದಿಯು ನುಡಿದಿದ್ದಾನೆ.

51 ಚಂಡಿಗಳೇ, ಮನಶ್ಶುದ್ಧಿಯೂ ಕರ್ಣಶುದ್ಧಿಯೂ ಇಲ್ಲದವರೇ[2], ನಿಮ್ಮ ಪಿತೃಗಳು ಹ್ಯಾಗೋ ಹಾಗೆಯೇ ನೀವೂ ಯಾವಾಗಲೂ ಪವಿತ್ರಾತ್ಮನನ್ನು ಎದುರಿಸುವವರಾಗಿದ್ದೀರಿ. 52 ಪ್ರವಾದಿಗಳಲ್ಲಿ ನಿಮ್ಮ ಪಿತೃಗಳು ಹಿಂಸೆಪಡಿಸದವರು ಯಾರಿದ್ದಾರೆ? ಅವರು ಆ ನೀತಿಸ್ವರೂಪನ ಆಗಮನದ ವಿಷಯದಲ್ಲಿ ಮುಂತಿಳಿಸಿದವರನ್ನು ಕೊಂದರು, ನೀವು ಈಗ ಆತನನ್ನು ಹಿಡುಕೊಟ್ಟು ಕೊಂದವರಾದಿರಿ. 53 ದೇವದೂತರ ಮೂಲಕ ನೇಮಕವಾದ ಧರ್ಮಶಾಸ್ತ್ರವನ್ನು ನೀವು ಹೊಂದಿದವರಾದಾಗ್ಯೂ ಅದನ್ನು ಅನುಸರಿಸುವದಿಲ್ಲ ಎಂದು ಹೇಳಿದನು.

54 ಈ ಮಾತುಗಳನ್ನು ಕೇಳಿ, ಅವರು ರೌದ್ರಮನಸ್ಸುಳ್ಳವರಾಗಿ ಅವನ ಮೇಲೆ ಹಲ್ಲು ಕಡಿದರು. 55 ಆದರೆ ಅವನು ಪವಿತ್ರಾತ್ಮಭರಿತನಾಗಿ, ಆಕಾಶದ ಕಡೆಗೆ ದೃಷ್ಟಿಸಿ ನೋಡಿ, ದೇವರ ಪ್ರಭಾವವನ್ನೂ ದೇವರ ಬಲಗಡೆಯಲ್ಲಿ ನಿಂತಿದ್ದ ಯೇಸುವನ್ನೂ ಕಂಡು— 56 ಅಗೋ, ಆಕಾಶವು ತೆರೆದಿರುವದನ್ನೂ ಮನುಷ್ಯಕುಮಾರನು ದೇವರ ಬಲಗಡೆಯಲ್ಲಿ ನಿಂತಿರುವದನ್ನೂ ನೋಡುತ್ತೇನೆ ಎಂದು ಹೇಳಿದನು. 57 ಆದರೆ ಅವರು ಮಹಾಶಬ್ದದಿಂದ ಕೂಗಿ, ಕಿವಿಗಳನ್ನು ಮುಚ್ಚಿಕೊಂಡು, ಒಟ್ಟಾಗಿ ಅವನ ಮೇಲೆ ಬಿದ್ದು, 58 ಅವನನ್ನು ಊರ ಹೊರಕ್ಕೆ ನೂಕಿಕೊಂಡು ಹೋಗಿ ಕೊಲ್ಲುವದಕ್ಕೆ ಕಲ್ಲೆಸೆದರು. ಸಾಕ್ಷಿಯವರು ತಮ್ಮ ಬಟ್ಟೆಗಳನ್ನು ತೆಗೆದು, ಸೌಲನೆಂಬ ಒಬ್ಬ ಯೌವನಸ್ಥನ ಕಾಲುಗಳ ಬಳಿಯಲ್ಲಿ ಇಟ್ಟರು. 59 ಅವರು ಸ್ತೆಫನನ ಮೇಲೆ ಕಲ್ಲೆಸೆಯುತ್ತಾ ಇರಲು, ಅವನು ಕರ್ತನ ಹೆಸರನ್ನು ಹೇಳಿ— 60 ಯೇಸುಸ್ವಾಮಿಯೇ, ನನ್ನಾತ್ಮವನ್ನು ಸೇರಿಸಿಕೋ ಎಂದು ಪ್ರಾರ್ಥಿಸಿ, ಮೊಣಕಾಲೂರಿ— ಕರ್ತನೇ, ಈ ಪಾಪವನ್ನು ಅವರ ಮೇಲೆ ಹೊರಿಸಬೇಡವೆಂದು ಮಹಾ ಶಬ್ದದಿಂದ ಕೂಗಿದನು. ಇದನ್ನು ಹೇಳಿ ನಿದ್ರೆಹೋದನು. **8** ಸೌಲನು ಅವನ ಕೊಲೆಗೆ ಸಮ್ಮತಿಸುವವನಾಗಿದ್ದನು.

ಆ ದಿವಸದಲ್ಲಿ ಯೆರೂಸಲೇಮಿನಲ್ಲಿದ್ದ ಸಭೆಗೆ ದೊಡ್ಡ ಹಿಂಸೆ ಉಂಟಾಯಿತು. ಅಪೊಸ್ತಲರು ಹೊರತಾಗಿ ಎಲ್ಲರು ಯೂದಾಯ ಸಮಾರ್ಯ ಸೀಮೆಗಳಲ್ಲಿ ಚದರಿಹೋದರು. 2 ಭಕ್ತರಾದ ಜನರು ಸ್ತೆಫನನನ್ನು ಹೂಣಿಟ್ಟು, ಅವನಿಗೋಸ್ಕರ ಬಹಳವಾಗಿ ಗೋಳಾಡಿದರು. 3 ಆದರೆ ಸೌಲನು ಮನೆಮನೆಗಳಲ್ಲಿ ಹೊಕ್ಕು ಗಂಡಸರನ್ನೂ ಹೆಂಗಸರನ್ನೂ ಎಳಕೊಂಡು ಬಂದು, ಸೆರೆಮನೆಗೆ ಹಾಕಿಸಿ, ಸಭೆಯನ್ನು ಹಾಳುಮಾಡುತ್ತಿದ್ದನು.

ಫಿಲಿಪ್ಪನು ಸಮಾರ್ಯದಲ್ಲಿ ಸುವಾರ್ತೆಯನ್ನು ಪ್ರಸಂಗಿಸಿದ್ದು; ಸೀಮೋನನೆಂಬ ಮಂತ್ರವಾದಿಯನ್ನು ಕುರಿತದ್ದು.

4 ಚದರಿಹೋದವರು ಅಲ್ಲಲ್ಲಿ ಹೋಗಿ ಸುವಾರ್ತಾವಾಕ್ಯವನ್ನು ಸಾರುತ್ತಿದ್ದರು. 5 ಫಿಲಿಪ್ಪನು ಸಮಾರ್ಯವೆಂಬ ಪಟ್ಟಣಕ್ಕೆ ಹೋಗಿ ಕ್ರಿಸ್ತನನ್ನು ಅಲ್ಲಿರುವವರಿಗೆ ಪ್ರಕಟಿಸಿ

[1] ಯೆಶಾಯ ೬೬, ೧. ೨. [2] ಮೂಲ: ಹೃದಯದಲ್ಲಿಯೂ ಕಿವಿಯಲ್ಲಿಯೂ ಸುನ್ನತಿಯಿಲ್ಲದವರೇ; ದ್ವಿತೀಯ ನ್ಯಾಯ ೧೦, ೧೬; ಯೆರೆಮಾಯ ೪, ೪; ರೋಮಾ. ೨, ೨೮. ೨೯ ನೋಡು.

ದನು. ಗುಂಪಾಗಿ ಕೂಡಿದ ಜನಗಳು ಫಿಲಿಪ್ಪನ ಮಾತುಗಳನ್ನು ಕೇಳಿ ಅವನು ಮಾಡಿದ 6 ಸೂಚಕಕಾರ್ಯಗಳನ್ನು ನೋಡಿ, ಅವನು ಹೇಳಿದ ಸಂಗತಿಗಳಿಗೆ ಏಕಮನಸ್ಸಾಗಿ ಲಕ್ಷ್ಯ ಕೊಟ್ಟರು. ಯಾಕಂದರೆ ಅನೇಕರೊಳಗಿಂದ ದೆವ್ವಗಳು ಮಹಾಶಬ್ದದಿಂದ ಕೂಗಿ 7 ಹೊರಗೆ ಬಂದವು; ಮತ್ತು ಅನೇಕ ಪಾರ್ಶ್ವವಾಯುರೋಗಿಗಳೂ ಕುಂಟರೂ ಸ್ವಸ್ಥ ಮಾಡಲ್ಪಟ್ಟರು. ಆ ಪಟ್ಟಣದಲ್ಲಿ ಬಹು ಸಂತೋಷವಾಯಿತು. 8

ಆದರೆ ಕೆಲವು ಕಾಲದಿಂದ ಆ ಪಟ್ಟಣದಲ್ಲಿದ್ದ ಸೀಮೋನನೆಂಬ ಒಬ್ಬ ಮನುಷ್ಯನು 9 ತಾನು ಏನೋ ಒಬ್ಬ ಮಹಾತ್ಮನೆಂದು ಹೇಳಿಕೊಂಡು ಮಂತ್ರತಂತ್ರಗಳನ್ನು ನಡಸಿ, ಸಮಾರ್ಯದ ಜನರಲ್ಲಿ ಬೆರಗನ್ನು ಹುಟ್ಟಿಸುತ್ತಿದ್ದನು. ಚಿಕ್ಕವರು ಮೊದಲುಗೊಂಡು 10 ದೊಡ್ಡವರ ಪರ್ಯಂತರ ಎಲ್ಲರೂ—ಇವನು ಮಹಾಶಕ್ತಿ ಎನ್ನಿಸಿಕೊಂಡಿರುವ ದೇವರ ಶಕ್ತಿಯೇ ಎಂದು ಹೇಳುತ್ತಾ, ಅವನಿಗೆ ಲಕ್ಷ್ಯಕೊಡುತ್ತಿದ್ದರು. ಬಹುಕಾಲದಿಂದಲೂ 11 ಅವನು ಮಂತ್ರತಂತ್ರಗಳನ್ನು ನಡಸಿ, ಜನರಲ್ಲಿ ಬೆರಗನ್ನು ಹುಟ್ಟಿಸಿದ್ದ ಕಾರಣದಿಂದ ಅವರು ಅವನಿಗೆ ಲಕ್ಷ್ಯಕೊಡುತ್ತಿದ್ದರು. ಆದರೆ ಫಿಲಿಪ್ಪನು ದೇವರ ರಾಜ್ಯದ 12 ವಿಷಯದಲ್ಲಿಯೂ ಯೇಸು ಕ್ರಿಸ್ತನ ಹೆಸರಿನ ವಿಷಯದಲ್ಲಿಯೂ ಶುಭವರ್ತಮಾನವನ್ನು ಸಾರಲು, ಗಂಡಸರೂ ಹೆಂಗಸರೂ ನಂಬಿ ದೀಕ್ಷಾಸ್ನಾನಮಾಡಿಸಿಕೊಂಡರು. ಆಗ 13 ಸೀಮೋನನು ಕೂಡ ನಂಬಿ ದೀಕ್ಷಾಸ್ನಾನಮಾಡಿಸಿಕೊಂಡು, ಫಿಲಿಪ್ಪನ ಸಂಗಡ ಯಾವಾಗಲೂ ಇದ್ದು ಸೂಚಕಕಾರ್ಯಗಳೂ ಮಹತ್ಕಾರ್ಯಗಳೂ ಉಂಟಾಗುವದನ್ನು ನೋಡಿ ಬೆರಗಾದನು.

ಸಮಾರ್ಯದವರು ದೇವರ ವಾಕ್ಯವನ್ನು ಸ್ವೀಕರಿಸಿದ ವರ್ತಮಾನವನ್ನು ಯೆರೂಸಲೇಮಿನಲ್ಲಿದ್ದ ಅಪೊಸ್ತಲರು ಕೇಳಿ, ಪೇತ್ರ ಯೋಹಾನರನ್ನು ಅವರ ಬಳಿಗೆ ಕಳುಹಿಸಿದರು. 14 ಇವರು ಅಲ್ಲಿಗೆ ಬಂದು ಆ ಜನರಿಗೆ ಪವಿತ್ರಾತ್ಮವರವು ದೊರೆಯಬೇಕೆಂದು 15 ಅವರಿಗೋಸ್ಕರ ಪ್ರಾರ್ಥನೆಮಾಡಿದರು. ಯಾಕಂದರೆ ಪವಿತ್ರಾತ್ಮವು ಅವರಲ್ಲಿ ಒಬ್ಬನ 16 ಮೇಲಾದರೂ ಇನ್ನೂ ಬಂದಿರಲಿಲ್ಲ. ಅವರು ಕರ್ತನಾದ ಯೇಸುವಿನ ಹೆಸರಿನಲ್ಲಿ ದೀಕ್ಷಾಸ್ನಾನವನ್ನು ಮಾತ್ರ ಮಾಡಿಸಿಕೊಂಡಿದ್ದರು. ಅಪೊಸ್ತಲರು ಅವರ ಮೇಲೆ ಕೈಗಳ 17 ನ್ನಿಡಲು, ಅವರು ಪವಿತ್ರಾತ್ಮವರವನ್ನು ಹೊಂದಿದರು. ಅಪೊಸ್ತಲರು ಕೈಗಳನ್ನಿಡುವದರ 18 ಮೂಲಕವಾಗಿ ಪವಿತ್ರಾತ್ಮವು ಕೊಡೋಣವಾಗುವದನ್ನು ಸೀಮೋನನು ನೋಡಿ, ಹಣ ವನ್ನು ತಂದು ಅವರ ಮುಂದಿಟ್ಟು—ನಾನು ಯಾರ ಮೇಲೆ ಕೈಗಳನ್ನಿಡುತ್ತೇನೋ ಅವರು 19 ಪವಿತ್ರಾತ್ಮವನ್ನು ಹೊಂದುವಂತೆ ಈ ಅಧಿಕಾರವನ್ನು ನನಗೂ ಕೊಡಿರಿ ಅಂದನು. ಆದರೆ 20 ಪೇತ್ರನು ಅವನಿಗೆ—ನಿನ್ನ ಬೆಳ್ಳಿಯು ನಿನ್ನ ಕೂಡ ಹಾಳಾಗಿಹೋಗಲಿ. ದೇವರ ವರ ವನ್ನು ಹಣಕ್ಕೆ ಕೊಂಡುಕೊಳ್ಳಬಹುದೆಂದು ಭಾವಿಸುತ್ತೀಯೋ? ಈ ಕಾರ್ಯದಲ್ಲಿ ನಿನಗೆ 21 ಭಾಗವೂ ಇಲ್ಲ, ಪಾಲೂ ಇಲ್ಲ; ನಿನ್ನ ಹೃದಯವು ದೇವರ ಮುಂದೆ ಸರಿಯಲ್ಲ. ಆದದ 22 ರಿಂದ ಈ ನಿನ್ನ ಕೆಟ್ಟತನವನ್ನು ಬಿಟ್ಟು ದೇವರ ಕಡೆಗೆ ತಿರುಗಿಕೊಂಡು, ಕರ್ತನು ನಿನ್ನ ಮನಸ್ಸಿನ ಆಲೋಚನೆಯನ್ನು ಕ್ಷಮಿಸುವನೋ ಏನೋ ಆತನನ್ನು ಬೇಡಿಕೋ. ಯಾಕಂದರೆ ನೀನು ಹಾನಿಕರವಾದ ವಿಷವಾಗಿಯೂ ದುಷ್ಟತ್ವದಲ್ಲಿ ಬಿಗಿಯುವ ಬಂಧನ 23 ವಾಗಿಯೂ ಇರುವವನೆಂದು ಕಾಣುತ್ತದೆ ಅಂದನು. ಅದಕ್ಕೆ ಸೀಮೋನನು—ನೀವು 24

ಹೇಳಿರುವ ಸಂಗತಿಗಳಲ್ಲಿ ಯಾವದೂ ನನ್ನ ಮೇಲೆ ಬಾರದಂತೆ ನನಗೋಸ್ಕರ ನೀವೇ ಕರ್ತನನ್ನು ಬೇಡಿಕೊಳ್ಳಿರಿ ಎಂದು ಹೇಳಿದನು.

25 ಹೀಗಿರಲಾಗಿ ಅವರು ಕರ್ತನ ವಾಕ್ಯವನ್ನು ಪ್ರಮಾಣಪೂರ್ವಕವಾಗಿ ಹೇಳಿದ ಮೇಲೆ, ಯೆರೂಸಲೇಮಿಗೆ ಹಿಂತಿರುಗಿ ಹೊರಟು, ಸಮಾರ್ಯದವರ ಅನೇಕ ಊರುಗಳಲ್ಲಿ ಸುವಾರ್ತೆಯನ್ನು ಸಾರಿದರು.

ಫಿಲಿಪ್ಪನು ಐಥಿಯೋಪ್ಯದವನಿಗೆ ಸುವಾರ್ತೆಯನ್ನು ತಿಳಿಸಿದ್ದು.

26 ಅಷ್ಟರಲ್ಲಿ ಕರ್ತನ ದೂತನು ಫಿಲಿಪ್ಪನಿಗೆ—ನೀನು ಎದ್ದು ದಕ್ಷಿಣ ಕಡೆಗೆ ಯೆರೂಸಲೇಮಿನಿಂದ ಗಾಜಕ್ಕೆ ಹೋಗುವ ದಾರಿಯಲ್ಲಿ ಹೋಗು, ಅದು ಅಡವಿ ಎಂದು ಹೇಳಿದನು. 27 ಅವನು ಎದ್ದು ಹೊರಟುಹೋದನು; ಹೋಗುತ್ತಿರುವಾಗ ಐಥಿಯೋಪ್ಯ ದೇಶದ ಒಬ್ಬ ಮನುಷ್ಯನನ್ನು ಕಂಡನು. ಅವನು ಕಂಚುಕಿಯೂ ಐಥಿಯೋಪ್ಯದವರ ರಾಣಿಯಾಗಿದ್ದ ಕಂದಾಕೆಯ ಕೈಕೆಳಗೆ ದೊಡ್ಡ ಅಧಿಕಾರಿಯೂ ಆಕೆಯ ಎಲ್ಲಾ ಖಜಾನೆಯ ಮೇಲ್ವಿಚಾರ 28 ಕನೂ ಆಗಿದ್ದನು. ಅವನು ದೇವಾರಾಧನೆಗೋಸ್ಕರ ಯೆರೂಸಲೇಮಿಗೆ ಬಂದು, ಹಿಂತಿರುಗಿ ಹೋಗುವಾಗ ತನ್ನ ರಥದಲ್ಲಿ ಕೂತುಕೊಂಡು ಯೆಶಾಯ ಪ್ರವಾದಿಯ ಗ್ರಂಥವನ್ನು ಓದುತ್ತಿ 29 ದ್ದನು. ದೇವರಾತ್ಮನು ಫಿಲಿಪ್ಪನಿಗೆ—ನೀನು ಆ ರಥದ ಹತ್ತರ ಹೋಗಿ ಅದರ ಸಂಗಡಲೇ ನಡೆ 30 ಎಂದು ಹೇಳಿದನು. ಫಿಲಿಪ್ಪನು ಓಡಿಹೋಗಿ, ಆ ಮನುಷ್ಯನು ಯೆಶಾಯ ಪ್ರವಾದಿಯ ಗ್ರಂಥವನ್ನು ಓದುತ್ತಿರುವದನ್ನು ಕೇಳಿ—ಎಲೈ, ನೀನು ಓದುವದು ನಿನಗೆ ತಿಳಿಯು 31 ತ್ತದೋ? ಅನ್ನಲು, ಅವನು—ಯಾರಾದರೂ ನನಗೆ ಅರ್ಥ ತಿಳಿಸಿಕೊಟ್ಟ ಹೊರತು ಅದು ನನಗೆ ಹ್ಯಾಗೆ ತಿಳಿದೀತು ಎಂದು ಹೇಳಿ—ನೀನು ರಥವನ್ನು ಹತ್ತಿ ನನ್ನ ಬಳಿಯಲ್ಲಿ 32 ಕೂತುಕೋ ಎಂಬದಾಗಿ ಫಿಲಿಪ್ಪನನ್ನು ಕೇಳಿಕೊಂಡನು. ಅವನು ಓದುತ್ತಿದ್ದ ಶಾಸ್ತ್ರ ವಚನವು ಯಾವದಂದರೆ—

ಕುರಿಯಂತೆ ಕೊಯ್ಯಲ್ಪಡುವದಕ್ಕೆ ಆತನನ್ನು ನಡಸಿಕೊಂಡು ಹೋದರು;
ಕುರಿಮರಿಯು ಉಣ್ಣೆ ಕತ್ತರಿಸುವವನ ಮುಂದೆ ಮೌನವಾಗಿ ಇರುವಂತೆಯೇ
ಆತನು ತನ್ನ ಬಾಯಿ ತೆರೆಯಲಿಲ್ಲ.

33 ಆತನಿಗುಂಟಾದ ದೀನಾವಸ್ಥೆಯಲ್ಲಿ ನ್ಯಾಯವು ಇಲ್ಲದೆಹೋಯಿತು.
ಆತನ ಸಕಾಲದವರನ್ನು ಹೇಳತಕ್ಕದ್ದೇನು?
ಆತನ ಜೀವವನ್ನು ಭೂಮಿಯ ಮೇಲಿನಿಂದ ತೆಗೆದುಬಿಟ್ಟರಲ್ಲಾ[1] ಎಂಬುವದೇ.

34 ಕಂಚುಕಿಯು ಈ ವಚನವನ್ನು ಕುರಿತು—ಪ್ರವಾದಿಯು ಇದನ್ನು ಯಾರ ವಿಷಯದಲ್ಲಿ ಹೇಳಿದ್ದಾನೆ? ತನ್ನ ವಿಷಯದಲ್ಲಿಯೋ? ಮತ್ತೊಬ್ಬನ ವಿಷಯದಲ್ಲಿಯೋ? ದಯಮಾಡಿ 35 ಹೇಳಬೇಕು ಎಂದು ಫಿಲಿಪ್ಪನನ್ನು ಕೇಳಲು, ಫಿಲಿಪ್ಪನು ಉಪದೇಶಿಸುವದಕ್ಕೆ ತೊಡಗಿ ಅದೇ ವಚನವನ್ನು ಆಧಾರಮಾಡಿಕೊಂಡು, ಅವನಿಗೆ ಯೇಸುವಿನ ವಿಷಯವಾದ ಸುವಾರ್ತೆಯನ್ನು 36 ತಿಳಿಸಿದನು. ಅವರು ದಾರಿಯಲ್ಲಿ ಹೋಗುತ್ತಿರುವಾಗ ನೀರಿನ ಬಳಿಗೆ ಬಂದರು. ಕಂಚು

[1] ಯೆಶಾಯ ೫೩, ೭. ೮.

ಕಿಯು—ಅಗೋ, ನೀರು; ನನಗೆ ದೀಕ್ಷಾಸ್ನಾನವಾಗುವದಕ್ಕೆ ಅಡ್ಡಿ ಏನು ಎಂದು ಹೇಳಿ[1], ರಥವನ್ನು ನಿಲ್ಲಿಸು ಎಂದು ಅಪ್ಪಣೆಕೊಟ್ಟನು; 38 ಫಿಲಿಪ್ಪನು ಕಂಚುಕಿಯು ಇಬ್ಬರೂ ನೀರಿನೊಳಗೆ ಇಳಿದರು. ಫಿಲಿಪ್ಪನು ಅವನಿಗೆ ದೀಕ್ಷಾಸ್ನಾನ ಮಾಡಿಸಿದನು. 39 ಅವರು ನೀರನ್ನು ಬಿಟ್ಟು ಮೇಲಕ್ಕೆ ಬಂದಾಗ ಕರ್ತನ ಆತ್ಮ ಫಿಲಿಪ್ಪನನ್ನು ಎತ್ತಿಕೊಂಡುಹೋಗಲಾಗಿ ಕಂಚುಕಿಯು ಸಂತೋಷವುಳ್ಳವನಾಗಿ ತನ್ನ ದಾರಿಯನ್ನು ಹಿಡಿದು ಅವನನ್ನು ಕಾಣಲೇ ಇಲ್ಲ. 40 ತರುವಾಯ ಫಿಲಿಪ್ಪನು ಅಜೋತಿನಲ್ಲಿ ಕಾಣಿಸಿಕೊಂಡು, ಅಲ್ಲಿಂದ ಕೈಸರೈಯದ ತನಕ ಎಲ್ಲಾ ಊರುಗಳಲ್ಲಿ ಸುವಾರ್ತೆಯನ್ನು ಸಾರುತ್ತಾ ಹೋದನು.

### ಸಭೆಯವರನ್ನು ಹಿಂಸೆಪಡಿಸಿದ ಸೌಲನು ತಾನೇ ಯೇಸುವಿನ ಶಿಷ್ಯನಾದದ್ದು.

**9** ಸೌಲನು ಇನ್ನು ಕರ್ತನ ಶಿಷ್ಯರ ಮೇಲೆ ರೌದ್ರನಾಗಿದ್ದು ಬೆದರಿಕೆಯ ಮಾತುಗಳನ್ನಾಡುತ್ತಾ ಅವರನ್ನು ಸಂಹರಿಸಬೇಕೆಂದು ಆಶೆಪಡುತ್ತಾ ಮಹಾಯಾಜಕನ ಬಳಿಗೆ ಹೋಗಿ— 2 ಆ ಮಾರ್ಗವನ್ನು ಹಿಡಿದವರು ಯಾರಾದರೂ ಸಿಕ್ಕಿದರೆ, ಅವರು ಗಂಡಸರಾದರೂ ಸರಿಯೇ ಹೆಂಗಸರಾದರೂ ಸರಿಯೇ, ನಾನು ಅವರಿಗೆ ಬೇಡಿಹಾಕಿಸಿ ಯೆರೂಸಲೇಮಿಗೆ ತರುವಂತೆ ದಮಸ್ಕದಲ್ಲಿರುವ ಆಯಾ ಸಭಾಮಂದಿರದವರಿಗೆ ನೀನು ಕಾಗದವನ್ನು ಕೊಡಬೇಕು ಎಂದು ಅವನನ್ನು ಬೇಡಿಕೊಂಡನು. 3 ಅವನು ಪ್ರಯಾಣ ಮಾಡುತ್ತಾ ದಮಸ್ಕದ ಹತ್ತರಕ್ಕೆ ಬರಲು, ಫಕ್ಕನೆ ಆಕಾಶದೊಳಗಿಂದ ಒಂದು ಬೆಳಕು ಅವನ ಸುತ್ತಲು ಮಿಂಚಿತು. 4 ಅವನು ನೆಲಕ್ಕೆ ಬಿದ್ದು—ಸೌಲನೇ, ಸೌಲನೇ, ನನ್ನನ್ನು ಯಾಕೆ ಹಿಂಸೆಪಡಿಸುತ್ತೀ ಎಂದು ಹೇಳುವ ವಾಣಿಯನ್ನು ಕೇಳಿದನು. 5 ಅವನು—ಕರ್ತನೇ, ನೀನ್ಯಾರು ಎಂದು ಕೇಳಿದ್ದಕ್ಕೆ, ಕರ್ತನು—ನೀನು ಹಿಂಸೆಪಡಿಸುವ ಯೇಸುವೇ ನಾನು. 6 ನೀನೆದ್ದು ಊರೊಳಕ್ಕೆ ಹೋಗು, ನೀನು ಮಾಡಬೇಕಾದದ್ದು ಅಲ್ಲಿ ನಿನಗೆ ತಿಳಿಸಲ್ಪಡುವದು ಎಂದು ಹೇಳಿದನು. 7 ಅವನ ಜೊತೆಯಲ್ಲಿ ಪ್ರಯಾಣಮಾಡುತ್ತಿದ್ದವರು ಧ್ವನಿಯನ್ನು ಮಾತ್ರ ಕೇಳಿ ಯಾರನ್ನೂ ಕಾಣದೆ ಮೂಕರಂತೆ ನಿಂತರು. 8 ಸೌಲನು ನೆಲದಿಂದ ಎದ್ದು ಕಣ್ಣುತೆರೆದಾಗ ಏನೂ ಕಾಣಿಸಲಿಲ್ಲ. ಆಗ ಅವರು ಅವನನ್ನು ಕೈಹಿಡಿದು ದಮಸ್ಕದೊಳಕ್ಕೆ ಕರೆದುಕೊಂಡು ಹೋದರು. 9 ಅವನು ಮೂರು ದಿವಸ ಕಣ್ಣುಕಾಣದೆ, ಏನೂ ತಿನ್ನಲಿಲ್ಲ, ಏನೂ ಕುಡಿಯಲಿಲ್ಲ.

10 ದಮಸ್ಕದಲ್ಲಿ ಅನನೀಯನೆಂಬ ಒಬ್ಬ ಶಿಷ್ಯನಿದ್ದನು; ಕರ್ತನು ದರ್ಶನದಲ್ಲಿ—ಅನನೀಯನೇ, ಎಂದು ಅವನನ್ನು ಕರೆಯಲು, ಅವನು—ಕರ್ತನೇ, ಇಗೋ, ಇದ್ದೇನೆ ಅಂದನು. 11 ಕರ್ತನು ಅವನಿಗೆ—ನೀನೆದ್ದು, ನೆಟ್ಟನೇಬೀದಿ ಎಂಬ ಬೀದಿಗೆ ಹೋಗಿ, ಯೂದನ ಮನೆಯಲ್ಲಿ ತಾರ್ಸದ ಸೌಲನೆಂಬವನನ್ನು ವಿಚಾರಿಸು; ಅವನು ಪ್ರಾರ್ಥನೆ ಮಾಡುತ್ತಾನೆ. 12 ಮತ್ತು ಅನನೀಯನೆಂಬ ಒಬ್ಬ ಮನುಷ್ಯನು ಒಳಗೆ ಬಂದು ತನಗೆ

[1] ಕೆಲವು ಪ್ರತಿಗಳಲ್ಲಿ ಹೆಚ್ಚು ಬರೆದಿರುವದೇನಂದರೆ—(೩೭) ಹೇಳಲು, ಫಿಲಿಪ್ಪನು—ನೀನು ಮನಃಪೂರ್ವಕವಾಗಿ ನಂಬುವದಾದರೆ, ಆಗಬಹುದು ಎಂದು ಹೇಳಿದನು. ಅದಕ್ಕೆ ಅವನು—ಯೇಸು ಕ್ರಿಸ್ತನನ್ನು ದೇವಕುಮಾರನೆಂದು ನಂಬುತ್ತೇನೆ ಎಂದು ಹೇಳಿ.

ತಿರಿಗಿ ಕಣ್ಣುಕಾಣುವಂತೆ ತನ್ನ ಮೇಲೆ ಕೈಯಿಡುವದನ್ನು ನೋಡಿದ್ದಾನೆ ಎಂದು ಹೇಳಿ
13 ದನು. ಆದಕ್ಕೆ ಅನನೀಯನು—ಕರ್ತನೇ, ಆ ಮನುಷ್ಯನು ಯೆರೂಸಲೇಮಿನಲ್ಲಿ ನಿನ್ನನ್ನು
ನಂಬಿದ ದೇವಜನರಿಗೆ ಎಷ್ಟೋ ಕೇಡನ್ನುಂಟುಮಾಡಿದನೆಂದು ಅವನ ವಿಷಯವಾಗಿ
14 ಅನೇಕರಿಂದ ಕೇಳಿದ್ದೇನೆ; ಮತ್ತು ಇಲ್ಲಿಯೂ ನಿನ್ನ ಹೆಸರನ್ನು ಸ್ಮರಿಸುವವರೆಲ್ಲರಿಗೆ ಬೇಡಿ
15 ಹಾಕಿಸುವ ಅಧಿಕಾರವನ್ನು ಮಹಾಯಾಜಕರಿಂದ ಹೊಂದಿದ್ದಾನೆ ಅಂದನು. ಕರ್ತನು
ಅವನಿಗೆ—ನೀನು ಹೋಗು; ಆ ಮನುಷ್ಯನು ಅನ್ಯಜನರಿಗೂ ಅರಸುಗಳಿಗೂ ಇಸ್ರಾಯೇಲ್ಯ
ರಿಗೂ ನನ್ನ ಹೆಸರನ್ನು ತಿಳಿಸುವದಕ್ಕಾಗಿ ನಾನು ಆರಿಸಿಕೊಂಡ ಸಾಧನವಾಗಿದ್ದಾನೆ.
16 ಅವನು ನನ್ನ ಹೆಸರಿನ ನಿಮಿತ್ತ ಎಷ್ಟು ಹಿಂಸೆ ಅನುಭವಿಸಬೇಕೆಂಬುವದನ್ನು ನಾನೇ ಅವ
17 ನಿಗೆ ತೋರಿಸುವೆನು ಎಂದು ಹೇಳಿದನು. ಆಗ ಅನನೀಯನು ಹೊರಟು, ಆ ಮನೆಯೊ
ಳಗೆ ಹೋಗಿ, ಅವನ ಮೇಲೆ ತನ್ನ ಕೈಗಳನ್ನಿಟ್ಟು—ಸಹೋದರನಾದ ಸೌಲನೇ, ನೀನು ಬಂದ
ದಾರಿಯಲ್ಲಿ ನಿನಗೆ ಕಾಣಿಸಿಕೊಂಡ ಕರ್ತನಾದ ಯೇಸು ನಿನಗೆ ಕಣ್ಣುಕಾಣುವಂತೆಯೂ
ನೀನು ಪವಿತ್ರಾತ್ಮಭರಿತನಾಗುವಂತೆಯೂ ನನ್ನನ್ನು ನಿನ್ನ ಬಳಿಗೆ ಕಳುಹಿಸಿದ್ದಾನೆ ಎಂದು
18 ಹೇಳಿದನು. ಕೂಡಲೇ ಅವನ ಕಣ್ಣುಗಳಿಂದ ಪರೆಗಳಂತೆ ಏನೋ ಬಿದ್ದು, ಅವನ ಕಣ್ಣು
19 ಕಾಣಿಸಿದವು. ಅವನು ಎದ್ದು ದೀಕ್ಷಾಸ್ನಾನಮಾಡಿಸಿಕೊಂಡನು. ತರುವಾಯ ಊಟಾ
ಮಾಡಿ ಬಲಹೊಂದಿದನು.

20 ಮುಂದೆ ಅವನು ದಮಸ್ಕದಲ್ಲಿದ್ದ ಶಿಷ್ಯರ ಸಂಗಡ ಕೆಲವು ದಿವಸ ಇದ್ದು, ತಡಮಾಡದೆ
ಸಭಾಮಂದಿರಗಳಲ್ಲಿ ಯೇಸುವಿನ ವಿಷಯವಾಗಿ ಆತನೇ ದೇವಕುಮಾರನೆಂದು ಸಾರುವ
21 ದಕ್ಕೆ ಪ್ರಾರಂಭಮಾಡಿದನು. ಕೇಳಿದವರೆಲ್ಲರು ಬೆರಗಾಗಿ—ಈ ಹೆಸರು ಹೇಳುವವರನ್ನು
ಯೆರೂಸಲೇಮಿನಲ್ಲಿ ಹಾಳುಮಾಡಿದವನು ಇವನಲ್ಲವೇ? ಅಂಥವರನ್ನು ಬೇಡೀಹಾಕಿಸಿ
ಮಹಾಯಾಜಕರ ಬಳಿಗೆ ತೆಗೆದುಕೊಂಡು ಹೋಗಬೇಕೆಂದೇ ಇಲ್ಲಿಗೆ ಬಂದನಲ್ಲವೇ?
22 ಎಂದು ಮಾತಾಡಿಕೊಂಡರು. ಆದರೆ ಸೌಲನು ಇನ್ನೂ ಅಧಿಕ ಸಾಮರ್ಥ್ಯವುಳ್ಳವ
ನಾಗಿ, ಯೇಸುವೇ ಕ್ರಿಸ್ತನೆಂದು ಸಿದ್ಧಾಂತ ಪಡಿಸಿ, ದಮಸ್ಕದಲ್ಲಿದ್ದ ಯೆಹೂದ್ಯರನ್ನು
ಉತ್ತರವಿಲ್ಲದವರಾಗ ಮಾಡಿದನು.

23 ಅನೇಕ ದಿವಸಗಳು ಹೋದ ಮೇಲೆ, ಯೆಹೂದ್ಯರು ಅವನನ್ನು ಕೊಲ್ಲಬೇಕೆಂದು
24 ಆಲೋಚನೆಮಾಡಿಕೊಂಡರು. ಅವರ ಆಲೋಚನೆಯು ಸೌಲನಿಗೆ ತಿಳಿಯಬಂತು. ಅವ
ನನ್ನು ಕೊಲ್ಲುವದಕ್ಕಾಗಿ ಅವರು ಹಗಲಿರುಳೂ ಪಟ್ಟಣದ ಬಾಗಿಲುಗಳನ್ನು ಕಾಯುತ್ತಿ
25 ದ್ದರು. ಆದರೆ ಅವನ ಶಿಷ್ಯರು ರಾತ್ರಿಕಾಲದಲ್ಲಿ ಅವನನ್ನು ಕರೆದುಕೊಂಡುಹೋಗಿ,
ಒಂದು ಹೆಡಿಗೆಯಲ್ಲಿ ಕೂಡ್ರಿಸಿ ಗೋಡೆಯೊಳಗಿಂದ ಇಳಿಸಿದರು.

26 ಅವನು ಯೆರೂಸಲೇಮಿಗೆ ಬಂದು ಶಿಷ್ಯರೊಳಗೆ ಸೇರಿಕೊಳ್ಳಬೇಕೆಂದು ಪ್ರಯತ್ನಮಾಡಿ
27 ದಾಗ, ಎಲ್ಲರು ಅವನನ್ನು ಶಿಷ್ಯನೆಂದು ನಂಬದೆ ಅವನಿಗೆ ಭಯಪಟ್ಟರು. ಆದರೆ ಬಾರ್ನ
ಬನು ಅವನನ್ನು ಕೈಹಿಡಿದು ಅಪೊಸ್ತಲರ ಬಳಿಗೆ ಕರೆದುಕೊಂಡುಹೋಗಿ, ಅವನು ದಾರಿ
ಯಲ್ಲಿ ಕರ್ತನನ್ನು ಕಂಡದ್ದನ್ನೂ ಕರ್ತನು ಅವನ ಸಂಗಡ ಮಾತಾಡಿದ್ದನ್ನೂ ದಮಸ್ಕ
ದೊಳಗೆ ಯೇಸುವಿನ ಹೆಸರಿನಲ್ಲಿ ಧೈರ್ಯದಿಂದ ಮಾತಾಡಿದ್ದನ್ನೂ ಅವರಿಗೆ ವಿವರವಾಗಿ
28 ಹೇಳಿದನು. ಆ ಮೇಲೆ ಅವನು ಯೆರೂಸಲೇಮಿನಲ್ಲಿದ್ದುಕೊಂಡು ಅವರಲ್ಲಿ ಬರುತ್ತಾ

ಹೋಗುತ್ತಾ ಕರ್ತನ ಹೆಸರಿನಲ್ಲಿ ಧೈರ್ಯದಿಂದ ಬೋಧಿಸಿದನು. ಮತ್ತು ಗ್ರೀಕ್‌ಭಾಷೆ 29 ಯನ್ನಾಡುವ ಯೆಹೂದ್ಯರ ಸಂಗಡ ಮಾತಾಡಿ ತರ್ಕಿಸುತ್ತಿದ್ದನು. ಆದರೆ ಅವರು ಅವನನ್ನು ಕೊಲ್ಲುವದಕ್ಕೆ ಪ್ರಯತ್ನಮಾಡಿದರು. ಇದು ಸಹೋದರರಿಗೆ ತಿಳಿದು ಬರಲು, 30 ಅವರು ಅವನನ್ನು ಕೈಸರ್ಯೆಯಕ್ಕೆ ಕರಕೊಂಡುಹೋಗಿ, ಅಲ್ಲಿಂದ ತಾರ್ಸಕ್ಕೆ ಕಳುಹಿಸಿದರು.

ಹೀಗಿರಲಾಗಿ ಯೂದಾಯ ಗಲಿಲಾಯ ಸಮಾರ್ಯ ಸೀಮೆಗಳಲ್ಲಿದ್ದ ಸಭೆಯು 31 ಸಮಾಧಾನಹೊಂದಿತು; ಮತ್ತು ಭಕ್ತಿಯಲ್ಲಿ ಬೆಳೆದು, ಕರ್ತನ ಭಯದಲ್ಲಿ ನಡೆದು, ಪವಿತ್ರಾತ್ಮನಿಂದ ಪ್ರೋತ್ಸಾಹವನ್ನು ಹೊಂದಿ, ಹೆಚ್ಚುತ್ತಾ ಬಂತು.

### ಐನೇಯನೆಂಬ ಪಾರ್ಶ್ವವಾಯುರೋಗಿ ಅದ್ಭುತವಾಗಿ ವಾಸಿಯಾದದ್ದು.

ಪೇತ್ರನು ಎಲ್ಲಾ ಕಡೆಯೂ ಸಂಚಾರ ಮಾಡುತ್ತಿರುವಾಗ ಲುದ್ದದಲ್ಲಿ ವಾಸವಾಗಿದ್ದ 32 ದೇವಜನರ ಬಳಿಗೂ ಬಂದನು. ಅಲ್ಲಿ ಪಾರ್ಶ್ವವಾಯುರೋಗಿಯಾಗಿ ಎಂಟು ವರುಷ 33 ಗಳಿಂದ ಹಾಸಿಗೆಯ ಮೇಲೆ ಬಿದ್ದಿದ್ದ ಐನೇಯನೆಂಬ ಒಬ್ಬ ಮನುಷ್ಯನನ್ನು ಕಂಡನು. ಪೇತ್ರನು ಅವನಿಗೆ—ಐನೇಯನೇ, ಯೇಸು ಕ್ರಿಸ್ತನು ನಿನ್ನನ್ನು ವಾಸಿಮಾಡುತ್ತಾನೆ; ಎದ್ದು 34 ನಿನ್ನ ಹಾಸಿಗೆಯನ್ನು ಹಾಸಿಕೋ ಎಂದು ಹೇಳಿದನು. ಕೂಡಲೇ ಅವನು ಎದ್ದನು.. ಮತ್ತು ಲುದ್ದದಲ್ಲಿಯೂ ಸಾರೋನಪ್ರಾಂತ್ಯದಲ್ಲಿಯೂ ವಾಸವಾಗಿದ್ದವರೆಲ್ಲರು ಅವನನ್ನು 35 ನೋಡಿದರು, ಮತ್ತು ಅವರು ಕರ್ತನ ಕಡೆಗೆ ತಿರುಗಿಕೊಂಡರು.

### ಸತ್ತುಹೋಗಿದ್ದ ದೊರ್ಕಳೆಂಬ ಒಬ್ಬ ಶಿಷ್ಯಳನ್ನು ಬದುಕಿಸಿದ್ದು.

ಯೊಪ್ಪದಲ್ಲಿ ತಬಿಥಾ ಎಂಬ ಒಬ್ಬ ಶಿಷ್ಯಳಿದ್ದಳು. ಆ ಹೆಸರಿಗೆ ಗ್ರೀಕ್‌ಭಾಷೆಯಲ್ಲಿ 36 ದೊರ್ಕ[1] ಎಂದರ್ಥ. ಆಕೆಯು ಸತ್ಕ್ರಿಯೆಗಳನ್ನೂ ದಾನಧರ್ಮಗಳನ್ನೂ ಬಹಳವಾಗಿ ಮಾಡುತ್ತಿದ್ದಳು. ಆ ಕಾಲದಲ್ಲಿ ಆಕೆ ರೋಗದಲ್ಲಿ ಬಿದ್ದು ಸತ್ತಳು, ಮತ್ತು ಆಕೆಯ 37 ಶವವನ್ನು ತೊಳೆದು ಮೇಲಂತಸ್ತಿನಲ್ಲಿಟ್ಟರು. ಯೊಪ್ಪಕ್ಕೆ ಲುದ್ದವು ಹತ್ತರವಾಗಿರಲಾಗಿ 38 ಪೇತ್ರನು ಅಲ್ಲಿ ಇದ್ದಾನೆಂದು ಶಿಷ್ಯರು ಕೇಳಿ, ಇಬ್ಬರು ಮನುಷ್ಯರನ್ನು ಅವನ ಬಳಿಗೆ ಕಳುಹಿಸಿ—ತಡಮಾಡದೆ ನಮ್ಮ ತನಕ ಬರಬೇಕೆಂದು ಬೇಡಿಕೊಂಡರು. ಪೇತ್ರನು 39 ಎದ್ದು ಅವರ ಜೊತೆಯಲ್ಲಿ ಹೋದನು. ಅವನು ಬಂದ ಕೂಡಲೇ ಅವರು ಅವನನ್ನು ಮೇಲಂತಸ್ತಿಗೆ ಕರೆದುಕೊಂಡು ಹೋದರು. ಅಲ್ಲಿ ವಿಧವೆಯರೆಲ್ಲರು ಅಳುತ್ತಾ ಅವನ ಹತ್ತರ ನಿಂತುಕೊಂಡು, ದೊರ್ಕಳು ತಮ್ಮ ಸಂಗಡ ಇದ್ದಾಗ ಮಾಡಿಕೊಟ್ಟಿದ್ದ ಒಳಂಗಿ ಗಳನ್ನೂ ಮೇಲಂಗಿಗಳನ್ನೂ ತೋರಿಸಿದರು. ಪೇತ್ರನು ಅವರೆಲ್ಲರನ್ನು ಹೊರಕ್ಕೆ ಕಳು 40 ಹಿಸಿ, ಮೊಣಕಾಲೂರಿ ಪ್ರಾರ್ಥನೆಮಾಡಿ, ಶವದ ಕಡೆಗೆ ತಿರುಗಿಕೊಂಡು—ತಬಿಥಾ, ಏಳು ಅಂದನು. ಆಕೆಯು ಕಣ್ಣು ತೆರೆದು ಪೇತ್ರನನ್ನು ನೋಡಿ, ಎದ್ದು ಕೂತು ಕೊಂಡಳು. ಅವನು ಆಕೆಯನ್ನು ಕೈಕೊಟ್ಟು ಎಬ್ಬಿಸಿ, ದೇವಜನರನ್ನೂ ವಿಧವೆಯರನ್ನೂ 41

[1] ದೊರ್ಕ ಅಂದರೆ ಜಿಂಕೆ.

42 ಕರೆದು, ಜೀವಿತಳಾದ ಆಕೆಯನ್ನು ಅವರೆದುರಿಗೆ ನಿಲ್ಲಿಸಿದನು. ಈ ಸಂಗತಿಯು ಯೊಪ್ಪ
43 ದಲ್ಲೆಲ್ಲಾ ತಿಳಿಯಬಂದು, ಅನೇಕರು ಕರ್ತನ ಮೇಲೆ ನಂಬಿಕೆಯಿಟ್ಟರು. ಆ ಮೇಲೆ ಪೇತ್ರನು ಯೊಪ್ಪದಲ್ಲಿ ಚರ್ಮಕಾರನಾದ ಸೀಮೋನನೆಂಬವನ ಬಳಿಯಲ್ಲಿ ಬಹಳ ದಿವ ಸದ ವರೆಗೂ ಇದ್ದನು.

ಅನ್ಯಜನರಿಗೆ ಕ್ರಿಸ್ತನ ಸುವಾರ್ತೆಯನ್ನು ತಿಳಿಸುವದಕ್ಕೆ ಪೇತ್ರನು ಅಪ್ಪಣೆಹೊಂದಿದ್ದು. ಅವರಲ್ಲಿ ಕೊರ್ನೇಲಿಯನೆಂಬವನು ನಂಬಿ ದೀಕ್ಷಾಸ್ನಾನಮಾಡಿಸಿಕೊಂಡದ್ದು.

**10** ಕೈಸರೈಯದಲ್ಲಿ ಇತಾಲ್ಯದ ಪಟಾಲಮೆನ್ನಿಸಿಕೊಳ್ಳುವ ಒಂದು ಪಟಾಲಮಿನ ಶತಾಧಿ
2 ಪತಿಯಾದ ಕೊರ್ನೇಲ್ಯನೆಂಬ ಒಬ್ಬ ಮನುಷ್ಯನಿದ್ದನು. ಅವನು ಭಕ್ತನೂ ತನ್ನ ಮನೆಯವರೆಲ್ಲರ ಸಹಿತವಾಗಿ ದೇವರಿಗೆ ಭಯಪಡುವವನೂ ಆಗಿದ್ದು ಜನರಿಗೆ ಬಹಳ ವಾಗಿ ದಾನಧರ್ಮಮಾಡುತ್ತಾ ದೇವರಿಗೆ ನಿತ್ಯವೂ ಪ್ರಾರ್ಥನೆಮಾಡುತ್ತಾ ಇದ್ದನು.
3 ಹಗಲು ಸುಮಾರು ಒಂಭತ್ತನೇ ತಾಸಿನಲ್ಲಿ[1] ಅವನಿಗೆ ಒಂದು ದರ್ಶನ ಉಂಟಾಗಿ, ಒಬ್ಬ ದೇವದೂತನು ತನ್ನ ಬಳಿಗೆ ಬಂದು—ಕೊರ್ನೇಲ್ಯನೇ ಎಂದು ಕರೆಯುವದನ್ನು ಅವನು
4 ಪ್ರತ್ಯಕ್ಷವಾಗಿ ಕಂಡನು. ಅವನು ಆ ದೂತನನ್ನು ದೃಷ್ಟಿಸಿನೋಡಿ ಭಯಹಿಡಿದವ ನಾಗಿ—ಏನು ಸ್ವಾಮೀ ಎಂದು ಕೇಳಲು, ದೂತನು ಅವನಿಗೆ—ನಿನ್ನ ಪ್ರಾರ್ಥನೆಗಳೂ
5 ನಿನ್ನ ದಾನಧರ್ಮಗಳೂ ದೇವರ ಮುಂದೆ ಜ್ಞಾಪಕಾರ್ಥವಾಗಿ ಏರಿಬಂದವು. ಈಗ ನೀನು ಯೊಪ್ಪಕ್ಕೆ ಜನರನ್ನು ಕಳುಹಿಸಿ, ಪೇತ್ರನೆನ್ನಿಸಿಕೊಳ್ಳುವ ಸೀಮೋನನನ್ನು ಕರಿಸ
6 ಬೇಕು. ಅವನು ಚರ್ಮಕಾರನಾದ ಸೀಮೋನನ ಬಳಿಯಲ್ಲಿ ಇಳುಕೊಂಡಿದ್ದಾನೆ;
7 ಈ ಸೀಮೋನನ ಮನೆಯು ಸಮುದ್ರದ ಬಳಿಯಲ್ಲಿ ಅದೆ ಎಂದು ಹೇಳಿದನು. ಕೊರ್ನೇ ಲ್ಯನು ತನ್ನ ಸಂಗಡ ಮಾತಾಡಿದ ದೇವದೂತನು ಹೊರಟುಹೋದ ಮೇಲೆ, ತನ್ನ ಪರಿಚಾ ರಕರಲ್ಲಿ ಇಬ್ಬರನ್ನೂ ತನ್ನ ಹತ್ತಿರ ಯಾವಾಗಲೂ ಇರುತ್ತಿದ್ದ ಸಿಪಾಯಿಗಳಲ್ಲಿ ಒಬ್ಬ
8 ದೇವಭಕ್ತನನ್ನೂ ಕರೆದು, ಅವರಿಗೆ ಈ ಸಂಗತಿಗಳನ್ನೆಲ್ಲಾ ವಿವರವಾಗಿ ಹೇಳಿ ಅವರನ್ನು ಯೊಪ್ಪಕ್ಕೆ ಕಳುಹಿಸಿದನು.

9 ಮರುದಿನ ಅವರು ಪ್ರಯಾಣಮಾಡಿ ಆ ಊರಿನ ಹತ್ತರಕ್ಕೆ ಬರುತ್ತಿರುವಾಗ, ಪೇತ್ರನು ಸುಮಾರು ಮಧ್ಯಾಹ್ನದಲ್ಲಿ ಪ್ರಾರ್ಥನೆ ಮಾಡುವದಕ್ಕಾಗಿ ಮಾಳಿಗೆಯನ್ನು ಹತ್ತಿದನು.
10 ಅವನು ಬಹಳ ಹಸಿದು ಊಟಮಾಡಬೇಕೆಂದಿದ್ದನು. ಊಟಕ್ಕೆ ಸಿದ್ಧವಾಗುತ್ತಿರು
11 ವಷ್ಟರಲ್ಲಿ ಅವನು ಧ್ಯಾನಪರವಶನಾಗಿ, ಆಕಾಶವು ತೆರೆದಿರುವದನ್ನೂ ನಾಲ್ಕು ಮೂಲೆ ಗಳನ್ನು ಹಿಡಿದಿದ್ದ ದೊಡ್ಡ ಜೋಳಿಗೆಯಂತಿರುವ ಏನೋ ಒಂದು ವಸ್ತುವು ಭೂಮಿಯ
12 ಮೇಲೆ ಇಳಿಯುವದನ್ನೂ ಕಂಡನು. ಅದರೊಳಗೆ ಸಕಲ ವಿಧವಾದ ಪಶುಗಳೂ ನೆಲದ ಮೇಲೆ ಹರಿದಾಡುವ ಕ್ರಿಮಿಕೀಟಗಳೂ ಅಂತರಿಕ್ಷದಲ್ಲಿ ಹಾರ್ಯಾಡುವ ಹಕ್ಕಿಗಳೂ ಇದ್ದವು.
13 ಆಗ—ಪೇತ್ರನೇ, ಎದ್ದು ಕೊಯ್ದು ತಿನ್ನು ಎಂದು ಅವನಿಗೆ ಒಂದು ವಾಣಿ ಕೇಳಿಸಿತು.
14 ಅದಕ್ಕೆ ಪೇತ್ರನು—ಬೇಡವೇ ಬೇಡ ಸ್ವಾಮೀ, ನಾನು ಎಂದೂ ಹೊಲೆ ಪದಾರ್ಥವನ್ನಾ

[1] ಸಾಯಂಕಾಲ ಮೂರು ಘಂಟೆಗೆ.

ಗಲಿ ಅಶುದ್ಧ ಪದಾರ್ಥವನ್ನಾಗಲಿ ತಿಂದವನಲ್ಲ ಅಂದನು. ದೇವರು ಶುದ್ಧಮಾಡಿದ್ದನ್ನು 15 ನೀನು ಹೊಲೆ ಎನ್ನಬೇಡವೆಂದು ತಿರಿಗಿ ಎರಡನೇ ಸಾರಿ ಅವನಿಗೆ ವಾಣಿ ಕೇಳಿಸಿತು. ಹೀಗೆ ಮೂರು ಸಾರಿ ಆಯಿತು. ಆದ ಕೂಡಲೆ ಆ ವಸ್ತುವು ಆಕಾಶದೊಳಗೆ ಸೇರಿ 16 ಕೊಂಡಿತು.

ಪೇತ್ರನು ತನಗಾದ ದರ್ಶನವು ಏನಾಗಿರಬಹುದೆಂದು ತನ್ನಲ್ಲಿ ಕಳವಳ ಪಡುತ್ತಿರು 17 ವಾಗಲೇ, ಕೊರ್ನೇಲ್ಯನು ಕಳುಹಿಸಿದ್ದ ಆ ಮನುಷ್ಯರು ಸೀಮೋನನ ಮನೆ ಯಾವದು ಎಂದು ಕೇಳಿಕೊಂಡು ಬಂದು ಆ ಮನೆಯ ಬಾಗಿಲಲ್ಲಿ ನಿಂತು—ಪೇತ್ರನೆನ್ನಿಸಿಕೊಳ್ಳುವ 18 ಸೀಮೋನನು ಇಲ್ಲಿ ಇಳುಕೊಂಡಿದ್ದಾನೋ ಎಂದು ಕೂಗಿ ಕೇಳಿದರು. ಪೇತ್ರನು 19 ಆ ದರ್ಶನದ ವಿಷಯದಲ್ಲಿ ಆಲೋಚನೆ ಮಾಡುತ್ತಿರಲು, ದೇವರಾತ್ಮನು ಅವನಿಗೆ— ಅಗೋ, ಇಬ್ಬರು[1] ಮನುಷ್ಯರು ನಿನ್ನನ್ನು ವಿಚಾರಿಸುತ್ತಾರೆ; ನೀನೆದ್ದು ಕೆಳಗಿಳಿದು ಏನೂ 20 ಸಂಶಯ ಪಡದೆ ಅವರ ಜೊತೆಯಲ್ಲಿ ಹೋಗು, ನಾನೇ ಅವರನ್ನು ಕಳುಹಿಸಿದ್ದೇನೆ ಎಂದು ಹೇಳಿದನು. ಪೇತ್ರನು ಕೆಳಗಿಳಿದು ಆ ಮನುಷ್ಯರ ಬಳಿಗೆ ಬಂದು—ಇಗೋ, ನೀವು 21 ವಿಚಾರಿಸುವವನು ನಾನೇ; ನೀವು ಬಂದ ಕಾರಣವೇನು ಎಂದು ಕೇಳಲು, ಅವರು— 22 ಕೊರ್ನೇಲ್ಯನೆಂಬ ಒಬ್ಬ ಶತಾಧಿಪತಿ ಇದ್ದಾನೆ. ಅವನು ನೀತಿವಂತನೂ ದೇವರಿಗೆ ಭಯ ಪಡುವವನೂ ಯೆಹೂದ್ಯ ಜನರೆಲ್ಲರಿಂದ ಒಳ್ಳೇ ಹೆಸರು ಹೊಂದಿದವನೂ ಆಗಿದ್ದಾನೆ; ನಿನ್ನನ್ನು ತನ್ನ ಮನೆಗೆ ಕರೇಕಳುಹಿಸಿಕೊಂಡು ನಿನ್ನಿಂದ ಬೋಧನೆಯನ್ನು ಕೇಳಬೇಕೆಂದು ದೇವ ದೂತನ ಮುಖಾಂತರವಾಗಿ ಅಪ್ಪಣೆಹೊಂದಿದನು ಎಂದು ಹೇಳಿದರು. ಪೇತ್ರನು 23 ಇದನ್ನು ಕೇಳಿ ಅವರನ್ನು ಒಳಕ್ಕೆ ಕರೆದು ಉಪಚರಿಸಿದನು.

ಮರುದಿನ ಅವನು ಎದ್ದು ಅವರ ಜೊತೆಯಲ್ಲಿ ಹೊರಟನು; ಯೊಪ್ಪದಲ್ಲಿದ್ದ ಸಹೋ ದರರಲ್ಲಿ ಕೆಲವರು ಅವನ ಕೂಡ ಹೋದರು. ಮರುದಿನ ಅವನು ಕೈಸರೈಯಕ್ಕೆ 24 ಸೇರಿದನು. ಕೊರ್ನೇಲ್ಯನು ತನ್ನ ಬಂಧುಬಳಗದವರನ್ನೂ ಪ್ರಾಣಮಿತ್ರರನ್ನೂ ಕೂಡ ಕರಿಸಿ ಪೇತ್ರನನ್ನು ಎದುರುನೋಡುತ್ತಿದ್ದನು. ಅವನು ಬಂದಾಗ ಕೊರ್ನೇಲ್ಯನು ಅವ 25 ನನ್ನು ಎದುರುಗೊಂಡು ಅವನ ಪಾದಕ್ಕೆ ಬಿದ್ದು ನಮಸ್ಕಾರ ಮಾಡಿದನು. ಆದರೆ 26 ಪೇತ್ರನು—ಏಳಪ್ಪಾ, ನಾನೂ ಮನುಷ್ಯನು ಎಂದು ಹೇಳಿ, ಅವನನ್ನು ಎತ್ತಿ, ಅವನ 27 ಸಂಗಡ ಸಂಭಾಷಣೆ ಮಾಡುತ್ತಾ ಮನೆಯೊಳಕ್ಕೆ ಬಂದನು. ಅಲ್ಲಿ ಬಹು ಜನರು ಕೂಡಿಬಂದಿರುವದನ್ನು ಕಂಡು, ಅವರಿಗೆ—ಯೆಹೂದ್ಯರು ಅನ್ಯಜನರ ಕೂಡ ಹೊಕ್ಕು 28 ಬಳಿಕೆಮಾಡುವದು ಯೆಹೂದ್ಯರ ಧರ್ಮಕ್ಕೆ ವಿರುದ್ಧವಾಗಿದೆ ಎಂದು ನೀವು ಬಲ್ಲಿರಷ್ಟೆ. ನನಗಂತೂ ಯಾವ ಮನುಷ್ಯನನ್ನಾದರೂ ಹೊಲೆಯನು ಇಲ್ಲವೆ ಅಶುದ್ಧನು ಅನ್ನಬಾರ ದೆಂದು ದೇವರು ತೋರಿಸಿದ್ದಾನೆ. ಆದಕಾರಣ ನೀವು ನನ್ನನ್ನು ಕರೇಕಳುಹಿಸಿದಾಗ, 29 ನಾನು ಯಾವ ಎದುರುಮಾತನ್ನೂ ಹೇಳದೆ ಬಂದೆನು. ಈಗ ನೀವು ನನ್ನನ್ನು ಕರಿಸಿದ ಉದ್ದೇಶವೇನು ನನಗೆ ತಿಳಿಸಬೇಕು ಎಂದು ಹೇಳಿದನು. ಅದಕ್ಕೆ ಕೊರ್ನೇಲ್ಯನು— 30 ನಾಲ್ಕು ದಿವಸಗಳ ಹಿಂದೆ ನಾನು ಒಂಭತ್ತನೇ ತಾಸಿನ[2] ದೇವರ ಪ್ರಾರ್ಥನೆಯನ್ನು

---

[1] ಕೆಲವು ಪ್ರತಿಗಳಲ್ಲಿ ಮೂರು ಮಂದಿ ಎಂದು ಬರೆದದೆ. [2] ಅಂದರೆ, ಮಧ್ಯಾಹ್ನದ ಮೂರು ಘಂಟೆಯು.

ಇಷ್ಟು ಹೊತ್ತಿನ ವರೆಗೂ ನನ್ನ ಮನೆಯಲ್ಲಿ ಮಾಡುತ್ತಿದ್ದಾಗ, ಹೊಳೆಯುವ ವಸ್ತ್ರವನ್ನು
31 ಧರಿಸಿಕೊಂಡಿದ್ದ ಒಬ್ಬ ಮನುಷ್ಯನು ನನ್ನೆದುರಿಗೆ ನಿಂತುಕೊಂಡು—ಕೊರ್ನೇಲ್ಯನೇ, ನಿನ್ನ ಪ್ರಾರ್ಥನೆಯು ಕೇಳಬಂತು, ನಿನ್ನ ದಾನಧರ್ಮಗಳು ದೇವರ ಸನ್ನಿಧಾನದಲ್ಲಿ ನೆನ
32 ಪಿಗೆ ಬಂದವು. ನೀನು ಯೊಪ್ಪಕ್ಕೆ ಕಳುಹಿಸಿ ಪೇತ್ರನೆನ್ನಿಸಿಕೊಳ್ಳುವ ಸೀಮೋನನನ್ನು ಕರಿಸಬೇಕು; ಅವನು ಚರ್ಮಕಾರನಾದ ಸೀಮೋನನ ಮನೆಯಲ್ಲಿ ಇಳುಕೊಂಡಿದ್ದಾನೆ;
33 ಆ ಮನೆ ಸಮುದ್ರದ ಬಳಿಯಲ್ಲಿ ಅದೆ ಅಂದನು. ನಾನು ತಡಮಾಡದೆ ನಿನ್ನ ಹತ್ತರ ಕಳುಹಿಸಿದೆನು. ನೀನು ಬಂದದ್ದು ಉಪಕಾರವಾಯಿತು. ಹೀಗಿರುವದರಿಂದ, ಕರ್ತನು ನಿನಗೆ ಅಪ್ಪಣೆ ಕೊಟ್ಟಿರುವ ಎಲ್ಲಾ ಮಾತುಗಳನ್ನು ಕೇಳುವದಕ್ಕೆ ನಾವೆಲ್ಲರು ಈಗ ದೇವರ ಸನ್ನಿಧಾನದಲ್ಲಿ ಕೂಡಿದ್ದೇವೆ ಅಂದನು.

34 ಆಗ ಪೇತ್ರನು ಉಪದೇಶಮಾಡಲಾರಂಭಿಸಿ ಹೇಳಿದ್ದೇನಂದರೆ—ದೇವರು ಪಕ್ಷಪಾತಿ
35 ಯಲ್ಲವೆಂಬುವ ಮಾತು[1] ನಿಶ್ಚಯವೇ ಸರಿ. ಯಾವ ಜನರಲ್ಲಿಯಾದರೂ ದೇವರಿಗೆ ಭಯಪಟ್ಟು ನೀತಿಯನ್ನು ನಡಸುವವರು ಆತನಿಗೆ ಮೆಚ್ಚಿಗೆಯಾಗಿದ್ದಾರೆಂದು ಈಗ ಸಂದೇಹ
36 ವಿಲ್ಲದೆ ನನಗೆ ತಿಳಿದು ಬಂದದೆ. ಎಲ್ಲಾ ಜನಗಳಿಗೂ ಕರ್ತನಾಗಿರುವ ಯೇಸು ಕ್ರಿಸ್ತನ ಮೂಲಕ ದೇವರು ಸುಕ್ಷೇಮದ ಶುಭವರ್ತಮಾನವನ್ನು ಪ್ರಕಟಿಸುತ್ತಾ ಇಸ್ರಯೇಲ ಜನ
37 ರಿಗೆ ಅನುಗ್ರಹಿಸಿದ ವಾಕ್ಯವು ನಿಮಗೇ ತಿಳಿದಿರುವದು. ದೀಕ್ಷಾಸ್ನಾನಮಾಡಿಸಿಕೊಳ್ಳ ಬೇಕೆಂದು ಯೋಹಾನನು ಸಾರಿದ ತರುವಾಯ ಈ ವಾಕ್ಯವು ಗಲಿಲಾಯದಿಂದ ಪ್ರಾರಂಭ
38 ವಾಗಿ ಯೂದಾಯದಲ್ಲೆಲ್ಲಾ ಪ್ರಬಲವಾಯಿತು. ದೇವರು ನಜರೇತಿನ ಯೇಸುವನ್ನು ಪವಿ ತ್ರಾತ್ಮದಿಂದಲೂ ಬಲದಿಂದಲೂ ಅಭಿಷೇಕಿಸಿದನು; ದೇವರು ಆತನ ಸಂಗಡ ಇದ್ದದರಿಂದ ಆತನು ಉಪಕಾರಗಳನ್ನು ಮಾಡುತ್ತಾ ಸೈತಾನನ ವಶದಲ್ಲಿ ಸಿಕ್ಕಿಕೊಂಡವರೆಲ್ಲರನ್ನು ಗುಣ
39 ಮಾಡುತ್ತಾ ಸಂಚರಿಸಿದನು; ಇದೆಲ್ಲಾ ನಿಮಗೆ ಗೊತ್ತಾಗಿರುವದಷ್ಟೆ. ಆತನು ಯೆಹೂ ದ್ಯರ ಸೀಮೆಯಲ್ಲಿಯೂ ಯೆರೂಸಲೇಮಿನಲ್ಲಿಯೂ ಮಾಡಿದ ಎಲ್ಲಾ ಕಾರ್ಯಗಳಿಗೆ ನಾವು
40 ಸಾಕ್ಷಿಗಳಾಗಿದ್ದೇವೆ. ಆತನನ್ನು ಮರದ ಕಂಭಕ್ಕೆ ತೂಗಹಾಕಿ ಕೊಂದರು. ದೇವರು
41 ಆತನನ್ನು ಮೂರನೇ ದಿನದಲ್ಲಿ ಎಬ್ಬಿಸಿ ಪ್ರತ್ಯಕ್ಷನಾಗುವಂತೆ ಮಾಡಿದನು; ಆತನು ಎಲ್ಲ ರಿಗೆ ಪ್ರತ್ಯಕ್ಷನಾಗದೆ, ದೇವರು ಮುಂಚಿತವಾಗಿ ಆರಿಸಿಕೊಂಡಿದ್ದ ಸಾಕ್ಷಿಗಳಾದ ನಮಗೆ ಪ್ರತ್ಯಕ್ಷನಾದನು. ಆತನು ಸತ್ತವರೊಳಗಿಂದ ಜೀವಿತನಾಗಿ ಎದ್ದುಬಂದ ಮೇಲೆ ನಾವು
42 ಆತನ ಸಂಗಡ ಅನ್ನಪಾನಗಳನ್ನು ತಕ್ಕೊಂಡೆವು. ಆತನೇ ಜೀವಿತರಿಗೂ ಸತ್ತವರಿಗೂ ನ್ಯಾಯಾಧಿಪತಿಯಾಗಿ ದೇವರಿಂದ ನೇಮಕವಾದವನು ಎಂಬುವದನ್ನು ಜನರಿಗೆ ಸಾರಿ
43 ಸಾಕ್ಷಿಹೇಳಬೇಕೆಂದು ದೇವರು ನಮಗೆ ಅಪ್ಪಣೆಕೊಟ್ಟನು. ಆತನಲ್ಲಿ ನಂಬಿಕೆಯಿಡುವ ಪ್ರತಿಯೊಬ್ಬನು ಆತನ ಹೆಸರಿನ ಮೂಲಕವಾಗಿ ಪಾಪಪರಿಹಾರವನ್ನು ಹೊಂದುವನೆಂದು ಆತನ ವಿಷಯದಲ್ಲಿ ಪ್ರವಾದಿಗಳೆಲ್ಲರು ಸಾಕ್ಷಿಹೇಳಿದ್ದಾರೆ ಅಂದನು.

44 ಪೇತ್ರನು ಈ ಮಾತುಗಳನ್ನು ಇನ್ನೂ ಹೇಳುತ್ತಿರುವಾಗ, ಅವನ ವಾಕ್ಯವನ್ನು ಕೇಳಿ
45-46 ದವರೆಲ್ಲರ ಮೇಲೆ ಪವಿತ್ರಾತ್ಮವರವು ಇಳಿಯಿತು. ಅವರು ನಾನಾ ಭಾಷೆಗಳನ್ನಾ

---

[1] ದ್ವಿತೀಯ ನ್ಯಾಯ ೧೦, ೧೭; ೧ ಸಮುವೇಲ ೧೬, ೭.

ಡುತ್ತಾ ದೇವರನ್ನು ಕೊಂಡಾಡುತ್ತಾ ಇರುವದನ್ನು ಪೇತ್ರನ ಸಂಗಡ ಬಂದಿದ್ದ ಯೆಹೂದ್ಯರಾದ[1] ವಿಶ್ವಾಸಿಗಳು ಕೇಳಿದಾಗ—ಅನ್ಯಜನಗಳಿಗೂ ಪವಿತ್ರಾತ್ಮದಾನ ಮಾಡಲ್ಪಟ್ಟಿದೆಯಲ್ಲಾ ಎಂದು ಅತ್ಯಾಶ್ಚರ್ಯಪಟ್ಟರು. ನಡೆದ ಸಂಗತಿಯನ್ನು ಪೇತ್ರನು ನೋಡಿ— 47 ನಮ್ಮ ಹಾಗೆಯೇ ಪವಿತ್ರಾತ್ಮವರವನ್ನು ಹೊಂದಿದ ಇವರಿಗೆ ನೀರಿನ ದೀಕ್ಷಾಸ್ನಾನವಾಗ 48 ದಂತೆ ಯಾರಾದರೂ ಅಭ್ಯಂತರ ಮಾಡ್ಯಾರೇ ಎಂದು ಹೇಳಿ, ಅವರಿಗೆ—ನೀವು ಯೇಸು ಕ್ರಿಸ್ತನ ಹೆಸರಿನಲ್ಲಿ ದೀಕ್ಷಾಸ್ನಾನಮಾಡಿಸಿಕೊಳ್ಳಬೇಕೆಂದು ಅಪ್ಪಣೆ ಕೊಟ್ಟನು. ಆ ಮೇಲೆ ಅವರು ಅವನನ್ನು—ಇನ್ನೂ ಕೆಲವು ದಿವಸ ಇರಬೇಕೆಂದು ಬೇಡಿಕೊಂಡರು.

ಪೇತ್ರನು ಅನ್ಯಜನರೊಂದಿಗೆ ಬಳಿಕೆ ಮಾಡಿದ್ದಕ್ಕೆ ಯೆರೂಸಲೇಮಿನಲ್ಲಿದ್ದ ಯೆಹೂದ್ಯ ಕ್ರೈಸ್ತರು ಆಕ್ಷೇಪಣೆ ಮಾಡಲು, ಪೇತ್ರನು ಪ್ರತಿವಾದ ಹೇಳಿದ್ದು.

**11** ಅನ್ಯಜನರು ಸಹ ದೇವರ ವಾಕ್ಯವನ್ನು ಅಂಗೀಕರಿಸಿದರೆಂಬ ಸಮಾಚಾರವನ್ನು ಅಪೊಸ್ತಲರೂ ಯೂದಾಯದಲ್ಲಿದ್ದ ಸಹೋದರರೂ ಕೇಳಿದರು. 2-3 ಪೇತ್ರನು ಯೆರೂಸಲೇಮಿಗೆ ಬಂದಾಗ, ಸುನ್ನತಿಯವರು—ನೀನು ಸುನ್ನತಿಯಿಲ್ಲದವರಲ್ಲಿ ಸೇರಿ ಅವರ ಸಂಗಡ ಊಟಾ ಮಾಡಿದಿಯಲ್ಲಾ ಎಂದು ಅವನ ಕೂಡ ವಿವಾದಿಸಿದರು. 4 ಪೇತ್ರನು ನಡೆದ ಸಂಗತಿಯನ್ನು ಅವರಿಗೆ ಮೊದಲಿಂದ ಕ್ರಮವಾಗಿ ವಿವರಿಸಿ ಹೇಳಿದ್ದೇನಂದರೆ—5 ನಾನು ಯೊಪ್ಪ ಪಟ್ಟಣದಲ್ಲಿ ಪ್ರಾರ್ಥನೆಮಾಡುತ್ತಿದ್ದಾಗ, ಧ್ಯಾನಪರವಶನಾಗಿದ್ದ ನನಗೆ ಒಂದು ದರ್ಶನವಾಯಿತು; ಅದೇನಂದರೆ, ಆಕಾಶದಿಂದ ನಾಲ್ಕು ಮೂಲೆಗಳನ್ನು ಹಿಡಿದಿದ್ದ ದೊಡ್ಡ ಜೋಳಿಗೆಯಂತಿರುವ ಒಂದು ವಸ್ತುವು ಇಳಿಸಲ್ಪಟ್ಟು ನಾನಿದ್ದಲ್ಲಿಗೆ ಬಂತು. 6 ಅದೇನೆಂದು ತಿಳುಕೊಳ್ಳುವದಕ್ಕೆ ನಾನು ಚನ್ನಾಗಿ ನೋಡಿದಾಗ, ನೆಲದ ಮೇಲೆ ತಿರುಗಾಡುವ ಪಶು ಮೃಗ ಕ್ರಿಮಿಕೀಟಗಳನ್ನೂ ಅಂತರಿಕ್ಷದಲ್ಲಿ ಹಾರ್ಯಾಡುವ ಹಕ್ಕಿಗಳನ್ನೂ ಕಂಡೆನು. 7 ಆಗ—ಪೇತ್ರನೇ, ಎದ್ದು ಕೊಯ್ದು ತಿನ್ನು ಎಂದು ನನಗೆ ಹೇಳುವ ವಾಣಿಯನ್ನು ಕೇಳಿದೆನು. 8 ನಾನು—ಬೇಡವೇ ಬೇಡ, ಸ್ವಾಮಿಾ, ಹೊಲೆಯಾದ ಪದಾರ್ಥವಾಗಲಿ ಅಶುದ್ಧ ಪದಾರ್ಥವಾಗಲಿ ಎಂದೂ ನನ್ನ ಬಾಯೊಳಗೆ ಸೇರಿದ್ದಿಲ್ಲ ಅಂದೆನು. 9 ಅದಕ್ಕೆ—ದೇವರು ಶುದ್ಧ ಮಾಡಿದ್ದನ್ನು ನೀನು ಹೊಲೆ ಎನ್ನಬಾರದು ಎಂಬದಾಗಿ ಎರಡನೇ ಸಾರಿ ಆಕಾಶವಾಣಿಯಾಯಿತು. 10 ಹೀಗೆ ಮೂರು ಸಾರಿ ಆಯಿತು. ಆ ಮೇಲೆ ಎಲ್ಲವೂ ತಿರಿಗಿ ಆಕಾಶಕ್ಕೆ ಎತ್ತಲ್ಪಟ್ಟಿತು. 11 ಆ ಕ್ಷಣದಲ್ಲೇ ಮೂರು ಮಂದಿ ಮನುಷ್ಯರು ನಾವಿದ್ದ ಮನೆಯ ಮುಂದೆ ನಿಂತಿದ್ದರು. ಅವರು ಕೈಸರೈಯದಿಂದ ನನ್ನ ಹತ್ತರಕ್ಕೆ ಕಳುಹಿಸಲ್ಪಟ್ಟವರು. 12 ಆತ್ಮನು—ನೀನು ಏನೂ ಭೇದಮಾಡದೆ ಅವರ ಜೊತೆಯಲ್ಲಿ ಹೋಗು ಎಂದು ನನಗೆ ಹೇಳಿದನು. ಈ ಆರು ಮಂದಿ ಸಹೋದರರು ಸಹ ನನ್ನ ಸಂಗಡ ಬಂದರು. ಆ ಮನುಷ್ಯನ ಮನೆಯೊಳಗೆ ನಾವು ಸೇರಲು 13 ಅವನು ನಮಗೆ—ಒಬ್ಬ ದೇವದೂತನು ನನ್ನ ಮನೆಯಲ್ಲಿ ನಿಂತಿರುವದನ್ನು ಕಂಡೆನು. ಆ ದೂತನು—ನೀನು ಯೊಪ್ಪಕ್ಕೆ ಕಳುಹಿಸಿ ಪೇತ್ರನೆನ್ನಿಸಿಕೊಳ್ಳುವ ಸೀಮೋನನನ್ನು ಕರಿಸು; 14 ಅವನು ನಿನಗೆ ಕೆಲವು ಮಾತುಗಳನ್ನು ಹೇಳು

[1] ಮೂಲ: ಸುನ್ನತಿಯವರಾದ.

ವನು, ಆ ಮಾತುಗಳಿಂದ ನಿನಗೂ ನಿನ್ನ ಮನೆಯವರೆಲ್ಲರಿಗೂ ರಕ್ಷಣೆಯಾಗುವದು ಎಂದು
15 ಹೇಳಿದನೆಂಬದಾಗಿ ತಿಳಿಸಿದನು. ನಾನು ಮಾತಾಡುವದಕ್ಕೆ ಪ್ರಾರಂಭಿಸಿದಾಗ, ಪವಿತ್ರಾತ್ಮವರವು ಮೊದಲು ನಮ್ಮ ಮೇಲೆ ಇಳಿದಂತೆ ಅವರ ಮೇಲೆಯೂ ಇಳಿಯಿತು.
16 ಆಗ—ಯೋಹಾನನಂತೂ ನೀರಿನ ದೀಕ್ಷಾಸ್ನಾನಮಾಡಿಸಿದನು; ನಿಮಗಾದರೋ ಪವಿತ್ರಾತ್ಮಸ್ನಾನವಾಗುವದು ಎಂದು ಯೇಸುಸ್ವಾಮಿ ಹೇಳಿದ ಮಾತು[1] ನನ್ನ ನೆನಪಿಗೆ
17 ಬಂತು. ದೇವರು ಕರ್ತನಾಗಿರುವ ಯೇಸು ಕ್ರಿಸ್ತನಲ್ಲಿ ನಂಬಿಕೆಯಿಟ್ಟ ನಮಗೆ ಕೊಟ್ಟ ವರಕ್ಕೆ ಸರಿಯಾದ ವರವನ್ನು ಅವರಿಗೂ ಕೊಟ್ಟಿರಲಾಗಿ ದೇವರನ್ನು ತಡೆಯುವದಕ್ಕೆ
18 ನಾನು ಶಕ್ತನೋ? ಹೀಗೆಂದ ಮಾತುಗಳನ್ನು ಆ ಸುನ್ನತಿಯವರು ಕೇಳಿ, ಆಕ್ಷೇಪಣೆ ಮಾಡುವದನ್ನು ಬಿಟ್ಟು—ಹಾಗಾದರೆ ದೇವರು ಅನ್ಯಜನರಿಗೂ ಜೀವ ಕೊಡಬೇಕೆಂದು ಅವರ ಮನಸ್ಸುಗಳನ್ನು ತನ್ನ ಕಡೆಗೆ ತಿರುಗಿಸಿದ್ದಾನೆ ಎಂದು ದೇವರನ್ನು ಕೊಂಡಾಡಿದರು.

ಅಂತಿಯೋಕ್ಯದಲ್ಲಿ ಬಹುಜನ ಗ್ರೀಕರು ನಂಬಿದ್ದು; ಬಾರ್ನಬ ಸೌಲರು ಅಲ್ಲಿ ಬೋಧಿಸಿದ್ದು;
ಆ ಪಟ್ಟಣದಲ್ಲಿ ಕ್ರೈಸ್ತರೆಂಬ ಹೆಸರು ಉತ್ಪತ್ತಿಯಾದದ್ದು.

19 ಸ್ತೆಫನನ ವಿಷಯದಲ್ಲಿ ಉಂಟಾದ ಹಿಂಸೆಯಿಂದ ಚದರಿಹೋದವರು ಯೆಹೂದ್ಯರಿಗೇ ಹೊರತು ಮತ್ತಾರಿಗೂ ದೇವರ ವಾಕ್ಯವನ್ನು ಹೇಳದೆ ಫೊಯಿನೀಕೆ ಕುಪ್ರ ಅಂತಿಯೋಕ್ಯ
20 ಪ್ರಾಂತ್ಯಗಳ ವರೆಗೂ ಸಂಚರಿಸಿದರು. ಅವರಲ್ಲಿ ಕುಪ್ರದ್ವೀಪದವರು ಕೆಲವರೂ ಕುರೇನ್ಯದವರು ಕೆಲವರೂ ಅಂತಿಯೋಕ್ಯಕ್ಕೆ ಬಂದು, ಗ್ರೀಕರ[2] ಸಂಗಡಲೂ ಮಾತಾಡಿ
21 ಕರ್ತನಾದ ಯೇಸುವಿನ ವಿಷಯವಾದ ಸುವಾರ್ತೆಯನ್ನು ತಿಳಿಸಿದರು. ಕರ್ತನ ಹಸ್ತವು[3] ಅವರಿಗೆ ಸಹಾಯವಾದ್ದರಿಂದ ಬಹು ಜನರು ನಂಬಿ ಕರ್ತನ ಕಡೆಗೆ ತಿರುಗಿಕೊಂಡರು.
22 ಇವರ ವಿಷಯವಾದ ವರ್ತಮಾನವು ಯೆರೂಸಲೇಮಿನಲ್ಲಿದ್ದ ಸಭೆಯವರ ಕಿವಿಗೆ
23-24 ಬಿದ್ದಾಗ ಅವರು ಬಾರ್ನಬನನ್ನು ಅಂತಿಯೋಕ್ಯಕ್ಕೆ ಕಳುಹಿಸಿದರು. ಅವನು ಒಳ್ಳೆಯವನೂ ಪವಿತ್ರಾತ್ಮದಿಂದಲೂ ನಂಬಿಕೆಯಿಂದಲೂ ತುಂಬಿದವನೂ ಆಗಿದ್ದನು. ಆದಕಾರಣ ಅಲ್ಲಿಗೆ ಬಂದು ದೇವರ ಕೃಪಾಕಾರ್ಯವನ್ನು ನೋಡಿದಾಗ ಸಂತೋಷಪಟ್ಟು—ನೀವು ದೃಢಮನಸ್ಸಿನಿಂದ ಕರ್ತನನ್ನು ಹೊಂದಿಕೊಂಡಿರ್ರಿ ಎಂದು ಅವರೆಲ್ಲರಿಗೆ
25 ಬುದ್ಧಿಹೇಳಿದನು. ಆಗ ಬಹುಮಂದಿ ಕರ್ತನಿಗೆ ಸೇರಿಕೊಂಡರು. ತರುವಾಯ
26 ಬಾರ್ನಬನು ಸೌಲನನ್ನು ಹುಡುಕುವದಕ್ಕಾಗಿ ತಾರ್ಸಕ್ಕೆ ಹೋಗಿ ಅವನನ್ನು ಕಂಡು ಅಂತಿಯೋಕ್ಯಕ್ಕೆ ಕರೆದುಕೊಂಡುಬಂದನು. ಆ ಮೇಲೆ ಅವರು ಪೂರಾ ಒಂದು ವರ್ಷ ಸಭೆಯವರ ಸಂಗಡ ಕೂಡಿಯಿದ್ದು ಬಹು ಜನರಿಗೆ ಉಪದೇಶಮಾಡಿದರು. ಅಂತಿಯೋಕ್ಯದಲ್ಲಿಯೇ ಶಿಷ್ಯರಿಗೆ ಕ್ರೈಸ್ತರೆಂಬ ಹೆಸರು ಮೊದಲು ಬಂತು.

---

[1] ಅಪೊಸ್ತಲರ ಕೃತ್ಯ ೧, ೫. [2] ಕೆಲವು ಪ್ರತಿಗಳಲ್ಲಿ—ಗ್ರೀಕ್‌ಭಾಷೆಯನ್ನಾಡುವ ಯೆಹೂದ್ಯರ ಎಂದು ಬರೆದದೆ.
[3] ೪ನೇ ಅಧ್ಯಾಯ, ೩೦ನೇ ವಚನವನ್ನು ನೋಡಿರಿ.

ಬಾರ್ನಬ ಸೌಲರು ಯೆರೂಸಲೇಮಿಗೆ ದ್ರವ್ಯಸಹಾಯವನ್ನು ತೆಗೆದುಕೊಂಡು ಹೋದದ್ದು; ಅಷ್ಟರಲ್ಲಿ ಅರಸನಾದ ಹೆರೋದನು ಯಾಕೋಬನನ್ನು ಕೊಲ್ಲಿಸಿ ಪೇತ್ರನನ್ನು ಸೆರೆಯಲ್ಲಿ ಹಾಕಿಸಿದ್ದು; ದೇವದೂತನು ಪೇತ್ರನನ್ನು ಬಿಡಿಸಿದ್ದು; ಅರಸನು ಸತ್ತದ್ದು.

ಆ ಕಾಲದಲ್ಲಿ ಪ್ರವಾದಿಗಳಾಗಿದ್ದ ಕೆಲವರು ಯೆರೂಸಲೇಮಿನಿಂದ ಅಂತಿಯೋಕ್ಯಕ್ಕೆ 27 ಬಂದರು. ಅವರಲ್ಲಿ ಅಗಬನೆಂಬವನೊಬ್ಬನು ಎದ್ದು, ಲೋಕಕ್ಕೆಲ್ಲಾ[1] ದೊಡ್ಡ ಕ್ಷಾಮ 28 ಬರುವದು ಎಂದು ಪವಿತ್ರಾತ್ಮಪ್ರೇರಣೆಯಿಂದ ಸೂಚಿಸಿದನು. ಅದು ಕ್ಲೌದ್ಯ ಚಕ್ರವರ್ತಿಯ ಕಾಲದಲ್ಲಿ ಉಂಟಾಯಿತು. ಆಗ ಆ ಶಿಷ್ಯರಲ್ಲಿ ಪ್ರತಿಯೊಬ್ಬರು ಯೂದಾಯ 29 ಸೀಮೆಯಲ್ಲಿ ವಾಸವಾಗಿದ್ದ ಸಹೋದರರಿಗೆ ತಮ್ಮತಮ್ಮ ಶಕ್ತ್ಯನುಸಾರ ದ್ರವ್ಯಸಹಾಯ ಮಾಡಬೇಕೆಂದು ನಿಶ್ಚಯಿಸಿಕೊಂಡರು. ಹಾಗೆಯೇ ಮಾಡಿ ಅದನ್ನು ಬಾರ್ನಬ ಸೌಲರ 30 ಕೈಯಿಂದ ಸಭೇ ಹಿರಿಯರಿಗೆ ಕಳುಹಿಸಿದರು.

ಆ ಸಮಯದಲ್ಲೇ ಅರಸನಾದ ಹೆರೋದನು ಸಭೆಯವರಲ್ಲಿ ಕೆಲವರನ್ನು ಹಿಂಸೆಪಡಿಸು **12** ವದಕ್ಕೆ ಕೈಹಾಕಿ, ಯೋಹಾನನ ಅಣ್ಣನಾದ ಯಾಕೋಬನನ್ನು ಕತ್ತಿಯಿಂದ ಕೊಲ್ಲಿಸಿ 2 ದನು. ಇದು ಯೆಹೂದ್ಯರಿಗೆ ಮೆಚ್ಚಿಕೆಯಾಗಿದೆ ಎಂದು ನೋಡಿ, ಅಷ್ಟಕ್ಕೆ ನಿಲ್ಲದೆ 3 ಪೇತ್ರನನ್ನೂ ಹಿಡಿಸಿದನು. ಆ ಕಾಲದಲ್ಲಿ ಹುಳಿಯಿಲ್ಲದ ರೊಟ್ಟಿಯ ಹಬ್ಬ ನಡೆಯುತ್ತಿತ್ತು. ಅವನನ್ನು ಪಸ್ಕಾಹಬ್ಬವಾದ ಮೇಲೆ ಜನರ ಮುಂದೆ ತರಿಸಬೇಕೆಂಬ ಯೋಚನೆ 4 ಯಿಂದ ಸೆರೆಯಲ್ಲಿ ಹಾಕಿಸಿ, ಅವನನ್ನು ಕಾಯಲಿಕ್ಕೆ ನಾಲ್ಕು ನಾಲ್ಕು ಸಿಪಾಯಿಗಳಿದ್ದ ನಾಲ್ಕು ಗುಂಪುಗಳ ವಶಕ್ಕೆ ಕೊಟ್ಟನು. ಪೇತ್ರನು ಸೆರೆಮನೆಯೊಳಗೆ ಕಾವಲಲ್ಲಿದ್ದಾಗ 5 ಸಭೆಯವರು ಅವನಿಗೋಸ್ಕರ ಆಸಕ್ತಿಯಿಂದ ದೇವರಿಗೆ ಪ್ರಾರ್ಥನೆ ಮಾಡುತ್ತಿದ್ದರು. ಹೆರೋದನು ಅವನನ್ನು ಜನರ ಮುಂದೆ ತರಿಸಬೇಕೆಂದಿದ್ದ ದಿವಸದ ಹಿಂದಿನ ರಾತ್ರಿಯಲ್ಲಿ 6 ಪೇತ್ರನು ಎರಡು ಸರಪಣಿಗಳಿಂದ ಕಟ್ಟಲ್ಪಟ್ಟವನಾಗಿ ಇಬ್ಬರು ಸಿಪಾಯಿಗಳ ನಡುವೆ ನಿದ್ದೆಮಾಡುತ್ತಿದ್ದನು. ಕಾವಲುಗಾರರು ಬಾಗಿಲ ಮುಂದೆ ನಿಂತು ಸೆರೆಮನೆಯನ್ನು ಕಾಯುತ್ತಿದ್ದರು. ಫಕ್ಕನೆ ಕರ್ತನ ದೂತನು ಪೇತ್ರನೆದುರಿಗೆ ನಿಂತನು. ಅವನಿದ್ದ 7 ಕೋಣೆಯಲ್ಲಿ ಬೆಳಕು ಹೊಳೆಯಿತು. ಅವನು ಪೇತ್ರನನ್ನು ಪಕ್ಕೆ ತಟ್ಟಿ ಎಬ್ಬಿಸಿ—ತಟ್ಟನೆ ಏಳು ಅಂದನು. ಆಗಲೇ ಅವನ ಕೈಗಳಿಗೆ ಹಾಕಿದ್ದ ಸರಪಣಿಗಳು ಕಳಚಿಬಿದ್ದವು. ಆ ದೂತನು ಅವನಿಗೆ—ನಡಾಕಟ್ಟಿಕೊಂಡು ನಿನ್ನ ಕೆರಗಳನ್ನು ಮೆಟ್ಟಿಕೋ ಎಂದು 8 ಹೇಳಲು, ಅವನು ಹಾಗೇ ಮಾಡಿದನು. ನಿನ್ನ ಮೇಲಂಗಿಯನ್ನು ಹಾಕಿಕೊಂಡು ನನ್ನ ಹಿಂದೆ ಬಾ ಅಂದನು. ಅವನು ಹೊರಗೆ ಬಂದು ಆ ದೂತನ ಹಿಂದೆಯೇ ಹೋಗುತ್ತಾ 9 ದೂತನ ಮೂಲಕವಾಗಿ ನಡೆದ ಸಂಗತಿ ನಿಜವಾದದ್ದೆಂದು ತಿಳಿಯದೆ ತಾನು ನೋಡಿದ್ದು ಕನಸು ಎಂದು ನೆನಸಿದನು. ಅವರು ಮೊದಲನೇ ಎರಡನೇ ಕಾವಲುಗಳನ್ನು ದಾಟಿ 10 ಪಟ್ಟಣಕ್ಕೆ ಹೋಗುವ ಕಬ್ಬಿಣದ ಬಾಗಿಲಿಗೆ ಬಂದಾಗ ಅದು ತನ್ನಷ್ಟಕ್ಕೆ ತಾನೇ ಅವರಿಗೆ ತೆರೆಯಿತು. ಅವರು ಹೊರಗೆ ಬಂದು ಒಂದು ಬೀದಿಯನ್ನು ದಾಟಿದರು; ಕೂಡಲೇ ಆ ದೂತನು ಅವನನ್ನು ಬಿಟ್ಟುಹೋದನು. ಆಗ ಪೇತ್ರನು ಎಚ್ಚರವಾಗಿ—ಕರ್ತನು ತನ್ನ 11

[1] ಅಥವಾ, ರೋಮ್‌ಸಾಮ್ರಾಜ್ಯಕ್ಕೆಲ್ಲಾ.

ದೂತನನ್ನು ಕಳುಹಿಸಿ ಹೆರೋದನ ಕೈಯಿಂದಲೂ ಯೆಹೂದ್ಯಜನರು ನನಗೆ ಮಾಡ ಬೇಕೆಂದಿದ್ದ ಕೇಡಿನಿಂದಲೂ ನನ್ನನ್ನು ಬಿಡಿಸಿದನೆಂದು ನನಗೀಗ ನಿಜವಾಗಿ ತಿಳಿದು ಬಂದದೆ
12 ಅಂದುಕೊಂಡನು. ತರುವಾಯ ಅವನು ಯೋಚನೆಮಾಡಿಕೊಂಡು ಮಾರ್ಕನೆನ್ನಿಸಿ ಕೊಳ್ಳುವ ಯೋಹಾನನ ತಾಯಿಯಾದ ಮರಿಯಳ ಮನೆಗೆ ಬಂದನು. ಅಲ್ಲಿ ಅನೇಕರು
13 ಕೂಡಿಬಂದು ಪ್ರಾರ್ಥನೆ ಮಾಡುತ್ತಿದ್ದರು. ಪೇತ್ರನು ಬಾಗಿಲಿನ ಕದವನ್ನು ತಟ್ಟಲು
14 ರೋದೆ ಎಂಬ ಒಬ್ಬ ಚಾಕರಿಯವಳು ನೋಡುವದಕ್ಕೆ ಬಂದಳು. ಅವಳು ಪೇತ್ರನ ಧ್ವನಿಯನ್ನು ಗೊತ್ತುಹಿಡಿದು ಸಂತೋಷದ ನಿಮಿತ್ತದಿಂದಲೇ ಬಾಗಿಲನ್ನು ತೆರೆಯದೆ, ಒಳಕ್ಕೆ ಓಡಿಹೋಗಿ—ಪೇತ್ರನು ಬಾಗಿಲ ಮುಂದೆ ನಿಂತಿದ್ದಾನೆ ಎಂದು ತಿಳಿಸಿದಳು.
15 ಅವರು ಅವಳಿಗೆ—ನಿನಗೆ ಹುಚ್ಚು ಹಿಡಿದದೆ ಎಂದು ಹೇಳಿದರು. ಆದರೆ ಅವಳು ತಾನು ಹೇಳಿದಂತೆಯೇ ಅದೆ ಎಂದು ದೃಢವಾಗಿ ಹೇಳುತ್ತಾ ಇರಲು, ಅವನ ದೂತನಾಗಿರಬೇಕು
16 ಅಂದರು. ಅಷ್ಟರಲ್ಲಿ ಪೇತ್ರನು ಇನ್ನೂ ತಟ್ಟುತ್ತಾ ಇರಲು, ಅವರು ಬಾಗಿಲನ್ನು ತೆರೆದು,
17 ಅವನನ್ನು ಕಂಡು ಬೆರಗಾದರು. ಆದರೆ ಅವನು ಸುಮ್ಮಗಿರ್ರಿ ಎಂದು ಅವರಿಗೆ ಕೈಸನ್ನೆ ಮಾಡಿ, ತನ್ನನ್ನು ಕರ್ತನು ಸೆರೆಮನೆಯೊಳಗಿಂದ ಹೊರಗೆ ಕರೆದುಕೊಂಡು ಬಂದ ರೀತಿ ಯನ್ನು ವಿವರಿಸಿ, ಈ ಸಂಗತಿಗಳನ್ನು ಯಾಕೋಬನಿಗೂ ಸಹೋದರರೆಲ್ಲರಿಗೂ ತಿಳಿಸಿ
18 ರೆಂದು ಹೇಳಿ, ಬೇರೆ ಸ್ಥಳಕ್ಕೆ ಹೊರಟುಹೋದನು. ಬೆಳಗಾದ ಮೇಲೆ ಪೇತ್ರನು ಏನಾದ
19 ನೆಂದು ಸಿಪಾಯಿಗಳಲ್ಲಿ ಬಹಳ ಕಳವಳ ಉಂಟಾಯಿತು. ಹೆರೋದನು ಅವನನ್ನು ಹುಡುಕಿಸಿ, ಅವನು ಸಿಕ್ಕಲಿಲ್ಲವಾದದರಿಂದ ಕಾವಲುಗಾರರನ್ನು ವಿಚಾರಣೆಮಾಡಿ ಅವ ರಿಗೆ ಮರಣದಂಡನೆಯನ್ನು ವಿಧಿಸಿದನು. ಬಳಿಕ ಯೂದಾಯದಿಂದ ಕೈಸರೈಯಕ್ಕೆ ಹೋಗಿ ಅಲ್ಲಿ ಕೆಲವು ಕಾಲ ಇದ್ದನು.

20 ತೂರ್ ಸೀದೋನ್ ಪಟ್ಟಣಗಳ ನಿವಾಸಿಗಳು ತಮ್ಮ ಮೇಲೆ ಹೆರೋದನು ಬಹಳ ವಾಗಿ ಕೋಪಿಸಿಕೊಂಡಿರುವದನ್ನು ನೋಡಿ, ಒಂದೇ ಮನಸ್ಸಿನಿಂದ ಅವನ ಸನ್ನಿಧಿಗೆ ಬಂದು, ಅರಸನ ಅಂತಃಪುರದ ಮೇಲಣ ಅಧಿಕಾರಿಯಾದ ಬ್ಲಾಸ್ತನನ್ನು ಒಲಿಸಿಕೊಂಡು, ಸಮಾಧಾನವಾಗಬೇಕೆಂದು ಅರಸನನ್ನು ಬೇಡಿಕೊಂಡರು. ಯಾಕಂದರೆ ಅರಸನ ಸೀಮೆ
21 ಯಿಂದಲೇ ಅವರ ಸೀಮೆಗೆ ದವಸಧಾನ್ಯ ಒದಗುತ್ತಿತ್ತು. ಗೊತ್ತುಮಾಡಿದ ಒಂದು ದಿನದಲ್ಲಿ ಹೆರೋದನು ರಾಜವಸ್ತ್ರವನ್ನು ಧರಿಸಿಕೊಂಡು ರಾಜಾಸನದ ಮೇಲೆ ಕೂತು
22 ಅವರಿಗೆ ಉಪನ್ಯಾಸಮಾಡಿದನು. ಕೂಡಿದ್ದ ಜನರು—ಇದು ಮನುಷ್ಯನ ನುಡಿಯಲ್ಲ,
23 ದೇವರ ನುಡಿಯೇ ಎಂದು ಆರ್ಭಟಿಸಿದರು. ಆ ಘನವನ್ನು ಅವನು ದೇವರಿಗೆ ಸಲ್ಲಿಸದೆ ಹೋದದರಿಂದ, ಕರ್ತನ ದೂತನು ಆ ಕ್ಷಣದಲ್ಲೇ ಅವನನ್ನು ಒಡಿದನು; ಅವನು ಹುಳಬಿದ್ದು ಸತ್ತನು.

24, 25 ಆದರೆ ದೇವರ ವಾಕ್ಯವು ಹಬ್ಬಿ ಹೆಚ್ಚುತ್ತಾ ಬಂತು. ಬಾರ್ನಬ ಸೌಲರು ಮಾಡ ಬೇಕಾದ ಧರ್ಮಕಾರ್ಯವನ್ನು ತೀರಿಸಿ ಮಾರ್ಕನೆನ್ನಿಸಿಕೊಳ್ಳುವ ಯೋಹಾನನನ್ನು ಕರ ಕೊಂಡು ಯೆರೂಸಲೇಮಿನಿಂದ ಹಿಂತಿರುಗಿ ಬಂದರು.

ಸುವಾರ್ತೆಯನ್ನು ಸಾರುವದಕ್ಕೆ ಪೌಲನು ಮಾಡಿದ ಮೊದಲನೇ ಪ್ರಯಾಣದ ಸಂಗತಿಗಳು.

(**13**, 1— **14**, 28.)

ಬಾರ್ನಬ ಸೌಲರು ಕುಪ್ರದ್ವೀಪಕ್ಕೆ ಹೋದದ್ದು. ಎಲುಮನೆಂಬ ಮಂತ್ರವಾದಿಯನ್ನು ಕುರಿತದ್ದು.

ಅಂತಿಯೋಕ್ಯದಲ್ಲಿದ್ದ ಸಭೆಯೊಳಗೆ ಪ್ರವಾದಿಗಳೂ ಬೋಧಕರೂ ಇದ್ದರು; ಯಾರ್ಯಾ **13** ರಂದರೆ—ಬಾರ್ನಬ, ನೀಗರನೆಂಬ ಸಿಮೆಯೋನ, ಕುರೇನ್ಯದ ಲೂಕ್ಯ, ಉಪರಾಜನಾದ ಹೆರೋದನ ಸಾಕತಮ್ಮನಾದ ಮೆನಹೇನ, ಸೌಲ ಇವರೇ. 2 ಇವರು ಕರ್ತನನ್ನು ಸೇವಿಸುತ್ತಾ ಉಪವಾಸಮಾಡುತ್ತಾ ಇದ್ದಾಗ, ಪವಿತ್ರಾತ್ಮನು—ನಾನು ಬಾರ್ನಬ ಸೌಲರನ್ನು ಕರೆದ ಕೆಲಸಕ್ಕಾಗಿ ಅವರನ್ನು ಪ್ರತ್ಯೇಕಿಸಿರಿ ಎಂದು ಹೇಳಿದನು. 3 ಆಗ ಅವರು ಉಪವಾಸವಿದ್ದು ಪ್ರಾರ್ಥನೆ ಮಾಡಿ ಆ ಇಬ್ಬರ ಮೇಲೆ ಹಸ್ತಾರ್ಪಣಮಾಡಿ ಅವರನ್ನು ಕಳುಹಿಸಿಕೊಟ್ಟರು.

4 ಹೀಗೆ ಅವರು ಪವಿತ್ರಾತ್ಮನಿಂದ ಕಳುಹಿಸಿಕೊಂಡವರಾಗಿ ಸೆಲ್ಯೂಕ್ಯಕ್ಕೆ ಬಂದರು; ಅಲ್ಲಿಂದ ಸಮುದ್ರಪ್ರಯಾಣವಾಗಿ ಕುಪ್ರದ್ವೀಪಕ್ಕೆ ಹೋದರು. 5 ಸಲಮೀಸಿಗೆ ಸೇರಿದಾಗ ಯೆಹೂದ್ಯರ ಸಭಾಮಂದಿರಗಳಲ್ಲಿ ದೇವರ ವಾಕ್ಯವನ್ನು ಪ್ರಸಿದ್ಧಿಪಡಿಸಿದರು. ಯೋಹಾನನು ಪರಿಚಾರಕನಾಗಿ ಅವರ ಸಂಗಡ ಇದ್ದನು. 6 ಅವರು ದ್ವೀಪದಲ್ಲೆಲ್ಲಾ ಸಂಚಾರಮಾಡಿ, ಪಾಫೋಸ್ ಎಂಬ ಊರಿನ ತನಕ ಬಂದು, ಅಲ್ಲಿ ಸುಳ್ಳುಪ್ರವಾದಿಯೂ ಮಂತ್ರವಾದಿಯೂ ಆಗಿದ್ದ ಬಾರ್‌ಯೇಸು ಎಂಬ ಒಬ್ಬ ಯೆಹೂದ್ಯ ಮನುಷ್ಯನನ್ನು ಕಂಡರು. 7 ಅವನು ಬುದ್ಧಿವಂತನಾಗಿದ್ದ ಸೆರ್ಗ್ಯಪೌಲನೆಂಬ ಅಧಿಪತಿಯ ಹತ್ತರದಲ್ಲಿದ್ದನು. ಅಧಿಪತಿಯು ಬಾರ್ನಬ ಸೌಲರನ್ನು ತನ್ನ ಬಳಿಗೆ ಕರಸಿ, ದೇವರ ವಾಕ್ಯವನ್ನು ಕೇಳುವದಕ್ಕೆ ಅಪೇಕ್ಷೆ ಅದೆ ಎಂದು ಹೇಳಿದನು. 8 ಆದರೆ ಆ ಮಂತ್ರವಾದಿಯಾದ ಎಲುಮನು ಅವರಿಗೆ ಎದುರುನಿಂತು, ಅಧಿಪತಿಯು ಕ್ರಿಸ್ತನನ್ನು ನಂಬದ ಹಾಗೆ ಪ್ರಯತ್ನಿಸಿದನು. ಎಲುಮನೆಂಬ ಹೆಸರಿಗೆ ಮಂತ್ರವಾದಿ ಎಂಬುವದೇ ಅರ್ಥ. 9 ಆಗ ಪೌಲನೆನ್ನಿಸಿಕೊಳ್ಳುವ ಸೌಲನು 10 ಪವಿತ್ರಾತ್ಮಭರಿತನಾಗಿ ಅವನನ್ನು ದೃಷ್ಟಿಸಿನೋಡಿ—ಎಲೋ, ಎಲ್ಲಾ ಮೋಸದಿಂದಲೂ ಎಲ್ಲಾ ಕೆಟ್ಟತನದಿಂದಲೂ ತುಂಬಿರುವವನೇ, ಸೈತಾನನ ಮಗನೇ, ಎಲ್ಲಾ ನೀತಿಗೂ ವಿರೋಧಿಯೇ, ನೀನು ಕರ್ತನ ನೀಟಾದ ಮಾರ್ಗಗಳನ್ನು ಡೊಂಕುಮಾಡುವದನ್ನು ಬಿಡುವದಿಲ್ಲವೋ? 11 ಇಗೋ, ಕರ್ತನು ನಿನ್ನ ಮೇಲೆ ಕೈ ಎತ್ತಿದ್ದಾನೆ; ನೀನು ಕುರುಡನಾಗಿ ಕೆಲವು ಕಾಲ ಸೂರ್ಯನನ್ನು ಕಾಣದೆ ಇರುವಿ ಎಂದು ಹೇಳಿದನು. ಆ ಕ್ಷಣವೇ ಅವನಿಗೆ ಕಣ್ಣು ಮೊಬ್ಬಾಗಿ ಕತ್ತಲೆ ಉಂಟಾಯಿತು; ಅವನು ಕೈಹಿಡಿಯುವವರನ್ನು ಹುಡುಕುತ್ತಾ ತಿರುಗಾಡಿದನು. 12 ಅಧಿಪತಿಯು ಆ ಸಂಗತಿಯನ್ನು ನೋಡಿ, ಕರ್ತನ ಬೋಧನೆಗೆ ಅತ್ಯಾಶ್ಚರ್ಯಪಟ್ಟು, ನಂಬುವವನಾದನು.

ಪಿಸಿದ್ಯದ ಅಂತಿಯೋಕ್ಯದಲ್ಲಿ ಪೌಲನು ಇಸ್ರಯೇಲ ಜನರಿಗೆ ಉಪನ್ಯಾಸಮಾಡಿದ್ದು.

13 ತರುವಾಯ ಪೌಲನೂ ಅವನ ಜೊತೆಯಲ್ಲಿದ್ದವರೂ ಪಾಫೋಸೂರನ್ನು ಬಿಟ್ಟು ಸಮುದ್ರಪ್ರಯಾಣಮಾಡಿ ಪಂಫುಲ್ಯ ಸೀಮೆಗೆ ಸೇರಿದ ಪೆರ್ಗೆಗೆ ಬಂದರು; ಯೋಹಾನನು 14 ಅವರನ್ನು ಬಿಟ್ಟು ಹಿಂತಿರುಗಿ ಯೆರೂಸಲೇಮಿಗೆ ಹೋದನು. ಆ ಮೇಲೆ ಅವರು ಪೆರ್ಗೆಯಿಂದ ಸಂಚಾರಮಾಡಿ ಪಿಸಿದ್ಯ ಸೀಮೆಗೆ ಸೇರಿದ ಅಂತಿಯೋಕ್ಯಕ್ಕೆ ಬಂದರು. ಸಬ್ಬತ್ 15 ದಿನದಲ್ಲಿ ಅವರು ಸಭಾಮಂದಿರಕ್ಕೆ ಹೋಗಿ ಕೂತುಕೊಂಡರು. ಧರ್ಮಶಾಸ್ತ್ರವು ಪ್ರವಾದಿಗಳ ಗ್ರಂಥವು ಇವುಗಳ ಪಾರಾಯಣವಾದ ಮೇಲೆ, ಸಭಾಮಂದಿರದ ಯಜಮಾನರು—ಸಹೋದರರೇ, ಜನರಿಗೆ ಹೇಳತಕ್ಕ ಬುದ್ಧಿಮಾತೇನಾದರೂ ನಿಮಗಿದ್ದರೆ 16 ಹೇಳಿರಿ ಎಂದು ಅವರಿಗೆ ಹೇಳಿಕಳುಹಿಸಿದರು. ಆಗ ಪೌಲನು ಎದ್ದು, ಕೈಸನ್ನೆಮಾಡಿ, ಹೇಳಿದ್ದೇನಂದರೆ—

17 ಇಸ್ರಯೇಲ ಜನರೇ, ಮತ್ತು ಯೆಹೂದ್ಯ ಮತಾವಲಂಬಿಗಳೇ, ಕೇಳಿರಿ. ನಮ್ಮ ಇಸ್ರಯೇಲ ಜನರ ದೇವರು ನಮ್ಮ ಪಿತೃಗಳನ್ನು ಆರಿಸಿಕೊಂಡು, ನಮ್ಮ ಜನರು ಐಗುಪ್ತ ದೇಶದಲ್ಲಿ ಪ್ರವಾಸವಾಗಿದ್ದಾಗ ಅವರನ್ನು ವೃದ್ಧಿಗೆ ತಂದು, ಭುಜಬಲದಿಂದ ಆ ದೇಶದೊಳ 18 ಗಿಂದ ಬರಮಾಡಿದನು. ಆತನು ಸುಮಾರು ನಾಲ್ವತ್ತು ವರುಷಗಳ ವರೆಗೂ ಅಡವಿಯಲ್ಲಿ 19 ಅವರ ನಡಾವಳಿಯನ್ನು ಸಹಿಸಿಕೊಂಡು[1], ಕಾನಾನ್ ದೇಶದಲ್ಲಿದ್ದ ಅನ್ಯಜನಗಳ ಏಳು ರಾಜ್ಯಗಳನ್ನು ನಿರ್ಮೂಲಮಾಡಿ, ಆ ಜನರ ದೇಶವನ್ನು ಅವರಿಗೆ ಬಾಧ್ಯವಾಗಿ ಹಂಚಿ 20 ಕೊಟ್ಟನು. ಇಷ್ಟರೊಳಗೆ ಸುಮಾರು ನಾನೂರೈವತ್ತು ವರುಷಗಳು ಗತಿಸಿದವು. ಇದಾದ ಮೇಲೆ ಪ್ರವಾದಿಯಾದ ಸಮುವೇಲನ ಕಾಲದ ವರೆಗೆ ನ್ಯಾಯಾಧಿಪತಿಗಳನ್ನು ಕೊಟ್ಟನು. 21 ತರುವಾಯ ಅವರು ತಮಗೆ ಅರಸನು ಬೇಕೆಂದು ಕೇಳಿಕೊಳ್ಳಲು, ದೇವರು ಅವರಿಗೆ ಬೆನ್ಯಮೀನನ ಕುಲದ ಕೀಷನ ಮಗನಾದ ಸೌಲನನ್ನು ಕೊಟ್ಟನು. ಅವನು ನಾಲ್ವತ್ತು 22 ವರುಷ ಆಳಿದನು. ಆ ಮೇಲೆ ದೇವರು ಅವನನ್ನು ತೆಗೆದುಹಾಕಿ, ದಾವೀದನನ್ನು ಅವರ ಮೇಲೆ ಅರಸನಾಗಿ ಮಾಡಿ—ಇಶಾಯನ ಮಗನಾದ ದಾವೀದನು ನನಗೆ ಸಿಕ್ಕಿದನು, ಅವನು ನನ್ನ ಹೃದಯಕ್ಕೆ ಸಮರ್ಪಕನಾದ ಮನುಷ್ಯನು, ಅವನು ನನ್ನ ಇಷ್ಟ 23 ವನ್ನೆಲ್ಲಾ ನೆರವೇರಿಸುವವನು ಎಂಬದಾಗಿ[2] ಅವನ ವಿಷಯದಲ್ಲಿ ಸಾಕ್ಷಿಹೇಳಿದನು. ಅವನ ಸಂತಾನದಿಂದ ದೇವರು ತನ್ನ ವಾಗ್ದಾನದ ಪ್ರಕಾರ ಇಸ್ರಯೇಲ್ಯರಿಗೆ ಒಬ್ಬ ರಕ್ಷಕನನ್ನು 24 ಹುಟ್ಟಿಸಿದ್ದಾನೆ. ಆ ರಕ್ಷಕನೇ ಯೇಸು. ಆತನ ಆಗಮನಕ್ಕೆ ಮುಂಚೆ ಯೋಹಾನನು ಇಸ್ರಯೇಲ ಜನರೆಲ್ಲರಿಗೆ—ನೀವು ದೇವರ ಕಡೆಗೆ ತಿರುಗಿಕೊಂಡು ಸ್ನಾನಮಾಡಿಸಿಕೊಳ್ಳ 25 ಬೇಕೆಂದು ಸಾರಿದನು. ಯೋಹಾನನು ತನ್ನ ಸೇವೆಯನ್ನು[3] ಪೂರೈಸುತ್ತಿರುವಾಗ ಜನರಿಗೆ—ನನ್ನನ್ನು ಯಾರೆಂದು ಯೋಚಿಸುತ್ತೀರಿ? ನಾನು ಆತನಲ್ಲ, ಆದರೆ ನನ್ನ ಹಿಂದೆ ಒಬ್ಬನು ಬರುತ್ತಾನೆ, ಆತನ ಪಾದದ ಕೆರಗಳನ್ನು ಬಿಚ್ಚುವದಕ್ಕೆ ನಾನು ಯೋಗ್ಯನಲ್ಲ ಎಂದು ಹೇಳಿದನು.

---

[1] ಕೆಲವು ಪ್ರತಿಗಳಲ್ಲಿ — ದಾದಿಯು ಕೂಸನ್ನು ಸಾಕುವಂತೆ ಅವರನ್ನು ಅಡವಿಯಲ್ಲಿ ಸಾಕಿ ಸಲಹಿ ಎಂದು ಬರೆದದೆ.

[2] ಕೀರ್ತನೆ ೮೯, ೨೦; ೧ ಸಮುವೇಲ ೧೩, ೧೪. [3] ಮೂಲ: ತನ್ನ ಓಟವನ್ನು; ೨೦, ೨೪ ನೋಡು.

ಸಹೋದರರೇ, ಅಬ್ರಹಾಮನ ವಂಶಸ್ಥರೇ, ಮತ್ತು ನಿಮ್ಮಲ್ಲಿರುವ ಯೆಹೂದ್ಯಮತಾವಲಂಬಿಗಳೇ, ನಮಗೆ ಈ ರಕ್ಷಣೆಯ ವಾಕ್ಯವು ಕಳುಹಿಸಿ ಅದೆ. 26 ಯೆರೂಸಲೇಮಿನಲ್ಲಿ ವಾಸವಾಗಿರುವವರೂ ಅವರ ಅಧಿಕಾರಿಗಳೂ ಆತನನ್ನಾಗಲಿ ಪ್ರತಿ ಸಬ್ಬತ್‌ದಿನದಲ್ಲಿ ಪಾರಾಯಣವಾಗುವ ಪ್ರವಾದಿಗಳ ವಾಕ್ಯಗಳನ್ನಾಗಲಿ ಗ್ರಹಿಸದೆ ಆತನನ್ನು ಅಪರಾಧಿಯೆಂದು ತೀರ್ಪುಮಾಡಿ ಆ ವಾಕ್ಯಗಳನ್ನೇ ನೆರವೇರಿಸಿದರು. 27 ಮರಣದಂಡನೆಗೆ ಕಾರಣವೇನೂ ತಮಗೆ ಸಿಕ್ಕದಿದ್ದಾಗ್ಯೂ ಆತನನ್ನು ಕೊಲ್ಲಿಸಬೇಕೆಂದು ಪಿಲಾತನನ್ನು ಕೇಳಿಕೊಂಡರು. 28 ಆತನ ವಿಷಯವಾಗಿ ಶಾಸ್ತ್ರದಲ್ಲಿ ಬರೆದಿರುವದನ್ನೆಲ್ಲಾ ನೆರವೇರಿಸಿದ ಮೇಲೆ, ಆತನನ್ನು ಮರದ ಕಂಭದಿಂದ ಇಳಿಸಿ ಸಮಾಧಿಯಲ್ಲಿಟ್ಟರು. 29

ಆದರೆ ದೇವರು ಆತನನ್ನು ಸತ್ತವರೊಳಗಿಂದ ಎಬ್ಬಿಸಿದನು. 30, 31 ಮತ್ತು ಆತನು ಗಲಿಲಾಯದಿಂದ ಯೆರೂಸಲೇಮಿಗೆ ತನ್ನ ಜೊತೆಯಲ್ಲಿ ಬಂದವರಿಗೆ ಅನೇಕ ದಿವಸಗಳ ಪರಿಯಂತರ ಕಾಣಿಸಿಕೊಂಡನು. ಅವರು ಈಗ ಜನರ ಮುಂದೆ ಆತನಿಗೆ ಸಾಕ್ಷಿಗಳಾಗಿದ್ದಾರೆ. 32 ದೇವರು ನಮ್ಮ ಪಿತೃಗಳಿಗೆ ಮಾಡಿದ ವಾಗ್ದಾನವನ್ನು ನಮ್ಮ ಮಕ್ಕಳಿಗೋಸ್ಕರ[1] ನೆರವೇರಿಸಿದ್ದಾನೆಂಬ ಶುಭಸಮಾಚಾರವನ್ನು ನಾವು ನಿಮಗೆ ಸಾರುವವರಾಗಿದ್ದೇವೆ. 33 ಆತನು ಯೇಸುವನ್ನು ಎಬ್ಬಿಸಿದ್ದರಲ್ಲಿ—ನೀನು ನನ್ನ ಮಗನು, ಈಹೊತ್ತು ನಿನ್ನನ್ನು ಪಡೆದಿದ್ದೇನೆ ಎಂದು ಎರಡನೇ ಕೀರ್ತನೆಯಲ್ಲಿ ಬರೆದಿರುವ ಮಾತು ನೆರವೇರಿತು. 34 ಇದಲ್ಲದೆ ದೇವರು ಯೇಸುವನ್ನು ಸತ್ತವರೊಳಗಿಂದ ಎಬ್ಬಿಸಿದ್ದರಿಂದ ಆತನು ಇನ್ನೆಂದಿಗೂ ಕೊಳೆಯುವ ಅವಸ್ಥೆಗೆ ಸೇರತಕ್ಕವನಲ್ಲವೆಂಬದರ ವಿಷಯದಲ್ಲಿ ದೇವರು ಹೇಳಿರುವದೇನಂದರೆ—ನಾನು ದಾವೀದನಿಗೆ ವಾಗ್ದಾನಮಾಡಿದ ಪ್ರೀತಿಯ ವರಗಳನ್ನು ನಿಮಗೆ ಕೊಡುತ್ತೇನೆ, ಅವು ನಂಬಿಕೆಯಾದವುಗಳೇ ಎಂಬುವದು[2]. 35 ಅದಕ್ಕನುಸಾರವಾಗಿ ಆತನು—ನೀನು ನಿನ್ನ ಪ್ರಿಯನನ್ನು ಕೊಳೆಯುವ ಅವಸ್ಥೆಯನ್ನನುಭವಿಸುವದಕ್ಕೆ ಬಿಡುವದಿಲ್ಲವೆಂದು ಬೇರೊಂದು ಕೀರ್ತನೆಯಲ್ಲಿ[3] ಹೇಳಿದ್ದಾನೆ. 36 ದಾವೀದನಾದರೋ ತನ್ನ ಸಕಾಲದವರಿಗೆ ಸೇವೆಮಾಡಿದನಂತರ ದೈವಸಂಕಲ್ಪದಿಂದ[4] ನಿದ್ದೆಹೋಗಿ, ತನ್ನ ಪಿತೃಗಳ ಬಳಿಯಲ್ಲಿ ಇಡಲ್ಪಟ್ಟು, ಕೊಳೆಯುವ ಅವಸ್ಥೆಯನ್ನು ಅನುಭವಿಸಿದನು. 37 ಆದರೆ ದೇವರು ಎಬ್ಬಿಸಿದಾತನು ಕೊಳೆಯುವ ಅವಸ್ಥೆಯನ್ನು ಅನುಭವಿಸಲಿಲ್ಲ.

38 ಆದದರಿಂದ ಸಹೋದರರೇ, ಆತನ ಮೂಲಕವಾಗಿ ಪಾಪಪರಿಹಾರವು ದೊರೆಯುತ್ತದೆಂಬುವದು ನಿಮಗೆ ಸಾರೋಣವಾಗುತ್ತದೆಂದು ನಿಮಗೆ ತಿಳಿದಿರಲಿ. 39 ಮೋಶೆಯ ಧರ್ಮಶಾಸ್ತ್ರದ ಮೂಲಕ ನೀವು ಬಿಡುಗಡೆ ಹೊಂದಲಾಗದ ಎಲ್ಲಾ ಪಾಪಗಳಿಂದ ನಂಬುವವರೆಲ್ಲರು ಆತನ ಮೂಲಕವಾಗಿ ಬಿಡುಗಡೆಹೊಂದಿ ನೀತಿವಂತರೆನ್ನಿಸಿಕೊಳ್ಳುತ್ತಾರೆ. 40 ಹೀಗಿರಲಾಗಿ ಪ್ರವಾದಿಗಳ ಗ್ರಂಥದಲ್ಲಿ ಹೇಳಿರುವದು ನಿಮಗೆ ಸಂಭವಿಸದಂತೆ ನೋಡಿಕೊಳ್ಳಿರಿ. ಅದೇನಂದರೆ—

> ಎಲೈ ತಿರಸ್ಕಾರಮಾಡುವವರೇ, ಆಶ್ಚರ್ಯಪಡಿರಿ, ನಾಶವಾಗಿಹೋಗಿರಿ. 41
> ನಿಮ್ಮ ಕಾಲದಲ್ಲಿ ನಾನು ಒಂದು ಕಾರ್ಯವನ್ನು ಮಾಡುವೆನು;

[1] ಕೆಲವು ಪ್ರತಿಗಳಲ್ಲಿ—ಅವರ ಸಂತತಿಯವರಾದ ನಮಗೋಸ್ಕರ ಎಂದು ಬರೆದದೆ. [2] ಯೆಶಾಯ ೫೫, ೩. [3] ಕೀರ್ತನೆ ೧೬, ೧೦. [4] ಅಥವಾ, ತನ್ನ ಕಾಲದಲ್ಲಿ ದೈವಸಂಕಲ್ಪವನ್ನು ನೆರವೇರಿಸಿ.

ಆ ಕಾರ್ಯವನ್ನು ಒಬ್ಬನು ನಿಮಗೆ ವಿವರಿಸಿದರೂ
ನೀವು ಅದನ್ನು ಎಷ್ಟು ಮಾತ್ರಕ್ಕೂ ನಂಬುವದಿಲ್ಲ[1]
ಎಂಬುವದು ಅಂದನು.

42 ಪೌಲನೂ ಬಾರ್ನಬನೂ ಸಭಾಮಂದಿರವನ್ನು ಬಿಟ್ಟುಹೋಗುತ್ತಿರುವಾಗ, ಜನರು ಈ ಮಾತುಗಳನ್ನು ಬರುವ ಸಬ್ಬತ್ ದಿನದಲ್ಲಿಯೂ ತಮಗೆ ಹೇಳಬೇಕೆಂದು ಕೇಳಿ 43 ಕೊಂಡರು. ಸಭೆಯು ಮುಗಿದ ತರುವಾಯ ಯೆಹೂದ್ಯರಲ್ಲಿಯೂ ದೇವಭಕ್ತರಾಗಿದ್ದ ಯೆಹೂದ್ಯ ಮತಾವಲಂಬಿಗಳಲ್ಲಿಯೂ ಅನೇಕರು ಪೌಲ ಬಾರ್ನಬರನ್ನು ಹಿಂಬಾಲಿಸಿದರು. ಇವರು ಅವರ ಸಂಗಡ ಮಾತಾಡಿ ದೇವರ ಕೃಪಾಶ್ರಯದಲ್ಲಿ ನೆಲೆಗೊಂಡಿರಬೇಕೆಂದು ಅವರನ್ನು ಪ್ರೋತ್ಸಾಹಪಡಿಸಿದರು.

44 ಮುಂದಿನ ಸಬ್ಬತ್‌ದಿನದಲ್ಲಿ ಸ್ವಲ್ಪಕಡಿಮೆ ಊರೆಲ್ಲಾ ದೇವರ ವಾಕ್ಯವನ್ನು ಕೇಳು 45 ವದಕ್ಕೆ ಕೂಡಿಬಂತು. ಆದರೆ ಜನರು ಗುಂಪುಗುಂಪಾಗಿ ಬರುವದನ್ನು ನೋಡಿ ಯೆಹೂದ್ಯರು ಮತಾಭಿಮಾನದಿಂದ ತುಂಬಿದವರಾಗಿ ಪೌಲನು ಹೇಳಿದ ಮಾತುಗಳಿಗೆ ಎದುರ್ಗಂಡಿ 46 ಸುತ್ತಾ ದೂಷಣೆಮಾಡುತ್ತಾ ಇದ್ದರು. ಆಗ ಪೌಲನೂ ಬಾರ್ನಬನೂ ಧೈರ್ಯದಿಂದ ಮಾತಾಡಿ—ದೇವರ ವಾಕ್ಯವನ್ನು ಮೊದಲು ನಿಮಗೇ ಹೇಳುವದು ಅವಶ್ಯವಾಗಿತ್ತು; ಆದರೆ ನೀವು ಅದನ್ನು ತಳ್ಳಿಬಿಟ್ಟು ನಿಮ್ಮನ್ನು ನಿತ್ಯ ಜೀವಕ್ಕೆ ಅಪಾತ್ರರೆಂದು ತೀರ್ಪು ಮಾಡಿಕೊಂಡದ್ದರಿಂದ, ಇಗೋ, ನಾವು ನಿಮ್ಮನ್ನು ಬಿಟ್ಟು ಅನ್ಯಜನರ ಕಡೆಗೆ ಹೋಗು 47 ತ್ತೇವೆ. ಹಾಗೆಯೇ ಕರ್ತನು ನಮಗೆ ಅಪ್ಪಣೆಕೊಟ್ಟಿದ್ದಾನೆ; ಹ್ಯಾಗಂದರೆ—

ನಿನ್ನನ್ನು ಅನ್ಯಜನರಿಗೆ ಜ್ಯೋತಿಯಾಗಿ ನೇಮಿಸಿದ್ದೇನೆ,
ನೀನು ಭೂಲೋಕದ ಕಟ್ಟಕಡೆಯ ವರೆಗೂ ರಕ್ಷಕನಾಗಿರಬೇಕು

48 ಎಂದು[2] ದೇವರು ಹೇಳಿದ್ದಾನೆ ಅಂದರು. ಅಲ್ಲಿದ್ದ ಅನ್ಯಜನರು ಆ ಮಾತನ್ನು ಕೇಳಿ, ಸಂತೋಷಪಟ್ಟು, ದೇವರ ವಾಕ್ಯವನ್ನು ಹೊಗಳಿದರು; ಮತ್ತು ನಿತ್ಯಜೀವಕ್ಕೆ ನೇಮಿಸ 49 ಲ್ಪಟ್ಟವರೆಲ್ಲರು ನಂಬಿದರು. ಕರ್ತನ ವಾಕ್ಯವು ಆ ಸೀಮೆಯ ಎಲ್ಲಾ ಕಡೆಗಳಲ್ಲಿ 50 ಹಬ್ಬುತ್ತಾ ಬಂತು. ಆದರೆ ಯೆಹೂದ್ಯರು ತಮ್ಮ ಮತಕ್ಕೆ ಸೇರಿದ್ದ ಕುಲೀನ ಸ್ತ್ರೀಯರನ್ನೂ ಊರಿನ ಪ್ರಮುಖರನ್ನೂ ಪ್ರೇರಿಸಿ, ಪೌಲ ಬಾರ್ನಬರ ಮೇಲೆ ಹಿಂಸೆಯನ್ನು ಎಬ್ಬಿಸಿ, 51 ಅವರನ್ನು ತಮ್ಮ ಮೇರೆಯಿಂದ ಆಚೆಗೆ ಅಟ್ಟಿದರು. ಇವರು ತಮ್ಮ ಕಾಲಿಗೆ ಹತ್ತಿದ್ದ 52 ಧೂಳನ್ನು ಅವರ ಮೇಲೆ ಝಾಡಿಸಿಬಿಟ್ಟು, ಇಕೋನ್ಯಕ್ಕೆ ಹೋದರು. ಶಿಷ್ಯರಾದವರು ಸಂತೋಷದಿಂದಲೂ ಪವಿತ್ರಾತ್ಮದಿಂದಲೂ ತುಂಬಿದವರಾದರು.

ಲುಸ್ತ್ರಪಟ್ಟಣದಲ್ಲಿ ಪೌಲ ಬಾರ್ನಬರು ಹುಟ್ಟುಕುಂಟನನ್ನು ವಾಸಿಮಾಡಲು ಆ ಊರಿನ ಜನರು ಮೊದಲು ಅವರನ್ನು ಪೂಜಿಸಿದ್ದು, ಆ ಮೇಲೆ ಅಟ್ಟಿಬಿಟ್ಟದ್ದು.

**14** ಇಕೋನ್ಯದಲ್ಲಿ ಪೌಲ ಬಾರ್ನಬರು ಅದೇ ಪ್ರಕಾರವಾಗಿ ಯೆಹೂದ್ಯರ ಸಭಾಮಂದಿರದೊಳಗೆ ಹೋಗಿ ಬಲವಾಗಿ ಮಾತಾಡಿದ್ದರಿಂದ ಯೆಹೂದ್ಯರಲ್ಲಿಯೂ ಗ್ರೀಕರಲ್ಲಿಯೂ

[1] ಹಬಕೂಕ ೧, ೫. [2] ಯೆಶಾಯ ೪೯, ೬.

ಬಹುಮಂದಿ ನಂಬುವವರಾದರು. ಆದರೆ ನಂಬದೆ ಹೋದ ಯೆಹೂದ್ಯರು ಅನ್ಯಜನರ 2
ಮನಸ್ಸನ್ನು ಸಹೋದರರಿಗೆ ವಿರುದ್ಧವಾಗಿ ರೇಗಿಸಿ ಕೆಡಿಸಿದರು. ಹೀಗಿರಲಾಗಿ ಪೌಲ ಬಾರ್ನ 3
ಬರು ಬಹುಕಾಲ ಅಲ್ಲಿದ್ದು ಕರ್ತನು ಅವರ ಕೈಯಿಂದ ಸೂಚಕಕಾರ್ಯಗಳೂ ಅದ್ಭುತ
ಕಾರ್ಯಗಳೂ ಆಗುವಂತೆ ದಯಪಾಲಿಸಿ ತನ್ನ ಕೃಪಾವಾಕ್ಯಕ್ಕೆ ಸಾಕ್ಷಿಕೊಟ್ಟದ್ದರಿಂದ,
ಆತನ ಮೇಲೆ ಭರವಸವಿಟ್ಟು ಧೈರ್ಯದಿಂದ ಮಾತಾಡುತ್ತಿದ್ದರು. ಆಗ ಆ ಊರಿನ 4
ಜನರಲ್ಲಿ ಭೇದವುಂಟಾಯಿತು; ಕೆಲವರು ಯೆಹೂದ್ಯರ ಪಕ್ಷದವರಾದರು, ಕೆಲವರು
ಅಪೊಸ್ತಲರ ಪಕ್ಷದವರಾದರು. ಅನ್ಯಜನರೂ ಯೆಹೂದ್ಯರೂ ಕೂಡಿ ತಮ್ಮ ಅಧಿಪತಿ 5
ಗಳ ಸಮ್ಮತಿಯಿಂದ ಅಪೊಸ್ತಲರನ್ನು ಅವಮಾನಪಡಿಸುವದಕ್ಕೂ ಕಲ್ಲೆಸೆದು ಕೊಲ್ಲು
ವದಕ್ಕೂ ಪ್ರವರ್ತಿಸಿದಾಗ, ಅಪೊಸ್ತಲರು ಅದನ್ನು ತಿಳಿದು ಓಡಿಹೋಗಿ ಲುಕವೋನ್ಯ 6
ದಲ್ಲಿದ್ದ ಲುಸ್ತ್ರ ದೆರ್ಬೆ ಎಂಬ ಊರುಗಳಿಗೂ ಅವುಗಳಿಗೆ ಸೇರಿರುವ ಸೀಮೆಗೂ ಹೋಗಿ,
ಅಲ್ಲಿ ಸುವಾರ್ತೆಯನ್ನು ಸಾರಿದರು. 7

ಲುಸ್ತ್ರದೊಳಗೆ ಕಾಲುಗಳಲ್ಲಿ ಬಲವಿಲ್ಲದ ಒಬ್ಬ ಮನುಷ್ಯನು ಕೂತಿದ್ದನು. ಅವನು 8
ಹುಟ್ಟುಕುಂಟನಾಗಿದ್ದು ಎಂದಿಗೂ ನಡೆಯದೆ ಇದ್ದವನು. ಪೌಲನು ಆಡುವ ಮಾತು 9
ಗಳನ್ನು ಅವನು ಕಿವಿಗೊಟ್ಟು ಕೇಳುತ್ತಿದ್ದನು. ಪೌಲನು ಅವನನ್ನು ಸ್ಥಿರವಾಗಿ ನೋಡಿ,
ವಾಸಿಯಾಗುವದಕ್ಕೆ ಬೇಕಾದ ನಂಬಿಕೆಯು ಅವನಲ್ಲಿ ಉಂಟೆಂದು ತಿಳಿದು—ನಿನ್ನ 10
ಕಾಲೂರಿ ನೆಟ್ಟಗೆ ನಿಂತುಕೋ ಎಂದು ಮಹಾಧ್ವನಿಯಿಂದ ಹೇಳಿದನು. ಕೂಡಲೆ
ಆ ಮನುಷ್ಯನು ಹಾರಿ ನಡೆದಾಡಿದನು. ಪೌಲನು ಮಾಡಿದ್ದನ್ನು ಗುಂಪು ಕೂಡಿದ್ದ 11
ಜನರು ನೋಡಿ—ದೇವತೆಗಳು ಮನುಷ್ಯರ ರೂಪದಿಂದ ನಮ್ಮ ಬಳಿಗೆ ಇಳಿದುಬಂದರು
ಎಂದು ಲುಕವೋನ್ಯಭಾಷೆಯಲ್ಲಿ ಕೂಗಾಡಿದರು. ಬಾರ್ನಬನನ್ನು ದ್ಯೌಸ್‌ದೇವರೆಂತಲೂ[1] 12
ಪೌಲನು ಮಾತಾಡುವದರಲ್ಲಿ ಮುಖ್ಯನಾದ್ದರಿಂದ ಅವನನ್ನು ಹೆರ್ಮೆದೇವರೆಂತಲೂ[2]
ಅಂದುಕೊಂಡರು. ಊರ ಮುಂದಿದ್ದ ದ್ಯೌಸ್‌ದೇವರ ದೇವಸ್ಥಾನದ ಪೂಜಾರಿಯು 13
ಎತ್ತುಗಳನ್ನೂ ಹೂವಿನ ಹಾರಗಳನ್ನೂ ಊರಬಾಗಿಲಿನ ಹತ್ತಿರಕ್ಕೆ ತಂದು ಜನರೊಂದಿಗೆ
ಅವರಿಗೆ ಬಲಿಕೊಡಬೇಕೆಂದಿದ್ದನು. ಇದನ್ನು ಕೇಳಿ ಅಪೊಸ್ತಲರಾದ ಬಾರ್ನಬ ಪೌಲರು 14
ತಮ್ಮ ವಸ್ತ್ರಗಳನ್ನು ಹರಕೊಂಡು, ಜನರ ಗುಂಪಿನೊಳಗೆ ಕೂಗುತ್ತಾ ನುಗ್ಗಿ—ಜನರೇ, 15
ನೀವು ಮಾಡುವದು ಇದೇನು? ನಾವೂ ಮನುಷ್ಯರು, ನಿಮ್ಮಂಥ ಸ್ವಭಾವವುಳ್ಳವರು.
ನೀವು ಈ ವ್ಯರ್ಥವಾದ ಕೆಲಸಗಳನ್ನು ಬಿಟ್ಟುಬಿಟ್ಟು ಭೂಮ್ಯಾಕಾಶಸಮುದ್ರಗಳನ್ನೂ
ಅವುಗಳಲ್ಲಿರುವ ಎಲ್ಲಾ ವಸ್ತುಗಳನ್ನೂ ಉಂಟುಮಾಡಿದ ಜೀವಸ್ವರೂಪನಾದ ದೇವರ
ಕಡೆಗೆ ತಿರುಗಿಕೊಳ್ಳಬೇಕೆಂದು ಸುವಾರ್ತೆಯನ್ನು ನಿಮಗೆ ಸಾರಿಹೇಳುವವರಾಗಿದ್ದೇವೆ.
ಗತಿಸಿಹೋದ ಕಾಲದಲ್ಲಿ ಆತನು ಎಲ್ಲಾ ಜನಾಂಗಗಳನ್ನು ತಮ್ಮತಮ್ಮ ಮನಸ್ಸಿಗೆ ತೋಚಿದ 16
ಮಾರ್ಗಗಳಲ್ಲಿ ನಡೆಯುವದಕ್ಕೆ ಬಿಟ್ಟನು. ಆದಾಗ್ಯೂ ಆತನು ತನ್ನ ವಿಷಯದಲ್ಲಿ ಸಾಕ್ಷಿ 17
ಕೊಡದೆ ಇರಲಿಲ್ಲ; ನಿಮಗೆ ಆಕಾಶದಿಂದ ಮಳೆಯನ್ನೂ ಸುಗ್ಗೀಕಾಲಗಳನ್ನೂ ದಯ
ಪಾಲಿಸಿ ಆಹಾರಕೊಟ್ಟು ನಿಮ್ಮ ಮನಸ್ಸುಗಳನ್ನು ಆನಂದದಿಂದ ತುಂಬಿಸಿ ಉಪಕಾರ

---

[1] ದ್ಯೌಸ್‌ದೇವರು ಅಂದರೆ ಸ್ವರ್ಗಾಧಿಪತಿಯಾದ ಇಂದ್ರನು.

[2] ಹೆರ್ಮೆದೇವರು ಅಂದರೆ ದೇವತೆಗಳ ಆಚಾರ್ಯನಾದ ಬೃಹಸ್ಪತಿ.

18 ಮಾಡುತ್ತಾ ಬಂದವನು ಆತನೇ ಎಂದು ಹೇಳಿದರು. ಅವರು ಈ ಮಾತುಗಳನ್ನು ಹೇಳಿದಾಗ್ಯೂ ಜನರನ್ನು ತಮಗೆ ಬಲಿಕೊಡದಂತೆ ತಡೆಯುವದು ಕಷ್ಟವಾಗಿತ್ತು.
19 ತರುವಾಯ ಅಂತಿಯೋಕ್ಯದಿಂದಲೂ ಇಕೋನ್ಯದಿಂದಲೂ ಯೆಹೂದ್ಯರು ಬಂದು ಜನರನ್ನು ಪ್ರೇರೇಪಿಸಿ, ಪೌಲನನ್ನು ಕೊಲ್ಲುವದಕ್ಕೆ ಕಲ್ಲೆಸೆದು, ಅವನು ಸತ್ತನೆಂದು
20 ಭಾವಿಸಿ ಊರಹೊರಕ್ಕೆ ಎಳೆದುಬಿಟ್ಟರು. ಆದರೆ ಶಿಷ್ಯರು ಅವನ ಸುತ್ತಲು ನಿಂತು ಕೊಂಡಿರುವಾಗ ಅವನು ಎದ್ದು ಊರೊಳಕ್ಕೆ ಹೋದನು. ಮರುದಿನ ಬಾರ್ನಬನ
21 ಜೊತೆಯಲ್ಲಿ ದೆರ್ಬೆಗೆ ಹೊರಟನು. ಆ ಊರಿನಲ್ಲಿ ಅವರು ಸುವಾರ್ತೆಯನ್ನು ಸಾರಿ, ಅನೇಕರನ್ನು ಶಿಷ್ಯರಾಗ ಮಾಡಿದ ಮೇಲೆ ಹಿಂತಿರುಗಿ ಲುಸ್ತ್ರಕ್ಕೂ ಇಕೋನ್ಯಕ್ಕೂ
22 ಅಂತಿಯೋಕ್ಯಕ್ಕೂ ಬಂದು ಶಿಷ್ಯರ ಮನಸ್ಸುಗಳನ್ನು ದೃಢಪಡಿಸಿದರು. ನಾವು ಬಹು ಸಂಕಟಗಳನ್ನು ತಾಳಿ ದೇವರ ರಾಜ್ಯದೊಳಗೆ ಸೇರಬೇಕೆಂಬದಾಗಿ ಎಚ್ಚರಿಕೆಯ ಮಾತನ್ನು ಹೇಳಿ ಕ್ರಿಸ್ತನಂಬಿಕೆಯಲ್ಲಿ ಸ್ಥಿರವಾಗಿರ್ರಿ ಎಂದು ಅವರನ್ನು ಧೈರ್ಯಗೊಳ್ಳಿಸಿದರು.
23 ಇದಲ್ಲದೆ ಪ್ರತಿಸಭೆಯಲ್ಲಿ ಸಭೆಯವರ ಸಮ್ಮತಿಯಿಂದ ಹಿರಿಯರನ್ನು ಗೊತ್ತುಮಾಡಿ ನೇಮಿಸಿ, ಉಪವಾಸವಿದ್ದು ಪ್ರಾರ್ಥನೆಮಾಡಿ, ಅವರು ನಂಬಿದ್ದ ಕರ್ತನ ಕೈಗೆ ಅವರನ್ನು
24 ಒಪ್ಪಿಸಿದರು. ತರುವಾಯ ಪಿಸಿದ್ಯ ಸೀಮೆಯನ್ನು ಹಾದು ಪಂಫುಲ್ಯಸೀಮೆಗೆ ಬಂದು,
25 ಅದಕ್ಕೆ ಸೇರಿರುವ ಪೆರ್ಗೆಯಲ್ಲಿ ಕರ್ತನ ವಾಕ್ಯವನ್ನು ಹೇಳಿದ ಮೇಲೆ ಅತಾಲ್ಯಕ್ಕೆ ಇಳಿದು
26 ಅಲ್ಲಿಂದ ಸಮುದ್ರಪ್ರಯಾಣವಾಗಿ ಅಂತಿಯೋಕ್ಯಕ್ಕೆ ಮುಟ್ಟಿದರು. ಅವರು ನೆರವೇರಿಸಿ ಬಂದ ಕೆಲಸಕ್ಕೋಸ್ಕರ ದೇವರ ಕೃಪಾಶಯಕ್ಕೆ ಒಪ್ಪಿಸಲ್ಪಟ್ಟವರಾಗಿ ಆ ಊರಿಂದಲೇ
27 ಹೊರಟಿದ್ದರು. ಅಲ್ಲಿ ಸಭೆಯನ್ನು ಕೂಡಿಸಿ, ದೇವರು ತಮ್ಮೊಂದಿಗಿದ್ದು ಮಾಡಿದ್ದೆಲ್ಲವನ್ನೂ ಆತನು ಅನ್ಯಜನರಿಗೆ ನಂಬಿಕೆಯ ಬಾಗಿಲನ್ನು ತೆರೆದದ್ದನ್ನೂ ವಿವರವಾಗಿ ಹೇಳಿದರು.
28 ತರುವಾಯ ಅವರು ಅಲ್ಲಿ ಶಿಷ್ಯರ ಸಂಗಡ ಬಹುಕಾಲ ಇದ್ದರು.

ಯೆಹೂದ್ಯರಲ್ಲದ ಕ್ರೈಸ್ತರಿಗೆ ಸುನ್ನತಿ ಮೊದಲಾದ ಯೆಹೂದ್ಯ ಆಚಾರಗಳು ಅವಶ್ಯವಲ್ಲವೆಂದು ತೀರ್ಮಾನವಾದದ್ದು.

**15** ಬಳಿಕ ಕೆಲವರು ಯೂದಾಯದಿಂದ ಅಂತಿಯೋಕ್ಯಕ್ಕೆ ಬಂದು—ನೀವು ಮೋಶೆಯ ಗ್ರಂಥದಲ್ಲಿ ಹೇಳಿರುವ ನೇಮದ ಪ್ರಕಾರ ಸುನ್ನತಿಮಾಡಿಸಿಕೊಳ್ಳದಿದ್ದರೆ ನಿಮಗೆ ರಕ್ಷಣೆ
2 ಯಾಗಲಾರದು ಎಂಬದಾಗಿ ಸಹೋದರರಿಗೆ ಉಪದೇಶಮಾಡುತ್ತಿದ್ದರು. ಅವರಿಗೂ ಪೌಲ ಬಾರ್ನಬರಿಗೂ ಭೇದವೂ ಮಹಾ ವಿವಾದವೂ ಉಂಟಾದಾಗ ಇದರ ವಿಷಯದಲ್ಲಿ ತಿಳುಕೊಳ್ಳುವದಕ್ಕೆ ಸಹೋದರರು ಪೌಲ ಬಾರ್ನಬರನ್ನೂ ತಮ್ಮಲ್ಲಿ ಬೇರೆ ಕೆಲವರನ್ನೂ ಯೆರೂಸಲೇಮಿನಲ್ಲಿದ್ದ ಅಪೊಸ್ತಲರ ಮತ್ತು ಸಭೆಯ ಹಿರಿಯರ ಬಳಿಗೆ ಹೋಗಬೇಕೆಂದು
3 ನಿಶ್ಚಯಿಸಿದರು. ಸಭೆಯವರು ಅವರನ್ನು ಸಾಗಕಳುಹಿಸಿದ ಮೇಲೆ, ಅವರು ಫೊಯಿನಿಕೆ ಸಮಾರ್ಯ ಸೀಮೆಗಳನ್ನು ಹಾದುಹೋಗುತ್ತಿರುವಾಗ ಅನ್ಯಜನರು ಕರ್ತನ ಕಡೆಗೆ ತಿರುಗಿಕೊಂಡ ಸಂಗತಿಯನ್ನು ಅಲ್ಲಿದ್ದ ಸಹೋದರರಿಗೆ ವಿವರವಾಗಿ ಹೇಳಿ ಅವರೆಲ್ಲರನ್ನು
4 ಬಹಳವಾಗಿ ಸಂತೋಷಪಡಿಸಿದರು. ಅವರು ಯೆರೂಸಲೇಮಿಗೆ ಬಂದ ಮೇಲೆ ಸಭೆಯ ವರೂ ಅಪೊಸ್ತಲರೂ ಸಭೆಯ ಹಿರಿಯರೂ ಅವರನ್ನು ಸೇರಿಸಿಕೊಂಡಾಗ, ದೇವರು

[1] ಮತ್ತಾಯ ೨೮, ೧೯.

ತಮ್ಮೊಂದಿಗಿದ್ದು ಮಾಡಿದ ಕಾರ್ಯಗಳನ್ನೆಲ್ಲಾ ಅವರಿಗೆ ತಿಳಿಸಿದರು. ಆದರೆ ಫರಿಸಾಯ 5
ಮತದವರಲ್ಲಿ ಯೇಸುವನ್ನು ನಂಬಿದ್ದ ಕೆಲವರು ಎದ್ದು—ದೇವರ ಕಡೆಗೆ ತಿರುಗಿಕೊಂಡಿ
ರುವ ಅನ್ಯಜನರಿಗೆ ಸುನ್ನತಿಮಾಡಿಸಬೇಕು, ಮತ್ತು ಮೋಶೆಯ ಧರ್ಮಶಾಸ್ತ್ರವನ್ನು
ಕೈಕೊಂಡು ನಡೆಯುವದಕ್ಕೆ ಅವರಿಗೆ ಅಪ್ಪಣೆಕೊಡಬೇಕು ಎಂದು ಹೇಳಿದರು. ಅಪೊಸ್ತ 6
ಲರೂ ಸಭೆಯ ಹಿರಿಯರೂ ಈ ವಿಷಯವನ್ನು ಕುರಿತು ಆಲೋಚಿಸುವದಕ್ಕೆ ಕೂಡಿ
ಬಂದಿರುವಾಗ ಬಹು ವಿವಾದವು ನಡೆದ ಮೇಲೆ, ಪೇತ್ರನು ಎದ್ದು ಅವರಿಗೆ— 7

ಸಹೋದರರೇ, ಅನ್ಯಜನರು ನನ್ನ ಬಾಯಿಂದ ಸುವಾರ್ತೆಯ ವಾಕ್ಯವನ್ನು ಕೇಳಿ
ನಂಬಬೇಕೆಂದು ದೇವರು ಬಹಳ ದಿವಸಗಳ ಕೆಳಗೆ ನಿಮ್ಮೊಳಗಿಂದ ನನ್ನನ್ನು ಆರಿಸಿ
ಕೊಂಡದ್ದು ನಿಮಗೇ ತಿಳಿದದೆ. ಮತ್ತು ಹೃದಯವನ್ನು ಬಲ್ಲವನಾಗಿರುವ ದೇವರು 8
ಹ್ಯಾಗೆ ಪವಿತ್ರಾತ್ಮವರವನ್ನು ನಮಗೆ ದಯಪಾಲಿಸಿದನೋ ಹಾಗೆಯೇ ಅವರಿಗೂ ದಯ
ಪಾಲಿಸಿ ಅವರನ್ನು ತನ್ನ ಜನರೆಂದು ಸಾಕ್ಷಿಕೊಟ್ಟನು. ಇದಲ್ಲದೆ ಆತನು ನಮಗೂ 9
ಅವರಿಗೂ ಏನೂ ಭೇದಮಾಡದೆ ಅವರ ಹೃದಯಗಳನ್ನೂ ನಂಬಿಕೆಯ ಮೂಲಕವಾಗಿ
ಶುದ್ಧೀಕರಿಸಿದನು. ಹೀಗಿರುವದರಿಂದ, ನಮ್ಮ ಪಿತೃಗಳಾಗಲಿ ನಾವಾಗಲಿ ಹೊರಲಾರದ 10
ನೊಗವನ್ನು ನೀವು ಶಿಷ್ಯರ ಹೆಗಲಿನ ಮೇಲೆ ಹಾಕಿ ದೇವರನ್ನು ಪರೀಕ್ಷಿಸುವದು ಯಾಕೆ?
ಕರ್ತನಾದ ಯೇಸುವಿನ ಕೃಪೆಯಿಂದಲೇ ನಾವು ರಕ್ಷಣೆ ಹೊಂದುವೆವೆಂಬದಾಗಿ ನಂಬು 11
ತ್ತೇವಲ್ಲಾ; ಹಾಗೆಯೇ ಅವರೂ ಹೊಂದುವರು ಎಂದು ಹೇಳಿದನು.

ಗುಂಪುಕೂಡಿದ್ದವರೆಲ್ಲರು ಈ ಮಾತುಗಳನ್ನು ಕೇಳಿ ಮೌನವಾಗಿದ್ದು ಬಾರ್ನಬನೂ 12
ಪೌಲನೂ ತಮ್ಮ ಮೂಲಕವಾಗಿ ದೇವರು ಅನ್ಯಜನರಲ್ಲಿ ಮಾಡಿದ್ದ ಎಲ್ಲಾ ಸೂಚಕ
ಕಾರ್ಯಗಳನ್ನೂ ಅದ್ಭುತಕಾರ್ಯಗಳನ್ನೂ ವಿವರಿಸುವದನ್ನು ಕಿವಿಗೊಟ್ಟು ಕೇಳಿದರು.
ಅವರು ಮಾತಾಡುವದನ್ನು ಮುಗಿಸಿದ ಮೇಲೆ, ಯಾಕೋಬನು ಆ ಪ್ರಸ್ತಾಪವನ್ನು 13
ಹಿಡಿದು ಹೇಳಿದ್ದೇನಂದರೆ—

ಸಹೋದರರೇ, ನಾನು ಹೇಳುವದನ್ನು ಕೇಳಿರಿ—ದೇವರು ಮೊದಲಲ್ಲಿ ಅನ್ಯಜನರನ್ನು 14
ಕಟಾಕ್ಷಿಸಿನೋಡಿ ತನ್ನ ಹೆಸರಿಗಾಗಿ ಅವರೊಳಗಿಂದ ಒಂದು ಪ್ರಜೆಯನ್ನು ಆರಿಸಿಕೊಂಡ
ವಿಧವನ್ನು ಸಿಮೆಯೋನನು ವಿವರಿಸಿದನಷ್ಟೆ. ಇದಕ್ಕೆ ಪ್ರವಾದಿಗಳ ಮಾತುಗಳೂ 15
ಒಪ್ಪುತ್ತವೆ. ಹ್ಯಾಗಂದರೆ—

ಇದಾದ ಮೇಲೆ ನಾನು ಹಿಂತಿರುಗಿ ಬಂದು, 16
ದಾವೀದನ ಬಿದ್ದುಹೋಗಿರುವ ಗುಡಾರವನ್ನು ತಿರಿಗಿ ಕಟ್ಟಿಸುವೆನು.
ಅದರಲ್ಲಿ ಹಾಳಾದದ್ದನ್ನು ನಾನು ಸರಿಮಾಡಿಸಿ
ಅದನ್ನು ನೆಟ್ಟಗೆ ನಿಲ್ಲಿಸುವೆನು.
ಮನುಷ್ಯಜಾತಿಯ ಉಳಿದ ಜನಗಳೂ 17
ಅಂದರೆ ದೇವಜನರೆನ್ನಿಸಿಕೊಳ್ಳುವ ಅನ್ಯಜನರೆಲ್ಲರೂ
ಕರ್ತನನ್ನು ಹುಡುಕುವವರಾಗಿರಬೇಕೆಂದು
ಮೊದಲಿನಿಂದ ಈ ಕಾರ್ಯಗಳನ್ನು ತಿಳಿಯಪಡಿಸುವ ಕರ್ತನೇ ಹೇಳುತ್ತಾನೆ[1] 18

[1] ಆಮೋಸ ೯, ೧೧. ೧೨.

19 ಎಂದು ಬರೆದದೆ. ಹೀಗಿರಲಾಗಿ ನನ್ನ ಅಭಿಪ್ರಾಯ ಏನಂದರೆ—ಅನ್ಯಜನರಲ್ಲಿ ದೇವರ
20 ಕಡೆಗೆ ತಿರುಗಿಕೊಳ್ಳುವವರನ್ನು ತೊಂದರೆಪಡಿಸಬಾರದು. ಆದರೆ ವಿಗ್ರಹಕ್ಕೆ ನೈವೇದ್ಯ
ಮಾಡಿದ್ದನ್ನೂ ಹಾದರವನ್ನೂ ಕುತ್ತಿಗೆಹಿಸುಕಿ ಕೊಂದದ್ದನ್ನೂ ರಕ್ತವನ್ನೂ ವಿಸರ್ಜಿಸ
21 ಬೇಕೆಂದು ನಾವು ಅವರಿಗೆ ಕಾಗದವನ್ನು ಬರೆದು ಅಪ್ಪಣೆಕೊಡೋಣ. ಯಾಕಂದರೆ
ಪುರಾತನಕಾಲದಿಂದ ಎಲ್ಲಾ ಪಟ್ಟಣಗಳಲ್ಲಿ ಮೋಶೆಯ ಗ್ರಂಥವನ್ನು ಬೋಧಿಸುವವರು
ಇದ್ದಾರೆ; ಅದು ಪ್ರತಿ ಸಬ್ಬತ್‌ದಿನವೂ ಸಭಾಮಂದಿರಗಳಲ್ಲಿ ಪಾರಾಯಣವಾಗುತ್ತ
ದಲ್ಲಾ ಎಂದು ಹೇಳಿದನು.

22 ಆಗ ಅಪೊಸ್ತಲರೂ ಸಭೆಯ ಹಿರಿಯರೂ ಸರ್ವಸಭೆಯ ಸಮ್ಮತಿಯಿಂದ ತಮ್ಮಲ್ಲಿ ಕೆಲವ
ರನ್ನು ಆರಿಸಿಕೊಂಡು ಪೌಲ ಬಾರ್ನಬರ ಜೊತೆಯಲ್ಲಿ ಅಂತಿಯೋಕ್ಯಕ್ಕೆ ಕಳುಹಿಸುವದು
ಯುಕ್ತವೆಂದು ತೀರ್ಮಾನಿಸಿದರು. ಆದಕಾರಣ ಸಹೋದರರಲ್ಲಿ ಮುಖ್ಯರಾಗಿದ್ದ
23 ಬಾರ್ಸಬ್ಬನೆನ್ನಿಸಿಕೊಳ್ಳುವ ಯೂದನನ್ನೂ ಸೀಲನನ್ನೂ ಆರಿಸಿಕೊಂಡು, ಅವರ ಕೈಯಲ್ಲಿ
ಬರದು ಕೊಟ್ಟದ್ದೇನಂದರೆ—ಸಹೋದರರಾಗಿರುವ ಅಪೊಸ್ತಲರೂ ಹಿರಿಯರೂ ಅಂತಿ
ಯೋಕ್ಯ ಸಿರಿಯ ಕಿಲಿಕ್ಯ ಸೀಮೆಗಳಲ್ಲಿ ವಾಸಿಸುವ ಅನ್ಯಜನರೊಳಗಿಂದ ಸಹೋದರ
24 ರಾದವರಿಗೆ ಮಾಡುವ ಆಶೀರ್ವಾದ; ಅದಾಗಿ, ನಮ್ಮೊಳಗಿಂದ ಹೋದ ಕೆಲವರು
ನಮ್ಮಿಂದ ಏನೂ ಅಪ್ಪಣೆ ಹೊಂದದೆ ತಮ್ಮ ಮಾತುಗಳಿಂದ ನಿಮ್ಮಲ್ಲಿ ಅಸಮಾಧಾನವನ್ನು
ಹುಟ್ಟಿಸಿ, ನಿಮ್ಮ ಮನಸ್ಸುಗಳನ್ನು ಕಳವಳಗೊಳ್ಳಿಸಿದ್ದಾರೆಂಬುವದನ್ನು ಕೇಳಿದ್ದರಿಂದ,
25-26 ನಾವು ಕೆಲವರನ್ನು ಆರಿಸಿಕೊಂಡು, ನಮ್ಮ ಕರ್ತನಾದ ಯೇಸು ಕ್ರಿಸ್ತನ ಹೆಸರಿನ ನಿಮಿತ್ತ
ಜೀವದ ಹಂಗನ್ನು ತೊರೆದವರಾದ ನಮ್ಮ ಪ್ರಿಯ ಬಾರ್ನಬ ಪೌಲರ ಜೊತೆಯಲ್ಲಿ ನಿಮ್ಮ
ಬಳಿಗೆ ಕಳುಹಿಸಿಕೊಡುವದು ಯುಕ್ತವೆಂದು ನಾವೆಲ್ಲರೂ ಏಕಮನಸ್ಸಾಗಿ ತೀರ್ಮಾನಿಸಿ
27 ದೆವು. ಆದದರಿಂದ ಯೂದನನ್ನೂ ಸೀಲನನ್ನೂ ಕಳುಹಿಸಿದ್ದೇವೆ. ಅವರು ಈ ಸಂಗತಿ
28-29 ಗಳನ್ನು ಬಾಯಿಮಾತಿನಿಂದಲೂ ನಿಮಗೆ ತಿಳಿಸುವರು. ವಿಗ್ರಹಕ್ಕೆ ನೈವೇದ್ಯಮಾಡಿ
ದ್ದನ್ನೂ ರಕ್ತವನ್ನೂ ಕುತ್ತಿಗೆಹಿಸುಕಿ ಕೊಂದದ್ದನ್ನೂ ಹಾದರವನ್ನೂ ವಿಸರ್ಜಿಸುವದು
ಅವಶ್ಯವಾಗಿದೆ. ಇದಕ್ಕೆ ಹೆಚ್ಚಿನ ಭಾರವನ್ನು ನಿಮ್ಮ ಮೇಲೆ ಹಾಕಬಾರದೆಂದು ಪವಿ
ತ್ರಾತ್ಮನಿಗೂ ನಮಗೂ ವಿಹಿತವಾಗಿ ತೋರಿತು. ನೀವು ಎಚ್ಚರವಾಗಿದ್ದು ಇವುಗಳ
ಗೊಡವೆಗೆ ಹೋಗದಿದ್ದರೆ, ನಿಮಗೆ ಒಳ್ಳೇದಾಗುವದು. ಶುಭವಾಗಲಿ.

30 ಅವರು ಅಪ್ಪಣೆ ತೆಗೆದುಕೊಂಡು ಅಂತಿಯೋಕ್ಯಕ್ಕೆ ಬಂದು ಮಂಡಲಿಯನ್ನು ಕೂಡಿಸಿ
31 ಆ ಕಾಗದವನ್ನು ಅವರಿಗೆ ಒಪ್ಪಿಸಿದರು. ಅವರು ಓದಿ ಅದರಿಂದ ಧೈರ್ಯ ತಂದು
32 ಕೊಂಡು ಸಂತೋಷಪಟ್ಟರು. ಯೂದನೂ ಸೀಲನೂ ತಾವೇ ಪ್ರವಾದಿಗಳಾಗಿದ್ದದರಿಂದ
33 ಸಹೋದರರನ್ನು ಅನೇಕ ಮಾತುಗಳಿಂದ ಪ್ರಬೋಧಿಸಿ ದೃಢಪಡಿಸಿದರು. ಅಲ್ಲಿ ಕೆಲವು
ಕಾಲ ಕಳೆದನಂತರ ತಮ್ಮನ್ನು ಕಳುಹಿಸಿದ್ದವರ ಬಳಿಗೆ ತಿರಿಗಿ ಹೋಗುವದಕ್ಕೆ ಸಹೋದರ
35 ರಿಂದ ಅಪ್ಪಣೆ ತೆಗೆದುಕೊಂಡರು[1]. ಆದರೆ ಪೌಲನೂ ಬಾರ್ನಬನೂ ಅಂತಿಯೋಕ್ಯ

[1] ಕೆಲವು ಪ್ರತಿಗಳಲ್ಲಿ ೩೪ನೇ ವಚನ ಉಂಟು; ಅದೇನಂದರೆ—ಆದರೆ ಅಲ್ಲೇ ಇರುವದು ಸೀಲನಿಗೆ ಒಳ್ಳೇದಾಗಿ ತೋಚಿತು ಎಂಬುವದು.

ದಲ್ಲಿಯೇ ನಿಂತು ಬೇರೆ ಅನೇಕರೊಂದಿಗೆ ಉಪದೇಶಮಾಡುತ್ತಾ ಕರ್ತನ ವಾಕ್ಯವೆಂಬ ಸುವಾರ್ತೆಯನ್ನು ಸಾರುತ್ತಾ ಇದ್ದರು.

**ಸುವಾರ್ತೆಯನ್ನು ಸಾರುವದಕ್ಕೆ ಪೌಲನು ಮಾಡಿದ ಎರಡನೇ ಪ್ರಯಾಣವನ್ನು ಕುರಿತದ್ದು (15, 36—18, 22).**

**ಬಾರ್ನಬ ಮಾರ್ಕರು ಕುಪ್ರದ್ವೀಪಕ್ಕೆ ಬೇರೆ ಹೋದದ್ದು.**

ಕೆಲವು ದಿವಸಗಳಾದ ಮೇಲೆ, ಪೌಲನು ಬಾರ್ನಬನಿಗೆ—ನಾವು ಕರ್ತನ ವಾಕ್ಯವನ್ನು 36 ಸಾರಿದ ಎಲ್ಲಾ ಊರುಗಳಿಗೆ ತಿರಿಗಿ ಹೋಗಿ, ಅಲ್ಲಿರುವ ಸಹೋದರರು ಹ್ಯಾಗಿದ್ದಾರೆಂದು ನೋಡೋಣ ಬಾ ಎಂದು ಹೇಳಿದನು. ಬಾರ್ನಬನು ಮಾರ್ಕನೆನ್ನಿಸಿಕೊಳ್ಳುವ 37 ಯೋಹಾನನನ್ನು ತಮ್ಮ ಸಂಗಡ ಕರೆದುಕೊಂಡು ಹೋಗಬೇಕೆಂದಿದ್ದಾಗ, ಪೌಲನು— 38 ನಮ್ಮೊಂದಿಗೆ ಕೆಲಸಕ್ಕೆ ಬಾರದೆ ಪಂಫುಲ್ಯದಲ್ಲಿ ನಮ್ಮನ್ನು ಬಿಟ್ಟವನನ್ನು ಕರೆದುಕೊಂಡು ಹೋಗುವದು ತಕ್ಕದ್ದಲ್ಲವೆಂದು ನೆನಸಿದನು. ಈ ವಿಷಯದಲ್ಲಿ ತೀಕ್ಷ್ಣ ವಾಗ್ವಾದ 39 ವುಂಟಾಗಿ, ಅವರು ಒಬ್ಬರನ್ನೊಬ್ಬರು ಅಗಲಿದರು. ಬಾರ್ನಬನು ಮಾರ್ಕನನ್ನು ಕರ ಕೊಂಡು ಸಮುದ್ರಮಾರ್ಗವಾಗಿ ಕುಪ್ರದ್ವೀಪಕ್ಕೆ ಹೋದನು. ಪೌಲನು ಸೀಲನನ್ನು 40 ಆರಿಸಿಕೊಂಡು, ಸಹೋದರರಿಂದ ಕರ್ತನ ಕೃಪಾಶ್ರಯಕ್ಕೆ ಒಪ್ಪಿಸಲ್ಪಟ್ಟವನಾಗಿ ಹೊರಟು ಸಿರಿಯ ಕಿಲಿಕ್ಯ ಸೀಮೆಗಳಲ್ಲಿ ಸಂಚರಿಸುತ್ತಾ ಸಭೆಗಳನ್ನು ದೃಢಪಡಿಸಿದನು. 41

**ಪೌಲನು ತಿಮೊಥೆಯನನ್ನು ಕೂಡಿಸಿಕೊಂಡದ್ದು; ಕನಸಿನ ದೆಸೆಯಿಂದ ಮಕೆದೋನ್ಯಕ್ಕೆ ಹೋದದ್ದು.**

ಆ ಮೇಲೆ ಅವನು ದೆರ್ಬೆಗೂ ಲುಸ್ತ್ರಕ್ಕೂ ಬಂದನು. ಲುಸ್ತ್ರದಲ್ಲಿ ತಿಮೊಥೆಯನೆಂಬ **16** ಒಬ್ಬ ಶಿಷ್ಯನಿದ್ದನು. ಅವನು ಕ್ರಿಸ್ತನನ್ನು ನಂಬಿದ್ದ ಒಬ್ಬ ಯೆಹೂದ್ಯ ಸ್ತ್ರೀಯ ಮಗನು. ಅವನ ತಂದೆ ಗ್ರೀಕನು. ಅವನ ವಿಷಯವಾಗಿ ಲುಸ್ತ್ರದಲ್ಲಿಯೂ ಇಕೋನ್ಯದಲ್ಲಿಯೂ 2 ಇದ್ದ ಸಹೋದರರು ಒಳ್ಳೇ ಸಾಕ್ಷಿಹೇಳುತ್ತಿದ್ದರು. ಅವನು ತನ್ನ ಸಂಗಡ ಬರಬೇಕೆಂದು 3 ಪೌಲನು ಅಪೇಕ್ಷಿಸಿ, ಆಯಾ ಸ್ಥಳಗಳಲ್ಲಿದ್ದ ಯೆಹೂದ್ಯರ ನಿಮಿತ್ತವಾಗಿ ಅವನಿಗೆ ಸುನ್ನತಿ ಮಾಡಿಸಿದನು. ಯಾಕಂದರೆ ಅವನ ತಂದೆ ಗ್ರೀಕನೆಂದು ಎಲ್ಲರಿಗೂ ಗೊತ್ತಿತ್ತು. ಬಳಿಕ ಅವರು ಊರೂರುಗಳಲ್ಲಿ ಸಂಚಾರಮಾಡುತ್ತಿರುವಾಗ, ಯೆರೂಸಲೇಮಿನಲ್ಲಿದ್ದ 4 ಅಪೊಸ್ತಲರೂ ಸಭೆಯ ಹಿರಿಯರೂ ನಿರ್ಣಯಿಸಿದ್ದ ವಿಧಿಗಳನ್ನು ಅವರಿಗೆ ಒಪ್ಪಿಸಿ, ಇವು ಗಳನ್ನು ನೀವು ಅನುಸರಿಸಿ ನಡೆಯಬೇಕೆಂದು ಬೋಧಿಸಿದರು. ಸಭೆಗಳು ಕ್ರಿಸ್ತನಂಬಿಕೆ 5 ಯಲ್ಲಿ ದೃಢವಾಗುತ್ತಾ ಸಂಖ್ಯೆಯಲ್ಲಿ ದಿನೇ ದಿನೇ ಹೆಚ್ಚುತ್ತಾ ಬಂದವು.

ಆಸ್ಯಸೀಮೆಯಲ್ಲಿ ವಾಕ್ಯವನ್ನು ಹೇಳಬಾರದೆಂದು ಪವಿತ್ರಾತ್ಮನು ತಡೆದದ್ದರಿಂದ, 6 ಅವರು ಫ್ರುಗ್ಯಗಲಾತ್ಯ ಸೀಮೆಯನ್ನು ಹಾದುಹೋಗಿ, ಮೂಸ್ಯಕ್ಕೆ ಎದುರಾಗಿ ಬಂದಾಗ 7 ಬಿಥೂನ್ಯಕ್ಕೆ ಹೋಗುವ ಪ್ರಯತ್ನಮಾಡಿದರು. ಅಲ್ಲಿಯೂ ಯೇಸುವಿನ ಆತ್ಮನು ಅವ ರನ್ನು ಹೋಗಗೊಡಿಸಲಿಲ್ಲ. ಆಗ ಅವರು ಮೂಸ್ಯವನ್ನು ಸುಮ್ಮನೆ ದಾಟಿ ತ್ರೋವಕ್ಕೆ 8 ಬಂದರು. ಅಲ್ಲಿ ರಾತ್ರಿಕಾಲದಲ್ಲಿ ಪೌಲನಿಗೆ ಒಂದು ದರ್ಶನವಾಯಿತು, ಏನಂದರೆ— 9 ಮಕೆದೋನ್ಯ ದೇಶದವನಾದ ಒಬ್ಬ ಮನುಷ್ಯನು ನಿಂತುಕೊಂಡು—ನೀನು ಸಮುದ್ರ

ವನ್ನು ದಾಟಿ ಮಕೆದೋನ್ಯಕ್ಕೆ ಬಂದು ನಮಗೆ ನೆರವಾಗಬೇಕೆಂದು ಅವನನ್ನು ಬೇಡಿ
10 ಕೊಳ್ಳುತ್ತಿದ್ದನು. ಅವನಿಗೆ ಆ ದರ್ಶನವಾದ ಮೇಲೆ, ಆ ಸೀಮೆಯವರಿಗೆ ಸುವಾರ್ತೆ
ಯನ್ನು ಸಾರುವದಕ್ಕೆ ದೇವರು ನಮ್ಮನ್ನು ಕರೆದಿದ್ದಾನೆಂದು ನಾವು ನಿಶ್ಚಯಿಸಿಕೊಂಡು
11 ಕೂಡಲೇ ಮಕೆದೋನ್ಯಕ್ಕೆ ಹೊರಟುಹೋಗುವ ಪ್ರಯತ್ನಮಾಡಿದೆವು. ನಾವು
ತ್ರೋವದಿಂದ ಸಮುದ್ರಪ್ರಯಾಣಮಾಡಿ ನೆಟ್ಟಗೆ ಸಮೊಥ್ರಾಕೆಗೆ ಬಂದು, ಮರುದಿನ
ನೆಯಾಪೊಲಿಗೆ ಸೇರಿ, ಅಲ್ಲಿಂದ ಫಿಲಿಪ್ಪಿಗೆ ಮುಟ್ಟಿದೆವು.

ಫಿಲಿಪ್ಪಿಪಟ್ಟಣದಲ್ಲಿ ಸಭೆಯನ್ನು ಸ್ಥಾಪಿಸಿದ್ದು; ಪೌಲ ಸೀಲರು ಸೆರೆಯಲ್ಲಿ ಬಿದ್ದದ್ದು; ಭೂಕಂಪ ಉಂಟಾಗಿ ಅವರು ಬಿಡಿಸಲ್ಪಟ್ಟದ್ದು.

12 ಫಿಲಿಪ್ಪಿ ಎಂಬುವದು ಮಕೆದೋನ್ಯದಲ್ಲಿ ಪ್ರಧಾನಪಟ್ಟಣವೂ ರೋಮಾಪುರದವರ
ಒಂದು ಪ್ರವಾಸಸ್ಥಾನವೂ ಆಗಿದೆ. ಈ ಪಟ್ಟಣದಲ್ಲಿ ನಾವು ಕೆಲವು ದಿವಸ ಇದ್ದೆವು.
13 ನದೀತೀರದಲ್ಲಿ ದೇವರ ಪ್ರಾರ್ಥನೆ ನಡೆಯುವ ಸ್ಥಳ ಇರುವದೆಂದು ನೆನಸಿ ಸಬ್ಬತ್‌ದಿನದಲ್ಲಿ
ಊರಬಾಗಿಲಿನ ಹೊರಗೆ ಹೋಗಿ ಅಲ್ಲಿ ಕೂಡಿಬಂದಿದ್ದ ಸ್ತ್ರೀಯರ ಸಂಗಡ ಕೂತುಕೊಂಡು
14 ಮಾತಾಡಿದೆವು. ನಮ್ಮ ಮಾತುಗಳನ್ನು ಕೇಳಿದವರಲ್ಲಿ ಲುದ್ಯಳೆಂಬ ಒಬ್ಬ ಸ್ತ್ರೀಯು
ಇದ್ದಳು. ಆಕೆ ಧೂಮ್ರವರ್ಣದ ವಸ್ತ್ರಗಳನ್ನು ಮಾರುವವಳೂ ಥುವತ್ತೈರ ಎಂಬ
ಊರಿನವಳೂ ದೇವಭಕ್ತಳೂ ಆಗಿದ್ದಳು. ಪೌಲನು ಹೇಳಿದ ಮಾತುಗಳಿಗೆ ಲಕ್ಷ್ಯ
15 ಕೊಡುವದಕ್ಕೆ ಕರ್ತನು ಆಕೆಯ ಹೃದಯವನ್ನು ತೆರೆದನು. ಆಕೆಯೂ ಆಕೆಯ ಮನೆ
ಯವರೂ ದೀಕ್ಷಾಸ್ನಾನಮಾಡಿಸಿಕೊಂಡ ಮೇಲೆ, ಆಕೆ—ನಾನು ಕರ್ತನನ್ನು ನಂಬಿದವಳೆಂದು
ನೀವು ನಿಶ್ಚಯಿಸಿಕೊಂಡಿದ್ದರೆ, ನನ್ನ ಮನೆಯಲ್ಲಿ ಬಂದು ಇರ್ರಿ ಎಂದು ಬೇಡಿಕೊಂಡು
ನಮ್ಮನ್ನು ಬಲವಂತ ಮಾಡಿದಳು.
16 ಬಳಿಕ ಪ್ರಾರ್ಥನೆ ನಡೆಯುವ ಆ ಸ್ಥಳಕ್ಕೆ ನಾವು ಹೋಗುತ್ತಿರುವಾಗ, ಗಾರುಡಗಾತಿ
ಯಾದ ಒಬ್ಬ ದಾಸಿಯು ನಮ್ಮೆದುರಿಗೆ ಬಂದಳು. ಅವಳು ಕಣಿ ಹೇಳುವದರಿಂದ
17 ಅವಳ ಯಜಮಾನರಿಗೆ ಬಹು ಆದಾಯವಾಗುತ್ತಿತ್ತು. ಪೌಲನೂ ನಾವೂ ಹೋಗು
ತ್ತಿರುವಾಗ ಅವಳು ಹಿಂದೆ ಬಂದು—ಈ ಮನುಷ್ಯರು ಪರಾತ್ಪರನಾದ ದೇವರ ದಾಸರು;
18 ನಿಮಗೆ ರಕ್ಷಣೆಯ ಮಾರ್ಗವನ್ನು ಸಾರುತ್ತಾರೆ ಎಂದು ಕೂಗುತ್ತಿದ್ದಳು. ಹೀಗೆ ಅನೇಕ
ದಿವಸ ಮಾಡಿದ್ದರಿಂದ ಪೌಲನು ಬಹಳವಾಗಿ ಬೇಸರಗೊಂಡು, ಹಿಂತಿರುಗಿ ಆ ದೆವ್ವಕ್ಕೆ—
ಅವಳನ್ನು ಬಿಟ್ಟುಹೋಗು ಎಂದು ಯೇಸು ಕ್ರಿಸ್ತನ ಹೆಸರಿನಲ್ಲಿ ನಿನಗೆ ಅಪ್ಪಣೆಕೊಡುತ್ತೇನೆ
ಎಂದು ಹೇಳಿದನು. ಅದೇ ಗಳಿಗೆಯಲ್ಲಿಯೇ ಅದು ಬಿಟ್ಟುಹೋಯಿತು.
19 ಅವಳ ಯಜಮಾನರು ತಮ್ಮ ಆದಾಯದ ನಿರೀಕ್ಷೆ ತಪ್ಪಿತಲ್ಲಾ ಎಂದು ತಿಳಿದು,
ಪೌಲನನ್ನೂ ಸೀಲನನ್ನೂ ಹಿಡಿದು, ಚಾವಡಿಗೆ ಅಧಿಕಾರಿಗಳ ಬಳಿಗೆ ಎಳಕೊಂಡು
20 ಹೋದರು. ಅವರನ್ನು ಅಧಿಪತಿಗಳ ಮುಂದೆ ತಂದು—ಈ ಮನುಷ್ಯರು ನಮ್ಮ ಪಟ್ಟಣ
21 ವನ್ನು ಬಹಳವಾಗಿ ಗಲಿಬಿಲಿ ಮಾಡುತ್ತಾರೆ; ಇವರು ಯೆಹೂದ್ಯರಾಗಿದ್ದು ರೋಮಾಯ
ರಾದ ನಾವು ಅವಲಂಬಿಸಿ ನಡಿಸಕೂಡದಂಥ ಆಚಾರಗಳನ್ನು ಪ್ರಕಟಿಸುತ್ತಾರೆ ಅಂದರು.

ಆಗ ದೊಂಬೀ ಜನರು ಕೂಡಿ ಅವರಿಗೆ ವಿರೋಧವಾಗಿ ಒಟ್ಟಾಗಿ ಎದ್ದರು; ಮತ್ತು 22
ಅಧಿಪತಿಗಳು—ಇವರ ವಸ್ತ್ರಗಳನ್ನು ಹರಿದುತೆಗೆದು ಚಡಿಗಳಿಂದ ಹೊಡೆಯಬೇಕೆಂದು
ಅಪ್ಪಣೆಕೊಟ್ಟರು. ಅವರಿಗೆ ಬಹಳ ಪೆಟ್ಟುಗಳನ್ನು ಹೊಡಿಸಿದ ಮೇಲೆ ಸೆರೆಮನೆಯೊಳಗೆ 23
ಹಾಕಿಸಿ—ಇವರನ್ನು ಭದ್ರವಾಗಿ ಕಾಯಬೇಕೆಂದು ಸೆರೆಯ ಯಜಮಾನನಿಗೆ ಖಂಡಿತ
ವಾಗಿ ಹೇಳಿದರು. ಅವನು ಇಂಥಾ ಅಪ್ಪಣೆಯನ್ನು ಹೊಂದಿ, ಅವರನ್ನು ಸೆರೆಮನೆಯ 24
ಒಳಕೋಣೆಯಲ್ಲಿ ಹಾಕಿ ಅವರ ಕಾಲುಗಳಿಗೆ ಕೋಳವನ್ನು ಹಾಕಿ ಬಿಗಿಸಿದನು. ಮಧ್ಯ 25
ರಾತ್ರಿಯಲ್ಲಿ ಪೌಲನೂ ಸೀಲನೂ ಪ್ರಾರ್ಥನೆಮಾಡುವವರಾಗಿ ದೇವರಿಗೆ ಸ್ತುತಿಪದಗಳನ್ನು
ಹಾಡುತ್ತಿದ್ದರು; ಸೆರೆಯಲ್ಲಿದ್ದವರು ಲಕ್ಷ್ಯವಿಟ್ಟು ಕೇಳುತ್ತಿದ್ದರು. ಅಕಸ್ಮಾತ್ತಾಗಿ ಮಹಾ 26
ಭೂಕಂಪವುಂಟಾಯಿತು; ಸೆರೆಮನೆಯ ಅಸ್ತಿವಾರಗಳು ಕದಲಿದವು. ಅದೇ ಕ್ಷಣದಲ್ಲಿ
ಕದಗಳೆಲ್ಲಾ ತೆರೆದವು, ಎಲ್ಲರ ಬೇಡಿಗಳು ಕಳಚಿಬಿದ್ದವು. ಸೆರೆಯ ಯಜಮಾನನು 27
ನಿದ್ದೆಯಿಂದ ಎಚ್ಚತ್ತು, ಸೆರೆಮನೆಯ ಕದಗಳು ತೆರೆದಿರುವದನ್ನು ಕಂಡು, ಸೆರೆಯಲ್ಲಿದ್ದವರು
ಓಡಿಹೋದರೆಂದು ಭಾವಿಸಿ, ಕತ್ತಿಯನ್ನು ಹಿರಿದು ಆತ್ಮಹತ್ಯ ಮಾಡಿಕೊಳ್ಳಬೇಕೆಂದಿದ್ದನು.
ಆದರೆ ಪೌಲನು ಮಹಾ ಶಬ್ದದಿಂದ ಕೂಗಿ ಅವನಿಗೆ—ನೀನೇನೂ ಕೇಡು ಮಾಡಿಕೊಳ್ಳ 28
ಬೇಡ, ನಾವೆಲ್ಲರೂ ಇಲ್ಲೇ ಇದ್ದೇವೆ ಎಂದು ಹೇಳಲು, ಅವನು—ದೀಪಾ ತರಬೇಕೆಂದು 29
ಕೂಗಿ ಒಳಕ್ಕೆ ಹಾರಿ ನಡುಗುತ್ತಾ ಪೌಲ ಸೀಲರ ಮುಂದೆ ಬಿದ್ದನು. ಮತ್ತು ಅವರನ್ನು 30
ಹೊರಗೆ ಕರಕೊಂಡು ಬಂದು—ಸ್ವಾಮಿಗಳೇ, ನಾನು ರಕ್ಷಣೆಹೊಂದುವದಕ್ಕೆ ಏನು
ಮಾಡಬೇಕೆಂದು ಕೇಳಲು, ಅವರು—ಕರ್ತನಾದ ಯೇಸುವಿನ ಮೇಲೆ ನಂಬಿಕೆಯಿಡು, 31
ಆಗ ನೀನು ರಕ್ಷಣೆ ಹೊಂದುವಿ, ನಿನ್ನ ಮನೆಯವರೂ ರಕ್ಷಣೆ ಹೊಂದುವರು ಎಂದು
ಹೇಳಿ, ಅವನಿಗೂ ಅವನ ಮನೆಯಲ್ಲಿದ್ದವರೆಲ್ಲರಿಗೂ ದೇವರ ವಾಕ್ಯವನ್ನು ತಿಳಿಸಿದರು. 32
ಆ ಮೇಲೆ ಅವನು ರಾತ್ರಿಯ ಅದೇ ಗಳಿಗೆಯಲ್ಲಿ ಅವರನ್ನು ಕರಕೊಂಡುಹೋಗಿ, ಅವರ 33
ಗಾಯಗಳನ್ನು ತೊಳೆದು, ಕೂಡಲೆ ತಾನು ತನ್ನವರೆಲ್ಲರ ಸಹಿತವಾಗಿ ದೀಕ್ಷಾಸ್ನಾನಮಾಡಿ
ಸಿಕೊಂಡನು. ತರುವಾಯ ಅವರನ್ನು ತನ್ನ ಮನೆಗೆ ಕರಕೊಂಡುಹೋಗಿ, ಊಟ 34
ಮಾಡಿಸಿದನು. ಅವನು ತನ್ನ ಮನೆಯವರೆಲ್ಲರ ಸಂಗಡ ನಂಬಿ ಉಲ್ಲಾಸಗೊಂಡನು.

ಬೆಳಗಾದ ಮೇಲೆ ಅಧಿಪತಿಗಳು ಆ ಮನುಷ್ಯರನ್ನು ಬಿಟ್ಟುಬಿಡು ಎಂದು ಜವಾನರ 35
ಕೈಯಲ್ಲಿ ಹೇಳಿಕಳುಹಿಸಿದರು. ಸೆರೇಯಜಮಾನನು ಈ ಮಾತನ್ನು ಪೌಲನಿಗೆ ತಿಳಿಸಿ— 36
ಅಧಿಪತಿಗಳು ನಿಮ್ಮನ್ನು ಬಿಟ್ಟುಬಿಡಬೇಕೆಂದು ಹೇಳಿಕಳುಹಿಸಿದ್ದಾರೆ, ಆದದರಿಂದ ಈಗ
ನೀವು ಸಮಾಧಾನದಿಂದ ಹೊರಟುಹೋಗಿರಿ ಎಂದು ಹೇಳಿದನು. ಅದಕ್ಕೆ ಪೌಲನು— 37
ಅವರು ವಿಚಾರಣೆಮಾಡದೆ ರೋಮಾಪುರದ ಹಕ್ಕುದಾರರಾದ ನಮ್ಮನ್ನು ಎಲ್ಲರ ಮುಂದೆ
ಹೊಡಿಸಿ ಸೆರೆಮನೆಯೊಳಗೆ ಹಾಕಿಸಿದರು; ಈಗ ನಮ್ಮನ್ನು ಗುಪ್ತವಾಗಿ ಹೊರಗೆ ಕಳು
ಹಿಸುತ್ತಾರೋ? ಹಾಗೆ ಎಂದಿಗೂ ಆಗಕೂಡದು; ಅವರೇ ಬಂದು ನಮ್ಮನ್ನು ಹೊರಗೆ
ಕರಕೊಂಡುಹೋದರೆ ಸರಿ ಎಂದು ಹೇಳಿದನು. ಜವಾನರು ಈ ಮಾತುಗಳನ್ನು ಅಧಿ 38
ಪತಿಗಳಿಗೆ ತಿಳಿಸಿದಾಗ, ರೋಮಾಪುರದ ಹಕ್ಕುದಾರರು ಎಂಬ ಮಾತನ್ನು ಅವರು ಕೇಳಿ
ಭಯಪಟ್ಟರು; ಮತ್ತು ಅವರ ಬಳಿಗೆ ಹೋಗಿ ವಿನಯವಾಗಿ ಮಾತಾಡಿ ಹೊರಕ್ಕೆ ಕರೆದು 39
ಕೊಂಡು ಬಂದು—ನೀವು ಊರನ್ನು ಬಿಟ್ಟುಹೋಗಬೇಕೆಂದು ಬೇಡಿಕೊಂಡರು. ಆಗ 40

ಅವರು ಸೆರೆಮನೆಯೊಳಗಿಂದ ಹೊರಟು ಲುದ್ಯಳ ಮನೆಗೆ ಬಂದು ಸಹೋದರರನ್ನು ನೋಡಿ ಅವರನ್ನು ಧೈರ್ಯಗೊಳ್ಳಿಸಿ ಹೊರಟುಹೋದರು.

ಥೆಸಲೊನೀಕದಲ್ಲಿ ಪೌಲನು ಸಭೆಯನ್ನು ಸ್ಥಾಪಿಸಿದ ಮೇಲೆ ಯೆಹೂದ್ಯರು ಅವನನ್ನು ಹೊರಡಿಸಿದ್ದು.

**17** ಮುಂದೆ ಅವರು ಮಾರ್ಗಹಿಡಿದು ಅಂಫಿಪೊಲಿ ಅಪೊಲೋನ್ಯ ಎಂಬ ಊರುಗಳನ್ನು ದಾಟಿ ಥೆಸಲೊನೀಕಕ್ಕೆ ಬಂದರು. ಅಲ್ಲಿ ಯೆಹೂದ್ಯರದೊಂದು ಸಭಾಮಂದಿರವಿತ್ತು. 2 ಪೌಲನು ತನ್ನ ಪದ್ಧತಿಯ ಪ್ರಕಾರ ಅಲ್ಲಿದ್ದವರ ಬಳಿಗೆ ಹೋಗಿ, ಮೂರು ಸಬ್ಬತ್‌ದಿನಗಳಲ್ಲಿ 3 ಶಾಸ್ತ್ರಾಧಾರದಿಂದ ಅವರ ಸಂಗಡ ವಾದಿಸಿ, ಆಯಾ ವಚನಗಳ ಅರ್ಥವನ್ನು ಬಿಚ್ಚಿ—ಕ್ರಿಸ್ತನು ಬಾಧೆಯನ್ನನುಭವಿಸಿ ಸತ್ತು ಎದ್ದುಬರುವದು ಅಗತ್ಯವೆಂತಲೂ, ನಾನು ನಿಮಗೆ 4 ಪ್ರಸಿದ್ಧಿಪಡಿಸುವ ಯೇಸುವೇ ಆ ಕ್ರಿಸ್ತನೆಂತಲೂ ಸ್ಥಾಪಿಸಿದನು. ಅವರಲ್ಲಿ ಕೆಲವರೂ ದೇವಭಕ್ತರಾದ ಗ್ರೀಕರಲ್ಲಿ ದೊಡ್ಡಗುಂಪೂ ಪ್ರಮುಖಸ್ತ್ರೀಯರಲ್ಲಿ ಅನೇಕರೂ ಒಡಂಬಟ್ಟು 5 ಪೌಲ ಸೀಲರನ್ನು ಸೇರಿಕೊಂಡರು. ಯೆಹೂದ್ಯರು ಹೊಟ್ಟೇಕಿಚ್ಚುಪಟ್ಟು, ಪೇಟೆಯಲ್ಲಿ ತಿರುಗಾಡುವ ಕೆಲವು ಪೋಕರನ್ನು ಕರೆದುಕೊಂಡು ಬಂದು, ಗುಂಪುಕೂಡಿಸಿ, ಊರಲ್ಲಿ ಗದ್ದಲ ಎಬ್ಬಿಸಿ, ಪೌಲ ಸೀಲರನ್ನು ಪಟ್ಟಣದ ಸಭೆಗೆದುರಿಗೆ ತರಬೇಕೆಂದು ಅವರನ್ನು 6 ಹುಡುಕುತ್ತಾ ಯಾಸೋನನ ಮನೆಯ ಮೇಲೆ ಬಿದ್ದರು. ಅವರು ಸಿಕ್ಕದೆ ಹೋದದ್ದರಿಂದ, ಆ ಜನರು ಯಾಸೋನನನ್ನೂ ಕೆಲವು ಮಂದಿ ಸಹೋದರರನ್ನೂ ಊರಿನ ಅಧಿಕಾರಿಗಳ ಬಳಿಗೆ ಎಳಕೊಂಡು ಹೋಗಿ—ಲೋಕವನ್ನು ಅಲ್ಲಕಲ್ಲೋಲ ಮಾಡಿದ ಆ ಮನುಷ್ಯರು ಇಲ್ಲಿಗೂ 7 ಬಂದಿದ್ದಾರೆ, ಯಾಸೋನನು ಅವರನ್ನು ಸೇರಿಸಿಕೊಂಡಿದ್ದಾನೆ, ಅವರೆಲ್ಲರು ಯೇಸುವೆಂಬ ಬೇರೊಬ್ಬ ಅರಸನು ಇದ್ದಾನೆಂದು ಹೇಳಿ, ಚಕ್ರವರ್ತಿಯ ಆಜ್ಞೆಗಳಿಗೆ ವಿರುದ್ಧವಾಗಿ ನಡೆ 8 ಯುತ್ತಾರೆ ಎಂದು ಕೂಗಿದರು. ಪಟ್ಟಣದವರೂ ಪಟ್ಟಣದ ಅಧಿಕಾರಿಗಳೂ ಈ ಮಾತು 9 ಗಳನ್ನು ಕೇಳಿ ಕಳವಳಪಟ್ಟು, ಯಾಸೋನ ಮೊದಲಾದವರಿಂದ ಹೊಣೆ ತೆಗೆದುಕೊಂಡರು; ತೆಗೆದುಕೊಂಡ ಮೇಲೆ ಅವರನ್ನು ಬಿಟ್ಟುಬಿಟ್ಟರು.

ಬೆರೋಯ ಊರಿನವರು ದೇವರ ವಾಕ್ಯವನ್ನು ಚನ್ನಾಗಿ ಕೇಳಿದ್ದು. ಥೆಸಲೊನೀಕದವರು ಅಲ್ಲಿಯೂ ಬಂದು ಜನರನ್ನು ರೇಗಿಸಿದ್ದರಿಂದ ಪೌಲನು ಅಥೇನೆ ಪಟ್ಟಣಕ್ಕೆ ಹೊರಟುಹೋದದ್ದು.

10 ಕೂಡಲೇ ಸಹೋದರರು ರಾತ್ರಿಯಲ್ಲಿ ಪೌಲ ಸೀಲರನ್ನು ಬೆರೋಯಕ್ಕೆ ಕಳುಹಿಸಿ ಬಿಟ್ಟರು. ಅವರು ಅಲ್ಲಿಗೆ ಸೇರಿ ಯೆಹೂದ್ಯರ ಸಭಾಮಂದಿರದೊಳಕ್ಕೆ ಹೋದರು. 11 ಆ ಸಭೆಯವರು ಥೆಸಲೊನೀಕದವರಿಗಿಂತ ಸದ್ಗುಣವುಳ್ಳವರಾಗಿದ್ದು ದೇವರ ವಾಕ್ಯವನ್ನು ಸಿದ್ಧಮನಸ್ಸಿನಿಂದ ಅಂಗೀಕರಿಸಿ, ಇವರು ಹೇಳುವ ಮಾತು ಹೌದೋ ಏನೋ ಎಂಬ 12 ವಿಷಯದಲ್ಲಿ ಪ್ರತಿದಿನವೂ ಶಾಸ್ತ್ರಗ್ರಂಥಗಳನ್ನು ಶೋಧಿಸುತ್ತಿದ್ದರು. ಹೀಗಿರಲಾಗಿ ಅವರಲ್ಲಿ ಬಹಳ ಮಂದಿ ನಂಬಿದರು; ಅದಲ್ಲದೆ ಕುಲೀನರಾದ ಗ್ರೀಕಹೆಂಗಸರಲ್ಲಿಯೂ ಗಂಡಸ 13 ರಲ್ಲಿಯೂ ಅನೇಕರು ನಂಬಿದರು. ಆದರೆ ಪೌಲನು ಬೆರೋಯದಲ್ಲಿಯೂ ದೇವರ ವಾಕ್ಯವನ್ನು ಪ್ರಸಿದ್ಧಿಪಡಿಸುತ್ತಾನೆಂಬ ವರ್ತಮಾನವು ಥೆಸಲೊನೀಕದ ಯೆಹೂದ್ಯರಿಗೆ

ತಿಳಿದುಬಂದಾಗ ಅವರು ಅಲ್ಲಿಗೂ ಬಂದು ಜನರ ಗುಂಪುಗಳನ್ನು ರೇಗಿಸಿ ಕಲಕಿದರು. ಕೂಡಲೇ ಸಹೋದರರು ಪೌಲನನ್ನು ಸಮುದ್ರದ ತನಕ ಹೋಗುವದಕ್ಕೆ ಕಳುಹಿಸಿ 14 ಕೊಟ್ಟರು. ಆದರೆ ಸೀಲನೂ ತಿಮೊಥೆಯನೂ ಅಲ್ಲೇ ನಿಂತರು. ಪೌಲನನ್ನು ಸಾಗ 15 ಕಳುಹಿಸಿದವರು ಅವನನ್ನು ಅಥೇನೆಯ ವರೆಗೂ ಕರೆದುಕೊಂಡು ಹೋಗಿ—ಸೀಲನನ್ನೂ ತಿಮೊಥೆಯನನ್ನೂ ಕೂಡಿದ ಮಟ್ಟಿಗೆ ಬೇಗ ನನ್ನ ಬಳಿಗೆ ಬರಹೇಳಿರಿ ಎಂದು ಅಪ್ಪಣೆ ಯನ್ನು ಅವನಿಂದ ಹೊಂದಿ, ಹೊರಟುಬಂದರು.

ಅಥೇನೆ ಪಟ್ಟಣದಲ್ಲಿ ಪೌಲನು ತತ್ವವಿಚಾರಕರಿಗೆ ಉಪನ್ಯಾಸ ಮಾಡಿದ್ದು.

ಪೌಲನು ಅವರಿಗೋಸ್ಕರ ಅಥೇನೆಯಲ್ಲಿ ಕಾದುಕೊಂಡಿರುವಾಗ, ಆ ಪಟ್ಟಣದಲ್ಲಿ ಎಲ್ಲೆ 16 ಲ್ಲಿಯೂ ವಿಗ್ರಹಗಳೇ ಇರುವದನ್ನು ನೋಡಿ, ಅವನ ಮನಸ್ಸು ಅವನೊಳಗೆ ಕುದಿಯಿತು. ಆದದರಿಂದ ಅವನು ಸಭಾಮಂದಿರದಲ್ಲಿ ಯೆಹೂದ್ಯರ ಮತ್ತು ದೇವಭಕ್ತರ ಸಂಗಡಲೂ 17 ಪ್ರತಿದಿನ ಪೇಟೆಯಲ್ಲಿ ಕಂಡುಬಂದವರ ಸಂಗಡಲೂ ವಾದಿಸಿದನು. ಇದಲ್ಲದೆ ಎಪಿ 18 ಕೂರಿಯರು ಸ್ತೋಯಿಕರು ಎಂಬ ತತ್ವವಿಚಾರಕರಲ್ಲಿ ಕೆಲವರು ಅವನ ಸಂಗಡ ಚರ್ಚೆ ಮಾಡಿದರು. ಅವರಲ್ಲಿ ಕೆಲವರು—ಈ ಮಾತಾಳಿ ಏನು ಹೇಳಬೇಕೆಂದಿದ್ದಾನೆ? ಅಂದರು. ಅವನು ಯೇಸುವಿನ ವಿಷಯವಾಗಿಯೂ ಸತ್ತವರು ಎದ್ದುಬರುವರೆಂಬುವ ವಿಷಯ ವಾಗಿಯೂ ಸಾರುತ್ತಿದ್ದರಿಂದ—ಇವನು ಅನ್ಯದೇಶದ ದೈವಗಳನ್ನು ಪ್ರಸಿದ್ಧಿಪಡಿಸುವವ ನಾಗಿ ತೋರುತ್ತಾನೆಂದು ಬೇರೆ ಕೆಲವರು ಹೇಳಿದರು. ಅವರು ಅವನನ್ನು ಹಿಡಿದು 19 ಅರಿಯೊಪಾಗಕ್ಕೆ[1] ಕರೆದುಕೊಂಡು ಹೋಗಿ—ನೀನು ಹೇಳುವ ಈ ನೂತನತರವಾದ ಉಪದೇಶವನ್ನು ನಾವು ತಿಳಿಯಬಹುದೇ? ಅಪೂರ್ವವಾದ ಸಂಗತಿಗಳನ್ನು ನಮಗೆ ಶ್ರುತ 20 ಪಡಿಸುತ್ತೀಯಲ್ಲಾ; ಆದಕಾರಣ ಅವೇನಿದ್ದಾವು ತಿಳಿಯಬೇಕೆಂದು ನಮಗೆ ಅಪೇಕ್ಷೆಯದೆ ಅಂದರು. ಅಥೇನೆಯರೂ ಅಲ್ಲಿ ವಾಸವಾಗಿದ್ದ ಪರಸ್ಥಳದವರೂ ಹೊಸ ಹೊಸ ಸಂಗತಿ 21 ಗಳನ್ನು ಹೇಳುವದಕ್ಕೂ ಕೇಳುವದಕ್ಕೂ ಹೊರತು ಬೇರೆ ಯಾವದಕ್ಕೂ ಸಮಯ ಕೊಡುತ್ತಿರಲಿಲ್ಲ. ಪೌಲನು ಅರಿಯೊಪಾಗದ ಮಧ್ಯದಲ್ಲಿ ನಿಂತುಕೊಂಡು ಹೇಳಿದ್ದೇ 22 ನಂದರೆ—

ಅಥೇನೆಯ ಜನರೇ, ನೀವು ಎಲ್ಲಾದರಲ್ಲೂ ಅತಿಭಕ್ತಿವಂತರೆಂದು ನನಗೆ ತೋರುತ್ತದೆ. ನಾನು ನಿಮ್ಮ ಪಟ್ಟಣದಲ್ಲಿ ತಿರುಗಾಡುತ್ತಾ ನೀವು ಪೂಜಿಸುವ ದೇವತಾಪ್ರತಿಮೆಗಳನ್ನು 23 ಚನ್ನಾಗಿ ನೋಡುತ್ತಾ ಇದ್ದಾಗ, ಒಂದು ಬಲಿಪೀಠವು ನನ್ನ ಕಣ್ಣಿಗೆ ಬಿತ್ತು; ಅದರ ಮೇಲೆ ತಿಳಿಯದ ದೇವರಿಗೆ ಎಂದು ಬರೆದಿತ್ತು. ಆದಕಾರಣ ನೀವು ಯಾವ ದೈವವನ್ನು ತಿಳಿಯದೆ ಪೂಜಿಸುತ್ತೀರೋ ಅದನ್ನೇ ನಿಮಗೆ ತಿಳಿಯಪಡಿಸುತ್ತೇನೆ, ಕೇಳಿರಿ. ಜಗತ್ತನ್ನೂ 24 ಅದರಲ್ಲಿರುವ ಎಲ್ಲಾ ವಸ್ತುಗಳನ್ನೂ ಉಂಟುಮಾಡಿದ ದೇವರು ಭೂಮ್ಯಾಕಾಶಗಳ ಒಡೆಯನಾಗಿರುವದರಿಂದ ಆತನು ಕೈಯಿಂದ ಕಟ್ಟಿರುವ ಗುಡಿಗಳಲ್ಲಿ ವಾಸಮಾಡುವವ ನಲ್ಲ; ತಾನೇ ಎಲ್ಲರಿಗೂ ಜೀವ ಶ್ವಾಸ ಮುಂತಾದದ್ದೆಲ್ಲವನ್ನೂ ಕೊಡುವವನಾಗಿರಲಾಗಿ, 25

[1] ಅಂದರೆ, ಹಿರೀಸಭೆಯು ಕೂಡುವ ಸ್ಥಳಕ್ಕೆ.

26 ಕೊರತೆಯಿದ್ದವನಂತೆ ಮನುಷ್ಯರ ಕೈಗಳಿಂದ ಸೇವೆಹೊಂದುವವನೂ ಅಲ್ಲ. ಆತನು ಒಬ್ಬನಿಂದಲೇ ಎಲ್ಲಾ ಜನಾಂಗದವರನ್ನು ಹುಟ್ಟಿಸಿ, ಅವರವರು ಇರತಕ್ಕ ಕಾಲಗಳನ್ನೂ ಅವರವರ ನಿವಾಸಗಳ ಮೇರೆಗಳನ್ನೂ ನಿಷ್ಕರ್ಷಿಸಿ, ಭೂಮಂಡಲದಲ್ಲೆಲ್ಲಾ ವಾಸಮಾಡಿಸಿ 27 ಒಂದು ವೇಳೆ ಅವರು ತಡವ್ಯಾಡಿ ಕಂಡುಕೊಂಡಾರೇನೋ ಎಂದು ತನ್ನನ್ನು ಹುಡುಕುವವ 28 ರನ್ನಾಗಿ ಮಾಡಿದನು. ಆತನು ನಮ್ಮಲ್ಲಿ ಒಬ್ಬನಿಗೂ ದೂರವಾದವನಲ್ಲ. ಆತನಲ್ಲಿಯೇ ನಾವು ಜೀವಿಸುತ್ತೇವೆ, ಚಲಿಸುತ್ತೇವೆ, ಇರುತ್ತೇವೆ. ನಿಮ್ಮ ಕವಿಗಳಲ್ಲಿಯೂ ಕೆಲವರು— 29 ನಾವು ಆತನ ಸಂತಾನದವರೇ ಎಂಬದಾಗಿ ಹೇಳಿದ್ದಾರೆ. ನಾವು ದೇವರ ಸಂತಾನದವ ರಾಗಿದ್ದ ಮೇಲೆ, ದೈವವು ಮನುಷ್ಯನ ಶಿಲ್ಪವಿದ್ಯೆಯಿಂದಲೂ ಕಲ್ಪನೆಯಿಂದಲೂ ಕೆತ್ತಿರುವ 30 ಚಿನ್ನ ಬೆಳ್ಳಿ ಕಲ್ಲುಗಳಿಗೆ ಸಮಾನವೆಂದು ನಾವು ಭಾವಿಸಬಾರದು. ಆ ಅಜ್ಞಾನಕಾಲಗ ಳನ್ನು ದೇವರು ಲಕ್ಷ್ಯಕ್ಕೆ ತರಲಿಲ್ಲ; ಈಗಲಾದರೋ ಆತನು ನಾಲ್ಕು ದಿಕ್ಕಿನಲ್ಲಿರುವ ಮನು 31 ಷ್ಯರೆಲ್ಲರೂ ತನ್ನ ಕಡೆಗೆ ತಿರುಗಿಕೊಳ್ಳಬೇಕೆಂದು ಅಪ್ಪಣೆಕೊಡುತ್ತಾನೆ. ಯಾಕಂದರೆ ಆತನು ನಿಷ್ಕರ್ಷೆಮಾಡಿದ ಪುರುಷನ ಕೈಯಿಂದ ನೀತಿಗನುಸಾರವಾಗಿ ಭೂಲೋಕದ ನ್ಯಾಯವಿಚಾ ರಣೆ ಮಾಡುವದಕ್ಕೆ ಒಂದು ದಿವಸವನ್ನು ಗೊತ್ತುಮಾಡಿದ್ದಾನೆ. ಅವನನ್ನು ಸತ್ತವರೊ ಳಗಿಂದ ಎಬ್ಬಿಸಿದ್ದರಲ್ಲಿ ಇದನ್ನು ನಂಬುವದಕ್ಕೆ ಎಲ್ಲರಿಗೂ ಆಧಾರ ಕೊಟ್ಟಿದ್ದಾನೆ ಅಂದನು.

32 ಸತ್ತವರು ಎದ್ದುಬರುವ ವಿಷಯವನ್ನು ಕೇಳಿದಾಗ, ಕೆಲವರು ಅಪಹಾಸ್ಯಮಾಡಿದರು; ಬೇರೆ ಕೆಲವರು—ನೀನು ಈ ವಿಷಯದಲ್ಲಿ ಹೇಳುವದನ್ನು ನಾವು ಇನ್ನೊಂದು ಸಾರಿ 33 ಕೇಳುತ್ತೇವೆ ಅಂದರು. ಹೀಗಿರಲು ಪೌಲನು ಅವರ ಮಧ್ಯದಿಂದ ಹೊರಟುಹೋದನು. 34 ಕೆಲವರು ಅವನನ್ನು ಅಂಟಿಕೊಂಡು ನಂಬಿದರು; ನಂಬಿದವರಲ್ಲಿ ಅರಿಯೊಪಾಗದ ಸಭೆ ಯವನಾದ ದಿಯೊನುಸ್ಯನೂ ದಾಮರಿಯೆಂಬಾಕೆಯೂ ಇನ್ನು ಕೆಲವರೂ ಇದ್ದರು.

ಪೌಲನು ಕೊರಿಂಥದಲ್ಲಿ ಒಂದುವರೆ ವರುಷವಿದ್ದು ಸುವಾರ್ತೆಯನ್ನು ಸಾರಿದ್ದು;
ಅಂತಿಯೋಕ್ಯಕ್ಕೆ ತಿರಿಗಿ ಬಂದದ್ದು.

**18** 2 ಇದಾದ ಮೇಲೆ ಪೌಲನು ಅಥೇನೆಯನ್ನು ಬಿಟ್ಟು ಕೊರಿಂಥಕ್ಕೆ ಹೋದನು. ಪೊಂತ ದಲ್ಲಿ ಹುಟ್ಟಿದ ಅಕ್ವಿಲನೆಂಬ ಒಬ್ಬ ಯೆಹೂದ್ಯನನ್ನು ಅಲ್ಲಿ ಕಂಡನು. ಯೆಹೂದ್ಯ ರೆಲ್ಲರೂ ರೋಮಾಪುರವನ್ನು ಬಿಟ್ಟುಹೋಗಬೇಕೆಂದು ಕ್ಲೌದಿಯ ಚಕ್ರವರ್ತಿಯು ವಿಧಿ ಸಿದಕಾರಣ, ಅಕ್ವಿಲನೂ ಅವನ ಹೆಂಡತಿಯಾದ ಪ್ರಿಸ್ಕಿಲ್ಲಳೂ ಕೆಲವು ದಿವಸಗಳ ಮುಂಚೆ 3 ಇತಾಲ್ಯ ದೇಶದಿಂದ ಅಲ್ಲಿಗೆ ಬಂದಿದ್ದರು. ಪೌಲನು ಅವರ ಮನೆಗೆ ಹೋಗಿ, ತಾನೂ ಅವರೂ ಒಂದೇ ಕಸಬಿನವರಾಗಿದ್ದದರಿಂದ ಅವರಲ್ಲಿದ್ದು ಅವರೊಂದಿಗೆ ಕೆಲಸಮಾಡು 4 ತ್ತಿದ್ದನು; ಗುಡಾರಮಾಡುವದು ಅವರ ಕಸಬಾಗಿತ್ತು. ಅವನು ಪ್ರತಿಸಬ್ಬತ್‌ದಿನವೂ ಸಭಾಮಂದಿರದಲ್ಲಿ ಚರ್ಚಿಸಿ ಯೆಹೂದ್ಯರನ್ನೂ ಗ್ರೀಕರನ್ನೂ ಒಡಂಬಡಿಸುತ್ತಿದ್ದನು.

5 ಸೀಲನೂ ತಿಮೊಥೆಯನೂ ಮಕೆದೋನ್ಯದಿಂದ ಬಂದಾಗ, ಪೌಲನು ದೇವರ ವಾಕ್ಯ ವನ್ನು ಬೋಧಿಸುವದರಲ್ಲಿ ಅತ್ಯಾಸಕ್ತಿಯುಳ್ಳವನಾಗಿ, ಯೇಸುವೇ ಬರಬೇಕಾದ ಕ್ರಿಸ್ತ 6 ನೆಂದು ಯೆಹೂದ್ಯರಿಗೆ ಖಂಡಿತವಾಗಿ ಸಾಕ್ಷಿಹೇಳಿದನು. ಅವರು ಎದುರಿಸಿ ದೂಷಿಸಲಾಗಿ

ಅವನು ತನ್ನ ವಸ್ತ್ರಗಳನ್ನು ಝಾಡಿಸಿ, ಅವರಿಗೆ—ನಿಮ್ಮ ನಾಶನಕ್ಕೆ ನೀವೇ ಹೊಣೆ. ನಾನು ಇಂದಿನಿಂದ ಶುದ್ಧಮನಸ್ಸುಳ್ಳವನಾಗಿ ಅನ್ಯಜನರ ಬಳಿಗೆ ಹೋಗುತ್ತೇನೆ ಎಂದು ಹೇಳಿ, ಆ ಸ್ಥಳವನ್ನು ಬಿಟ್ಟು, ದೇವರಿಗೆ ಭಯಪಡುವವನಾಗಿದ್ದ ತೀತಯುಸ್ತನೆಂಬವನ 7 ಮನೆಗೆ ಹೋದನು. ಅವನ ಮನೆ ಸಭಾಮಂದಿರದ ಮಗ್ಗಲಲ್ಲೇ ಇತ್ತು. ಸಭಾಮಂದಿರದ 8 ಅಧ್ಯಕ್ಷನಾದ ಕ್ರಿಸ್ಪನು ತನ್ನ ಮನೆಯವರೆಲ್ಲರ ಸಹಿತ ಕರ್ತನಲ್ಲಿ ನಂಬಿಕೆಯಿಟ್ಟನು. ಮತ್ತು ಕೊರಿಂಥದವರಲ್ಲಿ ಅನೇಕರು ಕೇಳಿ ನಂಬಿ ದೀಕ್ಷಾಸ್ನಾನಮಾಡಿಸಿಕೊಂಡರು. ಇದಲ್ಲದೆ ಕರ್ತನು ರಾತ್ರಿಕಾಲದಲ್ಲಿ ಪೌಲನಿಗೆ ದರ್ಶನಕೊಟ್ಟು—ನೀನು ಹೆದರಬೇಡ; ಸುಮ್ಮ 9 ನಿರದೆ ಮಾತಾಡುತ್ತಲೇ ಇರು, ನಾನೇ ನಿನ್ನ ಸಂಗಡ ಇದ್ದೇನೆ; ಯಾರೂ ನಿನ್ನ ಮೇಲೆ 10 ಬಿದ್ದು ಕೇಡು ಮಾಡುವದಿಲ್ಲ; ಈ ಪಟ್ಟಣದಲ್ಲಿ ನನಗೆ ಬಹಳ ಮಂದಿ ಇದ್ದಾರೆ ಎಂದು ಹೇಳಿದನು. ಅವನು ಒಂದು ವರುಷ ಆರು ತಿಂಗಳು ಅಲ್ಲೇ ಇದ್ದುಕೊಂಡು ಆ ಜನರಿಗೆ 11 ದೇವರ ವಾಕ್ಯವನ್ನು ಉಪದೇಶಮಾಡುತ್ತಿದ್ದನು.

ಗಲ್ಲಿಯೋನನು ಅಖಾಯದ ಅಧಿಪತಿಯಾಗಿರಲು, ಯೆಹೂದ್ಯರು ಒಗ್ಗಟ್ಟಾಗಿ ಪೌಲನ 12 ಮೇಲೆ ಬಿದ್ದು ಅವನನ್ನು ನ್ಯಾಯಸ್ಥಾನದ ಮುಂದೆ ಹಿಡಿತಂದು—ಇವನು ದೇವರನ್ನು 13 ಧರ್ಮಶಾಸ್ತ್ರಕ್ಕೆ ವಿರುದ್ಧವಾಗಿ ಪೂಜಿಸುವದಕ್ಕೆ ಜನರನ್ನು ಒಡಂಬಡಿಸುತ್ತಾನೆಂದು ದೂರು ಹೇಳಿದರು. ಪೌಲನು ಪ್ರತಿವಾದ ಮಾಡಬೇಕೆಂದಿದ್ದಾಗ, ಗಲ್ಲಿಯೋನನು ಯೆಹೂದ್ಯ 14 ರಿಗೆ—ಎಲೈ ಯೆಹೂದ್ಯರೇ, ಅನ್ಯಾಯವು ದುಷ್ಕಾರ್ಯವು ಇಂಥಾದ್ದೇನಾದರೂ ಇದ್ದ ಪಕ್ಷಕ್ಕೆ ನಾನು ನಿಮ್ಮ ಮಾತನ್ನು ಸಹನದಿಂದ ಕೇಳುವದು ನ್ಯಾಯವೇ. ಆದರೆ ನೀವು 15 ಮಾಡುವ ವಿವಾದವು ಬೋಧನೆಯನ್ನೂ ಹೆಸರುಗಳನ್ನೂ ನಿಮ್ಮ ಧರ್ಮಶಾಸ್ತ್ರವನ್ನೂ ಕುರಿತದ್ದಾಗಿರುವದರಿಂದ ಅವುಗಳನ್ನು ನೀವೇ ನೋಡಿಕೊಳ್ಳಿರಿ. ಇಂಥಾ ವಿಷಯಗಳನ್ನು ವಿಚಾರಣೆಮಾಡುವದಕ್ಕೆ ನನಗಂತೂ ಮನಸ್ಸಿಲ್ಲ ಎಂದು ಹೇಳಿ, ಅವರನ್ನು ನ್ಯಾಯ 16 ಸ್ಥಾನದ ಎದುರಿನಿಂದ ಹೊರಡಿಸಿಬಿಟ್ಟನು. ಆಗ ಜನರೆಲ್ಲರು ಸಭಾಮಂದಿರದ ಅಧ್ಯಕ್ಷ 17 ನಾದ ಸೋಸ್ಥೆನನನ್ನು ಹಿಡಿದುಕೊಂಡು, ನ್ಯಾಯಸ್ಥಾನದ ಮುಂದೆಯೇ ಹೊಡೆದರು. ಗಲ್ಲಿಯೋನನು ಅವುಗಳಲ್ಲಿ ಒಂದನ್ನೂ ಲಕ್ಷ್ಯಕ್ಕೆ ತರಲಿಲ್ಲ.

ಪೌಲನು ಇನ್ನು ಅನೇಕ ದಿವಸ ಅಲ್ಲಿದ್ದ ಮೇಲೆ ಸಹೋದರರಿಂದ ಅಪ್ಪಣೆತೆಗೆದು 18 ಕೊಂಡು, ತನಗೆ ದೀಕ್ಷೆ ಇದ್ದದರಿಂದ ಕೆಂಖ್ರೆಯದಲ್ಲಿ ಕ್ಷೌರಮಾಡಿಸಿಕೊಂಡು[1] ಹಡಗನ್ನು ಹತ್ತಿ ಸುರ್ಯಕ್ಕೆ ಹೊರಟನು. ಪ್ರಿಸ್ಕಿಲ್ಲಳೂ ಅಕ್ವಿಲನೂ ಅವನ ಸಂಗಡ ಹೊರಟರು. ಎಫೆಸಕ್ಕೆ ಬಂದಾಗ ಅವರನ್ನು ಅಲ್ಲೇ ಬಿಟ್ಟನು. ತಾನು ಸಭಾಮಂದಿರದೊಳಕ್ಕೆ ಹೋಗಿ 19 ಯೆಹೂದ್ಯರ ಸಂಗಡ ವಾದಿಸಿದನು. ಅವರು ಅವನನ್ನು ಇನ್ನೂ ಕೆಲವು ಕಾಲ ಇರ 20 ಬೇಕೆಂದು ಕೇಳಿಕೊಂಡಾಗ, ಅವನು ಒಪ್ಪದೆ—ದೇವರ ಚಿತ್ತವಾದರೆ ತಿರಿಗಿ ನಿಮ್ಮ ಬಳಿಗೆ 21 ಬರುತ್ತೇನೆಂದು ಹೇಳಿ ಅವರ ಅಪ್ಪಣೆ ತೆಗೆದುಕೊಂಡು ಹೋದನು. ಆ ಮೇಲೆ ಎಫೆಸ ದಿಂದ ಸಮುದ್ರಪ್ರಯಾಣ ಮಾಡಿ, ಕೈಸರೈಯದಲ್ಲಿ ಇಳಿದು ಯೆರೂಸಲೇಮಿಗೆ ಹೋಗಿ 22 ಸಭೆಯನ್ನು ವಂದಿಸಿ, ಅಂತಿಯೋಕ್ಯಕ್ಕೆ ಬಂದನು.

---

[1] ದೀಕ್ಷೆ ಬಿಟ್ಟದರಿಂದ ಕ್ಷೌರಮಾಡಿಸಿಕೊಂಡವನು ಅಕ್ವಿಲನೇ ಎಂದು ಕೆಲವರು ಅರ್ಥಮಾಡಿಕೊಳ್ಳುತ್ತಾರೆ.

ಸುವಾರ್ತೆಯನ್ನು ಸಾರುವದಕ್ಕೆ ಪೌಲನು ಮಾಡಿದ ಮೂರನೇ ಪ್ರಯಾಣವನ್ನು ಕುರಿತದ್ದು.

(18, 23—21, 17.)

ಅಪೊಲ್ಲೋಸನನ್ನು ಕುರಿತದ್ದು.

23 ಪೌಲನು ಅಂತಿಯೋಕ್ಯದಲ್ಲಿ ಕೆಲವು ಕಾಲ ಇದ್ದು, ತಿರಿಗಿ ಹೊರಟು ಕ್ರಮವಾಗಿ ಗಲಾತ್ಯ ಸೀಮೆಯಲ್ಲಿಯೂ ಫ್ರುಗ್ಯದಲ್ಲಿಯೂ ಸಂಚಾರಮಾಡುತ್ತಾ ಶಿಷ್ಯರೆಲ್ಲರನ್ನು ದೃಢ ಪಡಿಸಿದನು.

24 ಅಷ್ಟರೊಳಗೆ ಅಲೆಕ್ಸಾಂದ್ರಿಯದಲ್ಲಿ ಹುಟ್ಟಿದ ಅಪೊಲ್ಲೋಸನೆಂಬ ಒಬ್ಬ ಯೆಹೂದ್ಯನು ಎಫೆಸಕ್ಕೆ ಬಂದನು. ಅವನು ವಾಕ್ಚಾತುರ್ಯವುಳ್ಳವನು, ಶಾಸ್ತ್ರಗಳಲ್ಲಿ ಪ್ರವೀಣನು.
25 ಅವನು ಕರ್ತನ ಮಾರ್ಗದ ವಿಷಯದಲ್ಲಿ ಉಪದೇಶ ಹೊಂದಿದವನಾಗಿದ್ದನು; ಮತ್ತು ಆಸಕ್ತಮನಸ್ಸುಳ್ಳವನಾಗಿದ್ದು ಯೋಹಾನನು ಮಾಡಿಸಿದ ದೀಕ್ಷಾಸ್ನಾನವನ್ನು ಮಾತ್ರ ಬಲ್ಲವನಾದಾಗ್ಯೂ, ಯೇಸುವಿನ ಸಂಗತಿಗಳನ್ನು ಸೂಕ್ಷ್ಮವಾಗಿ ಹೇಳಿ ಉಪದೇಶಿಸಿದನು.
26 ಅವನು ಸಭಾಮಂದಿರದಲ್ಲಿ ಧೈರ್ಯದಿಂದ ಮಾತಾಡುವದಕ್ಕೆ ಪ್ರಾರಂಭಿಸಿದನು. ಅವನ ಮಾತುಗಳನ್ನು ಪ್ರಿಸ್ಕಿಲ್ಲಳೂ ಅಕ್ವಿಲನೂ ಕೇಳಿ ಅವನನ್ನು ತಮ್ಮ ಮನೆಗೆ ಕರೆದುಕೊಂಡು
27 ಹೋಗಿ, ದೇವರ ಮಾರ್ಗವನ್ನು ಅವನಿಗೆ ಇನ್ನೂ ಸೂಕ್ಷ್ಮವಾಗಿ ವಿವರಿಸಿದರು. ಆ ಮೇಲೆ ಅಖಾಯಕ್ಕೆ ಹೋಗಬೇಕೆಂದು ಅವನಿಗೆ ಮನಸ್ಸಾದಾಗ ಅಲ್ಲಿದ್ದ ಶಿಷ್ಯರು ಅವನನ್ನು
28 ಸೇರಿಸಿಕೊಳ್ಳುವಂತೆ ಸಹೋದರರು ಯೋಗ್ಯತಾಪತ್ರಿಕೆಯನ್ನು ಬರೆದುಕೊಟ್ಟರು. ಅವನು ಹೋಗಿ, ಯೇಸುವೇ ಕ್ರಿಸ್ತನೆಂದು ಶಾಸ್ತ್ರಾಧಾರದಿಂದ ತೋರಿಸಿಕೊಟ್ಟು, ಎಲ್ಲರ ಮುಂದೆ ಬಲವಾಗಿ ಯೆಹೂದ್ಯರನ್ನು ಖಂಡಿಸಿ ದೇವರ ಕೃಪೆಯಿಂದ ನಂಬಿದ್ದವರಿಗೆ ಬಹಳ ಸಹಾ ಯಮಾಡಿದನು.

ಪೌಲನು ಎಫೆಸಕ್ಕೆ ಬಂದು, ಯೋಹಾನನ ಶಿಷ್ಯರಿಗೆ ಪವಿತ್ರಾತ್ಮವರದ ವಿಷಯದಲ್ಲಿ ಬೋಧಿಸಿದ್ದು.

**19** ಅಪೊಲ್ಲೋಸನು ಕೊರಿಂಥದಲ್ಲಿದ್ದಾಗ ಪೌಲನು ಮಲೆನಾಡಿನಲ್ಲಿ ಸಂಚಾರಮಾಡಿ
2 ಎಫೆಸಕ್ಕೆ ಬಂದು ಕೆಲವು ಮಂದಿ ಶಿಷ್ಯರನ್ನು ಕಂಡು—ನೀವು ನಂಬಿದಾಗ ಪವಿತ್ರಾತ್ಮ ವರವನ್ನು ಹೊಂದಿದಿರೋ ಎಂದು ಅವರನ್ನು ಕೇಳಲು, ಅವರು ಅವನಿಗೆ—ಇಲ್ಲ, ಪವಿ
3 ತ್ರಾತ್ಮವರವು[1] ಉಂಟೆಂಬುವದನ್ನೇ ನಾವು ಕೇಳಲಿಲ್ಲ ಅಂದರು. ಅವನು—ನೀವು ಯಾವ ದನ್ನು ನಂಬಿ ದೀಕ್ಷಾಸ್ನಾನಮಾಡಿಸಿಕೊಂಡಿರಿ ಎಂದು ಕೇಳಿದ್ದಕ್ಕೆ ಅವರು—ಯೋಹಾನನ
4 ಬೋಧನೆಯನ್ನು ನಂಬಿ ದೀಕ್ಷಾಸ್ನಾನ ಮಾಡಿಸಿಕೊಂಡೆವು ಅಂದರು. ಅದಕ್ಕೆ ಪೌಲನು— ಯೋಹಾನನು ದೇವರ ಕಡೆಗೆ ತಿರುಗಿಕೊಂಡವರಿಗೆ ದೀಕ್ಷಾಸ್ನಾನಮಾಡಿಸಿ, ತನ್ನ ಹಿಂದೆ ಬರು ವಾತನಲ್ಲಿ ಅಂದರೆ ಯೇಸುವಿನಲ್ಲಿ ನಂಬಿಕೆಯಿಡಬೇಕೆಂಬದಾಗಿ ಜನರಿಗೆ ಹೇಳಿದನು
5 ಎಂದು ಹೇಳಲು, ಅವರು ಆ ಮಾತನ್ನು ಕೇಳಿ ಕರ್ತನಾದ ಯೇಸುವಿನ ಹೆಸರಿನಲ್ಲಿ
6 ದೀಕ್ಷಾಸ್ನಾನ ಮಾಡಿಸಿಕೊಂಡರು. ಪೌಲನು ಅವರ ಮೇಲೆ ಕೈಗಳನ್ನಿಡಲು, ಪವಿತ್ರಾತ್ಮ

[1] ಅಥವಾ, ಪವಿತ್ರಾತ್ಮವು; ಯೋಹಾನ ೭, ೩೯ ನೋಡು.

ವರವು ಅವರ ಮೇಲೆ ಬಂತು. ಅವರು ನಾನಾ ಭಾಷೆಗಳನ್ನಾಡಿದರು, ಪ್ರವಾದಿಸಿದರು. ಅವರು ಸುಮಾರು ಹನ್ನೆರಡು ಮಂದಿ ಗಂಡಸರು. 7

**ಪೌಲನು ಎಫೆಸದಲ್ಲಿ ಸುಮಾರು ಮೂರು ವರುಷ ಇದ್ದು ಸುವಾರ್ತೆಯನ್ನು ಪ್ರಕಟಿಸಿ, ಅದ್ಭುತಕಾರ್ಯಗಳನ್ನು ನಡಿಸಿದ್ದು; ದೇಮೇತ್ರಿಯನೆಂಬ ಅಕ್ಕಸಾಲಿಗನಿಂದ ಗಲಬೆ ಉಂಟಾದದ್ದು.**

ಆ ಪಟ್ಟಣದಲ್ಲಿ ಪೌಲನು ಸಭಾಮಂದಿರದೊಳಗೆ ಹೋಗಿ ಮೂರು ತಿಂಗಳು ಅಲ್ಲೇ 8 ದೇವರ ರಾಜ್ಯದ ವಿಷಯಗಳನ್ನು ಕುರಿತು ವಾದಿಸುತ್ತಾ ಜನರನ್ನು ಒಡಂಬಡಿಸುತ್ತಾ ಧೈರ್ಯದಿಂದ ಮಾತಾಡಿದನು. ಕೆಲವರು ತಮ್ಮ ಮನಸ್ಸುಗಳನ್ನು ಕಠಿಣ ಮಾಡಿ 9 ಕೊಂಡು ಒಡಂಬಡದೆ, ಗುಂಪು ಕೂಡಿದ ಜನರ ಮುಂದೆ ಈ ಮಾರ್ಗವನ್ನು ಕೆಟ್ಟದ್ದೆಂದು ಹೇಳಲು, ಅವನು ಅವರನ್ನು ಬಿಟ್ಟುಹೋಗಿ, ಶಿಷ್ಯರನ್ನು ಬೇರೆ ಮಾಡಿ, ತುರನ್ನನ ತರ್ಕ ಶಾಲೆಯಲ್ಲಿ ಪ್ರತಿದಿನವೂ ವಾದಿಸಿದನು. ಇದು ಎರಡು ವರುಷಗಳ ವರೆಗೂ ನಡೆದ್ದ 10 ರಿಂದ ಆಸ್ಯಸೀಮೆಯಲ್ಲಿ ವಾಸವಾಗಿದ್ದ ಯೆಹೂದ್ಯರೂ ಗ್ರೀಕರೂ ಎಲ್ಲರೂ ಕರ್ತನ ವಾಕ್ಯವನ್ನು ಕೇಳಿದರು.

ದೇವರು ಪೌಲನ ಕೈಯಿಂದ ವಿಶೇಷವಾದ ಮಹತ್ಕಾರ್ಯಗಳನ್ನು ನಡಸುತ್ತಾ 11 ಇದ್ದದರಿಂದ, ಜನರು ಅವನ ಮೈಮೇಲಿನಿಂದ ಕೈವಸ್ತ್ರಗಳನ್ನೂ ಉಡಿವಸ್ತ್ರಗಳನ್ನೂ 12 ತಂದು ರೋಗಿಗಳ ಮೇಲೆ ಹಾಕಲು, ಅವರವರ ರೋಗಗಳು ವಾಸಿಯಾದವು, ದೆವ್ವಗಳೂ ಬಿಟ್ಟುಹೋದವು. ದೆವ್ವಬಿಡಿಸುವವರೆನ್ನಿಸಿಕೊಂಡು ದೇಶಸಂಚಾರಿಗಳಾದ 13 ಯೆಹೂದ್ಯರಿದ್ದರು. ಅವರಲ್ಲಿ ಕೆಲವರು ದೆವ್ವಹಿಡಿದವರ ಮೇಲೆ—ಪೌಲನು ಸಾರುವ ಯೇಸುವಿನ ಆಣೆ ಎಂದು ಹೇಳಿ ಕರ್ತನಾದ ಯೇಸುವಿನ ಹೆಸರನ್ನು ಪ್ರಯೋಗ ಮಾಡುವದಕ್ಕೆ ತೊಡಗಿದರು. ಮಹಾಯಾಜಕ ಸ್ಕೇವನೆಂಬ ಒಬ್ಬ ಯೆಹೂದ್ಯನ ಏಳು 14 ಮಂದಿ ಮಕ್ಕಳು ಹಾಗೆ ಮಾಡುತ್ತಿದ್ದರು. ಆದರೆ ದೆವ್ವವು ಅವರಲ್ಲಿ ಇಬ್ಬರಿಗೆ—ಯೇಸು 15 ವಿನ ಗುರುತು ನನಗುಂಟು, ಪೌಲನನ್ನೂ ಬಲ್ಲೆನು, ನೀವಾದರೆ ಯಾರು? ಎಂದು ಹೇಳಿತು; ಮತ್ತು ದೆವ್ವಹಿಡಿದಿದ್ದ ಆ ಮನುಷ್ಯನು ಅವರ ಮೇಲೆ ಹಾರಿ ಬಿದ್ದು ಅವರಿಬ್ಬ 16 ರನ್ನೂ ಸೋಲಿಸಿ ಬಲಾತ್ಕರಿಸಿದ್ದರಿಂದ ಅವರು ಬೆತ್ತಲೆಯಾಗಿಯೂ ಗಾಯವುಳ್ಳವ ರಾಗಿಯೂ ಆ ಮನೆಯೊಳಗಿಂದ ಓಡಿಹೋದರು. ಈ ಸಂಗತಿಯು ಎಫೆಸದಲ್ಲಿ ವಾಸ 17 ವಾಗಿದ್ದ ಎಲ್ಲಾ ಯೆಹೂದ್ಯರಿಗೂ ಗ್ರೀಕರಿಗೂ ತಿಳಿದುಬಂದಾಗ, ಅವರೆಲ್ಲರಿಗೆ ಭಯ ಹಿಡಿಯಿತು. ಮತ್ತು ಕರ್ತನಾದ ಯೇಸುವಿನ ಹೆಸರು ಪ್ರಖ್ಯಾತಿಗೆ ಬಂತು. ಆತನನ್ನು 18 ನಂಬಿದವರಲ್ಲಿ ಅನೇಕರು ಬಂದು ತಮ್ಮ ಕೃತ್ಯಗಳನ್ನು ಒಪ್ಪಿಕೊಂಡು ತಿಳಿಸಿದರು. ಇದ 19 ಲ್ಲದೆ ಮಾಟ ಮಂತ್ರಗಳನ್ನು ನಡಸಿದವರಲ್ಲಿ ಅನೇಕರು ತಮ್ಮ ಪುಸ್ತಕಗಳನ್ನು ತಂದು ಕೂಡಿಸಿ ಎಲ್ಲರ ಮುಂದೆ ಸುಟ್ಟುಬಿಟ್ಟರು. ಅವುಗಳ ಕ್ರಯವನ್ನು ಲೆಕ್ಕಮಾಡಿ, ಐವತ್ತು ಸಾವಿರ ಬೆಳ್ಳೀ ನಾಣ್ಯ[1] ಆಯಿತೆಂದು ತಿಳಿದುಕೊಂಡರು. ಈ ರೀತಿಯಾಗಿ ಕರ್ತನ 20 ವಾಕ್ಯವು ಬಹಳವಾಗಿ ಹೆಚ್ಚುತ್ತಾ ಪ್ರಬಲವಾಯಿತು.

---

[1] ಅಂದರೆ, ಸುಮಾರು ಇಪ್ಪತ್ತೈದು ಸಾವಿರ ರೂಪಾಯಿ.

21 ಈ ಸಂಗತಿಗಳು ಆದ ಮೇಲೆ, ಪೌಲನು ತಾನು ಮಕೆದೋನ್ಯದಲ್ಲಿಯೂ ಅಖಾಯದ ಲ್ಲಿಯೂ ಸಂಚಾರವಾಡಿ ಯೆರೂಸಲೇಮಿಗೆ ಹೋಗಬೇಕೆಂದು ಮನಸ್ಸಿನಲ್ಲಿ ಉದ್ದೇಶಿಸಿ,
22 ಅಲ್ಲಿಗೆ ಹೋದ ಮೇಲೆ ರೋಮಾಪುರವನ್ನು ಸಹ ನೋಡಬೇಕೆಂದು ಹೇಳಿದನು. ಆದರೆ ಅವನು ತನಗೆ ಸೇವೆ ಮಾಡುವವರಲ್ಲಿ ಇಬ್ಬರಾದ ತಿಮೊಥೆಯನನ್ನೂ ಎರಸ್ತನನ್ನೂ ಮಕೆ ದೋನ್ಯಕ್ಕೆ ಕಳುಹಿಸಿ, ತಾನು ಆಸ್ಯಸೀಮೆಯಲ್ಲಿ ಕೆಲವು ಕಾಲ ನಿಂತನು.
23 ಆ ಕಾಲದಲ್ಲಿ ಈ ನೂತನ ಮಾರ್ಗದ ವಿಷಯವಾಗಿ ಬಹಳ ಗಲಬೆ ಹುಟ್ಟಿತು.
24 ಹ್ಯಾಗಂದರೆ ದೇಮೇತ್ರಿಯನೆಂಬ ಒಬ್ಬ ಅಕ್ಕಸಾಲಿಗನು ಬೆಳ್ಳಿಯಿಂದ ಅರ್ತೆಮಿದೇವಿಯ ಗುಡಿಯಂತೆ ಸಣ್ಣಸಣ್ಣ ಗುಡಿಗಳನ್ನು ಮಾಡಿಸುವವನಾಗಿದ್ದು, ಆ ಕಸಬಿನವರಿಗೆ ಬಹಳ
25 ಕೆಲಸ ಕೊಡುತ್ತಿದ್ದನು. ಅವನು ಅವರನ್ನೂ ಆ ಕಸಬಿನ ಸಂಬಂಧವಾದ ಕೆಲಸದವ ರನ್ನೂ ಒಟ್ಟಿಗೆ ಕರಸಿ ಅವರಿಗೆ—ಜನರೇ, ಈ ಕೆಲಸದಿಂದ ನಮಗೆ ಐಶ್ವರ್ಯ ಉಂಟಾಗು
26 ತ್ತದೆಂದು ನೀವು ಬಲ್ಲಿರಿ. ಆದರೆ ಕೈಯಿಂದ ಮಾಡಿದ ಮೂರ್ತಿಗಳು ದೇವರುಗಳಲ್ಲ ವೆಂದು ಆ ಪೌಲನು ಹೇಳಿ ಎಫೆಸದಲ್ಲಿ ಮಾತ್ರವಲ್ಲದೆ ಸ್ವಲ್ಪಕಡಿಮೆ ಆಸ್ಯಸೀಮೆಯಲ್ಲೆಲ್ಲಾ ಬಹಳ ಜನರನ್ನು ಒಡಂಬಡಿಸಿ ತಿರುಗಿಸಿಬಿಟ್ಟಿದ್ದಾನೆ ಎಂಬುವದನ್ನು ನೀವು ನೋಡುತ್ತೀರಿ,
27 ಕೇಳುತ್ತೀರಿ. ಇದರಿಂದ ನಮ್ಮ ಉದ್ಯೋಗಕ್ಕೆ ಅಪಕೀರ್ತಿ ಬರುವ ಹಾಗಿರುವದಲ್ಲದೆ ಅರ್ತೆಮಿ ಮಹಾದೇವಿಯ ದೇವಸ್ಥಾನವು ಗಣನೆಗೆ ಬಾರದೆಹೋಗುವ ಹಾಗೆಯೂ ಎಲ್ಲಾ ಆಸ್ಯಸೀಮೆಯೂ ಲೋಕವೂ ಪೂಜಿಸುವ ಈ ದೇವಿಯ ವೈಭವಕ್ಕೆ ಹಾನಿ ಬರುವ
28 ಹಾಗೆಯೂ ಗಂಡಾಂತರವುಂಟೆಂದು ಹೇಳಿದನು. ಅವರು ಈ ಮಾತುಗಳನ್ನು ಕೇಳಿ ಕೋಪಾಕ್ರಾಂತರಾಗಿ—ಎಫೆಸದವರ ಅರ್ತೆಮಿದೇವಿ ಮಹಾದೇವಿ ಎಂದು ಆರ್ಭಟಿಸಿ
29 ದರು. ಆಗ ಊರೆಲ್ಲಾ ಗಲಿಬಿಲಿಯಾಯಿತು. ಪ್ರಯಾಣದಲ್ಲಿ ಪೌಲನಿಗೆ ಜೊತೆಯವ ರಾಗಿದ್ದ ಮಕೆದೋನ್ಯದ ಗಾಯನನ್ನೂ ಅರಿಸ್ತಾರ್ಕನನ್ನೂ ಜನರು ಹಿಡಿದುಕೊಂಡು
30 ಒಗ್ಗಟ್ಟಾಗಿ ನಾಟಕಶಾಲೆಯೊಳಗೆ ನುಗ್ಗಿದರು. ಪೌಲನು ಜನರೊಳಗೆ ಹೋಗಬೇಕೆಂದಿ
31 ದ್ದಾಗ ಶಿಷ್ಯರು ಅವನನ್ನು ಬಿಡಲಿಲ್ಲ. ಇದಲ್ಲದೆ ಆಸ್ಯಸೀಮೆಯ ಅಧಿಕಾರಿಗಳಲ್ಲಿ ಕೆಲ ವರು ಅವನಿಗೆ ಸ್ನೇಹಿತರಾಗಿದ್ದದರಿಂದ ಅವನ ಬಳಿಗೆ ಜನರನ್ನು ಕಳುಹಿಸಿ—ನೀನು ನಾಟಕ ಶಾಲೆಯೊಳಗೆ ಹೋಗಿ ನಿನ್ನನ್ನು ಅಪಾಯಕ್ಕೆ ಗುರಿಮಾಡಿಕೊಳ್ಳಬೇಡ ಎಂದು ಬೇಡಿ
32 ಕೊಂಡರು[1]. ಸಭೆಯು ಗಲಿಬಿಲಿಯಾಯಿತು, ಮತ್ತು ಹೆಚ್ಚಾದ ಜನರಿಗೆ ತಾವು ಕೂಡಿ ಬಂದಿದ್ದ ಕಾರಣವು ಗೊತ್ತಿರಲಿಲ್ಲ. ಕೆಲವರು ಒಂದು ಬಗೆಯಾಗಿ ಮತ್ತೆ ಕೆಲವರು
33 ಇನ್ನೊಂದು ಬಗೆಯಾಗಿ ಕೂಗುತ್ತಿದ್ದರು. ಯೆಹೂದ್ಯರು ಅಲೆಕ್ಸಾಂದ್ರನನ್ನು ಮುಂದಕ್ಕೆ ನೂಕಲು ಗುಂಪಿನಲ್ಲಿ ಕೆಲವರು ಅವನಿಗೆ ಸೂಚನೆ ಕೊಟ್ಟರು. ಆಗ ಅಲೆಕ್ಸಾಂದ್ರನು
34 ಕೈಸನ್ನೆಮಾಡಿ, ಕೂಡಿದ್ದ ಜನರಿಗೆ ಪ್ರತಿವಾದ ಮಾಡಬೇಕೆಂದಿದ್ದನು. ಆದರೆ ಅವನು ಯೆಹೂದ್ಯನೆಂದು ತಿಳಿದಾಗ, ಎಲ್ಲರೂ ಒಂದೇ ಶಬ್ದದಿಂದ—ಎಫೆಸದವರ ಅರ್ತೆಮಿದೇವಿ
35 ಮಹಾದೇವಿ ಎಂದು ಎರಡು ತಾಸು ಕೂಗಿದರು. ಕಡೆಗೆ ಪಟ್ಟಣದ ಯಜಮಾನನು ಜನರ ಗುಂಪನ್ನು ಸಮಾಧಾನಪಡಿಸಿ—ಎಫೆಸದವರೇ, ಎಫೆಸಪಟ್ಟಣದವರು ಅರ್ತೆಮಿ

---

[1] ೨ ಕೊರಿಂಥ. ೧, ೮—೧೧ ನೋಡು.

ಮಹಾದೇವಿಯ ದೇವಸ್ಥಾನಕ್ಕೂ ಆಕಾಶದಿಂದ ಬಿದ್ದ ಆಕೆಯ ಮೂರ್ತಿಗೂ ಪಾಲಕ ರಾಗಿದ್ದಾರೆಂಬುವದನ್ನು ತಿಳಿಯದಿರುವ ಮನುಷ್ಯನು ಇದ್ದಾನೇ? ಈ ಸಂಗತಿ ಅಲ್ಲವೆನ್ನು 36 ವದಕ್ಕೆ ಯಾರಿಂದಲೂ ಆಗದಿರುವದರಿಂದ, ನೀವು ಶಾಂತಿಯಿಂದಿರಬೇಕು; ದುಡುಕಿನಿಂದ ಏನೂ ಮಾಡಬಾರದು. ನೀವು ತಂದಿರುವ ಈ ಮನುಷ್ಯರು ದೇವಸ್ಥಾನದಲ್ಲಿ ಕಳ್ಳತನ 37 ಮಾಡುವವರಲ್ಲ, ನಮ್ಮ ದೇವಿಯನ್ನು ದೂಷಿಸುವವರೂ ಅಲ್ಲ. ಹೀಗಿರುವದರಿಂದ 38 ದೇಮೇತ್ರಿಯನಿಗೂ ಅವನ ಪಕ್ಷವನ್ನು ಹಿಡಿದಿರುವ ಕಸಬಿನವರಿಗೂ ಯಾವನ ಮೇಲಾ ದರೂ ಒಂದು ವ್ಯವಹಾರವಿದ್ದರೆ, ನ್ಯಾಯಸ್ಥಾನಗಳುಂಟು, ಅಧಿಪತಿಗಳಿದ್ದಾರೆ, ಒಬ್ಬರ ಮೇಲೊಬ್ಬರು ವ್ಯಾಜ್ಯಮಾಡಿಕೊಳ್ಳಲಿ. ಏನಾದರೂ ಹೆಚ್ಚು ವಿಚಾರಣೆ ಬೇಕಾದರೆ, 39 ಅದು ನ್ಯಾಯವಾಗಿ ನೆರೆದ ಸಭೆಯಲ್ಲಿ ತೀರ್ಮಾನಿಸಲ್ಪಡಬೇಕು. ಈ ದಿನದಲ್ಲಿ ನ್ಯಾಯ 40 ವಾದ ಕಾರಣವಿಲ್ಲದೆ ನೆರೆದ ಕೂಟದ ವಿಷಯದಲ್ಲಿ ಇದು ಒಂದು ದಂಗೆ ಎಂಬದಾಗಿ ನಮ್ಮ ಮೇಲೆ ತಪ್ಪು ಹೊರಿಸುವದಕ್ಕೆ ಆಸ್ಪದವಾಯಿತು. ಈ ದೊಂಬಿಯನ್ನು ಕುರಿತು ವಿಚಾರಣೆ ನಡೆದರೆ, ನಮ್ಮಿಂದ ಉತ್ತರ ಕೊಡುವದಕ್ಕೆ ಆಗುವದೇ ಇಲ್ಲ ಎಂದು ಹೇಳಿ ದನು. ಈ ಮಾತುಗಳನ್ನು ಹೇಳಿ ಸಭೆಯನ್ನು ಮುರಿದನು. 41

ಪೌಲನು ಮಕೆದೋನ್ಯಕ್ಕೂ ಗ್ರೀಸ್‌ದೇಶಕ್ಕೂ ಹೋದ ಮೇಲೆ ತ್ರೋವಕ್ಕೆ ಬಂದದ್ದು;
ಅಲ್ಲಿ ನಡೆದ ಯೂತಿಖನ ಸಂಗತಿಯು.

ಗದ್ದಲವು ನಿಂತ ತರುವಾಯ ಪೌಲನು ಶಿಷ್ಯರನ್ನು ಕೂಡ ಕರೆಸಿ, ಧೈರ್ಯಗೊಳ್ಳಿಸಿ, **20** ಅವರ ಅಪ್ಪಣೆ ತೆಗೆದುಕೊಂಡು ಮಕೆದೋನ್ಯಕ್ಕೆ ಹೊರಟನು. ಆ ಸೀಮೆಯಲ್ಲಿ 2 ಸಂಚಾರಮಾಡಿ ಅಲ್ಲಿಯವರನ್ನು ಅನೇಕ ಮಾತುಗಳಿಂದ ಧೈರ್ಯಪಡಿಸಿ ಗ್ರೀಸ್ ದೇಶಕ್ಕೆ ಬಂದನು. ಅಲ್ಲಿ ಮೂರು ತಿಂಗಳು ಕಳೆದ ಮೇಲೆ, ಸುರ್ಯ ದೇಶಕ್ಕೆ ಸಮುದ್ರಮಾರ್ಗ 3 ವಾಗಿ ಹೋಗಬೇಕೆಂದಿದ್ದಾಗ ಅವನಿಗೆ ವಿರುದ್ಧವಾಗಿ ಯೆಹೂದ್ಯರಲ್ಲಿ ಒಳಸಂಚು ಹುಟ್ಟಿ ದ್ದರಿಂದ, ಅವನು ಮಕೆದೋನ್ಯದ ಮೇಲೆ ಹಿಂತಿರುಗಿ ಹೋಗುವದಕ್ಕೆ ತೀರ್ಮಾನ ಮಾಡಿದನು. ಪುರ್ರನ ಮಗನಾದ ಬೆರೋಯಪಟ್ಟಣದ ಸೋಪತ್ರನೂ ಥೆಸಲೊನೀಕದವ 4 ರಲ್ಲಿ ಅರಿಸ್ತಾರ್ಕನೂ ಸೆಕುಂದನೂ ದೆರ್ಬೆಪಟ್ಟಣದ ಗಾಯನೂ ತಿಮೊಥೆಯನೂ ಆಸ್ಯ ಸೀಮೆಯವರಲ್ಲಿ ತುಖಿಕನೂ ತ್ರೊಫಿಮನೂ ಆಸ್ಯಸೀಮೆಯ ವರೆಗೆ ಅವನ ಜೊತೆಯಲ್ಲಿ ಹೋದರು. ಇವರು ಮುಂಚಿತವಾಗಿ ಹೋಗಿ ನಮಗೋಸ್ಕರ ತ್ರೋವದಲ್ಲಿ ಕಾದು 5 ಕೊಂಡರು. ಹುಳಿಯಿಲ್ಲದ ರೊಟ್ಟಿಯ ಹಬ್ಬದ ದಿವಸಗಳನ್ನು ಪೂರೈಸಿದ ಮೇಲೆ ನಾವು 6 ಫಿಲಿಪ್ಪಿಯಿಂದ ಹೊರಟು ಹಡಗನ್ನು ಹತ್ತಿ ಐದು ದಿವಸದಲ್ಲಿ ತ್ರೋವದಲ್ಲಿ ಬಂದು ಅವ ರನ್ನು ಸೇರಿದೆವು. ಅಲ್ಲಿ ಏಳು ದಿವಸಗಳಿದ್ದೆವು.

ವಾರದ ಮೊದಲನೇ ದಿವಸದಲ್ಲಿ ನಾವು ರೊಟ್ಟಿಮುರಿಯುವ ಸಂಸ್ಕಾರವನ್ನು ಮಾಡು 7 ವದಕ್ಕೆ ಕೂಡಿಬಂದಾಗ, ಮರುದಿನ ಹೊರಡಬೇಕೆಂದಿದ್ದ ಪೌಲನು ಅವರಿಗೆ ಪ್ರಸಂಗಿ ಸುತ್ತಾ ಸರಿಹೊತ್ತಿನ ವರೆಗೂ ಉಪನ್ಯಾಸವನ್ನು ನಡಿಸಿದನು. ನಾವು ಕೂಡಿದ್ದ 8 ಮೇಲಂತಸ್ತಿನಲ್ಲಿ ಅನೇಕ ದೀಪಗಳಿದ್ದವು. ಯೂತಿಖನೆಂಬ ಒಬ್ಬ ಯೌವನಸ್ಥನು ಕಿಟಿಕಿ 9

ಯಲ್ಲಿ ಕೂತುಕೊಂಡು ಗಾಢನಿದ್ರೆಯಿಂದ ತೂಕಡಿಸಿದನು. ಪೌಲನು ಇನ್ನೂ ಪ್ರಸಂಗ ಮಾಡುತ್ತಾ ಇದ್ದಾಗ ಆ ಯೌವನಸ್ಥನು, ನಿದ್ರೆಯಿಂದ ತೂಕಡಿಕೆ ಹೆಚ್ಚಾಗಿ, ಮೂರನೇ
10 ಅಂತಸ್ತಿನಿಂದ ಕೆಳಕ್ಕೆ ಬಿದ್ದನು; ಅವನನ್ನು ಎತ್ತಿನೋಡುವಾಗ ಸತ್ತಿದ್ದನು. ಆದರೆ ಪೌಲನು ಇಳಿದುಹೋಗಿ ಅವನ ಮೇಲೆ ಬಿದ್ದು ತಬ್ಬಿಕೊಂಡು—ಗೋಳಾಡಬೇಡಿರಿ,
11 ಅವನ ಪ್ರಾಣ ಅವನಲ್ಲಿ ಅದೆ ಎಂದು ಹೇಳಿದನು. ಆಗ ಅವನು ಮೇಲಕ್ಕೆ ಹೋಗಿ, ರೊಟ್ಟೀಮುರಿದು ಊಟಾಮಾಡಿ, ಬಹಳ ಹೊತ್ತು ಬೆಳಗಾಗುವ ತನಕ ಸಲ್ಲಾಪಮಾಡಿ
12 ಹಾಗೆ ಹೊರಟುಹೋದನು. ಅವರು ಜೀವಿತನಾದ ಆ ಹುಡುಗನನ್ನು ಕರೆದುಕೊಂಡು ಬರಲು ಅವರಿಗೆ ಬಹಳ ಆದರಣೆ ಉಂಟಾಯಿತು.

ಪೌಲನು ಎಫೆಸ ಪಟ್ಟಣದ ಸಭೇಹಿರಿಯರನ್ನು ಮಿಲೇತಕ್ಕೆ ಕರಿಸಿ ಅಪ್ಪಣೆತೆಗೆದುಕೊಳ್ಳುವಲ್ಲಿ ಪ್ರಸಂಗಮಾಡಿದ್ದು.

13 ನಾವು ಮೊದಲು ಹೋಗಿ ಅಸ್ಸೊಸಿನಲ್ಲಿ ಪೌಲನನ್ನು ಹತ್ತಿಸಿಕೊಳ್ಳಬೇಕೆಂದು ಅಲ್ಲಿಗೆ ಸಮುದ್ರಪ್ರಯಾಣ ಮಾಡಿದೆವು. ಪೌಲನು ತಾನು ಕಾಲುನಡೆಯಾಗಿ ಹೋಗ
14 ಬೇಕೆಂದು ಹಾಗೆಯೇ ನಮಗೆ ಅಪ್ಪಣೆ ಮಾಡಿದ್ದನು. ಅಸ್ಸೊಸಿನಲ್ಲಿ ಅವನು ನಮ್ಮನ್ನು
15 ಕೂಡಿಕೊಂಡಾಗ, ನಾವು ಅವನನ್ನು ಹತ್ತಿಸಿಕೊಂಡು ಮಿತಿಲೇನೆಗೆ ಬಂದೆವು. ಅಲ್ಲಿಂದ ಹೊರಟು ಮರುದಿನ ಖೀಯೊಸ್‌ದ್ವೀಪಕ್ಕೆದುರಾಗಿ ಬಂದು, ಅದರ ಮರುದಿನ ಸಾಮೊಸಿನ
16 ಹತ್ತರ ಬಂದೆವು[1]. ಅದರ ಮರುದಿನ ಮಿಲೇತಕ್ಕೆ ಸೇರಿದೆವು. ಪೌಲನು ತನಗೆ ಸಾಧ್ಯ ವಾದರೆ ಪಂಚಾಶತ್ತಮ ದಿವಸದ ಹಬ್ಬಕ್ಕೆ ಯೆರೂಸಲೇಮಿನಲ್ಲಿರಬೇಕೆಂದು ಅವಸರ ಪಡುತ್ತಾ ಇದ್ದದರಿಂದ, ಆಸ್ಯಸೀಮೆಯಲ್ಲಿ ಕಾಲವನ್ನು ಕಳೆಯುವದಕ್ಕೆ ಮನಸ್ಸಿಲ್ಲದೆ ಎಫೆಸಪಟ್ಟಣವನ್ನು ದಾಟಿಹೋಗಬೇಕೆಂದು ತೀರ್ಮಾನಿಸಿಕೊಂಡಿದ್ದನು.
17 ಅವನು ಮಿಲೇತದಿಂದ ಎಫೆಸಕ್ಕೆ ಹೇಳಿಕಳುಹಿಸಿ ಅಲ್ಲಿಯ ಸಭೆಯ ಹಿರಿಯರನ್ನು
18 ಕರಿಸಿದನು. ಅವರು ಅವನ ಬಳಿಗೆ ಬಂದಾಗ, ಅವರಿಗೆ ಅವನು ಹೇಳಿದ್ದೇನಂದರೆ—
ನಾನು ಆಸ್ಯಸೀಮೆಯಲ್ಲಿ ಕಾಲಿಟ್ಟ ಮೊದಲನೇ ದಿವಸದಿಂದ ನಿಮ್ಮ ಮಧ್ಯೆ ಎಲ್ಲಾ
19 ಕಾಲದಲ್ಲಿಯೂ ಹ್ಯಾಗೆ ನಡಕೊಂಡೆನೆಂಬುವದನ್ನು ನೀವೇ ಬಲ್ಲಿರಿ. ನಾನು ಬಹು ನಮ್ರತೆಯಿಂದಲೂ ಕಣ್ಣೀರಿನಿಂದಲೂ ಕರ್ತನ ಸೇವೆ ಮಾಡುತ್ತಿದ್ದೆನು. ಇದರಲ್ಲಿ
20 ಯೆಹೂದ್ಯರ ಒಳಸಂಚುಗಳಿಂದ ಸಂಭವಿಸಿದ ಕಷ್ಟಗಳನ್ನು ಸಹಿಸುತ್ತಿದ್ದೆನು. ನಾನು ನಿಮಗೆ ಹಿತಕರವಾದದ್ದೆಲ್ಲವನ್ನು ಹೇಳುವದಕ್ಕೂ ಸಭೆಯಲ್ಲಿಯೂ ಮನೆಮನೆಯಲ್ಲಿಯೂ
21 ಉಪದೇಶಿಸುವದಕ್ಕೂ ಹಿಂತೆಗಿಯದೆ, ಯೆಹೂದ್ಯರಿಗೂ ಗ್ರೀಕರಿಗೂ ದೇವರ ಕಡೆಗೆ ತಿರುಗಬೇಕೆಂತಲೂ ನಮ್ಮ ಕರ್ತನಾದ ಯೇಸುವಿನ ಮೇಲೆ ನಂಬಿಕೆಯಿಡಬೇಕೆಂತಲೂ
22 ಖಂಡಿತವಾಗಿ ಬೋಧಿಸುವವನಾಗಿದ್ದೆನು; ಇದೆಲ್ಲಾ ನಿಮಗೇ ತಿಳಿದದೆ. ಇಗೋ, ನಾನು ಈಗ ಆತ್ಮನಿರ್ಬಂಧವುಳ್ಳವನಾಗಿ ಯೆರೂಸಲೇಮಿಗೆ ಹೋಗುತ್ತೇನೆ. ಅಲ್ಲಿ
23 ನನಗೆ ಏನು ಸಂಭವಿಸುವದೋ ನಾನರಿಯೆ. ನಿನಗೆ ಬೇಡಿಗಳೂ ಸಂಕಟಗಳೂ ಕಾದು ಕೊಂಡವೆ ಎಂದು ಪವಿತ್ರಾತ್ಮನು ಎಲ್ಲಾ ಪಟ್ಟಣಗಳಲ್ಲಿಯೂ ನನಗೆ ಖಂಡಿತವಾಗಿ ಹೇಳು

[1] ಕೆಲವು ಪ್ರತಿಗಳಲ್ಲಿ—ತ್ರೋಗುಲ್ಯದಲ್ಲಿ ಸ್ವಲ್ಪ ಇದ್ದು ಎಂಬ ಹೆಚ್ಚು ಮಾತು ಉಂಟು.

ತ್ತಾನೆ; ಇಷ್ಟುಮಾತ್ರ ಬಲ್ಲೆನು. ಆದರೆ ಪ್ರಾಣವನ್ನು ಉಳಿಸಿಕೊಳ್ಳುವದೇ ವಿಶೇಷ 24
ವೆಂದು ನಾನು ಎಣಿಸುವದಿಲ್ಲ. ದೇವರ ಕೃಪೆಯ ವಿಷಯವಾದ ಸುವಾರ್ತೆಯನ್ನು
ಆಸಕ್ತಿಯಿಂದ ಪ್ರಕಟಿಸಬೇಕೆಂಬದಾಗಿ ಕರ್ತನಾದ ಯೇಸುವಿನಿಂದ ನಾನು ಹೊಂದಿರುವ
ಸೇವೆಯೆಂಬ ಓಟವನ್ನು ಕಡೆಗಾಣಿಸುವದೊಂದೇ ನನ್ನ ಅಪೇಕ್ಷೆ. ಇಗೋ, ಇಷ್ಟು 25
ದಿವಸ ನಿಮ್ಮಲ್ಲಿ ಸಂಚಾರಮಾಡಿ ದೇವರ ರಾಜ್ಯವನ್ನು ಸಾರಿದವನಾದ ನನ್ನ ಮುಖವನ್ನು
ಇನ್ನು ಮೇಲೆ ನಿಮ್ಮಲ್ಲಿ ಒಬ್ಬರೂ ಕಾಣುವದಿಲ್ಲವೆಂದು ಬಲ್ಲೆನು. ಆದಕಾರಣ ನಾನು 26
ಈ ಹೊತ್ತು ಪ್ರಮಾಣವಾಗಿ ಹೇಳುತ್ತೇನೆ, ನಿಮ್ಮಲ್ಲಿ ಯಾರಾದರೂ ನಾಶವಾದರೆ ಅದು
ನನ್ನ ದೋಷವಲ್ಲ. ಯಾಕಂದರೆ ಒಂದನ್ನೂ ಮರೆಮಾಡದೆ ದೇವರ ಸಂಕಲ್ಪವನ್ನೆಲ್ಲಾ 27
ನಿಮಗೆ ತಿಳಿಸಿದೆನು. ದೇವರು[1] ಸ್ವರಕ್ತದಿಂದ ಸಂಪಾದಿಸಿಕೊಂಡ ಸಭೆಯನ್ನು ಪರಿಪಾಲಿ 28
ಸುವದಕ್ಕಾಗಿ ಪವಿತ್ರಾತ್ಮನು ನಿಮ್ಮನ್ನೇ ಆ ಹಿಂಡಿನಲ್ಲಿ ಅಧ್ಯಕ್ಷರಾಗಿ ಇಟ್ಟಿರುವದರಿಂದ
ನಿಮ್ಮ ವಿಷಯದಲ್ಲಿಯೂ ಎಲ್ಲಾ ಹಿಂಡಿನ ವಿಷಯದಲ್ಲಿಯೂ ಎಚ್ಚರಿಕೆಯಾಗಿರಿ. ನಾನು 29
ಹೋದ ಮೇಲೆ ಕ್ರೂರವಾದ ತೋಳಗಳು ನಿಮ್ಮೊಳಗೆ ಬರುವವೆಂದು ನಾನು ಬಲ್ಲೆನು;
ಅವು ಹಿಂಡನ್ನು ಕನಿಕರಿಸುವದಿಲ್ಲ. ಇದಲ್ಲದೆ ನಿಮ್ಮಲ್ಲಿಯೂ ಕೆಲವರು ಎದ್ದು ವ್ಯತ್ಯಾಸ 30
ಬೋಧನೆಗಳನ್ನು ಮಾಡಿ ಯೇಸುವಿನ ಶಿಷ್ಯರನ್ನು ತಮ್ಮ ಹಿಂದೆ ಎಳಕೊಳ್ಳುವರು.
ಆದಕಾರಣ ನಾನು ಕಣ್ಣೀರು ಸುರಿಸುತ್ತಾ ಮೂರು ವರುಷ ಹಗಲಿರುಳು ಎಡೆಬಿಡದೆ 31
ಪ್ರತಿಯೊಬ್ಬನಿಗೆ ಬುದ್ಧಿಹೇಳಿದೆನೆಂದು ನೀವು ಜ್ಞಾಪಕಮಾಡಿಕೊಂಡು ಎಚ್ಚರವಾಗಿರಿ.
ನಾನೀಗ ನಿಮ್ಮನ್ನು ಕರ್ತನಿಗೂ ಆತನ ಕೃಪಾವಾಕ್ಯಕ್ಕೂ ಒಪ್ಪಿಸಿಕೊಡುತ್ತೇನೆ. ಆತನು 32
ನಿಮ್ಮಲ್ಲಿ ಭಕ್ತಿವೃದ್ಧಿಯನ್ನುಂಟುಮಾಡುವದಕ್ಕೂ ದೇವಜನರಾದವರೆಲ್ಲರಲ್ಲಿ[2] ನಿಮಗೆ
ಹಕ್ಕನ್ನು ಅನುಗ್ರಹಿಸುವದಕ್ಕೂ ಶಕ್ತನಾಗಿದ್ದಾನೆ. ನಾನು ಯಾರ ಬೆಳ್ಳಿಭಂಗಾರವನ್ನಾ 33
ಗಲಿ ಉಡಿಗೆತೊಡಿಗೆಯನ್ನಾಗಲಿ ಬಯಸಲಿಲ್ಲ. ಈ ಕೈಗಳೇ ಕೆಲಸ ಮಾಡಿ ನನ್ನ 34
ಕೊರತೆಗಳನ್ನೂ ನನ್ನ ಜೊತೆಯಲ್ಲಿದ್ದವರ ಕೊರತೆಗಳನ್ನೂ ನೀಗಿದ್ದನ್ನು ನೀವೇ ಬಲ್ಲಿರಿ.
ಎಲ್ಲಾ ವಿಷಯಗಳಲ್ಲಿ ನಾನು ನಿಮಗೆ ಮಾದರಿ ತೋರಿಸಿದ್ದೇನೆ. ನೀವೂ ಹಾಗೆಯೇ 35
ದುಡಿದು ಬಲವಿಲ್ಲದವರಿಗೆ ಉಪಕಾರಮಾಡಬೇಕು; ಮತ್ತು—ತೆಗೆದುಕೊಳ್ಳುವದಕ್ಕಿಂತ
ಕೊಡುವದೇ ಹೆಚ್ಚಿನ ಭಾಗ್ಯವೆಂಬದಾಗಿ ಕರ್ತನಾದ ಯೇಸು ತಾನೇ ಹೇಳಿದ ಮಾತು
ಗಳನ್ನು[3] ನೆನಪಿನಲ್ಲಿಟ್ಟುಕೊಂಡಿರಬೇಕು ಅಂದನು.

ಈ ಮಾತುಗಳನ್ನು ಅವನು ಹೇಳಿದ ಮೇಲೆ ಮೊಣಕಾಲೂರಿಕೊಂಡು ಅವರೆಲ್ಲರ 36
ಸಂಗಡ ಪ್ರಾರ್ಥನೆಮಾಡಿದನು. ಆಗ ಅವರೆಲ್ಲರು ಬಹಳವಾಗಿ ಅತ್ತರು. ನೀವು 37-38
ಇನ್ನು ಮೇಲೆ ನನ್ನ ಮುಖವನ್ನು ಕಾಣುವದಿಲ್ಲವೆಂದು ಪೌಲನು ಹೇಳಿದ ಮಾತಿಗೆ
ಅವರು ವಿಶೇಷವಾಗಿ ವ್ಯಥೆಪಟ್ಟು ಅವನ ಕೊರಳನ್ನು ತಬ್ಬಿಕೊಂಡು ಅವನಿಗೆ ಮುದ್ದಿ
ಟ್ಟರು. ಆ ಮೇಲೆ ಅವರು ಅವನನ್ನು ಹಡಗಿಗೆ ಸಾಗಕಳುಹಿಸಿದರು.

---

1) ಕೆಲವು ಪ್ರತಿಗಳಲ್ಲಿ ಕರ್ತನು ಎಂದು ಬರೆದಿದೆ.

2) ಅಥವಾ, ಪ್ರತಿಷ್ಠಿತರೆಲ್ಲರಲ್ಲಿ, ಅಥವಾ ಪವಿತ್ರರಾದವರೆಲ್ಲರಲ್ಲಿ. ೨೬, ೧೮; ಎಫೆಸ. ೧, ೧೮.

3) ಮತ್ತಾಯ ೨೦, ೨೫—೨೮; ಮಾರ್ಕ ೧೦, ೪೨—೪೫; ಯೋಹಾನ ೧೩, ೧೪—೧೬.

ಪೌಲನು ಮಿಲೇತದಿಂದ ಯೆರೂಸಲೇಮಿಗೆ ಮಾಡಿದ ಪ್ರಯಾಣದಲ್ಲಿ ನಡೆದ ವೃತ್ತಾಂತ.

**21** ನಾವು ಪ್ರಯಾಸದಿಂದ ಅವರನ್ನು ಬಿಟ್ಟು ಹಡಗನ್ನು ಹತ್ತಿದ ಮೇಲೆ, ನೆಟ್ಟಗೆ ಹೋಗಿ ಕೋಸ್‍ದ್ವೀಪಕ್ಕೆ ಸೇರಿದೆವು. ಮರುದಿನ ರೋದಕ್ಕೆ ಹೋಗಿ ಅಲ್ಲಿಂದ ಪತರಕ್ಕೆ ಬಂದೆವು. 2 ಅಲ್ಲಿ ಫೊಯಿನೀಕೆಗೆ ಹೋಗುವ ಹಡಗನ್ನು ಕಂಡು, ಹತ್ತಿ, ಪ್ರಯಾಣವನ್ನು ಸಾಗಿಸಿದೆವು. 3 ಮುಂದೆ ಕುಪ್ರ ದ್ವೀಪವನ್ನು ಕಂಡು ಅದನ್ನು ಎಡಗಡೆಗೆ ಬಿಟ್ಟು ಸುರ್ಯದೇಶದ ಕಡೆಗೆ ಸಾಗಿ ತೂರ್‍ಪಟ್ಟಣಕ್ಕೆ ಬಂದು ಇಳಿದೆವು. ಯಾಕಂದರೆ ಅಲ್ಲಿ ಸರಕನ್ನು ಇಳಿಸಬೇಕಾಗಿತ್ತು. 4 ಅಲ್ಲಿ ಶಿಷ್ಯರನ್ನು ಹುಡುಕಿ ಕಂಡು, ಏಳು ದಿವಸ ನಿಂತೆವು. ಅವರು ಆತ್ಮನ ಪ್ರೇರಣೆಯಿಂದ ಪೌಲನಿಗೆ—ನೀನು ಯೆರೂಸಲೇಮಿಗೆ ಕಾಲಿಡಬೇಡವೆಂದು ಹೇಳಿದರು. 5 ಆ ದಿವಸಗಳನ್ನು ತೀರಿಸಿಕೊಂಡು ನಾವು ಹೊರಡುವಾಗ ಅವರೆಲ್ಲರೂ ಹೆಂಡರು ಮಕ್ಕಳು ಸಹಿತವಾಗಿ ಬಂದು ನಮ್ಮನ್ನು ಊರ ಹೊರಕ್ಕೆ ಸಾಗಕಳುಹಿಸಿದರು. ನಾವು ಸಮುದ್ರ 6 ತೀರದಲ್ಲಿ ಮೊಣಕಾಲೂರಿಕೊಂಡು ಪ್ರಾರ್ಥನೆಮಾಡಿ, ಒಬ್ಬರಿಗೊಬ್ಬರು ವಂದನೆಮಾಡಿ ಹಡಗನ್ನು ಹತ್ತಿದೆವು; ಅವರು ಹಿಂತಿರುಗಿ ತಮ್ಮತಮ್ಮ ಮನೆಗಳಿಗೆ ಹೋದರು.

7 ನಾವು ತೂರ್‍ಪಟ್ಟಣದಿಂದ ಹೊರಟು ಪ್ತೊಲೆಮಾಯಕ್ಕೆ ಸೇರಿ ಸಮುದ್ರಪ್ರಯಾಣವನ್ನು ಮುಗಿಸಿದೆವು. ಅಲ್ಲಿದ್ದ ಸಹೋದರರನ್ನು ವಂದಿಸಿ, ಅವರ ಬಳಿಯಲ್ಲಿ ಒಂದು 8 ದಿವಸ ಇದ್ದು, ಮರುದಿನ ಹೊರಟು ಕೈಸರೈಯಕ್ಕೆ ಬಂದು, ಸೌವಾರ್ತಿಕನಾದ ಫಿಲಿಪ್ಪನ ಮನೆಗೆ ಹೋಗಿ ಅವನ ಬಳಿಯಲ್ಲಿಯೇ ಇಳುಕೊಂಡೆವು. ಅವನು ಆ ಏಳ್ವರಲ್ಲಿ[1] 9 ಒಬ್ಬನು. ಅವನಿಗೆ ಮದುವೆಯಾಗದ ನಾಲ್ಕುಮಂದಿ ಹೆಣ್ಣುಮಕ್ಕಳಿದ್ದರು; ಅವರು 10 ಪ್ರವಾದಿಸುವವರಾಗಿದ್ದರು. ನಾವು ಅಲ್ಲಿ ಅನೇಕ ದಿವಸಗಳು ಇದ್ದ ಮೇಲೆ, ಅಗಬನೆಂಬ 11 ಒಬ್ಬ ಪ್ರವಾದಿಯು ಯೂದಾಯದಿಂದ ನಮ್ಮ ಬಳಿಗೆ ಬಂದು, ಪೌಲನ ನಡುಕಟ್ಟನ್ನು ತೆಗೆದು ತನ್ನ ಕೈಕಾಲುಗಳನ್ನು ಕಟ್ಟಿಕೊಂಡು—ಈ ನಡುಕಟ್ಟು ಯಾವನದೋ ಆ ಮನುಷ್ಯನನ್ನು ಯೆಹೂದ್ಯರು ಇದೇ ರೀತಿಯಾಗಿ ಯೆರೂಸಲೇಮಿನಲ್ಲಿ ಕಟ್ಟಿ ಅನ್ಯಜನರ ಕೈಗೆ ಒಪ್ಪಿಸಿಕೊಡುವರು, ಹೀಗೆ ಪವಿತ್ರಾತ್ಮನು ಹೇಳುತ್ತಾನೆಂಬದಾಗಿ ಹೇಳಿದನು. 12 ಆ ಮಾತನ್ನು ಕೇಳಿದಾಗ, ನಾವೂ ಆ ಸ್ಥಳದವರೂ—ನೀನು ಯೆರೂಸಲೇಮಿಗೆ ಹೋಗ 13 ಬಾರದೆಂದು ಪೌಲನನ್ನು ಬೇಡಿಕೊಂಡೆವು. ಅದಕ್ಕೆ ಪೌಲನು—ನೀವು ಅತ್ತತ್ತು ಯಾಕೆ ನನ್ನನ್ನು ಎದೆ ಒಡಿಸುತ್ತೀರಿ? ನಾನು ಕರ್ತನಾದ ಯೇಸುವಿನ ಹೆಸರಿನ ನಿಮಿತ್ತವಾಗಿ ಯೆರೂಸಲೇಮಿನಲ್ಲಿ ಬೇಡೀಹಾಕಿಸಿಕೊಳ್ಳುವದಕ್ಕೆ ಮಾತ್ರವಲ್ಲದೆ, ಸಾಯುವದಕ್ಕೂ 14 ಸಿದ್ಧವಾಗಿದ್ದೇನೆ ಅಂದನು. ಅವನು ಒಡಂಬಡದೆ ಇದ್ದದರಿಂದ, ಕರ್ತನ ಚಿತ್ತವಿದ್ದಂತೆ ಆಗಲಿ ಎಂದು ಹೇಳಿ, ನಾವು ಸುಮ್ಮಗಾದೆವು.

15 ಆ ದಿವಸಗಳಾದ ಮೇಲೆ ಸೌರಿಸಿಕೊಂಡು ಯೆರೂಸಲೇಮಿಗೆ ಹೊರಟೆವು. ಕೈಸರೈಯ 16 ದಿಂದ ಕೆಲವು ಶಿಷ್ಯರು ನಮ್ಮ ಜೊತೆಯಲ್ಲಿ ಬಂದು ನಾವು ಇಳುಕೊಳ್ಳಬೇಕಾಗಿದ್ದವನ ಮನೆಯ ತನಕ ಕರಕೊಂಡು ಹೋದರು. ಆ ಮನೆಯವನು ಆದಿಶಿಷ್ಯರಲ್ಲಿ ಒಬ್ಬನಾದ ಕುಪ್ರದೇಶದ ಮ್ನಾಸೋನನೆಂಬವನು.

[1] ೬ನೇ ಅಧ್ಯಾಯ ೫ನೇ ವಚನವನ್ನು ನೋಡಿರಿ.

**ಯೆರೂಸಲೇಮಿನ ಸಭೇಹಿರಿಯರು ಹೇಳಿದ ಆಲೋಚನೆಯನ್ನು ಅನುಸರಿಸಿ ಪೌಲನು ವಿರೋಧಿಗಳಾದ ಯೆಹೂದ್ಯಕ್ರೈಸ್ತರನ್ನು ಸಮಾಧಾನಪಡಿಸುವದಕ್ಕೆ ಪ್ರಯತ್ನ ಮಾಡಿದ್ದು.**

ನಾವು ಯೆರೂಸಲೇಮಿಗೆ ಬಂದಾಗ ಸಹೋದರರು ನಮ್ಮನ್ನು ಸಂತೋಷದಿಂದ 17
ಸೇರಿಸಿಕೊಂಡರು. ಮರುದಿನ ಪೌಲನು ನಮ್ಮನ್ನು ಕರೆದುಕೊಂಡು ಯಾಕೋಬನ 18
ಬಳಿಗೆ ಹೋದನು. ಸಭೇಹಿರಿಯರೆಲ್ಲರು ಸಹ ಬಂದರು. ಪೌಲನು ಅವರನ್ನು 19
ವಂದಿಸಿ, ತನ್ನ ಸೇವೆಯ ಮೂಲಕವಾಗಿ ದೇವರು ಅನ್ಯಜನರಲ್ಲಿ ಮಾಡಿದ್ದ ಕಾರ್ಯಗ
ಳನ್ನು ಒಂದೊಂದಾಗಿ ವಿವರಿಸಿದನು. ಅವರು ಇದನ್ನು ಕೇಳಿ ದೇವರನ್ನು ಕೊಂಡಾಡಿ 20
ದರು. ಆಗ ಅವರು ಅವನಿಗೆ ಹೇಳಿದ್ದು—ಸಹೋದರನೇ, ಯೆಹೂದ್ಯರಲ್ಲಿ ಯೇಸು
ವನ್ನು ನಂಬಿರುವವರು ಎಷ್ಟೋ ಸಾವಿರ ಮಂದಿ ಇದ್ದಾರೆಂಬುವದನ್ನು ನೋಡುತ್ತೀ
ಯಲ್ಲಾ. ಅವರೆಲ್ಲರೂ ಧರ್ಮಶಾಸ್ತ್ರದಲ್ಲಿ ಅಭಿಮಾನಿಗಳಾಗಿದ್ದಾರೆ. ನೀನು ಅನ್ಯ 21
ಜನರಲ್ಲಿ ವಾಸವಾಗಿರುವ ಯೆಹೂದ್ಯರೆಲ್ಲರಿಗೆ—ನಿಮ್ಮ ಮಕ್ಕಳಿಗೆ ಸುನ್ನತಿ ಮಾಡಿಸಬೇಡಿರಿ,
ನಿಮ್ಮ ಆಚಾರಗಳನ್ನು ಅನುಸರಿಸಿ ನಡೆಯಬೇಡಿರಿ ಎಂದು ಹೇಳಿ, ಮೋಶೆಯ ಧರ್ಮ
ವನ್ನು ತ್ಯಾಗಮಾಡಬೇಕೆಂಬದಾಗಿ ಬೋಧಿಸುತ್ತೀ ಎಂದು ನಿನ್ನ ವಿಷಯದಲ್ಲಿ ಬಹಳ
ವಾಗಿ ಕೇಳಿದ್ದಾರೆ. ಹೀಗಿರುವಲ್ಲಿ ಏನು ಮಾಡಬೇಕು? ನೀನು ಬಂದಿರುವದನ್ನು 22
ಹ್ಯಾಗೂ ಕೇಳುವರು. ಆದಕಾರಣ ನಾವು ನಿನಗೆ ಹೇಳುವ ಕೆಲಸವನ್ನು ಮಾಡು. 23
ನಮ್ಮಲ್ಲಿ ವ್ರತಹಿಡಿದವರು ನಾಲ್ಕು ಮಂದಿ ಇದ್ದಾರೆ. ನೀನು ಅವರನ್ನು ಕರೆದುಕೊಂಡು 24
ಹೋಗಿ, ಅವರೊಡನೆ ನಿನ್ನನ್ನು ಶುದ್ಧಿಮಾಡಿಕೊಂಡು ಅವರು ತಮ್ಮ ವ್ರತವನ್ನು ತೀರಿಸಿ
ಕೊಳ್ಳುವದಕ್ಕಾಗಿ ಅವರಿಗೋಸ್ಕರ ಹಣ ವೆಚ್ಚಮಾಡು. ಹೀಗೆ ಮಾಡಿದರೆ, ಎಲ್ಲರೂ
ನಿನ್ನ ವಿಷಯವಾಗಿ ತಾವು ಕೇಳಿದ ಸುದ್ದಿ ನಿಜವಲ್ಲವೆಂತಲೂ ನೀನಾದರೂ ಧರ್ಮಶಾಸ್ತ್ರ
ವನ್ನು ಕೈಕೊಂಡು ನಡೆಯುತ್ತೀ ಎಂತಲೂ ತಿಳುಕೊಳ್ಳುವರು. ಅನ್ಯಜನರಲ್ಲಿ ಯೇಸು 25
ವನ್ನು ನಂಬಿರುವವರ ವಿಷಯವಾದರೋ ವಿಗ್ರಹಕ್ಕೆ ನೈವೇದ್ಯಮಾಡಿದ್ದನ್ನೂ ರಕ್ತವನ್ನೂ
ಕುತ್ತಿಗೆಹಿಸುಕಿಕೊಂದದ್ದನ್ನೂ ಹಾದರವನ್ನೂ ಬಿಟ್ಟು ದೂರವಾಗಿರಬೇಕೆಂಬದಾಗಿ
ನಾವು ತೀರ್ಮಾನಿಸಿ ಬರೆದೆವು ಎಂದು ಹೇಳಿದರು. ಆಗ ಪೌಲನು ಆ ಮನುಷ್ಯರನ್ನು 26
ಕರೆದುಕೊಂಡು ಮರುದಿನ ಅವರೊಡನೆ ತನ್ನನ್ನು ಶುದ್ಧಿಮಾಡಿಕೊಂಡು ವ್ರತದ[1] ದಿವಸ
ಗಳು ಮುಗಿದವೆಂದು ತಿಳಿಸುವವನಾಗಿ ದೇವಾಲಯದೊಳಗೆ ಹೋದನು. ಪ್ರತಿಯೊಬ್ಬ
ನಿಗೋಸ್ಕರ ಮಾಡಬೇಕಾದ ಅರ್ಪಣೆಯನ್ನು ಮುಂದೆ ಅರ್ಪಿಸಬೇಕಾಗಿತ್ತು.

**ಯೆಹೂದ್ಯರು ಪೌಲನ ಮೇಲೆ ಬಿದ್ದು ಕೊಲ್ಲಬೇಕೆಂದಿದ್ದಾಗ ರೋಮ್‌ರಾಜ್ಯದ ಸರದಾರನೂ ಸಿಪಾಯಿಗಳೂ ಅವನನ್ನು ಬಿಡಿಸಿದ್ದು; ಅವನು ಜನರಿಗೆ ಪ್ರತಿವಾದಿಸಿದ್ದು.**

ಆ ಏಳು ದಿವಸಗಳು ತುಂಬುತ್ತಿರುವಾಗ, ಆಸ್ಯಸೀಮೆಯಿಂದ ಬಂದಿದ್ದ ಯೆಹೂದ್ಯರು 27
ಅವನನ್ನು ದೇವಾಲಯದಲ್ಲಿ ಕಂಡು ಗುಂಪುಕೂಡಿದ ಜನರೆಲ್ಲರನ್ನು ಕಲಕಿ ಅವನನ್ನು

[1] ಮೂಲ, ಶುದ್ಧಾಚಾರದ.

[2] ಅಂಕೆಗಳು ೬, ೧—೨೧ ನೋಡಿರಿ.

28 ಹಿಡಿದು—ಇಸ್ರಯೇಲ ಜನರೇ, ಸಹಾಯಮಾಡಿರಿ, ನಮ್ಮ ಜನರಿಗೂ ಧರ್ಮಶಾಸ್ತ್ರಕ್ಕೂ ಈ ಆಲಯಕ್ಕೂ ವಿರುದ್ಧವಾಗಿ ಎಲ್ಲೆಲ್ಲಿಯೂ ಎಲ್ಲರಿಗೂ ಬೋಧನೆ ಹೇಳುವ ಆ ಮನುಷ್ಯನು ಇವನೇ. ಇದಲ್ಲದೆ ಇವನು ಗ್ರೀಕರನ್ನು ದೇವಾಲಯದೊಳಗೆ ಕರೆದುಕೊಂಡು
29 ಬಂದು ಈ ಪರಿಶುದ್ಧಸ್ಥಳವನ್ನು ಹೊಲೆಮಾಡಿದ್ದಾನೆ ಎಂದು ಕೂಗಿದರು. ಮುಂಚೆ ಅವರು ಎಫೆಸದ ತ್ರೊಫಿಮನನ್ನು ಅವನ ಸಂಗಡ ಪಟ್ಟಣದಲ್ಲಿ ಕಂಡಿದ್ದರಿಂದ ಅವನನ್ನು
30 ಪೌಲನು ದೇವಾಲಯದೊಳಗೆ ಕರೆದುಕೊಂಡು ಬಂದನೆಂದು ಭಾವಿಸಿದರು. ಆಗ ಪಟ್ಟಣವೆಲ್ಲಾ ಕಲಕಿಹೋಯಿತು, ಜನರು ಎಲ್ಲಾ ಕಡೆಯಿಂದ ಓಡಿ ಬಂದು ಕೂಡಿದರು. ಮತ್ತು ಪೌಲನನ್ನು ಹಿಡಿದು ದೇವಾಲಯದ ಹೊರಗೆ ಎಳೆದುಕೊಂಡು ಬಂದರು.
31 ಕೂಡಲೇ ಬಾಗಿಲುಗಳನ್ನು ಮುಚ್ಚಿದರು. ಅವರು ಅವನನ್ನು ಕೊಲ್ಲುವದಕ್ಕೆ ಪ್ರಯತ್ನಿಸುತ್ತಿದ್ದಾಗ ಯೆರೂಸಲೇಮಿನಲ್ಲೆಲ್ಲಾ ಗಲಿಬಿಲಿಯಾಯಿತೆಂದು ಪಟಾಲಮಿನ ಸಹಸ್ರಾಧಿ
32 ಪತಿಗೆ ವರದಿ ಬಂತು. ಅವನು ತಕ್ಷಣವೇ ಸಿಪಾಯಿಗಳನ್ನೂ ಶತಾಧಿಪತಿಗಳನ್ನೂ ತೆಗೆದುಕೊಂಡು ಅವರ ಮೇಲೆ ಓಡಿಬಂದನು. ಅವರು ಸಹಸ್ರಾಧಿಪತಿಯನ್ನೂ ಸಿಪಾ
33 ಯಿಗಳನ್ನೂ ನೋಡಿ ಪೌಲನನ್ನು ಹೊಡೆಯುವದನ್ನು ಬಿಟ್ಟರು. ಸಹಸ್ರಾಧಿಪತಿಯು ಹತ್ತರಕ್ಕೆ ಬಂದು ಅವನನ್ನು ಹಿಡಿದು ಅವನಿಗೆ ಜೋಡು ಬೇಡಿಯನ್ನು ಹಾಕಬೇಕೆಂದು
34 ಅಪ್ಪಣೆಕೊಟ್ಟು—ಇವನ್ಯಾರು? ಏನು ಮಾಡಿದ್ದಾನೆ ಎಂದು ಕೇಳಲು, ಕೆಲವರು ಹೀಗೆ ಕೆಲವರು ಹಾಗೆ ಕೂಗುತ್ತಿರಲು, ಗದ್ದಲದ ನಿಮಿತ್ತ ನಿಜ ಸ್ಥಿತಿಯನ್ನು ತಿಳಿಯಲಾರದೆ,
35 ಅವನನ್ನು ಕೋಟೆಯೊಳಗೆ ತೆಗೆದುಕೊಂಡುಹೋಗಿರೆಂದು ಅಪ್ಪಣೆಕೊಟ್ಟನು. ಪೌಲನು ಮೆಟ್ಲುಗಳ ಮೇಲೆ ಬಂದಾಗ, ಜನರ ನೂಕಾಟದ ನಿಮಿತ್ತ ಸಿಪಾಯಿಗಳು ಅವನನ್ನು
36 ಹೊತ್ತುಕೊಂಡು ಹೋಗಬೇಕಾಯಿತು. ಯಾಕಂದರೆ ಗುಂಪಾಗಿ ಕೂಡಿದ ಜನರು ಹಿಂದಿನಿಂದ ಬಂದು, ಅವನನ್ನು ಕೊಲ್ಲಿರಿ ಎಂದು ಕೂಗುತ್ತಿದ್ದರು.

37 ಪೌಲನನ್ನು ಕೋಟೆಯೊಳಗೆ ಸೇರಿಸುವದರೊಳಗಾಗಿ ಅವನು ಆ ಸಹಸ್ರಾಧಿಪತಿಯನ್ನು—ನಿನಗೆ ಒಂದು ಮಾತು ಹೇಳುವದಕ್ಕೆ ನನಗೆ ಅಪ್ಪಣೆ ಆದೀತೇ? ಎಂದು
38 ಕೇಳಲು, ಅವನು—ಗ್ರೀಕ್‌ಭಾಷೆ ನಿನಗೆ ಬರುತ್ತದೋ? ಕೆಲವು ದಿವಸಗಳ ಹಿಂದೆ ದಂಗೆ ಎಬ್ಬಿಸಿ ಆ ನಾಲ್ಕು ಸಾವಿರ ಮಂದಿ ಘಾತಕರನ್ನು ಅಡವಿಗೆ ಕರೆದುಕೊಂಡುಹೋದ ಆ
39 ಐಗುಪ್ತ್ಯನು ನೀನೇ ಅಲ್ಲವೇ? ಎಂದು ಕೇಳಿದನು. ಅದಕ್ಕೆ ಪೌಲನು—ನಾನು ಯೆಹೂದ್ಯನು, ತಾರ್ಸದವನು, ಕಿಲಿಕ್ಯಸೀಮೆಯ ಪ್ರಖ್ಯಾತವಾದ ಪಟ್ಟಣದವನು. ಈ ಜನರಿಗೆ ಕೆಲವು ಮಾತುಗಳನ್ನು ಹೇಳುವದಕ್ಕೆ ನನಗೆ ಅಪ್ಪಣೆಯಾಗಬೇಕೆಂದು ಕೇಳಿ
40 ಕೊಳ್ಳುತ್ತೇನೆ ಅಂದನು. ಸಹಸ್ರಾಧಿಪತಿಯು ಅಪ್ಪಣೆಕೊಡಲು, ಪೌಲನು ಮೆಟ್ಲುಗಳ ಮೇಲೆ ನಿಂತುಕೊಂಡು ಜನರಿಗೆ ಕೈಸನ್ನೆಮಾಡಿದನು. ಗದ್ದಲವು ಬಹಳ ಮಟ್ಟಿಗೆ ಶಾಂತವಾದ ಮೇಲೆ ಅವನು ಇಬ್ರೀಯ ಭಾಷೆಯಲ್ಲಿ—

**22** ಸಹೋದರರೇ, ತಂದೆಗಳೇ, ಈಗ ನಾನು ನಿಮಗೆ ಮಾಡುವ ಪ್ರತಿವಾದವನ್ನು ಕೇಳಿರಿ ಎಂದು ಕೂಗಿಹೇಳಿದನು.

2 ಅವನು ತಮ್ಮ ಸಂಗಡ ಇಬ್ರೀಯ ಭಾಷೆಯಲ್ಲಿ ಮಾತಾಡುವದನ್ನು ಕೇಳಿ ಅವರು ಮತ್ತೂ ನಿಶ್ಶಬ್ದವಾದರು. ಆಗ ಅವನು ಹೇಳಿದ್ದೇನಂದರೆ—

ನಾನು ಯೆಹೂದ್ಯನು, ಕಿಲಿಕ್ಯದ ತಾರ್ಸದಲ್ಲಿ ಹುಟ್ಟಿದವನು, ಆದರೆ ಈ ಪಟ್ಟಣದಲ್ಲೇ 3
ಬೆಳೆದವನು. ಗಮಲಿಯೇಲನ ಪಾದಸನ್ನಿಧಿಯಲ್ಲಿ ನಮ್ಮ ಪಿತೃಗಳ ಧರ್ಮಶಾಸ್ತ್ರದಲ್ಲಿ
ಪೂರ್ಣ ಶಿಕ್ಷಿತನಾದೆನು; ನೀವೆಲ್ಲರೂ ಈಹೊತ್ತು ದೇವರ ವಿಷಯದಲ್ಲಿ ಅಭಿಮಾನಿಗಳಾ
ಗಿರುವಂತೆಯೇ ನಾನು ಅಭಿಮಾನಿಯಾಗಿದ್ದೆನು. ಈ ನೂತನ ಮಾರ್ಗದವರನ್ನು 4
ಹಿಂಸಿಸುವವನಾಗಿ ಗಂಡಸರಿಗೂ ಹೆಂಗಸರಿಗೂ ಬೇಡೀಹಾಕಿಸುತ್ತಾ ಅವರನ್ನು ಸೆರೆಮನೆ
ಗಳಿಗೆ ಕೊಡಿಸುತ್ತಾ ಇದ್ದೆನು, ಅವರ ಕೊಲೆಗಾದರೂ ಹಿಂತೆಗೆಯಲಿಲ್ಲ. ಈ ವಿಷಯ 5
ದಲ್ಲಿ ಮಹಾಯಾಜಕನೂ ಹಿರೀಸಭೆಯವರೆಲ್ಲರೂ ನನಗೆ ಸಾಕ್ಷಿಗಳಾಗಿದ್ದಾರೆ. ಅವ
ರಿಂದಲೇ ನಾನು ದಮಸ್ಕದಲ್ಲಿದ್ದ ಸಹೋದರರಿಗೆ ಕಾಗದಗಳನ್ನು ತೆಗೆದುಕೊಂಡು ಅಲ್ಲಿಗೆ
ಹೋದವರನ್ನೂ ಬೇಡಿಗಳಿಂದ ದಂಡನೆಗಾಗಿ ಯೆರೂಸಲೇಮಿಗೆ ತರಬೇಕೆಂದು ಹೊರ
ಟೆನು. ನಾನು ಪ್ರಯಾಣಮಾಡುತ್ತಾ ದಮಸ್ಕದ ಹತ್ತರಕ್ಕೆ ಬಂದಾಗ, ಸುಮಾರು 6
ಮಧ್ಯಾಹ್ನದಲ್ಲಿ ಫಕ್ಕನೆ ಆಕಾಶದೊಳಗಿಂದ ಒಂದು ದೊಡ್ಡ ಬೆಳಕು ನನ್ನ ಸುತ್ತಲು ಹೊಳೆ
ಯಿತು, ನಾನು ನೆಲಕ್ಕೆ ಬಿದ್ದೆನು. ಆಗ—ಸೌಲನೇ, ಸೌಲನೇ, ನನ್ನನ್ನು ಯಾಕೆ ಹಿಂಸೆ 7
ಪಡಿಸುತ್ತೀ? ಎಂದು ನನಗೆ ಹೇಳಿದ ಒಂದು ಶಬ್ದವನ್ನು ಕೇಳಿದೆನು. ಅದಕ್ಕೆ ನಾನು— 8
ಕರ್ತನೇ, ನೀನ್ಯಾರು? ಎಂದು ಕೇಳಲು, ಆತನು—ನೀನು ಹಿಂಸೆಪಡಿಸುವ ನಜರೇತಿನ
ಯೇಸುವೇ ನಾನು, ಎಂದು ನನಗೆ ಹೇಳಿದನು. ನನ್ನ ಜೊತೆಯಲ್ಲಿದ್ದವರು ಬೆಳಕನ್ನು 9
ಕಂಡರೇ ಹೊರತು ನನ್ನ ಸಂಗಡ ಮಾತಾಡಿದವನ ಶಬ್ದವನ್ನು ಕೇಳಲಿಲ್ಲ. ಆಗ ನಾನು— 10
ಕರ್ತನೇ, ನಾನೇನು ಮಾಡಬೇಕು? ಎಂದು ಕೇಳಲು, ಕರ್ತನು ನನಗೆ—ನೀನೆದ್ದು
ದಮಸ್ಕದೊಳಕ್ಕೆ ಹೋಗು, ಮಾಡುವದಕ್ಕೆ ನಿನಗೆ ನೇಮಿಸಿರುವದೆಲ್ಲಾ ಅಲ್ಲಿ ತಿಳಿಸಲ್ಪಡು
ವದು ಎಂದು ಹೇಳಿದನು. ಆ ಬೆಳಕಿನ ಪ್ರಭಾವದಿಂದ ನನಗೆ ಕಣ್ಣು ಕಾಣದೆ ಇದ್ದದ 11
ರಿಂದ, ನನ್ನ ಜೊತೆಯಲ್ಲಿದ್ದವರು ನನ್ನನ್ನು ಕೈಹಿಡಿದು ದಮಸ್ಕದೊಳಕ್ಕೆ ಕರೆದುಕೊಂಡು
ಹೋದರು. ಅಲ್ಲಿ ಧರ್ಮಶಾಸ್ತ್ರಕ್ಕೆ ಸರಿಯಾಗಿ ನಡೆಯುವ ಸದ್ಭಕ್ತನೂ ಆ ಸ್ಥಳದ 12
ಯೆಹೂದ್ಯರೆಲ್ಲರಿಂದ ಒಳ್ಳೆಯವನೆಂದು ಹೆಸರು ಹೊಂದಿದವನೂ ಆಗಿದ್ದ ಅನನೀಯನೆಂಬ 13
ವನು ನನ್ನ ಬಳಿಗೆ ಬಂದು ನಿಂತು—ಸಹೋದರನಾದ ಸೌಲನೇ, ನಿನಗೆ ಕಣ್ಣುಕಾಣಿಸಲಿ
ಎಂದು ಹೇಳಿದನು. ಹೇಳಿದಾಕ್ಷಣವೇ ನನಗೆ ಕಣ್ಣು ಕಾಣಿಸಿತು, ನಾನು ಅವನನ್ನು
ನೋಡಿದೆನು. ಆ ಮೇಲೆ ಅವನು—ನಮ್ಮ ಪಿತೃಗಳ ದೇವರು ತನ್ನ ಚಿತ್ತವನ್ನು ನೀನು 14
ತಿಳುಕೊಳ್ಳುವದಕ್ಕೂ ಆ ನೀತಿವಂತನನ್ನು ನೋಡುವದಕ್ಕೂ ಆತನ ಬಾಯಿಂದ ಒಂದು
ಮಾತನ್ನು ಕೇಳುವದಕ್ಕೂ ನಿನ್ನನ್ನು ನೇಮಿಸಿದ್ದಾನೆ. ನೀನು ಕಂಡು ಕೇಳಿದ್ದರ ವಿಷಯ 15
ದಲ್ಲಿ ಎಲ್ಲಾ ಮನುಷ್ಯರ ಮುಂದೆ ಆತನಿಗೆ ಸಾಕ್ಷಿಯಾಗಿರಬೇಕು. ಈಗ ನೀನ್ಯಾಕೆ 16
ಸಾವಕಾಶಮಾಡುತ್ತೀ? ಎದ್ದು ಆತನ ಹೆಸರನ್ನು ಹೇಳಿಕೊಳ್ಳುವವನಾಗಿ ದೀಕ್ಷಾಸ್ನಾನ
ಮಾಡಿಸಿಕೊಂಡು ನಿನ್ನ ಪಾಪಗಳನ್ನು ತೊಳೆದುಕೋ ಅಂದನು.

ಅನಂತರದಲ್ಲಿ ನಾನು ಯೆರೂಸಲೇಮಿಗೆ ಹಿಂತಿರುಗಿಬಂದು ದೇವಾಲಯದೊಳಗೆ 17
ಪ್ರಾರ್ಥನೆಮಾಡುತ್ತಿದ್ದಾಗ, ಧ್ಯಾನಪರವಶನಾಗಿ ಯೇಸುವನ್ನು[1] ಕಂಡೆನು. ಆತನು— 18

[1] ಮೂಲ: ಆತನನ್ನು.

ನೀನು ತ್ವರೆಪಟ್ಟು ಬೇಗನೆ ಯೆರೂಸಲೇಮಿನಿಂದ ಹೊರಟುಹೋಗು, ನನ್ನ ವಿಷಯದಲ್ಲಿ
19 ನೀನು ಹೇಳುವ ಸಾಕ್ಷಿಯನ್ನು ಅವರು ಅಂಗೀಕರಿಸುವದಿಲ್ಲ ಅಂದನು. ಅದಕ್ಕೆ
ನಾನು—ಕರ್ತನೇ, ಎಲ್ಲಾ ಸಭಾಮಂದಿರಗಳಲ್ಲಿ ನಿನ್ನ ಮೇಲೆ ನಂಬಿಕೆಯಿಟ್ಟವರನ್ನು ನಾನು
20 ಸೆರೆಮನೆಯಲ್ಲಿ ಹಾಕಿಸುತ್ತಾ ಹೊಡಿಸುತ್ತಾ ಇದ್ದೆನೆಂಬದನ್ನು ಅವರೇ ತಿಳಿದಿದ್ದಾರೆ; ಮತ್ತು
ನಿನ್ನ ಸಾಕ್ಷಿಯಾದ ಸ್ತೆಫನನ ರಕ್ತವು ಚೆಲ್ಲಿಸಲ್ಪಟ್ಟಾಗ ನಾನೂ ಹತ್ತರ ನಿಂತು ಒಪ್ಪಿ
21 ಕೊಂಡು ಅವನನ್ನು ಕೊಂದವರ ವಸ್ತ್ರಗಳನ್ನು ಕಾಯುತ್ತಿದ್ದೆನಲ್ಲಾ ಅಂದೆನು. ಆತನು—
ನೀನು ಹೋಗು, ನಾನು ನಿನ್ನನ್ನು ದೂರಕ್ಕೆ ಅನ್ಯಜನರ ಬಳಿಗೆ ಕಳುಹಿಸುತ್ತೇನೆಂದು
ಹೇಳಿದನು.

22 ಈ ಮಾತಿನ ತನಕ ಅವರು ಕೇಳುತ್ತಿದ್ದರು; ಆ ಮೇಲೆ—ಇಂಥವನನ್ನು ಭೂಮಿ
ಯಿಂದ ತೆಗೆದುಹಾಕಿಬಿಡು, ಇವನು ಬದುಕುವದು ಯುಕ್ತವಲ್ಲವೆಂದು ಕೂಗಿಹೇಳಿದರು.
23 ಅವರು ಕೂಗುತ್ತಾ ತಮ್ಮ ವಸ್ತ್ರಗಳನ್ನು ಕಿತ್ತುಹಾಕುತ್ತಾ ಧೂಳನ್ನು ತೂರುತ್ತಾ ಇರ
24 ಲಾಗಿ, ಯಾವ ಕಾರಣದಿಂದ ಹೀಗೆ ಅವನಿಗೆ ವಿರುದ್ಧವಾಗಿ ಕೂಗಾಡುತ್ತಾರೆಂಬುವದನ್ನು
ಸಹಸ್ರಾಧಿಪತಿಯು ತಿಳುಕೊಳ್ಳುವದಕ್ಕಾಗಿ ಅವನನ್ನು ಕೋಟೆಯೊಳಗೆ ತಂದು ಕೊರಡೆ
25 ಗಳಿಂದ ಹೊಡೆದು ವಿಚಾರಿಸಬೇಕೆಂದು ಆಜ್ಞಾಪಿಸಿದನು. ಅವರು ಪೌಲನನ್ನು ಬೊಗ್ಗಿಸಿ
ಬಾರುಗಳಿಂದ ಕಟ್ಟುವಾಗ ಅವನು ತನ್ನ ಹತ್ತರ ನಿಂತಿದ್ದ ಶತಾಧಿಪತಿಯನ್ನು—ರೋಮಾ
ಪುರದ ಹಕ್ಕುದಾರನಾದ ಮನುಷ್ಯನನ್ನು ನ್ಯಾಯವಿಚಾರಣೆಮಾಡದೆ ಕೊರಡೆಗಳಿಂದ
26 ಹೊಡಿಸುವದು ನಿಮಗೆ ನ್ಯಾಯವೋ? ಎಂದು ಕೇಳಿದನು. ಶತಾಧಿಪತಿಯು ಆ
ಮಾತನ್ನು ಕೇಳಿ ಸಹಸ್ರಾಧಿಪತಿಯ ಬಳಿಗೆ ಹೋಗಿ—ನೀನು ಏನು ಮಾಡಬೇಕೆಂದಿದ್ದೀ?
27 ಈ ಮನುಷ್ಯನು ರೋಮಾಪುರದ ಹಕ್ಕುದಾರನು ಎಂದು ಹೇಳಲು, ಸಹಸ್ರಾಧಿಪತಿಯು
ಪೌಲನ ಹತ್ತರಕ್ಕೆ ಬಂದು—ನೀನು ರೋಮಾಪುರದವರ ಹಕ್ಕುಳ್ಳವನೇನು? ನನಗೆ
28 ಹೇಳು ಎಂದು ಅವನನ್ನು ಕೇಳಿದನು. ಅವನು, ಹೌದು ಅಂದನು. ಅದಕ್ಕೆ ಸಹಸ್ರಾಧಿ
ಪತಿಯು—ನಾನು ಬಹಳ ಹಣಕೊಟ್ಟು ಆ ಹಕ್ಕನ್ನು ಕೊಂಡುಕೊಂಡೆನು ಅನ್ನಲು,
29 ಪೌಲನು—ನಾನಾದರೋ ಹಕ್ಕುದಾರನಾಗಿ ಹುಟ್ಟಿದವನು ಅಂದನು. ಅವನನ್ನು
ಹೊಡೆದುವಿಚಾರಿಸುವದಕ್ಕೆ ಬಂದವರು ಕೂಡಲೇ ಅವನನ್ನು ಬಿಟ್ಟರು. ಅದಲ್ಲದೆ
ಅವನು ರೋಮಾಪುರದ ಹಕ್ಕುದಾರನೆಂದು ಸಹಸ್ರಾಧಿಪತಿಗೆ ತಿಳಿದುಬಂದಾಗ ತಾನು
ಅವನನ್ನು ಕಟ್ಟಿಸಿದ್ದರಿಂದ ಅವನಿಗೂ ಭಯಹಿಡಿಯಿತು.

### ಪೌಲನು ಹಿರೀಸಭೆಯವರ ಮುಂದೆ ನಿಂತು ಮಾತಾಡಿದ್ದು.

30 ಪೌಲನ ಮೇಲೆ ಯೆಹೂದ್ಯರು ಯಾವ ತಪ್ಪು ಹೊರಿಸುತ್ತಾರೆಂಬುವ ವಿಷಯದಲ್ಲಿ
ನಿಜವಾದ ಸಂಗತಿಯನ್ನು ತಿಳಿಯಬೇಕೆಂದು ಅಪೇಕ್ಷಿಸಿ, ಸಹಸ್ರಾಧಿಪತಿಯು ಮರುದಿನ
ಅವನ ಬೇಡಿಗಳನ್ನು ಬಿಚ್ಚಿ, ಮಹಾಯಾಜಕರೂ ಹಿರೀಸಭೆಯವರೆಲ್ಲರೂ ಕೂಡಿಬರುವ
ದಕ್ಕೆ ಅಪ್ಪಣೆಕೊಟ್ಟು, ಪೌಲನನ್ನು ಕರೆದುಕೊಂಡುಹೋಗಿ ಅವರ ಮುಂದೆ ನಿಲ್ಲಿಸಿದನು.

ಸಿಪಾಯಿಗಳೊಂದಿಗೆ ಹೋಗಿ ಅವನನ್ನು ರೋಮಾಪುರದ ಹಕ್ಕುದಾರನೆಂದು ತಿಳಿದು, ಅವನನ್ನು ತಪ್ಪಿಸಿದೆನು. 28 ಇದಲ್ಲದೆ ಅವನ ಮೇಲೆ ತಪ್ಪುಹೊರಿಸಿದ ಕಾರಣವನ್ನು ತಿಳಿಯಲಪೇಕ್ಷಿಸಿ, ಅವನನ್ನು ಅವರ ಹಿರೀಸಭೆಗೆ ಕರೆದುಕೊಂಡುಹೋದೆನು. 29 ಅಲ್ಲಿ ಅವರು ತಮ್ಮ ಧರ್ಮಶಾಸ್ತ್ರವಿಷಯಗಳನ್ನು ಹಿಡಿದು ಅವನ ಮೇಲೆ ತಪ್ಪುಹೊರಿಸಿದರೇ ಹೊರತು ಮರಣದಂಡನೆಗಾಗಲಿ ಬೇಡಿಗಾಗಲಿ ಆಧಾರವಾದ ಯಾವ ಅಪರಾಧವನ್ನೂ ಹೊರಿಸಲಿಲ್ಲವೆಂದು ನನಗೆ ಕಂಡುಬಂತು. 30 ಈ ಮನುಷ್ಯನಿಗೆ ವಿರುದ್ಧವಾಗಿ ಒಳಸಂಚು ಹುಟ್ಟಿತೆಂದು ನನಗೆ ತಿಳಿದುಬಂದದರಿಂದ ಕೂಡಲೇ ನಾನು ಅವನನ್ನು ನಿನ್ನ ಬಳಿಗೆ ಕಳುಹಿಸಿ, ತಪ್ಪುಹೊರಿಸುವವರಿಗೆ ನಿನ್ನ ಮುಂದೆಯೇ ಅವನಿಗೆ ವಿರುದ್ಧವಾಗಿ ಮಾತಾಡುವ ಹಾಗೆ ಅಪ್ಪಣೆ ಕೊಟ್ಟೆನು, ಎಂಬುವದೇ.

31 ಸಿಪಾಯಿಗಳು ತಮಗೆ ಅಪ್ಪಣೆಯಾದಂತೆ ರಾತ್ರಿಕಾಲದಲ್ಲಿ ಪೌಲನನ್ನು ಅಂತಿಪತ್ರಿಗೆ ಕರೆದುಕೊಂಡು ಹೋದರು. 32 ಮರುದಿನ ಅವರು ಸವಾರರನ್ನು ಅವನ ಜೊತೆಯಲ್ಲಿ ಹೋಗುವಂತೆ ಮಾಡಿ ತಾವು ಕೋಟೆಗೆ ಹಿಂತಿರುಗಿ ಬಂದರು. 33 ಸವಾರರು ಕೈಸರೈಯಕ್ಕೆ ಸೇರಿ, ದೇಶಾಧಿಪತಿಗೆ ಕಾಗದವನ್ನು ಒಪ್ಪಿಸಿ ಪೌಲನನ್ನು ಅವನ ಮುಂದೆ ನಿಲ್ಲಿಸಿದರು. 34 ದೇಶಾಧಿಪತಿಯು ಆ ಕಾಗದವನ್ನು ಓದಿ, ಪೌಲನು ಯಾವ ಸೀಮೆಯವನು? ಎಂದು ಕೇಳಿ, ಅವನು ಕಿಲಿಕ್ಯದವನೆಂದು ತಿಳಿದು— 35 ನಿನ್ನ ಮೇಲೆ ತಪ್ಪುಹೊರಿಸುವವರು ಬಂದನಂತರ ನಿನ್ನ ಕಾರ್ಯವನ್ನು ಪೂರ್ಣವಾಗಿ ವಿಚಾರಿಸುತ್ತೇನೆ ಎಂದು ಹೇಳಿ, ಅವನನ್ನು ಹೆರೋದನ ಅರಮನೆಯಲ್ಲಿ ಇಟ್ಟುಕಾಯಬೇಕೆಂಬದಾಗಿ ಅಪ್ಪಣೆಮಾಡಿದನು.

### ಫೇಲಿಕ್ಸನ ಮುಂದೆ ನಡೆದ ನ್ಯಾಯವಿಚಾರಣೆ.

**24** ಐದು ದಿವಸಗಳಾದ ಮೇಲೆ, ಮಹಾಯಾಜಕನಾದ ಅನನೀಯನು ಸಭೇಹಿರಿಯರಲ್ಲಿ ಕೆಲವರನ್ನೂ ತೆರ್ತುಲ್ಲನೆಂಬ ಒಬ್ಬ ವಕೀಲನನ್ನೂ ಕರೆದುಕೊಂಡು ಬಂದು ಪೌಲನ ಮೇಲೆ ದೇಶಾಧಿಪತಿಗೆ ಫಿರಿಯಾದಿ ಹೇಳಿದರು. 2 ಪೌಲನನ್ನು ಕರಸಿದನಂತರ, ತೆರ್ತುಲ್ಲನು ಅವನ ಮೇಲೆ ತಪ್ಪುಹೊರಿಸುವದಕ್ಕೆ ಪ್ರಾರಂಭಿಸಿ ಹೀಗೆಂದನು—ಶ್ರೀಮತ್ ಮಹಾಫೇಲಿಕ್ಸನೇ, ನಿನ್ನ ಮೂಲಕವಾಗಿ ನಮಗೆ ಬಹು ಸಮಾಧಾನ ಉಂಟಾಗುವದರಿಂದಲೂ ನಿನ್ನ ಪರಾಮರಿಕೆಯಿಂದ ಈ ದೇಶದ ಜನರಿಗೆ ಎಲ್ಲಾ ವಿಧದಲ್ಲಿಯೂ ಎಲ್ಲಾ ಸ್ಥಳದಲ್ಲಿಯೂ ಸುಧಾರಣೆಗಳು ಆಗುವದರಿಂದಲೂ 3 ನಾವು ಈ ಉಪಕಾರಗಳನ್ನು ಕೃತಜ್ಞತೆಯಿಂದ ಒಪ್ಪಿಕೊಳ್ಳುತ್ತೇವೆ. 4 ಆದರೆ ನಿನ್ನನ್ನು ಹೆಚ್ಚಾಗಿ ಬೇಸರಗೊಳಿಸುವದಕ್ಕೆ ಮನಸ್ಸಿಲ್ಲದೆ ನಾವು ಸಂಕ್ಷೇಪವಾಗಿ ಹೇಳುವ ಮಾತುಗಳನ್ನು ದಯೆಯಿಂದ ಲಾಲಿಸಬೇಕೆಂದು ಬೇಡಿಕೊಳ್ಳುತ್ತೇನೆ. 5 ಈ ಮನುಷ್ಯನನ್ನು ಪೀಡೆಯಂತಿದ್ದು ಲೋಕದಲ್ಲಿ ಎಲ್ಲೆಲ್ಲಿಯೂ ಇರುವ ಎಲ್ಲಾ ಯೆಹೂದ್ಯರಲ್ಲಿ ದಂಗೆಯನ್ನು ಎಬ್ಬಿಸುವವನೆಂತಲೂ ನಜರೇತಿನವರ ಪಾಷಂಡಮತದಲ್ಲಿ ಪ್ರಮುಖನೆಂತಲೂ ಕಂಡೆವು. 6 ಇದಲ್ಲದೆ ಇವನು ದೇವಾಲಯವನ್ನು

ಹೊಲೆಮಾಡುವದಕ್ಕೆ ಪ್ರಯತ್ನಮಾಡಿದನು; ಆದಕಾರಣ ಇವನನ್ನು ನಾವು ಹಿಡಿದೆವು.
8 ಇವನನ್ನು[1] ನೀನೇ ವಿಚಾರಿಸಿದರೆ, ನಾವು ಇವನ ಮೇಲೆ ಹೊರಿಸುವ ಈ ತಪ್ಪುಗಳೆಲ್ಲಾ
9 ನಿಜವೋ ಸುಳ್ಳೋ ಇವನಿಂದಲೇ ತಿಳಿದುಕೊಳ್ಳಬಹುದು ಎಂದು ಹೇಳಿದನು. ಆಗ ಯೆಹೂದ್ಯರು ಈ ಸಂಗತಿಗಳು ನಿಜವೇ ಎಂದು ಹೇಳಿ ತಾವೂ ಆ ದೋಷಾರೋಪಣೆ ಮಾಡುವದರಲ್ಲಿ ಸೇರಿದರು.

10 ದೇಶಾಧಿಪತಿಯು ಪೌಲನಿಗೆ—ನೀನು ಮಾತಾಡಬಹುದೆಂದು ಸನ್ನೆಮಾಡಲು, ಅವನು ಪ್ರತ್ಯುತ್ತರವನ್ನು ಹೇಳಿದ್ದೇನಂದರೆ—

ನೀನು ಅನೇಕ ವರುಷಗಳಿಂದ ಈ ದೇಶದ ಜನರಿಗೆ ನ್ಯಾಯಾಧಿಪತಿಯಾಗಿರುತ್ತೀ
11 ಎಂದು ತಿಳಿದು, ನಾನು ಧೈರ್ಯವಾಗಿ ಪ್ರತಿವಾದ ಮಾಡುತ್ತೇನೆ. ನಾನು ದೇವಾರಾಧನೆ ಮಾಡುವದಕ್ಕೆ ಯೆರೂಸಲೇಮಿಗೆ ಹೋಗಿ ಹನ್ನೆರಡು ದಿವಸ ಮಾತ್ರವಾಯಿತೆಂದು ನೀನು
12 ತಿಳಿದುಕೊಳ್ಳಬಹುದು. ಅಲ್ಲಿ ದೇವಾಲಯದಲ್ಲಾಗಲಿ ಸಭಾಮಂದಿರಗಳಲ್ಲಾಗಲಿ ಪಟ್ಟಣ ದಲ್ಲಾಗಲಿ ನಾನು ಯಾರ ಸಂಗಡಲಾದರೂ ವಾದಿಸುವದನ್ನು ಇಲ್ಲವೆ ಜನರ ಗುಂಪು
13 ಕೂಡಿಸುವದನ್ನು ಇವರು ಕಾಣಲಿಲ್ಲ. ಇದಲ್ಲದೆ ಇವರು ಈಗ ನನ್ನ ಮೇಲೆ ಹೊರಿ
14 ಸುವ ತಪ್ಪುಗಳನ್ನು ನಿಜವೆಂದು ನಿನಗೆ ತೋರಿಸಲಾರರು. ಒಂದನ್ನು ಮಾತ್ರ ನಿನ್ನ ಮುಂದೆ ಒಪ್ಪಿಕೊಳ್ಳುತ್ತೇನೆ, ಅದೇನಂದರೆ—ಇವರು ಪಾಷಂಡಮತವೆಂದು ಹೇಳುವ ಮಾರ್ಗಕ್ಕನುಸಾರವಾಗಿ ನಾನು ನಮ್ಮ ಪಿತೃಗಳ ದೇವರನ್ನು ಸೇವಿಸುವವನಾಗಿದ್ದೇನೆ. ಧರ್ಮಶಾಸ್ತ್ರಕ್ಕನುಗುಣವಾಗಿರುವ ಮತ್ತು ಪ್ರವಾದಿಗಳ ಗ್ರಂಥಗಳಲ್ಲಿ ಬರೆದಿರುವ ಎಲ್ಲಾ
15 ವಿಷಯಗಳನ್ನು ನಂಬುತ್ತೇನೆ. ಇದಲ್ಲದೆ ನೀತಿವಂತರಿಗೂ ಅನೀತಿವಂತರಿಗೂ ಪುನರು ತ್ಥಾನವಾಗುವದೆಂದು ಇವರು ದೇವರಲ್ಲಿ ನಿರೀಕ್ಷೆಯಿಟ್ಟಿರುವ ಪ್ರಕಾರವೇ ನಾನೂ ನಿರೀಕ್ಷೆ
16 ಯುಳ್ಳವನಾಗಿದ್ದೇನೆ; ಇದರ ದೆಸೆಯಿಂದ ದೇವರ ವಿಷಯದಲ್ಲಿಯೂ ಮನುಷ್ಯರ ವಿಷಯ ದಲ್ಲಿಯೂ ನಾನು ನಿರ್ದೋಷಿ ಎಂದು ಸಾಕ್ಷಿಹೇಳುವ ಮನಸ್ಸು ನನಗೆ ಯಾವಾಗಲೂ
17 ಇರಬೇಕೆಂದು ಅಭ್ಯಾಸಮಾಡಿಕೊಳ್ಳುತ್ತೇನೆ. ಕೆಲವು ವರುಷಗಳಾದ ಮೇಲೆ ನಾನು ನನ್ನ ಸ್ವದೇಶದವರಿಗೆ ಧರ್ಮದ್ರವ್ಯಗಳನ್ನು ತರುವದಕ್ಕೂ ಕಾಣಿಕೆಗಳನ್ನು ಒಪ್ಪಿಸುವದಕ್ಕೂ
18 ಬಂದೆನು. ನಾನು ಶುದ್ಧಮಾಡಿಕೊಂಡವನಾಗಿ ಅವುಗಳನ್ನು ಒಪ್ಪಿಸುತ್ತಿರುವಲ್ಲಿ ನನ್ನನ್ನು ದೇವಾಲಯದಲ್ಲಿ ಕಂಡರು; ನನ್ನ ಬಳಿಯಲ್ಲಿ ಜನರ ಗುಂಪು ಇರಲಿಲ್ಲ, ಗದ್ದಲವೂ ಇರಲಿಲ್ಲ.
19 ನನ್ನನ್ನು ಕಂಡವರು ಆಸ್ಯಸೀಮೆಯಿಂದ ಬಂದ ಕೆಲವು ಯೆಹೂದ್ಯರೇ; ನನ್ನ ಮೇಲೆ ಅವ ರಿಗೆ ಏನಾದರೂ ಇದ್ದರೆ, ತಾವೇ ನಿನ್ನ ಮುಂದೆ ತಪ್ಪುಹೊರಿಸುವದಕ್ಕೆ ಇಲ್ಲಿ ಬರಬೇಕಾಗಿತ್ತು.
20 ಇಲ್ಲವಾದ್ದರಿಂದ, ನಾನು ಹಿರೀಸಭೆಯ ಎದುರಿನಲ್ಲಿ ನಿಂತಿದ್ದಾಗ ನನ್ನಲ್ಲಿ ಅಕ್ರಮವನ್ನೇ
21 ನಾದರೂ ಕಂಡಿದ್ದರೆ, ಇವರೇ ಹೇಳಲಿ. ನಾನು ಇವರ ನಡುವೆ ನಿಂತು—ಪುನರುತ್ಥಾನದ ವಿಷಯದಲ್ಲಿ ಈ ಹೊತ್ತು ನಿಮ್ಮಿಂದ ನನಗೆ ವಿಚಾರಣೆಯಾಗುತ್ತದೆ ಎಂದು ಕೂಗಿದ್ದನ್ನೇ ಹೊರತು ಬೇರೆ ಏನೂ ಹೇಳಲಾರರು ಅಂದನು.

---

[1] ಕೆಲವು ಪ್ರತಿಗಳಲ್ಲಿ ಬರೆದಿರುವ ಹೆಚ್ಚು ಮಾತುಗಳೇನಂದರೆ—ನಮ್ಮ ಧರ್ಮಶಾಸ್ತ್ರಕ್ಕನುಸಾರವಾಗಿ ಅವನನ್ನು ವಿಚಾರಿಸಬೇಕೆಂದಿದ್ದೆವು. (೭) ಆದರೆ ಸಹಸ್ರಾಧಿಪತಿಯಾದ ಲೂಸ್ಯನು ಬಂದು ಬಲಾತ್ಕಾರಮಾಡಿ ಅವನನ್ನು ನಮ್ಮ ಕೈಯಿಂದ ತಪ್ಪಿಸಿ, (೮) ಅವನ ಮೇಲೆ ತಪ್ಪುಹೊರಿಸುವವರು ನಿನ್ನ ಹತ್ತರ ಬರಬೇಕೆಂದು ಅಪ್ಪಣೆಕೊಟ್ಟನು.

ಫೇಲಿಕ್ಸನು ಈ ನೂತನ ಮಾರ್ಗವನ್ನು ತಕ್ಕ ಮಟ್ಟಿಗೆ ತಿಳಿದವನಾದಾಗ್ಯೂ ಅವ 22 ರಿಗೆ—ಸಹಸ್ರಾಧಿಪತಿಯಾದ ಲೂಸ್ಯನು ಬಂದ ಮೇಲೆ ನಿಮ್ಮ ಕಾರ್ಯವನ್ನು ತೀರ್ಮಾನಿಸುತ್ತೇನೆಂದು ಹೇಳಿ ವಿಚಾರಣೆಯನ್ನು ತಡೆಮಾಡಿದನು. ಆಗ ಅವನು ಶತಾಧಿಪತಿಗೆ— 23 ಪೌಲನು ಕಾವಲಲ್ಲಿರಬೇಕು, ಆದರೆ ಅವನು ಬಿಡುವಾಗಿರಲಿ, ಅವನನ್ನು ಉಪಚರಿಸುವದಕ್ಕೆ ಅವನ ಸ್ವಂತ ಜನರಲ್ಲಿ ಯಾರಿಗೂ ಅಡ್ಡಿಮಾಡಬಾರದೆಂದು ಅಪ್ಪಣೆಮಾಡಿದನು.

ಪೌಲನು ಎರಡು ವರುಷ ಕಾವಲಲ್ಲಿದ್ದದ್ದು; ಅವನು ಪ್ರಸ್ತಾಪಿಸಿದ್ದನ್ನು ಫೇಲಿಕ್ಸನು ಕೇಳಿ ಮನಸ್ಸಿನಲ್ಲಿ ದಿಗಿಲುಬಿದ್ದದ್ದು.

ಕೆಲವು ದಿವಸಗಳಾದ ಮೇಲೆ ಫೇಲಿಕ್ಸನು ಯೆಹೂದ್ಯಳಾದ ದ್ರೂಸಿಲ್ಲಳೆಂಬ ಸ್ವಂತ 24 ಹೆಂಡತಿಯೊಂದಿಗೆ ಬಂದು, ಪೌಲನನ್ನು ಕರಿಸಿಕೊಂಡು ಕ್ರಿಸ್ತಯೇಸುವಿನಲ್ಲಿಡತಕ್ಕ ನಂಬಿಕೆಯ ವಿಷಯವಾಗಿ ಅವನು ಹೇಳಿದ ಮಾತುಗಳನ್ನು ಕೇಳಿದನು. ಪೌಲನು ಸುನೀತಿ 25 ದಮೆ ಮುಂದಣ ನ್ಯಾಯವಿಚಾರಣೆ ಇವುಗಳ ವಿಷಯವಾಗಿ ಪ್ರಸ್ತಾಪಿಸುತ್ತಿದ್ದಾಗ, ಫೇಲಿಕ್ಸನು ಭಯಗ್ರಸ್ತನಾಗಿ ಅವನಿಗೆ—ಸದ್ಯಕ್ಕೆ ಹೋಗು; ಸಮಯ ದೊರಕಿದಾಗ ನಿನ್ನನ್ನು ಕರಿಸುವೆನು ಎಂದು ಹೇಳಿದನು. ಇದಲ್ಲದೆ ತನಗೆ ಪೌಲನಿಂದ ಹಣ ಸಿಕ್ಕೀತೆಂಬ 26 ನಿರೀಕ್ಷೆ ಅವನಿಗಿದ್ದ ಕಾರಣ ಅವನನ್ನು ಬಾರಿಬಾರಿಗೂ ಕರಿಸಿ ಅವನ ಸಂಗಡ ಸಲ್ಲಾಪ ಮಾಡುತ್ತಿದ್ದನು. ಎರಡು ವರುಷಗಳು ತುಂಬಿದ ಮೇಲೆ, ಫೇಲಿಕ್ಸನ ಸ್ಥಾನಕ್ಕೆ ಪೋರ್ಕಿ 27 ಯ ಫೆಸ್ತನು ಬಂದನು. ಫೇಲಿಕ್ಸನು ಯೆಹೂದ್ಯರ ಪ್ರೀತಿಯನ್ನು ಸಂಪಾದಿಸಬೇಕೆಂಬ ಕೋರಿಕೆಯಿಂದ ಪೌಲನನ್ನು ಹಾಗೆಯೇ ಸೆರೆಯಲ್ಲಿ ಬಿಟ್ಟುಹೋದನು.

ದೇಶಾಧಿಪತಿಯಾದ ಫೆಸ್ತನು ಪೌಲನನ್ನು ತಿರಿಗಿ ಯೆರೂಸಲೇಮಿಗೆ ಕಳುಹಿಸಬೇಕೆಂದಿದ್ದಾಗ ಪೌಲನು ಚಕ್ರವರ್ತಿಗೆ ಅಪ್ಪೀಲ್ ಮಾಡಿದ್ದು.

ಫೆಸ್ತನು ಸೀಮೆಯ ಕಾರ್ಯಭಾರವನ್ನು ವಹಿಸಿಕೊಂಡು ಮೂರು ದಿವಸಗಳ ತರು **25** ವಾಯ ಕೈಸರೈಯದಿಂದ ಯೆರೂಸಲೇಮಿಗೆ ಹೋದನು. ಅಲ್ಲಿ ಮಹಾಯಾಜಕನೂ 2 ಯೆಹೂದ್ಯರಲ್ಲಿ ಪ್ರಮುಖರೂ ಅವನಿಗೆ ಪೌಲನ ಮೇಲಣ ಫಿರಿಯಾದಿಯನ್ನು ಹೇಳಿ—ನೀನು ದಯಮಾಡಿ ಅವನನ್ನು ಯೆರೂಸಲೇಮಿಗೆ ಕರತರಿಸಬೇಕೆಂದು ಪೌಲನ ಕೇಡಿ 3 ಗಾಗಿ ಬಿನ್ನಹವನ್ನು ಮಾಡಿದರು. ಮಾರ್ಗದಲ್ಲಿ ಅವನನ್ನು ಕೊಲ್ಲುವದಕ್ಕಾಗಿ ಹೊಂಚು ಹಾಕಿಕೊಂಡಿದ್ದರು. ಫೆಸ್ತನು ಅವರಿಗೆ—ಪೌಲನು ಕೈಸರೈಯದಲ್ಲಿ ಕಾವಲೊಳಗಿದ್ದಾನೆ, 4 ನಾನೇ ಬೇಗ ಅಲ್ಲಿಗೆ ಹೊರಟುಹೋಗಬೇಕೆಂದಿದ್ದೇನೆ; ಆದಕಾರಣ ನಿಮ್ಮಲ್ಲಿ ಪ್ರಮುಖರು 5 ನನ್ನೊಂದಿಗೆ ಬಂದು ಆ ಮನುಷ್ಯನಲ್ಲಿ ಅನುಚಿತವಾದದ್ದೇನಾದರೂ ಇದ್ದರೆ ಅವನ ಮೇಲೆ ತಪ್ಪುಹೊರಿಸಲಿ ಎಂದು ಹೇಳಿದನು.

ಅವನು ಅವರಲ್ಲಿ ಎಂಟು ಹತ್ತಕ್ಕಿಂತ ಹೆಚ್ಚು ದಿವಸಗಳು ನಿಲ್ಲದೆ, ಕೈಸರೈಯಕ್ಕೆ 6 ಹೋಗಿ, ಮರುದಿನ ನ್ಯಾಯಸ್ಥಾನದಲ್ಲಿ ಕೂತುಕೊಂಡು, ಪೌಲನನ್ನು ತರಬೇಕೆಂದು ಅಪ್ಪಣೆಮಾಡಿದನು. ಅವನು ಬಂದ ಮೇಲೆ, ಯೆರೂಸಲೇಮಿನಿಂದ ಬಂದಿದ್ದ ಯೆಹೂ 7

ದ್ಯರು ಅವನ ಸುತ್ತಲು ನಿಂತುಕೊಂಡು, ತಾವು ಸ್ಥಾಪಿಸಲಾರದ ಅನೇಕ ದೊಡ್ಡ ದೊಡ್ಡ
8 ತಪ್ಪುಗಳನ್ನು ಹೊರಿಸುತ್ತಿರಲು, ಪೌಲನು—ಯೆಹೂದ್ಯರ ಧರ್ಮಶಾಸ್ತ್ರದ ವಿಷಯ
ದಲ್ಲಾಗಲಿ ದೇವಾಲಯದ ವಿಷಯದಲ್ಲಾಗಲಿ ಚಕ್ರವರ್ತಿಯ ವಿಷಯದಲ್ಲಾಗಲಿ ನಾನು
9 ಯಾವ ತಪ್ಪನ್ನೂ ಮಾಡಲಿಲ್ಲವೆಂದು ಪ್ರತ್ಯುತ್ತರ ಹೇಳಿದನು. ಫೆಸ್ತನು ಯೆಹೂದ್ಯರ
ಪ್ರೀತಿಯನ್ನು ಸಂಪಾದಿಸಿಕೊಳ್ಳಬೇಕೆಂದು ಅಪೇಕ್ಷಿಸಿ ಪೌಲನನ್ನು—ನೀನು ಯೆರೂಸಲೇ
ಮಿಗೆ ಹೋಗಿ, ಅಲ್ಲಿ ಈ ಕಾರ್ಯಗಳ ವಿಷಯವಾಗಿ ನನ್ನ ಮುಂದೆ ವಿಚಾರಿಸಲ್ಪಡು
10 ವದಕ್ಕೆ ನಿನಗೆ ಇಷ್ಟವುಂಟೋ? ಎಂದು ಕೇಳಲು, ಪೌಲನು—ನಾನು ಚಕ್ರವರ್ತಿಯ
ನ್ಯಾಯಸ್ಥಾನದ ಮುಂದೆ ನಿಂತಿದ್ದೇನೆ; ಇಲ್ಲಿಯೇ ನನ್ನ ವಿಚಾರಣೆಯಾಗತಕ್ಕದ್ದು.
ಯೆಹೂದ್ಯರಿಗೆ ನಾನು ಅನ್ಯಾಯವೇನೂ ಮಾಡಲಿಲ್ಲ; ಅದು ನಿನಗೂ ಚನ್ನಾಗಿ ತಿಳಿದೇ
11 ಇದೆ. ನಾನು ಅನ್ಯಾಯ ಮಾಡಿದವನಾಗಿ ಮರಣದಂಡನೆಗೆ ಕಾರಣವಾದ ಯಾವ
ದನ್ನಾದರೂ ನಡಿಸಿದ್ದಾದರೆ, ಮರಣದಂಡನೆಯನ್ನು ಬೇಡವೆನ್ನುವದಿಲ್ಲ. ಇವರು ನನ್ನ
ಮೇಲೆ ಹೊರಿಸುವ ತಪ್ಪುಗಳಲ್ಲಿ ಒಂದೂ ನಿಜವಲ್ಲದ ಮೇಲೆ, ಇವರ ಮೇಲಣ ದಯೆ
ಯಿಂದ ನನ್ನನ್ನು ಒಪ್ಪಿಸಿಕೊಡುವದಕ್ಕೆ ಒಬ್ಬರಿಗೂ ಅಧಿಕಾರವಿಲ್ಲ. ನಾನು ಚಕ್ರವರ್ತಿ
12 ಯ ಎದುರಿನಲ್ಲಿ ಹೇಳಿಕೊಳ್ಳುತ್ತೇನೆ ಎನಲು, ಫೆಸ್ತನು ತನ್ನ ಸಭೆಯವರ ಸಂಗಡ ಆಲೋ
ಚನೆಮಾಡಿದ ಮೇಲೆ ಪೌಲನಿಗೆ—ಚಕ್ರವರ್ತಿಯ ಎದುರಿನಲ್ಲಿ ಹೇಳಿಕೊಳ್ಳುತ್ತೇನೆ
ಅಂದಿಯಲ್ಲಾ, ಚಕ್ರವರ್ತಿಯ ಬಳಿಗೆ ಹೋಗಬೇಕು ಎಂದು ಹೇಳಿದನು.

ಫೆಸ್ತನು ಅಗ್ರಿಪ್ಪರಾಜನಿಗೆ ಪೌಲನ ಸಂಗತಿಯನ್ನು ತಿಳಿಸಿದ ಮೇಲೆ ಪೌಲನು ಅವರಿಬ್ಬರ ಮುಂದೆ ಪ್ರತಿವಾದ ಮಾಡಿದ್ದು.

13 ಕೆಲವು ದಿವಸಗಳು ಗತಿಸಿದನಂತರ, ಅಗ್ರಿಪ್ಪರಾಜನೂ ಬೆರ್ನಿಕೆರಾಣಿಯೂ ಫೆಸ್ತನ
14 ದರ್ಶನ ಮಾಡಿಕೊಳ್ಳುವದಕ್ಕೆ ಕೈಸರೈಯಕ್ಕೆ ಬಂದರು. ಅವರು ಅನೇಕ ದಿವಸ ಅಲ್ಲಿ
ನಿಂತಿರಲಾಗಿ, ಫೆಸ್ತನು ಪೌಲನ ಸಂಗತಿಯನ್ನು ರಾಜನಿಗೆ ತಿಳಿಸಿ ಹೇಳಿದ್ದೇನಂದರೆ—
15 ಫೇಲಿಕ್ಸನು ಬಿಟ್ಟುಹೋದ ಒಬ್ಬ ಸೆರೆಯವನು ಇದ್ದಾನೆ. ನಾನು ಯೆರೂಸಲೇಮಿನಲ್ಲಿ
ದ್ದಾಗ ಯೆಹೂದ್ಯರ ಮಹಾಯಾಜಕರೂ ಸಭೇಹಿರಿಯರೂ ಅವನ ವಿಷಯವಾಗಿ ನನಗೆ
ಫಿರಿಯಾದಿ ಹೇಳಿ ಅವನಿಗೆ ವಿರುದ್ಧವಾಗಿ ತೀರ್ಪು ಆಗಬೇಕೆಂದು ಬೇಡಿಕೊಂಡರು.
16 ನಾನು ಅವರಿಗೆ—ಪ್ರತಿವಾದಿಯು ವಾದಿಗಳಿಗೆ ಮುಖಾಮುಖಿಯಾಗಿ ನಿಂತು ತನ್ನ
ಮೇಲೆ ಆರೋಪಿಸಿದ ದೋಷವಿಷಯದಲ್ಲಿ ಪ್ರತಿವಾದ ಮಾಡುವದಕ್ಕೆ ಆಸ್ಪದಕೊಡದೆ
17 ಅವನನ್ನು ಒಪ್ಪಿಸಿಬಿಡುವದು ರೋಮಾಯರ ಪದ್ಧತಿಯಲ್ಲವೆಂದು ಹೇಳಿದೆನು. ಅವರು
ಇಲ್ಲಿಗೆ ಕೂಡಿಬಂದಾಗ, ನಾನು ಸ್ವಲ್ಪವಾದರೂ ತಡಮಾಡದೆ ಮರುದಿನವೇ ನ್ಯಾಯ
ಸ್ಥಾನದ ಮೇಲೆ ಕೂತುಕೊಂಡು, ಆ ಮನುಷ್ಯನನ್ನು ತರಬೇಕೆಂದು ಅಪ್ಪಣೆಕೊಟ್ಟೆನು.
18 ತಪ್ಪು ಹೊರಿಸುವವರು ನಿಂತುಕೊಂಡು, ನಾನು ಭಾವಿಸಿದ್ದ ಅಪರಾಧಗಳಲ್ಲಿ ಒಂದನ್ನಾ
19 ದರೂ ಅವನ ಮೇಲೆ ಹೊರಿಸದೆ, ಅವರ ಮತದ ವಿಷಯದಲ್ಲಿಯೂ ಸತ್ತುಹೋದಂಥಾ
ಯೇಸುವೆಂಬ ಒಬ್ಬನ ವಿಷಯದಲ್ಲಿಯೂ ಅವನ ಮೇಲೆ ಕೆಲವು ವಿವಾದದ ಮಾತು

ಗಳನ್ನು ತಂದರು. ಆ ಯೇಸು ಜೀವಿತನಾಗಿದ್ದಾನೆಂದು ಪೌಲನು ಹೇಳಿದನು. ಇಂಥಾ 20
ಕಾರ್ಯಗಳನ್ನು ಹ್ಯಾಗೆ ವಿಚಾರಣೆ ಮಾಡಬೇಕೋ ನನಗೆ ತೋರದೆ—ನೀನು ಯೆರೂ
ಸಲೇಮಿಗೆ ಹೋಗಿ ಅಲ್ಲಿ ಇವುಗಳ ವಿಷಯವಾಗಿ ವಿಚಾರಣೆಹೊಂದುವದಕ್ಕೆ ನಿನಗೆ
ಮನಸ್ಸುಂಟೋ? ಎಂದು ನಾನು ಕೇಳಲು, ಪೌಲನು ಚಕ್ರವರ್ತಿಯ ಎದುರಿನಲ್ಲಿ ಹೇಳಿ 21
ಕೊಳ್ಳುವ ಪರ್ಯಂತರ ತನ್ನನ್ನು ಕಾಯಬೇಕೆಂದು ಕೇಳಿಕೊಂಡಾಗ ನಾನು ಚಕ್ರವರ್ತಿಯ
ಬಳಿಗೆ ಕಳುಹಿಸುವ ತನಕ ಅವನನ್ನು ಕಾಯುವದಕ್ಕೆ ಅಪ್ಪಣೆಕೊಟ್ಟೆನು ಎಂದು ಹೇಳಿ
ದನು. ಅದಕ್ಕೆ ಅಗ್ರಿಪ್ಪನು—ಆ ಮನುಷ್ಯನು ಹೇಳಿಕೊಳ್ಳುವದನ್ನು ಕೇಳುವದಕ್ಕೆ 22
ನನಗೂ ಮನಸ್ಸದೆ ಎಂದು ಹೇಳಲು, ಫೆಸ್ತನು—ನಾಳೆ ಕೇಳಬಹುದು ಅಂದನು.

ಮರುದಿನ ಅಗ್ರಿಪ್ಪರಾಜನೂ ಬೆರ್ನಿಕೆರಾಣಿಯೂ ಬಹು ಆಡಂಬರದಿಂದ ಬಂದು 23
ಸಹಸ್ರಾಧಿಪತಿಗಳ ಮತ್ತು ಪಟ್ಟಣದ ಮುಖಂಡರ ಸಂಗಡ ಸಭಾಸ್ಥಾನದೊಳಗೆ ಸೇರಿ
ದಾಗ, ಫೆಸ್ತನು ಅಪ್ಪಣೆಕೊಡಲು ಪೌಲನನ್ನು ಕರತಂದರು. ಆಗ ಫೆಸ್ತನು—ಅಗ್ರಿಪ್ಪ 24
ರಾಜನೇ, ನಮ್ಮ ಸಂಗಡ ಕೂಡಿಬಂದಿರುವ ಎಲ್ಲಾ ಜನರೇ, ಈ ಮನುಷ್ಯನನ್ನು ನೋಡು
ತ್ತೀರಲ್ಲಾ, ಇವನ ವಿಷಯದಲ್ಲಿ ಯೆಹೂದ್ಯರೆಲ್ಲರೂ—ಇವನು ಇನ್ನು ಮೇಲೆ ಬದುಕ
ಬಾರದೆಂದು ಕೂಗುತ್ತಾ ಯೆರೂಸಲೇಮಿನಲ್ಲಿಯೂ ಇಲ್ಲಿಯೂ ನನ್ನನ್ನು ಬೇಡಿಕೊಂಡರು.
ಇವನು ಮರಣದಂಡನೆಗೆ ಕಾರಣವಾದದ್ದೇನೂ ಮಾಡಲಿಲ್ಲವೆಂದು ನನಗೆ ಕಂಡುಬಂತು. 25
ತಾನೇ ಚಕ್ರವರ್ತಿಗೆ ವಿಜ್ಞಾಪನೆಮಾಡಿಕೊಂಡದ್ದರಿಂದ, ಇವನನ್ನು ಕಳುಹಿಸುವದಕ್ಕೆ
ತೀರ್ಮಾನಿಸಿದೆನು. ಇವನ ವಿಷಯದಲ್ಲಿ ಮಹಾಸನ್ನಿಧಾನಕ್ಕೆ ಬರೆಯುವದಕ್ಕೆ ನಿಶ್ಚ 26
ಯವಾದದ್ದೇನೂ ಇಲ್ಲ. ಸೆರೆಯವನ ಮೇಲೆ ಆರೋಪಿಸಿರುವ ದೋಷಗಳನ್ನು ಸೂಚಿ
ಸದೆ ಅವನನ್ನು ಕಳುಹಿಸುವದು ಯುಕ್ತವಲ್ಲವೆಂದು ನನಗೆ ತೋರುತ್ತದೆ. ಆದದರಿಂದ 27
ವಿಚಾರಣೆಯಾದ ಮೇಲೆ ಬರೆಯುವದಕ್ಕೆ ಏನಾದರೂ ಸಿಕ್ಕೀತೆಂದು ಇವನನ್ನು ನಿಮ್ಮ
ಮುಂದೆ, ಮುಖ್ಯವಾಗಿ ಅಗ್ರಿಪ್ಪರಾಜನೇ ನಿನ್ನ ಮುಂದೆ, ಕರಸಿದ್ದೇನೆ ಅಂದನು.

ಆಗ ಅಗ್ರಿಪ್ಪನು ಪೌಲನಿಗೆ—ನೀನು ನಿನ್ನ ಪಕ್ಷದಲ್ಲಿ ಮಾತಾಡಬಹುದು ಅನ್ನಲು, **26**
ಪೌಲನು ಕೈಯೆತ್ತಿ ಪ್ರತಿವಾದ ಮಾಡಿದ್ದೇನಂದರೆ—

ಅಗ್ರಿಪ್ಪರಾಜನೇ, ಯೆಹೂದ್ಯರು ನನ್ನ ಮೇಲೆ ಆರೋಪಿಸುವ ಎಲ್ಲಾ ದೋಷಗಳ 2
ವಿಷಯವಾಗಿ ನಿನ್ನ ಎದುರಿನಲ್ಲಿ ನಾನು ಈ ಹೊತ್ತು ಪ್ರತಿವಾದ ಮಾಡಬೇಕಾಗಿರುವದ
ರಿಂದ ನನ್ನನ್ನು ಧನ್ಯನೆಂದು ಎಣಿಸಿಕೊಳ್ಳುತ್ತೇನೆ. ಯಾಕಂದರೆ ಯೆಹೂದ್ಯರಲ್ಲಿರುವ 3
ಎಲ್ಲಾ ಆಚಾರಗಳನ್ನೂ ವಿವಾದಗಳನ್ನೂ ನೀನು ಚನ್ನಾಗಿ ಬಲ್ಲವನಾಗಿರುತ್ತೀ. ನನ್ನ
ಮಾತುಗಳನ್ನು ಸಹನದಿಂದ ಕೇಳಬೇಕೆಂದು ಬೇಡಿಕೊಳ್ಳುತ್ತೇನೆ. ನಾನು ಮೊದ 4
ಲಿಂದಲೂ ಯೆರೂಸಲೇಮಿನಲ್ಲಿ ನನ್ನ ದೇಶದ ಜನರೊಳಗಿದ್ದುಕೊಂಡು ಬಾಲ್ಯದಿಂದ
ಬದುಕಿದ ಬಗೆಯು ಎಲ್ಲಾ ಯೆಹೂದ್ಯರಿಗೆ ತಿಳಿದೇ ಅದೆ; ನಮ್ಮ ಧರ್ಮದಲ್ಲಿ ಬಹು 5
ಖಂಡಿತವಾದ ಮತವನ್ನನುಸರಿಸಿ ಫರಿಸಾಯನಾಗಿ ನಡಕೊಂಡೆನೆಂದು ಪ್ರಾರಂಭದಿಂದಲೂ
ಅವರು ಬಲ್ಲರು; ಸಾಕ್ಷಿಹೇಳುವದಕ್ಕೆ ಅವರಿಗೆ ಮನಸ್ಸಿದ್ದರೆ ಹೇಳಬಹುದು. ಈಗಲೂ 6
ದೇವರು ನಮ್ಮ ಪಿತೃಗಳಿಗೆ ಮಾಡಿದ ವಾಗ್ದಾನವು ನೆರವೇರುವದೆಂಬ ನಿರೀಕ್ಷೆಯನ್ನು
ಕುರಿತೇ ವಿಚಾರಿಸಲ್ಪಡುವವನಾಗಿ ಇಲ್ಲಿ ನಿಂತಿದ್ದೇನೆ. ನಮ್ಮ ಹನ್ನೆರಡು ಕುಲದವರು 7

ಹಗಲಿರುಳು ಆಸಕ್ತಿಯಿಂದ ದೇವರನ್ನು ಸೇವಿಸುತ್ತಾ ಆ ವಾಗ್ದಾನದ ಫಲವನ್ನು ಹೊಂದು
ವದಕ್ಕೆ ನಿರೀಕ್ಷಿಸುತ್ತಾ ಇದ್ದಾರೆ. ರಾಜಾ, ಆ ನಿರೀಕ್ಷೆಯ ವಿಷಯದಲ್ಲಿಯೇ ಯೆಹೂ
8 ದ್ಯರು ನನ್ನ ಮೇಲೆ ದೋಷಾರೋಪಣೆ ಮಾಡುತ್ತಾರೆ. ದೇವರು ಸತ್ತವರನ್ನು ಎಬ್ಬಿಸಿದ್ದು
9 ಸಂಬತಕ್ಕದ್ದಲ್ಲವೆಂದು ನೀವು ಯಾಕೆ ತೀರ್ಮಾನಿಸುತ್ತೀರಿ? ನಜರೇತಿನ ಯೇಸುವಿನ
ಹೆಸರಿಗೆ ವಿರುದ್ಧವಾಗಿ ಅನೇಕ ಕಾರ್ಯಗಳನ್ನು ನಡಸಬೇಕೆಂದು ನಾನೂ ಯೋಚಿಸಿ
10 ಕೊಂಡಿದ್ದೆನು. ಯೆರೂಸಲೇಮಿನಲ್ಲಿ ಹಾಗೆಯೇ ನಡಸಿದೆನು. ಮಹಾಯಾಜಕರಿಂದ
ಅಧಿಕಾರವನ್ನು ಪಡೆದು ದೇವಜನರಲ್ಲಿ ಅನೇಕರನ್ನು ಸೆರೆಮನೆಗಳಲ್ಲಿ ಇಡಿಸಿ, ಅವರಿಗೆ
11 ಮರಣದ ತೀರ್ಪಾದಾಗ ನನ್ನ ಸಮ್ಮತಿಯನ್ನು ಸೂಚಿಸಿದೆನು. ಎಲ್ಲಾ ಸಭಾಮಂದಿರ
ಗಳಲ್ಲಿಯೂ ನಾನು ಅನೇಕಾವರ್ತಿ ಅವರನ್ನು ದಂಡಿಸಿ, ಅವರಿಂದ ದೂಷಣೆಯ ಮಾತು
ಗಳನ್ನಾಡಿಸುವದಕ್ಕೆ ಪ್ರಯತ್ನಿಸಿದೆನು. ಇದಲ್ಲದೆ ಅವರ ಮೇಲೆ ಬಹು ಕೋಪಾವೇಶ
12 ವುಳ್ಳವನಾಗಿ ಪರಪಟ್ಟಣಗಳ ತನಕ ಅವರನ್ನು ಹಿಂಸೆಪಡಿಸಿದೆನು. ಈ ಉದ್ದೇಶದಿಂದ
ನಾನು ಮಹಾಯಾಜಕರಿಂದ ಅಧಿಕಾರವನ್ನೂ ಉದ್ಯೋಗವನ್ನೂ ಹೊಂದಿ ದಮಸ್ಕಕ್ಕೆ
13 ಹೋಗುತ್ತಾ ನಾನು ದಾರಿಯಲ್ಲಿದ್ದಾಗ, ರಾಜನೇ, ಮಧ್ಯಾಹ್ನದ ಹೊತ್ತಿನಲ್ಲಿ ಪರಲೋಕ
ದಿಂದಾದ ಒಂದು ಬೆಳಕು ನನ್ನ ಸುತ್ತಲೂ ನನ್ನ ಜೊತೆಯಲ್ಲಿ ಪ್ರಯಾಣಮಾಡುತ್ತಿದ್ದವರ
14 ಸುತ್ತಲೂ ಸೂರ್ಯನ ಹೊಳಪಿಗಿಂತ ಹೆಚ್ಚಾಗಿ ಹೊಳೆಯುವದನ್ನು ಕಂಡೆನು. ನಾವೆಲ್ಲರು
ನೆಲಕ್ಕೆ ಬೀಳಲು—ಸೌಲನೇ, ಸೌಲನೇ, ನನ್ನನ್ನು ಯಾಕೆ ಹಿಂಸೆಪಡಿಸುತ್ತೀ? ಮುಳ್ಳುಗೋ
ಲನ್ನು ಒದೆಯುವದು ನಿನಗೆ ಕಷ್ಟ ಎಂದು ಇಬ್ರೀಯ ಭಾಷೆಯಿಂದ ಹೇಳುವ ವಾಣಿಯನ್ನು
15 ಕೇಳಿದೆನು. ಆಗ ನಾನು—ಕರ್ತನೇ, ನೀನ್ಯಾರು? ಅನ್ನಲು, ಕರ್ತನು—ನೀನು ಹಿಂಸೆ
16 ಪಡಿಸುವ ಯೇಸುವೇ ನಾನು. ನೀನು ಎದ್ದು ನಿಂತುಕೋ. ನಿನ್ನನ್ನು ನನ್ನ ಸೇವಕ
ನಾಗಿಯೂ ಸಾಕ್ಷಿಯಾಗಿಯೂ ನೇಮಿಸುವದಕ್ಕೋಸ್ಕರ ನಿನಗೆ ಕಾಣಿಸಿಕೊಂಡಿದ್ದೇನೆ.
ನಾನು ಈಗಲೂ ಮುಂದೆ ನಿನಗೆ ಕೊಡಲಿಕ್ಕಿರುವ ದರ್ಶನಗಳಲ್ಲಿಯೂ ನಿನಗೆ ಕಾಣಿಸಿ
17 ಕೊಂಡದ್ದನ್ನು ಕುರಿತು ನೀನು ಸಾಕ್ಷಿಯಾಗಿರಬೇಕು. ನಾನು ನಿನ್ನನ್ನು ಇಸ್ರಯೇಲ
18 ಜನರ ಕೈಯೊಳಗಿಂದಲೂ ಅನ್ಯಜನರ ಕೈಯೊಳಗಿಂದಲೂ ಬಿಡಿಸುವೆನು. ಅವರು ಕತ್ತ
ಲೆಯಿಂದ ಬೆಳಕಿಗೂ ಸೈತಾನನ ಅಧಿಕಾರದಿಂದ ದೇವರ ಕಡೆಗೂ ತಿರುಗಿಕೊಂಡು
ನನ್ನಲ್ಲಿ ನಂಬಿಕೆಯಿಡುವದರಿಂದ ಪಾಪಪರಿಹಾರವನ್ನೂ ದೇವಜನರಾದವರಲ್ಲಿ[1] ಹಕ್ಕನ್ನೂ
ಹೊಂದುವಂತೆ ಅವರ ಕಣ್ಣುಗಳನ್ನು ತೆರೆಯಬೇಕೆಂದು ಅವರ ಬಳಿಗೆ ನಾನು ನಿನ್ನನ್ನು
19 ಕಳುಹಿಸುತ್ತೇನೆ ಅಂದನು. ಆದಕಾರಣ, ಅಗ್ರಿಪ್ಪರಾಜನೇ, ಪರಲೋಕದಿಂದ ನನಗೆ
20 ಉಂಟಾದ ಆ ದರ್ಶನಕ್ಕೆ ನಾನು ಅವಿಧೇಯನಾಗದೆ, ಮೊದಲು ದಮಸ್ಕದವರಿಗೆ, ಆ
ಮೇಲೆ ಯೆರೂಸಲೇಮಿನಲ್ಲಿಯೂ ಯೂದಾಯದ ಎಲ್ಲಾ ಸೀಮೆಯಲ್ಲಿಯೂ ಇರುವವ
ರಿಗೆ ಮತ್ತು ಅನ್ಯಜನರಿಗೆ ಸಹ—ನೀವು ದೇವರ ಕಡೆಗೆ ತಿರುಗಿಕೊಳ್ಳಬೇಕೆಂತಲೂ ಮಾನ
21 ಸಾಂತರಕ್ಕೆ ಯೋಗ್ಯವಾದ ಕೃತ್ಯಗಳನ್ನು ಮಾಡಬೇಕೆಂತಲೂ ಸಾರಿದೆನು. ಈ ಕಾರಣ
ದಿಂದ ಯೆಹೂದ್ಯರು ದೇವಾಲಯದಲ್ಲಿ ನನ್ನನ್ನು ಹಿಡಿದು ಕೊಲ್ಲುವದಕ್ಕೆ ಪ್ರಯತ್ನಿಸಿ

---

[1] ಅಥವಾ, ಪ್ರತಿಷ್ಠಿತರಲ್ಲಿ, ಅಥವಾ ಪವಿತ್ರರಾದವರಲ್ಲಿ; ೨೦, ೩೨; ಎಫೆಸ. ೧, ೧೮.

ದರು. ಆದರೆ ನಾನು ದೇವರಿಂದ ಸಹಾಯವನ್ನು ಪಡೆದು ಈ ದಿನದ ವರೆಗೂ ಸುರಕ್ಷಿ 22 ತವಾಗಿದ್ದು ಚಿಕ್ಕವರಿಗೂ ದೊಡ್ಡವರಿಗೂ ಸಾಕ್ಷಿಹೇಳುವವನಾಗಿದ್ದೇನೆ. ಪ್ರವಾದಿಗಳೂ ಮೋಶೆಯೂ ಮುಂದೆ ಆಗುವವೆಂದು ತಿಳಿಸಿದ ಸಂಗತಿಗಳನ್ನೇ ಹೊರತು ಇನ್ನೇನೂ ಹೇಳುವವನಲ್ಲ. ಆ ಸಂಗತಿಗಳು ಏನಂದರೆ—ಕ್ರಿಸ್ತನು ಬಾಧೆಪಟ್ಟು ಸಾಯಬೇಕಾದವನು, 23 ಮತ್ತು ಆತನು ಸತ್ತವರೊಳಗಿಂದ ಮೊದಲನೆಯವನಾಗಿ ಎದ್ದು ಯೆಹೂದ್ಯರಿಗೂ ಅನ್ಯಜನರಿಗೂ ಬೆಳಕನ್ನು ಪ್ರಸಿದ್ಧಿಪಡಿಸುವವನಾಗಿರುವನು ಎಂಬುವದೇ.

ಹೀಗೆ ಪೌಲನು ಪ್ರತಿವಾದ ಮಾಡುತ್ತಿದ್ದಾಗ, ಫೆಸ್ತನು ಮಹಾಶಬ್ದದಿಂದ—ಪೌಲನೇ, 24 ನೀನು ಮರುಳಾಗಿದ್ದೀ; ನೀನು ಬಹಳವಾಗಿ ಮಾಡುವ ಶಾಸ್ತ್ರವಿಚಾರವು ನಿನ್ನನ್ನು ಮರುಳುಗೊಳ್ಳಿಸುತ್ತದೆ ಎಂದು ಹೇಳಿದನು. ಅದಕ್ಕೆ ಪೌಲನು—ಶ್ರೀಮನ್ ಮಹಾ 25 ಫೆಸ್ತನೇ, ನಾನು ಮರುಳಾಗಿಲ್ಲ; ಸ್ವಸ್ಥಬುದ್ಧಿಯುಳ್ಳವನಾಗಿ ಸತ್ಯವಾದ ಮಾತುಗಳ ನ್ನಾಡುತ್ತೇನೆ. ಅಗ್ರಿಪ್ಪರಾಜನು ಈ ಸಂಗತಿಗಳನ್ನು ತಿಳಿದವನು; ಅವನ ಮುಂದೆ 26 ಧೈರ್ಯವಾಗಿ ಮಾತಾಡುತ್ತೇನೆ. ಇವುಗಳಲ್ಲಿ ಒಂದಾದರೂ ಅವನಿಗೆ ಮರೆಯಾದದ್ದಲ್ಲ ವೆಂದು ನಂಬಿದ್ದೇನೆ, ಯಾಕಂದರೆ ಇದು ಮೂಲೆಯಲ್ಲಿ ನಡೆದ ಕಾರ್ಯವಲ್ಲ. ಅಗ್ರಿಪ್ಪ 27 ರಾಜನೇ, ಪ್ರವಾದಿಗಳಲ್ಲಿ ನಿನಗೆ ನಂಬಿಕೆಯುಂಟೋ? ಉಂಟೆಂದು ಬಲ್ಲೆನು ಅಂದನು. ಅದಕ್ಕೆ ಅಗ್ರಿಪ್ಪನು—ಅಲ್ಪಪ್ರಯತ್ನದಿಂದ ನನ್ನನ್ನು ಕ್ರೈಸ್ತನಾಗುವದಕ್ಕೆ ಒಡಂಬಡಿಸು 28 ತ್ತೀಯಾ? ಎಂದು ಹೇಳಲು, ಪೌಲನು—ಅಲ್ಪಪ್ರಯತ್ನದಿಂದಾಗಲಿ ಅಧಿಕಪ್ರಯತ್ನದಿಂದಾ 29 ಗಲಿ ನೀನು ಮಾತ್ರವಲ್ಲದೆ ಈ ಹೊತ್ತು ನನ್ನ ಮಾತುಗಳನ್ನು ಕೇಳುವವರೆಲ್ಲರೂ ಈ ಬೇಡಿಗಳ ಹೊರತು ನನ್ನಂತೆ ಆಗಬೇಕೆಂದು ದೇವರನ್ನು ಪ್ರಾರ್ಥಿಸುತ್ತೇನೆ ಅಂದನು.

ಆ ಮೇಲೆ ರಾಜನೂ ದೇಶಾಧಿಪತಿಯೂ ಬೆರ್ನಿಕೆಯೂ ಅವರ ಸಂಗಡ ಕೂತಿದ್ದವರೂ 30 ಎದ್ದು ಆಚೆಗೆ ಹೋಗಿ—ಈ ಮನುಷ್ಯನು ಮರಣದಂಡನೆಗಾಗಲಿ ಬೇಡಿಗಾಗಲಿ ಆಧಾರ 31 ವಾದದ್ದೇನೂ ಮಾಡುವವನಲ್ಲ ಎಂಬದಾಗಿ ತಮ್ಮತಮ್ಮೊಳಗೆ ಮಾತಾಡಿಕೊಳ್ಳುತ್ತಿದ್ದರು. ಅಗ್ರಿಪ್ಪನು ಫೆಸ್ತನಿಗೆ—ಈ ಮನುಷ್ಯನು ಚಕ್ರವರ್ತಿಯ ಎದುರಿನಲ್ಲಿ ಹೇಳಿಕೊಳ್ಳುತ್ತೇ 32 ನೆಂದು ಹೇಳದೆ ಹೋಗಿದ್ದರೆ, ಇವನನ್ನು ಬಿಡಬಹುದಾಗಿತ್ತು ಎಂದು ಹೇಳಿದನು.

ಪೌಲನು ಕೈಸರೈಯದಿಂದ ರೋಮಾಪುರಕ್ಕೆ ಪ್ರಯಾಣಮಾಡುತ್ತಿರಲು, ಹಡಗು ಮೆಲೀತದ್ವೀಪದ ದಡದಲ್ಲಿ ಒಡೆದು ನಾಶವಾದದ್ದು.

ನಾವು ಸಮುದ್ರಮಾರ್ಗವಾಗಿ ಇತಾಲ್ಯದೇಶಕ್ಕೆ ಹೋಗಬೇಕೆಂದು ತೀರ್ಮಾನವಾದ **27** ಮೇಲೆ, ಪೌಲನನ್ನೂ ಬೇರೆ ಕೆಲವು ಸೆರೆಯವರನ್ನೂ ಚಕ್ರವರ್ತಿಯ ಪಟಾಲಮಿಗೆ ಸೇರಿದ ಯೂಲ್ಯನೆಂಬ ಒಬ್ಬ ಶತಾಧಿಪತಿಗೆ ಒಪ್ಪಿಸಿದರು. ಆಗ ಅದ್ರಮಿತ್ತಿಯದಿಂದ ಬಂದು 2 ಆಸ್ಯಸೀಮೆಯ ಕರಾವಳಿಯ ಸ್ಥಳಗಳಿಗೆ ಹೋಗುವದಕ್ಕಿದ್ದ ಒಂದು ಹಡಗನ್ನು ಹತ್ತಿ ಸಮುದ್ರಪ್ರಯಾಣವನ್ನು ಪ್ರಾರಂಭಿಸಿದೆವು. ಮಕೆದೋನ್ಯಕ್ಕೆ ಸೇರಿದ ಥೆಸಲೊನೀಕದ ಅರಿಸ್ತಾರ್ಕನು ನಮ್ಮ ಜೊತೆಯಲ್ಲಿದ್ದನು. ಮರುದಿನ ಸೀದೋನಿಗೆ ಮುಟ್ಟಿದೆವು. 3 ಯೂಲ್ಯನು ಪೌಲನಿಗೆ ದಯೆಯನ್ನು ತೋರಿಸುವವನಾಗಿ ಅವನನ್ನು ಸ್ನೇಹಿತರ ಬಳಿಗೆ

4 ಹೋಗಿ ಸತ್ಕಾರಹೊಂದುವದಕ್ಕೆ ಬಿಟ್ಟನು. ಅಲ್ಲಿಂದ ಹೊರಟು, ಎದುರುಗಾಳಿ ಬೀಸು
5 ತ್ತಿದ್ದದರಿಂದ ಕುಪ್ರದ್ವೀಪದ ಮರೆಯಲ್ಲಿ ಸಾಗಿ ಕಿಲಿಕ್ಯಕ್ಕೂ ಪಂಫುಲ್ಯಕ್ಕೂ ಎದುರಾಗಿ
6 ರುವ ಸಮುದ್ರವನ್ನು ದಾಟಿ ಲುಕೀಯ ಸೀಮೆಯಲ್ಲಿರುವ ಮುರಕ್ಕೆ ಬಂದೆವು. ಅಲ್ಲಿ ಅಲೆಕ್ಸಾಂದ್ರಿಯದಿಂದ ಬಂದು ಇತಾಲ್ಯದೇಶಕ್ಕೆ ಹೋಗುತ್ತಿದ್ದ ಒಂದು ಹಡಗನ್ನು ಶತಾಧಿ
7 ಪತಿಯು ಕಂಡು, ನಮ್ಮನ್ನು ಅದರ ಮೇಲೆ ಹತ್ತಿಸಿದನು. ಅನೇಕ ದಿವಸ ನಿಧಾನವಾಗಿ ಸಾಗುತ್ತಾ, ಎಷ್ಟೋ ಪ್ರಯಾಸದಿಂದ ಕ್ನೀದಕ್ಕೆ ಎದುರಾಗಿ ಬಂದಾಗ, ಗಾಳಿಯು ನಮ್ಮನ್ನು ಅಲ್ಲಿಗೆ ಮುಟ್ಟಗೊಡಿಸದೆ ಇದ್ದದರಿಂದ, ಕ್ರೇತದ್ವೀಪದ ಮರೆಯಲ್ಲಿ ಸಾಗಿ ಸಲ್ಮೋನೆಗೆ
8 ಎದುರಾಗಿ ಬಂದು, ಪ್ರಯಾಸದಿಂದ ಆ ದ್ವೀಪದ ಕರಾವಳಿಯನ್ನು ಹಿಡಿದು ಹೋಗಿ, ಚಂದರೇವುಗಳೆಂಬ ಸ್ಥಳಕ್ಕೆ ಸೇರಿದೆವು. ಅದರ ಹತ್ತರದಲ್ಲಿ ಲಸಾಯವೆಂಬ ಪಟ್ಟ ಣವು ಇತ್ತು.

9 ಹೀಗೆ ಬಹುಕಾಲ ಕಳೆದುಹೋಯಿತು, ಮಹಾ ಉಪವಾಸದ ದಿವಸವು ಆಗಿಹೋಗಿತ್ತು. ಈ ಸಂದರ್ಭದಲ್ಲಿ ಸಮುದ್ರಪ್ರಯಾಣ ಮಾಡುವದು ಅಪಾಯಕರವಾಗಿದ್ದದರಿಂದ,
10 ಪೌಲನು—ಜನರೇ, ಈ ಪ್ರಯಾಣದಿಂದ ಸರಕಿಗೂ ಹಡಗಿಗೂ ಮಾತ್ರವಲ್ಲದೆ ನಮ್ಮ ಪ್ರಾಣಗಳಿಗೂ ಕಷ್ಟವೂ ಬಹು ನಷ್ಟವೂ ಸಂಭವಿಸುವದೆಂದು ನನಗೆ ತೋರುತ್ತದೆ ಎಂದು
11 ಅವರನ್ನು ಎಚ್ಚರಿಸಿದನು. ಆದರೆ ಪೌಲನು ಹೇಳಿದ ಮಾತುಗಳಿಗಿಂತ ನಾವಿಕನೂ ಹಡಗಿನ ಯಜಮಾನನೂ ಹೇಳಿದ ಮಾತಿಗೆ ಶತಾಧಿಪತಿಯು ಹೆಚ್ಚಾಗಿ ಲಕ್ಷ್ಯ ಕೊಟ್ಟನು.
12 ಆ ರೇವು ಹಿಮಕಾಲವನ್ನು ಕಳೆಯುವದಕ್ಕೆ ಅನುಕೂಲವಲ್ಲದ್ದರಿಂದ, ಅಲ್ಲಿಂದ ಹೊರಟು, ಸಾಧ್ಯವಾದರೆ ಹ್ಯಾಗೂ ಫೊಯಿನಿಕ್ಸ ಊರನ್ನು ಸೇರಿ ಅಲ್ಲೇ ಆ ಹಿಮಕಾಲವನ್ನು ಕಳೆಯಬೇಕೆಂದು ಹೆಚ್ಚು ಜನರು ಆಲೋಚನೆ ಹೇಳಿದರು. ಫೊಯಿನಿಕ್ಸವು ಕ್ರೇತದ್ವೀಪದ ಒಂದು ರೇವು; ಅದು ಈಶಾನ್ಯ ದಿಕ್ಕಿಗೂ ಆಗ್ನೇಯ ದಿಕ್ಕಿಗೂ ಅಭಿಮುಖವಾಗಿದೆ.
13 ತೆಂಕಣ ಗಾಳಿ ಮೆಲ್ಲಗೆ ಬೀಸಲಾಗಿ, ತಮ್ಮ ಉದ್ದೇಶವು ಸಾರ್ಥಕವಾಯಿತೆಂದು ಭಾವಿಸಿ ಲಂಗರ ಎತ್ತಿ ಕ್ರೇತದ್ವೀಪವನ್ನು ಅನುಸರಿಸಿ ತೀರದ ಮಗ್ಗುಲಲ್ಲೇ ಹೋಗುತ್ತಿದ್ದರು.
14 ಸ್ವಲ್ಪ ಹೊತ್ತಿನ ಮೇಲೆ, ಆ ದ್ವೀಪದ ಮೇಲಣಿಂದ ಈಶಾನ್ಯಪೂರ್ವವಾಯು ಎಂಬ
15 ಹುಚ್ಚುಗಾಳಿಯು ಹೊಡೆಯಿತು. ಆ ಹೊಡೆತಕ್ಕೆ ಹಡಗು ಸಿಕ್ಕಿಕೊಂಡು ಗಾಳಿಗೆದು ರಾಗಿ ನಿಲ್ಲುವದಕ್ಕೆ ಆಗದೆಹೋದದರಿಂದ, ಗಾಳಿಗೆ ಆಸ್ಪದ ಕೊಟ್ಟು ನೂಕಿಸಿಕೊಂಡು
16 ಹೋದೆವು. ಕ್ಲೌಡವೆಂಬ ಒಂದು ಸಣ್ಣ ದ್ವೀಪದ ಮರೆಯಲ್ಲಿ ಹಡಗನ್ನು ನಡಸಿಕೊಂಡು ಬಂದ ತರುವಾಯ ಹಡಗಿನ ದೋಣಿಯನ್ನು ಎತ್ತಿ ಭದ್ರಮಾಡಿಕೊಳ್ಳುವದು ನಮಗೆ
17 ಪ್ರಯಾಸವಾಯಿತು. ಅದನ್ನು ಮೇಲಕ್ಕೆ ಎತ್ತಿದ ತರುವಾಯ ಹೊರಜೆಗಳನ್ನು ತೆಗೆದು ಕೊಂಡು ಹಡಗಿನ ಕೆಳಭಾಗವನ್ನು ಬಿಗಿದರು. ಆ ಮೇಲೆ ಸುರ್ತಿಸ್ ಎಂಬ ಕಳ್ಳುಸು ಬಿನಲ್ಲಿ ಸಿಕ್ಕಿಬಿದ್ದೇವೆಂದು ಭಯಪಟ್ಟು ಹಾಯಿಯನ್ನು ಸಡಿಲುಮಾಡಿ ನೂಕಿಸಿಕೊಂಡು
18 ಹೋದೆವು. ಗಾಳಿಯು ನಮ್ಮನ್ನು ಅತ್ಯಂತವಾಗಿ ಹೊಯಿದಾಡಿಸಿದ್ದರಿಂದ ಅವರು
19 ಮರುದಿನ ಸರಕನ್ನು ಬಿಸಾಡುತ್ತಿದ್ದರು. ಮೂರನೇ ದಿನದಲ್ಲಿ ಹಡಗಿನ ಅಡ್ಡಮರವನ್ನು[1]

---

[1] ಅಥವಾ, ಸಾಮಾನುಗಳನ್ನು.

ತಮ್ಮ ಕೈಯಿಂದಲೇ ಹೊರಗೆ ಎತ್ತಿಹಾಕಿದರು. ಅನೇಕ ದಿವಸಗಳ ತನಕ ಸೂರ್ಯ 20
ನಾಗಲಿ ನಕ್ಷತ್ರಗಳಾಗಲಿ ನಮಗೆ ಕಾಣಿಸದೆ, ದೊಡ್ಡ ಬಿರುಗಾಳಿ ನಮ್ಮ ಮೇಲೆ ಹೊಡೆದ
ದ್ದರಿಂದ, ತಪ್ಪಿಸಿಕೊಂಡೇವೆಂಬ ಎಲ್ಲಾ ನಿರೀಕ್ಷೆಯು ಅಂದಿನಿಂದ ಕಳೆದುಹೋಯಿತು.

ಅವರು ಬಹುಕಾಲ ಊಟವಿಲ್ಲದೆ ಇದ್ದ ಮೇಲೆ, ಪೌಲನು ಅವರ ಮಧ್ಯದಲ್ಲಿ ನಿಂತು 21
ಕೊಂಡು—ಎಲೈ ಜನರೇ, ನೀವು ಕ್ರೇತದಿಂದ ಹೊರಟು ಈ ಕಷ್ಟನಷ್ಟಗಳಿಗೆ ಗುರಿಯಾಗ
ದಂತೆ ನನ್ನ ಮಾತನ್ನು ಕೇಳಬೇಕಾಗಿತ್ತು. ಈಗಲಾದರೂ ನೀವು ಧೈರ್ಯದಿಂದಿರ 22
ಬೇಕೆಂದು ನಿಮಗೆ ಬುದ್ಧಿಹೇಳುತ್ತೇನೆ; ಹಡಗು ನಷ್ಟವಾಗುವದೇ ಹೊರತು ನಿಮ್ಮಲ್ಲಿ
ಒಬ್ಬರಿಗೂ ಪ್ರಾಣನಷ್ಟವಾಗುವದಿಲ್ಲ. ನಾನು ಯಾರವನಾಗಿದ್ದೇನೋ ಯಾರನ್ನು 23
ಸೇವಿಸುತ್ತೇನೋ ಆ ದೇವರಿಂದ ಬಂದ ಒಬ್ಬ ದೂತನು ಕಳೆದ ರಾತ್ರಿಯಲ್ಲಿ ನನ್ನ ಹತ್ತರ
ನಿಂತು—ಪೌಲನೇ, ಭಯ ಪಡಬೇಡ, ನೀನು ಚಕ್ರವರ್ತಿಯ ಮುಂದೆ ನಿಲ್ಲಬೇಕು; ಇದ 24
ಲ್ಲದೆ ನಿನ್ನ ಸಂಗಡ ಈ ಹಡಗಿನಲ್ಲಿ ಪ್ರಯಾಣಮಾಡುವವರೆಲ್ಲರ ಪ್ರಾಣ ದೇವರು ನಿನ್ನ
ಮೇಲಣ ದಯೆಯಿಂದ ಉಳಿಸಿಕೊಟ್ಟಿದ್ದಾನೆಂದು ನನ್ನ ಸಂಗಡ ಹೇಳಿದನು. ಆದದ 25
ರಿಂದ ಜನರೇ ಧೈರ್ಯವಾಗಿರಿ. ನನಗೆ ಹೇಳಲ್ಪಟ್ಟ ಪ್ರಕಾರವೇ ಆಗುವದೆಂದು ದೇವ
ರನ್ನು ನಂಬುತ್ತೇನೆ. ಆದರೆ ನಾವು ಯಾವದೋ ಒಂದು ದ್ವೀಪದ ದಡವನ್ನು ತಾಕ 26
ಬೇಕಾಗಿದೆ ಎಂದು ಹೇಳಿದನು.

ಹದಿನಾಲ್ಕನೇ ರಾತ್ರಿ ಬಂದ ಮೇಲೆ, ನಾವು ಆದ್ರಿಯ ಸಮುದ್ರದಲ್ಲಿ ಅತ್ತ ಇತ್ತ ಬಡಿಸಿ 27
ಕೊಂಡು ಹೋಗುತ್ತಿರುವಾಗ, ಸುಮಾರು ಮಧ್ಯರಾತ್ರಿಯಲ್ಲಿ ನಾವಿಕರು ಒಂದು ದೇಶದ
ಹತ್ತರ ಬಂದೆವೆಂದು ನೆನಸಿ, ಅಳತೇಗುಂಡನ್ನು ಇಳಿಸಿ, ಇಪ್ಪತ್ತು ಮಾರುದ್ದವೆಂದು 28
ಕಂಡರು. ಸ್ವಲ್ಪ ಹೊತ್ತಿನ ಮೇಲೆ ಅವರು ತಿರಿಗಿ ಅಳತೇಗುಂಡನ್ನು ಇಳಿಸಿ ನೋಡ
ಲಾಗಿ, ಹದಿನೈದು ಮಾರುದ್ದವೆಂದು ಕಂಡರು. ಬಂಡೇಸ್ಥಳವನ್ನು ತಾಕ್ಯೇವೆಂದು 29
ಭಯಪಟ್ಟು, ಹಡಗಿನ ಹಿಂಭಾಗದಿಂದ ನಾಲ್ಕು ಲಂಗರಗಳನ್ನು ಬಿಟ್ಟು ಯಾವಾಗ ಬೆಳ
ಗಾದೀತು ಎಂದು ಹಾರೈಸುತ್ತಿದ್ದರು. ಆದರೆ ನಾವಿಕರು ಮುಂಭಾಗದಲ್ಲಿ ಲಂಗರ 30
ಗಳನ್ನು ಹಾಕಬೇಕೆಂಬುವ ನೆವದಿಂದ ದೋಣಿಯನ್ನು ಸಮುದ್ರದಲ್ಲಿ ಇಳಿಸಿ ಹಡಗನ್ನು
ಬಿಟ್ಟು ತಪ್ಪಿಸಿಕೊಂಡುಹೋಗುವದಕ್ಕೆ ಪ್ರಯತ್ನಿಸುತ್ತಿರುವಾಗ, ಪೌಲನು ಶತಾಧಿಪತಿಗೂ 31
ಸಿಪಾಯಿಗಳಿಗೂ—ಇವರು ಹಡಗಿನಲ್ಲಿ ನಿಲ್ಲದೆ ಹೋದರೆ, ನೀವೂ ಉಳುಕೊಳ್ಳುವದ
ಕ್ಕಾಗುವದಿಲ್ಲವೆಂದು ಹೇಳಿದನು. ಆಗ ಸಿಪಾಯಿಗಳು ದೋಣಿಯ ಹಗ್ಗಗಳನ್ನು ಕತ್ತ 32
ರಿಸಿ ಅದು ಬಿದ್ದುಹೋಗುವಂತೆ ಮಾಡಿದರು. ಬೆಳಗಾಗುತ್ತಿರುವಷ್ಟರಲ್ಲಿ ಪೌಲನು ಏನಾ 33
ದರೂ ಆಹಾರವನ್ನು ತೆಗೆದುಕೊಳ್ಳಬೇಕೆಂದು ಎಲ್ಲರನ್ನು ಬೇಡಿಕೊಳ್ಳುವವನಾಗಿ—ನೀವು
ಈ ಹೊತ್ತಿಗೆ ಹದಿನಾಲ್ಕು ದಿವಸದಿಂದ ಕಾದುಕೊಂಡು ಆಹಾರವೇನೂ ತೆಗೆದುಕೊಳ್ಳದೆ
ಉಪವಾಸವಾಗಿಯೇ ಇದ್ದೀರಾದದರಿಂದ ಆಹಾರ ತೆಗೆದುಕೊಳ್ಳಬೇಕೆಂದು ನಿಮ್ಮನ್ನು ಬೇಡಿ 34
ಕೊಳ್ಳುತ್ತೇನೆ. ಇದು ನಿಮ್ಮ ಪ್ರಾಣರಕ್ಷಣೆಗೆ ಅವಶ್ಯ. ನಿಮ್ಮಲ್ಲಿ ಯಾರ ತಲೆಯಿಂದಾ
ದರೂ ಒಂದು ಕೂದಲೂ ಉದುರಿಹೋಗುವದಿಲ್ಲವೆಂದು ಹೇಳಿ, ರೊಟ್ಟಿಯನ್ನು ತೆಗೆದು 35
ಕೊಂಡು ಎಲ್ಲರ ಮುಂದೆ ದೇವರ ಸ್ತೋತ್ರಮಾಡಿ ಅದನ್ನು ಮುರಿದು ತಿನ್ನುವದಕ್ಕೆ
ಪ್ರಾರಂಭಿಸಿದನು. ಆಗ ಎಲ್ಲರು ಧೈರ್ಯತಂದುಕೊಂಡು ತಾವೂ ಆಹಾರವನ್ನು 36

37 ತೆಗೆದುಕೊಂಡರು. ಆ ಹಡಗಿನಲ್ಲಿದ್ದ ನಾವೆಲ್ಲರು ಇನ್ನೂರ ಎಪ್ಪತ್ತಾರು ಮಂದಿ.
38 ಸಾಕಾದಷ್ಟು ತಿಂದ ಮೇಲೆ ಗೋದಿಯನ್ನು ಸಮುದ್ರಕ್ಕೆ ಚೆಲ್ಲಿ ಹಡಗನ್ನು ಹಗುರ ಮಾಡಿದರು.
39 ಬೆಳಗಾದ ಮೇಲೆ ಆ ದೇಶದ ಗುರುತನ್ನು ತಿಳಿಯದೆ, ಉಸುಬಿನ ದಡವುಳ್ಳ ಒಂದು ಕೊಲ್ಲಿ ಯನ್ನು ನೋಡಿ ಆ ದಡದ ಮೇಲೆ ಹಡಗನ್ನು ನೂಕುವದಕ್ಕೆ ಸಾಧ್ಯವಾದೀತೆಂದು
40 ಯೋಚಿಸಿ, ಅವರು ಲಂಗರಗಳನ್ನು ಸರಿದು ಸಮುದ್ರದಲ್ಲೇ ಬಿಟ್ಟು, ಚುಕಾಣಿಗಳ ಕಟ್ಟು ಗಳನ್ನು ಬಿಚ್ಚಿ, ದೊಡ್ಡ ಹಾಯಿಯನ್ನು ಗಾಳಿಗೆ ಎತ್ತಿಕಟ್ಟಿ, ಹಡಗನ್ನು ಆ ದಡಕ್ಕೆ ನಡಸುತ್ತಿ
41 ದ್ದರು. ಆದರೆ ಮಧ್ಯದಲ್ಲಿ ಅವರಿಗೆ ಮರಳದಿಬ್ಬ ಸಿಕ್ಕಿದಾಗ ಅದಕ್ಕೆ ನಾವೆಯನ್ನು ಹತ್ತಿಸಿ ದರು. ಮುಂಭಾಗವು ತಗಲಿಕೊಂಡು ಅಲ್ಲಾಡದೆ ನಿಂತಿತು. ಹಿಂಭಾಗವು ತೆರೆಗಳ ಹೊಡತ
42 ದಿಂದ ಒಡೆದುಹೋಗುತ್ತಾ ಬಂತು. ಸೆರೆಯವರಲ್ಲಿ ಕೆಲವರು ಈಜಿ ತಪ್ಪಿಸಿಕೊಂಡಾರೆಂದು
43 ಸಿಪಾಯಿಗಳು ಅವರನ್ನು ಕೊಲ್ಲಬೇಕೆಂಬದಾಗಿ ಆಲೋಚನೆ ಹೇಳಿದರು. ಆದರೆ ಶತಾಧಿ ಪತಿಯು ಪೌಲನನ್ನು ಉಳಿಸಬೇಕೆಂದು ಅಪೇಕ್ಷಿಸಿ ಅವರ ಆಲೋಚನೆಯನ್ನು ಬೇಡವೆಂದು—
44 ಈಜಬಲ್ಲವರು ಹಡಗದಿಂದ ಧುಮುಕಿ ಮೊದಲಾಗಿ ತೀರಕ್ಕೆ ಹೋಗಬೇಕೆಂತಲೂ ಮಿಕ್ಕಾದ ವರಲ್ಲಿ ಕೆಲವರು ಹಲಿಗೆಗಳ ಮೇಲೆ ಕೆಲವರು ಹಡಗಿನ ತುಂಡುಗಳ ಮೇಲೆ ಹೋಗಬೇ ಕೆಂತಲೂ ಅಪ್ಪಣೆಕೊಟ್ಟನು. ಈ ರೀತಿಯಿಂದ ಎಲ್ಲರೂ ಸುರಕ್ಷಿತವಾಗಿ ತೀರಕ್ಕೆ ಸೇರಿದರು.

ಮೆಲೀತೆದ್ವೀಪದಲ್ಲಿ ಪೌಲನಿಗೆ ಸಂಭವಿಸಿದ ಅಪಾಯವೂ, ಉಂಟಾದ ಸನ್ಮಾನವೂ.

**28** ನಾವು ದಡಕ್ಕೆ ಸೇರಿದ ಮೇಲೆ ಆ ದ್ವೀಪದ ಹೆಸರು ಮೆಲೀತೆ ಎಂದು ನಮಗೆ ತಿಳಿದು
2 ಬಂತು. ಅನ್ಯಭಾಷೆಯವರಾದ ಆ ದ್ವೀಪದವರು ನಮಗೆ ಮಾಡಿದ ಉಪಕಾರವು ಅಷ್ಟಿ ಷ್ಟಲ್ಲ. ಮಳೆಯು ಆಗಲೇ ಹೊಯ್ಯುತ್ತಿದ್ದರಿಂದಲೂ ಚಳಿಯಾಗಿರುವದರಿಂದಲೂ
3 ಅವರು ಬೆಂಕಿಯನ್ನು ಹೊತ್ತಿಸಿ ನಮ್ಮೆಲ್ಲರನ್ನು ಸೇರಿಸಿಕೊಂಡರು. ಪೌಲನು ಒಂದು ಹೊರೆ ಕಟ್ಟಿಗೆಯನ್ನು ಕೂಡಿಸಿ ಬೆಂಕಿಯ ಮೇಲೆ ಹಾಕಲು, ಆ ಕಾವಿನ ದೆಸೆಯಿಂದ
4 ಒಂದು ಹಾವು ಹೊರಗೆ ಬಂದು ಅವನ ಕೈಯನ್ನು ಬಿಗಿಯಾಗಿ ಹಿಡುಕೊಂಡಿತು. ಆ ಜಂತು ಅವನ ಕೈಯಿಂದ ಜೋತಾಡುವದನ್ನು ದ್ವೀಪದವರು ನೋಡಿ—ಈ ಮನುಷ್ಯನು ಕೊಲೆಪಾತಕನೇ ಸರಿ; ಸಮುದ್ರದಿಂದ ತಪ್ಪಿಸಿಕೊಂಡು ಬಂದಾಗ್ಯೂ ನ್ಯಾಯವು ಇವನನ್ನು
5 ಬದುಕಗೊಡಿಸುವದಿಲ್ಲವೆಂದು ತಮ್ಮತಮ್ಮೊಳಗೆ ಮಾತಾಡಿಕೊಂಡರು. ಆದರೆ ಪೌಲನು ಆ ಜಂತುವನ್ನು ಬೆಂಕಿಯೊಳಕ್ಕೆ ಝಾಡಿಸಿಬಿಟ್ಟನು; ಅವನಿಗೆ ಏನೂ ಕೇಡಾಗಲಿಲ್ಲ.
6 ಇವನು ಬಾತುಹೋದಾನು ಇಲ್ಲವೆ ಅಕಸ್ಮಾತ್ತಾಗಿ ಸತ್ತುಬಿದ್ದಾನು ಎಂದು ಅವರು ನೋಡಿಕೊಂಡೇ ಇದ್ದರು. ಬಹಳ ಹೊತ್ತು ನೋಡಿಕೊಂಡಿದ್ದ ಮೇಲೆ, ಅವನಿಗೆ ವಿಕಾ ರವೇನೂ ಆಗಿಲ್ಲವೆಂದು ಕಂಡು, ಬೇರೆ ಯೋಚನೆಯುಳ್ಳವರಾಗಿ—ಇವನು ಒಬ್ಬ ದೇವರು ಎಂದು ಹೇಳಿಕೊಂಡರು.

7 ಆ ಸ್ಥಳದ ಸಮೀಪದಲ್ಲಿ ದ್ವೀಪದ ಮುಖ್ಯಸ್ಥನಾದ ಪೊಪ್ಲಿಯನೆಂಬವನಿಗೆ ಕೆಲವು ಭೂಮಿ ಇತ್ತು. ಅವನು ನಮ್ಮನ್ನು ಸೇರಿಸಿಕೊಂಡು, ಮೂರು ದಿವಸ ಆದರದಿಂದ ಸತ್ಕ
8 ರಿಸಿದನು. ಅವನ ತಂದೆಯು ಜ್ವರದಿಂದಲೂ ರಕ್ತಭೇದಿಯಿಂದಲೂ ಪೀಡಿತನಾಗಿ ಮಲ

ಗಿದ್ದನು. ಪೌಲನು ಅವನ ಬಳಿಗೆ ಹೋಗಿ ದೇವರ ಪ್ರಾರ್ಥನೆ ಮಾಡಿ, ಅವನ ಮೇಲೆ ಕೈಗಳನ್ನಿಟ್ಟು ಅವನನ್ನು ವಾಸಿಮಾಡಿದನು. 9 ಇದಾದ ಮೇಲೆ ಆ ದ್ವೀಪದಲ್ಲಿದ್ದ ಮಿಕ್ಕಾದ ರೋಗಿಗಳು ಅವನ ಬಳಿಗೆ ಬಂದು ಸ್ವಸ್ಥರಾದರು. 10 ಅವರು ನಮ್ಮನ್ನು ಬಹಳವಾಗಿ ಸನ್ಮಾನಿಸಿದ್ದಲ್ಲದೆ, ನಾವು ಬಿಟ್ಟು ಹೊರಟಾಗ ನಮಗೆ ಅವಶ್ಯವಾದ ಪದಾರ್ಥಗಳನ್ನು ತಂದು ಹಡಗಿನಲ್ಲಿಟ್ಟರು.

ಪೌಲನು ರೋಮಾಪುರಕ್ಕೆ ಸೇರಿ, ಅಲ್ಲಿ ಎರಡು ವರುಷ ಸೆರೆಯವನಾಗಿದ್ದು ಕ್ರಿಸ್ತನ ವಿಷಯವಾಗಿ ಉಪದೇಶಮಾಡುತ್ತಾ ಬಂದದ್ದು.

11 ಮೂರು ತಿಂಗಳಾದ ಮೇಲೆ, ಅಲೆಕ್ಸಾಂದ್ರಿಯದಿಂದ ಬಂದು ಆ ದ್ವೀಪದಲ್ಲಿ ಹಿಮಕಾಲವನ್ನು ಕಳೆದಿದ್ದ ಒಂದು ಹಡಗನ್ನು ಹತ್ತಿ ಹೊರಟೆವು. ಆ ಹಡಗಿಗೆ ಅಶ್ವಿನೀದೇವತೆಗಳೆಂಬ ಚಿಹ್ನೆ. 12, 13 ನಾವು ಸುರಕೂಸಿಗೆ ಮುಟ್ಟಿ ಅಲ್ಲಿ ಮೂರು ದಿವಸ ನಿಂತೆವು. ಅಲ್ಲಿಂದ ನಾವು ಸುತ್ತಿಕೊಂಡುಹೋಗಿ ರೇಗಿಯಕ್ಕೆ ಸೇರಿದೆವು. ಒಂದು ದಿನವಾದ ಮೇಲೆ ತೆಂಕಣಗಾಳಿ ಹುಟ್ಟಿದ್ದರಿಂದ ಎರಡನೇ ದಿನದಲ್ಲಿ ಪೊತಿಯೋಲಕ್ಕೆ ಬಂದೆವು. 14 ಅಲ್ಲಿ ಕ್ರೈಸ್ತಸಹೋದರರು ಸಿಕ್ಕಿದರು; ಅವರು ನಮ್ಮನ್ನು ತಮ್ಮ ಬಳಿಯಲ್ಲಿ ಏಳು ದಿವಸ ಇರಬೇಕೆಂದು ಬೇಡಿಕೊಂಡರು. ತರುವಾಯ ರೋಮಾಪುರಕ್ಕೆ ಬಂದೆವು. 15 ಅಲ್ಲಿದ್ದ ಸಹೋದರರು ನಮ್ಮ ಸಮಾಚಾರವನ್ನು ಕೇಳಿದಾಗ ನಮ್ಮನ್ನು ಎದುರುಗೊಳ್ಳುವದಕ್ಕಾಗಿ ಕೆಲವರು ಅಪ್ಪಿಯಪೇಟೆಯ ವರೆಗೂ ಕೆಲವರು ತ್ರಿಛತ್ರವೆಂಬ ಸ್ಥಳದ ವರೆಗೂ ಬಂದರು. ಪೌಲನು ಅವರನ್ನು ನೋಡಿ ದೇವರ ಸ್ತೋತ್ರವನ್ನು ಮಾಡಿ ಧೈರ್ಯಗೊಂಡನು.

16 ನಾವು ರೋಮಾಪುರಕ್ಕೆ ಬಂದ ಮೇಲೆ, ಪೌಲನು ತನ್ನನ್ನು ಕಾಯುತ್ತಿದ್ದ ಸಿಪಾಯಿಯೊಂದಿಗೆ ಪ್ರತ್ಯೇಕವಾಗಿರಬಹುದೆಂಬ ಅಪ್ಪಣೆಯನ್ನು ಹೊಂದಿದನು.

17 ಮೂರು ದಿವಸಗಳಾದ ಮೇಲೆ ಪೌಲನು ಯೆಹೂದ್ಯರಲ್ಲಿ ಪ್ರಮುಖರನ್ನು ತನ್ನ ಬಳಿಗೆ ಕರಸಿದನು. ಅವರು ಕೂಡಿದ ಮೇಲೆ ಅವನು ಅವರಿಗೆ—ಸಹೋದರರೇ, ನಾನು ನಮ್ಮ ಜನರಿಗೂ ನಮ್ಮ ಪಿತೃಗಳ ಆಚಾರಗಳಿಗೂ ವಿರುದ್ಧವಾಗಿ ಏನೂ ಮಾಡದವನಾದಾಗ್ಯೂ ಯೆರೂಸಲೇಮಿನಿಂದ ರೋಮಾಯರ ಕೈಗೆ ಸೆರೆಯವನಾಗಿ ಒಪ್ಪಿಸಲ್ಪಟ್ಟೆನು. 18 ಅವರು ನನ್ನನ್ನು ವಿಚಾರಣೆ ಮಾಡಿ, ನನ್ನಲ್ಲಿ ಮರಣದಂಡನೆಗೆ ಕಾರಣವೇನೂ ಇಲ್ಲದ್ದರಿಂದ ನನ್ನನ್ನು ಬಿಡಿಸಬೇಕೆಂದಿದ್ದರು. 19 ಅದಕ್ಕೆ ಯೆಹೂದ್ಯರು ಅಡ್ಡಮಾತಾಡಿದ್ದರಿಂದ, ನಾನು ಚಕ್ರವರ್ತಿಯ ಎದುರಿನಲ್ಲಿ ಹೇಳಿಕೊಳ್ಳುತ್ತೇನೆಂದು ಹೇಳಬೇಕಾಗಿ ಬಂತು. ನನ್ನ ಸ್ವದೇಶದವರ ಮೇಲೆ ದೋಷಾರೋಪಣೆ ಮಾಡಬೇಕೆಂಬ ಅಭಿಪ್ರಾಯದಿಂದ ಅದನ್ನು ಹೇಳಲಿಲ್ಲ. 20 ಈ ಕಾರಣದಿಂದ ನಾನು ನಿಮ್ಮನ್ನು ಕಂಡು ಮಾತಾಡಬೇಕೆಂದು ಕರಸಿದೆನು. ಇಸ್ರಯೇಲ ಜನರ ನಿರೀಕ್ಷೆಯ ನಿಮಿತ್ತವಾಗಿ ಈ ಬೇಡಿಯಿಂದ ಕಟ್ಟಲ್ಪಟ್ಟಿದ್ದೇನೆ ಎಂದು ಹೇಳಿದನು. 21 ಅವರು ಅವನಿಗೆ—ನಿನ್ನ ವಿಷಯವಾಗಿ ನಮಗೆ ಯೂದಾಯದಿಂದ ಕಾಗದಗಳು ಬರಲಿಲ್ಲ, ಸಹೋದರರಲ್ಲಿ ಒಬ್ಬರೂ ಬಂದು ನಿನ್ನ ವಿಷಯವಾಗಿ ಕೆಟ್ಟದ್ದನ್ನು ತಿಳಿಸಲೂ ಇಲ್ಲ, ಮಾತಾಡಲೂ ಇಲ್ಲ. 22 ಆದರೆ ನಿನ್ನ ಅಭಿಪ್ರಾಯವನ್ನು ನಿನ್ನಿಂದಲೇ

ಕೇಳುವದು ನಮಗೆ ಯುಕ್ತವೆಂದು ತೋರುತ್ತದೆ. ಆ ಮತದ ವಿಷಯದಲ್ಲಿ ಜನರು ಎಲ್ಲೆಲ್ಲಿಯೂ ವಿರುದ್ಧವಾಗಿ ಮಾತಾಡುತ್ತಾರೆಂಬುವದೊಂದೇ ನಮಗೆ ಗೊತ್ತದೆ ಅಂದರು.

23 ಅವರು ಅವನಿಗೆ ಒಂದು ದಿವಸವನ್ನು ಗೊತ್ತುಮಾಡಲು, ಬಹುಮಂದಿ ಅವನ ಬಿಡಾರದಲ್ಲಿ ಅವನ ಬಳಿಗೆ ಬಂದರು. ಅವನು ಬೆಳಗಿನಿಂದ ಸಾಯಂಕಾಲದ ವರೆಗೂ ದೇವರ ರಾಜ್ಯವನ್ನು ಕುರಿತು ಪ್ರಮಾಣವಾಗಿ ಸಾಕ್ಷಿಹೇಳುತ್ತಾ ಮೋಶೆಯ ಧರ್ಮಶಾಸ್ತ್ರವನ್ನೂ ಪ್ರವಾದಿಗಳ ಗ್ರಂಥಗಳನ್ನೂ ಆಧಾರಮಾಡಿಕೊಂಡು ಯೇಸುವಿನ ವಿಷಯದಲ್ಲಿ ಅವರನ್ನು

24 ಒಡಂಬಡಿಸುತ್ತಾ ಇದ್ದನು. ಅವನು ಹೇಳಿದ ಮಾತುಗಳಿಗೆ ಕೆಲವರು ಒಪ್ಪಿಕೊಂಡರು;

25 ಕೆಲವರು ನಂಬದೆ ಹೋದರು. ಅವರಲ್ಲಿ ಐಕಮತ್ಯವಿಲ್ಲದೆ ಇರುವಾಗ, ಪೌಲನು ಅವರಿಗೆ—ಪವಿತ್ರಾತ್ಮನು ಪ್ರವಾದಿಯಾದ ಯೆಶಾಯನ ಬಾಯಿಯಿಂದ ನಿಮ್ಮ ಪಿತೃಗಳಿಗೆ

26 ವಿಹಿತವಾಗಿ ಹೇಳಿದ್ದೇನಂದರೆ—

ನೀನು ಈ ಜನರ ಬಳಿಗೆ ಹೋಗಿ ಅವರಿಗೆ—
ನೀವು ಕಿವಿಯಾರ ಕೇಳಿದರೂ ತಿಳುಕೊಳ್ಳುವದೇ ಇಲ್ಲ;
ಕಣ್ಣಾರೆ ಕಂಡರೂ ನೋಡುವದೇ ಇಲ್ಲ ಎಂಬದಾಗಿ ಹೇಳು.

27 ಯಾಕಂದರೆ ಈ ಜನರ ಹೃದಯವು ಕೊಬ್ಬಿತು;
ಇವರ ಕಿವಿ ಮಂದವಾಯಿತು;
ಇವರು ಕಣ್ಣು ಮುಚ್ಚಿಕೊಂಡಿದ್ದಾರೆ;
ತಾವು ಕಣ್ಣಿನಿಂದ ಕಂಡು,
ಕಿವಿಯಿಂದ ಕೇಳಿ, ಹೃದಯದಿಂದ ಗ್ರಹಿಸಿ
ನನ್ನ ಕಡೆಗೆ ತಿರುಗಿಕೊಂಡು ನನ್ನಿಂದ ಸ್ವಸ್ಥತೆಯನ್ನು ಹ್ಯಾಗೂ ಹೊಂದಬಾರದೆಂದು ಮಾಡಿಕೊಂಡಿದ್ದಾರೆ[1] ಎಂಬುವದೇ.

28 ಆದಕಾರಣ, ದೇವರಿಂದಾದ ಈ ರಕ್ಷಣೆಯು ಅನ್ಯಜನರಿಗೆ ಹೇಳಿಕಳುಹಿಸಲ್ಪಟ್ಟಿದೆ ಎಂದು ನಿಮಗೆ ಚನ್ನಾಗಿ ತಿಳಿದಿರಲಿ; ಅವರಾದರೂ ಕೇಳುವರು ಎಂದು ಹೇಳಿದನು.

29 ಅವನು ಈ ಮಾತನ್ನು ಹೇಳಿದ ಮೇಲೆ ಅವರು ಹೊರಟುಹೋದರು.

30 ತರುವಾಯ ಅವನು ತಾನೇ ಮಾಡಿಕೊಂಡ ಬಾಡಿಗೆಯ ಮನೆಯಲ್ಲಿ ಪೂರಾ ಎರಡು

31 ವರುಷ ಇದ್ದು, ತನ್ನ ಬಳಿಗೆ ಬರುವವರೆಲ್ಲರನ್ನು ಸೇರಿಸಿಕೊಂಡು, ಯಾವ ಅಡ್ಡಿಯೂ ಇಲ್ಲದೆ ತುಂಬಾ ಧೈರ್ಯದಿಂದ ದೇವರ ರಾಜ್ಯವನ್ನು ಪ್ರಸಿದ್ಧಿಪಡಿಸುತ್ತಾ ಕರ್ತನಾದ ಯೇಸು ಕ್ರಿಸ್ತನ ವಿಷಯವಾಗಿ ಉಪದೇಶಮಾಡುತ್ತಾ ಇದ್ದನು.

---

[1] ಯೆಶಾಯ ೬, ೯. ೧೦.

ಲಯವಿಲ್ಲದ ದೇವರ ಪ್ರಭಾವವನ್ನು ಬಿಟ್ಟು ಅದಕ್ಕೆ ಬದಲಾಗಿ ಲಯವಾಗುವ ಮನುಷ್ಯ 23 ಪಶು ಪಕ್ಷಿ ಸರ್ಪಾದಿಗಳ ರೂಪವನ್ನು ಮಾಡಿಕೊಂಡರು.

ಆದಕಾರಣ ಅವರು ತಮ್ಮ ಮನಸ್ಸಿನ ದುರಾಶೆಗಳಂತೆ ನಡೆದು ತಮ್ಮ ದೇಹಗಳನ್ನು 24 ಮಾನಹೀನಮಾಡಿಕೊಳ್ಳಲಿ ಎಂದು ದೇವರು ಅವರನ್ನು ಹೊಲಸಾದ ನಡತೆಗೆ ಒಪ್ಪಿಸಿ ದನು. ಅವರು ಸತ್ಯದೇವರನ್ನು ಬಿಟ್ಟು ಅಸತ್ಯವಾದದ್ದನ್ನು ಹಿಡಿದುಕೊಂಡು, ಸೃಷ್ಟಿ 25 ಕರ್ತನನ್ನು ಪೂಜಿಸದೆ ಸೃಷ್ಟಿವಸ್ತುಗಳನ್ನೇ ಪೂಜಿಸಿ ಸೇವಿಸುವವರಾದರು. ಸೃಷ್ಟಿಕರ್ತ ನೊಬ್ಬನೇ ಎಲ್ಲಾ ಯುಗಗಳಲ್ಲಿಯೂ ಸ್ತೋತ್ರಹೊಂದತಕ್ಕವನು. ಆಮೆನ್.

ಅವರು ಇಂಥಾದ್ದನ್ನು ಮಾಡಿದ್ದರಿಂದ ದೇವರು ಅವರನ್ನು ಕೇವಲ ತುಚ್ಛವಾದ 26 ಕಾಮಾಭಿಲಾಷೆಗೆ ಒಪ್ಪಿಸಿದನು. ಹ್ಯಾಗಂದರೆ ಅವರ ಹೆಂಗಸರು ಸ್ವಾಭಾವಿಕವಾದ ಭೋಗವನ್ನು ಬಿಟ್ಟು ಸ್ವಭಾವಕ್ಕೆ ವಿರುದ್ಧವಾದ ಭೋಗವನ್ನು ಅನುಸರಿಸಿದರು. ಅದರಂತೆ 27 ಗಂಡಸರು ಸಹ ಸ್ವಾಭಾವಿಕವಾದ ಸ್ತ್ರೀಭೋಗವನ್ನು ಬಿಟ್ಟು ಒಬ್ಬರ ಮೇಲೊಬ್ಬರು ತಮ್ಮ ಕಾಮಾತುರದಿಂದ ತಾಪಪಡುತ್ತಾ ಗಂಡಸರ ಸಂಗಡ ಗಂಡಸರು ಕೇವಲ ಅವಲಕ್ಷಣ ವಾದದ್ದನ್ನು ನಡಸಿ, ತಮ್ಮ ಭ್ರಾಂತಿಗೆ ತಕ್ಕ ಫಲವನ್ನು ತಮ್ಮಲ್ಲಿ ಹೊಂದುವವರಾದರು.

ಇದಲ್ಲದೆ ದೇವರ ಜ್ಞಾನವು ಅವರಿಗೆ ಇಷ್ಟವಿಲ್ಲದ್ದರಿಂದ, ಅಲ್ಲದ ಕೃತ್ಯಗಳನ್ನು ನಡಸು 28 ವವರಾಗುವಂತೆ ದೇವರು ಅವರನ್ನು ಅನಿಷ್ಟಭಾವಕ್ಕೆ ಒಪ್ಪಿಸಿದನು. ಹ್ಯಾಗಂದರೆ ಅವರು 29 ಸಕಲವಿಧವಾದ ಅನ್ಯಾಯ ದುರ್ಮಾರ್ಗತನ ಲೋಲುಪ್ತಿ ದುಷ್ಟತ್ವಗಳಿಂದಲೂ ಹೊಟ್ಟೇ ಕಿಚ್ಚು ಕೊಲೆ ಜಗಳ ಮೋಸ ಹಗೆತನಗಳಿಂದಲೂ ತುಂಬಿದವರಾದರು. ಅವರು ಕಿವಿ 30 ಊದುವವರೂ ಚಾಡಿಹೇಳುವವರೂ ದೇವರನ್ನು ದ್ವೇಷಿಸುವವರೂ ಸೊಕ್ಕಿನವರೂ ಅಹಂಕಾರಿಗಳೂ ಬಡಾಯಿಕೊಚ್ಚುವವರೂ ಕೇಡನ್ನು ಕಲ್ಪಿಸುವವರೂ ತಂದೆತಾಯಿಗಳ 31 ಮಾತನ್ನು ಕೇಳದವರೂ ವಿವೇಕವಿಲ್ಲದವರೂ ಮಾತಿಗೆ ತಪ್ಪುವವರೂ ಪ್ರೀತಿಯಿಲ್ಲದವರೂ ಕರುಣೆಯಿಲ್ಲದವರೂ ಆದರು. ಇಂಥವುಗಳನ್ನು ನಡಸುವವರು ಮರಣಕ್ಕೆ ಪಾತ್ರರಾಗಿ 32 ದ್ದಾರೆಂಬ ದೇವವಿಧಿಯು ಅವರಿಗೆ ತಿಳಿದಿದ್ದಾಗ್ಯೂ ಅವರು ತಾವೇ ಅವುಗಳನ್ನು ಮಾಡು ವದಲ್ಲದೆ ಮಾಡುವವರನ್ನೂ ಅನುಮೋದಿಸುತ್ತಾರೆ.

ಯೆಹೂದ್ಯರಾದರೂ ಅಪರಾಧಿಗಳು.

**2** ಆದದರಿಂದ, ಎಲೈ ಮನುಷ್ಯನೇ, ಮತ್ತೊಬ್ಬರಲ್ಲಿ ದೋಷವೆಣಿಸುವ ನೀನು ಯಾವ ನಾದರೂ ಸರಿಯೇ, ಉತ್ತರ ಹೇಳುವದಕ್ಕೆ ನಿನಗೆ ಮಾರ್ಗವಿಲ್ಲ. ಹ್ಯಾಗಂದರೆ ಮತ್ತೊಬ್ಬರಲ್ಲಿ ದೋಷವೆಣಿಸುವದರಿಂದ ನಿನ್ನನ್ನು ನೀನೇ ದೋಷಿಯೆಂದು ತೀರ್ಪುಮಾಡಿ ಕೊಂಡ ಹಾಗಾಯಿತು. ಮತ್ತೊಬ್ಬರಲ್ಲಿ ದೋಷವೆಣಿಸುವ ನೀನು ಆ ದೋಷಗಳನ್ನೇ ನಡಸುತ್ತೀಯಲ್ಲಾ. ಆದರೆ ಅಂಥವುಗಳನ್ನು ನಡಸುವವರ ವಿಷಯದಲ್ಲಿ ದೇವರು ಮಾಡುವ 2 ತೀರ್ಪು ಸತ್ಯಕ್ಕನುಸಾರವಾಗಿಯೇ ಇರುವದೆಂದು ಬಲ್ಲೆವು. ಎಲೈ ಮನುಷ್ಯನೇ, ಅಂಥವು 3 ಗಳನ್ನು ನಡಸುವವರಲ್ಲಿ ದೋಷವೆಣಿಸಿ ಅವುಗಳನ್ನೇ ಮಾಡುತ್ತಿರುವ ನೀನು ದೇವರ ದಂಡನೆಯ ತೀರ್ಪಿಗೆ ತಪ್ಪಿಸಿಕೊಂಡೇನೆಂದು ಯೋಚಿಸುತ್ತೀಯಾ? ಆತನ ಅಪಾರವಾದ 4

ದಯಾ ಸಹನ ದೀರ್ಘಶಾಂತಿಗಳನ್ನು ಅಸಡ್ಡೆಮಾಡುತ್ತೀಯಾ? ಮನಸ್ಸನ್ನು ಬೇರೆಮಾಡಿ ಕೊಳ್ಳುವದಕ್ಕೆ ದೇವರ ಉಪಕಾರವು ನಿನ್ನನ್ನು ಪ್ರೇರಿಸುತ್ತದೆಂಬುವದು ನಿನಗೆ ಗೊತ್ತಿ
5 ಲ್ಲವೇ? ನೀನು ನಿನ್ನ ಮೊಂಡತನವನ್ನೂ ಪಶ್ಚಾತ್ತಾಪವಿಲ್ಲದ ಮನಸ್ಸನ್ನೂ ಅನುಸರಿಸುವದ ರಿಂದ ನಿನಗೋಸ್ಕರ ದೇವರ ಕೋಪವನ್ನು ಕೂಡಿಟ್ಟುಕೊಳ್ಳುತ್ತಾ ಇದ್ದೀ. ದೇವರ
6 ಕೋಪವೂ ನ್ಯಾಯವಾದ ತೀರ್ಪೂ ಪ್ರಕಟವಾಗುವ ದಿವಸ ಬರುತ್ತದಷ್ಟೆ. ಆತನು
7 ಪ್ರತಿಯೊಬ್ಬನಿಗೆ ಅವನವನ ಕೃತ್ಯಗಳಿಗೆ ತಕ್ಕ ಪ್ರತಿಫಲವನ್ನು ಕೊಡುವನು. ಯಾರು ಪ್ರಭಾವ ಮಾನ ನಿರ್ಲಯತ್ವಗಳನ್ನು ಹೊಂದಬೇಕೆಂದು ಒಳ್ಳೇದನ್ನು ಬೇಸರಗೊಳ್ಳದೆ
8 ಮಾಡುತ್ತಾರೋ ಅವರಿಗೆ ನಿತ್ಯಜೀವವನ್ನು ಕೊಡುವನು. ಯಾರು ಸ್ವೇಚ್ಛೆಯುಳ್ಳವ ರಾಗಿ ಸತ್ಯದ ಪ್ರಕಾರ ನಡೆಯದೆ ಅನ್ಯಾಯವನ್ನು ಅನುವರ್ತಿಸುತ್ತಾರೋ ಅವರಿಗೆ
9 ಕೋಪ ರೌದ್ರಗಳು ಬರುವವು. ಕೆಟ್ಟದ್ದನ್ನು ನಡಸುವ ಪ್ರತಿಯೊಬ್ಬ ನರಪ್ರಾಣಿಗೆ ಕಷ್ಟವೂ ಸಂಕಟವೂ ಬರುವವು—ಯೆಹೂದ್ಯರಿಗೆ ಮೊದಲು, ಅನಂತರ ಗ್ರೀಕರಿಗೆ ಸಹ.
10 ಆದರೆ ಒಳ್ಳೇದನ್ನು ನಡಸುವ ಪ್ರತಿಯೊಬ್ಬನಿಗೆ ಪ್ರಭಾವವೂ ಮಾನವೂ ಮನ ಶ್ಯಾಂತಿಯೂ ಉಂಟಾಗುವವು—ಯೆಹೂದ್ಯರಿಗೆ ಮೊದಲು, ಅನಂತರ ಗ್ರೀಕರಿಗೆ ಸಹ.
11-12 ದೇವರಿಗೆ ಪಕ್ಷಪಾತವಿಲ್ಲ. ಧರ್ಮಶಾಸ್ತ್ರವಿಲ್ಲದವರಾಗಿ ಪಾಪಮಾಡಿದವರು ಧರ್ಮ ಶಾಸ್ತ್ರವಿಲ್ಲದವರಾಗಿ ನಾಶಹೊಂದುವರು; ಆದರೆ ಧರ್ಮಶಾಸ್ತ್ರವುಳ್ಳವರಾಗಿದ್ದು ಪಾಪ
13 ಮಾಡಿದವರು ಧರ್ಮಶಾಸ್ತ್ರಕ್ಕನುಸಾರವಾಗಿ ತೀರ್ಪನ್ನು ಹೊಂದುವರು. ಧರ್ಮಶಾಸ್ತ್ರ ಕೇಳಿದ ಮಾತ್ರದಿಂದಲೇ ಯಾರೂ ದೇವರ ಸನ್ನಿಧಿಯಲ್ಲಿ ನೀತಿವಂತರಾಗುವದಿಲ್ಲ; ಅದನ್ನು
14 ಅನುಸರಿಸುವವರೇ ನೀತಿವಂತರೆಂದು ನಿರ್ಣಯಿಸಲ್ಪಡುವರು. ಧರ್ಮಶಾಸ್ತ್ರವಿಲ್ಲದ ಅನ್ಯ ಜನರು ಸ್ವಾಭಾವಿಕವಾಗಿ ಧರ್ಮಶಾಸ್ತ್ರದಲ್ಲಿ ಹೇಳಿದಂತೆ ನಡೆದರೆ, ಅವರು ಧರ್ಮಶಾಸ್ತ್ರ
15 ವಿಲ್ಲದವರಾಗಿದ್ದರೂ ತಾವೇ ತಮಗೆ ಧರ್ಮಪ್ರಮಾಣವಾಗಿದ್ದಾರೆ; ಹ್ಯಾಗಂದರೆ ಅವರು ಧರ್ಮಶಾಸ್ತ್ರದ ಮುಖ್ಯ ತಾತ್ಪರ್ಯ ತಮ್ಮ ಹೃದಯದಲ್ಲಿ ಬರೆದದೆ ಎಂಬದನ್ನು ತೋರ್ಪ ಡಿಸುತ್ತಾರೆ. ಇದಕ್ಕೆ ಅವರ ಮನಸ್ಸು ಸಹ ಸಾಕ್ಷಿ ನುಡಿಯುತ್ತದೆ; ಅವರ ಯೋಚನೆ
16 ಗಳು ವಾದಿಪ್ರತಿವಾದಿಗಳಂತೆ—ಇದು ತಪ್ಪೆಂದು ತಪ್ಪಲ್ಲವೆಂದು ಸೂಚಿಸುತ್ತವೆ. ನಾನು ಸಾರುವ ಸುವಾರ್ತೆಯಲ್ಲಿ ಬೋಧಿಸಿರುವ ಪ್ರಕಾರ, ದೇವರು ಯೇಸು ಕ್ರಿಸ್ತನ ಮೂಲಕ ವಾಗಿ ಮನುಷ್ಯರ ಗುಟ್ಟುಗಳನ್ನು ಹಿಡಿದು ವಿಚಾರಿಸುವ ದಿನವು ಬರುತ್ತದೆ. ಆ ದಿನದಲ್ಲಿ ಇದೆಲ್ಲಾ ತಿಳಿದುಬರುವದು.

17 ನೀನು ಯೆಹೂದ್ಯನೆನ್ನಿಸಿಕೊಂಡವನೂ ಧರ್ಮಶಾಸ್ತ್ರದಲ್ಲಿ ಭರವಸವಿಟ್ಟವನೂ ದೇವರ
18 ವಿಷಯವಾಗಿ ಹೊಗಳಿಕೊಳ್ಳುವವನೂ ಆತನ ಚಿತ್ತವನ್ನು ಬಲ್ಲವನೂ ಧರ್ಮಶಾಸ್ತ್ರದಿಂದ ಉಪದೇಶವನ್ನು ಹೊಂದಿ ಇದು ತಕ್ಕದ್ದು ಅದು ತಕ್ಕದ್ದಲ್ಲವೆಂದು ವಿವೇಚಿಸುವವನೂ[1]
19 ಆಗಿದ್ದೀ. ಧರ್ಮಶಾಸ್ತ್ರದಲ್ಲಿ ಜ್ಞಾನಸತ್ಯಗಳ ಸ್ವರೂಪವೇ ನನಗೆ ಇರುವದರಿಂದ ಕುರುಡ
20 ರಿಗೆ ದಾರಿ ತೋರಿಸುವವನೂ ಕತ್ತಲೆಯಲ್ಲಿರುವವರಿಗೆ ಬೆಳಕೂ ತಿಳುವಳಿಕೆಯಿಲ್ಲದವರಿಗೆ ಶಿಕ್ಷಕನೂ ಬಾಲಕರಿಗೆ ಉಪಾಧ್ಯಾಯನೂ ಆಗಿದ್ದೇನೆಂದು ನಂಬಿಕೊಂಡಿದ್ದೀ. ಹೀಗಿರ

---

[1] ಅಥವಾ, ಉತ್ತಮ ಕಾರ್ಯಗಳನ್ನು ಮೆಚ್ಚಿಕೊಂಡವನೂ.

ಲಾಗಿ ಮತ್ತೊಬ್ಬನಿಗೆ ಉಪದೇಶಮಾಡುವ ನೀನು ನಿನಗೆ ಉಪದೇಶಮಾಡಿಕೊಳ್ಳದೆ 21
ಇದ್ದೀಯೋ? ಕದಿಯಬಾರದೆಂದು ಬೋಧಿಸುವ ನೀನು ಕದಿಯುತ್ತೀಯೋ? ಹಾದರ 22
ಮಾಡಬಾರದೆಂದು ಹೇಳುವ ನೀನು ಹಾದರ ಮಾಡುತ್ತೀಯೋ? ಮೂರ್ತಿಗಳಲ್ಲಿ ಅಸಹ್ಯ
ಪಡುತ್ತಿರುವ ನೀನು ದೇವಸ್ಥಾನದಲ್ಲಿ ಕಳ್ಳತನ ಮಾಡುತ್ತೀಯೋ? ಧರ್ಮಶಾಸ್ತ್ರದಲ್ಲಿ 23
ಅಭಿಮಾನಿಯಾಗಿರುವ ನೀನು ಧರ್ಮಶಾಸ್ತ್ರವನ್ನು ಮೀರಿ ನಡೆದು ದೇವರನ್ನು ಅವಮಾನ
ಪಡಿಸುತ್ತೀಯೋ? ನಿಮ್ಮ ದೆಸೆಯಿಂದ ಅನ್ಯಜನರಲ್ಲಿ ದೇವರ ನಾಮಕ್ಕೆ ದೂಷಣೆಯಾಗು 24
ತ್ತದೆಂದು[1] ಬರೆದದೆಯಲ್ಲಾ.

ನೀನು ಧರ್ಮಶಾಸ್ತ್ರಾನುಸಾರವಾಗಿ ನಡೆಯುವವನಾದರೆ, ಸುನ್ನತಿಯೆಂಬ ಸಂಸ್ಕಾರವು 25
ಪ್ರಯೋಜನಕರವಾದದ್ದೇ ಸರಿ; ಆದರೆ ನೀನು ಧರ್ಮಶಾಸ್ತ್ರವನ್ನು ಮೀರಿ ನಡೆಯುವವ
ನಾಗಿದ್ದರೆ, ನಿನಗೆ ಸುನ್ನತಿಯಿದ್ದರೂ ಇಲ್ಲದಂತಾಯಿತು. ಹೀಗಿರಲಾಗಿ ಸುನ್ನತಿಯಿಲ್ಲ 26
ದವನು ಧರ್ಮಶಾಸ್ತ್ರದ ನೇಮಗಳ ಪ್ರಕಾರ ನಡೆದರೆ, ಸುನ್ನತಿಯಿಲ್ಲದವನಾಗಿದ್ದರೂ
ಸುನ್ನತಿಯಿದ್ದವನಂತೆ ಎಣಿಸಲ್ಪಡುವದಿಲ್ಲವೇ? ಅವನು ಶರೀರದಲ್ಲಿ ಸುನ್ನತಿಯಿಲ್ಲದವನಾ 27
ಗಿದ್ದು ಧರ್ಮಶಾಸ್ತ್ರದಲ್ಲಿ ಹೇಳಿದ್ದನ್ನು ನೆರವೇರಿಸುವದರಲ್ಲಿ, ಶಾಸ್ತ್ರವೂ ಸುನ್ನತಿಯೂ ಇದ್ದು
ಧರ್ಮವನ್ನು ಮೀರಿ ನಡೆಯುವ ನಿನ್ನನ್ನು ದೋಷಿಯೆಂದು ನಿರ್ಣಯಿಸುವದಿಲ್ಲವೇ?
ಹೊರಗೆ ಮಾತ್ರ ಯೆಹೂದ್ಯನಾಗಿರುವವನು ಯೆಹೂದ್ಯನಲ್ಲ; ಮತ್ತು ಹೊರಗೆ ಶರೀರ 28
ದಲ್ಲಿ ಮಾತ್ರ ಮಾಡಿರುವ ಸುನ್ನತಿಯು ಸುನ್ನತಿಯಲ್ಲ. ಆದರೆ ಒಳಗೆ ಯೆಹೂದ್ಯನಾಗಿ 29
ರುವವನೇ ಯೆಹೂದ್ಯನು; ಮತ್ತು ಹೃದಯದಲ್ಲಿ ಆಗುವ ಸುನ್ನತಿಯೇ ಸುನ್ನತಿ. ಇದು
ಬಾಹ್ಯಾಚಾರಕ್ಕೆ ಸಂಬಂಧಪಟ್ಟದ್ದಲ್ಲ, ಆತ್ಮಸಂಬಂಧಪಟ್ಟದ್ದೇ; ಇಂಥಾ ಸುನ್ನತಿಯಿದ್ದವನಿಗೆ
ಬರುವ ಹೊಗಳಿಕೆಯು ದೇವರಿಂದಲೇ ಹೊರತು ಮನುಷ್ಯರಿಂದ ಬರುವದಲ್ಲ.

ಹಾಗಾದರೆ ಯೆಹೂದ್ಯರ ಶ್ರೇಷ್ಠತ್ವವೇನು? ಸುನ್ನತಿಯಿಂದ ಲಾಭವೇನು? ಎಲ್ಲಾ **3**
ವಿಷಯಗಳಲ್ಲಿಯೂ ಬಹಳ ಉಂಟು. ಮೊದಲು ದೈವೋಕ್ತಿಗಳು ಅವರ ವಶಕ್ಕೆ ಒಪ್ಪಿ
ಸಲ್ಪಟ್ಟವು. ಅವರಲ್ಲಿ ಕೆಲವರು ನಂಬದೆ ಹೋಗಿದ್ದರೇನು? ಅವರು ನಂಬದೆ ಹೋದದ 3
ರಿಂದ ದೇವರು ವಚನಕ್ಕೆ ತಪ್ಪುವವನಾದನೋ? ಎಂದಿಗೂ ಇಲ್ಲ; ಎಲ್ಲಾ ಮನುಷ್ಯರು 4
ಸುಳ್ಳುಗಾರರಾದರೂ ದೇವರು ಸತ್ಯವಂತನೇ ಸರಿ.

ನೀನು ಎಲ್ಲಾ ನುಡಿಗಳಲ್ಲಿ ನೀತಿವಂತನೆಂದು ಕಾಣಿಸಿಕೊಳ್ಳಬೇಕು,
ನಿನ್ನ ಮೇಲೆ ವ್ಯಾಜ್ಯ ನಡೆಯುವಾಗ ನೀನು ಗೆಲ್ಲಬೇಕು

ಎಂದು[2] ಬರೆದದೆ.

ನಾವು ನೀತಿ ತಪ್ಪಿ ನಡೆಯುವದರಿಂದ ದೇವರ ನೀತಿ ಪ್ರಸಿದ್ಧಿಗೆ ಬರುವದಾದರೆ, 5
ನಾವು ಏನು ಹೇಳೋಣ? ಉಗ್ರದಂಡನೆಯನ್ನು ಮಾಡುವ ದೇವರು ಅನ್ಯಾಯಸ್ಥ
ನೇನು? ಈ ಮಾತನ್ನು ಲೋಕರೀತಿಯಾಗಿ ಆಡಿದ್ದೇನೆ. ಎಂದಿಗೂ ಅಲ್ಲ. ದೇವರು 6
ಅನ್ಯಾಯಸ್ಥನಾಗಿದ್ದರೆ, ಲೋಕಕ್ಕೆ ಹ್ಯಾಗೆ ನ್ಯಾಯತೀರಿಸ್ಯಾನು? ನನ್ನ ಸುಳ್ಳಿನಿಂದ 7
ದೇವರ ಸತ್ಯವು ಪ್ರಸಿದ್ಧಿಗೆ ಬಂದು ಆತನ ಮಹಿಮೆ ಹೆಚ್ಚಾದರೆ, ಇನ್ನು ನನಗೆ ಪಾಪಿಯೆಂದು

---

[1] ಯೆಶಾಯ ೫೨, ೫; ಯೆಜೇಕಿಯೇಲ ೩೬, ೨೦.     [2] ಕೀರ್ತನೆ ೫೧, ೪.

8 ತೀರ್ಪಾಗುವದು ಯಾಕೆ? ಮೇಲು ಬರುವಂತೆ ಕೇಡು ಮಾಡೋಣ ಎಂದು ಯಾಕೆ ಹೇಳಬಾರದು? ಕೆಲವರು ನಮ್ಮನ್ನು ಕುರಿತು—ಇವರು ಹೀಗೆ ಬೋಧನೆಮಾಡುವವರೆಂದು ದೂಷಿಸಿ ಹೇಳುತ್ತಾರಲ್ಲಾ; ಅಂಥವರಿಗೆ ದಂಡನೆಯ ತೀರ್ಪಾಗುವದು ನ್ಯಾಯ.

ಮನುಷ್ಯರೆಲ್ಲರು ಅಪರಾಧಿಗಳೆಂಬುವದಕ್ಕೆ ಶಾಸ್ತ್ರಪ್ರಮಾಣ.

9 ಹಾಗಾದರೆ ಏನು ಹೇಳಬೇಕು? ನಾವು ಅನ್ಯರಿಗಿಂತ ಉತ್ತಮಸ್ಥಾನದಲ್ಲಿದ್ದೇವೋ?[1] ಎಷ್ಟು ಮಾತ್ರಕ್ಕೂ ಇಲ್ಲ. ಯೆಹೂದ್ಯರೇ ಆಗಲಿ ಗ್ರೀಕರೇ ಆಗಲಿ ಎಲ್ಲರೂ ಪಾಪಕ್ಕೆ 10 ಒಳಬಿದ್ದವರೆಂದು ಮೊದಲೇ ತೋರಿಸಿಕೊಟ್ಟಿದ್ದೇವಲ್ಲಾ. ಇದು ಶಾಸ್ತ್ರದಲ್ಲಿ ಬರೆದಿರುವ ಮಾತುಗಳಿಗೆ ಸರಿಯಾಗಿದೆ; ಅವು ಯಾವವಂದರೆ—

ನೀತಿವಂತನು ಇಲ್ಲ, ಒಬ್ಬನಾದರೂ ಇಲ್ಲ;
11 ತಿಳುವಳಿಕೆಯುಳ್ಳವನು ಇಲ್ಲ, ದೇವರನ್ನು ಹುಡುಕುವವನು ಇಲ್ಲ.
12 ಎಲ್ಲರೂ ದಾರಿತಪ್ಪಿ ನಡೆಯುತ್ತಾರೆ, ಎಲ್ಲರೂ ಕೆಲಸಕ್ಕೆ ಬಾರದವರಾದರು.
ಒಳ್ಳೇದನ್ನು ಮಾಡುವವನು ಇಲ್ಲ, ಒಬ್ಬನಾದರೂ ಇಲ್ಲ[2].
13 ಅವರ ಗಂಟ್ಲು ತೆರೆದಿರುವ ಸಮಾಧಿಯಾಗಿದೆ.
ಅವರು ನಾಲಿಗೆಯಿಂದ ವಂಚನೆಯ ಮಾತುಗಳನ್ನಾಡುತ್ತಾರೆ[3];
ಅವರ ತುಟಿಗಳ ಹಿಂದೆ ಹಾವಿನ ವಿಷವದೆ[4].
14 ಅವರ ಬಾಯಿ ಶಾಪದಿಂದಲೂ ಕ್ರೋಧದ ಮಾತುಗಳಿಂದಲೂ ತುಂಬಿ ಅದೆ[5].
15 ಅವರ ಕಾಲುಗಳು ಮನುಷ್ಯರನ್ನು ಕೊಲ್ಲುವದಕ್ಕೆ ತ್ವರೆಪಡುತ್ತವೆ.
16 ಅವರು ಹೋದ ದಾರಿಗಳಲ್ಲಿ ಹಾಳೂ ಹಾವಳಿಯೂ ಕಾಣುತ್ತವೆ.
17 ಸಮಾಧಾನದ ಮಾರ್ಗವನ್ನೇ ಅರಿಯರು[6].
18 ಅವರ ಕಣ್ಣುಗಳ ಮುಂದೆ ದೇವರ ಭಯವು ಕಟ್ಟಿರುವದಿಲ್ಲ[7]

19 ಎಂಬವುಗಳೇ. ಧರ್ಮಶಾಸ್ತ್ರದ ನುಡಿಗಳೆಲ್ಲವು ಆ ಶಾಸ್ತ್ರಕ್ಕೆ ಒಳಗಾದವರಿಗೇ ಹೇಳಿವೆಯೆಂದು ಬಲ್ಲೆವಷ್ಟೆ; ಎಲ್ಲರ ಬಾಯಿ ಕಟ್ಟಿಹೋಗುವದು, ಲೋಕವೆಲ್ಲಾ ದೇವರ ಮುಂದೆ 20 ಅಪರಾಧಿಯಾಗಿ ನಿಲ್ಲುವದು. ಯಾಕಂದರೆ ಧರ್ಮಶಾಸ್ತ್ರದ ನೇಮಗಳನ್ನು ನಡಿಸಿ ದೇವರ ಸನ್ನಿಧಿಯಲ್ಲಿ ನೀತಿವಂತನೆಂದು ನಿರ್ಣಯಿಸಲ್ಪಡುವವನು ಯಾವನೂ ಇಲ್ಲ[8]. ಧರ್ಮಶಾಸ್ತ್ರದಿಂದ[9] ಪಾಪದ ಅರುಹು ಉಂಟಾಗುತ್ತದಷ್ಟೆ.

---

1) ಅಥವಾ, ಅನ್ಯರು ನಮಗಿಂತ ಶ್ರೇಷ್ಠರೋ? 2) ಕೀರ್ತನೆ ೧೪, ೧—೩.
3) ಕೀರ್ತನೆ ೫, ೯. 4) ಕೀರ್ತನೆ ೧೪೦, ೩. 5) ಕೀರ್ತನೆ ೧೦, ೭.
6) ಯೆಶಾಯ ೫೯, ೭. ೮. 7) ಕೀರ್ತನೆ ೩೬, ೧. 8) ಅಥವಾ, ಆದದರಿಂದ ಎಲ್ಲರ ಬಾಯಿಯೂ ಕಟ್ಟಿತು, ಲೋಕದವರೆಲ್ಲರೂ ದೇವರ ಮುಂದೆ ಅಪರಾಧಿಗಳಾದರು. ನೇಮನಿಷ್ಠೆಗಳನ್ನನುಸರಿಸಿ ಯಾವನಾದರೂ ನೀತಿವಂತನೆಂದು ನಿರ್ಣಯಿಸಲ್ಪಡುವದಿಲ್ಲವೆಂದು ಬರೆದದೆಯಲ್ಲಾ. ಕೀರ್ತನೆ ೧೪೩, ೨; ಗಲಾತ್ಯ. ೨, ೧೬.
9) ಅಥವಾ, ಧರ್ಮಶಾಸ್ತ್ರದ ನಿಯಮಗಳಿಂದ.

ಎಲ್ಲಾ ಮನುಷ್ಯರು ಪುಣ್ಯವಂತರಾಗುವದಕ್ಕೆ ಯೇಸು ಕ್ರಿಸ್ತನನ್ನು ನಂಬುವದೇ ಮಾರ್ಗ.

ಈಗಲಾದರೋ ದೇವರಿಂದ ದೊರಕುವ[1] ನೀತಿಯು ಧರ್ಮಶಾಸ್ತ್ರನಿಯಮಗಳಿಲ್ಲದೆ 21 ಪ್ರಕಟವಾಗಿದೆ. ಅದು ಮೋಶೆಯ ಧರ್ಮಶಾಸ್ತ್ರದಿಂದಲೂ ಪ್ರವಾದಿಗಳ ನುಡಿಗಳಿಂದಲೂ ಸಾಕ್ಷಿಗೊಂಡಿರುತ್ತದೆ. ದೇವರಿಂದಾಗುವ ಆ ನೀತಿಯು ಯಾವದಂದರೆ, ಯೇಸು ಕ್ರಿಸ್ತ 22 ನನ್ನು ನಂಬುವದರಿಂದಲೇ ನಂಬುವವರೆಲ್ಲರಿಗೆ ದೊರಕುವಂಥಾದ್ದು. ವ್ಯತ್ಯಾಸವಿಲ್ಲದೆ 23 ಎಲ್ಲರೂ ಪಾಪಮಾಡಿ ದೇವರ ಮಹಿಮೆಯನ್ನು ಹೊಂದದೆ ಹೋಗಿದ್ದಾರೆ. ಅವರು 24 ನೀತಿವಂತರೆಂದು ನಿರ್ಣಯ ಹೊಂದುವದು ದೇವರ ಉಚಿತಾರ್ಥವಾದ ಕೃಪೆಯಿಂದಲೇ ಕ್ರಿಸ್ತ್ಯೇಸುವಿನಿಂದಾದ ಪಾಪವಿಮೋಚನೆಯ ಮೂಲಕವಾಗಿ ಆಗುವದು. ಈತನು 25 ತನ್ನ ರಕ್ತವನ್ನು ಸುರಿಸಿ ನಂಬಿಕೆಯಿದ್ದವರಿಗಾಗಿ ಕೃಪಾಧಾರವಾಗಬೇಕೆಂದು ದೇವರು ಈತನನ್ನು ಮುಂದಿಟ್ಟನು. ದೇವರು ಹಿಂದಿನ ಕಾಲದ ಪಾಪಗಳನ್ನು ದಂಡಿಸದೆ ಸಹಿಸಿ 26 ಕೊಂಡಿರಲಾಗಿ ತನ್ನ ನೀತಿಯನ್ನು ಈಗಿನ ಕಾಲದಲ್ಲಿ ಹೀಗೆ ತೋರಿಸಿ, ತಾನು ನೀತಿಸ್ವರೂಪ ನಾಗಿಯೂ ಯೇಸುವಿನಲ್ಲಿ ನಂಬಿಕೆಯಿಡುವವರನ್ನು ನೀತಿವಂತರೆಂದು ನಿರ್ಣಯಿಸುವವ ನಾಗಿಯೂ ಕಾಣಿಸಿಕೊಂಡಿದ್ದಾನೆ.

ಹಾಗಾದರೆ ಹೊಗಳಿಕೊಳ್ಳುವದಕ್ಕೆ ಆಸ್ಪದವೆಲ್ಲಿ? ಅದು ಇಲ್ಲದೆ ಹೋಯಿತು. 27 ಯಾವ ಪ್ರಮಾಣದಿಂದ? ಕರ್ಮಮಾರ್ಗವನ್ನು ಅನುಸರಿಸುವದರಿಂದಲೋ? ಅಲ್ಲ; ವಿಶ್ವಾಸಮಾರ್ಗವನ್ನು ಅನುಸರಿಸುವದರಿಂದಲೇ. ಧರ್ಮಪ್ರಮಾಣಸಂಬಂಧವಾದ ಕರ್ಮ 28 ಗಳಿಲ್ಲದೆ ನಂಬಿಕೆಯಿಂದಲೇ ಮನುಷ್ಯರು ನೀತಿವಂತರೆಂದು ನಿರ್ಣಯಿಸಲ್ಪಡುವರೆಂಬದಾಗಿ ನಿಶ್ಚಯಮಾಡಿಕೊಂಡಿದ್ದೇವಲ್ಲಾ. ದೇವರು ಯೆಹೂದ್ಯರಿಗೆ ಮಾತ್ರ ದೇವರಾಗಿದ್ದಾನೋ? 29 ಅನ್ಯಜನಗಳಿಗೆ ಸಹ ದೇವರಲ್ಲವೇ? ಹೌದು, ದೇವರು ಒಬ್ಬನೇ ಆಗಿರಲಾಗಿ, ಆತನು ಅನ್ಯಜನ ರಿಗೆ ಸಹ ದೇವರಾಗಿದ್ದಾನೆ. ಆತನು ಸುನ್ನತಿಯವರನ್ನು ನೀತಿವಂತರೆಂದು ನಿರ್ಣಯಿಸು 30 ವದಕ್ಕೆ ಅವರ ನಂಬಿಕೆಯೇ ಆಧಾರ; ಸುನ್ನತಿಯಿಲ್ಲದವರನ್ನೂ ಹಾಗೆಯೇ ನಿರ್ಣಯಿಸು ವದಕ್ಕೆ ನಂಬಿಕೆಯೇ ಕಾರಣ. ಹಾಗಾದರೆ ನಂಬಿಕೆಯಿಂದ ಧರ್ಮಪ್ರಮಾಣವನ್ನು 31 ನಿರರ್ಥಕಮಾಡುತ್ತೇವೋ? ಎಂದಿಗೂ ಇಲ್ಲ. ಧರ್ಮಪ್ರಮಾಣವನ್ನು ಸ್ಥಿರಪಡಿಸುತ್ತೇವೆ.

ಅಬ್ರಹಾಮನಾದರೂ ನಂಬಿಕೆಯಿಂದಲೇ ಪುಣ್ಯವಂತನಾದನೆಂಬ ತರ್ಕ.

ಹಾಗಾದರೆ, ವಂಶಾನುಕ್ರಮವಾಗಿ ನಮಗೆ ಮೂಲಪಿತೃವಾಗಿರುವ ಅಬ್ರಹಾಮನು **4** ಏನು ಪಡಕೊಂಡನೆಂದು ಹೇಳಬೇಕು? ಅಬ್ರಹಾಮನು ಪುಣ್ಯಕ್ರಿಯೆಗಳಿಂದಲೇ ನೀತಿ 2 ವಂತನಾದ ಪಕ್ಷದಲ್ಲಿ ಹೊಗಳಿಕೊಳ್ಳುವದಕ್ಕೆ ಅವನಿಗೆ ಆಸ್ಪದವಿರುವದು; ಆದರೆ ದೇವರ ಮುಂದೆ ಹೊಗಳಿಕೊಳ್ಳುವದಕ್ಕೆ ಆಸ್ಪದವಿರುವದಿಲ್ಲ. ಇದರ ವಿಷಯದಲ್ಲಿ ಶಾಸ್ತ್ರವು 3 ಹೇಳುವದನ್ನು ಆಲೋಚಿಸಿರಿ. ಅಬ್ರಹಾಮನು ದೇವರನ್ನು ನಂಬಿದನು; ಆ ನಂಬಿಕೆ ಅವ ನಿಗೆ ನೀತಿ ಎಂದು ಎಣಿಸಲ್ಪಟ್ಟಿತು ಎಂದು[2] ಹೇಳುತ್ತದೆ. ಕೆಲಸಮಾಡಿದವನಿಗೆ ಬರುವ 4 ಕೂಲಿಯು ದಯದಿಂದ ದೊರಕುವಂಥಾದ್ದೆಂದು ಎಣಿಕೆಯಾಗುವದಿಲ್ಲ; ಅದು ಸಲ್ಲತಕ್ಕದ್ದೇ 5

[1] ಅಥವಾ, ದೇವರಿಗೆ ಮೆಚ್ಚಿಕೆಯಾಗಿರುವ.

[2] ಉತ್ಪತ್ತಿ ೧೫, ೬.

ಎಂದು ಎಣಿಕೆಯಾಗುವದು. ಆದರೆ ಯಾವನು ಪುಣ್ಯಕ್ರಿಯೆಗಳನ್ನು ಮಾಡಿದವನಾಗಿರದೆ, ಪಾಪಾತ್ಮರನ್ನು ನೀತಿವಂತರೆಂದು ನಿರ್ಣಯಿಸುವಾತನಲ್ಲಿ ನಂಬಿಕೆಯಿಡುತ್ತಾನೋ ಅವನ
6 ನಂಬಿಕೆಯೇ ನೀತಿ ಎಂದು ಎಣಿಸಲ್ಪಡುವದು. ದೇವರು ಯಾವನನ್ನು ಪುಣ್ಯಕ್ರಿಯೆಗಳಿಲ್ಲದೆ ನೀತಿವಂತನೆಂದು ಎಣಿಸುತ್ತಾನೋ ಅವನು ಧನ್ಯನೆಂದು ದಾವೀದನು ಸಹ ಹೇಳುತ್ತಾನೆ. ಹ್ಯಾಗಂದರೆ—

7 ಯಾರ ಪಾಪಗಳು ಪರಿಹಾರವಾಗಿವೆಯೋ,
ಯಾರ ಅಪರಾಧಗಳು ಕ್ಷಮಿಸಲ್ಪಟ್ಟವೋ, ಅವರೇ ಧನ್ಯರು.
8 ಕರ್ತನು ಯಾವನಲ್ಲಿ ಪಾಪವನ್ನು ಎಣಿಸುವದಿಲ್ಲವೋ ಆ ಮನುಷ್ಯನೇ ಧನ್ಯನು[1].

9 ಈ ಶುಭವಚನವು ಸುನ್ನತಿಯಿದ್ದವರಿಗೆ ಮಾತ್ರವೋ? ಸುನ್ನತಿಯಿಲ್ಲದವರಿಗೆ ಸಹ ಆಗುತ್ತದೋ? ನೋಡೋಣ. ಅಬ್ರಹಾಮನಿಗೆ ಅವನ ನಂಬಿಕೆಯೇ ನೀತಿಯೆಂದು ಎಣಿಸ
10 ಲ್ಪಟ್ಟಿತೆಂಬದಾಗಿ ಹೇಳುತ್ತೇವಲ್ಲಾ. ಅದು ಯಾವಾಗ ಎಣಿಸಲ್ಪಟ್ಟಿತು? ಅವನಿಗೆ ಸುನ್ನತಿಯಾದ ಮೇಲೆಯೋ? ಸುನ್ನತಿಯಾಗುವದಕ್ಕೆ ಮೊದಲೋ? ಸುನ್ನತಿಯಾದ ಮೇಲೆ ಅಲ್ಲ,
11 ಸುನ್ನತಿಯಾಗುವದಕ್ಕೆ ಮೊದಲೇ ಎಣಿಸಲ್ಪಟ್ಟಿತು. ಆ ಮೇಲೆ ಸುನ್ನತಿಯೆಂಬ ಸಂಸ್ಕಾರವನ್ನು ಗುರುತಾಗಿ ಹೊಂದಿದನು. ಇದು ಸುನ್ನತಿಯಾಗುವದಕ್ಕೆ ಮೊದಲೇ ಅವನಿಗಿದ್ದ ನಂಬಿಕೆಯಿಂದಾದ ನೀತಿಗೆ ಮುದ್ರೆಯಾಗಿತ್ತು. ಹೀಗಿರುವದರಿಂದ ಅವನು ನಂಬುವವರೆಲ್ಲರಿಗೂ, ಅವರು ಸುನ್ನತಿಯಿಲ್ಲದವರಾದಾಗ್ಯೂ, ಮೂಲತಂದೆಯಾದನು; ಅವರೂ
12 ನೀತಿವಂತರೆಂದು ಎಣಿಸಲ್ಪಡುವರು. ಇದಲ್ಲದೆ ಸುನ್ನತಿಯವರಲ್ಲಿ ಯಾರ್‍ಯಾರು ಸುನ್ನತಿ ಹೊಂದಿದ್ದಲ್ಲದೆ ನಮ್ಮ ಪಿತೃವಾಗಿರುವ ಅಬ್ರಹಾಮನಿಗೆ ಸುನ್ನತಿಯಾಗುವದಕ್ಕೆ ಮುಂಚೆ ಇದ್ದ ನಂಬಿಕೆಯ ಹೆಜ್ಜೆಗಳನ್ನು ಹಿಡಿದು ನಡೆಯುತ್ತಾರೋ ಅವರಿಗೆ ಸಹ ಮೂಲತಂದೆಯಾಗಿದ್ದಾನೆ.

13 ನೀನು ಲೋಕಕ್ಕೆ ಬಾಧ್ಯನಾಗುವಿ ಎಂಬ ವಾಗ್ದಾನವು[2] ಅಬ್ರಹಾಮನಿಗಾಗಲಿ ಅವನ ಸಂತತಿಯವರಿಗಾಗಲಿ ಧರ್ಮಶಾಸ್ತ್ರದಿಂದ ಆದದ್ದಲ್ಲ; ನಂಬಿಕೆಯೆಂಬ ನೀತಿಯಿಂದ
14 ಆದದ್ದೇ. ಧರ್ಮಶಾಸ್ತ್ರದವರು ಬಾಧ್ಯರಾಗಿದ್ದರೆ, ನಂಬಿಕೆಯು ವ್ಯರ್ಥವಾಯಿತು,
15 ವಾಗ್ದಾನವೂ ಬರೀದಾಯಿತು. ಯಾಕಂದರೆ ಧರ್ಮಶಾಸ್ತ್ರವು ಜನರನ್ನು ದೇವರ ಕೋಪಕ್ಕೆ ಗುರಿಮಾಡುವಂಥಾದ್ದು. ಧರ್ಮಶಾಸ್ತ್ರವಿಲ್ಲದ ಪಕ್ಷದಲ್ಲಿ ಮೀರೋಣ
16 ವೆಂಬುವದೂ ಇಲ್ಲ. ಆದಕಾರಣ ಆ ಬಾಧ್ಯತೆಯು ಕೃಪೆಯಿಂದಲೇ ದೊರೆಯುವಂಥಾದ್ದಾಗಿರುವಂತೆ ಅದು ನಂಬಿಕೆಯ ಮೂಲಕ ಸಿಕ್ಕುತ್ತದೆ. ಹೀಗೆ ಆ ವಾಗ್ದಾನವು ಅಬ್ರಹಾಮನ ಸಂತತಿಯವರೆಲ್ಲರಿಗೂ, ಅಂದರೆ ಧರ್ಮಶಾಸ್ತ್ರವನ್ನು ಆಧಾರಮಾಡಿಕೊಂಡವರಿಗೆ ಮಾತ್ರವಲ್ಲದೆ ಅಬ್ರಹಾಮನಲ್ಲಿದ್ದಂಥ ನಂಬಿಕೆಯುಳ್ಳವರಿಗೆ ಸಹ, ಸ್ಥಿರವಾಗಿ ನಿಲ್ಲುವದು.
17 ನಾನು ಅನೇಕ ಜನಾಂಗಗಳಿಗೆ ನಿನ್ನನ್ನು ತಂದೆಯಾಗಿ ನೇಮಿಸಿದ್ದೇನೆಂದು[3] ಶಾಸ್ತ್ರದಲ್ಲಿ ಬರೆದಿರುವಪ್ರಕಾರ ಅಬ್ರಹಾಮನು ನಮ್ಮೆಲ್ಲರಿಗೂ ದೇವರ ಸನ್ನಿಧಿಯಲ್ಲಿ ತಂದೆಯಾಗಿದ್ದಾನೆ. ದೇವರು ಸತ್ತವರನ್ನು ಬದುಕಿಸುವವನಾಗಿಯೂ ಇಲ್ಲದ್ದನ್ನು ಇರುವದಾಗಿ ಕರೆಯುವವ

[1] ಕೀರ್ತನೆ ೩೨, ೧. [2] ಉತ್ಪತ್ತಿ ೧೮, ೧೮; ೨೨, ೧೭. ೧೮. [3] ಉತ್ಪತ್ತಿ ೧೭, ೫.

ನಾಗಿಯೂ ಇದ್ದಾನೆಂದು ಅಬ್ರಹಾಮನು ನಂಬಿದನು. ನಿನ್ನ ಸಂತಾನವು ನಕ್ಷತ್ರಗಳ 18
ಷ್ಟಾಗುವದು ಎಂಬದಾಗಿ[1] ತನಗೆ ಹೇಳಲ್ಪಟ್ಟ ಮಾತು ನೆರವೇರುವದಕ್ಕೆ ಮಾರ್ಗ
ತೋರದೆ ಇರುವದರಿಂದ ಅಬ್ರಹಾಮನು ತಾನು ಅನೇಕ ಜನಾಂಗಗಳಿಗೆ ತಂದೆಯಾಗುವೆ
ನೆಂಬ ನಿರೀಕ್ಷೆಗೆ ಆಸ್ಪದವಿಲ್ಲದಿರುವಾಗಲೂ ನಿರೀಕ್ಷಿಸಿ ನಂಬಿದನು. ಅವನು ಹೆಚ್ಚು 19
ಕಡಿಮೆ ನೂರುವರುಷದವನಾಗಿದ್ದು, ತನ್ನ ದೇಹವು ಆಗಲೇ ಮೃತಪ್ರಾಯವಾಯಿತೆಂದೂ
ಸಾರಳಿಗೆ ಗರ್ಭಕಾಲ ಕಳೆದುಹೋಯಿತೆಂದೂ ಯೋಚಿಸಿದಾಗ್ಯೂ ಅವನ ನಂಬಿ
ಕೆಯು ಕುಂದಲಿಲ್ಲ. ದೇವರು ಮಾಡಿದ ವಾಗ್ದಾನದ ವಿಷಯದಲ್ಲಿ ಅವನು ಅಪನಂಬಿ 20
ಕೆಯಿಂದ ಚಂಚಲಚಿತ್ತನಾಗಲಿಲ್ಲ. ದೇವರನ್ನು ಘನಪಡಿಸುವವನಾಗಿ, ಆತನು 21
ತನ್ನ ವಾಗ್ದಾನವನ್ನು ನೆರವೇರಿಸುವದಕ್ಕೆ ಸಮರ್ಥನೆಂದು ಪೂರಾ ಭರವಸವಿಟ್ಟು ದೃಢ
ನಂಬಿಕೆಯುಳ್ಳವನಾದನು[2]. ಆದದರಿಂದ ಆ ನಂಬಿಕೆಯು ಅವನಿಗೆ ನೀತಿಯೆಂದು ಎಣಿ 22
ಸಲ್ಪಟ್ಟಿತು. ಆದರೆ ಅದು ಅವನಿಗೆ ನೀತಿಯೆಂದು ಎಣಿಸಲ್ಪಟ್ಟಿತೆಂಬುವದು ಅವನಿಗೋ 23
ಸ್ಕರ ಮಾತ್ರವಲ್ಲದೆ ನಮಗೋಸ್ಕರವೂ ಬರೆದಿರುವದು. ನಮ್ಮ ಕರ್ತನಾದ ಯೇಸು 24
ವನ್ನು ಸತ್ತವರೊಳಗಿಂದ ಎಬ್ಬಿಸಿದ ದೇವರನ್ನು ನಾವು ನಂಬಿದರೆ, ನಮ್ಮ ನಂಬಿಕೆಯೂ
ನೀತಿಯೆಂದು ಎಣಿಸಲ್ಪಡುವದು. ದೇವರು ಆತನನ್ನು ನಮ್ಮ ಅಪರಾಧಗಳ ನಿಮಿತ್ತ 25
ಮರಣಕ್ಕೆ ಒಪ್ಪಿಸಿಕೊಟ್ಟು, ನಮಗೆ ನೀತಿವಂತರೆಂಬ ನಿರ್ಣಯವು ಉಂಟಾಗುವ ನಿಮಿತ್ತ
ಜೀವದಿಂದ ಎಬ್ಬಿಸಿದನು.

### ನಂಬಿರುವವರಿಗೆ ರಕ್ಷಣೆ ತಪ್ಪುವದಿಲ್ಲವೆಂಬ ಸಿದ್ಧಾಂತ.

**5** ಹೀಗಿರಲಾಗಿ, ನಾವು ನಂಬಿಕೆಯಿಂದ ನೀತಿವಂತರಾದ ಕಾರಣ ನಮ್ಮ ಕರ್ತನಾದ
ಯೇಸು ಕ್ರಿಸ್ತನ ಮೂಲಕ ದೇವರೊಂದಿಗೆ ಉಂಟಾದ ಸಮಾಧಾನದಲ್ಲಿ ಇರೋಣ.
ನಾವು ಈಗ ನೆಲೆಗೊಂಡಿರುವ ದೇವರ ಕೃಪಾಶ್ರಯದಲ್ಲಿ ಆತನ ಮುಖಾಂತರವೇ ನಂಬಿಕೆ 2
ಯಿಂದ ಪ್ರವೇಶವಾಯಿತು. ಮತ್ತು ದೇವರ ಮಹಿಮೆಯನ್ನು ಹೊಂದುವೆವೆಂಬ ಭರ
ವಸದಿಂದ ಉಲ್ಲಾಸವಾಗಿದ್ದೇವೆ. ಇದು ಮಾತ್ರವಲ್ಲದೆ ನಮಗೆ ಉಂಟಾಗುವ ಉಪದ್ರ 3
ಗಳಲ್ಲಿಯೂ ಉಲ್ಲಾಸವಾಗಿದ್ದೇವೆ. ಯಾಕಂದರೆ ಉಪದ್ರದಿಂದ ತಾಳ್ಮೆ ಹುಟ್ಟುತ್ತದೆ, 4
ತಾಳ್ಮೆಯಿಂದ ಅನುಭವಸಿದ್ಧಿ ಹುಟ್ಟುತ್ತದೆ, ಅನುಭವದಿಂದ ನಿರೀಕ್ಷಣ ಹುಟ್ಟುತ್ತದೆಂದು
ಬಲ್ಲೆವು. ಈ ನಿರೀಕ್ಷೆಯು ನಮ್ಮ ಆಶೆಯನ್ನು ಭಂಗಪಡಿಸುವದಿಲ್ಲ, ನಮಗೆ ಕೊಟ್ಟಿರುವ 5
ಪವಿತ್ರಾತ್ಮನ ಮೂಲಕವಾಗಿ ದೇವರ ಪ್ರೀತಿರಸವು ನಮ್ಮ ಹೃದಯಗಳಲ್ಲಿ ಧಾರಾಳವಾಗಿ
ಸುರಿದದೆಯಲ್ಲಾ.

ನಾವು ಅಶಕ್ತರಾಗಿದ್ದಾಗಲೇ ಕ್ರಿಸ್ತನು ನೇಮಿತ ಕಾಲದಲ್ಲಿ ಭಕ್ತಿಹೀನರಿಗೋಸ್ಕರ 6
ಪ್ರಾಣಕೊಟ್ಟನು. ನೀತಿವಂತನಿಗೋಸ್ಕರ ಯಾರಾದರೂ ಪ್ರಾಣಕೊಡುವದು ಅಪರೂಪ. 7
ಉಪಕಾರಿಗೋಸ್ಕರ ಪ್ರಾಣಕೊಡುವದಕ್ಕೆ ಯಾವನಾದರೂ ಧೈರ್ಯಮಾಡಿದರೂ
ಮಾಡ್ಯಾನು. ಆದರೆ ನಾವು ಪಾಪಿಗಳಾಗಿದ್ದಾಗಲೂ ಕ್ರಿಸ್ತನು ನಮಗೋಸ್ಕರ ಪ್ರಾಣ 8

[1] ಉತ್ಪತ್ತಿ ೧೫, ೫. [2] ಅಥವಾ, ನಂಬಿಕೆಯಿಂದಲೇ ಬಲಗೊಂಡನು.

ಕೊಟ್ಟದ್ದರಲ್ಲಿ ದೇವರು ನಮ್ಮ ಮೇಲೆ ತನಗಿರುವ ಪ್ರೀತಿಯನ್ನು ಸಿದ್ಧಾಂತಪಡಿಸಿದ್ದಾನೆ.
9 ಈಗ ನಾವು ಆತನ ರಕ್ತದಿಂದ ನೀತಿವಂತರಾಗಿರಲಾಗಿ, ಆತನ ಮೂಲಕ ಬರುವ
10 ಕೋಪಕ್ಕೆ ತಪ್ಪಿಸಿಕೊಳ್ಳುವದು ಮತ್ತೂ ನಿಶ್ಚಯವಲ್ಲವೇ. ದೇವರಿಗೆ ವೈರಿಗಳಾಗಿದ್ದ ನಾವು ಆತನ ಮಗನ ಮರಣದ ಮೂಲಕ ಆತನೊಂದಿಗೆ ಸಮಾಧಾನವಾಗಿರಲಾಗಿ ಆತನ ಕೂಡ ಸಮಾಧಾನವಾದ ನಮಗೆ ಆ ಮಗನಿಗಿರುವ ಜೀವದಿಂದ ರಕ್ಷಣೆಯಾಗುವದು
11 ಮತ್ತೂ ನಿಶ್ಚಯವಲ್ಲವೇ. ಇಷ್ಟು ಮಾತ್ರವೇ ಅಲ್ಲದೆ, ನಾವು ನಮ್ಮ ಕರ್ತನಾದ ಯೇಸು ಕ್ರಿಸ್ತನ ಮೂಲಕ ಸಮಾಧಾನಸ್ಥಿತಿ ಹೊಂದಿದವರಾಗಿ ಆತನ ಮುಖಾಂತರ ದೇವರಲ್ಲಿ ಹರ್ಷಗೊಳ್ಳುತ್ತೇವೆ.

ಆದಮನಿಂದ ಸರ್ವರಿಗೂ ಮರಣವಾದಂತೆ ಕ್ರಿಸ್ತನಿಂದ ಸರ್ವರಿಗೂ ರಕ್ಷಣೆಯಾಗುವದೆಂಬ ಸಿದ್ಧಾಂತ.

12 ಈ ವಿಷಯ ಹ್ಯಾಗಂದರೆ—ಒಬ್ಬ ಮನುಷ್ಯನಿಂದಲೇ ಪಾಪವೂ ಪಾಪದಿಂದ ಮರಣವೂ ಲೋಕದೊಳಗೆ ಸೇರಿದವು; ಎಲ್ಲರು ಪಾಪ ಮಾಡಿದ್ದರಿಂದ ಮರಣವು ಹೀಗೆ ಎಲ್ಲ
13 ರಲ್ಲಿಯೂ ವ್ಯಾಪಿಸಿತು. ಧರ್ಮಶಾಸ್ತ್ರ ಉಂಟಾಗುವದಕ್ಕೆ ಮುಂಚೆಯೂ ಪಾಪವು ಲೋಕದಲ್ಲಿತ್ತು; ಆದರೆ ಧರ್ಮಶಾಸ್ತ್ರವಿಲ್ಲದಿರುವಾಗ ಪಾಪವು ಲೆಕ್ಕಕ್ಕೆ ಬರುವದಿಲ್ಲ.
14 ಆದಾಗ್ಯೂ ಆದಮನ ಕಾಲದಿಂದ ಮೋಶೆಯ ಕಾಲದ ವರೆಗೂ ಮರಣದ ಆಳಿಕೆಯು ನಡೆಯುತ್ತಿತ್ತು. ಆದಮನು ದೇವಾಜ್ಞೆಮೀರಿಮಾಡಿದ ಪಾಪಕ್ಕೆ ಸಮಾನವಾದ ಪಾಪವನ್ನು ಮಾಡದೆ ಇದ್ದವರ ಮೇಲೆಯೂ ಅದು ನಡೆಯುತ್ತಿತ್ತು. ಆ ಆದಮನು ಬರಬೇಕಾದ ಒಬ್ಬಾತನಿಗೆ ಸೂಚಕಪುರುಷನಾಗಿದ್ದಾನೆ.
15 ಆದರೆ ಆ ಅಪರಾಧದ ಸಂಗತಿಗೂ ದೇವರ ಕೃಪಾದಾನದ ಸಂಗತಿಗೂ ಬಹಳ ಹೆಚ್ಚುಕಡಿಮೆ ಉಂಟು. ಹ್ಯಾಗಂದರೆ ಆ ಒಬ್ಬನ ಅಪರಾಧದಿಂದ ಎಲ್ಲಾ ಮನುಷ್ಯರು ಸತ್ತದ್ದು ನಿಶ್ಚಯವಾಗಿರಲಾಗಿ, ದೇವರ ಕೃಪೆಯೂ ಯೇಸು ಕ್ರಿಸ್ತನೆಂಬ ಈ ಒಬ್ಬ ಪುರುಷನ ಕೃಪೆಯಿಂದ ಸಿಕ್ಕುವ ವರವೂ ಅತಿಶಯವಾಗಿ ಎಲ್ಲಾ ಮನುಷ್ಯರಿಗೆ ದೊರೆಯುವದು ಮತ್ತೂ
16 ನಿಶ್ಚಯವಲ್ಲವೇ? ಇದಲ್ಲದೆ ಪಾಪಮಾಡಿದ ಒಬ್ಬನಿಂದಲೇ ದುಷ್ಫಲ ಬಂದಂತೆ ಈ ವರವು ಬರಲಿಲ್ಲ; ಹ್ಯಾಗಂದರೆ ಒಬ್ಬನೇ ಮನುಷ್ಯನ ಪಾಪದ ದೆಸೆಯಿಂದ ಸಾಯಬೇಕೆಂಬ ನಿರ್ಣಯವು ಉಂಟಾಯಿತು, ಆದರೆ ದೇವರ ಕೃಪಾದಾನವು ಅನೇಕರ ಅಪರಾಧಗಳ ಕಾರಣ
17 ದಿಂದ ಉಂಟಾಗಿ ಅವರನ್ನು ನೀತಿವಂತರೆಂದು ನಿರ್ಣಯಿಸುವಂಥಾದ್ದಾಗಿದೆ. ಒಬ್ಬನು ಮಾಡಿದ ಅಪರಾಧದಿಂದ ಮರಣವು ಉಂಟಾಗಿ ಆ ಒಬ್ಬನ ದೆಸೆಯಿಂದಲೇ ಆಳುವದಾದರೆ, ದೇವರು ಧಾರಾಳವಾಗಿ ಅನುಗ್ರಹಿಸುವ ಕೃಪಾದಾನವನ್ನೂ ನೀತಿಯೆಂಬ ವರವನ್ನೂ ಹೊಂದಿದವರು ಯೇಸು ಕ್ರಿಸ್ತನೆಂಬ ಈ ಒಬ್ಬ ಪುರುಷನ ಮೂಲಕ ಜೀವಭರಿತರಾಗಿ ಆಳುವದು ಮತ್ತೂ ನಿಶ್ಚಯವಲ್ಲವೇ?
18 ಹೀಗಿರಲಾಗಿ, ಒಂದೇ ಅಪರಾಧದ ಮೂಲಕ ಎಲ್ಲಾ ಮನುಷ್ಯರಿಗೆ ಸಾಯಬೇಕೆಂಬ ನಿರ್ಣಯವು ಹ್ಯಾಗೆ ಉಂಟಾಯಿತೋ, ಹಾಗೆಯೇ ಒಂದೇ ಸತ್ಕಾರ್ಯದಿಂದ ಎಲ್ಲಾ
19 ಮನುಷ್ಯರಿಗೆ ನೀತಿವಂತರೆಂಬ ನಿರ್ಣಯವು ಉಂಟಾಗಿ ಜೀವವನ್ನು ಫಲಿಸುತ್ತದೆ. ಒಬ್ಬನ

ಅವಿಧೇಯತ್ವದಿಂದ ಎಲ್ಲರೂ ಹ್ಯಾಗೆ ಪಾಪಿಗಳಾದರೋ ಹಾಗೆಯೇ ಒಬ್ಬನ ವಿಧೇಯತ್ವ ದಿಂದ ಎಲ್ಲರೂ ನೀತಿವಂತರಾಗುವರು. 20 ಧರ್ಮಶಾಸ್ತ್ರವು ಮಧ್ಯೆ ಬಂದದರಿಂದ ಅಪರಾಧ ಗಳು ಹೆಚ್ಚಾದವು. ಆದರೆ ಪಾಪವು ಹೆಚ್ಚಿದಲ್ಲೇ ಕೃಪೆಯು ಎಷ್ಟೋ ಹೆಚ್ಚಾಗಿ ಪ್ರಬಲ ವಾಯಿತು. 21 ಹೀಗೆ ಪಾಪವು ಮರಣವನ್ನುಂಟುಮಾಡುತ್ತಾ ಅಧಿಕಾರವನ್ನು ನಡಿಸಿದ ಹಾಗೆಯೇ ದೇವರ ಕೃಪೆಯು ನಮ್ಮ ಕರ್ತನಾದ ಯೇಸು ಕ್ರಿಸ್ತನ ಮೂಲಕ ನೀತಿ ಯನ್ನು ಕೊಟ್ಟು ನಿತ್ಯಜೀವವನ್ನುಂಟುಮಾಡುತ್ತಾ ಅಧಿಕಾರವನ್ನು ನಡಿಸುವದು.

ಸತ್ತು ಜೀವಿತನಾಗಿ ಎದ್ದ ಕ್ರಿಸ್ತನಲ್ಲಿ ಐಕ್ಯವಾದವರು ಪಾಪದ ಪಾಲಿಗೆ ಸತ್ತು ಹೊಸ ನಡತೆಯುಳ್ಳವರಾಗುವರು ಎಂಬ ಬೋಧನೆ.

**6** ಹಾಗಾದರೆ ಏನು ಹೇಳೋಣ? ದೇವರ ಕೃಪೆಯು ಹೆಚ್ಚಲಿ ಎಂದು ನಾವು ಪಾಪದಲ್ಲಿ ಇನ್ನೂ ಇರಬೇಕೋ? 2 ಎಂದಿಗೂ ಇರಬಾರದು. ಪಾಪದ ಪಾಲಿಗೆ ಸತ್ತವರಾದ ನಾವು ಇನ್ನೂ ಅದರಲ್ಲೇ ಬದುಕುವದು ಹ್ಯಾಗೆ? 3 ಕ್ರಿಸ್ತ ಯೇಸುವಿನಲ್ಲಿ ಸೇರುವದಕ್ಕೆ ದೀಕ್ಷಾ ಸ್ನಾನ ಮಾಡಿಸಿಕೊಂಡವರಾದ ನಾವೆಲ್ಲರು ಆತನ ಮರಣದಲ್ಲಿ ಪಾಲುಗಾರರಾಗುವದಕ್ಕೆ ದೀಕ್ಷಾಸ್ನಾನ ಮಾಡಿಸಿಕೊಂಡೆವೆಂದು ನಿಮಗೆ ತಿಳಿಯದೋ? 4 ಹೀಗಿರಲಾಗಿ ನಾವು ದೀಕ್ಷಾಸ್ನಾನಮಾಡಿಸಿಕೊಂಡಾಗ ಆತನ ಮರಣದಲ್ಲಿ ಪಾಲುಗಾರರಾಗಿ ಆತನೊಂದಿಗೆ ಹೂಣಲ್ಪಟ್ಟೆವು. ಆದದರಿಂದ ಕ್ರಿಸ್ತನು ಸತ್ತು ತಂದೆಯ ಮಹಿಮೆಯಿಂದ ಜೀವಿತನಾಗಿ ಎದ್ದಂತೆಯೇ ನಾವು ಕೂಡ ಜೀವದಿಂದೆದ್ದು ಹೊಸಬರಾಗಿ ನಡಕೊಳ್ಳಬೇಕು. 5 ಹ್ಯಾಗಂದರೆ ನಾವು ಆತನ ಮರಣಕ್ಕೆ ಸದೃಶವಾದ ಮರಣವನ್ನು ಹೊಂದಿ ಆತನಲ್ಲಿ ಐಕ್ಯವಾಗಿದ್ದರೆ, ಆತನ ಪುನರುತ್ಥಾನಕ್ಕೆ ಸದೃಶವಾದ ಪುನರುತ್ಥಾನವನ್ನೂ ಹೊಂದಿ ಆತ ನಲ್ಲಿ ಐಕ್ಯವಾಗುವೆವು. 6 ನಮ್ಮ ಪೂರ್ವಸ್ವಭಾವವು ಕ್ರಿಸ್ತನ ಕೂಡ ಶಿಲುಬೆಗೆ ಹಾಕಲ್ಪ ಟ್ಟಿರುವದರಿಂದ ಪಾಪಾಧೀನವಾದ ದೇಹವು ನಾಶವಾಯಿತೆಂದು ತಿಳಿದು ನಾವು ಇನ್ನೂ ಪಾಪದ ವಶದಲ್ಲಿರಬಾರದು. 7 ಸತ್ತವನು ಪಾಪದ ವಶದಿಂದ ಬಿಡುಗಡೆ ಹೊಂದಿ ದ್ದಾನಷ್ಟೆ.

8 ಇದಲ್ಲದೆ ನಾವು ಕ್ರಿಸ್ತನೊಡನೆ ಸತ್ತ ಪಕ್ಷದಲ್ಲಿ ಆತನೊಡನೆ ಜೀವಿಸುವೆವೆಂದು ನಂಬು ತ್ತೇವೆ. 9 ಯಾಕಂದರೆ ಕ್ರಿಸ್ತನು ಸತ್ತ ಮೇಲೆ ಜೀವಿತನಾಗಿ ಎದ್ದುಬಂದದರಿಂದ ಆತನು ಇನ್ನು ಮುಂದೆ ಸಾಯತಕ್ಕವನಲ್ಲ, ಮರಣವು ಇನ್ನೂ ಆತನನ್ನು ಆಳುವದಿಲ್ಲವೆಂದು ನಮಗೆ ತಿಳಿದದೆ. 10 ಆತನು ಸತ್ತದ್ದು ಒಂದೇ ಸಾರಿ, ಅದು ಪಾಪದ ಪಾಲಿಗೆ; ಆತನು ಜೀವಿಸುವದು ದೇವರಿಗಾಗಿಯೇ. 11 ಅದೇ ಪ್ರಕಾರ ನೀವು ಸಹ ನಿಮ್ಮನ್ನು ಕ್ರಿಸ್ತ ಯೇಸು ವಿನ ಐಕ್ಯದಿಂದ ಪಾಪದ ಪಾಲಿಗೆ ಸತ್ತವರೂ ದೇವರಿಗಾಗಿ ಜೀವಿಸುವವರೂ ಎಂದು ಎಣಿಸಿಕೊಳ್ಳಿರಿ.

ನಂಬಿದವರು ಪಾಪದ ದಾಸತ್ವದಿಂದ ಬಿಡುಗಡೆಯಾಗಿ ದೇವರಿಗೆ ದಾಸರಾಗುವರು.

12 ಹೀಗಿರುವದರಿಂದ ಸಾಯತಕ್ಕ ನಿಮ್ಮ ದೇಹದ ಮೇಲೆ ಪಾಪವನ್ನು ಆಳಗೊಡಿಸಿ
13 ನೀವು ದೇಹದ ದುರಾಶೆಗಳಿಗೆ ಒಳಪಡಬೇಡಿರಿ. ಇದು ಮಾತ್ರವಲ್ಲದೆ, ನೀವು ನಿಮ್ಮ ಅಂಗಗಳನ್ನು ಪಾಪಕ್ಕೆ ಒಪ್ಪಿಸುವವರಾಗಿದ್ದು ದುಷ್ಟತ್ವವನ್ನು ನಡಿಸುವ ಸಾಧನಗಳಾಗ ಮಾಡಬೇಡಿರಿ; ಆದರೆ ಸತ್ತವರೊಳಗಿಂದ ಜೀವಿತರಾಗಿರಲಾಗಿ ನಿಮ್ಮನ್ನು ದೇವರಿಗೆ ಒಪ್ಪಿಸಿಕೊಟ್ಟು ನಿಮ್ಮ ಅಂಗಗಳನ್ನು ನೀತಿಕೃತ್ಯಗಳನ್ನು ನಡಿಸುವ ಸಾಧನಗಳಾಗ ಮಾಡಿರಿ.
14 ಯಾಕಂದರೆ ಪಾಪಕ್ಕೆ ನಿಮ್ಮ ಮೇಲೆ ಅಧಿಕಾರವಿಲ್ಲ; ನೀವು ಧರ್ಮಶಾಸ್ತ್ರಕ್ಕೆ[1] ಅಧೀನರಲ್ಲ, ಕೃಪೆಗೆ ಅಧೀನರಾಗಿದ್ದೀರಷ್ಟೆ.

15 ಹಾಗಾದರೇನು? ನಾವು ಧರ್ಮಶಾಸ್ತ್ರಾಧೀನರಲ್ಲ, ಕೃಪಾಧೀನರಾಗಿದ್ದೇವೆಂದು
16 ಪಾಪವನ್ನು ಮಾಡಬಹುದೋ? ಎಂದಿಗೂ ಮಾಡಬಾರದು. ನೀವು ಯಾವನಿಗೆ ಆಳುಗಳಂತೆ[2] ವಿಧೇಯರಾಗುತ್ತೇವೆಂದು ನಿಮ್ಮನ್ನು ಒಪ್ಪಿಸಿಕೊಡುತ್ತೀರೋ ಆ ಯಜಮಾನನಿಗೆ ಆಳುಗಳಾಗಿಯೇ ಇರುವಿರೆಂಬುವದು ನಿಮಗೆ ಗೊತ್ತಿಲ್ಲವೋ? ಪಾಪಕ್ಕೆ ಆಳುಗಳಾದರೆ, ಮರಣವೇ ಫಲ; ನಂಬಿಕೆಯೆಂಬ ವಿಧೇಯತ್ವಕ್ಕೆ ಆಳುಗಳಾದರೆ, ನೀತಿಯೇ ಫಲ.
17 ಆದರೆ ನೀವು ಮುಂಚೆ ಪಾಪಕ್ಕೆ ಆಳುಗಳಾಗಿದ್ದರೂ ನಿಮಗೆ ಕಲಿಸಲ್ಪಟ್ಟ ಬೋಧನೆಗೆ
18 ನೀವು ಮನಃಪೂರ್ವಕವಾಗಿ ಅಧೀನರಾದದರಿಂದಲೂ ಪಾಪದಿಂದ ಬಿಡುಗಡೆಯನ್ನು
19 ಹೊಂದಿ ನೀತಿಗೆ ಆಳುಗಳಾದದರಿಂದಲೂ ದೇವರಿಗೆ ಸ್ತೋತ್ರವಾಗಲಿ. ನಿಮ್ಮ ನರಭಾವದ ಬಲಹೀನತೆಯ ದೆಸೆಯಿಂದ ಲೋಕರೀತಿಯಾಗಿ ಮಾತಾಡುತ್ತೇನೆ. ಅಧರ್ಮ ಮಾಡುವದಕ್ಕಾಗಿ ನಿಮ್ಮ ಅಂಗಗಳನ್ನು ಬಂಡುತನಕ್ಕೂ ಅಧರ್ಮಕ್ಕೂ ಆಳುಗಳಾಗಿ ಒಪ್ಪಿಸಿಕೊಟ್ಟಿದ್ದಂತೆಯೇ ಈಗ ಪರಿಶುದ್ಧರಾಗುವದಕ್ಕಾಗಿ ನಿಮ್ಮ ಅಂಗಗಳನ್ನು ನೀತಿಗೆ
20 ಆಳುಗಳಾಗಿ ಒಪ್ಪಿಸಿಕೊಡಿರಿ. ನೀವು ಪಾಪಕ್ಕೆ ಆಳುಗಳಾಗಿದ್ದಾಗ ನೀತಿಯ ಹಂಗಿನವ
21 ರಾಗಿದ್ದಿಲ್ಲ. ಆದರೆ ನೀವು ಆವಾಗ ಮಾಡಿದ ಕೃತ್ಯಗಳಿಂದ ನಿಮಗುಂಟಾದ ಫಲವೇನು? ಈಗ ಅವುಗಳ ವಿಷಯದಲ್ಲಿ ನಿಮಗೆ ನಾಚಿಕೆಯುಂಟಷ್ಟೆ. ಕಡೆಗೆ ಅವುಗಳಿಂದ
22 ಬರುವದು ಮರಣವಲ್ಲವೇ? ಈಗಲಾದರೋ ನೀವು ಪಾಪದಿಂದ ಬಿಡುಗಡೆಯನ್ನು ಹೊಂದಿ ದೇವರಿಗೆ ಆಳುಗಳಾದದರಿಂದ ಪರಿಶುದ್ಧರಾಗುವದೇ ನಿಮಗೆ ಫಲ; ಕಡೆಗೆ ದೊರೆಯು
23 ವಂಥಾದ್ದು ನಿತ್ಯಜೀವ. ಯಾಕಂದರೆ ಪಾಪವು ಕೊಡುವ ಸಂಬಳ ಮರಣ; ದೇವರ ಉಚಿತಾರ್ಥ ವರವು ನಮ್ಮ ಕರ್ತನಾದ ಕ್ರಿಸ್ತ ಯೇಸುವಿನಲ್ಲಿರುವ ನಿತ್ಯಜೀವ.

ಕ್ರಿಸ್ತನಲ್ಲಿ ಐಕ್ಯವಾದವರಿಗೆ ಧರ್ಮಶಾಸ್ತ್ರದ ಹಂಗು ತಪ್ಪಿದ್ದು.

**7** ಸಹೋದರರೇ, ಧರ್ಮಶಾಸ್ತ್ರವನ್ನು ತಿಳಿದವರಿಗೆ ನಾನು ಹೇಳುವದೇನಂದರೆ—ಒಬ್ಬ ಮನುಷ್ಯನು ಜೀವದಿಂದಿರುವ ತನಕ ಮಾತ್ರ ಅವನ ಮೇಲೆ ಧರ್ಮಶಾಸ್ತ್ರದ ಅಧಿಕಾರವು

---

[1] ಅಥವಾ, ನೇಮಗಳಿಗೆ. [2] ೧೬ನೇ ವಚನ ಮೊದಲುಗೊಂಡು ೨೩ನೇ ವಚನದ ವರೆಗೆ, ಆಳು ಎಂಬದಕ್ಕೆ ಬದಲಾಗಿ ದಾಸ ಅಂತ ಓದಿಕೊಳ್ಳಬಹುದು.

ನಡೆಯುತ್ತದೆಂಬುವದು ನಿಮಗೆ ಗೊತ್ತಿಲ್ಲವೇ? ಇದಕ್ಕೆ ದೃಷ್ಟಾಂತ—ಗಂಡನು ಜೀವ 2 ದಿಂದಿರುವ ತನಕ ಹೆಂಡತಿಯು ನ್ಯಾಯದ ಪ್ರಕಾರ ಅವನಿಗೆ ಬದ್ಧಳಾಗಿರುವಳು; ಗಂಡನು ಸತ್ತರೆ, ಗಂಡನ ಹಂಗು ಆಕೆಗೆ ತಪ್ಪುವದು. ಹೀಗಿರಲಾಗಿ ಗಂಡನು ಜೀವದಿಂದಿರುವಾಗ 3 ಆಕೆ ಬೇರೊಬ್ಬನನ್ನು ಸೇರಿದರೆ, ವ್ಯಭಿಚಾರಿಣಿ ಎನ್ನಿಸಿಕೊಳ್ಳುವಳು. ಆದರೆ ಗಂಡನು ಸತ್ತ ಮೇಲೆ ಅವನ ಹಂಗು ತಪ್ಪಿದ್ದರಿಂದ ಆಕೆ ಮತ್ತೊಬ್ಬ ಗಂಡನನ್ನು ಮಾಡಿಕೊಂಡರೂ ವ್ಯಭಿಚಾರಿಣಿಯಲ್ಲ. ಹಾಗೆಯೇ, ನನ್ನ ಸಹೋದರರೇ, ನೀವು ಸಹ ಕ್ರಿಸ್ತನ ದೇಹದ 4 ಮೂಲಕವಾಗಿ ಧರ್ಮಶಾಸ್ತ್ರದ ಪಾಲಿಗೆ ಸತ್ತಿರಿ. ದೇವರಿಗೆ ಫಲವಾಗುವದಕ್ಕಾಗಿ 5 ಮತ್ತೊಬ್ಬನನ್ನು ಅಂದರೆ ಸತ್ತು ಜೀವಿತನಾಗಿ ಎದ್ದಾತನನ್ನು ಸೇರಿಕೊಂಡಿರಿ. ನಾವು ಶರೀರಾಧೀನಸ್ವಭಾವವನ್ನು ಅನುಸರಿಸುತ್ತಿದ್ದಾಗ, ದುರಾಶೆಗಳು ಧರ್ಮಶಾಸ್ತ್ರದಿಂದಲೇ ಪ್ರೇರಿತವಾಗಿ ನಮ್ಮ ಅಂಗಗಳಲ್ಲಿ ಯತ್ನಿಸುತ್ತಾ ಮರಣಕ್ಕೆ ಫಲವನ್ನು ಹುಟ್ಟಿಸುತ್ತಿದ್ದವು. ಈಗಲಾದರೋ ನಮ್ಮನ್ನು ವಶಮಾಡಿಕೊಂಡಿದ್ದ ಧರ್ಮಶಾಸ್ತ್ರದ ಪಾಲಿಗೆ ನಾವು ಸತ್ತ 6 ಕಾರಣ ಆ ಧರ್ಮಶಾಸ್ತ್ರದಿಂದ ವಿಮುಕ್ತರಾಗಿದ್ದೇವೆ. ಹೀಗಿರಲಾಗಿ, ಶಾಸ್ತ್ರದ ಹೊರಗಣ ಅರ್ಥಕ್ಕೆ ಅನುಕೂಲವಾದ ಹಳೇ ರೀತಿಯಲ್ಲಿ ನಾವು ದೇವರನ್ನು ಸೇವಿಸುವವರಲ್ಲ. ಪವಿತ್ರಾತ್ಮಪ್ರೇರಿತ ಹೊಸ ರೀತಿಯಲ್ಲಿ ಆತನನ್ನು ಸೇವಿಸುವವರಾಗಿದ್ದೇವೆ.

ಪಾಪದಿಂದ ಬಿಡಿಸಲು ಧರ್ಮಶಾಸ್ತ್ರಕ್ಕೆ ಶಕ್ತಿ ಸಾಲದು.

ಹಾಗಾದರೆ ಏನು ಹೇಳೋಣ? ಧರ್ಮಶಾಸ್ತ್ರವು ಪಾಪಸ್ವರೂಪವೋ? ಎಂದಿಗೂ 7 ಅಲ್ಲ. ಧರ್ಮಶಾಸ್ತ್ರದಿಂದಲೇ ಹೊರತು ಪಾಪವೆಂಬುವದು ಏನೋ ನನಗೆ ಗೊತ್ತಾಗು ತ್ತಿರಲಿಲ್ಲ. ದೃಷ್ಟಾಂತವಾಗಿ, ಆಶಿಸಬಾರದೆಂದು ಧರ್ಮಶಾಸ್ತ್ರವು ಹೇಳದಿದ್ದರೆ, ದುರಾಶೆ ಯಂದರೆ ಏನೋ ನನಗೆ ತಿಳಿಯುತ್ತಿದ್ದಿಲ್ಲ. ಆದರೆ ಪಾಪವು ಈ ಆಜ್ಞೆಯಿಂದ ಅನು 8 ಕೂಲ ಹೊಂದಿ ಸಕಲ ವಿಧವಾದ ದುರಾಶೆಗಳನ್ನು ನನ್ನಲ್ಲಿ ಹುಟ್ಟಿಸಿತು. ಧರ್ಮಶಾಸ್ತ್ರವು ಇಲ್ಲದಿರುವಾಗ ಪಾಪವು ಅಚೇತನವಾಗಿದೆ. ಮೊದಲು ನಾನು ಧರ್ಮಶಾಸ್ತ್ರವಿಲ್ಲದವ 9 ನಾಗಿದ್ದು ಜೀವದಿಂದಿದ್ದೆನು. ಆಜ್ಞೆಯು ಬಂದಾಗ ಪಾಪಕ್ಕೆ ಜೀವ ಬಂತು, ನಾನು ಸತ್ತೆನು. ಜೀವಿಸುವದಕ್ಕಾಗಿ ಕೊಟ್ಟಿರುವ ಆಜ್ಞೆಯೇ ಮರಣಕ್ಕೆ ಕಾರಣವಾಯಿತೆಂದು 10 ನನಗೆ ಕಂಡುಬಂತು. ಹ್ಯಾಗಂದರೆ, ಪಾಪವು ಆಜ್ಞೆಯಿಂದ ಅನುಕೂಲ ಹೊಂದಿ 11 ನನ್ನನ್ನು ವಂಚಿಸಿ ಆ ಆಜ್ಞೆಯ ಮೂಲಕವೇ ನನ್ನನ್ನು ಕೊಂದಿತು. ಹೀಗಿರಲಾಗಿ 12 ಧರ್ಮಶಾಸ್ತ್ರವು ಪರಿಶುದ್ಧವಾದದ್ದು, ಮತ್ತು ಆಜ್ಞೆಯು ಪರಿಶುದ್ಧವಾಗಿಯೂ ನ್ಯಾಯ ವಾಗಿಯೂ ಹಿತವಾಗಿಯೂ ಇರುವಂಥಾದ್ದು ಸರಿ.

ಹಾಗಾದರೆ ಹಿತವಾದದ್ದು ನನಗೆ ಮರಣಕ್ಕೆ ಕಾರಣವಾಯಿತೋ? ಹಾಗೆ ಎಂದಿಗೂ 13 ಹೇಳಬಾರದು. ಪಾಪವೇ ಮರಣಕ್ಕೆ ಕಾರಣವಾದದ್ದು; ಅದು ಹಿತವಾದದರ ಮೂಲಕ ನನಗೆ ಮರಣವನ್ನು ಉಂಟುಮಾಡಿದ್ದರಿಂದ ಪಾಪವೇ ಎಂದು ಕಾಣಿಸಿಕೊಂಡಿತು; ಮತ್ತು ಆಜ್ಞೆಯ ಮೂಲಕ ಪಾಪವು ಕೇವಲ ಪಾಪಸ್ವರೂಪವೇ ಎಂದು ಕಾಣಬಂತು.

14 ಧರ್ಮಶಾಸ್ತ್ರವು ಪಾರಮಾರ್ಥಿಕವಾದದ್ದೆಂದು ನಾವು ಬಲ್ಲೆವು. ಆದರೆ ನಾನು ದೇಹ ಧರ್ಮಕ್ಕೆ ಒಳಗಾದವನೂ ಪಾಪದ ಸ್ವಾಧೀನದಲ್ಲಿರುವದಕ್ಕೆ ಮಾರಲ್ಪಟ್ಟವನೂ ಆಗಿ
15 ದ್ದೇನೆ. ಹ್ಯಾಗಂದರೆ ನಾನು ಮಾಡುವದು ನನಗೇ ಗೊತ್ತಿಲ್ಲ; ಯಾವದನ್ನು ಮಾಡ ಬೇಕೆಂದು ನಾನು ಇಚ್ಛೈಸುತ್ತೇನೋ ಅದನ್ನು ನಡಿಸದೆ ನನಗೆ ಬೇಡವಾದದ್ದನ್ನು
16 ಮಾಡುತ್ತೇನೆ. ಆದರೆ ನಾನು ಮಾಡುವಂಥಾದ್ದಕ್ಕೆ ನನ್ನ ಮನಸ್ಸು ಒಪ್ಪದಿದ್ದರೆ, ಧರ್ಮ
17 ಶಾಸ್ತ್ರವು ಉತ್ತಮವಾದದ್ದೆಂದು ಒಪ್ಪಿಕೊಂಡಹಾಗಾಯಿತು. ಹೀಗಿರಲಾಗಿ ಆ ಬೇಡ ವಾದದ್ದನ್ನು ಮಾಡುವವನು ಇನ್ನು ನಾನಲ್ಲ, ನನ್ನಲ್ಲಿ ನೆಲೆಗೊಂಡಿರುವ ಪಾಪವೇ
18 ಅದನ್ನು ಮಾಡುತ್ತದೆ. ನನ್ನಲ್ಲಿ, ಅಂದರೆ ನನ್ನ ಶರೀರಾಧೀನಸ್ವಭಾವದಲ್ಲಿ, ಒಳ್ಳೇದೇನೂ ವಾಸವಾಗಿಲ್ಲವೆಂದು ನನಗೆ ತಿಳಿದದೆ. ಒಳ್ಳೇದನ್ನು ಮಾಡುವದಕ್ಕೆ ನನಗೇನೋ ಮನ
19 ಸ್ಸುಂಟು; ಆದರೆ ಅದನ್ನು ಮಾಡುವದು ನನ್ನಿಂದಾಗದು. ನಾನು ಮೆಚ್ಚುವ ಒಳ್ಳೇ ಕಾರ್ಯವನ್ನು ಮಾಡದೆ ಮೆಚ್ಚದಿರುವ ಕೆಟ್ಟ ಕಾರ್ಯವನ್ನೇ ಮಾಡುವವನಾಗಿದ್ದೇನೆ.
20 ಮಾಡಬಾರದೆನ್ನುವ ಕೆಲಸವನ್ನು ನಾನು ಮಾಡಿದರೆ, ಅದನ್ನು ಮಾಡಿದವನು ಇನ್ನು
21 ನಾನಲ್ಲ, ನನ್ನಲ್ಲಿರುವ ಪಾಪವೇ ಅದನ್ನು ಮಾಡಿತು. ಹೀಗಿರಲಾಗಿ ಒಳ್ಳೇದನ್ನು ಮಾಡ ಬೇಕೆಂದಿರುವ ನನಗೆ ಕೆಟ್ಟದ್ದೇ ಸಿದ್ಧವಾಗಿದೆಯೆಂಬ ನಿಯಮ ನನಗೆ ಕಾಣಬರುತ್ತದೆ.
22, 23 ಅಂತರಾತ್ಮದೊಳಗೆ ದೇವರ ನಿಯಮದಲ್ಲಿ ಆನಂದ ಪಡುವವನಾಗಿದ್ದೇನೆ. ಆದರೆ ನನ್ನ ಅಂಗಗಳಲ್ಲಿ ಬೇರೊಂದು ನಿಯಮ ಉಂಟೆಂದು ನೋಡುತ್ತೇನೆ. ಅದು ನನ್ನ ಮನಸ್ಸಿನಲ್ಲಿ ರುವ ನಿಯಮಕ್ಕೆ ವಿರುದ್ಧವಾಗಿ ಕಾದಾಡಿ ನನ್ನನ್ನು ಸೆರೇಹಿಡಿದು ನನ್ನ ಅಂಗಗಳಲ್ಲಿರುವ
24 ಪಾಪದ ನಿಯಮಕ್ಕೆ ವಶಮಾಡುವಂಥಾದ್ದಾಗಿದೆ. ಅಯ್ಯೋ, ನಾನು ಎಂಥಾ ದುರವಸ್ಥೆಯಲ್ಲಿ ಬಿದ್ದ ಮನುಷ್ಯನು! ಈ ಮರಣಕ್ಕೆ ಒಳಗಾದ ದೇಹದಿಂದ ನನ್ನನ್ನು
25 ಬಿಡಿಸುವವನು ಯಾರು? ಬಿಡಿಸುವವನು ಇದ್ದಾನೆಂಬದಕ್ಕಾಗಿ ನಮ್ಮ ಕರ್ತನಾದ ಯೇಸು ಕ್ರಿಸ್ತನ ಮೂಲಕ ದೇವರಿಗೆ ಸ್ತೋತ್ರ. ಹೀಗಿರಲಾಗಿ ನನ್ನಷ್ಟಕ್ಕೆ ನಾನೇ ಮನಸ್ಸಿನಿಂದ ದೇವರ ನಿಯಮಕ್ಕೆ ಆಳಾಗಿಯೂ ಶರೀರಭಾವದಿಂದ ಪಾಪವೆಂಬ ನಿಯ ಮಕ್ಕೆ ಆಳಾಗಿಯೂ ನಡಕೊಳ್ಳುವವನಾಗಿದ್ದೇನೆ.

ಪವಿತ್ರಾತ್ಮನು ನಂಬಿರುವವರನ್ನು ಪಾಪಮರಣಗಳಿಂದ ಬಿಡಿಸಿ ಅವರನ್ನು ದೇವರ ಮಕ್ಕಳಾಗ ಮಾಡಿದ್ದು.

**8** ಆದದರಿಂದ ಕ್ರಿಸ್ತ ಯೇಸುವಿನಲ್ಲಿರುವವರಿಗೆ ಅಪರಾಧನಿರ್ಣಯವು ಈಗ ಇಲ್ಲವೇ
2 ಇಲ್ಲ. ಯಾಕಂದರೆ ಜೀವವನ್ನುಂಟುಮಾಡುವ ಪವಿತ್ರಾತ್ಮನಿಂದಾದ ನಿಯಮವು ನಿನ್ನನ್ನು[1] ಪಾಪಮರಣಗಳಿಗೆ ಕಾರಣವಾದ ನಿಯಮದಿಂದ ಕ್ರಿಸ್ತ ಯೇಸುವಿನ ಮೂಲಕ
3 ಬಿಡಿಸಿತು. ಧರ್ಮಶಾಸ್ತ್ರವು ನಮ್ಮ ಶರೀರಭಾವದ ನಿಮಿತ್ತ ನಿರ್ಬಲವಾಗಿ ಯಾವ ಕೆಲಸವನ್ನು ಮಾಡಲಾರದೆ ಇತ್ತೋ ಅದನ್ನು ದೇವರೇ ಮಾಡಿದನು. ಏನಂದರೆ, ಆತನು ಪಾಪನಿವಾರಣೆಗಾಗಿ ತನ್ನ ಮಗನನ್ನು ಪಾಪಾಧೀನವಾದ ನರಭಾವದ ರೂಪದಲ್ಲಿ

---

[1] ಕೆಲವು ಪ್ರತಿಗಳಲ್ಲಿ — ನನ್ನನ್ನು ಎಂದು ಬರೆದದೆ.

ಕಳುಹಿಸಿಕೊಟ್ಟು ನರಭಾವದಲ್ಲಿಯೇ ಪಾಪವನ್ನು ಮರಣಕ್ಕೆ ಪಾತ್ರವಾದದ್ದೆಂದು[1] ನಿರ್ಣಯಿಸಿದನು. ಹೀಗಿರಲು ಶರೀರಭಾವಕ್ಕೆ ಅನುಸಾರವಾಗಿ ನಡೆಯದೆ ಪವಿತ್ರಾತ್ಮಾನುಸಾರವಾಗಿ ನಡೆಯುವವರಾದ ನಮ್ಮಲ್ಲಿ ಧರ್ಮಶಾಸ್ತ್ರದ ನಿಯಮವು ನೆರವೇರುವದಕ್ಕೆ ಮಾರ್ಗವಾಯಿತು. 4

ಶರೀರಭಾವವನ್ನು ಅನುಸರಿಸುವವರು ಅದಕ್ಕೆ ಸಂಬಂಧಪಟ್ಟವುಗಳ[2] ಮೇಲೆ ಮನಸ್ಸಿಡುತ್ತಾರೆ, ಪವಿತ್ರಾತ್ಮನನ್ನನುಸರಿಸುವವರು ಪವಿತ್ರಾತ್ಮನಿಗೆ ಸಂಬಂಧಪಟ್ಟವುಗಳ[3] ಮೇಲೆ ಮನಸ್ಸಿಡುತ್ತಾರೆ. ಪ್ರಪಂಚದ ಮೇಲೆ ಮನಸ್ಸಿಡುವದು ಮರಣ; ಪಾರಮಾರ್ಥಿಕ ವಿಷಯಗಳ ಮೇಲೆ ಮನಸ್ಸಿಡುವದು ಜೀವವೂ ಮನಶ್ಶಾಂತಿಯೂ ಆಗಿದೆ. ಯಾಕಂದರೆ ಪ್ರಪಂಚದ ಮೇಲೆ ಮನಸ್ಸಿಡುವದು ದೇವರಿಗೆ ಶತ್ರುತ್ವವು; ಅಂಥಾ ಮನಸ್ಸು ದೇವರ ನಿಯಮಕ್ಕೆ ಒಳಪಡುವದೂ ಇಲ್ಲ, ಒಳಪಡುವದಕ್ಕಾಗುವದೂ ಇಲ್ಲ. ಶರೀರಭಾವಾಧೀನರು ದೇವರಿಗೆ ಮೆಚ್ಚಿಕೆಯಾಗಿರಲಾರರು. 5 6 7 8

ನೀವಾದರೋ, ನಿಮ್ಮಲ್ಲಿ ದೇವರ ಆತ್ಮನು ವಾಸವಾಗಿರುವದಾದರೆ, ಅಂಥಾ ಸ್ವಭಾವವುಳ್ಳವರಲ್ಲ, ದೇವರಾತ್ಮನಿಗೆ ಅಧೀನರಾಗಿದ್ದೀರಿ. ಯಾವನಿಗಾದರೂ ಕ್ರಿಸ್ತನ ಆತ್ಮವು ಇಲ್ಲದಿದ್ದರೆ ಅವನು ಕ್ರಿಸ್ತನವನಲ್ಲ. ಆದರೆ ಕ್ರಿಸ್ತನು ನಿಮ್ಮಲ್ಲಿದ್ದರೆ, ದೇಹವು ಪಾಪದ ದೆಸೆಯಿಂದ ಸತ್ತದ್ದಾಗಿದ್ದರೂ ಆತ್ಮವು ನೀತಿಯ ದೆಸೆಯಿಂದ ಜೀವಸ್ವರೂಪವಾಗಿದೆ. ಯೇಸುವನ್ನು ಸತ್ತವರೊಳಗಿಂದ ಜೀವಿತನಾಗಿ ಎಬ್ಬಿಸಿದಾತನ ಆತ್ಮನು ನಿಮ್ಮಲ್ಲಿ ವಾಸವಾಗಿದ್ದರೆ, ಕ್ರಿಸ್ತ ಯೇಸುವನ್ನು ಸತ್ತವರೊಳಗಿಂದ ಎಬ್ಬಿಸಿದಾತನು ನಿಮ್ಮಲ್ಲಿ ವಾಸವಾಗಿರುವ ತನ್ನ ಆತ್ಮದ ಮೂಲಕ[4] ನಿಮ್ಮ ಮರ್ತ್ಯದೇಹಗಳನ್ನು ಸಹ ಬದುಕಿಸುವನು. 9 10 11

ಹೀಗಿರಲಾಗಿ ಸಹೋದರರೇ, ನಾವು ಹಂಗಿನಲ್ಲಿದ್ದೇವೆ; ಆದರೆ ಪವಿತ್ರಾತ್ಮದ ಹಂಗಿನಲ್ಲಿದ್ದೇವೆಯೇ ಹೊರತು ಶರೀರಭಾವವನ್ನು ಅನುಸರಿಸಿ ಬದುಕಬೇಕೆಂಬ ಹಂಗಿನಲ್ಲಿಲ್ಲ. ನೀವು ಶರೀರಭಾವವನ್ನು ಅನುಸರಿಸಿ ಬದುಕಿದರೆ, ಸಾಯುವದು ನಿಶ್ಚಯ; ನೀವು ಪವಿತ್ರಾತ್ಮದಿಂದ ದೇಹದ ದುರಭ್ಯಾಸಗಳನ್ನು ನಾಶಮಾಡುವದಾದರೆ ಜೀವಿಸುವಿರಿ. 12 13

ಯಾರ್ಯಾರು ದೇವರ ಆತ್ಮನಿಂದ ನಡಸಿಕೊಳ್ಳುತ್ತಾರೋ ಅವರು ದೇವರ ಮಕ್ಕಳು. ನೀವು ತಿರಿಗಿ ಭಯದಲ್ಲಿ ಬೀಳುವ ಹಾಗೆ ಆಳಿನ ಭಾವವನ್ನು ಹೊಂದಿದವರಲ್ಲ, ಮಗನ ಭಾವವನ್ನು ಹೊಂದಿದವರಾಗಿದ್ದೀರಿ. ಈ ಭಾವದಿಂದ ನಾವು ದೇವರಿಗೆ—ಅಪ್ಪಾ, ಅಪ್ಪಾ, ಎಂದು ಕೂಗುತ್ತೇವೆ. ನಾವು ದೇವರ ಮಕ್ಕಳಾಗಿದ್ದೇವೆಂಬುವದಕ್ಕೆ ಪವಿತ್ರಾತ್ಮನೇ ನಮ್ಮ ಆತ್ಮದೊಂದಿಗೆ ಸಾಕ್ಷಿಹೇಳುತ್ತಾನೆ. ಮಕ್ಕಳಾಗಿದ್ದರೆ ಬಾಧ್ಯರಾಗಿದ್ದೇವೆ; ದೇವರಿಗೆ ಬಾಧ್ಯರು, ಕ್ರಿಸ್ತನೊಂದಿಗೆ ಬಾಧ್ಯರು. ಹ್ಯಾಗಂದರೆ ಕ್ರಿಸ್ತನಿಗೆ ಸಂಭವಿಸಿದ ಬಾಧೆಗಳಲ್ಲಿ ನಾವು ಪಾಲುಗಾರರಾಗುವದಾದರೆ, ಆತನ ಮಹಿಮೆಯಲ್ಲಿಯೂ ಪಾಲುಗಾರರಾಗುವೆವು. 14 15 16 17

[1] ಅಥವಾ, ಪಾಪದ ಅಧಿಕಾರವು ತೀರಿತೆಂದು.

[2] ಅಥವಾ, ಪ್ರಪಂಚದ ವಿಷಯಗಳ.

[3] ಅಥವಾ, ಪಾರಮಾರ್ಥಿಕ ವಿಷಯಗಳ.

[4] ಕೆಲವು ಪ್ರತಿಗಳಲ್ಲಿ — ನಿಮ್ಮಲ್ಲಿ ತನ್ನ ಆತ್ಮನು ವಾಸವಾಗಿರುವದರಿಂದ ಎಂದು ಬರೆದದೆ.

ಈಗ ದೇವಪುತ್ರರೂ ಜಗತ್ತೂ ನರಳುತ್ತಿದ್ದಾಗ್ಯೂ ಮುಂದೆ ಜಯೋತ್ಸವವಾಗುವದು.

18 ನಮಗೋಸ್ಕರ ಮುಂದಿನ ಕಾಲದಲ್ಲಿ ಪ್ರತ್ಯಕ್ಷವಾಗುವ ಮಹಿಮಾಪದವಿಯನ್ನು ಆಲೋಚಿಸಿ ಈಗಿನ ಕಾಲಧ ಕಷ್ಟಗಳು ಅಲ್ಪವೇ ಸರಿ ಎಂದು ಎಣಿಸುತ್ತೇನೆ. ದೇವ 19 ಪುತ್ರರ ಮಹಿಮೆಯು ಯಾವಾಗ ಪ್ರತ್ಯಕ್ಷವಾದೀತೆಂದು ಜಗತ್ತು ಬಹು ಲವಲವಿಕೆ 20 ಯಿಂದ ಎದುರುನೋಡುತ್ತಿರುವದು. ಜಗತ್ತು ಮಾಯೆಗೆ ಒಳಗಾಯಿತು; ಹೀಗೆ ಒಳ 21 ಗಾದದ್ದು ಸ್ವೇಚ್ಛೆಯಿಂದಲ್ಲ, ಅದನ್ನು ಒಳಪಡಿಸಿದವನ ಸಂಕಲ್ಪದಿಂದಲೇ. ಆದಾಗ್ಯೂ ಅದಕ್ಕೊಂದು ನಿರೀಕ್ಷೆಯುಂಟು; ಅದೇನಂದರೆ, ಜಗತ್ತು ತಾನೇ ಲಯದ ವಶದಿಂದ ಬಿಡುಗಡೆಯಾಗಿ ದೇವರ ಮಕ್ಕಳ ಮಹಿಮೆಯುಳ್ಳ ವಿಮೋಚನೆಯಲ್ಲಿ ಪಾಲು ಹೊಂದುವದೇ.

22 ಜಗತ್ತೆಲ್ಲಾ ಇಂದಿನ ವರೆಗೂ ನರಳುತ್ತಾ ಪ್ರಸವವೇದನೆಪಡುತ್ತಾ ಇರುತ್ತದೆಂದು 23 ನಾವು ಬಲ್ಲೆವು. ಇದು ಮಾತ್ರವಲ್ಲದೆ, ಪ್ರಥಮಫಲವಾಗಿರುವ ಪವಿತ್ರಾತ್ಮವರವನ್ನು ಹೊಂದಿದ ನಾವಾದರೂ ದೇವಪುತ್ರರ ಪದವಿಯನ್ನು, ಅಂದರೆ ದೇಹಕ್ಕೆ ಬರಬೇಕಾದ 24 ವಿಮೋಚನೆಯನ್ನು, ಎದುರುನೋಡುತ್ತಾ ನಮ್ಮೊಳಗೆ ನರಳುತ್ತೇವೆ. ನಾವು ರಕ್ಷಣೆ ಯನ್ನು ಹೊಂದಿದವರಾದಾಗ್ಯೂ ಇನ್ನು ಎದುರುನೋಡುವವರಾಗಿದ್ದೇವೆ. ಎದುರು ನೋಡುವ ಪದವಿ ಪ್ರತ್ಯಕ್ಷವಾಗಿದ್ದರೆ, ಎದುರುನೋಡುವದೇಕೆ? ಪ್ರತ್ಯಕ್ಷವಾದದ್ದನ್ನು 25 ಎದುರು ನೋಡುವದುಂಟೇ? ಆದರೆ ಕಾಣದಿರುವದನ್ನು ನಾವು ಎದುರುನೋಡುವವ ರಾಗಿದ್ದರೆ ತಾಳ್ಮೆಯಿಂದ ಕಾದುಕೊಂಡಿರುವೆವು.

26 ಹಾಗೆ ಪವಿತ್ರಾತ್ಮನು ಸಹ ನಮ್ಮ ಅಶಕ್ತಿಯನ್ನು ನೋಡಿ ಸಹಾಯಮಾಡುತ್ತಾನೆ. ಹ್ಯಾಗಂದರೆ, ನಾವು ತಕ್ಕ ಪ್ರಕಾರ ಏನು ಬೇಡಿಕೊಳ್ಳಬೇಕೋ ನಮಗೆ ಗೊತ್ತಿಲ್ಲದ್ದರಿಂದ ಪವಿತ್ರಾತ್ಮನು ತಾನೇ ಮಾತಿಲ್ಲದಂಥಾ ನರಳಾಟದಿಂದ ನಮಗೋಸ್ಕರ ಬೇಡಿಕೊಳ್ಳು 27 ತ್ತಾನೆ. ಆದರೆ ಹೃದಯಗಳನ್ನು ಶೋಧಿಸಿನೋಡುವಾತನಿಗೆ ಪವಿತ್ರಾತ್ಮನ ಮನೋ ಭಾವವು ಏನೆಂದು ತಿಳಿದದೆ; ಆ ಆತ್ಮನು ದೇವರ ಚಿತ್ತಾನುಸಾರವಾಗಿ ದೇವಜನರಿ ಗೋಸ್ಕರ ಬೇಡಿಕೊಳ್ಳುವನೆಂದು ಆತನು ಬಲ್ಲನು.

28 ಇದಲ್ಲದೆ, ದೇವರ ಸಂಕಲ್ಪದ ಮೇರೆಗೆ ಕರೆಯಲ್ಪಟ್ಟು ಆತನನ್ನು ಪ್ರೀತಿಸುವವರ ಹಿತ 29 ಕ್ಕಾಗಿ ಎಲ್ಲಾ ಕಾರ್ಯಗಳು ಅನುಕೂಲವಾಗುತ್ತವೆ. ಯಾಕಂದರೆ ದೇವರು ತನ್ನ ಮಗನಿಗೆ ಅನೇಕ ಮಂದಿ ಸಹೋದರರಿದ್ದು ಅವರಲ್ಲಿ ಆತನೇ ಹಿರಿಯನಾಗಿರಬೇಕೆಂದು ಉದ್ದೇಶಿಸಿ, ತಾನು ಯಾರನ್ನು ತನ್ನವರೆಂದು ಮೊದಲು ತಿಳುಕೊಂಡನೋ ಅವರನ್ನು 30 ತನ್ನ ಮಗನ ಸಾರೂಪ್ಯವುಳ್ಳವರಾಗುವದಕ್ಕೆ ಮೊದಲೇ ನೇಮಿಸಿದನು. ಮತ್ತು ಯಾರನ್ನು ಮೊದಲು ನೇಮಿಸಿದನೋ ಅವರನ್ನು ಕರೆದನು; ಯಾರನ್ನು ಕರೆದನೋ ಅವರನ್ನು ನೀತಿವಂತರೆಂದು ನಿರ್ಣಯಿಸಿದನು; ಯಾರನ್ನು ನೀತಿವಂತರೆಂದು ನಿರ್ಣಯಿಸಿ ದನೋ ಅವರನ್ನು ಮಹಿಮಾಪದವಿಗೆ ಸೇರಿಸಿದನು.

31 ಹಾಗಾದರೆ ಈ ವಿಷಯಗಳಲ್ಲಿ ನಾವು ಏನು ಹೇಳೋಣ? ದೇವರು ನಮ್ಮ ಕಡೆ 32 ಇದ್ದರೆ, ನಮ್ಮನ್ನು ಎದುರಿಸುವವರು ಯಾರು? ಸ್ವಂತ ಮಗನನ್ನು ಉಳಿಸಿಕೊಳ್ಳದೆ ಆತ

ನನ್ನು ನಮ್ಮೆಲ್ಲರಿಗೋಸ್ಕರ ಒಪ್ಪಿಸಿಕೊಟ್ಟನಲ್ಲಾ; ಮಗನನ್ನು ಕೊಟ್ಟ ಮೇಲೆ ಸಮಸ್ತವನ್ನೂ
ನಮಗೆ ದಯಪಾಲಿಸದೆ ಇರುವನೇ? ದೇವರು ಆದುಕೊಂಡವರ ಮೇಲೆ ಯಾರು ತಪ್ಪು 33
ಹೊರಿಸ್ಯಾರು? ದೇವರೇ ನಮ್ಮನ್ನು ನೀತಿವಂತರೆಂದು ನಿರ್ಣಯಿಸುವವನಾಗಿದ್ದಾನೆ.
ಅಪರಾಧನಿರ್ಣಯ ಮಾಡುವವರು ಯಾರು? ಕ್ರಿಸ್ತ ಯೇಸು ಮರಣವನ್ನು ಹೊಂದಿದ್ದಲ್ಲದೆ 34
ಜೀವಿತನಾಗಿ ಎದ್ದು ದೇವರ ಬಲಪಾರ್ಶ್ವದಲ್ಲಿದ್ದು ನಮಗೋಸ್ಕರ ಬೇಡುವವನಾಗಿದ್ದಾನೆ[1].
ಕ್ರಿಸ್ತನ ಪ್ರೀತಿಯಿಂದ ನಮ್ಮನ್ನು ಅಗಲಿಸುವವರು ಯಾರು? ಕಷ್ಟವೋ ಸಂಕಟವೋ 35
ಹಿಂಸೆಯೋ ಅನ್ನವಿಲ್ಲದಿರುವದೋ ವಸ್ತ್ರವಿಲ್ಲದಿರುವದೋ ಗಂಡಾಂತರವೋ ಕೊಲೆಯೋ?

> ದೇವರೇ, ನಿನಗೋಸ್ಕರ ದಿನವೆಲ್ಲಾ ಕೊಲೆಗೆ ಗುರಿಯಾಗಿದ್ದೇವೆ; 36
> ಕೊಯಿಗುರಿಗಳಂತೆ ನಮ್ಮನ್ನು ಎಣಿಸಿದರು[2]

ಎಂಬದಾಗಿ ಬರೆದಿರುವಂತೆ ಆಗುತ್ತದಲ್ಲಾ. ಆದರೆ ನಮ್ಮನ್ನು ಪ್ರೀತಿಸಿದಾತನ ಮೂಲಕ 37
ವಾಗಿ ನಾವು ಈ ಎಲ್ಲಾ ವಿಷಯಗಳಲ್ಲಿ ಪೂರ್ಣ ಜಯಶಾಲಿಗಳಾಗುತ್ತೇವೆ.
ಹ್ಯಾಗಂದರೆ ಮರಣವಾಗಲಿ ಜೀವವಾಗಲಿ, ದೇವದೂತರಾಗಲಿ ದುರಾತ್ಮಗಳಾಗಲಿ, 38
ಈಗಿನ ಸಂಗತಿಗಳಾಗಲಿ ಮುಂದಣ ಸಂಗತಿಗಳಾಗಲಿ, ಬಲಗಳಾಗಲಿ, ಮೇಲಣ ಲೋಕ 39
ವಾಗಲಿ ಕೆಳಗಣ ಲೋಕವಾಗಲಿ, ಬೇರೆ ಯಾವ ಸೃಷ್ಟಿಯಾಗಲಿ, ನಮ್ಮನ್ನು ನಮ್ಮ ಕರ್ತ
ನಾದ ಯೇಸು ಕ್ರಿಸ್ತನಲ್ಲಿ ತೋರಿಬಂದ ದೇವರ ಪ್ರೀತಿಯಿಂದ ಅಗಲಿಸಲಾರವೆಂದು ನನಗೆ
ನಿಶ್ಚಯ ಉಂಟು.

ಇಸ್ರಯೇಲ್ಯರ ಅವಿಸಂಬಿಕೆಯು ಅತ್ಯಂತ ದುಃಖಕರವಾದದ್ದು.

ನನಗೆ ಮಹಾದುಃಖವೂ ನನ್ನ ಹೃದಯದಲ್ಲಿ ಎಡೆಬಿಡದೆ ವೇದನೆಯೂ ಉಂಟು. **9**
ಈ ಮಾತನ್ನು ಸುಳ್ಳಾಡದೆ ಕ್ರಿಸ್ತನ ಮುಂದೆ ಸತ್ಯವಾಗಿ ಹೇಳುತ್ತೇನೆ; ಪವಿತ್ರಾತ್ಮಾಧೀನ 2
ವಾಗಿರುವ ನನ್ನ ಮನಸ್ಸೇ ಸಾಕ್ಷಿ. ಶರೀರಸಂಬಂಧವಾಗಿ ಸ್ವಜನರಾಗಿರುವ ನನ್ನ 3
ಸಹೋದರರಿಗೋಸ್ಕರ ನಾನೇ, ಸಾಧ್ಯವಾದರೆ, ಕ್ರಿಸ್ತನನ್ನು ಅಗಲಿ ಶಾಪಗ್ರಸ್ತನಾಗುವ
ದಕ್ಕೆ ಒಪ್ಪಿಕೊಂಡೇನು. ಅವರು ಇಸ್ರಯೇಲನ ವಂಶದವರೂ ದೇವರು ಪುತ್ರರಾಗಿ 4
ಸ್ವೀಕರಿಸಿದವರೂ ಆಗಿದ್ದಾರೆ. ಅವರಲ್ಲಿ ದೇವರ ತೇಜಸ್ಸಾನ್ನಿಧ್ಯವು ಇದೆ[3]; ಅವರ
ಸಂಗಡ ದೇವರು ಒಡಂಬಡಿಕೆ ಮಾಡಿದನು; ಅವರಿಗೆ ಧರ್ಮಶಾಸ್ತ್ರವೂ ದೇವಾಲಯದಲ್ಲಿ
ನಡೆಯುವ ಆರಾಧನೆಯೂ ವಾಗ್ದಾನಗಳೂ ಕೊಡೋಣವಾದವು. ಅಬ್ರಹಾಮ 5
ಇಸಾಕ ಯಾಕೋಬರು ಅವರ ಪಿತೃಗಳೇ. ಕ್ರಿಸ್ತನು ಶರೀರಸಂಬಂಧಿಯಾಗಿ ಅವರ
ವಂಶದಲ್ಲಿಯೇ ಹುಟ್ಟಿದವನು, ಆತನು ಎಲ್ಲಾದರ ಮೇಲೆ ಒಡೆಯನೂ ನಿರಂತರ ಸ್ತುತಿ
ಹೊಂದತಕ್ಕ ದೇವರೂ ಆಗಿದ್ದಾನೆ[4]. ಆಮೆನ್.

---

[1] ಅಥವಾ, ನಮ್ಮನ್ನು ನೀತಿವಂತರೆಂದು ನಿರ್ಣಯಿಸುವವನಾದ ದೇವರೋ? ಮರಣವನ್ನು ಹೊಂದಿ, ಮರಣವನ್ನು ಹೊಂದಿದ್ದಲ್ಲದೆ ಜೀವಿತನಾಗಿ ಎದ್ದು ದೇವರ ಬಲಪಾರ್ಶ್ವದಲ್ಲಿದ್ದು ನಮಗೋಸ್ಕರ ಬೇಡುವವನಾಗಿರುವ ಕ್ರಿಸ್ತ ಯೇಸುವೋ? [2] ಕೀರ್ತನೆ ೪೪, ೨೨. [3] ಹೊರಡೋಣ ೧೬, ೧೦.

[4] ಅಥವಾ, ಎಲ್ಲಾದರ ಮೇಲೆ ಒಡೆಯನಾಗಿರುವ ದೇವರು ನಿರಂತರ ಸ್ತೋತ್ರ ಹೊಂದತಕ್ಕವನು; ಅಥವಾ, ಆತನು ಎಲ್ಲಾದರ ಮೇಲೆ ಒಡೆಯನು. ದೇವರಿಗೆ ನಿರಂತರ ಸ್ತೋತ್ರವಾಗಲಿ.

ದೇವರು ಇಸ್ರಯೇಲ್ಯರನ್ನು ತಳ್ಳಿಬಿಟ್ಟದ್ದು ಆತನ ವಾಗ್ದಾನಗಳಿಗೆ ವಿರುದ್ಧವಾದದ್ದಲ್ಲ.

6 ದೇವರು ಹೇಳಿದ ಮಾತು[1] ತಪ್ಪಿತೆಂದು ನಾವು ಭಾವಿಸಕೂಡದು. ಯಾಕಂದರೆ 7 ಇಸ್ರಯೇಲ ವಂಶದಲ್ಲಿ ಹುಟ್ಟಿದವರೆಲ್ಲರೂ ಇಸ್ರಯೇಲ್ಯರಲ್ಲ; ಹಾಗೆಯೇ ಅಬ್ರಹಾಮನ ವಂಶದಲ್ಲಿ ಹುಟ್ಟಿದ ಮಾತ್ರಕ್ಕೆ ಅವರೆಲ್ಲರು ಮಕ್ಕಳೆಂದು ಎಣಿಸಲ್ಪಡುವದಿಲ್ಲ. ಆದರೆ— ಇಸಾಕನ ವಂಶದಲ್ಲಿಯೇ ನಿನಗೆ ಸಂತತಿ ಎಣಿಸಲ್ಪಡುವದು ಎಂದು[2] ದೇವರು ಹೇಳಿದನು. 8 ಆ ಮಾತಿನ ಅರ್ಥವೇನಂದರೆ, ಶರೀರಸಂಬಂಧವಾಗಿ ಹುಟ್ಟಿದವರೆಲ್ಲರೂ ದೇವರ ಮಕ್ಕಳಲ್ಲ, ವಾಗ್ದಾನಸಂಬಂಧವಾಗಿ ಹುಟ್ಟಿದವರೇ ಅಬ್ರಹಾಮನ ಸಂತತಿಯವರೆಂದು ಎಣಿಸ 9 ಲ್ಪಡುವದು ಎಂಬುವದು. ಮುಂದಿನ ವರುಷದ ಇದೇ ಕಾಲದಲ್ಲಿ ನಾನು ಬರುವೆನು, 10 ಆಗ ಸಾರಳಿಗೆ ಮಗನು ಹುಟ್ಟುವನು ಎಂಬುವ ಮಾತು[3] ವಾಗ್ದಾನವಾಗಿದೆಯಷ್ಟೆ. ಇದು ಮಾತ್ರವಲ್ಲದೆ, ರೆಬೆಕ್ಕಳು ಸಹ ನಮ್ಮ ಪಿತೃವಾದ ಇಸಾಕನಿಂದ ಅವಳಜವಳ ಮಕ್ಕಳಿಗೆ ಬಸು 11 ರಾದಾಗ ಅದರಂತೆಯೇ ಆಯಿತು. ಆ ಮಕ್ಕಳು ಒಬ್ಬ ತಂದೆಯ ಮಕ್ಕಳಾದಾಗ್ಯೂ ಅವರು ಇನ್ನು ಹುಟ್ಟದೆಯೂ ಒಳ್ಳೇದನ್ನಾಗಲಿ ಕೆಟ್ಟದ್ದನ್ನಾಗಲಿ ಮಾಡದೆಯೂ ಇದ್ದಾಗ— 12 ದೊಡ್ಡವನು ಚಿಕ್ಕವನಿಗೆ ಸೇವೆಮಾಡುವನೆಂಬದಾಗಿ[4] ಆಕೆಗೆ ಹೇಳಲ್ಪಟ್ಟಿತು. ಇದರಿಂದ ದೇವರು ತನಗೆ ಮನಸ್ಸಿದ್ದವರನ್ನು ಆರಿಸಿಕೊಳ್ಳುತ್ತಾನೆಂಬ ಸಂಕಲ್ಪವು ಸ್ಥಿರವಾಗಿರ ಬೇಕೆಂದು ತೋರಿಸಿದನು. ಆ ಸಂಕಲ್ಪವು ಪುಣ್ಯಕ್ರಿಯೆಗಳ ಮೇಲೆ ಆಧಾರಗೊಳ್ಳದೆ 13 ಕರೆಯುವಾತನ ಚಿತ್ತದ ಮೇಲೆಯೇ ಆಧಾರಗೊಂಡಿದೆ. ಇದಕ್ಕನುಸಾರವಾಗಿ— ಯಾಕೋಬನನ್ನು ಪ್ರೀತಿಸಿದೆನು, ಏಸಾವನನ್ನು ದ್ವೇಷಿಸಿದೆನು[5] ಎಂದು[6] ಬರೆದದೆ.

ದೇವರು ಇಸ್ರಯೇಲ್ಯರನ್ನು ತಳ್ಳಿಬಿಟ್ಟದ್ದು ಆತನ ನ್ಯಾಯಕ್ಕೆ ವಿರುದ್ಧವಾದದ್ದಲ್ಲ.

14 ಹಾಗಾದರೆ ಏನು ಹೇಳೋಣ? ದೇವರಲ್ಲಿ ಅನ್ಯಾಯ ಉಂಟೋ? ಎಂದಿಗೂ ಇಲ್ಲ. 15 ಯಾವನ ಮೇಲೆ ನನ್ನ ಕರುಣೆ ಉಂಟೋ ಅವನನ್ನು ಕರುಣಿಸುವೆನು, ಯಾವನ ಮೇಲೆ ನನ್ನ ದಯವದೆಯೋ ಅವನಿಗೆ ದಯತೋರಿಸುವೆನು ಎಂದು[7] ದೇವರು ಮೋಶೆಗೆ ಹೇಳಿ 16 ರುತ್ತಾನಷ್ಟೆ. ಆದದರಿಂದ ದೇವರ ದಯವು ಮನುಷ್ಯರಿಗೆ ಇಚ್ಛೈಸುವದರಿಂದಾಗಲಿ ಪ್ರಯತ್ನಿಸುವದರಿಂದಾಗಲಿ ದೊರೆಯದೆ ದೇವರು ಕರುಣಿಸುವದರಿಂದಲೇ ದೊರೆಯುತ್ತದೆ. 17 ದೇವರು ಫರೋನನನ್ನು ಕುರಿತು—ನಾನು ನಿನ್ನಲ್ಲಿ ನನ್ನ ಶಕ್ತಿಯನ್ನು ತೋರಿಸಿ ನನ್ನ ಹೆಸ ರನ್ನು ಲೋಕದಲ್ಲೆಲ್ಲಾ ಪ್ರಖ್ಯಾತಪಡಿಸಬೇಕೆಂಬ ಉದ್ದೇಶದಿಂದಲೇ ನಿನ್ನನ್ನು ಉನ್ನತ 18 ಸ್ಥಾನಕ್ಕೆ ತಂದಿದ್ದೇನೆಂದು ಹೇಳಿದನೆಂಬದಾಗಿ[8] ಶಾಸ್ತ್ರೋಕ್ತಿ ಉಂಟು. ದೇವರು ಯಾರನ್ನು ಕರುಣಿಸಿದರೂ ಯಾರನ್ನು ಕಠಿಣಪಡಿಸಿದರೂ ಅದೆಲ್ಲವು ಆತನ ಇಷ್ಟಾನುಸಾರ ವಾಗಿಯೇ ಇದೆ ಎಂಬುವದು ಇದರಿಂದ ತೋರಿಬರುತ್ತದೆ.

---

[1] ಉತ್ಪತ್ತಿ ೧೨, ೨. ೩. [2] ಉತ್ಪತ್ತಿ ೨೧, ೧೨. [3] ಉತ್ಪತ್ತಿ ೧೮, ೧೦.
[4] ಉತ್ಪತ್ತಿ ೨೫, ೨೩. [5] ಅಥವಾ, ಅಲಕ್ಷ್ಯಮಾಡಿದೆನು; ಮತ್ತಾಯ ೬, ೨೪; ಲೂಕ ೧೪, ೨೬; ಯೋಹಾನ ೧೨, ೨೫; ಎಫೆಸ. ೫, ೨೯ ನೋಡು. [6] ಮಲಕೀಯ ೧, ೨. ೩. [7] ಹೊರಡೋಣ ೩೩, ೧೯.
[8] ಹೊರಡೋಣ ೯, ೧೬.

ದೇವರ ಇಷ್ಟವನ್ನು ಎದುರಿಸುವವರು ಇಲ್ಲದಿರುವಲ್ಲಿ ಆತನು ತಪ್ಪುಹಿಡಿಯುವದು 19
ಹ್ಯಾಗೆ ಎಂದು ನನ್ನನ್ನು ಕೇಳುವಿ. ಎಲೋ ಮನುಷ್ಯನೇ, ಹಾಗನ್ನಬೇಡ; ದೇವರಿಗೆ 20
ಎದುರುಮಾತಾಡುವದಕ್ಕೆ ನೀನು ಎಷ್ಟರವನು? ರೂಪಿಸಲ್ಪಟ್ಟದ್ದು ರೂಪಿಸಿದವನಿಗೆ—
ನನ್ನನ್ನು ಹೀಗ್ಯಾಕೆ ಮಾಡಿದೆ ಎಂದು ಕೇಳುವದುಂಟೇ?[1] ಉತ್ತಮವಾದ ಬಳಕೆಗೆ ಒಂದು 21
ಪಾತ್ರೆಯನ್ನೂ ಹೀನವಾದ ಬಳಕೆಗೆ ಮತ್ತೊಂದು ಪಾತ್ರೆಯನ್ನೂ ಒಂದೇ ಮುದ್ದೆಯಿಂದ
ಮಾಡುವದಕ್ಕೆ ಕುಂಬಾರನಿಗೆ ಮಣ್ಣಿನ ಮೇಲೆ ಅಧಿಕಾರವಿಲ್ಲವೋ? ಆದರೆ ದೇವರು 22
ತನ್ನ ಕೋಪವನ್ನು ತೋರಿಸಿ ತನ್ನ ಶಕ್ತಿಯನ್ನು ಪ್ರಸಿದ್ಧಿಪಡಿಸಬೇಕೆಂದಿದ್ದಾಗ್ಯೂ, ಹಾಗೆ
ಮಾಡದೆ ತನ್ನ ಕೋಪಕ್ಕೆ ಗುರಿಯಾದ ನಾಶನಪಾತ್ರರನ್ನು ಬಹು ಸೈರಣೆಯಿಂದ ಸೈರಿಸಿ
ಕೊಂಡಿದ್ದಾನೆ. ಮತ್ತು ಪ್ರಭಾವಹೊಂದುವದಕ್ಕೆ ತಾನು ಮುಂದಾಗಿ ಸಿದ್ಧಮಾಡಿದ 23
ಕರುಣಾಪಾತ್ರರಲ್ಲಿ ತನ್ನ ಮಹಿಮಾತಿಶಯವನ್ನು ತೋರ್ಪಡಿಸಿದ್ದಾನೆ. ಆತನು ಕರುಣಿಸಿದ 24
ನಮ್ಮನ್ನು ಯೆಹೂದ್ಯರೊಳಗಿಂದ ಮಾತ್ರ ಕರೆಯದೆ, ಹೊಶೇಯನ ಗ್ರಂಥದ ವಚನದಲ್ಲಿ
ತಾನು ಸೂಚಿಸಿದಂತೆ ಅನ್ಯಜನರೊಳಗಿಂದ ಸಹ ಕರೆದನು. ಆ ವಚನವೇನಂದರೆ— 25

ನನ್ನ ಜನವಲ್ಲದವರನ್ನು ನನ್ನ ಜನವೆಂದೂ
ನನಗೆ ಅಪ್ರಿಯವಾದವಳನ್ನು ಪ್ರಿಯಳೆಂದೂ ಹೇಳುವೆನು.
ಮತ್ತು ಯಾವ ಸ್ಥಳದವರಿಗೆ—ನೀವು ನನ್ನ ಜನವಲ್ಲವೆಂದು ಹೇಳಲ್ಪಟ್ಟಿತೋ 26
ಅದೇ ಸ್ಥಳದವರಿಗೆ ಜೀವವುಳ್ಳ ದೇವರ ಪುತ್ರರೆಂಬ ಹೆಸರು ಬರುವದು[2]

ಎಂಬುವದು. ಇದಲ್ಲದೆ ಯೆಶಾಯನು ಇಸ್ರಯೇಲ ಜನರ ವಿಷಯದಲ್ಲಿ—ಕರ್ತನು 27
ಈ ದೇಶದವರ ವಿಷಯ ಪೂರ್ಣವಾಗಿಯೂ ತೀವ್ರವಾಗಿಯೂ ಲೆಕ್ಕವನ್ನು ತೀರಿಸುವ
ನಾದ್ದರಿಂದ ಇಸ್ರಯೇಲ್ಯರ ಸಂಖ್ಯೆಯು ಸಮುದ್ರದ ಉಸುಬಿನಷ್ಟಿದ್ದರೂ ಅವರಲ್ಲಿ ಒಂದು
ಅಂಶ ಮಾತ್ರ ರಕ್ಷಣೆ ಹೊಂದುವದೆಂದು[3] ಕೂಗಿ ಹೇಳುತ್ತಾನೆ. ಅದೇ ಅಭಿಪ್ರಾಯ 28
ದಿಂದ ಯೆಶಾಯನು ಮತ್ತೊಂದು ವಚನದಲ್ಲಿ—

ಸಕಲ ಸೇನಾಧಿಪತಿಯಾದ ಕರ್ತನು ನಮಗೆ ಸಂತಾನವನ್ನು ಉಳಿಸದೆ ಹೋಗಿ 29
ದ್ದರೆ,
ಸೊದೋಮಿನ ಗತಿ ನಮಗಾಗುತ್ತಿತ್ತು, ಗಮೋರದ ದುರ್ದಶೆ ನಮಗೆ ಸಂಭ
ವಿಸುತ್ತಿತ್ತು[4] ಎಂದು ಹೇಳುತ್ತಾನೆ.

ಇಸ್ರಯೇಲ್ಯರನ್ನು ದೇವರು ತಳ್ಳಿಬಿಟ್ಟದ್ದಕ್ಕೆ ಇಸ್ರಯೇಲ್ಯರೇ ಕಾರಣ.

ಹಾಗಾದರೆ ಏನು ಹೇಳೋಣ? ನೀತಿಯನ್ನು ಹೊಂದುವದಕ್ಕೆ ಪ್ರಯತ್ನಮಾಡದ 30
ಅನ್ಯಜನರಿಗೆ ನೀತಿಯು, ಅಂದರೆ ನಂಬಿಕೆಯಿಂದುಂಟಾಗುವ ನೀತಿಯು, ದೊರಕಿತು.
ಆದರೆ ಇಸ್ರಯೇಲ್ಯರು ನೀತಿಯನ್ನು ದೊರಕಿಸುವ ಧರ್ಮವನ್ನು ಹಿಡಿಯಬೇಕೆಂದು 31
ಪ್ರಯತ್ನಿಸಿದರೂ ಆ ಧರ್ಮವನ್ನು ಹಿಡಿಯಲಾರದೆ ಹೋದರೆಂದು ಹೇಳಬೇಕು.

1) ಯೆಶಾಯ ೪೫, ೧೬. 2) ಹೊಶೇಯ ೧, ೧೦; ೨, ೨೩. 3) ಯೆಶಾಯ ೧೦, ೨೨. ೨೩.
4) ಯೆಶಾಯ ೧, ೯.

32 ಅದಕ್ಕೆ ಕಾರಣವೇನು? ಅವರು ನಂಬಿಕೆಯನ್ನು ಆಧಾರಮಾಡಿಕೊಳ್ಳದೆ ನೇಮನಿಷ್ಠೆಗಳನ್ನು ಆಧಾರಮಾಡಿಕೊಂಡದ್ದೇ ಕಾರಣ.

33 ಇಗೋ, ಚಿಯೋನಿನಲ್ಲಿ ಕಾಲು ಎಡವುವ ಕಲ್ಲನ್ನೂ ವಿಘ್ನವಾಗುವ ಬಂಡೆ
ಯನ್ನೂ ಇಡುತ್ತೇನೆಂತಲೂ[1],
ಅದರ ಮೇಲೆ[2] ನಂಬಿಕೆಯಿಡುವವನು ಆಶಾಭಂಗವಾಗುವದಿಲ್ಲವೆಂತಲೂ[3]

ಶಾಸ್ತ್ರದಲ್ಲಿ ಬರೆದದೆಯಲ್ಲಾ. ಆ ಎಡವುವ ಕಲ್ಲಿಗೆ ಅವರು ಎಡವಿಬಿದ್ದರು.

**10** ಸಹೋದರರೇ, ಇಸ್ರಯೇಲ್ಯರು ರಕ್ಷಣೆ ಹೊಂದಬೇಕೆಂಬುವದೇ ನನ್ನ ಮನೋಭಿಲಾ 2 ಷೆಯೂ ದೇವರಿಗೆ ನಾನು ಮಾಡುವ ವಿಜ್ಞಾಪನೆಯೂ ಆಗಿದೆ. ದೇವರಲ್ಲಿ ಆಸಕ್ತರಾಗಿದ್ದಾರೆಂದು ನಾನು ಅವರ ವಿಷಯದಲ್ಲಿ ಸಾಕ್ಷಿ ಕೊಡುತ್ತೇನೆ; ಆದರೂ ಅವರ ಆಸಕ್ತಿ 3 ಜ್ಞಾನಾನುಸಾರವಾದದ್ದಲ್ಲ. ಅವರು ದೇವರಿಂದ ದೊರಕುವ ನೀತಿಯನ್ನರಿಯದೆ ಸ್ವನೀತಿ 4 ಯನ್ನೇ ಸ್ಥಾಪಿಸಬೇಕೆಂದು ಪ್ರಯತ್ನಿಸುತ್ತಾ ದೇವರ ನೀತಿಗೆ ಅಧೀನರಾಗಲಿಲ್ಲ. ಕ್ರಿಸ್ತನು ಬಂದು ನಂಬುವವರೆಲ್ಲರಿಗೆ ನೀತಿಯನ್ನು ದೊರಕಿಸುವದರಿಂದ ಕರ್ಮಮಾರ್ಗಕ್ಕೆ ಅಂತ್ಯ 5 ವಾಯಿತು. ನೇಮನಿಷ್ಠೆಗಳಿಂದಾಗುವ[4] ನೀತಿಯ ವಿಷಯದಲ್ಲಿ—ಅದನ್ನು ಅನುಸರಿಸಿ 6 ದವನೇ ಅದರಿಂದ ಜೀವಿಸುವನೆಂದು[5] ಮೋಶೆಯು ಬರೆಯುತ್ತಾನೆ. ಆದರೆ ನಂಬಿಕೆಯಿಂದುಂಟಾಗುವ ನೀತಿಯು ಏನು ಹೇಳುತ್ತದೆ? ಕ್ರಿಸ್ತನನ್ನು ಕೆಳಕ್ಕೆ ಕರೆದುಕೊಂಡು ಬರುವದಕ್ಕೆ ಯಾರು ಮೇಲಣ ಲೋಕಕ್ಕೆ ಏರಿಹೋದಾರು? ಎಂದಾಗಲಿ ಕ್ರಿಸ್ತನನ್ನು 7 ಸತ್ತವರೊಳಗಿಂದ ಎಬ್ಬಿಸಿಕೊಂಡು ಬರುವದಕ್ಕೆ ಯಾರು ಪ್ರೇತಲೋಕಕ್ಕೆ ಇಳಿದು 8 ಹೋದಾರು? ಎಂದಾಗಲಿ ನಿನ್ನ ಮನಸ್ಸಿನಲ್ಲಿ ಅಂದುಕೊಳ್ಳಬೇಡ. ದೇವರ ವಾಕ್ಯವು ನಿನ್ನ ಸಮೀಪದಲ್ಲಿಯೇ ಇದ್ದು ನಿನ್ನ ಬಾಯಲ್ಲಿಯೂ ನಿನ್ನ ಹೃದಯದಲ್ಲಿಯೂ ಅದೆ ಅನ್ನುತ್ತದೆ[6]. ಆ ವಾಕ್ಯವು ನಾವು ಸಾರುವ ನಂಬಿಕೆಯ ವಿಷಯವಾದ ವಾಕ್ಯವೇ. 9 ಅದೇನಂದರೆ, ನೀನು ಯೇಸುವನ್ನೇ ಕರ್ತನೆಂದು ಬಾಯಿಯಿಂದ ಅರಿಕೆಮಾಡಿಕೊಂಡು ದೇವರು ಆತನನ್ನು ಸತ್ತವರೊಳಗಿಂದ ಎಬ್ಬಿಸಿದನೆಂದು ಹೃದಯಪೂರ್ವಕವಾಗಿ ನಂಬಿದರೆ, 10 ನಿನಗೆ ರಕ್ಷಣೆಯಾಗುವದು ಎಂಬುವದೇ. ಹೃದಯಪೂರ್ವಕವಾಗಿ ನಂಬುವದರಿಂದ ನೀತಿಯು ದೊರಕುತ್ತದೆ, ಬಾಯಿಯಿಂದ ಅರಿಕೆಮಾಡುವದರಿಂದ ರಕ್ಷಣೆಯಾಗುತ್ತದೆ. 11 ಆತನ ಮೇಲೆ ನಂಬಿಕೆಯಿಡುವ ಯಾವನಾದರೂ ಆಶಾಭಂಗಕ್ಕೆ ಈಡಾಗುವದಿಲ್ಲವೆಂದು[7] 12 ಶಾಸ್ತ್ರವು ಹೇಳುತ್ತದೆಯಷ್ಟೆ. ಈ ವಿಷಯದಲ್ಲಿ ಯೆಹೂದ್ಯನಿಗೂ ಗ್ರೀಕನಿಗೂ ಹೆಚ್ಚು ಕಡಿಮೆ ಏನೂ ಇಲ್ಲ. ಎಲ್ಲರಿಗೂ ಒಬ್ಬನೇ ಕರ್ತ; ಆತನು ತನ್ನ ನಾಮವನ್ನು ಹೇಳಿ 13 ಕೊಳ್ಳುವವರಿಗೆ ಹೇರಳವಾಗಿ ಕೊಡುವವನಾಗಿದ್ದಾನೆ. ಕರ್ತನ ನಾಮವನ್ನು ಹೇಳಿಕೊಳ್ಳುವವರೆಲ್ಲರಿಗೆ ರಕ್ಷಣೆಯಾಗುವದೆಂದು[8] ಬರೆದದೆ.

---

1) ಯೆಶಾಯ ೮, ೧೪. 2) ಅಂದರೆ, ಕ್ರಿಸ್ತನ ಮೇಲೆ. 3) ಯೆಶಾಯ ೨೮, ೧೬.
4) ಅಥವಾ, ಧರ್ಮಶಾಸ್ತ್ರದಿಂದಾಗುವ. 5) ಲೇವಿಕ ೧೮, ೫. 6) ದ್ವಿತೀಯ ನ್ಯಾಯ ೩೦, ೧೨—೧೪.
7) ಯೆಶಾಯ ೨೮, ೧೬. 8) ಯೋವೇಲ ೨, ೩೨.

ಇಸ್ರಯೇಲ್ಯರ ಅಪನಂಬಿಕೆಗೆ ಅವರಿಗೆ ಜ್ಞಾನವಿಲ್ಲವೆಂಬುವದು ಕಾರಣವಲ್ಲ.

ಆದರೆ ತಾವು ಯಾವನನ್ನು ನಂಬಲಿಲ್ಲವೋ ಆತನ ನಾಮವನ್ನು ಹೇಳಿಕೊಳ್ಳುವದು 14 ಹ್ಯಾಗೆ? ಮತ್ತು ಆತನ ಸುದ್ದಿ ಕೇಳದಿರುವಲ್ಲಿ ಆತನನ್ನು ನಂಬುವದು ಹ್ಯಾಗೆ? ಸಾರಿ ಹೇಳುವವನಿಲ್ಲದೆ ಕೇಳುವದು ಹ್ಯಾಗೆ? ಸಾರುವವರು ಕಳುಹಿಸಲ್ಪಟ್ಟ ಹೊರತು ಸಾರು 15 ವದೆಲ್ಲಿ? ಇದಕ್ಕೆ ಸರಿಯಾಗಿ ಶುಭವರ್ತಮಾನವನ್ನು ಹೇಳುವವರ ಆಗಮನವು ಎಷ್ಟೋ ಸಂತೋಷಕರವಾದದ್ದೆಂದು[1] ಬರೆದದೆ.

ಆದರೂ ಆ ಶುಭವರ್ತಮಾನಕ್ಕೆ ಎಲ್ಲರೂ ಕಿವಿಗೊಡಲಿಲ್ಲ. ಈ ವಿಷಯದಲ್ಲಿ ಯೆಶಾ 16 ಯನು—ಕರ್ತನೇ, ನಾವು ಸಾರಿದ ವಾರ್ತೆಯನ್ನು ಯಾರು ನಂಬಿದರು? ಎಂದು[2] ನುಡಿಯುತ್ತಾನೆ. ಆದಕಾರಣ ಸಾರಿದ ವಾರ್ತೆಯು ನಂಬಿಕೆಗೆ ಆಧಾರ, ಆ ವಾರ್ತೆಗೆ 17 ಕ್ರಿಸ್ತನ ವಾಕ್ಯವೇ ಆಧಾರ. ಆದರೂ ಅವರ ಕಿವಿಗೆ ಬೀಳಲಿಲ್ಲವೇನು? ಎಂದು ಕೇಳು 18 ತ್ತೇನೆ. ಬಿದ್ದದ್ದು ನಿಶ್ಚಯ.

> ಸಾರುವವರ ಧ್ವನಿಯು ಭೂಮಿಯಲ್ಲೆಲ್ಲಾ ಪ್ರಸರಿಸಿತು,
> ಅವರ ಮಾತುಗಳು ಲೋಕದ ಕಟ್ಟಕಡೆಗೂ ವ್ಯಾಪಿಸಿದವು[3].

ಆದರೆ ಇಸ್ರಯೇಲ್ಯರು ಆ ವಾರ್ತೆಯನ್ನು ತಿಳುಕೊಳ್ಳಲಿಲ್ಲವೇನು ಎಂದು ಕೇಳುತ್ತೇನೆ. 19 ಈ ವಿಷಯದಲ್ಲಿ--

> ಜನಾಂಗವೆಂಬ ಗಣನೆಗೆ ಬಾರದವರ ಮೇಲೆ ನಿಮ್ಮಲ್ಲಿ ಹುರುಡು ಹುಟ್ಟಿ ಸುವೆನು;
> ಅಜ್ಞಾನಿಗಳಾದವರ ದೆಸೆಯಿಂದ ನಿಮಗೆ ಹೊಟ್ಟೆಕಿಚ್ಚು ಬರುವಂತೆ ಮಾಡುವೆನು[4]

ಎಂದು ಮೊದಲು ಮೋಶೆಯು ಹೇಳುತ್ತಾನೆ. ಇದಲ್ಲದೆ ಯೆಶಾಯನು ಧೈರ್ಯವಾಗಿ 20 ಮಾತಾಡಿ—

> ನನ್ನನ್ನು ಹುಡುಕದೆ ಇದ್ದವರಿಗೆ ಸಿಕ್ಕಿದೆನು,
> ನನ್ನ ವಿಷಯ ವಿಚಾರಮಾಡದವರಿಗೆ ಪ್ರತ್ಯಕ್ಷನಾದೆನು[5]

ಎಂದು ಹೇಳುತ್ತಾನೆ. ಆದರೆ ಅವನು ಇಸ್ರಯೇಲ್ಯರನ್ನು ಕುರಿತು—ನನ್ನ ಮಾತನ್ನು 21 ಅಲಕ್ಷ್ಯಮಾಡಿ ಎದುರುಮಾತಾಡುವ ಜನರನ್ನು ನಾನು ದಿನವೆಲ್ಲಾ ಕೈಚಾಚಿ ಕರೆದೆ ನೆಂದು[6] ಹೇಳುತ್ತಾನೆ.

ದೇವರು ಇಸ್ರಯೇಲ್ಯರಲ್ಲಿ ಎಲ್ಲರನ್ನೂ ತಳ್ಳಿಬಿಡಲಿಲ್ಲ.

ಹಾಗಾದರೆ ದೇವರು ತನ್ನ ಪ್ರಜೆಯನ್ನು ಬೇಡವೆಂದು ತಳ್ಳಿಬಿಟ್ಟದ್ದುಂಟೋ ಎಂದು **11** ಕೇಳುತ್ತೇನೆ. ಎಂದಿಗೂ ಇಲ್ಲ. ನಾನು ಸಹ ಇಸ್ರಯೇಲ್ಯನು, ಅಬ್ರಹಾಮನ ಸಂತತಿ ಯವನು, ಬೆನ್ಯಮೀನನ ಕುಲದವನು ಆಗಿದ್ದೇನಲ್ಲಾ. ದೇವರು ತಾನು ಮುಂದಾಗಿ 2

---

1) ಯೆಶಾಯ ೫೨, ೭. 2) ಯೆಶಾಯ ೫೩, ೧. 3) ಕೀರ್ತನೆ ೧೯, ೪.
4) ದ್ವಿತೀಯ ನ್ಯಾಯ ೩೨, ೨೧. 5) ಯೆಶಾಯ ೬೫, ೧. 6) ಯೆಶಾಯ ೬೫, ೨.

ತನ್ನ ಜನರಾಗುವದಕ್ಕೆ ಗೊತ್ತುಮಾಡಿಕೊಂಡಿದ್ದ ಪ್ರಜೆಯನ್ನು ತಳ್ಳಿಬಿಡಲಿಲ್ಲ[1]. ಎಲೀಯನ ಚರಿತ್ರೆಯಲ್ಲಿ ಶಾಸ್ತ್ರವು ಹೇಳುವ ಮಾತು ನಿಮಗೆ ತಿಳಿಯದೋ? ಅವನು ದೇವರ 3 ಮುಂದೆ—ಕರ್ತನೇ, ಅವರು ನಿನ್ನ ಪ್ರವಾದಿಗಳನ್ನು ಕೊಂದರು, ನಿನ್ನ ಯಜ್ಞವೇದಿಗಳನ್ನು ಕೆಡವಿದರು, ನಾನೊಬ್ಬನೇ ಉಳಿದಿದ್ದೇನೆ, ನನ್ನ ಪ್ರಾಣವನ್ನೂ ತೆಗೆಯಬೇಕೆಂದಿದ್ದಾರೆ 4 ಎಂದು ಇಸ್ರಾಯೇಲ್ಯರ ಮೇಲೆ ದೂರು ಹೇಳಿದ್ದಕ್ಕೆ ದೇವರ ಉತ್ತರವೇನಂದರೆ—ಬಾಳನ ಮೂರ್ತಿಗೆ ಅಡ್ಡಬೀಳದೆ ಇರುವ ಏಳುಸಾವಿರ ಪುರುಷರನ್ನು ನನಗಾಗಿ ಉಳಿಸಿಕೊಂಡಿ 5 ದ್ದೇನೆ ಎಂಬುವದೇ[2]. ಅದರಂತೆ ಈಗಿನ ಕಾಲದಲ್ಲಿಯೂ ದೇವರು ಕೃಪೆಯಿಂದ ಆದು 6 ಕೊಂಡವರಾದ ಕೆಲವರು ಉಳಿದಿದ್ದಾರೆ. ಕೃಪೆಯಿಂದ ಆದುಕೊಂಡನು ಅಂದ ಮೇಲೆ ಪುಣ್ಯಕ್ರಿಯೆಗಳ ಕಾರಣದಿಂದ ಆದುಕೊಳ್ಳಲಿಲ್ಲವಷ್ಟೆ; ಹಾಗಲ್ಲದ ಪಕ್ಷಕ್ಕೆ ಕೃಪೆಯನ್ನು 7 ಇನ್ನು ಕೃಪೆಯನ್ನುವದಕ್ಕಾಗುವದಿಲ್ಲ. ಇದರಿಂದ ತಿಳಿಯತಕ್ಕದ್ದೇನು? ಇಸ್ರಾಯೇಲ್ಯರು ಹುಡುಕಿದ್ದು ಅವರೆಲ್ಲರಿಗೆ ದೊರೆಯಲಿಲ್ಲ, ಅವರೊಳಗೆ ಆಯಲ್ಪಟ್ಟವರಿಗೆ ದೊರೆಯಿತು. 8 ಮಿಕ್ಕವರು ಮೊಂಡರಾದರು. ದೇವರು ಅವರಿಗೆ ಜಡಭಾವವನ್ನು ಅಂದರೆ ಕಾಣದ ಕಣ್ಣುಗಳನ್ನೂ ಕೇಳದ ಕಿವಿಗಳನ್ನೂ ಕೊಟ್ಟನು; ಈ ಭಾವವು ಈ ಹೊತ್ತಿನ ವರೆಗೂ 9 ಹಾಗೆಯೇ ಅದೆ ಎಂದು[3] ಬರೆದ ಪ್ರಕಾರ ಅವರಿಗೆ ಆಯಿತು. ಇದಲ್ಲದೆ—

ಅವರು ಮಾಡುವ ಊಟವೇ ಅವರಿಗೆ ಉರ್ಲು ಬೋನೂ
ಎಡತಡೆಯೂ ಶಿಕ್ಷೆಯೂ ಆಗಲಿ;
10 ಅವರ ಕಣ್ಣುಗಳು ಕಾಣದಂತೆ ಮೊಬ್ಬಾಗಲಿ;
ಅವರ ಬೆನ್ನು ಯಾವಾಗಲೂ ಬೊಗ್ಗಿಕೊಂಡಿರುವಂತೆ ಮಾಡು[4]

ಎಂದು ದಾವೀದನು ಹೇಳುತ್ತಾನೆ.

ದೇವರು ಇಸ್ರಾಯೇಲ್ಯರನ್ನು ತಳ್ಳಿದ್ದು ಶಾಶ್ವತವಲ್ಲ.

11 ಹಾಗಾದರೆ ಅವರು ಬಿದ್ದೇಹೋಗುವಂತೆ ಎಡವಿದರೇನು ಎಂದು ಕೇಳುತ್ತೇನೆ. ಹಾಗೆ ಎಂದಿಗೂ ಹೇಳಬಾರದು. ಅವರು ಬಿದ್ದುಹೋದದ್ದರಿಂದ ಕ್ರಿಸ್ತನಿಂದ ಉಂಟಾಗುವ ರಕ್ಷಣೆಯು ಅನ್ಯಜನರಿಗೆ ಉಂಟಾಯಿತು. ಇದರಿಂದ ದೇವರು ಅವರಲ್ಲಿ ಹುರುಡು 12 ಹುಟ್ಟಿಸುತ್ತಾನೆ. ಅವರು ಬಿದ್ದುಹೋದದ್ದು ಸರ್ವಲೋಕದ ಭಾಗ್ಯಕ್ಕೂ ಅವರು ಸೋತುಹೋದದ್ದು ಅನ್ಯಜನಗಳ ಭಾಗ್ಯಕ್ಕೂ ಮಾರ್ಗವಾಗಿರಲಾಗಿ, ಅವರ ಪೂರ್ಣ ಪುನಃಸ್ಥಾಪನೆಯು ಎಷ್ಟೋ ಹೆಚ್ಚಾಗಿ ಭಾಗ್ಯಕ್ಕೆ ಕಾರಣವಾಗುವದು.

13 ಅನ್ಯಜನರಾಗಿರುವ ನಿಮ್ಮ ಸಂಗಡ ಮಾತಾಡುತ್ತೇನೆ. ನಾನು ಅನ್ಯಜನರಿಗೆ ಅಪೊ 14 ಸ್ತಲನಾಗಿರಲಾಗಿ ನನ್ನ ಉದ್ಯೋಗವನ್ನು ಗಣ್ಯತೆಗೆ ತರುತ್ತೇನೆ. ಹೀಗೆ ಒಂದು ವೇಳೆ ಸ್ವಜನರಲ್ಲಿ ಹುರುಡನ್ನು ಹುಟ್ಟಿಸಿ ಅವರಲ್ಲಿ ಸಹ ಕೆಲವರನ್ನು ರಕ್ಷಣೆಯ ಮಾರ್ಗಕ್ಕೆ 15 ತಂದೇನು. ಯಾಕಂದರೆ ಇಸ್ರಾಯೇಲ್ಯರನ್ನು ತಳ್ಳುವದರಿಂದ ಲೋಕವು ದೇವರ ಸಂಗಡ

[1] ಕೀರ್ತನೆ ೯೪, ೧೪; ೧ ಸಮುವೇಲ ೧೨, ೨೨.
[2] ೧ ಅರಸು. ೧೯, ೧೦. ೧೮.
[3] ಯೆಶಾಯ ೨೯, ೧೦; ದ್ವಿತೀಯ ನ್ಯಾಯ ೨೯, ೪.
[4] ಕೀರ್ತನೆ ೬೯, ೨೨. ೨೩.

ಸಮಾಧಾನವಾಗುವದಕ್ಕೆ ಮಾರ್ಗವಾದ ಮೇಲೆ ಅವರನ್ನು ಸೇರಿಸಿಕೊಳ್ಳುವದರಿಂದ ಏನಾಗುವದು? ಸತ್ತವರು ಜೀವಿತರಾಗಿ ಎದ್ದು ಬಂದಂತಾಗುವದಲ್ಲವೇ? 16 ಕಣಕದಲ್ಲಿ ಮೊದಲನೇ ಉರುಳಿ[1] ನೈವೇದ್ಯವಾದ ಮೇಲೆ, ಕಣಕವೆಲ್ಲಾ ನೈವೇದ್ಯವಾದ ಹಾಗಾಯಿತು; ಬೇರು ದೇವರದಾಗಿದ್ದ ಮೇಲೆ ಕೊಂಬೆಗಳೂ ದೇವರವು. 17 ಆದರೆ ಕೆಲವು ಕೊಂಬೆಗಳು ಮುರಿದುಹಾಕಲ್ಪಡಲು ಕಾಡೆಣ್ಣೇಮರದಂತಿರುವ ನೀನು ಅವುಗಳ ತಾವಿನಲ್ಲಿ ಕಸಿಕಟ್ಟಿಸಿಕೊಂಡವನಾಗಿ ಊರೆಣ್ಣೇಮರದ ರಸವತ್ತಾದ ಬೇರಿನಲ್ಲಿ ಪಾಲುಹೊಂದಿದರೂ 18 ಆ ಕೊಂಬೆಗಳನ್ನು ಕಡೆಗಣಿಸಿ ನಿನ್ನನ್ನು ಹೆಚ್ಚಿಸಿಕೊಳ್ಳಬೇಡ; ಹೆಚ್ಚಿಸಿಕೊಂಡಾಗ್ಯೂ ಆ ಬೇರಿಗೆ ನೀನು ಆಧಾರವಲ್ಲ, ಅದು ನಿನಗೆ ಆಧಾರವಾಗಿದೆಯಷ್ಟೆ. 19 ಈ ಮಾತಿಗೆ— ನಾನು ಕಸಿಕಟ್ಟಿಸಿಕೊಳ್ಳುವಂತೆ ಕೊಂಬೆಗಳು ಮುರಿದುಹಾಕಲ್ಪಟ್ಟವಲ್ಲಾ ಎಂದು ನೀನು ಒಂದು ವೇಳೆ ಹೇಳಬಹುದು. 20 ನೀನು ಹೇಳುವದು ನಿಜ; ಅವರು ನಂಬದೆ ಹೋದದರಿಂದ ಮುರಿದುಹಾಕಲ್ಪಟ್ಟರು, ನೀನು ನಿಂತಿರುವದು ನಂಬಿಕೆಯಿಂದಲೇ. ಗರ್ವಪಡಬೇಡ, ಭಯದಿಂದಿರು; 21 ದೇವರು ಹುಟ್ಟುಕೊಂಬೆಗಳನ್ನು ಉಳಿಸದೆ ಇದ್ದಮೇಲೆ, ನಿನ್ನನ್ನೂ ಉಳಿಸುವದಿಲ್ಲ. 22 ಆದದರಿಂದ, ದೇವರ ದಯೆಯನ್ನೂ ಕಾಠಿಣ್ಯವನ್ನೂ ನೋಡು; ಬಿದ್ದವರ ಕಡೆಗೆ ಕಾಠಿಣ್ಯ; ನಿನ್ನ ಕಡೆಗೆ ನೀನು ದೇವರ ದಯೆಯನ್ನು ಆಶ್ರಯಿಸಿಕೊಂಡೇ ಇದ್ದರೆ ಆತನ ದಯೆ; ಇಲ್ಲವಾದರೆ, ನಿನ್ನನ್ನೂ ಕಡಿದುಹಾಕುವನು. 23 ಇಸ್ರಯೇಲ್ಯರು ಕೂಡ ಇನ್ನು ಅಪನಂಬಿಕೆಯಲ್ಲಿ ನಿಲ್ಲದ ಪಕ್ಷಕ್ಕೆ ಕಸಿಕಟ್ಟಲ್ಪಡುವರು; ದೇವರು ಅವರನ್ನು ತಿರಿಗಿ ಕಸಿಕಟ್ಟುವದಕ್ಕೆ ಸಮರ್ಥನಾಗಿದ್ದಾನೆ. 24 ನೀನು ಹುಟ್ಟುಕಾಡುಮರದಿಂದ ಕಡಿದು ತೆಗೆಯಲ್ಪಟ್ಟು, ನಿನಗೆ ಸಂಬಂಧಪಡದ ಊರುಮರದಲ್ಲಿ ಕಸಿಕಟ್ಟಿಸಿಕೊಂಡವನಾದ ಮೇಲೆ, ಅದರಲ್ಲಿ ಹುಟ್ಟಿದ ಕೊಂಬೆಗಳಾಗಿರುವ ಅವರು ಸ್ವಂತ ಮರದಲ್ಲಿ ಕಸಿಕಟ್ಟಲ್ಪಡುವದು ಎಷ್ಟೋ ಸಹಜವಾಗಿದೆಯಲ್ಲವೇ?

ಸರ್ವರಿಗೂ ಕರುಣೆಯನ್ನು ತೋರಿಸಬೇಕೆಂಬುವದು ದೇವರ ಮುಖ್ಯೋದ್ದೇಶ.

25 ಸಹೋದರರೇ, ನಿಮ್ಮನ್ನು ನೀವೇ ಬುದ್ಧಿವಂತರೆಂಬದಾಗಿ ಎಣಿಸಿಕೊಳ್ಳದಂತೆ ಈ ವರೆಗೆ ಗುಪ್ತವಾಗಿದ್ದ ಒಂದು ಸಂಗತಿಯನ್ನು ನಿಮಗೆ ತಿಳಿದಿರಬೇಕೆಂದು ಅಪೇಕ್ಷಿಸುತ್ತೇನೆ; ಅದೇನಂದರೆ, ಇಸ್ರಯೇಲ್ಯರಲ್ಲಿ ಒಂದು ಪಾಲು ಜನರಿಗೆ ಉಂಟಾದ ಮೊಂಡತನವು ಯಾವಾಗಲೂ ಇರದೆ ಅನ್ಯಜನಗಳ ಸಮುದಾಯವು ದೇವರ ರಾಜ್ಯದಲ್ಲಿ ಸೇರುವ ತನಕ ಮಾತ್ರ ಇರುವದು; 26 ಆ ಮೇಲೆ ಇಸ್ರಯೇಲ ಜನವೆಲ್ಲಾ ರಕ್ಷಣೆಹೊಂದುವದು. ಇದಕ್ಕೆ ಶಾಸ್ತ್ರಾಧಾರವೇನಂದರೆ—

> ಬಿಡಿಸುವವನು ಚಿಯೋನಿನೊಳಗಿಂದ ಹೊರಟು ಬಂದು,
> ಯಾಕೋಬನಲ್ಲಿರುವ ಭಕ್ತಿಹೀನತೆಯನ್ನು ನಿವಾರಣೆ ಮಾಡುವನು.
> 27 ನಾನು ಅವರ ಸಂಗಡ ಮಾಡುವ ಒಡಂಬಡಿಕೆ ಇದೇ—
> ನಾನು ಅವರ ಪಾಪಗಳನ್ನು ಪರಿಹರಿಸುವೆನೆಂಬುವದೇ[2]

[1] ಅಥವಾ, ಉಂಡೆ. [2] ಯೆಶಾಯ ೫೯, ೨೦; ೨೭, ೯; ಯೆರೆಮಿಾಯ ೩೧, ೩೧—೩೪.

28 ಎಂದು ಬರೆದದೆ. ಅವರು ಸುವಾರ್ತೆಯನ್ನು ಬೇಡವೆಂದದ್ದರಿಂದ ದೇವರು ನಿಮಗೆ ಹಿತವನ್ನು ಉಂಟುಮಾಡಿ ಅವರನ್ನು ಶತ್ರುಗಳೆಂದೆಣಿಸಿದ್ದಾನೆ. ಆದರೂ ಅವರು ತಾನು ಆರಿಸಿಕೊಂಡ ಅಬ್ರಹಾಮ ಇಸಾಕ ಯಾಕೋಬರೆಂಬ ಪಿತೃಗಳ ವಂಶಸ್ಥರಾದ್ದರಿಂದ
29 ಅವರನ್ನು ಪ್ರಿಯರೆಂದು ಎಣಿಸಿದ್ದಾನೆ. ದೇವರು ವರಗಳನ್ನು ಅನುಗ್ರಹಿಸಿದ್ದಕ್ಕೂ ಜನ
30 ರನ್ನು ಕರೆದದ್ದಕ್ಕೂ ಪಶ್ಚಾತ್ತಾಪಪಡುವವನಲ್ಲ. ಯಾವ ಪ್ರಕಾರ ನೀವು ಪೂರ್ವದಲ್ಲಿ ಅವಿಧೇಯರಾಗಿದ್ದಾಗ್ಯೂ ಈಗ ಅವರ ಅವಿಧೇಯತೆಯ ದೆಸೆಯಿಂದ ಕರುಣೆ ಹೊಂದಿ
31 ದ್ದೀರೋ, ಅದೇ ಪ್ರಕಾರವಾಗಿ ಅವರು ಈಗ ಅವಿಧೇಯರಾಗಿದ್ದಾಗ್ಯೂ ನಿಮಗೆ ದೊರಕಿದ
32 ಕರುಣೆಯನ್ನು ಹೊಂದುವರು. ಯಾಕಂದರೆ ದೇವರು ಎಲ್ಲರಿಗೂ ಕರುಣೆಯನ್ನು ತೋರಿಸಬೇಕೆಂಬ ಉದ್ದೇಶವುಳ್ಳವನಾಗಿದ್ದು ಎಲ್ಲರನ್ನೂ ಅವಿಧೇಯತ್ವವೆಂಬ ದುಃಸ್ಥಿತಿ ಯಲ್ಲಿ ಕಟ್ಟಿಹಾಕಿದ್ದಾನೆ.

33 ಆಹಾ, ದೇವರ ಐಶ್ವರ್ಯವೂ ಜ್ಞಾನವೂ ವಿವೇಕವೂ ಎಷ್ಟೋ ಅಗಾಧ! ಆತನ ತೀರ್ಮಾನಗಳು ಪರಿಶೋಧನೆಗೆ ಎಷ್ಟೋ ಅಗಮ್ಯ! ಆತನ ಮಾರ್ಗಗಳು ಕಂಡುಹಿಡಿ
34 ಯುವದಕ್ಕೆ ಎಷ್ಟೋ ಅಸಾಧ್ಯ! ಕರ್ತನ ಮನಸ್ಸನ್ನು ತಿಳುಕೊಂಡವನ್ಯಾರು? ಆತನಿಗೆ
35 ಆಲೋಚನೆ ಹೇಳಬಲ್ಲವರು ಯಾರು? ಮೊದಲು ಆತನಿಗೆ ಕೊಟ್ಟು ಪ್ರತಿಫಲವನ್ನು
36 ತಕ್ಕೊಳ್ಳುವವನು ಯಾರು[1]? ಸಮಸ್ತವು ಆತನಿಂದ ಉತ್ಪತ್ತಿಯಾಗಿ ಆತನಿಂದ ನಡೆ ಯುತ್ತಾ ಆತನಿಗಾಗಿ ಇರುತ್ತದೆ; ಆತನಿಗೇ ಸದಾಕಾಲವೂ ಸ್ತೋತ್ರ. ಆಮೆನ್.

### ದೇವಜನರು ನಡಕೊಳ್ಳಬೇಕಾದ ರೀತಿ.

**12** ಆದದರಿಂದ ಸಹೋದರರೇ, ದೇವರ ಕನಿಕರವನ್ನು ನಿಮ್ಮ ನೆನಪಿಗೆ ತಂದು ನಿಮ್ಮನ್ನು ಬೇಡಿಕೊಳ್ಳುವದೇನಂದರೆ—ನೀವು ನಿಮ್ಮನಿಮ್ಮ ದೇಹಗಳನ್ನು ದೇವರಿಗೆ ಮೀಸಲಾ ಗಿಯೂ[2] ಮೆಚ್ಚಿಗೆಯಾಗಿಯೂ ಇರುವ ಸಜೀವ ಯಜ್ಞವಾಗಿ ಅರ್ಪಿಸಿರಿ; ಇದೇ ನಿಮ್ಮ
2 ವಿವೇಕಪೂರ್ವಕವಾದ ಆರಾಧನೆಯು. ಇಹಲೋಕದ ನಡವಳಿಕೆಯನ್ನು ಅನುಸರಿಸದೆ ಮನಸ್ಸನ್ನು ಹೊಸದು ಮಾಡಿಕೊಂಡು ಪರಲೋಕಭಾವದವರಾಗಿರ್ರಿ. ಹೀಗಾದರೆ, ದೇವರ ಚಿತ್ತಕ್ಕನುಸಾರವಾದದ್ದು, ಅಂದರೆ ಉತ್ತಮವಾದದ್ದೂ ಮೆಚ್ಚಿಕೆಯಾದದ್ದೂ ದೋಷ ವಿಲ್ಲದ್ದೂ, ಯಾವ್ಯಾವದೆಂದು ವಿವೇಚಿಸಿ ತಿಳುಕೊಳ್ಳುವಿರಿ.

3 ದೇವರು ನನಗೆ ಕೃಪೆಮಾಡಿದ ಸೇವೆಯನ್ನು ನಡಿಸಿ ನಿಮ್ಮಲ್ಲಿ ಒಬ್ಬೊಬ್ಬನಿಗೂ ಹೇಳು ವದೇನಂದರೆ, ಯಾರೂ ತನ್ನ ಯೋಗ್ಯತೆಗೆ ಮೀರಿ ತನ್ನನ್ನು ಭಾವಿಸಿಕೊಳ್ಳದೆ, ದೇವರು ಒಬ್ಬೊಬ್ಬನಿಗೆ ಎಂಥೆಂಥ ವಿಶ್ವಾಸಬಲವನ್ನು ಕೊಟ್ಟನೋ, ಅದಕ್ಕೆ ತಕ್ಕ ಹಾಗೆ ನ್ಯಾಯ
4 ವಾದ ಅಭಿಪ್ರಾಯದಿಂದ ತನ್ನನ್ನು ಭಾವಿಸಿಕೊಳ್ಳಬೇಕು. ಯಾಕಂದರೆ ನಮಗೆ ಒಂದೇ ದೇಹದಲ್ಲಿ ಬಹಳ ಅಂಗಗಳಿರಲಾಗಿ, ಆ ಎಲ್ಲಾ ಅಂಗಗಳಿಗೆ ಹ್ಯಾಗೆ ಒಂದೇ ಕೆಲಸ ಇರು
5 ವದಿಲ್ಲವೋ, ಹಾಗೆಯೇ ನಾವೆಲ್ಲರು ಒಟ್ಟಾಗಿ ಕ್ರಿಸ್ತನಲ್ಲಿ ಒಂದೇ ದೇಹವಾಗಿದ್ದು, ಒಬ್ಬೊ

[1] ಯೆಶಾಯ ೪೦, ೧೩; ಯೋಬ ೩೫, ೭; ೪೧, ೧೧.   [2] ಅಥವಾ, ಪವಿತ್ರವಾಗಿಯೂ.

ಬ್ಬರಾಗಿ ಪರಸ್ಪರ ಅಂಗಗಳಾಗಿದ್ದೇವೆ. ದೇವರು ನಮಗೆ ಕೃಪೆಮಾಡಿದ ಪ್ರಕಾರ ನಾವು 6 ಬೇರೆಬೇರೆ ವರಗಳನ್ನು ಹೊಂದಿದ್ದೇವೆ. ಹೊಂದಿದ ವರವು ಪ್ರವಾದನೆಯ ರೂಪವಾಗಿ ದ್ದರೆ, ನಮ್ಮ ವಿಶ್ವಾಸವರಕ್ಕೆ ತಕ್ಕ ಹಾಗೆ ಪ್ರವಾದನೆ ಹೇಳೋಣ. ಅದು ಸಭಾಸೇವೆಯ 7 ರೂಪವಾಗಿದ್ದರೆ, ಸಭಾಸೇವೆಯನ್ನು ಮಾಡುತ್ತಾ ಇರೋಣ. ಬೋಧಿಸುವವನು ಬೋಧಿ 8 ಸುವದರಲ್ಲಿಯೂ ಬುದ್ಧಿಹೇಳುವವನು ಬುದ್ಧಿಹೇಳುವದರಲ್ಲಿಯೂ ನಿರತನಾಗಿರಲಿ. ದಾನ ಕೊಡುವವನು ಯಥಾರ್ಥಮನಸ್ಸಿನಿಂದ ಕೊಡಲಿ. ಹಿರೀತನ ನಡಿಸುವವನು ಜಾಗ ರೂಕತೆಯಿಂದ ನಡಿಸಲಿ. ಕಷ್ಟದಲ್ಲಿರುವವರಿಗೆ ಉಪಕಾರಮಾಡುವವನು ಸಂತೋಷ ವಾಗಿ ಮಾಡಲಿ.

ಮೇಲೆ ಮಾತ್ರ ಪ್ರೀತಿಸದೆ ಮನಃಪೂರ್ವಕವಾಗಿ ಪ್ರೀತಿಸಿರಿ. ಕೆಟ್ಟತನಕ್ಕೆ ಹೇಸಿ 9 ಕೊಂಡು ಒಳ್ಳೇದನ್ನು ಬಿಗಿಯಾಗಿ ಹಿಡಿದುಕೊಳ್ಳಿರಿ. ಕ್ರೈಸ್ತ ಸಹೋದರರನ್ನು ಅಣ್ಣ 10 ತಮ್ಮಂದಿರೆಂದು ಪ್ರೀತಿಸಿರಿ. ಮಾನಮರ್ಯಾದೆಯನ್ನು ತೋರಿಸುವದರಲ್ಲಿ ಒಬ್ಬರಿಗಿಂತ ಒಬ್ಬರು ಮುಂದಾಗಿರಿ. ಜಾಗ್ರತೆ ಬೇಕಾದಲ್ಲಿ ಆಲಸ್ಯವಾಗಿರದೆ, ಆಸಕ್ತಚಿತ್ತರಾಗಿದ್ದು, 11 ಕರ್ತನ ಸೇವೆ ಮಾಡುವವರಾಗಿರಿ. ಕ್ರೈಸ್ತರು ನಿರೀಕ್ಷಿಸುವ ಮಹಾಪದವಿಯನ್ನು ನೆನಸಿ 12 ಉಲ್ಲಾಸವಾಗಿರ್ರಿ. ಧೈರ್ಯಗೆಡದೆ ಉಪದ್ರವನ್ನು ಸೈರಿಸಿಕೊಳ್ಳಿರಿ. ಬೇಸರಗೊಳ್ಳದೆ ಪ್ರಾರ್ಥನೆಮಾಡಿರಿ. ದೇವಜನರಿಗೆ ಕೊರತೆ ಬಂದಾಗ ಸಹಾಯಮಾಡಿರಿ. ಅತಿಥಿ 13 ಸತ್ಕಾರವನ್ನು ಅಭ್ಯಾಸಿಸಿರಿ. ನಿಮ್ಮನ್ನು ಹಿಂಸಿಸುವವರಿಗೆ ಆಶೀರ್ವಾದ ಮಾಡಿರಿ; 14 ಶಪಿಸದೆ ಆಶೀರ್ವದಿಸಿರಿ. ಸಂತೋಷ ಪಡುವವರ ಸಂಗಡ ಸಂತೋಷ ಪಡಿರಿ, ಅಳು 15 ವವರ ಸಂಗಡ ಅಳಿರಿ. ನಿಮ್ಮನಿಮ್ಮೊಳಗೆ ಏಕಮನಸ್ಸುಳ್ಳವರಾಗಿರ್ರಿ. ದೊಡ್ಡಸ್ತಿಕೆಯ 16 ಮೇಲೆ ಮನಸ್ಸಿಡದೆ, ದೀನರ ಸಂಗಡ ಬಳಿಕೆಯಾಗಿರ್ರಿ. ನಿಮ್ಮನ್ನು ನೀವೇ ಬುದ್ಧಿವಂತ ರೆಂದು ಎಣಿಸಿಕೊಳ್ಳಬೇಡಿರಿ.

ಯಾರಿಗೂ ಅಪಕಾರಕ್ಕೆ ಅಪಕಾರವನ್ನು ಮಾಡಬೇಡಿರಿ. ಎಲ್ಲರ ದೃಷ್ಟಿಯಲ್ಲಿ 17 ಯಾವದು ಗೌರವವಾದದ್ದೋ ಅದನ್ನೇ ಯೋಚಿಸಿ ಸಾಧಿಸಿರಿ. ಸಾಧ್ಯವಾದರೆ 18 ನಿಮ್ಮಿಂದಾಗುವಮಟ್ಟಿಗೆ ಎಲ್ಲರ ಸಂಗಡ ಸಮಾಧಾನದಿಂದಿರ್ರಿ. ಪ್ರಿಯರೇ, ನೀವೇ 19 ಮುಯ್ಯಿಗೆ ಮುಯ್ಯಿ ತೀರಿಸದೆ, ಶಿಕ್ಷಿಸುವದನ್ನು ದೇವರಿಗೆ ಬಿಡಿರಿ. ಯಾಕಂದರೆ ಮುಯ್ಯಿಗೆ ಮುಯ್ಯಿ ತೀರಿಸುವದು ನನ್ನ ಕೆಲಸ, ನಾನೇ ಪ್ರತಿಫಲವನ್ನು ಕೊಡುವೆನು ಎಂದು[1] ಕರ್ತನು ಹೇಳುತ್ತಾನೆಂಬದಾಗಿ ಬರೆದದೆ. ಹಾಗಾದರೆ ನಿನ್ನ ವೈರಿ ಹಸಿದಿದ್ದರೆ, 20 ಅವನಿಗೆ ಊಟಕ್ಕೆ ಬಡಿಸು. ಅವನಿಗೆ ಬಾಯಾರಿಕೆಯಾಗಿದ್ದರೆ, ಕುಡಿಯುವದಕ್ಕೆ ಕೊಡು. ಹೀಗೆ ಮಾಡುವದರಿಂದ ಅವನ ತಲೆಯ ಮೇಲೆ ಕೆಂಡಗಳನ್ನು ಕೂಡಿಸಿಟ್ಟಂತಾ ಗುವದು. ಕೆಟ್ಟತನಕ್ಕೆ ಸೋತುಹೋಗದೆ ಒಳ್ಳೇತನದಿಂದ ಕೆಟ್ಟತನವನ್ನು ಸೋಲಿಸು. 21

---

[1] ದ್ವಿತೀಯ ನ್ಯಾಯ ೩೨, ೩೫.

ಅಧಿಕಾರಸ್ಥರಿಗೆ ಅಧೀನರಾಗಿರಬೇಕೆಂದು ಬೋಧನೆ.

**13** ಪ್ರತಿ ಮನುಷ್ಯನು ತನ್ನ ಮೇಲಿರುವ ಅಧಿಕಾರಿಗಳಿಗೆ ಅಧೀನನಾಗಿರಲಿ; ಯಾಕಂದರೆ ದೇವರಿಂದ ಹೊರತು ಒಬ್ಬರಿಗೂ ಅಧಿಕಾರವಿರುವದಿಲ್ಲ; ಇರುವ ಅಧಿಕಾರಿಗಳು ದೇವ 2 ರಿಂದ ನೇಮಿಸಲ್ಪಟ್ಟವರು. ಆದದರಿಂದ ಅಧಿಕಾರಕ್ಕೆ ಎದುರುಬೀಳುವವನು ದೇವರ 3 ನೇಮಕವನ್ನು ಎದುರಿಸುತ್ತಾನೆ; ಎದುರಿಸುವವರು ಶಿಕ್ಷೆಗೊಳಗಾಗುವರು. ಕೆಟ್ಟಕೆಲಸ ಮಾಡುವವನಿಗೆ ಅಧಿಪತಿಯಿಂದ ಭಯವಿರುವದೇ ಹೊರತು ಒಳ್ಳೇ ಕೆಲಸ ಮಾಡು ವವನಿಗೆ ಭಯವೇನೂ ಇಲ್ಲ. ನೀನು ಅಧಿಕಾರಿಗೆ ಭಯಪಡದೆ ಇರಬೇಕೆಂದು ಅಪೇಕ್ಷಿ ಸುತ್ತೀಯೋ? ಒಳ್ಳೇದನ್ನು ಮಾಡು; ಆಗ ಆ ಅಧಿಕಾರಿಯಿಂದಲೇ ನಿನಗೆ ಹೊಗಳಿಕೆ 4 ಯುಂಟಾಗುವದು; ಅವನು ನಿನ್ನ ಹಿತಕ್ಕೋಸ್ಕರ ದೇವರ ಸೇವಕನಾಗಿದ್ದಾನಲ್ಲಾ. ಆದರೆ ನೀನು ಕೆಟ್ಟದ್ದನ್ನು ಮಾಡಿದರೆ, ಭಯಪಡಬೇಕು; ಅವನು ಸುಮ್ಮನೆ ಕೈಯಲ್ಲಿ ಕತ್ತಿ ಯನ್ನು ಹಿಡಿದಿಲ್ಲ; ಅವನು ದೇವರ ಸೇವಕನಾಗಿದ್ದು ಕೆಟ್ಟದ್ದನ್ನು ನಡಿಸುವವನಿಗೆ ದೇವರ 5 ದಂಡನೆಯನ್ನು ವಿಧಿಸುತ್ತಾನೆ. ಆದಕಾರಣ ದಂಡನೆಯಾದೀತೆಂದು ಮಾತ್ರವಲ್ಲದೆ ಮನಸ್ಸಿಗೆ ನ್ಯಾಯವಾಗಿ ತೋರುವದರಿಂದಲೂ ಅವನಿಗೆ ಅಧೀನನಾಗುವದು ಅವಶ್ಯ. 6 ಈ ಕಾರಣದಿಂದಲೇ ನೀವು ಕಂದಾಯವನ್ನು ಕೂಡ ಕೊಡುತ್ತೀರಿ. ಯಾಕಂದರೆ ಕಂದಾಯ ಎತ್ತುವವರು ದೇವರ ಉದ್ಯೋಗಿಗಳಾಗಿದ್ದು ಆ ಕೆಲಸವನ್ನು ನೋಡಿಕೊಳ್ಳು 7 ತ್ತಾರೆ. ಅವರವರಿಗೆ ಸಲ್ಲಿಸತಕ್ಕದ್ದನ್ನು ಸಲ್ಲಿಸಿರಿ; ಯಾರಿಗೆ ಕಂದಾಯವೋ ಅವರಿಗೆ ಕಂದಾಯವನ್ನು, ಯಾರಿಗೆ ಸುಂಕವೋ ಅವರಿಗೆ ಸುಂಕವನ್ನು, ಯಾರಿಗೆ ಭಯವೋ ಅವ ರಿಗೆ ಭಯವನ್ನು, ಯಾರಿಗೆ ಮರ್ಯಾದೆಯೋ ಅವರಿಗೆ ಮರ್ಯಾದೆಯನ್ನು ಸಲ್ಲಿಸಿರಿ.

ಧರ್ಮಶಾಸ್ತ್ರವೆಲ್ಲಾ ಪ್ರೀತಿಯಿಂದಲೇ ನೆರವೇರುವದು ಎಂಬ ಬೋಧನೆ.

8 ಒಬ್ಬರನ್ನೊಬ್ಬರು ಪ್ರೀತಿಸಬೇಕೆಂಬ ಋಣವೇ ಹೊರತು ಬೇರೆ ಯಾವ ಸಾಲವು ನಿಮಗೆ ಇರಬಾರದು. ಮತ್ತೊಬ್ಬರನ್ನು ಪ್ರೀತಿಸುವವನು ಧರ್ಮಪ್ರಮಾಣವನ್ನೆಲ್ಲಾ 9 ನೆರವೇರಿಸಿದ್ದಾನೆ. ಹ್ಯಾಗಂದರೆ, ವ್ಯಭಿಚಾರಮಾಡಬಾರದು, ಕೊಲ್ಲಬಾರದು, ಕದಿಯ ಬಾರದು, ಪರರ ಸೊತ್ತನ್ನು ಆಶಿಸಬಾರದು ಈ ಮೊದಲಾದ ಎಲ್ಲಾ ಕಟ್ಟಳೆಗಳು— ನೀನು ನಿನ್ನನ್ನು ಪ್ರೀತಿಸಿಕೊಳ್ಳುವಂತೆ ನಿನ್ನ ನೆರೆಯವನನ್ನು ಪ್ರೀತಿಸು ಎಂಬ ಒಂದೇ 10 ಮಾತಿನಲ್ಲಿ ಅಡಕವಾಗಿವೆ. ಪ್ರೀತಿಯು ಮತ್ತೊಬ್ಬರಿಗೆ ಯಾವ ಕೇಡನ್ನೂ ಮಾಡುವ ದಿಲ್ಲ. ಆದಕಾರಣ ಪ್ರೀತಿಯಿಂದಲೇ ಧರ್ಮಪ್ರಮಾಣವು ನೆರವೇರುತ್ತದೆ.

ಸಂಪೂರ್ಣ ರಕ್ಷಣೋದಯ ಹತ್ತರಬಂದದರಿಂದ ನಾವು ಸಜ್ಜನರಾಗಿ ನಡೆದುಕೊಳ್ಳಬೇಕೆಂಬುವ ಬೋಧನೆ.

11 ಈಗಿನ ಕಾಲವನ್ನು ಇದು ಎಚ್ಚರವಾಗತಕ್ಕ ಕಾಲವೆಂದು ಅರಿತು ಇದೆಲ್ಲಾ ಮಾಡಿರಿ. ನಾವು ಕ್ರಿಸ್ತನನ್ನು ಮೊದಲು ನಂಬಿದ ಕಾಲದಲ್ಲಿ ಇದ್ದದ್ದಕ್ಕಿಂತ ಈಗ ನಮ್ಮ ವಿಮೋಚ 12 ನೆಯು ಹತ್ತರವಾಯಿತು. ಇರುಳು ಬಹಳಮಟ್ಟಿಗೆ ಕಳೆಯಿತು; ಹಗಲು ಸಮೀಪವಾ

ಯಿತು. ಕತ್ತಲೆಗೆ ಅನುಗುಣವಾದ ಕೃತ್ಯಗಳನ್ನು ಬಿಟ್ಟು ಬೆಳಕಿಗೆ ಅನುಗುಣವಾದ ಆಯುಧಗಳನ್ನು ಧರಿಸಿಕೊಳ್ಳೋಣ. 13 ದುಂದೌತನ ಕುಡಿಕತನಗಳಲ್ಲಿಯಾಗಲಿ ಕಾಮ ವಿಲಾಸ ನಿರ್ಲಜ್ಜಾಕೃತ್ಯಗಳಲ್ಲಿಯಾಗಲಿ ಜಗಳ ಹೊಟ್ಟೇಕಿಚ್ಚುಗಳಲ್ಲಿಯಾಗಲಿ ಕಾಲಕಳೆಯದೆ, ಹಗಲುಹೊತ್ತಿಗೆ ತಕ್ಕಹಾಗೆ ಮಾನಸ್ಥರಾಗಿ ನಡೆದುಕೊಳ್ಳೋಣ. 14 ದೇಹದ ಆಶೆಗಳನ್ನು ಪೂರೈಸುವದಕ್ಕಾಗಿ ಚಿಂತಿಸದೆ ಕರ್ತನಾದ ಯೇಸು ಕ್ರಿಸ್ತನನ್ನು ಧರಿಸಿಕೊಳ್ಳಿರಿ.

ಸಂದೇಹಾಸ್ಪದವಾದ ಕಾರ್ಯಗಳ ವಿಷಯದಲ್ಲಿ ನಾನಾ ಅಭಿಪ್ರಾಯಗಳು ಹುಟ್ಟಿದಾಗ, ಪ್ರತಿಯೊಬ್ಬನು ತನ್ನ ತನ್ನ ಇಷ್ಟದಂತೆ ನಡೆಯದೆ ಎಲ್ಲರಿಗೂ ಭಕ್ತಿವೃದ್ಧಿಯಾಗುವಂತೆ ನಡೆಯಬೇಕೆಂಬುವ ಬೋಧನೆ.
(1 ಕೊರಿಂಥ. 8—10 ಸರಿನೋಡಿರಿ.)

**14** ನಂಬಿಕೆಯಲ್ಲಿ ದೃಢವಿಲ್ಲದವರನ್ನೂ ಸೇರಿಸಿಕೊಳ್ಳಿರಿ, ಆದರೆ ಸಂದೇಹಾಸ್ಪದವಾದ ಕಾರ್ಯಗಳನ್ನು ಅವರ ಮುಂದೆ ಚರ್ಚಿಸಬೇಡಿರಿ. 2 ಒಬ್ಬನು ಯಾವದನ್ನಾದರೂ ತಿನ್ನಬಹುದೆಂದು ನಂಬುತ್ತಾನೆ; ನಂಬಿಕೆಯಲ್ಲಿ ದೃಢವಿಲ್ಲದವನು ಕಾಯಿಪಲ್ಯಗಳನ್ನು ಮಾತ್ರ ತಿನ್ನುತ್ತಾನೆ. 3 ಯಾವದನ್ನೂ ತಿನ್ನುವವನು ತಿನ್ನದವನನ್ನು ಹೀನೈಸಬಾರದು; ತಿನ್ನದವನು ತಿನ್ನುವವನನ್ನು ದೋಷಿಯೆಂದು ಎಣಿಸಬಾರದು. ದೇವರು ಇಬ್ಬರನ್ನೂ ಸೇರಿಸಿಕೊಂಡಿದ್ದಾನಲ್ಲಾ. 4 ಮತ್ತೊಬ್ಬನ ಸೇವಕನ ವಿಷಯವಾಗಿ ತೀರ್ಪುಮಾಡುವದಕ್ಕೆ ನೀನು ಯಾರು? ಅವನು ದೋಷಿಯೋ ನಿರ್ದೋಷಿಯೋ ಅವನ ಯಜಮಾನನೇ ತೀರ್ಪುಮಾಡಬೇಕು. ಅವನು ನಿಲ್ಲುವನು; ಕರ್ತನು ಅವನನ್ನು ನಿಲ್ಲಿಸುವದಕ್ಕೆ ಶಕ್ತನು. 5 ಒಬ್ಬನು ಒಂದು ದಿನಕ್ಕಿಂತ ಮತ್ತೊಂದು ದಿನವನ್ನು ವಿಶೇಷವೆಂದೆಣಿಸುತ್ತಾನೆ; ಮತ್ತೊಬ್ಬನು ಎಲ್ಲಾ ದಿವಸಗಳನ್ನೂ ವಿಶೇಷವೆಂದೆಣಿಸುತ್ತಾನೆ; ಪ್ರತಿಯೊಬ್ಬನು ತನ್ನ ತನ್ನ ಮನಸ್ಸಿನಲ್ಲಿ ನಿಶ್ಚಯಿಸಿಕೊಂಡಿರಬೇಕು. 6 ದಿನವನ್ನು ಗಣ್ಯಮಾಡುವವನು ಕರ್ತನಿಗಾಗಿ ಅದನ್ನು ಗಣ್ಯಮಾಡುತ್ತಾನೆ. ತಿನ್ನುವವನು ಕರ್ತನಿಗಾಗಿ ತಿನ್ನುತ್ತಾನೆ; ಅವನು ದೇವಸ್ತೋತ್ರ ಮಾಡುತ್ತಾನಲ್ಲಾ. ತಿನ್ನದವನು ಸಹ ಕರ್ತನಿಗಾಗಿಯೇ ತಿನ್ನದೆ ದೇವಸ್ತೋತ್ರ ಮಾಡುತ್ತಾನೆ. 7 ನಮ್ಮಲ್ಲಿ ಒಬ್ಬನಾದರೂ ತನಗಾಗಿ ಬದುಕುವದೂ ಇಲ್ಲ, ತನಗಾಗಿ ಸಾಯುವದೂ ಇಲ್ಲ. 8 ನಾವು ಬದುಕಿದರೆ ಕರ್ತನಿಗಾಗಿ ಬದುಕುತ್ತೇವೆ; ಸತ್ತರೆ ಕರ್ತನಿಗಾಗಿ ಸಾಯುತ್ತೇವೆ; ಬದುಕಿದರೂ ಸತ್ತರೂ ನಾವು ಕರ್ತನವರೇ. 9 ಯಾಕಂದರೆ ಸತ್ತವರಿಗೂ ಜೀವಿಸುವವರಿಗೂ ಒಡೆಯನಾಗಿರಬೇಕೆಂತಲೇ ಕ್ರಿಸ್ತನು ಸತ್ತು ಜೀವಿತನಾದನು. 10 ತಿನ್ನದವನೇ, ನಿನ್ನ ಸಹೋದರನ ವಿಷಯವಾಗಿ ನೀನು ತೀರ್ಪುಮಾಡುವದೇನು? ತಿನ್ನುವವನೇ, ನಿನ್ನ ಸಹೋದರನನ್ನು ನೀನು ಹೀನೈಸುವದೇನು? ನಾವೆಲ್ಲರೂ ದೇವರ ನ್ಯಾಯಸ್ಥಾನದ ಮುಂದೆ ನಿಲ್ಲಬೇಕಲ್ಲಾ.

11 ನನ್ನ ಜೀವದಾಣೆ, ಎಲ್ಲರೂ ನನಗೆ ಅಡ್ಡಬೀಳುವರು,
ಎಲ್ಲರೂ ನನ್ನನ್ನೇ ದೇವರೆಂದು ಪ್ರತಿಜ್ಞೆಮಾಡುವರು
ಎಂಬದಾಗಿ ಕರ್ತನು ಹೇಳಿದ್ದಾನೆ[1]

[1] ಯೆಶಾಯ ೪೫, ೨೩.

12 ಎಂದು ಬರೆದದೆ. ಹೀಗಿರಲಾಗಿ ನಮ್ಮಲ್ಲಿ ಪ್ರತಿಯೊಬ್ಬನು ತನ್ನ ತನ್ನ ವಿಷಯವಾಗಿ ದೇವರ ಮುಂದೆ ಉತ್ತರ ಕೊಡಬೇಕು.

13 ಆದಕಾರಣ ಇನ್ನು ಮೇಲೆ ಒಬ್ಬೊಬ್ಬರ ವಿಷಯವಾಗಿ ತೀರ್ಪು ಮಾಡದೆ ಇರೋಣ. ಸಹೋದರನ ಎದುರಿಗೆ ಅಡ್ಡಿಯನ್ನಾಗಲಿ ಎಡತಡೆಯನ್ನಾಗಲಿ ಹಾಕಬಾರದೆಂದು ತೀರ್ಮಾ
14 ನಿಸಿಕೊಳ್ಳಿರಿ. ಯಾವ ಪದಾರ್ಥವೂ ಸ್ವತಃ ಅಶುದ್ಧವಾದದ್ದಲ್ಲವೆಂದು ಬಲ್ಲೆನು, ಮತ್ತು ಕರ್ತನಾದ ಯೇಸುವಿನಲ್ಲಿದ್ದುಕೊಂಡು ದೃಢವಾಗಿ ನಂಬಿದ್ದೇನೆ; ಆದರೆ ಯಾವದಾದರೂ ಒಂದು ಪದಾರ್ಥವನ್ನು ಅಶುದ್ಧವೆಂದು ಒಬ್ಬನು ಭಾವಿಸಿದರೆ, ಅವನಿಗೆ ಅದು ಅಶುದ್ಧ.

15 ನೀನು ತಕ್ಕೊಳ್ಳುವ ಆಹಾರದಿಂದ ನಿನ್ನ ಸಹೋದರನ ಮನಸ್ಸಿಗೆ ನೋವಾದರೆ, ನೀನು ಪ್ರೀತಿಗೆ ತಕ್ಕಂತೆ ಇನ್ನು ನಡೆದವನಲ್ಲ. ಯಾವನಿಗೋಸ್ಕರ ಕ್ರಿಸ್ತನು ಪ್ರಾಣ ಕೊಟ್ಟನೋ ಅವನನ್ನು ನಿನಗೆ ಇಷ್ಟವಾದ ಆಹಾರದ ನಿಮಿತ್ತ ಕೆಡಿಸಬಾರದು.
16, 17 ನಿಮಗಿರುವ ಮೇಲು ದೂಷಣೆಗೆ ಆಸ್ಪದವಾಗಬಾರದು. ಯಾಕಂದರೆ ತಿನ್ನುವದೂ ಕುಡಿಯುವದೂ ದೇವರ ರಾಜ್ಯವಲ್ಲ; ನೀತಿಯೂ ಸಮಾಧಾನವೂ ಪವಿತ್ರಾತ್ಮನಿಂದಾ
18 ಗುವ ಆನಂದವೂ ಆಗಿದೆ. ಈ ಪ್ರಕಾರವಾಗಿ ಕ್ರಿಸ್ತನ ಸೇವೆಯನ್ನು ಮಾಡುವವನು ದೇವರಿಗೆ ಮೆಚ್ಚಿಕೆಯಾದವನಾಗಿಯೂ ಮನುಷ್ಯರಿಗೆ ಸಂಭಾವಿತನಾಗಿಯೂ ಇರುವನಷ್ಟೆ.
19 ಆದದರಿಂದ ನಾವು ಸಮಾಧಾನಕ್ಕೂ ಪರಸ್ಪರ ಭಕ್ತಿವೃದ್ಧಿಗೂ ಅನುಕೂಲವಾಗಿರುವವು
20 ಗಳನ್ನು ಸಾಧಿಸಿಕೊಳ್ಳೋಣ. ದೇವರು ಕಟ್ಟಿದ್ದನ್ನು ನೀನು ಆಹಾರ ನಿಮಿತ್ತವಾಗಿ ಕೆಡವಬೇಡ. ಎಲ್ಲಾ ಪದಾರ್ಥಗಳೂ ಶುದ್ಧವೇ; ಆದರೆ ತಿಂದು ಮತ್ತೊಬ್ಬರಿಗೆ ವಿಘ್ನ
21 ವನ್ನುಂಟುಮಾಡುವದು ಕೆಟ್ಟದ್ದು. ಮಾಂಸತಿನ್ನುವದನ್ನಾಗಲಿ ದ್ರಾಕ್ಷಾರಸಕುಡಿಯುವದನ್ನಾಗಲಿ ನಿನ್ನ ಸಹೋದರನಿಗೆ ಅಡ್ಡಿಯನ್ನುಂಟುಮಾಡುವ ಬೇರೆ ಯಾವದನ್ನಾಗಲಿ
22 ಬಿಟ್ಟುಬಿಡುವದೇ ಒಳ್ಳೇದು. ನಿನಗಿರುವ ನಂಬಿಕೆಯು ದೇವರಿಗೆ ಮಾತ್ರ ಗೋಚರವಾಗಿ ನಿನ್ನ ಮಟ್ಟಿಗೇ ಇರಲಿ. ತಾನು ಒಪ್ಪಿದ ಕೆಲಸದ ವಿಷಯದಲ್ಲಿ ಇದು
23 ಸರಿಯೋ ಸರಿಯಲ್ಲವೋ ಎಂದು ಸಂಶಯಪಡದವನೇ ಧನ್ಯನು. ಸಂಶಯಪಟ್ಟು ಉಣ್ಣುವವನು ಸಂಶಯದಿಂದ ಉಣ್ಣುವ ಕಾರಣ ದೋಷಿಯಾಗಿದ್ದಾನೆ. ಯಾವದಕ್ಕೆ ನಂಬಿಕೆಯು ಆಧಾರವಿಲ್ಲವೋ ಅದು ಪಾಪ[1].

**15** ದೃಢವಾದ ನಂಬಿಕೆಯುಳ್ಳ ನಾವು ನಮ್ಮ ಸುಖವನ್ನು ನೋಡಿಕೊಳ್ಳದೆ ದೃಢವಿಲ್ಲದವರ
2 ಅನುಮಾನಗಳನ್ನು ಸಹಿಸಿಕೊಳ್ಳಬೇಕು. ನಮ್ಮಲ್ಲಿ ಪ್ರತಿಯೊಬ್ಬನು ತನ್ನ ನೆರೆಯವನ ಹಿತವನ್ನೂ ಭಕ್ತಿವೃದ್ಧಿಯನ್ನೂ ಅಪೇಕ್ಷಿಸುವವನಾಗಿ ಅವನ ಸುಖವನ್ನು ನೋಡಿಕೊಳ್ಳಲಿ.
3 ಯಾಕಂದರೆ ಕ್ರಿಸ್ತನು ಸಹ ತನ್ನ ಸುಖವನ್ನು ನೋಡಿಕೊಳ್ಳಲಿಲ್ಲ. ದೇವರೇ, ನಿನ್ನನ್ನು ನಿಂದಿಸಿದವರ ನಿಂದೆಗಳು ನನ್ನ ಮೇಲೆ ಬಿದ್ದವು ಎಂಬದಾಗಿ[2] ಬರೆದಿರುವಂತೆ
4 ಆತನಿಗೆ ಸಂಭವಿಸಿತಲ್ಲಾ. ಪೂರ್ವದಲ್ಲಿ ಬರೆದದ್ದೆಲ್ಲಾ ನಮ್ಮನ್ನು ಉಪದೇಶಿಸುವದಕ್ಕಾಗಿ ಬರೆಯಲ್ಪಟ್ಟಿತು. ನಾವು ಓದಿ ಸ್ಥಿರಚಿತ್ತವನ್ನೂ ಆದರಣೆಯನ್ನೂ ಹೊಂದಿ ಪೂರಾ
5 ರಕ್ಷಣೆಯನ್ನು ನಿರೀಕ್ಷಿಸುತ್ತಾ ಇರುವಂತೆ ಆ ಗ್ರಂಥಗಳು ಬರೆಯಲ್ಪಟ್ಟವು. ಆ ಸ್ಥಿರಚಿತ್ತ

---

[1] ಅಥವಾ, ಸಂಶಯಪಟ್ಟು ಮಾಡುವದೆಲ್ಲಾ ಪಾಪವೇ. [2] ಕೀರ್ತನೆ ೬೯, ೯.

ವನ್ನೂ ಆದರಣೆಯನ್ನೂ ಕೊಡುವ ದೇವರು ನೀವು ಕ್ರಿಸ್ತ ಯೇಸುವನ್ನು ಅನುಸರಿಸಿ ಒಂದೇ ಮನಸ್ಸುಳ್ಳವರಾಗಿರುವಂತೆ ನಿಮಗೆ ದಯಪಾಲಿಸಲಿ. 6 ಹೀಗೆ ನೀವು ಏಕಮನಸ್ಸಿನಿಂದ ಒಮ್ಮುಖವಾಗಿ ನಮ್ಮ ಕರ್ತನಾದ ಯೇಸು ಕ್ರಿಸ್ತನ ತಂದೆಯಾದ ದೇವರನ್ನು ಕೊಂಡಾಡುವಿರಿ.

7 ಆದದರಿಂದ ಕ್ರಿಸ್ತನು ನಿಮ್ಮನ್ನು ಸೇರಿಸಿಕೊಂಡಂತೆ ನೀವು ಸಹ ಒಬ್ಬರನ್ನೊಬ್ಬರು ಸೇರಿಸಿಕೊಂಡು ದೇವರ ಮಹಿಮೆಯನ್ನು ಪ್ರಕಾಶಪಡಿಸಿರಿ. 8 ಯಾಕಂದರೆ ನಾನು ಹೇಳುವದೇನಂದರೆ—ಕ್ರಿಸ್ತನು ಪಿತೃಗಳಿಗೆ ಉಂಟಾದ ದೇವರ ವಾಗ್ದಾನಗಳನ್ನು ದೃಢಪಡಿಸಿ ಆತನ ಸತ್ಯವನ್ನು ತೋರಿಸುವದಕ್ಕಾಗಿ ಸುನ್ನತಿಯೆಂಬ ಸಂಸ್ಕಾರಕ್ಕೆ ಒಳಗಾದನು; 9 ಜನಾಂಗಗಳಾದರೆ ಕಾರುಣ್ಯದ ನಿಮಿತ್ತ ದೇವರನ್ನು ಕೊಂಡಾಡುತ್ತಾರೆಂಬುವದೇ. ಇದಕ್ಕೆ ಸರಿಯಾಗಿ ಶಾಸ್ತ್ರದಲ್ಲಿಯೂ ಬರೆದದೆ. ಹ್ಯಾಗಂದರೆ—

> ನಾನು ಈ ಕಾರಣದಿಂದ ಅನ್ಯಜನರ ಮುಂದೆಯೂ ನಿನ್ನನ್ನು ಸ್ತುತಿಸಿ,
> ನಿನ್ನ ಹೆಸರಿಗೆ ಕೀರ್ತನೆಯನ್ನು ಹಾಡುವೆನು[1]

10 ಎಂದೂ; ಇನ್ನೊಂದು ಸ್ಥಳದಲ್ಲಿ—

> ಅನ್ಯಜನರೇ, ದೇವರ ಜನರೊಡನೆ ಉಲ್ಲಾಸಪಡಿರಿ[2]

11 ಎಂದೂ; ಬೇರೊಂದು ಸ್ಥಳದಲ್ಲಿ—

> ಎಲೈ, ಸಕಲ ಅನ್ಯಜನರೇ, ಕರ್ತನನ್ನು ಸ್ತುತಿಸಿರಿ,
> ಎಲ್ಲಾ ದೇಶಸ್ಥರೂ ಆತನನ್ನು ಸಂಕೀರ್ತಿಸಲಿ[3]

12 ಎಂದೂ ಬರೆದದೆ. ಮತ್ತೊಂದು ಸ್ಥಳದಲ್ಲಿ ಯೆಶಾಯನು ಹೇಳುವದೇನಂದರೆ—

> ಇಶಾಯನ ವಂಶದಲ್ಲಿ ಹುಟ್ಟಬೇಕಾದವನು,
> ಅಂದರೆ ಅನ್ಯಜನಗಳನ್ನು ಆಳತಕ್ಕವನು, ಬರುತ್ತಾನೆ.
> ಅನ್ಯಜನಗಳು ಆತನನ್ನು ನಿರೀಕ್ಷಿಸುತ್ತಿರುವರು[4].

13 ನಮ್ಮ ನಿರೀಕ್ಷೆಗೆ ಮೂಲಕಾರಣನಾದ ದೇವರು ನಂಬಿಕೆಯಿಂದುಂಟಾಗುವ ಸಂತೋಷವನ್ನೂ ಮನಶ್ಶಾಂತಿಯನ್ನೂ ನಿಮಗೆ ಪರಿಪೂರ್ಣವಾಗಿ ದಯಪಾಲಿಸಿ ನೀವು ಪವಿತ್ರಾತ್ಮನ ಬಲಗೂಡಿದವರಾಗಿ ನಿರೀಕ್ಷೆಯಲ್ಲಿ ಅಭಿವೃದ್ಧಿಯನ್ನು ಹೊಂದುವಂತೆ ಅನುಗ್ರಹಿಸಲಿ.

ಪೌಲನು ತನ್ನ ಹಿಂದಿನ ಕೆಲಸವನ್ನು ಸಂಕ್ಷೇಪವಾಗಿ ತಿಳಿಸಿ, ತಾನು ರೋಮಾಪುರಕ್ಕೆ ಬರಬೇಕೆಂಬ ಅಭಿಪ್ರಾಯವನ್ನು ಸೂಚಿಸಿ, ಸಭೆಯವರ ಪ್ರಾರ್ಥನೆ ಕೇಳಿಕೊಳ್ಳುತ್ತಾನೆ.

14 ನನ್ನ ಸಹೋದರರೇ, ನೀವಂತೂ ಒಳ್ಳೇತನದಿಂದ ಭರಿತರಾಗಿಯೂ ಸಕಲ ಜ್ಞಾನದಿಂದ ತುಂಬಿದವರಾಗಿಯೂ ಒಬ್ಬರಿಗೊಬ್ಬರು ಬುದ್ಧಿಹೇಳುವದಕ್ಕೆ ಶಕ್ತರಾಗಿಯೂ ಇದ್ಧೀರೆಂದು ನಿಮ್ಮ ವಿಷಯದಲ್ಲಿ ನನಗೂ ಗೊತ್ತಿದೆ. 15 ಆದಾಗ್ಯೂ ನಿಮಗೆ ಜ್ಞಾಪಕಕೊಡಬೇಕೆಂದು ಅಲ್ಲಲ್ಲಿ ಹೆಚ್ಚಾದ ಧೈರ್ಯದಿಂದ ಬರೆದಿದ್ದೇನೆ. 16 ಯಾಕಂದರೆ ನಾನು ಅನ್ಯಜನರಿಗೋಸ್ಕರ ಯೇಸು ಕ್ರಿಸ್ತನ ಸೇವಕನಾಗುವದಕ್ಕೆ ದೇವರು ನನಗೆ ಕಾರ್ಯಭಾರವನ್ನು ಅನುಗ್ರಹಿಸಿ

[1] ಕೀರ್ತನೆ ೧೮, ೪೯. [2] ದ್ವಿತೀಯ ನ್ಯಾಯ ೩೨, ೪೩. [3] ಕೀರ್ತನೆ ೧೧೭, ೧. [4] ಯೆಶಾಯ ೧೧, ೧೦.

ದ್ಧಾನೆ. ನಾನು ದೇವರ ಸುವಾರ್ತೆಯ ಸೇವೆಯನ್ನು ಯಾಜಕಸೇವೆ ಎಂಬಂತೆ ನಡಿಸಿ,
17 ಅನ್ಯದೇಶಸ್ಥರೆಂಬ ಕಾಣಿಕೆಯು ಪವಿತ್ರಾತ್ಮನ ಮೂಲಕವಾಗಿ ಪವಿತ್ರವಾಗಿದ್ದು ದೇವರಿಗೆ ಸಮರ್ಪಕವಾಗುವಂತೆ ಯತ್ನೈಸುವವನಾಗಿದ್ದೇನೆ. ದೇವರ ಸೇವೆಯಲ್ಲಿ ಹೊಗಳಿಕೊಳ್ಳು
18 ವದಕ್ಕೆ ಕ್ರಿಸ್ತ ಯೇಸುವಿನಲ್ಲಿ ನನಗೆ ಕಾರಣವುಂಟು. ಕ್ರಿಸ್ತನು ಅನ್ಯಜನಗಳನ್ನು ತನಗೆ ಅಧೀನಮಾಡಿಕೊಳ್ಳುವದಕ್ಕಾಗಿ ನನ್ನ ಕೈಯಿಂದ ಮಾತಿನಲ್ಲಿಯೂ ಕ್ರಿಯೆಯಲ್ಲಿಯೂ ಸೂಚಕಕಾರ್ಯ ಅದ್ಭುತಕಾರ್ಯಗಳ ಬಲದಿಂದಲೂ ಪವಿತ್ರಾತ್ಮನ ಬಲದಿಂದಲೂ ಮಾಡಿಸಿದ ಕಾರ್ಯಗಳನ್ನೇ ಹೊರತು ಬೇರೆ ಯಾವ ಕಾರ್ಯಗಳನ್ನೂ ಹೇಳುವದಕ್ಕೆ
19 ನನಗೆ ಧೈರ್ಯಸಾಲದು. ನಾನು ಯೆರೂಸಲೇಮ್ ಮೊದಲುಗೊಂಡು ಇಲ್ಲುರಿಕ ಸೀಮೆಯ ಪರ್ಯಂತರಕ್ಕೂ ಸುತ್ತಿ ಕ್ರಿಸ್ತನ ಸುವಾರ್ತೆಯ ಸಾರೋಣವನ್ನು ನೆರವೇರಿಸಿ
20 ದ್ದೇನೆ. ಮತ್ತೊಬ್ಬರು ಹಾಕಿದ ಅಸ್ತಿವಾರದ ಮೇಲೆ ಕಟ್ಟಬಾರದೆಂದು ಮನಸ್ಸಿನಲ್ಲಿ ನೆನಸಿ ಇತರರು ಕ್ರಿಸ್ತನ ಹೆಸರನ್ನು ತಿಳಿಸಿದ ಕಡೆಯಲ್ಲಿ ಸುವಾರ್ತೆಯನ್ನು ಪ್ರಕಟಿಸುವದಿಲ್ಲ ವೆಂಬದಾಗಿ ನಿಷ್ಕರ್ಷೆಮಾಡಿಕೊಂಡೆನು.

21 ಯಾರಿಗೆ ಆತನ ಸಮಾಚಾರ ಬಂದಿರಲಿಲ್ಲವೋ, ಅವರೇ ಆತನನ್ನು ಕಾಣುವರು;
ಯಾರು ಆತನ ವರ್ತಮಾನವನ್ನು ಕೇಳಿರಲಿಲ್ಲವೋ, ಅವರೇ ತಿಳುಕೊಳ್ಳುವರು[1]

ಎಂಬದಾಗಿ ಬರೆದಿರುವ ಪ್ರಕಾರ ನನ್ನ ಕೆಲಸವನ್ನು ನಡಿಸಿದ್ದೇನೆ.

22 ಈ ಕಾರಣದಿಂದ ನಿಮ್ಮ ಬಳಿಗೆ ಬರುವದಕ್ಕೆ ನನಗೆ ಅನೇಕಾವರ್ತಿ ಅಭ್ಯಂತರವಾ
23 ಯಿತು. ಆದರೆ ಇನ್ನು ಮೇಲೆ ಈ ಪ್ರಾಂತ್ಯಗಳಲ್ಲಿ ನನಗೆ ಅನುಕೂಲವಿಲ್ಲದ್ದರಿಂದಲೂ ನಿಮ್ಮ ಬಳಿಗೆ ಬರುವದಕ್ಕೆ ಅನೇಕ ವರುಷದಿಂದ ಅಭಿಲಾಷೆ ಇರುವದರಿಂದಲೂ ನಾನು
24 ಸ್ಪೇನ್ ದೇಶಕ್ಕೆ ಹೋಗುವಾಗ ನನ್ನ ಮಾರ್ಗದಲ್ಲಿ ನಿಮ್ಮ ದರ್ಶನವನ್ನು ಮಾಡಬೇಕೆಂಬ ಅಭಿಪ್ರಾಯ ಉಂಟು. ತರುವಾಯ ನಿಮ್ಮ ಸಹವಾಸದಲ್ಲಿ ನನಗೆ ಸ್ವಲ್ಪಮಟ್ಟಿಗೆ ಸಂತೃಪ್ತಿ ಯಾದ ಮೇಲೆ ನೀವು ಆ ದೇಶಕ್ಕೆ ನನ್ನ ಪ್ರಯಾಣವನ್ನು ಸಾಗಿಸುವಿರೆಂದು ನಂಬುತ್ತೇನೆ.
25 ಆದರೆ ಈಗ ನಾನು ದೇವಜನರಿಗೆ ಒಂದು ಧರ್ಮಕಾರ್ಯವನ್ನು ಮಾಡುವವನಾಗಿ
26 ಯೆರೂಸಲೇಮಿಗೆ ಹೋಗುತ್ತೇನೆ. ಯಾಕಂದರೆ ಯೆರೂಸಲೇಮಿನಲ್ಲಿರುವ ದೇವಜನ ರೊಳಗೆ ಬಡವರಿಗೋಸ್ಕರ ಸ್ವಲ್ಪ ಹಣದ ಸಹಾಯವನ್ನು ಮಾಡಬೇಕೆಂಬದಾಗಿ ಮಕೆ
27 ದೋನ್ಯ ಅಖಾಯ ಸೀಮೆಗಳವರು ಇಷ್ಟಪಟ್ಟಿದ್ಧಾರೆ. ಇದನ್ನು ಮಾಡುವದಕ್ಕೆ ಇವರು ಇಷ್ಟಪಟ್ಟದ್ದಲ್ಲದೆ ಇವರು ಅವರ ಹಂಗಿನವರಾಗಿದ್ಧಾರೆ. ಹ್ಯಾಗಂದರೆ ಅನ್ಯಜನರು ಅವರ ಆತ್ಮಸಂಬಂಧವಾದ ಸಂಪತ್ತಿಗೆ ಪಾಲುಗಾರರಾದ ಮೇಲೆ, ಲೋಕಸಂಬಂಧವಾದ
28 ಕಾರ್ಯಗಳಲ್ಲಿ ಅವರಿಗೆ ಸೇವೆಮಾಡುವ ಹಂಗಿನಲ್ಲಿದ್ಧಾರಲ್ಲವೇ? ನಾನು ಈ ಕೆಲಸವನ್ನು ತೀರಿಸಿಕೊಂಡು ಈ ಪ್ರೀತಿಯ ಫಲವನ್ನು ಅಲ್ಲಿಯವರ ವಶಕ್ಕೆ ಯಥಾಕ್ರಮವಾಗಿ
29 ಕೊಟ್ಟ ಮೇಲೆ ನಿಮ್ಮ ಮಾರ್ಗವಾಗಿ ಸ್ಪೇನ್ ದೇಶಕ್ಕೆ ಹೋಗುವೆನು. ಇದಲ್ಲದೆ ನಿಮ್ಮ ಬಳಿಗೆ ಬರುವಾಗ ಕ್ರಿಸ್ತನಿಂದಾಗುವ ವರಗಳನ್ನು ಹೇರಳವಾಗಿ ತರುವೆನೆಂದು ಬಲ್ಲೆನು.

---

[1] ಯೆಶಾಯ ೫೨, ೧೫.

ಸಹೋದರರೇ, ನೀವು ನನಗೋಸ್ಕರ ದೇವರ ಮುಂದೆ ಮಾಡುವ ಪ್ರಾರ್ಥನೆಗಳಲ್ಲಿ 30 ನನ್ನೊಂದಿಗೆ ಬಲೀಯವಾಗಿ ವಿಜ್ಞಾಪಿಸಿಕೊಳ್ಳಬೇಕೆಂದು ನಮ್ಮ ಕರ್ತನಾದ ಯೇಸು ಕ್ರಿಸ್ತನ ನಿಮಿತ್ತವಾಗಿಯೂ ಪವಿತ್ರಾತ್ಮನಿಂದಾಗುವ ಪ್ರೀತಿಯ ನಿಮಿತ್ತವಾಗಿಯೂ ನಿಮ್ಮನ್ನು ಬೇಡಿಕೊಳ್ಳುತ್ತೇನೆ. ದೇವರು ನನ್ನನ್ನು ಯೂದಾಯದಲ್ಲಿರುವ ಅವಿಧೇಯರ 31 ಕೈಗೆ ತಪ್ಪಿಸಬೇಕೆಂತಲೂ ಯೆರೂಸಲೇಮಿಗೋಸ್ಕರ ನಾನು ಮಾಡುವಂಥ ಈ ಧರ್ಮ ಕಾರ್ಯವು ಅಲ್ಲಿರುವ ದೇವಜನರಿಗೆ ಹಿತಕರವಾಗಿ ತೋರಬೇಕೆಂತಲೂ ಪ್ರಾರ್ಥಿಸಿರಿ. ಹೀಗೆ ನಾನು ದೇವರ ಚಿತ್ತಾನುಸಾರ ಆನಂದವುಳ್ಳವನಾಗಿ ನಿಮ್ಮಲ್ಲಿಗೆ ಬಂದು ನಿಮ್ಮ 32 ಸಂಗಡ ವಿಶ್ರಾಂತಿ ಹೊಂದಲಾಗುವದು. ಶಾಂತಿದಾಯಕನಾದ ದೇವರು ನಿಮ್ಮೆಲ್ಲ 33 ರೊಂದಿಗಿರಲಿ. ಆಮೆನ್.

ಶಿಫಾರಸೂ, ವಂದನೆಗಳೂ, ಎಚ್ಚರಿಕೆಯೂ.

**16** ನಾನು ನಿಮ್ಮ ಬಳಿಗೆ ಕಳುಹಿಸುವ ನಮ್ಮ ಸಹೋದರಿಯಾದ ಫೊಯಿಬೆಯನ್ನು ಪ್ರೀತಿ ಯಿಂದ ಅಂಗೀಕರಿಸಿರಿ. ಆಕೆಯು ಕೆಂಕ್ರೆಯ ಪಟ್ಟಣದಲ್ಲಿರುವ ಸಭೆಯ ಸೇವಕಳಾಗಿ ದ್ದಾಳೆ. ನೀವು ಆಕೆಯನ್ನು ಕರ್ತನ ಶಿಷ್ಯಳೆಂದು ದೇವಜನರಿಗೆ ತಕ್ಕ ಹಾಗೆ ಸೇರಿಸಿ 2 ಕೊಂಡು, ಸಹಾಯವು ಯಾವ ವಿಷಯದಲ್ಲಿ ಬೇಕಾಗಿದ್ದರೂ ಸಹಾಯವನ್ನು ಮಾಡಿರಿ. ಆಕೆಯು ನನಗೂ ಅನೇಕರಿಗೂ ಸಹಾಯ ಮಾಡಿದವಳು.

ಕ್ರಿಸ್ತ ಯೇಸುವಿನ ಸೇವೆಯಲ್ಲಿ ನನ್ನ ಜೊತೆಕೆಲಸದವರಾದ ಪ್ರಿಸ್ಕಳಿಗೂ ಅಕ್ವಿಲನಿಗೂ 3 ನನ್ನ ವಂದನೆಗಳನ್ನು ಹೇಳಿರಿ. ಅವರು ನನ್ನ ಪ್ರಾಣದ ಸಂರಕ್ಷಣೆಗಾಗಿ ತಮ್ಮ ಪ್ರಾಣ 4 ಗಳನ್ನು ಅಪಾಯಕ್ಕೆ ಗುರಿಮಾಡಿದರು. ನಾನು ಮಾತ್ರವೇ ಅಲ್ಲ, ಅನ್ಯಜನರ ಸಭೆಗಳವ ರೆಲ್ಲರೂ ಅವರ ಉಪಕಾರವನ್ನು ಸ್ಮರಿಸುತ್ತಾರೆ. ಅವರ ಮನೆಯಲ್ಲಿ ಕೂಡುವ ಸಭೆಗೆ 5 ಸಹ ನನ್ನ ವಂದನೆಯನ್ನು ಹೇಳಿರಿ. ಆಸ್ಯ ಸೀಮೆಯಲ್ಲಿ ಕ್ರಿಸ್ತನಿಗೆ ಪ್ರಥಮ ಫಲವಾಗಿ ರುವ ನನ್ನ ಪ್ರಿಯನಾದ ಎಪೈನೆತನಿಗೆ ವಂದನೆ. ನಿಮಗೋಸ್ಕರ ಬಹು ಶ್ರಮೆಪಟ್ಟ 6 ಮರಿಯಳಿಗೆ ವಂದನೆ. ನನ್ನ ಸ್ವಜನರೂ ಜೊತೆಸೆರೆಯವರೂ ಆಗಿರುವ ಅಂದ್ರೋನಿಕ 7 ನಿಗೂ ಯೂನ್ಯನಿಗೂ ವಂದನೆ; ಅವರು ಅಪೊಸ್ತಲರಲ್ಲಿ ಪ್ರಸಿದ್ಧರಾಗಿದ್ದಾರೆ, ಮತ್ತು ನನ ಗಿಂತ ಮುಂಚೆ ಕ್ರಿಸ್ತನನ್ನು ನಂಬುವವರಾದರು. ಕರ್ತನಲ್ಲಿ ನನ್ನ ಪ್ರಿಯನಾದ ಅಂಪ್ಲಿ 8 ಯಾತನಿಗೆ ವಂದನೆ. ಕ್ರಿಸ್ತನ ಸೇವೆಯಲ್ಲಿ ನಮ್ಮ ಜೊತೆಕೆಲಸದವನಾದ ಉರ್ಬಾನನಿಗೂ 9 ನನ್ನ ಪ್ರಿಯನಾದ ಸ್ತಾಖುನಿಗೂ ವಂದನೆಗಳು. ಕ್ರಿಸ್ತನ ಸೇವೆಯಲ್ಲಿ ಪರಿಶೋಧಿತನಾದ 10 ಅಪೆಲ್ಲನಿಗೆ ವಂದನೆ. ಅರಿಸ್ತೊಬೂಲನ ಮನೆಯವರಿಗೆ ವಂದನೆಗಳು. ನನ್ನ ಸ್ವಜನ 11 ದವನಾದ ಹೆರೊಡಿಯೋನನಿಗೆ ವಂದನೆ. ನಾರ್ಕಿಸ್ಸನ ಮನೆಯವರೊಳಗೆ ಕ್ರಿಸ್ತನನ್ನು ನಂಬಿದವರಿಗೆ ವಂದನೆಗಳು. ಕರ್ತನ ಸೇವೆಯಲ್ಲಿ ಪ್ರಯಾಸಪಟ್ಟವರಾದ ತ್ರುಫೈನಳಿಗೂ 12 ತ್ರುಫೋಸಳಿಗೂ ವಂದನೆಗಳು. ಕರ್ತನ ಸೇವೆಯಲ್ಲಿ ಬಹಳವಾಗಿ ಪ್ರಯಾಸಪಟ್ಟಿರುವ ಪ್ರಿಯ ಪೆರ್ಸಿಸಳಿಗೆ ವಂದನೆ. ಕರ್ತನ ಭಕ್ತರಲ್ಲಿ ಪ್ರಸಿದ್ಧನಾದ ರೂಫನಿಗೂ ನನಗೆ 13 ತಾಯಿಯಂತಿರುವ ಅವನ ತಾಯಿಗೂ ವಂದನೆಗಳು. ಅಸುಂಕ್ರಿತನಿಗೂ ಫ್ಲೆಗೋನನಿಗೂ 14

ಹೆರ್ಮೇಯನಿಗೂ ಪತ್ರೋಬನಿಗೂ ಹೆರ್ಮಾನನಿಗೂ ಅವರೊಂದಿಗಿರುವ ಸಹೋದರರಿಗೂ
15 ವಂದನೆಗಳು. ಫಿಲೊಲೊಗನಿಗೂ ಯೂಲ್ಯಳಿಗೂ ನೇರ್ಯನಿಗೂ ಅವನ ತಂಗಿಗೂ
16 ಒಲುಂಪನಿಗೂ ಇವರೊಂದಿಗಿರುವ ದೇವಜನರೆಲ್ಲರಿಗೂ ವಂದನೆಗಳು. ಪವಿತ್ರವಾದ ಮುದ್ದಿಟ್ಟು ಒಬ್ಬರನ್ನೊಬ್ಬರು ವಂದಿಸಿರಿ. ಕ್ರಿಸ್ತನ ಸಭೆಗಳೆಲ್ಲಾ ನಿಮ್ಮನ್ನು ವಂದಿಸುತ್ತವೆ.
17 ಸಹೋದರರೇ, ನೀವು ಹೊಂದಿದ ಉಪದೇಶಕ್ಕೆ ವಿರುದ್ಧವಾಗಿ ಭೇದಗಳನ್ನೂ ವಿಘ್ನಗಳನ್ನೂ ನಿಮ್ಮಲ್ಲಿ ಉಂಟುಮಾಡುವವರನ್ನು ಗುರುತಿಟ್ಟು ಅವರನ್ನು ಬಿಟ್ಟು ತೊಲಗಿ
18 ಹೋಗಿರಿ ಎಂದು ನಿಮ್ಮನ್ನು ಬೇಡಿಕೊಳ್ಳುತ್ತೇನೆ. ಅಂಥವರು ನಮ್ಮ ಕರ್ತನಾದ ಕ್ರಿಸ್ತನ ಸೇವೆಯನ್ನು ಮಾಡದೆ ತಮ್ಮ ಹೊಟ್ಟೆಯ ಸೇವೆಯನ್ನೇ ಮಾಡುವವರಾಗಿ ನಯವಾದ ಮಾತುಗಳಿಂದಲೂ ಉಬ್ಬಿಸುವ ಮಾತುಗಳಿಂದಲೂ ನಿಷ್ಕಪಟಿಗಳ ಹೃದಯಗಳನ್ನು
19 ಮೋಸಗೊಳಿಸುತ್ತಾರೆ. ನಿಮ್ಮ ವಿಧೇಯತ್ವವು ಎಲ್ಲರಿಗೂ ಪ್ರಸಿದ್ಧವಾದ್ದರಿಂದ ಇದನ್ನು ಬರೆದಿದ್ದೇನೆ; ನಿಮ್ಮ ವಿಷಯದಲ್ಲಿ ಆನಂದಪಡುತ್ತೇನೆ. ನೀವು ಒಳ್ಳೇತನದ ವಿಷಯದಲ್ಲಿ ಜಾಣರೂ ಕೆಟ್ಟತನದ ವಿಷಯದಲ್ಲಿ ಕಳಂಕವಿಲ್ಲದವರೂ ಆಗಿರಬೇಕೆಂದು ಅಪೇಕ್ಷಿಸು
20 ತ್ತೇನೆ. ಶಾಂತಿದಾಯಕನಾದ ದೇವರು ಶೀಘ್ರವಾಗಿ ಸೈತಾನನನ್ನು ನಿಮ್ಮ ಕಾಲುಗಳ ಕೆಳಗೆ ಹಾಕಿ ತುಳಿಸಿಬಿಡುವನು.

ನಮ್ಮ ಕರ್ತನಾದ ಯೇಸು ಕ್ರಿಸ್ತನ ಕೃಪೆಯು ನಿಮ್ಮೊಂದಿಗಿರಲಿ[1].

21 ನನ್ನ ಜೊತೆಕೆಲಸದವನಾದ ತಿಮೊಥೆಯನೂ ನನ್ನ ಸ್ವಜನರಾದ ಲೂಕ್ಯನೂ ಯಾಸೋ
22 ನನೂ ಸೋಸಿಪತ್ರನೂ ನಿಮಗೆ ವಂದನೆಗಳನ್ನು ಹೇಳುತ್ತಾರೆ. ಈ ಪತ್ರಿಕೆಯನ್ನು ಬರೆದ
23 ತೆರ್ತ್ಯನೆಂಬ ನಾನು ನಿಮ್ಮನ್ನು ಕರ್ತನಲ್ಲಿ ವಂದಿಸುತ್ತೇನೆ. ನನಗೂ ಸಮಸ್ತ ಸಭೆಗೂ ಅತಿಥಿಸತ್ಕಾರವನ್ನು ಮಾಡುತ್ತಿರುವ ಗಾಯನು ನಿಮ್ಮನ್ನು ವಂದಿಸುತ್ತಾನೆ. ಈ ಪಟ್ಟಣದ ಖಜಾನೆಯ ಮೇಲ್ವಿಚಾರಕನಾಗಿರುವ ಎರಸ್ತನೂ ಸಹೋದರನಾದ ಕ್ವರ್ತನೂ ನಿಮಗೆ ವಂದನೆಗಳನ್ನು ಹೇಳುತ್ತಾರೆ.

### ದೇವಸ್ತೋತ್ರವಚನವು.

25-26 ಅನಾದಿಯಾಗಿ ಗುಪ್ತವಾಗಿದ್ದ ಮರ್ಮವು ಈಗ ಪ್ರಕಾಶಕ್ಕೆ ಬಂದು ನಿತ್ಯನಾದ ದೇವರ ಅಪ್ಪಣೆಯ ಪ್ರಕಾರ ಪ್ರವಾದಿಗಳ ಗ್ರಂಥಗಳ ಮೂಲಕ ಅನ್ಯಜನರೆಲ್ಲರಿಗೆ ನಂಬಿಕೆಯೆಂಬ ವಿಧೇಯತ್ವವನ್ನು ಉಂಟುಮಾಡುವದಕ್ಕೋಸ್ಕರ ತಿಳಿಸಲ್ಪಟ್ಟಿದೆ. ಪ್ರಕಾಶಕ್ಕೆ ಬಂದಿರುವ ಈ ಮರ್ಮಕ್ಕೆ ಅನುಸಾರ, ಅಂದರೆ ಯೇಸು ಕ್ರಿಸ್ತನ ವಿಷಯವಾದಂಥ ನಾನು ಸಾರುವಂಥ ಸುವಾರ್ತೆಗನುಸಾರ, ನಿಮ್ಮನ್ನು ಸ್ಥಿರಪಡಿಸುವದಕ್ಕೆ ಶಕ್ತನಾಗಿರುವ ಜ್ಞಾನ
27 ನಿಧಿಯಾದ ಒಬ್ಬನೇ ದೇವರಿಗೆ ಯೇಸು ಕ್ರಿಸ್ತನ ಮೂಲಕ ಸದಾಕಾಲವೂ ಸ್ತೋತ್ರವಾಗಲಿ. ಆಮೆನ್.

---

[1] ಕೆಲವು ಪ್ರಾಚೀನ ಪ್ರತಿಗಳಲ್ಲಿ ೨೦ನೇ ವಚನದ ಕಡೇ ಭಾಗವಿಲ್ಲ; ಆದರೆ ಅವುಗಳಲ್ಲಿ ೨೪ನೇ ವಚನವದೆ, ಏನಂದರೆ— ನಮ್ಮ ಕರ್ತನಾದ ಯೇಸು ಕ್ರಿಸ್ತನ ಕೃಪೆಯು ನಿಮ್ಮೊಂದಿಗಿರಲಿ. ಆಮೆನ್.

# THE FIRST EPISTLE OF SAINT PAUL TO THE CORINTHIANS

---

# ಪೌಲನು ಕೊರಿಂಥದವರಿಗೆ

ಬರೆದ

# ಮೊದಲನೇ ಪತ್ರಿಕೆ

---

### ಒಕ್ಕಣೆ.

ದೇವರ ಚಿತ್ತದಿಂದ ಯೇಸು ಕ್ರಿಸ್ತನ ಅಪೊಸ್ತಲನಾಗುವದಕ್ಕೆ ಕರೆಯಲ್ಪಟ್ಟ ಪೌಲನೂ 1
ಸಹೋದರನಾದ ಸೊಸ್ಥೆನನೂ ಕೊರಿಂಥದಲ್ಲಿನ ದೇವರ ಸಭೆಗೆ, ಅಂದರೆ ಕ್ರಿಸ್ತೇಸುವಿನಲ್ಲಿ 2
ಪ್ರತಿಷ್ಠಿತರಾಗಿಯೂ ದೇವಜನರಾಗುವದಕ್ಕೆ ಕರೆಯಲ್ಪಟ್ಟವರಾಗಿಯೂ ಇರುವವರಿಗೆ,
ಮತ್ತು ಯಾವ ಸ್ಥಳದಲ್ಲಾಗಲಿ ನಮಗೂ ಅವರಿಗೂ ಕರ್ತನಾಗಿರುವ ಯೇಸು ಕ್ರಿಸ್ತನ
ನಾಮಸ್ಮರಣೆಯನ್ನು ಮಾಡುವವರಿಗೆ, ಬರೆಯುವದೇನಂದರೆ—ನಮ್ಮ ತಂದೆಯಾಗಿರುವ 3
ದೇವರಿಂದಲೂ ಕರ್ತನಾದ ಯೇಸು ಕ್ರಿಸ್ತನಿಂದಲೂ ನಿಮಗೆ ಕೃಪೆಯೂ ಶಾಂತಿಯೂ
ಆಗಲಿ.

### ಪೌಲನು ಸಭೆಯವರ ವಿಷಯದಲ್ಲಿ ದೇವರಿಗೆ ಮಾಡಿದ ಕೃತಜ್ಞತಾಸ್ತುತಿ.

ಕ್ರಿಸ್ತ ಯೇಸುವಿನಲ್ಲಿ ದೇವರು ನಿಮಗೆ ಮಾಡಿದ ಕೃಪಾದಾನದ ನಿಮಿತ್ತ ನಾನು ನಿಮ್ಮ 4
ವಿಷಯದಲ್ಲಿ ಯಾವಾಗಲೂ ದೇವರನ್ನು ಕೊಂಡಾಡುತ್ತೇನೆ. ಯಾಕಂದರೆ ಕ್ರಿಸ್ತನ 5-6
ವಿಷಯವಾದ ಸಾಕ್ಷಿಯು ನಿಮ್ಮಲ್ಲಿ ದೃಢವಾಗಿ ನೆಲೆಗೊಂಡ ಕಾರಣ ನೀವು ಎಲ್ಲಾ ನುಡಿ
ಯಲ್ಲಿಯೂ ಎಲ್ಲಾ ತಿಳುವಿಕೆಯಲ್ಲಿಯೂ ಆತನಲ್ಲಿ ಸಮೃದ್ಧಿಹೊಂದಿದವರಾಗಿದ್ದೀರಿ.
ಹೀಗೆ ನೀವು ಯಾವ ಕೃಪಾವರದಲ್ಲಿಯೂ ಕೊರತೆಯಿಲ್ಲದವರಾಗಿ ನಮ್ಮ ಕರ್ತನಾದ 7
ಯೇಸು ಕ್ರಿಸ್ತನ ಪ್ರತ್ಯಕ್ಷತೆಯನ್ನು ಎದುರುನೋಡುತ್ತಾ ಇದ್ದೀರಿ. ನಮ್ಮ ಕರ್ತನಾದ 8
ಯೇಸು ಕ್ರಿಸ್ತನ ದಿನದಲ್ಲಿ ಯಾರೂ ನಿಮ್ಮ ಮೇಲೆ ತಪ್ಪು ಹೊರಿಸಲಾಗದಂತೆ ಆತನು
ನಿಮ್ಮನ್ನು ಕಡೇ ವರೆಗೂ ದೃಢಪಡಿಸುವನು. ದೇವರು ನಂಬಿಗಸ್ತನು; ನಮ್ಮ ಕರ್ತ 9
ನಾದ ಯೇಸು ಕ್ರಿಸ್ತನೆಂಬ ತನ್ನ ಮಗನ ಅನ್ಯೋನ್ಯತೆಗೆ ನಿಮ್ಮನ್ನು ಕರೆದವನು ಆತನೇ.

ಕೊರಿಂಥದವರು ಬೇರೆ ಬೇರೆ ಬೋಧಕರನ್ನು ಅನುಸರಿಸಿದ್ದರಿಂದ ಸಭೆಯಲ್ಲಿ ಉಂಟಾದ ಭೇದಗಳನ್ನು ಕುರಿತದ್ದು.
(1, 10—4, 20.)

10 ಸಹೋದರರೇ, ನಿಮ್ಮೆಲ್ಲರ ಮಾತು ಒಂದೇ ಆಗಿರಬೇಕು; ನಿಮ್ಮಲ್ಲಿ ಭೇದಗಳಿರ ಬಾರದು, ನೀವು ಒಂದೇ ಮನಸ್ಸೂ ಒಂದೇ ಅಭಿಪ್ರಾಯವೂ ಉಳ್ಳವರಾಗಿದ್ದು ಹೊಂದಿಕೆ ಯಿಂದಿರಬೇಕು ಎಂಬದಾಗಿ ನಾನು ನಮ್ಮ ಕರ್ತನಾದ ಯೇಸು ಕ್ರಿಸ್ತನ ಹೆಸರಿನಿಂದ
11 ನಿಮ್ಮನ್ನು ಪ್ರಬೋಧಿಸುತ್ತೇನೆ. ಯಾಕಂದರೆ, ನನ್ನ ಸಹೋದರರೇ, ನಿಮ್ಮಲ್ಲಿ ಜಗಳ ಗಳುಂಟೆಂದು ನಿಮ್ಮ ವಿಷಯವಾಗಿ ಖ್ಲೋಯೆಯ ಮನೆಯವರಿಂದ ನನಗೆ ತಿಳಿದು ಬಂತು.
12 ನಿಮ್ಮಲ್ಲಿ ಒಬ್ಬನು—ನಾನು ಪೌಲನವನು, ಮತ್ತೊಬ್ಬನು—ನಾನು ಅಪೊಲ್ಲೋಸನವನು, ಇನ್ನೊಬ್ಬನು—ನಾನು ಕೇಫನವನು, ಬೇರೊಬ್ಬನು—ನಾನು ಕ್ರಿಸ್ತನವನು ಎಂದು ಹೇಳಿ
13 ಕೊಳ್ಳುತ್ತಾರಂತೆ. ಕ್ರಿಸ್ತನು ವಿಭಾಗವಾಗಿದ್ದಾನೋ? ನಿಮಗೋಸ್ಕರ ಶಿಲುಬೆಗೆ ಹಾಕಿಸಿ ಕೊಂಡವನು ಪೌಲನೋ? ನೀವು ಪೌಲನ ಹೆಸರಿನಲ್ಲಿ ದೀಕ್ಷಾಸ್ನಾನ ಮಾಡಿಸಿಕೊಂಡಿ
14-15 ರೋ? ಪೌಲನ ಹೆಸರಿನಲ್ಲಿ ದೀಕ್ಷಾಸ್ನಾನ ಮಾಡಿಸಿಕೊಂಡಿರೆಂದು ಯಾರೂ ಹೇಳ ಬಾರದು. ಆದದರಿಂದ ನಿಮ್ಮಲ್ಲಿ ಕ್ರಿಸ್ಪನಿಗೂ ಗಾಯನಿಗೂ ಹೊರತಾಗಿ ಮತ್ತಾರಿಗೂ ನಾನು ದೀಕ್ಷಾಸ್ನಾನ ಮಾಡಿಸಲಿಲ್ಲವೆಂಬುವದಕ್ಕೆ ದೇವರಿಗೆ ಸ್ತೋತ್ರ ಮಾಡುತ್ತೇನೆ.
16 ಇದಲ್ಲದೆ ಸ್ತೆಫನನ ಮನೆಯವರಿಗೆ ಸಹ ದೀಕ್ಷಾಸ್ನಾನ ಮಾಡಿಸಿದೆನು. ಇವರಿಗಲ್ಲದೆ
17 ಇನ್ನಾರಿಗೂ ನಾನು ದೀಕ್ಷಾಸ್ನಾನ ಮಾಡಿಸಲಿಲ್ಲವೆಂದು ನೆನಸುತ್ತೇನೆ. ದೀಕ್ಷಾಸ್ನಾನ ಮಾಡಿಸಬೇಕೆಂತಲ್ಲ, ಸುವಾರ್ತೆಯನ್ನು ಸಾರಬೇಕೆಂತಲೇ ನನ್ನನ್ನು ಕ್ರಿಸ್ತನು ಕಳುಹಿಸಿ ದನು. ಆದರೆ ನಾನು ವಾಕ್ಚಾತುರ್ಯದಿಂದ ಅದನ್ನು ಸಾರುವದು ಯುಕ್ತವಲ್ಲ; ಹಾಗೆ ಸಾರಿದರೆ ಕ್ರಿಸ್ತನ ಶಿಲುಬೆಯಲ್ಲಿರುವ ಸ್ವಾರಸ್ಯವು ಕಾಣಬರುವದಿಲ್ಲ.

ಕ್ರಿಸ್ತನ ಸುವಾರ್ತೆಯು ಮಾನುಷಜ್ಞಾನಕ್ಕೆ ಅನುಸಾರವಾದದ್ದಲ್ಲ.

18 ಶಿಲುಬೆಯ ವಿಷಯವಾದ ಮಾತು ನಾಶನದ ಮಾರ್ಗದಲ್ಲಿರುವವರಿಗೆ ಹುಚ್ಚು ಮಾತಾಗಿದೆ, ರಕ್ಷಣೆಯ ಮಾರ್ಗದಲ್ಲಿರುವ ನಮಗೆ ದೇವರ ಶಕ್ತಿಯಾಗಿದೆ.

19 ಜ್ಞಾನಿಗಳ ಜ್ಞಾನವನ್ನು ನಾಶಮಾಡುವೆನು,
ವಿವೇಕಿಗಳ ವಿವೇಕವನ್ನು ನಿರಾಕರಿಸುವೆನು[1]

20 ಎಂಬದಾಗಿ ಶಾಸ್ತ್ರೋಕ್ತಿಯುಂಟಲ್ಲಾ. ಜ್ಞಾನಿಯು ಎಲ್ಲಿ? ಶಾಸ್ತ್ರಿಯೆಲ್ಲಿ? ಇಹಲೋಕದ ತರ್ಕವಾದಿ ಎಲ್ಲಿ? ದೇವರು ಇಹಲೋಕಜ್ಞಾನವನ್ನು ಹುಚ್ಚುತನವಾಗ ಮಾಡಿದ್ದಾನ
21 ಲ್ಲವೇ? ಹ್ಯಾಗಂದರೆ ದೇವರ ಜ್ಞಾನವನ್ನು ತೋರ್ಪಡಿಸುವ ಕಾರ್ಯಗಳಲ್ಲಿ[2] ಲೋಕವು ಜ್ಞಾನವೆನ್ನಿಸುವ ಮಾರ್ಗದಿಂದ ದೇವರನ್ನು ತಿಳುಕೊಳ್ಳದೆ ಹೋದ ಮೇಲೆ ಹುಚ್ಚುಮಾತು ಎನ್ನಿಸಿಕೊಳ್ಳುವ ನಮ್ಮ ಪ್ರಸಂಗದಿಂದಲೇ ನಂಬುವವರನ್ನು ರಕ್ಷಿಸುವದು ದೇವರಿಗೆ
22 ಒಳ್ಳೇದೆಂದು ತೋಚಿತು. ಯೆಹೂದ್ಯರು ಸೂಚಕಕಾರ್ಯಗಳನ್ನು ನೋಡಬೇಕೆಂದು

[1] ಯೆಶಾಯ ೨೯, ೧೪.
[2] ಮೂಲ: ದೇವರ ಜ್ಞಾನದಲ್ಲಿ.

ಕೇಳುತ್ತಾರೆ, ಗ್ರೀಕರು ಜ್ಞಾನವನ್ನು ಸಂಪಾದಿಸುವದಕ್ಕೆ ಪ್ರಯತ್ನಿಸುತ್ತಾರೆ; ನಾವಾ 23
ದರೋ ಶಿಲುಬೆಗೆ ಹಾಕಿಸಿಕೊಂಡವನಾದ ಕ್ರಿಸ್ತನನ್ನು ಪ್ರಚುರಪಡಿಸುತ್ತೇವೆ. ಇಂಥ
ವನ ಸಂಗತಿಯು ಯೆಹೂದ್ಯರಿಗೆ ವಿಘ್ನವಾಗಿಯೂ ಅನ್ಯಜನರಿಗೆ ಹುಚ್ಚುಮಾತಾಗಿಯೂ
ಅದೆ; ಆದರೆ ದೇವರಿಂದ ಕರಿಸಿಕೊಂಡವರು ಯೆಹೂದ್ಯರಾಗಲಿ ಗ್ರೀಕರಾಗಲಿ ಅವರಿಗೆ 24
ಇಂಥವನು ದೇವರ ಶಕ್ತಿಯೂ ದೇವರ ಜ್ಞಾನವೂ ಆಗಿರುವ ಕ್ರಿಸ್ತನು[1]. ಲೋಕದ 25
ವರು ದೇವರಲ್ಲಿ ಯಾವದನ್ನು ಬುದ್ಧಿಹೀನತೆಯೆಂದು ಎಣಿಸುತ್ತಾರೋ ಅದು ಮನು
ಷ್ಯರ ಜ್ಞಾನಕ್ಕಿಂತಲೂ ಶ್ರೇಷ್ಠವಾಗಿದೆ. ಅವರು ದೇವರಲ್ಲಿ ಯಾವದನ್ನು ಬಲಹೀನತೆ
ಯೆಂದು ಎಣಿಸುತ್ತಾರೋ ಅದು ಮನುಷ್ಯರ ಬಲಕ್ಕಿಂತಲೂ ಶಕ್ತಿಯುಳ್ಳದ್ದಾಗಿದೆ.

ಸಹೋದರರೇ, ದೇವರು ನಿಮ್ಮನ್ನು ಕರೆದಾಗ ಯಾರ್ಯಾರನ್ನು ಕರೆದನೆಂದು ಆಲೋ 26
ಚಿಸಿರಿ. ನಿಮ್ಮೊಳಗೆ ಪ್ರಪಂಚದ ಗಣನೆಯಲ್ಲಿ ಜ್ಞಾನಿಗಳೂ ಅನೇಕರಿಲ್ಲ, ಅಧಿಕಾರಿಗಳೂ
ಅನೇಕರಿಲ್ಲ, ಕುಲೀನರೂ ಅನೇಕರಿಲ್ಲ. ದೇವರು ಜ್ಞಾನಿಗಳನ್ನು ನಾಚಿಕೆಪಡಿಸುವದ 27
ಕ್ಕಾಗಿ ಈ ಲೋಕದ ಬುದ್ಧಿಹೀನರನ್ನು ಆರಿಸಿಕೊಂಡಿದ್ದಾನೆ; ದೇವರು ಬಲಿಷ್ಠರನ್ನು
ನಾಚಿಕೆ ಪಡಿಸುವದಕ್ಕಾಗಿ ಈ ಲೋಕದ ಬಲಹೀನರನ್ನು ಆರಿಸಿಕೊಂಡಿದ್ದಾನೆ; ದೇವರು 28-29
ಈ ಲೋಕದ ಕುಲಹೀನರನ್ನೂ ಅಸಡ್ಡೆಯಾದವರನ್ನೂ ಆರಿಸಿಕೊಂಡದ್ದಲ್ಲದೆ, ಗಣ್ಯ
ರನ್ನು ಇಲ್ಲದಂತೆ ಮಾಡುವದಕ್ಕಾಗಿ ಗಣನೆಗೆ ಬಾರದವರನ್ನು ಆರಿಸಿಕೊಂಡಿದ್ದಾನೆ.
ನೀವು ಕ್ರಿಸ್ತ ಯೇಸುವಿನಲ್ಲಿರುವದು ಆತನಿಂದಲೇ. ಕ್ರಿಸ್ತ ಯೇಸು ನಮಗೆ ದೇವರ ಕಡೆ 30
ಯಿಂದ ಜ್ಞಾನಪ್ರದರ್ಶಕನೂ, ನೀತಿ ಶುದ್ಧೀಕರಣ ವಿಮೋಚನೆಗಳಿಗೆ ಕಾರಣನೂ
ಆದನು. ಹೊಗಳಿಕೊಳ್ಳುವವನು ಕರ್ತನಲ್ಲಿಯೇ ಹೊಗಳಿಕೊಳ್ಳಲಿ ಎಂಬ ವೇದೋಕ್ತಿ[2] 31
ನೆರವೇರುವದಕ್ಕೆ ಇದರಿಂದ ಮಾರ್ಗವಾಯಿತು.

ಸಹೋದರರೇ, ನಾನಂತೂ ದೇವರು ಹೇಳಿಕೊಟ್ಟ ಮಾತನ್ನು ತಿಳಿಸುವವನಾಗಿ ನಿಮ್ಮ **2**
ಬಳಿಗೆ ಬಂದಾಗ ವಾಕ್ಚಾತುರ್ಯದಿಂದಾಗಲಿ ಜ್ಞಾನಾಡಂಬರದಿಂದಾಗಲಿ ಅದನ್ನು ತಿಳಿಸಲಿಲ್ಲ.
ನಾನು ಶಿಲುಬೆಗೆ ಹಾಕಲ್ಪಟ್ಟವನಾದ ಯೇಸು ಕ್ರಿಸ್ತನನ್ನೇ ಹೊರ್ತು ಬೇರೆ ಯಾವದನ್ನೂ 2
ತಿಳಿಯದವನಾಗಿ ನಿಮ್ಮಲ್ಲಿ ಇರುವೆನೆಂದು ತೀರ್ಮಾನಿಸಿಕೊಂಡೆನು. ಇದಲ್ಲದೆ ನಾನು 3
ನಿಮ್ಮಲ್ಲಿಗೆ ಬಂದಾಗ ಬಲಹೀನನಾಗಿಯೂ ಮನೋಭೀತಿಯಿಂದ ನಡುಗುವವನಾಗಿಯೂ
ನಿಮ್ಮ ಬಳಿಯಲ್ಲಿ ಇದ್ದೆನು. ನಿಮ್ಮ ನಂಬಿಕೆಯು ಮಾನುಷಜ್ಞಾನವನ್ನು ಆಧಾರ ಮಾಡಿ 4-5
ಕೊಳ್ಳದೆ, ದೇವರ ಶಕ್ತಿಯನ್ನು ಆಧಾರ ಮಾಡಿಕೊಂಡಿರಬೇಕೆಂದು ನಾನು ಬೋಧನೆಯ
ಲ್ಲಿಯೂ ಪ್ರಸಂಗದಲ್ಲಿಯೂ ಮನವೊಲಿಸುವ ಜ್ಞಾನವಾಕ್ಯಗಳನ್ನು ಪ್ರಯೋಗಿಸದೆ ದೇವ
ರಾತ್ಮದ ಬಲವನ್ನು ತೋರ್ಪಡಿಸುವ ವಾಕ್ಯಗಳನ್ನೇ ಪ್ರಯೋಗಿಸಿದೆನು.

ಆದಾಗ್ಯೂ ಪ್ರವೀಣರಲ್ಲಿ ಜ್ಞಾನವನ್ನೇ ಹೇಳುತ್ತೇವೆ. ಅದು ಇಹಲೋಕದ ಜ್ಞಾನವಲ್ಲ, 6
ಇಲ್ಲದೆ ಹೋಗುವ ಇಹಲೋಕಾಧಿಕಾರಿಗಳ ಜ್ಞಾನವೂ ಅಲ್ಲ. ಇದು ವರೆಗೆ ಗುಪ್ತವಾ 7
ಗಿದ್ದ ಸತ್ಯಾರ್ಥವನ್ನು ತಿಳಿಸುವಲ್ಲಿ ದೇವರ ಜ್ಞಾನವನ್ನೇ ಹೇಳುತ್ತೇವೆ. ಅದು ಯಾವ
ದಂದರೆ, ದೇವರು ನಮ್ಮ ಮಹಿಮೆಗಾಗಿ ಲೋಕೋತ್ಪತ್ತಿಗಿಂತ ಮೊದಲೇ ನೇಮಿಸಿ ಇದು

---

[1] ಅಥವಾ, ಇಂಥ ಕ್ರಿಸ್ತನು ದೇವರ ಶಕ್ತಿಯೂ ದೇವರ ಜ್ಞಾನವೂ ಆಗಿದ್ದಾನೆ.

[2] ಯೆರೆಮೀಯ ೯, ೨೩. ೨೪.

8 ವರೆಗೆ ಮರೆಮಾಡಿದ ಜ್ಞಾನವೇ. ಇದನ್ನು ಇಹಲೋಕಾಧಿಕಾರಿಗಳಲ್ಲಿ ಯಾರೂ ಅರಿ ಯಲಿಲ್ಲ; ಅರಿತಿದ್ದರೆ ಅವರು ಮಹಿಮೆಯುಳ್ಳ ಕರ್ತನನ್ನು ಶಿಲುಬೆಗೆ ಹಾಕಿಸುತ್ತಿರಲಿಲ್ಲ;
9 ಆದರೆ ಬರೆದಿರುವ ಪ್ರಕಾರ—

ದೇವರು ತನ್ನನ್ನು ಪ್ರೀತಿಸುವವರಿಗಾಗಿ
ಸಿದ್ಧಮಾಡಿರುವಂಥಾದ್ದೆಲ್ಲವನ್ನು
ಕಣ್ಣು ಕಾಣಲಿಲ್ಲ, ಕಿವಿ ಕೇಳಲಿಲ್ಲ,
ಅದರ ಭಾವನೆಯು ಮನುಷ್ಯನ ಹೃದಯದಲ್ಲಿ ಹುಟ್ಟಲಿಲ್ಲ[1].

10 ನಮಗಾದರೋ, ದೇವರು ತನ್ನ ಆತ್ಮನ ಮೂಲಕ ಅದನ್ನು ಪ್ರಕಟಿಸಿದನು. ಆ ಆತ್ಮನು ಎಲ್ಲಾ ವಿಷಯಗಳನ್ನು, ದೇವರ ಅಗಾಧವಾದ ವಿಷಯಗಳನ್ನು ಕೂಡಾ, ಪರಿಶೋಧಿಸು
11 ವವನಾಗಿದ್ದಾನೆ. ಮನುಷ್ಯನ ಒಳಗಿನ ಆಲೋಚನೆಗಳು ಅವನಲ್ಲಿರುವ ಜೀವಾತ್ಮಕ್ಕೆ ಹೊರತು ಮತ್ತ್ಯಾರಿಗೆ ತಿಳಿಯುವದು? ಹಾಗೆಯೇ ದೇವರ ಆಲೋಚನೆಗಳನ್ನು ದೇವರ
12 ಆತ್ಮನೇ ಹೊರತು ಬೇರೆ ಯಾರೂ ಗ್ರಹಿಸುವದಿಲ್ಲ. ನಾವು ಪ್ರಾಪಂಚಿಕ ಆತ್ಮವನ್ನು ಹೊಂದದೆ, ದೇವರು ನಮಗೆ ದಯಪಾಲಿಸಿರುವ ಕೃಪಾವರಗಳನ್ನು ತಿಳುಕೊಳ್ಳುವದ
13 ಕ್ಕಾಗಿ ದೇವರಿಂದ ಬಂದ ಆತ್ಮವನ್ನೇ ಹೊಂದಿದೆವು. ಇವುಗಳನ್ನು ಮಾನುಷಜ್ಞಾನವು ಕಲಿಸಿದ ಮಾತುಗಳಿಂದ ಹೇಳದೆ, ದೇವರಾತ್ಮನೇ ಕಲಿಸಿಕೊಟ್ಟ ಮಾತುಗಳಿಂದ ಹೇಳಿ, ಆತ್ಮಸಂಬಂಧವಾದವುಗಳನ್ನು ಆತ್ಮನಿಗೆ ಯುಕ್ತವಾದ ರೀತಿಯಲ್ಲಿ ವಿವರಿಸುತ್ತೇವೆ.
14 ಪ್ರಾಕೃತಮನುಷ್ಯನು[2] ದೇವರಾತ್ಮನ ವಿಷಯಗಳನ್ನು ಬೇಡವೆನ್ನುತ್ತಾನೆ; ಅವು ಅವ ನಿಗೆ ಹುಚ್ಚುಮಾತಾಗಿ ತೋರುತ್ತವೆ; ಅವು ಆತ್ಮವಿಚಾರದಿಂದ ತಿಳಿಯತಕ್ಕವುಗಳಾಗಿರ
15 ಲಾಗಿ, ಅವನು ಅವುಗಳನ್ನು ಗ್ರಹಿಸಲಾರನು. ದೇವರಾತ್ಮನಿಂದ ನಡಿಸಿಕೊಳ್ಳುವವನೋ ಎಲ್ಲವನ್ನೂ ವಿಚಾರಿಸಿ ತಿಳುಕೊಳ್ಳುತ್ತಾನೆ; ಆದರೆ ಇವನನ್ನು ಯಾವನಾದರೂ ವಿಚಾ
16 ರಿಸಿ ತಿಳುಕೊಳ್ಳುವದಿಲ್ಲ. ಕರ್ತನ ಮನಸ್ಸನ್ನು ತಿಳುಕೊಂಡು ಆತನಿಗೆ ಉಪದೇಶ ಹೇಳುವವನ್ಯಾರು ಎಂದು ಬರೆದದೆಯಲ್ಲಾ[3]. ನಮಗಾದರೋ ಕ್ರಿಸ್ತನ ಮನಸ್ಸು ದೊರಕಿತು.

**3** ಸಹೋದರರೇ, ನಾನಂತೂ ದೇವಾತ್ಮನಿಂದ ನಡಿಸಿಕೊಳ್ಳುವವರಿಗೆ ತಕ್ಕಂತೆ ನಿಮ್ಮ ಸಂಗಡ ಮಾತಾಡಲಾರದೆ, ಪ್ರಾಪಂಚಿಕರೂ ಕ್ರಿಸ್ತನ ವಿಷಯದಲ್ಲಿ ಎಳೆಗೂಸುಗಳೂ
2 ಆಗಿರುವಂಥವರಿಗೆ ತಕ್ಕಂತೆ ನಿಮ್ಮ ಸಂಗಡ ಮಾತಾಡಬೇಕಾಯಿತು. ನಿಮಗೆ ಹಾಲು ಕುಡಿಸಿದೆನು, ಅನ್ನಾ ಕೊಡಲಿಲ್ಲ; ಅನ್ನಾ ತಿನ್ನುವದಕ್ಕೆ ನಿಮಗೆ ಇನ್ನೂ ಶಕ್ತಿ ಇರಲಿಲ್ಲ,
3 ಈಗಲಾದರೂ ಶಕ್ತಿಯಿಲ್ಲ; ಯಾಕಂದರೆ ಇನ್ನೂ ಶರೀರಭಾವವುಳ್ಳವರಾಗಿದ್ದೀರಿ. ನಿಮ್ಮೊ ಳಗೆ ಹೊಟ್ಟೇಕಿಚ್ಚು ಜಗಳಗಳು ಇರುವಲ್ಲಿ ನೀವು ಶರೀರಭಾವವುಳ್ಳವರಾಗಿದ್ದು ಕೇವಲ
4 ನರಪ್ರಾಣಿಗಳಂತೆ ನಡೆಯುತ್ತೀರಲ್ಲವೇ? ಒಬ್ಬನು—ನಾನು ಪೌಲನವನು ಎಂದು, ಮತ್ತೊಬ್ಬನು—ನಾನು ಅಪೊಲ್ಲೋಸನವನು ಎಂದು ಹೇಳುತ್ತಿರುವಾಗ ನೀವು ಕೇವಲ ನರಪ್ರಾಣಿಗಳಾಗಿದ್ದೀರಲ್ಲವೇ?

---

1) ಯೆಶಾಯ ೬೪, ೪ ನೋಡಿರಿ.
2) ಅಂದರೆ, ಜ್ಞಾನೋದಯವಾಗದ ಮನುಷ್ಯನು, ಪ್ರಾಪಂಚಿಕನು.
3) ಯೆಶಾಯ ೪೦, ೧೩.

ಸುವಾರ್ತೆಯನ್ನು ಸಾರುವವರು ದೇವರ ಕೈಯಲ್ಲಿ ಬರೇ ಸಾಧನಗಳಷ್ಟೆ; ಕಾರ್ಯಕರ್ತನು ದೇವರೇ.

5 ಹಾಗಾದರೆ, ಅಪೊಲ್ಲೋಸನು ಏನು? ಪೌಲನು ಏನು? ಅವರು ಸೇವಕರು; ಅವರ ಮುಖಾಂತರ ನೀವು ಕ್ರಿಸ್ತನನ್ನು ನಂಬುವವರಾದಿರಿ; ಕರ್ತನು ಒಬ್ಬೊಬ್ಬನಿಗೆ ಸಾಮರ್ಥ್ಯ ದಯಪಾಲಿಸಿದ ಪ್ರಕಾರ ಅವರು ಸೇವೆ ಮಾಡುವವರಾಗಿದ್ದಾರೆ. 6 ನಾನು ಸಸಿಯನ್ನು ನೆಟ್ಟೆನು, ಅಪೊಲ್ಲೋಸನು ನೀರು ಹೊಯಿದನು, ಆದರೆ ಬೆಳಿಸುತ್ತಾ ಬಂದವನು ದೇವರು. 7 ಹೀಗಿರಲಾಗಿ ನೆಡುವವನಾಗಲಿ ನೀರು ಹೊಯ್ಯುವವನಾಗಲಿ ವಿಶೇಷವಾದವನಲ್ಲ, ಬೆಳಸುವ ದೇವರೇ ವಿಶೇಷವಾದವನು. 8 ನೆಡುವವನೂ ನೀರು ಹೊಯ್ಯುವವನೂ ಒಂದೇ ಆಗಿದ್ದಾರೆ. ಆದಾಗ್ಯೂ ಪ್ರತಿಯೊಬ್ಬನಿಗೆ ಅವನವನ ಕಷ್ಟಕ್ಕೆ ತಕ್ಕಹಾಗೆ ಕೂಲಿಯು ದೊರೆಯುವದು. 9 ನಾವು ದೇವರ ಜೊತೆಕೆಲಸದವರು; ನೀವು ದೇವರ ಹೊಲವೂ[1] ದೇವರ ಕಟ್ಟಡವೂ ಆಗಿದ್ದೀರಿ.

10 ದೇವರು ನನಗೆ ಕೃಪೆಯಿಂದ ಒಪ್ಪಿಸಿದ ಕೆಲಸವನ್ನು ನಡಿಸಿ ನಾನು ಪ್ರವೀಣಶಿಲ್ಪಿಯಂತೆ ಅಸ್ತಿವಾರ ಹಾಕಿದೆನು, ಮತ್ತೊಬ್ಬನು ಅದರ ಮೇಲೆ ಕಟ್ಟುತ್ತಾನೆ. ಪ್ರತಿಯೊಬ್ಬನು ತಾನು ಅದರ ಮೇಲೆ ಎಂಥಾದ್ದನ್ನು ಕಟ್ಟುತ್ತಾನೋ ಎಚ್ಚರಿಕೆಯಾಗಿರಬೇಕು. 11 ಹಾಕಿರುವ ಅಸ್ತಿವಾರವು ಯೇಸು ಕ್ರಿಸ್ತನೇ; ಆ ಅಸ್ತಿವಾರವನ್ನಲ್ಲದೆ ಮತ್ತೊಂದು ಅಸ್ತಿವಾರವನ್ನು ಯಾರೂ ಹಾಕಲಾರರಷ್ಟೆ. 12 ಆ ಅಸ್ತಿವಾರದ ಮೇಲೆ ಚಿನ್ನ ಬೆಳ್ಳಿ ರತ್ನ ಕಟ್ಟಿಗೆ ಹುಲ್ಲು ಆಪು ಮುಂತಾದವುಗಳಲ್ಲಿ ಯಾವದರಿಂದ ಕಟ್ಟಿದರೂ ಅವನವನ ಕೆಲಸವು ವ್ಯಕ್ತವಾಗುವದು. 13 ಕ್ರಿಸ್ತನು ಬರುವ ದಿನವು ಬೆಂಕಿಯೊಡನೆ ಉದಯವಾಗಿ ಆ ಕೆಲಸವನ್ನು ಸ್ಪಷ್ಟವಾಗಿ ತೋರಿಸುವದು; ಅವನವನ ಕೆಲಸವೆಂಥಾದ್ದೋ ಆ ಬೆಂಕಿ ಶೋಧಿಸುವದು. 14 ಒಬ್ಬನು ಆ ಅಸ್ತಿವಾರದ ಮೇಲೆ ಕಟ್ಟಿದ್ದು ಉಳಿದರೆ, ಅವನಿಗೆ ಸಂಬಳ ಬರುವದು. 15 ಒಬ್ಬನು ಕಟ್ಟಿದ್ದು ಸುಟ್ಟುಹೋದರೆ, ಅವನಿಗೆ ಸಂಬಳವು ನಷ್ಟವಾಗುವದು; ತಾನಾದರೋ ರಕ್ಷಣೆ ಹೊಂದುವನು, ಆದರೆ ಬೆಂಕಿಯೊಳಗಿಂದ ತಪ್ಪಿಸಿಕೊಂಡವನ ಹಾಗಿರುವನು.

16 ನೀವು ದೇವರ ಆಲಯವಾಗಿದ್ದೀರೆಂದೂ ದೇವರ ಆತ್ಮನು ನಿಮ್ಮಲ್ಲಿ ವಾಸಮಾಡುತ್ತಾನೆಂದೂ ನಿಮಗೆ ಗೊತ್ತಿಲ್ಲವೋ? 17 ಯಾವನಾದರೂ ದೇವರ ಆಲಯವನ್ನು ಕೆಡಿಸಿದರೆ, ದೇವರು ಅವನನ್ನು ಕೆಡಿಸುವನು. ಯಾಕಂದರೆ, ದೇವರ ಆಲಯವು ಪವಿತ್ರವಾದದ್ದು, ಆ ಆಲಯವು ನೀವೇ.

18 ಯಾವನೂ ತನ್ನನ್ನು ತಾನೇ ಮೋಸಗೊಳಿಸದಿರಲಿ. ತಾನು ನಿಮ್ಮಲ್ಲಿ ಲೋಕಸಂಬಂಧವಾಗಿ ಜ್ಞಾನಿಯಾಗಿದ್ದೇನೆಂದು ಭಾವಿಸಿಕೊಳ್ಳುವವನು ಜ್ಞಾನಿಯಾಗುವಂತೆ ಹುಚ್ಚನಾಗಲಿ. 19 ಯಾಕಂದರೆ ಇಹಲೋಕಜ್ಞಾನವು ದೇವರ ಮುಂದೆ ಹುಚ್ಚುತನವಾಗಿದೆ. ಆತನು ಜ್ಞಾನಿಗಳನ್ನು ಅವರ ತಂತ್ರಗಳಲ್ಲಿಯೇ ಹಿಡುಕೊಳ್ಳುತ್ತಾನೆಂತಲೂ[2], 20 ಜ್ಞಾನಿಗಳ ಯೋಚನೆಗಳು ನಿಷ್ಫಲವಾದವುಗಳೆಂದು ಕರ್ತನು ತಿಳುಕೊಳ್ಳುತ್ತಾನೆಂತಲೂ[3] ಶಾಸ್ತ್ರದಲ್ಲಿ ಬರೆದದೆ

---

[1] ಅಥವಾ, ದೇವರ ಸಾಗುವಳಿಯೂ. [2] ಯೋಬ ೫, ೧೩. [3] ಕೀರ್ತನೆ ೯೪, ೧೧.

21 ಯಲ್ಲಾ. ಆದಕಾರಣ ಮನುಷ್ಯಮಾತ್ರದವರ ವಿಷಯದಲ್ಲಿ ಯಾರೂ ಹಿಗ್ಗದಿರಲಿ.
22 ಯಾಕಂದರೆ ಸಮಸ್ತವೂ ನಿಮ್ಮದು; ಪೌಲನಾಗಲಿ ಅಪೊಲ್ಲೋಸನಾಗಲಿ ಕೇಫನಾಗಲಿ, ಲೋಕವಾಗಲಿ ಜೀವವಾಗಲಿ ಮರಣವಾಗಲಿ, ಈಗಿನ ಸಂಗತಿಗಳಾಗಲಿ ಮುಂದಣ ಸಂಗ
23 ತಿಗಳಾಗಲಿ ಸಮಸ್ತವೂ ನಿಮ್ಮದೇ; ನೀವಂತೂ ಕ್ರಿಸ್ತನವರು, ಕ್ರಿಸ್ತನು ದೇವರವನು.

ಸುವಾರ್ತಾಬೋಧಕರ ವಿಷಯದಲ್ಲಿ ಮನುಷ್ಯರ ಎಣಿಕೆ ವಿಶೇಷವಲ್ಲ, ದೇವರ ಎಣಿಕೆಯೇ ಮುಖ್ಯ.

**4** ಜನರು ನಮ್ಮನ್ನು ಕ್ರಿಸ್ತನ ಕೈಕೆಳಗಿನವರೆಂತಲೂ ದೇವರು ತಿಳಿಸಿರುವ ಸತ್ಯಾರ್ಥಗಳ
2 ವಿಷಯದಲ್ಲಿ ಮನೆವಾರ್ತೆಯವರೆಂತಲೂ ಎಣಿಸಬೇಕು. ಹೀಗಿರಲು ಮನೆವಾರ್ತೆಯ
3 ವನು ನಂಬಿಗಸ್ತನಾಗಿ ಕಂಡುಬರುವದು ಅವಶ್ಯವಲ್ಲವೇ? ನನಗಾದರೋ ನಿಮ್ಮಿಂದಾಗಲಿ ಮನುಷ್ಯರು ನೇಮಿಸುವ ದಿನದಲ್ಲಾಗುವ ನ್ಯಾಯಸಭೆಯಿಂದಾಗಲಿ ವಿಚಾರಣೆಯಾ
4 ಗುವದು ಅತ್ಯಲ್ಪಕಾರ್ಯವಾಗಿದೆ; ನಾನೂ ನನ್ನನ್ನು ವಿಚಾರಿಸಿಕೊಳ್ಳುವದಿಲ್ಲ. ನನ್ನಲ್ಲಿ ದೋಷವಿದೆಯೆಂದು ನನ್ನ ಬುದ್ಧಿಗೆ ತೋರುವದಿಲ್ಲವಾದಾಗ್ಯೂ ದೋಷವಿಲ್ಲದವನೆಂಬ ನಿರ್ಣಯವು ಇದರಿಂದಾಗುವದಿಲ್ಲ; ನನ್ನನ್ನು ವಿಚಾರಣೆ ಮಾಡುವವನು ಕರ್ತನೇ.
5 ಆದದರಿಂದ ಕಾಲಕ್ಕೆ ಮೊದಲು ಯಾವದನ್ನೂ ಕುರಿತು ತೀರ್ಪುಮಾಡಬೇಡಿರಿ; ಕರ್ತನು ಬರುವ ತನಕ ತಡೆಯಿರಿ. ಆತನು ಕತ್ತಲೆಯಲ್ಲಿರುವ ಗುಪ್ತಕಾರ್ಯಗಳನ್ನು ಬೆಳಕಿಗೆ ತರುವನು, ಹೃದಯದ ಯೋಚನೆಗಳನ್ನು ಪ್ರತ್ಯಕ್ಷಪಡಿಸುವನು; ಆ ಕಾಲದಲ್ಲಿ ಪ್ರತಿಯೊಬ್ಬನಿಗೆ ಬರತಕ್ಕ ಹೊಗಳಿಕೆಯು ದೇವರಿಂದ ಬರುವದು.

ಪೌಲನು ಕೊರಿಂಥ ಸಭೆಯವರನ್ನು ತಂದೆಯೋಪಾದಿಯಲ್ಲಿ ಗದರಿಸಿದ್ದು.

6 ಸಹೋದರರೇ, ನಾನು ನಿಮಗೋಸ್ಕರವೇ ಹಿಂದಣ ಮಾತುಗಳನ್ನು ಸಾಮ್ಯರೂಪವಾಗಿ ನನ್ನ ವಿಷಯದಲ್ಲಿಯೂ ಅಪೊಲ್ಲೋಸನ ವಿಷಯದಲ್ಲಿಯೂ ಹೇಳಿದ್ದೇನೆ. ನೀವು ನಮ್ಮನ್ನು ದೃಷ್ಟಾಂತವಾಗಿ ಇಟ್ಟುಕೊಂಡು, ಶಾಸ್ತ್ರದಲ್ಲಿ ಬರೆದಿರುವದನ್ನು ಮೀರಿಹೋಗಬಾರದೆಂಬುವದನ್ನೂ ನಿಮ್ಮಲ್ಲಿ ಯಾರೂ ಒಬ್ಬ ಬೋಧಕನನ್ನು ವಿರೋಧಿಸಿ ಮತ್ತೊ
7 ಬ್ಬನ ಪಕ್ಷವನ್ನು ಹಿಡಿದು ಉಬ್ಬಿಕೊಳ್ಳಬಾರದೆಂಬುವದನ್ನೂ ಕಲಿತುಕೊಳ್ಳಬೇಕು. ನಿನಗೂ ಇತರರಿಗೂ ತಾರತಮ್ಯ ಮಾಡಿದವರು ಯಾರು? ದೇವರಿಂದ ಹೊಂದದೆ ಇರುವಂಥಾದ್ದು ನಿನ್ನಲ್ಲಿ ಒಂದಾದರೂ ಉಂಟೋ? ಹೊಂದಿದ ಮೇಲೆ—ಅದು ಸ್ವತಃ ನನ್ನಲ್ಲಿ ಉಂಟೆಂದು
8 ಹೇಳಿಕೊಂಡು ನೀನು ಯಾಕೆ ಹಿಗ್ಗಿಕೊಳ್ಳುತ್ತೀ? ಈಗಾಗಲೇ ನಿಮಗೆ ಸಾಕಾಗುವಷ್ಟು ಬಂದದೆ, ಈಗಾಗಲೇ ಐಶ್ವರ್ಯವಂತರಾದಿರಿ, ನಮ್ಮ ಸಹಾಯವಿಲ್ಲದೆ ಅರಸರಾದಿರಿ. ನೀವು ನಿಜವಾಗಿ ಅರಸರಾಗಿದ್ದರೆ, ಅದು ಎಷ್ಟೋ ಚನ್ನಾಗಿತ್ತು; ಆಗ ನಾವು ಸಹ
9 ನಿಮ್ಮೊಂದಿಗೆ ಅರಸರಾಗಿರುತ್ತಿದ್ದೆವು. ಹಾಗಾಗದೆ ದೇವರು ಅಪೊಸ್ತಲರಾದ ನಮ್ಮನ್ನು ಮರಣವಿಧಿ ಹೊಂದಿದವರನ್ನೋ ಎಂಬಂತೆ ಕಡೆಯವರಾಗಿ[1] ತೋರಿಸಿದ್ದಾನೆಂದು ನನಗೆ

[1] ಅಥವಾ, ಕಡೇ ವಿನೋದವಾಗಿ.

ತೋಚುತ್ತದೆ; ನಾವು ದೇವದೂತರಿಗೂ ಮನುಷ್ಯರಿಗೂ ಅಂತೂ ಜಗತ್ತಿಗೆಲ್ಲಾ ನೋಟ ವಾದೆವು. 10 ನಾವಂತು ಕ್ರಿಸ್ತನ ನಿಮಿತ್ತ ಹುಚ್ಚರಾಗಿದ್ದೇವೆ, ನೀವೋ ಕ್ರಿಸ್ತನಲ್ಲಿ ಬುದ್ಧಿವಂತರಾಗಿದ್ದೀರಿ; ನಾವು ಬಲಹೀನರು, ನೀವು ಶಕ್ತರು; ನೀವು ಘನವಂತರು, ನಾವು ಮಾನಹೀನರು. 11 ಈ ಗಳಿಗೆಯ ವರೆಗೂ ನಾವು ಹಸಿದವರೂ ಬಾಯಾರಿಕೆಯುಳ್ಳವರೂ ಮೈಗೆ ವಸ್ತ್ರವಿಲ್ಲದವರೂ ಗುದ್ದು ತಿನ್ನುವವರೂ ಮನೆಯಿಲ್ಲದವರೂ 12 ಸ್ವಂತ ಕೈಗಳಿಂದ ಕೆಲಸಮಾಡಿ ದುಡಿಯುವವರೂ ಆಗಿದ್ದೇವೆ. ಬೈಸಿಕೊಂಡು ಹರಸುತ್ತೇವೆ; ಹಿಂಸೆಪಟ್ಟು ಸಹಿಸಿಕೊಳ್ಳುತ್ತೇವೆ; 13 ಅಪಕೀರ್ತಿಹೊಂದಿ ಶಾಂತವಾಗಿ ಮಾತಾಡುತ್ತೇವೆ. ನಾವು ಈಗಿನ ವರೆಗೂ ಲೋಕದ ಕಸವೋ ಎಲ್ಲಾದರ ಹೊಲಸೋ ಎಂಬಂತೆ ಆಗಿದ್ದೇವೆ.

14 ನಿಮ್ಮನ್ನು ನಾಚಿಕೆಪಡಿಸುವದಕ್ಕಾಗಿ ಬರೆಯದೆ, ನನ್ನ ಪ್ರಿಯ ಮಕ್ಕಳೆಂದು ಭಾವಿಸಿ ನಿಮಗೆ ಬುದ್ಧಿಹೇಳುವದಕ್ಕಾಗಿಯೇ ಈ ಮಾತುಗಳನ್ನು ಬರೆದಿದ್ದೇನೆ. 15 ನಿಮಗೆ ಕ್ರಿಸ್ತನಲ್ಲಿ ಉಪಾಧ್ಯಾಯರು ಸಾವಿರಾರು ಮಂದಿ ಇದ್ದರೂ ತಂದೆಗಳು ಬಹುಮಂದಿ ಇಲ್ಲ; ನಾನೇ ನಿಮ್ಮನ್ನು ಸುವಾರ್ತೆಯ ಮೂಲಕ ಕ್ರಿಸ್ತ ಯೇಸುವಿನಲ್ಲಿ ಹುಟ್ಟಿಸಿದೆನು. 16 ಆದದರಿಂದ ನನ್ನನ್ನು ಅನುಸರಿಸಬೇಕೆಂದು ನಿಮ್ಮನ್ನು ಬೇಡಿಕೊಳ್ಳುತ್ತೇನೆ. 17 ಈ ನಿಮಿತ್ತದಿಂದ ಕರ್ತನಲ್ಲಿ ನನ್ನ ಮಗನಾದ ತಿಮೊಥೆಯನನ್ನು ನಿಮ್ಮ ಬಳಿಗೆ ಕಳುಹಿಸಿಕೊಟ್ಟಿದ್ದೇನೆ. ಅವನು ನನಗೆ ಪ್ರಿಯನೂ ನಂಬಿಗಸ್ತನೂ ಆಗಿದ್ದಾನೆ. ಅವನು ಕ್ರಿಸ್ತನ ಸೇವೆಯಲ್ಲಿರುವ ನನ್ನ ನಡಾವಳಿಯನ್ನು, ಅಂದರೆ ನಾನು ಎಲ್ಲೆಲ್ಲಿಯೂ ಪ್ರತಿಯೊಂದು ಸಭೆಯಲ್ಲಿಯೂ ಬೋಧಿಸುವ ಕ್ರಮವನ್ನು, ನಿಮ್ಮ ನೆನಪಿಗೆ ತರುವನು. 18 ನಿಮ್ಮಲ್ಲಿ ಕೆಲವರು—ಪೌಲನು ನಮ್ಮ ಬಳಿಗೆ ಬರುವದಿಲ್ಲವೆಂದು ಉಬ್ಬಿಕೊಂಡಿದ್ದಾರೆ. 19 ಆದರೆ ಕರ್ತನ ಚಿತ್ತವಿದ್ದರೆ, ನಾನು ಬೇಗ ನಿಮ್ಮ ಬಳಿಗೆ ಬಂದು, ಉಬ್ಬಿಕೊಂಡಿರುವವರ ಮಾತನ್ನಲ್ಲ ಅವರ ಶಕ್ತಿಯನ್ನೇ ಗೊತ್ತುಮಾಡಿಕೊಳ್ಳುವೆನು. 20 ದೇವರ ರಾಜ್ಯವು ಮಾತಿನಲ್ಲಿ ಇಲ್ಲ, ಶಕ್ತಿಯಲ್ಲಿಯೇ ಆಧಾರಗೊಂಡದೆ. 21 ನಿಮ್ಮ ಇಷ್ಟವೇನು? ಬೆತ್ತ ತಕ್ಕೊಂಡು ನಿಮ್ಮ ಬಳಿಗೆ ಬರಲೋ? ಪ್ರೀತಿಯಿಂದಲೂ ಸೌಮ್ಯಭಾವದಿಂದಲೂ ಕೂಡಿದವನಾಗಿ ಬರಲೋ?

ಸಭೆಯಲ್ಲಿ ನಡದಿದ್ದ ವಿಪರೀತ ಜಾರತ್ವವನ್ನು ಕುರಿತದ್ದು.

**5** ನಿಮ್ಮಲ್ಲಿ ಜಾರತ್ವವುಂಟೆಂದು ಜನರು ಸಾಧಾರಣವಾಗಿ ಹೇಳುತ್ತಾರೆ. ಒಬ್ಬನು ತನ್ನ ಅಪ್ಪನ ಹೆಂಡತಿಯನ್ನು ಇಟ್ಟುಕೊಂಡಿದ್ದಾನಂತೆ; ಅಂಥಾ ಜಾರತ್ವವು ಅನ್ಯಜನರಲ್ಲಿಯೂ ಇಲ್ಲ. 2 ಹೀಗಿದ್ದಾಗ್ಯೂ ನೀವು ದುಃಖವನ್ನು ತೋರಿಸದೆ, ಈ ಕಾರ್ಯಮಾಡಿದವನನ್ನು ನಿಮ್ಮೊಳಗಿಂದ ಬಹಿಷ್ಕರಿಸದೆ ಉಬ್ಬಿಕೊಂಡೇ ಇದ್ದೀರಲ್ಲಾ. 3 ನಾನಂತೂ ದೇಹದಿಂದ ದೂರವಾಗಿದ್ದರೂ ಆತ್ಮದಿಂದ ಹತ್ತರದಲ್ಲಿದ್ದು, ಈ ಕಾರ್ಯಮಾಡಿದವನನ್ನು ಕುರಿತು ಆಗಲೇ ಹತ್ತರವಿದ್ದವನಂತೆ ತೀರ್ಪುಮಾಡಿದ್ದೇನಂದರೆ—4 ನೀವೂ ನನ್ನಾತ್ಮವೂ ಕರ್ತನಾದ ಯೇಸುವಿನ ಸಾಮರ್ಥ್ಯ ಸಹಿತ ಒಟ್ಟುಗೂಡಿ ಬಂದಿರಲಾಗಿ, 5 ಕರ್ತನಾದ ಯೇಸುವಿನ ಪ್ರತ್ಯಕ್ಷತೆಯ ದಿನದಲ್ಲಿ ಅಂಥವನ ಆತ್ಮವು ರಕ್ಷಣೆ ಹೊಂದುವದಕ್ಕಾಗಿ ಅವನ ಶರೀರಭಾವವು ನಾಶವಾಗಬೇಕೆಂದು, ನಮ್ಮ ಕರ್ತನಾದ ಯೇಸುವಿನ ಹೆಸರಿನಲ್ಲಿ

6 ಅವನನ್ನು ಸೈತಾನನಿಗೆ ಒಪ್ಪಿಸಿಕೊಡಬೇಕೆಂಬುವದೇ. ನೀವು ಹಿಗ್ಗುವದು ಒಳ್ಳೇದಲ್ಲ. ಸ್ವಲ್ಪ ಹುಳಿ ಕಲಸಿದರೆ ಕಣಿಕವೆಲ್ಲಾ ಹುಳಿಯಾಗುತ್ತದೆಂಬುವದು ನಿಮಗೆ ತಿಳಿಯದೋ?
7 ನೀವು ಹುಳಿಯಿಲ್ಲದವರೆನ್ನಿಸಿಕೊಂಡದ್ದರಿಂದ ಹಳೆ ಹುಳಿಯನ್ನು ತೆಗೆದುಹಾಕಿ[1] ಹೊಸ ಕಣಿಕದಂತಾಗಿರ್ರಿ. ಯಾಕಂದರೆ ನಮ್ಮ ಪಸ್ಕದ ಯಜ್ಞದ ಪಶುವು ಕೊಯಿದದೆ; ಅದ್ಯಾ
8 ವದಂದರೆ ಕ್ರಿಸ್ತನೇ. ಆದಕಾರಣ ನಾವು ಹಳೇ ಹುಳಿಯನ್ನು, ಅಂದರೆ ದುರ್ಮಾರ್ಗತ್ವ ದುಷ್ಟತ್ವ ಎಂಬ ಹುಳಿಯನ್ನು ಇಟ್ಟುಕೊಳ್ಳದೆ, ಸರಳತೆ ಸತ್ಯತೆ ಎಂಬ ಹುಳಿಯಿಲ್ಲದ ರೊಟ್ಟಿಯನ್ನೇ ತೆಗೆದುಕೊಂಡು ಹಬ್ಬವನ್ನು ಆಚರಿಸೋಣ.
9,10 ಜಾರರ ಸಹವಾಸಮಾಡಬಾರದೆಂದು ನನ್ನ ಪತ್ರಿಕೆಯಲ್ಲಿ ಬರೆದಿದ್ದೆನಷ್ಟೆ. ಈ ಲೋಕದಲ್ಲಿರುವ ಜಾರರೂ ಲೋಭಿಗಳೂ ಸುಲುಕೊಳ್ಳುವವರೂ ವಿಗ್ರಹಾರಾಧಕರೂ ಇವರ ಸಹವಾಸವನ್ನು ಬಿಟ್ಟುಬಿಡಬೇಕೆಂದು ನನ್ನ ತಾತ್ಪರ್ಯವಲ್ಲ; ಹಾಗೆ ಬಿಡಬೇಕಾದರೆ,
11 ನೀವು ಈ ಲೋಕವನ್ನೇ ಬಿಟ್ಟುಹೋಗಬೇಕಾಗುವದು. ಆದರೆ ಕ್ರೈಸ್ತಸಹೋದರನೆನ್ನಿಸಿಕೊಂಡವನು ಜಾರನಾದರೂ ಲೋಭಿಯಾದರೂ ವಿಗ್ರಹಾರಾಧಕನಾದರೂ ಬೈಯುವವನಾದರೂ ಕುಡಿಕನಾದರೂ ಸುಲುಕೊಳ್ಳುವವನಾದರೂ ಆಗಿದ್ದ ಪಕ್ಷದಲ್ಲಿ, ಅವನ ಸಹವಾಸಮಾಡಬಾರದು, ಅಂಥವನ ಸಂಗಡ ಊಟಮಾಡಲೂ ಬಾರದು ಎಂದು ಬರೆದಿ
12 ದ್ದೆನು. ಹೊರಗಿನವರನ್ನು ಕುರಿತು ತೀರ್ಪುಮಾಡುವದಕ್ಕೆ ನನಗೇನಧಿಕಾರ? ಒಳಗಿ
13 ನವರನ್ನು ಕುರಿತು ತೀರ್ಪುಮಾಡುವವರು ನೀವು ಅಲ್ಲವೇ? ಹೊರಗಿನವರನ್ನು ಕುರಿತು ತೀರ್ಪುಮಾಡುವವನು ದೇವರು. ಆ ದುಷ್ಟನನ್ನು ನಿಮ್ಮೊಳಗಿಂದ ಬಹಿಷ್ಕಾರಮಾಡಿರಿ[2].

### ಕ್ರೈಸ್ತರು ಕ್ರೈಸ್ತರಲ್ಲದವರ ಮುಂದೆ ವ್ಯಾಜ್ಯವಾಡಿದ್ದನ್ನು ಕುರಿತದ್ದು.

**6** ನಿಮ್ಮಲ್ಲಿ ಒಬ್ಬನಿಗೆ ಮತ್ತೊಬ್ಬನ ಮೇಲೆ ವ್ಯಾಜ್ಯವಿದ್ದರೆ, ನ್ಯಾಯವಿಚಾರಣೆಗೆ ದೇವಜನರ ಮುಂದೆ ಹೋಗದೆ ಅನ್ಯಜನರ ಮುಂದೆ ಹೋಗುವದಕ್ಕೆ ಅವನಿಗೆ ಧೈರ್ಯವುಂಟೋ?
2 ದೇವಜನರು ಲೋಕಕ್ಕೆ ತೀರ್ಪುಮಾಡುವರೆಂಬುವದು ನಿಮಗೆ ತಿಳಿಯದೋ? ಲೋಕವು ನಿಮ್ಮಿಂದ ತೀರ್ಪನ್ನು ಹೊಂದಬೇಕಾಗಿರುವಲ್ಲಿ, ಅತ್ಯಲ್ಪ ಸಂಗತಿಗಳನ್ನು ಕುರಿತು ತೀರ್ಪು
3 ಮಾಡುವದಕ್ಕೆ ಅಯೋಗ್ಯರಾಗಿದ್ದೀರೋ? ನಾವು ದೇವದೂತರಿಗೂ ತೀರ್ಪುಮಾಡುವೆವೆಂಬುವದು ನಿಮಗೆ ತಿಳಿಯದೋ? ಐಹಿಕಜೀವದ ಕಾರ್ಯಗಳನ್ನು ಕುರಿತು ನಾವು
4 ತೀರ್ಪುಮಾಡುವದು ದೊಡ್ಡದೋ? ಐಹಿಕಜೀವಸಂಬಂಧದಲ್ಲಿ ನಿರ್ಣಯಿಸತಕ್ಕ ಕಾರ್ಯಗಳು ನಿಮ್ಮಲ್ಲಿದ್ದರೆ, ತೀರ್ಪುಮಾಡುವದಕ್ಕೆ ಸಭೆಯಲ್ಲಿ ಗಣನೆಗೆ ಬಾರದವರನ್ನು ಕುಳ್ಳಿರಿಸಿ
5 ಕೊಳ್ಳುತ್ತೀರೋ[3]? ನಿಮ್ಮಲ್ಲಿ ನಾಚಿಕೆ ಹುಟ್ಟಿಸುವದಕ್ಕೆ ಇದನ್ನು ಹೇಳುತ್ತೇನೆ. ಏನು, ತನ್ನ ಸಹೋದರರ ಮಧ್ಯದಲ್ಲಿ ನ್ಯಾಯವನ್ನು ಬಗೆಹರಿಸಬಲ್ಲವನಾದ ಜಾಣನು ನಿಮ್ಮಲ್ಲಿ
6 ಒಬ್ಬನಾದರೂ ಇಲ್ಲವೋ? ಸಹೋದರನು ಸಹೋದರನ ಮೇಲೆ ವ್ಯಾಜ್ಯವಾಡುವದು ಅಲ್ಲದೆ ಅದನ್ನು ಕ್ರಿಸ್ತಭಕ್ತರಲ್ಲದವರ ಮುಂದೆ ತೆಗೆದುಕೊಂಡುಹೋಗುವದು ಸರಿಯೋ?
7 ನಿಮ್ಮನಿಮ್ಮಲ್ಲಿ ವ್ಯಾಜ್ಯವಾಡುವದರಿಂದಲೇ ನೀವು ಸೋತುಹೋದಹಾಗಾಯಿತು. ಅದ

---

[1] ಹೊರಡೋಣ ೧೨, ೧೫; ೧೩, ೭.  [2] ದ್ವಿತೀಯ ನ್ಯಾಯ ೨೨, ೨೪.  [3] ಅಥವಾ, ಕುಳ್ಳಿರಿಸಿರಿ.

ಕ್ಕಿಂತ ಅನ್ಯಾಯವನ್ನು ಸಹಿಸುವದೇ ಲೇಸು ಅಲ್ಲವೋ? ಆಸ್ತಿಯ ನಷ್ಟವನ್ನು ಯಾಕೆ ತಾಳಬಾರದು? ಆದರೆ ನೀವು ಅನ್ಯಾಯಮಾಡುತ್ತೀರಿ; ಆಸ್ತಿಯನ್ನು ಅಪಹರಿಸುತ್ತೀರಿ; 8 ಸಹೋದರರಲ್ಲಿಯೇ ಹೀಗೆ ಮಾಡುತ್ತೀರಿ. ಅನ್ಯಾಯಗಾರರು ದೇವರ ರಾಜ್ಯಕ್ಕೆ 9 ಬಾಧ್ಯರಾಗುವದಿಲ್ಲವೆಂಬುವದು ನಿಮಗೆ ತಿಳಿಯದೋ? ಮೋಸಹೋಗಬೇಡಿರಿ, ಜಾರರು ವಿಗ್ರಹಾರಾಧಕರು ವ್ಯಭಿಚಾರಿಗಳು ವಿಟರು ಪುರುಷಕಾಮಿಗಳು ಕಳ್ಳರು ಲೋಭಿಗಳು 10 ಕುಡಿಕರು ಬೈಯುವವರು ಸುಲುಕೊಳ್ಳುವವರು ಇವರೊಳಗೆ ಒಬ್ಬರಾದರೂ ದೇವರ ರಾಜ್ಯಕ್ಕೆ ಬಾಧ್ಯರಾಗುವದಿಲ್ಲ. ನಿಮ್ಮಲ್ಲಿ ಕೆಲವರು ಅಂಥವರಾಗಿದ್ದಿರಿ; ಆದರೂ ಕರ್ತ 11 ನಾದ ಯೇಸು ಕ್ರಿಸ್ತನ ಹೆಸರಿನಲ್ಲಿಯೂ ನಮ್ಮ ದೇವರ ಆತ್ಮದಲ್ಲಿಯೂ ತೊಳೆದುಕೊಂಡಿರಿ, ದೇವಜನರಾದಿರಿ, ನೀತಿವಂತರೆಂಬ ನಿರ್ಣಯವನ್ನು ಹೊಂದಿದಿರಿ.

ಜಾರತ್ವವು ಅತಿ ಭಯಂಕರವಾದ ಪಾಪಕೃತ್ಯ; ದೇಹವು ಪವಿತ್ರಾತ್ಮನಿಗೆ ಅನುಕೂಲವಾದ ಗರ್ಭಗುಡಿಯಾಗಿರಬೇಕು ಎಂಬುವ ಬೋಧೆ.

ಎಲ್ಲಾ ಕಾರ್ಯಗಳನ್ನು ಮಾಡುವದಕ್ಕೆ ನನಗೆ ಸ್ವಾತಂತ್ರ್ಯವೇನೋ ಉಂಟು, ಆದರೆ 12 ಎಲ್ಲವೂ ವಿಹಿತವಾಗಿರುವದಿಲ್ಲ. ಎಲ್ಲಾ ಕಾರ್ಯಗಳನ್ನು ಮಾಡುವದಕ್ಕೆ ನನಗೆ ಸ್ವಾತಂತ್ರ್ಯವುಂಟು, ಆದರೆ ನಾನು ಯಾವದಕ್ಕೂ ಒಳಗಾಗುವದಿಲ್ಲ. ಭೋಜನ 13 ಪದಾರ್ಥಗಳು ಹೊಟ್ಟೆಗಾಗಿಯೂ ಹೊಟ್ಟೆಯು ಭೋಜನಪದಾರ್ಥಗಳಿಗಾಗಿಯೂ ಅವೆ; ದೇವರು ಇದನ್ನೂ ಅವುಗಳನ್ನೂ ಕೂಡ ತೆಗೆದುಹಾಕುವನು. ಆದರೂ ದೇಹವು ಹಾದರಕ್ಕೋಸ್ಕರ ಇರುವಂಥಾದ್ದಲ್ಲ, ಕರ್ತನಿಗೋಸ್ಕರವಾಗಿದೆ; ಕರ್ತನು ದೇಹಕ್ಕೋ ಸ್ಕರ ಇದ್ದಾನೆ. ದೇವರು ಕರ್ತನನ್ನು ಎಬ್ಬಿಸಿದ್ದಲ್ಲದೆ ನಮ್ಮನ್ನೂ ತನ್ನ ಮಹತ್ವದಿಂದ 14 ಎಬ್ಬಿಸುವನು. ನಿಮ್ಮ ದೇಹಗಳು ಕ್ರಿಸ್ತನಿಗೆ ಅಂಗಗಳಾಗಿವೆ ಎಂಬುವದು ನಿಮಗೆ ತಿಳಿ 15 ಯದೋ? ಹೀಗಿರಲಾಗಿ ಕ್ರಿಸ್ತನಿಗೆ ಅಂಗಗಳಾಗಿರುವಂಥವುಗಳನ್ನು ತೆಗೆದುಬಿಟ್ಟು, ಸೂಳೆಗೆ ಅಂಗಗಳಾಗಮಾಡಬಹುದೋ? ಎಂದಿಗೂ ಮಾಡಬಾರದು. ಸೂಳೆಯ 16 ಸಂಸರ್ಗಮಾಡುವವನು ಅವಳೊಂದಿಗೆ ಒಂದೇ ದೇಹವಾಗುತ್ತಾನೆಂಬುವದು ನಿಮಗೆ ತಿಳಿ ಯದೋ? ಗಂಡಹೆಂಡರಿಬ್ಬರು ಒಂದೇ ಶರೀರವಾಗಿರುವರೆಂದು[1] ದೇವರು ಹೇಳುತ್ತಾ ನಲ್ಲಾ. ಕರ್ತನ ಸಂಸರ್ಗದಲ್ಲಿರುವವನಾದರೋ ಆತನೊಂದಿಗೆ ಒಂದೇ ಆತ್ಮವಾಗಿದ್ದಾನೆ. 17 ಜಾರತ್ವಕ್ಕೆ ದೂರವಾಗಿ ಓಡಿಹೋಗಿರಿ. ಮನುಷ್ಯರು ಮಾಡುವ ಇತರ ಪಾಪಕೃತ್ಯ 18 ಗಳು ದೇಹಕ್ಕೆ ಹೊರಗಾಗಿವೆ, ಆದರೆ ಜಾರತ್ವಮಾಡುವವನು ತನ್ನ ದೇಹಕ್ಕೆ ಹಾನಿಕರ ವಾದ ಪಾಪವನ್ನು ಮಾಡುತ್ತಾನೆ. ನಿಮ್ಮ ದೇಹವು ದೇವರಿಂದ ದೊರಕಿರುವ ಮತ್ತು 19 ನಿಮ್ಮೊಳಗೆ ಇರುವ ಪವಿತ್ರಾತ್ಮನಿಗೆ ಗರ್ಭಗುಡಿಯಾಗಿದೆಂಬುವದು ನಿಮಗೆ ತಿಳಿಯದೋ? ನೀವು ನಿಮ್ಮ ಸ್ವಂತ ಸೊತ್ತಲ್ಲ; ನೀವು ಕ್ರಯಕ್ಕೆ ಕೊಳ್ಳಲ್ಪಟ್ಟವರು; ಆದಕಾರಣ ನಿಮ್ಮ 20 ದೇಹದಲ್ಲಿ ದೇವರ ಪ್ರಭಾವವನ್ನು ಪ್ರಕಾಶಪಡಿಸಿರಿ.

[1] ಉತ್ಪತ್ತಿ ೨, ೨೪.

ಕೊರಿಂಥದವರು ಹಾಕಿದ್ದ ಪ್ರಶ್ನೆಗಳಿಗೆ ಪೌಲನ ಉತ್ತರ (7, 1—14, 40).
ಮದುವೆಯನ್ನು ಕುರಿತದ್ದು.

**7** ನೀವು ಬರೆದ ಸಂಗತಿಗಳನ್ನು ಕುರಿತು ನಾನು ಹೇಳುವ ಅಭಿಪ್ರಾಯವೇನಂದರೆ—
2 ಸ್ತ್ರೀಸಂಪರ್ಕವಿಲ್ಲದೆ ಇರುವದು ಮನುಷ್ಯನಿಗೆ ಒಳ್ಳೇದು; ಆದರೆ ಜಾರತ್ವವು ಪ್ರಬಲವಾಗಿರುವದರಿಂದ, ಪ್ರತಿಯೊಬ್ಬನಿಗೆ ಸ್ವಂತ ಹೆಂಡತಿಯು ಇರಲಿ, ಪ್ರತಿಯೊಬ್ಬಳಿಗೆ ಸ್ವಂತ
3 ಗಂಡನು ಇರಲಿ. ಗಂಡನು ಹೆಂಡತಿಗೆ ಸಲ್ಲತಕ್ಕದ್ದನ್ನು ಸಲ್ಲಿಸಲಿ, ಹಾಗೆಯೇ ಹೆಂಡ
4 ತಿಯು ಗಂಡನಿಗೆ ಸಲ್ಲಿಸಲಿ. ಹೆಂಡತಿಗೆ ಸ್ವಂತ ದೇಹದ ಮೇಲೆ ಅಧಿಕಾರವಿಲ್ಲ; ಅದು ಗಂಡನಿಗುಂಟು. ಹಾಗೆಯೇ ಪುರುಷನಿಗೆ ಸ್ವಂತ ದೇಹದ ಮೇಲೆ ಅಧಿಕಾರವಿಲ್ಲ;
5 ಅದು ಹೆಂಡತಿಗುಂಟು. ಪ್ರಾರ್ಥನೆಗೆ ಮನಸ್ಸು ಕೊಡುವದಕ್ಕಾಗಿ ನೀವು ಪರಸ್ಪರ ಸಮ್ಮತಿಯಿಂದ ಸ್ವಲ್ಪಕಾಲ ದಂಪತಿಧರ್ಮವನ್ನು ಬಿಟ್ಟು ಅಗಲಿರಬಹುದೇ ಹೊರತು ಅನ್ಯಥಾ ಹಾಗೆ ಮಾಡಬಾರದು; ಆ ಮೇಲೆ, ಸೈತಾನನು ನಿಮಗೆ ದಮೆಯಿಲ್ಲದಿರುವದನ್ನು
6 ನೋಡಿ ನಿಮಗೆ ದುಷ್ಪ್ರೇರಣೆಮಾಡದಂತೆ ತಿರಿಗಿ ಕೂಡಿಕೊಳ್ಳಿರಿ. ಹೀಗೆ ಮಾಡಬಹು
7 ದೆಂದು ಹೇಳುವದು ಹಿತೋಪದೇಶವೇ ಹೊರತು ಆಜ್ಞೆಯಲ್ಲ. ನಾನಿರುವಂತೆಯೇ ಎಲ್ಲಾ ಮನುಷ್ಯರು ಇರಬೇಕೆಂಬುವದು ನನ್ನ ಇಷ್ಟ; ಆದರೆ ಒಬ್ಬನು ಒಂದು ವಿಧವಾಗಿ ಮತ್ತೊಬ್ಬನು ಇನ್ನೊಂದು ವಿಧವಾಗಿ ದೇವರಿಂದ ವರವನ್ನು ಹೊಂದಿಕೊಂಡಿದ್ದಾರೆ.
8 ಮದುವೆಯಿಲ್ಲದವರನ್ನೂ ವಿಧವೆಯರನ್ನೂ ಕುರಿತು ನಾನು ಹೇಳುವದೇನಂದರೆ—
9 ನಾನಿರುವಂತೆಯೇ ಇರುವದು ಅವರಿಗೆ ಒಳ್ಳೇದು; ಅವರು ದಮೆಯಿಲ್ಲದವರಾದರೆ ಮದುವೆಮಾಡಿಕೊಳ್ಳಲಿ; ಕಾಮತಾಪಪಡುವದಕ್ಕಿಂತ ಮದುವೆಮಾಡಿಕೊಳ್ಳುವದು ಉತ್ತಮ
10 ವಷ್ಟೆ. ಮದುವೆಮಾಡಿಕೊಂಡಿರುವವರಿಗೆ ನನ್ನ ಅಪ್ಪಣೆ ಮಾತ್ರವಲ್ಲದೆ ಕರ್ತನ ಅಪ್ಪ
11 ಣೆಯು ಏನಂದರೆ—ಹೆಂಡತಿಯು ಗಂಡನನ್ನು ಬಿಟ್ಟು ಅಗಲಬಾರದು[1]; ಒಂದು ವೇಳೆ ಅಗಲಿದರೂ ಪುರುಷಸಹವಾಸವಿಲ್ಲದೆ ಇರಬೇಕು, ಇಲ್ಲವೆ ಗಂಡನ ಸಂಗಡ ಸಮಾಧಾನವಾಗಬೇಕು; ಮತ್ತು ಗಂಡನು ಹೆಂಡತಿಯನ್ನು ಬಿಡಬಾರದು.
12 ಮಿಕ್ಕಾದವರ ವಿಷಯದಲ್ಲಿ ಕರ್ತನ ಮಾತು ಇಲ್ಲವಾದರೂ ನನ್ನ ಅಭಿಪ್ರಾಯವೇನಂದರೆ—ಒಬ್ಬ ಸಹೋದರನಿಗೆ ಕ್ರಿಸ್ತನಂಬಿಕೆಯಿಲ್ಲದ ಹೆಂಡತಿಯಿರಲಾಗಿ ಆಕೆ ಅವನೊಂದಿಗೆ ಒಗತನಮಾಡುವದಕ್ಕೆ ಸಮ್ಮತಿಸಿದರೆ, ಅವನು ಆಕೆಯನ್ನು ಬಿಡಬಾರದು.
13 ಒಬ್ಬ ಸ್ತ್ರೀಗೆ ಕ್ರಿಸ್ತನಂಬಿಕೆಯಿಲ್ಲದ ಗಂಡನಿರಲಾಗಿ ಅವನು ಆಕೆಯೊಂದಿಗೆ ಒಗತನಮಾಡು
14 ವದಕ್ಕೆ ಸಮ್ಮತಿಸಿದರೆ, ಆಕೆಯು ಅವನನ್ನು ಬಿಡಬಾರದು. ಯಾಕಂದರೆ ಕ್ರಿಸ್ತನಂಬಿಕೆಯಿಲ್ಲದ ಗಂಡನು ತನ್ನ ಹೆಂಡತಿಯಲ್ಲಿ ದೇವಜನಕ್ಕೆ ಸಂಬಂಧಪಟ್ಟವನಾದನು; ಮತ್ತು ಕ್ರಿಸ್ತನಂಬಿಕೆಯಿಲ್ಲದ ಹೆಂಡತಿಯು ನಮ್ಮ ಸಹೋದರನಾದ ತನ್ನ ಗಂಡನಲ್ಲಿ ದೇವಜನಕ್ಕೆ ಸಂಬಂಧಪಟ್ಟವಳಾದಳು. ಹಾಗಲ್ಲದಿದ್ದರೆ ನಿಮ್ಮ ಮಕ್ಕಳು ಅಪವಿತ್ರರಾಗುತ್ತಿದ್ದರು;
15 ಈಗಲಾದರೋ ಅವರು ದೇವಜನರಲ್ಲಿ ಸೇರಿದವರೇ ಆಗಿದ್ದಾರೆ. ಆದರೆ ಕ್ರಿಸ್ತನಂಬಿಕೆ

---

[1] ಮಾರ್ಕ ೧೦, ೯.

ಯಿಲ್ಲದವನು ಅಗಲಬೇಕೆಂದಿದ್ದರೆ, ಅಗಲಿಹೋಗಲಿ; ಇಂಥಾ ಸಂದರ್ಭಗಳಲ್ಲಿ ಕ್ರೈಸ್ತ ಸಹೋದರನಾಗಲಿ ಸಹೋದರಿಯಾಗಲಿ ಬದ್ಧರಲ್ಲ. ಸಮಾಧಾನದಲ್ಲಿರಬೇಕೆಂದು ದೇವರು ನಮ್ಮನ್ನು ಕರೆದಿದ್ದಾನೆ. ಎಲೌ ಸ್ತ್ರೀಯೇ, ನಿನ್ನ ಗಂಡನನ್ನು ರಕ್ಷಿಸುವಿಯೋ 16 ಏನೋ ನಿನಗೇನು ಗೊತ್ತು? ಎಲೈ ಪುರುಷನೇ, ನಿನ್ನ ಹೆಂಡತಿಯನ್ನು ರಕ್ಷಿಸುವಿಯೋ ಏನೋ ನಿನಗೇನು ಗೊತ್ತು?

ಆದಾಗ್ಯೂ ಕರ್ತನು ಪ್ರತಿಯೊಬ್ಬನಿಗೆ ಯಾವಯಾವ ಸ್ಥಿತಿಯನ್ನು ನೇಮಿಸಿದ್ದಾನೋ, 17 ಅಂದರೆ ದೇವರು ಕರೆಯುವಾಗ ಪ್ರತಿಯೊಬ್ಬನು ಯಾವಯಾವ ಸ್ಥಿತಿಯಲ್ಲಿ ಇದ್ದಾನೋ, ಆಯಾ ಸ್ಥಿತಿಗೆ ಸರಿಯಾಗಿ ನಡೆದುಕೊಳ್ಳಲಿ. ಹೀಗೆ ಎಲ್ಲಾ ಸಭೆಗಳಲ್ಲಿಯೂ ಆಜ್ಞಾಪಿಸುತ್ತೇನೆ. 18 ದೇವರು ಕರೆದ ಕಾಲದಲ್ಲಿ ಯಾವನಾದರೂ ಸುನ್ನತಿಯುಳ್ಳವನಾಗಿದ್ದನೋ ಅವನು ಸುನ್ನತಿಯಿಲ್ಲದವನಂತಾಗಬಾರದು. ದೇವರು ಕರೆದಾಗ ಯಾವನಾದರೂ ಸುನ್ನತಿಯಿಲ್ಲದವನಾಗಿದ್ದನೋ ಅವನು ಸುನ್ನತಿ ಮಾಡಿಸಿಕೊಳ್ಳಬಾರದು. 19 ಸುನ್ನತಿಯಿದ್ದರೂ ಪ್ರಯೋಜನವಿಲ್ಲ, ಸುನ್ನತಿಯಿಲ್ಲದಿದ್ದರೂ ಪ್ರಯೋಜನವಿಲ್ಲ; ದೇವರ ಕಟ್ಟಳೆಗಳನ್ನು ಅನುಸರಿಸಿ ನಡೆಯುವದೇ ಪ್ರಯೋಜನವಾಗಿದೆ. 20 ದೇವರು ಕರೆದಾಗ ಪ್ರತಿಯೊಬ್ಬನು ಯಾವ ಸ್ಥಿತಿಯಲ್ಲಿದ್ದನೋ ಆ ಸ್ಥಿತಿಯಲ್ಲಿಯೇ ಇರಬೇಕು. 21 ದೇವರು ಕರೆದಾಗ ನೀನು ಮತ್ತೊಬ್ಬನ ದಾಸನಾಗಿದ್ದಿಯೋ? ಅದಕ್ಕೆ ಚಿಂತೆಮಾಡಬೇಡ. ಆದರೆ ಬಿಡುಗಡೆ ಹೊಂದುವದಕ್ಕೆ ನಿನ್ನ ಕೈಯಿಂದಾದರೆ, ಸ್ವತಂತ್ರನಾಗುವದೇ ಉತ್ತಮ[1]. 22 ಯಾವನು ಮತ್ತೊಬ್ಬನ ದಾಸನಾಗಿದ್ದು ಕರ್ತನ ಸೇವೆಗೆ ಕರೆಯಲ್ಪಟ್ಟಿರುವನೋ ಅವನು ಕರ್ತನ ಮೂಲಕ ಬಿಡುಗಡೆ ಹೊಂದಿರುವ ಸ್ವತಂತ್ರನು. ಅದೇ ಪ್ರಕಾರ ಯಾವನು ಸ್ವತಂತ್ರನಾಗಿದ್ದು ಕರೆಯಲ್ಪಟ್ಟಿರುವನೋ ಅವನು ಕ್ರಿಸ್ತನಿಗೆ ದಾಸನು. 23 ನೀವು ಕ್ರಯಕ್ಕೆ ಕೊಳ್ಳಲ್ಪಟ್ಟವರು, ಮನುಷ್ಯರಿಗೆ ದಾಸರಾಗಬೇಡಿರಿ. 24 ಸಹೋದರರೇ, ಪ್ರತಿಯೊಬ್ಬನು ಕರೆಯಲ್ಪಟ್ಟಾಗ ಯಾವ ಸ್ಥಿತಿಯಲ್ಲಿದ್ದನೋ ಅದೇ ಸ್ಥಿತಿಯಲ್ಲಿ ದೇವರ ಮುಂದೆ ಇದ್ದುಕೊಂಡಿರಲಿ.

25 ಕನ್ನಿಕೆಯರನ್ನು ಕುರಿತು ಕರ್ತನಿಂದ ಬಂದ ಆಜ್ಞೆ ನನಗೆ ಯಾವದೂ ಇಲ್ಲ; ಆದರೆ ನಂಬಿಗಸ್ತನಾಗಿರುವದಕ್ಕೆ ಕರ್ತನಿಂದ ಕರುಣೆಯನ್ನು ಹೊಂದಿದವನಾಗಿ ನನ್ನ ಅಭಿಪ್ರಾಯವನ್ನು ಹೇಳುತ್ತೇನೆ. 26 ಈಗಿನ ಕಷ್ಟಕಾಲದ ನಿಮಿತ್ತ ಜನರು ಇದ್ದ ಹಾಗೇ ಇರುವದು ಒಳ್ಳೇದೆಂದು ಭಾವಿಸುತ್ತೇನೆ. 27 ಹೆಂಡತಿಯನ್ನು ಕಟ್ಟಿಕೊಂಡಿದ್ದೀಯೋ? ಬಿಡುಗಡೆಯಾಗುವದಕ್ಕೆ ಪ್ರಯತ್ನಿಸಬೇಡ. ಹೆಂಡತಿಯ ಕಟ್ಟಿಲ್ಲದವನಾಗಿದ್ದೀಯೋ? ಹೆಂಡತಿಯನ್ನು ದೊರಕಿಸಿಕೊಳ್ಳುವದಕ್ಕೆ ಪ್ರಯತ್ನಿಸಬೇಡ. 28 ಒಂದು ವೇಳೆ ನೀನು ಮದುವೆ ಮಾಡಿಕೊಂಡರೂ ಪಾಪವಿಲ್ಲ, ಕನ್ನಿಕೆಯು ಮದುವೆಮಾಡಿಕೊಂಡರೂ ಪಾಪವಿಲ್ಲ. ಆದರೆ ಮದುವೆಮಾಡಿಕೊಂಡವರಿಗೆ ಶರೀರಸಂಬಂಧವಾಗಿ ಕಷ್ಟ ಸಂಭವಿಸುವದು; ಇದು ನಿಮಗೆ ಉಂಟಾಗಬಾರದೆಂದು ನನ್ನ ಅಪೇಕ್ಷೆ. 29 ಸಹೋದರರೇ, ನಾನು ಹೇಳುವದೇನಂದರೆ—ಸಮಯವು ಸಂಕೋಚವಾದದ್ದರಿಂದ, ಇನ್ನು ಮೇಲೆ ಹೆಂಡತಿಯುಳ್ಳವರು ಹೆಂಡತಿಯಿಲ್ಲದವರಂತೆಯೂ, 30 ಅಳುವವರು ಅಳದವರಂತೆಯೂ, ಸಂತೋಷಪಡುವವರು ಸಂತೋಷಪಡದವರಂತೆಯೂ, ಕೊಂಡುಕೊಳ್ಳುವವರು ಕೊಂಡದ್ದು ತಮ್ಮದೇ ಎಂದು

[1] ಅಥವಾ, ಬಿಡುಗಡೆಹೊಂದುವದಕ್ಕೆ ಸಾಧ್ಯವಾದರೂ ದಾಸನಾಗಿಯೇ ಇರುವದು ಒಳ್ಳೇದು.

31 ಹೇಳದವರಂತೆಯೂ, ಲೋಕವನ್ನು ಅನುಭೋಗಿಸುವವರು ಅದನ್ನು ಪರಿಪೂರ್ಣವಾಗಿ ಅನುಭೋಗಿಸದವರಂತೆಯೂ ಇರಬೇಕು; ಯಾಕಂದರೆ ಈ ಪ್ರಪಂಚದ ತೋರಿಕೆಯು
32 ಗತಿಸಿ ಹೋಗುತ್ತಾ ಅದೆ. ಆದರೆ ನೀವು ಚಿಂತೆಯಿಲ್ಲದವರಾಗಿರಬೇಕೆಂಬುವದು ನನ್ನ ಇಷ್ಟ. ಮದುವೆಯಿಲ್ಲದವನು ತಾನು ಕರ್ತನನ್ನು ಹ್ಯಾಗೆ ಮೆಚ್ಚಿಸಬೇಕೆಂದು ಕರ್ತನ
33 ಕಾರ್ಯಗಳನ್ನು ಕುರಿತು ಚಿಂತಿಸುತ್ತಾನೆ. ಮದುವೆಯಾದವನು ತನ್ನ ಹೆಂಡತಿಯನ್ನು ಹ್ಯಾಗೆ ಮೆಚ್ಚಿಸಬೇಕೆಂದು ಪ್ರಪಂಚದ ಕಾರ್ಯಗಳನ್ನು ಕುರಿತು ಚಿಂತಿಸುತ್ತಾನೆ.
34 ಅದರಂತೆ ಮುತ್ತೈದೆಗೂ ಕನ್ನಿಕೆಗೂ ವ್ಯತ್ಯಾಸವುಂಟು. ಮದುವೆಯಿಲ್ಲದವಳು ತಾನು ದೇಹಾತ್ಮಗಳಲ್ಲಿ ಪವಿತ್ರಳಾಗಿರಬೇಕೆಂದು ಕರ್ತನ ಕಾರ್ಯಗಳನ್ನು ಕುರಿತು ಚಿಂತಿಸುತ್ತಾಳೆ; ಆದರೆ ಮದುವೆಯಾದವಳು ತನ್ನ ಗಂಡನನ್ನು ಹ್ಯಾಗೆ ಮೆಚ್ಚಿಸಬೇಕೆಂದು ಪ್ರಪಂಚದ
35 ಕಾರ್ಯಗಳನ್ನು ಕುರಿತು ಚಿಂತಿಸುತ್ತಾಳೆ. ನಾನು ನಿಮಗೆ ಉರ್ಲುಹಾಕಬೇಕೆಂದು ಇದನ್ನು ಹೇಳುವದಿಲ್ಲ, ನೀವು ಸಜ್ಜನರಿಗೆ ತಕ್ಕಹಾಗೆ ನಡೆದು ಭಿನ್ನಭಾವವಿಲ್ಲದೆ ಕರ್ತನಿಗೆ ಪಾದಸೇವೆಯನ್ನು ಮಾಡುವವರಾಗಬೇಕೆಂದು ನಿಮ್ಮ ಹಿತಕ್ಕೋಸ್ಕರವೇ ಹೇಳುತ್ತೇನೆ.
36 ಒಬ್ಬನು ತನ್ನ ಮಗಳಿಗೆ ಮದುವೆಯಿಲ್ಲದಿರುವದು ಮರ್ಯಾದೆಯಲ್ಲವೆಂದು ಭಾವಿಸಿದರೆ, ಮತ್ತು ಆಕೆಗೆ ಪ್ರಾಯ ಕಳೆದುಹೋಗುತ್ತದಲ್ಲಾ, ಮದುವೆಯಾಗುವದು ಅವಶ್ಯವೆಂದು ಅವನಿಗೆ ಕಂಡರೆ, ತನ್ನಿಷ್ಟದಂತೆ ಮಾಡಲಿ. ಅವನು ಪಾಪಮಾಡುವದಿಲ್ಲ, ಮದುವೆಮಾಡಿ
37 ಕೊಡಲಿ. ಆದರೆ ಒಬ್ಬನು ದೃಢಚಿತ್ತನಾಗಿದ್ದು ಬಲವಂತವೇನೂ ಇಲ್ಲದೆ ತನ್ನಿಷ್ಟವನ್ನು ನಡಿಸುವದಕ್ಕೆ ಹಕ್ಕುಳ್ಳವನಾಗಿ ತನ್ನ ಮಗಳನ್ನು ಮದುವೆಮಾಡಿಕೊಡುವದಿಲ್ಲವೆಂದು
38 ತನ್ನೊಳಗೆ ನಿರ್ಣಯಿಸಿಕೊಂಡರೆ, ಅವನು ಹಾಗೆ ಮಾಡುವದು ಒಳ್ಳೇದು. ಹಾಗಾದರೆ ತನ್ನ ಮಗಳನ್ನು ಮದುವೆಮಾಡಿಕೊಡುವವನು ಒಳ್ಳೇದನ್ನು ಮಾಡುತ್ತಾನೆ. ಮದುವೆ
39 ಮಾಡಿಕೊಡದೆ ಇರುವವನು ಇನ್ನೂ ಒಳ್ಳೇದನ್ನು ಮಾಡುತ್ತಾನೆ. ಮುತ್ತೈದೆಯು ತನ್ನ ಗಂಡನು ಜೀವದಿಂದಿರುವ ತನಕ ಅವನಿಗೆ ಬದ್ಧಳಾಗಿದ್ದಾಳೆ; ಗಂಡನು ಸತ್ತಿದ್ದರೆ, ಆಕೆಯು ಬೇಕಾದವನನ್ನು ಮದುವೆಮಾಡಿಕೊಳ್ಳುವದಕ್ಕೆ ಸ್ವತಂತ್ರಳಾಗಿದ್ದಾಳೆ. ಆದರೆ ಈ
40 ಕಾರ್ಯವು ಕರ್ತನ ಶಿಷ್ಯರಿಗೆ ತಕ್ಕಂತೆ ನಡಿಯಲಿ. ಆದಾಗ್ಯೂ ಮದುವೆಮಾಡಿಕೊಳ್ಳುವದಕ್ಕಿಂತಲೂ ಇದ್ದ ಹಾಗೆಯೇ ಇರುವದು ಆಕೆಗೆ ಸುಖವೆಂದು ನನ್ನ ಅಭಿಪ್ರಾಯ; ನನಗೂ ದೇವರ ಆತ್ಮವುಂಟೆಂದು ನೆನಸುತ್ತೇನೆ.

ವಿಗ್ರಹಾರಾಧನೆಯ ಗೊಡವೆಗೆ ಹೋಗುವದನ್ನು ಕುರಿತದ್ದು (8, 1—11, 1).
ವಿಗ್ರಹಕ್ಕೆ ಅರ್ಪಿತವಾದದ್ದನ್ನು ಉಣ್ಣುವದು ದೋಷವಲ್ಲದಿದ್ದರೂ ಕೆಲವು ಸಂದರ್ಭಗಳಲ್ಲಿ ಇತರರಿಗೋಸ್ಕರ ಉಣ್ಣದೆ ಇರುವದು ಉತ್ತಮವೆಂಬ ಬೋಧನೆ.

**8** ವಿಗ್ರಹಕ್ಕೆ ನೈವೇದ್ಯಮಾಡಿದ ಪದಾರ್ಥಗಳ ವಿಷಯದಲ್ಲಿ ಈಗ ನೋಡೋಣ. ನಮ್ಮೆಲ್ಲರಿಗೆ ಜ್ಞಾನವುಂಟೆಂದು ಬಲ್ಲೆವು. ಜ್ಞಾನವು ಉಬ್ಬಿಸುತ್ತದೆ, ಪ್ರೀತಿಯು ಭಕ್ತಿವೃದ್ಧಿ
2 ಯನ್ನುಂಟುಮಾಡುತ್ತದೆ. ಇಂಥಿಂಥಾದ್ದನ್ನು ತಿಳುಕೊಂಡಿದ್ದೇನೆಂದು ನೆನಸಿದವನು ತಾನು
3 ತಿಳಿಯಬೇಕಾದ ರೀತಿಯಿಂದ ಇನ್ನೂ ತಿಳುಕೊಳ್ಳಲಿಲ್ಲ. ಆದರೆ ಯಾವನು ದೇವರನ್ನು

ಪ್ರೀತಿಸುತ್ತಾನೋ ಅವನನ್ನೇ ದೇವರು ತಿಳುಕೊಳ್ಳುತ್ತಾನೆ. ವಿಗ್ರಹಗಳಿಗೆ ನೈವೇದ್ಯ 4 ಮಾಡಿದ ಪದಾರ್ಥಗಳನ್ನು ತಿನ್ನುವದರ ವಿಷಯದಲ್ಲಿ ನಾನು ಹೇಳುವದೇನಂದರೆ,—ವಿಗ್ರ ಹಗಳಿಂದ ಸೂಚಿತವಾಗಿರುವ ದೇವರುಗಳು ಜಗತ್ತಿನಲ್ಲಿ[1] ಇಲ್ಲವೇ ಇಲ್ಲವೆಂದೂ ಒಬ್ಬ ದೇವರಿದ್ದಾನೆ ಹೊರತು ಬೇರೆ ದೇವರಿಲ್ಲವೆಂದೂ ಬಲ್ಲೆವು. ಅನೇಕರನ್ನು ದೇವರುಗ 5 ಳೆಂದೂ ಕರ್ತರೆಂದೂ ಪೂಜಿಸುವದುಂಟು ನಿಜವೇ; ಆದರೆ ಆಕಾಶದಲ್ಲಿಯಾಗಲಿ ಭೂಮಿ ಯ ಮೇಲೆಯಾಗಲಿ ದೇವರುಗಳೆನ್ನಿಸಿಕೊಳ್ಳುವವರಿದ್ದಾಗ್ಯೂ, ನಮಗೋ ತಂದೆಯಾಗಿ 6 ರುವಾತನೊಬ್ಬನೇ ದೇವ. ಆತನು ಸಮಸ್ತಕ್ಕೂ ಮೂಲ ಕಾರಣನು; ನಾವು ಆತನಿಗಾಗಿ ಉಂಟಾದೆವು. ಮತ್ತು ಯೇಸು ಕ್ರಿಸ್ತನೊಬ್ಬನೇ ಕರ್ತ; ಆತನ ಮುಖಾಂತರ ಸಮಸ್ತವೂ ಉಂಟಾಯಿತು, ನಾವೂ ಆತನ ಮುಖಾಂತರ ಉಂಟಾದೆವು. ಆದರೆ ಈ ಜ್ಞಾನವು 7 ಎಲ್ಲರಲ್ಲಿಯೂ ಇಲ್ಲ. ಕೆಲವರು ಈ ವರೆಗೂ ವಿಗ್ರಹದ ಬಳಿಗೆ ಹೋಗುವ ರೂಢಿಯ ಲ್ಲಿದ್ದದರಿಂದ, ತಾವು ತಿನ್ನುವ ಪದಾರ್ಥಗಳನ್ನು ವಿಗ್ರಹಕ್ಕೆ ನೈವೇದ್ಯಮಾಡಿದ್ದೆಂದು ತಿನ್ನು ತ್ತಾರೆ; ಹೀಗೆ ಅವರ ಮನಸ್ಸು ಬಲಹೀನವಾಗಿದ್ದು ಕಲೆಯನ್ನು ಹೊಂದುತ್ತದೆ. ಆದರೆ 8 ನಾವು ಯಾವ ಆಹಾರ ಮಾಡಿದರೂ ದೇವರ ದೃಷ್ಟಿಗೆ ಬೇರೆಯಾಗುವದಿಲ್ಲ. ತಿನ್ನದಿದ್ದರೆ ನಮಗೆ ಕಡಿಮೆಯಿಲ್ಲ, ತಿಂದರೆ ನಮಗೆ ಹೆಚ್ಚಿಲ್ಲ. ಆದಾಗ್ಯೂ ಈ ನಿಮ್ಮ ಸ್ವಾತಂತ್ರ್ಯವು 9 ನಂಬಿಕೆಯಲ್ಲಿ ಬಲವಿಲ್ಲದವರಿಗೆ ಒಂದು ವೇಳೆ ವಿಘ್ನವಾದೀತು, ಎಚ್ಚರಿಕೆಯಾಗಿರಿ. ಜ್ಞಾನಿ 10 ಯಾದ ನೀನು ವಿಗ್ರಹಾಲಯದಲ್ಲಿ ಊಟಕ್ಕೆ ಕೂತಿರುವಾಗ ನಿರ್ಬಲಚಿತ್ತನಾದ ಸಹೋ ದರನು ಕಂಡರೆ, ಅವನೂ ವಿಗ್ರಹಕ್ಕೆ ನೈವೇದ್ಯಮಾಡಿದ ಪದಾರ್ಥಗಳನ್ನು ತಿನ್ನುವದಕ್ಕೆ ಧೈರ್ಯ ತಂದುಕೊಂಡಾನಲ್ಲವೇ? ಹೀಗೆ ಆ ಬಲಹೀನನು ನಿನ್ನ ಜ್ಞಾನದಿಂದ ನಾಶವಾಗು 11 ತ್ತಾನೆ. ಅವನು ಸಹೋದರನಲ್ಲವೇ? ಅವನಿಗಾಗಿಯೂ ಕ್ರಿಸ್ತನು ತನ್ನ ಪ್ರಾಣಕೊಟ್ಟ ನಲ್ಲವೇ? ಹೀಗಿರಲಾಗಿ ಸಹೋದರರಿಗೆ ಪಾಪಮಾಡಿ ಅವರ ನಿರ್ಬಲವಾದ ಮನಸ್ಸನ್ನು 12 ನೋಯಿಸಿ ಕ್ರಿಸ್ತನಿಗೆ ಪಾಪಮಾಡುವವರಾಗುತ್ತೀರಿ. ಆದದರಿಂದ ಭೋಜನಪದಾರ್ಥ 13 ದಿಂದ ನನ್ನ ಸಹೋದರನಿಗೆ ವಿಘ್ನವಾಗುವದಾದರೆ, ನಾನು ಎಂದಿಗೂ ಮಾಂಸವನ್ನು ತಿನ್ನು ವದಿಲ್ಲ; ನಾನು ನನ್ನ ಸಹೋದರನಿಗೆ ವಿಘ್ನವನ್ನುಂಟುಮಾಡಬಾರದಲ್ಲಾ.

ಸಭೆಯಿಂದ ಪೋಷಣೆ ಹೊಂದುವದಕ್ಕೆ ಬೋಧಕರಿಗೆ ಹಕ್ಕಿದ್ದಾಗ್ಯೂ ಪೌಲನು ಇತರರ ಹಿತಕ್ಕೋಸ್ಕರ ಆ ಹಕ್ಕನ್ನು ಬಳಸದೆ ಹೋದದರಲ್ಲಿ ಅವನ ನಡತೆಯೇ ಹಿಂದಿನ ಬೋಧೆಗೆ ದೃಷ್ಟಾಂತ.

**9** ನಾನು ಸ್ವತಂತ್ರನಲ್ಲವೇ? ಅಪೊಸ್ತಲನಲ್ಲವೇ? ನಮ್ಮ ಕರ್ತನಾದ ಯೇಸುವನ್ನು ಕಂಡವನಲ್ಲವೇ? ನಾನು ಕರ್ತನ ಸೇವೆಯಲ್ಲಿ ಮಾಡಿದ ಕೆಲಸದ ಫಲವು ನೀವೇ ಅಲ್ಲವೇ? ಇತರರಿಗೆ ನಾನು ಅಪೊಸ್ತಲನಲ್ಲದಿದ್ದಾಗ್ಯೂ ನಿಮಗಾದರೂ ಅಪೊಸ್ತಲನಾಗಿದ್ದೇನೆ. 2 ನಾನು ಅಪೊಸ್ತಲನಾಗಿದ್ದೇನೆಂಬುವದಕ್ಕೆ ಕರ್ತನಿಗೆ ಸೇರಿದವರಾದ ನೀವೇ ಪ್ರಮಾಣ ವಾಗಿದ್ದೀರಷ್ಟೆ. ನನ್ನನ್ನು ವಿಚಾರಿಸುವವರಿಗೆ ಇದೇ ನನ್ನ ಉತ್ತರ. ಅನ್ನಪಾನಗಳಿಗೆ 3,4 ನಮಗೆ ಹಕ್ಕಿಲ್ಲವೇ? ಕ್ರೈಸ್ತ ಸಹೋದರಿಯಾಗಿರುವ ಹೆಂಡತಿಯನ್ನು ಕರಕೊಂಡು ಸಂಚ 5

[1] ಅಥವಾ, ಜಗತ್ತಿನಲ್ಲಿ ವಿಗ್ರಹವು ಗಣನೆಗೆ ಬರತಕ್ಕದ್ದಲ್ಲವೆಂದೂ.

ರಿಸುವದಕ್ಕೆ ಮಿಕ್ಕಾದ ಅಪೊಸ್ತಲರಂತೆಯೂ ಕರ್ತನ ಅಣ್ಣತಮ್ಮಂದಿರಂತೆಯೂ ಕೇಫನಂತೆ
6 ಯೂ ನಮಗೆ ಹಕ್ಕಿಲ್ಲವೇ? ಅಥವಾ, ಕೈಕೆಲಸವನ್ನು ಮಾಡದೆ ಜೀವಿಸುವದಕ್ಕೆ ನನಗೂ
7 ಬಾರ್ನಬನಿಗೂ ಮಾತ್ರ ಹಕ್ಕಿಲ್ಲವೇನು? ಯಾವ ಸಿಪಾಯಿಯಾದರೂ ಸ್ವಂತ ಕರ್ಚಿ
ನಿಂದ ಯುದ್ಧಕ್ಕೆ ಹೋಗುವದುಂಟೇ? ದ್ರಾಕ್ಷೇ ತೋಟವನ್ನು ಮಾಡಿದವನು ಅದರ ಫಲ
ವನ್ನು ತಿನ್ನದೆ ಇರುವದುಂಟೋ? ಪಶುಗಳನ್ನು ಸಾಕಿದವನು ಅವುಗಳ ಹೈನಿನಿಂದ ಜೀವಿ
8 ಸದೆ ಇರುವದುಂಟೋ? ನಾನು ಹೇಳಿದ್ದು ಬರೀ ಲೋಕವಾಡಿಕೆಯ ಮಾತೋ? ಧರ್ಮ
9 ಶಾಸ್ತ್ರವೂ ಇದನ್ನು ಹೇಳುವದಿಲ್ಲವೋ? ಕಣ ತುಳಿಯುವ ಎತ್ತಿನ ಬಾಯಿ ಕಟ್ಟಬಾರ
ದೆಂದು[1] ಮೋಶೆಯ ಧರ್ಮಶಾಸ್ತ್ರದಲ್ಲಿ ಬರೆದದೆ. ದೇವರು ಚಿಂತಿಸುವದು ಎತ್ತುಗಳಿ
10 ಗಾಗಿಯೋ? ಅಥವಾ ನಮಗೋಸ್ಕರವಾಗಿಯೇ ಹೇಳುತ್ತಾನೋ? ಹೌದು, ನಮಗೋ
ಸ್ಕರ ಬರೆದದೆ. ಉಳುವವನು ಬೆಳೆಯಲ್ಲಿ ತನಗೆ ಪಾಲು ದೊರಕುತ್ತದೆಂದು ಉಳುವದೂ,
11 ಒಕ್ಕುವವನು ತನಗೆ ಪಾಲು ದೊರಕುತ್ತದೆಂದು ಒಕ್ಕುವದೂ ನ್ಯಾಯ. ನಾವು ನಿಮ
ಗೋಸ್ಕರ ಆತ್ಮಸಂಬಂಧವಾದ ಬೀಜವನ್ನು ಬಿತ್ತಿದ ಮೇಲೆ ನಿಮ್ಮಿಂದ ಶರೀರಸಂಬಂಧ
12 ವಾದ ಪೈರನ್ನು ಕೊಯ್ಯುವದು ದೊಡ್ಡದೋ? ಈ ಹಕ್ಕು ಇತರರಿಗೆ ನಿಮ್ಮ ಮೇಲೆ
ಇದ್ದರೆ, ನಮಗೆ ಎಷ್ಟೋ ಹೆಚ್ಚಾಗಿ ಇರಬೇಕಲ್ಲಾ. ಆದಾಗ್ಯೂ ನಾವು ಈ ಹಕ್ಕನ್ನು
ನಡಿಸದೆ, ಕ್ರಿಸ್ತನ ಸುವಾರ್ತೆಗೆ ಅಡ್ಡಿಮಾಡಬಾರದೆಂದು ಎಲ್ಲವನ್ನೂ ಸಹಿಸಿಕೊಂಡೆವು.
13 ದೇವಾಲಯದ ಊಳಿಗವನ್ನು ನಡಿಸುವವರು ದೇವಾಲಯದ ಆದಾಯದಿಂದ ಊಟ
ಮಾಡುತ್ತಾರೆಂಬುವದೂ ಯಜ್ಞವೇದಿಯ ಬಳಿಯಲ್ಲಿ ಸೇವೆಮಾಡುವವರು ಆ ವೇದಿಗೆ
14 ಬರುವ ಪದಾರ್ಥಗಳಲ್ಲಿ ಪಾಲುಹೊಂದುತ್ತಾರೆಂಬುವದೂ ನಿಮಗೆ ತಿಳಿಯದೋ? ಅದೇ
ರೀತಿಯಾಗಿ ಕರ್ತನು ಸಹ ಸುವಾರ್ತೆಯನ್ನು ಸಾರುವವರು ಸುವಾರ್ತೆಯಿಂದಲೇ ಜೀವನ
ಮಾಡಬೇಕೆಂದು ನೇಮಿಸಿದನು[2].

15 ನಾನಂತೂ ಈ ಹಕ್ಕುಗಳಲ್ಲಿ ಒಂದನ್ನೂ ನಡಿಸಲಿಲ್ಲ; ನನ್ನ ವಿಷಯದಲ್ಲಿಯೂ ಹೀಗಾಗ
ಬೇಕೆಂದು ಈ ಸಂಗತಿಗಳನ್ನು ನಾನು ಬರೆಯಲಿಲ್ಲ. ಅದಕ್ಕಿಂತ ಸಾಯುವದೇ ನನಗೆ
ಲೇಸು. ಹೊಗಳಿಕೊಳ್ಳುವದಕ್ಕೆ ನನಗಿರುವ ಈ ಆಸ್ಪದವನ್ನು ಯಾರೂ ತೆಗೆದುಬಿಡ
16 ಬಾರದು. ನಾನು ಸುವಾರ್ತೆಯನ್ನು ಸಾರಿದರೂ ಹೊಗಳಿಕೊಳ್ಳುವದಕ್ಕೆ ನನಗೇನೂ
ಆಸ್ಪದವಿಲ್ಲ; ಸಾರಲೇ ಬೇಕೆಂಬ ನಿರ್ಬಂಧ ನನಗುಂಟು. ಸಾರದಿದ್ದರೆ ನನ್ನ ಗತಿಯನ್ನು
17 ಏನು ಹೇಳಲಿ. ನಾನು ಸ್ವಂತ ಇಷ್ಟದಿಂದ ಈ ಕೆಲಸವನ್ನು ಮಾಡಿದರೆ, ನನಗೆ ಬಹು
ಮಾನ ದೊರೆಯುವದು; ಮತ್ತೊಬ್ಬನ ಇಷ್ಟದಿಂದ ಮಾಡಿದರೆ, ಮನೆವಾರ್ತೆಯು ನನ್ನ
18 ವಶಕ್ಕೆ ಕೊಡಲ್ಪಟ್ಟಿದೆ. ಹಾಗಾದರೆ ನನಗಾಗುವ ಬಹುಮಾನವೇನು? ಸುವಾರ್ತೆ
ಯನ್ನು ಸಾರುವಾಗ ಅದರಿಂದ ಜೀವನ ಮಾಡುವ ಹಕ್ಕನ್ನು ನಡಿಸದೆ ಅದನ್ನು ಉಚಿ
ತಾರ್ಥವಾಗಿ ದಾನಮಾಡುವದೇ ನನಗೆ ಬಹುಮಾನ.

19 ನಾನು ಎಲ್ಲಾ ವಿಷಯದಲ್ಲಿ ಸ್ವತಂತ್ರನಾಗಿದ್ದಾಗ್ಯೂ ಹೆಚ್ಚು ಜನರನ್ನು ಸಂಪಾದಿಸಿಕೊಳ್ಳ
20 ಬೇಕೆಂದು ನನ್ನನ್ನು ಎಲ್ಲರಿಗೂ ಅಧೀನಮಾಡಿದೆನು. ಯೆಹೂದ್ಯರನ್ನು ಸಂಪಾದಿಸಿಕೊಳ್ಳು

---

[1] ದ್ವಿತೀಯ ನ್ಯಾಯ ೨೫, ೪.  [2] ಮತ್ತಾಯ ೧೦, ೧೦; ಲೂಕ ೧೦, ೭.

ವದಕ್ಕೆ ಯೆಹೂದ್ಯರಿಗೆ ಯೆಹೂದ್ಯನಂತಾದೆನು. ನಾನು ನಿಯಮಗಳಿಗೆ ಅಧೀನನಲ್ಲದವನಾದಾಗ್ಯೂ ನಿಯಮಗಳಿಗೆ ಅಧೀನರಾದವರನ್ನು ಸಂಪಾದಿಸಿಕೊಳ್ಳುವದಕ್ಕಾಗಿ ಅವರಿಗೆ ನಿಯಮಗಳಿಗೆ ಅಧೀನನಂತಾದೆನು. 21 ನಾನು ದೇವರ ನೇಮವಿಲ್ಲದವನಲ್ಲ, ಕ್ರಿಸ್ತನ ನಿಯಮಕ್ಕೊಳಗಾದವನೇ; ಆದಾಗ್ಯೂ ನಿಯಮವಿಲ್ಲದವರನ್ನು ಸಂಪಾದಿಸಿಕೊಳ್ಳುವದಕ್ಕಾಗಿ ಅವರಿಗೆ ನಿಯಮವಿಲ್ಲದವನಂತಾದೆನು[1]. 22 ಬಲವಿಲ್ಲದವರನ್ನು ಸಂಪಾದಿಸುವದಕ್ಕೆ ಅವರಿಗೆ ಬಲವಿಲ್ಲದವನಾದೆನು. ಯಾವ ವಿಧದಲ್ಲಿಯಾದರೂ ಕೆಲವರನ್ನು ರಕ್ಷಿಸಬೇಕೆಂದು ಯಾರ್ಯಾರಿಗೆ ಎಂಥೆಂಥವನಾಗಬೇಕೋ ಅಂಥಂಥವನಾಗಿದ್ದೇನೆ. 23 ನಾನು ಇತರರ ಸಂಗಡ ಸುವಾರ್ತೆಯ ಫಲದಲ್ಲಿ ಪಾಲುಗಾರನಾಗಬೇಕೆಂದು ಇದೆಲ್ಲವನ್ನು ಸುವಾರ್ತೆಗೋಸ್ಕರವೇ ಮಾಡುತ್ತೇನೆ.

24 ರಂಗಸ್ಥಾನದಲ್ಲಿ ಓಡುವದಕ್ಕೆ ಗೊತ್ತಾದವರೆಲ್ಲರೂ ಓಡುತ್ತಾರಾದಾಗ್ಯೂ ಒಬ್ಬನು ಮಾತ್ರ ಬಿರುದನ್ನು ಹೊಂದುತ್ತಾನೆ ಎಂಬುವದು ನಿಮಗೆ ತಿಳಿಯದೋ? ಅವರಂತೆ ನೀವೂ ಬಿರುದನ್ನು ಪಡಕೊಳ್ಳಬೇಕೆಂತಲೇ ಓಡಿರಿ. 25 ಅದರಲ್ಲಿ ಹೋರಾಡುವವರೆಲ್ಲರು ಎಲ್ಲಾ ವಿಷಯಗಳಲ್ಲಿ ಮಿತವಾಗಿರುತ್ತಾರೆ. ಅವರು ಬಾಡಿಹೋಗುವ ಜಯಮಾಲಿಕೆಯನ್ನು ಹೊಂದುವದಕ್ಕೆ ಸಾಧನೆಮಾಡುತ್ತಾರೆ; ನಾವಾದರೋ ಬಾಡಿಹೋಗದ ಜಯಮಾಲಿಕೆಯನ್ನು ಹೊಂದುವದಕ್ಕೆ ಸಾಧನೆ ಮಾಡುವವರಾಗಿದ್ದೇವೆ. 26 ಹೀಗಿರಲಾಗಿ ನಾನು ಸಹ ಗುರಿಗೊತ್ತಿಲ್ಲದವನಾಗಿ ಓಡದೆ ಗೆಲ್ಲಬೇಕೆಂದಿರುವ ಅವರಂತೆಯೇ ಓಡುತ್ತೇನೆ; ನಾನು ಗಾಳಿಯನ್ನು ಗುದ್ದುವವನಾಗಿರದೆ ಗೆಲ್ಲಬೇಕೆಂದವನಾಗಿ ಗುದ್ದ್ಯಾಡುತ್ತೇನೆ. 27 ಇತರರನ್ನು ಹೋರಾಟಕ್ಕೆ ಕರೆದ ಮೇಲೆ ನಾನೇ ಅಯೋಗ್ಯನೆನ್ನಿಸಿಕೊಂಡೇನೋ ಎಂಬ ಭಯದಿಂದ ನನ್ನ ಮೈಯನ್ನು ಜಜ್ಜಿ ಸ್ವಾಧೀನಪಡಿಸಿಕೊಳ್ಳುತ್ತೇನೆ.

### ಕ್ರೈಸ್ತರ ಎಚ್ಚರಿಕೆಗಾಗಿ ಪೌಲನು ಇಸ್ರಯೇಲ್ಯರ ದೃಷ್ಟಾಂತವನ್ನು ಸೂಚಿಸಿದ್ದು.

**10** ಸಹೋದರರೇ, ಮುಂದಿನ ಸಂಗತಿಯಲ್ಲಿ ನೀವು ಲಕ್ಷ್ಯವಿಡಬೇಕೆಂದು ನಾನು ಅಪೇಕ್ಷಿಸುತ್ತೇನೆ. ಅದೇನಂದರೆ, ನಮ್ಮ ಪಿತೃಗಳೆಲ್ಲರೂ ಮೇಘದ ನೆರಳಿನಲ್ಲಿದ್ದರು; ಅವರೆಲ್ಲರೂ ಸಮುದ್ರವನ್ನು ದಾಟಿಹೋದರು; 2 ಅವರೆಲ್ಲರೂ ಮೋಶೆಯ ಶಿಷ್ಯರಾಗುವದಕ್ಕಾಗಿ ಮೇಘದಲ್ಲಿಯೂ ಸಮುದ್ರದಲ್ಲಿಯೂ ದೀಕ್ಷಾಸ್ನಾನವನ್ನು ಹೊಂದಿದರು; 3 ಅವರೆಲ್ಲರೂ ದೈವಿಕವಾದ ಒಂದೇ ಆಹಾರವನ್ನು ತಿಂದರು; 4 ಅವರೆಲ್ಲರೂ ದೈವಿಕವಾದ ಒಂದೇ ನೀರನ್ನು ಕುಡಿದರು; ಹ್ಯಾಗಂದರೆ, ಅವರ ಹಿಂದೆ ಹೋಗುತ್ತಿದ್ದ ದೈವಿಕವಾದ ಬಂಡೆಯೊಳಗಿಂದ ಬಂದ ನೀರನ್ನು ಕುಡಿಯುತ್ತಿದ್ದರು; ಆ ಬಂಡೆ ಕ್ರಿಸ್ತನೇ. 5 ಆದಾಗ್ಯೂ ಅವರೊಳಗೆ ಬಹು ಮಂದಿಯ ವಿಷಯದಲ್ಲಿ ದೇವರು ಸಂತೋಷಿಸಲಿಲ್ಲ. ಅವರು ಅಡವಿಯಲ್ಲಿ ಸಂಹರಿಸಲ್ಪಟ್ಟರೆಂದು[2] ಬರೆದದೆಯಷ್ಟೆ. 6 ಅವರು ಕೆಟ್ಟ ವಿಷಯಗಳ ಮೇಲೆ ಆಶೆಯಿಟ್ಟಂತೆ ನಾವು ಆಶೆಯಿಡುವವರಾಗಬಾರದೆಂಬುವದಕ್ಕಾಗಿ ಈ ಸಂಗತಿಗಳು ನಮಗೆ ನಿದರ್ಶನಗಳಾಗಿವೆ. 7 ಅವರಲ್ಲಿ ಕೆಲವರು ವಿಗ್ರಹಾರಾಧಕರಾಗಿದ್ದರು; ಜನರು ಉಣ್ಣುವದಕ್ಕೂ

[1] ರೋಮಾ. ೧೪, ೧—೨೩ ನೋಡಿರಿ. [2] ಅಂಕೆಗಳು ೧೪, ೧೬.

ಕುಡಿಯುವದಕ್ಕೂ ಕೂತುಕೊಂಡರು, ನಾಟ್ಯವಾಡುವದಕ್ಕೆ ಎದ್ದರು ಎಂದು[1] ಬರೆದದೆ
8 ಯಲ್ಲಾ; ನೀವು ವಿಗ್ರಹಾರಾಧಕರಾಗಬೇಡಿರಿ. ಅವರಲ್ಲಿ ಕೆಲವರು ಜಾರತ್ವಮಾಡಿ ಒಂದೇ
ದಿನದಲ್ಲಿ ಇಪ್ಪತ್ತುಮೂರುಸಾವಿರ ಮಂದಿ ಸತ್ತರು[2]; ನಾವು ಜಾರತ್ವಮಾಡದೆ ಇರೋಣ.
9 ಅವರಲ್ಲಿ ಕೆಲವರು ಕರ್ತನನ್ನು ಪರೀಕ್ಷಿಸಿ ಸರ್ಪಗಳಿಂದ ನಾಶವಾದರು[3]; ನಾವು ಪರೀ
10 ಕ್ಷಿಸದೆ ಇರೋಣ. ಇದಲ್ಲದೆ ಅವರಲ್ಲಿ ಕೆಲವರು ಗುಣುಗುಟ್ಟಿ ಸಂಹಾರಕನ ಕೈಯಿಂದ
11 ನಾಶವಾದರು[4]; ನೀವು ಗುಣಗುಟ್ಟಬೇಡಿರಿ. ಅವರಿಗೆ ಸಂಭವಿಸಿದ ಈ ಸಂಗತಿಗಳು ನಿದ
ರ್ಶನರೂಪವಾಗಿವೆ; ಮತ್ತು ಯುಗಾಂತ್ಯಕ್ಕೆ ಬಂದಿರುವವರಾದ ನಮಗೆ ಬುದ್ಧಿವಾದಗ
12 ಳಾಗಿ ಬರೆದವೆ. ಆದಕಾರಣ ನಿಂತಿದ್ದೇನೆಂದು ನೆನಸುವವನು ಬೀಳದಂತೆ ಎಚ್ಚರಿಕೆ
13 ಯಾಗಿರಲಿ. ಮನುಷ್ಯರು ಸಹಿಸಬಹುದಾದ ಶೋಧನೆಯೇ ಹೊರತು ಬೇರೆ ಯಾವದೂ
ನಿಮಗೆ ಸಂಭವಿಸಲಿಲ್ಲ. ದೇವರು ನಂಬಿಗಸ್ಥನು; ನಿಮ್ಮ ಶಕ್ತಿಯನ್ನು ಮೀರುವ ಶೋಧನೆ
ಯನ್ನು ನಿಮಗೆ ಬರಗೊಡಿಸದೆ ನೀವು ಅದನ್ನು ಸಹಿಸುವದಕ್ಕೆ ಶಕ್ತರಾಗುವಂತೆ ಶೋಧನೆ
ಯಾಗುತ್ತಲೇ ತಪ್ಪಿಸಿಕೊಳ್ಳುವ ಮಾರ್ಗವನ್ನು ಸಿದ್ಧಮಾಡುವನು.

ಕ್ರಿಸ್ತಸೇವೆಗೂ ವಿಗ್ರಹಾರಾಧನೆಗೂ ಸಂಸರ್ಗವೇನೂ ಇರಕೂಡದೆಂಬುವ ಬೋಧೆ.

14 ಆದದರಿಂದ ಪ್ರಿಯ ಸಹೋದರರೇ, ವಿಗ್ರಹಾರಾಧನೆಯ ಗೊಡವೆಯನ್ನು ಸಂಪೂರ್ಣ
15 ವಾಗಿ ತೊರೆದುಬಿಡಿರಿ. ನೀವು ವಿವೇಕಿಗಳೆಂದು ಇದನ್ನು ಹೇಳುತ್ತೇನೆ; ನಾನು ಹೇಳು
16 ವದನ್ನು ನೀವೇ ಯೋಚಿಸಿರಿ. ನಾವು ದೇವಸ್ತೋತ್ರಮಾಡಿ ಪಾತ್ರೆಯಲ್ಲಿ ಪಾನಮಾಡು
ವದು ಕ್ರಿಸ್ತನ ರಕ್ತದಲ್ಲಿ ಪಾಲುಗಾರರಾಗಿದ್ದೇವೆಂಬುವದನ್ನು ಸೂಚಿಸುತ್ತದಲ್ಲವೇ? ನಾವು
ರೊಟ್ಟಿಯನ್ನು ಮುರಿದು ತಿನ್ನುವದು ಕ್ರಿಸ್ತನ ದೇಹದಲ್ಲಿ ಪಾಲುಗಾರರಾಗಿದ್ದೇವೆಂಬು
17 ವದನ್ನು ಸೂಚಿಸುತ್ತದಲ್ಲವೇ? ರೊಟ್ಟಿಯು ಒಂದೇಯಾಗಿರುವದರಿಂದ ಅನೇಕರಾಗಿರುವ
ನಾವು ಒಂದೇ ದೇಹದಂತಿದ್ದೇವೆ; ಯಾಕಂದರೆ ನಾವೆಲ್ಲರೂ ಆ ಒಂದೇ ರೊಟ್ಟಿಯಲ್ಲಿ
18 ಪಾಲುತಕ್ಕೊಂಡು ತಿನ್ನುತ್ತೇವೆ. ವಂಶಕ್ರಮದಿಂದ ಇಸ್ರಯೇಲ್ಯರಾಗಿರುವವರನ್ನು
ಯೋಚಿಸಿರಿ. ಯಜ್ಞಮಾಡಿದ್ದನ್ನು ತಿನ್ನುವವರು ಯಜ್ಞವೇದಿಯೊಡನೆ ಭಾಗಿಗಳಾಗಿದ್ದಾ
19 ರಲ್ಲವೇ? ಹೀಗೆ ಹೇಳುವದರಿಂದ ಏನು ಹೇಳಿದ ಹಾಗಾಯಿತು? ವಿಗ್ರಹಕ್ಕೆ ನೈವೇದ್ಯ
ಮಾಡಿದ ಪದಾರ್ಥವು ವಾಸ್ತವ್ಯ[5]ವೆಂದು, ಅಥವಾ ವಿಗ್ರಹವು ವಾಸ್ತವ್ಯವೆಂದು ನನ್ನ
20 ಅಭಿಪ್ರಾಯವೋ? ಅಲ್ಲ. ಆದರೆ ಅನ್ಯಜನರು ತಾವು ಅರ್ಪಿಸುವ ಬಲಿಗಳನ್ನು ದೇವರಿ
ಗಲ್ಲ ದೆವ್ವಗಳಿಗೆ ಅರ್ಪಿಸುತ್ತಾರೆಂದು ನನ್ನ ಅಭಿಪ್ರಾಯವು. ನೀವು ದೆವ್ವಗಳೊಡನೆ
21 ಭಾಗಿಗಳಾಗಿರಬೇಕೆಂಬುವದು ನನ್ನ ಇಷ್ಟವಲ್ಲ. ನೀವು ಕರ್ತನ ಪಾತ್ರೆ ಮತ್ತು ದೆವ್ವ
ಗಳ ಪಾತ್ರೆ ಇವುಗಳೊಳಗೆ ಒಂದರಲ್ಲಿಯೇ ಹೊರತು ಎರಡರಲ್ಲಿಯೂ ಕುಡಿಯಲಾರಿರಿ;
ಕರ್ತನ ಪಂಕ್ತಿ ಮತ್ತು ದೆವ್ವಗಳ ಪಂಕ್ತಿ ಇವುಗಳೊಳಗೆ ಒಂದರಲ್ಲಿಯೇ ಹೊರತು ಎರಡ
22 ರಲ್ಲಿಯೂ ಊಟಮಾಡಲಾರಿರಿ. ಕರ್ತನಲ್ಲಿ ರೋಷವನ್ನು ಹುಟ್ಟಿಸಬೇಕೆಂದಿದ್ದೇವೋ?
ಆತನಿಗಿಂತಲೂ ನಾವು ಬಲಿಷ್ಠರೇನು?

---

[1] ಹೊರಡೋಣ ೩೨, ೬. [2] ಅಂಕೆಗಳು ೨೫, ೧—೯. [3] ಅಂಕೆಗಳು ೨೧, ೬. [4] ಅಂಕೆಗಳು ೧೬, ೪೯.
[5] ಅಥವಾ, ವಿಶೇಷ.

ವಿಗ್ರಹಕ್ಕೆ ಅರ್ಪಿತವಾದದ್ದನ್ನು ಉಣ್ಣಬಹುದೋ ಬಾರದೋ ಎಂಬುವ ವಿಚಾರದಲ್ಲಿ ಪರರ ಹಿತವನ್ನು ಲಕ್ಷಿಸುವದೇ ಮುಖ್ಯವಾದದ್ದು.

ಎಲ್ಲಾ ಕಾರ್ಯಗಳನ್ನು ಮಾಡುವದಕ್ಕೆ ಸ್ವಾತಂತ್ರ್ಯವುಂಟು, ಆದರೆ ಎಲ್ಲವೂ ವಿಹಿತ 23 ವಾಗಿರುವದಿಲ್ಲ. ಎಲ್ಲಾ ಕಾರ್ಯಗಳನ್ನು ಮಾಡುವದಕ್ಕೆ ಸ್ವಾತಂತ್ರ್ಯವುಂಟು, ಆದರೆ ಎಲ್ಲವೂ ಭಕ್ತಿಯನ್ನು ಬೆಳಿಸುವದಿಲ್ಲ. ಪ್ರತಿಯೊಬ್ಬನು ತನ್ನ ಹಿತವನ್ನು ಚಿಂತಿಸದೆ ಪರ 24 ಹಿತವನ್ನು ಚಿಂತಿಸಲಿ. ಕಟುಕರ ಅಂಗಡಿಯಲ್ಲಿ ಮಾರುವಂಥಾದ್ದು ಏನಿದ್ದರೂ ಅದನ್ನು 25 ಮನಸ್ಸಿನಲ್ಲಿ ಸಂಶಯ ಹುಟ್ಟಿಸುವ ವಿಚಾರಣೆಮಾಡದೆ ತಿನ್ನಿರಿ. ಭೂಮಿಯೂ ಅದರಲ್ಲಿ 26 ತುಂಬಿರುವದೆಲ್ಲವೂ ಕರ್ತನದಾಗಿದೆಯಲ್ಲವೇ[1]. ಕ್ರಿಸ್ತನನ್ನು ನಂಬದವರಲ್ಲಿ ಒಬ್ಬನು 27 ನಿಮ್ಮನ್ನು ಊಟಕ್ಕೆ ಕರೆಯುವಾಗ ಹೋಗುವದಕ್ಕೆ ನಿಮಗಿಷ್ಟವಿದ್ದರೆ, ನಿಮಗೇನು ಬಡಿಸಿ ದರೂ ಅದನ್ನು ಮನಸ್ಸಿನಲ್ಲಿ ಸಂಶಯ ಹುಟ್ಟಿಸುವ ವಿಚಾರಣೆಮಾಡದೆ ತಿನ್ನಿರಿ. , ಆದರೆ 28 ಒಬ್ಬನು ನಿಮಗೆ—ಇದು ವಿಗ್ರಹಾಲಯದಲ್ಲಿ ಬಲಿಕೊಟ್ಟದ್ದು ಎಂದು ಹೇಳಿದರೆ, ಈ ಸಂಗ ತಿಯನ್ನು ತಿಳಿಸಿದವನ ನಿಮಿತ್ತವಾಗಿಯೂ ಮನಸ್ಸಿನಲ್ಲಿ ಸಂಶಯಕ್ಕೆ ಸ್ಥಳಕೊಡಬಾರದೆಂಬ ಕಾರಣದಿಂದಲೂ ತಿನ್ನಬೇಡಿರಿ. ಅದು ನಿನ್ನ ಮನಸ್ಸಿನ ಸಂಶಯವಲ್ಲ, ತಿಳಿಸಿದವನ 29 ಮನಸ್ಸಿನಲ್ಲಿರುವ ಸಂಶಯವೇ. ಮತ್ತೊಬ್ಬನ ಮನಸ್ಸಿನಲ್ಲಿರುವ ಸಂಶಯದಿಂದ ನನ್ನ ಸ್ವಾತಂತ್ರ್ಯಕ್ಕೆ ಯಾಕೆ ತೀರ್ಪಾಗಬೇಕು? ನಾನು ಕೃತಜ್ಞತೆಯೊಡನೆ ಊಟಮಾಡಿ ದೇವ 30 ರನ್ನು ಸ್ತುತಿಸಿದ ಮೇಲೆ ಆ ಪದಾರ್ಥಗಳ ನಿಮಿತ್ತ ನನಗೆ ಯಾಕೆ ದೂಷಣೆಯಾಗಬೇಕು? ಹೀಗಿರಲಾಗಿ ನೀವು ಉಂಡರೂ ಕುಡಿದರೂ ಇನ್ನೇನು ಮಾಡಿದರೂ ಎಲ್ಲವನ್ನೂ ದೇವರ 31 ಘನತೆಗಾಗಿ ಮಾಡಿರಿ. ಯೆಹೂದ್ಯರಿಗಾಗಲಿ ಗ್ರೀಕರಿಗಾಗಲಿ ದೇವರ ಸಭೆಗಾಗಲಿ 32 ವಿಘ್ನವಾಗಬೇಡಿರಿ. ನಾನಂತೂ ಸ್ವಪ್ರಯೋಜನಕ್ಕಾಗಿ ಚಿಂತಿಸದೆ ಮನುಷ್ಯರೆಲ್ಲರೂ 33 ರಕ್ಷಣೆಹೊಂದಬೇಕೆಂದು ಅವರ ಪ್ರಯೋಜನಕ್ಕಾಗಿ ಚಿಂತಿಸಿ ಎಲ್ಲರನ್ನೂ ಎಲ್ಲಾ ವಿಷಯ ಗಳಲ್ಲಿ ಮೆಚ್ಚಿಸುವವನಾಗಿದ್ದೇನೆ. ನಾನು ಕ್ರಿಸ್ತನನ್ನು ಅನುಸರಿಸುವಂತೆಯೇ ನೀವು **11** ನನ್ನನ್ನು ಅನುಸರಿಸುವವರಾಗಿರಿ.

ಸ್ತ್ರೀಯರು ಮುಸುಕಿಲ್ಲದೆ ಸಭೆಯಲ್ಲಿ ದೇವಾರಾಧನೆ ಮಾಡುವದು ಯುಕ್ತವಲ್ಲ.

ನೀವು ಎಲ್ಲಾದರಲ್ಲಿಯೂ ನನ್ನನ್ನು ಜ್ಞಾಪಕಮಾಡಿಕೊಂಡು, ನಾನು ನಿಮಗೆ ತಿಳಿಸಿ 2 ಕೊಟ್ಟ ಕಟ್ಟಳೆಗಳನ್ನು ಅನುಸರಿಸಿ ನಡಿಯುತ್ತೀರೆಂದು ನಿಮ್ಮನ್ನು ಹೊಗಳುತ್ತೇನೆ. ಆದಾಗ್ಯೂ ಒಂದು ಸಂಗತಿಯನ್ನು ನೀವು ತಿಳಿಯಬೇಕೆಂದು ನನ್ನ ಇಷ್ಟ; ಅದೇನಂದರೆ 3 ಪುರುಷನಿಗೆ ಕ್ರಿಸ್ತನು ತಲೆ, ಸ್ತ್ರೀಗೆ ಗಂಡನು ತಲೆ, ಕ್ರಿಸ್ತನಿಗೆ ದೇವರು ತಲೆ ಆಗಿದ್ದಾನೆ. ತಲೆಯನ್ನು ಮುಚ್ಚಿಕೊಂಡು ಪ್ರಾರ್ಥನೆಯನ್ನಾಗಲಿ ಪ್ರವಾದನೆಯನ್ನಾಗಲಿ ಮಾಡುವ 4 ಪುರುಷನು ತನ್ನ ತಲೆಯನ್ನು ಅವಮಾನ ಪಡಿಸುತ್ತಾನೆ. ತಲೆಯ ಮೇಲೆ ಮುಸುಕು 5 ಹಾಕಿಕೊಳ್ಳದೆ ಪ್ರಾರ್ಥನೆಯನ್ನಾಗಲಿ ಪ್ರವಾದನೆಯನ್ನಾಗಲಿ ಮಾಡುವ ಸ್ತ್ರೀಯು ತನ್ನ

[1] ಕೀರ್ತನೆ ೨೪, ೧.

ತಲೆಯನ್ನು ಅವಮಾನ ಪಡಿಸುತ್ತಾಳೆ. ಸ್ತ್ರೀಯು ಮುಸುಕಿಲ್ಲದಿರುವದೂ ತಲೆಬೋಳಿಸಿ
6 ಕೊಂಡಿರುವದೂ ಒಂದೇ. ಸ್ತ್ರೀಯು ಮುಸುಕುಹಾಕಿಕೊಳ್ಳದಿದ್ದರೆ, ಆಕೆಯು ಕೂದಲನ್ನು
ತೆಗಿಸಿಬಿಡಬೇಕಷ್ಟೆ. ಆದರೆ ಕೂದಲನ್ನು ಕತ್ತರಿಸಿಕೊಳ್ಳುವದಾಗಲಿ ತಲೆಬೋಳಿಸಿಕೊಳ್ಳು
ವದಾಗಲಿ ಸ್ತ್ರೀಗೆ ಅವಮಾನಕರವಾಗಿದ್ದರೆ, ಆಕೆಯು ಮುಸುಕನ್ನು ಹಾಕಿಕೊಳ್ಳಲಿ.
7 ಪುರುಷನು ದೇವರ ಪ್ರತಿರೂಪವೂ ಪ್ರಭಾವವೂ ಆಗಿರುವದರಿಂದ ತಲೆಯನ್ನು ಮುಚ್ಚಿ
8 ಕೊಳ್ಳಕೂಡದು; ಸ್ತ್ರೀಯಾದರೋ ಪುರುಷನ ಪ್ರಭಾವವಾಗಿದ್ದಾಳೆ. ಪುರುಷನು
9 ಸ್ತ್ರೀಯಿಂದ ಉತ್ಪತ್ತಿಯಾಗಲಿಲ್ಲ; ಸ್ತ್ರೀಯು ಪುರುಷನಿಂದ ಉತ್ಪತ್ತಿಯಾದಳು. ಇದಲ್ಲದೆ
ಪುರುಷನು ಸ್ತ್ರೀನಿಮಿತ್ತವಾಗಿ ನಿರ್ಮಾಣವಾಗಲಿಲ್ಲ; ಸ್ತ್ರೀಯು ಪುರುಷನ ನಿಮಿತ್ತವಾಗಿ
10 ನಿರ್ಮಾಣವಾದಳು. ಹೀಗಿರುವದರಿಂದ ದೂತರ ನಿಮಿತ್ತವಾಗಿ[1] ಸ್ತ್ರೀಯು ಪುರುಷನ
11 ಅಧಿಕಾರ ಸೂಚಿಸುವ ಮುಸುಕನ್ನು ತಲೆಯ ಮೇಲೆ ಹಾಕಿಕೊಂಡಿರಬೇಕು. ಆದಾಗ್ಯೂ
ಕರ್ತನ ಸಂಬಂಧದಲ್ಲಿ, ಪುರುಷರಿಲ್ಲದೆ ಸ್ತ್ರೀಯರೂ ಸ್ತ್ರೀಯರಿಲ್ಲದೆ ಪುರುಷರೂ ಸಂಪೂರ್ಣ
12 ರಲ್ಲ. ಸ್ತ್ರೀಯು ಪುರುಷನಿಂದ ಉತ್ಪತ್ತಿಯಾದಳು; ಹಾಗೆಯೇ ಪುರುಷನು ಸ್ತ್ರೀಮೂಲಕ
13 ವಾಗಿ ಹುಟ್ಟುತ್ತಾನೆ; ಸಮಸ್ತಕ್ಕೂ ದೇವರೇ ಮೂಲಕಾರಣನು. ನಿಮ್ಮೊಳಗೆ ನೀವೇ
ಯೋಚಿಸಿ ತೀರ್ಮಾನಿಸಿಕೊಳ್ಳಿರಿ. ಸ್ತ್ರೀಯು ಮುಸುಕುಹಾಕಿಕೊಳ್ಳದೆ ದೇವರಿಗೆ ಪ್ರಾರ್ಥನೆ
14 ಮಾಡುವದು ಯುಕ್ತವೋ? ಪುರುಷನು ಕೂದಲು ಬೆಳಸಿಕೊಂಡರೆ, ಅದು ಅವನಿಗೆ
15 ಅವಮಾನಕರವಾಗಿದೆಯೆಂದೂ, ಸ್ತ್ರೀಯು ಬೆಳಸಿಕೊಂಡರೆ, ಕೂದಲು ಆವಳಿಗೆ ಮುಸು
ಕಿಗೆ ಬದಲಾಗಿ ಕೊಡಲ್ಪಟ್ಟಿರುವದರಿಂದ, ಅದು ಅವಳಿಗೆ ಗೌರವವಾಗಿದೆಯೆಂದೂ ನಿಮಗೆ
16 ಸ್ವಭಾವಸಿದ್ಧವಾಗಿ ತಿಳಿಯುತ್ತದಲ್ಲವೋ? ಒಬ್ಬನು ವಾಗ್ವಾದಪ್ರಿಯನಾಗಿ ಕಾಣಿಸಿ
ಕೊಂಡರೆ, ಇಂಥಾ ಪದ್ಧತಿ ನಮ್ಮಲ್ಲಿಲ್ಲ, ಮತ್ತು ದೇವರ ಸಭೆಗಳಲ್ಲಿಯೂ ಇಲ್ಲ ಎಂದು
ತಿಳುಕೊಳ್ಳಲಿ.

ಕರ್ತನ ಭೋಜನವನ್ನು ಕ್ರಮತಪ್ಪಿ ಆಚರಿಸಿದ್ದನ್ನು ಕುರಿತದ್ದು.

17 ನಾನು ಹೀಗೆ ನಿಮಗೆ ಅಪ್ಪಣೆಕೊಡುವಲ್ಲಿ ನಿಮ್ಮನ್ನು ಹೊಗಳುವದಿಲ್ಲ; ಯಾಕಂದರೆ
18 ನೀವು ಕೂಡಿಬರುವದರಿಂದ ಕೇಡಾಗುತ್ತದೆಯೇ ಹೊರತು ಮೇಲಾಗುವದಿಲ್ಲ. ಹ್ಯಾಗಂದರೆ,
ಮೊದಲನೇದು, ನೀವು ಸಭೆಯಾಗಿ ಕೂಡಿಬರುವಾಗ ನಿಮ್ಮಲ್ಲಿ ಭೇದಗಳು ಉಂಟಾಗುತ್ತ
19 ವೆಂದು ಕೇಳುತ್ತೇನೆ; ಮತ್ತು ಇದು ನಿಜವೆಂದು ಸ್ವಲ್ಪಮಟ್ಟಿಗೆ ನಂಬುತ್ತೇನೆ. ನಿಮ್ಮಲ್ಲಿ
ಇಂಥಿಂಥವರು ಯೋಗ್ಯರೆಂದು ಕಾಣಬರುವಂತೆ ಭಿನ್ನಾಭಿಪ್ರಾಯಗಳೂ ಇರುವದು
20 ಅವಶ್ಯವೇ. ಪರಂತು ನೀವೆಲ್ಲರು ಕೂಡಿಬರುವಾಗ ನೀವು ಮಾಡುವ ಭೋಜನವು
21 ಕರ್ತನ ಭೋಜನವಲ್ಲ. ಭೋಜನವಾಗುವಲ್ಲಿ ಪ್ರತಿಯೊಬ್ಬನು ತಾನು ತಂದದ್ದನ್ನು
ಮತ್ತೊಬ್ಬರಿಗಿಂತ ಮುಂದಾಗಿ ಊಟಮಾಡುತ್ತಾನೆ; ಹೀಗೆ ಒಬ್ಬನು ಹಸಿದಿರುತ್ತಾನೆ,
22 ಮತ್ತೊಬ್ಬನು ಕುಡಿದು ಮತ್ತನಾಗಿರುತ್ತಾನೆ. ಏನು, ಉಣ್ಣುವದಕ್ಕೂ ಕುಡಿಯುವ
ದಕ್ಕೂ ಮನೆಗಳಿಲ್ಲದೆ ಇದ್ದೀರಾ? ಅಥವಾ ದೇವರ ಸಭೆಯನ್ನು ಅಸಡ್ಡೆ ಮಾಡಿ ಏನೂ

[1] ಅಥವಾ, ದೇವದೂತರು ನೋಡುತ್ತಾರೆಂದು.

ಇಲ್ಲದವರನ್ನು[1] ನಾಚಿಕೆಪಡಿಸುತ್ತೀರಾ? ನಾನು ನಿಮಗೇನು ಹೇಳಲಿ? ನಿಮ್ಮನ್ನು ಹೊಗಳಲೋ? ಈ ವಿಷಯದಲ್ಲಿ ಹೊಗಳುವದಿಲ್ಲ.

ನಾನು ನಿಮಗೆ ತಿಳಿಸಿಕೊಟ್ಟ ಉಪದೇಶವನ್ನು ಕರ್ತನಿಂದ ಹೊಂದಿದೆನು. ಅದೇ 23 ನಂದರೆ—ಕರ್ತನಾದ ಯೇಸು ತಾನು ಹಿಡಿದು ಕೊಡಲ್ಪಟ್ಟ ರಾತ್ರಿಯಲ್ಲಿ ರೊಟ್ಟಿಯನ್ನು ತೆಗೆದುಕೊಂಡು ದೇವರ ಸೋತ್ರಮಾಡಿ ಮುರಿದು—ಇದು ನಿಮಗೋಸ್ಕರವಾಗಿರುವ[2] 24 ನನ್ನ ದೇಹ; ನನ್ನನ್ನು ನೆನಸಿಕೊಳ್ಳುವದಕ್ಕೋಸ್ಕರ ಹೀಗೆ ಮಾಡಿರಿ[3] ಅಂದನು. ಊಟ 25 ವಾದ ಮೇಲೆ, ಆತನು ಅದೇ ರೀತಿಯಾಗಿ ಪಾತ್ರೆಯನ್ನು ತೆಗೆದುಕೊಂಡು—ಈ ಪಾತ್ರೆಯು[4] ನನ್ನ ರಕ್ತದಿಂದ ಸ್ಥಾಪಿತವಾಗುವ ಹೊಸ ಒಡಂಬಡಿಕೆಯನ್ನು ಸೂಚಿಸುತ್ತದೆ; ನೀವು ಇದರಲ್ಲಿ ಪಾನಮಾಡುವಾಗೆಲ್ಲಾ ನನ್ನನ್ನು ನೆನಸಿಕೊಳ್ಳುವದಕ್ಕೋಸ್ಕರ ಪಾನ ಮಾಡಿರಿ ಅಂದನು. ನೀವು ಈ ರೊಟ್ಟಿಯನ್ನು ತಿಂದು ಈ ಪಾತ್ರೆಯಲ್ಲಿ ಪಾನಮಾಡು 26 ವಷ್ಟು ಸಾರಿ ಕರ್ತನ ಮರಣವನ್ನು ಆತನು ಬರುವ ತನಕ ಪ್ರಸಿದ್ಧಿಪಡಿಸುತ್ತೀರಿ. ಹೀಗಿ 27 ರುವದರಿಂದ ಯಾವನಾದರೂ ಅಯೋಗ್ಯವಾಗಿ ಕರ್ತನ ರೊಟ್ಟಿಯನ್ನು ತಿಂದರೆ, ಇಲ್ಲವೆ ಆತನ ಪಾತ್ರೆಯಲ್ಲಿ ಪಾನಮಾಡಿದರೆ, ಅವನು ಕರ್ತನ ದೇಹಕ್ಕೂ ರಕ್ತಕ್ಕೂ ದ್ರೋಹ ಮಾಡಿದವನಾಗಿರುವನು. ಪ್ರತಿಮನುಷ್ಯನು ತನ್ನನ್ನು ಪರೀಕ್ಷಿಸಿಕೊಂಡವನಾಗಿ ಆ 28 ರೊಟ್ಟಿಯಲ್ಲಿ ತಕ್ಕೊಂಡು ತಿನ್ನಲಿ, ಆ ಪಾತ್ರೆಯಲ್ಲಿ ಕುಡಿಯಲಿ. ಯಾಕಂದರೆ ಕರ್ತನ 29 ದೇಹವೆಂದು ವಿವೇಚಿಸದೆ ತಿಂದು ಕುಡಿಯುವವನು ಹಾಗೆ ತಿಂದು ಕುಡಿಯುವದರಿಂದ ನ್ಯಾಯತೀರ್ಪಿಗೊಳಗಾಗುವನು. ಈ ಕಾರಣದಿಂದಲೇ ನಿಮ್ಮಲ್ಲಿ ಬಹುಮಂದಿ ಬಲ 30 ಹೀನರೂ ರೋಗಿಗಳೂ ಆಗಿದ್ದಾರೆ, ಮತ್ತು ಅನೇಕರು ಸಾಯುತ್ತಾರೆ. ನಮ್ಮನ್ನು 31 ನಾವೇ ವಿಚಾರಿಸಿಕೊಂಡರೆ, ನ್ಯಾಯವಿಚಾರಣೆಗೊಳಗಾಗುವದಿಲ್ಲ. ಆದರೆ ನಾವು 32 ಕರ್ತನ ನ್ಯಾಯವಿಚಾರಣೆಗೆ ಒಳಗಾಗಿರಲಾಗಿ ಆತನು—ಇವರಿಗೆ ಲೋಕದವರ ಸಂಗಡ ಅಪರಾಧಿಗಳೆಂಬ ನಿರ್ಣಯವಾಗಬಾರದೆಂದು ನಮ್ಮನ್ನು ಶಿಕ್ಷಿಸುತ್ತಾನೆ. ಆದಕಾರಣ, 33 ನನ್ನ ಸಹೋದರರೇ, ಈ ಭೋಜನವನ್ನು ಮಾಡುವದಕ್ಕೆ ಕೂಡಿಬರುವಾಗ ಒಬ್ಬರನ್ನೊಬ್ಬರು ಕಾದುಕೊಳ್ಳಿರಿ. ಒಬ್ಬನು ಹಸಿದರೆ ಅವನು ಮನೆಯಲ್ಲೇ ಊಟ ಮಾಡಲಿ; ನೀವು 34 ಕೂಡಿಬಂದದ್ದು ನ್ಯಾಯತೀರ್ಪಿಗೊಳಗಾಗುವದಕ್ಕೆ ಕಾರಣವಾಗಬಾರದು. ಮಿಕ್ಕಾದ ಸಂಗತಿಗಳನ್ನು ನಾನು ಬಂದಾಗ ಕ್ರಮಪಡಿಸುತ್ತೇನೆ.

ಪವಿತ್ರಾತ್ಮದಿಂದುಂಟಾಗುವ ವರಗಳನ್ನು ಕುರಿತದ್ದು (12, 1—14, 40).

ಪವಿತ್ರಾತ್ಮದಿಂದುಂಟಾಗುವ ವರಗಳು ಅನೇಕವಾಗಿದ್ದಾಗ್ಯೂ ಅವೆಲ್ಲಾ ಸಭೆಯ ಹಿತಕ್ಕೋಸ್ಕರ ಕೊಡಲ್ಪಟ್ಟವೆ ಎಂಬುವದು.

ಸಹೋದರರೇ, ಪವಿತ್ರಾತ್ಮದಿಂದುಂಟಾಗುವ ವರಗಳನ್ನು ಕುರಿತು ನಿಮಗೆ ತಿಳಿಯದಿರ **12** ಬಾರದೆಂದು ಅಪೇಕ್ಷಿಸುತ್ತೇನೆ. ನೀವು ಅಜ್ಞಾನಿಗಳಾಗಿದ್ದಾಗ ನಿಮಗೆ ಪ್ರೇರಣೆಯಾದ 2 ಹಾಗೆ ಮೂಕ ವಿಗ್ರಹಗಳ ಬಳಿಗೆ ಹೋಗುತ್ತಿದ್ದಿರೆಂದು ಬಲ್ಲಿರಿ. ಹೀಗಿರುವದರಿಂದ 3

---

[1] ಅಥವಾ, ಮನೆಯಿಲ್ಲದವರನ್ನು. [2] ಅಥವಾ, ನಿಮಗೋಸ್ಕರ ಮುರಿಯಲ್ಪಡುವ.
[3] ಅಥವಾ, ಮುರಿದು ತಿನ್ನಿರಿ. [4] ಅಥವಾ, ಪಾತ್ರೆಯಲ್ಲಿರುವದು.

ನಾನು ನಿಮಗೆ ತಿಳಿಸುವದನ್ನು ಕೇಳಿರಿ; ದೇವರಾತ್ಮನ ಪ್ರೇರಣೆಯಿಂದ ಮಾತಾಡುವ ಯಾವ ಮನುಷ್ಯನಾದರೂ ಯೇಸುವನ್ನು ಶಾಪಗ್ರಸ್ತನೆಂದು ಹೇಳುವದಿಲ್ಲ, ಮತ್ತು ಪವಿತ್ರಾತ್ಮನ ಪ್ರೇರಣೆಯಿಂದಲೇ ಹೊರತು ಯಾವ ಮನುಷ್ಯನಾದರೂ ಯೇಸುವನ್ನು ಕರ್ತನೆಂದು ಹೇಳಲಾರನು.

4, 5 ವರಗಳಲ್ಲಿ ಬೇರೆ ಬೇರೆ ವಿಧಗಳುಂಟು, ದೇವರಾತ್ಮನು ಒಬ್ಬನೇ; ಸೇವೆಗಳಲ್ಲಿ ಬೇರೆ 6 ಬೇರೆ ವಿಧಗಳುಂಟು, ಕರ್ತನು ಒಬ್ಬನೇ; ಕಾರ್ಯಗಳಲ್ಲಿ ಬೇರೆ ಬೇರೆ ವಿಧಗಳುಂಟು, 7 ಸರ್ವರಲ್ಲಿಯೂ ಸರ್ವಕಾರ್ಯಗಳನ್ನು ಸಾಧಿಸುವ ದೇವರು ಒಬ್ಬನೇ. ಆದರೆ ಪ್ರತಿಯೊಬ್ಬನಲ್ಲಿ ತೋರಿಬರುವ ದೇವರಾತ್ಮನ ವರಗಳು ಸರ್ವರ ಪ್ರಯೋಜನಾರ್ಥವಾಗಿ 8 ಕೊಡಲ್ಪಟ್ಟವೆ. ಒಬ್ಬನಿಗೆ ದೇವರಾತ್ಮನ ಮೂಲಕ ಜ್ಞಾನವಾಕ್ಯವು, ಒಬ್ಬನಿಗೆ ಆ ಆತ್ಮ 9 ನಿಗೆ ಅನುಗುಣವಾಗಿ ವಿದ್ಯಾವಾಕ್ಯವು, ಒಬ್ಬನಿಗೆ ಆ ಆತ್ಮನಿಂದಲೇ ನಂಬಿಕೆಯು, ಒಬ್ಬ 10 ನಿಗೆ ಆ ಒಬ್ಬನೇ ಆತ್ಮನಿಂದ ನಾನಾ ರೋಗಗಳನ್ನು ವಾಸಿಮಾಡುವ ವರವು, ಒಬ್ಬನಿಗೆ ಮಹತ್ತುಗಳನ್ನು ಮಾಡುವ ವರವು, ಒಬ್ಬನಿಗೆ ಪ್ರವಾದನೆಯ ವರವು, ಒಬ್ಬನಿಗೆ ಸತ್ಯಾಸತ್ಯ ಆತ್ಮಗಳ ಪ್ರೇರಣೆಯನ್ನು ವಿವೇಚಿಸುವ ವರವು, ಒಬ್ಬನಿಗೆ ವಿವಿಧ ವಾಣಿಗಳನ್ನಾಡುವ ವರವು, ಒಬ್ಬನಿಗೆ ವಾಣಿಗಳ ಅರ್ಥವನ್ನು ಹೇಳುವ ವರವು ಕೊಡಲ್ಪಡುತ್ತವೆ. 11 ಈ ವರಗಳನ್ನೆಲ್ಲಾ ಆ ಒಬ್ಬನೇ ಆತ್ಮನು ತನ್ನ ಚಿತ್ತಕ್ಕೆ ಬಂದ ಹಾಗೆ ಒಬ್ಬೊಬ್ಬನಿಗೆ ಹಂಚಿಕೊಟ್ಟು ನಡಿಸುತ್ತಾನೆ.

12 ಹ್ಯಾಗೆ ದೇಹವು ಒಂದಾಗಿದ್ದಾಗ್ಯೂ ಅದಕ್ಕಿರುವ ಅಂಗಗಳು ಅನೇಕವಾಗಿವೆಯೋ, ಹ್ಯಾಗೆ ದೇಹದ ಅಂಗಗಳೆಲ್ಲವು ಅನೇಕವಾಗಿದ್ದು ಒಂದೇ ದೇಹವಾಗಿರುವದೋ, ಹಾಗೆ 13 ಯೇ ಕ್ರಿಸ್ತನು. ಯೆಹೂದ್ಯರಾಗಲಿ ಗ್ರೀಕರಾಗಲಿ ದಾಸರಾಗಲಿ ಸ್ವತಂತ್ರರಾಗಲಿ ನಾವೆಲ್ಲರು ಒಂದೇ ದೇಹವಾಗುವದಕ್ಕಾಗಿ ಒಂದೇ ಆತ್ಮದಲ್ಲಿ ದೀಕ್ಷಾಸ್ನಾನಮಾಡಿಸಿಕೊಂಡೆವು; 14 ಒಂದೇ ಆತ್ಮ ನಮ್ಮೆಲ್ಲರಿಗೂ ಪಾನವಾಗಿ ಕೊಡಲ್ಪಟ್ಟಿತು. ದೇಹವು ಒಂದೇ ಅಂಗವಲ್ಲ, 15 ಅನೇಕ ಅಂಗಗಳುಳ್ಳದ್ದಾಗಿದೆ. ಕಾಲು—ನಾನು ಕೈಯಲ್ಲದ ಕಾರಣ ದೇಹಕ್ಕೆ ಸೇರಿದ್ದಲ್ಲ 16 ವೆಂದು ಹೇಳಿದರೂ ಅದು ದೇಹಕ್ಕೆ ಸೇರದೆ ಇರುವದೋ? ಕಿವಿ—ನಾನು ಕಣ್ಣಲ್ಲದ ಕಾರಣ ನಾನು ದೇಹಕ್ಕೆ ಸೇರಿದ್ದಲ್ಲವೆಂದು ಹೇಳಿದರೂ ಅದು ದೇಹಕ್ಕೆ ಸೇರದೆ ಇರು 17 ವದೋ? ದೇಹವೆಲ್ಲಾ ಕಣ್ಣಾದರೆ ಕಿವಿಯೆಲ್ಲಿ? ಅದೆಲ್ಲಾ ಕಿವಿಯಾದರೆ ಮೂಗೆಲ್ಲಿ? 18 ಆದರೆ ದೇವರು ಆ ಅಂಗಗಳಲ್ಲಿ ಪ್ರತಿಯೊಂದನ್ನು ತನಗೆ ಸರಿಯಾಗಿ ತೋಚಿದ ಪ್ರಕಾರ 19 ದೇಹದೊಳಗೆ ಇಟ್ಟಿದ್ದಾನೆ. ಅವೆಲ್ಲವು ಒಂದೇ ಅಂಗವಾಗಿದ್ದರೆ, ದೇಹವೆಲ್ಲಿರುವದು? 20, 21 ಆದರೆ ಅಂಗಗಳೇನೋ ಅನೇಕ, ದೇಹವು ಒಂದೇ. ಕಣ್ಣು ಕೈಗೆ—ನೀನು ನನಗೆ ಅವಶ್ಯವಿಲ್ಲವೆಂದೂ, ತಲೆಯು ಕಾಲುಗಳಿಗೆ—ನೀವು ನನಗೆ ಅವಶ್ಯವಿಲ್ಲವೆಂದೂ ಹೇಳುವದಕ್ಕಾ 22 ಗುವದಿಲ್ಲ. ದೇಹದಲ್ಲಿ ಅಲ್ಪಬಲವುಳ್ಳವುಗಳಾಗಿ ಕಾಣುವ ಅಂಗಗಳನ್ನು ಅತ್ಯವಶ್ಯ 23 ವೆಂದು ತಿಳಿಯಬೇಕಲ್ಲವೋ? ಮತ್ತು ನಾವು ದೇಹದಲ್ಲಿ ಅಲ್ಪಮಾನವುಳ್ಳವುಗಳೆಂದೆಣಿಸುವ ಭಾಗಗಳಿಗೆ ಉಡಿಗೆಯಿಂದ ಹೆಚ್ಚಾದ ಮಾನವನ್ನು ಕೊಡುವದುಂಟಲ್ಲಾ; ಹೀಗೆ, 24-25 ಅಂದವಿಲ್ಲದ ಅಂಗಗಳಿಗೆ ಹೆಚ್ಚಾದ ಅಂದವುಂಟಾಗುತ್ತದೆ. ಅಂದವುಳ್ಳ ಅಂಗಗಳಿಗೆ ಏನೂ ಅವಶ್ಯವಿಲ್ಲ. ದೇಹದಲ್ಲಿ ಭೇದವೇನೂ ಇರದೆ ಅಂಗಗಳು ಒಂದಕ್ಕೊಂದರ ಹಿತ

ವನ್ನು ಚಿಂತಿಸುವ ಹಾಗೆ ದೇವರು ಕೊರತೆಯುಳ್ಳದ್ದಕ್ಕೆ ಹೆಚ್ಚಾದ ಮಾನವನ್ನು ಕೊಟ್ಟು ದೇಹವನ್ನು ಹದವಾಗಿ ಕೂಡಿಸಿದ್ದಾನೆ. 26 ಒಂದು ಅಂಗಕ್ಕೆ ನೋವಾದರೆ, ಎಲ್ಲಾ ಅಂಗಗಳಿಗೂ ನೋವಾಗುತ್ತದೆ; ಒಂದು ಅಂಗಕ್ಕೆ ಮರ್ಯಾದೆ ಬಂದರೆ, ಎಲ್ಲಾ ಅಂಗಗಳಿಗೂ ಸಂತೋಷವಾಗುತ್ತದೆ.

27 ನೀವು ಕ್ರಿಸ್ತನ ದೇಹವು, ಮತ್ತು ಒಬ್ಬೊಬ್ಬರಾಗಿ ಅದಕ್ಕೆ ಅಂಗಗಳಾಗಿದ್ದೀರಿ. 28 ದೇವರು ತನ್ನ ಸಭೆಯಲ್ಲಿ ಮೊದಲನೇದಾಗಿ ಅಪೊಸ್ತಲರನ್ನು, ಎರಡನೇದಾಗಿ ಪ್ರವಾದಿಗಳನ್ನು, ಮೂರನೇದಾಗಿ ಉಪದೇಶಕರನ್ನು ಇಟ್ಟಿದ್ದಾನೆ; ಆ ಮೇಲೆ ಮಹತ್ಕಾರ್ಯ ಮಾಡುವ ಶಕ್ತಿಯನ್ನೂ ನಾನಾ ರೋಗಗಳನ್ನು ವಾಸಿಮಾಡುವ ವರವನ್ನೂ ಪರಸಹಾಯ ಮಾಡುವ ಗುಣವನ್ನೂ ಕಾರ್ಯಗಳನ್ನು ನಿರ್ವಹಿಸುವ ಜ್ಞಾನವನ್ನೂ ವಿವಿಧ ವಾಣಿಗಳನ್ನಾಡುವ ವರವನ್ನೂ ಅವರವರಿಗೆ ಕೊಟ್ಟಿದ್ದಾನೆ. 29 ಎಲ್ಲರೂ ಅಪೊಸ್ತಲರೋ? ಎಲ್ಲರೂ ಪ್ರವಾದಿಗಳೋ? ಎಲ್ಲರೂ ಉಪದೇಶಕರೋ? ಎಲ್ಲರೂ ಮಹತ್ಕಾರ್ಯಗಳನ್ನು ಮಾಡುವವರೋ? 30 ರೋಗ ವಾಸಿಮಾಡುವ ವರಗಳು ಎಲ್ಲರಿಗೂ ಉಂಟೋ? ಎಲ್ಲರೂ ವಾಣಿಗಳನ್ನಾಡುವರೋ? ವಾಣಿಗಳ ಅರ್ಥವನ್ನು ಹೇಳುವದಕ್ಕೆ ಎಲ್ಲರಿಗೂ ಶಕ್ತಿಯುಂಟೋ? 31 ಇವುಗಳಲ್ಲಿ ಶ್ರೇಷ್ಠ ವರಗಳನ್ನು ಆಸಕ್ತಿಯಿಂದ ಅಪೇಕ್ಷಿಸಿರಿ. ಇನ್ನೂ ಉತ್ಕೃಷ್ಟವಾದ ಮಾರ್ಗವನ್ನು ನಿಮಗೆ ತೋರಿಸುತ್ತೇನೆ.

ಎಲ್ಲಾ ವರಗಳಲ್ಲಿ ಪ್ರೀತಿಯೇ ಶ್ರೇಷ್ಠವಾದದ್ದು.

**13** ನಾನು ಮನುಷ್ಯರ ಭಾಷೆಗಳನ್ನೂ ದೇವದೂತರ ಭಾಷೆಗಳನ್ನೂ ಆಡುವವನಾದಾಗ್ಯೂ ಪ್ರೀತಿಯಿಲ್ಲದವನಾಗಿದ್ದರೆ, ನಾದಕೊಡುವ ಕಂಚೂ ಗಣಗಣಿಸುವ ತಾಳವೂ ಆಗಿದ್ದೇನೆ. 2 ನನಗೆ ಪ್ರವಾದನಾವರವಿದ್ದರೂ[1], ದೇವರು ತಿಳಿಸಿರುವ ಎಲ್ಲಾ ರಹಸ್ಯಗಳೂ ಸಕಲ ವಿಧವಾದ ವಿದ್ಯೆಯೂ ತಿಳಿದರೂ, ಬೆಟ್ಟಗಳನ್ನು ತೆಗೆದಿಡುವದಕ್ಕೆ ಬೇಕಾದಷ್ಟು ನಂಬಿಕೆಯಿದ್ದರೂ ನಾನು ಪ್ರೀತಿಯಿಲ್ಲದವನಾಗಿದ್ದರೆ, ಏನೂ ಅಲ್ಲದವನಾಗಿದ್ದೇನೆ. 3 ನನಗಿರುವದೆಲ್ಲವನ್ನು ಅನ್ನದಾನಮಾಡಿದರೂ, ನನ್ನ ದೇಹವನ್ನು ಸುಡುವದಕ್ಕೆ ಒಪ್ಪಿಸಿದರೂ ಪ್ರೀತಿಯು ನನಗಿಲ್ಲದಿದ್ದರೆ, ನನಗೇನೂ ಪ್ರಯೋಜನವಾಗುವದಿಲ್ಲ.

4 ಪ್ರೀತಿ ಬಹು ತಾಳ್ಮೆಯುಳ್ಳದ್ದು, ಪ್ರೀತಿ ದಯೆ ತೋರಿಸುವದು. ಪ್ರೀತಿಯು ಹೊಟ್ಟೆಕಿಚ್ಚು ಪಡುವದಿಲ್ಲ, ಹೊಗಳಿಕೊಳ್ಳುವದಿಲ್ಲ, ಉಬ್ಬಿಕೊಳ್ಳುವದಿಲ್ಲ; 5 ಮರ್ಯಾದೆಗೆಟ್ಟು ನಡೆಯುವದಿಲ್ಲ, ಸ್ವಪ್ರಯೋಜನವನ್ನು ಚಿಂತಿಸುವದಿಲ್ಲ, ಸಿಟ್ಟುಗೊಳ್ಳುವದಿಲ್ಲ, ಅಪಕಾರವನ್ನು ಮನಸ್ಸಿನಲ್ಲಿ ಇಟ್ಟುಕೊಳ್ಳುವದಿಲ್ಲ; 6 ಅನ್ಯಾಯವನ್ನು ನೋಡಿ ಸಂತೋಷಪಡದೆ ಸತ್ಯಕ್ಕೆ ಜಯವಾಗುವಲ್ಲಿ ಸಂತೋಷಪಡುತ್ತದೆ; 7 ಎಲ್ಲವನ್ನೂ ಅಡಗಿಸಿಕೊಳ್ಳುತ್ತದೆ, ಎಲ್ಲವನ್ನೂ ನಂಬುತ್ತದೆ, ಎಲ್ಲವನ್ನೂ ನಿರೀಕ್ಷಿಸುತ್ತದೆ, ಎಲ್ಲವನ್ನೂ ಸಹಿಸಿಕೊಳ್ಳುತ್ತದೆ.

8 ಪ್ರೀತಿಯು ಎಂದಿಗೂ ಬಿದ್ದುಹೋಗುವದಿಲ್ಲ; ಪ್ರವಾದನೆಗಳಾದರೋ ಇಲ್ಲದಂತಾಗುವವು; ವಾಣಿಗಳೋ ನಿಂತುಹೋಗುವವು; ವಿದ್ಯೆಯೋ ಇಲ್ಲದಂತಾಗುವದು. 9 ಅಪೂರ್ಣ

[1] ಅಥವಾ, ಸತ್ಯೋಪದೇಶ ಮಾಡುವ ವರವಿದ್ದರೂ.

10 ವಾಗಿ ತಿಳುಕೊಳ್ಳುತ್ತೇವೆ, ಅಪೂರ್ಣವಾಗಿ ಪ್ರವಾದಿಸುತ್ತೇವೆ. ಆದರೆ ಸಂಪೂರ್ಣವಾ
11 ದದ್ದು ಬಂದಾಗ ಅಪೂರ್ಣವಾದದ್ದು ಇಲ್ಲದಂತಾಗುವದು. ನಾನು ಬಾಲಕನಾಗಿದ್ದಾಗ ಬಾಲಕನ ಮಾತುಗಳನ್ನಾಡಿದೆನು, ಬಾಲಕನ ಸುಖದುಃಖಗಳನ್ನು ಅನುಭವಿಸಿದೆನು, ಬಾಲಕನ ಆಲೋಚನೆಗಳನ್ನು ಮಾಡಿಕೊಂಡೆನು. ಪ್ರಾಯಸ್ಥನಾದ ಮೇಲೆ ಬಾಲ್ಯದವುಗಳನ್ನು
12 ಬಿಟ್ಟುಬಿಟ್ಟೆನು. ಈವಾಗ ಕಂಚಿನ ದರ್ಪಣದಲ್ಲಿ ಕಾಣಿಸುವಂತೆ ದೇವರ ಮುಖವು[1] ನಮಗೆ ಮೊಬ್ಬಾಗಿ ಕಾಣಿಸುತ್ತೆ; ಆವಾಗ ಮುಖಾಮುಖಿಯಾಗಿ ಆತನನ್ನು ನೋಡುವೆವು. ಈಗ ಸ್ವಲ್ಪಮಾತ್ರ ನನಗೆ ತಿಳಿದದೆ; ಆಗ ದೇವರು ನನ್ನನ್ನು ಸಂಪೂರ್ಣವಾಗಿ
13 ತಿಳುಕೊಂಡಂತೆ ನಾನು ಸಂಪೂರ್ಣವಾಗಿ ತಿಳುಕೊಳ್ಳುವೆನು. ಹೀಗಿರುವದರಿಂದ ನಂಬಿಕೆ
**14** ನಿರೀಕ್ಷೆ ಪ್ರೀತಿ ಈ ಮೂರೇ ನಿಲ್ಲುತ್ತವೆ; ಇವುಗಳಲ್ಲಿ ದೊಡ್ಡದು ಪ್ರೀತಿಯೇ. ಪ್ರೀತಿಯನ್ನು ಅಭ್ಯಾಸಮಾಡಿಕೊಳ್ಳಿರಿ.

ವಾಣಿಯನ್ನಾಡುವ ವರಕ್ಕಿಂತ ಪ್ರವಾದಿಸುವ ವರವೇ ವಿಶೇಷವಾದದ್ದು.

ಆದಾಗ್ಯೂ ಪವಿತ್ರಾತ್ಮದಿಂದುಂಟಾಗುವ ವರಗಳನ್ನು, ಅವುಗಳೊಳಗೆ ವಿಶೇಷವಾಗಿ
2 ಪ್ರವಾದಿಸುವ ವರವನ್ನೇ ಆಸಕ್ತಿಯಿಂದ ಅಪೇಕ್ಷಿಸಿರಿ. ವಾಣಿಯನ್ನಾಡುವವನು ದೇವರ ಸಂಗಡ ಮಾತಾಡುತ್ತಾನೆ ಹೊರತು ಮನುಷ್ಯರ ಸಂಗಡ ಆಡುವದಿಲ್ಲ. ಅವನು ವಿಶೇಷವಾದ ಸತ್ಯಾರ್ಥಗಳನ್ನು ಕುರಿತು ಆತ್ಮಪ್ರೇರಿತವಾದ ನುಡಿಗಳನ್ನು ಆಡುತ್ತಾ ಇದ್ದಾಗ್ಯೂ
3 ಅದನ್ನು ಯಾರೂ ತಿಳುಕೊಳ್ಳುವದಿಲ್ಲ. ಪ್ರವಾದಿಸುವವನಾದರೋ ಮನುಷ್ಯರ ಸಂಗಡ ಮಾತಾಡುವವನಾಗಿ ಅವರಿಗೆ ಭಕ್ತಿವೃದ್ಧಿಯನ್ನೂ ಪ್ರೋತ್ಸಾಹವನ್ನೂ ಸಂತೈಸುವಿಕೆ
4 ಯನ್ನೂ ಉಂಟುಮಾಡುತ್ತಾನೆ. ವಾಣಿಯನ್ನಾಡುವವನು ತನಗೆ ಮಾತ್ರ ಭಕ್ತಿವೃದ್ಧಿಯನ್ನುಂಟುಮಾಡುತ್ತಾನೆ, ಪ್ರವಾದಿಸುವವನು ಸಭೆಗೆ ಭಕ್ತಿವೃದ್ಧಿಯನ್ನುಂಟುಮಾಡು
5 ತ್ತಾನೆ. ನೀವೆಲ್ಲರೂ ವಾಣಿಗಳನ್ನಾಡಬೇಕೆಂದು ನಾನು ಅಪೇಕ್ಷಿಸಿದಾಗ್ಯೂ ಅದಕ್ಕಿಂತಲೂ ನೀವು ಪ್ರವಾದಿಸಬೇಕೆಂಬುವದೇ ನನ್ನಿಷ್ಟ. ವಾಣಿಗಳನ್ನಾಡುವವನು ಸಭೆಗೆ ಭಕ್ತಿವೃದ್ಧಿಯಾಗುವದಕ್ಕಾಗಿ ಆ ವಾಣಿಯ ಅರ್ಥವನ್ನು ಹೇಳದೆ ಹೋದರೆ, ಅವನಿಗಿಂತ ಪ್ರವಾದಿ
6 ಸುವವನು ಶ್ರೇಷ್ಠ. ಹೀಗಿರುವದರಿಂದ, ಸಹೋದರರೇ, ನಾನು ನಿಮ್ಮ ಬಳಿಗೆ ಬಂದು ದೇವರು ತಿಳಿಸಿದ್ದನ್ನು ಪ್ರಕಟಿಸದೆ ಜ್ಞಾನವಾಕ್ಯವನ್ನಾಡದೆ ಪ್ರವಾದನೆಯನ್ನು ಹೇಳದೆ ಉಪದೇಶಮಾಡದೆ ವಾಣಿಗಳನ್ನು ಮಾತ್ರ ಆಡುವವನಾಗಿದ್ದರೆ, ನನ್ನಿಂದ ನಿಮಗೇನು
7 ಪ್ರಯೋಜನವಾದೀತು? ಕೊಳಲು ವೀಣೆ ಮೊದಲಾದ ಅಚೇತನವಾದ್ಯಗಳು ಸ್ವರಗಳಲ್ಲಿ ಯಾವ ಭೇದವನ್ನೂ ತೋರಿಸದಿದ್ದರೆ, ಊದಿದ್ದು ಅಥವಾ ಬಾರಿಸಿದ್ದು ಇಂಥಾದ್ದೇ ಎಂದು
8 ಹ್ಯಾಗೆ ತಿಳಿಯುವದು? ತುತೂರಿಯು ಗೊತ್ತಿಲ್ಲದ ಶಬ್ದವನ್ನು ಕೊಟ್ಟರೆ, ಯಾರು ಯುದ್ಧಕ್ಕೆ
9 ಸಿದ್ಧಮಾಡಿಕೊಳ್ಳುವರು? ಹಾಗೆಯೇ ನೀವೂ ತಿಳಿಯಬಹುದಾದ ಭಾಷೆಯನ್ನೂ ಬಾಯಿಂದ ಆಡವೆಹೋದರೆ, ನಿಮ್ಮ ಮಾತಿನ ಅರ್ಥವನ್ನು ಹ್ಯಾಗೆ ತಿಳಿಯುವದು? ನೀವು
10 ಗಾಳಿಯ ಸಂಗಡ ಮಾತಾಡಿದ ಹಾಗಿರುವದಷ್ಟೆ. ಲೋಕದಲ್ಲಿ ಎಷ್ಟು ವಿಧವಾದ

[1] ಅಥವಾ, ಎಲ್ಲವು.

ಭಾಷೆಗಳಿದ್ದರೂ ಅವುಗಳಲ್ಲಿ ಒಂದಾದರೂ ಅರ್ಥವಿಲ್ಲದ್ದಾಗಿರುವದಿಲ್ಲ. ಭಾಷೆಯ 11
ಅರ್ಥವು ನನಗೆ ತಿಳಿಯದಿದ್ದರೆ, ಮಾತಾಡುವವನಿಗೆ ನಾನು ಅನ್ಯದೇಶದವನಂತಿರುವೆನು;
ಮಾತಾಡುವವನು ನನಗೆ ಅನ್ಯದೇಶದವನಂತಿರುವನು. ಹಾಗೆಯೇ ನೀವೂ ಆತ್ಮಪ್ರೇರಿತ 12
ನುಡಿಗಳನ್ನಾಡುವದಕ್ಕೆ ಅಪೇಕ್ಷಿಸುವವರಾಗಿರುವದರಿಂದ, ಸಭೆಗೆ ಭಕ್ತಿವೃದ್ಧಿ ಉಂಟಾ
ಗುವ ಹಾಗೆ ಅದಕ್ಕಿಂತಲೂ ಹೆಚ್ಚಾದದ್ದನ್ನು ಮಾಡುವದಕ್ಕೆ ಪ್ರಯತ್ನಿಸಿರಿ. ಆದದರಿಂದ 13
ವಾಣಿಯನ್ನಾಡುವವನು ತನಗೆ ಅದರ ಅರ್ಥವನ್ನು ಹೇಳುವ ಶಕ್ತಿಯೂ ಉಂಟಾಗ
ಬೇಕೆಂದು ದೇವರನ್ನು ಪ್ರಾರ್ಥಿಸಲಿ. ಯಾಕಂದರೆ ನಾನು ವಾಣಿಯನ್ನಾಡುತ್ತಾ ದೇವ 14
ರನ್ನು ಪ್ರಾರ್ಥಿಸಿದರೆ, ನನ್ನಾತ್ಮವು ಪ್ರಾರ್ಥಿಸುವದೇ ಹೊರತು ನನ್ನ ಬುದ್ಧಿ ನಿಷ್ಫಲವಾ
ಗಿರುವದು. ಹಾಗಾದರೇನು? ನಾನು ಆತ್ಮದಿಂದ ಪ್ರಾರ್ಥಿಸುವೆನು, ಬುದ್ಧಿಯಿಂದಲೂ 15
ಪ್ರಾರ್ಥಿಸುವೆನು; ಆತ್ಮದಿಂದ ಹಾಡುವೆನು, ಬುದ್ಧಿಯಿಂದಲೂ ಹಾಡುವೆನು. ನೀನು ಆತ್ಮ 16
ದಿಂದ ಮಾತ್ರ ದೇವರ ಸ್ತೋತ್ರಮಾಡಿದರೆ, ಆ ವರವನ್ನು ಹೊಂದದಿರುವ ಸಭೆಯವನಿಗೆ
ನೀನು ಹೇಳಿದ್ದು ತಿಳಿಯದೆ ಇರುವದರಿಂದ, ನೀನು ಮಾಡುವ ಕೃತಜ್ಞತಾಸ್ತುತಿಗೆ ಅವನು
ಆಮೆನ್ ಎಂದು ಹ್ಯಾಗೆ ಹೇಳ್ಯಾನು? ನೀನಂತೂ ಚನ್ನಾಗಿ ಕೃತಜ್ಞತಾಸ್ತುತಿ ಮಾಡುತ್ತೀ 17
ಹೌದು, ಆದರೆ ಬೇರೊಬ್ಬನು ಭಕ್ತಿವೃದ್ಧಿಹೊಂದುವದಿಲ್ಲ. ನಾನು ನಿಮ್ಮೆಲ್ಲರಿಗಿಂತಲೂ 18
ಹೆಚ್ಚಾಗಿ ವಾಣಿಗಳನ್ನಾಡುತ್ತೇನೆಂದು ದೇವರನ್ನು ಕೊಂಡಾಡುತ್ತೇನೆ. ಆದಾಗ್ಯೂ ಸಭೆ 19
ಯಲ್ಲಿ ವಾಣಿಯಿಂದ ಹತ್ತುಸಾವಿರ ಮಾತುಗಳನ್ನಾಡುವದಕ್ಕಿಂತ ನನ್ನ ಬುದ್ಧಿಯಿಂದ ಐದೇ
ಮಾತುಗಳನ್ನಾಡಿ ಇತರರಿಗೆ ಉಪದೇಶಮಾಡುವದು ನನಗೆ ಇಷ್ಟವಾದದ್ದು. ಸಹೋ 20
ದರರೇ, ಬುದ್ಧಿಯ ವಿಷಯದಲ್ಲಿ ಬಾಲಕರಾಗಿರಬೇಡಿರಿ; ಕೆಟ್ಟತನದ ವಿಷಯದಲ್ಲಿ ಶಿಶು
ಗಳಾಗಿಯೇ ಇದ್ದು, ಬುದ್ಧಿಯ ವಿಷಯದಲ್ಲಿ ಪ್ರಾಯಸ್ಥರಾಗಿರಬೇಕು.

ಅನ್ಯಭಾಷೆಯವರ ಮೂಲಕವಾಗಿಯೂ ಪರದೇಶಸ್ಥರ ನಾಲಿಗೆಯಿಂದಲೂ ನಾನು 21
ಈ ಜನರ ಸಂಗಡ ಮಾತಾಡುವೆನು; ಆದಾಗ್ಯೂ ಅವರು ನನ್ನ ಮಾತಿಗೆ ಕಿವಿಕೊಡುವ
ದಿಲ್ಲವೆಂದು ಕರ್ತನು ಹೇಳುತ್ತಾನೆಂಬದಾಗಿ[1] ಧರ್ಮಶಾಸ್ತ್ರದಲ್ಲಿ ಬರೆದದೆ. ಆದದರಿಂದ 22
ವಾಣಿಗಳನ್ನಾಡುವದು ನಂಬದವರಿಗೆ ಸೂಚನೆಗಾಗಿದೆ ಹೊರತು ನಂಬುವವರಿಗೆ ಸೂಚನೆ
ಯಲ್ಲವೆಂದು ನಾವು ತಿಳುಕೊಳ್ಳಬೇಕು. ಆದರೆ ಪ್ರವಾದನೆಯು ನಂಬದವರಿಗೋಸ್ಕರ
ವಲ್ಲ ನಂಬುವವರಿಗೋಸ್ಕರವಾಗಿದೆ. ಹೀಗಿರುವಲ್ಲಿ ಸಭೆಯೆಲ್ಲಾ ಒಂದೇ ಸ್ಥಳದಲ್ಲಿ ಕೂಡಿ 23
ಬಂದಾಗ ಎಲ್ಲರೂ ವಾಣಿಗಳನ್ನಾಡಿದರೆ, ಈ ವರವನ್ನು ಹೊಂದದಿರುವ ಸಭೆಯವರು
ಅಥವಾ ಕ್ರಿಸ್ತನಂಬಿಕೆಯಿಲ್ಲದವರು ಒಳಗೆ ಬಂದು ನೋಡಿ—ನಿಮಗೆ ಹುಚ್ಚುಹಿಡಿದದೆ
ಎಂದು ಹೇಳುವದಿಲ್ಲವೋ? ಆದರೆ ನೀವೆಲ್ಲರು ಪ್ರವಾದಿಸುತ್ತಿರಲು ಕ್ರಿಸ್ತನಂಬಿಕೆಯಿಲ್ಲದವ 24
ನಾಗಲಿ ಈ ವರವಿಲ್ಲದವನಾಗಲಿ ಒಳಗೆ ಬಂದರೆ, ಅವನು ಎಲ್ಲರ ಮಾತನ್ನು ಕೇಳಿ ತಾನು
ಪಾಪಿಯೆಂಬ ಅರುಹನ್ನು ಹೊಂದುವನು, ಎಲ್ಲರ ಮಾತಿನಿಂದ ಪರಿಶೋಧಿತನಾಗುವನು,
ಅವನ ಹೃದಯದ ರಹಸ್ಯಗಳು ಬೈಲಾಗುವವು; ಮತ್ತು ಅಡ್ಡಬಿದ್ದು ದೇವರನ್ನು ಆರಾ 25
ಧಿಸಿ—ದೇವರು ನಿಜವಾಗಿ ನಿಮ್ಮಲ್ಲಿದ್ದಾನೆಂಬುವದನ್ನು ಪ್ರಚುರಪಡಿಸುವನು.

---

[1] ಯೆಶಾಯ ೨೮, ೧೧. ೧೨.

### ಸಭೆಯಲ್ಲಿ ಎಲ್ಲವೂ ಮರ್ಯಾದೆಯಿಂದ ನಡೆಯಬೇಕೆಂಬುವ ಬೋಧೆ.

26 ಹಾಗಾದರೇನು, ಸಹೋದರರೇ? ನೀವು ಕೂಡಿಬಂದಿರುವಾಗ ಒಬ್ಬನು ಹಾಡುವದೂ, ಒಬ್ಬನು ಉಪದೇಶ ಮಾಡುವದೂ, ಒಬ್ಬನು ತನಗೆ ಪ್ರಕಟವಾದದ್ದನ್ನು ತಿಳಿಸುವದೂ, ಒಬ್ಬನು ವಾಣಿಯನ್ನಾಡುವದೂ, ಒಬ್ಬನು ಅದರ ಅರ್ಥವನ್ನು ಹೇಳುವದೂ ಉಂಟಷ್ಟೆ. 27 ನೀವು ಏನೂ ನಡಿಸಿದರೂ ಭಕ್ತಿವೃದ್ಧಿಗಾಗಿಯೇ ನಡಿಸಿರಿ. ವಾಣಿಯನ್ನಾಡುವದಾದರೆ ಇಬ್ಬರು, ಅಥವಾ ಅವಶ್ಯಕವಿದ್ದರೆ ಮೂವರಿಗಿಂತ ಹೆಚ್ಚಿಲ್ಲದೆ, ಒಬ್ಬೊಬ್ಬರಾಗಿ ಮಾತಾಡ 28 ಬೇಕು; ಮತ್ತು ಒಬ್ಬನೇ ಅರ್ಥವನ್ನು ಹೇಳಬೇಕು. ಅರ್ಥವನ್ನು ಹೇಳುವವನಿಲ್ಲದಿದ್ದರೆ, ವಾಣಿಯನ್ನಾಡುವವನು ಸಭೆಯಲ್ಲಿ ಸುಮ್ಮಗಿರಲಿ; ತನ್ನೊಂದಿಗೆಯೂ ದೇವರೊಂದಿಗೆಯೂ 29 ಮಾತಾಡಿಕೊಳ್ಳಲಿ. ಪ್ರವಾದಿಗಳು ಇಬ್ಬರಾಗಲಿ ಮೂವರಾಗಲಿ ಮಾತಾಡಲಿ, ಮಿಕ್ಕಾ 30 ದವರು ಕೇಳಿ ವಿವೇಚನೆ ಮಾಡಲಿ. ಕೂತಿರುವ ಮತ್ತೊಬ್ಬನಿಗೆ ಪ್ರಕಟನೆ ಉಂಟಾದರೆ, 31 ಮೊದಲಿನವನು ಸುಮ್ಮಗಾಗಲಿ. ನೀವೆಲ್ಲರು ಒಬ್ಬೊಬ್ಬರಾಗಿ ಪ್ರವಾದಿಸುವದಕ್ಕೆ ಅಡ್ಡಿ ಯಿಲ್ಲ; ಹೀಗೆ ಮಾಡಿದರೆ, ಎಲ್ಲರೂ ಕಲಿತುಕೊಳ್ಳುವರು, ಎಲ್ಲರೂ ಎಚ್ಚರಿಕೆ ಹೊಂದು 32, 33 ವರು. ಪ್ರವಾದಿಗಳ ಆತ್ಮಗಳು ಪ್ರವಾದಿಗಳ ಸ್ವಾಧೀನದಲ್ಲಿ ಅವೆ. ದೇವರು ಸಮಾ ಧಾನಕ್ಕೆ ಕಾರಣನೇ ಹೊರತು ಗಲಿಬಿಲಿಗೆ ಕಾರಣನಲ್ಲ.

34 ದೇವಜನರ ಎಲ್ಲಾ ಸಭೆಗಳ ಮರ್ಯಾದೆಯ ಪ್ರಕಾರ ಸ್ತ್ರೀಯರು ಸಭೆಯ ಕೂಟಗಳಲ್ಲಿ ಸುಮ್ಮಗಿರಬೇಕು; ಮಾತಾಡುವದಕ್ಕೆ ಅವರಿಗೆ ಅಪ್ಪಣೆಯಿಲ್ಲ; ಅವರು ಅಧೀನದಲ್ಲಿರಬೇಕು; 35 ಧರ್ಮಶಾಸ್ತ್ರದಲ್ಲಿಯೂ ಹೀಗೆ ಹೇಳಿಯದೆಯಲ್ಲಾ[1]. ಅವರು ಏನಾದರೂ ತಿಳುಕೊಳ್ಳು ವದಕ್ಕೆ ಅಪೇಕ್ಷಿಸಿದರೆ, ಮನೆಯಲ್ಲಿ ತಮ್ಮ ಗಂಡಂದಿರನ್ನು ಕೇಳಲಿ. ಸ್ತ್ರೀಯರು ಸಭೆಯಲ್ಲಿ ಮಾತಾಡುವದು ನಾಚಿಗೆಗೆಟ್ಟ ಕೆಲಸವಾಗಿದೆ.

36 ಏನು, ದೇವರ ವಾಕ್ಯವು ನಿಮ್ಮಿಂದಲೇ ಹೊರಟಿತೋ? ನಿಮಗೆ ಮಾತ್ರವೇ ಬಂತೋ? 37 ಯಾವನಾದರೂ ತನ್ನನ್ನು ಪ್ರವಾದಿಯೆಂದಾಗಲಿ ದೇವರಾತ್ಮನಿಂದ ನಡಿಸಲ್ಪಡುವವ ನೆಂದಾಗಲಿ ಭಾವಿಸಿಕೊಂಡರೆ, ನಾನು ನಿಮಗೆ ಬರೆದಿರುವ ಸಂಗತಿಗಳು ಕರ್ತನ ವಿಧಿಯೇ 38 ಎಂದು ಚನ್ನಾಗಿ ತಿಳುಕೊಳ್ಳಲಿ. ಯಾವನಾದರೂ ತನಗೆ ಇದು ಗೊತ್ತಿಲ್ಲವೆಂದರೆ, ಅವನು ಗೊತ್ತಿಗೆ ಬಾರದವನು.

39 ಆದಕಾರಣ ನನ್ನ ಸಹೋದರರೇ, ಪ್ರವಾದಿಸುವದಕ್ಕೆ ಆಸಕ್ತಿಯಿಂದ ಅಪೇಕ್ಷಿಸಿರಿ, 40 ಮತ್ತು ವಾಣಿಯನ್ನಾಡುವದಕ್ಕೆ ಬೇಡವೆನ್ನಬಾರದು. ಆದರೆ ಎಲ್ಲವೂ ಮರ್ಯಾದೆ ಯಿಂದಲೂ ಕ್ರಮದಿಂದಲೂ ನಡೆಯಲಿ.

### ಸತ್ತವರು ಜೀವಿತರಾಗಿ ಎದ್ದುಬರುವದನ್ನು ಕುರಿತದ್ದು. (15, 1—58.)

### ಕ್ರಿಸ್ತನು ಎದ್ದುಬಂದನೆಂಬುವದಕ್ಕೆ ಸಾಕ್ಷಿಗಳು.

**15** ಸಹೋದರರೇ, ನಾನು ನಿಮಗೆ ತಿಳಿಸಿದ ಸುವಾರ್ತೆಯನ್ನು ನಿಮ್ಮ ನೆನಪಿಗೆ ತರು 2 ತ್ತೇನೆ; ನೀವು ಅದನ್ನು ಸ್ವೀಕರಿಸಿದಿರಿ, ಅದರಲ್ಲಿ ನಿಂತಿದ್ದೀರಿ. ನಾನು ಯಾವ ಸಂಗತಿ

[1] ಉತ್ಪತ್ತಿ ೩, ೧೬.

ಯನ್ನು ಹೇಳಿ ನಿಮಗೆ ಸುವಾರ್ತೆಯನ್ನು ತಿಳಿಸಿದೆನೋ ನೀವು ಅದನ್ನು ಘಟ್ಟಿಯಾಗಿ ಹಿಡುಕೊಂಡರೆ, ಮತ್ತು ನಿಮ್ಮ ನಂಬಿಕೆಯು ನಿರಾಧಾರವಾಗದ ಪಕ್ಷಕ್ಕೆ, ಆ ಸುವಾರ್ತೆ ಯಿಂದ ನಿಮಗೆ ರಕ್ಷಣೆಯಾಗುತ್ತದೆ. 3 ನಾನು ನಿಮಗೆ ತಿಳಿಸಿದ ಮೊದಲನೇ ಸಂಗತಿ ಗಳೊಳಗೆ ಒಂದು ಸಂಗತಿಯನ್ನು ನಿಮಗೆ ತಿಳಿಸಿಕೊಟ್ಟೆನು. ಅದು ನಾನು ಸಹ ಕಲಿತು ಕೊಂಡದ್ದೇ. ಅದೇನಂದರೆ, ಶಾಸ್ತ್ರದಲ್ಲಿ ಮುಂತಿಳಿಸಿರುವ ಪ್ರಕಾರ[1] ಕ್ರಿಸ್ತನು ನಮ್ಮ ಪಾಪಗಳ ನಿವಾರಣೆಗಾಗಿ ಸತ್ತನು; 4 ಹೂಣಲ್ಪಟ್ಟನು; ಶಾಸ್ತ್ರದ ಪ್ರಕಾರವೇ[2] ಮೂರನೇ ದಿನದಲ್ಲಿ ಎಬ್ಬಿಸಲ್ಪಟ್ಟನು. 5 ಕೇಫನಿಗೂ ಆ ಮೇಲೆ ಹನ್ನೆರಡು ಮಂದಿ ಅಪೊಸ್ತಲರಿಗೂ ಕಾಣಿಸಿಕೊಂಡನು. 6 ತರುವಾಯ ಒಂದೇ ಸಮಯದಲ್ಲಿ ಐನೂರು ಮಂದಿಗಿಂತ ಹೆಚ್ಚು ಸಹೋದರರಿಗೆ ಕಾಣಿಸಿಕೊಂಡನು. ಇವರಲ್ಲಿ ಹೆಚ್ಚು ಜನರು ಇಂದಿನ ವರೆಗೂ ಇದ್ದಾರೆ, ಕೆಲವರು ನಿದ್ರೆಹೋಗಿದ್ದಾರೆ. 7 ತರುವಾಯ ಆತನು ಯಾಕೋಬನಿಗೂ ಆ ಮೇಲೆ ಅಪೊಸ್ತಲರೆಲ್ಲರಿಗೂ ಕಾಣಿಸಿಕೊಂಡನು. 8 ಕಟ್ಟಕಡೆಗೆ ದಿನತುಂಬದೆ ಹುಟ್ಟಿದವನಂತಿ ರುವ ನನಗೂ ಕಾಣಿಸಿಕೊಂಡನು. 9 ನಾನಂತೂ ಅಪೊಸ್ತಲರಲ್ಲಿ ಕನಿಷ್ಠನಷ್ಟೆ; ನಾನು ದೇವರ ಸಭೆಯನ್ನು ಹಿಂಸೆಪಡಿಸಿದ್ದರಿಂದ ಅಪೊಸ್ತಲನೆನ್ನಿಸಿಕೊಳ್ಳುವದಕ್ಕೆ ಯೋಗ್ಯನಲ್ಲ. 10 ಆದರೆ ನಾನು ಎಂಥವನಾಗಿದ್ದೇನೋ ದೇವರ ಕೃಪೆಯಿಂದಲೇ ಅಂಥವನಾಗಿದ್ದೇನೆ. ನನ ಗುಂಟಾದ ಆತನ ಕೃಪೆಯು ನಿಷ್ಫಲವಾಗಲಿಲ್ಲ; ನಾನು ಅವರೆಲ್ಲರಿಗಿಂತಲೂ ಹೆಚ್ಚಾಗಿ ಪ್ರಯಾಸಪಟ್ಟೆನು. ಆದರೆ ಪ್ರಯಾಸಪಟ್ಟವನು ನಾನಲ್ಲ, ನನ್ನೊಂದಿಗಿರುವ ದೇವರ ಕೃಪೆಯೇ. 11 ಹಾಗಾದರೆ ನಾನಾದರೇನು ಅವರಾದರೇನು, ಆ ಸಂಗತಿಗಳನ್ನೇ ಸಾರು ತ್ತೇವೆ; ಅವುಗಳನ್ನು ನೀವು ನಂಬಿದಿರಿ.

ಕ್ರಿಸ್ತನು ಜೀವಿತನಾಗಿ ಎದ್ದುಬಂದದ್ದರಿಂದ ಆತನ ಭಕ್ತರೂ ಎದ್ದುಬರುವರು.

12 ಕ್ರಿಸ್ತನು ಸತ್ತವರೊಳಗಿಂದ ಎಬ್ಬಿಸಲ್ಪಟ್ಟನೆಂದು ಸಾರೋಣವಾಗುತ್ತಿರುವಲ್ಲಿ ನಿಮ್ಮೊ ಳಗೆ ಕೆಲವರು—ಸತ್ತವರಿಗೆ ಪುನರುತ್ಥಾನವೇ ಇಲ್ಲವೆಂದು ಹೇಳುವದು ಹ್ಯಾಗೆ? 13 ಸತ್ತವ ರಿಗೆ ಪುನರುತ್ಥಾನವಿಲ್ಲವೆಂಬುವದು ನಿಜವಾಗಿದ್ದರೆ, ಕ್ರಿಸ್ತನಾದರೂ ಎದ್ದುಬರಲಿಲ್ಲ; 14 ಕ್ರಿಸ್ತನು ಎದ್ದುಬರಲಿಲ್ಲವಾದರೆ, ನಮ್ಮ ಪ್ರಸಂಗವು ಹುರುಳಿಲ್ಲದ್ದು, ಮತ್ತು ನಿಮ್ಮ ನಂಬಿ ಕೆಯೂ ಹುರುಳಿಲ್ಲದ್ದು. 15 ಇದಲ್ಲದೆ ಸತ್ತವರು ಎದ್ದುಬರುವದಿಲ್ಲವೆಂಬುವದು ನಿಜವಾ ಗಿದ್ದ ಪಕ್ಷದಲ್ಲಿ, ದೇವರು ಕ್ರಿಸ್ತನನ್ನು ಎಬ್ಬಿಸಲೇ ಇಲ್ಲ; ಎಬ್ಬಿಸಿದನೆಂದು ಸಾಕ್ಷಿಕೊಟ್ಟ ನಾವು ದೇವರ ವಿಷಯವಾಗಿ ಸುಳ್ಳುಸಾಕ್ಷಿ ಹೇಳಿದವರಾಗಿ ಕಂಡುಬಂದೆವು. 16 ಸತ್ತವರು ಎದ್ದುಬರುವದಿಲ್ಲವಾದರೆ, ಕ್ರಿಸ್ತನೂ ಎದ್ದುಬರಲಿಲ್ಲ. 17 ಕ್ರಿಸ್ತನು ಎದ್ದುಬರಲಿಲ್ಲವಾದರೆ, ನಿಮ್ಮ ನಂಬಿಕೆಯು ನಿಷ್ಪ್ರಯೋಜನವಾಗಿದೆ, ನೀವು ಇನ್ನೂ ನಿಮ್ಮ ಪಾಪಗಳಲ್ಲಿಯೇ ಇದ್ದೀರಿ. 18 ಇದು ಮಾತ್ರವಲ್ಲದೆ ಕ್ರಿಸ್ತನವರಾಗಿ ನಿದ್ರೆಹೋದವರು ನಾಶವಾದರು. 19 ಈ ಜೀವಮಾನಕಾಲದ ಪೂರ್ತಿಗೆ ನಾವು ಕ್ರಿಸ್ತನಲ್ಲಿ ನಿರೀಕ್ಷೆಯಿಟ್ಟುಕೊಂಡದ್ದೇ ಹೊರತು ಮತ್ತೇನೂ ಇಲ್ಲದಿದ್ದರೆ, ಎಲ್ಲಾ ಮನುಷ್ಯರಲ್ಲಿಯೂ ನಿರ್ಭಾಗ್ಯರೇ ಸರಿ.

---

[1] ಯೆಶಾಯ ೫೩, ೮. ೯.   [2] ಹೋಶೇಯ ೬, ೨.

20 ಆದರೆ ಕ್ರಿಸ್ತನು ಸತ್ತವರೊಳಗಿಂದ ಎದ್ದುಬಂದೇ ಇದ್ದಾನೆ; ನಿದ್ರೆಹೋದವರಲ್ಲಿ
21 ಪ್ರಥಮಫಲವಾದನು. ಮನುಷ್ಯನ ಮೂಲಕ ಮರಣವು ಉಂಟಾದ ಕಾರಣ ಮನು
22 ಷ್ಯನ ಮೂಲಕ ಸತ್ತವರಿಗೆ ಪುನರುತ್ಥಾನವುಂಟಾಗುವದು. ಯಾವ ಪ್ರಕಾರ ಆದಮನ
ಸಂಬಂಧದಿಂದ ಎಲ್ಲರೂ ಸಾಯುವವರಾದರೋ ಅದೇ ಪ್ರಕಾರ ಕ್ರಿಸ್ತನ ಸಂಬಂಧದಿಂದ
23 ಎಲ್ಲರೂ ಜೀವಿತರಾಗುವರು. ಆದರೆ ಪ್ರತಿಯೊಬ್ಬನು ತನ್ನ ತನ್ನ ತರಗತಿಯಲ್ಲಿರುವನು.
ಕ್ರಿಸ್ತನು ಪ್ರಥಮಫಲ; ತರುವಾಯ ಕ್ರಿಸ್ತನ ಪ್ರತ್ಯಕ್ಷತೆಯಲ್ಲಿ ಆತನವರು ಎದ್ದುಬರುವರು.
24 ಆ ಮೇಲೆ ಆತನು ಬೇರೆ ಎಲ್ಲಾ ಧೊರೆತನವನ್ನೂ ಎಲ್ಲಾ ಅಧಿಕಾರವನ್ನೂ ಬಲವನ್ನೂ
ನಿವೃತ್ತಿಮಾಡಿ ತಂದೆಯಾಗಿರುವ ದೇವರಿಗೆ ರಾಜ್ಯವನ್ನು ಒಪ್ಪಿಸಿಕೊಡುವಾಗ ಸಮಾಪ್ತಿ.
25 ಯಾಕಂದರೆ ತಾನು ಎಲ್ಲಾ ಶತ್ರುಗಳನ್ನು ತನ್ನ ಪಾದಗಳ ಕೆಳಗೆ ಹಾಕಿಕೊಳ್ಳುವ ತನಕ
26 ರಾಜ್ಯವನ್ನಾಳುವದು ಅವಶ್ಯ. ಮರಣವು ಕಡೇ ಶತ್ರುವಾಗಿ ನಿವೃತ್ತಿಯಾಗುವದು.
27 ದೇವರು ಸಮಸ್ತವನ್ನೂ ಆತನ ಪಾದಗಳ ಕೆಳಗೆ ಹಾಕಿ ಆತನಿಗೆ ವಶಮಾಡಿದ್ದಾನೆಂಬ
ದಾಗಿ[1] ಹೇಳಿಯದೆಯಲ್ಲಾ. ಸಮಸ್ತವೂ ಆತನಿಗೆ ವಶಮಾಡಲ್ಪಟ್ಟಿದೆ ಎಂದು ಹೇಳು
ವಾಗ, ಸಮಸ್ತವನ್ನು ವಶಕ್ಕೆ ಕೊಟ್ಟಾತನು ಅದರಲ್ಲಿ ಸೇರಲಿಲ್ಲವೆಂಬುವದು ಸ್ಪಷ್ಟವಾಗಿದೆ.
28 ಸಮಸ್ತವೂ ಆತನಿಗೆ ವಶವಾದ ಮೇಲೆ, ಮಗನು ಸಮಸ್ತವನ್ನೂ ತನಗೆ ವಶ ಮಾಡಿ
ಕೊಟ್ಟಾತನಿಗೆ ತಾನೇ ವಶವಾಗುವನು; ಹೀಗೆ ದೇವರು ಸಮಸ್ತರಲ್ಲಿಯೂ ಸಮಸ್ತವೂ
ಆಗುವನು.

29 ಸತ್ತವರಿಗೆ ಪುನರುತ್ಥಾನವಿಲ್ಲವಾದರೆ, ಸತ್ತವರಿಗೋಸ್ಕರ ದೀಕ್ಷಾಸ್ನಾನ ಮಾಡಿಸಿಕೊ
ಳ್ಳುವವರು ಏನು ಮಾಡುವರು? ಸತ್ತವರು ಎದ್ದುಬರುವದೇ ಇಲ್ಲವೆಂಬುವದು ನಿಜವಾ
30 ಗಿದ್ದರೆ, ಯಾಕೆ ಅವರಿಗೋಸ್ಕರ ದೀಕ್ಷಾಸ್ನಾನ ಮಾಡಿಸಿಕೊಳ್ಳುತ್ತಾರೆ? ನಾವು ಸಹ
31 ಪ್ರತಿ ಗಳಿಗೆಯಲ್ಲಿಯೂ ಯಾಕೆ ಜೀವದ ಭಯದಿಂದಿದ್ದೇವೆ? ಸಹೋದರರೇ, ನಮ್ಮ
ಕರ್ತನಾದ ಕ್ರಿಸ್ತ ಯೇಸುವಿನಲ್ಲಿ ನಿಮ್ಮನ್ನು ಕುರಿತು ನನಗಿರುವ ಹೆಚ್ಚಳದ ಮೇಲೆ ಆಣೆ
32 ಇಟ್ಟು, ನಾನು ದಿನಾಲು ಸಾಯುತ್ತಲಿದ್ದೇನೆ ಎಂದು ಹೇಳುತ್ತೇನೆ. ನಾನು ಎಫೆಸದಲ್ಲಿ
ಮೃಗಗಳೊಂದಿಗೆ ಯುದ್ಧಮಾಡಿದ್ದು ಕೇವಲ ಮಾನುಷಾಭಿಪ್ರಾಯದಿಂದಾದರೆ, ನನಗೇನು
ಪ್ರಯೋಜನ? ಸತ್ತವರು ಎದ್ದುಬರುವದಿಲ್ಲವಾದರೆ,—ತಿನ್ನೋಣ, ಕುಡಿಯೋಣ, ನಾಳೆ
33 ಸಾಯುತ್ತೇವಲ್ಲಾ[2]. ಮೋಸಹೋಗಬೇಡಿರಿ; ದುಸ್ಸಹವಾಸವು ಸದಾಚಾರವನ್ನು ಕೆಡಿ
34 ಸುತ್ತದೆ. ಇಂಥಾ ಅಮಲಿನಿಂದೆಚ್ಚತ್ತು ನೀತಿವಂತರಾಗಿರಿ, ಪಾಪವನ್ನು ಬಿಟ್ಟುಬಿಡಿರಿ.
ಕೆಲವರಿಗೆ ದೇವರ ವಿಷಯದಲ್ಲಿ ಜ್ಞಾನವೇ ಇಲ್ಲ; ನಿಮಗೆ ನಾಚಿಕೆ ಹುಟ್ಟಬೇಕೆಂದು
ಇದನ್ನು ಹೇಳುತ್ತೇನೆ.

ಸತ್ತವರು ಯಾವ ಸ್ಥಿತಿಯಲ್ಲಿ ಎದ್ದುಬರುವರೆಂಬುವದನ್ನು ಕುರಿತದ್ದು.

35 ಸತ್ತವರು ಹ್ಯಾಗೆ ಎಬ್ಬಿಸಲ್ಪಡುತ್ತಾರೆ, ಎಂಥಾ ದೇಹದಿಂದ ಬರುತ್ತಾರೆ ಎಂದು
36 ಒಬ್ಬನು ಕೇಳ್ಯಾನು. ಮೂಢನು ನೀನು; ನೀನು ಬಿತ್ತುವ ಬೀಜವು ಸಾಯದಿದ್ದರೆ,

[1] ಕೀರ್ತನೆ ೮, ೬; ೧೧೦, ೧.    [2] ಯೆಶಾಯ ೨೨, ೧೩.

ಜೀವಿತವಾಗುವದಿಲ್ಲ, ನೋಡು; ಒಂದು ವೇಳೆ ಗೋಧಿಯನ್ನಾಗಲಿ ಬೇರೆ ಯಾವದೋ 37 ಬೀಜವನ್ನಾಗಲಿ ಬಿತ್ತುವಾಗ ಬರೀ ಕಾಳನ್ನೇ ಹೊರತು ಮುಂದೆ ಆಗಬೇಕಾದ ದೇಹ ವನ್ನು ಬಿತ್ತುವದಿಲ್ಲ. ಆದರೆ ದೇವರು ತನ್ನ ಇಷ್ಟದಂತೆ ಅದಕ್ಕೆ ದೇಹವನ್ನು ಕೊಡು 38 ತ್ತಾನೆ. ಒಂದೊಂದು ಬೀಜಕ್ಕೆ ಅದರದರ ದೇಹವನ್ನು ಕೊಡುತ್ತಾನೆ. ಎಲ್ಲಾ ಶರೀರಗಳು 39 ಒಂದೇ ವಿಧವಾದವುಗಳಲ್ಲ; ಮನುಷ್ಯನ ಶರೀರ ಬೇರೆ, ಪಶುಗಳ ಶರೀರ ಬೇರೆ, ಪಕ್ಷಿಗಳ ಶರೀರ ಬೇರೆ, ಮೀನುಗಳದು ಬೇರೆ. ಇದಲ್ಲದೆ ಪರಲೋಕದ ದೇಹಗಳುಂಟು, ಭೂಲೋ 40 ಕದ ದೇಹಗಳುಂಟು, ಆದರೆ ಪರಲೋಕದ ದೇಹಗಳ ಮಹಿಮೆ ಬೇರೆ, ಭೂಲೋಕದ ದೇಹಗಳ ಮಹಿಮೆ ಬೇರೆ. ಸೂರ್ಯನ ಮಹಿಮೆ ಒಂದು ವಿಧ, ಚಂದ್ರನ ಮಹಿಮೆ 41 ಮತ್ತೊಂದು ವಿಧ, ನಕ್ಷತ್ರಗಳ ಮಹಿಮೆ ಇನ್ನೊಂದು ವಿಧ. ಮಹಿಮೆಯಲ್ಲಿ ಒಂದು ನಕ್ಷ ತ್ರಕ್ಕೂ ಇನ್ನೊಂದು ನಕ್ಷತ್ರಕ್ಕೂ ಹೆಚ್ಚುಕಡಿಮೆಯುಂಟಷ್ಟೆ.

ಸತ್ತವರಿಗಾಗುವ ಪುನರುತ್ಥಾನವು ಅದೇ ಪ್ರಕಾರವಾಗಿರುವದು. ದೇಹವು ಲಯಾ 42 ವಸ್ಥೆಯಲ್ಲಿ ಬಿತ್ತಲ್ಪಡುತ್ತದೆ, ನಿರ್ಲಯಾವಸ್ಥೆಯಲ್ಲಿ ಎದ್ದುಬರುವದು; ಹೀನಾವಸ್ಥೆಯಲ್ಲಿ 43 ಬಿತ್ತಲ್ಪಡುತ್ತದೆ, ಮಹಿಮೆಯಲ್ಲಿ ಎದ್ದುಬರುವದು; ನಿರ್ಬಲಾವಸ್ಥೆಯಲ್ಲಿ ಬಿತ್ತಲ್ಪಡುತ್ತದೆ, ಬಲಾವಸ್ಥೆಯಲ್ಲಿ ಎದ್ದುಬರುವದು; ಪ್ರಾಕೃತದೇಹವಾಗಿ ಬಿತ್ತಲ್ಪಡುತ್ತದೆ, ಆತ್ಮಿಕದೇಹ 44 ವಾಗಿ ಎದ್ದುಬರುವದು. ಪ್ರಾಕೃತದೇಹವಿರುವದಾದರೆ, ಆತ್ಮಿಕದೇಹವೂ ಇರುವದು. ಮೊದಲನೇ ಮನುಷ್ಯನಾದ ಆದಮನು ಬದುಕುವ ಪ್ರಾಣಿಯಾದನೆಂದು[1] ಬರೆದದೆ 45 ಯಲ್ಲಾ. ಕಡೇ ಆದಮನೋ ಬದುಕಿಸುವ ಆತ್ಮನು. ಆತ್ಮಿಕವಾದದ್ದು ಮೊದಲನೇ 46 ದಲ್ಲ, ಪ್ರಾಕೃತವಾದದ್ದು ಮೊದಲನೇದು; ಆ ಮೇಲೆ ಆತ್ಮಿಕವಾದದ್ದು. ಮೊದಲನೇ 47 ಮನುಷ್ಯನು ಭೂಮಿಯೊಳಗಿಂದ ಉತ್ಪನ್ನನಾಗಿ ಮಣ್ಣಿಗೆ ಸಂಬಂಧಪಟ್ಟವನು; ಎರಡನೇ ಮನುಷ್ಯನು ಪರಲೋಕದಿಂದ ಬಂದವನು. ಮಣ್ಣಿನಿಂದ ಹುಟ್ಟಿದವನು ಎಂಥವನೋ 48 ಮಣ್ಣಿಗೆ ಸಂಬಂಧಪಟ್ಟವರೂ ಅಂಥವರೇ; ಪರಲೋಕದಿಂದ ಬಂದಾತನು ಎಂಥವನೋ ಪರಲೋಕಸಂಬಂಧ ಪಟ್ಟವರೂ ಅಂಥವರೇ. ನಾವು ಮಣ್ಣಿನಿಂದ ಹುಟ್ಟಿದವನ ಸಾರೂ 49 ಪ್ಯವನ್ನು ಧರಿಸಿಕೊಂಡಿರುವ ಪ್ರಕಾರ ಪರಲೋಕದಿಂದ ಬಂದಾತನ ಸಾರೂಪ್ಯವನ್ನೂ ಧರಿಸಿಕೊಳ್ಳಬೇಕು.

ಸಹೋದರರೇ, ನಾನು ಹೇಳುವದೇನಂದರೆ—ರಕ್ತಮಾಂಸವು ದೇವರ ರಾಜ್ಯಕ್ಕೆ 50 ಬಾಧ್ಯವಾಗಲಾರದು; ಲಯವಾಗುವ ವಸ್ತು ನಿರ್ಲಯಪದವಿಗೆ ಬಾಧ್ಯವಾಗುವದಿಲ್ಲ. ಕೇಳಿರಿ, ಇದು ವರೆಗೆ ಗುಪ್ತವಾಗಿದ್ದ ಸಂಗತಿಯನ್ನು ನಿಮಗೆ ತಿಳಿಸುತ್ತೇನೆ—ನಾವೆಲ್ಲರೂ 51 ನಿದ್ರೆಹೋಗುವದಿಲ್ಲ; ಆದರೆ ಕಡೇ ತುತೂರಿಯ ಧ್ವನಿಯಾಗುವಾಗ ನಾವೆಲ್ಲರು ಒಂದು 52 ಕ್ಷಣದಲ್ಲೇ ರೆಪ್ಪೆಬಡಿಯುವಷ್ಟರೊಳಗಾಗಿ ಮಾರ್ಪಡುವೆವು. ತುತೂರಿಯು ಊದಲಾಗಿ ಸತ್ತವರು ನಿರ್ಲಯರಾಗಿ ಎಬ್ಬಿಸಲ್ಪಡುವರು, ನಾವು ಮಾರ್ಪಡುವೆವು. ಲಯವಾಗುವ 53 ಈ ದೇಹವು ನಿರ್ಲಯತ್ವವನ್ನು ಧರಿಸಿಕೊಳ್ಳುವದೂ ಮರಣಾಧೀನವಾಗಿರುವ ಈ ದೇಹವು ಅಮರತ್ವವನ್ನು ಧರಿಸಿಕೊಳ್ಳುವದೂ ಅವಶ್ಯ. ಲಯವಾಗುವ ಈ ದೇಹವು 54

[1] ಉತ್ಪತ್ತಿ ೨, ೭.

ನಿರ್ಲಯತ್ವವನ್ನು ಧರಿಸಿಕೊಂಡಾಗ ಮರಣಾಧೀನವಾಗಿರುವ ಈ ದೇಹವು ಅಮರತ್ವ ವನ್ನು ಧರಿಸಿಕೊಂಡಾಗ ಬರೆದಿರುವ ಮಾತು ನೆರವೇರುವದು. ಆ ಮಾತು ಏನಂದರೆ—
55 ಮರಣವು ನುಂಗಿಯೇ ಹೋಯಿತು, ಜಯವಾಯಿತು ಎಂಬುವದೇ[1]. ಮರಣವೇ, ನಿನ್ನ
56 ಜಯವೆಲ್ಲಿ? ಮರಣವೇ, ನಿನ್ನ ವಿಷದ ಕೊಂಡಿ ಎಲ್ಲಿ[2]? ಮರಣದ ಕೊಂಡಿ ಪಾಪವೇ;
57 ಮತ್ತು ಪಾಪದ ಬಲಕ್ಕೆ ಆಧಾರವು ಧರ್ಮಶಾಸ್ತ್ರವೇ. ಆದರೆ ದೇವರು ನಮ್ಮ ಕರ್ತ ನಾದ ಯೇಸು ಕ್ರಿಸ್ತನ ಮೂಲಕ ನಮಗೆ ಜಯವನ್ನು ಕೊಟ್ಟಿದ್ದಾನೆ; ಆತನಿಗೆ ಸ್ತೋತ್ರ.
58 ಆದದರಿಂದ, ನನ್ನ ಪ್ರಿಯ ಸಹೋದರರೇ, ಸ್ಥಿರಚಿತ್ತರಾಗಿಯೂ ನಿಶ್ಚಲರಾಗಿಯೂ ಇರ್ರಿ. ನೀವು ಕರ್ತನ ಸೇವೆಯಲ್ಲಿ ಪಡುವ ಪ್ರಯಾಸವು ನಿಷ್ಫಲವಾಗುವದಿಲ್ಲವೆಂದು ತಿಳಿದು ಕರ್ತನ ಕೆಲಸವನ್ನು ಯಾವಾಗಲೂ ಅತ್ಯಾಸಕ್ತಿಯಿಂದ ಮಾಡುವವರಾಗಿರ್ರಿ.

### ಯೆರೂಸಲೇಮಿನಲ್ಲಿದ್ದ ಬಡಕ್ರೈಸ್ತರಿಗೋಸ್ಕರ ಧರ್ಮದ ಹಣ ಕೂಡಿಸುವದನ್ನು ಕುರಿತದ್ದು.

**16** ದೇವಜನರಿಗೋಸ್ಕರ ಹಣ ವಸೂಲುಮಾಡುವದನ್ನು ಕುರಿತು ನಾನು ಹೇಳುವದೇ ನಂದರೆ, ಗಲಾತ್ಯದ ಸಭೆಗಳಿಗೆ ನಾನು ಹೇಳಿಕೊಟ್ಟ ಕ್ರಮದಂತೆ ನೀವೂ ಮಾಡಿರಿ.
2 ನಾನು ಬಂದಾಗ ಹಣ ವಸೂಲುಮಾಡಬೇಕಾದ ಅವಶ್ಯವಾಗದಂತೆ, ನಿಮ್ಮಲ್ಲಿ ಪ್ರತಿಯೊ ಬ್ಬನು ತನಗೆ ಬಂದ ಸಂಪಾದನೆಯ ಮೇರೆಗೆ ವಾರವಾರದ ಮೊದಲನೇ ದಿನದಲ್ಲಿ ಗಂಟು
3 ಮಾಡಿ ತನ್ನ ಮನೆಯಲ್ಲಿಟ್ಟುಕೊಂಡಿರಬೇಕು. ನಾನು ಬಂದ ಮೇಲೆ, ನೀವು ಯಾರನ್ನು ಯೋಗ್ಯರೆಂದು ಸೂಚಿಸುವಿರೋ ಅವರನ್ನು ಯೆರೂಸಲೇಮಿಗೆ ನಿಮ್ಮ ಉಪಕಾರದ್ರವ್ಯ
4 ವನ್ನು ತೆಗೆದುಕೊಂಡು ಹೋಗುವದಕ್ಕೆ ಪತ್ರಗಳನ್ನು ಕೊಟ್ಟು ಕಳುಹಿಸುವೆನು[3]. ನಾನು ಸಹ ಹೋಗುವದು ಯುಕ್ತವಾಗಿ ತೋರಿದರೆ, ಅವರು ನನ್ನ ಜೊತೆಯಲ್ಲಿ ಬರಬಹುದು.
5 ನಾನು ಹಾದುಹೋಗಬೇಕೆಂದಿರುವ ಮಕೆದೋನ್ಯ ಸೀಮೆಯನ್ನು ದಾಟಿದ ಮೇಲೆ,
6 ನಿಮ್ಮ ಬಳಿಗೆ ಬಂದು ನಿಮ್ಮ ಬಳಿಯಲ್ಲೇ ಇಳುಕೊಳ್ಳುವೆನು. ನಿಮ್ಮಲ್ಲಿ ಹಿಮಕಾಲವನ್ನಾ ದರೂ ಕಳೆದೇನು; ಮತ್ತು ನಾನು ಹೋಗಬೇಕಾದ ಸ್ಥಳಕ್ಕೆ ನೀವು ನನ್ನನ್ನು ಸಾಗ
7 ಕಳುಹಿಸಬೇಕು. ಈ ಸಮಯದಲ್ಲಿ ಹೋಗುಹೋಗುತ್ತಾ ನಿಮ್ಮನ್ನು ನೋಡುವದಕ್ಕೆ ನನಗೆ ಇಷ್ಟವಿಲ್ಲ; ಕರ್ತನ ಅಪ್ಪಣೆಯಾದರೆ ನಿಮ್ಮ ಬಳಿಯಲ್ಲಿ ಕೆಲವು ಕಾಲ ಇರುವೆ
8 ನೆಂದು ನಿರೀಕ್ಷಿಸುತ್ತೇನೆ. ಪಂಚಾಶತ್ತಮ ದಿನದ ಹಬ್ಬದ ತನಕ ಎಫೆಸದಲ್ಲಿರುವೆನು;
9 ಯಾಕಂದರೆ ಕಾರ್ಯಕ್ಕೆ ಅನುಕೂಲವಾದ ಮಹಾ ಸಂದರ್ಭವು ನನಗುಂಟು, ಮತ್ತು ವಿರೋಧಿಗಳು ಬಹಳ ಮಂದಿ ಇದ್ದಾರೆ[4].

### ವಂದನೆಗಳೂ ಆಶೀರ್ವಚನವೂ.

10 ತಿಮೊಥೆಯನು ಬಂದರೆ, ಅವನು ನಿಮ್ಮ ಬಳಿಯಲ್ಲಿ ಭಯವಿಲ್ಲದೆ ಇರುವಂತೆ ನೋಡಿ
11 ಕೊಳ್ಳಿರಿ; ನನ್ನ ಹಾಗೆಯೇ ಕರ್ತನ ಕೆಲಸವನ್ನು ನಡಿಸುತ್ತಾನೆ; ಆದದರಿಂದ ಯಾರೂ

---

[1] ಯೆಶಾಯ ೨೫, ೮. [2] ಹೋಶೇಯ ೧೩, ೧೪.
[3] ಅಥವಾ, ನೀವು ಪತ್ರದ ಮೂಲಕ ಯಾರನ್ನು ಯೋಗ್ಯರೆಂದು ಸೂಚಿಸುವಿರೋ, ಅವರನ್ನು ತೆಗೆದುಕೊಂಡು ಹೋಗುವದಕ್ಕೆ ಕಳುಹಿಸುವೆನು. [4] ಅಪೊಸ್ತಲರ ಕೃತ್ಯ ೧೯, ೧—೨೦ ನೋಡು.

ಅವನನ್ನು ಹೀನೈಸಬಾರದು. ಮತ್ತು ಅವನು ನನ್ನ ಬಳಿಗೆ ಬರುವಂತೆ ಅವನನ್ನು ಸಮಾಧಾನದಿಂದ ಸಾಗಕಳುಹಿಸಿರಿ; ಅವನು ಸಹೋದರರೊಂದಿಗೆ ಬರುವದನ್ನು ಎದುರು ನೋಡುತ್ತಾ ಇದ್ದೇವೆ. 12 ಸಹೋದರನಾದ ಅಪೊಲ್ಲೋಸನ ಸಂಗತಿಯೇನಂದರೆ, ಸಹೋದರರೊಂದಿಗೆ ನಿಮ್ಮ ಬಳಿಗೆ ಹೋಗಬೇಕೆಂದು ಅವನನ್ನು ಬಹಳವಾಗಿ ಬೇಡಿಕೊಂಡೆನು. ಈಗ ಬರುವದಕ್ಕೆ ಅವನಿಗೆ ಸ್ವಲ್ಪವೂ ಮನಸ್ಸಿರಲಿಲ್ಲ, ಒಳ್ಳೇ ಸಮಯ ಸಿಕ್ಕಿದಾಗ ಬರುವನು.

13 ಎಚ್ಚರವಾಗಿರಿ, ಕ್ರಿಸ್ತನಂಬಿಕೆಯಲ್ಲಿ ದೃಢವಾಗಿ ನಿಲ್ಲಿರಿ. ಶೂರರಾಗಿರಿ, ಬಲಗೊಳ್ಳಿರಿ. 14 ನೀವು ಮಾಡುವದನ್ನೆಲ್ಲಾ ಪ್ರೀತಿಯಿಂದ ಮಾಡಿರಿ.

15 ಸ್ತೆಫನನ ಮನೆಯವರು ಅಖಾಯದಲ್ಲಿ ಮೊದಲು ಸಿಕ್ಕಿದ ಫಲವೆಂದೂ ಅವರು ದೇವಜನರಿಗೆ ಸೇವೆಮಾಡುವದಕ್ಕಾಗಿ ಕೈಹಾಕಿದರೆಂದೂ ನೀವು ಬಲ್ಲಿರಷ್ಟೆ. 16 ಸಹೋದರರೇ, ನೀವು ಇಂಥವರಿಗೂ ಕೆಲಸದಲ್ಲಿ ಸಹಾಯಮಾಡುತ್ತಾ ಪ್ರಯಾಸಪಡುತ್ತಾ ಇರುವವರೆಲ್ಲರಿಗೂ ಒಳಗಾಗಬೇಕೆಂದು ನಿಮ್ಮನ್ನು ಬೇಡಿಕೊಳ್ಳುತ್ತೇನೆ. 17 ಸ್ತೆಫನನೂ ಫೊರ್ತುನಾತನೂ ಅಖಾಯಿಕನೂ ಬಂದದರಿಂದ ನನಗೆ ಸಂತೋಷವಾಯಿತು. ನೀವು ಇಲ್ಲದ್ದರಿಂದ ನನಗುಂಟಾದ ಕೊರತೆಯನ್ನು ಅವರು ನೀಗಿದರು; 18 ಅವರು ನನ್ನ ಆತ್ಮವನ್ನೂ ನಿಮ್ಮ ಆತ್ಮಗಳನ್ನೂ ಉಪಶಮನಮಾಡಿದರು. ಇಂಥವರನ್ನು ಸನ್ಮಾನಿಸಿರಿ.

19 ಆಸ್ಯಸೀಮೆಯ ಸಭೆಗಳವರು ನಿಮಗೆ ವಂದನೆ ಹೇಳುತ್ತಾರೆ. ಅಕ್ವಿಲನೂ ಪ್ರಿಸ್ಕಳೂ ತಮ್ಮ ಮನೆಯಲ್ಲಿ ಕೂಡುವ ಸಭೆಯವರೊಂದಿಗೆ ಕರ್ತನ ಹೆಸರಿನಲ್ಲಿ ಅನೇಕ ವಂದನೆಗಳನ್ನು ಹೇಳುತ್ತಾರೆ. 20 ಸಹೋದರರೆಲ್ಲರು ನಿಮ್ಮನ್ನು ವಂದಿಸುತ್ತಾರೆ. ಪವಿತ್ರವಾದ ಮುದ್ದಿಟ್ಟು ಒಬ್ಬರನ್ನೊಬ್ಬರಿಗೆ ನನ್ನ ವಂದನೆಗಳನ್ನು ಹೇಳಿರಿ.

21 ಪೌಲನೆಂಬ ನಾನು ಸ್ವಂತ ಕೈಯಿಂದ ವಂದನೆಯನ್ನು ಬರೆದಿದ್ದೇನೆ. 22 ಯಾವನಾದರೂ ಕರ್ತನನ್ನು ಪ್ರೀತಿಸದಿದ್ದರೆ, ಅವನು ಶಾಪಗ್ರಸ್ತನಾಗಲಿ. ಕರ್ತನು ಬರುತ್ತಾನೆ. 23 ಕರ್ತನಾದ ಯೇಸು ಕ್ರಿಸ್ತನ ಕೃಪೆಯು ನಿಮ್ಮೊಂದಿಗಿರಲಿ. 24 ಕ್ರಿಸ್ತ ಯೇಸುವಿನಲ್ಲಿ ನಿಮ್ಮೆಲ್ಲರ ಮೇಲೆ ನನ್ನ ಪ್ರೀತಿ.

# THE SECOND EPISTLE OF SAINT PAUL TO THE CORINTHIANS

# ಪೌಲನು ಕೊರಿಂಥದವರಿಗೆ

ಬರೆದ

# ಎರಡನೇ ಪತ್ರಿಕೆ

ಒಕ್ಕಣೆ.

1 ದೇವರ ಚಿತ್ತಾನುಸಾರ ಕ್ರಿಸ್ತ ಯೇಸುವಿನ ಅಪೊಸ್ತಲನಾದ ಪೌಲನೂ ಸಹೋದರ ನಾದ ತಿಮೊಥೆಯನೂ ಕೊರಿಂಥದಲ್ಲಿರುವ ದೇವರ ಸಭೆಯವರಿಗೂ ಅಖಾಯ ಸೀಮೆಯ 2 ಲ್ಲೆಲ್ಲಾ ಇರುವ ದೇವಜನರೆಲ್ಲರಿಗೂ ಬರೆಯುವದೇನಂದರೆ—ನಮ್ಮ ತಂದೆಯಾದ ದೇವ ರಿಂದಲೂ ಕರ್ತನಾದ ಯೇಸು ಕ್ರಿಸ್ತನಿಂದಲೂ ನಿಮಗೆ ಕೃಪೆಯೂ ಶಾಂತಿಯೂ ಆಗಲಿ.

ಪೌಲನು ತನಗೆ ಉಂಟಾದ ಆದರಣೆಯಿಂದ ಅನೇಕರಿಗೆ ಉಪಯೋಗ ಉಂಟಾಗುವದೆಂದು ಹೇಳಿದ್ದು.

3 ನಮ್ಮ ಕರ್ತನಾದ ಯೇಸು ಕ್ರಿಸ್ತನ ತಂದೆಯಾಗಿರುವ ದೇವರಿಗೆ ಸ್ತೋತ್ರವಾಗಲಿ; ಆತನು ಕನಿಕರವುಳ್ಳ ತಂದೆಯೂ ಸಕಲವಿಧವಾಗಿ ಸಂತೈಸುವ ದೇವರೂ ಆಗಿದ್ದು ನಮಗೆ 4 ಸಂಭವಿಸುವ ಎಲ್ಲಾ ಸಂಕಟಗಳಲ್ಲಿ ನಮ್ಮನ್ನು ಸಂತೈಸುತ್ತಾನೆ; ಹೀಗೆ ದೇವರಿಂದ ನಮ ಗಾಗುವ ಆದರಣೆಯ ಮೂಲಕ ನಾವು ನಾನಾ ವಿಧವಾದ ಸಂಕಟಗಳಲ್ಲಿ ಬಿದ್ದಿರುವವ 5 ರನ್ನು ಸಂತೈಸುವದಕ್ಕೆ ಶಕ್ತರಾಗುತ್ತೇವೆ. ಯಾಕಂದರೆ ಕ್ರಿಸ್ತನ ನಿಮಿತ್ತ ನಮಗೆ ಬಾಧೆ ಗಳು ಹ್ಯಾಗೆ ಹೇರಳವಾಗಿ ಉಂಟಾಗುತ್ತವೆಯೋ ಹಾಗೆಯೇ ಆದರಣೆಯು ಕೂಡ 6 ಕ್ರಿಸ್ತನ ಮೂಲಕ ಹೇರಳವಾಗಿ ಉಂಟಾಗುತ್ತದೆ. ನಮಗೆ ಸಂಕಟ ಬರುತ್ತದೋ, ಅದರಿಂದ ನಿಮಗೆ ಧೈರ್ಯವೂ ರಕ್ಷಣೆಯೂ ಉಂಟಾಗುತ್ತದೆ; ನಮಗೆ ಸಂಕಟ ಪರಿಹಾ ರವಾಗುತ್ತದೋ, ಅದರಿಂದ ನಿಮಗೆ ಆದರಣೆ ಆಗುತ್ತದೆ. ನಾವು ಅನುಭವಿಸುವಂಥ ಬಾಧೆಗಳನ್ನು ನೀವೂ ತಾಳ್ಮೆಯಿಂದ ಸಹಿಸಿಕೊಳ್ಳುವಂತೆ ಅದು ನಿಮ್ಮನ್ನು ಧೈರ್ಯಗೊಳಿ 7 ಸುತ್ತದೆ. ನೀವು ಬಾಧೆಗಳಲ್ಲಿ ನಮ್ಮೊಂದಿಗೆ ಪಾಲುಗಾರರಾಗಿರುವ ಪ್ರಕಾರ ಆದರಣೆ

ಯಲ್ಲಿಯೂ ಪಾಲುಗಾರರಾಗಿದ್ಧೀರೆಂದು ನಮಗೆ ತಿಳಿದಿರುವದರಿಂದ, ನಿಮ್ಮ ವಿಷಯದಲ್ಲಿ
ನಮಗಿರುವ ನಿರೀಕ್ಷೆಯು ದೃಢವಾಗಿದೆ.

ಸಹೋದರರೇ, ಆಸ್ಯ ಸೀಮೆಯಲ್ಲಿ ನಮಗೆ ಸಂಭವಿಸಿದ ಸಂಕಟವನ್ನು ಕುರಿತು[1] 8
ವಿಚಾರಿಸುತ್ತೀರೋ, ಅದರಲ್ಲಿ ನಾವು ಬಲವನ್ನು ಮೀರಿದಂಥಾ ಅತ್ಯಧಿಕವಾದ ಭಾರ
ದಿಂದ ಕುಗ್ಗಿಹೋಗಿ, ಜೀವವುಳಿಯುವ ಮಾರ್ಗವನ್ನು ಕಾಣದವರಾದೆವೆಂಬುವದನ್ನು
ನೀವು ತಿಳಿಯಬೇಕೆಂದು ಅಪೇಕ್ಷಿಸುತ್ತೇನೆ. ಮರಣವಾಗುತ್ತದೆಂಬ ನಿಶ್ಚಯವು ನಮ್ಮೊ 9
ಳಗೆ ಉಂಟಾಯಿತು; ನಾವು ನಮ್ಮ ಮೇಲೆ ಭರವಸವಿಟ್ಟುಕೊಳ್ಳದೆ, ಸತ್ತವರನ್ನು ಎಬ್ಬಿ
ಸುವ ದೇವರ ಮೇಲೆಯೇ ಭರವಸವಿಡುವವರಾಗಬೇಕೆಂದು ಹೀಗಾಯಿತು. ಆತನು 10-11
ನಮ್ಮನ್ನು ಎಂಥಾ ಭಯಂಕರ ಮರಣದಿಂದ ತಪ್ಪಿಸಿದನು, ಮುಂದೆಯೂ ತಪ್ಪಿಸುವನು.
ನೀವು ನಮಗೋಸ್ಕರ ಪ್ರಾರ್ಥನೆಮಾಡುವವರಾಗಿ ಸಹಕಾರಿಗಳಾಗಿರುವದರಿಂದ ಆತನು
ಇನ್ನು ಮೇಲೆಯೂ ತಪ್ಪಿಸುವನೆಂದು ಆತನಲ್ಲಿ ನಿರೀಕ್ಷೆಯಿಟ್ಟವರಾಗಿದ್ದೇವೆ. ಹೀಗೆ ಅನೇ
ಕರ ವಿಜ್ಞಾಪನೆಗಳಿಂದ ನಮಗೆ ದೊರಕುವ ಉಪಕಾರಕ್ಕಾಗಿ ನಮ್ಮ ನಿಮಿತ್ತ ಅನೇಕ
ರಿಂದ ದೇವರಿಗೆ ಕೃತಜ್ಞತಾಸ್ತುತಿ ಉಂಟಾಗುವದು.

ನಾವು ಕೇವಲ ಮಾನುಷಜ್ಞಾನವನ್ನು ಬಳಸದೆ ದೇವರ ಕೃಪೆಯನ್ನು ಆಶ್ರಯಿಸಿ, 12
ಆತನಿಂದಾಗುವ ಪವಿತ್ರತ್ವವೂ ನಿಷ್ಕಪಟತ್ವವೂ ಉಳ್ಳವರಾಗಿ ಈ ಲೋಕದಲ್ಲಿ ಮುಖ್ಯ
ವಾಗಿ ನಿಮ್ಮ ವಿಷಯದಲ್ಲಿ ನಡಕೊಂಡೆವೆಂದು ನಮ್ಮ ಮನಸ್ಸು ನಮಗೆ ಸಾಕ್ಷಿ ಹೇಳು
ತ್ತದೆ; ಇದೇ ನಮಗಿರುವ ಉಲ್ಲಾಸ. ನೀವು ನಮ್ಮ ಪತ್ರಿಕೆಗಳಲ್ಲಿ ಓದಿ ಒಪ್ಪಿಕೊಂಡ 13
ಸಂಗತಿಗಳನ್ನೇ ಅಲ್ಲದೆ ಬೇರೆ ಯಾವದನ್ನೂ ನಾವು ನಿಮಗೆ ಬರೆಯಲಿಲ್ಲ. ನಾವು 14
ನಿಮಗೆ ಉಲ್ಲಾಸಕಾರಣವಾಗಿದ್ದೇವೆಂಬುವದನ್ನು ನೀವು ಸ್ವಲ್ಪಮಟ್ಟಿಗೆ ಒಪ್ಪಿಕೊಂಡಂತೆ
ಯೇ ಕಡೇ ತನಕ ಒಪ್ಪಿಕೊಳ್ಳುವಿರೆಂದು ನಿರೀಕ್ಷಿಸುತ್ತೇನೆ. ಹಾಗೆಯೇ ನೀವೂ ನಮ್ಮ
ಕರ್ತನಾದ ಯೇಸುವಿನ ಪ್ರತ್ಯಕ್ಷತೆಯಲ್ಲಿ ನಮಗೆ ಉಲ್ಲಾಸಕಾರಣವಾಗುವಿರಿ ಎಂದು
ನಿರೀಕ್ಷಿಸುತ್ತೇನೆ.

ಪೌಲನು ತಾನು ಕೊರಿಂಥ ಪಟ್ಟಣಕ್ಕೆ ಬಾರದಿದ್ದದ್ದಕ್ಕೆ ಕಾರಣವನ್ನು ತಿಳಿಸಿ ಅಲ್ಲಿನ ಸಭೆಯವರು ಬಹಿಷ್ಕಾರ
ಹೊಂದಿದವನನ್ನು ತಿರಿಗಿ ಸೇರಿಸಿಕೊಳ್ಳಬೇಕೆಂದು ಬುದ್ಧಿ ಹೇಳಿದ್ದು.

ನಾನು ಇಂಥಾ ಭರವಸವುಳ್ಳವನಾಗಿದ್ದು, ನಿಮಗೆ ಎರಡು ಸಾರಿ ನಮ್ಮ ಮೂಲಕ 15
ಕೃಪಾವರ ಉಂಟಾಗಬೇಕೆಂದು ಯೋಚಿಸಿದ್ದೆನು. ಮೊದಲು ನಿಮ್ಮ ಬಳಿಗೆ ಬಂದು ನಿಮ್ಮ 16
ಮಾರ್ಗವಾಗಿ ಮಕೆದೋನ್ಯಕ್ಕೆ ಹೋಗಿ, ಆ ಮೇಲೆ ಮಕೆದೋನ್ಯವನ್ನು ಬಿಟ್ಟು ತಿರಿಗಿ
ನಿಮ್ಮ ಬಳಿಗೆ ಬಂದು ನಿಮ್ಮಿಂದ ಯೂದಾಯಕ್ಕೆ ಸಾಗಕಳುಹಿಸಲ್ಪಡಬೇಕೆಂದು ಯೋಚಿ
ಸಿದ್ದೆನು. ಇದನ್ನು ಯೋಚಿಸಿದಾಗ ಚಪಲಚಿತ್ತನಾಗಿದ್ದೆನೋ? ನಾನು ಯೋಚಿಸುವ 17
ದನ್ನು ಕೇವಲ ಮಾನುಷಬುದ್ಧಿಯಿಂದ ಯೋಚಿಸಿ, ಹೌದು ಹೌದು ಅಂದ ಮೇಲೆ ಅಲ್ಲ
ಅಲ್ಲ ಅನ್ನುವವನಾಗಿದ್ದೇನೋ? ನಂಬಿಗಸ್ತನಾಗಿರುವ ದೇವರಾಣೆ, ನಾವು ನಿಮಗೆ 18

[1] ಅಪೊಸ್ತಲರ ಕೃತ್ಯ ೧೯, ೨೩—೨೦, ೧ ನೋಡು.

ಹೇಳುವ ಮಾತು ಒಂದು ಸಾರಿ ಹೌದೆಂದು ಒಂದು ಸಾರಿ ಅಲ್ಲವೆಂದು ಇರುವದಿಲ್ಲ.
19 ನಾವು ಅಂದರೆ ನಾನೂ ಸಿಲ್ವಾನನೂ ತಿಮೊಥೆಯನೂ ನಿಮ್ಮಲ್ಲಿ ಪ್ರಸಿದ್ಧಿಪಡಿಸಿದ ದೇವರ ಮಗನಾದ ಯೇಸು ಕ್ರಿಸ್ತನು ಹೌದೆಂತಲೂ ಅಲ್ಲವೆಂತಲೂ ಎರಡು ಪ್ರಕಾರವಾಗಿರಲಿಲ್ಲ;
20 ಆತನಲ್ಲಿ ಹೌದೆಂಬುವದೇ ನೆಲೆಗೊಂಡಿದೆ. ನಿಶ್ಚಯವಾಗಿ ದೇವರ ವಾಗ್ದಾನಗಳು ಎಷ್ಟಿದ್ದರೂ ಕ್ರಿಸ್ತನಲ್ಲೇ ದೃಢವಾಗುತ್ತವೆ. ಆದಕಾರಣ ದೇವರ ಪ್ರಭಾವವು ಪ್ರಕಾಶವಾಗು
21 ವದಕ್ಕೋಸ್ಕರ ಆತನ ಮೂಲಕವಾಗಿ ನಾವು ಆಮೆನ್ ಎಂದು ಹೇಳುತ್ತೇವೆ[1]. ನಮ್ಮನ್ನು ಅಭಿಷೇಕಿಸಿ ಕ್ರಿಸ್ತನ[2] ಅನ್ಯೋನ್ಯತೆಯಲ್ಲಿ ಸೇರಿಸಿ ನಮ್ಮನ್ನು ನಿಮ್ಮೊಂದಿಗೆ ಸ್ಥಿರಪಡಿಸುವ
22 ವನು ದೇವರೇ; ಆತನು ನಮ್ಮ ಮೇಲೆ ಮುದ್ರೆಹಾಕಿ ನಮ್ಮ ಹೃದಯಗಳಲ್ಲಿ ಪವಿತ್ರಾತ್ಮನನ್ನು ಸಂಚಕಾರವಾಗಿ ಕೊಟ್ಟನು.

23 ನಿಮ್ಮ ಮೇಲೆ ಕನಿಕರವಿದ್ದದರಿಂದಲೇ ನಾನು ಕೊರಿಂಥಕ್ಕೆ ಬರಬೇಕೆಂಬ ಅಭಿಪ್ರಾಯವನ್ನು ಬಿಟ್ಟುಬಿಟ್ಟೆನೆಂದು ನನ್ನ ಜೀವದಾಣೆ ಹೇಳುತ್ತೇನೆ; ಅದಕ್ಕೆ ದೇವರೇ ಸಾಕ್ಷಿಯಾ
24 ಗಿರಲಿ. ನಾವು ನಂಬಿಕೆಯ ವಿಷಯದಲ್ಲಿಯೂ ನಿಮ್ಮ ಮೇಲೆ ದೊರೆತನ ಮಾಡುವವರೆಂದು ನನ್ನ ತಾತ್ಪರ್ಯವಲ್ಲ; ನಿಮ್ಮ ಸಂತೋಷಕ್ಕೆ ನಾವು ಸಹಾಯಕರಾಗಿದ್ದೇವೆ;
**2** ನಂಬಿಕೆಯ ವಿಷಯದಲ್ಲಿ ದೃಢ ನಿಂತಿದ್ದೀರಿ. ಆದರೆ ನಾನು ತಿರಿಗಿ ನಿಮ್ಮ ಬಳಿಗೆ ದುಃಖ
2 ದಿಂದ[3] ಬರುವದಿಲ್ಲವೆಂದು ನನ್ನಲ್ಲಿ ತೀರ್ಮಾನಿಸಿಕೊಂಡೆನು. ನಾನು ನಿಮ್ಮನ್ನು ದುಃಖಪಡಿಸಿದರೆ, ನನ್ನನ್ನು ಆನಂದಪಡಿಸುವದಕ್ಕೆ ಯಾರಿದ್ದಾರೆ? ನನ್ನಿಂದ ದುಃಖ ಹೊಂದಿದ
3 ವರೇ ಹೊರತು ಬೇರೆ ಯಾರೂ ಇಲ್ಲವಲ್ಲಾ. ಆದಕಾರಣ ನಾನು ಬಂದಾಗ ನನ್ನನ್ನು ಸಂತೋಷಪಡಿಸತಕ್ಕವರಿಂದ ದುಃಖ ಹೊಂದಬಾರದೆಂದು ಯೋಚಿಸಿ ಆ ಸಂಗತಿಯನ್ನು ಪತ್ರಿಕೆಯ[4] ಮೂಲಕವೇ ತಿಳಿಸಿದೆನು. ನನ್ನ ಸಂತೋಷವು ನಿಮ್ಮೆಲ್ಲರ ಸಂತೋಷವೇ
4 ಎಂದು ತಿಳಿದು ನಿಮ್ಮೆಲ್ಲರ ವಿಷಯದಲ್ಲೂ ನನಗೆ ಭರವಸವಿತ್ತು. ನಿಮಗೆ ದುಃಖವಾಗಬೇಕಂತಲ್ಲ, ನಿಮ್ಮ ಮೇಲೆ ನನಗಿರುವ ಅಧಿಕವಾದ ಪ್ರೀತಿಯನ್ನು ನೀವು ತಿಳುಕೊಳ್ಳಬೇಕೆಂತಲೇ ನಾನು ಬಹಳ ಕಣ್ಣೀರು ಬಿಡುತ್ತಾ ಹೃದಯದ ಬಹು ಸಂಕಟದಿಂದಲೂ ವ್ಯಾಕುಲದಿಂದಲೂ ನಿಮಗೆ ಬರೆದೆನು.

5 ದುಃಖವನ್ನು ಉಂಟುಮಾಡಿರುವವನೊಬ್ಬನು ನಿಮ್ಮಲ್ಲಿ ಇದ್ದಾಗ್ಯೂ ಅವನು ನನ್ನನ್ನು ಮಾತ್ರ ದುಃಖಪಡಿಸದೆ ನಿಮ್ಮಲ್ಲಿ ಬಹುಜನರನ್ನೂ ದುಃಖಪಡಿಸಿದ್ದಾನೆ; ಆ ದುಃಖವು
6 ಎಲ್ಲರಲ್ಲಿಯೂ ಉಂಟಾಯಿತೆಂದು ನಾನು ಹೇಳುವದಿಲ್ಲ. ಇಂಥವನಿಗೆ ನಿಮ್ಮಲ್ಲಿ ಹೆಚ್ಚಾದ
7 ಜನರಿಂದುಂಟಾದ ಆ ಶಿಕ್ಷೆಯೇ ಸಾಕು. ಇನ್ನೂ ಅವನನ್ನು ಶಿಕ್ಷಿಸದೆ ಮನ್ನಿಸಿರಿ, ಸಂತೈ
8 ಸಿರಿ; ಇಲ್ಲವಾದರೆ ಅವನು ಅಧಿಕವಾದ ದುಃಖದಲ್ಲಿ ಮುಳುಗಿಹೋದಾನು. ಆದದರಿಂದ ಅವನಿಗೆ ನಿಮ್ಮ ಪ್ರೀತಿಯನ್ನು ನಿಶ್ಚಯಪಡಿಸಬೇಕೆಂದು ನಿಮ್ಮನ್ನು ಬೇಡಿಕೊಳ್ಳುತ್ತೇನೆ.
9 ಸರ್ವ ವಿಷಯದಲ್ಲೂ ನೀವು ವಿಧೇಯರಾಗಿದ್ದೀರೋ ಏನೋ ನಿಮ್ಮ ಗುಣವನ್ನು ಪರೀ
10 ಕ್ಷಿಸಿ ತಿಳುಕೊಳ್ಳಬೇಕೆಂಬುವ ಉದ್ದೇಶದಿಂದಲೇ ಮೊದಲು ಬರೆದೆನು. ನೀವು ಯಾರಿಗೆ ಯಾವದನ್ನು ಮನ್ನಿಸುತ್ತೀರೋ ನಾನು ಸಹ ಮನ್ನಿಸುತ್ತೇನೆ. ನಾನು ಯಾವದನ್ನಾ

1) ಯೆಶಾಯ ೬೫, ೧೬; ಪ್ರಕಟಣೆ ೩, ೧೪.
2) ಅಥವಾ, ಅಭಿಷಿಕ್ತನ; ೧ ಯೋಹಾನ ೨, ೨೦. ೨೭.
3) ಅಥವಾ, ದುಃಖಪಡಿಸುವವನಾಗಿ.
4) ೧ನೇ ಪತ್ರಿಕೆ ೫ನೇ ಅಧ್ಯಾಯವನ್ನು ನೋಡು.

ದರೂ ಮನ್ನಿಸಿದ್ದರೆ, ಕ್ರಿಸ್ತನ ಸನ್ನಿಧಾನದಲ್ಲಿ ನಿಮ್ಮ ನಿಮಿತ್ತವೇ ಮನ್ನಿಸಿದೆನು. 11 ಸೈತಾನನು ನಮ್ಮನ್ನು ವಂಚಿಸಿ ನಷ್ಟಪಡಿಸಬಾರದು; ಅವನ ಯೋಚನೆಗಳನ್ನು ನಾವು ಅರಿಯದವರಲ್ಲವಲ್ಲಾ.

ಸುವಾರ್ತಾಸೇವೆಯ ಶ್ರೇಷ್ಠತೆಯನ್ನು ಕುರಿತದ್ದು.

12 ಕ್ರಿಸ್ತನ ಸುವಾರ್ತೆಯನ್ನು ಸಾರುವದಕ್ಕಾಗಿ ನಾನು ತ್ರೋವಕ್ಕೆ ಬರಲು, ಕರ್ತನ ಕೃಪೆಯಿಂದ ನನಗೆ ಒಳ್ಳೇ ಸಂದರ್ಭ ಉಂಟಾಯಿತು. 13 ಆದಾಗ್ಯೂ ನನ್ನ ಸಹೋದರನಾದ ತೀತನು ನನಗೆ ಸಿಕ್ಕಲಿಲ್ಲವಾದ ಕಾರಣ ನನ್ನ ಆತ್ಮಕ್ಕೆ ಉಪಶಮನವಿಲ್ಲದೆ, ಅಲ್ಲಿದ್ದವರಿಂದ ಕಳುಹಿಸಿಕೊಂಡವನಾಗಿ ಹೊರಟು ಮಕೆದೋನ್ಯಕ್ಕೆ ಬಂದೆನು.

14 ಕ್ರಿಸ್ತನ ಅನ್ಯೋನ್ಯತೆಯಲ್ಲಿ ನಮ್ಮನ್ನು ಯಾವಾಗಲೂ ಜಯೋತ್ಸವದೊಡನೆ ಮೆರಸುತ್ತಾ, ಆತನ ವಿಷಯವಾದ ಜ್ಞಾನವೆಂಬ ಸುವಾಸನೆಯನ್ನು ನಮ್ಮ ಮೂಲಕ ಎಲ್ಲಾ ಸ್ಥಳಗಳಲ್ಲಿ ವ್ಯಾಪನಗೊಳಿಸುತ್ತಾ ಬರುವ ದೇವರಿಗೆ ಸ್ತೋತ್ರವು. 15 ರಕ್ಷಣಾಮಾರ್ಗದಲ್ಲಿರುವವರಲ್ಲಿಯೂ ನಾಶನಮಾರ್ಗದಲ್ಲಿರುವವರಲ್ಲಿಯೂ ನಾವು ದೇವರ ಮುಂದೆ ಕ್ರಿಸ್ತನ ಪರಿಮಳವಾಗಿದ್ದೇವೆ. 16 ನಾಶನಮಾರ್ಗದಲ್ಲಿರುವವರಿಗೆ ನಾವು ಮರಣಸೂಚಕವಾದ[1] ವಾಸನೆಯಾಗಿಯೂ ರಕ್ಷಣಾಮಾರ್ಗದಲ್ಲಿರುವವರಿಗೆ ಜೀವಸೂಚಕವಾದ[2] ವಾಸನೆಯಾಗಿಯೂ ಇದ್ದೇವೆ. ಇಂಥಾ ಕಾರ್ಯಗಳಿಗೆ ಯಾರು ಯೋಗ್ಯರು? 17 ಆದರೆ ನಾವು ದೇವರ ವಾಕ್ಯವನ್ನು ಕಲಬೆರಿಕೆ ಮಾಡುವವರಾದ ಹೆಚ್ಚು ಪಾಲಿನ ಜನರ ಹಾಗಿರದೆ ನಿಷ್ಕಪಟಿಗಳಾಗಿ ದೇವರಿಂದ ಉಪದೇಶ ಹೊಂದಿದವರಿಗೆ ತಕ್ಕ ಹಾಗೆ ಕ್ರಿಸ್ತನ ಅನ್ಯೋನ್ಯತೆಯಲ್ಲಿದ್ದುಕೊಂಡು ದೇವರ ಸಮಕ್ಷಮದಲ್ಲಿಯೇ ಮಾತಾಡುತ್ತೇವೆ.

**3** ನಾವೇ ನಮ್ಮನ್ನು ತಿರಿಗಿ ಹೊಗಳಿಕೊಳ್ಳುವದಕ್ಕೆ ಪ್ರಾರಂಭಿಸುತ್ತೇವೋ? ಇಲ್ಲವೆ, ಕೆಲವರಿಗೆ ಬೇಕಾಗಿರುವ ಪ್ರಕಾರ ನಿಮಗೆ ತೋರಿಸತಕ್ಕ ಯೋಗ್ಯತಾಪತ್ರಗಳು ನಮಗೆ ಅಗತ್ಯವೋ? ಅಥವಾ ಅಂಥಾ ಪತ್ರಗಳನ್ನು ನಿಮ್ಮಿಂದ ಪಡಕೊಳ್ಳಬೇಕೋ? 2 ನೀವೇ ನಮ್ಮ ಯೋಗ್ಯತಾಪತ್ರ; ಅದು ನಮ್ಮ ಹೃದಯಗಳಲ್ಲೇ ಬರೆದದೆ; ಆ ಪತ್ರವನ್ನು ಎಲ್ಲರೂ ಬಲ್ಲರು, ಎಲ್ಲರೂ ಓದುತ್ತಾರೆ. 3 ಕ್ರಿಸ್ತನು ನಮ್ಮ ಕೈಯಿಂದ ಬರಸಿಕೊಟ್ಟ ಪತ್ರವಾಗಿದ್ದೀರೆಂಬುವದು ಪ್ರತ್ಯಕ್ಷವಾಗಿಯೇ ಇದೆ; ಅದು ಮಸಿಯಿಂದ ಬರೆದದ್ದಲ್ಲ, ಜೀವವುಳ್ಳ ದೇವರ ಆತ್ಮದಿಂದಲೇ ಬರೆದದ್ದು; ಕಲ್ಲಿನ ಮೇಲೆಯಲ್ಲ, ಮನುಷ್ಯಹೃದಯಗಳೆಂಬ ಹಲಿಗೆಗಳ ಮೇಲೆ ಬರೆದದ್ದು. 4 ಇಂಥಾ ಭರವಸವು ಕ್ರಿಸ್ತನ ಮೂಲಕವೇ ದೇವರ ಮುಂದೆ ನಮಗುಂಟು. 5 ನಮ್ಮಿಂದಲೇ ಏನಾದರೂ ಉಂಟಾಯಿತೆಂದು ತೀರ್ಮಾನಿಸಿಕೊಳ್ಳುವದಕ್ಕೆ ನಮ್ಮಷ್ಟಕ್ಕೆ ನಾವೇ ಸಮರ್ಥರೆಂತಲ್ಲ; ನಮಗಿರುವ ಸಾಮರ್ಥ್ಯವು ದೇವರಿಂದಲೇ ಬಂದದ್ದು; 6 ಆತನು ಹೊಸ ಒಡಂಬಡಿಕೆಗೆ ಸೇವಕರಾಗಿರುವ ಸಾಮರ್ಥ್ಯವನ್ನು ನಮಗೆ ಅನುಗ್ರಹಿಸಿದ್ದಾನೆ. ಈ ಒಡಂಬಡಿಕೆಯು ಲಿಖಿತರೂಪವಾದ ನಿಯಮಗಳುಳ್ಳದ್ದಾಗಿರದೆ ದೇವರಾತ್ಮ

[1] ಮೂಲ: ಮರಣದಿಂದ ಹುಟ್ಟಿ ಮರಣದಲ್ಲಿ ಸೇರಿಸುವ.
[2] ಮೂಲ: ಜೀವದಿಂದ ಹುಟ್ಟಿ ಜೀವದಲ್ಲಿ ಸೇರಿಸುವ.

ಸಂಬಂಧವಾದದ್ದು[1] ಆಗಿದೆ. ಲಿಖಿತರೂಪವಾದ ಆ ನಿಯಮವು ಮರಣವನ್ನು ವಿಧಿಸುತ್ತದೆ; ದೇವರಾತ್ಮಸಂಬಂಧವಾದದ್ದು[1] ಸತ್ತವರನ್ನು ಬದುಕಿಸುತ್ತದೆ.

7 ಮರಣ ವಿಧಿಸುವ ನಿಯಮದ ಸೇವೆಯು ಕಲ್ಲಿನ ಮೇಲೆ ಲಿಖಿತವಾದ ಅಕ್ಷರಗಳಲ್ಲಿ ಆಧಾರಗೊಂಡಿದ್ದಾಗ್ಯೂ ಪ್ರಭಾವದಿಂದ ಕೂಡಿದ್ದಾಗಿತ್ತು. ಆ ಪ್ರಭಾವದಿಂದ ಮೋಶೆಯ ಮುಖಕ್ಕೆ ಬಂದ ಪ್ರಕಾಶವು ಕುಂದಿಹೋಗುವಂಥಾದ್ದಾಗಿದ್ದರೂ ಅದರ ನಿಮಿತ್ತ ಇಸ್ರ 8 ಯೇಲ್ಯರು ಅವನ ಮುಖವನ್ನು ನೋಡಲಾರದೆ ಇದ್ದರು[2]. ಹೀಗಿದ್ದ ಮೇಲೆ ದೇವ 9 ರಾತ್ಮಸಂಬಂಧವಾದ[3] ಸೇವೆಯು ಎಷ್ಟೋ ಹೆಚ್ಚಾಗಿ ಪ್ರಭಾವವುಳ್ಳದ್ದಾಗಿರಬೇಕು. ಅಪರಾಧನಿರ್ಣಯಕ್ಕೆ ಸಾಧನವಾಗಿರುವ ಸೇವೆಯು ಪ್ರಭಾವದಿಂದಿರಲಾಗಿ ನೀತಿಗೆ ಸಾಧನವಾ 10 ಗಿರುವ ಸೇವೆಯು ಎಷ್ಟೋ ಅಧಿಕವಾದ ಪ್ರಭಾವವುಳ್ಳದ್ದಾಗಿರಬೇಕು. ಅಧಿಕವಾದ ಪ್ರಭಾವವುಳ್ಳದ್ದು ಬಂದದರಿಂದ ಮೊದಲಿದ್ದ ಪ್ರಭಾವವು ಅದರ ಬಳಿಯಲ್ಲಿ ಪ್ರಭಾವವಿಲ್ಲ 11 ದ್ದಾಯಿತು. ಇಲ್ಲದೆಹೋಗುವಂಥಾದ್ದು ಪ್ರಭಾವವುಳ್ಳದ್ದಾಗಿದ್ದರೆ, ಶಾಶ್ವತವಾಗಿ ಇರುವಂಥಾದ್ದು ಬಹು ಹೆಚ್ಚಾಗಿ ಪ್ರಭಾವವುಳ್ಳದ್ದಾಗಿರಬೇಕಲ್ಲವೇ?

12 ಆದದರಿಂದ, ನಾವು ಇಂಥಾ ಭರವಸವುಳ್ಳವರಾಗಿದ್ದು ಧಾರಾಳವಾಗಿ ಮಾತಾಡು 13 ತ್ತೇವೆ. ನಾವು ಮೋಶೆಯಂತೆ ಮಾಡುವದಿಲ್ಲ, ಗತಿಸಿಹೋಗುವಂಥಾದ್ದರ ಅಂತ್ಯವನ್ನು ಇಸ್ರಯೇಲ್ಯರು ಕಣ್ಣಿಟ್ಟು ನೋಡಬಾರದೆಂದು ಅವನು ತನ್ನ ಮುಖದ ಮೇಲೆ ಮುಸುಕು 14 ಹಾಕಿಕೊಳ್ಳುತ್ತಿದ್ದನು. ಆದರೆ ಅವರ ಬುದ್ಧಿ ಮಂದವಾಯಿತು; ಈ ದಿನದ ವರೆಗೂ ಹಳೇ ಒಡಂಬಡಿಕೆಯು ಪಾರಾಯಣವಾಗುವಾಗ ಅದು ಕ್ರಿಸ್ತನಲ್ಲಿ ಗತಿಸಿಹೋಗುತ್ತದೆಂಬುವದು ಅವರಿಗೆ ಪ್ರಕಟವಾಗದೆ ಇರುವದರಿಂದ ಅದೇ ಮುಸುಕು ಎತ್ತಲ್ಪಡದೆ 15 ಇರುತ್ತದೆ. ಈ ದಿನದ ವರೆಗೂ, ಮೋಶೆಯ ಗ್ರಂಥಪಾರಾಯಣವು ಆಗುವಾಗೆಲ್ಲಾ, 16 ಮುಸುಕು ಅವರ ಹೃದಯದ ಮೇಲೆ ಇರುತ್ತದೆ. ಅವರ ಹೃದಯವು ಕರ್ತನ ಕಡೆಗೆ 17 ತಿರುಗಿಕೊಂಡಾಗಲೇ ಆ ಮುಸುಕು ತೆಗೆಯಲ್ಪಡುವದು[4]. ಆ ಕರ್ತನು ದೇವರಾತ್ಮನೇ; 18 ಕರ್ತನ ಆತ್ಮನು ಯಾರಲ್ಲಿದ್ದಾನೋ ಅವರಿಗೆ ಬಿಡುಗಡೆ ಉಂಟು. ನಾವೆಲ್ಲರೂ ಮುಸುಕು ತೆಗೆದಿರುವ ಮುಖದಿಂದ ಕರ್ತನ ಪ್ರಭಾವವನ್ನು ದರ್ಪಣದಲ್ಲಿ ಕಾಣಿಸುತ್ತೋ ಎಂಬಂತೆ ದೃಷ್ಟಿಸುವವರಾಗಿದ್ದು ಪ್ರಭಾವದಿಂದ ಅಧಿಕ ಪ್ರಭಾವಕ್ಕೆ ಹೋಗುತ್ತಾ ಆ ಪ್ರಭಾವದ ಸಾರೂಪ್ಯವುಳ್ಳವರೇ ಆಗುತ್ತೇವೆ; ಇದು ದೇವರಾತ್ಮನಾಗಿರುವ ಕರ್ತನ ಕೆಲಸಕ್ಕನುಸಾರವಾದದ್ದೇ.[5]

ಸುವಾರ್ತಾಸೇವೆಯಲ್ಲಿ ಎಂಥಾ ಕಷ್ಟಗಳು ಸಂಭವಿಸಿದಾಗ್ಯೂ ದೇವರ ಸೇವಕರು ಧೈರ್ಯಗೆಡದೆ ಅದನ್ನು ನಡಿಸುವರು ಎಂಬುವದು.

**4** ಆದದರಿಂದ ನಾವು ದೇವರ ಕರುಣೆಯಿಂದ ಈ ಸೇವೆಯನ್ನು ಹೊಂದಿದವರಾಗಿರಲಾಗಿ 2 ಧೈರ್ಯಗೆಟ್ಟು ಹಿಂದೆಗೆಯುವದಿಲ್ಲ. ನಾಚಿಕೆಯನ್ನು ಹುಟ್ಟಿಸುವ ಗುಪ್ತ ಕಾರ್ಯಗಳನ್ನು

---

1) ಅಥವಾ, ಆತ್ಮೀಯವಾದದ್ದು. 2) ಹೊರಡೋಣ ೩೪, ೨೯—೩೫. 3) ಅಥವಾ, ಆತ್ಮೀಯವಾದ.
4) ಹೊರಡೋಣ ೩೪, ೩೪. ಗ್ರೀಕ್ ಭಾಷಾಂತರ. 5) ಅಥವಾ, ದೃಷ್ಟಿಸುವವರಾಗಿದ್ದು ರೂಪಾಂತರವಾಗಿ ಅದಕ್ಕೆ ಸಾರೂಪ್ಯವುಳ್ಳವರಾಗುತ್ತೇವೆ. ದೇವರಾತ್ಮನಾಗಿರುವ ಕರ್ತನ ಯತ್ನದ ಮೂಲಕ ಆತನ ಪ್ರಭಾವದಿಂದ ನಮಗೆ ಪ್ರಭಾವವಾಗುತ್ತದೆ.

ನಾವು ಬಿಟ್ಟುಬಿಟ್ಟು, ತಂತ್ರದಲ್ಲಿ ನಡೆಯದೆ, ದೇವರ ವಾಕ್ಯವನ್ನು ಕೆಡಿಸದೆ, ಸತ್ಯವನ್ನು ಪರಿಷ್ಕಾರವಾಗಿ ಬೋಧಿಸುತ್ತಾ, ನಾವು ಸಜ್ಜನರೆಂದು ಪ್ರತಿಮನುಷ್ಯನ ಮನಸ್ಸು ದೇವರ ಮುಂದೆ ಒಪ್ಪಬೇಕಾದ ರೀತಿಯಲ್ಲಿ ನಡೆಯುತ್ತೇವೆ. 3 ನಾವು ಸಾರುವ ಸುವಾರ್ತೆಯು ಕೆಲವರಿಗೆ ಮರೆಯಾಗಿರುವದಾದರೆ, ನಾಶನಮಾರ್ಗದಲ್ಲಿರುವವರಿಗೇ ಮರೆಯಾಗಿರುವದು. 4 ಇವರಲ್ಲಿ ದೇವರ ಪ್ರತಿರೂಪವಾಗಿರುವ ಕ್ರಿಸ್ತನ ಪ್ರಭಾವವನ್ನು ತೋರಿಸುವ ಸುವಾರ್ತೆಯ ಪ್ರಕಾಶವು ಉದಯವಾಗಬಾರದೆಂದು ಈ ಪ್ರಪಂಚದ ದೇವರು ನಂಬಿಕೆಯಿಲ್ಲದವರ ಮನಸ್ಸನ್ನು ಮಂಕು ಮಾಡಿದನು. 5 ನಮ್ಮನ್ನೇ ಪ್ರಸಿದ್ಧಿಪಡಿಸಿಕೊಳ್ಳದೆ; ನಮ್ಮನ್ನು ಯೇಸುವಿನ ನಿಮಿತ್ತ ನಿಮ್ಮ ದಾಸರೆಂತಲೂ ಕ್ರಿಸ್ತೇಸುವನ್ನೇ ಕರ್ತನೆಂತಲೂ ಪ್ರಸಿದ್ಧಿಪಡಿಸುತ್ತೇವೆ. 6 ಯಾಕಂದರೆ ಕತ್ತಲೆಯೊಳಗಿಂದ ಬೆಳಕು ಹೊಳೆಯಲಿ ಎಂದು ಹೇಳಿದ ದೇವರು ತಾನೇ ಯೇಸು ಕ್ರಿಸ್ತನ ಮುಖದಲ್ಲಿ ತೋರುವ ದೇವಪ್ರಭಾವಜ್ಞಾನವೆಂಬ ಪ್ರಕಾಶವು ಅನೇಕರಿಗೆ ಉಂಟಾಗುವದಕ್ಕಾಗಿ ನಮ್ಮ ಹೃದಯಗಳಲ್ಲಿ ಹೊಳೆದನು.

7 ಬಲಾಧಿಕ್ಯವು ದೇವರದೇ ಹೊರತು ನಮ್ಮೊಳಗಿಂದ ಬಂದದ್ದಲ್ಲವೆಂದು ತೋರುವದಕ್ಕಾಗಿ, ಈ ನಿಕ್ಷೇಪವು ಮಣ್ಣಿನ ಘಟಗಳಲ್ಲಿ ನಮಗುಂಟು. 8 ಸರ್ವವಿಧದಲ್ಲಿಯೂ ನಮಗೆ ಸಂಕಟವಿದ್ದಾಗ್ಯೂ ನಾವು ಮುತ್ತಲ್ಪಡುವದಿಲ್ಲ; ನಾವು ದಿಕ್ಕುಕಾಣದವರಾಗಿದ್ದಾಗ್ಯೂ ಕೇವಲ ದೆಸೆಗೆಟ್ಟವರಲ್ಲ; 9 ಹಿಂಸೆಪಡುವವರಾಗಿದ್ದಾಗ್ಯೂ ಕೈಬಿಡಲ್ಪಟ್ಟವರಲ್ಲ; ಕೆಡವಲ್ಪಟ್ಟವರಾಗಿದ್ದಾಗ್ಯೂ ಪ್ರಾಣನಷ್ಟಪಡುವವರಲ್ಲ; 10 ಯೇಸುವಿನ ಜೀವವು ನಮ್ಮ ದೇಹದಲ್ಲಿ ಉಂಟೆಂದು ತೋರಿಬರುವದಕ್ಕಾಗಿ, ಯೇಸುವಿನ ಮರಣಾವಸ್ಥೆಯನ್ನು ನಾವು ಯಾವಾಗಲೂ ದೇಹದಲ್ಲಿ ಅನುಭವಿಸುತ್ತಾ ತಿರುಗಾಡುತ್ತೇವೆ. 11 ಯೇಸುವಿನ ಜೀವವು ನಮ್ಮ ಮರ್ತ್ಯ ಶರೀರದಲ್ಲಿ ಉಂಟೆಂದು ತೋರಿಬರುವದಕ್ಕಾಗಿ, ಬದುಕಿರುವ ನಾವು ಯೇಸುವಿನ ನಿಮಿತ್ತ ಯಾವಾಗಲೂ ಮರಣಕ್ಕೆ ಒಪ್ಪಿಸಲ್ಪಡುತ್ತಾ ಇದ್ದೇವೆ. 12 ಹೀಗೆ ನಮ್ಮಲ್ಲಿ ಮರಣವು ಪ್ರವರ್ತಿಸುತ್ತದೆ; ಆದರೆ ನಿಮ್ಮಲ್ಲಿ ಜೀವವು ಪ್ರವರ್ತಿಸುತ್ತದೆ.

13 ಹೀಗಿದ್ದಾಗ್ಯೂ—ನಂಬಿದೆನು, ಆದದರಿಂದ ಮಾತಾಡಿದೆನು ಎಂಬ ಶಾಸ್ತ್ರೋಕ್ತಿಯಲ್ಲಿ[1] ಕಾಣುವ ನಂಬಿಕೆಯ ಭಾವವನ್ನೇ ಹೊಂದಿ, ನಾವೂ ನಂಬಿದವರು, ಆದದರಿಂದ ಮಾತಾಡುತ್ತೇವೆ. 14 ಕರ್ತನಾದ ಯೇಸುವನ್ನು ಎಬ್ಬಿಸಿದಾತನು ನಮ್ಮನ್ನು ಸಹ ಯೇಸುವಿನೊಂದಿಗೆ ಎಬ್ಬಿಸಿ ನಿಮ್ಮ ಜೊತೆಯಲ್ಲಿ ತನ್ನ ಮುಂದೆ ನಿಲ್ಲಿಸುವನೆಂದು ತಿಳಿದವರಾಗಿದ್ದೇವೆ. 15 ಆ ಬಾಧೆಗಳೆಲ್ಲಾ ನಿಮ್ಮ ಹಿತಕ್ಕಾಗಿಯೇ ನಮಗೆ ಸಂಭವಿಸುತ್ತವೆ. ಅವುಗಳಲ್ಲಿ ಅಧಿಕವಾಗಿ ದೊರಕುವ ದೈವಕೃಪೆಯು ಬಹು ಜನರೊಳಗೆ ಕೃತಜ್ಞತೆಯನ್ನು ಹುಟ್ಟಿಸುವದರಿಂದ ದೇವರಿಗೆ ಹೆಚ್ಚಾದ ಸ್ತೋತ್ರವನ್ನು ಉಂಟುಮಾಡುವದು.

ಪರಲೋಕಭಾಗ್ಯವನ್ನು ಆಲೋಚಿಸುವಾಗ್ಯೆ ಕ್ರಿಸ್ತನಲ್ಲಿರುವವರಿಗೆ ಧೈರ್ಯವಾಗುತ್ತದೆ ಎಂಬುವದು.

16 ಆದದರಿಂದ ನಾವು ಧೈರ್ಯಗೆಡುವದಿಲ್ಲ. ನಮ್ಮ ದೇಹವು ನಾಶವಾಗುತ್ತಾ ಇದ್ದರೂ ನಮ್ಮ ಅಂತರ್ಯವು ದಿನೇದಿನೇ ಹೊಸದಾಗುತ್ತಾ ಬರುತ್ತದೆ. 17 ಹ್ಯಾಗಂದರೆ ಕ್ಷಣಮಾತ್ರ

[1] ಕೀರ್ತನೆ ೧೧೬, ೧೦.

ವಿರುವ ನಮ್ಮ ಹಗುರವಾದ ಸಂಕಟವು ಅತ್ಯಂತಾಧಿಕವಾದ ಪ್ರತಿಫಲವನ್ನು ಉಂಟು ಮಾಡಿ ನಮಗೆ ನಿರಂತರವಾಗಿರುವ ಗೌರವವಾದ ಪ್ರಭಾವವನ್ನು ದೊರಕಿಸುತ್ತದೆ.
18 ನಾವು ಕಾಣುವಂಥಾದ್ದನ್ನು ಲಕ್ಷಿಸದೆ ಕಾಣದಿರುವಂಥಾದ್ದನ್ನು ಲಕ್ಷಿಸುವವರಾಗಿದ್ದೇವೆ. ಕಾಣುವಂಥಾದ್ದು ಸ್ವಲ್ಪ ಕಾಲ ಮಾತ್ರ ಇರುವದು; ಕಾಣದಿರುವಂಥಾದ್ದು ಸದಾಕಾಲವೂ
**5** ಇರುವದು. ಭೂಮಿಯ ಮೇಲಿರುವ ನಮ್ಮ ಮನೆಯು ಅಂದರೆ ನಮ್ಮ ದೇಹವೆಂಬ ಗುಡಾರವು ಕಿತ್ತುಹಾಕಲ್ಪಟ್ಟರೂ ದೇವರಿಂದುಂಟಾದ ಒಂದು ಕಟ್ಟಡವು ಪರಲೋಕದಲ್ಲಿ ನಮಗುಂಟೆಂದು ಬಲ್ಲೆವು. ಅದು ಕೈಯಿಂದ ಕಟ್ಟಿದ ಮನೆಯಾಗಿರದೆ ನಿತ್ಯವಾಗಿರು
2 ವಂಥಾದ್ದಾಗಿದೆ. ನಾವು ಈಗಿನ ದೇಹದಲ್ಲಿರುವ ವರೆಗೂ ನರಳುತ್ತೇವೆ. ಪರಲೋಕ ದಿಂದ ದೊರಕುವ ನಮ್ಮ ನಿವಾಸವನ್ನು ನಾವು ದೇಹದ ಮೇಲೆ ಧರಿಸಿಕೊಳ್ಳಬೇಕೆಂದು
3 ಅಪೇಕ್ಷಿಸುತ್ತೇವೆ, ಅಂದರೆ ಆ ದಿನದಲ್ಲಿ ನಾವು ಇನ್ನೂ ದೇಹದಲ್ಲಿಯೇ ಇದ್ದರೆ[1] ಆ ನಿವಾ
4 ಸವನ್ನು ದೇಹದ ಮೇಲೆಯೇ ಧರಿಸಿಕೊಳ್ಳುವೆವು. ಈ ಗುಡಾರದಲ್ಲಿರುವವರಾದ ನಾವು ಭಾರ ಹೊತ್ತುಕೊಂಡವರಾಗಿ ನರಳುತ್ತೇವೆ; ಇದು ಕಳಚಿಹೋಗಬೇಕೆಂಬುವದು ನಮ್ಮ ಇಷ್ಟವಲ್ಲ; ಮರ್ತ್ಯವಾದದ್ದು ನುಂಗಿಹೋಗಿ ಜೀವವೊಂದೇ ಉಳಿಯುವಂತೆ, ಈ ಗುಡಾ
5 ರದ ಮೇಲೆ ಆ ನಿವಾಸವನ್ನು ಧರಿಸಿಕೊಳ್ಳಬೇಕೆಂಬುವದೇ ನಮ್ಮ ಇಷ್ಟ. ಆ ಸ್ಥಿತಿಗಾಗಿ ನಮ್ಮನ್ನು ಸಿದ್ಧಮಾಡಿರುವವನು ದೇವರೇ; ಆತನು ಪವಿತ್ರಾತ್ಮವರವನ್ನು ಸಂಚಕಾರವಾಗಿ ಅನುಗ್ರಹಿಸಿದ್ದಾನೆ.

6-7 ಹೀಗಿರುವದರಿಂದ ನಾವು ಯಾವಾಗಲೂ ಧೈರ್ಯವುಳ್ಳವರಾಗಿದ್ದೇವೆ. ನಾವು ನೋಡು ವವರಾಗಿ ನಡೆಯದೆ ನಂಬುವವರಾಗಿಯೇ ನಡೆಯುತ್ತೇವಾದ್ದರಿಂದ ದೇಹದಲ್ಲಿ ವಾಸಿಸುವ
8 ವರೆಗೂ ಕರ್ತನಿಗೆ ದೂರದಲ್ಲಿರುವ ಪ್ರವಾಸಿಗಳಾಗಿದ್ದೇವೆಂಬುವದನ್ನು ಬಲ್ಲೆವು. ಇದನ್ನು ಆಲೋಚಿಸಿ ನಾವು ಧೈರ್ಯವುಳ್ಳವರಾಗಿದ್ದು ದೇಹವನ್ನು ಬಿಟ್ಟು ಕರ್ತನ ಬಳಿಯಲ್ಲಿರು
9 ವದೇ ಉತ್ತಮವೆಂದು ಎಣಿಸುತ್ತೇವೆ. ಆದದರಿಂದ ನಾವು ದೇಹವೆಂಬ ಮನೆಯಲ್ಲಿದ್ದರೂ ಸರಿಯೇ, ಅದನ್ನು ಬಿಟ್ಟಿದ್ದರೂ ಸರಿಯೇ, ಕರ್ತನಿಗೆ ಮೆಚ್ಚುವವರಾಗಿರಬೇಕೆಂಬುವದೇ
10 ನಮ್ಮ ಗುರಿಯಾಗಿದೆ. ಯಾಕಂದರೆ ಪ್ರತಿಯೊಬ್ಬನು ತನ್ನ ದೇಹದ ಮೂಲಕ ನಡಿಸಿದ ಒಳ್ಳೇದ್ದಕ್ಕಾಗಲಿ ಕೆಟ್ಟದ್ದಕ್ಕಾಗಲಿ ಸರಿಯಾದ ಪ್ರತಿಫಲವನ್ನು ಹೊಂದುವದಕ್ಕೋಸ್ಕರ ನಾವೆಲ್ಲರೂ ಕ್ರಿಸ್ತನ ನ್ಯಾಯಾಸನದ ಮುಂದೆ ಕಾಣಿಸಿಕೊಳ್ಳಬೇಕು.

ಅಪೊಸ್ತಲರು ಕ್ರಿಸ್ತನ ಪ್ರೀತಿಯಿಂದ ಪ್ರೇರಣೆ ಹೊಂದಿ ಸಮಾಧಾನವಾಕ್ಯವನ್ನು ಹೇಳುವ ರಾಯಭಾರಿಗಳಾಗಿ ಎಲ್ಲಾ ಸಂಗತಿಗಳಲ್ಲಿ ತಮ್ಮನ್ನು ದೇವರ ಸೇವಕರೆಂದು ತೋರಿಸಿಕೊಂಡದ್ದು.

11 ಕರ್ತನ ಭಯವು ನಮಗಿರುವದರಿಂದ ನಾವು ಮನುಷ್ಯರನ್ನು ಒಲಿಸಿಕೊಳ್ಳುತ್ತೇವೆ. ನಾವು ಯಥಾರ್ಥರೆಂಬುವದು ದೇವರಿಗೆ ಗೊತ್ತುಂಟು; ನಿಮ್ಮ ಮನಸ್ಸಿಗೆ ಕೂಡಾ ಗೊತ್ತಾ
12 ಗಿದೆ ಎಂದು ನಂಬಿಕೊಂಡಿದ್ದೇನೆ. ನಾವು ನಮ್ಮನ್ನು ತಿರಿಗಿ ನಿಮ್ಮ ಮುಂದೆ ಹೊಗಳಿ ಕೊಳ್ಳುವದಿಲ್ಲ; ಆದರೆ ಯಾರು ಹೃದಯದ ವಿಷಯದಲ್ಲಿ ಹಿಗ್ಗದೆ ತೋರಿಕೆಯ ವಿಷಯ

[1] ಮೂಲ: ನಿರ್ವಾಣರಾಗಿರದಿದ್ದರೆ.

ಜೀವಿತವಾಗುವದಿಲ್ಲ, ನೋಡು; ಒಂದು ವೇಳೆ ಗೋಧಿಯನ್ನಾಗಲಿ ಬೇರೆ ಯಾವದೋ 37 ಬೀಜವನ್ನಾಗಲಿ ಬಿತ್ತುವಾಗ ಬರೀ ಕಾಳನ್ನೇ ಹೊರತು ಮುಂದೆ ಆಗಬೇಕಾದ ದೇಹ ವನ್ನು ಬಿತ್ತುವದಿಲ್ಲ. ಆದರೆ ದೇವರು ತನ್ನ ಇಷ್ಟದಂತೆ ಅದಕ್ಕೆ ದೇಹವನ್ನು ಕೊಡು 38 ತ್ತಾನೆ. ಒಂದೊಂದು ಬೀಜಕ್ಕೆ ಅದರದರ ದೇಹವನ್ನು ಕೊಡುತ್ತಾನೆ. ಎಲ್ಲಾ ಶರೀರಗಳು 39 ಒಂದೇ ವಿಧವಾದವುಗಳಲ್ಲ; ಮನುಷ್ಯನ ಶರೀರ ಬೇರೆ, ಪಶುಗಳ ಶರೀರ ಬೇರೆ, ಪಕ್ಷಿಗಳ ಶರೀರ ಬೇರೆ, ಮೀನುಗಳದು ಬೇರೆ. ಇದಲ್ಲದೆ ಪರಲೋಕದ ದೇಹಗಳುಂಟು, ಭೂಲೋ 40 ಕದ ದೇಹಗಳುಂಟು, ಆದರೆ ಪರಲೋಕದ ದೇಹಗಳ ಮಹಿಮೆ ಬೇರೆ, ಭೂಲೋಕದ ದೇಹಗಳ ಮಹಿಮೆ ಬೇರೆ. ಸೂರ್ಯನ ಮಹಿಮೆ ಒಂದು ವಿಧ, ಚಂದ್ರನ ಮಹಿಮೆ 41 ಮತ್ತೊಂದು ವಿಧ, ನಕ್ಷತ್ರಗಳ ಮಹಿಮೆ ಇನ್ನೊಂದು ವಿಧ. ಮಹಿಮೆಯಲ್ಲಿ ಒಂದು ನಕ್ಷ ತ್ರಕ್ಕೂ ಇನ್ನೊಂದು ನಕ್ಷತ್ರಕ್ಕೂ ಹೆಚ್ಚು ಕಡಿಮೆಯುಂಟಷ್ಟೆ.

ಸತ್ತವರಿಗಾಗುವ ಪುನರುತ್ಥಾನವು ಅದೇ ಪ್ರಕಾರವಾಗಿರುವದು. ದೇಹವು ಲಯಾ 42 ವಸ್ಥೆಯಲ್ಲಿ ಬಿತ್ತಲ್ಪಡುತ್ತದೆ, ನಿರ್ಲಯಾವಸ್ಥೆಯಲ್ಲಿ ಎದ್ದುಬರುವದು; ಹೀನಾವಸ್ಥೆಯಲ್ಲಿ 43 ಬಿತ್ತಲ್ಪಡುತ್ತದೆ, ಮಹಿಮೆಯಲ್ಲಿ ಎದ್ದುಬರುವದು; ನಿರ್ಬಲಾವಸ್ಥೆಯಲ್ಲಿ ಬಿತ್ತಲ್ಪಡುತ್ತದೆ, ಬಲಾವಸ್ಥೆಯಲ್ಲಿ ಎದ್ದುಬರುವದು; ಪ್ರಾಕೃತದೇಹವಾಗಿ ಬಿತ್ತಲ್ಪಡುತ್ತದೆ, ಆತ್ಮಿಕದೇಹ 44 ವಾಗಿ ಎದ್ದುಬರುವದು. ಪ್ರಾಕೃತದೇಹವಿರುವದಾದರೆ, ಆತ್ಮಿಕದೇಹವೂ ಇರುವದು. ಮೊದಲನೇ ಮನುಷ್ಯನಾದ ಆದಮನು ಬದುಕುವ ಪ್ರಾಣಿಯಾದನೆಂದು[1] ಬರೆದದೆ 45 ಯಲ್ಲಾ. ಕಡೇ ಆದಮನೋ ಬದುಕಿಸುವ ಆತ್ಮನು. ಆತ್ಮಿಕವಾದದ್ದು ಮೊದಲನೇ 46 ದಲ್ಲ, ಪ್ರಾಕೃತವಾದದ್ದು ಮೊದಲನೇದು; ಆ ಮೇಲೆ ಆತ್ಮಿಕವಾದದ್ದು. ಮೊದಲನೇ 47 ಮನುಷ್ಯನು ಭೂಮಿಯೊಳಗಿಂದ ಉತ್ಪನ್ನನಾಗಿ ಮಣ್ಣಿಗೆ ಸಂಬಂಧಪಟ್ಟವನು; ಎರಡನೇ ಮನುಷ್ಯನು ಪರಲೋಕದಿಂದ ಬಂದವನು. ಮಣ್ಣಿನಿಂದ ಹುಟ್ಟಿದವನು ಎಂಥವನೋ 48 ಮಣ್ಣಿಗೆ ಸಂಬಂಧಪಟ್ಟವರೂ ಅಂಥವರೇ; ಪರಲೋಕದಿಂದ ಬಂದಾತನು ಎಂಥವನೋ ಪರಲೋಕಸಂಬಂಧ ಪಟ್ಟವರೂ ಅಂಥವರೇ. ನಾವು ಮಣ್ಣಿನಿಂದ ಹುಟ್ಟಿದವನ ಸಾರೂ 49 ಪ್ಯವನ್ನು ಧರಿಸಿಕೊಂಡಿರುವ ಪ್ರಕಾರ ಪರಲೋಕದಿಂದ ಬಂದಾತನ ಸಾರೂಪ್ಯವನ್ನೂ ಧರಿಸಿಕೊಳ್ಳಬೇಕು.

ಸಹೋದರರೇ, ನಾನು ಹೇಳುವದೇನಂದರೆ—ರಕ್ತಮಾಂಸವು ದೇವರ ರಾಜ್ಯಕ್ಕೆ 50 ಬಾಧ್ಯವಾಗಲಾರದು; ಲಯವಾಗುವ ವಸ್ತು ನಿರ್ಲಯಪದವಿಗೆ ಬಾಧ್ಯವಾಗುವದಿಲ್ಲ. ಕೇಳಿರಿ, ಇದು ವರೆಗೆ ಗುಪ್ತವಾಗಿದ್ದ ಸಂಗತಿಯನ್ನು ನಿಮಗೆ ತಿಳಿಸುತ್ತೇನೆ—ನಾವೆಲ್ಲರೂ 51 ನಿದ್ರೆಹೋಗುವದಿಲ್ಲ; ಆದರೆ ಕಡೇ ತುತೂರಿಯ ಧ್ವನಿಯಾಗುವಾಗ ನಾವೆಲ್ಲರು ಒಂದು 52 ಕ್ಷಣದಲ್ಲೇ ರೆಪ್ಪೆಬಡಿಯುವಷ್ಟರೊಳಗಾಗಿ ಮಾರ್ಪಡುವೆವು. ತುತೂರಿಯು ಊದಲಾಗಿ ಸತ್ತವರು ನಿರ್ಲಯರಾಗಿ ಎಬ್ಬಿಸಲ್ಪಡುವರು, ನಾವು ಮಾರ್ಪಡುವೆವು. ಲಯವಾಗುವ 53 ಈ ದೇಹವು ನಿರ್ಲಯತ್ವವನ್ನು ಧರಿಸಿಕೊಳ್ಳುವದೂ ಮರಣಾಧೀನವಾಗಿರುವ ಈ ದೇಹವು ಅಮರತ್ವವನ್ನು ಧರಿಸಿಕೊಳ್ಳುವದೂ ಅವಶ್ಯ. ಲಯವಾಗುವ ಈ ದೇಹವು 54

---

[1] ಉತ್ಪತ್ತಿ ೨, ೭.

ನಿರ್ಲಯತ್ವವನ್ನು ಧರಿಸಿಕೊಂಡಾಗ ಮರಣಾಧೀನವಾಗಿರುವ ಈ ದೇಹವು ಅಮರತ್ವ ವನ್ನು ಧರಿಸಿಕೊಂಡಾಗ ಬರೆದಿರುವ ಮಾತು ನೆರವೇರುವದು. ಆ ಮಾತು ಏನಂದರೆ—
55 ಮರಣವು ನುಂಗಿಯೇ ಹೋಯಿತು, ಜಯವಾಯಿತು ಎಂಬುವದೇ[1]. ಮರಣವೇ, ನಿನ್ನ
56 ಜಯವೆಲ್ಲಿ? ಮರಣವೇ, ನಿನ್ನ ವಿಷದ ಕೊಂಡಿ ಎಲ್ಲಿ[2]? ಮರಣದ ಕೊಂಡಿ ಪಾಪವೇ;
57 ಮತ್ತು ಪಾಪದ ಬಲಕ್ಕೆ ಆಧಾರವು ಧರ್ಮಶಾಸ್ತ್ರವೇ. ಆದರೆ ದೇವರು ನಮ್ಮ ಕರ್ತ ನಾದ ಯೇಸು ಕ್ರಿಸ್ತನ ಮೂಲಕ ನಮಗೆ ಜಯವನ್ನು ಕೊಟ್ಟಿದ್ದಾನೆ; ಆತನಿಗೆ ಸ್ತೋತ್ರ.
58 ಆದದರಿಂದ, ನನ್ನ ಪ್ರಿಯ ಸಹೋದರರೇ, ಸ್ಥಿರಚಿತ್ತರಾಗಿಯೂ ನಿಶ್ಚಲರಾಗಿಯೂ ಇರ್ರಿ. ನೀವು ಕರ್ತನ ಸೇವೆಯಲ್ಲಿ ಪಡುವ ಪ್ರಯಾಸವು ನಿಷ್ಫಲವಾಗುವದಿಲ್ಲವೆಂದು ತಿಳಿದು ಕರ್ತನ ಕೆಲಸವನ್ನು ಯಾವಾಗಲೂ ಅತ್ಯಾಸಕ್ತಿಯಿಂದ ಮಾಡುವವರಾಗಿರ್ರಿ.

### ಯೆರೂಸಲೇಮಿನಲ್ಲಿದ್ದ ಬಡಕ್ರೈಸ್ತರಿಗೋಸ್ಕರ ಧರ್ಮದ ಹಣ ಕೂಡಿಸುವದನ್ನು ಕುರಿತದ್ದು.

**16** ದೇವಜನರಿಗೋಸ್ಕರ ಹಣ ವಸೂಲುಮಾಡುವದನ್ನು ಕುರಿತು ನಾನು ಹೇಳುವದೇ ನಂದರೆ, ಗಲಾತ್ಯದ ಸಭೆಗಳಿಗೆ ನಾನು ಹೇಳಿಕೊಟ್ಟ ಕ್ರಮದಂತೆ ನೀವೂ ಮಾಡಿರಿ.
2 ನಾನು ಬಂದಾಗ ಹಣ ವಸೂಲುಮಾಡಬೇಕಾದ ಅವಶ್ಯವಾಗದಂತೆ, ನಿಮ್ಮಲ್ಲಿ ಪ್ರತಿಯೊ ಬ್ಬನು ತನಗೆ ಬಂದ ಸಂಪಾದನೆಯ ಮೇರೆಗೆ ವಾರವಾರದ ಮೊದಲನೇ ದಿನದಲ್ಲಿ ಗಂಟು
3 ಮಾಡಿ ತನ್ನ ಮನೆಯಲ್ಲಿಟ್ಟುಕೊಂಡಿರಬೇಕು. ನಾನು ಬಂದ ಮೇಲೆ, ನೀವು ಯಾರನ್ನು ಯೋಗ್ಯರೆಂದು ಸೂಚಿಸುವಿರೋ ಅವರನ್ನು ಯೆರೂಸಲೇಮಿಗೆ ನಿಮ್ಮ ಉಪಕಾರದ್ರವ್ಯ
4 ವನ್ನು ತೆಗೆದುಕೊಂಡು ಹೋಗುವದಕ್ಕೆ ಪತ್ರಗಳನ್ನು ಕೊಟ್ಟು ಕಳುಹಿಸುವೆನು[3]. ನಾನು ಸಹ ಹೋಗುವದು ಯುಕ್ತವಾಗಿ ತೋರಿದರೆ, ಅವರು ನನ್ನ ಜೊತೆಯಲ್ಲಿ ಬರಬಹುದು.
5 ನಾನು ಹಾದುಹೋಗಬೇಕೆಂದಿರುವ ಮಕೆದೋನ್ಯ ಸೀಮೆಯನ್ನು ದಾಟಿದ ಮೇಲೆ,
6 ನಿಮ್ಮ ಬಳಿಗೆ ಬಂದು ನಿಮ್ಮ ಬಳಿಯಲ್ಲೇ ಇಳುಕೊಳ್ಳುವೆನು. ನಿಮ್ಮಲ್ಲಿ ಹಿಮಕಾಲವನ್ನಾ ದರೂ ಕಳೆದೇನು; ಮತ್ತು ನಾನು ಹೋಗಬೇಕಾದ ಸ್ಥಳಕ್ಕೆ ನೀವು ನನ್ನನ್ನು ಸಾಗ
7 ಕಳುಹಿಸಬೇಕು. ಈ ಸಮಯದಲ್ಲಿ ಹೋಗುಹೋಗುತ್ತಾ ನಿಮ್ಮನ್ನು ನೋಡುವದಕ್ಕೆ ನನಗೆ ಇಷ್ಟವಿಲ್ಲ; ಕರ್ತನ ಅಪ್ಪಣೆಯಾದರೆ ನಿಮ್ಮ ಬಳಿಯಲ್ಲಿ ಕೆಲವು ಕಾಲ ಇರುವೆ
8 ನೆಂದು ನಿರೀಕ್ಷಿಸುತ್ತೇನೆ. ಪಂಚಾಶತ್ತಮ ದಿನದ ಹಬ್ಬದ ತನಕ ಎಫೆಸದಲ್ಲಿರುವೆನು;
9 ಯಾಕಂದರೆ ಕಾರ್ಯಕ್ಕೆ ಅನುಕೂಲವಾದ ಮಹಾ ಸಂದರ್ಭವು ನನಗುಂಟು, ಮತ್ತು ವಿರೋಧಿಗಳು ಬಹಳ ಮಂದಿ ಇದ್ದಾರೆ[4].

### ವಂದನೆಗಳೂ ಆಶೀರ್ವಚನವೂ.

10 ತಿಮೊಥೆಯನು ಬಂದರೆ, ಅವನು ನಿಮ್ಮ ಬಳಿಯಲ್ಲಿ ಭಯವಿಲ್ಲದೆ ಇರುವಂತೆ ನೋಡಿ
11 ಕೊಳ್ಳಿರಿ; ನನ್ನ ಹಾಗೆಯೇ ಕರ್ತನ ಕೆಲಸವನ್ನು ನಡಿಸುತ್ತಾನೆ; ಆದದರಿಂದ ಯಾರೂ

---

[1] ಯೆಶಾಯ ೨೫, ೮. [2] ಹೋಶೇಯ ೧೩, ೧೪.
[3] ಅಥವಾ, ನೀವು ಪತ್ರದ ಮೂಲಕ ಯಾರನ್ನು ಯೋಗ್ಯರೆಂದು ಸೂಚಿಸುವಿರೋ, ಅವರನ್ನು ತೆಗೆದುಕೊಂಡು ಹೋಗುವದಕ್ಕೆ ಕಳುಹಿಸುವೆನು. [4] ಅಪೊಸ್ತಲರ ಕೃತ್ಯ ೧೯, ೧—೨೨ ನೋಡು.

ಅವನನ್ನು ಹೀನೈಸಬಾರದು. ಮತ್ತು ಅವನು ನನ್ನ ಬಳಿಗೆ ಬರುವಂತೆ ಅವನನ್ನು ಸಮಾಧಾನದಿಂದ ಸಾಗಕಳುಹಿಸಿರಿ; ಅವನು ಸಹೋದರರೊಂದಿಗೆ ಬರುವದನ್ನು ಎದುರು ನೋಡುತ್ತಾ ಇದ್ದೇವೆ. 12 ಸಹೋದರನಾದ ಅಪೊಲ್ಲೋಸನ ಸಂಗತಿಯೇನಂದರೆ, ಸಹೋದರರೊಂದಿಗೆ ನಿಮ್ಮ ಬಳಿಗೆ ಹೋಗಬೇಕೆಂದು ಅವನನ್ನು ಬಹಳವಾಗಿ ಬೇಡಿಕೊಂಡೆನು. ಈಗ ಬರುವದಕ್ಕೆ ಅವನಿಗೆ ಸ್ವಲ್ಪವೂ ಮನಸ್ಸಿರಲಿಲ್ಲ, ಒಳ್ಳೇ ಸಮಯ ಸಿಕ್ಕಿದಾಗ ಬರುವನು.

13 ಎಚ್ಚರವಾಗಿರಿ, ಕ್ರಿಸ್ತನಂಬಿಕೆಯಲ್ಲಿ ದೃಢವಾಗಿ ನಿಲ್ಲಿರಿ. ಶೂರರಾಗಿರಿ, ಬಲಗೊಳ್ಳಿರಿ. 14 ನೀವು ಮಾಡುವದನ್ನೆಲ್ಲಾ ಪ್ರೀತಿಯಿಂದ ಮಾಡಿರಿ.

15 ಸ್ತೆಫನನ ಮನೆಯವರು ಅಖಾಯದಲ್ಲಿ ಮೊದಲು ಸಿಕ್ಕಿದ ಫಲವೆಂದೂ ಅವರು ದೇವಜನರಿಗೆ ಸೇವೆಮಾಡುವದಕ್ಕಾಗಿ ಕೈಹಾಕಿದರೆಂದೂ ನೀವು ಬಲ್ಲಿರಷ್ಟೆ. 16 ಸಹೋದರರೇ, ನೀವು ಇಂಥವರಿಗೂ ಕೆಲಸದಲ್ಲಿ ಸಹಾಯಮಾಡುತ್ತಾ ಪ್ರಯಾಸಪಡುತ್ತಾ ಇರುವವರೆಲ್ಲರಿಗೂ ಒಳಗಾಗಬೇಕೆಂದು ನಿಮ್ಮನ್ನು ಬೇಡಿಕೊಳ್ಳುತ್ತೇನೆ. 17 ಸ್ತೆಫನನೂ ಫೊರ್ತುನಾತನೂ ಅಖಾಯಿಕನೂ ಬಂದದರಿಂದ ನನಗೆ ಸಂತೋಷವಾಯಿತು. ನೀವು ಇಲ್ಲದ್ದರಿಂದ ನನಗುಂಟಾದ ಕೊರತೆಯನ್ನು ಅವರು ನೀಗಿದರು; 18 ಅವರು ನನ್ನ ಆತ್ಮವನ್ನೂ ನಿಮ್ಮ ಆತ್ಮಗಳನ್ನೂ ಉಪಶಮನವಮಾಡಿದರು. ಇಂಥವರನ್ನು ಸನ್ಮಾನಿಸಿರಿ.

19 ಆಸ್ಯಸೀಮೆಯ ಸಭೆಗಳವರು ನಿಮಗೆ ವಂದನೆ ಹೇಳುತ್ತಾರೆ. ಅಕ್ವಿಲನೂ ಪ್ರಿಸ್ಕಳೂ ತಮ್ಮ ಮನೆಯಲ್ಲಿ ಕೂಡುವ ಸಭೆಯವರೊಂದಿಗೆ ಕರ್ತನ ಹೆಸರಿನಲ್ಲಿ ಅನೇಕ ವಂದನೆಗಳನ್ನು ಹೇಳುತ್ತಾರೆ. 20 ಸಹೋದರರೆಲ್ಲರು ನಿಮ್ಮನ್ನು ವಂದಿಸುತ್ತಾರೆ. ಪವಿತ್ರವಾದ ಮುದ್ದಿಟ್ಟು ಒಬ್ಬರನ್ನೊಬ್ಬರಿಗೆ ನನ್ನ ವಂದನೆಗಳನ್ನು ಹೇಳಿರಿ.

21, 22 ಪೌಲನೆಂಬ ನಾನು ಸ್ವಂತ ಕೈಯಿಂದ ವಂದನೆಯನ್ನು ಬರೆದಿದ್ದೇನೆ. ಯಾವನಾದರೂ ಕರ್ತನನ್ನು ಪ್ರೀತಿಸದಿದ್ದರೆ, ಅವನು ಶಾಪಗ್ರಸ್ತನಾಗಲಿ. 23 ಕರ್ತನು ಬರುತ್ತಾನೆ. ಕರ್ತನಾದ ಯೇಸು ಕ್ರಿಸ್ತನ ಕೃಪೆಯು ನಿಮ್ಮೊಂದಿಗಿರಲಿ. 24 ಕ್ರಿಸ್ತ ಯೇಸುವಿನಲ್ಲಿ ನಿಮ್ಮೆಲ್ಲರ ಮೇಲೆ ನನ್ನ ಪ್ರೀತಿ.

# THE SECOND EPISTLE OF SAINT PAUL TO THE CORINTHIANS

---

# ಪೌಲನು ಕೊರಿಂಥದವರಿಗೆ

ಬರೆದ

# ಎರಡನೇ ಪತ್ರಿಕೆ

---

### ಒಕ್ಕಣೆ.

1 ದೇವರ ಚಿತ್ತಾನುಸಾರ ಕ್ರಿಸ್ತ ಯೇಸುವಿನ ಅಪೊಸ್ತಲನಾದ ಪೌಲನೂ ಸಹೋದರ ನಾದ ತಿಮೊಥೆಯನೂ ಕೊರಿಂಥದಲ್ಲಿರುವ ದೇವರ ಸಭೆಯವರಿಗೂ ಅಖಾಯ ಸೀಮೆಯ ಲ್ಲೆಲ್ಲಾ ಇರುವ ದೇವಜನರೆಲ್ಲರಿಗೂ ಬರೆಯುವದೇನಂದರೆ— 2 ನಮ್ಮ ತಂದೆಯಾದ ದೇವ ರಿಂದಲೂ ಕರ್ತನಾದ ಯೇಸು ಕ್ರಿಸ್ತನಿಂದಲೂ ನಿಮಗೆ ಕೃಪೆಯೂ ಶಾಂತಿಯೂ ಆಗಲಿ.

### ಪೌಲನು ತನಗೆ ಉಂಟಾದ ಆದರಣೆಯಿಂದ ಅನೇಕರಿಗೆ ಉಪಯೋಗ ಉಂಟಾಗುವದೆಂದು ಹೇಳಿದ್ದು.

3 ನಮ್ಮ ಕರ್ತನಾದ ಯೇಸು ಕ್ರಿಸ್ತನ ತಂದೆಯಾಗಿರುವ ದೇವರಿಗೆ ಸ್ತೋತ್ರವಾಗಲಿ; ಆತನು ಕನಿಕರವುಳ್ಳ ತಂದೆಯೂ ಸಕಲವಿಧವಾಗಿ ಸಂತೈಸುವ ದೇವರೂ ಆಗಿದ್ದು 4 ನಮಗೆ ಸಂಭವಿಸುವ ಎಲ್ಲಾ ಸಂಕಟಗಳಲ್ಲಿ ನಮ್ಮನ್ನು ಸಂತೈಸುತ್ತಾನೆ; ಹೀಗೆ ದೇವರಿಂದ ನಮ ಗಾಗುವ ಆದರಣೆಯ ಮೂಲಕ ನಾವು ನಾನಾ ವಿಧವಾದ ಸಂಕಟಗಳಲ್ಲಿ ಬಿದ್ದಿರುವವ ರನ್ನು ಸಂತೈಸುವದಕ್ಕೆ ಶಕ್ತರಾಗುತ್ತೇವೆ. 5 ಯಾಕಂದರೆ ಕ್ರಿಸ್ತನ ನಿಮಿತ್ತ ನಮಗೆ ಬಾಧೆ ಗಳು ಹ್ಯಾಗೆ ಹೇರಳವಾಗಿ ಉಂಟಾಗುತ್ತವೆಯೋ ಹಾಗೆಯೇ ಆದರಣೆಯು ಕೂಡ ಕ್ರಿಸ್ತನ ಮೂಲಕ ಹೇರಳವಾಗಿ ಉಂಟಾಗುತ್ತದೆ. 6 ನಮಗೆ ಸಂಕಟ ಬರುತ್ತದೋ, ಅದರಿಂದ ನಿಮಗೆ ಧೈರ್ಯವೂ ರಕ್ಷಣೆಯೂ ಉಂಟಾಗುತ್ತದೆ; ನಮಗೆ ಸಂಕಟ ಪರಿಹಾ ರವಾಗುತ್ತದೋ, ಅದರಿಂದ ನಿಮಗೆ ಆದರಣೆ ಆಗುತ್ತದೆ. ನಾವು ಅನುಭವಿಸುವಂಥ ಬಾಧೆಗಳನ್ನು ನೀವೂ ತಾಳ್ಮೆಯಿಂದ ಸಹಿಸಿಕೊಳ್ಳುವಂತೆ ಅದು ನಿಮ್ಮನ್ನು ಧೈರ್ಯಗೊಳ್ಳಿ ಸುತ್ತದೆ. 7 ನೀವು ಬಾಧೆಗಳಲ್ಲಿ ನಮ್ಮೊಂದಿಗೆ ಪಾಲುಗಾರರಾಗಿರುವ ಪ್ರಕಾರ ಆದರಣೆ

ಯಲ್ಲಿಯೂ ಪಾಲುಗಾರರಾಗಿದ್ಧೀರೆಂದು ನಮಗೆ ತಿಳಿದಿರುವದರಿಂದ, ನಿಮ್ಮ ವಿಷಯದಲ್ಲಿ ನಮಗಿರುವ ನಿರೀಕ್ಷೆಯು ದೃಢವಾಗಿದೆ.

ಸಹೋದರರೇ, ಆಸ್ಯ ಸೀಮೆಯಲ್ಲಿ ನಮಗೆ ಸಂಭವಿಸಿದ ಸಂಕಟವನ್ನು ಕುರಿತು[1] 8 ವಿಚಾರಿಸುತ್ತೀರೋ, ಅದರಲ್ಲಿ ನಾವು ಬಲವನ್ನು ಮಿೀರಿದಂಥಾ ಅತ್ಯಧಿಕವಾದ ಭಾರ ದಿಂದ ಕುಗ್ಗಿಹೋಗಿ, ಜೀವವುಳಿಯುವ ಮಾರ್ಗವನ್ನು ಕಾಣದವರಾದೆವೆಂಬುವದನ್ನು ನೀವು ತಿಳಿಯಬೇಕೆಂದು ಅಪೇಕ್ಷಿಸುತ್ತೇನೆ. ಮರಣವಾಗುತ್ತದೆಂಬ ನಿಶ್ಚಯವು ನಮ್ಮೊ 9 ಳಗೆ ಉಂಟಾಯಿತು; ನಾವು ನಮ್ಮ ಮೇಲೆ ಭರವಸವಿಟ್ಟುಕೊಳ್ಳದೆ, ಸತ್ತವರನ್ನು ಎಬ್ಬಿ ಸುವ ದೇವರ ಮೇಲೆಯೇ ಭರವಸವಿಡುವವರಾಗಬೇಕೆಂದು ಹೀಗಾಯಿತು. ಆತನು 10-11 ನಮ್ಮನ್ನು ಎಂಥಾ ಭಯಂಕರ ಮರಣದಿಂದ ತಪ್ಪಿಸಿದನು, ಮುಂದೆಯೂ ತಪ್ಪಿಸುವನು. ನೀವು ನಮಗೋಸ್ಕರ ಪ್ರಾರ್ಥನೆಮಾಡುವವರಾಗಿ ಸಹಕಾರಿಗಳಾಗಿರುವದರಿಂದ ಆತನು ಇನ್ನು ಮೇಲೆಯೂ ತಪ್ಪಿಸುವನೆಂದು ಆತನಲ್ಲಿ ನಿರೀಕ್ಷೆಯಿಟ್ಟವರಾಗಿದ್ದೇವೆ. ಹೀಗೆ ಅನೇ ಕರ ವಿಜ್ಞಾಪನೆಗಳಿಂದ ನಮಗೆ ದೊರಕುವ ಉಪಕಾರಕ್ಕಾಗಿ ನಮ್ಮ ನಿಮಿತ್ತ ಅನೇಕ ರಿಂದ ದೇವರಿಗೆ ಕೃತಜ್ಞತಾಸ್ತುತಿ ಉಂಟಾಗುವದು.

ನಾವು ಕೇವಲ ಮಾನುಷಜ್ಞಾನವನ್ನು ಬಳಸದೆ ದೇವರ ಕೃಪೆಯನ್ನು ಆಶ್ರಯಿಸಿ, 12 ಆತನಿಂದಾಗುವ ಪವಿತ್ರತ್ವವೂ ನಿಷ್ಕಪಟತ್ವವೂ ಉಳ್ಳವರಾಗಿ ಈ ಲೋಕದಲ್ಲಿ ಮುಖ್ಯ ವಾಗಿ ನಿಮ್ಮ ವಿಷಯದಲ್ಲಿ ನಡಕೊಂಡೆವೆಂದು ನಮ್ಮ ಮನಸ್ಸು ನಮಗೆ ಸಾಕ್ಷಿ ಹೇಳು ತ್ತದೆ; ಇದೇ ನಮಗಿರುವ ಉಲ್ಲಾಸ. ನೀವು ನಮ್ಮ ಪತ್ರಿಕೆಗಳಲ್ಲಿ ಓದಿ ಒಪ್ಪಿಕೊಂಡ 13 ಸಂಗತಿಗಳನ್ನೇ ಅಲ್ಲದೆ ಬೇರೆ ಯಾವದನ್ನೂ ನಾವು ನಿಮಗೆ ಬರೆಯಲಿಲ್ಲ. ನಾವು 14 ನಿಮಗೆ ಉಲ್ಲಾಸಕಾರಣವಾಗಿದ್ಧೇವೆಂಬುವದನ್ನು ನೀವು ಸ್ವಲ್ಪಮಟ್ಟಿಗೆ ಒಪ್ಪಿಕೊಂಡಂತೆ ಯೇ ಕಡೇ ತನಕ ಒಪ್ಪಿಕೊಳ್ಳುವಿರೆಂದು ನಿರೀಕ್ಷಿಸುತ್ತೇನೆ. ಹಾಗೆಯೇ ನೀವೂ ನಮ್ಮ ಕರ್ತನಾದ ಯೇಸುವಿನ ಪ್ರತ್ಯಕ್ಷತೆಯಲ್ಲಿ ನಮಗೆ ಉಲ್ಲಾಸಕಾರಣವಾಗುವಿರಿ ಎಂದು ನಿರೀಕ್ಷಿಸುತ್ತೇನೆ.

ಪೌಲನು ತಾನು ಕೊರಿಂಥ ಪಟ್ಟಣಕ್ಕೆ ಬಾರದಿದ್ದದ್ದಕ್ಕೆ ಕಾರಣವನ್ನು ತಿಳಿಸಿ ಅಲ್ಲಿನ ಸಭೆಯವರು ಬಹಿಷ್ಕಾರ ಹೊಂದಿದವನನ್ನು ತಿರಿಗಿ ಸೇರಿಸಿಕೊಳ್ಳಬೇಕೆಂದು ಬುದ್ಧಿ ಹೇಳಿದ್ದು.

ನಾನು ಇಂಥಾ ಭರವಸವುಳ್ಳವನಾಗಿದ್ದು, ನಿಮಗೆ ಎರಡು ಸಾರಿ ನಮ್ಮ ಮೂಲಕ 15 ಕೃಪಾವರ ಉಂಟಾಗಬೇಕೆಂದು ಯೋಚಿಸಿದ್ದೆನು. ಮೊದಲು ನಿಮ್ಮ ಬಳಿಗೆ ಬಂದು ನಿಮ್ಮ 16 ಮಾರ್ಗವಾಗಿ ಮಕೆದೋನ್ಯಕ್ಕೆ ಹೋಗಿ, ಆ ಮೇಲೆ ಮಕೆದೋನ್ಯವನ್ನು ಬಿಟ್ಟು ತಿರಿಗಿ ನಿಮ್ಮ ಬಳಿಗೆ ಬಂದು ನಿಮ್ಮಿಂದ ಯೂದಾಯಕ್ಕೆ ಸಾಗಕಳುಹಿಸಲ್ಪಡಬೇಕೆಂದು ಯೋಚಿ ಸಿದ್ದೆನು. ಇದನ್ನು ಯೋಚಿಸಿದಾಗ ಚಪಲಚಿತ್ತನಾಗಿದ್ದೆನೋ? ನಾನು ಯೋಚಿಸುವ 17 ದನ್ನು ಕೇವಲ ಮಾನುಷಬುದ್ಧಿಯಿಂದ ಯೋಚಿಸಿ, ಹೌದು ಹೌದು ಅಂದ ಮೇಲೆ ಅಲ್ಲ ಅಲ್ಲ ಅನ್ನುವವನಾಗಿದ್ಧೇನೋ? ನಂಬಿಗಸ್ತನಾಗಿರುವ ದೇವರಾಣೆ, ನಾವು ನಿಮಗೆ 18

[1] ಅಪೊಸ್ತಲರ ಕೃತ್ಯ ೧೯, ೨೩—೨೦, ೧ ನೋಡು.

ಹೇಳುವ ಮಾತು ಒಂದು ಸಾರಿ ಹೌದೆಂದು ಒಂದು ಸಾರಿ ಅಲ್ಲವೆಂದು ಇರುವದಿಲ್ಲ.
19 ನಾವು ಅಂದರೆ ನಾನೂ ಸಿಲ್ವಾನನೂ ತಿಮೊಥೆಯನೂ ನಿಮ್ಮಲ್ಲಿ ಪ್ರಸಿದ್ಧಿಪಡಿಸಿದ ದೇವರ ಮಗನಾದ ಯೇಸು ಕ್ರಿಸ್ತನು ಹೌದೆಂತಲೂ ಅಲ್ಲವೆಂತಲೂ ಎರಡು ಪ್ರಕಾರವಾಗಿರಲಿಲ್ಲ;
20 ಆತನಲ್ಲಿ ಹೌದೆಂಬುವದೇ ನೆಲೆಗೊಂಡಿದೆ. ನಿಶ್ಚಯವಾಗಿ ದೇವರ ವಾಗ್ದಾನಗಳು ಎಷ್ಟಿದ್ದರೂ ಕ್ರಿಸ್ತನಲ್ಲೇ ದೃಢವಾಗುತ್ತವೆ. ಆದಕಾರಣ ದೇವರ ಪ್ರಭಾವವು ಪ್ರಕಾಶವಾಗು
21 ವದಕ್ಕೋಸ್ಕರ ಆತನ ಮೂಲಕವಾಗಿ ನಾವು ಆಮೆನ್ ಎಂದು ಹೇಳುತ್ತೇವೆ[1]. ನಮ್ಮನ್ನು ಅಭಿಷೇಕಿಸಿ ಕ್ರಿಸ್ತನ[2] ಅನ್ಯೋನ್ಯತೆಯಲ್ಲಿ ಸೇರಿಸಿ ನಮ್ಮನ್ನು ನಿಮ್ಮೊಂದಿಗೆ ಸ್ಥಿರಪಡಿಸುವ
22 ವನು ದೇವರೇ; ಆತನು ನಮ್ಮ ಮೇಲೆ ಮುದ್ರೆಹಾಕಿ ನಮ್ಮ ಹೃದಯಗಳಲ್ಲಿ ಪವಿತ್ರಾತ್ಮನನ್ನು ಸಂಚಕಾರವಾಗಿ ಕೊಟ್ಟನು.

23 ನಿಮ್ಮ ಮೇಲೆ ಕನಿಕರವಿದ್ದದರಿಂದಲೇ ನಾನು ಕೊರಿಂಥಕ್ಕೆ ಬರಬೇಕೆಂಬ ಅಭಿಪ್ರಾಯವನ್ನು ಬಿಟ್ಟುಬಿಟ್ಟೆನೆಂದು ನನ್ನ ಜೀವದಾಣೆ ಹೇಳುತ್ತೇನೆ; ಅದಕ್ಕೆ ದೇವರೇ ಸಾಕ್ಷಿಯಾ
24 ಗಿರಲಿ. ನಾವು ನಂಬಿಕೆಯ ವಿಷಯದಲ್ಲಿಯೂ ನಿಮ್ಮ ಮೇಲೆ ದೊರೆತನ ಮಾಡುವವರೆಂದು ನನ್ನ ತಾತ್ಪರ್ಯವಲ್ಲ; ನಿಮ್ಮ ಸಂತೋಷಕ್ಕೆ ನಾವು ಸಹಾಯಕರಾಗಿದ್ದೇವೆ;
**2** ನಂಬಿಕೆಯ ವಿಷಯದಲ್ಲಿ ದೃಢ ನಿಂತಿದ್ದೀರಿ. ಆದರೆ ನಾನು ತಿರಿಗಿ ನಿಮ್ಮ ಬಳಿಗೆ ದುಃಖ
2 ದಿಂದ[3] ಬರುವದಿಲ್ಲವೆಂದು ನನ್ನಲ್ಲಿ ತೀರ್ಮಾನಿಸಿಕೊಂಡೆನು. ನಾನು ನಿಮ್ಮನ್ನು ದುಃಖಪಡಿಸಿದರೆ, ನನ್ನನ್ನು ಆನಂದಪಡಿಸುವದಕ್ಕೆ ಯಾರಿದ್ದಾರೆ? ನನ್ನಿಂದ ದುಃಖ ಹೊಂದಿದ
3 ವರೇ ಹೊರತು ಬೇರೆ ಯಾರೂ ಇಲ್ಲವಲ್ಲಾ. ಆದಕಾರಣ ನಾನು ಬಂದಾಗ ನನ್ನನ್ನು ಸಂತೋಷಪಡಿಸತಕ್ಕವರಿಂದ ದುಃಖ ಹೊಂದಬಾರದೆಂದು ಯೋಚಿಸಿ ಆ ಸಂಗತಿಯನ್ನು ಪತ್ರಿಕೆಯ[4] ಮೂಲಕವೇ ತಿಳಿಸಿದೆನು. ನನ್ನ ಸಂತೋಷವು ನಿಮ್ಮೆಲ್ಲರ ಸಂತೋಷವೇ
4 ಎಂದು ತಿಳಿದು ನಿಮ್ಮೆಲ್ಲರ ವಿಷಯದಲ್ಲೂ ನನಗೆ ಭರವಸವಿತ್ತು. ನಿಮಗೆ ದುಃಖವಾಗಬೇಕೆಂತಲ್ಲ, ನಿಮ್ಮ ಮೇಲೆ ನನಗಿರುವ ಅಧಿಕವಾದ ಪ್ರೀತಿಯನ್ನು ನೀವು ತಿಳುಕೊಳ್ಳಬೇಕೆಂತಲೇ ನಾನು ಬಹಳ ಕಣ್ಣೀರು ಬಿಡುತ್ತಾ ಹೃದಯದ ಬಹು ಸಂಕಟದಿಂದಲೂ ವ್ಯಾಕುಲದಿಂದಲೂ ನಿಮಗೆ ಬರೆದೆನು.

5 ದುಃಖವನ್ನು ಉಂಟುಮಾಡಿರುವವನೊಬ್ಬನು ನಿಮ್ಮಲ್ಲಿ ಇದ್ದಾಗ್ಯೂ ಅವನು ನನ್ನನ್ನು ಮಾತ್ರ ದುಃಖಪಡಿಸದೆ ನಿಮ್ಮಲ್ಲಿ ಬಹುಜನರನ್ನೂ ದುಃಖಪಡಿಸಿದ್ದಾನೆ; ಆ ದುಃಖವು
6 ಎಲ್ಲರಲ್ಲಿಯೂ ಉಂಟಾಯಿತೆಂದು ನಾನು ಹೇಳುವದಿಲ್ಲ. ಇಂಥವನಿಗೆ ನಿಮ್ಮಲ್ಲಿ ಹೆಚ್ಚಾದ
7 ಜನರಿಂದುಂಟಾದ ಆ ಶಿಕ್ಷೆಯೇ ಸಾಕು. ಇನ್ನೂ ಅವನನ್ನು ಶಿಕ್ಷಿಸದೆ ಮನ್ನಿಸಿರಿ, ಸಂತೈ
8 ಸಿರಿ; ಇಲ್ಲವಾದರೆ ಅವನು ಅಧಿಕವಾದ ದುಃಖದಲ್ಲಿ ಮುಳುಗಿಹೋದಾನು. ಆದದರಿಂದ ಅವನಿಗೆ ನಿಮ್ಮ ಪ್ರೀತಿಯನ್ನು ನಿಶ್ಚಯಪಡಿಸಬೇಕೆಂದು ನಿಮ್ಮನ್ನು ಬೇಡಿಕೊಳ್ಳುತ್ತೇನೆ.
9 ಸರ್ವ ವಿಷಯದಲ್ಲೂ ನೀವು ವಿಧೇಯರಾಗಿದ್ದೀರೋ ಏನೋ ನಿಮ್ಮ ಗುಣವನ್ನು ಪರೀ
10 ಕ್ಷಿಸಿ ತಿಳುಕೊಳ್ಳಬೇಕೆಂಬುವ ಉದ್ದೇಶದಿಂದಲೇ ಮೊದಲು ಬರೆದೆನು. ನೀವು ಯಾರಿಗೆ ಯಾವದನ್ನು ಮನ್ನಿಸುತ್ತೀರೋ ನಾನು ಸಹ ಮನ್ನಿಸುತ್ತೇನೆ. ನಾನು ಯಾವದನ್ನಾ

[1] ಯೆಶಾಯ ೬೫, ೧೬; ಪ್ರಕಟಣೆ ೩, ೧೪.
[2] ಅಥವಾ, ಅಭಿಷಿಕ್ತನ; ೧ ಯೋಹಾನ ೨, ೨೦. ೨೭.
[3] ಅಥವಾ, ದುಃಖಪಡಿಸುವವನಾಗಿ.
[4] ೧ನೇ ಪತ್ರಿಕೆ ೫ನೇ ಅಧ್ಯಾಯವನ್ನು ನೋಡು.

ದರೂ ಮನ್ನಿಸಿದ್ದರೆ, ಕ್ರಿಸ್ತನ ಸನ್ನಿಧಾನದಲ್ಲಿ ನಿಮ್ಮ ನಿಮಿತ್ತವೇ ಮನ್ನಿಸಿದೆನು. ಸೈತಾನನು ನಮ್ಮನ್ನು ವಂಚಿಸಿ ನಷ್ಟಪಡಿಸಬಾರದು; ಅವನ ಯೋಚನೆಗಳನ್ನು ನಾವು ಅರಿಯದವರಲ್ಲವಲ್ಲಾ. 11

ಸುವಾರ್ತಾಸೇವೆಯ ಶ್ರೇಷ್ಠತೆಯನ್ನು ಕುರಿತದ್ದು.

ಕ್ರಿಸ್ತನ ಸುವಾರ್ತೆಯನ್ನು ಸಾರುವದಕ್ಕಾಗಿ ನಾನು ತ್ರೋವಕ್ಕೆ ಬರಲು, ಕರ್ತನ 12 ಕೃಪೆಯಿಂದ ನನಗೆ ಒಳ್ಳೇ ಸಂದರ್ಭ ಉಂಟಾಯಿತು. ಆದಾಗ್ಯೂ ನನ್ನ ಸಹೋದರ 13 ನಾದ ತೀತನು ನನಗೆ ಸಿಕ್ಕಲಿಲ್ಲವಾದ ಕಾರಣ ನನ್ನ ಆತ್ಮಕ್ಕೆ ಉಪಶಮನವಿಲ್ಲದೆ, ಅಲ್ಲಿದ್ದವರಿಂದ ಕಳುಹಿಸಿಕೊಂಡವನಾಗಿ ಹೊರಟು ಮಕೆದೋನ್ಯಕ್ಕೆ ಬಂದೆನು.

ಕ್ರಿಸ್ತನ ಅನ್ಯೋನ್ಯತೆಯಲ್ಲಿ ನಮ್ಮನ್ನು ಯಾವಾಗಲೂ ಜಯೋತ್ಸವದೊಡನೆ ಮೆರ 14 ಸುತ್ತಾ, ಆತನ ವಿಷಯವಾದ ಜ್ಞಾನವೆಂಬ ಸುವಾಸನೆಯನ್ನು ನಮ್ಮ ಮೂಲಕ ಎಲ್ಲಾ ಸ್ಥಳಗಳಲ್ಲಿ ವ್ಯಾಪನಗೊಳಿಸುತ್ತಾ ಬರುವ ದೇವರಿಗೆ ಸ್ತೋತ್ರವು. ರಕ್ಷಣಾಮಾರ್ಗದಲ್ಲಿ 15 ರುವವರಲ್ಲಿಯೂ ನಾಶನಮಾರ್ಗದಲ್ಲಿರುವವರಲ್ಲಿಯೂ ನಾವು ದೇವರ ಮುಂದೆ ಕ್ರಿಸ್ತನ ಪರಿಮಳವಾಗಿದ್ದೇವೆ. ನಾಶನಮಾರ್ಗದಲ್ಲಿರುವವರಿಗೆ ನಾವು ಮರಣಸೂಚಕವಾದ[1] 16 ವಾಸನೆಯಾಗಿಯೂ ರಕ್ಷಣಾಮಾರ್ಗದಲ್ಲಿರುವವರಿಗೆ ಜೀವಸೂಚಕವಾದ[2] ವಾಸನೆ ಯಾಗಿಯೂ ಇದ್ದೇವೆ. ಇಂಥಾ ಕಾರ್ಯಗಳಿಗೆ ಯಾರು ಯೋಗ್ಯರು? ಆದರೆ ನಾವು 17 ದೇವರ ವಾಕ್ಯವನ್ನು ಕಲಬೆರಿಕೆ ಮಾಡುವವರಾದ ಹೆಚ್ಚು ಪಾಲಿನ ಜನರ ಹಾಗಿರದೆ ನಿಷ್ಕಪಟಿಗಳಾಗಿ ದೇವರಿಂದ ಉಪದೇಶ ಹೊಂದಿದವರಿಗೆ ತಕ್ಕ ಹಾಗೆ ಕ್ರಿಸ್ತನ ಅನ್ಯೋನ್ಯತೆಯಲ್ಲಿದ್ದುಕೊಂಡು ದೇವರ ಸಮಕ್ಷಮದಲ್ಲಿಯೇ ಮಾತಾಡುತ್ತೇವೆ.

**3** ನಾವೇ ನಮ್ಮನ್ನು ತಿರಿಗಿ ಹೊಗಳಿಕೊಳ್ಳುವದಕ್ಕೆ ಪ್ರಾರಂಭಿಸುತ್ತೇವೋ? ಇಲ್ಲವೆ, ಕೆಲವರಿಗೆ ಬೇಕಾಗಿರುವ ಪ್ರಕಾರ ನಿಮಗೆ ತೋರಿಸತಕ್ಕ ಯೋಗ್ಯತಾಪತ್ರಗಳು ನಮಗೆ ಅಗತ್ಯವೋ? ಅಥವಾ ಅಂಥಾ ಪತ್ರಗಳನ್ನು ನಿಮ್ಮಿಂದ ಪಡಕೊಳ್ಳಬೇಕೋ? 2 ನೀವೇ ನಮ್ಮ ಯೋಗ್ಯತಾಪತ್ರ; ಅದು ನಮ್ಮ ಹೃದಯಗಳಲ್ಲೇ ಬರೆದದೆ; ಆ ಪತ್ರವನ್ನು ಎಲ್ಲರೂ ಬಲ್ಲರು, ಎಲ್ಲರೂ ಓದುತ್ತಾರೆ. 3 ಕ್ರಿಸ್ತನು ನಮ್ಮ ಕೈಯಿಂದ ಬರಸಿಕೊಟ್ಟ ಪತ್ರವಾಗಿದ್ದೀರೆಂಬುವದು ಪ್ರತ್ಯಕ್ಷವಾಗಿಯೇ ಇದೆ; ಅದು ಮಸಿಯಿಂದ ಬರೆದದ್ದಲ್ಲ, ಜೀವವುಳ್ಳ ದೇವರ ಆತ್ಮದಿಂದಲೇ ಬರೆದದ್ದು; ಕಲ್ಲಿನ ಮೇಲೆಯಲ್ಲ, ಮನುಷ್ಯಹೃದಯಗಳೆಂಬ ಹಲಿಗೆಗಳ ಮೇಲೆ ಬರೆದದ್ದು. 4 ಇಂಥಾ ಭರವಸವು ಕ್ರಿಸ್ತನ ಮೂಲಕವೇ ದೇವರ ಮುಂದೆ ನಮಗುಂಟು. 5 ನಮ್ಮಿಂದಲೇ ಏನಾದರೂ ಉಂಟಾಯಿತೆಂದು ತೀರ್ಮಾನಿಸಿಕೊಳ್ಳುವದಕ್ಕೆ ನಮ್ಮಷ್ಟಕ್ಕೆ ನಾವೇ ಸಮರ್ಥರೆಂತಲ್ಲ; ನಮಗಿರುವ ಸಾಮರ್ಥ್ಯವು ದೇವರಿಂದಲೇ ಬಂದದ್ದು; 6 ಆತನು ಹೊಸ ಒಡಂಬಡಿಕೆಗೆ ಸೇವಕರಾಗಿರುವ ಸಾಮರ್ಥ್ಯವನ್ನು ನಮಗೆ ಅನುಗ್ರಹಿಸಿದ್ದಾನೆ. ಈ ಒಡಂಬಡಿಕೆಯು ಲಿಖಿತರೂಪವಾದ ನಿಯಮಗಳುಳ್ಳದ್ದಾಗಿರದೆ ದೇವರಾತ್ಮ

[1] ಮೂಲ: ಮರಣದಿಂದ ಹುಟ್ಟಿ ಮರಣದಲ್ಲಿ ಸೇರಿಸುವ.

[2] ಮೂಲ: ಜೀವದಿಂದ ಹುಟ್ಟಿ ಜೀವದಲ್ಲಿ ಸೇರಿಸುವ.

ಸಂಬಂಧವಾದದ್ದು[1] ಆಗಿದೆ. ಲಿಖಿತರೂಪವಾದ ಆ ನಿಯಮವು ಮರಣವನ್ನು ವಿಧಿ ಸುತ್ತದೆ; ದೇವರಾತ್ಮಸಂಬಂಧವಾದದ್ದು[1] ಸತ್ತವರನ್ನು ಬದುಕಿಸುತ್ತದೆ.

7 ಮರಣ ವಿಧಿಸುವ ನಿಯಮದ ಸೇವೆಯು ಕಲ್ಲಿನ ಮೇಲೆ ಲಿಖಿತವಾದ ಅಕ್ಷರಗಳಲ್ಲಿ ಆಧಾರಗೊಂಡಿದ್ದಾಗ್ಯೂ ಪ್ರಭಾವದಿಂದ ಕೂಡಿದ್ದಾಗಿತ್ತು. ಆ ಪ್ರಭಾವದಿಂದ ಮೋಶೆಯ ಮುಖಕ್ಕೆ ಬಂದ ಪ್ರಕಾಶವು ಕುಂದಿಹೋಗುವಂಥಾದ್ದಾಗಿದ್ದರೂ ಅದರ ನಿಮಿತ್ತ ಇಸ್ರ 8 ಯೇಲ್ಯರು ಅವನ ಮುಖವನ್ನು ನೋಡಲಾರದೆ ಇದ್ದರು[2]. ಹೀಗಿದ್ದ ಮೇಲೆ ದೇವ 9 ರಾತ್ಮಸಂಬಂಧವಾದ[3] ಸೇವೆಯು ಎಷ್ಟೋ ಹೆಚ್ಚಾಗಿ ಪ್ರಭಾವವುಳ್ಳದ್ದಾಗಿರಬೇಕು. ಅಪರಾಧನಿರ್ಣಯಕ್ಕೆ ಸಾಧನವಾಗಿರುವ ಸೇವೆಯು ಪ್ರಭಾವದಿಂದಿರಲಾಗಿ ನೀತಿಗೆ ಸಾಧನವಾ 10 ಗಿರುವ ಸೇವೆಯು ಎಷ್ಟೋ ಅಧಿಕವಾದ ಪ್ರಭಾವವುಳ್ಳದ್ದಾಗಿರಬೇಕು. ಅಧಿಕವಾದ ಪ್ರಭಾವವುಳ್ಳದ್ದು ಬಂದದರಿಂದ ಮೊದಲಿದ್ದ ಪ್ರಭಾವವು ಅದರ ಬಳಿಯಲ್ಲಿ ಪ್ರಭಾವವಿಲ್ಲ 11 ದ್ದಾಯಿತು. ಇಲ್ಲದೆಹೋಗುವಂಥಾದ್ದು ಪ್ರಭಾವವುಳ್ಳದ್ದಾಗಿದ್ದರೆ, ಶಾಶ್ವತವಾಗಿ ಇರುವಂಥಾದ್ದು ಬಹು ಹೆಚ್ಚಾಗಿ ಪ್ರಭಾವವುಳ್ಳದ್ದಾಗಿರಬೇಕಲ್ಲವೇ?

12 ಆದದರಿಂದ, ನಾವು ಇಂಥಾ ಭರವಸವುಳ್ಳವರಾಗಿದ್ದು ಧಾರಾಳವಾಗಿ ಮಾತಾಡು 13 ತ್ತೇವೆ. ನಾವು ಮೋಶೆಯಂತೆ ಮಾಡುವದಿಲ್ಲ, ಗತಿಸಿಹೋಗುವಂಥಾದ್ದರ ಅಂತ್ಯವನ್ನು ಇಸ್ರಯೇಲ್ಯರು ಕಣ್ಣಿಟ್ಟು ನೋಡಬಾರದೆಂದು ಅವನು ತನ್ನ ಮುಖದ ಮೇಲೆ ಮುಸುಕು 14 ಹಾಕಿಕೊಳ್ಳುತ್ತಿದ್ದನು. ಆದರೆ ಅವರ ಬುದ್ಧಿ ಮಂದವಾಯಿತು; ಈ ದಿನದ ವರೆಗೂ ಹಳೇ ಒಡಂಬಡಿಕೆಯು ಪಾರಾಯಣವಾಗುವಾಗ ಅದು ಕ್ರಿಸ್ತನಲ್ಲಿ ಗತಿಸಿಹೋಗುತ್ತದೆಂಬುವದು ಅವರಿಗೆ ಪ್ರಕಟವಾಗದೆ ಇರುವದರಿಂದ ಅದೇ ಮುಸುಕು ಎತ್ತಲ್ಪಡದೆ 15 ಇರುತ್ತದೆ. ಈ ದಿನದ ವರೆಗೂ, ಮೋಶೆಯ ಗ್ರಂಥಪಾರಾಯಣವು ಆಗುವಾಗೆಲ್ಲಾ, 16 ಮುಸುಕು ಅವರ ಹೃದಯದ ಮೇಲೆ ಇರುತ್ತದೆ. ಅವರ ಹೃದಯವು ಕರ್ತನ ಕಡೆಗೆ 17 ತಿರುಗಿಕೊಂಡಾಗಲೇ ಆ ಮುಸುಕು ತೆಗೆಯಲ್ಪಡುವದು[4]. ಆ ಕರ್ತನು ದೇವರಾತ್ಮನೇ; 18 ಕರ್ತನ ಆತ್ಮನು ಯಾರಲ್ಲಿದ್ದಾನೋ ಅವರಿಗೆ ಬಿಡುಗಡೆ ಉಂಟು. ನಾವೆಲ್ಲರೂ ಮುಸುಕು ತೆಗೆದಿರುವ ಮುಖದಿಂದ ಕರ್ತನ ಪ್ರಭಾವವನ್ನು ದರ್ಪಣದಲ್ಲಿ ಕಾಣಿಸುತ್ತೋ ಎಂಬಂತೆ ದೃಷ್ಟಿಸುವವರಾಗಿದ್ದು ಪ್ರಭಾವದಿಂದ ಅಧಿಕ ಪ್ರಭಾವಕ್ಕೆ ಹೋಗುತ್ತಾ ಆ ಪ್ರಭಾವದ ಸಾರೂಪ್ಯವುಳ್ಳವರೇ ಆಗುತ್ತೇವೆ; ಇದು ದೇವರಾತ್ಮನಾಗಿರುವ ಕರ್ತನ ಕೆಲಸಕ್ಕನುಸಾರವಾದದ್ದೇ.[5]

ಸುವಾರ್ತಾಸೇವೆಯಲ್ಲಿ ಎಂಥಾ ಕಷ್ಟಗಳು ಸಂಭವಿಸಿದಾಗ್ಯೂ ದೇವರ ಸೇವಕರು ಧೈರ್ಯಗೆಡದೆ ಅದನ್ನು ನಡಿಸುವರು ಎಂಬುವದು.

**4** ಆದದರಿಂದ ನಾವು ದೇವರ ಕರುಣೆಯಿಂದ ಈ ಸೇವೆಯನ್ನು ಹೊಂದಿದವರಾಗಿರಲಾಗಿ 2 ಧೈರ್ಯಗೆಟ್ಟು ಹಿಂದೆಗಿಯುವದಿಲ್ಲ. ನಾಚಿಕೆಯನ್ನು ಹುಟ್ಟಿಸುವ ಗುಪ್ತ ಕಾರ್ಯಗಳನ್ನು

---

[1] ಅಥವಾ, ಆತ್ಮೀಯವಾದದ್ದು. [2] ಹೊರಡೋಣ ೩೪, ೨೯—೩೫. [3] ಅಥವಾ, ಆತ್ಮೀಯವಾದ.
[4] ಹೊರಡೋಣ ೩೪, ೩೪. ಗ್ರೀಕ್ ಭಾಷಾಂತರ. [5] ಅಥವಾ, ದೃಷ್ಟಿಸುವವರಾಗಿದ್ದು ರೂಪಾಂತರವಾಗಿ ಅದಕ್ಕೆ ಸಾರೂಪ್ಯವುಳ್ಳವರಾಗುತ್ತೇವೆ. ದೇವರಾತ್ಮನಾಗಿರುವ ಕರ್ತನ ಯತ್ನದ ಮೂಲಕ ಆತನ ಪ್ರಭಾವದಿಂದ ನಮಗೆ ಪ್ರಭಾವವಾಗುತ್ತದೆ.

ನಾವು ಬಿಟ್ಟುಬಿಟ್ಟು, ತಂತ್ರದಲ್ಲಿ ನಡೆಯದೆ, ದೇವರ ವಾಕ್ಯವನ್ನು ಕೆಡಿಸದೆ, ಸತ್ಯವನ್ನು ಪರಿಷ್ಕಾರವಾಗಿ ಬೋಧಿಸುತ್ತಾ, ನಾವು ಸಜ್ಜನರೆಂದು ಪ್ರತಿಮನುಷ್ಯನ ಮನಸ್ಸು ದೇವರ ಮುಂದೆ ಒಪ್ಪಬೇಕಾದ ರೀತಿಯಲ್ಲಿ ನಡೆಯುತ್ತೇವೆ. 3 ನಾವು ಸಾರುವ ಸುವಾರ್ತೆಯು ಕೆಲವರಿಗೆ ಮರೆಯಾಗಿರುವದಾದರೆ, ನಾಶನಮಾರ್ಗದಲ್ಲಿರುವವರಿಗೇ ಮರೆಯಾಗಿರುವದು. 4 ಇವರಲ್ಲಿ ದೇವರ ಪ್ರತಿರೂಪವಾಗಿರುವ ಕ್ರಿಸ್ತನ ಪ್ರಭಾವವನ್ನು ತೋರಿಸುವ ಸುವಾರ್ತೆಯ ಪ್ರಕಾಶವು ಉದಯವಾಗಬಾರದೆಂದು ಈ ಪ್ರಪಂಚದ ದೇವರು ನಂಬಿಕೆಯಿಲ್ಲದವರ ಮನಸ್ಸನ್ನು ಮಂಕು ಮಾಡಿದನು. 5 ನಮ್ಮನ್ನೇ ಪ್ರಸಿದ್ಧಿಪಡಿಸಿಕೊಳ್ಳದೆ; ನಮ್ಮನ್ನು ಯೇಸುವಿನ ನಿಮಿತ್ತ ನಿಮ್ಮ ದಾಸರೆಂತಲೂ ಕ್ರಿಸ್ತೇಸುವನ್ನೇ ಕರ್ತನೆಂತಲೂ ಪ್ರಸಿದ್ಧಿಪಡಿಸುತ್ತೇವೆ. 6 ಯಾಕಂದರೆ ಕತ್ತಲೆಯೊಳಗಿಂದ ಬೆಳಕು ಹೊಳೆಯಲಿ ಎಂದು ಹೇಳಿದ ದೇವರು ತಾನೇ ಯೇಸು ಕ್ರಿಸ್ತನ ಮುಖದಲ್ಲಿ ತೋರುವ ದೇವಪ್ರಭಾವಜ್ಞಾನವೆಂಬ ಪ್ರಕಾಶವು ಅನೇಕರಿಗೆ ಉಂಟಾಗುವದಕ್ಕಾಗಿ ನಮ್ಮ ಹೃದಯಗಳಲ್ಲಿ ಹೊಳೆದನು.

7 ಬಲಾಧಿಕ್ಯವು ದೇವರದೇ ಹೊರತು ನಮ್ಮೊಳಗಿಂದ ಬಂದದ್ದಲ್ಲವೆಂದು ತೋರುವದಕ್ಕಾಗಿ, ಈ ನಿಕ್ಷೇಪವು ಮಣ್ಣಿನ ಘಟಗಳಲ್ಲಿ ನಮಗುಂಟು. 8 ಸರ್ವವಿಧದಲ್ಲಿಯೂ ನಮಗೆ ಸಂಕಟವಿದ್ದಾಗ್ಯೂ ನಾವು ಮುತ್ತಲ್ಪಡುವದಿಲ್ಲ; ನಾವು ದಿಕ್ಕುಕಾಣದವರಾಗಿದ್ದಾಗ್ಯೂ ಕೇವಲ ದೆಸೆಗೆಟ್ಟವರಲ್ಲ; 9 ಹಿಂಸೆಪಡುವವರಾಗಿದ್ದಾಗ್ಯೂ ಕೈಬಿಡಲ್ಪಟ್ಟವರಲ್ಲ; ಕೆಡವಲ್ಪಟ್ಟವರಾಗಿದ್ದಾಗ್ಯೂ ಪ್ರಾಣನಷ್ಟಪಡುವವರಲ್ಲ; 10 ಯೇಸುವಿನ ಜೀವವು ನಮ್ಮ ದೇಹದಲ್ಲಿ ಉಂಟೆಂದು ತೋರಿಬರುವದಕ್ಕಾಗಿ, ಯೇಸುವಿನ ಮರಣಾವಸ್ಥೆಯನ್ನು ನಾವು ಯಾವಾಗಲೂ ದೇಹದಲ್ಲಿ ಅನುಭವಿಸುತ್ತಾ ತಿರುಗಾಡುತ್ತೇವೆ. 11 ಯೇಸುವಿನ ಜೀವವು ನಮ್ಮ ಮರ್ತ್ಯ ಶರೀರದಲ್ಲಿ ಉಂಟೆಂದು ತೋರಿಬರುವದಕ್ಕಾಗಿ, ಬದುಕಿರುವ ನಾವು ಯೇಸುವಿನ ನಿಮಿತ್ತ ಯಾವಾಗಲೂ ಮರಣಕ್ಕೆ ಒಪ್ಪಿಸಲ್ಪಡುತ್ತಾ ಇದ್ದೇವೆ. 12 ಹೀಗೆ ನಮ್ಮಲ್ಲಿ ಮರಣವು ಪ್ರವರ್ತಿಸುತ್ತದೆ; ಆದರೆ ನಿಮ್ಮಲ್ಲಿ ಜೀವವು ಪ್ರವರ್ತಿಸುತ್ತದೆ.

13 ಹೀಗಿದ್ದಾಗ್ಯೂ—ನಂಬಿದೆನು, ಆದದರಿಂದ ಮಾತಾಡಿದೆನು ಎಂಬ ಶಾಸ್ತ್ರೋಕ್ತಿಯಲ್ಲಿ[1] ಕಾಣುವ ನಂಬಿಕೆಯ ಭಾವವನ್ನೇ ಹೊಂದಿ, ನಾವೂ ನಂಬಿದವರು, ಆದದರಿಂದ ಮಾತಾಡುತ್ತೇವೆ. 14 ಕರ್ತನಾದ ಯೇಸುವನ್ನು ಎಬ್ಬಿಸಿದಾತನು ನಮ್ಮನ್ನು ಸಹ ಯೇಸುವಿನೊಂದಿಗೆ ಎಬ್ಬಿಸಿ ನಿಮ್ಮ ಜೊತೆಯಲ್ಲಿ ತನ್ನ ಮುಂದೆ ನಿಲ್ಲಿಸುವನೆಂದು ತಿಳಿದವರಾಗಿದ್ದೇವೆ. 15 ಆ ಬಾಧೆಗಳೆಲ್ಲಾ ನಿಮ್ಮ ಹಿತಕ್ಕಾಗಿಯೇ ನಮಗೆ ಸಂಭವಿಸುತ್ತವೆ. ಅವುಗಳಲ್ಲಿ ಅಧಿಕವಾಗಿ ದೊರಕುವ ದೈವಕೃಪೆಯು ಬಹು ಜನರೊಳಗೆ ಕೃತಜ್ಞತೆಯನ್ನು ಹುಟ್ಟಿಸುವದರಿಂದ ದೇವರಿಗೆ ಹೆಚ್ಚಾದ ಸ್ತೋತ್ರವನ್ನು ಉಂಟುಮಾಡುವದು.

#### ಪರಲೋಕಭಾಗ್ಯವನ್ನು ಆಲೋಚಿಸುವಾಗ್ಯೆ ಕ್ರಿಸ್ತನಲ್ಲಿರುವವರಿಗೆ ಧೈರ್ಯವಾಗುತ್ತದೆ ಎಂಬುವದು.

16 ಆದದರಿಂದ ನಾವು ಧೈರ್ಯಗೆಡುವದಿಲ್ಲ. ನಮ್ಮ ದೇಹವು ನಾಶವಾಗುತ್ತಾ ಇದ್ದರೂ ನಮ್ಮ ಅಂತರ್ಯವು ದಿನೇದಿನೇ ಹೊಸದಾಗುತ್ತಾ ಬರುತ್ತದೆ. 17 ಹ್ಯಾಗಂದರೆ ಕ್ಷಣಮಾತ್ರ

[1] ಕೀರ್ತನೆ ೧೧೬, ೧೦.

ವಿರುವ ನಮ್ಮ ಹಗುರವಾದ ಸಂಕಟವು ಅತ್ಯಂತಾಧಿಕವಾದ ಪ್ರತಿಫಲವನ್ನು ಉಂಟು
ಮಾಡಿ ನಮಗೆ ನಿರಂತರವಾಗಿರುವ ಗೌರವವಾದ ಪ್ರಭಾವವನ್ನು ದೊರಕಿಸುತ್ತದೆ.
18 ನಾವು ಕಾಣುವಂಥಾದ್ದನ್ನು ಲಕ್ಷಿಸದೆ ಕಾಣದಿರುವಂಥಾದ್ದನ್ನು ಲಕ್ಷಿಸುವವರಾಗಿದ್ದೇವೆ.
ಕಾಣುವಂಥಾದ್ದು ಸ್ವಲ್ಪ ಕಾಲ ಮಾತ್ರ ಇರುವದು; ಕಾಣದಿರುವಂಥಾದ್ದು ಸದಾಕಾಲವೂ
**5** ಇರುವದು. ಭೂಮಿಯ ಮೇಲಿರುವ ನಮ್ಮ ಮನೆಯು ಅಂದರೆ ನಮ್ಮ ದೇಹವೆಂಬ
ಗುಡಾರವು ಕಿತ್ತುಹಾಕಲ್ಪಟ್ಟರೂ ದೇವರಿಂದುಂಟಾದ ಒಂದು ಕಟ್ಟಡವು ಪರಲೋಕದಲ್ಲಿ
ನಮಗುಂಟೆಂದು ಬಲ್ಲೆವು. ಅದು ಕೈಯಿಂದ ಕಟ್ಟಿದ ಮನೆಯಾಗಿರದೆ ನಿತ್ಯವಾಗಿರು
2 ವಂಥಾದ್ದಾಗಿದೆ. ನಾವು ಈಗಿನ ದೇಹದಲ್ಲಿರುವ ವರೆಗೂ ನರಳುತ್ತೇವೆ. ಪರಲೋಕ
ದಿಂದ ದೊರಕುವ ನಮ್ಮ ನಿವಾಸವನ್ನು ನಾವು ದೇಹದ ಮೇಲೆ ಧರಿಸಿಕೊಳ್ಳಬೇಕೆಂದು
3 ಅಪೇಕ್ಷಿಸುತ್ತೇವೆ, ಅಂದರೆ ಆ ದಿನದಲ್ಲಿ ನಾವು ಇನ್ನೂ ದೇಹದಲ್ಲಿಯೇ ಇದ್ದರೆ[1] ಆ ನಿವಾ
4 ಸವನ್ನು ದೇಹದ ಮೇಲೆಯೇ ಧರಿಸಿಕೊಳ್ಳುವೆವು. ಈ ಗುಡಾರದಲ್ಲಿರುವವರಾದ ನಾವು
ಭಾರ ಹೊತ್ತುಕೊಂಡವರಾಗಿ ನರಳುತ್ತೇವೆ; ಇದು ಕಳಚಿಹೋಗಬೇಕೆಂಬುವದು ನಮ್ಮ
ಇಷ್ಟವಲ್ಲ; ಮರ್ತ್ಯವಾದದ್ದು ನುಂಗಿಹೋಗಿ ಜೀವವೊಂದೇ ಉಳಿಯುವಂತೆ, ಈ ಗುಡಾ
5 ರದ ಮೇಲೆ ಆ ನಿವಾಸವನ್ನು ಧರಿಸಿಕೊಳ್ಳಬೇಕೆಂಬುವದೇ ನಮ್ಮ ಇಷ್ಟ. ಆ ಸ್ಥಿತಿಗಾಗಿ
ನಮ್ಮನ್ನು ಸಿದ್ಧಮಾಡಿರುವವನು ದೇವರೇ; ಆತನು ಪವಿತ್ರಾತ್ಮವರವನ್ನು ಸಂಚಕಾರವಾಗಿ
ಅನುಗ್ರಹಿಸಿದ್ದಾನೆ.

6-7 ಹೀಗಿರುವದರಿಂದ ನಾವು ಯಾವಾಗಲೂ ಧೈರ್ಯವುಳ್ಳವರಾಗಿದ್ದೇವೆ. ನಾವು ನೋಡು
ವವರಾಗಿ ನಡೆಯದೆ ನಂಬುವವರಾಗಿಯೇ ನಡೆಯುತ್ತೇವಾದ್ದರಿಂದ ದೇಹದಲ್ಲಿ ವಾಸಿಸುವ
8 ವರೆಗೂ ಕರ್ತನಿಗೆ ದೂರದಲ್ಲಿರುವ ಪ್ರವಾಸಿಗಳಾಗಿದ್ದೇವೆಂಬುವದನ್ನು ಬಲ್ಲೆವು. ಇದನ್ನು
ಆಲೋಚಿಸಿ ನಾವು ಧೈರ್ಯವುಳ್ಳವರಾಗಿದ್ದು ದೇಹವನ್ನು ಬಿಟ್ಟು ಕರ್ತನ ಬಳಿಯಲ್ಲಿರು
9 ವದೇ ಉತ್ತಮವೆಂದು ಎಣಿಸುತ್ತೇವೆ. ಆದದರಿಂದ ನಾವು ದೇಹವೆಂಬ ಮನೆಯಲ್ಲಿದ್ದರೂ
ಸರಿಯೇ, ಅದನ್ನು ಬಿಟ್ಟಿದ್ದರೂ ಸರಿಯೇ, ಕರ್ತನಿಗೆ ಮೆಚ್ಚುವವರಾಗಿರಬೇಕೆಂಬುವದೇ
10 ನಮ್ಮ ಗುರಿಯಾಗಿದೆ. ಯಾಕಂದರೆ ಪ್ರತಿಯೊಬ್ಬನು ತನ್ನ ದೇಹದ ಮೂಲಕ ನಡಿಸಿದ
ಒಳ್ಳೇದ್ದಕ್ಕಾಗಲಿ ಕೆಟ್ಟದ್ದಕ್ಕಾಗಲಿ ಸರಿಯಾದ ಪ್ರತಿಫಲವನ್ನು ಹೊಂದುವದಕ್ಕೋಸ್ಕರ
ನಾವೆಲ್ಲರೂ ಕ್ರಿಸ್ತನ ನ್ಯಾಯಾಸನದ ಮುಂದೆ ಕಾಣಿಸಿಕೊಳ್ಳಬೇಕು.

**ಅಪೊಸ್ತಲರು ಕ್ರಿಸ್ತನ ಪ್ರೀತಿಯಿಂದ ಪ್ರೇರಣೆ ಹೊಂದಿ ಸಮಾಧಾನವಾಕ್ಯವನ್ನು ಹೇಳುವ ರಾಯಭಾರಿಗಳಾಗಿ ಎಲ್ಲಾ ಸಂಗತಿಗಳಲ್ಲಿ ತಮ್ಮನ್ನು ದೇವರ ಸೇವಕರೆಂದು ತೋರಿಸಿಕೊಂಡದ್ದು.**

11 ಕರ್ತನ ಭಯವು ನಮಗಿರುವದರಿಂದ ನಾವು ಮನುಷ್ಯರನ್ನು ಒಲಿಸಿಕೊಳ್ಳುತ್ತೇವೆ.
ನಾವು ಯಥಾರ್ಥರೆಂಬುವದು ದೇವರಿಗೆ ಗೊತ್ತುಂಟು; ನಿಮ್ಮ ಮನಸ್ಸಿಗೆ ಕೂಡಾ ಗೊತ್ತಾ
12 ಗಿದೆ ಎಂದು ನಂಬಿಕೊಂಡಿದ್ದೇನೆ. ನಾವು ನಮ್ಮನ್ನು ತಿರಿಗಿ ನಿಮ್ಮ ಮುಂದೆ ಹೊಗಳಿ
ಕೊಳ್ಳುವದಿಲ್ಲ; ಆದರೆ ಯಾರು ಹೃದಯದ ವಿಷಯದಲ್ಲಿ ಹಿಗ್ಗದೆ ತೋರಿಕೆಯ ವಿಷಯ

---

1) ಮೂಲ: ನಿರ್ವಾಣರಾಗಿರದಿದ್ದರೆ.

ದಲ್ಲಿ ಮಾತ್ರ ಹಿಗ್ಗುತ್ತಾರೋ ಅವರಿಗೆ ಪ್ರತ್ಯುತ್ತರ ಹೇಳುವದಕ್ಕೆ ನಿಮಗೆ ಆಧಾರವಿರ
ಬೇಕೆಂದು ನಮ್ಮ ವಿಷಯದಲ್ಲಿ ಹಿಗ್ಗುವದಕ್ಕೆ ನಿಮಗೆ ಆಸ್ಪದ ಕೊಡುತ್ತೇವೆ. ನಮಗೆ 13
ಬುದ್ಧಿಪರವಶವಾಗಿದ್ದರೆ, ಅದು ದೇವರ ಮಹಿಮೆಗಾಗಿಯೇ ಅದೆ; ನಮಗೆ ಸ್ವಸ್ಥಬುದ್ಧಿ
ಇದ್ದರೆ, ಅದು ನಿಮ್ಮ ಪ್ರಯೋಜನಕ್ಕಾಗಿ ಅದೆ. ಕ್ರಿಸ್ತನ ಪ್ರೀತಿಯು ನಮಗೆ ಒತ್ತಾಯ 14
ಮಾಡುತ್ತದೆ; ಎಲ್ಲರಿಗೋಸ್ಕರ ಒಬ್ಬನು ಸತ್ತದ್ದರಿಂದ ಎಲ್ಲರೂ ಸತ್ತಂತಾಯಿತೆಂದು ನಿಶ್ಚ
ಯಿಸಿಕೊಂಡೆವು. ಜೀವಿಸುವವರು ಇನ್ನು ಮೇಲೆ ತಮಗಾಗಿ ಜೀವಿಸದೆ ತಮಗೋಸ್ಕರ 15
ಸತ್ತು ಎದ್ದುಬಂದಾತನಿಗಾಗಿ ಜೀವಿಸಬೇಕೆಂತಲೇ ಆತನು ಎಲ್ಲರಿಗೋಸ್ಕರ ಸತ್ತನು.

ಹೀಗಿರಲಾಗಿ ಇಂದಿನಿಂದ ನಾವು ಯಾರನ್ನೂ ಶರೀರಸಂಬಂಧವಾಗಿ ಅರಿತುಕೊಳ್ಳುವ 16
ದಿಲ್ಲ; ಕ್ರಿಸ್ತನನ್ನು ಕೂಡಾ ನಾವು ಶರೀರಸಂಬಂಧವಾಗಿ ತಿಳಿದಿದ್ದಾಗ್ಯೂ ಇನ್ನು ಮುಂದೆ
ಆತನನ್ನು ಹಾಗೆ ತಿಳುಕೊಳ್ಳುವದಿಲ್ಲ. ಹೀಗಿರಲಾಗಿ ಯಾವನಾದರೂ ಕ್ರಿಸ್ತನಲ್ಲಿದ್ದರೆ, 17
ಅವನು ನೂತನ ಸೃಷ್ಟಿಯಾದನು. ಇಗೋ, ಪೂರ್ವಸ್ಥಿತಿ ಹೋಗಿ ಎಲ್ಲಾ ನೂತನವಾ
ಯಿತು. ಇದೆಲ್ಲಾ ದೇವರಿಂದಲೇ ಉಂಟಾದದ್ದು. ಆತನು ಕ್ರಿಸ್ತನ ಮೂಲಕ ನಮ್ಮನ್ನು 18
ತನಗೆ ಸಮಾಧಾನ ಪಡಿಸಿಕೊಂಡು, ಸಮಾಧಾನವಿಷಯವಾದ ಸೇವೆಯನ್ನು ನಮಗೆ
ಅನುಗ್ರಹಿಸಿದ್ದಾನೆ; ಆ ಸಮಾಧಾನವಾಕ್ಯವೇನಂದರೆ, ದೇವರು ಮನುಷ್ಯರ ಅಪರಾಧ 19
ಗಳನ್ನು ಅವರ ಲೆಕ್ಕಕ್ಕೆ ಹಾಕದೆ ಲೋಕವನ್ನು ಕ್ರಿಸ್ತನಲ್ಲಿ ತನಗೆ ಸಮಾಧಾನಪಡಿಸಿಕೊಳ್ಳು
ತ್ತಿದ್ದನೆಂಬುವದೇ. ಅದನ್ನು ಸಾರುವ ಸೇವೆಗೆ ನಮ್ಮನ್ನು ನೇಮಿಸಿದ್ದಾನೆ.

ನಾವು ಕ್ರಿಸ್ತನ ರಾಯಭಾರಿಗಳಾಗಿದ್ದೇವೆ. ದೇವರೇ ನಮ್ಮ ಮೂಲಕ ಬುದ್ಧಿಹೇಳುವ 20
ಹಾಗಾಯಿತು. ದೇವರೊಂದಿಗೆ ಸಮಾಧಾನವಾಗಿರೆಂದು ಕ್ರಿಸ್ತನ ಹೆಸರಿನಲ್ಲಿ ನಿಮ್ಮನ್ನು
ಬೇಡಿಕೊಳ್ಳುತ್ತೇವೆ. ನಾವು ಆತನಲ್ಲಿ ದೇವರಿಗೆ ಸಮರ್ಪಕರಾದ ನೀತಿಸ್ವರೂಪಿಗಳಾಗು 21
ವಂತೆ ದೇವರು ಪಾಪಜ್ಞಾನವಿಲ್ಲದ ಆತನನ್ನು ನಮಗೋಸ್ಕರ ಪಾಪಸ್ವರೂಪಿಯಾಗ ಮಾಡಿ
ದನು. ನಾವು ಆತನೊಂದಿಗೆ ಕೆಲಸನಡಿಸುವವರಾಗಿದ್ದು—ನೀವು ಹೊಂದಿದ ದೇವರ **6**
ಕೃಪೆಯನ್ನು ವ್ಯರ್ಥಮಾಡಿಕೊಳ್ಳಬೇಡಿರೆಂದು ಎಚ್ಚರಿಸುತ್ತೇವೆ.

> ಪ್ರಸನ್ನಕಾಲದಲ್ಲಿ ನಿನ್ನ ಮನವೆಯನ್ನು ಕೇಳಿದೆನು, 2
> ರಕ್ಷಣೆಯ ದಿನದಲ್ಲಿ ನಿನಗೆ ಸಹಾಯಮಾಡಿದೆನು[1]

ಎಂದು ದೇವರು ಹೇಳುತ್ತಾನಲ್ಲಾ. ಈಗಲೇ ಆ ಸುಪ್ರಸನ್ನಕಾಲ; ಇದೇ ಆ ರಕ್ಷಣೆಯ ದಿನ.

ನಿಂದೆಗೆ ಅವಕಾಶಕೊಡದೆ ಎಲ್ಲಾ ಸಂಗತಿಗಳಲ್ಲಿ ದೇವರ ಸೇವಕರೆಂದು ನಮ್ಮನ್ನು 3-4
ಸಮ್ಮತರಾಗ ಮಾಡಿಕೊಳ್ಳುತ್ತೇವೆ. ನಾವು ಸಂಕಟಗಳಲ್ಲಿಯೂ ಕೊರತೆಗಳಲ್ಲಿಯೂ
ಇಕ್ಕಟ್ಟುಗಳಲ್ಲಿಯೂ ಪೆಟ್ಟುಗಳಲ್ಲಿಯೂ ಸೆರೆಮನೆಗಳಲ್ಲಿಯೂ ಕಲಹಗಳಲ್ಲಿಯೂ ಕಷ್ಟ 5
ವಾದ ಕೆಲಸಗಳಲ್ಲಿಯೂ ನಿದ್ದೆಗೇಡುಗಳಲ್ಲಿಯೂ ಉಪವಾಸಗಳಲ್ಲಿಯೂ ಬಹು ತಾಳ್ಮೆ
ಯನ್ನು ತೋರಿಸುತ್ತೇವೆ. ಶುದ್ಧಮನಸ್ಸು ಜ್ಞಾನ ದೀರ್ಘಶಾಂತಿ ದಯೆ ಪವಿತ್ರಾತ್ಮ ಕಪ 6
ಟವಿಲ್ಲದ ಪ್ರೀತಿ ಸತ್ಯವಾಕ್ಯ ದೇವರ ಮಹತ್ವ ಇವುಗಳಿಂದ ಕೂಡಿದವರಾಗಿದ್ದೇವೆ. ಎಡ 7
ಬಲಗೈಗಳಲ್ಲಿ ನೀತಿಯೆಂಬ ಆಯುಧಗಳನ್ನು ಧರಿಸಿಕೊಂಡವರಾಗಿಯೂ ಮಾನ ಅವಮಾನ 8
ಕೀರ್ತಿ ಅಪಕೀರ್ತಿಗಳನ್ನು ಹೊಂದಿದವರಾಗಿಯೂ ಇದ್ದೇವೆ. ಮೋಸಗಾರರೆನಿಸಿ

---

1) ಯೆಶಾಯ ೪೯, ೮.

9 ಕೊಂಡರೂ ಸತ್ಯವಂತರಾಗಿಯೂ, ಅಜ್ಞಾತರೆನಿಸಿಕೊಂಡರೂ ವಿಜ್ಞಾತರಾಗಿಯೂ, ಸಾಯು ವವರಾಗಿ ತೋರಿದಾಗ್ಯೂ ಬದುಕುವವರಾಗಿಯೂ ಇದ್ದೇವೆ. ದಂಡನೆ ಹೊಂದುವವ
10 ರಾಗಿದ್ದರೂ ಕೊಲ್ಲಲ್ಪಡದವರಾಗಿಯೂ, ದುಃಖಪಡುವವರಾಗಿದ್ದರೂ ಯಾವಾಗ್ಯೂ ಸಂತೋಷಪಡುವವರಾಗಿಯೂ, ಬಡವರಾಗಿದ್ದರೂ ಅನೇಕರಿಗೆ ಐಶ್ವರ್ಯವನ್ನುಂಟು ಮಾಡುವವರಾಗಿಯೂ, ಏನೂ ಇಲ್ಲದವರಾಗಿದ್ದರೂ ಎಲ್ಲಾ ಇದ್ದವರಾಗಿಯೂ ಇದ್ದೇವೆ.

#### ಕೊರಿಂಥದವರು ಒಳ್ಳೇ ಮಕ್ಕಳಂತೆ ತನ್ನನ್ನು ಪ್ರೀತಿಸಬೇಕೆಂದು ಪೌಲನು ಕೇಳಿಕೊಂಡದ್ದು.

11 ಕೊರಿಂಥದವರೇ, ನಾವು ನಿಮ್ಮೊಡನೆ ಧಾರಾಳವಾಗಿ ಮಾತಾಡುತ್ತಾ ಇದ್ದೇವೆ; ನಮ್ಮ
12 ಹೃದಯವು ನಿಮ್ಮ ವಿಷಯದಲ್ಲಿ ವಿಶಾಲವಾಯಿತು. ನಿಮ್ಮ ಮೇಲಿರುವ ನಮ್ಮ ಪ್ರೀತಿ
13 ಸಂಕೋಚವಾದದ್ದಲ್ಲ; ನಿಮ್ಮ ಪ್ರೀತಿಯೇ ಸಂಕೋಚವಾದದ್ದು. ನಿಮ್ಮ ವಿಷಯದಲ್ಲಿ ನಮ್ಮ ಮನಸ್ಸು ವಿಶಾಲವಾಗಿರುವದರಿಂದ ನಮ್ಮ ವಿಷಯದಲ್ಲಿ ನಿಮ್ಮ ಮನಸ್ಸನ್ನೂ ವಿಶಾಲಮಾಡಿಕೊಳ್ಳಿರಿ. ನೀವು ನನ್ನ ಮಕ್ಕಳೆಂದು ಭಾವಿಸಿ ಹೀಗೆ ಹೇಳುತ್ತೇನೆ.

#### ಕ್ರೈಸ್ತರು ಅನ್ಯಜನಗಳ ಸಂಸರ್ಗದಿಂದ ಕೆಡಬಾರದು.

14 ನೀವು ಕ್ರಿಸ್ತನಂಬಿಕೆಯಿಲ್ಲದವರೊಂದಿಗೆ ಸೇರಿ ಇಜ್ಜೋಡಾಗಬೇಡಿರಿ. ಧರ್ಮ
15 ಕ್ಕೂ ಅಧರ್ಮಕ್ಕೂ ಜೊತೆಯೇನು? ಬೆಳಕಿಗೂ ಕತ್ತಲೆಗೂ ಐಕ್ಯವೇನು? ಕ್ರಿಸ್ತನಿಗೂ ಸೈತಾನನಿಗೂ ಒಡನಾಟವೇನು? ನಂಬುವವನಿಗೂ ನಂಬದೆ ಇರುವವನಿಗೂ ಪಾಲುಗಾ
16 ರಿಕೆ ಏನು? ದೇವರ ಮಂದಿರಕ್ಕೂ ವಿಗ್ರಹಗಳಿಗೂ ಒಪ್ಪಿಗೆ ಏನು? ನಾವು ಜೀವಸ್ವರೂಪ ನಾದ ದೇವರ ಮಂದಿರವಾಗಿದ್ದೇವಲ್ಲಾ. ಇದರ ಸಂಬಂಧವಾಗಿ ದೇವರು—

ನಾನು ಅವರಲ್ಲಿ ವಾಸಮಾಡಿ ತಿರುಗಾಡುವೆನು,
ನಾನು ಅವರಿಗೆ ದೇವರಾಗಿರುವೆನು, ಅವರು ನನ್ನ ಪ್ರಜೆಯಾಗಿರುವರು[1]

17 ಎಂದು ಹೇಳಿದ್ದಾನೆ. ಆದದರಿಂದ

ಅನ್ಯಜನರ ಮಧ್ಯದಲ್ಲಿಂದ ಹೊರಟು ಬಂದು ಪ್ರತ್ಯೇಕವಾಗಿರಿ;
ಅಪವಿತ್ರವಾದದ್ದನ್ನು ಮುಟ್ಟಬೇಡಿರಿ ಎಂದು ಕರ್ತನು ಹೇಳುತ್ತಾನೆ[2].

18 ಇದಲ್ಲದೆ—

ನಾನು ನಿಮ್ಮನ್ನು ಸೇರಿಸಿಕೊಂಡು ನಿಮಗೆ ತಂದೆಯಾಗಿರುವೆನು;
ನೀವು ನನಗೆ ಕುಮಾರ ಕುಮಾರ್ತೆಗಳು ಆಗಿರುವಿರೆಂದು
ಸರ್ವಶಕ್ತನಾದ ಕರ್ತನು ಹೇಳುತ್ತಾನೆ[3].

**7** ಪ್ರಿಯರೇ, ಈ ವಾಗ್ದಾನಗಳು ನಮಗಿರುವದರಿಂದ, ನಾವು ಶರೀರಾತ್ಮಗಳ ಕಲ್ಮಷವನ್ನು ತೊಲಗಿಸಿ ನಮ್ಮನ್ನು ಶುಚಿಮಾಡಿಕೊಂಡು ದೇವರ ಭಯದಿಂದ ಕೂಡಿದವರಾಗಿ ಪವಿತ್ರ ತ್ವವನ್ನು ಸಿದ್ಧಿಗೆ ತರುವದಕ್ಕೆ ಪ್ರಯತ್ನಿಸೋಣ.

---

[1] ಲೇವಿಕ ೨೬, ೧೧. ೧೨.
[2] ಯೆಶಾಯ ೫೨, ೧೧.
[3] ೨ ಸಮುವೇಲ ೭, ೧೪; ಯೆಶಾಯ ೪೩, ೬.

ಪೌಲನು ತಾನು ಮೊದಲು ಬರೆದ ಪತ್ರಿಕೆಯಿಂದ ಒಳ್ಳೇ ಫಲವಾಯಿತೆಂದು ಸಂತೋಷಪಟ್ಟದ್ದು.

ನಿಮ್ಮ ಹೃದಯಗಳಲ್ಲಿ ನಮಗೆ ಸ್ಥಳಕೊಡಿರಿ; ನಾವು ನಿಮ್ಮಲ್ಲಿ ಯಾರಿಗೂ ಅನ್ಯಾಯ 2 ಮಾಡಲಿಲ್ಲ, ಯಾರನ್ನೂ ಕೆಡಿಸಲಿಲ್ಲ, ಯಾರನ್ನೂ ವಂಚಿಸಲಿಲ್ಲ. ನಿಮ್ಮ ಮೇಲೆ ತಪ್ಪು 3 ಹೊರಿಸಬೇಕೆಂದು ನಾನು ಇದನ್ನು ಹೇಳುವದಿಲ್ಲ. ಕೂಡಾ ಸಾಯುವದಕ್ಕೂ ಕೂಡಾ ಬದುಕುವದಕ್ಕೂ ನೀವು ನಮ್ಮ ಹೃದಯದಲ್ಲಿದ್ಧೀರೆಂದು ಮೊದಲೇ ಹೇಳಿದ್ಧೇನಲ್ಲಾ. ನಿಮ್ಮಲ್ಲಿ ನನಗೆ ಬಹಳ ಭರವಸ ಉಂಟು; ನಿಮ್ಮ ವಿಷಯದಲ್ಲಿ ನನ್ನ ಉತ್ಸಾಹ ಬಹಳ; 4 ಪರಿಪೂರ್ಣ ಆದರಣೆ ನನಗಾಯಿತು; ನಮಗಾಗುವ ಎಲ್ಲಾ ಸಂಕಟಗಳಲ್ಲಿ ಅತ್ಯಧಿಕ ವಾದ ಸಂತೋಷದಿಂದ ತುಂಬಿದ್ಧೇನೆ.

ನಾವು ಮಕೆದೋನ್ಯಕ್ಕೆ ಬಂದಾಗ, ನಮ್ಮ ಮನಸ್ಸಿಗೆ ಏನೂ ಉಪಶಮನವಾಗಲಿಲ್ಲ, 5 ಎಲ್ಲಾ ವಿಷಯಗಳಲ್ಲಿಯೂ ನಮಗೆ ಸಂಕಟವಿತ್ತು; ಹೊರಗೆ ಕಲಹ, ಒಳಗೆ ಭಯ. ಆದರೆ ದೀನಾವಸ್ಥೆಯಲ್ಲಿರುವವರನ್ನು ಸಂತೈಸುವ ದೇವರು ತೀತನ ಬರುವಿಕೆಯಿಂದ 6 ನಮ್ಮನ್ನು ಸಂತೈಸಿದನು. ಅವನ ಬರುವಿಕೆಯಿಂದ ಮಾತ್ರವಲ್ಲದೆ, ಅವನು ತಾನು 7 ನಿಮ್ಮಲ್ಲಿ ಬಹಳ ಆದರಣೆಯನ್ನು ಹೊಂದಿದೆನೆಂದು ಹೇಳಿದ್ದರಿಂದಲೂ ನಮ್ಮನ್ನು ಸಂತೈಸಿ ದನು. ಅವನು ನಿಮ್ಮ ಹಂಬಲ ನಿಮ್ಮ ಗೋಳಾಟ ನನ್ನ ವಿಷಯವಾದ ನಿಮ್ಮ ಆಸಕ್ತಿ ಇವುಗಳನ್ನು ನಮಗೆ ತಿಳಿಸಿದಾಗ ನಾನು ಹೆಚ್ಚಾಗಿ ಸಂತೋಷಪಟ್ಟೆನು.

ನಾನು ಬರೆದ ಪತ್ರಿಕೆಯು ನಿಮ್ಮನ್ನು ದುಃಖಪಡಿಸಿದ್ದಾಗ್ಯೂ ನನಗೆ ಪಶ್ಚಾತ್ತಾಪವಿಲ್ಲ. 8 ಅದು ನಿಮ್ಮನ್ನು ಒಂದು ಗಳಿಗೆ ಹೊತ್ತಾದರೂ ದುಃಖಪಡಿಸಿತೆಂದು ನಾನು ಮೊದಲು ಪಶ್ಚಾತ್ತಾಪಪಡುತ್ತಿದ್ದಾಗ್ಯೂ ಈಗ ಸಂತೋಷಪಡುತ್ತೇನೆ. ನಿಮಗೆ ದುಃಖವಾಯಿ 9 ತೆಂದು ನಾನು ಸಂತೋಷಪಡದೆ ನೀವು ದುಃಖಪಟ್ಟು ಬೇರೆ ಮನಸ್ಸನ್ನು ಹೊಂದಿದ್ದಕ್ಕಾಗಿ ಸಂತೋಷಪಡುತ್ತೇನೆ. ನೀವು ದೇವರ ಚಿತ್ತಾನುಸಾರವಾಗಿ ದುಃಖಿಸಿದ್ದರಿಂದ ನಮ್ಮಿಂದ ಯಾವದರಲ್ಲಿಯೂ ನಷ್ಟಪಡಲಿಲ್ಲವಲ್ಲಾ. ದೇವರ ಚಿತ್ತಾನುಸಾರವಾಗಿರುವ ದುಃಖವು 10 ಮಾನಸಾಂತರವನ್ನುಂಟುಮಾಡಿ ರಕ್ಷಣೆಗೆ ಕಾರಣವಾಗಿದೆ; ಆ ಮಾನಸಾಂತರದಲ್ಲಿ ಪಶ್ಚಾತ್ತಾಪಕ್ಕೆ ಆಸ್ಪದವಿಲ್ಲ; ಆದರೆ ಲೋಕದವರಿಗಿರುವಂಥಾ ದುಃಖವು ಮರಣವ ನ್ನುಂಟುಮಾಡುತ್ತದೆ. ನೀವು ದೇವರ ಚಿತ್ತಾನುಸಾರವಾಗಿ ಪಟ್ಟ ದುಃಖವು ನಿಮಗೆ 11 ಎಂಥಾ ಜಾಗರೂಕತೆಯನ್ನು ಉಂಟುಮಾಡಿತು ನೋಡಿರಿ. ನೀವು ನಿರ್ದೋಷಿಗಳೆಂದು ಸ್ಥಾಪಿಸುವದಕ್ಕೆ ಎಷ್ಟೋ ಪ್ರಯಾಸಪಟ್ಟಿರಿ, ಎಷ್ಟೋ ಮನೋವ್ಯಥೆಯನ್ನು ಅನುಭವಿ ಸಿದಿರಿ; ಎಂಥಾ ಭಯವನ್ನು ಎಂಥಾ ಹಂಬಲವನ್ನು ತೋರಿಸಿದಿರಿ; ಮಾನಹಾನಿಗಾಗಿ ಎಷ್ಟೋ ರೋಷಪಟ್ಟು ಶಿಕ್ಷೆ ಮಾಡಿದಿರಿ. ನೀವು ಆ ಕಾರ್ಯಕ್ಕೆ[1] ಸೇರಿದವರಲ್ಲ ವೆಂಬುವದನ್ನು ಎಲ್ಲಾ ವಿಧದಲ್ಲಿಯೂ ತೋರಿಸಿದಿರಿ. ನಾನು ನಿಮಗೆ ಬರೆದಾಗ ಅನ್ಯಾಯ 12 ಮಾಡಿದವನಿಗೆ ದಂಡನೆಯೂ ಅನ್ಯಾಯಹೊಂದಿದವನಿಗೆ ನ್ಯಾಯವೂ ಆಗಬೇಕೆಂಬುವ ಕಾರಣದಿಂದ ಬರೆಯಲಿಲ್ಲ; ನಮಗೋಸ್ಕರ ನಿಮಗಿರುವ ಜಾಗರೂಕತೆಯು ದೇವರ ಮುಂದೆ ನಿಮಗೆ ವ್ಯಕ್ತವಾಗಬೇಕೆಂಬುವ ಉದ್ದೇಶದಿಂದಲೇ ಬರೆದೆನು.

---

[1] ೧ನೇ ಪತ್ರಿಕೆ ೫ನೇ ಅಧ್ಯಾಯವನ್ನು ನೋಡಿರಿ.

13 ಆದಕಾರಣ ನಮ್ಮ ಮನಸ್ಸಿಗೆ ಆದರಣೆ ಉಂಟಾಯಿತು. ಅಷ್ಟು ಮಾತ್ರವೇ ಅಲ್ಲ, ತೀತನ ಮನಸ್ಸಿಗೆ ನಿಮ್ಮೆಲ್ಲರಿಂದ ಉಪಶಮನವಾದ ಕಾರಣ ನಾವು ಅವನ ಸಂತೋಷ 14 ವನ್ನು ನೋಡಿ ಮತ್ತೂ ಹೆಚ್ಚಾಗಿ ಸಂತೋಷಪಟ್ಟೆವು. ಯಾಕಂದರೆ ನಾನು ಅವನ ಮುಂದೆ ನಿಮ್ಮನ್ನು ಹೊಗಳಿದ್ದರಲ್ಲಿ ನಾಚಿಕೆ ಪಡಬೇಕಾಗಿ ಬರಲಿಲ್ಲ. ನಾವು ನಿಮಗೆ ಹೇಳಿದ ಎಲ್ಲಾ ಮಾತುಗಳು ಹ್ಯಾಗೆ ಸತ್ಯವಾಗಿದ್ದವೋ ಹಾಗೆ ನಾವು ತೀತನ ಮುಂದೆ 15 ಆಡಿದ ಹೊಗಳಿಕೆಯ ಮಾತುಗಳೂ ಸತ್ಯವೆಂದು ಕಂಡುಬಂದವು. ನೀವು ಮನೋ ಭೀತಿಯಿಂದ ನಡುಗುವವರಾಗಿ ಅವನನ್ನು ಸೇರಿಸಿಕೊಂಡದ್ದರಲ್ಲಿ ನಿಮ್ಮೆಲ್ಲರ ವಿಧೇಯ ತೆಯು ತೋರಬಂತು. ಅವನು ಅದನ್ನು ಜ್ಞಾಪಕ ಮಾಡಿಕೊಳ್ಳುವಾಗ, ನಿಮ್ಮ ಮೇಲೆ 16 ಅವನ ಕನಿಕರವು ಹೆಚ್ಚಾಗಿದೆ. ಸರ್ವವಿಷಯದಲ್ಲೂ ನಿಮ್ಮನ್ನು ಕುರಿತು ನನಗೆ ಭರ ವಸವಿರುವದರಿಂದ ಸಂತೋಷಪಡುತ್ತೇನೆ.

## ಯೆರೂಸಲೇಮಿನ ಬಡ ಕ್ರೈಸ್ತರಿಗಾಗಿ ಹಣಸಹಾಯ ಮಾಡುವದರ ವಿಷಯ.

(8, 1—9, 15.)

ಪೌಲನು ಮಕೆದೋನ್ಯದ ಸಭೆಗಳವರ ಔದಾರ್ಯವನ್ನು ಕುರಿತು ಹೇಳಿ ಕೊರಿಂಥದವರಲ್ಲಿಯೂ ಔದಾರ್ಯವನ್ನು ಹುಟ್ಟಿಸುವದಕ್ಕೆ ಪ್ರಯತ್ನಿಸಿದ್ದು.

8 ಸಹೋದರರೇ, ಮಕೆದೋನ್ಯದ ಸಭೆಗಳಲ್ಲಿ ದೇವರ ಕೃಪೆಯು ತೋರಿದ ಬಗೆಯನ್ನು 2 ನಿಮಗೆ ತಿಳಿಸುತ್ತೇವೆ. ಆ ಸಭೆಗಳವರು ಬಹಳ ಹಿಂಸೆ ತಾಳುವವರಾದಾಗ್ಯೂ ಮತ್ತು ವಿಪರೀತವಾದ ಬಡತನದಲ್ಲಿದ್ದಾಗ್ಯೂ ಬಹು ಆನಂದದಿಂದ ತುಂಬಿದವರಾಗಿ ಅತ್ಯಂತ 3 ಔದಾರ್ಯವುಳ್ಳವರಾದರು. ಅವರು ಶಕ್ತ್ಯನುಸಾರವಾಗಿ ಮಾತ್ರ ಕೊಡದೆ ಶಕ್ತಿಯನ್ನು 4 ಮೀರಿ ತಮ್ಮಷ್ಟಕ್ಕೆ ತಾವೇ ಕೊಟ್ಟರು; ಇದಕ್ಕೆ ನಾನು ಸಾಕ್ಷಿ. ದೇವಜನರಿಗೆ ಸಹಾಯ ಮಾಡುವ ಕೆಲಸದಲ್ಲಿ ತಾವು ಪಾಲುಗಾರರಾಗುವಂತೆ ಅಪ್ಪಣೆಯಾಗಬೇಕೆಂದು ನಮ್ಮನ್ನು 5 ಬಹಳವಾಗಿ ಬೇಡಿಕೊಂಡರು. ನಾವು ನೆನಸಿದ್ದ ಪ್ರಕಾರವಾಗಿ ಅವರು ಕೊಡದೆ ಮೊದಲು ತಮ್ಮನ್ನೇ ಕರ್ತನಿಗೆ ಒಪ್ಪಿಸಿಕೊಟ್ಟರು; ಅನಂತರ ದೇವರ ಚಿತ್ತಾನುಸಾರವಾಗಿ 6 ನಮಗೂ ತಮ್ಮನ್ನು ಒಪ್ಪಿಸಿದರು. ಹೀಗಿರಲಾಗಿ ಈ ಧರ್ಮಕಾರ್ಯವನ್ನು ಮಾಡು ವದಕ್ಕೆ ಮೊದಲು ನಿಮ್ಮನ್ನು ಪ್ರೇರೇಪಿಸಿದ ತೀತನು ತಿರಿಗಿ ನಿಮ್ಮ ಬಳಿಗೆ ಬಂದು ಅದನ್ನು 7 ತೀರಿಸಬೇಕೆಂದು ನಾವು ಅವನನ್ನು ಕೇಳಿಕೊಂಡಿದ್ದೇವೆ. ನೀವು ದೇವರ ಮೇಲಣ ನಂಬಿಕೆ ವಾಕ್ಚಾತುರ್ಯ ಜ್ಞಾನ ಪೂರ್ಣಜಾಗರೂಕತೆ ನಮ್ಮ ಪ್ರೇರಣೆಯಿಂದ ನಿಮ್ಮಲ್ಲಿ ಹುಟ್ಟಿದ ಪ್ರೀತಿ ಇವೇ ಮೊದಲಾದ ಎಲ್ಲಾ ವಿಷಯಗಳಲ್ಲಿ ಹ್ಯಾಗೆ ಸಮೃದ್ಧರಾಗಿದ್ದೀರೋ ಹಾಗೆಯೇ ಈ ಧರ್ಮಕಾರ್ಯದಲ್ಲಿಯೂ ಸಮೃದ್ಧರಾಗಿರಿ.

8 ಇದನ್ನು ಆಜ್ಞಾರೂಪವಾಗಿ ಹೇಳದೆ, ಇತರರ ಜಾಗರೂಕತೆಯನ್ನು ತೋರಿಸಿಕೊಟ್ಟು ನಿಮ್ಮ ಪ್ರೀತಿಯೂ ಯಥಾರ್ಥವಾದದ್ದೆಂಬುವದನ್ನು ಪರೀಕ್ಷೆಯಿಂದ ತಿಳಿದುಕೊಳ್ಳ 9 ಬೇಕೆಂದು ಹೇಳುತ್ತೇನೆ. ನಮ್ಮ ಕರ್ತನಾದ ಯೇಸು ಕ್ರಿಸ್ತನ ಕೃಪೆಯು ನಿಮಗೆ

ಗೊತ್ತಾಗಿದೆಯಲ್ಲಾ; ಆತನು ಐಶ್ವರ್ಯವಂತನಾಗಿದ್ದು, ತಾನು ಬಡತನದಲ್ಲಿ ಸೇರುವದ ರಿಂದ ನೀವು ಐಶ್ವರ್ಯವಂತರಾಗಬೇಕೆಂದು ನಿಮಗೋಸ್ಕರ ಬಡವನಾದನು. ಈ ಧರ್ಮ 10 ಕಾರ್ಯವನ್ನು ಕುರಿತು ನನ್ನ ಅಭಿಪ್ರಾಯವನ್ನು ತಿಳಿಸುತ್ತೇನೆ; ಈ ಕಾರ್ಯವನ್ನು ಒಂದು ವರುಷದ ಹಿಂದೆ ನಡಿಸುವದಕ್ಕೆ ತೊಡಗುವದರಲ್ಲಿಯೂ ನಡಿಸಬೇಕೆಂದು ಮನಸ್ಸು ಮಾಡುವದರಲ್ಲಿಯೂ ನೀವು ಅವರಿಗಿಂತ ಮೊದಲಿನವರಾದ್ದರಿಂದ ನಿಮಗೆ ಅಷ್ಟು ಮಾತ್ರ ಹೇಳುವದು ಹಿತವಾಗಿದೆ. ಈ ಕಾರ್ಯವನ್ನು ಪ್ರಾರಂಭಿಸುವದಕ್ಕೆ ಹ್ಯಾಗೆ ನಿಮ್ಮಲ್ಲಿ 11 ಸಿದ್ಧ ಮನಸ್ಸು ಇತ್ತೋ ಹಾಗೆಯೇ ನಿಮ್ಮ ನಿಮ್ಮ ಶಕ್ತ್ಯನುಸಾರವಾಗಿ ನೆರವೇರಿಸಿರಿ. ಒಬ್ಬನು ಕೊಡುವದಕ್ಕೆ ಮನಸ್ಸುಳ್ಳವನಾಗಿರುವಲ್ಲಿ ಅವನು ತನ್ನಲ್ಲಿ ಇರುವದಕ್ಕೆ ಅನು 12 ಸಾರವಾಗಿ ಕೊಟ್ಟರೆ, ಅದು ಸಮರ್ಪಕವಾಗಿರುವದು; ಅವನಿಗೆ ಇಲ್ಲದನ್ನು ದೇವರು ಕೇಳಿಕೊಳ್ಳುವದಿಲ್ಲ. ಇತರರಿಗೆ ಕಷ್ಟಪರಿಹಾರವೂ ನಿಮಗೆ ಕಷ್ಟವೂ ಉಂಟಾಗ 13 ಬೇಕೆಂಬುವದು ನನ್ನ ತಾತ್ಪರ್ಯವಲ್ಲ; ಸಮಾನತ್ವವಿರಬೇಕೆಂಬುವದೇ ನನ್ನ ತಾತ್ಪರ್ಯ. 14 ಸದ್ಯಕ್ಕೆ ನಿಮ್ಮ ಸಮೃದ್ಧಿಯು ಅವರ ಕೊರತೆಯನ್ನು ನೀಗಿಸುತ್ತದೆ. ಮುಂದೆ ಅವರ ಸಮೃದ್ಧಿಯು ನಿಮ್ಮ ಕೊರತೆಯನ್ನು ನೀಗಿಸುವದು; ಹೀಗೆ ಸಮಾನತ್ವವುಂಟಾಗುವದು. ಬಹಳ ಕೂಡಿಸಿದವನಿಗೆ ಹೆಚ್ಚು ಇರಲಿಲ್ಲ, ಸ್ವಲ್ಪ ಕೂಡಿಸಿದವನಿಗೆ ಕಡಿಮೆ ಇರಲಿಲ್ಲ 15 ಎಂದು[1] ಶಾಸ್ತ್ರದಲ್ಲಿ ಬರೆದಿರುವ ಪ್ರಕಾರವಾಗುವದು.

### ಧರ್ಮದ್ರವ್ಯವನ್ನು ಕೂಡಿಸುವದಕ್ಕೆ ಪೌಲನು ಯೋಗ್ಯರಾದ ಕೆಲವು ಪುರುಷರನ್ನು ಕೊರಿಂಥಕ್ಕೆ ಕಳುಹಿಸಿದ್ದು.

ನಿಮ್ಮ ವಿಷಯವಾಗಿ ನನಗಿರುವ ಹಿತಚಿಂತನೆಯನ್ನು ದೇವರು ತೀತನ ಹೃದಯ 16 ದಲ್ಲಿಯೂ ಹುಟ್ಟಿಸಿದ್ದಕ್ಕಾಗಿ ಆತನಿಗೆ ಸ್ತೋತ್ರವಾಗಲಿ. ಅವನು ನಿಮ್ಮ ಬಳಿಗೆ ಹೋಗ 17 ಬೇಕೆಂದು ನಾವು ಕೇಳಿಕೊಂಡಾಗ ಅವನು ಒಪ್ಪಿದ್ದಲ್ಲದೆ ಅತ್ಯಾಸಕ್ತನಾಗಿದ್ದು ತನ್ನಷ್ಟಕ್ಕೆ ತಾನೇ ನಿಮ್ಮ ಬಳಿಗೆ ಬರುವದಕ್ಕೆ ಹೊರಟಿದ್ದಾನೆ. ಅವನ ಜೊತೆಯಲ್ಲಿ ಮತ್ತೊಬ್ಬ 18 ಸಹೋದರನನ್ನು ಕಳುಹಿಸಿದ್ದೇವೆ; ಈ ಸಹೋದರನು ಸುವಾರ್ತಾಸೇವೆಯಲ್ಲಿ ಎಲ್ಲಾ ಸಭೆಗಳೊಳಗೆ ಕೀರ್ತಿಪಡಕೊಂಡವನಾಗಿದ್ದಾನೆ. ಇದು ಮಾತ್ರವಲ್ಲದೆ, ನಾವು ನಡಿ 19 ಸುವ ಈ ಧರ್ಮಕಾರ್ಯಸಂಬಂಧವಾಗಿ ಸಭೆಗಳವರು ಈತನನ್ನು ನಮ್ಮ ಸಂಗಡ ಪ್ರಯಾಣಮಾಡುವಂತೆ ಗೊತ್ತುಮಾಡಿದ್ದಾರೆ. ಅವರು ಹೀಗೆ ಮಾಡಿದ್ದರಿಂದ ಕರ್ತ ನಿಗೆ ಘನವೂ ನಮ್ಮಲ್ಲಿ ಸಿದ್ಧ ಮನಸ್ಸೂ ಉಂಟಾಗುವದು. ನಾವು ಪಾರುಪತ್ಯಮಾಡುವ 20 ಈ ದ್ರವ್ಯಸಂಚಯದ ವಿಷಯದಲ್ಲಿ ಒಬ್ಬರೂ ನಮ್ಮ ಮೇಲೆ ತಪ್ಪು ಹೊರಿಸುವದಕ್ಕೆ ಆಸ್ಪ ದವಿರಬಾರದು. ಯಾಕಂದರೆ ಕರ್ತನ ದೃಷ್ಟಿಯಲ್ಲಿ ಮಾತ್ರವಲ್ಲದೆ ಮನುಷ್ಯರ ದೃಷ್ಟಿ 21 ಯಲ್ಲಿಯೂ ಗೌರವವಾದದ್ದನ್ನು[2] ಯೋಚನೆಗೆ ತಂದುಕೊಳ್ಳುವವರಾಗಿದ್ದೇವೆ. ಇವರಿ 22 ಬ್ಬರ ಸಂಗಡ ನಮ್ಮ ಸಹೋದರರಲ್ಲಿ ಮತ್ತೊಬ್ಬನನ್ನು ಕಳುಹಿಸಿದ್ದೇವೆ; ನಾವು ಅನೇಕ ಸಮಯಗಳಲ್ಲಿಯೂ ಅನೇಕ ಕಾರ್ಯಗಳಲ್ಲಿಯೂ ಅವನನ್ನು ಪರೀಕ್ಷಿಸಿ ಆಸಕ್ತನೆಂದು ತಿಳುಕೊಂಡಿದ್ದೇವೆ; ಈಗಲಾದರೋ ಅವನು ನಿಮ್ಮಲ್ಲಿಟ್ಟಿರುವ ವಿಶೇಷ ಭರವಸದಿಂದ

1) ಹೊರಡೋಣ ೧೬, ೧೮.    2) ಸಾಮತಿ ೩, ೪.

23 ಇನ್ನೂ ಬಹು ಹೆಚ್ಚಾಗಿ ಆಸಕ್ತಿಯುಳ್ಳವನಾಗಿದ್ದಾನೆ. ತೀತನನ್ನು ಕುರಿತು ಕೇಳು ತ್ತೀರೋ, ಅವನು ನನ್ನ ಪಾಲುಗಾರನೂ ನಿಮ್ಮ ಪ್ರಯೋಜನಕ್ಕಾಗಿ ನನಗೆ ಸಹಕಾ ರಿಯೂ ಆಗಿದ್ದಾನೆ; ಆ ಸಹೋದರರನ್ನು ಕುರಿತು ಕೇಳುತ್ತೀರೋ, ಅವರು ಸಭೆಗಳಿಂದ 24 ಕಳುಹಿಸಲ್ಪಟ್ಟವರೂ ಕ್ರಿಸ್ತನ ಮಹಿಮೆಯನ್ನು ಪ್ರಕಾಶಪಡಿಸುವವರೂ ಆಗಿದ್ದಾರೆ. ಆದ ಕಾರಣ ನಿಮ್ಮ ಪ್ರೀತಿಯು ಯಥಾರ್ಥವಾದದ್ದೆಂಬುವದನ್ನೂ ನಿಮ್ಮನ್ನು ನಾವು ಹೊಗ ಳಿದ್ದು ನ್ಯಾಯವೆಂಬುವದನ್ನೂ ಇವರಿಗೂ ಸಭೆಗಳಿಗೂ ತೋರಿಸಿಕೊಡಿರಿ.

**9** ದೇವಜನರಿಗೋಸ್ಕರ ನಡೆಯುವ ಸಹಾಯಕಾರ್ಯವನ್ನು ಕುರಿತು ನಿಮಗೆ ಬರೆಯು 2 ವದಕ್ಕೆ ಅವಶ್ಯವಿಲ್ಲ. ನಿಮ್ಮ ಮನಸ್ಸು ಸಿದ್ಧವಾಗಿದೆ ಎಂಬುವದು ನನಗೆ ಗೊತ್ತುಂಟು. ಒಂದು ವರುಷದ ಹಿಂದೆ ಅಖಾಯದವರು ಸಹಾಯಮಾಡುವದಕ್ಕೆ ಸಿದ್ಧವಾಗಿದ್ದರೆಂದು ಮಕೆದೋನ್ಯದವರ ಮುಂದೆ ನಿಮ್ಮನ್ನು ಹೊಗಳುತ್ತಾ ಇದ್ದೇನೆ. ಮತ್ತು ನಿಮ್ಮ ಆಸ 3 ಕ್ತಿಯು ಅವರಲ್ಲಿ ಬಹುಜನರನ್ನು ಪ್ರೇರೇಪಿಸಿತು. ಆದಾಗ್ಯೂ ನಾವು ನಿಮ್ಮನ್ನು ಹೊಗ ಳಿದ್ದು ನಿರಾಧಾರವಾಗದೆ ನಾನು ಹೇಳಿದ ಪ್ರಕಾರವೇ ನೀವು ಸಿದ್ಧವಾಗಿರಬೇಕೆಂದು ಆ 4 ಸಹೋದರರನ್ನು ಕಳುಹಿಸಿದ್ದೇನೆ. ಸಿದ್ಧವಾಗದಿದ್ದರೆ, ಒಂದು ವೇಳೆ ಮಕೆದೋನ್ಯದವ ರಲ್ಲಿ ಯಾರಾದರೂ ನನ್ನ ಸಂಗಡ ಬಂದು ನೀವು ಸಿದ್ಧವಾಗಲಿಲ್ಲವೆಂಬುವದನ್ನು ಕಾಣು ವಾಗ ನಮಗೆ ಇಂಥಾ ಭರವಸವಿದ್ದದ್ದಕ್ಕೆ ನಾವು ನಾಚಿಕೆಪಡಬೇಕಾದೀತು; ನಿಮಗೂ 5 ನಾಚಿಕೆಯಾಗುವದೆಂದು ನಾವು ಬೇರೆ ಹೇಳಬೇಕೇ. ಹೀಗಿರಲಾಗಿ ಈ ಸಹೋದರರು ಮುಂದಾಗಿ ನಿಮ್ಮ ಬಳಿಗೆ ಬಂದು, ಕೊಡುತ್ತೇವೆಂದು ನೀವು ಮೊದಲು ಹೇಳಿದ ಧರ್ಮ ದ್ರವ್ಯವನ್ನು ಸಿದ್ಧಪಡಿಸಬೇಕೆಂಬದಾಗಿ ಇವರನ್ನು ಬೇಡಿಕೊಳ್ಳುವದು ಅವಶ್ಯವೆಂದು ನನಗೆ ತೋಚಿತು. ಹೀಗೆ ಆ ಹಣವು ಸುಲಿಗೆಯಂತೆ ಬಾರದೆ ಧರ್ಮಾರ್ಥವಾಗಿಯೇ ಸಿದ್ಧವಾಗುವದು.

### ಪೌಲನು ಕೊರಿಂಥದ ಸಭೆಯವರನ್ನು ಉದಾರವಾಗಿ ಕೊಡುವದಕ್ಕೆ ಪ್ರೇರೇಪಿಸುವದು.

6 ಆದರೆ ಸ್ವಲ್ಪವಾಗಿ ಬಿತ್ತುವವನು ಪೈರನ್ನು ಸ್ವಲ್ಪವಾಗಿ ಕೊಯ್ಯುವನು; ಹೆಚ್ಚಾಗಿ 7 ಬಿತ್ತುವವನು ಹೆಚ್ಚಾಗಿ ಕೊಯ್ಯುವನು ಎಂದು ತಿಳುಕೊಳ್ಳಿರಿ. ಪ್ರತಿಯೊಬ್ಬನು ತನ್ನ ತನ್ನ ಹೃದಯದಲ್ಲಿ ನಿರ್ಣಯಿಸಿಕೊಂಡ ಪ್ರಕಾರ ಕೊಡಲಿ; ದುಃಖದಿಂದಾಗಲಿ ಬಲಾತ್ಕಾರ ದಿಂದಾಗಲಿ ಯಾರೂ ಕೊಡಬಾರದು; ಯಾಕಂದರೆ ಸಂತೋಷವಾಗಿ ಕೊಡುವವನ 8 ಮೇಲೆ ದೇವರಿಗೆ ಪ್ರೀತಿಯುಂಟು. ದೇವರು ಸಕಲ ವಿಧವಾದ ದಾನಗಳನ್ನು ನಿಮಗೆ ಧಾರಾಳವಾಗಿ ಅನುಗ್ರಹಿಸುವದಕ್ಕೆ ಶಕ್ತನಾದ್ದರಿಂದ ನೀವು ಯಾವಾಗಲೂ ಎಲ್ಲಾ ವಿಷ ಯಗಳಲ್ಲಿ ಪರಿಪೂರ್ಣತೆಯುಳ್ಳವರಾಗಿ ಸಕಲ ಸತ್ಕಾರ್ಯಗಳನ್ನು ಹೇರಳವಾಗಿ ಮಾಡು 9 ವವರಾಗಿರಬೇಕು. ಉಪಕಾರಿಯ ವಿಷಯದಲ್ಲಿ—

> ಅವನು ಧಾರಾಳವಾಗಿ ದಾನ ಮಾಡಿದನು; ಬಡವರಿಗೆ ಉಪಕಾರ ಮಾಡಿದನು;
> ಅವನ ಧರ್ಮದ ಫಲವು ಸದಾಕಾಲವೂ ಇರುವದು[1]

---

[1] ಕೀರ್ತನೆ ೧೧೨, ೯.

ಎಂದು ಶಾಸ್ತ್ರದಲ್ಲಿ ಬರೆದದೆಯಲ್ಲಾ. ಬಿತ್ತುವವನಿಗೆ ಬೀಜವನ್ನೂ ಉಣ್ಣುವವನಿಗೆ 10
ಆಹಾರವನ್ನೂ ಕೊಡುವಾತನು ನಿಮಗೂ ಬಿತ್ತುವದಕ್ಕೆ ಬೀಜವನ್ನು[1] ಕೊಟ್ಟು ಹೆಚ್ಚಿಸಿ,
ನಿಮ್ಮ ಧರ್ಮಕಾರ್ಯಗಳಿಂದಾಗುವ ಫಲಗಳನ್ನು ವೃದ್ಧಿಪಡಿಸುವನು. ಹೀಗೆ ನೀವು 11
ಎಲ್ಲಾ ವಿಷಯಗಳಲ್ಲಿ ಐಶ್ವರ್ಯವಂತರಾಗಿದ್ದು ಉದಾರವಾಗಿ ಕೊಡ ಶಕ್ತರಾಗುವಿರಿ;
ಇದಲ್ಲದೆ ನಿಮ್ಮ ದಾನಗಳು ನಮ್ಮ ಕೈಯಿಂದ ಮತ್ತೊಬ್ಬರಿಗೆ ಸೇರಿದಾಗ ದೇವರಿಗೆ ಕೃತ
ಜ್ಞತಾಸ್ತುತಿಯನ್ನುಂಟುಮಾಡುವವು. ಹ್ಯಾಗಂದರೆ ನೀವು ನಡಿಸುವ ಈ ಧರ್ಮ 12
ಕಾರ್ಯವು ದೇವಜನರ ಕೊರತೆಗಳನ್ನು ನೀಗುವದು ಮಾತ್ರವಲ್ಲದೆ ಅನೇಕರಿಂದ ದೇವ
ರಿಗೆ ಕೃತಜ್ಞತಾಸ್ತುತಿಯನ್ನು ಹುಟ್ಟಿಸುವದು. ಈ ಸಹಾಯದಿಂದ ತೋರಿಬಂದ ನಿಮ್ಮ 13
ಯೋಗ್ಯಭಾವವನ್ನು ಅವರು ನೋಡುವಾಗ, ನೀವು ಮಾಡಿದ್ದ ಪ್ರತಿಜ್ಞೆಗೆ ಸರಿಯಾಗಿ
ಕ್ರಿಸ್ತನ ಸುವಾರ್ತೆಯನ್ನು ಅನುಸರಿಸಿದ್ದರಿಂದಲೂ ತಮಗೂ ಎಲ್ಲರಿಗೂ ನೀವು ಉದಾರ
ವಾಗಿ ಸಹಾಯಮಾಡಿದ್ದರಿಂದಲೂ ದೇವರನ್ನು ಕೊಂಡಾಡುವರು. ಇದಲ್ಲದೆ ನಿಮ 14
ಗೋಸ್ಕರ ವಿಜ್ಞಾಪನೆಮಾಡಿ ದೇವರ ಅತಿಶಯವಾದ ಕೃಪೆಯು ನಿಮ್ಮಲ್ಲಿ ಇರುವದರಿಂದ
ನಿಮ್ಮ ಪರಿಚಿತಿಮಾಡಬೇಕೆಂದು ಕೋರುವರು. ವರ್ಣಿಸಲಶಕ್ಯವಾದ ವರವನ್ನು 15
ದೇವರು ದಯಪಾಲಿಸಿದ್ದಕ್ಕಾಗಿ ಆತನಿಗೆ ಸ್ತೋತ್ರ.

## ತನಗೆ ಅಧಿಕಾರವಿಲ್ಲವೆಂದು ವಿರೋಧಿಗಳು ಹೇಳಿದ ಮಾತಿಗೆ ಪೌಲನು ಕೊಡುವ ಉತ್ತರ. (10, 1—13, 10.)

ತನಗೆ ಅಧಿಕಾರ ಉಂಟೆಂಬುವದನ್ನೂ ಅದು ಎಂಥಾ ಅಧಿಕಾರವೆಂಬುವದನ್ನೂ ಕೊರಿಂಥಕ್ಕೆ ಬಂದಾಗ
ತೋರಿಸುವೆನೆಂದು ಪೌಲನು ಖಂಡಿತವಾಗಿ ಹೇಳುವದು.

ಪೌಲನು ನಮ್ಮೆದುರಿನಲ್ಲಿರುವಾಗ ದೀನನಾಗಿ ನಡಕೊಳ್ಳುವವನೂ ದೂರದಲ್ಲಿರು 10
ವಾಗ ನಮ್ಮನ್ನು ಕುರಿತು ದಿಟ್ಟತನ ತೋರಿಸುವವನೂ ಆಗಿದ್ದಾನೆ ಎಂದು ಹೇಳುವವರು
ನಿಮ್ಮಲ್ಲಿದ್ದಾರಲ್ಲಾ. ಆ ಪೌಲನೆಂಬ ನಾನು ಕ್ರಿಸ್ತನ ಶಾಂತಮನಸ್ಸನ್ನೂ ಸಾತ್ವಿಕತ್ವವನ್ನೂ .
ನೆನಪಿಗೆ ತಂದುಕೊಂಡು ನಿಮಗೆ ಖಂಡಿತವಾಗಿ ಹೇಳುವದೇನಂದರೆ, ಯಾರು ನಮ್ಮನ್ನು 2
ಲೋಕಾನುಸಾರಿಗಳೆಂದು ಎಣಿಸುತ್ತಾರೋ ಅವರಿಗೆ ದಿಟ್ಟವಾದ ಧೈರ್ಯವನ್ನು ತೋರಿಸ
ಬೇಕೆಂದು ಯೋಚಿಸುತ್ತಾ ಇದ್ದೇನೆ. ನಾವು ನಿಮ್ಮಲ್ಲಿಗೆ ಬಂದಿರುವಾಗ ಅಂಥ ದಿಟ್ಟತನ
ವನ್ನು ತೋರಿಸುವದಕ್ಕೆ ಅವಕಾಶ ಉಂಟಾಗಬಾರದೆಂದು ನಿಮ್ಮನ್ನು ಬೇಡಿಕೊಳ್ಳುತ್ತೇನೆ.
ನಾವು ಲೋಕದಲ್ಲಿದ್ದಾಗ್ಯೂ ಲೋಕಾನುಸಾರವಾಗಿ ಯುದ್ಧಮಾಡುವವರಲ್ಲ. ನಾವು 3, 4
ಉಪಯೋಗಿಸುವ ಆಯುಧಗಳು ಲೋಕಸಂಬಂಧವಾದ ಆಯುಧಗಳಲ್ಲ; ಅವು ದೇವರ
ಎಣಿಕೆಯಲ್ಲಿ ಬಲವಾಗಿದ್ದು ಕೋಟೆಗಳನ್ನು ಕೆಡವಿಹಾಕುವಂಥವುಗಳಾಗಿವೆ. ನಾವು
ವಿತರ್ಕಗಳನ್ನೂ ದೇವಜ್ಞಾನವನ್ನು ವಿರೋಧಿಸುವದಕ್ಕೆ ಎರಿಸಲ್ಪಟ್ಟಿರುವ ಉನ್ನತವಾದ 5
ಎಲ್ಲಾ ಕೊತ್ತಲಗಳನ್ನೂ ಕೆಡವಿಹಾಕಿ, ಎಲ್ಲಾ ಯೋಚನೆಗಳನ್ನು ಕ್ರಿಸ್ತನಿಗೆ ವಿಧೇಯ

[1] ಅಂದರೆ, ದಾನಮಾಡುವದಕ್ಕೆ ಬೇಕಾದದ್ದನ್ನು.

6 ವಾಗುವಂತೆ ಸೆರೆಹಿಡಿದು, ನಿಮ್ಮ ವಿಧೇಯತ್ವವು ಪರಿಪೂರ್ಣವಾದ ಮೇಲೆ ಎಲ್ಲಾ ಅವಿಧೇಯತ್ವಕ್ಕೆ ಶಿಕ್ಷೆ ಮಾಡುವದಕ್ಕೆ ಸಿದ್ಧರಾಗಿದ್ದೇವೆ.

7 ನೀವು ಮುಖದ ಮುಂದೆ ಇರುವಂಥಾದ್ದನ್ನು ಮಾತ್ರ ನೋಡುತ್ತೀರಿ. ಯಾವನಾದರೂ ತನ್ನನ್ನು ಕ್ರಿಸ್ತನವನೆಂದು ನಂಬಿಕೊಂಡರೆ, ಅವನು ತಿರಿಗಿ ಆಲೋಚನೆಮಾಡಿಕೊಂಡು ತಾನು ಹ್ಯಾಗೆ ಕ್ರಿಸ್ತನವನೋ ಹಾಗೆ ನಾವೂ ಕ್ರಿಸ್ತನವರೆಂದು ತಿಳುಕೊಳ್ಳಲಿ.
8 ನಮಗಿರುವ ಅಧಿಕಾರವನ್ನು ಕುರಿತು ನಾವು ಒಂದು ವೇಳೆ ಹೆಚ್ಚಾಗಿ ಹೊಗಳಿಕೊಂಡರೂ ಹಾಗೆ ಹೊಗಳಿಕೊಳ್ಳುವದರಲ್ಲಿ ನಾಚಿಕೆ ಪಡುವದಕ್ಕೆ ಕಾರಣವಾಗುವದಿಲ್ಲ. ಆದರೆ ನಿಮ್ಮನ್ನು ಕೆಡವಿಹಾಕುವದಕ್ಕಲ್ಲ ಕಟ್ಟುವದಕ್ಕಾಗಿಯೇ ಕರ್ತನು ಈ ಅಧಿಕಾರವನ್ನು
9 ನಮಗೆ ಕೊಟ್ಟನು. ಪತ್ರಿಕೆಗಳಿಂದ ನಿಮ್ಮನ್ನು ಹೆದರಿಸುವವನಾಗಿ ಕಾಣಿಸಿಕೊಳ್ಳುವದಕ್ಕೆ
10 ನನಗೆ ಮನಸ್ಸಿಲ್ಲ. ಅವನಿಂದ ಬಂದ ಪತ್ರಿಕೆಗಳು ಗೌರವವಾದವುಗಳೂ ಬಲವುಳ್ಳವುಗಳೂ ಆಗಿವೆ; ಅವನು ಸಾಕ್ಷಾತ್ತಾಗಿ ಬಂದರೆ, ಅವನು ನಿರ್ಬಲನು, ಅವನ ಮಾತು ಗಣ
11 ನೆಗೆ ಬಾರದ್ದು ಅನ್ನುತ್ತಾರೆ. ಅಂಥವರು—ನಾವು ದೂರದಲ್ಲಿರುವಾಗ ಪತ್ರಿಕೆಗಳ ಮೂಲಕ ಮಾತಿನಲ್ಲಿ ಎಂಥವರಾಗಿದ್ದೇವೋ ಹತ್ತರದಲ್ಲಿರುವಾಗ ಕಾರ್ಯದಲ್ಲಿಯೂ ಅಂಥವರಾಗಿಯೇ ಇದ್ದೇವೆಂದು ತಿಳುಕೊಳ್ಳಲಿ.

ಮತ್ತೊಬ್ಬರು ಸುವಾರ್ತೆ ಸಾರಿದ ಕಡೆಯಲ್ಲಿ ತಾನು ಸಾರುವವನಲ್ಲವೆಂದು ಪೌಲನು ಹೇಳುವದು.

12 ತಮ್ಮನ್ನು ತಾವೇ ಹೊಗಳಿಕೊಳ್ಳುವ ಕೆಲವರಲ್ಲಿ ನಮ್ಮನ್ನು ಸೇರಿಸಿಕೊಳ್ಳುವದಕ್ಕಾಗಲಿ ಅವರಿಗೆ ಹೋಲಿಸಿಕೊಳ್ಳುವದಕ್ಕಾಗಲಿ ನಮಗೆ ಧೈರ್ಯಸಾಲದು; ಅವರಂತೂ ತಮ್ಮ ತಮ್ಮೊಳಗೆ ತಮ್ಮನ್ನು ಅಳತೆಮಾಡಿಕೊಂಡು ತಮತಮಗೆ ಹೋಲಿಸಿಕೊಂಡು ವಿವೇಕವಿಲ್ಲ
13 ದವರಾಗಿದ್ದಾರೆ. ನಾವಾದರೋ ಮೇರೆದಪ್ಪಿ ಹೊಗಳಿಕೊಳ್ಳದೆ ದೇವರು ನಮಗೆ ನೇಮಿಸಿದಂಥಾ ಮೇರೆಯೊಳಗಿದ್ದು ಹೊಗಳಿಕೊಳ್ಳುತ್ತೇವೆ. ಈ ಮೇರೆಯೊಳಗಿದ್ದು ನಿಮ್ಮ
14 ಪರ್ಯಂತರಕ್ಕೂ ಬಂದಿದ್ದೇವೆ. ನಾವು ಕ್ರಿಸ್ತನ ಸುವಾರ್ತೆಯನ್ನು ಸಾರುತ್ತಾ ಇತರರಿಗಿಂತ ಮೊದಲು ನಿಮ್ಮ ಬಳಿಗೆ ಬಂದವರಿಂದ ನಿಮ್ಮ ಮೇಲೆ ಅಧಿಕಾರವಿಲ್ಲದವರಂತೆ ಮೇರೆ
15 ಯನ್ನು ಅತಿಕ್ರಮಿಸಿದವರಲ್ಲ. ನಾವು ಮೇರೆದಪ್ಪಿ ಮತ್ತೊಬ್ಬರ ಪ್ರಯಾಸದ ಫಲಗಳನ್ನು ತಕ್ಕೊಂಡು ಇವು ನಮ್ಮವು ಎಂದು ಹಿಗ್ಗುವವರಲ್ಲ; ಆದರೆ ನಿಮ್ಮ ಮಧ್ಯದಲ್ಲಿ ನಮ್ಮ
16 ಮೇರೆಯೊಳಗೆ ಇನ್ನೂ ಅಭಿವೃದ್ಧಿಹೊಂದಿ ನಿಮಗೆ ಆಚೆ ಇರುವ ಸೀಮೆಗಳಲ್ಲಿ ಸುವಾರ್ತೆಯನ್ನು ಸಾರುವೆವೆಂಬ ನಿರೀಕ್ಷೆ[1] ನಮಗುಂಟು. ಮತ್ತೊಬ್ಬರ ಮೇರೆಯಲ್ಲಿ ಸಿದ್ಧವಾಗಿ
17 ನಮಗೆ ಸಿಕ್ಕಿದ ಫಲವನ್ನು ಕುರಿತು ನಾವು ಹೊಗಳಿಕೊಳ್ಳುವದಿಲ್ಲ. ಹೊಗಳಿಕೊಳ್ಳುವ
18 ವನು ಕರ್ತನಲ್ಲಿಯೇ ಹೊಗಳಿಕೊಳ್ಳಲಿ[2]. ತನ್ನನ್ನು ತಾನೇ ಹೊಗಳಿಕೊಳ್ಳುವವನು ಯೋಗ್ಯನಲ್ಲ; ಕರ್ತನು ಯಾರನ್ನು ಹೊಗಳುತ್ತಾನೋ ಅವನೇ ಯೋಗ್ಯನು.

---

[1] ಅಪೊಸ್ತಲರ ಕೃತ್ಯ ೧೯, ೨೧ ನೋಡಿರಿ.  [2] ಯೆರೆಮೀಯ ೯, ೨೩. ೨೪.

ತಾನು ಸಾರಿದ ಕ್ರಿಸ್ತನನ್ನು ಕೊರಿಂಥದವರು ಬಿಟ್ಟು ಬೇರೊಂದು ಬೋಧನೆಗೆ ಕಿವಿಗೊಡಬಾರದೆಂದು ಪೌಲನು ಹೇಳುವದು.

**11** ನಾನು ನನ್ನನ್ನು ಹೊಗಳಿಕೊಳ್ಳುವದರಲ್ಲಿ ಸ್ವಲ್ಪ ಬುದ್ಧಿಹೀನತೆಯಿಂದ ಮಾತಾಡುತ್ತೇನೆ; ನೀವು ಅದನ್ನು ಸಹಿಸಿಕೊಳ್ಳುತ್ತೀರೇನೋ. ನನ್ನನ್ನು ಸಹಿಸಿಕೊಳ್ಳಬೇಕೆಂದು ನಿಮ್ಮನ್ನು ಬೇಡಿಕೊಳ್ಳುತ್ತೇನೆ. 2 ಯಾಕಂದರೆ ದೇವರಲ್ಲಿರುವಂಥಾ ಚಿಂತೆಯಿಂದಲೇ ನಾನು ನಿಮ್ಮ ವಿಷಯದಲ್ಲಿ ಚಿಂತಿಸುತ್ತೇನೆ. ನಿಮ್ಮನ್ನು ಕ್ರಿಸ್ತನೆಂಬ ಒಬ್ಬನೇ ಪುರುಷನಿಗೆ ಶುದ್ಧ ಕನ್ಯೆಯಾಗಿ ಒಪ್ಪಿಸಬೇಕೆಂದು ನಿಮ್ಮನ್ನು ಆತನಿಗೆ ನಿಶ್ಚಯಮಾಡಿದೆನಲ್ಲಾ. 3 ಆದರೆ ಹ್ಯಾಗೆ ಹವ್ವಳು ಸರ್ಪದ ಕುಯುಕ್ತಿಗೆ ಒಳಬಿದ್ದು ಮೋಸಹೋದಳೋ ಹಾಗೆಯೇ ನಿಮ್ಮ ಮನಸ್ಸು ಕ್ರಿಸ್ತನ ವಿಷಯದಲ್ಲಿರಬೇಕಾದ ಯಥಾರ್ಥತ್ವವನ್ನೂ ಪಾತಿವ್ರತ್ಯವನ್ನೂ ಬಿಟ್ಟು ಕೆಟ್ಟುಹೋದೀತೆಂದು ನನಗೆ ಭಯವುಂಟು. 4 ಯಾಕಂದರೆ ನಾವು ಪ್ರಸಿದ್ಧಿಪಡಿಸದಿದ್ದ ಮತ್ತೊಬ್ಬ ಯೇಸುವನ್ನು ನಿಮ್ಮ ಬಳಿಗೆ ಬರುವವರು ಪ್ರಕಟಿಸುವಾಗಲೂ, ನೀವು ಹೊಂದದೆ ಇದ್ದ ಬೇರೆ ವಿಧವಾದ ಆತ್ಮಪ್ರೇರಣೆಯನ್ನು ಹೊಂದುವಾಗಲೂ, ಅವಲಂಬಿಸದೆಯಿದ್ದ ಬೇರೊಂದು ಸುವಾರ್ತೆಯನ್ನು ಕೇಳುವಾಗಲೂ ನೀವು ಸಹಿಸಿಕೊಳ್ಳುತ್ತಿರುವದು ಬಹು ಆಶ್ಚರ್ಯ. 5 ಅತಿಶ್ರೇಷ್ಠರಾದ ಅಪೊಸ್ತಲರು ಅನ್ನಿಸಿಕೊಳ್ಳುವ ಅವರಿಗಿಂತ ನಾನು ಒಂದರಲ್ಲಾದರೂ ಕಡಿಮೆಯಾದವನಲ್ಲವೆಂದು ಎಣಿಸುತ್ತೇನೆ. 6 ನಾನು ವಾಕ್ಚಾತುರ್ಯದಲ್ಲಿ ನಿಪುಣನಲ್ಲದಿದ್ದರೂ ಜ್ಞಾನದಲ್ಲಿ ನಿಪುಣನಾಗಿದ್ದೇನೆ; ಇದನ್ನು ಎಲ್ಲಾ ಕಾರ್ಯಗಳಲ್ಲಿ ಎಲ್ಲರ ಮುಂದೆ ನಿಮ್ಮ ಪ್ರಯೋಜನಕ್ಕಾಗಿ ತೋರ್ಪಡಿಸಿದ್ದೇವೆ.

ತಾನು ಕೊರಿಂಥದ ಸಭೆಯಿಂದ ಹಣಸಹಾಯ ತೆಗೆದುಕೊಳ್ಳದೆ ಹೋದದ್ದು ದೋಷವೆಣಿಸಕೂಡದೆಂದು ಪೌಲನು ಹೇಳುವದು.

7 ಏನು, ನೀವು ಅಭಿವೃದ್ಧಿಹೊಂದಬೇಕೆಂದು ನನ್ನನ್ನು ನಾನೇ ತಗ್ಗಿಸಿಕೊಂಡು ದೇವರ ಸುವಾರ್ತೆಯನ್ನು ನಿಮಗೆ ಉಚಿತಾರ್ಥವಾಗಿ ಸಾರಿದ್ದು ಪಾಪಕೃತ್ಯವೋ? 8 ನಿಮ್ಮ ಸೇವೆ ಮಾಡುವದಕ್ಕೋಸ್ಕರ ನಾನು ಇತರ ಸಭೆಗಳಿಂದ ಸಂಬಳತಕ್ಕೊಂಡು ಅವುಗಳನ್ನು ಸುಲುಕೊಂಡೆನು. 9 ನಾನು ನಿಮ್ಮಲ್ಲಿದ್ದಾಗ ಖರ್ಚಿಗೆ ಏನೂ ಇಲ್ಲದ ಸಮಯದಲ್ಲಿ ಯಾರ ಮೇಲೆಯೂ ಭಾರಹಾಕಲಿಲ್ಲ; ಮಕೆದೋನ್ಯದಿಂದ ಬಂದ ಸಹೋದರರು ನನಗೆ ಬೇಕಾದದ್ದೆಲ್ಲವನ್ನೂ ಕೊಟ್ಟರು. ನಾನು ನಿಮಗೆ ಯಾವದರಲ್ಲಿಯೂ ಭಾರವಾಗಿರಬಾರದೆಂದು ನೋಡಿಕೊಳ್ಳುತ್ತಿದ್ದೆನು, ಇನ್ನು ಮೇಲೆಯೂ ನೋಡಿಕೊಳ್ಳುವೆನು. 10 ಈ ನನ್ನ ಹೊಗಳಿಕೆಯನ್ನು ಅಖಾಯದ ಪ್ರಾಂತ್ಯಗಳಲ್ಲಿ ಒಬ್ಬರೂ ನಿಲ್ಲಿಸಲಾರರೆಂದು ಕ್ರಿಸ್ತನ ಮುಂದೆ ಸತ್ಯವಾಗಿ ಹೇಳುತ್ತೇನೆ. 11 ಯಾಕೆ ನಿಮ್ಮಿಂದ ಏನೂ ತಕ್ಕೊಳ್ಳುವದಿಲ್ಲ? ನಿಮ್ಮ ಮೇಲೆ ಪ್ರೀತಿ ಇಲ್ಲದ್ದರಿಂದಲೋ? ದೇವರೇ ಬಲ್ಲ. 12 ನನ್ನನ್ನು ನಿಂದಿಸುವದಕ್ಕೆ ಆಸ್ಪದವನ್ನು ಹುಡುಕುವವರಿಗೆ ಯಾವ ಆಸ್ಪದವೂ ಸಿಕ್ಕದಂತೆ ನಾನು ಮಾಡುವದನ್ನು ಇನ್ನು ಮುಂದೆಯೂ ಮಾಡುವೆನು. ಅವರು ಯಾವದರಲ್ಲಿ ಹಿಗ್ಗುತ್ತಾರೋ ಅದರಲ್ಲಿ ನಮ್ಮಂತೆಯೇ ನಡೆಯು

13 ವವರಾಗಿ ಕಂಡುಬರಲಿ. ಆದರೆ ಅಂಥವರು ಸುಳ್ಳು ಅಪೊಸ್ತಲರೂ ಮೋಸಗಾರರಾದ ಕೆಲಸದವರೂ ಕ್ರಿಸ್ತನ ಅಪೊಸ್ತಲರಾಗಿ ಕಾಣಿಸುವದಕ್ಕೆ ವೇಷಹಾಕಿಕೊಳ್ಳುವವರೂ
14 ಆಗಿದ್ದಾರೆ. ಇದೇನೂ ಆಶ್ಚರ್ಯವಲ್ಲ; ಸೈತಾನನು ತಾನೇ ಪ್ರಕಾಶರೂಪವುಳ್ಳ ದೇವ
15 ದೂತನ ವೇಷವನ್ನು ಹಾಕಿಕೊಳ್ಳುವಾಗ್ಯೆ ಅವನ ಸೇವಕರು ಸಹ ನೀತಿಗೆ ಸೇವಕರಾಗಿ ಕಾಣಿಸುವದಕ್ಕೆ ವೇಷಹಾಕಿಕೊಳ್ಳುವದು ದೊಡ್ಡದಲ್ಲ. ಅವರ ಅಂತ್ಯಾವಸ್ಥೆಯು ಅವರ ಕೃತ್ಯಗಳಿಗೆ ತಕ್ಕ ಹಾಗೆಯೇ ಆಗುವದು.

ತಾನು ಕ್ರಿಸ್ತನ ಸೇವೆಯಲ್ಲಿ ಪಟ್ಟ ಶ್ರಮೆಯೂ ಕ್ರಿಸ್ತನಿಂದ ಹೊಂದಿದ ದರ್ಶನಗಳೂ ಬಹು ಹೆಚ್ಚೆಂದು ಪೌಲನು ಹೇಳುವದು.

16 ನನ್ನನ್ನು ಬುದ್ಧಿಹೀನನೆಂತ ಯಾರೂ ನೆನಸಬಾರದೆಂದು ತಿರಿಗಿ ಹೇಳುತ್ತೇನೆ; ಹಾಗೆ ನೆನಸಿದರೂ ನನ್ನನ್ನು ಬುದ್ಧಿಹೀನನಾಗಿಯಾದರೂ ಸೇರಿಸಿಕೊಳ್ಳಿರಿ; ಯಾಕಂದರೆ ನಾನು
17 ಸಹ ಅಲ್ಪಸ್ವಲ್ಪ ಹೊಗಳಿಕೊಳ್ಳಬೇಕೆಂದಿದ್ದೇನೆ. ನಾನು ಈಗ ಆಡುವ ಮಾತುಗಳನ್ನು ಕರ್ತನನ್ನು ಅನುಸರಿಸುವವನಾಗಿ ಆಡದೆ ಭರವಸದಿಂದ ತನ್ನನ್ನು ಹೊಗಳಿಕೊಳ್ಳುವ
18 ಬುದ್ಧಿಹೀನನಂತೆ ಆಡುತ್ತೇನೆ. ಅನೇಕರು ಲೋಕಸಂಬಂಧವಾದ ಕಾರ್ಯಗಳಲ್ಲಿ
19 ಹೊಗಳಿಕೊಳ್ಳುವದರಿಂದ ನಾನೂ ಹೊಗಳಿಕೊಳ್ಳುತ್ತೇನೆ. ನೀವು ಬುದ್ಧಿವಂತರಾಗಿದ್ದು
20 ಬುದ್ಧಿಹೀನರನ್ನು ಸಂತೋಷದಿಂದ ಸಹಿಸಿಕೊಳ್ಳುತ್ತೀರಲ್ಲಾ. ಒಬ್ಬನು ನಿಮ್ಮನ್ನು ತನಗೆ ವಶಮಾಡಿಕೊಂಡರೂ, ಒಬ್ಬನು ನಿಮ್ಮನ್ನು ನುಂಗಿಬಿಟ್ಟರೂ, ಒಬ್ಬನು ನಿಮ್ಮನ್ನು ಮರಳು ಗೊಳ್ಳಿಸಿ ಹಿಡಿದರೂ, ಒಬ್ಬನು ತನ್ನನ್ನು ಹೆಚ್ಚಿಸಿಕೊಂಡರೂ, ಒಬ್ಬನು ನಿಮ್ಮ ಮುಖದ ಮೇಲೆ ಹೊಡೆದರೂ ಸಹಿಸಿಕೊಳ್ಳುತ್ತೀರಲ್ಲಾ.
21 ನಾವು ಬಲವಿಲ್ಲದವರಾಗಿದ್ದೆವೆಂಬಂತೆ ಇದನ್ನು ನನ್ನ ಅವಮಾನಕ್ಕೆ ಹೇಳಿದ್ದಾಗ್ಯೂ, ಯಾವ ಆಧಾರದಿಂದ ಯಾವನಾದರೂ ಧೈರ್ಯವಾಗಿ ನಡಕೊಳ್ಳುತ್ತಾನೋ ಅದರಿಂದಲೇ
22 ನಾನೂ ಧೈರ್ಯವುಳ್ಳವನಾಗಿದ್ದೇನೆ. ಇದನ್ನು ಬುದ್ಧಿಹೀನತೆಯಿಂದ ಹೇಳುತ್ತೇನೆ. ಅವರು ಇಬ್ರಿಯರೋ ನಾನೂ ಇಬ್ರಿಯನು; ಅವರು ಇಸ್ರಯೇಲ್ಯರೋ ನಾನೂ ಇಸ್ರಯೇಲ್ಯನು;
23 ಅವರು ಅಬ್ರಹಾಮನ ವಂಶದವರೋ ನಾನೂ ಅದೇ ವಂಶದವನು; ಅವರು ಕ್ರಿಸ್ತನ ಸೇವಕರೋ ಅವರಿಗಿಂತ ನಾನು ಹೆಚ್ಚಾಗಿ ಸೇವೆಮಾಡುವವನಾಗಿದ್ದೇನೆ. ಬುದ್ಧಿಸ್ವಾಧೀನವಿಲ್ಲದವನಾಗಿ ಮಾತಾಡುತ್ತೇನೆ. ಆತನ ಸೇವೆಯಲ್ಲಿ ಅವರಿಗಿಂತ ಹೆಚ್ಚಾಗಿ ಪ್ರಯಾಸ ಪಟ್ಟೆನು, ಹೆಚ್ಚಾಗಿ ಸೆರೆಮನೆಗಳೊಳಗೆ ಬಿದ್ದೆನು; ಮಿತಿಮೀರಿ ಪೆಟ್ಟುಗಳನ್ನು ತಿಂದೆನು,
24 ಅನೇಕ ಸಾರಿ ಮರಣದ ಬಾಯೊಳಗೆ ಸಿಕ್ಕಿಕೊಂಡೆನು. ಐದು ಸಾರಿ ಯೆಹೂದ್ಯರಿಂದ
25 ನನಗೆ ಒಂದು ಕಡಿಮೆ ನಾಲ್ವತ್ತು ಏಟುಗಳು ಬಿದ್ದವು; ಮೂರು ಸಾರಿ ಸರಕಾರದವರು ಚಡಿಗಳಿಂದ ನನ್ನನ್ನು ಹೊಡಿಸಿದರು[1]; ಒಂದು ಸಾರಿ ಜನರು ನನ್ನನ್ನು ಕೊಲ್ಲುವದಕ್ಕೆ ಕಲ್ಲೆಸೆದರು[2]; ಮೂರು ಸಾರಿ ನಾನಿದ್ದ ಹಡಗವು ಒಡೆದುಹೋಯಿತು; ಒಂದು ರಾತ್ರಿ
26 ಒಂದು ಹಗಲು ಸಮುದ್ರದ ನೀರಿನಲ್ಲಿ ಕಳೆದೆನು. ಆತನ ಸೇವೆಯಲ್ಲಿ ಎಷ್ಟೋ ಪ್ರಯಾಣ

[1] ಅಪೊಸ್ತಲರ ಕೃತ್ಯ ೧೬, ೨೨. [2] ಅಪೊಸ್ತಲರ ಕೃತ್ಯ ೧೪, ೧೯.

ಗಳನ್ನು ಮಾಡಿದೆನು; ನದಿಗಳ ಅಪಾಯಗಳೂ ಕಳ್ಳರ ಅಪಾಯಗಳೂ ಸ್ವಂತಜನರಿಂದ ಅಪಾಯಗಳೂ ಅನ್ಯಜನರಿಂದ ಅಪಾಯಗಳೂ ಪಟ್ಟಣದಲ್ಲಿ ಅಪಾಯಗಳೂ ಕಾಡಿನಲ್ಲಿ ಅಪಾಯಗಳೂ ಸಮುದ್ರದಲ್ಲಿ ಅಪಾಯಗಳೂ ಸುಳ್ಳುಸಹೋದರರೊಳಗೆ ಇರುವಾಗ ಅಪಾಯಗಳೂ ನನಗೆ ಸಂಭವಿಸಿದವು. 27 ಪ್ರಯಾಸ ಪರಿಶ್ರಮಗಳಿಂದ ಕೆಲಸ ನಡಿಸಿ ಅನೇಕ ಸಾರಿ ನಿದ್ದೆಗೆಟ್ಟು ಹಸಿವೆ ಬಾಯಾರಿಕೆಗಳನ್ನು ಪಟ್ಟು ಅನೇಕ ಸಾರಿ ಉಪವಾಸವಾಗಿಯೂ ಚಳಿಯಲ್ಲಿಯೂ ವಸ್ತ್ರವಿಲ್ಲದೆಯೂ ಇದ್ದು ಆತನನ್ನು ಸೇವಿಸಿದ್ದೇನೆ. 28 ಇನ್ನೂ ಬೇರೆ ಸಂಗತಿಗಳಲ್ಲದೆ ಎಲ್ಲಾ ಸಭೆಗಳ ವಿಷಯವಾದ ಚಿಂತೆಯು ದಿನದಿನ ನನ್ನನ್ನು ಪೀಡಿಸುತ್ತದೆ. 29 ಯಾವನಾದರೂ ಬಲವಿಲ್ಲದವನಾದರೆ, ನಾನು ಅವನೊಂದಿಗೆ ಬಲವಿಲ್ಲದವನಾಗದೆ ಇರುವೆನೋ? ಯಾವನಾದರೂ ಪಾಪದಲ್ಲಿ ಸಿಕ್ಕಿಕೊಂಡರೆ, ನಾನು ತಾಪಪಡುವದಿಲ್ಲವೋ?

30 ನಾನು ಹೊಗಳಿಕೊಳ್ಳಬೇಕಾದರೆ, ನನ್ನ ಬಲಹೀನತೆಯನ್ನು ತೋರ್ಪಡಿಸುವ ವಿಷಯಗಳಲ್ಲಿ ಹೊಗಳಿಕೊಳ್ಳುವೆನು. 31 ನಾನು ಸುಳ್ಳಾಡುವದಿಲ್ಲವೆಂದು ಕರ್ತನಾದ ಯೇಸುವಿನ ತಂದೆಯೂ ನಿರಂತರ ಸ್ತುತಿಹೊಂದತಕ್ಕವನೂ ಆಗಿರುವ ದೇವರೇ ಬಲ್ಲನು. 32 ದಮಸ್ಕದಲ್ಲಿ ಅರಸನಾದ ಅರೇತನ ಅಧೀನದಲ್ಲಿದ್ದ ಅಧಿಪತಿಯು ನನ್ನನ್ನು ಹಿಡಿಯಬೇಕೆಂದು ದಮಸ್ಕದವರ ಪಟ್ಟಣವನ್ನು ಕಾಯುತ್ತಿರಲು, 33 ನಾನು ಒಂದು ಕಲ್ಲಿಯಲ್ಲಿ ಕೂತು ಗೋಡೆಯಲ್ಲಿದ್ದ ಕಿಟಿಕಿಯೊಳಗಿಂದ ಇಳಿಸಲ್ಪಟ್ಟು ಅವನ ಕೈಗೆ ತಪ್ಪಿಸಿಕೊಂಡೆನು.

**12** ಹೊಗಳಿಕೊಳ್ಳುವದು ವಿಹಿತವಲ್ಲದಿದ್ದರೂ ಅದು ನನಗೆ ಅವಶ್ಯವಾಗಿದೆ. ಆದದರಿಂದ ಕರ್ತನು ನನಗೆ ದಯಪಾಲಿಸಿದ ದರ್ಶನಗಳನ್ನು ಕುರಿತೂ ತಿಳಿಯಪಡಿಸಿದ ರಹಸ್ಯಗಳನ್ನು ಕುರಿತೂ ಹೇಳುತ್ತೇನೆ. 2 ಕ್ರಿಸ್ತನಲ್ಲಿದ್ದ ಒಬ್ಬ ಮನುಷ್ಯನನ್ನು ಬಲ್ಲೆನು, ಅವನು ಹದಿನಾಲ್ಕು ವರುಷಗಳ ಹಿಂದೆ ಮೂರನೇ ಆಕಾಶದ ಪರಿಯಂತರಕ್ಕೂ ಒಯ್ಯಲ್ಪಟ್ಟನು. ಅವನು ದೇಹಸಹಿತನಾಗಿ ಒಯ್ಯಲ್ಪಟ್ಟನೋ ದೇಹರಹಿತನಾಗಿ ಒಯ್ಯಲ್ಪಟ್ಟನೋ ನಾನರಿಯೆ, ದೇವರೇ ಬಲ್ಲನು. 3-4 ಅಂಥಾ ಮನುಷ್ಯನು ಪರದೈಸಕ್ಕೆ ಒಯ್ಯಲ್ಪಟ್ಟು, ಮನುಷ್ಯರು ನುಡಿಯಲಶಕ್ಯವಾದ ಹೇಳಬಾರದ ಮಾತುಗಳನ್ನು ಕೇಳಿದನೆಂದು ಬಲ್ಲೆನು; ಆ ಸಮಯದಲ್ಲಿ ಅವನು ದೇಹಸಹಿತನಾಗಿದ್ದನೋ ದೇಹರಹಿತನಾಗಿದ್ದನೋ ನಾನರಿಯೆ, ದೇವರೇ ಬಲ್ಲನು. 5 ಅಂಥವನನ್ನು ಕುರಿತು ಹೆಚ್ಚಳಪಡುವೆನು, ನನ್ನನ್ನು ಕುರಿತಾದರೋ ನನ್ನ ನಿರ್ಬಲಾವಸ್ಥೆಗಳಲ್ಲಿಯೇ ಹೊರತು ಬೇರೆ ಹೆಚ್ಚಳಪಡುವದಿಲ್ಲ. 6 ಹೊಗಳಿಕೊಳ್ಳುವದಕ್ಕೆ ನನಗೆ ಒಂದು ವೇಳೆ ಮನಸ್ಸಿದ್ದಾಗ್ಯೂ ಹಾಗೆ ಹೊಗಳಿಕೊಳ್ಳುವದರಲ್ಲಿ ನಾನು ಬುದ್ಧಿಹೀನನಾಗುವದಿಲ್ಲ, ಯಾಕಂದರೆ ಸತ್ಯವನ್ನೇ ಹೇಳುತ್ತಿರುವೆನು. ಆದಾಗ್ಯೂ ಯಾವನೂ ನನ್ನಲ್ಲಿ ಕಾಣುವದಕ್ಕಿಂತಲೂ ನನ್ನಿಂದ ಕೇಳುವದಕ್ಕಿಂತಲೂ ಹೆಚ್ಚಾಗಿ ನನ್ನನ್ನು ಕುರಿತು ಎಣಿಸಬಾರದು. 7 ಈ ಕಾರಣದಿಂದಲೂ ನನಗೆ ತಿಳಿಸಲ್ಪಟ್ಟ ರಹಸ್ಯಗಳು ಬಹು ವಿಶೇಷವಾಗಿರುವದರಿಂದಲೂ ನಾನು ಹೊಗಳಿಕೊಳ್ಳದೆ ಸುಮ್ಮನಿರುತ್ತೇನೆ. ನಾನು ನನ್ನನ್ನು ಅತಿಶಯವಾಗಿ ಹೆಚ್ಚಿಸಿಕೊಳ್ಳಬಾರದೆಂದು ಒಂದು ಶೂಲ[1] ನನ್ನ ಶರೀರದಲ್ಲಿ ನಾಟಿದೆಯೋ ಎಂಬಂತೆ ನನ್ನನ್ನು ಗುದ್ದುವದಕ್ಕೆ ಸೈತಾನನ ದೂತರಲ್ಲಿ ಒಬ್ಬನು

[1] ಅಥವಾ, ಮುಳ್ಳು.

ನನ್ನ ಬಳಿಗೆ ಕಳುಹಿಸಲ್ಪಟ್ಟನು; ನಾನು ಅತಿಶಯವಾಗಿ ಹೆಚ್ಚಿಸಿಕೊಳ್ಳಬಾರದೆಂತಲೇ
8 ಇದಾಯಿತು. ಈ ಪೀಡೆಗೆ ನನ್ನನ್ನು ತಪ್ಪಿಸಬೇಕೆಂದು ಮೂರು ಸಾರಿ ಕರ್ತನನ್ನು ಬೇಡಿ
9 ಕೊಂಡೆನು. ಅದಕ್ಕಾತನು—ನನ್ನ ಕೃಪೆಯೇ ನಿನಗೆ ಸಾಕು; ಬಲಹೀನತೆಯಲ್ಲಿಯೇ ಬಲವು ಪೂರ್ಣ ಸಾಧಕವಾಗುತ್ತದೆ ಎಂದು ನನಗೆ ಹೇಳಿದ್ದಾನೆ. ಹೀಗಿರಲಾಗಿ ಕ್ರಿಸ್ತನ ಬಲವು ನನ್ನಲ್ಲಿ ನೆಲಿಸಿಕೊಂಡಿರಬೇಕೆಂದು ನನಗುಂಟಾಗುವ ನಿರ್ಬಲಾವಸ್ಥೆಗಳ ವಿಷಯ
10 ದಲ್ಲಿಯೇ ಬಹು ಸಂತೋಷವಾಗಿ ಹೆಚ್ಚಳಪಡುವೆನು. ಆದದರಿಂದ ಕ್ರಿಸ್ತನ ನಿಮಿತ್ತ ನನಗೆ ನಿರ್ಬಲಾವಸ್ಥೆಯೂ ತಿರಸ್ಕಾರವೂ ಕೊರತೆಯೂ ಹಿಂಸೆಯೂ ಇಕ್ಕಟ್ಟೂ ಸಂಭವಿಸಿದಾಗ ಸಂತುಷ್ಟನಾಗಿದ್ದೇನೆ. ನಾನು ಯಾವಾಗ ನಿರ್ಬಲನಾಗಿದ್ದೇನೋ ಆವಾಗಲೇ ಬಲವುಳ್ಳವನಾಗಿದ್ದೇನೆ.

ಪೌಲನು ತನ್ನ ಪ್ರತಿವಾದವನ್ನು ಮುಗಿಸಿ ತಾನು ಕೊರಿಂಥಕ್ಕೆ ಬಂದು ಎಲ್ಲವನ್ನು ಕ್ರಮಪಡಿಸುವೆನೆಂದು ಹೇಳುವದು.

11 ನಾನು ಹೀಗೆ ಬರೆದು ಬುದ್ಧಿಹೀನನಾದೆನು; ಇದಕ್ಕೆ ನೀವೇ ನನ್ನನ್ನು ಬಲವಂತ ಮಾಡಿದಿರಿ. ನಿಮ್ಮಿಂದಲೇ ನನಗೆ ಹೊಗಳಿಕೆಯು ಉಂಟಾಗಬೇಕಾಗಿತ್ತು; ಯಾಕಂದರೆ ನಾನು ಕೇವಲ ಅಲ್ಪನಾದಾಗ್ಯೂ ಅತಿಶ್ರೇಷ್ಠರಾದ ಅಪೊಸ್ತಲರು ಅನ್ನಿಸಿಕೊಳ್ಳುವ ಆ ಜನರಿ
12 ಗಿಂತ ಒಂದರಲ್ಲಿಯಾದರೂ ಕಡಿಮೆಯಾಗಲಿಲ್ಲ. ನಾನು ಹಿಂಸೆಯನ್ನು ಸ್ಥಿರಚಿತ್ತದಿಂದ ತಾಳಿಕೊಳ್ಳುವದರಲ್ಲಿಯೂ ಸೂಚಕಕಾರ್ಯಗಳನ್ನೂ ಅದ್ಭುತಗಳನ್ನೂ ಮಹತ್ಕಾರ್ಯಗಳನ್ನೂ ನಡಿಸಿದ್ದರಲ್ಲಿಯೂ[1] ಅಪೊಸ್ತಲನಿಗೆ ಇರತಕ್ಕ ಲಕ್ಷಣಗಳು ನಿಮ್ಮ ಮಧ್ಯದಲ್ಲಿ ತೋರಿದವು.

13 ನನ್ನನ್ನು ಸಂರಕ್ಷಿಸುವ ಭಾರವನ್ನು ನಾನು ನಿಮ್ಮ ಮೇಲೆ ಹಾಕಲಿಲ್ಲವೆಂಬುವ ಒಂದೇ ವಿಷಯದಲ್ಲಿ ಹೊರತು ಇನ್ನಾವ್ಯವ ವಿಷಯದಲ್ಲಿಯೂ ನಿಮ್ಮನ್ನು ಮಿಕ್ಕಾದ ಸಭೆಗಳವರಿಗಿಂತ ಕಡಿಮೆ ಮಾಡಲಿಲ್ಲವಲ್ಲಾ. ನಾನು ಮಾಡಿದ ಈ ಅನ್ಯಾಯವನ್ನು ಕ್ಷಮಿಸಿರಿ.
14 ಇಗೋ, ನಾನು ನಿಮ್ಮ ಬಳಿಗೆ ಬರುವದಕ್ಕೆ ಸಿದ್ಧವಾಗಿರುವದು ಇದು ಮೂರನೇ ಸಾರಿ; ಮತ್ತು ನಿಮಗೆ ಭಾರವಾಗಿರುವದಿಲ್ಲ; ನಾನು ನಿಮ್ಮ ಸೊತ್ತನ್ನು ಆಶಿಸದೆ ನಿಮ್ಮನ್ನೇ ಆಶಿಸುತ್ತೇನೆ. ಮಕ್ಕಳು ತಂದೆತಾಯಿಗಳಿಗೋಸ್ಕರ ದ್ರವ್ಯವನ್ನು ಕೂಡಿಸಿಡುವದು ಧರ್ಮ
15 ವಲ್ಲ, ತಂದೆತಾಯಿಗಳು ಮಕ್ಕಳಿಗೋಸ್ಕರ ಕೂಡಿಸಿಡುವದೇ ಧರ್ಮ. ನಾನಂತೂ ನನಗಿರುವದನ್ನು ನಿಮ್ಮ ಆತ್ಮಸಂರಕ್ಷಣೆಗೋಸ್ಕರ ಅತಿಸಂತೋಷದಿಂದ ವೆಚ್ಚಮಾಡುತ್ತೇನೆ, ನನ್ನನ್ನೇ ವೆಚ್ಚಮಾಡಿಕೊಳ್ಳುತ್ತೇನೆ. ನಾನು ನಿಮ್ಮನ್ನು ಹೆಚ್ಚಾಗಿ ಪ್ರೀತಿಸಿದರೆ, ನೀವು ನನ್ನನ್ನು ಕಡಿಮೆಯಾಗಿ ಪ್ರೀತಿಸುತ್ತೀರೋ?

16 ಒಂದು ವೇಳೆ ನೀವು—ಅದಿರಲಿ, ತಾನು ನಮಗೆ ಭಾರವಾಗದೆ ಹೋದಾಗ್ಯೂ ಯುಕ್ತಿ
17 ಯುಳ್ಳವನಾಗಿದ್ದು ನಮ್ಮನ್ನು ಉಪಾಯದಿಂದ ಸುಲುಕೊಂಡನೆಂದು ಹೇಳೀರಿ. ನಾನು ನಿಮ್ಮ ಬಳಿಗೆ ಕಳುಹಿಸಿದವರಲ್ಲಿ ಯಾವನ ಮೂಲಕವಾಗಿಯಾಗಲಿ ನಿಮ್ಮನ್ನು ವಂಚಿಸಿ
18 ಏನಾದರೂ ತೆಗೆದುಕೊಂಡೆನೋ? ನಿಮ್ಮ ಬಳಿಗೆ ಹೋಗುವದಕ್ಕೆ ನಾನು ತೀತನನ್ನು

[1] ಅಪೊಸ್ತಲರ ಕೃತ್ಯ ೧೯, ೧೧. ೧೨.

ಪೌಲನು ತಾನು ಮೊದಲು ಬರೆದ ಪತ್ರಿಕೆಯಿಂದ ಒಳ್ಳೇ ಫಲವಾಯಿತೆಂದು ಸಂತೋಷಪಟ್ಟದ್ದು.

ನಿಮ್ಮ ಹೃದಯಗಳಲ್ಲಿ ನಮಗೆ ಸ್ಥಳಕೊಡಿರಿ; ನಾವು ನಿಮ್ಮಲ್ಲಿ ಯಾರಿಗೂ ಅನ್ಯಾಯ 2 ಮಾಡಲಿಲ್ಲ, ಯಾರನ್ನೂ ಕೆಡಿಸಲಿಲ್ಲ, ಯಾರನ್ನೂ ವಂಚಿಸಲಿಲ್ಲ. ನಿಮ್ಮ ಮೇಲೆ ತಪ್ಪು 3 ಹೊರಿಸಬೇಕೆಂದು ನಾನು ಇದನ್ನು ಹೇಳುವದಿಲ್ಲ. ಕೂಡಾ ಸಾಯುವದಕ್ಕೂ ಕೂಡಾ ಬದುಕುವದಕ್ಕೂ ನೀವು ನಮ್ಮ ಹೃದಯದಲ್ಲಿದ್ಧೀರೆಂದು ಮೊದಲೇ ಹೇಳಿದ್ದೇನಲ್ಲಾ. ನಿಮ್ಮಲ್ಲಿ ನನಗೆ ಬಹಳ ಭರವಸ ಉಂಟು; ನಿಮ್ಮ ವಿಷಯದಲ್ಲಿ ನನ್ನ ಉತ್ಸಾಹ ಬಹಳ; 4 ಪರಿಪೂರ್ಣ ಆದರಣೆ ನನಗಾಯಿತು; ನಮಗಾಗುವ ಎಲ್ಲಾ ಸಂಕಟಗಳಲ್ಲಿ ಅತ್ಯಧಿಕ ವಾದ ಸಂತೋಷದಿಂದ ತುಂಬಿದ್ದೇನೆ.

ನಾವು ಮಕೆದೋನ್ಯಕ್ಕೆ ಬಂದಾಗ, ನಮ್ಮ ಮನಸ್ಸಿಗೆ ಏನೂ ಉಪಶಮನವಾಗಲಿಲ್ಲ, 5 ಎಲ್ಲಾ ವಿಷಯಗಳಲ್ಲಿಯೂ ನಮಗೆ ಸಂಕಟವಿತ್ತು; ಹೊರಗೆ ಕಲಹ, ಒಳಗೆ ಭಯ. ಆದರೆ ದೀನಾವಸ್ಥೆಯಲ್ಲಿರುವವರನ್ನು ಸಂತೈಸುವ ದೇವರು ತೀತನ ಬರುವಿಕೆಯಿಂದ 6 ನಮ್ಮನ್ನು ಸಂತೈಸಿದನು. ಅವನ ಬರುವಿಕೆಯಿಂದ ಮಾತ್ರವಲ್ಲದೆ, ಅವನು ತಾನು 7 ನಿಮ್ಮಲ್ಲಿ ಬಹಳ ಆದರಣೆಯನ್ನು ಹೊಂದಿದೆನೆಂದು ಹೇಳಿದ್ದರಿಂದಲೂ ನಮ್ಮನ್ನು ಸಂತೈಸಿ ದನು. ಅವನು ನಿಮ್ಮ ಹಂಬಲ ನಿಮ್ಮ ಗೋಳಾಟ ನನ್ನ ವಿಷಯವಾದ ನಿಮ್ಮ ಆಸಕ್ತಿ ಇವುಗಳನ್ನು ನಮಗೆ ತಿಳಿಸಿದಾಗ ನಾನು ಹೆಚ್ಚಾಗಿ ಸಂತೋಷಪಟ್ಟೆನು.

ನಾನು ಬರೆದ ಪತ್ರಿಕೆಯು ನಿಮ್ಮನ್ನು ದುಃಖಪಡಿಸಿದ್ದಾಗ್ಯೂ ನನಗೆ ಪಶ್ಚಾತ್ತಾಪವಿಲ್ಲ. 8 ಅದು ನಿಮ್ಮನ್ನು ಒಂದು ಗಳಿಗೆ ಹೊತ್ತಾದರೂ ದುಃಖಪಡಿಸಿತೆಂದು ನಾನು ಮೊದಲು ಪಶ್ಚಾತ್ತಾಪಪಡುತ್ತಿದ್ದಾಗ್ಯೂ ಈಗ ಸಂತೋಷಪಡುತ್ತೇನೆ. ನಿಮಗೆ ದುಃಖವಾಯಿ 9 ತೆಂದು ನಾನು ಸಂತೋಷಪಡದೆ ನೀವು ದುಃಖಪಟ್ಟು ಬೇರೆ ಮನಸ್ಸನ್ನು ಹೊಂದಿದ್ದಕ್ಕಾಗಿ ಸಂತೋಷಪಡುತ್ತೇನೆ. ನೀವು ದೇವರ ಚಿತ್ತಾನುಸಾರವಾಗಿ ದುಃಖಿಸಿದ್ದರಿಂದ ನಮ್ಮಿಂದ ಯಾವದರಲ್ಲಿಯೂ ನಷ್ಟಪಡಲಿಲ್ಲವಲ್ಲಾ. ದೇವರ ಚಿತ್ತಾನುಸಾರವಾಗಿರುವ ದುಃಖವು 10 ಮಾನಸಾಂತರವನ್ನುಂಟುಮಾಡಿ ರಕ್ಷಣೆಗೆ ಕಾರಣವಾಗಿದೆ; ಆ ಮಾನಸಾಂತರದಲ್ಲಿ ಪಶ್ಚಾತ್ತಾಪಕ್ಕೆ ಆಸ್ಪದವಿಲ್ಲ; ಆದರೆ ಲೋಕದವರಿಗಿರುವಂಥಾ ದುಃಖವು ಮರಣವ ನ್ನುಂಟುಮಾಡುತ್ತದೆ. ನೀವು ದೇವರ ಚಿತ್ತಾನುಸಾರವಾಗಿ ಪಟ್ಟ ದುಃಖವು ನಿಮಗೆ 11 ಎಂಥಾ ಜಾಗರೂಕತೆಯನ್ನು ಉಂಟುಮಾಡಿತು ನೋಡಿರಿ. ನೀವು ನಿರ್ದೋಷಿಗಳೆಂದು ಸ್ಥಾಪಿಸುವದಕ್ಕೆ ಎಷ್ಟೋ ಪ್ರಯಾಸಪಟ್ಟಿರಿ, ಎಷ್ಟೋ ಮನೋವ್ಯಥೆಯನ್ನು ಅನುಭವಿ ಸಿದಿರಿ; ಎಂಥಾ ಭಯವನ್ನು ಎಂಥಾ ಹಂಬಲವನ್ನು ತೋರಿಸಿದಿರಿ; ಮಾನಹಾನಿಗಾಗಿ ಎಷ್ಟೋ ರೋಷಪಟ್ಟು ಶಿಕ್ಷೆ ಮಾಡಿದಿರಿ. ನೀವು ಆ ಕಾರ್ಯಕ್ಕೆ[1] ಸೇರಿದವರಲ್ಲ ವೆಂಬುವದನ್ನು ಎಲ್ಲಾ ವಿಧದಲ್ಲಿಯೂ ತೋರಿಸಿದಿರಿ. ನಾನು ನಿಮಗೆ ಬರೆದಾಗ ಅನ್ಯಾಯ 12 ಮಾಡಿದವನಿಗೆ ದಂಡನೆಯೂ ಅನ್ಯಾಯಹೊಂದಿದವನಿಗೆ ನ್ಯಾಯವೂ ಆಗಬೇಕೆಂಬುವ ಕಾರಣದಿಂದ ಬರೆಯಲಿಲ್ಲ; ನಮಗೋಸ್ಕರ ನಿಮಗಿರುವ ಜಾಗರೂಕತೆಯು ದೇವರ ಮುಂದೆ ನಿಮಗೆ ವ್ಯಕ್ತವಾಗಬೇಕೆಂಬುವ ಉದ್ದೇಶದಿಂದಲೇ ಬರೆದೆನು.

[1] ೧ನೇ ಪತ್ರಿಕೆ ೫ನೇ ಅಧ್ಯಾಯವನ್ನು ನೋಡಿರಿ.

13 ಆದಕಾರಣ ನಮ್ಮ ಮನಸ್ಸಿಗೆ ಆದರಣೆ ಉಂಟಾಯಿತು. ಅಷ್ಟು ಮಾತ್ರವೇ ಅಲ್ಲ, ತೀತನ ಮನಸ್ಸಿಗೆ ನಿಮ್ಮೆಲ್ಲರಿಂದ ಉಪಶಮನವಾದ ಕಾರಣ ನಾವು ಅವನ ಸಂತೋಷ
14 ವನ್ನು ನೋಡಿ ಮತ್ತೂ ಹೆಚ್ಚಾಗಿ ಸಂತೋಷಪಟ್ಟೆವು. ಯಾಕಂದರೆ ನಾನು ಅವನ ಮುಂದೆ ನಿಮ್ಮನ್ನು ಹೊಗಳಿದ್ದರಲ್ಲಿ ನಾಚಿಕೆ ಪಡಬೇಕಾಗಿ ಬರಲಿಲ್ಲ. ನಾವು ನಿಮಗೆ ಹೇಳಿದ ಎಲ್ಲಾ ಮಾತುಗಳು ಹ್ಯಾಗೆ ಸತ್ಯವಾಗಿದ್ದವೋ ಹಾಗೆ ನಾವು ತೀತನ ಮುಂದೆ
15 ಆಡಿದ ಹೊಗಳಿಕೆಯ ಮಾತುಗಳೂ ಸತ್ಯವೆಂದು ಕಂಡುಬಂದವು. ನೀವು ಮನೋ ಭೀತಿಯಿಂದ ನಡುಗುವವರಾಗಿ ಅವನನ್ನು ಸೇರಿಸಿಕೊಂಡದ್ದರಲ್ಲಿ ನಿಮ್ಮೆಲ್ಲರ ವಿಧೇಯ ತೆಯು ತೋರಬಂತು. ಅವನು ಅದನ್ನು ಜ್ಞಾಪಕ ಮಾಡಿಕೊಳ್ಳುವಾಗ, ನಿಮ್ಮ ಮೇಲೆ
16 ಅವನ ಕನಿಕರವು ಹೆಚ್ಚಾಗಿದೆ. ಸರ್ವವಿಷಯದಲ್ಲೂ ನಿಮ್ಮನ್ನು ಕುರಿತು ನನಗೆ ಭರ ವಸವಿರುವದರಿಂದ ಸಂತೋಷಪಡುತ್ತೇನೆ.

## ಯೆರೂಸಲೇಮಿನ ಬಡ ಕ್ರೈಸ್ತರಿಗಾಗಿ ಹಣಸಹಾಯ ಮಾಡುವದರ ವಿಷಯ.
(8, 1—9, 15.)

ಪೌಲನು ಮಕೆದೋನ್ಯದ ಸಭೆಗಳವರ ಔದಾರ್ಯವನ್ನು ಕುರಿತು ಹೇಳಿ ಕೊರಿಂಥದವರಲ್ಲಿಯೂ ಔದಾರ್ಯವನ್ನು ಹುಟ್ಟಿಸುವದಕ್ಕೆ ಪ್ರಯತ್ನಿಸಿದ್ದು.

8 ಸಹೋದರರೇ, ಮಕೆದೋನ್ಯದ ಸಭೆಗಳಲ್ಲಿ ದೇವರ ಕೃಪೆಯು ತೋರಿದ ಬಗೆಯನ್ನು
2 ನಿಮಗೆ ತಿಳಿಸುತ್ತೇವೆ. ಆ ಸಭೆಗಳವರು ಬಹಳ ಹಿಂಸೆ ತಾಳುವವರಾದಾಗ್ಯೂ ಮತ್ತು ವಿಪರೀತವಾದ ಬಡತನದಲ್ಲಿದ್ದಾಗ್ಯೂ ಬಹು ಆನಂದದಿಂದ ತುಂಬಿದವರಾಗಿ ಅತ್ಯಂತ
3 ಔದಾರ್ಯವುಳ್ಳವರಾದರು. ಅವರು ಶಕ್ತ್ಯನುಸಾರವಾಗಿ ಮಾತ್ರ ಕೊಡದೆ ಶಕ್ತಿಯನ್ನು
4 ಮಿೀರಿ ತಮ್ಮಿಷ್ಟಕ್ಕೆ ತಾವೇ ಕೊಟ್ಟರು; ಇದಕ್ಕೆ ನಾನು ಸಾಕ್ಷಿ. ದೇವಜನರಿಗೆ ಸಹಾಯ ಮಾಡುವ ಕೆಲಸದಲ್ಲಿ ತಾವು ಪಾಲುಗಾರರಾಗುವಂತೆ ಅಪ್ಪಣೆಯಾಗಬೇಕೆಂದು ನಮ್ಮನ್ನು
5 ಬಹಳವಾಗಿ ಬೇಡಿಕೊಂಡರು. ನಾವು ನೆನಸಿದ್ದ ಪ್ರಕಾರವಾಗಿ ಅವರು ಕೊಡದೆ ಮೊದಲು ತಮ್ಮನ್ನೇ ಕರ್ತನಿಗೆ ಒಪ್ಪಿಸಿಕೊಟ್ಟರು; ಅನಂತರ ದೇವರ ಚಿತ್ತಾನುಸಾರವಾಗಿ
6 ನಮಗೂ ತಮ್ಮನ್ನು ಒಪ್ಪಿಸಿದರು. ಹೀಗಿರಲಾಗಿ ಈ ಧರ್ಮಕಾರ್ಯವನ್ನು ಮಾಡು ವದಕ್ಕೆ ಮೊದಲು ನಿಮ್ಮನ್ನು ಪ್ರೇರೇಪಿಸಿದ ತೀತನು ತಿರಿಗಿ ನಿಮ್ಮ ಬಳಿಗೆ ಬಂದು ಅದನ್ನು
7 ತೀರಿಸಬೇಕೆಂದು ನಾವು ಅವನನ್ನು ಕೇಳಿಕೊಂಡಿದ್ದೇವೆ. ನೀವು ದೇವರ ಮೇಲಣ ನಂಬಿಕೆ ವಾಕ್ಚಾತುರ್ಯ ಜ್ಞಾನ ಪೂರ್ಣಜಾಗರೂಕತೆ ನಮ್ಮ ಪ್ರೇರಣೆಯಿಂದ ನಿಮ್ಮಲ್ಲಿ ಹುಟ್ಟಿದ ಪ್ರೀತಿ ಇವೇ ಮೊದಲಾದ ಎಲ್ಲಾ ವಿಷಯಗಳಲ್ಲಿ ಹ್ಯಾಗೆ ಸಮೃದ್ಧರಾಗಿದ್ದೀರೋ ಹಾಗೆಯೇ ಈ ಧರ್ಮಕಾರ್ಯದಲ್ಲಿಯೂ ಸಮೃದ್ಧರಾಗಿರಿ.

8 ಇದನ್ನು ಆಜ್ಞಾರೂಪವಾಗಿ ಹೇಳದೆ, ಇತರರ ಜಾಗರೂಕತೆಯನ್ನು ತೋರಿಸಿಕೊಟ್ಟು ನಿಮ್ಮ ಪ್ರೀತಿಯೂ ಯಥಾರ್ಥವಾದದ್ದೆಂಬುವದನ್ನು ಪರೀಕ್ಷೆಯಿಂದ ತಿಳಿದುಕೊಳ್ಳ
9 ಬೇಕೆಂದು ಹೇಳುತ್ತೇನೆ. ನಮ್ಮ ಕರ್ತನಾದ ಯೇಸು ಕ್ರಿಸ್ತನ ಕೃಪೆಯು ನಿಮಗೆ

ಗೊತ್ತಾಗಿದೆಯಲ್ಲಾ; ಆತನು ಐಶ್ವರ್ಯವಂತನಾಗಿದ್ದು, ತಾನು ಬಡತನದಲ್ಲಿ ಸೇರುವದ
ರಿಂದ ನೀವು ಐಶ್ವರ್ಯವಂತರಾಗಬೇಕೆಂದು ನಿಮಗೋಸ್ಕರ ಬಡವನಾದನು. ಈ ಧರ್ಮ 10
ಕಾರ್ಯವನ್ನು ಕುರಿತು ನನ್ನ ಅಭಿಪ್ರಾಯವನ್ನು ತಿಳಿಸುತ್ತೇನೆ; ಈ ಕಾರ್ಯವನ್ನು
ಒಂದು ವರುಷದ ಹಿಂದೆ ನಡಿಸುವದಕ್ಕೆ ತೊಡಗುವದರಲ್ಲಿಯೂ ನಡಿಸಬೇಕೆಂದು ಮನಸ್ಸು
ಮಾಡುವದರಲ್ಲಿಯೂ ನೀವು ಅವರಿಗಿಂತ ಮೊದಲಿನವರಾದ್ದರಿಂದ ನಿಮಗೆ ಅಷ್ಟು ಮಾತ್ರ
ಹೇಳುವದು ಹಿತವಾಗಿದೆ. ಈ ಕಾರ್ಯವನ್ನು ಪ್ರಾರಂಭಿಸುವದಕ್ಕೆ ಹ್ಯಾಗೆ ನಿಮ್ಮಲ್ಲಿ 11
ಸಿದ್ಧ ಮನಸ್ಸು ಇತ್ತೋ ಹಾಗೆಯೇ ನಿಮ್ಮ ನಿಮ್ಮ ಶಕ್ತ್ಯನುಸಾರವಾಗಿ ನೆರವೇರಿಸಿರಿ.
ಒಬ್ಬನು ಕೊಡುವದಕ್ಕೆ ಮನಸ್ಸುಳ್ಳವನಾಗಿರುವಲ್ಲಿ ಅವನು ತನ್ನಲ್ಲಿ ಇರುವದಕ್ಕೆ ಅನು 12
ಸಾರವಾಗಿ ಕೊಟ್ಟರೆ, ಅದು ಸಮರ್ಪಕವಾಗಿರುವದು; ಅವನಿಗೆ ಇಲ್ಲದನ್ನು ದೇವರು
ಕೇಳಿಕೊಳ್ಳುವದಿಲ್ಲ. ಇತರರಿಗೆ ಕಷ್ಟಪರಿಹಾರವೂ ನಿಮಗೆ ಕಷ್ಟವೂ ಉಂಟಾಗ 13
ಬೇಕೆಂಬುವದು ನನ್ನ ತಾತ್ಪರ್ಯವಲ್ಲ; ಸಮಾನತ್ವವಿರಬೇಕೆಂಬುವದೇ ನನ್ನ ತಾತ್ಪರ್ಯ. 14
ಸದ್ಯಕ್ಕೆ ನಿಮ್ಮ ಸಮೃದ್ಧಿಯು ಅವರ ಕೊರತೆಯನ್ನು ನೀಗಿಸುತ್ತದೆ. ಮುಂದೆ ಅವರ
ಸಮೃದ್ಧಿಯು ನಿಮ್ಮ ಕೊರತೆಯನ್ನು ನೀಗಿಸುವದು; ಹೀಗೆ ಸಮಾನತ್ವವುಂಟಾಗುವದು.
ಬಹಳ ಕೂಡಿಸಿದವನಿಗೆ ಹೆಚ್ಚು ಇರಲಿಲ್ಲ, ಸ್ವಲ್ಪ ಕೂಡಿಸಿದವನಿಗೆ ಕಡಿಮೆ ಇರಲಿಲ್ಲ 15
ಎಂದು[1] ಶಾಸ್ತ್ರದಲ್ಲಿ ಬರೆದಿರುವ ಪ್ರಕಾರವಾಗುವದು.

**ಧರ್ಮದ್ರವ್ಯವನ್ನು ಕೂಡಿಸುವದಕ್ಕೆ ಪೌಲನು ಯೋಗ್ಯರಾದ ಕೆಲವು ಪುರುಷರನ್ನು ಕೊರಿಂಥಕ್ಕೆ ಕಳುಹಿಸಿದ್ದು.**

ನಿಮ್ಮ ವಿಷಯವಾಗಿ ನನಗಿರುವ ಹಿತಚಿಂತನೆಯನ್ನು ದೇವರು ತೀತನ ಹೃದಯ 16
ದಲ್ಲಿಯೂ ಹುಟ್ಟಿಸಿದ್ದಕ್ಕಾಗಿ ಆತನಿಗೆ ಸ್ತೋತ್ರವಾಗಲಿ. ಅವನು ನಿಮ್ಮ ಬಳಿಗೆ ಹೋಗ 17
ಬೇಕೆಂದು ನಾವು ಕೇಳಿಕೊಂಡಾಗ ಅವನು ಒಪ್ಪಿದ್ದಲ್ಲದೆ ಅತ್ಯಾಸಕ್ತನಾಗಿದ್ದು ತನ್ನಷ್ಟಕ್ಕೆ
ತಾನೇ ನಿಮ್ಮ ಬಳಿಗೆ ಬರುವದಕ್ಕೆ ಹೊರಟಿದ್ದಾನೆ. ಅವನ ಜೊತೆಯಲ್ಲಿ ಮತ್ತೊಬ್ಬ 18
ಸಹೋದರನನ್ನು ಕಳುಹಿಸಿದ್ದೇವೆ; ಈ ಸಹೋದರನು ಸುವಾರ್ತಾಸೇವೆಯಲ್ಲಿ ಎಲ್ಲಾ
ಸಭೆಗಳೊಳಗೆ ಕೀರ್ತಿಪಡಕೊಂಡವನಾಗಿದ್ದಾನೆ. ಇದು ಮಾತ್ರವಲ್ಲದೆ, ನಾವು ನಡಿ 19
ಸುವ ಈ ಧರ್ಮಕಾರ್ಯಸಂಬಂಧವಾಗಿ ಸಭೆಗಳವರು ಈತನನ್ನು ನಮ್ಮ ಸಂಗಡ
ಪ್ರಯಾಣಮಾಡುವಂತೆ ಗೊತ್ತುಮಾಡಿದ್ದಾರೆ. ಅವರು ಹೀಗೆ ಮಾಡಿದ್ದರಿಂದ ಕರ್ತ
ನಿಗೆ ಘನವೂ ನಮ್ಮಲ್ಲಿ ಸಿದ್ಧ ಮನಸ್ಸೂ ಉಂಟಾಗುವದು. ನಾವು ಪಾರುಪತ್ಯಮಾಡುವ 20
ಈ ದ್ರವ್ಯಸಂಚಯದ ವಿಷಯದಲ್ಲಿ ಒಬ್ಬರೂ ನಮ್ಮ ಮೇಲೆ ತಪ್ಪು ಹೊರಿಸುವದಕ್ಕೆ ಆಸ್ಪ
ದವಿರಬಾರದು. ಯಾಕಂದರೆ ಕರ್ತನ ದೃಷ್ಟಿಯಲ್ಲಿ ಮಾತ್ರವಲ್ಲದೆ ಮನುಷ್ಯರ ದೃಷ್ಟಿ 21
ಯಲ್ಲಿಯೂ ಗೌರವವಾದದ್ದನ್ನು[2] ಯೋಚನೆಗೆ ತಂದುಕೊಳ್ಳುವವರಾಗಿದ್ದೇವೆ. ಇವರಿ 22
ಬ್ಬರ ಸಂಗಡ ನಮ್ಮ ಸಹೋದರರಲ್ಲಿ ಮತ್ತೊಬ್ಬನನ್ನು ಕಳುಹಿಸಿದ್ದೇವೆ; ನಾವು ಅನೇಕ
ಸಮಯಗಳಲ್ಲಿಯೂ ಅನೇಕ ಕಾರ್ಯಗಳಲ್ಲಿಯೂ ಅವನನ್ನು ಪರೀಕ್ಷಿಸಿ ಆಸಕ್ತನೆಂದು
ತಿಳುಕೊಂಡಿದ್ದೇವೆ; ಈಗಲಾದರೋ ಅವನು ನಿಮ್ಮಲ್ಲಿಟ್ಟಿರುವ ವಿಶೇಷ ಭರವಸದಿಂದ

1) ಹೊರಡೋಣ ೧೬, ೧೮. 2) ಸಾಮತಿ ೩, ೪.

23 ಇನ್ನೂ ಬಹು ಹೆಚ್ಚಾಗಿ ಆಸಕ್ತಿಯುಳ್ಳವನಾಗಿದ್ದಾನೆ. ತೀತನನ್ನು ಕುರಿತು ಕೇಳು ತ್ತೀರೋ, ಅವನು ನನ್ನ ಪಾಲುಗಾರನೂ ನಿಮ್ಮ ಪ್ರಯೋಜನಕ್ಕಾಗಿ ನನಗೆ ಸಹಕಾ ರಿಯೂ ಆಗಿದ್ದಾನೆ; ಆ ಸಹೋದರರನ್ನು ಕುರಿತು ಕೇಳುತ್ತೀರೋ, ಅವರು ಸಭೆಗಳಿಂದ
24 ಕಳುಹಿಸಲ್ಪಟ್ಟವರೂ ಕ್ರಿಸ್ತನ ಮಹಿಮೆಯನ್ನು ಪ್ರಕಾಶಪಡಿಸುವವರೂ ಆಗಿದ್ದಾರೆ. ಆದ ಕಾರಣ ನಿಮ್ಮ ಪ್ರೀತಿಯು ಯಥಾರ್ಥವಾದದ್ದೆಂಬುವದನ್ನೂ ನಿಮ್ಮನ್ನು ನಾವು ಹೊಗ ಳಿದ್ದು ನ್ಯಾಯವೆಂಬುವದನ್ನೂ ಇವರಿಗೂ ಸಭೆಗಳಿಗೂ ತೋರಿಸಿಕೊಡಿರಿ.

**9** ದೇವಜನರಿಗೋಸ್ಕರ ನಡೆಯುವ ಸಹಾಯಕಾರ್ಯವನ್ನು ಕುರಿತು ನಿಮಗೆ ಬರೆಯು
2 ವದಕ್ಕೆ ಅವಶ್ಯವಿಲ್ಲ. ನಿಮ್ಮ ಮನಸ್ಸು ಸಿದ್ಧವಾಗಿದೆ ಎಂಬುವದು ನನಗೆ ಗೊತ್ತುಂಟು. ಒಂದು ವರುಷದ ಹಿಂದೆ ಅಖಾಯದವರು ಸಹಾಯಮಾಡುವದಕ್ಕೆ ಸಿದ್ಧವಾಗಿದ್ದರೆಂದು ಮಕೆದೋನ್ಯದವರ ಮುಂದೆ ನಿಮ್ಮನ್ನು ಹೊಗಳುತ್ತಾ ಇದ್ದೇನೆ. ಮತ್ತು ನಿಮ್ಮ ಆಸ
3 ಕ್ತಿಯು ಅವರಲ್ಲಿ ಬಹುಜನರನ್ನು ಪ್ರೇರೇಪಿಸಿತು. ಆದಾಗ್ಯೂ ನಾವು ನಿಮ್ಮನ್ನು ಹೊಗ ಳಿದ್ದು ನಿರಾಧಾರವಾಗದೆ ನಾನು ಹೇಳಿದ ಪ್ರಕಾರವೇ ನೀವು ಸಿದ್ಧವಾಗಿರಬೇಕೆಂದು ಆ
4 ಸಹೋದರರನ್ನು ಕಳುಹಿಸಿದ್ದೇನೆ. ಸಿದ್ಧವಾಗದಿದ್ದರೆ, ಒಂದು ವೇಳೆ ಮಕೆದೋನ್ಯದವ ರಲ್ಲಿ ಯಾರಾದರೂ ನನ್ನ ಸಂಗಡ ಬಂದು ನೀವು ಸಿದ್ಧವಾಗಲಿಲ್ಲವೆಂಬುವದನ್ನು ಕಾಣು ವಾಗ ನಮಗೆ ಇಂಥಾ ಭರವಸವಿದ್ದದ್ದಕ್ಕೆ ನಾವು ನಾಚಿಕೆಪಡಬೇಕಾದೀತು; ನಿಮಗೂ
5 ನಾಚಿಕೆಯಾಗುವದೆಂದು ನಾವು ಬೇರೆ ಹೇಳಬೇಕೇ. ಹೀಗಿರಲಾಗಿ ಈ ಸಹೋದರರು ಮುಂದಾಗಿ ನಿಮ್ಮ ಬಳಿಗೆ ಬಂದು, ಕೊಡುತ್ತೇವೆಂದು ನೀವು ಮೊದಲು ಹೇಳಿದ ಧರ್ಮ ದ್ರವ್ಯವನ್ನು ಸಿದ್ಧಪಡಿಸಬೇಕೆಂಬದಾಗಿ ಇವರನ್ನು ಬೇಡಿಕೊಳ್ಳುವದು ಅವಶ್ಯವೆಂದು ನನಗೆ ತೋಚಿತು. ಹೀಗೆ ಆ ಹಣವು ಸುಲಿಗೆಯಂತೆ ಬಾರದೆ ಧರ್ಮಾರ್ಥವಾಗಿಯೇ ಸಿದ್ಧವಾಗುವದು.

ಪೌಲನು ಕೊರಿಂಥದ ಸಭೆಯವರನ್ನು ಉದಾರವಾಗಿ ಕೊಡುವದಕ್ಕೆ ಪ್ರೇರೇಪಿಸುವದು.

6 ಆದರೆ ಸ್ವಲ್ಪವಾಗಿ ಬಿತ್ತುವವನು ಪೈರನ್ನು ಸ್ವಲ್ಪವಾಗಿ ಕೊಯ್ಯುವನು; ಹೆಚ್ಚಾಗಿ
7 ಬಿತ್ತುವವನು ಹೆಚ್ಚಾಗಿ ಕೊಯ್ಯುವನು ಎಂದು ತಿಳುಕೊಳ್ಳಿರಿ. ಪ್ರತಿಯೊಬ್ಬನು ತನ್ನ ತನ್ನ ಹೃದಯದಲ್ಲಿ ನಿರ್ಣಯಿಸಿಕೊಂಡ ಪ್ರಕಾರ ಕೊಡಲಿ; ದುಃಖದಿಂದಾಗಲಿ ಬಲಾತ್ಕಾರ ದಿಂದಾಗಲಿ ಯಾರೂ ಕೊಡಬಾರದು; ಯಾಕಂದರೆ ಸಂತೋಷವಾಗಿ ಕೊಡುವವನ
8 ಮೇಲೆ ದೇವರಿಗೆ ಪ್ರೀತಿಯುಂಟು. ದೇವರು ಸಕಲ ವಿಧವಾದ ದಾನಗಳನ್ನು ನಿಮಗೆ ಧಾರಾಳವಾಗಿ ಅನುಗ್ರಹಿಸುವದಕ್ಕೆ ಶಕ್ತನಾದ್ದರಿಂದ ನೀವು ಯಾವಾಗಲೂ ಎಲ್ಲಾ ವಿಷ ಯಗಳಲ್ಲಿ ಪರಿಪೂರ್ಣತೆಯುಳ್ಳವರಾಗಿ ಸಕಲ ಸತ್ಕಾರ್ಯಗಳನ್ನು ಹೇರಳವಾಗಿ ಮಾಡು
9 ವವರಾಗಿರಬೇಕು. ಉಪಕಾರಿಯ ವಿಷಯದಲ್ಲಿ—

ಅವನು ಧಾರಾಳವಾಗಿ ದಾನ ಮಾಡಿದನು; ಬಡವರಿಗೆ ಉಪಕಾರ ಮಾಡಿದನು;
ಅವನ ಧರ್ಮದ ಫಲವು ಸದಾಕಾಲವೂ ಇರುವದು[1]

[1] ಕೀರ್ತನೆ ೧೧೨, ೯.

ಎಂದು ಶಾಸ್ತ್ರದಲ್ಲಿ ಬರೆದದೆಯಲ್ಲಾ. ಬಿತ್ತುವವನಿಗೆ ಬೀಜವನ್ನೂ ಉಣ್ಣುವವನಿಗೆ 10
ಆಹಾರವನ್ನೂ ಕೊಡುವಾತನು ನಿಮಗೂ ಬಿತ್ತುವದಕ್ಕೆ ಬೀಜವನ್ನು[1] ಕೊಟ್ಟು ಹೆಚ್ಚಿಸಿ,
ನಿಮ್ಮ ಧರ್ಮಕಾರ್ಯಗಳಿಂದಾಗುವ ಫಲಗಳನ್ನು ವೃದ್ಧಿಪಡಿಸುವನು. ಹೀಗೆ ನೀವು 11
ಎಲ್ಲಾ ವಿಷಯಗಳಲ್ಲಿ ಐಶ್ವರ್ಯವಂತರಾಗಿದ್ದು ಉದಾರವಾಗಿ ಕೊಡ ಶಕ್ತರಾಗುವಿರಿ;
ಇದಲ್ಲದೆ ನಿಮ್ಮ ದಾನಗಳು ನಮ್ಮ ಕೈಯಿಂದ ಮತ್ತೊಬ್ಬರಿಗೆ ಸೇರಿದಾಗ ದೇವರಿಗೆ ಕೃತ
ಜ್ಞತಾಸ್ತುತಿಯನ್ನುಂಟುಮಾಡುವದು. ಹ್ಯಾಗಂದರೆ ನೀವು ನಡಿಸುವ ಈ ಧರ್ಮ 12
ಕಾರ್ಯವು ದೇವಜನರ ಕೊರತೆಗಳನ್ನು ನೀಗುವದು ಮಾತ್ರವಲ್ಲದೆ ಅನೇಕರಿಂದ ದೇವ
ರಿಗೆ ಕೃತಜ್ಞತಾಸ್ತುತಿಯನ್ನು ಹುಟ್ಟಿಸುವದು. ಈ ಸಹಾಯದಿಂದ ತೋರಿಬಂದ ನಿಮ್ಮ 13
ಯೋಗ್ಯಭಾವವನ್ನು ಅವರು ನೋಡುವಾಗ, ನೀವು ಮಾಡಿದ್ದ ಪ್ರತಿಜ್ಞೆಗೆ ಸರಿಯಾಗಿ
ಕ್ರಿಸ್ತನ ಸುವಾರ್ತೆಯನ್ನು ಅನುಸರಿಸಿದ್ದರಿಂದಲೂ ತಮಗೂ ಎಲ್ಲರಿಗೂ ನೀವು ಉದಾರ
ವಾಗಿ ಸಹಾಯಮಾಡಿದ್ದರಿಂದಲೂ ದೇವರನ್ನು ಕೊಂಡಾಡುವರು. ಇದಲ್ಲದೆ ನಿಮ 14
ಗೋಸ್ಕರ ವಿಜ್ಞಾಪನೆಮಾಡಿ ದೇವರ ಅತಿಶಯವಾದ ಕೃಪೆಯು ನಿಮ್ಮಲ್ಲಿ ಇರುವದರಿಂದ
ನಿಮ್ಮ ಪರಿಚಿತಿಮಾಡಬೇಕೆಂದು ಕೋರುವರು. ವರ್ಣಿಸಲಶಕ್ಯವಾದ ವರವನ್ನು 15
ದೇವರು ದಯಪಾಲಿಸಿದ್ದಕ್ಕಾಗಿ ಆತನಿಗೆ ಸ್ತೋತ್ರ.

## ತನಗೆ ಅಧಿಕಾರವಿಲ್ಲವೆಂದು ವಿರೋಧಿಗಳು ಹೇಳಿದ ಮಾತಿಗೆ ಪೌಲನು ಕೊಡುವ ಉತ್ತರ. (10, 1—13, 10.)

ತನಗೆ ಅಧಿಕಾರ ಉಂಟೆಂಬುವದನ್ನೂ ಅದು ಎಂಥಾ ಅಧಿಕಾರವೆಂಬುವದನ್ನೂ ಕೊರಿಂಥಕ್ಕೆ ಬಂದಾಗ ತೋರಿಸುವೆನೆಂದು ಪೌಲನು ಖಂಡಿತವಾಗಿ ಹೇಳುವದು.

ಪೌಲನು ನಮ್ಮೆದುರಿನಲ್ಲಿರುವಾಗ ದೀನನಾಗಿ ನಡಕೊಳ್ಳುವವನೂ ದೂರದಲ್ಲಿರು 10
ವಾಗ ನಮ್ಮನ್ನು ಕುರಿತು ದಿಟ್ಟತನ ತೋರಿಸುವವನೂ ಆಗಿದ್ದಾನೆ ಎಂದು ಹೇಳುವವರು
ನಿಮ್ಮಲ್ಲಿದ್ದಾರಲ್ಲಾ. ಆ ಪೌಲನೆಂಬ ನಾನು ಕ್ರಿಸ್ತನ ಶಾಂತಮನಸ್ಸನ್ನೂ ಸಾತ್ವಿಕತ್ವವನ್ನೂ
ನೆನಪಿಗೆ ತಂದುಕೊಂಡು ನಿಮಗೆ ಖಂಡಿತವಾಗಿ ಹೇಳುವದೇನಂದರೆ, ಯಾರು ನಮ್ಮನ್ನು 2
ಲೋಕಾನುಸಾರಿಗಳೆಂದು ಎಣಿಸುತ್ತಾರೋ ಅವರಿಗೆ ದಿಟ್ಟವಾದ ಧೈರ್ಯವನ್ನು ತೋರಿಸ
ಬೇಕೆಂದು ಯೋಚಿಸುತ್ತಾ ಇದ್ದೇನೆ. ನಾವು ನಿಮ್ಮಲ್ಲಿಗೆ ಬಂದಿರುವಾಗ ಅಂಥ ದಿಟ್ಟತನ
ವನ್ನು ತೋರಿಸುವದಕ್ಕೆ ಅವಕಾಶ ಉಂಟಾಗಬಾರದೆಂದು ನಿಮ್ಮನ್ನು ಬೇಡಿಕೊಳ್ಳುತ್ತೇನೆ.
ನಾವು ಲೋಕದಲ್ಲಿದ್ದಾಗ್ಯೂ ಲೋಕಾನುಸಾರವಾಗಿ ಯುದ್ಧಮಾಡುವವರಲ್ಲ. ನಾವು 3, 4
ಉಪಯೋಗಿಸುವ ಆಯುಧಗಳು ಲೋಕಸಂಬಂಧವಾದ ಆಯುಧಗಳಲ್ಲ; ಅವು ದೇವರ
ಎಣಿಕೆಯಲ್ಲಿ ಬಲವಾಗಿದ್ದು ಕೋಟೆಗಳನ್ನು ಕೆಡವಿಹಾಕುವಂಥವುಗಳಾಗಿವೆ. ನಾವು
ವಿತರ್ಕಗಳನ್ನೂ ದೇವಜ್ಞಾನವನ್ನು ವಿರೋಧಿಸುವದಕ್ಕೆ ಏರಿಸಲ್ಪಟ್ಟಿರುವ ಉನ್ನತವಾದ 5
ಎಲ್ಲಾ ಕೊತ್ತಲಗಳನ್ನೂ ಕೆಡವಿಹಾಕಿ, ಎಲ್ಲಾ ಯೋಚನೆಗಳನ್ನು ಕ್ರಿಸ್ತನಿಗೆ ವಿಧೇಯ

[1] ಅಂದರೆ, ದಾನಮಾಡುವದಕ್ಕೆ ಬೇಕಾದದ್ದನ್ನು.

6 ವಾಗುವಂತೆ ಸೆರೆಹಿಡಿದು, ನಿಮ್ಮ ವಿಧೇಯತ್ವವು ಪರಿಪೂರ್ಣವಾದ ಮೇಲೆ ಎಲ್ಲಾ ಅವಿಧೇಯತ್ವಕ್ಕೆ ಶಿಕ್ಷೆ ಮಾಡುವದಕ್ಕೆ ಸಿದ್ಧರಾಗಿದ್ದೇವೆ.

7 ನೀವು ಮುಖದ ಮುಂದೆ ಇರುವಂಥಾದ್ದನ್ನು ಮಾತ್ರ ನೋಡುತ್ತೀರಿ. ಯಾವನಾದರೂ ತನ್ನನ್ನು ಕ್ರಿಸ್ತನವನೆಂದು ನಂಬಿಕೊಂಡರೆ, ಅವನು ತಿರಿಗಿ ಆಲೋಚನೆಮಾಡಿಕೊಂಡು ತಾನು ಹ್ಯಾಗೆ ಕ್ರಿಸ್ತನವನೋ ಹಾಗೆ ನಾವೂ ಕ್ರಿಸ್ತನವರೆಂದು ತಿಳುಕೊಳ್ಳಲಿ.
8 ನಮಗಿರುವ ಅಧಿಕಾರವನ್ನು ಕುರಿತು ನಾವು ಒಂದು ವೇಳೆ ಹೆಚ್ಚಾಗಿ ಹೊಗಳಿಕೊಂಡರೂ ಹಾಗೆ ಹೊಗಳಿಕೊಳ್ಳುವದರಲ್ಲಿ ನಾಚಿಕೆ ಪಡುವದಕ್ಕೆ ಕಾರಣವಾಗುವದಿಲ್ಲ. ಆದರೆ ನಿಮ್ಮನ್ನು ಕೆಡವಿಹಾಕುವದಕ್ಕಲ್ಲ ಕಟ್ಟುವದಕ್ಕಾಗಿಯೇ ಕರ್ತನು ಈ ಅಧಿಕಾರವನ್ನು
9 ನಮಗೆ ಕೊಟ್ಟನು. ಪತ್ರಿಕೆಗಳಿಂದ ನಿಮ್ಮನ್ನು ಹೆದರಿಸುವವನಾಗಿ ಕಾಣಿಸಿಕೊಳ್ಳುವದಕ್ಕೆ
10 ನನಗೆ ಮನಸ್ಸಿಲ್ಲ. ಅವನಿಂದ ಬಂದ ಪತ್ರಿಕೆಗಳು ಗೌರವವಾದವುಗಳೂ ಬಲವುಳ್ಳವುಗಳೂ ಆಗಿವೆ; ಅವನು ಸಾಕ್ಷಾತ್ತಾಗಿ ಬಂದರೆ, ಅವನು ನಿರ್ಬಲನು, ಅವನ ಮಾತು ಗಣ
11 ನೆಗೆ ಬಾರದ್ದು ಅನ್ನುತ್ತಾರೆ. ಅಂಥವರು—ನಾವು ದೂರದಲ್ಲಿರುವಾಗ ಪತ್ರಿಕೆಗಳ ಮೂಲಕ ಮಾತಿನಲ್ಲಿ ಎಂಥವರಾಗಿದ್ಧೇವೋ ಹತ್ತರದಲ್ಲಿರುವಾಗ ಕಾರ್ಯದಲ್ಲಿಯೂ ಅಂಥವರಾಗಿಯೇ ಇದ್ಧೇವೆಂದು ತಿಳುಕೊಳ್ಳಲಿ.

ಮತ್ತೊಬ್ಬರು ಸುವಾರ್ತೆ ಸಾರಿದ ಕಡೆಯಲ್ಲಿ ತಾನು ಸಾರುವವನಲ್ಲವೆಂದು ಪೌಲನು ಹೇಳುವದು.

12 ತಮ್ಮನ್ನು ತಾವೇ ಹೊಗಳಿಕೊಳ್ಳುವ ಕೆಲವರಲ್ಲಿ ನಮ್ಮನ್ನು ಸೇರಿಸಿಕೊಳ್ಳುವದಕ್ಕಾಗಲಿ ಅವರಿಗೆ ಹೋಲಿಸಿಕೊಳ್ಳುವದಕ್ಕಾಗಲಿ ನಮಗೆ ಧೈರ್ಯಸಾಲದು; ಅವರಂತೂ ತಮ್ಮ ತಮ್ಮೊಳಗೆ ತಮ್ಮನ್ನು ಅಳತೆಮಾಡಿಕೊಂಡು ತಮತಮಗೆ ಹೋಲಿಸಿಕೊಂಡು ವಿವೇಕವಿಲ್ಲ
13 ದವರಾಗಿದ್ದಾರೆ. ನಾವಾದರೋ ಮೇರೆದಪ್ಪಿ ಹೊಗಳಿಕೊಳ್ಳದೆ ದೇವರು ನಮಗೆ ನೇಮಿಸಿದಂಥಾ ಮೇರೆಯೊಳಗಿದ್ದು ಹೊಗಳಿಕೊಳ್ಳುತ್ತೇವೆ. ಈ ಮೇರೆಯೊಳಗಿದ್ದು ನಿಮ್ಮ
14 ಪರ್ಯಂತರಕ್ಕೂ ಬಂದಿದ್ಧೇವೆ. ನಾವು ಕ್ರಿಸ್ತನ ಸುವಾರ್ತೆಯನ್ನು ಸಾರುತ್ತಾ ಇತರರಿಗಿಂತ ಮೊದಲು ನಿಮ್ಮ ಬಳಿಗೆ ಬಂದದರಿಂದ ನಿಮ್ಮ ಮೇಲೆ ಅಧಿಕಾರವಿಲ್ಲದವರಂತೆ ಮೇರೆ
15 ಯನ್ನು ಅತಿಕ್ರಮಿಸಿದವರಲ್ಲ. ನಾವು ಮೇರೆದಪ್ಪಿ ಮತ್ತೊಬ್ಬರ ಪ್ರಯಾಸದ ಫಲಗಳನ್ನು ತಕ್ಕೊಂಡು ಇವು ನಮ್ಮವು ಎಂದು ಹಿಗ್ಗುವವರಲ್ಲ; ಆದರೆ ನಿಮ್ಮ ಮಧ್ಯದಲ್ಲಿ ನಮ್ಮ
16 ಮೇರೆಯೊಳಗೆ ಇನ್ನೂ ಅಭಿವೃದ್ಧಿಹೊಂದಿ ನಿಮಗೆ ಆಚೆ ಇರುವ ಸೀಮೆಗಳಲ್ಲಿ ಸುವಾರ್ತೆಯನ್ನು ಸಾರುವೆವೆಂಬ ನಿರೀಕ್ಷೆ[1] ನಮಗುಂಟು. ಮತ್ತೊಬ್ಬರ ಮೇರೆಯಲ್ಲಿ ಸಿದ್ಧವಾಗಿ
17 ನಮಗೆ ಸಿಕ್ಕಿದ ಫಲವನ್ನು ಕುರಿತು ನಾವು ಹೊಗಳಿಕೊಳ್ಳುವದಿಲ್ಲ. ಹೊಗಳಿಕೊಳ್ಳುವ
18 ವನು ಕರ್ತನಲ್ಲಿಯೇ ಹೊಗಳಿಕೊಳ್ಳಲಿ[2]. ತನ್ನನ್ನು ತಾನೇ ಹೊಗಳಿಕೊಳ್ಳುವವನು ಯೋಗ್ಯನಲ್ಲ; ಕರ್ತನು ಯಾರನ್ನು ಹೊಗಳುತ್ತಾನೋ ಅವನೇ ಯೋಗ್ಯನು.

---

[1] ಅಪೊಸ್ತಲರ ಕೃತ್ಯ ೧೯, ೨೧ ನೋಡಿರಿ. [2] ಯೆರೆಮಿಾಯ ೯, ೨೩. ೨೪.

ತಾನು ಸಾರಿದ ಕ್ರಿಸ್ತನನ್ನು ಕೊರಿಂಥದವರು ಬಿಟ್ಟು ಬೇರೊಂದು ಬೋಧನೆಗೆ ಕಿವಿಗೊಡಬಾರದೆಂದು ಪೌಲನು ಹೇಳುವದು.

**11** ನಾನು ನನ್ನನ್ನು ಹೊಗಳಿಕೊಳ್ಳುವದರಲ್ಲಿ ಸ್ವಲ್ಪ ಬುದ್ಧಿಹೀನತೆಯಿಂದ ಮಾತಾಡುತ್ತೇನೆ; ನೀವು ಅದನ್ನು ಸಹಿಸಿಕೊಳ್ಳುತ್ತೀರೇನೋ. ನನ್ನನ್ನು ಸಹಿಸಿಕೊಳ್ಳಬೇಕೆಂದು ನಿಮ್ಮನ್ನು ಬೇಡಿಕೊಳ್ಳುತ್ತೇನೆ. 2 ಯಾಕಂದರೆ ದೇವರಲ್ಲಿರುವಂಥಾ ಚಿಂತೆಯಿಂದಲೇ ನಾನು ನಿಮ್ಮ ವಿಷಯದಲ್ಲಿ ಚಿಂತಿಸುತ್ತೇನೆ. ನಿಮ್ಮನ್ನು ಕ್ರಿಸ್ತನೆಂಬ ಒಬ್ಬನೇ ಪುರುಷನಿಗೆ ಶುದ್ಧ ಕನ್ಯೆಯಾಗಿ ಒಪ್ಪಿಸಬೇಕೆಂದು ನಿಮ್ಮನ್ನು ಆತನಿಗೆ ನಿಶ್ಚಯಮಾಡಿದೆನಲ್ಲಾ. 3 ಆದರೆ ಹ್ಯಾಗೆ ಹವ್ವಳು ಸರ್ಪದ ಕುಯುಕ್ತಿಗೆ ಒಳಬಿದ್ದು ಮೋಸಹೋದಳೋ ಹಾಗೆಯೇ ನಿಮ್ಮ ಮನಸ್ಸು ಕ್ರಿಸ್ತನ ವಿಷಯದಲ್ಲಿರಬೇಕಾದ ಯಥಾರ್ಥತ್ವವನ್ನೂ ಪಾತಿವ್ರತ್ಯವನ್ನೂ ಬಿಟ್ಟು ಕೆಟ್ಟುಹೋದೀತೆಂದು ನನಗೆ ಭಯವುಂಟು. 4 ಯಾಕಂದರೆ ನಾವು ಪ್ರಸಿದ್ಧಿಪಡಿಸದಿದ್ದ ಮತ್ತೊಬ್ಬ ಯೇಸುವನ್ನು ನಿಮ್ಮ ಬಳಿಗೆ ಬರುವವರು ಪ್ರಕಟಿಸುವಾಗಲೂ, ನೀವು ಹೊಂದದೆ ಇದ್ದ ಬೇರೆ ವಿಧವಾದ ಆತ್ಮಪ್ರೇರಣೆಯನ್ನು ಹೊಂದುವಾಗಲೂ, ಅವಲಂಬಿಸದೆಯಿದ್ದ ಬೇರೊಂದು ಸುವಾರ್ತೆಯನ್ನು ಕೇಳುವಾಗಲೂ ನೀವು ಸಹಿಸಿಕೊಳ್ಳುತ್ತಿರುವದು ಬಹು ಆಶ್ಚರ್ಯ. 5 ಅತಿಶ್ರೇಷ್ಠರಾದ ಅಪೊಸ್ತಲರು ಅನ್ನಿಸಿಕೊಳ್ಳುವ ಅವರಿಗಿಂತ ನಾನು ಒಂದರಲ್ಲಾದರೂ ಕಡಿಮೆಯಾದವನಲ್ಲವೆಂದು ಎಣಿಸುತ್ತೇನೆ. 6 ನಾನು ವಾಕ್ಚಾತುರ್ಯದಲ್ಲಿ ನಿಪುಣನಲ್ಲದಿದ್ದರೂ ಜ್ಞಾನದಲ್ಲಿ ನಿಪುಣನಾಗಿದ್ದೇನೆ; ಇದನ್ನು ಎಲ್ಲಾ ಕಾರ್ಯಗಳಲ್ಲಿ ಎಲ್ಲರ ಮುಂದೆ ನಿಮ್ಮ ಪ್ರಯೋಜನಕ್ಕಾಗಿ ತೋರ್ಪಡಿಸಿದ್ದೇವೆ.

ತಾನು ಕೊರಿಂಥದ ಸಭೆಯಿಂದ ಹಣಸಹಾಯ ತೆಗೆದುಕೊಳ್ಳದೆ ಹೋದದ್ದು ದೋಷವೆಣಿಸಕೂಡದೆಂದು ಪೌಲನು ಹೇಳುವದು.

7 ಏನು, ನೀವು ಅಭಿವೃದ್ಧಿಹೊಂದಬೇಕೆಂದು ನನ್ನನ್ನು ನಾನೇ ತಗ್ಗಿಸಿಕೊಂಡು ದೇವರ ಸುವಾರ್ತೆಯನ್ನು ನಿಮಗೆ ಉಚಿತಾರ್ಥವಾಗಿ ಸಾರಿದ್ದು ಪಾಪಕೃತ್ಯವೋ? 8 ನಿಮ್ಮ ಸೇವೆ ಮಾಡುವದಕ್ಕೋಸ್ಕರ ನಾನು ಇತರ ಸಭೆಗಳಿಂದ ಸಂಬಳತಕ್ಕೊಂಡು ಅವುಗಳನ್ನು ಸುಲುಕೊಂಡೆನು. 9 ನಾನು ನಿಮ್ಮಲ್ಲಿದ್ದಾಗ ಖರ್ಚಿಗೆ ಏನೂ ಇಲ್ಲದ ಸಮಯದಲ್ಲಿ ಯಾರ ಮೇಲೆಯೂ ಭಾರಹಾಕಲಿಲ್ಲ; ಮಕೆದೋನ್ಯದಿಂದ ಬಂದ ಸಹೋದರರು ನನಗೆ ಬೇಕಾದದ್ದೆಲ್ಲವನ್ನೂ ಕೊಟ್ಟರು. ನಾನು ನಿಮಗೆ ಯಾವದರಲ್ಲಿಯೂ ಭಾರವಾಗಿರಬಾರದೆಂದು ನೋಡಿಕೊಳ್ಳುತ್ತಿದ್ದೆನು, ಇನ್ನು ಮೇಲೆಯೂ ನೋಡಿಕೊಳ್ಳುವೆನು. 10 ಈ ನನ್ನ ಹೊಗಳಿಕೆಯನ್ನು ಅಖಾಯದ ಪ್ರಾಂತ್ಯಗಳಲ್ಲಿ ಒಬ್ಬರೂ ನಿಲ್ಲಿಸಲಾರರೆಂದು ಕ್ರಿಸ್ತನ ಮುಂದೆ ಸತ್ಯವಾಗಿ ಹೇಳುತ್ತೇನೆ. 11 ಯಾಕೆ ನಿಮ್ಮಿಂದ ಏನೂ ತಕ್ಕೊಳ್ಳುವದಿಲ್ಲ? ನಿಮ್ಮ ಮೇಲೆ ಪ್ರೀತಿ ಇಲ್ಲದ್ದರಿಂದಲೋ? ದೇವರೇ ಬಲ್ಲ. 12 ನನ್ನನ್ನು ನಿಂದಿಸುವದಕ್ಕೆ ಆಸ್ಪದವನ್ನು ಹುಡುಕುವವರಿಗೆ ಯಾವ ಆಸ್ಪದವೂ ಸಿಕ್ಕದಂತೆ ನಾನು ಮಾಡುವದನ್ನು ಇನ್ನು ಮುಂದೆಯೂ ಮಾಡುವೆನು. ಅವರು ಯಾವದರಲ್ಲಿ ಹಿಗ್ಗುತ್ತಾರೋ ಅದರಲ್ಲಿ ನಮ್ಮಂತೆಯೇ ನಡೆಯು

13 ವವರಾಗಿ ಕಂಡುಬರಲಿ. ಆದರೆ ಅಂಥವರು ಸುಳ್ಳು ಅಪೊಸ್ತಲರೂ ಮೋಸಗಾರರಾದ ಕೆಲಸದವರೂ ಕ್ರಿಸ್ತನ ಅಪೊಸ್ತಲರಾಗಿ ಕಾಣಿಸುವದಕ್ಕೆ ವೇಷಹಾಕಿಕೊಳ್ಳುವವರೂ
14 ಆಗಿದ್ದಾರೆ. ಇದೇನೂ ಆಶ್ಚರ್ಯವಲ್ಲ; ಸೈತಾನನು ತಾನೇ ಪ್ರಕಾಶರೂಪವುಳ್ಳ ದೇವ
15 ದೂತನ ವೇಷವನ್ನು ಹಾಕಿಕೊಳ್ಳುವಾಗ್ಯೆ ಅವನ ಸೇವಕರು ಸಹ ನೀತಿಗೆ ಸೇವಕರಾಗಿ ಕಾಣಿಸುವದಕ್ಕೆ ವೇಷಹಾಕಿಕೊಳ್ಳುವದು ದೊಡ್ಡದಲ್ಲ. ಅವರ ಅಂತ್ಯಾವಸ್ಥೆಯು ಅವರ ಕೃತ್ಯಗಳಿಗೆ ತಕ್ಕ ಹಾಗೆಯೇ ಆಗುವದು.

ತಾನು ಕ್ರಿಸ್ತನ ಸೇವೆಯಲ್ಲಿ ಪಟ್ಟ ಶ್ರಮೆಯೂ ಕ್ರಿಸ್ತನಿಂದ ಹೊಂದಿದ ದರ್ಶನಗಳೂ ಬಹು ಹೆಚ್ಚೆಂದು ಪೌಲನು ಹೇಳುವದು.

16 ನನ್ನನ್ನು ಬುದ್ಧಿಹೀನನೆಂತ ಯಾರೂ ನೆನಸಬಾರದೆಂದು ತಿರಿಗಿ ಹೇಳುತ್ತೇನೆ; ಹಾಗೆ ನೆನಸಿದರೂ ನನ್ನನ್ನು ಬುದ್ಧಿಹೀನನಾಗಿಯಾದರೂ ಸೇರಿಸಿಕೊಳ್ಳಿರಿ; ಯಾಕಂದರೆ ನಾನು
17 ಸಹ ಅಲ್ಪಸ್ವಲ್ಪ ಹೊಗಳಿಕೊಳ್ಳಬೇಕೆಂದಿದ್ದೇನೆ. ನಾನು ಈಗ ಆಡುವ ಮಾತುಗಳನ್ನು ಕರ್ತನನ್ನು ಅನುಸರಿಸುವವನಾಗಿ ಆಡದೆ ಭರವಸದಿಂದ ತನ್ನನ್ನು ಹೊಗಳಿಕೊಳ್ಳುವ
18 ಬುದ್ಧಿಹೀನನಂತೆ ಆಡುತ್ತೇನೆ. ಅನೇಕರು ಲೋಕಸಂಬಂಧವಾದ ಕಾರ್ಯಗಳಲ್ಲಿ
19 ಹೊಗಳಿಕೊಳ್ಳುವದರಿಂದ ನಾನೂ ಹೊಗಳಿಕೊಳ್ಳುತ್ತೇನೆ. ನೀವು ಬುದ್ಧಿವಂತರಾಗಿದ್ದು
20 ಬುದ್ಧಿಹೀನರನ್ನು ಸಂತೋಷದಿಂದ ಸಹಿಸಿಕೊಳ್ಳುತ್ತೀರಲ್ಲಾ. ಒಬ್ಬನು ನಿಮ್ಮನ್ನು ತನಗೆ ವಶಮಾಡಿಕೊಂಡರೂ, ಒಬ್ಬನು ನಿಮ್ಮನ್ನು ನುಂಗಿಬಿಟ್ಟರೂ, ಒಬ್ಬನು ನಿಮ್ಮನ್ನು ಮರಳು ಗೊಳ್ಳಿಸಿ ಹಿಡಿದರೂ, ಒಬ್ಬನು ತನ್ನನ್ನು ಹೆಚ್ಚಿಸಿಕೊಂಡರೂ, ಒಬ್ಬನು ನಿಮ್ಮ ಮುಖದ ಮೇಲೆ ಹೊಡೆದರೂ ಸಹಿಸಿಕೊಳ್ಳುತ್ತೀರಲ್ಲಾ.
21 ನಾವು ಬಲವಿಲ್ಲದವರಾಗಿದ್ದೆವೆಂಬಂತೆ ಇದನ್ನು ನನ್ನ ಅವಮಾನಕ್ಕೆ ಹೇಳಿದ್ದಾಗ್ಯೂ, ಯಾವ ಆಧಾರದಿಂದ ಯಾವನಾದರೂ ಧೈರ್ಯವಾಗಿ ನಡಕೊಳ್ಳುತ್ತಾನೋ ಅದರಿಂದಲೇ
22 ನಾನೂ ಧೈರ್ಯವುಳ್ಳವನಾಗಿದ್ದೇನೆ. ಇದನ್ನು ಬುದ್ಧಿಹೀನತೆಯಿಂದ ಹೇಳುತ್ತೇನೆ. ಅವರು ಇಬ್ರಿಯರೋ ನಾನೂ ಇಬ್ರಿಯನು; ಅವರು ಇಸ್ರಯೇಲ್ಯರೋ ನಾನೂ ಇಸ್ರಯೇಲ್ಯನು;
23 ಅವರು ಅಬ್ರಹಾಮನ ವಂಶದವರೋ ನಾನೂ ಅದೇ ವಂಶದವನು; ಅವರು ಕ್ರಿಸ್ತನ ಸೇವಕರೋ ಅವರಿಗಿಂತ ನಾನು ಹೆಚ್ಚಾಗಿ ಸೇವೆಮಾಡುವವನಾಗಿದ್ದೇನೆ. ಬುದ್ಧಿಸ್ವಾಧೀನವಿಲ್ಲದವನಾಗಿ ಮಾತಾಡುತ್ತೇನೆ. ಆತನ ಸೇವೆಯಲ್ಲಿ ಅವರಿಗಿಂತ ಹೆಚ್ಚಾಗಿ ಪ್ರಯಾಸ ಪಟ್ಟೆನು, ಹೆಚ್ಚಾಗಿ ಸೆರೆಮನೆಗಳೊಳಗೆ ಬಿದ್ದೆನು; ಮಿತಿಮೀರಿ ಪೆಟ್ಟುಗಳನ್ನು ತಿಂದೆನು,
24 ಅನೇಕ ಸಾರಿ ಮರಣದ ಬಾಯೊಳಗೆ ಸಿಕ್ಕಿಕೊಂಡೆನು. ಐದು ಸಾರಿ ಯೆಹೂದ್ಯರಿಂದ
25 ನನಗೆ ಒಂದು ಕಡಿಮೆ ನಾಲ್ವತ್ತು ಏಟುಗಳು ಬಿದ್ದವು; ಮೂರು ಸಾರಿ ಸರಕಾರದವರು ಚಡಿಗಳಿಂದ ನನ್ನನ್ನು ಹೊಡಿಸಿದರು[1]; ಒಂದು ಸಾರಿ ಜನರು ನನ್ನನ್ನು ಕೊಲ್ಲುವದಕ್ಕೆ ಕಲ್ಲೆಸೆದರು[2]; ಮೂರು ಸಾರಿ ನಾನಿದ್ದ ಹಡಗವು ಒಡೆದುಹೋಯಿತು; ಒಂದು ರಾತ್ರಿ
26 ಒಂದು ಹಗಲು ಸಮುದ್ರದ ನೀರಿನಲ್ಲಿ ಕಳೆದೆನು. ಆತನ ಸೇವೆಯಲ್ಲಿ ಎಷ್ಟೋ ಪ್ರಯಾಣ

[1] ಅಪೊಸ್ತಲರ ಕೃತ್ಯ ೧೬, ೨೨. [2] ಅಪೊಸ್ತಲರ ಕೃತ್ಯ ೧೪, ೧೯.

ದಲ್ಲಿ ಮಾತ್ರ ಹಿಗ್ಗುತ್ತಾರೋ ಅವರಿಗೆ ಪ್ರತ್ಯುತ್ತರ ಹೇಳುವದಕ್ಕೆ ನಿಮಗೆ ಆಧಾರವಿರ ಬೇಕೆಂದು ನಮ್ಮ ವಿಷಯದಲ್ಲಿ ಹಿಗ್ಗುವದಕ್ಕೆ ನಿಮಗೆ ಆಸ್ಪದ ಕೊಡುತ್ತೇವೆ. 13 ನಮಗೆ ಬುದ್ಧಿಪರವಶವಾಗಿದ್ದರೆ, ಅದು ದೇವರ ಮಹಿಮೆಗಾಗಿಯೇ ಅದೆ; ನಮಗೆ ಸ್ವಸ್ಥಬುದ್ಧಿ ಇದ್ದರೆ, ಅದು ನಿಮ್ಮ ಪ್ರಯೋಜನಕ್ಕಾಗಿ ಅದೆ. 14 ಕ್ರಿಸ್ತನ ಪ್ರೀತಿಯು ನಮಗೆ ಒತ್ತಾಯ ಮಾಡುತ್ತದೆ; ಎಲ್ಲರಿಗೋಸ್ಕರ ಒಬ್ಬನು ಸತ್ತದ್ದರಿಂದ ಎಲ್ಲರೂ ಸತ್ತಂತಾಯಿತೆಂದು ನಿಶ್ಚ ಯಿಸಿಕೊಂಡೆವು. 15 ಜೀವಿಸುವವರು ಇನ್ನು ಮೇಲೆ ತಮಗಾಗಿ ಜೀವಿಸದೆ ತಮಗೋಸ್ಕರ ಸತ್ತು ಎದ್ದುಬಂದಾತನಿಗಾಗಿ ಜೀವಿಸಬೇಕೆಂತಲೇ ಆತನು ಎಲ್ಲರಿಗೋಸ್ಕರ ಸತ್ತನು.

16 ಹೀಗಿರಲಾಗಿ ಇಂದಿನಿಂದ ನಾವು ಯಾರನ್ನೂ ಶರೀರಸಂಬಂಧವಾಗಿ ಅರಿತುಕೊಳ್ಳುವ ದಿಲ್ಲ; ಕ್ರಿಸ್ತನನ್ನು ಕೂಡಾ ನಾವು ಶರೀರಸಂಬಂಧವಾಗಿ ತಿಳಿದಿದ್ದಾಗ್ಯೂ ಇನ್ನು ಮುಂದೆ ಆತನನ್ನು ಹಾಗೆ ತಿಳುಕೊಳ್ಳುವದಿಲ್ಲ. 17 ಹೀಗಿರಲಾಗಿ ಯಾವನಾದರೂ ಕ್ರಿಸ್ತನಲ್ಲಿದ್ದರೆ, ಅವನು ನೂತನ ಸೃಷ್ಟಿಯಾದನು. ಇಗೋ, ಪೂರ್ವಸ್ಥಿತಿ ಹೋಗಿ ಎಲ್ಲಾ ನೂತನವಾ ಯಿತು. 18 ಇದೆಲ್ಲಾ ದೇವರಿಂದಲೇ ಉಂಟಾದದ್ದು. ಆತನು ಕ್ರಿಸ್ತನ ಮೂಲಕ ನಮ್ಮನ್ನು ತನಗೆ ಸಮಾಧಾನ ಪಡಿಸಿಕೊಂಡು, ಸಮಾಧಾನವಿಷಯವಾದ ಸೇವೆಯನ್ನು ನಮಗೆ ಅನುಗ್ರಹಿಸಿದ್ದಾನೆ; 19 ಆ ಸಮಾಧಾನವಾಕ್ಯವೇನಂದರೆ, ದೇವರು ಮನುಷ್ಯರ ಅಪರಾಧ ಗಳನ್ನು ಅವರ ಲೆಕ್ಕಕ್ಕೆ ಹಾಕದೆ ಲೋಕವನ್ನು ಕ್ರಿಸ್ತನಲ್ಲಿ ತನಗೆ ಸಮಾಧಾನಪಡಿಸಿಕೊಳ್ಳು ತ್ತಿದ್ದನೆಂಬುವದೇ. ಅದನ್ನು ಸಾರುವ ಸೇವೆಗೆ ನಮ್ಮನ್ನು ನೇಮಿಸಿದ್ದಾನೆ.

20 ನಾವು ಕ್ರಿಸ್ತನ ರಾಯಭಾರಿಗಳಾಗಿದ್ದೇವೆ. ದೇವರೇ ನಮ್ಮ ಮೂಲಕ ಬುದ್ಧಿಹೇಳುವ ಹಾಗಾಯಿತು. ದೇವರೊಂದಿಗೆ ಸಮಾಧಾನವಾಗಿರೆಂದು ಕ್ರಿಸ್ತನ ಹೆಸರಿನಲ್ಲಿ ನಿಮ್ಮನ್ನು ಬೇಡಿಕೊಳ್ಳುತ್ತೇವೆ. 21 ನಾವು ಆತನಲ್ಲಿ ದೇವರಿಗೆ ಸಮರ್ಪಕರಾದ ನೀತಿಸ್ವರೂಪಿಗಳಾಗು ವಂತೆ ದೇವರು ಪಾಪಜ್ಞಾನವಿಲ್ಲದ ಆತನನ್ನು ನಮಗೋಸ್ಕರ ಪಾಪಸ್ವರೂಪಿಯಾಗ ಮಾಡಿ ದನು. **6** ನಾವು ಆತನೊಂದಿಗೆ ಕೆಲಸನಡಿಸುವವರಾಗಿದ್ದು—ನೀವು ಹೊಂದಿದ ದೇವರ ಕೃಪೆಯನ್ನು ವ್ಯರ್ಥಮಾಡಿಕೊಳ್ಳಬೇಡಿರೆಂದು ಎಚ್ಚರಿಸುತ್ತೇವೆ.

2 ಪ್ರಸನ್ನಕಾಲದಲ್ಲಿ ನಿನ್ನ ಮನವೆಯನ್ನು ಕೇಳಿದೆನು,
ರಕ್ಷಣೆಯ ದಿನದಲ್ಲಿ ನಿನಗೆ ಸಹಾಯಮಾಡಿದೆನು[1]

ಎಂದು ದೇವರು ಹೇಳುತ್ತಾನಲ್ಲಾ. ಈಗಲೇ ಆ ಸುಪ್ರಸನ್ನಕಾಲ; ಇದೇ ಆ ರಕ್ಷಣೆಯ ದಿನ.

3-4 ನಿಂದೆಗೆ ಅವಕಾಶಕೊಡದೆ ಎಲ್ಲಾ ಸಂಗತಿಗಳಲ್ಲಿ ದೇವರ ಸೇವಕರೆಂದು ನಮ್ಮನ್ನು ಸಮ್ಮತರಾಗ ಮಾಡಿಕೊಳ್ಳುತ್ತೇವೆ. ನಾವು ಸಂಕಟಗಳಲ್ಲಿಯೂ ಕೊರತೆಗಳಲ್ಲಿಯೂ ಇಕ್ಕಟ್ಟುಗಳಲ್ಲಿಯೂ 5 ಪೆಟ್ಟುಗಳಲ್ಲಿಯೂ ಸೆರೆಮನೆಗಳಲ್ಲಿಯೂ ಕಲಹಗಳಲ್ಲಿಯೂ ಕಷ್ಟ ವಾದ ಕೆಲಸಗಳಲ್ಲಿಯೂ ನಿದ್ದೆಗೇಡುಗಳಲ್ಲಿಯೂ ಉಪವಾಸಗಳಲ್ಲಿಯೂ ಬಹು ತಾಳ್ಮೆ ಯನ್ನು ತೋರಿಸುತ್ತೇವೆ. 6 ಶುದ್ಧಮನಸ್ಸು ಜ್ಞಾನ ದೀರ್ಘಶಾಂತಿ ದಯೆ ಪವಿತ್ರಾತ್ಮ ಕಪ ಟವಿಲ್ಲದ ಪ್ರೀತಿ 7 ಸತ್ಯವಾಕ್ಯ ದೇವರ ಮಹತ್ವ ಇವುಗಳಿಂದ ಕೂಡಿದವರಾಗಿದ್ದೇವೆ. ಎಡ ಬಲಗೈಗಳಲ್ಲಿ ನೀತಿಯೆಂಬ ಆಯುಧಗಳನ್ನು ಧರಿಸಿಕೊಂಡವರಾಗಿಯೂ 8 ಮಾನ ಅವಮಾನ ಕೀರ್ತಿ ಅಪಕೀರ್ತಿಗಳನ್ನು ಹೊಂದಿದವರಾಗಿಯೂ ಇದ್ದೇವೆ. ಮೋಸಗಾರರೆನಿಸಿ

[1] ಯೆಶಾಯ ೪೯, ೮.

9 ಕೊಂಡರೂ ಸತ್ಯವಂತರಾಗಿಯೂ, ಅಜ್ಞಾತರೆನಿಸಿಕೊಂಡರೂ ವಿಜ್ಞಾತರಾಗಿಯೂ, ಸಾಯು ವವರಾಗಿ ತೋರಿದಾಗ್ಯೂ ಬದುಕುವವರಾಗಿಯೂ ಇದ್ದೇವೆ. ದಂಡನೆ ಹೊಂದುವವ
10 ರಾಗಿದ್ದರೂ ಕೊಲ್ಲಲ್ಪಡದವರಾಗಿಯೂ, ದುಃಖಪಡುವವರಾಗಿದ್ದರೂ ಯಾವಾಗ್ಯೂ ಸಂತೋಷಪಡುವವರಾಗಿಯೂ, ಬಡವರಾಗಿದ್ದರೂ ಅನೇಕರಿಗೆ ಐಶ್ವರ್ಯವನ್ನುಂಟು ಮಾಡುವವರಾಗಿಯೂ, ಏನೂ ಇಲ್ಲದವರಾಗಿದ್ದರೂ ಎಲ್ಲಾ ಇದ್ದವರಾಗಿಯೂ ಇದ್ದೇವೆ.

**ಕೊರಿಂಥದವರು ಒಳ್ಳೇ ಮಕ್ಕಳಂತೆ ತನ್ನನ್ನು ಪ್ರೀತಿಸಬೇಕೆಂದು ಪೌಲನು ಕೇಳಿಕೊಂಡದ್ದು.**

11 ಕೊರಿಂಥದವರೇ, ನಾವು ನಿಮ್ಮೊಡನೆ ಧಾರಾಳವಾಗಿ ಮಾತಾಡುತ್ತಾ ಇದ್ದೇವೆ; ನಮ್ಮ
12 ಹೃದಯವು ನಿಮ್ಮ ವಿಷಯದಲ್ಲಿ ವಿಶಾಲವಾಯಿತು. ನಿಮ್ಮ ಮೇಲಿರುವ ನಮ್ಮ ಪ್ರೀತಿ
13 ಸಂಕೋಚವಾದದ್ದಲ್ಲ; ನಿಮ್ಮ ಪ್ರೀತಿಯೇ ಸಂಕೋಚವಾದದ್ದು. ನಿಮ್ಮ ವಿಷಯದಲ್ಲಿ ನಮ್ಮ ಮನಸ್ಸು ವಿಶಾಲವಾಗಿರುವದರಿಂದ ನಮ್ಮ ವಿಷಯದಲ್ಲಿ ನಿಮ್ಮ ಮನಸ್ಸನ್ನೂ ವಿಶಾಲಮಾಡಿಕೊಳ್ಳಿರಿ. ನೀವು ನನ್ನ ಮಕ್ಕಳೆಂದು ಭಾವಿಸಿ ಹೀಗೆ ಹೇಳುತ್ತೇನೆ.

**ಕ್ರೈಸ್ತರು ಅನ್ಯಜನಗಳ ಸಂಸರ್ಗದಿಂದ ಕೆಡಬಾರದು.**

14 ನೀವು ಕ್ರಿಸ್ತನಂಬಿಕೆಯಿಲ್ಲದವರೊಂದಿಗೆ ಸೇರಿ ಇಜ್ಜೋಡಾಗಬೇಡಿರಿ. ಧರ್ಮ
15 ಕ್ಕೂ ಅಧರ್ಮಕ್ಕೂ ಜೊತೆಯೇನು? ಬೆಳಕಿಗೂ ಕತ್ತಲೆಗೂ ಐಕ್ಯವೇನು? ಕ್ರಿಸ್ತನಿಗೂ ಸೈತಾನನಿಗೂ ಒಡನಾಟವೇನು? ನಂಬುವವನಿಗೂ ನಂಬದೆ ಇರುವವನಿಗೂ ಪಾಲುಗಾ
16 ರಿಕೆ ಏನು? ದೇವರ ಮಂದಿರಕ್ಕೂ ವಿಗ್ರಹಗಳಿಗೂ ಒಪ್ಪಿಗೆ ಏನು? ನಾವು ಜೀವಸ್ವರೂಪ ನಾದ ದೇವರ ಮಂದಿರವಾಗಿದ್ದೇವಲ್ಲಾ. ಇದರ ಸಂಬಂಧವಾಗಿ ದೇವರು—

ನಾನು ಅವರಲ್ಲಿ ವಾಸಮಾಡಿ ತಿರುಗಾಡುವೆನು,
ನಾನು ಅವರಿಗೆ ದೇವರಾಗಿರುವೆನು, ಅವರು ನನ್ನ ಪ್ರಜೆಯಾಗಿರುವರು[1)]

17 ಎಂದು ಹೇಳಿದ್ದಾನೆ. ಆದದರಿಂದ

ಅನ್ಯಜನರ ಮಧ್ಯದಲ್ಲಿಂದ ಹೊರಟು ಬಂದು ಪ್ರತ್ಯೇಕವಾಗಿರಿ;
ಅಪವಿತ್ರವಾದದ್ದನ್ನು ಮುಟ್ಟಬೇಡಿರಿ ಎಂದು ಕರ್ತನು ಹೇಳುತ್ತಾನೆ[2)].

18 ಇದಲ್ಲದೆ—

ನಾನು ನಿಮ್ಮನ್ನು ಸೇರಿಸಿಕೊಂಡು ನಿಮಗೆ ತಂದೆಯಾಗಿರುವೆನು;
ನೀವು ನನಗೆ ಕುಮಾರ ಕುಮಾರ್ತೆಗಳು ಆಗಿರುವಿರೆಂದು
ಸರ್ವಶಕ್ತನಾದ ಕರ್ತನು ಹೇಳುತ್ತಾನೆ[3)].

**7** ಪ್ರಿಯರೇ, ಈ ವಾಗ್ದಾನಗಳು ನಮಗಿರುವದರಿಂದ, ನಾವು ಶರೀರಾತ್ಮಗಳ ಕಲ್ಮಷವನ್ನು ತೊಲಗಿಸಿ ನಮ್ಮನ್ನು ಶುಚಿಮಾಡಿಕೊಂಡು ದೇವರ ಭಯದಿಂದ ಕೂಡಿದವರಾಗಿ ಪವಿತ್ರ ತ್ವವನ್ನು ಸಿದ್ಧಿಗೆ ತರುವದಕ್ಕೆ ಪ್ರಯತ್ನಿಸೋಣ.

---

1) ಲೇವಿಕ ೨೬, ೧೧. ೧೨.
2) ಯೆಶಾಯ ೫೨, ೧೧.
3) ೨ ಸಮುವೇಲ ೭, ೧೪; ಯೆಶಾಯ ೪೩, ೬.

ಪೌಲನು ತಾನು ಮೊದಲು ಬರೆದ ಪತ್ರಿಕೆಯಿಂದ ಒಳ್ಳೇ ಫಲವಾಯಿತೆಂದು ಸಂತೋಷಪಟ್ಟದ್ದು.

ನಿಮ್ಮ ಹೃದಯಗಳಲ್ಲಿ ನಮಗೆ ಸ್ಥಳಕೊಡಿರಿ; ನಾವು ನಿಮ್ಮಲ್ಲಿ ಯಾರಿಗೂ ಅನ್ಯಾಯ 2 ಮಾಡಲಿಲ್ಲ, ಯಾರನ್ನೂ ಕೆಡಿಸಲಿಲ್ಲ, ಯಾರನ್ನೂ ವಂಚಿಸಲಿಲ್ಲ. ನಿಮ್ಮ ಮೇಲೆ ತಪ್ಪು 3 ಹೊರಿಸಬೇಕೆಂದು ನಾನು ಇದನ್ನು ಹೇಳುವದಿಲ್ಲ. ಕೂಡಾ ಸಾಯುವದಕ್ಕೂ ಕೂಡಾ ಬದುಕುವದಕ್ಕೂ ನೀವು ನಮ್ಮ ಹೃದಯದಲ್ಲಿದ್ದೀರೆಂದು ಮೊದಲೇ ಹೇಳಿದ್ದೇನಲ್ಲಾ. ನಿಮ್ಮಲ್ಲಿ ನನಗೆ ಬಹಳ ಭರವಸ ಉಂಟು; ನಿಮ್ಮ ವಿಷಯದಲ್ಲಿ ನನ್ನ ಉತ್ಸಾಹ ಬಹಳ; 4 ಪರಿಪೂರ್ಣ ಆದರಣೆ ನನಗಾಯಿತು; ನಮಗಾಗುವ ಎಲ್ಲಾ ಸಂಕಟಗಳಲ್ಲಿ ಅತ್ಯಧಿಕವಾದ ಸಂತೋಷದಿಂದ ತುಂಬಿದ್ದೇನೆ.

ನಾವು ಮಕೆದೋನ್ಯಕ್ಕೆ ಬಂದಾಗ, ನಮ್ಮ ಮನಸ್ಸಿಗೆ ಏನೂ ಉಪಶಮನವಾಗಲಿಲ್ಲ, 5 ಎಲ್ಲಾ ವಿಷಯಗಳಲ್ಲಿಯೂ ನಮಗೆ ಸಂಕಟವಿತ್ತು; ಹೊರಗೆ ಕಲಹ, ಒಳಗೆ ಭಯ. ಆದರೆ ದೀನಾವಸ್ಥೆಯಲ್ಲಿರುವವರನ್ನು ಸಂತೈಸುವ ದೇವರು ತೀತನ ಬರುವಿಕೆಯಿಂದ 6 ನಮ್ಮನ್ನು ಸಂತೈಸಿದನು. ಅವನ ಬರುವಿಕೆಯಿಂದ ಮಾತ್ರವಲ್ಲದೆ, ಅವನು ತಾನು 7 ನಿಮ್ಮಲ್ಲಿ ಬಹಳ ಆದರಣೆಯನ್ನು ಹೊಂದಿದೆನೆಂದು ಹೇಳಿದ್ದರಿಂದಲೂ ನಮ್ಮನ್ನು ಸಂತೈಸಿದನು. ಅವನು ನಿಮ್ಮ ಹಂಬಲ ನಿಮ್ಮ ಗೋಳಾಟ ನನ್ನ ವಿಷಯವಾದ ನಿಮ್ಮ ಆಸಕ್ತಿ ಇವುಗಳನ್ನು ನಮಗೆ ತಿಳಿಸಿದಾಗ ನಾನು ಹೆಚ್ಚಾಗಿ ಸಂತೋಷಪಟ್ಟೆನು.

ನಾನು ಬರೆದ ಪತ್ರಿಕೆಯು ನಿಮ್ಮನ್ನು ದುಃಖಪಡಿಸಿದ್ದಾಗ್ಯೂ ನನಗೆ ಪಶ್ಚಾತ್ತಾಪವಿಲ್ಲ. 8 ಅದು ನಿಮ್ಮನ್ನು ಒಂದು ಗಳಿಗೆ ಹೊತ್ತಾದರೂ ದುಃಖಪಡಿಸಿತೆಂದು ನಾನು ಮೊದಲು ಪಶ್ಚಾತ್ತಾಪಪಡುತ್ತಿದ್ದಾಗ್ಯೂ ಈಗ ಸಂತೋಷಪಡುತ್ತೇನೆ. ನಿಮಗೆ ದುಃಖವಾಯಿ 9 ತೆಂದು ನಾನು ಸಂತೋಷಪಡದೆ ನೀವು ದುಃಖಪಟ್ಟು ಬೇರೆ ಮನಸ್ಸನ್ನು ಹೊಂದಿದ್ದಕ್ಕಾಗಿ ಸಂತೋಷಪಡುತ್ತೇನೆ. ನೀವು ದೇವರ ಚಿತ್ತಾನುಸಾರವಾಗಿ ದುಃಖಿಸಿದ್ದರಿಂದ ನಮ್ಮಿಂದ ಯಾವದರಲ್ಲಿಯೂ ನಷ್ಟಪಡಲಿಲ್ಲವಲ್ಲಾ. ದೇವರ ಚಿತ್ತಾನುಸಾರವಾಗಿರುವ ದುಃಖವು 10 ಮಾನಸಾಂತರವನ್ನುಂಟುಮಾಡಿ ರಕ್ಷಣೆಗೆ ಕಾರಣವಾಗಿದೆ; ಆ ಮಾನಸಾಂತರದಲ್ಲಿ ಪಶ್ಚಾತ್ತಾಪಕ್ಕೆ ಆಸ್ಪದವಿಲ್ಲ; ಆದರೆ ಲೋಕದವರಿಗಿರುವಂಥಾ ದುಃಖವು ಮರಣವನ್ನುಂಟುಮಾಡುತ್ತದೆ. ನೀವು ದೇವರ ಚಿತ್ತಾನುಸಾರವಾಗಿ ಪಟ್ಟ ದುಃಖವು ನಿಮಗೆ 11 ಎಂಥಾ ಜಾಗರೂಕತೆಯನ್ನು ಉಂಟುಮಾಡಿತು ನೋಡಿರಿ. ನೀವು ನಿರ್ದೋಷಿಗಳೆಂದು ಸ್ಥಾಪಿಸುವದಕ್ಕೆ ಎಷ್ಟೋ ಪ್ರಯಾಸಪಟ್ಟೆರಿ, ಎಷ್ಟೋ ಮನೋವ್ಯಥೆಯನ್ನು ಅನುಭವಿಸಿದಿರಿ; ಎಂಥಾ ಭಯವನ್ನು ಎಂಥಾ ಹಂಬಲವನ್ನು ತೋರಿಸಿದಿರಿ; ಮಾನಹಾನಿಗಾಗಿ ಎಷ್ಟೋ ರೋಷಪಟ್ಟು ಶಿಕ್ಷೆ ಮಾಡಿದಿರಿ. ನೀವು ಆ ಕಾರ್ಯಕ್ಕೆ[1] ಸೇರಿದವರಲ್ಲವೆಂಬುವದನ್ನು ಎಲ್ಲಾ ವಿಧದಲ್ಲಿಯೂ ತೋರಿಸಿದಿರಿ. ನಾನು ನಿಮಗೆ ಬರೆದಾಗ ಅನ್ಯಾಯ 12 ಮಾಡಿದವನಿಗೆ ದಂಡನೆಯೂ ಅನ್ಯಾಯಹೊಂದಿದವನಿಗೆ ನ್ಯಾಯವೂ ಆಗಬೇಕೆಂಬುವ ಕಾರಣದಿಂದ ಬರೆಯಲಿಲ್ಲ; ನಮಗೋಸ್ಕರ ನಿಮಗಿರುವ ಜಾಗರೂಕತೆಯು ದೇವರ ಮುಂದೆ ನಿಮಗೆ ವ್ಯಕ್ತವಾಗಬೇಕೆಂಬುವ ಉದ್ದೇಶದಿಂದಲೇ ಬರೆದೆನು.

[1] ೧ನೇ ಪತ್ರಿಕೆ ೫ನೇ ಅಧ್ಯಾಯವನ್ನು ನೋಡಿರಿ.

13 ಆದಕಾರಣ ನಮ್ಮ ಮನಸ್ಸಿಗೆ ಆದರಣೆ ಉಂಟಾಯಿತು. ಅಷ್ಟು ಮಾತ್ರವೇ ಅಲ್ಲ, ತೀತನ ಮನಸ್ಸಿಗೆ ನಿಮ್ಮೆಲ್ಲರಿಂದ ಉಪಶಮನವಾದ ಕಾರಣ ನಾವು ಅವನ ಸಂತೋಷ
14 ವನ್ನು ನೋಡಿ ಮತ್ತೂ ಹೆಚ್ಚಾಗಿ ಸಂತೋಷಪಟ್ಟೆವು. ಯಾಕಂದರೆ ನಾನು ಅವನ ಮುಂದೆ ನಿಮ್ಮನ್ನು ಹೊಗಳಿದ್ದರಲ್ಲಿ ನಾಚಿಕೆ ಪಡಬೇಕಾಗಿ ಬರಲಿಲ್ಲ. ನಾವು ನಿಮಗೆ ಹೇಳಿದ ಎಲ್ಲಾ ಮಾತುಗಳು ಹ್ಯಾಗೆ ಸತ್ಯವಾಗಿದ್ದವೋ ಹಾಗೆ ನಾವು ತೀತನ ಮುಂದೆ
15 ಆಡಿದ ಹೊಗಳಿಕೆಯ ಮಾತುಗಳೂ ಸತ್ಯವೆಂದು ಕಂಡುಬಂದವು. ನೀವು ಮನೋ ಭೀತಿಯಿಂದ ನಡುಗುವವರಾಗಿ ಅವನನ್ನು ಸೇರಿಸಿಕೊಂಡದ್ದರಲ್ಲಿ ನಿಮ್ಮೆಲ್ಲರ ವಿಧೇಯ ತೆಯು ತೋರಬಂತು. ಅವನು ಅದನ್ನು ಜ್ಞಾಪಕ ಮಾಡಿಕೊಳ್ಳುವಾಗ, ನಿಮ್ಮ ಮೇಲೆ
16 ಅವನ ಕನಿಕರವು ಹೆಚ್ಚಾಗಿದೆ. ಸರ್ವವಿಷಯದಲ್ಲೂ ನಿಮ್ಮನ್ನು ಕುರಿತು ನನಗೆ ಭರ ವಸವಿರುವದರಿಂದ ಸಂತೋಷಪಡುತ್ತೇನೆ.

## ಯೆರೂಸಲೇಮಿನ ಬಡ ಕ್ರೈಸ್ತರಿಗಾಗಿ ಹಣಸಹಾಯ ಮಾಡುವದರ ವಿಷಯ.

(8, 1—9, 15.)

ಪೌಲನು ಮಕೆದೋನ್ಯದ ಸಭೆಗಳವರ ಔದಾರ್ಯವನ್ನು ಕುರಿತು ಹೇಳಿ ಕೊರಿಂಥದವರಲ್ಲಿಯೂ ಔದಾರ್ಯವನ್ನು ಹುಟ್ಟಿಸುವದಕ್ಕೆ ಪ್ರಯತ್ನಿಸಿದ್ದು.

8 ಸಹೋದರರೇ, ಮಕೆದೋನ್ಯದ ಸಭೆಗಳಲ್ಲಿ ದೇವರ ಕೃಪೆಯು ತೋರಿದ ಬಗೆಯನ್ನು
2 ನಿಮಗೆ ತಿಳಿಸುತ್ತೇವೆ. ಆ ಸಭೆಗಳವರು ಬಹಳ ಹಿಂಸೆ ತಾಳುವವರಾದಾಗ್ಯೂ ಮತ್ತು ವಿಪರೀತವಾದ ಬಡತನದಲ್ಲಿದ್ದಾಗ್ಯೂ ಬಹು ಆನಂದದಿಂದ ತುಂಬಿದವರಾಗಿ ಅತ್ಯಂತ
3 ಔದಾರ್ಯವುಳ್ಳವರಾದರು. ಅವರು ಶಕ್ತ್ಯನುಸಾರವಾಗಿ ಮಾತ್ರ ಕೊಡದೆ ಶಕ್ತಿಯನ್ನು
4 ಮೀರಿ ತಮ್ಮಷ್ಟಕ್ಕೆ ತಾವೇ ಕೊಟ್ಟರು; ಇದಕ್ಕೆ ನಾನು ಸಾಕ್ಷಿ. ದೇವಜನರಿಗೆ ಸಹಾಯ ಮಾಡುವ ಕೆಲಸದಲ್ಲಿ ತಾವು ಪಾಲುಗಾರರಾಗುವಂತೆ ಅಪ್ಪಣೆಯಾಗಬೇಕೆಂದು ನಮ್ಮನ್ನು
5 ಬಹಳವಾಗಿ ಬೇಡಿಕೊಂಡರು. ನಾವು ನೆನಸಿದ್ದ ಪ್ರಕಾರವಾಗಿ ಅವರು ಕೊಡದೆ ಮೊದಲು ತಮ್ಮನ್ನೇ ಕರ್ತನಿಗೆ ಒಪ್ಪಿಸಿಕೊಟ್ಟರು; ಅನಂತರ ದೇವರ ಚಿತ್ತಾನುಸಾರವಾಗಿ
6 ನಮಗೂ ತಮ್ಮನ್ನು ಒಪ್ಪಿಸಿದರು. ಹೀಗಿರಲಾಗಿ ಈ ಧರ್ಮಕಾರ್ಯವನ್ನು ಮಾಡು ವದಕ್ಕೆ ಮೊದಲು ನಿಮ್ಮನ್ನು ಪ್ರೇರೇಪಿಸಿದ ತೀತನು ತಿರಿಗಿ ನಿಮ್ಮ ಬಳಿಗೆ ಬಂದು ಅದನ್ನು
7 ತೀರಿಸಬೇಕೆಂದು ನಾವು ಅವನನ್ನು ಕೇಳಿಕೊಂಡಿದ್ದೇವೆ. ನೀವು ದೇವರ ಮೇಲಣ ನಂಬಿಕೆ ವಾಕ್ಚಾತುರ್ಯ ಜ್ಞಾನ ಪೂರ್ಣಜಾಗರೂಕತೆ ನಮ್ಮ ಪ್ರೇರಣೆಯಿಂದ ನಿಮ್ಮಲ್ಲಿ ಹುಟ್ಟಿದ ಪ್ರೀತಿ ಇವೇ ಮೊದಲಾದ ಎಲ್ಲಾ ವಿಷಯಗಳಲ್ಲಿ ಹ್ಯಾಗೆ ಸಮೃದ್ಧರಾಗಿದ್ದೀರೋ ಹಾಗೆಯೇ ಈ ಧರ್ಮಕಾರ್ಯದಲ್ಲಿಯೂ ಸಮೃದ್ಧರಾಗಿರಿ.

8 ಇದನ್ನು ಆಜ್ಞಾರೂಪವಾಗಿ ಹೇಳದೆ, ಇತರರ ಜಾಗರೂಕತೆಯನ್ನು ತೋರಿಸಿಕೊಟ್ಟು ನಿಮ್ಮ ಪ್ರೀತಿಯೂ ಯಥಾರ್ಥವಾದದ್ದೆಂಬುವದನ್ನು ಪರೀಕ್ಷೆಯಿಂದ ತಿಳಿದುಕೊಳ್ಳ
9 ಬೇಕೆಂದು ಹೇಳುತ್ತೇನೆ. ನಮ್ಮ ಕರ್ತನಾದ ಯೇಸು ಕ್ರಿಸ್ತನ ಕೃಪೆಯು ನಿಮಗೆ

ಗೊತ್ತಾಗಿದೆಯಲ್ಲಾ; ಆತನು ಐಶ್ವರ್ಯವಂತನಾಗಿದ್ದು, ತಾನು ಬಡತನದಲ್ಲಿ ಸೇರುವದ ರಿಂದ ನೀವು ಐಶ್ವರ್ಯವಂತರಾಗಬೇಕೆಂದು ನಿಮಗೋಸ್ಕರ ಬಡವನಾದನು. 10 ಈ ಧರ್ಮ ಕಾರ್ಯವನ್ನು ಕುರಿತು ನನ್ನ ಅಭಿಪ್ರಾಯವನ್ನು ತಿಳಿಸುತ್ತೇನೆ; ಈ ಕಾರ್ಯವನ್ನು ಒಂದು ವರುಷದ ಹಿಂದೆ ನಡಿಸುವದಕ್ಕೆ ತೊಡಗುವದರಲ್ಲಿಯೂ ನಡಿಸಬೇಕೆಂದು ಮನಸ್ಸು ಮಾಡುವದರಲ್ಲಿಯೂ ನೀವು ಅವರಿಗಿಂತ ಮೊದಲಿನವರಾದ್ದರಿಂದ ನಿಮಗೆ ಅಷ್ಟು ಮಾತ್ರ ಹೇಳುವದು ವಿಹಿತವಾಗಿದೆ. 11 ಈ ಕಾರ್ಯವನ್ನು ಪ್ರಾರಂಭಿಸುವದಕ್ಕೆ ಹ್ಯಾಗೆ ನಿಮ್ಮಲ್ಲಿ ಸಿದ್ಧ ಮನಸ್ಸು ಇತ್ತೋ ಹಾಗೆಯೇ ನಿಮ್ಮ ನಿಮ್ಮ ಶಕ್ತ್ಯನುಸಾರವಾಗಿ ನೆರವೇರಿಸಿರಿ. 12 ಒಬ್ಬನು ಕೊಡುವದಕ್ಕೆ ಮನಸ್ಸುಳ್ಳವನಾಗಿರುವಲ್ಲಿ ಅವನು ತನ್ನಲ್ಲಿ ಇರುವದಕ್ಕೆ ಅನು ಸಾರವಾಗಿ ಕೊಟ್ಟರೆ, ಅದು ಸಮರ್ಪಕವಾಗಿರುವದು; ಅವನಿಗೆ ಇಲ್ಲದನ್ನು ದೇವರು ಕೇಳಿಕೊಳ್ಳುವದಿಲ್ಲ. 13 ಇತರರಿಗೆ ಕಷ್ಟಪರಿಹಾರವೂ ನಿಮಗೆ ಕಷ್ಟವೂ ಉಂಟಾಗ ಬೇಕೆಂಬುವದು ನನ್ನ ತಾತ್ಪರ್ಯವಲ್ಲ; ಸಮಾನತ್ವವಿರಬೇಕೆಂಬುವದೇ ನನ್ನ ತಾತ್ಪರ್ಯ. 14 ಸದ್ಯಕ್ಕೆ ನಿಮ್ಮ ಸಮೃದ್ಧಿಯು ಅವರ ಕೊರತೆಯನ್ನು ನೀಗಿಸುತ್ತದೆ. ಮುಂದೆ ಅವರ ಸಮೃದ್ಧಿಯು ನಿಮ್ಮ ಕೊರತೆಯನ್ನು ನೀಗಿಸುವದು; ಹೀಗೆ ಸಮಾನತ್ವವುಂಟಾಗುವದು. 15 ಬಹಳ ಕೂಡಿಸಿದವನಿಗೆ ಹೆಚ್ಚು ಇರಲಿಲ್ಲ, ಸ್ವಲ್ಪ ಕೂಡಿಸಿದವನಿಗೆ ಕಡಿಮೆ ಇರಲಿಲ್ಲ ಎಂದು[1] ಶಾಸ್ತ್ರದಲ್ಲಿ ಬರೆದಿರುವ ಪ್ರಕಾರವಾಗುವದು.

ಧರ್ಮದ್ರವ್ಯವನ್ನು ಕೂಡಿಸುವದಕ್ಕೆ ಪೌಲನು ಯೋಗ್ಯರಾದ ಕೆಲವು ಪುರುಷರನ್ನು ಕೊರಿಂಥಕ್ಕೆ ಕಳುಹಿಸಿದ್ದು.

16 ನಿಮ್ಮ ವಿಷಯವಾಗಿ ನನಗಿರುವ ಹಿತಚಿಂತನೆಯನ್ನು ದೇವರು ತೀತನ ಹೃದಯ ದಲ್ಲಿಯೂ ಹುಟ್ಟಿಸಿದ್ದಕ್ಕಾಗಿ ಆತನಿಗೆ ಸ್ತೋತ್ರವಾಗಲಿ. 17 ಅವನು ನಿಮ್ಮ ಬಳಿಗೆ ಹೋಗ ಬೇಕೆಂದು ನಾವು ಕೇಳಿಕೊಂಡಾಗ ಅವನು ಒಪ್ಪಿದ್ದಲ್ಲದೆ ಅತ್ಯಾಸಕ್ತನಾಗಿದ್ದು ತನ್ನಷ್ಟಕ್ಕೆ ತಾನೇ ನಿಮ್ಮ ಬಳಿಗೆ ಬರುವದಕ್ಕೆ ಹೊರಟಿದ್ದಾನೆ. 18 ಅವನ ಜೊತೆಯಲ್ಲಿ ಮತ್ತೊಬ್ಬ ಸಹೋದರನನ್ನು ಕಳುಹಿಸಿದ್ದೇವೆ; ಈ ಸಹೋದರನು ಸುವಾರ್ತಾಸೇವೆಯಲ್ಲಿ ಎಲ್ಲಾ ಸಭೆಗಳೊಳಗೆ ಕೀರ್ತಿಪಡಕೊಂಡವನಾಗಿದ್ದಾನೆ. 19 ಇದು ಮಾತ್ರವಲ್ಲದೆ, ನಾವು ನಡಿ ಸುವ ಈ ಧರ್ಮಕಾರ್ಯಸಂಬಂಧವಾಗಿ ಸಭೆಗಳವರು ಈತನನ್ನು ನಮ್ಮ ಸಂಗಡ ಪ್ರಯಾಣಮಾಡುವಂತೆ ಗೊತ್ತುಮಾಡಿದ್ದಾರೆ. ಅವರು ಹೀಗೆ ಮಾಡಿದ್ದರಿಂದ ಕರ್ತ ನಿಗೆ ಘನವೂ ನಮ್ಮಲ್ಲಿ ಸಿದ್ಧ ಮನಸ್ಸೂ ಉಂಟಾಗುವದು. 20 ನಾವು ಪಾರುಪತ್ಯಮಾಡುವ ಈ ದ್ರವ್ಯಸಂಚಯದ ವಿಷಯದಲ್ಲಿ ಒಬ್ಬರೂ ನಮ್ಮ ಮೇಲೆ ತಪ್ಪು ಹೊರಿಸುವದಕ್ಕೆ ಆಸ್ಪ ದವಿರಬಾರದು. 21 ಯಾಕಂದರೆ ಕರ್ತನ ದೃಷ್ಟಿಯಲ್ಲಿ ಮಾತ್ರವಲ್ಲದೆ ಮನುಷ್ಯರ ದೃಷ್ಟಿ ಯಲ್ಲಿಯೂ ಗೌರವವಾದದ್ದನ್ನು[2] ಯೋಚನೆಗೆ ತಂದುಕೊಳ್ಳುವವರಾಗಿದ್ದೇವೆ. 22 ಇವರಿ ಬ್ಬರ ಸಂಗಡ ನಮ್ಮ ಸಹೋದರರಲ್ಲಿ ಮತ್ತೊಬ್ಬನನ್ನು ಕಳುಹಿಸಿದ್ದೇವೆ; ನಾವು ಅನೇಕ ಸಮಯಗಳಲ್ಲಿಯೂ ಅನೇಕ ಕಾರ್ಯಗಳಲ್ಲಿಯೂ ಅವನನ್ನು ಪರೀಕ್ಷಿಸಿ ಆಸಕ್ತನೆಂದು ತಿಳುಕೊಂಡಿದ್ದೇವೆ; ಈಗಲಾದರೋ ಅವನು ನಿಮ್ಮಲ್ಲಿಟ್ಟಿರುವ ವಿಶೇಷ ಭರವಸದಿಂದ

[1] ಹೊರಡೋಣ ೧೬, ೧೮. [2] ಜ್ಞಾನೋಕ್ತಿ ೩, ೪.

23 ಇನ್ನೂ ಬಹು ಹೆಚ್ಚಾಗಿ ಆಸಕ್ತಿಯುಳ್ಳವನಾಗಿದ್ದಾನೆ. ತೀತನನ್ನು ಕುರಿತು ಕೇಳುತ್ತೀರೋ, ಅವನು ನನ್ನ ಪಾಲುಗಾರನೂ ನಿಮ್ಮ ಪ್ರಯೋಜನಕ್ಕಾಗಿ ನನಗೆ ಸಹಕಾರಿಯೂ ಆಗಿದ್ದಾನೆ; ಆ ಸಹೋದರರನ್ನು ಕುರಿತು ಕೇಳುತ್ತೀರೋ, ಅವರು ಸಭೆಗಳಿಂದ
24 ಕಳುಹಿಸಲ್ಪಟ್ಟವರೂ ಕ್ರಿಸ್ತನ ಮಹಿಮೆಯನ್ನು ಪ್ರಕಾಶಪಡಿಸುವವರೂ ಆಗಿದ್ದಾರೆ. ಆದಕಾರಣ ನಿಮ್ಮ ಪ್ರೀತಿಯು ಯಥಾರ್ಥವಾದದ್ದೆಂಬುವದನ್ನೂ ನಿಮ್ಮನ್ನು ನಾವು ಹೊಗಳಿದ್ದು ನ್ಯಾಯವೆಂಬುವದನ್ನೂ ಇವರಿಗೂ ಸಭೆಗಳಿಗೂ ತೋರಿಸಿಕೊಡಿರಿ.

**9** ದೇವಜನರಿಗೋಸ್ಕರ ನಡೆಯುವ ಸಹಾಯಕಾರ್ಯವನ್ನು ಕುರಿತು ನಿಮಗೆ ಬರೆಯು
2 ವದಕ್ಕೆ ಅವಶ್ಯವಿಲ್ಲ. ನಿಮ್ಮ ಮನಸ್ಸು ಸಿದ್ಧವಾಗಿದೆ ಎಂಬುವದು ನನಗೆ ಗೊತ್ತುಂಟು. ಒಂದು ವರುಷದ ಹಿಂದೆ ಅಖಾಯದವರು ಸಹಾಯಮಾಡುವದಕ್ಕೆ ಸಿದ್ಧವಾಗಿದ್ದರೆಂದು ಮಕೆದೋನ್ಯದವರ ಮುಂದೆ ನಿಮ್ಮನ್ನು ಹೊಗಳುತ್ತಾ ಇದ್ದೇನೆ. ಮತ್ತು ನಿಮ್ಮ ಆಸ
3 ಕ್ತಿಯು ಅವರಲ್ಲಿ ಬಹುಜನರನ್ನು ಪ್ರೇರೇಪಿಸಿತು. ಆದಾಗ್ಯೂ ನಾವು ನಿಮ್ಮನ್ನು ಹೊಗಳಿದ್ದು ನಿರಾಧಾರವಾಗದೆ ನಾನು ಹೇಳಿದ ಪ್ರಕಾರವೇ ನೀವು ಸಿದ್ಧವಾಗಿರಬೇಕೆಂದು ಆ
4 ಸಹೋದರರನ್ನು ಕಳುಹಿಸಿದ್ದೇನೆ. ಸಿದ್ಧವಾಗದಿದ್ದರೆ, ಒಂದು ವೇಳೆ ಮಕೆದೋನ್ಯದವರಲ್ಲಿ ಯಾರಾದರೂ ನನ್ನ ಸಂಗಡ ಬಂದು ನೀವು ಸಿದ್ಧವಾಗಲಿಲ್ಲವೆಂಬುವದನ್ನು ಕಾಣುವಾಗ ನಮಗೆ ಇಂಥಾ ಭರವಸವಿದ್ದದ್ದಕ್ಕೆ ನಾವು ನಾಚಿಕೆಪಡಬೇಕಾದೀತು; ನಿಮಗೂ
5 ನಾಚಿಕೆಯಾಗುವದೆಂದು ನಾವು ಬೇರೆ ಹೇಳಬೇಕೇ. ಹೀಗಿರಲಾಗಿ ಈ ಸಹೋದರರು ಮುಂದಾಗಿ ನಿಮ್ಮ ಬಳಿಗೆ ಬಂದು, ಕೊಡುತ್ತೇವೆಂದು ನೀವು ಮೊದಲು ಹೇಳಿದ ಧರ್ಮದ್ರವ್ಯವನ್ನು ಸಿದ್ಧಪಡಿಸಬೇಕೆಂಬದಾಗಿ ಇವರನ್ನು ಬೇಡಿಕೊಳ್ಳುವದು ಅವಶ್ಯವೆಂದು ನನಗೆ ತೋಚಿತು. ಹೀಗೆ ಆ ಹಣವು ಸುಲಿಗೆಯಂತೆ ಬಾರದೆ ಧರ್ಮಾರ್ಥವಾಗಿಯೇ ಸಿದ್ಧವಾಗುವದು.

ಪೌಲನು ಕೊರಿಂಥದ ಸಭೆಯವರನ್ನು ಉದಾರವಾಗಿ ಕೊಡುವದಕ್ಕೆ ಪ್ರೇರೇಪಿಸುವದು.

6 ಆದರೆ ಸ್ವಲ್ಪವಾಗಿ ಬಿತ್ತುವವನು ಪೈರನ್ನು ಸ್ವಲ್ಪವಾಗಿ ಕೊಯ್ಯುವನು; ಹೆಚ್ಚಾಗಿ
7 ಬಿತ್ತುವವನು ಹೆಚ್ಚಾಗಿ ಕೊಯ್ಯುವನು ಎಂದು ತಿಳುಕೊಳ್ಳಿರಿ. ಪ್ರತಿಯೊಬ್ಬನು ತನ್ನ ತನ್ನ ಹೃದಯದಲ್ಲಿ ನಿರ್ಣಯಿಸಿಕೊಂಡ ಪ್ರಕಾರ ಕೊಡಲಿ; ದುಃಖದಿಂದಾಗಲಿ ಬಲಾತ್ಕಾರದಿಂದಾಗಲಿ ಯಾರೂ ಕೊಡಬಾರದು; ಯಾಕಂದರೆ ಸಂತೋಷವಾಗಿ ಕೊಡುವವನ
8 ಮೇಲೆ ದೇವರಿಗೆ ಪ್ರೀತಿಯುಂಟು. ದೇವರು ಸಕಲ ವಿಧವಾದ ದಾನಗಳನ್ನು ನಿಮಗೆ ಧಾರಾಳವಾಗಿ ಅನುಗ್ರಹಿಸುವದಕ್ಕೆ ಶಕ್ತನಾದ್ದರಿಂದ ನೀವು ಯಾವಾಗಲೂ ಎಲ್ಲಾ ವಿಷಯಗಳಲ್ಲಿ ಪರಿಪೂರ್ಣತೆಯುಳ್ಳವರಾಗಿ ಸಕಲ ಸತ್ಕಾರ್ಯಗಳನ್ನು ಹೇರಳವಾಗಿ ಮಾಡು
9 ವವರಾಗಿರಬೇಕು. ಉಪಕಾರಿಯ ವಿಷಯದಲ್ಲಿ—

ಅವನು ಧಾರಾಳವಾಗಿ ದಾನ ಮಾಡಿದನು; ಬಡವರಿಗೆ ಉಪಕಾರ ಮಾಡಿದನು;
ಅವನ ಧರ್ಮದ ಫಲವು ಸದಾಕಾಲವೂ ಇರುವದು[1]

[1] ಕೀರ್ತನೆ ೧೧೨, ೯.

ಎಂದು ಶಾಸ್ತ್ರದಲ್ಲಿ ಬರೆದದೆಯಲ್ಲಾ. ಬಿತ್ತುವವನಿಗೆ ಬೀಜವನ್ನೂ ಉಣ್ಣುವವನಿಗೆ 10 ಆಹಾರವನ್ನೂ ಕೊಡುವಾತನು ನಿಮಗೂ ಬಿತ್ತುವದಕ್ಕೆ ಬೀಜವನ್ನು[1] ಕೊಟ್ಟು ಹೆಚ್ಚಿಸಿ, ನಿಮ್ಮ ಧರ್ಮಕಾರ್ಯಗಳಿಂದಾಗುವ ಫಲಗಳನ್ನು ವೃದ್ಧಿಪಡಿಸುವನು. ಹೀಗೆ ನೀವು 11 ಎಲ್ಲಾ ವಿಷಯಗಳಲ್ಲಿ ಐಶ್ವರ್ಯವಂತರಾಗಿದ್ದು ಉದಾರವಾಗಿ ಕೊಡ ಶಕ್ತರಾಗುವಿರಿ; ಇದಲ್ಲದೆ ನಿಮ್ಮ ದಾನಗಳು ನಮ್ಮ ಕೈಯಿಂದ ಮತ್ತೊಬ್ಬರಿಗೆ ಸೇರಿದಾಗ ದೇವರಿಗೆ ಕೃತ ಜ್ಞತಾಸ್ತುತಿಯನ್ನುಂಟುಮಾಡುವದು. ಹ್ಯಾಗಂದರೆ ನೀವು ನಡಿಸುವ ಈ ಧರ್ಮ 12 ಕಾರ್ಯವು ದೇವಜನರ ಕೊರತೆಗಳನ್ನು ನೀಗುವದು ಮಾತ್ರವಲ್ಲದೆ ಅನೇಕರಿಂದ ದೇವ ರಿಗೆ ಕೃತಜ್ಞತಾಸ್ತುತಿಯನ್ನು ಹುಟ್ಟಿಸುವದು. ಈ ಸಹಾಯದಿಂದ ತೋರಿಬಂದ ನಿಮ್ಮ 13 ಯೋಗ್ಯಭಾವವನ್ನು ಅವರು ನೋಡುವಾಗ, ನೀವು ಮಾಡಿದ್ದ ಪ್ರತಿಜ್ಞೆಗೆ ಸರಿಯಾಗಿ ಕ್ರಿಸ್ತನ ಸುವಾರ್ತೆಯನ್ನು ಅನುಸರಿಸಿದ್ದರಿಂದಲೂ ತಮಗೂ ಎಲ್ಲರಿಗೂ ನೀವು ಉದಾರ ವಾಗಿ ಸಹಾಯಮಾಡಿದ್ದರಿಂದಲೂ ದೇವರನ್ನು ಕೊಂಡಾಡುವರು. ಇದಲ್ಲದೆ ನಿಮ 14 ಗೋಸ್ಕರ ವಿಜ್ಞಾಪನೆಮಾಡಿ ದೇವರ ಅತಿಶಯವಾದ ಕೃಪೆಯು ನಿಮ್ಮಲ್ಲಿ ಇರುವದರಿಂದ ನಿಮ್ಮ ಪರಿಚಿತಿಮಾಡಬೇಕೆಂದು ಕೋರುವರು. ವರ್ಣಿಸಲಶಕ್ಯವಾದ ವರವನ್ನು 15 ದೇವರು ದಯಪಾಲಿಸಿದ್ದಕ್ಕಾಗಿ ಆತನಿಗೆ ಸ್ತೋತ್ರ.

## ತನಗೆ ಅಧಿಕಾರವಿಲ್ಲವೆಂದು ವಿರೋಧಿಗಳು ಹೇಳಿದ ಮಾತಿಗೆ ಪೌಲನು ಕೊಡುವ ಉತ್ತರ. (10, 1—13, 10.)

ತನಗೆ ಅಧಿಕಾರ ಉಂಟೆಂಬುವದನ್ನೂ ಅದು ಎಂಥಾ ಅಧಿಕಾರವೆಂಬುವದನ್ನೂ ಕೊರಿಂಥಕ್ಕೆ ಬಂದಾಗ ತೋರಿಸುವೆನೆಂದು ಪೌಲನು ಖಂಡಿತವಾಗಿ ಹೇಳುವದು.

**10** ಪೌಲನು ನಮ್ಮೆದುರಿನಲ್ಲಿರುವಾಗ ದೀನನಾಗಿ ನಡಕೊಳ್ಳುವವನೂ ದೂರದಲ್ಲಿರು ವಾಗ ನಮ್ಮನ್ನು ಕುರಿತು ದಿಟ್ಟತನ ತೋರಿಸುವವನೂ ಆಗಿದ್ದಾನೆ ಎಂದು ಹೇಳುವವರು ನಿಮ್ಮಲ್ಲಿದ್ದಾರಲ್ಲಾ. ಆ ಪೌಲನೆಂಬ ನಾನು ಕ್ರಿಸ್ತನ ಶಾಂತಮನಸ್ಸನ್ನೂ ಸಾತ್ವಿಕತ್ವವನ್ನೂ ನೆನಪಿಗೆ ತಂದುಕೊಂಡು ನಿಮಗೆ ಖಂಡಿತವಾಗಿ ಹೇಳುವದೇನಂದರೆ, ಯಾರು ನಮ್ಮನ್ನು 2 ಲೋಕಾನುಸಾರಿಗಳೆಂದು ಎಣಿಸುತ್ತಾರೋ ಅವರಿಗೆ ದಿಟ್ಟವಾದ ಧೈರ್ಯವನ್ನು ತೋರಿಸ ಬೇಕೆಂದು ಯೋಚಿಸುತ್ತಾ ಇದ್ದೇನೆ. ನಾವು ನಿಮ್ಮಲ್ಲಿಗೆ ಬಂದಿರುವಾಗ ಅಂಥ ದಿಟ್ಟತನ ವನ್ನು ತೋರಿಸುವದಕ್ಕೆ ಅವಕಾಶ ಉಂಟಾಗಬಾರದೆಂದು ನಿಮ್ಮನ್ನು ಬೇಡಿಕೊಳ್ಳುತ್ತೇನೆ. ನಾವು ಲೋಕದಲ್ಲಿದ್ದಾಗ್ಯೂ ಲೋಕಾನುಸಾರವಾಗಿ ಯುದ್ಧಮಾಡುವವರಲ್ಲ. ನಾವು 3, 4 ಉಪಯೋಗಿಸುವ ಆಯುಧಗಳು ಲೋಕಸಂಬಂಧವಾದ ಆಯುಧಗಳಲ್ಲ; ಅವು ದೇವರ ಎಣಿಕೆಯಲ್ಲಿ ಬಲವಾಗಿದ್ದು ಕೋಟೆಗಳನ್ನು ಕೆಡವಿಹಾಕುವಂಥವುಗಳಾಗಿವೆ. ನಾವು ವಿತರ್ಕಗಳನ್ನೂ ದೇವಜ್ಞಾನವನ್ನು ವಿರೋಧಿಸುವದಕ್ಕೆ ಏರಿಸಲ್ಪಟ್ಟಿರುವ ಉನ್ನತವಾದ 5 ಎಲ್ಲಾ ಕೊತ್ತಲಗಳನ್ನೂ ಕೆಡವಿಹಾಕಿ, ಎಲ್ಲಾ ಯೋಚನೆಗಳನ್ನು ಕ್ರಿಸ್ತನಿಗೆ ವಿಧೇಯ

[1] ಅಂದರೆ, ದಾನಮಾಡುವದಕ್ಕೆ ಬೇಕಾದದ್ದನ್ನು.

6 ವಾಗುವಂತೆ ಸೆರೆಹಿಡಿದು, ನಿಮ್ಮ ವಿಧೇಯತ್ವವು ಪರಿಪೂರ್ಣವಾದ ಮೇಲೆ ಎಲ್ಲಾ ಅವಿಧೇಯತ್ವಕ್ಕೆ ಶಿಕ್ಷೆ ಮಾಡುವದಕ್ಕೆ ಸಿದ್ಧರಾಗಿದ್ದೇವೆ.

7 ನೀವು ಮುಖದ ಮುಂದೆ ಇರುವಂಥಾದ್ದನ್ನು ಮಾತ್ರ ನೋಡುತ್ತೀರಿ. ಯಾವನಾದರೂ ತನ್ನನ್ನು ಕ್ರಿಸ್ತನವನೆಂದು ನಂಬಿಕೊಂಡರೆ, ಅವನು ತಿರಿಗಿ ಆಲೋಚನೆಮಾಡಿಕೊಂಡು ತಾನು ಹ್ಯಾಗೆ ಕ್ರಿಸ್ತನವನೋ ಹಾಗೆ ನಾವೂ ಕ್ರಿಸ್ತನವರೆಂದು ತಿಳುಕೊಳ್ಳಲಿ.

8 ನಮಗಿರುವ ಅಧಿಕಾರವನ್ನು ಕುರಿತು ನಾವು ಒಂದು ವೇಳೆ ಹೆಚ್ಚಾಗಿ ಹೊಗಳಿಕೊಂಡರೂ ಹಾಗೆ ಹೊಗಳಿಕೊಳ್ಳುವದರಲ್ಲಿ ನಾಚಿಕೆ ಪಡುವದಕ್ಕೆ ಕಾರಣವಾಗುವದಿಲ್ಲ. ಆದರೆ ನಿಮ್ಮನ್ನು ಕೆಡವಿಹಾಕುವದಕ್ಕಲ್ಲ ಕಟ್ಟುವದಕ್ಕಾಗಿಯೇ ಕರ್ತನು ಈ ಅಧಿಕಾರವನ್ನು 9 ನಮಗೆ ಕೊಟ್ಟನು. ಪತ್ರಿಕೆಗಳಿಂದ ನಿಮ್ಮನ್ನು ಹೆದರಿಸುವವನಾಗಿ ಕಾಣಿಸಿಕೊಳ್ಳುವದಕ್ಕೆ 10 ನನಗೆ ಮನಸ್ಸಿಲ್ಲ. ಅವನಿಂದ ಬಂದ ಪತ್ರಿಕೆಗಳು ಗೌರವವಾದವುಗಳೂ ಬಲವುಳ್ಳವುಗಳೂ ಆಗಿವೆ; ಅವನು ಸಾಕ್ಷಾತ್ತಾಗಿ ಬಂದರೆ, ಅವನು ನಿರ್ಬಲನು, ಅವನ ಮಾತು ಗಣ 11 ನೆಗೆ ಬಾರದ್ದು ಅನ್ನುತ್ತಾರೆ. ಅಂಥವರು—ನಾವು ದೂರದಲ್ಲಿರುವಾಗ ಪತ್ರಿಕೆಗಳ ಮೂಲಕ ಮಾತಿನಲ್ಲಿ ಎಂಥವರಾಗಿದ್ದೇವೋ ಹತ್ತರದಲ್ಲಿರುವಾಗ ಕಾರ್ಯದಲ್ಲಿಯೂ ಅಂಥವರಾಗಿಯೇ ಇದ್ದೇವೆಂದು ತಿಳುಕೊಳ್ಳಲಿ.

ಮತ್ತೊಬ್ಬರು ಸುವಾರ್ತೆ ಸಾರಿದ ಕಡೆಯಲ್ಲಿ ತಾನು ಸಾರುವವನಲ್ಲವೆಂದು ಪೌಲನು ಹೇಳುವದು.

12 ತಮ್ಮನ್ನು ತಾವೇ ಹೊಗಳಿಕೊಳ್ಳುವ ಕೆಲವರಲ್ಲಿ ನಮ್ಮನ್ನು ಸೇರಿಸಿಕೊಳ್ಳುವದಕ್ಕಾಗಲಿ ಅವರಿಗೆ ಹೋಲಿಸಿಕೊಳ್ಳುವದಕ್ಕಾಗಲಿ ನಮಗೆ ಧೈರ್ಯಸಾಲದು; ಅವರಂತೂ ತಮ್ಮ ತಮ್ಮೊಳಗೆ ತಮ್ಮನ್ನು ಅಳತೆಮಾಡಿಕೊಂಡು ತಮತಮಗೆ ಹೋಲಿಸಿಕೊಂಡು ವಿವೇಕವಿಲ್ಲ 13 ದವರಾಗಿದ್ದಾರೆ. ನಾವಾದರೋ ಮೇರೆದಪ್ಪಿ ಹೊಗಳಿಕೊಳ್ಳದೆ ದೇವರು ನಮಗೆ ನೇಮಿಸಿದಂಥಾ ಮೇರೆಯೊಳಗಿದ್ದು ಹೊಗಳಿಕೊಳ್ಳುತ್ತೇವೆ. ಈ ಮೇರೆಯೊಳಗಿದ್ದು ನಿಮ್ಮ 14 ಪರ್ಯಂತರಕ್ಕೂ ಬಂದಿದ್ದೇವೆ. ನಾವು ಕ್ರಿಸ್ತನ ಸುವಾರ್ತೆಯನ್ನು ಸಾರುತ್ತಾ ಇತರರಿಗಿಂತ ಮೊದಲು ನಿಮ್ಮ ಬಳಿಗೆ ಬಂದದರಿಂದ ನಿಮ್ಮ ಮೇಲೆ ಅಧಿಕಾರವಿಲ್ಲದವರಂತೆ ಮೇರೆ 15 ಯನ್ನು ಅತಿಕ್ರಮಿಸಿದವರಲ್ಲ. ನಾವು ಮೇರೆದಪ್ಪಿ ಮತ್ತೊಬ್ಬರ ಪ್ರಯಾಸದ ಫಲಗಳನ್ನು ತಕ್ಕೊಂಡು ಇವು ನಮ್ಮವು ಎಂದು ಹಿಗ್ಗುವವರಲ್ಲ; ಆದರೆ ನಿಮ್ಮ ಮಧ್ಯದಲ್ಲಿ ನಮ್ಮ 16 ಮೇರೆಯೊಳಗೆ ಇನ್ನೂ ಅಭಿವೃದ್ಧಿಹೊಂದಿ ನಿಮಗೆ ಆಚೆ ಇರುವ ಸೀಮೆಗಳಲ್ಲಿ ಸುವಾರ್ತೆಯನ್ನು ಸಾರುವೆವೆಂಬ ನಿರೀಕ್ಷೆ[1] ನಮಗುಂಟು. ಮತ್ತೊಬ್ಬರ ಮೇರೆಯಲ್ಲಿ ಸಿದ್ಧವಾಗಿ 17 ನಮಗೆ ಸಿಕ್ಕಿದ ಫಲವನ್ನು ಕುರಿತು ನಾವು ಹೊಗಳಿಕೊಳ್ಳುವದಿಲ್ಲ. ಹೊಗಳಿಕೊಳ್ಳುವ 18 ವನು ಕರ್ತನಲ್ಲಿಯೇ ಹೊಗಳಿಕೊಳ್ಳಲಿ[2]. ತನ್ನನ್ನು ತಾನೇ ಹೊಗಳಿಕೊಳ್ಳುವವನು ಯೋಗ್ಯನಲ್ಲ; ಕರ್ತನು ಯಾರನ್ನು ಹೊಗಳುತ್ತಾನೋ ಅವನೇ ಯೋಗ್ಯನು.

---

[1] ಅಪೊಸ್ತಲರ ಕೃತ್ಯ ೧೯, ೨೧ ನೋಡಿರಿ. [2] ಯೆರೆಮಿಾಯ ೯, ೨೩. ೨೪.

ತಾನು ಸಾರಿದ ಕ್ರಿಸ್ತನನ್ನು ಕೊರಿಂಥದವರು ಬಿಟ್ಟು ಬೇರೊಂದು ಬೋಧನೆಗೆ ಕಿವಿಗೊಡಬಾರದೆಂದು ಪೌಲನು ಹೇಳುವದು.

**11** ನಾನು ನನ್ನನ್ನು ಹೊಗಳಿಕೊಳ್ಳುವದರಲ್ಲಿ ಸ್ವಲ್ಪ ಬುದ್ಧಿಹೀನತೆಯಿಂದ ಮಾತಾಡುತ್ತೇನೆ; ನೀವು ಅದನ್ನು ಸಹಿಸಿಕೊಳ್ಳುತ್ತೀರೇನೋ. ನನ್ನನ್ನು ಸಹಿಸಿಕೊಳ್ಳಬೇಕೆಂದು ನಿಮ್ಮನ್ನು ಬೇಡಿಕೊಳ್ಳುತ್ತೇನೆ. 2 ಯಾಕಂದರೆ ದೇವರಲ್ಲಿರುವಂಥಾ ಚಿಂತೆಯಿಂದಲೇ ನಾನು ನಿಮ್ಮ ವಿಷಯದಲ್ಲಿ ಚಿಂತಿಸುತ್ತೇನೆ. ನಿಮ್ಮನ್ನು ಕ್ರಿಸ್ತನೆಂಬ ಒಬ್ಬನೇ ಪುರುಷನಿಗೆ ಶುದ್ಧ ಕನ್ಯೆಯಾಗಿ ಒಪ್ಪಿಸಬೇಕೆಂದು ನಿಮ್ಮನ್ನು ಆತನಿಗೆ ನಿಶ್ಚಯಮಾಡಿದೆನಲ್ಲಾ. 3 ಆದರೆ ಹ್ಯಾಗೆ ಹವ್ವಳು ಸರ್ಪದ ಕುಯುಕ್ತಿಗೆ ಒಳಬಿದ್ದು ಮೋಸಹೋದಳೋ ಹಾಗೆಯೇ ನಿಮ್ಮ ಮನಸ್ಸು ಕ್ರಿಸ್ತನ ವಿಷಯದಲ್ಲಿರಬೇಕಾದ ಯಥಾರ್ಥತ್ವವನ್ನೂ ಪಾತಿವ್ರತ್ಯವನ್ನೂ ಬಿಟ್ಟು ಕೆಟ್ಟುಹೋದೀತೆಂದು ನನಗೆ ಭಯವುಂಟು. 4 ಯಾಕಂದರೆ ನಾವು ಪ್ರಸಿದ್ಧಿಪಡಿಸದಿದ್ದ ಮತ್ತೊಬ್ಬ ಯೇಸುವನ್ನು ನಿಮ್ಮ ಬಳಿಗೆ ಬರುವವರು ಪ್ರಕಟಿಸುವಾಗಲೂ, ನೀವು ಹೊಂದದೆ ಇದ್ದ ಬೇರೆ ವಿಧವಾದ ಆತ್ಮಪ್ರೇರಣೆಯನ್ನು ಹೊಂದುವಾಗಲೂ, ಅವಲಂಬಿಸದೆಯಿದ್ದ ಬೇರೊಂದು ಸುವಾರ್ತೆಯನ್ನು ಕೇಳುವಾಗಲೂ ನೀವು ಸಹಿಸಿಕೊಳ್ಳುತ್ತಿರುವದು ಬಹು ಆಶ್ಚರ್ಯ. 5 ಅತಿಶ್ರೇಷ್ಠರಾದ ಅಪೊಸ್ತಲರು ಅನ್ನಿಸಿಕೊಳ್ಳುವ ಅವರಿಗಿಂತ ನಾನು ಒಂದರಲ್ಲಾದರೂ ಕಡಿಮೆಯಾದವನಲ್ಲವೆಂದು ಎಣಿಸುತ್ತೇನೆ. 6 ನಾನು ವಾಕ್ಚಾತುರ್ಯದಲ್ಲಿ ನಿಪುಣನಲ್ಲದಿದ್ದರೂ ಜ್ಞಾನದಲ್ಲಿ ನಿಪುಣನಾಗಿದ್ದೇನೆ; ಇದನ್ನು ಎಲ್ಲಾ ಕಾರ್ಯಗಳಲ್ಲಿ ಎಲ್ಲರ ಮುಂದೆ ನಿಮ್ಮ ಪ್ರಯೋಜನಕ್ಕಾಗಿ ತೋರ್ಪಡಿಸಿದ್ದೇವೆ.

ತಾನು ಕೊರಿಂಥದ ಸಭೆಯಿಂದ ಹಣಸಹಾಯ ತೆಗೆದುಕೊಳ್ಳದೆ ಹೋದದ್ದು ದೋಷವೆಣಿಸಕೂಡದೆಂದು ಪೌಲನು ಹೇಳುವದು.

7 ಏನು, ನೀವು ಅಭಿವೃದ್ಧಿಹೊಂದಬೇಕೆಂದು ನನ್ನನ್ನು ನಾನೇ ತಗ್ಗಿಸಿಕೊಂಡು ದೇವರ ಸುವಾರ್ತೆಯನ್ನು ನಿಮಗೆ ಉಚಿತಾರ್ಥವಾಗಿ ಸಾರಿದ್ದು ಪಾಪಕೃತ್ಯವೋ? 8 ನಿಮ್ಮ ಸೇವೆ ಮಾಡುವದಕ್ಕೋಸ್ಕರ ನಾನು ಇತರ ಸಭೆಗಳಿಂದ ಸಂಬಳತಕ್ಕೊಂಡು ಅವುಗಳನ್ನು ಸುಲುಕೊಂಡೆನು. 9 ನಾನು ನಿಮ್ಮಲ್ಲಿದ್ದಾಗ ಖರ್ಚಿಗೆ ಏನೂ ಇಲ್ಲದ ಸಮಯದಲ್ಲಿ ಯಾರ ಮೇಲೆಯೂ ಭಾರಹಾಕಲಿಲ್ಲ; ಮಕೆದೋನ್ಯದಿಂದ ಬಂದ ಸಹೋದರರು ನನಗೆ ಬೇಕಾದದ್ದೆಲ್ಲವನ್ನೂ ಕೊಟ್ಟರು. ನಾನು ನಿಮಗೆ ಯಾವದರಲ್ಲಿಯೂ ಭಾರವಾಗಿರಬಾರದೆಂದು ನೋಡಿಕೊಳ್ಳುತ್ತಿದ್ದೆನು, ಇನ್ನು ಮೇಲೆಯೂ ನೋಡಿಕೊಳ್ಳುವೆನು. 10 ಈ ನನ್ನ ಹೊಗಳಿಕೆಯನ್ನು ಅಖಾಯದ ಪ್ರಾಂತ್ಯಗಳಲ್ಲಿ ಒಬ್ಬರೂ ನಿಲ್ಲಿಸಲಾರರೆಂದು ಕ್ರಿಸ್ತನ ಮುಂದೆ ಸತ್ಯವಾಗಿ ಹೇಳುತ್ತೇನೆ. 11 ಯಾಕೆ ನಿಮ್ಮಿಂದ ಏನೂ ತಕ್ಕೊಳ್ಳುವದಿಲ್ಲ? ನಿಮ್ಮ ಮೇಲೆ ಪ್ರೀತಿ ಇಲ್ಲದ್ದರಿಂದಲೋ? ದೇವರೇ ಬಲ್ಲ. 12 ನನ್ನನ್ನು ನಿಂದಿಸುವದಕ್ಕೆ ಆಸ್ಪದವನ್ನು ಹುಡುಕುವವರಿಗೆ ಯಾವ ಆಸ್ಪದವೂ ಸಿಕ್ಕದಂತೆ ನಾನು ಮಾಡುವದನ್ನು ಇನ್ನು ಮುಂದೆಯೂ ಮಾಡುವೆನು. ಅವರು ಯಾವದರಲ್ಲಿ ಹಿಗ್ಗುತ್ತಾರೋ ಅದರಲ್ಲಿ ನಮ್ಮಂತೆಯೇ ನಡೆಯು

13 ವವರಾಗಿ ಕಂಡುಬರಲಿ. ಆದರೆ ಅಂಥವರು ಸುಳ್ಳು ಅಪೊಸ್ತಲರೂ ಮೋಸಗಾರರಾದ
ಕೆಲಸದವರೂ ಕ್ರಿಸ್ತನ ಅಪೊಸ್ತಲರಾಗಿ ಕಾಣಿಸುವದಕ್ಕೆ ವೇಷಹಾಕಿಕೊಳ್ಳುವವರೂ
14 ಆಗಿದ್ದಾರೆ. ಇದೇನೂ ಆಶ್ಚರ್ಯವಲ್ಲ; ಸೈತಾನನು ತಾನೇ ಪ್ರಕಾಶರೂಪವುಳ್ಳ ದೇವ
15 ದೂತನ ವೇಷವನ್ನು ಹಾಕಿಕೊಳ್ಳುವಾಗ್ಯೆ ಅವನ ಸೇವಕರು ಸಹ ನೀತಿಗೆ ಸೇವಕರಾಗಿ
ಕಾಣಿಸುವದಕ್ಕೆ ವೇಷಹಾಕಿಕೊಳ್ಳುವದು ದೊಡ್ಡದಲ್ಲ. ಅವರ ಅಂತ್ಯಾವಸ್ಥೆಯು ಅವರ
ಕೃತ್ಯಗಳಿಗೆ ತಕ್ಕ ಹಾಗೆಯೇ ಆಗುವದು.

ತಾನು ಕ್ರಿಸ್ತನ ಸೇವೆಯಲ್ಲಿ ಪಟ್ಟ ಶ್ರಮೆಯೂ ಕ್ರಿಸ್ತನಿಂದ ಹೊಂದಿದ ದರ್ಶನಗಳೂ ಬಹು ಹೆಚ್ಚೆಂದು
ಪೌಲನು ಹೇಳುವದು.

16 ನನ್ನನ್ನು ಬುದ್ಧಿಹೀನನೆಂತ ಯಾರೂ ನೆನಸಬಾರದೆಂದು ತಿರಿಗಿ ಹೇಳುತ್ತೇನೆ; ಹಾಗೆ
ನೆನಸಿದರೂ ನನ್ನನ್ನು ಬುದ್ಧಿಹೀನನಾಗಿಯಾದರೂ ಸೇರಿಸಿಕೊಳ್ಳಿರಿ; ಯಾಕಂದರೆ ನಾನು
17 ಸಹ ಅಲ್ಪಸ್ವಲ್ಪ ಹೊಗಳಿಕೊಳ್ಳಬೇಕೆಂದಿದ್ದೇನೆ. ನಾನು ಈಗ ಆಡುವ ಮಾತುಗಳನ್ನು
ಕರ್ತನನ್ನು ಅನುಸರಿಸುವವನಾಗಿ ಆಡದೆ ಭರವಸದಿಂದ ತನ್ನನ್ನು ಹೊಗಳಿಕೊಳ್ಳುವ
18 ಬುದ್ಧಿಹೀನನಂತೆ ಆಡುತ್ತೇನೆ. ಅನೇಕರು ಲೋಕಸಂಬಂಧವಾದ ಕಾರ್ಯಗಳಲ್ಲಿ
19 ಹೊಗಳಿಕೊಳ್ಳುವದರಿಂದ ನಾನೂ ಹೊಗಳಿಕೊಳ್ಳುತ್ತೇನೆ. ನೀವು ಬುದ್ಧಿವಂತರಾಗಿದ್ದು
20 ಬುದ್ಧಿಹೀನರನ್ನು ಸಂತೋಷದಿಂದ ಸಹಿಸಿಕೊಳ್ಳುತ್ತೀರಲ್ಲಾ. ಒಬ್ಬನು ನಿಮ್ಮನ್ನು ತನಗೆ
ವಶಮಾಡಿಕೊಂಡರೂ, ಒಬ್ಬನು ನಿಮ್ಮನ್ನು ನುಂಗಿಬಿಟ್ಟರೂ, ಒಬ್ಬನು ನಿಮ್ಮನ್ನು ಮರಳು
ಗೊಳ್ಳಿಸಿ ಹಿಡಿದರೂ, ಒಬ್ಬನು ತನ್ನನ್ನು ಹೆಚ್ಚಿಸಿಕೊಂಡರೂ, ಒಬ್ಬನು ನಿಮ್ಮ ಮುಖದ
ಮೇಲೆ ಹೊಡೆದರೂ ಸಹಿಸಿಕೊಳ್ಳುತ್ತೀರಲ್ಲಾ.

21 ನಾವು ಬಲವಿಲ್ಲದವರಾಗಿದ್ದೆವೆಂಬಂತೆ ಇದನ್ನು ನನ್ನ ಅವಮಾನಕ್ಕೆ ಹೇಳಿದ್ದಾಗ್ಯೂ,
ಯಾವ ಆಧಾರದಿಂದ ಯಾವನಾದರೂ ಧೈರ್ಯವಾಗಿ ನಡಕೊಳ್ಳುತ್ತಾನೋ ಅದರಿಂದಲೇ
22 ನಾನೂ ಧೈರ್ಯವುಳ್ಳವನಾಗಿದ್ದೇನೆ. ಇದನ್ನು ಬುದ್ಧಿಹೀನತೆಯಿಂದ ಹೇಳುತ್ತೇನೆ. ಅವರು
ಇಬ್ರಿಯರೋ ನಾನೂ ಇಬ್ರಿಯನು; ಅವರು ಇಸ್ರಯೇಲ್ಯರೋ ನಾನೂ ಇಸ್ರಯೇಲ್ಯನು;
23 ಅವರು ಅಬ್ರಹಾಮನ ವಂಶದವರೋ ನಾನೂ ಅದೇ ವಂಶದವನು; ಅವರು ಕ್ರಿಸ್ತನ
ಸೇವಕರೋ ಅವರಿಗಿಂತ ನಾನು ಹೆಚ್ಚಾಗಿ ಸೇವೆಮಾಡುವವನಾಗಿದ್ದೇನೆ. ಬುದ್ಧಿಸ್ವಾಧೀ
ನವಿಲ್ಲದವನಾಗಿ ಮಾತಾಡುತ್ತೇನೆ. ಆತನ ಸೇವೆಯಲ್ಲಿ ಅವರಿಗಿಂತ ಹೆಚ್ಚಾಗಿ ಪ್ರಯಾಸ
ಪಟ್ಟೆನು, ಹೆಚ್ಚಾಗಿ ಸೆರೆಮನೆಗಳೊಳಗೆ ಬಿದ್ದೆನು; ಮಿತಿಮೀರಿ ಪೆಟ್ಟುಗಳನ್ನು ತಿಂದೆನು,
24 ಅನೇಕ ಸಾರಿ ಮರಣದ ಬಾಯೊಳಗೆ ಸಿಕ್ಕಿಕೊಂಡೆನು. ಐದು ಸಾರಿ ಯೆಹೂದ್ಯರಿಂದ
25 ನನಗೆ ಒಂದು ಕಡಿಮೆ ನಾಲ್ವತ್ತು ಏಟುಗಳು ಬಿದ್ದವು; ಮೂರು ಸಾರಿ ಸರಕಾರದವರು
ಚಡಿಗಳಿಂದ ನನ್ನನ್ನು ಹೊಡಿಸಿದರು[1]; ಒಂದು ಸಾರಿ ಜನರು ನನ್ನನ್ನು ಕೊಲ್ಲುವದಕ್ಕೆ
ಕಲ್ಲೆಸೆದರು[2]; ಮೂರು ಸಾರಿ ನಾನಿದ್ದ ಹಡಗವು ಒಡೆದುಹೋಯಿತು; ಒಂದು ರಾತ್ರಿ
26 ಒಂದು ಹಗಲು ಸಮುದ್ರದ ನೀರಿನಲ್ಲಿ ಕಳೆದೆನು. ಆತನ ಸೇವೆಯಲ್ಲಿ ಎಷ್ಟೋ ಪ್ರಯಾಣ

[1] ಅಪೊಸ್ತಲರ ಕೃತ್ಯ ೧೬, ೨೨. [2] ಅಪೊಸ್ತಲರ ಕೃತ್ಯ ೧೪, ೧೯.

ಗಳನ್ನು ಮಾಡಿದೆನು; ನದಿಗಳ ಅಪಾಯಗಳೂ ಕಳ್ಳರ ಅಪಾಯಗಳೂ ಸ್ವಂತಜನರಿಂದ ಅಪಾಯಗಳೂ ಅನ್ಯಜನರಿಂದ ಅಪಾಯಗಳೂ ಪಟ್ಟಣದಲ್ಲಿ ಅಪಾಯಗಳೂ ಕಾಡಿನಲ್ಲಿ ಅಪಾಯಗಳೂ ಸಮುದ್ರದಲ್ಲಿ ಅಪಾಯಗಳೂ ಸುಳ್ಳುಸಹೋದರರೊಳಗೆ ಇರುವಾಗ ಅಪಾಯಗಳೂ ನನಗೆ ಸಂಭವಿಸಿದವು. 27 ಪ್ರಯಾಸ ಪರಿಶ್ರಮಗಳಿಂದ ಕೆಲಸ ನಡಿಸಿ ಅನೇಕ ಸಾರಿ ನಿದ್ದೆಗೆಟ್ಟು ಹಸಿವೆ ಬಾಯಾರಿಕೆಗಳನ್ನು ಪಟ್ಟು ಅನೇಕ ಸಾರಿ ಉಪವಾಸ ವಾಗಿಯೂ ಚಳಿಯಲ್ಲಿಯೂ ವಸ್ತ್ರವಿಲ್ಲದೆಯೂ ಇದ್ದು ಆತನನ್ನು ಸೇವಿಸಿದ್ದೇನೆ. 28 ಇನ್ನೂ ಬೇರೆ ಸಂಗತಿಗಳಲ್ಲದೆ ಎಲ್ಲಾ ಸಭೆಗಳ ವಿಷಯವಾದ ಚಿಂತೆಯು ದಿನದಿನ ನನ್ನನ್ನು ಪೀಡಿ ಸುತ್ತದೆ. 29 ಯಾವನಾದರೂ ಬಲವಿಲ್ಲದವನಾದರೆ, ನಾನು ಅವನೊಂದಿಗೆ ಬಲವಿಲ್ಲದವ ನಾಗದೆ ಇರುವೆನೋ? ಯಾವನಾದರೂ ಪಾಪದಲ್ಲಿ ಸಿಕ್ಕಿಕೊಂಡರೆ, ನಾನು ತಾಪಪಡು ವದಿಲ್ಲವೋ?

30 ನಾನು ಹೊಗಳಿಕೊಳ್ಳಬೇಕಾದರೆ, ನನ್ನ ಬಲಹೀನತೆಯನ್ನು ತೋರ್ಪಡಿಸುವ ವಿಷಯ ಗಳಲ್ಲಿ ಹೊಗಳಿಕೊಳ್ಳುವೆನು. 31 ನಾನು ಸುಳ್ಳಾಡುವದಿಲ್ಲವೆಂದು ಕರ್ತನಾದ ಯೇಸುವಿನ ತಂದೆಯೂ ನಿರಂತರ ಸ್ತುತಿಹೊಂದತಕ್ಕವನೂ ಆಗಿರುವ ದೇವರೇ ಬಲ್ಲನು. 32 ದಮಸ್ಕದಲ್ಲಿ ಅರಸನಾದ ಅರೇತನ ಅಧೀನದಲ್ಲಿದ್ದ ಅಧಿಪತಿಯು ನನ್ನನ್ನು ಹಿಡಿಯಬೇಕೆಂದು ದಮಸ್ಕ ದವರ ಪಟ್ಟಣವನ್ನು ಕಾಯುತ್ತಿರಲು, 33 ನಾನು ಒಂದು ಕಲ್ಲಿಯಲ್ಲಿ ಕೂತು ಗೋಡೆಯಲ್ಲಿದ್ದ ಕಿಟಿಕಿಯೊಳಗಿಂದ ಇಳಿಸಲ್ಪಟ್ಟು ಅವನ ಕೈಗೆ ತಪ್ಪಿಸಿಕೊಂಡೆನು.

**12** ಹೊಗಳಿಕೊಳ್ಳುವದು ವಿಹಿತವಲ್ಲದಿದ್ದರೂ ಅದು ನನಗೆ ಅವಶ್ಯವಾಗಿದೆ. ಆದದರಿಂದ ಕರ್ತನು ನನಗೆ ದಯಪಾಲಿಸಿದ ದರ್ಶನಗಳನ್ನು ಕುರಿತೂ ತಿಳಿಯಪಡಿಸಿದ ರಹಸ್ಯಗಳನ್ನು ಕುರಿತೂ ಹೇಳುತ್ತೇನೆ. 2 ಕ್ರಿಸ್ತನಲ್ಲಿದ್ದ ಒಬ್ಬ ಮನುಷ್ಯನನ್ನು ಬಲ್ಲೆನು, ಅವನು ಹದಿ ನಾಲ್ಕು ವರುಷಗಳ ಹಿಂದೆ ಮೂರನೇ ಆಕಾಶದ ಪರಿಯಂತರಕ್ಕೂ ಒಯ್ಯಲ್ಪಟ್ಟನು. ಅವನು ದೇಹಸಹಿತನಾಗಿ ಒಯ್ಯಲ್ಪಟ್ಟನೋ ದೇಹರಹಿತನಾಗಿ ಒಯ್ಯಲ್ಪಟ್ಟನೋ ನಾನ ರಿಯೆ, ದೇವರೇ ಬಲ್ಲನು. 3-4 ಅಂಥಾ ಮನುಷ್ಯನು ಪರದೈಸಕ್ಕೆ ಒಯ್ಯಲ್ಪಟ್ಟು, ಮನು ಷ್ಯರು ನುಡಿಯಲಶಕ್ಯವಾದ ಹೇಳಬಾರದ ಮಾತುಗಳನ್ನು ಕೇಳಿದನೆಂದು ಬಲ್ಲೆನು; ಆ ಸಮಯದಲ್ಲಿ ಅವನು ದೇಹಸಹಿತನಾಗಿದ್ದನೋ ದೇಹರಹಿತನಾಗಿದ್ದನೋ ನಾನರಿಯೆ, ದೇವರೇ ಬಲ್ಲನು. 5 ಅಂಥವನನ್ನು ಕುರಿತು ಹೆಚ್ಚಳಪಡುವೆನು, ನನ್ನನ್ನು ಕುರಿತಾದರೋ ನನ್ನ ನಿರ್ಬಲಾವಸ್ಥೆಗಳಲ್ಲಿಯೇ ಹೊರತು ಬೇರೆ ಹೆಚ್ಚಳಪಡುವದಿಲ್ಲ. 6 ಹೊಗಳಿಕೊಳ್ಳು ವದಕ್ಕೆ ನನಗೆ ಒಂದು ವೇಳೆ ಮನಸ್ಸಿದ್ದಾಗ್ಯೂ ಹಾಗೆ ಹೊಗಳಿಕೊಳ್ಳುವದರಲ್ಲಿ ನಾನು ಬುದ್ಧಿಹೀನನಾಗುವದಿಲ್ಲ, ಯಾಕಂದರೆ ಸತ್ಯವನ್ನೇ ಹೇಳುತ್ತಿರುವೆನು. ಆದಾಗ್ಯೂ ಯಾವನೂ ನನ್ನಲ್ಲಿ ಕಾಣುವದಕ್ಕಿಂತಲೂ ನನ್ನಿಂದ ಕೇಳುವದಕ್ಕಿಂತಲೂ ಹೆಚ್ಚಾಗಿ ನನ್ನನ್ನು ಕುರಿತು ಎಣಿಸಬಾರದು. 7 ಈ ಕಾರಣದಿಂದಲೂ ನನಗೆ ತಿಳಿಸಲ್ಪಟ್ಟ ರಹಸ್ಯ ಗಳು ಬಹು ವಿಶೇಷವಾಗಿರುವದರಿಂದಲೂ ನಾನು ಹೊಗಳಿಕೊಳ್ಳದೆ ಸುಮ್ಮನಿರುತ್ತೇನೆ. ನಾನು ನನ್ನನ್ನು ಅತಿಶಯವಾಗಿ ಹೆಚ್ಚಿಸಿಕೊಳ್ಳಬಾರದೆಂದು ಒಂದು ಶೂಲ[1]) ನನ್ನ ಶರೀರ ದಲ್ಲಿ ನಾಟಿದೆಯೋ ಎಂಬಂತೆ ನನ್ನನ್ನು ಗುದ್ದುವದಕ್ಕೆ ಸೈತಾನನ ದೂತರಲ್ಲಿ ಒಬ್ಬನು

[1]) ಅಥವಾ, ಮುಳ್ಳು.

ನನ್ನ ಬಳಿಗೆ ಕಳುಹಿಸಲ್ಪಟ್ಟನು; ನಾನು ಅತಿಶಯವಾಗಿ ಹೆಚ್ಚಿಸಿಕೊಳ್ಳಬಾರದೆಂತಲೇ
8 ಇದಾಯಿತು. ಈ ಪೀಡೆಗೆ ನನ್ನನ್ನು ತಪ್ಪಿಸಬೇಕೆಂದು ಮೂರು ಸಾರಿ ಕರ್ತನನ್ನು ಬೇಡಿ
9 ಕೊಂಡೆನು. ಅದಕ್ಕಾತನು—ನನ್ನ ಕೃಪೆಯೇ ನಿನಗೆ ಸಾಕು; ಬಲಹೀನತೆಯಲ್ಲಿಯೇ
ಬಲವು ಪೂರ್ಣ ಸಾಧಕವಾಗುತ್ತದೆ ಎಂದು ನನಗೆ ಹೇಳಿದ್ದಾನೆ. ಹೀಗಿರಲಾಗಿ ಕ್ರಿಸ್ತನ
ಬಲವು ನನ್ನಲ್ಲಿ ನೆಲಿಸಿಕೊಂಡಿರಬೇಕೆಂದು ನನಗುಂಟಾಗುವ ನಿರ್ಬಲಾವಸ್ಥೆಗಳ ವಿಷಯ
10 ದಲ್ಲಿಯೇ ಬಹು ಸಂತೋಷವಾಗಿ ಹೆಚ್ಚಳಪಡುವೆನು. ಆದದರಿಂದ ಕ್ರಿಸ್ತನ ನಿಮಿತ್ತ
ನನಗೆ ನಿರ್ಬಲಾವಸ್ಥೆಯೂ ತಿರಸ್ಕಾರವೂ ಕೊರತೆಯೂ ಹಿಂಸೆಯೂ ಇಕ್ಕಟ್ಟೂ ಸಂಭವಿಸಿ
ದಾಗ ಸಂತುಷ್ಟನಾಗಿದ್ದೇನೆ. ನಾನು ಯಾವಾಗ ನಿರ್ಬಲನಾಗಿದ್ದೇನೋ ಆವಾಗಲೇ
ಬಲವುಳ್ಳವನಾಗಿದ್ದೇನೆ.

ಪೌಲನು ತನ್ನ ಪ್ರತಿವಾದವನ್ನು ಮುಗಿಸಿ ತಾನು ಕೊರಿಂಥಕ್ಕೆ ಬಂದು ಎಲ್ಲವನ್ನು ಕ್ರಮಪಡಿಸುವೆನೆಂದು ಹೇಳುವದು.

11 ನಾನು ಹೀಗೆ ಬರೆದು ಬುದ್ಧಿಹೀನನಾದೆನು; ಇದಕ್ಕೆ ನೀವೇ ನನ್ನನ್ನು ಬಲವಂತ ಮಾಡಿ
ದಿರಿ. ನಿಮ್ಮಿಂದಲೇ ನನಗೆ ಹೊಗಳಿಕೆಯು ಉಂಟಾಗಬೇಕಾಗಿತ್ತು; ಯಾಕಂದರೆ ನಾನು
ಕೇವಲ ಅಲ್ಪನಾದಾಗ್ಯೂ ಅತಿಶ್ರೇಷ್ಠರಾದ ಅಪೊಸ್ತಲರು ಅನ್ನಿಸಿಕೊಳ್ಳುವ ಆ ಜನರಿ
12 ಗಿಂತ ಒಂದರಲ್ಲಿಯಾದರೂ ಕಡಿಮೆಯಾಗಲಿಲ್ಲ. ನಾನು ಹಿಂಸೆಯನ್ನು ಸ್ಥಿರಚಿತ್ತದಿಂದ
ತಾಳಿಕೊಳ್ಳುವದರಲ್ಲಿಯೂ ಸೂಚಕಕಾರ್ಯಗಳನ್ನೂ ಅದ್ಭುತಗಳನ್ನೂ ಮಹತ್ಕಾರ್ಯ
ಗಳನ್ನೂ ನಡಿಸಿದ್ದರಲ್ಲಿಯೂ[1] ಅಪೊಸ್ತಲನಿಗೆ ಇರತಕ್ಕ ಲಕ್ಷಣಗಳು ನಿಮ್ಮ ಮಧ್ಯದಲ್ಲಿ
ತೋರಿದವು.

13 ನನ್ನನ್ನು ಸಂರಕ್ಷಿಸುವ ಭಾರವನ್ನು ನಾನು ನಿಮ್ಮ ಮೇಲೆ ಹಾಕಲಿಲ್ಲವೆಂಬುವ ಒಂದೇ
ವಿಷಯದಲ್ಲಿ ಹೊರತು ಇನ್ನಾವ ವಿಷಯದಲ್ಲಿಯೂ ನಿಮ್ಮನ್ನು ಮಿಕ್ಕಾದ ಸಭೆಗಳವರಿ
ಗಿಂತ ಕಡಿಮೆ ಮಾಡಲಿಲ್ಲವಲ್ಲಾ. ನಾನು ಮಾಡಿದ ಈ ಅನ್ಯಾಯವನ್ನು ಕ್ಷಮಿಸಿರಿ.
14 ಇಗೋ, ನಾನು ನಿಮ್ಮ ಬಳಿಗೆ ಬರುವದಕ್ಕೆ ಸಿದ್ಧವಾಗಿರುವದು ಇದು ಮೂರನೇ ಸಾರಿ;
ಮತ್ತು ನಿಮಗೆ ಭಾರವಾಗಿರುವದಿಲ್ಲ; ನಾನು ನಿಮ್ಮ ಸೊತ್ತನ್ನು ಆಶಿಸದೆ ನಿಮ್ಮನ್ನೇ
ಆಶಿಸುತ್ತೇನೆ. ಮಕ್ಕಳು ತಂದೆತಾಯಿಗಳಿಗೋಸ್ಕರ ದ್ರವ್ಯವನ್ನು ಕೂಡಿಸಿಡುವದು ಧರ್ಮ
15 ವಲ್ಲ, ತಂದೆತಾಯಿಗಳು ಮಕ್ಕಳಿಗೋಸ್ಕರ ಕೂಡಿಸಿಡುವದೇ ಧರ್ಮ. ನಾನಂತೂ ನನ
ಗಿರುವದನ್ನು ನಿಮ್ಮ ಆತ್ಮಸಂರಕ್ಷಣೆಗೋಸ್ಕರ ಅತಿಸಂತೋಷದಿಂದ ವೆಚ್ಚಮಾಡುತ್ತೇನೆ,
ನನ್ನನ್ನೇ ವೆಚ್ಚಮಾಡಿಕೊಳ್ಳುತ್ತೇನೆ. ನಾನು ನಿಮ್ಮನ್ನು ಹೆಚ್ಚಾಗಿ ಪ್ರೀತಿಸಿದರೆ, ನೀವು
ನನ್ನನ್ನು ಕಡಿಮೆಯಾಗಿ ಪ್ರೀತಿಸುತ್ತೀರೋ?

16 ಒಂದು ವೇಳೆ ನೀವು—ಅದಿರಲಿ, ತಾನು ನಮಗೆ ಭಾರವಾಗದೆ ಹೋದಾಗ್ಯೂ ಯುಕ್ತಿ
17 ಯುಳ್ಳವನಾಗಿದ್ದು ನಮ್ಮನ್ನು ಉಪಾಯದಿಂದ ಸುಲುಕೊಂಡನೆಂದು ಹೇಳೀರಿ. ನಾನು
ನಿಮ್ಮ ಬಳಿಗೆ ಕಳುಹಿಸಿದವರಲ್ಲಿ ಯಾವನ ಮೂಲಕವಾಗಿಯಾಗಲಿ ನಿಮ್ಮನ್ನು ವಂಚಿಸಿ
18 ಏನಾದರೂ ತೆಗೆದುಕೊಂಡೆನೋ? ನಿಮ್ಮ ಬಳಿಗೆ ಹೋಗುವದಕ್ಕೆ ನಾನು ತೀತನನ್ನು

[1] ಅಪೊಸ್ತಲರ ಕೃತ್ಯ ೧೯, ೧೧. ೧೨.

ಬೇಡಿಕೊಂಡು ಅವನ ಜೊತೆಯಲ್ಲಿ ಆ ಸಹೋದರನನ್ನು ಕಳುಹಿಸಿಕೊಟ್ಟೆನಷ್ಟೆ. ತೀತನು ನಿಮ್ಮನ್ನು ವಂಚಿಸಿ ಏನಾದರೂ ತಕ್ಕೊಂಡನೋ? ನಾವಿಬ್ಬರೂ ಒಬ್ಬ ಆತ್ಮನಿಂದಲೇ ಪ್ರೇರಿತರಾಗಿ ಒಂದೇ ಹೆಜ್ಜೆ ಜಾಡೆಯಲ್ಲಿ ನಡೆಯಲಿಲ್ಲವೋ?

19 ನಾವು ಇಷ್ಟು ಹೊತ್ತು ನಿಮ್ಮ ಮುಂದೆ ಪ್ರತಿವಾದ ಮಾಡುವವರೆಂದು ನೆನಸುತ್ತೀರೋ? ನಿಮ್ಮ ಮುಂದೆಯಲ್ಲ, ದೇವರ ಸನ್ನಿಧಾನದಲ್ಲಿಯೇ ನಾವು ಕ್ರಿಸ್ತನಲ್ಲಿದ್ದು ಮಾತಾಡುವವ ರಾಗಿದ್ದೇವೆ. ಪ್ರಿಯರೇ, ನಾವು ಮಾತಾಡುವದೆಲ್ಲಾ ನಿಮ್ಮ ಭಕ್ತಿವೃದ್ಧಿಗೋಸ್ಕರವೇ ಆಗಿದೆ. 20 ನಾನು ಬಂದಾಗ ಒಂದು ವೇಳೆ ನೀವು ನನ್ನ ಇಷ್ಟದ ಪ್ರಕಾರ ಇರುವದಿಲ್ಲ ವೇನೋ, ನಾನು ನಿಮ್ಮ ಇಷ್ಟದ ಪ್ರಕಾರ ತೋರುವದಿಲ್ಲವೇನೋ, ಒಂದು ವೇಳೆ ನಿಮ್ಮಲ್ಲಿ ಜಗಳ ಹೊಟ್ಟೆಕಿಚ್ಚು ದ್ವೇಷ ಸ್ವಾರ್ಥಬುದ್ಧಿ ಚಾಡಿಹೇಳುವದು ಕಿವಿಯೂದುವದು ಉಬ್ಬಿ ಕೊಳ್ಳುವದು ಕಲಹ ಎಬ್ಬಿಸುವದು ಇವುಗಳು ಕಾಣಬರುವದೋ ಏನೋ ನನಗೆ ಸಂಶ ಯ ಉಂಟು. 21 ನಾನು ತಿರಿಗಿ ಬಂದಾಗ ನನ್ನ ದೇವರು ನಿಮ್ಮ ವಿಷಯದಲ್ಲಿ ನನ್ನನ್ನು ನಾಚಿಕೆಗೆ ಗುರಿಮಾಡ್ಯಾನೆಂತಲೂ, ಪೂರ್ವದಲ್ಲಿ ಬಂಡುತನ ಹಾದರತನ ಪೋಕರಿತನ ಗಳನ್ನು ನಡಿಸಿ ಪಶ್ಚಾತ್ತಾಪಪಡದಿರುವ ಅನೇಕರ ವಿಷಯವಾಗಿ ನಾನು ದುಃಖ ಪಡ ಬೇಕಾದೀತೆಂತಲೂ ನನಗೆ ಭಯ ಉಂಟು.

**13** ನಾನು ನಿಮ್ಮ ಬಳಿಗೆ ಬರುವದು ಇದು ಮೂರನೇ ಸಾರಿ. ಇಬ್ಬರು ಮೂವರು ಸಾಕ್ಷಿಗಳ ಬಾಯಿಂದ ಪ್ರತಿಯೊಂದು ಸಂಗತಿ ಸ್ಥಾಪಿತವಾಗಬೇಕು[1]. 2 ನಾನು ಎರಡನೇ ಸಾರಿ ನಿಮ್ಮಲ್ಲಿದ್ದಾಗ—ತಿರಿಗಿ ಬಂದರೆ ನಿಮ್ಮನ್ನು ಶಿಕ್ಷಿಸದೆ ಬಿಡುವದಿಲ್ಲವೆಂದು ಹ್ಯಾಗೆ ಹೇಳಿದೆನೋ ಹಾಗೆಯೇ ಈಗಲೂ ನಿಮಗೆ ದೂರದಲ್ಲಿದ್ದು ಪೂರ್ವಪಾಪಕೃತ್ಯಗಳನ್ನು ಇನ್ನೂ ನಡಿಸುತ್ತಿರುವವರಿಗೂ ಮಿಕ್ಕಾದವರೆಲ್ಲರಿಗೂ ಹೇಳುತ್ತೇನೆ. 3 ಕ್ರಿಸ್ತನು ನನ್ನಲ್ಲಿ ಮಾತಾಡುತ್ತಾನೆಂಬುವದಕ್ಕೆ ನಿಮಗೆ ಬೇಕಾದ ಪ್ರಮಾಣವು ಆವಾಗ ತೋರಿಬರುವದು. ಆತನು ನಿಮ್ಮನ್ನು ಕುರಿತು ನಿರ್ಬಲನಾಗಿರದೆ ಬಲವಾದ ಕೆಲಸಗಳನ್ನು ನಿಮ್ಮಲ್ಲಿ ನಡಿಸು ವವನಾಗಿದ್ದಾನೆ. 4 ಆತನು ಬಲಹೀನಾವಸ್ಥೆಯಲ್ಲಿದ್ದರಿಂದ ಶಿಲುಬೆಗೆ ಹಾಕಲ್ಪಟ್ಟನು ನಿಜ; ಆದಾಗ್ಯೂ ದೇವರ ಬಲದಿಂದ ಬದುಕುತ್ತಾನೆ. ನಾವು ಸಹ ಆತನ ಬಲಹೀನಾವಸ್ಥೆ ಯಲ್ಲಿ ಪಾಲುಗಾರರಾಗಿದ್ದೇವೆ; ಆದಾಗ್ಯೂ ಆತನೊಂದಿಗೆ ದೇವರ ಬಲದಿಂದ ಬದುಕು ವವರಾಗಿದ್ದೇವೆ; ಇದು ನಿಮಗೆ ತೋರಿಬರುವದು.

5 ಕ್ರಿಸ್ತನಂಬಿಕೆಯಲ್ಲಿ ಇದ್ದೀರೋ ಇಲ್ಲವೋ ಎಂದು ನಿಮ್ಮನ್ನು ನೀವೇ ಪರೀಕ್ಷಿಸಿ ಕೊಳ್ಳಿರಿ, ನಿಮ್ಮನ್ನು ಪರಿಶೋಧಿಸಿಕೊಳ್ಳಿರಿ. ಏನು, ಯೇಸು ಕ್ರಿಸ್ತನು ನಿಮ್ಮಲ್ಲಿದ್ದಾ ನೆಂಬುವದು ನಿಮ್ಮನ್ನು ಕುರಿತು ನಿಮಗೆ ಚನ್ನಾಗಿ ತಿಳಿಯುವದಿಲ್ಲವೋ? ಆತನು ನಿಮ್ಮಲ್ಲಿ ಲ್ಲದಿದ್ದರೆ, ನೀವು ಅಯೋಗ್ಯರೇ. 6 ನಾವಂತೂ ಅಯೋಗ್ಯರಲ್ಲವೆಂದು ನಿಮಗೆ ಗೊತ್ತಾ ಗುವದೆಂಬದಾಗಿ ನಿರೀಕ್ಷಿಸುತ್ತೇನೆ. 7 ನೀವು ಕೆಟ್ಟದ್ದೇನೂ ಮಾಡಬಾರದೆಂದು ನಾವು ದೇವರನ್ನು ಪ್ರಾರ್ಥಿಸುತ್ತೇವೆ; ಇದರಲ್ಲಿ ನಾವೇ ಯೋಗ್ಯರಾಗಿ ತೋರಿಬರಬೇಕೆಂಬು ವದು ನಮ್ಮ ಉದ್ದೇಶವಲ್ಲ; ನಾವು ಅಯೋಗ್ಯರೆನಿಸಿಕೊಂಡಾಗ್ಯೂ ನೀವು ಒಳ್ಳೇದನ್ನು

---

[1] ದ್ವಿತೀಯ ನ್ಯಾಯ ೧೯, ೧೫.

8 ಮಾಡುವವರಾಗಬೇಕೆಂಬುವದೇ ನಮ್ಮ ಉದ್ದೇಶ. ಸತ್ಯಕ್ಕೆ ವಿರುದ್ಧವಾಗಿ ನಾವೇನೂ
9 ಮಾಡಲಾರೆವು; ಸತ್ಯಾಭಿವೃದ್ಧಿಗೋಸ್ಕರವೇ ಸಮಸ್ತವನ್ನು ಮಾಡುತ್ತೇವೆ. ನಾವು
ಬಲಹೀನರಾಗಿದ್ದಾಗ್ಯೂ ನೀವು ಬಲಿಷ್ಠರಾಗಿದ್ದ ಪಕ್ಷಕ್ಕೆ ಸಂತೋಷವಾಗಿದ್ದೇವೆ. ಇದಲ್ಲದೆ
10 ನೀವು ಪೂರ್ಣ ಕ್ರಮಕ್ಕೆ ಬರಬೇಕೆಂದು ಪ್ರಾರ್ಥಿಸುತ್ತೇವೆ. ಇದಕ್ಕಾಗಿಯೇ ನಾನು
ನಿಮ್ಮಲ್ಲಿ ಇಲ್ಲದಿರುವಾಗ ಈ ಮಾತುಗಳನ್ನು ಬರೆದಿದ್ದೇನೆ. ನಿಮ್ಮನ್ನು ಕೆಡವಿಹಾಕು
ವದಕ್ಕಲ್ಲ ಕಟ್ಟುವದಕ್ಕಾಗಿ ಕರ್ತನು ನನಗೆ ಕೊಟ್ಟಿರುವ ಅಧಿಕಾರದ ಪ್ರಯೋಗದಲ್ಲಿ
ನಿಮ್ಮ ಬಳಿಗೆ ಬಂದಾಗ ಕಾಠಿಣ್ಯವನ್ನು ತೋರಿಸುವದಕ್ಕೆ ಅವಕಾಶವಿರಬಾರದೆಂದು ಅಪೇ
ಕ್ಷಿಸುತ್ತೇನೆ.

### ಕಡೇ ಮಾತುಗಳು.

11 ಕಡೇ ಮಾತೇನಂದರೆ, ಸಹೋದರರೇ, ಸಂತೋಷ ಪಡಿರಿ[1], ಕ್ರಮಪಡಿಸಿಕೊಳ್ಳಿರಿ;
ಧೈರ್ಯವುಳ್ಳವರಾಗಿರಿ, ಒಂದೇ ಮನಸ್ಸುಳ್ಳವರಾಗಿರಿ, ಸಮಾಧಾನದಿಂದಿರಿ; ಆಗ ಪ್ರೀತಿ
12 ಯನ್ನೂ ಶಾಂತಿಯನ್ನೂ ಕೊಡುವ ದೇವರು ನಿಮ್ಮ ಸಂಗಡ ಇರುವನು. ಪವಿತ್ರವಾದ
ಮುದ್ದಿಟ್ಟು ಒಬ್ಬರನ್ನೊಬ್ಬರು ವಂದಿಸಿರಿ.
13 ದೇವಜನರೆಲ್ಲರೂ ನಿಮಗೆ ವಂದನೆ ಹೇಳುತ್ತಾರೆ.
14 ನಮ್ಮ ಕರ್ತನಾದ ಯೇಸು ಕ್ರಿಸ್ತನ ಕೃಪೆಯೂ ದೇವರ ಪ್ರೀತಿಯೂ ಪವಿತ್ರಾತ್ಮನ
ಅನ್ಯೋನ್ಯತೆಯೂ ನಿಮ್ಮೆಲ್ಲರ ಸಂಗಡವಿರಲಿ.

---

[1] ಅಥವಾ, ನಿಮಗೆ ಕ್ಷೇಮವಾಗಲಿ.

# THE EPISTLE OF SAINT PAUL TO THE GALATIANS

# ಪೌಲನು ಗಲಾತ್ಯದವರಿಗೆ ಬರೆದ ಪತ್ರಿಕೆ

### ವಂದನೆಯೂ ದೇವರ ಸ್ತೋತ್ರವೂ.

ಮನುಷ್ಯರ ಕಡೆಯಿಂದಾಗಲಿ ಮನುಷ್ಯನ ಮುಖಾಂತರದಿಂದಾಗಲಿ ಅಪೊಸ್ತಲನಾಗಿ 1
ರದೆ, ಯೇಸು ಕ್ರಿಸ್ತನ ಮುಖಾಂತರವೂ ಆತನನ್ನು ಸತ್ತವರೊಳಗಿಂದ ಎಬ್ಬಿಸಿದ ತಂದೆ
ಯಾದ ದೇವರಿಂದಲೂ ಅಪೊಸ್ತಲೋದ್ಯೋಗವನ್ನು ಹೊಂದಿದ ಪೌಲನೆಂಬ ನಾನೂ
ನನ್ನ ಜೊತೆಯಲ್ಲಿರುವ ಎಲ್ಲಾ ಸಹೋದರರೂ ಗಲಾತ್ಯದಲ್ಲಿರುವ ಸಭೆಗಳಿಗೆ[1] ಬರೆಯುವ 2
ದೇನಂದರೆ—ತಂದೆಯಾದ ದೇವರಿಂದಲೂ ನಮ್ಮ ಕರ್ತನಾದ ಯೇಸು ಕ್ರಿಸ್ತನಿಂದಲೂ 3
ನಿಮಗೆ ಕೃಪೆಯೂ ಶಾಂತಿಯೂ ಆಗಲಿ. ಈತನು ನಮ್ಮನ್ನು ಕೆಟ್ಟದ್ದಾಗಿರುವ ಈಗಿನ 4
ಪ್ರಪಂಚದೊಳಗಿಂದ ಬಿಡಿಸಬೇಕೆಂದು ನಮ್ಮ ತಂದೆಯಾದ ದೇವರ ಚಿತ್ತಕ್ಕೆ ಅನುಸಾರ
ವಾಗಿ ನಮ್ಮ ಪಾಪಗಳ ದೆಸೆಯಿಂದ ತನ್ನನ್ನು ಮರಣಕ್ಕೆ ಒಪ್ಪಿಸಿದನು. ದೇವರಿಗೆ ಸದಾ 5
ಕಾಲವೂ ಸ್ತೋತ್ರ. ಆಮೆನ್.

### ಗಲಾತ್ಯ ಸಭೆಯವರು ಕ್ರಿಸ್ತನ ಸುವಾರ್ತೆಯ ನಿಜಬೋಧನೆಯನ್ನು ಬಿಟ್ಟು ಭ್ರಷ್ಟರಾಗುವ ವಿಷಯವು.

ಕ್ರಿಸ್ತನ ಕೃಪೆಯಿಂದ ನಿಮ್ಮನ್ನು ಕರೆದಾತನನ್ನು ನೀವು ಇಷ್ಟು ಬೇಗನೆ ಬಿಟ್ಟು ಬೇರೆ 6
ಸುವಾರ್ತೆಯನ್ನು ಹಿಡಿದಿರುವದಕ್ಕೆ ಆಶ್ಚರ್ಯಪಡುತ್ತೇನೆ. ಅದು ಸುವಾರ್ತೆಯೇ ಅಲ್ಲ, 7
ಆದರೆ ಕೆಲವರು ನಿಮ್ಮಲ್ಲಿ ಭೇದವನ್ನು ಹುಟ್ಟಿಸುತ್ತಾ ಕ್ರಿಸ್ತನ ಸುವಾರ್ತೆಯನ್ನು ಮಾರ್ಪ
ಡಿಸುವದಕ್ಕೆ ಅಪೇಕ್ಷಿಸುತ್ತಾ ಇದ್ದಾರೆ. ಆದಾಗ್ಯೂ ನಾವು ನಿಮಗೆ ಸಾರಿದ ಸುವಾ 8
ರ್ತೆಗೆ ವಿರುದ್ಧವಾದದ್ದನ್ನು ನಾವೇ ಆಗಲಿ ಪರಲೋಕದಿಂದ ಬಂದ ದೇವದೂತನೇ ಆಗಲಿ
ನಿಮಗೆ ಸಾರಿದರೆ ಶಾಪಗ್ರಸ್ತನಾಗಲಿ. ನೀವು ಸ್ವೀಕರಿಸಿದ ಸುವಾರ್ತೆಗೆ ವಿರುದ್ಧವಾದ 9
ದ್ದನ್ನು ಯಾವನಾದರೂ ನಿಮಗೆ ಸಾರಿದರೆ ಅವನು ಶಾಪಗ್ರಸ್ತನಾಗಲಿ ಎಂದು ನಾವು
ಮೊದಲು ಹೇಳಿದ್ದಂತೆಯೇ ಈಗಲೂ ನಾನು ತಿರಿಗಿ ಹೇಳುತ್ತೇನೆ. ನಾನೀಗ ಯಾರನ್ನು 10

---

[1] ಅಪೊಸ್ತಲರ ಕೃತ್ಯ ೧೪, ೨೧.

ಒಲಿಸಿಕೊಳ್ಳುತ್ತಾ ಇದ್ದೇನೆ? ಮನುಷ್ಯರನ್ನೋ? ದೇವರನ್ನೋ? ನಾನು ಮನುಷ್ಯರನ್ನು ಮೆಚ್ಚಿಸುವದಕ್ಕೆ ಪ್ರಯತ್ನಿಸುತ್ತಾ ಇದ್ದೇನೋ? ಇನ್ನೂ ಮನುಷ್ಯರನ್ನು ಮೆಚ್ಚಿಸುವವನಾಗಿದ್ದರೆ, ನಾನು ಕ್ರಿಸ್ತನ ದಾಸನಲ್ಲ.

ಪೌಲನು ಸಾರಿದ ಸುವಾರ್ತೆಯು ದೇವರಿಂದ ಬಂದದ್ದೇ ಹೊರತು ಮನುಷ್ಯರಿಂದ ಬಂದದ್ದಲ್ಲ.

11 ಸಹೋದರರೇ, ನಾನು ಸಾರಿದ ಸುವಾರ್ತೆಯಂತೂ ಮನುಷ್ಯಕಲ್ಪನೆಯಲ್ಲವೆಂದು
12 ನಿಮಗೆ ತಿಳಿಯಪಡಿಸುತ್ತೇನೆ. ನಾನು ಅದನ್ನು ಮನುಷ್ಯನಿಂದ ಹೊಂದಲಿಲ್ಲ, ನನಗೆ ಯಾರೂ ಉಪದೇಶಿಸಲಿಲ್ಲ, ಯೇಸು ಕ್ರಿಸ್ತನೇ ಅದನ್ನು ನನಗೆ ಪ್ರಕಟಿಸಿದನು.
13 ಹಿಂದೆ ನಾನು ಯೆಹೂದ್ಯಮತದಲ್ಲಿದ್ದಾಗ ನನ್ನ ನಡತೆ ಎಂಥಾದ್ದೆಂದು ನೀವು ಕೇಳಿದ್ದೀರಷ್ಟೆ. ನಾನು ದೇವರ ಸಭೆಯನ್ನು ಅತ್ಯಂತವಾಗಿ ಹಿಂಸೆಪಡಿಸಿ ಹಾಳುಮಾಡುತ್ತಿ
14 ದ್ದೆನು. ಇದಲ್ಲದೆ ನಾನು ನನ್ನ ಪಿತೃಗಳಿಂದ ಬಂದ ಸಂಪ್ರದಾಯಗಳಲ್ಲಿ ಬಹು ಅಭಿಮಾನವುಳ್ಳವನಾಗಿ ನನ್ನ ಜನರೊಳಗೆ ಸಮಪ್ರಾಯದವರಾದ ಅನೇಕರಿಗಿಂತ ಯೆಹೂದ್ಯಮತಾಚಾರದಲ್ಲಿ ಆಸಕ್ತನಾಗಿದ್ದೆನು.
15 ಆದರೆ ನನ್ನ ಜನನ ಮೊದಲುಗೊಂಡು ನನ್ನನ್ನು ಪ್ರತ್ಯೇಕಿಸಿ ತನ್ನ ಕೃಪೆಯಿಂದ ಕರೆದ
16 ದೇವರು, ತನ್ನ ಮಗನ ಸುವಾರ್ತೆಯನ್ನು ನಾನು ಅನ್ಯಜನರಲ್ಲಿ ಸಾರುವವನಾಗಬೇಕೆಂದು ಆತನನ್ನು ನನ್ನೊಳಗೆ ಪ್ರಕಟಿಸುವದಕ್ಕೆ ಇಚ್ಛೈಸಿದಾಗಲೇ ನಾನು ಮನುಷ್ಯರ ಆಲೋಚನೆ
17 ಯನ್ನು ವಿಚಾರಿಸದೆ, ಯೆರೂಸಲೇಮಿಗೆ ನನಗಿಂತ ಮುಂಚೆ ಅಪೊಸ್ತಲರಾಗಿದ್ದವರ ಬಳಿಗೂ ಹೋಗದೆ, ಅರಬಸ್ಥಾನಕ್ಕೆ ಹೋಗಿ, ತಿರಿಗಿ ದಮಸ್ಕಕ್ಕೆ ಬಂದೆನು.
18 ಮೂರು ವರುಷಗಳಾದ ಮೇಲೆ, ಕೇಫನ ಪರಿಚಿತಿಯನ್ನು ಮಾಡಿಕೊಳ್ಳಬೇಕೆಂದು
19 ಯೆರೂಸಲೇಮಿಗೆ ಹೋಗಿ ಅವನ ಬಳಿಯಲ್ಲಿ ಹದಿನೈದು ದಿವಸ ಇದ್ದೆನು. ಕರ್ತನ
20 ತಮ್ಮನಾದ ಯಾಕೋಬನನ್ನಲ್ಲದೆ ಅಪೊಸ್ತಲರಲ್ಲಿ ಬೇರೆ ಯಾರನ್ನೂ ಕಾಣಲಿಲ್ಲ. ನಾನು ನಿಮಗೆ ಬರೆಯುವ ಸಂಗತಿಗಳು ಸುಳ್ಳಲ್ಲವೆಂಬುವದಕ್ಕೆ ಇಗೋ ದೇವರೇ ಸಾಕ್ಷಿ.
21,22 ಆ ಮೇಲೆ ಸಿರಿಯ ಮತ್ತು ಕಿಲಿಕ್ಯ ಪ್ರಾಂತ್ಯಗಳಿಗೆ ಹೋದೆನು. ಆದರೆ ಕ್ರಿಸ್ತನಲ್ಲಿರುವ
23 ಯೂದಾಯದ ಸಭೆಗಳಿಗೆ ನನ್ನ ಗುರುತಿರಲಿಲ್ಲ. ಪೂರ್ವದಲ್ಲಿ ನಮ್ಮನ್ನು ಹಿಂಸೆಪಡಿಸಿದವನು ತಾನು ಹಾಳುಮಾಡುತ್ತಿದ್ದ ಮತವನ್ನು ಈಗ ಪ್ರಸಿದ್ಧಿ ಪಡಿಸುತ್ತಾನೆಂಬ ಸುದ್ದಿ
24 ಯನ್ನು ಮಾತ್ರ ಅವರು ಕೇಳಿ, ನನ್ನ ದೆಸೆಯಿಂದ ದೇವರನ್ನು ಕೊಂಡಾಡಿದರು.

**2** ಹದಿನಾಲ್ಕು ವರುಷಗಳಾದ ಮೇಲೆ ನಾನು ತೀತನನ್ನು ಕರೆದುಕೊಂಡು ಬಾರ್ನಬನ
2 ಜೊತೆಯಲ್ಲಿ ತಿರಿಗಿ ಯೆರೂಸಲೇಮಿಗೆ ಹೋದೆನು[1]. ದೈವಪ್ರೇರಣೆಗನುಸಾರವಾಗಿ ಹೋದೆನು. ಅನ್ಯಜನರಲ್ಲಿ ನಾನು ಸಾರುವ ಸುವಾರ್ತೆಯು ಏನೆಂಬದನ್ನು ಅಲ್ಲಿದ್ದವರಿಗೆ ತಿಳಿಸಿದೆನು. ಆದರೆ ನಾನು ಪಡುತ್ತಿರುವ ಪ್ರಯಾಸವಾಗಲಿ ಪಟ್ಟ ಪ್ರಯಾಸವಾಗಲಿ[2]
3 ನಿಷ್ಫಲವಾಗಬಾರದೆಂದು ಮಾನಿಷ್ಠರಿಗೆ ಏಕಾಂತದಲ್ಲಿ ತಿಳಿಸಿದೆನು. ನನ್ನ ಜೊತೆಯಲ್ಲಿದ್ದ ತೀತನು ಗ್ರೀಕನಾಗಿದ್ದಾಗ್ಯೂ ಅವನಿಗೆ ಸುನ್ನತಿಯಾಗಬೇಕೆಂದು ಯಾರೂ ಬಲಾತ್ಕಾರ

[1] ಅಪೊಸ್ತಲರ ಕೃತ್ಯ ೧೫, ೨.  [2] ಮೂಲ: ಓಡುತ್ತಿರುವದು ಅಥವಾ ಓಡಿದ್ದು.

ಮಾಡಲಿಲ್ಲ. ಸಭೆಗೆ ಕಳ್ಳತನದಿಂದ ಸೇರಿಕೊಂಡ ಸುಳ್ಳು ಸಹೋದರರು ಅಲ್ಲಿ ಇದ್ದದ 4 ರಿಂದ ಬಲಾತ್ಕಾರ ನಡೆದೀತೆಂಬ ಭಯವಿತ್ತು[1]. ಅವರು ನಮ್ಮನ್ನೂ ದಾಸತ್ವದೊಳಗೆ ಸಿಕ್ಕಿಸಬೇಕೆಂದು ಕ್ರಿಸ್ತ ಯೇಸುವಿನಲ್ಲಿ ನಮಗೆ ದೊರಕಿರುವ ಸ್ವಾತಂತ್ರ್ಯವನ್ನು ಗೂಢ ವಾಗಿ ವಿಚಾರಿಸುವದಕ್ಕೆ ಮರಸಿಕೊಂಡು ಬಂದವರು. ಸುವಾರ್ತೆಯ ಸತ್ಯಾರ್ಥವು 5 ನಿಮ್ಮಲ್ಲಿ ಸ್ಥಿರವಾಗಿರಬೇಕೆಂದು ನಾವು ಅವರಿಗೆ ವಶವಾಗುವದಕ್ಕೆ ಒಂದು ಗಳಿಗೆ ಹೊತ್ತಾದರೂ ಸಮ್ಮತಿ ಪಡಲಿಲ್ಲ. ಆದರೆ ಮಾನಿಷ್ಠರೆನ್ನಿಸಿಕೊಂಡವರಿಂದ ನನಗೇನೂ 6 ದೊರೆಯಲಿಲ್ಲ. ಅವರು ಹಿಂದಿನ ಕಾಲದಲ್ಲಿ ಎಂಥವರಾಗಿದ್ದರೋ ನನಗೆ ಲಕ್ಷ್ಯವಿಲ್ಲ. ದೇವರು ಮುಖದಾಕ್ಷಿಣ್ಯ ಮಾಡುವವನಲ್ಲ. ಮಾನಿಷ್ಠರೆನ್ನಿಸಿಕೊಂಡವರು ನನ್ನ ಮಾತಿಗೆ ಒಪ್ಪಿದರೇ ಹೊರತು ನನಗೇನೂ ಕಲಿಸಲಿಲ್ಲ. ಸುನ್ನತಿಯಾದವರಲ್ಲಿ ಅಪೊಸ್ತಲ 7 ತನವನ್ನು ನಡಿಸುವದಕ್ಕೋಸ್ಕರ ಪೇತ್ರನನ್ನು ಪ್ರೇರಿಸಿದಾತನು ಅನ್ಯಜನರಲ್ಲಿ ಅದನ್ನು ನಡಿಸುವದಕ್ಕೆ ನನ್ನನ್ನೂ ಪ್ರೇರಿಸಿದ್ದನು. ಸುನ್ನತಿಯಾದವರಿಗೆ ಸುವಾರ್ತೆಯನ್ನು ಸಾರುವ 8 ಕೆಲಸವು ಹ್ಯಾಗೆ ಪೇತ್ರನಿಗೆ ಕೊಡಲ್ಪಟ್ಟಿತೋ ಹಾಗೆಯೇ ಸುನ್ನತಿಯಿಲ್ಲದವರಿಗೆ ಅದನ್ನು ಸಾರುವ ಕೆಲಸವು ನನಗೆ ಕೊಟ್ಟಿರುವದನ್ನು ಸಭಾಸ್ತಂಭಗಳೆಂದು ಹೆಸರುಗೊಂಡಿರುವ 9 ಯಾಕೋಬ ಕೇಫ ಯೋಹಾನರು ಕಂಡು, ದೇವರು ನನಗೆ ದಯಪಾಲಿಸಿರುವ ವರ ವನ್ನು ತಿಳುಕೊಂಡು, ಐಕ್ಯವನ್ನು ತೋರಿಸುವದಕ್ಕಾಗಿ ನನಗೂ ಬಾರ್ನಬನಿಗೂ ಬಲಗೈ ಕೊಟ್ಟು—ನೀವು ಅನ್ಯಜನರ ಬಳಿಗೆ ಹೋಗಿರಿ, ನಾವು ಸುನ್ನತಿಯವರ ಬಳಿಗೆ ಹೋಗು ತ್ತೇವೆ ಅಂದರು. ಆದರೆ ನೀವು ನಮ್ಮಲ್ಲಿರುವ ಬಡವರನ್ನು ಜ್ಞಾಪಕಮಾಡಿಕೊಳ್ಳ 10 ಬೇಕೆಂಬ ಒಂದೇ ಸಂಗತಿಯನ್ನು ಬೇಡಿಕೊಂಡರು; ಇದನ್ನು ಮಾಡುವದರಲ್ಲಿ ನಾನೂ ಆಸಕ್ತನಾಗಿದ್ದೆನು.

ಪೌಲನು ತಾನು ಅಂತಿಯೋಕ್ಯದಲ್ಲಿ ಪೇತ್ರನನ್ನು ಖಂಡಿಸಿದ ಸಂಗತಿಯನ್ನು ತಕ್ಕೊಂಡು ಕ್ರಿಸ್ತನನ್ನು ನಂಬಿರುವವರಿಗೆ ಮೋಶೆಯ ಧರ್ಮಶಾಸ್ತ್ರಾಚಾರಗಳು ಅವಶ್ಯವಿಲ್ಲವೆಂದು ಪ್ರಸ್ತಾಪಿಸಿದ್ದು.

ಕೇಫನು ಅಂತಿಯೋಕ್ಯಕ್ಕೆ ಬಂದಾಗ ಅವನು ದೋಷಿಯಾಗಿ ಕಾಣಿಸಿಕೊಂಡದರಿಂದ 11 ನಾನು ಅವನನ್ನು ಮುಖಾಮುಖಿಯಾಗಿ ಎದುರಿಸಿದೆನು. ಯಾಕಂದರೆ, ಯಾಕೋಬನ 12 ಕಡೆಯಿಂದ ಕೆಲವರು ಬರುವದಕ್ಕೆ ಮುಂಚೆ ಅವನು ಅನ್ಯಜನರ ಸಂಗಡ ಊಟ ಮಾಡು ತ್ತಿದ್ದನು; ಅವರು ಬಂದ ಮೇಲೆ ಸುನ್ನತಿಯವರಾದ ಅವರಿಗೆ ಅವನು ಭಯಪಟ್ಟು ಅನ್ಯ ಜನರನ್ನು ಬಿಟ್ಟು ತನ್ನನ್ನು ಪ್ರತ್ಯೇಕಿಸಿಕೊಂಡನು. ಇದಲ್ಲದೆ ಮಿಕ್ಕಾದ ಯೆಹೂದ್ಯರೂ 13 ಅವನೊಂದಿಗೆ ಸೇರಿ ಹಾಗೆಯೇ ಕಪಟಮಾಡಿದರು; ಹೀಗೆ ಬಾರ್ನಬನೂ ಅವರ ಕಪ ಟದ ಸೆಳವಿಗೆ ಬಿದ್ದನು. ಅವರು ಸುವಾರ್ತೆಯ ಸತ್ಯಾರ್ಥದ ಪ್ರಕಾರ ನೆಟ್ಟಗೆ ನಡೆಯು 14 ವದಿಲ್ಲವೆಂದು ನಾನು ಕಂಡಾಗ, ಎಲ್ಲರ ಮುಂದೆ ಕೇಫನಿಗೆ ಹೇಳಿದ್ದೇನಂದರೆ—ನೀನು ಯೆಹೂದ್ಯನಾಗಿದ್ದು ಯೆಹೂದ್ಯರಂತೆ ನಡೆಯದೆ ಅನ್ಯಜನರಂತೆ ನಡೆದ ಮೇಲೆ, ಅನ್ಯ ಜನರಿಗೆ—ನೀವು ಯೆಹೂದ್ಯರ ಪದ್ಧತಿಗಳನ್ನು ಅನುಸರಿಸಬೇಕೆಂದು ನೀನು ಬಲಾತ್ಕಾರ

[1] ಅಥವಾ, ಅವನಿಗೆ ಸುನ್ನತಿಯಾಗಬೇಕೆಂಬುವದಕ್ಕೆ ನಾವು ಒಳಪಡಲಿಲ್ಲ.

15 ಮಾಡುವದು ಹ್ಯಾಗೆ? ನಾವಂತೂ ಹುಟ್ಟುಯೆಹೂದ್ಯರು, ಪಾಪಿಗಳೆನಿಸಿಕೊಂಡ ಅನ್ಯ
16 ಜನರಲ್ಲ; ಆದಾಗ್ಯೂ ಯಾವನಾದರೂ ಯೇಸು ಕ್ರಿಸ್ತನ ಮೇಲಣ ನಂಬಿಕೆಯಿಂದಲೇ
ಹೊರತು ನೇಮನಿಷ್ಠೆಗಳನ್ನನುಸರಿಸಿ ನೀತಿವಂತನೆಂದು ನಿರ್ಣಯಿಸಲ್ಪಡುವದಿಲ್ಲವೆಂಬು
ವದು ನಮಗೆ ತಿಳಿದಿರುವದರಿಂದ, ನಾವು ಸಹ ನೇಮನಿಷ್ಠೆಗಳನ್ನು ಬಿಟ್ಟು ಕ್ರಿಸ್ತನ ಮೇಲಣ
ನಂಬಿಕೆಯಿಂದಲೇ ನೀತಿವಂತರೆಂದು ನಿರ್ಣಯಿಸಲ್ಪಡುವದಕ್ಕಾಗಿ ಕ್ರಿಸ್ತ ಯೇಸುವಿನಲ್ಲಿ
ನಂಬಿಕೆಯಿಟ್ಟೆವು; ಯಾಕಂದರೆ ಯಾವನೂ ನೇಮನಿಷ್ಠೆಗಳನ್ನನುಸರಿಸಿ ನೀತಿವಂತ
ನೆಂದು ನಿರ್ಣಯಿಸಲ್ಪಡುವದೇ ಇಲ್ಲ[1].

17 ಆದರೆ ನಾವು ಕ್ರಿಸ್ತನ ಆಶ್ರಯದಲ್ಲಿ ನೀತಿವಂತರೆಂಬ ನಿರ್ಣಯ ಹೊಂದುವದಕ್ಕೆ ಪ್ರಯ
ತ್ನಿಸುತ್ತಿರುವಾಗ ನಾವೂ ಪಾಪಿಗಳಾಗಿ ತೋರಿಬಂದರೆ, ಕ್ರಿಸ್ತನು ಪಾಪಕ್ಕೆ ಸಹಾಯಕ
18 ನೆಂದು ಹೇಳಬೇಕೇನು? ಎಂದಿಗೂ ಹೇಳಬಾರದು. ನಾನು ಕೆಡವಿದ್ದನ್ನೇ ತಿರಿಗಿ
19 ಕಟ್ಟಿದರೆ, ನನ್ನನ್ನು ನಾನೇ ಅಪರಾಧಿ ಎಂದು ತೋರಿಸಿಕೊಳ್ಳುತ್ತೇನಲ್ಲಾ. ನಾನಂತೂ
ದೇವರಿಗಾಗಿ ಜೀವಿಸುವದಕ್ಕೋಸ್ಕರ ಧರ್ಮಪ್ರಮಾಣದ[2] ಮೂಲಕವಾಗಿ ಧರ್ಮ
20 ಪ್ರಮಾಣದ[2] ಪಾಲಿಗೆ ಸತ್ತೆನು. ಕ್ರಿಸ್ತನೊಂದಿಗೆ ಶಿಲುಬೆಗೆ ಹಾಕಿಸಿಕೊಂಡವನಾಗಿ
ದ್ದೇನೆ; ಇನ್ನು ಜೀವಿಸುವವನು ನಾನಲ್ಲ, ಕ್ರಿಸ್ತನು ನನ್ನಲ್ಲಿ ಜೀವಿಸುತ್ತಾನೆ; ಈಗ ಶರೀರ
ದಲ್ಲಿರುವ ನಾನು ಜೀವಿಸುವದು ಹ್ಯಾಗಂದರೆ, ದೇವಕುಮಾರನ ಮೇಲಣ ನಂಬಿಕೆ
ಯಲ್ಲಿಯೇ ಜೀವಿಸುತ್ತೇನೆ. ಆತನು ನನ್ನನ್ನು ಪ್ರೀತಿಸಿ ನನಗೋಸ್ಕರ ತನ್ನನ್ನು ಮರಣಕ್ಕೆ
21 ಒಪ್ಪಿಸಿದನು. ನಾನು ದೇವರ ಕೃಪೆಯನ್ನು ನಿರರ್ಥಕ ಮಾಡುವದಿಲ್ಲ. ಕರ್ಮಮಾರ್ಗ
ದಿಂದ ನೀತಿಯುಂಟಾಗುವದಾದರೆ, ಕ್ರಿಸ್ತನು ಮರಣವನ್ನು ಹೊಂದಿದ್ದಕ್ಕೆ ಕಾರಣವೇ
ಇಲ್ಲ.

### ನೇಮನಿಷ್ಠೆಗಳಿಂದಲ್ಲ ನಂಬಿಕೆಯಿಂದಲೇ ನೀತಿವಂತರಾಗುತ್ತೇವೆಂಬುವದಕ್ಕೆ ಪ್ರಮಾಣ.

**3** ಎಲೈ ಬುದ್ಧಿಯಿಲ್ಲದ ಗಲಾತ್ಯದವರೇ, ಯಾರು ನಿಮ್ಮನ್ನು ಮರಳುಗೊಳಿಸಿದರು?
ಯೇಸು ಕ್ರಿಸ್ತನು ಶಿಲುಬೆಗೆ ಹಾಕಿಸಿಕೊಂಡವನಾಗಿ ನಿಮ್ಮ ಕಣ್ಣೆದುರಿನಲ್ಲಿ ವರ್ಣಿಸಲ್ಪಟ್ಟ
2 ನಲ್ಲವೇ? ಒಂದು ಸಂಗತಿಯನ್ನು ಮಾತ್ರ ನಿಮ್ಮಿಂದ ತಿಳುಕೊಳ್ಳಬೇಕೆಂದಿದ್ದೇನೆ. ನೀವು
ದೇವರಾತ್ಮವನ್ನು ಹೊಂದಿದ್ದು ನೇಮನಿಷ್ಠೆಗಳನ್ನು ಅನುಸರಿಸಿದ್ದರಿಂದಲೋ? ಕೇಳಿ ನಂಬಿ
3 ದ್ದರಿಂದಲೋ? ಇಷ್ಟು ಬುದ್ಧಿಯಿಲ್ಲದವರಾಗಿದ್ದೀರಾ? ದೇವರಾತ್ಮಾನುಸಾರವಾಗಿ
4 ಪ್ರಾರಂಭಿಸಿ ಈಗ ಬಹಿರಾಚಾರಗಳಿಂದ ಸಿದ್ಧಿಗೆ ಬರಬೇಕೆಂದಿದ್ದೀರಾ? ನೀವು ಅಷ್ಟು
ಬಾಧೆಗಳನ್ನು ಅನುಭವಿಸಿದ್ದು ವ್ಯರ್ಥವೋ? ವ್ಯರ್ಥವೇ ಎಂದು ಹೇಳಬೇಕೇನು?
5 ದೇವರು ತನ್ನ ಆತ್ಮನನ್ನು ನಿಮಗೆ ಹೇರಳವಾಗಿ ಕೊಟ್ಟು ನಿಮ್ಮಲ್ಲಿ ಮಹತ್ಕಾರ್ಯಗಳನ್ನು
ನಡಿಸುತ್ತಾ ಬಂದದ್ದು ಯಾತರಿಂದಾಯಿತು? ನೀವು ನೇಮನಿಷ್ಠೆಗಳನ್ನನುಸರಿಸಿದ್ದರಿಂದ
6 ಲೋ? ಕೇಳಿ ನಂಬಿದ್ದರಿಂದಲೋ? ನಂಬಿದ್ದರಿಂದಲೇ. ಅಬ್ರಹಾಮನು ದೇವರನ್ನು

---

1) ಕೀರ್ತನೆ ೧೪೩, ೨.

2) ಅಥವಾ, ನಿಯಮಗಳ; ರೋಮಾ. ೭, ೧—೧೧ ನೋಡು.

ನಂಬಿದನು, ಅದು ಅವನಿಗೆ ನೀತಿಯೆಂದು ಎಣಿಸಲ್ಪಟ್ಟಿತು ಎಂಬದಾಗಿ[1] ಬರೆದದೆಯಲ್ಲಾ. ಆದದರಿಂದ ನಂಬುವವರೇ ಅಬ್ರಹಾಮನ ಮಕ್ಕಳೆಂದು ತಿಳಿದುಕೊಳ್ಳಿರಿ. 7, 8 ದೇವರು ಅನ್ಯಜನರನ್ನು ನಂಬಿಕೆಯ ನಿಮಿತ್ತವಾಗಿಯೇ ನೀತಿವಂತರೆಂದು ನಿರ್ಣಯಿಸುವನೆಂಬದಾಗಿ ಶಾಸ್ತ್ರವು ಮೊದಲೇ ಕಂಡು ಅಬ್ರಹಾಮನಿಗೆ—ನಿನ್ನಲ್ಲಿ ಎಲ್ಲಾ ದೇಶದವರಿಗೆ ಸೌಭಾಗ್ಯವು ಹುಟ್ಟಿಬರುವದೆಂಬ[2] ಶುಭವರ್ತಮಾನವನ್ನು ಮುಂಚಿತವಾಗಿಯೇ ತಿಳಿಸಿತು. 9 ಹೀಗಿರಲಾಗಿ ನಂಬುವವರು ನಂಬಿಕೆಯಿಟ್ಟ ಅಬ್ರಹಾಮನೊಂದಿಗೆ ಸೌಭಾಗ್ಯವನ್ನು ಹೊಂದುವರು. 10 ನೇಮನಿಷ್ಠೆಗಳನ್ನು ಆಧಾರಮಾಡಿಕೊಳ್ಳುವವರೆಲ್ಲರೂ ಶಾಪಾಧೀನರಾಗಿದ್ದಾರೆ. ಹ್ಯಾಗಂದರೆ, ಯಾವನು ಧರ್ಮಗ್ರಂಥದೊಳಗೆ ಬರೆದಿರುವ ಎಲ್ಲಾ ಕರ್ಮಗಳನ್ನೂ ತಪ್ಪದೆ ಆಚರಿಸುವದಿಲ್ಲವೋ ಅವನು ಶಾಪಗ್ರಸ್ತನೆಂದು[3] ಶಾಸ್ತ್ರದಲ್ಲಿ ಬರೆದದೆ. 11 ಇದಲ್ಲದೆ ಕರ್ಮಮಾರ್ಗದಿಂದ ಯಾವನೂ ದೇವರ ಸನ್ನಿಧಿಯಲ್ಲಿ ನೀತಿವಂತನಾಗುವದಿಲ್ಲವೆಂಬುವದು ಸ್ಪಷ್ಟವಾಗಿದೆ. ಯಾಕಂದರೆ ನೀತಿವಂತನು ನಂಬಿಕೆಯಿಂದಲೇ ಬದುಕುವನೆಂದು[4] ಬರೆದದೆ. 12 ಆದರೆ ಕರ್ಮಮಾರ್ಗಕ್ಕೆ ನಂಬಿಕೆಯು ಆಧಾರವಲ್ಲ, ಅದರ ನೇಮಗಳನ್ನು ಆಚರಿಸಿದವನೇ ಅವುಗಳ ದೆಸೆಯಿಂದ ಬದುಕುವನು ಎಂದು[5] ಬರೆದದೆ. 13-14 ಅಬ್ರಹಾಮನಿಗೆ ಉಂಟಾದ ಆಶೀರ್ವಾದವು ಕ್ರಿಸ್ತ ಯೇಸುವಿನಲ್ಲಿ ಅನ್ಯಜನರಿಗೆ ಉಂಟಾಗುವಂತೆಯೂ ದೇವರು ವಾಗ್ದಾನಮಾಡಿದ ಆತ್ಮವು ನಮಗೆ ನಂಬಿಕೆಯ ಮೂಲಕ ದೊರಕುವಂತೆಯೂ ಕ್ರಿಸ್ತನು ನಮ್ಮ ನಿಮಿತ್ತ ಶಾಪವಾಗಿ, ಧರ್ಮಶಾಸ್ತ್ರದಲ್ಲಿ ಹೇಳಿರುವ ಶಾಪದೊಳಗಿಂದ ನಮ್ಮನ್ನು ಬಿಡಿಸಿದನು. ಯಾವನು ಮರಕ್ಕೆ ತೂಗಹಾಕಲ್ಪಡುತ್ತಾನೋ ಅವನು ಶಾಪಗ್ರಸ್ತನೇ ಎಂದು[6] ಶಾಸ್ತ್ರದಲ್ಲಿ ಬರೆದದೆಯಲ್ಲಾ.

15 ಸಹೋದರರೇ, ಲೋಕದ ವ್ಯವಹಾರವನ್ನು ಹಿಡಿದು ಮಾತಾಡುತ್ತೇನೆ. ಸ್ಥಿರಪಡಿಸಿದ ಒಂದು ಒಡಂಬಡಿಕೆಯು ಕೇವಲ ಮನುಷ್ಯನದಾಗಿದ್ದರೂ ಅದನ್ನು ಯಾರೂ ರದ್ದುಮಾಡುವದಿಲ್ಲ, ಅದಕ್ಕೆ ಹೆಚ್ಚು ಮಾತುಗಳನ್ನು ಕೂಡಿಸುವದಿಲ್ಲ. 16 ಒಳ್ಳೇದು, ದೇವರು ಅಬ್ರಹಾಮನಿಗೂ ಅವನ ಸಂತತಿಗೂ ವಾಗ್ದಾನಗಳನ್ನು ಮಾಡಿದನು. ಆತನು ನಿನ್ನ ಸಂತತಿಗಳಿಗೆ ಎಂದು ಹೇಳಿ ಅನೇಕರನ್ನು ಸೂಚಿಸದೆ ನಿನ್ನ ಸಂತತಿಗೆ ಎಂದು[7] ಹೇಳಿ ಒಬ್ಬನನ್ನೇ ಸೂಚಿಸುತ್ತಾನೆ. ಆ ಒಬ್ಬನು ಕ್ರಿಸ್ತನೇ. 17 ನನ್ನ ತಾತ್ಪರ್ಯವೇನಂದರೆ, ದೇವರು ಮೊದಲು ಸ್ಥಿರಪಡಿಸಿದ ಒಡಂಬಡಿಕೆಯನ್ನು ನಾನೂರ ಮೂವತ್ತು ವರುಷಗಳ ಮೇಲೆ ಬಂದ ಧರ್ಮಶಾಸ್ತ್ರವು ರದ್ದುಮಾಡಿ ಆ ವಾಗ್ದಾನವನ್ನು ವ್ಯರ್ಥ ಮಾಡುವದಿಲ್ಲ. 18 ಆ ಬಾಧ್ಯತೆಯು ಕರ್ಮಮಾರ್ಗದಿಂದ ದೊರೆಯುವದಾದರೆ, ಅದು ಇನ್ನು ವಾಗ್ದಾನದಿಂದ ದೊರೆಯುವದಲ್ಲವೆಂದಾಯಿತು; ಆದರೆ ದೇವರು ಅದನ್ನು ಅಬ್ರಹಾಮನಿಗೆ ವಾಗ್ದಾನದ ಮೂಲಕವಾಗಿಯೇ ದಯಪಾಲಿಸಿದ್ದಾನೆ.

---

1) ಉತ್ಪತ್ತಿ ೧೫, ೬. 2) ಉತ್ಪತ್ತಿ ೧೨, ೩; ೧೮, ೧೮. 3) ದ್ವಿತೀಯ ನ್ಯಾಯ ೨೭, ೨೬.
4) ಹಬಕ್ಕೂಕ ೨, ೪. 5) ಲೇವಿಕ ೧೮, ೫. 6) ದ್ವಿತೀಯ ನ್ಯಾಯ ೨೧, ೨೩.
7) ಉತ್ಪತ್ತಿ ೧೨, ೭.

ನಂಬಿಕೆಯು ಸಾಕಾಗಿದ್ದರೆ, ಮೋಶೆಯು ಧರ್ಮಶಾಸ್ತ್ರವು ಯಾಕೆ?

19 ಹಾಗಾದರೆ ಮೋಶೆಯ ಧರ್ಮಶಾಸ್ತ್ರವು ಯಾತಕ್ಕೆ? ವಾಗ್ದಾನದಲ್ಲಿ ಸೂಚಿತನಾದವನು ಹುಟ್ಟಿ ಬರುವ ತನಕ, ದೇವರು ಇಂಥಿಂಥಾದ್ದು ಅಪರಾಧವೆಂದು ತೋರಿಸುವದಕ್ಕಾಗಿ ಅದನ್ನು ವಾಗ್ದಾನಕ್ಕೆ ಕೂಡಿಸಿ ದೇವದೂತರ ಮುಖಾಂತರ ಒಬ್ಬ ಮಧ್ಯಸ್ಥನ 20 ಕೈಯಲ್ಲಿ ನೇಮಿಸಿ ಕೊಟ್ಟನು. ಒಂದೇ ಪಕ್ಷವಿದ್ದರೆ ಮಧ್ಯಸ್ಥನು ಬೇಕಿಲ್ಲ, ದೇವರಾ 21 ದರೋ ಒಬ್ಬನೇ. ಹಾಗಾದರೆ ಧರ್ಮಶಾಸ್ತ್ರವು ದೇವರ ವಾಗ್ದಾನಗಳಿಗೆ ವಿರುದ್ಧವೋ? ಹಾಗೆ ಎಂದಿಗೂ ತಿಳುಕೊಳ್ಳಬಾರದು. ಬದುಕಿಸುವದಕ್ಕೆ ಶಕ್ತವಾಗಿರುವ ಧರ್ಮಶಾಸ್ತ್ರವು ಕೊಡಲ್ಪಟ್ಟಿದ್ದರೆ, ಸಂದೇಹವಿಲ್ಲದೆ ಕರ್ಮಮಾರ್ಗದಿಂದಲೇ ನೀತಿಯುಂಟಾಗು 22 ತ್ತಿತ್ತು. ಹಾಗಾಗದೆ ಯೇಸು ಕ್ರಿಸ್ತನಲ್ಲಿ ನಂಬಿಕೆಯಿಡುವದರಿಂದ ಉಂಟಾಗುವ ಆ ವಾಗ್ದಾನದ ಫಲವು ನಂಬುವವರಿಗೇ ಕೊಡಲ್ಪಡಬೇಕೆಂದು ಶಾಸ್ತ್ರವು ಸಮಸ್ತವನ್ನು ಪಾಪಕ್ಕೊಳಗಾಗಿದೆಯೆಂದು ತೀರ್ಮಾನಿಸಿತು.

23 ಕ್ರಿಸ್ತನಂಬಿಕೆಯ ಕಾಲ ಬರುವದಕ್ಕೆ ಮೊದಲು, ನಾವು ಮುಂದಕ್ಕೆ ಪ್ರಕಟವಾಗಬೇಕಾಗಿದ್ದ ಆ ನಂಬಿಕೆಗೆ ವಶವಾಗುವದಕ್ಕಾಗಿ ಧರ್ಮಶಾಸ್ತ್ರದ[1] ಕೈಕೆಳಗೆ ಕಾವಲಲ್ಲಿ 24 ಮುಚ್ಚಲ್ಪಟ್ಟಿದ್ದೆವು. ಹೀಗಿರಲಾಗಿ ಧರ್ಮಶಾಸ್ತ್ರವು ನಮ್ಮನ್ನು ಕಾಯುವ ಆಳಿನಂತಾಗಿದೆ[2]; ನಾವು ನಂಬಿಕೆಯಿಂದ ನೀತಿವಂತರೆಂಬ ನಿರ್ಣಯವನ್ನು ಹೊಂದುವದಕ್ಕಾಗಿ 25 ಕ್ರಿಸ್ತನಲ್ಲಿಗೆ ಸೇರುವ ತನಕ ಅದು ನಮ್ಮನ್ನು ಕಾಯುತ್ತದೆ[3]. ಆದರೆ ಕ್ರಿಸ್ತನಂಬಿಕೆಯು 26 ಬಂದಿರಲಾಗಿ, ನಾವಿನ್ನು ಕಾಯುವವನ ಕೈಕೆಳಗಿರುವವರಲ್ಲ. ನೀವೆಲ್ಲರು ಕ್ರಿಸ್ತ ಯೇಸು 27 ವಿನಲ್ಲಿಟ್ಟಿರುವ ನಂಬಿಕೆಯ ಮೂಲಕ ದೇವರ ಪುತ್ರರಾಗಿದ್ದೀರಿ. ಹ್ಯಾಗಂದರೆ ಕ್ರಿಸ್ತನಲ್ಲಿ ಸೇರುವದಕ್ಕೆ ದೀಕ್ಷಾಸ್ನಾನಮಾಡಿಸಿಕೊಂಡಿರುವ ನೀವೆಲ್ಲರು ಕ್ರಿಸ್ತನನ್ನು ಧರಿಸಿಕೊಂಡಿರಿ. 28 ನೀವೆಲ್ಲರು ಕ್ರಿಸ್ತ ಯೇಸುವಿನಲ್ಲಿ ಒಂದೇ ಆಗಿರುವದರಿಂದ, ಯೆಹೂದ್ಯನು ಗ್ರೀಕನು 29 ಎಂದೂ, ಆಳು ಒಡೆಯ ಎಂದೂ, ಗಂಡು ಹೆಣ್ಣು ಎಂದೂ ಭೇದವಿಲ್ಲ. ನೀವು ಕ್ರಿಸ್ತನವರಾಗಿದ್ದರೆ, ಅಬ್ರಹಾಮನ ಸಂತತಿಯವರೂ ವಾಗ್ದಾನಕ್ಕನುಸಾರವಾಗಿ ಬಾಧ್ಯರೂ ಆಗಿದ್ದೀರಿ.

**4** ಆದರೆ ನಾನು ಹೇಳುವದೇನಂದರೆ, ಬಾಧ್ಯನು, ತಾನು ಆಸ್ತಿಗೆಲ್ಲಾ ಧನಿಯಾಗಿ 2 ದ್ದಾಗ್ಯೂ, ಬಾಲಕನಾಗಿರುವ ತನಕ ದಾಸನಂತೆ ಇರುವನೇ ಹೊರತು ಬೇರೆಯಿಲ್ಲ. ತಂದೆಯು ನೇಮಿಸಿದ ದಿನದ ವರೆಗೂ ಪಾಲಕರ ಮತ್ತು ಮನೆವಾರ್ತೆಯವರ ಕೈಕೆಳಗಿರು 3 ವನು. ಹಾಗೆಯೇ ನಾವು ಸಹ ಬಾಲಕರಾಗಿದ್ದಾಗ ಲೋಕದವರ ಬಾಲಬೋಧೆಗೆ 4-5 ಅಧೀನರಾಗಿದ್ದೆವು. ಆದರೆ ಕಾಲವು ಪರಿಪೂರ್ಣವಾದಾಗ, ದೇವರು ತನ್ನ ಮಗನನ್ನು ಕಳುಹಿಸಿಕೊಟ್ಟನು. ಧರ್ಮಶಾಸ್ತ್ರಾಧೀನರಾದವರನ್ನು[4] ವಿಮೋಚಿಸಬೇಕೆಂತಲೂ ಪುತ್ರರ ಪದವಿಯನ್ನು ನಮಗೆ ದೊರಕಿಸಬೇಕೆಂತಲೂ ಆತನು ಸ್ತ್ರೀಯಲ್ಲಿ ಹುಟ್ಟಿದವ

[1] ಅಥವಾ, ನೇಮನಿಷ್ಠೆಗಳ. [2] ಅಥವಾ, ಹುಡುಗನನ್ನು ಉಪಾಧ್ಯಾಯನ ಬಳಿಗೆ ಕರಕೊಂಡು ಹೋಗುವ ಆಳಿನಂತಾಗಿದೆ. [3] ಅಥವಾ, ಹೊಂದುವದಕ್ಕಾಗಿ ಅದು ನಮ್ಮನ್ನು ಕ್ರಿಸ್ತನ ಬಳಿಗೆ ಕರತರುತ್ತದೆ.
[4] ಅಥವಾ, ನೇಮನಿಷ್ಠೆಗಳಿಗೆ ಅಧೀನರಾದವರನ್ನು.

ನಾಗಿಯೂ ಧರ್ಮಶಾಸ್ತ್ರಾಧೀನನಾಗಿಯೂ ಬಂದನು. 6 ನೀವು ಪುತ್ರರಾಗಿರುವದರಿಂದ, ದೇವರು ಅಪ್ಪಾ ಅಪ್ಪಾ ಎಂದು ಕೂಗುವ ತನ್ನ ಮಗನ ಆತ್ಮವನ್ನು ನಮ್ಮ ಹೃದಯಗಳಲ್ಲಿ ಕಳುಹಿಸಿಕೊಟ್ಟನು. 7 ಹೀಗಿರುವಲ್ಲಿ, ಇನ್ನು ನೀನು ದಾಸನಲ್ಲ, ಮಗನಾಗಿದ್ದೀ. ಮಗನೆಂದ ಮೇಲೆ, ದೇವರ ಮೂಲಕ ಬಾಧ್ಯನೂ ಆಗಿದ್ದೀ.

ನಂಬಿಕೆಯ ಮೂಲಕ ನೇಮನಿಷ್ಠೆಗಳ ಅಧಿಕಾರದಿಂದ ಸ್ವಾತಂತ್ರ್ಯವನ್ನು ಹೊಂದಿರುವವರು ತಿರಿಗಿ ಅವುಗಳಿಗೆ ಅಧೀನರಾಗುವದು ತಕ್ಕದ್ದಲ್ಲ.

8 ಪೂರ್ವಕಾಲದಲ್ಲಿ ನೀವು ದೇವರ ಜ್ಞಾನವಿಲ್ಲದವರಾಗಿ, ದೇವರಲ್ಲದವುಗಳಿಗೆ ಅಧೀನರಾಗಿದ್ದಿರಿ. 9 ಈಗಲಾದರೋ ನೀವು ದೇವರನ್ನು ತಿಳುಕೊಂಡಿದ್ದೀರಿ; ಸರಿಯಾಗಿ ಹೇಳಬೇಕಾದರೆ, ದೇವರು ನಿಮ್ಮನ್ನು ತಿಳುಕೊಂಡಿದ್ದಾನೆ. ಹೀಗಿರಲಾಗಿ ನೀವು ಕೆಲಸಕ್ಕೆ ಬಾರದ ದರಿದ್ರ ಬಾಲಬೋಧೆಗೆ ಮತ್ತೂ ಅಧೀನರಾಗಬೇಕೆಂದು ಅಪೇಕ್ಷಿಸಿ ಪುನಃ ಅವುಗಳಿಗೆ ತಿರುಗಿಕೊಳ್ಳುವದು ಹ್ಯಾಗೆ? 10 ನೀವು ಆಯಾ ದಿನಗಳನ್ನೂ ಮಾಸಗಳನ್ನೂ ಉತ್ಸವಕಾಲಗಳನ್ನೂ ಸಂವತ್ಸರಗಳನ್ನೂ ನಿಷ್ಠೆಯಿಂದ ಆಚರಿಸುತ್ತೀರಿ. 11 ನಾನು ನಿಮಗೋಸ್ಕರ ಪ್ರಯಾಸಪಟ್ಟದ್ದು ನಿಷ್ಫಲವಾಯಿತೋ ಏನೋ ಎಂದು ನಿಮ್ಮ ವಿಷಯದಲ್ಲಿ ಭಯಪಡುತ್ತೇನೆ.

12 ಸಹೋದರರೇ, ನಾನು ನಿಮ್ಮ ಹಾಗೆ ಆದದ್ದರಿಂದ, ನೀವು ನನ್ನ ಹಾಗೆ ಆಗಬೇಕೆಂದು ನಿಮ್ಮನ್ನು ಬೇಡಿಕೊಳ್ಳುತ್ತೇನೆ. 13 ನೀವು ನನಗೇನೂ ಅನ್ಯಾಯಮಾಡಲಿಲ್ಲ. ನನ್ನ ಶರೀರಕ್ಕೆ ಅಸೌಖ್ಯವಿದ್ದದರಿಂದ ನಾನು ನಿಮ್ಮಲ್ಲಿದ್ದು ಮೊದಲನೇ ಸರ್ತಿ ನಿಮಗೆ ಸುವಾರ್ತೆ ಸಾರಿದ್ದನ್ನು ನೀವು ಬಲ್ಲಿರಿ. 14 ನನ್ನ ಶರೀರದಲ್ಲಿ ನಿಮ್ಮ ಬೇಸರಿಕೆಗೆ ಆಸ್ಪದವಾದದ್ದನ್ನು ನೀವು ಹೀನೈಸಲಿಲ್ಲ, ಓಕರಿಸಲಿಲ್ಲ; ನನ್ನನ್ನು ದೇವದೂತನಂತೆ, ಕ್ರಿಸ್ತ ಯೇಸುವಿನಂತೆ ಸೇರಿಸಿಕೊಂಡಿರಿ. 15 ಆವಾಗ ನಮಗೆ ಶುಭವಾಯಿತೆಂದು ನೀವು ಅಂದುಕೊಂಡಿರಲ್ಲಾ; ಆ ಶುಭವು ಎಲ್ಲಿ ಹೋಯಿತು? ಸಾಧ್ಯವಾಗಿದ್ದರೆ ನಿಮ್ಮ ಕಣ್ಣುಗಳನ್ನಾದರೂ ಕಿತ್ತು ನನಗೆ ಕೊಡುತ್ತಿದ್ದಿರೆಂದು ನಿಮ್ಮನ್ನು ಕುರಿತು ಸಾಕ್ಷಿಹೇಳುತ್ತೇನೆ. 16 ಹೀಗಿರಲಾಗಿ ನಾನು ನಿಮಗೆ ಸತ್ಯವನ್ನು ಹೇಳುವದರಿಂದ ನಿಮಗೆ ಶತ್ರುವಾಗಿದ್ದೇನೋ? 17 ಅವರು ನಿಮ್ಮನ್ನು ಮೆಚ್ಚಿಸುವದಕ್ಕೆ ಆಸಕ್ತರಾಗಿದ್ದಾರೆ; ಆದರೆ ಒಳ್ಳೇ ಅಭಿಪ್ರಾಯದಿಂದ ಅಂಥವರಾಗಿರದೆ, ನೀವು ತಮ್ಮನ್ನೇ ಮೆಚ್ಚಿಸುವವರಾಗಬೇಕೆಂದು ನಿಮ್ಮನ್ನು ಅಗಲಿಸುವದಕ್ಕೆ ಅಪೇಕ್ಷಿಸುತ್ತಾರೆ. 18 ನಾನು ನಿಮ್ಮ ಸಂಗಡ ಇರುವಾಗ ಮಾತ್ರವಲ್ಲದೆ, ಯಾವಾಗಲೂ ಒಳ್ಳೇ ವಿಷಯದಲ್ಲಿ ನೀವು ಮೆಚ್ಚಿಸಿಕೊಳ್ಳುವದು ಒಳ್ಳೇದೇ. 19 ನನ್ನ ಪ್ರಿಯವಾದ ಮಕ್ಕಳೇ, ಕ್ರಿಸ್ತನ ಸಾರೂಪ್ಯವು ನಿಮ್ಮಲ್ಲಿ ಉಂಟಾಗುವ ತನಕ ನಿಮಗೋಸ್ಕರ ತಿರಿಗಿ ಪ್ರಸವವೇದನೆ ಪಡುತ್ತೇನೆ. 20 ನಿಮ್ಮ ವಿಷಯದಲ್ಲಿ ಏನು ಮಾಡಬೇಕೋ ನನಗೆ ತಿಳಿಯದು. ನಾನು ಈಗಲೂ ನಿಮ್ಮಲ್ಲಿದ್ದು ಬೇರೆ ರೀತಿಯಿಂದ ಮಾತಾಡುವದಕ್ಕೆ ಎಷ್ಟೋ ಆಶೆ ಪಡುತ್ತೇನೆ.

21 ಧರ್ಮಶಾಸ್ತ್ರಾಧೀನರಾಗುವದಕ್ಕೆ ಮನಸ್ಸುಳ್ಳವರೇ, ಧರ್ಮಶಾಸ್ತ್ರಕ್ಕೆ ಕಿವಿಗೊಡುವದಿಲ್ಲವೋ? ನನಗೆ ಹೇಳಿರಿ. 22 ಅದರಲ್ಲಿ ಬರೆದಿರುವದೇನಂದರೆ, ಅಬ್ರಹಾಮನಿಗೆ ಇಬ್ಬರು ಮಕ್ಕಳಿದ್ದರು; ಒಬ್ಬನು ತೊತ್ತಿನಿಂದ ಹುಟ್ಟಿದವನು, ಒಬ್ಬನು ಧರ್ಮಪತ್ನಿಯಿಂದ ಹುಟ್ಟಿ

23 ದವನು[1]. ತೊತ್ತಿನ ಮಗನು ಸ್ವಾಭಾವಿಕವಾಗಿ ಹುಟ್ಟಿದನು. ಧರ್ಮಪತ್ನಿಯ ಮಗನೋ
24 ವಾಗ್ದಾನದ ಫಲವಾಗಿ ಹುಟ್ಟಿದನು. ಈ ಸಂಗತಿಗಳು ಉಪಮಾನವಾಗಿವೆ; ಹ್ಯಾಗಂದರೆ,
ಆ ಇಬ್ಬರು ಸ್ತ್ರೀಯರು ಎರಡು ಒಡಂಬಡಿಕೆಗಳೇ. ಒಂದು ಒಡಂಬಡಿಕೆ ಸೀನಾಯಿ
ಪರ್ವತದಿಂದ ಉತ್ಪನ್ನವಾಗಿ ದಾಸತ್ವದಲ್ಲಿರಬೇಕಾದ ಮಕ್ಕಳನ್ನು ಹೆರುವಂಥಾದ್ದು; ಅದೇ
25 ಹಾಗರ್. ಹಾಗರ್ ಅಂದರೆ ಅರಬಸ್ಥಾನದಲ್ಲಿರುವ ಸೀನಾಯಿ ಪರ್ವತ. ಅವಳು
ಈಗಿನ ಯೆರೂಸಲೇಮ್ ಎಂಬವಳಿಗೆ ಸರಿಬೀಳುತ್ತಾಳೆ; ಹ್ಯಾಗಂದರೆ ಈಕೆ ತನ್ನ ಮಕ್ಕಳ
26 ಸಹಿತ ದಾಸತ್ವದಲ್ಲಿದ್ದಾಳೆ. ಆದರೆ ಮೇಲಣ ಯೆರೂಸಲೇಮ್ ಎಂಬವಳು ಸ್ವತಂತ್ರಳು,
ಇವಳೇ ನಮಗೆ ತಾಯಿ.

27 ಹೆರದ ಬಂಜೆಯೇ, ಆನಂದವಾಗಿರು,
ಪ್ರಸವವೇದನೆಯಿಲ್ಲದವಳೇ, ಹರ್ಷಗೊಂಡು ಕೂಗು;
ಗಂಡನ ಬಳಿಯಲ್ಲಿರುವವಳಿಗಿಂತ ಗಂಡನು ಬಿಟ್ಟವಳಿಗೆ ಮಕ್ಕಳು ಹೆಚ್ಚು[2]

28 ಎಂದು ಬರೆದದೆಯಲ್ಲಾ. ಸಹೋದರರೇ, ನಾವು ಇಸಾಕನಂತೆ ವಾಗ್ದಾನದ ಫಲವಾಗಿ
29 ಹುಟ್ಟಿದ ಮಕ್ಕಳಾಗಿದ್ದೇವೆ. ಆದರೆ ಪೂರ್ವದಲ್ಲಿ ಸ್ವಾಭಾವಿಕವಾಗಿ ಹುಟ್ಟಿದವನು ದೇವ
30 ರಾತ್ಮಬಲದಿಂದ ಹುಟ್ಟಿದವನನ್ನು ಹಿಂಸೆ ಪಡಿಸಿದಂತೆಯೇ ಈಗಲೂ ಅದೆ. ಆದಾಗ್ಯೂ
ಶಾಸ್ತ್ರವು ಏನು ಹೇಳುತ್ತದೆ? ತೊತ್ತನ್ನೂ ಅವಳ ಮಗನನ್ನೂ ಹೊರಗೆ ಹಾಕು; ತೊತ್ತಿನ
ಮಗನು ಧರ್ಮಪತ್ನಿಯ ಮಗನೊಂದಿಗೆ ಎಷ್ಟು ಮಾತ್ರಕ್ಕೂ ಬಾಧ್ಯನಾಗಬಾರದೆಂದು[3]
31 ಹೇಳುತ್ತದೆ. ಸಹೋದರರೇ, ನಾವು ತೊತ್ತಿನ ಮಕ್ಕಳಲ್ಲ, ಆ ಧರ್ಮಪತ್ನಿಯ ಮಕ್ಕಳೇ
ಎಂದು ತಿಳುಕೊಳ್ಳಿರಿ.

**5** ಕ್ರಿಸ್ತನು ನಮ್ಮನ್ನು ಸ್ವತಂತ್ರದಲ್ಲಿರಿಸಬೇಕೆಂದು ನಮಗೆ ಬಿಡುಗಡೆ ಮಾಡಿದನು.
ಅದರಲ್ಲಿ ಸ್ಥಿರವಾಗಿ ನಿಲ್ಲಿರಿ; ದಾಸತ್ವದ ನೊಗದಲ್ಲಿ ತಿರಿಗಿ ಸಿಕ್ಕಿಕೊಳ್ಳಬೇಡಿರಿ.

2 ನೋಡಿರಿ, ಪೌಲನೆಂಬ ನಾನು ನಿಮಗೆ ಒಂದನ್ನು ಹೇಳುತ್ತೇನೆ—ನೀವು ಸುನ್ನತಿಮಾಡಿ
3 ಸಿಕೊಂಡರೆ, ಕ್ರಿಸ್ತನಿಂದ ನಿಮಗೆ ಏನೂ ಪ್ರಯೋಜನವಿಲ್ಲ. ಸುನ್ನತಿಮಾಡಿಸಿಕೊಳ್ಳುವ
ಪ್ರತಿಯೊಬ್ಬನಿಗೆ—ನೀನು ಧರ್ಮಶಾಸ್ತ್ರದಲ್ಲಿ ಹೇಳಿರುವದನ್ನೆಲ್ಲಾ ಮಾಡುವ ಹಂಗಿನಲ್ಲಿದ್ದೀ
4 ಎಂದು ತಿರಿಗಿ ಪ್ರಮಾಣವಾಗಿ ಹೇಳುತ್ತೇನೆ. ನಿಮ್ಮಲ್ಲಿ ಯಾರ್ಯಾರು ಕರ್ಮಮಾರ್ಗ
ವಾಗಿ ನೀತಿವಂತರಾಗಬೇಕೆಂದಿರುತ್ತಾರೋ, ಅವರು ಕ್ರಿಸ್ತನಿಂದ ಅಗಲಿಹೋದರು.
5 ಕೃಪಾಶ್ರಯದೊಳಗಿಂದ ಬಿದ್ದುಹೋದರು. ನಾವೋ ಆತ್ಮಮಾರ್ಗವಾಗಿ ನಂಬಿಕೆಯಿಂದ
ನೀತಿವಂತರಾಗುತ್ತೇವೆಂಬುವ ನಿರೀಕ್ಷೆ ಸಫಲವಾಗುವದೆಂದು ಎದುರುನೋಡುತ್ತೇವೆ.
6 ಕ್ರಿಸ್ತ ಯೇಸುವಿನ ಧರ್ಮದಲ್ಲಿ ಸುನ್ನತಿಯಾದರೂ ಪ್ರಯೋಜನವಿಲ್ಲ, ಆಗದಿದ್ದರೂ
ಪ್ರಯೋಜನವಿಲ್ಲ. ಪ್ರೀತಿಯಿಂದ ಕೆಲಸ ನಡಿಸುವ ನಂಬಿಕೆಯಿಂದಲೇ ಪ್ರಯೋಜನ
7 ವಾಗಿದೆ. ಚನ್ನಾಗಿ ಓಡುತ್ತಾ ಇದ್ದಿರಿ; ನೀವು ಸತ್ಯವನ್ನು ಅನುವರ್ತಿಸದಂತೆ ಯಾರು
8, 9 ನಿಮ್ಮನ್ನು ತಡೆದರು? ಈ ಬೋಧನೆಯು ನಿಮ್ಮನ್ನು ಕರೆದಾತನಿಂದ ಹುಟ್ಟಿದ್ದಲ್ಲ. ಸ್ವಲ್ಪ
10 ಹುಳಿಯಿಂದ ಕಣಿಕವೆಲ್ಲಾ ಹುಳಿಯಾಗುವದು. ನನಗಂತೂ ನೀವು ಬೇರೆ ಅಭಿಪ್ರಾಯ

---

[1] ಉತ್ಪತ್ತಿ ೧೬, ೧೫; ೨೧, ೨. ೯.
[2] ಯೆಶಾಯ ೫೪, ೧.
[3] ಉತ್ಪತ್ತಿ ೨೧, ೧೦.

ವನ್ನು ಹಿಡಿಯುವದಿಲ್ಲವೆಂದು ಕರ್ತನಲ್ಲಿ ನಿಮ್ಮನ್ನು ಕುರಿತು ಭರವಸ ಉಂಟು. ನಿಮ್ಮಲ್ಲಿ ಭೇದವನ್ನು ಹುಟ್ಟಿಸುವವನು ಯಾವನಾದರೂ ಸರಿಯೇ ಬರುವ ದಂಡನೆಯನ್ನು ಅನುಭವಿಸುವನು. 11 ನಾನಾದರೆ, ಸಹೋದರರೇ, ಸುನ್ನತಿಯಾಗಬೇಕೆಂದು ಇನ್ನೂ ಸಾರುವವನಾಗಿದ್ದರೆ, ಇನ್ನು ನನಗೆ ಹಿಂಸೆಯಾಗುವದು ಯಾಕೆ? ಆ ಪಕ್ಷದಲ್ಲಿ ಶಿಲುಬೆಯ ದೆಸೆಯಿಂದ ಉಂಟಾದ ಆಕ್ಷೇಪವು ಹೋಯಿತಲ್ಲಾ? 12 ನಿಮ್ಮನ್ನು ಕಳವಳ ಪಡಿಸುವವರು ಅಂಗಚ್ಛೇದನೆಯನ್ನಾದರೂ ಮಾಡಿಕೊಂಡರೆ ವಾಸಿ.

### ನೇಮನಿಷ್ಠೆಗಳ ಅಧಿಕಾರವನ್ನು ತಪ್ಪಿಸಿ ಬಿಡುಗಡೆಯನ್ನು ಹೊಂದಿದವರು ಮನಸ್ಸು ಬಂದಂತೆ ನಡೆಯದೆ ಪವಿತ್ರಾತ್ಮನಿಗೆ ಅನುಗುಣವಾಗಿ ಯೋಗ್ಯರಾಗಿ ನಡೆಯುವರು.

13 ಸಹೋದರರೇ, ನೀವು ಸ್ವತಂತ್ರರಾಗಿರಬೇಕೆಂದು ದೇವರು ನಿಮ್ಮನ್ನು ಕರೆದನು. ಆದರೆ ನಿಮಗಿರುವ ಸ್ವಾತಂತ್ರ್ಯವನ್ನು ಶರೀರಭಾವಕ್ಕೆ ಆಸ್ಪದವಾಗಿ ಬಳಸದೆ, ಪ್ರೀತಿಯಿಂದ ಒಬ್ಬರಿಗೊಬ್ಬರು ಸೇವೆ ಮಾಡಿರಿ. 14 ನೀನು ನಿನ್ನನ್ನು ಪ್ರೀತಿಸುವಂತೆ ನಿನ್ನ ನೆರೆಯವನನ್ನು ಪ್ರೀತಿಸು ಎಂಬ ಒಂದೇ ಮಾತಿನಲ್ಲಿ ಧರ್ಮಶಾಸ್ತ್ರವೆಲ್ಲಾ ಅಡಕವಾಗಿದೆ. 15 ಆದರೆ ನೀವು ಒಬ್ಬರನ್ನೊಬ್ಬರು ಕಚ್ಚಿ ಹರಕೊಂಡು ನುಂಗುವವರಾದರೆ, ಒಬ್ಬರಿಂದೊಬ್ಬರು ನಾಶವಾದೀರಿ, ನೋಡಿರಿ.

16 ನಾನು ಹೇಳುವದೇನಂದರೆ, ಪವಿತ್ರಾತ್ಮನನ್ನು ಅನುಸರಿಸಿ ನಡೆದುಕೊಳ್ಳಿರಿ; ಆಗ ನೀವು ಶರೀರಭಾವದ ಅಭಿಲಾಷೆಗಳನ್ನು ಎಷ್ಟು ಮಾತ್ರಕ್ಕೂ ನೆರವೇರಿಸುವದಿಲ್ಲ. 17 ಯಾಕಂದರೆ ಶರೀರಭಾವವು ಅಭಿಲಾಷಿಸುವದು ಆತ್ಮನಿಗೆ ವಿರುದ್ಧವಾಗಿದೆ, ಆತ್ಮನು ಅಭಿಲಾಷಿಸುವದು ಶರೀರಭಾವಕ್ಕೆ ವಿರುದ್ಧವಾಗಿದೆ. ಇವು ಒಂದಕ್ಕೊಂದು ವಿರುದ್ಧವಾಗಿರುವದರಿಂದ ನೀವು ಮಾಡಲಿಚ್ಛೈಸುವದನ್ನೂ ಮಾಡದವರಾಗಿದ್ದೀರಿ. 18 ಆದರೆ ನೀವು ಆತ್ಮನಿಂದ ನಡಿಸಿಕೊಳ್ಳುವವರಾದರೆ, ನೇಮನಿಷ್ಠೆಗಳಿಗೆ ಅಧೀನರಲ್ಲ. 19 ಶರೀರಭಾವದ ಕರ್ಮಗಳು ಪ್ರಸಿದ್ಧವಾಗಿಯೇ ಅವೆ; ಯಾವವಂದರೆ—ಜಾರತ್ವ ಬಂಡುತನ ನಾಚಿಕೆಗೇಡಿತನ 20 ವಿಗ್ರಹಾರಾಧನೆ ಮಾಟ ಹಗೆತನ ಜಗಳ ಹೊಟ್ಟೇಕಿಚ್ಚು ಸಿಟ್ಟು ಕಕ್ಷ ಭೇದ ಭಿನ್ನಮತ 21 ಮತ್ಸರ ಕುಡಿಕತನ ದುಂದೌತನ ಇಂಥವುಗಳೇ. ಇವುಗಳ ವಿಷಯದಲ್ಲಿ—ಇಂಥಾ ಕಾರ್ಯಗಳನ್ನು ನಡಿಸುವವರು ದೇವರ ರಾಜ್ಯಕ್ಕೆ ಬಾಧ್ಯರಾಗುವದಿಲ್ಲವೆಂದು ನಾನು ಹಿಂದೆ ಹೇಳಿದಂತೆಯೇ ಈಗಲೂ ನಿಮ್ಮನ್ನು ಎಚ್ಚರಿಸುತ್ತೇನೆ. 22 ಆದರೆ ದೇವರಾತ್ಮನಿಂದ ಉಂಟಾಗುವ ಫಲವೇನಂದರೆ—ಪ್ರೀತಿ ಸಂತೋಷ ಸಮಾಧಾನ ದೀರ್ಘಶಾಂತಿ ದಯೆ ಉಪಕಾರ 23 ನಂಬಿಕೆ ಸಾಧುತ್ವ ಶಮೆದಮೆ ಇಂಥವುಗಳೇ. ಇಂಥವುಗಳನ್ನು ಯಾವ ಧರ್ಮಶಾಸ್ತ್ರವೂ ಆಕ್ಷೇಪಿಸುವದಿಲ್ಲ. 24 ಕ್ರಿಸ್ತಯೇಸುವಿನವರು ತಮ್ಮ ಶರೀರಭಾವವನ್ನು ಅದರ ವಿಷಯಾಭಿಲಾಷೆ ಸ್ವೇಚ್ಛಾಭಿಲಾಷೆ ಸಹಿತ ಶಿಲುಬೆಗೆ ಹಾಕಿದವರು.

ಕ್ರೈಸ್ತರು ಪವಿತ್ರಾತ್ಮಪ್ರೇರಿತರಾಗಿ ನಡೆಯಬೇಕಾದ ರೀತಿಯ ವಿಷಯದಲ್ಲಿ ಕೆಲವು ಬುದ್ಧಿಮಾತುಗಳು.

25, 26 ನಾವು ಆತ್ಮನಿಂದ ಜೀವಿಸುತ್ತಿರಲಾಗಿ, ಆತ್ಮನನ್ನನುಸರಿಸಿ ನಡೆಯೋಣ. ಅಹಂಕಾರಿಗಳೂ ಒಬ್ಬರನ್ನೊಬ್ಬರು ಕೆಣಕುವವರೂ ಒಬ್ಬರ ಮೇಲೊಬ್ಬರು ಮತ್ಸರವುಳ್ಳವರೂ ಆಗದೆ ಇರೋಣ.

**6** ಸಹೋದರರೇ, ನಿಮ್ಮಲ್ಲಿ ಯಾರಾದರೂ ಯಾವದೋ ಒಂದು ದೋಷದಲ್ಲಿ ಸಿಕ್ಕಿದರೆ, ಅಂಥವನನ್ನು ಆತ್ಮನಿಂದ ನಡಿಸಿಕೊಳ್ಳುವ ನೀವು ಶಾಂತಭಾವದಿಂದ ತಿದ್ದಿ ಸರಿಮಾಡಿರಿ. ನೀನಾದರೂ ದುಷ್ಪ್ರೇರಣೆಗೆ ಒಳಗಾಗದಂತೆ ನಿನ್ನ ವಿಷಯದಲ್ಲಿ ಎಚ್ಚರಿಕೆಯಾಗಿರು.
2 ಒಬ್ಬರು ಮತ್ತೊಬ್ಬರ ಭಾರವನ್ನು ಹೊತ್ತುಕೊಳ್ಳಲಿ; ಹೀಗೆ ಕ್ರಿಸ್ತನ ನಿಯಮವನ್ನು[1]
3 ನೆರವೇರಿಸಿರಿ. ಯಾವನಾದರೂ ಅಲ್ಪನಾಗಿದ್ದು ತಾನು ದೊಡ್ಡವನೆಂದು ಭಾವಿಸಿ
4 ಕೊಂಡರೆ, ತನ್ನನ್ನು ತಾನೇ ಮೋಸಗೊಳಿಸಿದವನಾಗಿದ್ದಾನೆ. ಪ್ರತಿಯೊಬ್ಬನು ತಾನು ಮಾಡಿದ ಕೆಲಸವನ್ನು ಪರಿಶೋಧಿಸಲಿ; ಆಗ ಅವನು ತನ್ನ ನಿಮಿತ್ತದಿಂದ ಹೆಚ್ಚಳಪಡುವ
5 ದಕ್ಕೆ ಆಸ್ಪದವಾಗುವದೇ ಹೊರತು ಮತ್ತೊಬ್ಬರ ನಿಮಿತ್ತದಿಂದಾಗುವದಿಲ್ಲ. ಯಾಕಂದರೆ ಪ್ರತಿಯೊಬ್ಬನು ಸ್ವಂತ ಹೊರೆಯನ್ನು ಹೊತ್ತುಕೊಳ್ಳಬೇಕು.
6 ದೇವರ ವಾಕ್ಯದಲ್ಲಿ ಉಪದೇಶಹೊಂದುವವನು ಉಪದೇಶಮಾಡುವವನಿಗೆ ತನಗಿರುವ
7 ಎಲ್ಲಾ ಒಳ್ಳೆಯವುಗಳಲ್ಲಿ ಪಾಲು ಕೊಡಲಿ. ಮೋಸಹೋಗಬೇಡಿರಿ; ದೇವರು ತಿರಸ್ಕಾರ ಸಹಿಸುವವನಲ್ಲ[2]. ಮನುಷ್ಯನು ತಾನು ಏನು ಬಿತ್ತುತ್ತಾನೋ ಅದನ್ನೇ ಕೊಯ್ಯ
8 ಬೇಕು. ತನ್ನ ಶರೀರಭಾವವನ್ನು ಕುರಿತು[3] ಬಿತ್ತುವವನು ಆ ಭಾವದಿಂದ ನಾಶನವನ್ನು ಕೊಯ್ಯುವನು. ಆತ್ಮನನ್ನು ಕುರಿತು[4] ಬಿತ್ತುವವನು ಆತ್ಮನಿಂದ ನಿತ್ಯಜೀವವನ್ನು
9 ಕೊಯ್ಯುವನು. ಒಳ್ಳೇದನ್ನು ಮಾಡುವದರಲ್ಲಿ ಬೇಸರಗೊಳ್ಳದೆ ಇರೋಣ. ಯಾ
10 ಕಂದರೆ ಮನಗುಂದದಿದ್ದರೆ, ತಕ್ಕ ಸಮಯದಲ್ಲಿ ಬೆಳೆಯನ್ನು ಕೊಯ್ಯುವೆವು. ಆದದರಿಂದ ಸಮಯವಿರಲಾಗಿ ಎಲ್ಲರಿಗೆ ಒಳ್ಳೇದನ್ನು ಮಾಡೋಣ; ಮುಖ್ಯವಾಗಿ ಒಂದೇ ಮನೆಯವರಂತಿರುವ ಕ್ರಿಸ್ತನಂಬಿಕೆಯುಳ್ಳವರಿಗೆ ಮಾಡೋಣ.

ಕಡೇ ಮಾತುಗಳು; ಪೌಲನ ಸ್ವಂತ ಕೈಯಿಂದ ಬರೆದವುಗಳು.

11 ಇಗೋ, ಸ್ವಂತ ಕೈಯಿಂದ ಎಂಥಾ ದೊಡ್ಡ ಅಕ್ಷರಗಳಲ್ಲಿ ನಿಮಗೆ ಬರೆಯುತ್ತಾ
12 ಇದ್ದೇನೆ. ಬಹಿರಾಚಾರಗಳಿಂದ ಮಾನ ಪಡೆಯಬೇಕೆಂದಿರುವವರು ಸುನ್ನತಿಮಾಡಿಸಿಕೊಳ್ಳಿರಿ ಎಂಬದಾಗಿ ನಿಮ್ಮನ್ನು ಬಲಾತ್ಕರಿಸುತ್ತಾರೆ. ತಮಗೆ ಕ್ರಿಸ್ತನ ಶಿಲುಬೆಯ ದೆಸೆಯಿಂದ ಹಿಂಸೆ
13 ಯಾಗಬಾರದೆಂಬುವದೊಂದೇ ಅವರ ಉದ್ದೇಶ. ಸುನ್ನತಿಮಾಡಿಸಿಕೊಳ್ಳುವ ತಾವಾದರೂ ಧರ್ಮಶಾಸ್ತ್ರವನ್ನು ಕೈಕೊಂಡು ನಡಿಯುವದಿಲ್ಲ. ಅವರು ನಿಮ್ಮ ಶರೀರದ ವಿಷಯದಲ್ಲಿ ಹೆಚ್ಚಳಪಡುವದಕ್ಕಾಗಿ ನಿಮಗೆ ಸುನ್ನತಿಯಾಗಬೇಕೆಂದು ಅಪೇಕ್ಷಿಸುತ್ತಾರೆ.

---

[1] ಅಥವಾ, ಧರ್ಮಶಾಸ್ತ್ರವನ್ನು. [2] ಅಥವಾ, ವಂಚನೆಗೆ ಒಳಗಾಗಲಾರನು.
[3] ಅಥವಾ, ಶರೀರಭಾವದಲ್ಲಿ. [4] ಅಥವಾ, ಆತ್ಮದಲ್ಲಿ.

ನನಗಾದರೋ ನಮ್ಮ ಕರ್ತನಾದ ಯೇಸು ಕ್ರಿಸ್ತನ ಶಿಲುಬೆಯ ವಿಷಯದಲ್ಲಿ ಹೊರತು 14 ಹೆಚ್ಚಳಪಡುವದು ಬೇಡವೇ ಬೇಡ. ಆತನ ಮೂಲಕ[1] ಲೋಕವು ಶಿಲುಬೆಗೆ ಹಾಕಿಸಿಕೊಂಡು ನನ್ನ ಪಾಲಿಗೆ ಸತ್ತಿತು, ನಾನು ಶಿಲುಬೆಗೆ ಹಾಕಿಸಿಕೊಂಡು ಲೋಕದ ಪಾಲಿಗೆ ಸತ್ತೆನು. ಸುನ್ನತಿಯಾಗುವದರಲ್ಲಿ ಏನೂ ಇಲ್ಲ, ಸುನ್ನತಿಯಾಗದೆ ಇರುವದರಲ್ಲಿಯೂ 15 ಏನೂ ಇಲ್ಲ; ಹೊಸ ಸೃಷ್ಟಿಯೇ ಬೇಕು. ಈ ಸೂತ್ರಕ್ಕೆ ಸರಿಯಾಗಿ ನಡೆಯುವವರೆಲ್ಲ 16 ರಿಗೆ ಅಂದರೆ ದೇವರ ಇಸ್ರಯೇಲ್ಯರಿಗೆ ಶಾಂತಿಯೂ ಕರುಣೆಯೂ ಆಗಲಿ.

ಇನ್ನು ಮೇಲೆ ಯಾರೂ ನನ್ನನ್ನು ತೊಂದರೆ ಪಡಿಸಬಾರದು; ನನ್ನ ದೇಹದಲ್ಲಿ ಯೇಸು 17 ವಿನ ಮುದ್ರೆಗಳು ಹಾಕಿರುತ್ತವಲ್ಲಾ.

ಸಹೋದರರೇ, ನಮ್ಮ ಕರ್ತನಾದ ಯೇಸು ಕ್ರಿಸ್ತನ ಕೃಪೆಯು ನಿಮ್ಮ ಆತ್ಮದೊಂದಿ 18 ಗಿರಲಿ. ಆಮೆನ್.

---

[1] ಅಥವಾ, ಆ ಶಿಲುಬೆಯ ಮೂಲಕ.

# THE EPISTLE OF SAINT PAUL TO THE EPHESIANS

# ಪೌಲನು ಎಫೆಸದವರಿಗೆ ಬರೆದ ಪತ್ರಿಕೆ

### ಒಕ್ಕಣೆ.

1 ದೇವರ ಚಿತ್ತಾನುಸಾರವಾಗಿ ಕ್ರಿಸ್ತ ಯೇಸುವಿನ ಅಪೊಸ್ತಲನಾದ ಪೌಲನು ಎಫೆಸದಲ್ಲಿರುವ[1] ದೇವಜನರಿಗೂ ಕ್ರಿಸ್ತ ಯೇಸುವಿನಲ್ಲಿ ನಂಬಿಕೆಯಿಟ್ಟಿರುವವರಿಗೂ ಬರೆಯುವದೇ 2 ನಂದರೆ—ನಮ್ಮ ತಂದೆಯಾದ ದೇವರಿಂದಲೂ ಕರ್ತನಾದ ಯೇಸು ಕ್ರಿಸ್ತನಿಂದಲೂ ನಿಮಗೆ ಕೃಪೆಯೂ ಶಾಂತಿಯೂ ಆಗಲಿ.

### ದೇವರು ಕ್ರಿಸ್ತನಲ್ಲಿ ಅನುಗ್ರಹಿಸಿದ ಆತ್ಮೀಯ ವರಗಳಿಗಾಗಿ ಪೌಲನು ಮಾಡುವ ಸ್ತೋತ್ರ.

3 ನಮ್ಮ ಕರ್ತನಾದ ಯೇಸು ಕ್ರಿಸ್ತನ ದೇವರೂ ತಂದೆಯೂ ಆಗಿರುವಾತನಿಗೆ ಸ್ತೋತ್ರ. ಆತನು ಪರಲೋಕವಿಷಯಗಳಲ್ಲಿ ಸಕಲ ಆತ್ಮೀಯ ವರಗಳನ್ನು ನಮಗೆ ಕ್ರಿಸ್ತ ಯೇಸುವಿ 4 ನಲ್ಲಿ ಅನುಗ್ರಹಿಸಿದ್ದಾನೆ. ಹ್ಯಾಗಂದರೆ ನಾವು ಪ್ರೀತಿಯಲ್ಲಿ ನಡೆದು ಆತನ ಸನ್ನಿಧಿಯಲ್ಲಿ ಪರಿಶುದ್ಧರಾಗಿಯೂ ದೋಷವಿಲ್ಲದವರಾಗಿಯೂ ಇರಬೇಕೆಂದು ನಮ್ಮನ್ನು ಜಗದುತ್ಪತ್ತಿಗೆ 5-6 ಮುಂಚೆ ಕ್ರಿಸ್ತನಲ್ಲಿ ಆರಿಸಿಕೊಂಡನು. ಆತನು ತನ್ನ ಕೃಪೆಯನ್ನು ಪ್ರಖ್ಯಾತಿಗೆ ತರಬೇಕೆಂದು ನಮ್ಮನ್ನು ಯೇಸು ಕ್ರಿಸ್ತನ ಮೂಲಕ ತನ್ನ ಪುತ್ರರನ್ನಾಗಿ ಸ್ವೀಕರಿಸುವದಕ್ಕೆ ದಯಾಪೂರ್ವಕವಾದ ತನ್ನ ಚಿತ್ತಾನುಸಾರವಾಗಿ ಮೊದಲೇ ಸಂಕಲ್ಪ ಮಾಡಿದ್ದನು. 7 ಈ ಕೃಪಾದಾನವು ಆತನ ಪ್ರಿಯನಲ್ಲಿಯೇ ನಮಗೆ ದೊರೆಯಿತು. ಈತನು ನಮಗೋಸ್ಕರ ತನ್ನ ರಕ್ತವನ್ನು ಸುರಿಸಿದ್ದರಿಂದ ನಮ್ಮ ಅಪರಾಧಗಳು ಪರಿಹಾರವಾಗಿ ನಮಗೆ 8 ಬಿಡುಗಡೆಯಾಯಿತು. ಇದು ದೇವರ ಕೃಪಾತಿಶಯವೇ. ಈ ಕೃಪೆಯನ್ನು ಇನ್ನೂ ಹೆಚ್ಚಾಗಿ ತೋರಿಸುವದಕ್ಕಾಗಿ ಆತನು ರಹಸ್ಯವಾದ ತನ್ನ ಸಂಕಲ್ಪವನ್ನು ನಮಗೆ ತಿಳಿಯಪಡಿಸಿದ್ದರಲ್ಲಿ ನಮಗೆ ವಿಶೇಷವಾದ ಜ್ಞಾನವನ್ನೂ ಬುದ್ಧಿಯನ್ನೂ ಕೊಟ್ಟಿದ್ದಾನೆ.

---

[1] ಕೆಲವು ಪ್ರತಿಗಳಲ್ಲಿ ಎಫೆಸದಲ್ಲಿರುವ ಎಂಬ ಮಾತು ಇಲ್ಲ; ಕೊಲೊಸ್ಸೆ. ೪, ೧೬ ನೋಡು.

ತಾನು ಕಾಲವು ಪರಿಪೂರ್ಣವಾದಾಗ ನಿರ್ವಹಿಸಬೇಕಾದ ಒಂದು ಕೃಪೆಯುಳ್ಳ 9-10 ಸಂಕಲ್ಪವನ್ನು ಆತನು ಕ್ರಿಸ್ತನಲ್ಲಿ ಮೊದಲೇ ನಿಷ್ಕರ್ಷೆ ಮಾಡಿಕೊಂಡಿದ್ದನು. ಅದೇನಂದರೆ ಭೂಪರಲೋಕಗಳಲ್ಲಿ ಇರುವ ಸಮಸ್ತವನ್ನೂ ಕ್ರಿಸ್ತನಲ್ಲಿ ಒಂದಾಗಿ ಕೂಡಿಸಬೇಕೆಂಬುವದೇ. ಕ್ರಿಸ್ತನಲ್ಲಿಯೇ ಸಮಸ್ತವು ಒಂದಾಗುವದು. ಇದಲ್ಲದೆ ಆತನಲ್ಲಿ ನಾವು 11-12 ದೇವರ ಸ್ವಕೀಯ ಪ್ರಜೆಯಾದೆವು[1]. ಬರಬೇಕಾದ ಕ್ರಿಸ್ತನನ್ನು ಎದುರುನೋಡುತ್ತಿದ್ದ ನಾವು ತನ್ನ ಮಹಿಮೆಯನ್ನು ಪ್ರಖ್ಯಾತಿಪಡಿಸಬೇಕೆಂದು ಸಮಸ್ತ ಕಾರ್ಯಗಳನ್ನು ತನ್ನ ಇಷ್ಟದಂತೆ ನಡಿಸುವ ದೇವರು ನಮ್ಮನ್ನು ತನ್ನ ಸಂಕಲ್ಪದ ಮೇರೆಗೆ ಆರಿಸಿಕೊಂಡನು. ನಿಮ್ಮ ರಕ್ಷಣೆಯ ವಿಷಯವಾದ ಸುವಾರ್ತೆಯೆಂಬ ಸತ್ಯವಾಕ್ಯವನ್ನು ಕೇಳಿ ಕ್ರಿಸ್ತನಲ್ಲಿ 13 ನಂಬಿಕೆಯಿಟ್ಟವರಾದ ನೀವು ಸಹ ವಾಗ್ದಾನಮಾಡಲ್ಪಟ್ಟ ಪವಿತ್ರಾತ್ಮನಿಂದ ಮುದ್ರೆ ಹಾಕಿಸಿಕೊಂಡಿರಿ. ದೇವರು ಸಂಪಾದಿಸಿಕೊಂಡ ಜನರಿಗೆ ವಿಮೋಚನೆಯಾಗುವದೆಂಬು 14 ವದಕ್ಕೆ ಪವಿತ್ರಾತ್ಮನು ನಮ್ಮ ಬಾಧ್ಯತೆಗೆ ಸಂಚಕಾರವಾಗಿದ್ದಾನೆ[2]. ಆ ವಿಮೋಚನೆಯು ದೇವರ ಮಹಿಮೆಗೆ ಎಷ್ಟೋ ಪ್ರಖ್ಯಾತಿಯನ್ನು ಉಂಟುಮಾಡುವದು.

ದೇವಜನರ ಮಹಾಪದವಿಯ ವಿಷಯದಲ್ಲಿ ದೇವರು ಸಭೆಯವರಿಗೆ ಹೆಚ್ಚಾದ ಜ್ಞಾನವನ್ನು ದಯಪಾಲಿಸಬೇಕೆಂದು ಪೌಲನು ಮಾಡುವ ಪ್ರಾರ್ಥನೆ.

ಹೀಗಿರಲಾಗಿ ಕರ್ತನಾದ ಯೇಸುವಿನಲ್ಲಿ ನೀವು ಇಟ್ಟಿರುವ ನಂಬಿಕೆಯನ್ನು ಕುರಿತೂ 15 ದೇವಜನರೆಲ್ಲರಿಗೆ ನೀವು ತೋರಿಸುವ ಪ್ರೀತಿಯನ್ನು ಕುರಿತೂ ಕೇಳಿ, ನಾನು ನಿಮ್ಮ 16 ನಿಮಿತ್ತವಾಗಿ ಎಡೆಬಿಡದೆ ದೇವರಿಗೆ ಸ್ತೋತ್ರಮಾಡುತ್ತೇನೆ. ನನ್ನ ಪ್ರಾರ್ಥನೆಗಳಲ್ಲಿ ನಿಮಗೋಸ್ಕರ ವಿಜ್ಞಾಪನೆ ಮಾಡಿ—ನಮ್ಮ ಕರ್ತನಾದ ಯೇಸು ಕ್ರಿಸ್ತನ ದೇವರೂ 17 ಪ್ರಭಾವಸ್ವರೂಪನಾದ ತಂದೆಯೂ ಆಗಿರುವಾತನು ತನ್ನ ವಿಷಯವಾಗಿ ತಿಳುವಳಿಕೆಯನ್ನು ಕೊಟ್ಟು, ಇದುವರೆಗೆ ಗುಪ್ತವಾಗಿದ್ದ ಸತ್ಯಾರ್ಥಗಳನ್ನು ತಿಳುಕೊಳ್ಳುವ ಜ್ಞಾನವುಳ್ಳ ಆತ್ಮವನ್ನು ನಿಮಗೆ ದಯಪಾಲಿಸಬೇಕೆಂದು ಪ್ರಾರ್ಥಿಸುತ್ತೇನೆ. ಆತನು 18 ನಿಮ್ಮ ಮನೋನೇತ್ರಗಳನ್ನು ಬೆಳಗಿಸಿ, ಆತನಿಂದ ಕರಿಸಿಕೊಂಡವರು ನಿರೀಕ್ಷಿಸುವ ಪದವಿ ಎಂಥಾದ್ದೆಂಬುವದನ್ನೂ ದೇವಜನರೆಂಬ ಆತನ ಸ್ವಾಸ್ಥ್ಯದ ಮಹಿಮಾತಿಶಯವು ಎಂಥಾದ್ದೆಂಬುವದನ್ನೂ ನಂಬುವವರಾದ ನಮ್ಮಲ್ಲಿ ಆತನು ಸಾಧಿಸುವ ಪರಾಕ್ರಮವು ಎಷ್ಟು 19 ಅತಿಶಯವಾದದ್ದೆಂಬುವದನ್ನೂ ನೀವು ತಿಳುಕೊಳ್ಳುವಂತೆ ಅನುಗ್ರಹಿಸಲಿ. ಆತನ ಬಲಾತಿ 20 ಶಯವು ಎಷ್ಟು ಮಹತ್ತಾದದ್ದೆಂಬುವದು ಕ್ರಿಸ್ತನಲ್ಲಿ ತೋರಿಬಂದಿದೆ. ಹ್ಯಾಗಂದರೆ ಆತನು ಸತ್ತಿದ್ದ ಕ್ರಿಸ್ತನನ್ನು ಬದುಕಿಸಿ, ಪರಲೋಕದೊಳಗೆ ಸಕಲ ರಾಜತ್ವ ಅಧಿಕಾರ ಮಹತ್ವ 21 ಪ್ರಭುತ್ವಾದಿಗಳ ಮೇಲೆಯೂ ಈ ಲೋಕದಲ್ಲಿ ಮಾತ್ರವಲ್ಲದೆ ಬರುವ ಲೋಕದಲ್ಲಿ ಸಹ ಹೆಸರುಗೊಂಡವರೆಲ್ಲರ ಮೇಲೆಯೂ ತನ್ನ ಬಲಪಾರ್ಶ್ವದಲ್ಲಿ ಕೂಡ್ರಿಸಿಕೊಂಡನು. ಆತನು 22 ಸಮಸ್ತವನ್ನೂ ಕ್ರಿಸ್ತನ ಪಾದಗಳ ಕೆಳಗೆ ಹಾಕಿದನು. ಇದಲ್ಲದೆ ಆತನನ್ನು ಎಲ್ಲಾದರ

[1] ಅಥವಾ, ನಮಗಿರುವ ಭಾಧ್ಯತೆಯನ್ನು ಹೊಂದಿದೆವು.

[2] ಕೆಲವು ಪ್ರತಿಗಳಲ್ಲಿ — ಪವಿತ್ರಾತ್ಮವರವು ನಮ್ಮ ಬಾಧ್ಯತೆಗೆ ಸಂಚಕಾರವಾಗಿದೆ ಎಂದು ಬರೆದಿದೆ.

23 ಮೇಲೆ ಇರಿಸಿ ಸಭೆಗೆ ಶಿರಸ್ಸಾಗಿ ನೇಮಿಸಿದನು. ಸಭೆಯು ಆತನ ದೇಹವಾಗಿದೆ; ಎಲ್ಲವನ್ನೂ ಎಲ್ಲಾ ಸಂಬಂಧದಲ್ಲಿ ವ್ಯಾಪಿಸುವಾತನಿಂದ ಅದು ಪರಿಪೂರ್ಣತೆಯುಳ್ಳದ್ದಾಗಿದೆ[1].

ದೇವರು ಪಾಪಾತ್ಮರನ್ನು ರಕ್ಷಿಸಿ ಕ್ರಿಸ್ತನ ಜೀವದಲ್ಲಿ ಪಾಲುಗಾರರನ್ನಾಗಿ ಮಾಡಿದ್ದಕ್ಕೆ ಆತನ ಕೃಪೆಯೇ ಕಾರಣ.

**2** ಆತನು ಅಪರಾಧಗಳ ಮತ್ತು ಪಾಪಗಳ ದೆಸೆಯಿಂದ ಸತ್ತವರಾಗಿದ್ದ ನಿಮ್ಮನ್ನು ಸಹ 2 ಬದುಕಿಸಿದನು. ನೀವು ಪೂರ್ವದಲ್ಲಿ ಅಪರಾಧಗಳನ್ನೂ ಪಾಪಗಳನ್ನೂ ಮಾಡುವವರಾಗಿದ್ದು ಇಹಲೋಕಾಚಾರಕ್ಕೆ ಅನುಸಾರವಾಗಿ ನಡೆದುಕೊಂಡಿರಿ; ವಾಯುಮಂಡಲದಲ್ಲಿ ಅಧಿಕಾರ ನಡಿಸುವ ಅಧಿಪತಿಗೆ, ಅಂದರೆ ನಂಬಲೊಲ್ಲದವರನ್ನು ಅವಿಧೇಯತೆಗೆ 3 ಈಗ ಪ್ರೇರೇಪಿಸುವ ಆತ್ಮಕ್ಕೆ, ಅನುಸಾರವಾಗಿ ನಡೆದುಕೊಂಡಿರಿ. ನಾವೆಲ್ಲರೂ ಪೂರ್ವದಲ್ಲಿ ಅವಿಧೇಯರಾಗಿದ್ದು ಶರೀರಭಾವದ ಆಶೆಗಳಿಗೆ ಅಧೀನರಾಗಿ ಶರೀರಕ್ಕೂ ಮನಸ್ಸಿಗೂ ಸಂಬಂಧಪಟ್ಟ ಇಚ್ಛೆಗಳನ್ನು ನೆರವೇರಿಸುತ್ತಾ ನಡೆದು ಮಿಕ್ಕಾದವರಂತೆ ಸ್ವಭಾವಸಿದ್ಧವಾಗಿ 4 ದೇವರ ಕೋಪಕ್ಕೆ ಗುರಿಯಾಗಿದ್ದೆವು. ಆದರೆ ಕರುಣಾನಿಧಿಯಾಗಿರುವ ದೇವರು ನಮ್ಮ 5 ಮೇಲೆ ಮಹಾಪ್ರೀತಿಯನ್ನಿಟ್ಟು, ಅಪರಾಧಗಳ ದೆಸೆಯಿಂದ ಸತ್ತವರಾಗಿದ್ದ ನಮ್ಮನ್ನು ಕ್ರಿಸ್ತನೊಂದಿಗೆ ಬದುಕಿಸಿದನು. ಕೃಪೆಯಿಂದಲೇ ರಕ್ಷಣೆ ಹೊಂದಿದವರಾಗಿದ್ದೀರಿ. 6 ಬದುಕಿಸಿದ್ದಲ್ಲದೆ, ಕ್ರಿಸ್ತ ಯೇಸುವಿನಲ್ಲಿರುವ ನಮ್ಮನ್ನು ಆತನೊಂದಿಗೆ ಎಬ್ಬಿಸಿ, ಪರಲೋಕ 7 ದಲ್ಲಿ ಆತನೊಂದಿಗೆ ಕೂಡ್ರಿಸಿ, ತಾನು ಕ್ರಿಸ್ತ ಯೇಸುವಿನಲ್ಲಿ ನಮಗೆ ಮಾಡಿದ ಉಪಕಾರದ ಮೂಲಕ ತನ್ನ ಅಪಾರವಾದ ಕೃಪೆಯನ್ನು ಮುಂದಣಕಾಲದವರಿಗೆ ತೋರ್ಪಡಿಸಿದ್ದಾನೆ. 8 ನಂಬಿಕೆಯ ಮೂಲಕ ಕೃಪೆಯಿಂದಲೇ ರಕ್ಷಣೆಹೊಂದಿದವರಾಗಿದ್ದೀರಿ. ಆ ರಕ್ಷಣೆಯು 9 ನಿಮ್ಮಿಂದುಂಟಾದದ್ದಲ್ಲ, ಅದು ದೇವರ ವರವೇ. ಅದು ಪುಣ್ಯಕ್ರಿಯೆಗಳಿಂದ ಉಂಟಾದ 10 ದ್ದಲ್ಲ; ಆದದರಿಂದ ಹೊಗಳಿಕೊಳ್ಳುವದಕ್ಕೆ ಯಾರಿಗೂ ಆಸ್ಪದವಿಲ್ಲ. ನಾವು ಆತನಿಂದಲೇ ನಿರ್ಮಿತರಾದೆವು; ಸತ್ಕಾರ್ಯಗಳನ್ನು ಮಾಡುವದಕ್ಕಾಗಿಯೇ ಕ್ರಿಸ್ತ ಯೇಸುವಿನಲ್ಲಿ ಸೃಷ್ಟಿಸಲ್ಪಟ್ಟೆವು. ನಾವು ಸತ್ಕಾರ್ಯಗಳನ್ನು ನಡಿಸುವವರಾಗಿ ಬದುಕಬೇಕೆಂದು ದೇವರು ನಮ್ಮನ್ನು ಮೊದಲೇ ನೇಮಿಸಿದನು.

ಯೆಹೂದ್ಯರಿಗೆ ಉಂಟಾದ ಎಲ್ಲಾ ವಾಗ್ದಾನಗಳಲ್ಲಿ ಅನ್ಯಜನಗಳು ಕ್ರಿಸ್ತನ ಮುಖಾಂತರ ಸಮಭಾಗಿಗಳಾದರೆಂದು ಬೋಧನೆ. (ಕೊಲೊಸ್ಸೆ. 1, 21—29.)

11 ನೀವು ಜನ್ಮದಿಂದ ಅನ್ಯಜನರಾಗಿದ್ದೀರಿ; ಶರೀರದಲ್ಲಿ ಕೈಯಿಂದ ಸುನ್ನತಿಮಾಡಿಸಿಕೊಂಡು ಸುನ್ನತಿಯವರೆನ್ನಿಸಿಕೊಳ್ಳುವವರು ನಿಮ್ಮನ್ನು ಸುನ್ನತಿಯಿಲ್ಲದವರೆಂದು ಹೇಳು 12 ತ್ತಾರೆ. ನೀವು ಪೂರ್ವಕಾಲದಲ್ಲಿ ಕ್ರಿಸ್ತನನ್ನು ಸೇರದವರಾಗಿದ್ದು ಇಸ್ರಯೇಲ್ಯ ಹಕ್ಕಿನಲ್ಲಿ ಪಾಲಿಲ್ಲದವರಾಗಿಯೂ ಅಬ್ರಹಾಮನಿಗೆ ಉಂಟಾದ ವಾಗ್ದಾನಕ್ಕೆ ಸಂಬಂಧವಾದ ಒಡಂಬ

[1] ಅಥವಾ, ಅದು ಆತನನ್ನು ಪರಿಪೂರ್ಣ ಮಾಡುತ್ತದೆ; ಮತ್ತು ಆತನ ಘೋರೆತನವು ಅದರ ಎಲ್ಲಾ ಭಾಗಗಳಲ್ಲಿ ಪರಿಪೂರ್ಣವಾಗಿದೆ.

ಡಿಕೆಗಳಲ್ಲಿ ಸೇರದವರಾಗಿಯೂ ಈ ಲೋಕದಲ್ಲಿ ಯಾವ ನಿರೀಕ್ಷೆಯಿಲ್ಲದವರಾಗಿಯೂ ದೇವರನ್ನರಿಯದವರಾಗಿಯೂ ಇದ್ದಿರೆಂದು ಜ್ಞಾಪಕಮಾಡಿಕೊಳ್ಳಿರಿ. 13 ಈಗಲಾದರೋ ಮೊದಲು ದೂರವಾಗಿದ್ದ ನೀವು ಕ್ರಿಸ್ತ ಯೇಸುವನ್ನು ಸೇರಿದವರಾಗಿದ್ದು ಆತನ ರಕ್ತದ ಮೂಲಕ ಸಮೀಪಸ್ಥರಾದಿರಿ. 14 ನಿಮ್ಮನ್ನೂ ನಮ್ಮನ್ನೂ ಒಂದುಮಾಡಿದವನಾದ ಆತನೇ ನಮಗೆ ಸಮಾಧಾನಕರ್ತೃವಾಗಿದ್ದಾನೆ. ಆತನು ತನ್ನ ಶರೀರವನ್ನು ಸಮರ್ಪಿಸಿದ್ದರಲ್ಲಿ ವಿಧಿರೂಪವಾದ ಆಜ್ಞೆಗಳುಳ್ಳ ಧರ್ಮಶಾಸ್ತ್ರವನ್ನು ತೆಗೆದುಹಾಕಿ, ಇದ್ದ ದ್ವೇಷವನ್ನು ಮುಗಿಸಿ, ನಮ್ಮನ್ನು ಅಗಲಿಸಿದ ಅಡ್ಡಗೋಡೆಯನ್ನು ಕೆಡವಿಹಾಕಿದನು. 15 ಆತನು ಸಮಾಧಾನಮಾಡುವವನಾಗಿ ಉಭಯರನ್ನೂ ತನ್ನಲ್ಲಿ ಒಬ್ಬ ನೂತನ ಪುರುಷನನ್ನಾಗಿ ನಿರ್ಮಿಸಿದ್ದಾನೆ; ಇದ್ದ ದ್ವೇಷವನ್ನು ತನ್ನ ಶಿಲುಬೆಯ ಮೇಲೆ ಕೊಂದು[1] 16 ಆ ಶಿಲುಬೆಯ ಮೂಲಕ ಉಭಯರನ್ನೂ ಒಂದೇ ದೇಹದಂತಾಗ ಮಾಡಿ ದೇವರೊಂದಿಗೆ ಸಮಾಧಾನಪಡಿಸಿದ್ದಾನೆ. 17 ಇದಲ್ಲದೆ ಆತನು ಬಂದು ದೂರವಾಗಿದ್ದ ನಿಮಗೂ ಸಮಾಧಾನವನ್ನು ಮತ್ತು ಸಮೀಪವಾಗಿದ್ದವರಿಗೂ ಸಮಾಧಾನವನ್ನು ಸಾರಿದನು. 18 ಆತನ ಮೂಲಕ ನಾವೂ ನೀವೂ ಒಂದೇ ಆತ್ಮ ಹೊಂದಿದವರಾಗಿ ತಂದೆಯ ಬಳಿಗೆ ಪ್ರವೇಶಿಸುವದಕ್ಕೆ ಮಾರ್ಗವಾಯಿತು. 19 ಹೀಗಿರಲಾಗಿ ನೀವು ಇನ್ನು ಮೇಲೆ ಪರದೇಶದವರೂ ಅನ್ಯರೂ ಆಗಿರದೆ, ದೇವಜನರೊಂದಿಗೆ ಒಂದೇ ಸಂಸ್ಥಾನದವರೂ ದೇವರ ಮನೆಯವರೂ ಆಗಿದ್ದೀರಿ. 20 ಅಪೊಸ್ತಲರೂ ಪ್ರವಾದಿಗಳೂ[2] ಎಂಬ[3] ಅಸ್ತಿವಾರದ ಮೇಲೆ ನೀವು ಮಂದಿರದೋಪಾದಿಯಲ್ಲಿ ಕಟ್ಟಲ್ಪಟ್ಟಿದ್ದೀರಿ. ಯೇಸು ಕ್ರಿಸ್ತನೇ ಮುಖ್ಯವಾದ ಮೂಲೆಗಲ್ಲು; 21 ಆತನಲ್ಲಿ ಕಟ್ಟಡದ ಎಲ್ಲಾ ಭಾಗಗಳು ಒಂದಕ್ಕೊಂದು ಹೊಂದಿಕೆಯಾಗಿ, ಕಟ್ಟಡವು ವೃದ್ಧಿಯಾಗುತ್ತಾ ಕರ್ತನಲ್ಲಿ ಪರಿಶುದ್ಧ ದೇವಾಲಯವಾಗುತ್ತದೆ. 22 ಆತನಲ್ಲಿ ನೀವು ಸಹ ಪವಿತ್ರಾತ್ಮನ ಮೂಲಕವಾಗಿ ದೇವರಿಗೆ ನಿವಾಸಸ್ಥಾನವಾಗುವದಕ್ಕಾಗಿ ನಮ್ಮ ಸಂಗಡ ಕಟ್ಟಲ್ಪಡುತ್ತಾ ಇದ್ದೀರಿ.

ಪೌಲನು ತಾನು ಮೇಲ್ಕಂಡ ಸತ್ಯಾರ್ಥವನ್ನು ಪ್ರಕಟಿಸುವದಕ್ಕೆ ನೇಮಕವಾದವನೂ ಅದರ ನಿಮಿತ್ತವೇ ಸೆರೆಬಿದ್ದವನೂ ಆಗಿದ್ದೇನೆಂದು ಹೇಳಿ ಅನ್ಯಜನರಾದ ಕ್ರೈಸ್ತರಿಗೋಸ್ಕರ ಪ್ರಾರ್ಥನೆ ಮಾಡಿದ್ದು.

**3** ಹೀಗಿರುವದರಿಂದ ಅನ್ಯಜನರಾಗಿರುವ ನಿಮ್ಮ ನಿಮಿತ್ತ ಕ್ರಿಸ್ತ ಯೇಸುವಿನ ಸೆರೆಯವನಾದ ಪೌಲನೆಂಬ ನಾನು ನಿಮಗೋಸ್ಕರ ಪ್ರಾರ್ಥಿಸುತ್ತೇನೆ. 2 ನಿಮಗೋಸ್ಕರ ನಿರ್ವಹಿಸುವದಕ್ಕಾಗಿ ದೇವರು ನನಗೆ ಕೃಪೆಯಾಗಿ ಕೊಟ್ಟ ಕೆಲಸವನ್ನು ಕುರಿತು ನೀವು ಕೇಳಿದ್ದೀರಲ್ಲಾ. 3 ಇದು ವರೆಗೆ ಗುಪ್ತವಾಗಿದ್ದ ಒಂದು ಸಂಗತಿ ನನಗೆ ತಿಳಿಸಲ್ಪಟ್ಟಿತು. ಅದನ್ನು ಕುರಿತು ನಾನು ಹಿಂದೆ ಸಂಕ್ಷೇಪವಾಗಿ ಬರೆದಿದ್ದೇನೆ; 4 ಬರೆದದ್ದನ್ನು ನೀವು ಓದಿನೋಡಿದರೆ, ಕ್ರಿಸ್ತನ ವಿಷಯವಾದ ಮರ್ಮವನ್ನು ಕುರಿತು ನನಗಿರುವ ಗ್ರಹಿಕೆಯನ್ನು ನೀವು ತಿಳುಕೊಳ್ಳಬಹುದು. 5 ಆ ಮರ್ಮವು ಈ ಕಾಲದಲ್ಲಿ ದೇವರ ಪರಿಶುದ್ಧ ಅಪೊಸ್ತಲರಿಗೂ ಪ್ರವಾದಿಗಳಿಗೂ ಪವಿತ್ರಾತ್ಮನಿಂದ ತಿಳಿಸಲ್ಪಟ್ಟಂತೆ ಬೇರೆ ಕಾಲಗಳಲ್ಲಿದ್ದ ಜನರಿಗೆ ತಿಳಿಸಲ್ಪಡಲಿಲ್ಲ. 6 ಅದು ಯಾವದಂದರೆ, ಅನ್ಯಜನರು ಸುವಾರ್ತೆಯ ಮೂಲಕ ಕ್ರಿಸ್ತ ಯೇಸುವಿನಲ್ಲಿರುವವ

[1] ಅಥವಾ, ಪರಿಹರಿಸಿ. [2] ಎಫೆಸ. ೪, ೧೧; ೩, ೫ ನೋಡು. [3] ಅಥವಾ, ಹಾಕಿದ.

ರಾಗಿ ಯೆಹೂದ್ಯರೊಂದಿಗೆ ಬಾಧ್ಯರೂ ಒಂದೇ ದೇಹದೊಳಗಣ ಅಂಗಗಳೂ ಅಬ್ರಹಾಮ
7 ನಿಗುಂಟಾದ ವಾಗ್ದಾನದಲ್ಲಿ ಪಾಲುಗಾರರೂ ಆಗಿದ್ದಾರೆಂಬುವದೇ. ದೇವರು ತನ್ನ
ಶಕ್ತಿಯ ಪ್ರಯೋಗದಲ್ಲಿ ನನಗೆ ಉಚಿತಾರ್ಥವಾಗಿ ಅನುಗ್ರಹಿಸಿದ ಕೆಲಸವನ್ನನುಸರಿಸಿ
8-9 ನಾನು ಈ ಸುವಾರ್ತೆಗೆ ಸೇವಕನಾದೆನು. ನಾನು ಕ್ರಿಸ್ತನ ಅಪ್ರಮೇಯವಾದ ಐಶ್ವ
ರ್ಯದ ವಿಷಯವಾದ ಶುಭಸಮಾಚಾರವನ್ನು ಅನ್ಯಜನರಿಗೆ ಪ್ರಸಿದ್ಧಿಪಡಿಸುವ ಹಾಗೆಯೂ
ಸಮಸ್ತವನ್ನು ಸೃಷ್ಟಿಸಿದ ದೇವರಲ್ಲಿ ಆದಿಯಿಂದ ಮರೆಯಾಗಿದ್ದ ಮರ್ಮವು ಪ್ರಕಟ
ವಾಗುವ ವಿಧ ಎಂಥಾದ್ದೆಂದು ತಿಳಿಸುವ ಹಾಗೆಯೂ ದೇವಜನರೊಳಗೆ ಅತ್ಯಲ್ಪನಾದ
10-11 ನನಗೆ ಅನುಗ್ರಹಿಸೋಣವಾಯಿತು. ದೇವರು ನಮ್ಮ ಕರ್ತನಾದ ಕ್ರಿಸ್ತನಲ್ಲಿ ಅನಾದಿ
ಕಾಲದಿಂದ ಮಾಡಿದ ಸಂಕಲ್ಪದ ಮೇರೆಗೆ, ತನ್ನ ನಾನಾ ವಿಧವಾದ ಜ್ಞಾನವು ಮೇಲಣ
ಲೋಕಗಳಲ್ಲಿರುವ ರಾಜತ್ವಗಳಿಗೂ ಅಧಿಕಾರಗಳಿಗೂ ಈಗ ಕ್ರೈಸ್ತ ಸಭೆಯ ಮೂಲಕ
12 ಗೊತ್ತಾಗಬೇಕೆಂಬದನ್ನು ಉದ್ದೇಶಿಸಿದ್ದನು. ದೇವರ ಸಾನ್ನಿಧ್ಯ ಸೇರುವದಕ್ಕೆ ನಮಗಿರುವ
ಭರವಸವುಳ್ಳ ಧೈರ್ಯವು ಕ್ರಿಸ್ತನಲ್ಲಿ ಇಟ್ಟಿರುವ ನಂಬಿಕೆಯ ಮೂಲಕ ಆತನಲ್ಲಿಯೇ ನಮಗೆ
13 ಉಂಟಾಯಿತು. ಆದದರಿಂದ ನಿಮ್ಮ ನಿಮಿತ್ತ ನನಗೆ ಉಂಟಾದ ಕಷ್ಟಗಳನ್ನು ನೋಡಿ
ನೀವು ಧೈರ್ಯಗೆಡಬಾರದೆಂದು ನಿಮ್ಮನ್ನು ಬೇಡಿಕೊಳ್ಳುತ್ತೇನೆ. ಈ ಕಷ್ಟಗಳು ನಿಮಗೆ
ಘನವನ್ನು ಉಂಟುಮಾಡುತ್ತವಷ್ಟೆ.
14-15 ಹೀಗಿರಲಾಗಿ ಯಾವ ತಂದೆಯಿಂದ ಭೂಪರಲೋಕಗಳಲ್ಲಿರುವ ಪ್ರತಿ ಜನವೂ ಹೆಸರು
ತೆಗೆದುಕೊಳ್ಳುತ್ತದೋ[1] ಆ ತಂದೆಯ ಮುಂದೆ ನಾನು ಮೊಣಕಾಲೂರಿಕೊಂಡು
16 ಪ್ರಾರ್ಥಿಸಿ—ನೀವು ದೇವರಾತ್ಮನ ಮೂಲಕ ಅಂತರ್ಯದಲ್ಲಿ ವಿಶೇಷ ಬಲ ಹೊಂದಿದವ
17 ರಾಗುವ ಹಾಗೆಯೂ ಕ್ರಿಸ್ತನು ನಿಮ್ಮ ನಂಬಿಕೆಯ ಮೂಲಕ ನಿಮ್ಮ ಹೃದಯಗಳಲ್ಲಿ
ವಾಸಮಾಡುವ ಹಾಗೆಯೂ ಆತನು ತನ್ನ ಮಹಿಮಾತಿಶಯದ ಪ್ರಕಾರ ಅನುಗ್ರಹಿಸ
18 ಬೇಕೆಂತಲೂ, ನೀವು ದೇವರ ಪ್ರೀತಿಯಲ್ಲಿ ನೆಲೆಗೊಂಡು ನಿಂತು ಅದರ[2] ಅಗಲ ಉದ್ದ
19 ಎತ್ತರ ಆಳ ಎಷ್ಟೆಂಬುವದನ್ನು ದೇವಜನರೆಲ್ಲರೊಂದಿಗೆ ಗ್ರಹಿಸಲೂ ಜ್ಞಾನಕ್ಕೆ ಮೀರುವ
ಕ್ರಿಸ್ತನ ಪ್ರೀತಿಯನ್ನು ತಿಳುಕೊಳ್ಳಲೂ ಪೂರ್ಣಶಕ್ತರಾಗಿದ್ದು ದೇವರ ಸಂಪೂರ್ಣತೆಯ
ಮಟ್ಟಿಗೂ ಪರಿಪೂರ್ಣರಾಗುವ ಹಾಗೆ ನಿಮಗೆ ದಯಪಾಲಿಸಬೇಕೆಂತಲೂ ಆತನನ್ನು
ಬೇಡಿಕೊಳ್ಳುತ್ತೇನೆ.

20 ನಮ್ಮಲ್ಲಿ ಕಾರ್ಯ ಸಾಧಿಸುವ ತನ್ನ ಶಕ್ತಿಯ ಪ್ರಕಾರ ನಾವು ಬೇಡುವದಕ್ಕಿಂತಲೂ
21 ಯೋಚಿಸುವದಕ್ಕಿಂತಲೂ ಅತ್ಯಧಿಕವಾದದ್ದನ್ನು ಮಾಡ ಶಕ್ತನಾದ ದೇವರಿಗೆ ಸಭೆಯಲ್ಲಿ
ಯೂ ಕ್ರಿಸ್ತ ಯೇಸುವಿನಲ್ಲಿಯೂ ತಲತಲಾಂತರಕ್ಕೂ ಸದಾಕಾಲವೂ ಸ್ತೋತ್ರ.
ಆಮೆನ್.

---

[1] ಅಥವಾ, ಪ್ರತಿ ಜನವೂ ತನ್ನ ಮೂಲಜನಕನಿಂದ ಹೆಸರು ತೆಗೆದುಕೊಳ್ಳುತ್ತದಷ್ಟೆ; ಯಾವಾತನು ದೇವಜನ
ರಾದ ನಮಗೆ ಮೂಲಜನಕನಾಗಿದ್ದಾನೋ.

[2] ಅಥವಾ, ಆ ಸತ್ಯಾರ್ಥದ.

ಸಭೆಯವರಿಗೆ ನಾನಾ ವರಗಳಿದ್ದಾಗ್ಯೂ ಎಲ್ಲರು ಐಕ್ಯವಾಗಿರಬೇಕು.

**4** ನೀವು ದೇವರಿಂದ ಕರೆಯಲ್ಪಟ್ಟವರಾದ ಕಾರಣ ಯೋಗ್ಯರಾಗಿ ನಡೆದುಕೊಳ್ಳ ಬೇಕೆಂದು ಕರ್ತನ ಸೇವೆಯಲ್ಲಿ ಸೆರೆಯವನಾದ ನಾನು ನಿಮ್ಮನ್ನು ಪ್ರಬೋಧಿಸುತ್ತೇನೆ. 2 ನೀವು ಪೂರ್ಣ ವಿನಯ ಸಾತ್ವಿಕತ್ವಗಳಿಂದಲೂ ದೀರ್ಘಶಾಂತಿಯಿಂದಲೂ ಕೂಡಿದವರಾಗಿ 3 ಪ್ರೀತಿಯಿಂದ ಒಬ್ಬರನ್ನೊಬ್ಬರು ಸಹಿಸಿಕೊಳ್ಳಿರಿ. ಸಮಾಧಾನವೆಂಬ ಬಂಧನದಿಂದ ಕಟ್ಟಲ್ಪಟ್ಟವರಾಗಿದ್ದು ಪವಿತ್ರಾತ್ಮನಿಂದುಂಟಾಗುವ ಐಕ್ಯವನ್ನು ಕಾಪಾಡಿಕೊಳ್ಳುವದಕ್ಕೆ ಜಾಗರೂಕರಾಗಿರ್ರಿ. 4 ನೀವೆಲ್ಲರೂ ಒಂದೇ ದೇಹಕ್ಕೆ ಸೇರಿದವರು, ಒಂದೇ ಆತ್ಮ ಹೊಂದಿದವರು, 5 ಒಂದೇ ಪದವಿಯನ್ನು ನಿರೀಕ್ಷಿಸುವದಕ್ಕೆ ಕರೆಯಲ್ಪಟ್ಟವರು; ನಿಮ್ಮೆಲ್ಲರಿಗೂ ಕರ್ತನು 6 ಒಬ್ಬನೇ, ಭರವಸವು ಒಂದೇ, ಸ್ನಾನದೀಕ್ಷೆ ಒಂದೇ. ಎಲ್ಲರಿಗೂ ತಂದೆಯಾಗಿರುವ ದೇವರು ಒಬ್ಬನೇ; ಆತನು ಎಲ್ಲರ ಮೇಲಿರುವವನೂ ಎಲ್ಲರ ಮುಖಾಂತರ ಕಾರ್ಯ ನಡಿಸುವವನೂ ಎಲ್ಲರಲ್ಲಿ ವಾಸಿಸುವವನೂ ಆಗಿದ್ದಾನೆ.

7 ಆದರೆ ಕ್ರಿಸ್ತನು ನಮ್ಮಲ್ಲಿ ಒಬ್ಬೊಬ್ಬನಿಗೆ ಅನುಗ್ರಹಿಸಿದ ಪ್ರಕಾರವೇ ಅವನವನಿಗೆ ಕೃಪಾವರವು ದೊರಕಿದೆ. 8 ಆದದರಿಂದ—

ಆತನು ಮೇಲಣ ಲೋಕಕ್ಕೆ ಏರಿಹೋದಾಗ .
ತಾನು ಜಯಿಸಿದ್ದ ಬಹು ಜನರನ್ನು ಸೆರೆ ಹಿಡುಕೊಂಡು ಹೋಗಿ
ಮನುಷ್ಯರಿಗೆ ದಾನಗಳನ್ನು ಮಾಡಿದನು[1]

ಎಂಬದಾಗಿ ಪ್ರವಾದಿಯು ಹೇಳುತ್ತಾನೆ. 9 (ಏರಿಹೋದನೆಂದು ಹೇಳಿದರಲ್ಲಿ ಕೆಳಗಣ ಲೋಕಕ್ಕೆ ಇಳಿದಿದ್ದನೆಂತಲೂ ಹೇಳಿದ ಹಾಗಾಯಿತಲ್ಲಾ. 10 ಇಳಿದುಬಂದವನು ಮೇಲಣ ಎಲ್ಲಾ ಲೋಕಗಳಿಗಿಂತ ಉನ್ನತವಾಗಿ ಏರಿಹೋದವನೇ. ಆದದರಿಂದ ಸಮಸ್ತ ಲೋಕಗಳನ್ನು ತುಂಬಿದವನಾದನು.) 11 ಆತನು ಕೆಲವರನ್ನು ಅಪೊಸ್ತಲರಾಗಿಯೂ ಕೆಲವರನ್ನು ಪ್ರವಾದಿಗಳಾಗಿಯೂ ಕೆಲವರನ್ನು ಸೌವಾರ್ತಿಕರಾಗಿಯೂ ಕೆಲವರನ್ನು ಸಭಾಪಾಲಕರಾಗಿಯೂ ಉಪದೇಶಿಗಳಾಗಿಯೂ ನೇಮಿಸಿದನು. 13 ನಾವೆಲ್ಲರು ನಂಬಿಕೆಯಿಂದಲೂ ದೇವಕುಮಾರನ ವಿಷಯವಾದ ಜ್ಞಾನದಿಂದಲೂ ಉಂಟಾಗುವ ಐಕ್ಯವನ್ನು ಹೊಂದಿ ಪ್ರವೀಣತೆಗೆ ಬಂದವರಾಗಿ ಕ್ರಿಸ್ತನ ಪರಿಪೂರ್ಣತೆಯೆಂಬ ಪ್ರಮಾಣವನ್ನು ಮುಟ್ಟುವ ತನಕ, 12 ದೇವಜನರನ್ನು ಯೋಗ್ಯ ಸ್ಥಿತಿಗೆ ತರುವ ಕೆಲಸಕ್ಕೋಸ್ಕರವೂ ಸಭೆಯ ಸೇವೆಗೋಸ್ಕರವೂ ಕ್ರಿಸ್ತನ ದೇಹವು ಅಭಿವೃದ್ಧಿಯಾಗುವದಕ್ಕೋಸ್ಕರವೂ ಆತನು ಇವರನ್ನು ನೇಮಿಸಿದನು. 14 ನಾವು ಇನ್ನು ಮೇಲೆ ಕೂಸುಗಳಾಗಿರಬಾರದು; ದುರ್ಜನರ ವಂಚನೆಗೂ ದುರ್ಬೋಧಕರ ಕುಯುಕ್ತಿಗೂ ಒಳಬಿದ್ದು ನಾನಾ ಉಪದೇಶಗಳಿಂದ ಕಂಗೆಟ್ಟು ಗಾಳಿಯಿಂದ ಅತ್ತಿತ್ತ ನೂಕಿಸಿಕೊಂಡು ಹೋಗುವವರ ಹಾಗಿರಬಾರದು. 15 ಪ್ರೀತಿಯಿಂದ ಸತ್ಯವನ್ನನುಸರಿಸುತ್ತಾ ಬೆಳೆದು ಕ್ರಿಸ್ತನ ಪ್ರಮಾಣವನ್ನು ಮುಟ್ಟುವ ತನಕ ಬೆಳೆಯಬೇಕು. 16 ಆತನೇ ಶಿರಸ್ಸು; ದೇಹವೆಲ್ಲಾ ಆತನ ಧೊರೆತನದಲ್ಲಿದ್ದು ತನ್ನಲ್ಲಿರುವ ಎಲ್ಲಾ ನರಗಳಿಂದ ಬಿಗಿಯಾಗಿ ಜೋಡಿ

[1] ಕೀರ್ತನೆ ೬೮, ೧೮.

ಸಲ್ಪಟ್ಟು, ಪ್ರತಿ ಅಂಗದಿಂದ ಅದರದರ ಶಕ್ತಿಯ ಪ್ರಕಾರ ಸಹಾಯಹೊಂದಿ, ಪ್ರೀತಿಯಿಂದ ಐಕ್ಯವಾಗಿದ್ದು, ಕ್ಷೇಮಾಭಿವೃದ್ಧಿಯನ್ನು ಹೊಂದುತ್ತದೆ.

ದೇವರಿಂದ ಕರಿಸಿಕೊಂಡವರು ಅಜ್ಞಾನಿಗಳ ದುರ್ನಡತೆಯನ್ನು ಬಿಟ್ಟುಬಿಟ್ಟು ಯೋಗ್ಯರಾಗಿ ನಡೆಯಬೇಕು.

(ಕೊಲೊಸ್ಸೆ. 3, 5—17.)

17 ಆದದರಿಂದ ಅನ್ಯಜನರು ನಡೆದುಕೊಳ್ಳುವ ಪ್ರಕಾರ ನೀವು ಇನ್ನು ಮೇಲೆ ನಡೆದು
18 ಕೊಳ್ಳಬಾರದೆಂದು ಕರ್ತನಲ್ಲಿರುವವನಾಗಿ ನಿಮಗೆ ಖಂಡಿತವಾಗಿ ಹೇಳುತ್ತೇನೆ. ಅವರು ನಿಷ್ಪ್ರಯೋಜನವಾದ ಬುದ್ಧಿಯುಳ್ಳವರಾಗಿ ನಡಕೊಳ್ಳುತ್ತಾರೆ; ಅವರ ಮನಸ್ಸು ಮೊಬ್ಬಾಗಿ ಹೋಗಿದೆ, ಅವರು ತಮ್ಮ ಹೃದಯದ ಕಾಠಿಣ್ಯದ ನಿಮಿತ್ತದಿಂದಲೂ ತಮ್ಮಲ್ಲಿ ರುವ ಅಜ್ಞಾನದ ನಿಮಿತ್ತದಿಂದಲೂ ದೇವರಿಂದಾಗುವ ಜೀವಕ್ಕೆ ಅನ್ಯರಾಗಿದ್ದಾರೆ.
19 ಅವರು ತಮ್ಮ ದುಃಸ್ಥಿತಿಗಾಗಿ ಸ್ವಲ್ಪವೂ ಚಿಂತಿಸದೆ ತಮ್ಮನ್ನು ಬಂಡುತನಕ್ಕೆ ಒಪ್ಪಿಸಿಕೊಟ್ಟು
20 ಎಲ್ಲಾ ವಿಧವಾದ ಅಶುದ್ಧ ಕೃತ್ಯಗಳನ್ನು ಅತ್ಯಾಶೆಯಿಂದ ನಡಿಸುವವರಾಗಿದ್ದಾರೆ. ನೀವಾ
21 ದರೋ ಕ್ರಿಸ್ತನ ಧರ್ಮವನ್ನು[1] ಅಂಥಾದ್ದೆಂದು ಕಲಿತುಕೊಳ್ಳಲಿಲ್ಲ. ಆತನನ್ನೇ ಕೇಳಿದಿ
22 ರಲ್ಲಾ, ಆತನಲ್ಲಿಯೇ ಉಪದೇಶವನ್ನು ಹೊಂದಿದಿರಿ. ನೀವು ನಿಮ್ಮ ಹಿಂದಿನ ನಡತೆಯನ್ನು ಅನುಸರಿಸದೆ ಪೂರ್ವಸ್ವಭಾವವನ್ನು ತೆಗೆದುಹಾಕಿಬಿಡಬೇಕು; ಅದು ಮೋಸಕರವಾದ
23 ದುರಾಶೆಗಳಿಂದ ಕೆಟ್ಟುಹೋಗುವಂಥಾದ್ದು. ನೀವು ನಿಮ್ಮ ಅಂತರ್ಯದಲ್ಲಿ ಹೊಸಬರಾಗಿ
24 ನೂತನಸ್ವಭಾವವನ್ನು ಧರಿಸಿಕೊಳ್ಳಿರಿ. ಆ ಸ್ವಭಾವವು ದೇವರ ಹೋಲಿಕೆಯ ಮೇರೆಗೆ ಸತ್ಯಾನುಗುಣವಾದ ನೀತಿಯುಳ್ಳದ್ದಾಗಿಯೂ ದೇವಭಯವುಳ್ಳದ್ದಾಗಿಯೂ ನಿರ್ಮಿ ಸಲ್ಪಟ್ಟಿದೆ.

25 ಆದಕಾರಣ ಸುಳ್ಳಾಡುವದನ್ನು ಬಿಟ್ಟುಬಿಟ್ಟು, ಒಬ್ಬರ ಸಂಗಡಲೊಬ್ಬರು ಸತ್ಯವನ್ನೇ
26 ಆಡಿರಿ[2]; ಯಾಕಂದರೆ ನಾವು ಒಬ್ಬರಿಗೊಬ್ಬರು ಅಂಗಗಳಾಗಿದ್ದೇವಲ್ಲಾ. ಕೋಪ ಮಾಡಬೇಕಾದರೂ ಪಾಪಮಾಡಬೇಡಿರಿ[3]; ಸೂರ್ಯನು ಮುಳುಗುವದಕ್ಕಿಂತ
27, 28 ಮುಂಚೆ ನಿಮ್ಮ ಸಿಟ್ಟು ತೀರಲಿ; ಸೈತಾನನಿಗೆ ಅವಕಾಶಕೊಡಬೇಡಿರಿ. ಕಳವು ಮಾಡು ವವನು ಇನ್ನು ಮೇಲೆ ಕಳವು ಮಾಡದೆ ಕೈಯಿಂದ ಯಾವದೊಂದು ಒಳ್ಳೇ ಉದ್ಯೋಗ ವನ್ನು ಮಾಡಿ ದುಡಿಯಲಿ; ಆಗ ಕಷ್ಟದಲ್ಲಿರುವವರಿಗೆ ಕೊಡುವದಕ್ಕೆ ಅವನಿಂದಾಗು
29 ವದು. ನಿಮ್ಮ ಬಾಯಿಯೊಳಗಿಂದ ಯಾವ ಕೆಟ್ಟ ಮಾತೂ ಹೊರಡಬಾರದು; ಭಕ್ತಿ ಯನ್ನು ವೃದ್ಧಿಮಾಡುವಂಥ ಕಾಲೋಚಿತವಾದ ಮಾತು ಇದ್ದರೆ, ಕೇಳುವವರ ಹಿತಕ್ಕಾಗಿ
30 ಅದನ್ನು ಆಡಿರಿ. ದೇವರ ಪವಿತ್ರಾತ್ಮನನ್ನು ದುಃಖಪಡಿಸಬೇಡಿರಿ; ಆತನಿಂದಲೇ ವಿಮೋ
31 ಚನೆಯ ದಿನಕ್ಕಾಗಿ ಮುದ್ರೆ ಹಾಕಿಸಿಕೊಂಡಿದ್ದೀರಲ್ಲಾ. ಎಲ್ಲಾ ದ್ವೇಷ ಕೋಪ ಕ್ರೋಧ ಕಲಹ ದೂಷಣೆ ಇವುಗಳನ್ನೂ ಸಕಲ ವಿಧವಾದ ದುಷ್ಟತನವನ್ನೂ ನಿಮ್ಮಿಂದ ದೂರ
32 ಮಾಡಿರಿ. ಒಬ್ಬರಿಗೊಬ್ಬರು ಉಪಕಾರಿಗಳಾಗಿಯೂ ಕರುಣೆಯುಳ್ಳವರಾಗಿಯೂ ಕ್ಷಮಿ

[1] ಮೂಲ, ಕ್ರಿಸ್ತನನ್ನು. [2] ಜಕರೀಯ ೮, ೧೬. [3] ಕೀರ್ತನೆ ೪, ೪. ಗ್ರೀಕ್ ಭಾಷಾಂತರ.

ಸುವವರಾಗಿಯೂ ಇರ್ರಿ. ದೇವರು ನಿಮಗೆ ಕ್ರಿಸ್ತನಲ್ಲಿ ಕ್ಷಮಿಸಿದನಲ್ಲಾ; ಆದದರಿಂದ **5**
ದೇವರ ಪ್ರಿಯರಾದ ಮಕ್ಕಳಿಗೆ ತಕ್ಕ ಹಾಗೆ ಆತನನ್ನು ಅನುಸರಿಸುವವರಾಗಿರಿ. ಕ್ರಿಸ್ತನು 2
ನಮ್ಮನ್ನು ಪ್ರೀತಿಸಿ, ನಮ್ಮೆಲ್ಲರಿಗೋಸ್ಕರ ತನ್ನನ್ನೇ ದೇವರಿಗೆ ಸುವಾಸನೆಯಾದ ಕಾಣಿಕೆ
ಯಾಗಿಯೂ ಯಜ್ಞವಾಗಿಯೂ ಸಮರ್ಪಿಸಿಕೊಂಡ ಪ್ರಕಾರ, ನೀವೂ ಪ್ರೀತಿಯಲ್ಲಿ ನಡೆದು
ಕೊಳ್ಳಿರಿ.

ಜಾರತ್ವ ಯಾವ ವಿಧವಾದ ಬಂಡುತನ ದ್ರವ್ಯಾಶೆ ಇವುಗಳ ಸುದ್ದಿಯಾದರೂ ನಿಮ್ಮಲ್ಲಿ 3
ಇರಬಾರದು; ಇವುಗಳಿಗೆ ದೂರವಾಗಿರುವದೇ ದೇವಜನರಿಗೆ ಯೋಗ್ಯವಾದದ್ದು.
ಹೊಲಸು ಮಾತು ಹುಚ್ಚು ಮಾತು ಕುಚೋದ್ಯ ಮಾತು ಇವು ಬೇಡ, ಅಯುಕ್ತವಾಗಿವೆ; 4
ಇವುಗಳನ್ನು ಬಿಟ್ಟು ದೇವರಿಗೆ ಉಪಕಾರಸ್ತುತಿ ಮಾಡುವದು ಉತ್ತಮ. ಜಾರರು 5
ದುರಾಚಾರಿಗಳು ವಿಗ್ರಹಾರಾಧಕರಂತಿರುವ ಲೋಭಿಗಳು ಇವರಲ್ಲಿ ಒಬ್ಬರಿಗಾದರೂ
ಕ್ರಿಸ್ತನ ಮತ್ತು ದೇವರ ರಾಜ್ಯದಲ್ಲಿ ಬಾಧ್ಯತೆ ಇಲ್ಲವೇ ಇಲ್ಲವೆಂದು ನೀವು ಚನ್ನಾಗಿ
ಬಲ್ಲಿರಲ್ಲವೇ. ಹುರುಳಿಲ್ಲದ ಮಾತುಗಳನ್ನಾಡುವವರಿಗೆ ಕಿವಿಗೊಟ್ಟು ಮೋಸ ಹೋಗ 6
ಬೇಡಿರಿ; ಅಂಥಾ ಕೃತ್ಯಗಳ ನಿಮಿತ್ತದಿಂದ ದೇವರ ಕೋಪವು ಆತನಿಗೆ ಅವಿಧೇಯರಾಗಿ
ರುವವರ ಮೇಲೆ ಬರುತ್ತದೆ. ನೀವು ಅವರೊಂದಿಗೆ ಪಾಲುಗಾರರಾಗಿರಬೇಡಿರಿ. 7

ನೀವು ಹಿಂದಿನ ಕಾಲದಲ್ಲಿ ಕತ್ತಲೆಯಾಗಿದ್ದಿರಿ, ಆದರೆ ಈಗ ನೀವು ಕ್ರಿಸ್ತನಲ್ಲಿದ್ದು ಬೆಳ 8
ಕಾಗಿದ್ದೀರಿ. ಬೆಳಕಿನವರಂತೆ ನಡೆದುಕೊಳ್ಳಿರಿ. ಬೆಳಕಿನ ಫಲವು ಉಪಕಾರದಲ್ಲಿಯೂ 9
ನೀತಿಯಲ್ಲಿಯೂ ಸತ್ಯದಲ್ಲಿಯೂ ಕಾಣಿಸಿಕೊಳ್ಳುತ್ತದೆ. ಕರ್ತನಿಗೆ ಮೆಚ್ಚಿಗೆಯಾದದ್ದು 10
ಏನೆಂಬುವದನ್ನು ಪರಿಶೋಧಿಸಿ ತಿಳುಕೊಳ್ಳಿರಿ. ಕತ್ತಲೆಗೆ ಸಂಬಂಧವಾದ ಕೃತ್ಯಗಳಿಂದ 11
ಯಾವ ಪ್ರಯೋಜನವೂ ಬರಲಾರದು; ಅವುಗಳಲ್ಲಿ ಪಾಲುಗಾರರಾಗಿರದೆ, ಅವುಗಳನ್ನು
ಬೈಲಿಗೆ ತಂದು ಖಂಡಿಸಿರಿ. ಆ ಜನರು ರಹಸ್ಯವಾಗಿ ನಡಿಸುವ ಕೆಲಸಗಳನ್ನು ಕುರಿತು 12
ಮಾತಾಡುವದಾದರೂ ನಾಚಿಕೆಗೆ ಕಾರಣವಾಗಿದೆ. ಬೆಳಕಿನಿಂದ ಎಲ್ಲಾ ಕೃತ್ಯಗಳ 13
ನಿಜಗುಣ ತೋರಿಬರುತ್ತದೆ; ಅದರಿಂದ ಕೆಟ್ಟದ್ದು ಕೆಟ್ಟದ್ದೇ ಎಂದು ಕಾಣಿಸುವದು.
ಪ್ರಕಟವಾಗಿರುವದೆಲ್ಲಾ ಬೆಳಕಿಗೆ ಸಂಬಂಧವಾದದ್ದು[1]. ಆದದರಿಂದ— 14

> ನಿದ್ರೆ ಮಾಡುವವನೇ, ಎಚ್ಚರವಾಗು!
> ಸತ್ತವರನ್ನು ಬಿಟ್ಟು ಎಳು!
> ಕ್ರಿಸ್ತನು ನಿನಗೆ ಪ್ರಕಾಶ ಕೊಡುವನು

ಎಂದು ಹೇಳಿಯದೆ.

ಆದಕಾರಣ ನೀವು ನಡಕೊಳ್ಳುವ ರೀತಿಯನ್ನು ಕುರಿತು ಚನ್ನಾಗಿ ನೋಡಿಕೊಳ್ಳಿರಿ. 15
ಜ್ಞಾನವಿಲ್ಲದವರಾಗಿರದೆ ಜ್ಞಾನವಂತರಾಗಿರ್ರಿ. ಈ ದಿನಗಳು ಕೆಟ್ಟವುಗಳಾಗಿವೆ; ಆದದರಿಂದ 16
ಕಾಲವನ್ನು ಸುಮ್ಮನೆ ಕಳಕೊಳ್ಳದೆ ಅದನ್ನು ಬೆಲೆಯುಳ್ಳದ್ದೆಂದು ಉಪಯೋಗಿಸಿಕೊಳ್ಳಿರಿ.
ಮತ್ತು ಬುದ್ಧಿಹೀನರಾಗಿ ನಡೆಯದೆ ಕರ್ತನ ಚಿತ್ತವೇನೆಂಬುವದನ್ನು ವಿಚಾರಿಸಿ ತಿಳಿದವ 17
ರಾಗಿರ್ರಿ. ಮದ್ಯಪಾನ ಮಾಡಿ ಮತ್ತರಾಗಬೇಡಿರಿ; ಅದರಿಂದ ಪಟಿಂಗತನವು ಹುಟ್ಟು 18

---

[1] ಅಥವಾ, ಪ್ರಕಟಮಾಡುವಂಥಾದ್ದೆಲ್ಲವೂ ಬೆಳಕೇ.

19 ತ್ತದೆ. ಆದರೆ ಪವಿತ್ರಾತ್ಮಭರಿತರಾಗಿದ್ದು, ಕೀರ್ತನೆಗಳಿಂದಲೂ ಸಂಗೀತಗಳಿಂದಲೂ ಆತ್ಮಸಂಬಂಧವಾದ ಪದಗಳಿಂದಲೂ ಒಬ್ಬರಿಗೊಬ್ಬರು ಮಾತಾಡಿಕೊಳ್ಳುತ್ತಾ, ನಿಮ್ಮ
20 ಹೃದಯಗಳಲ್ಲಿ ಕರ್ತನಿಗೆ ಗಾನಮಾಡುತ್ತಾ, ಕೀರ್ತನೆ ಹಾಡುತ್ತಾ, ಯಾವಾಗಲೂ ಎಲ್ಲಾ ಕಾರ್ಯಗಳಿಗೋಸ್ಕರ ನಮ್ಮ ಕರ್ತನಾದ ಯೇಸು ಕ್ರಿಸ್ತನ ಹೆಸರಿನಲ್ಲಿ ತಂದೆ
21 ಯಾದ ದೇವರಿಗೆ ಸ್ತೋತ್ರ ಮಾಡುತ್ತಾ, ಕ್ರಿಸ್ತನಿಗೆ ಭಯಪಡುವವರಾಗಿದ್ದು ಒಬ್ಬರಿಗೊಬ್ಬರು ವಿನಯವುಳ್ಳವರಾಗಿ ನಡೆದುಕೊಳ್ಳಿರಿ.

### ಗಂಡಹೆಂಡತಿಯರೂ ತಂದೆಗಳೂ ಮಕ್ಕಳೂ ಯಜಮಾನರೂ ದಾಸರೂ ನಡೆಯಬೇಕಾದ ರೀತಿ.

(ಕೊಲೊಸ್ಸೆ. 3, 18—4, 1.)

22 ಸ್ತ್ರೀಯರೇ, ನೀವು ಕರ್ತನಿಗೆ ಹ್ಯಾಗೋ ಹಾಗೆಯೇ ನಿಮ್ಮನಿಮ್ಮ ಗಂಡಂದಿರಿಗೆ
23 ಅಧೀನರಾಗಿರ್ರಿ. ಕ್ರಿಸ್ತನು ಸಭೆಗೆ ತಲೆಯಾಗಿರುವ ಪ್ರಕಾರವೇ ಗಂಡನು ಹೆಂಡತಿಗೆ
24 ತಲೆಯಾಗಿದ್ದಾನೆ. ಕ್ರಿಸ್ತನೋ ಸಭೆಯೆಂಬ ದೇಹಕ್ಕೆ ರಕ್ಷಕನಾಗಿದ್ದಾನೆ. ಅದಿರಲಿ; ಸಭೆಯು ಕ್ರಿಸ್ತನಿಗೆ ಹ್ಯಾಗೆ ಅಧೀನವಾಗಿದೆಯೋ ಹಾಗೆಯೇ ಸ್ತ್ರೀಯರು ತಮ್ಮತಮ್ಮ ಗಂಡಂದಿರಿಗೆ ಎಲ್ಲಾ ವಿಷಯಗಳಲ್ಲಿ ಅಧೀನರಾಗಿರಬೇಕು.
25 ಪುರುಷರೇ, ಕ್ರಿಸ್ತನು ಸಭೆಯನ್ನು ಪ್ರೀತಿಸಿದ ಪ್ರಕಾರವೇ ನಿಮ್ಮನಿಮ್ಮ ಹೆಂಡತಿಯ
26 ರನ್ನು ಪ್ರೀತಿಸಿರಿ. ಆತನು ಅದನ್ನು ಪ್ರತಿಷ್ಠೆಪಡಿಸುವದಕ್ಕಾಗಿ ತನ್ನನ್ನು ಮರಣಕ್ಕೆ
27 ಒಪ್ಪಿಸಿಕೊಟ್ಟನು. ಅದನ್ನು ಕಳಂಕ ಸುಕ್ಕು ಮುಂತಾದೊಂದೂ ಇಲ್ಲದ ಕನ್ನಿಕೆಯೋ ಎಂಬಂತೆ ಪರಿಶುದ್ಧವಾಗಿಯೂ ನಿರ್ದೋಷವಾಗಿಯೂ ಮಹಿಮೆಯುಳ್ಳದ್ದಾಗಿಯೂ ಇರುವ ಸಭೆಯನ್ನಾಗಿ ತನ್ನೆದುರಿನಲ್ಲಿ ನಿಲ್ಲಿಸಿಕೊಳ್ಳಬೇಕೆಂದು ವಾಕ್ಯೋಪದೇಶ ಸಹಿತ
28 ವಾದ ಜಲಸ್ನಾನವನ್ನು ಮಾಡಿಸಿ ಶುದ್ಧಮಾಡಿದನು. ಹಾಗೆಯೇ ಪುರುಷರು ಸಹ ಸ್ವಂತ ಶರೀರವನ್ನು ಪ್ರೀತಿಸಿಕೊಳ್ಳುವ ಪ್ರಕಾರವೇ ತಮ್ಮ ಹೆಂಡತಿಯರನ್ನು ಪ್ರೀತಿಸುವ ಹಂಗಿನವರಾಗಿದ್ದಾರೆ. ತನ್ನ ಹೆಂಡತಿಯನ್ನು ಪ್ರೀತಿಸುವವನು ತನ್ನನ್ನೇ ಪ್ರೀತಿಸಿಕೊಳ್ಳು
29 ವವನಾಗಿದ್ದಾನೆ. ಯಾರೂ ಎಂದೂ ಸ್ವಶರೀರವನ್ನು ಅಲಕ್ಷ್ಯಮಾಡಿದ್ದಿಲ್ಲ; ಎಲ್ಲರೂ
30 ತಮ್ಮ ಶರೀರಗಳನ್ನು ಪೋಷಿಸಿ ಸಂರಕ್ಷಿಸುತ್ತಾರೆ. ಯಾವ ದೇಹಕ್ಕೆ ನಾವು ಅಂಗಗಳಾಗಿದ್ದೇವೋ ಸಭೆಯೆಂಬ ಆ ದೇಹವನ್ನು ಕ್ರಿಸ್ತನು ಹಾಗೆಯೇ ಪೋಷಿಸಿ ಸಂರಕ್ಷಿಸುತ್ತಾ
31 ನಲ್ಲಾ. ಇದರ ನಿಮಿತ್ತದಿಂದ ಪುರುಷನು ತಂದೆತಾಯಿಗಳನ್ನು ಬಿಟ್ಟು ತನ್ನ ಹೆಂಡತಿಯನ್ನು ಸೇರಿಕೊಳ್ಳುವನು; ಅವರಿಬ್ಬರೂ ಒಂದೇ ಶರೀರವಾಗಿರುವರು[1] ಎಂದು ಬರೆದದೆ.
32 ನಾನು ಕ್ರಿಸ್ತನಿಗೂ ಸಭೆಗೂ ಇರುವ ಸಂಬಂಧವನ್ನು ಕುರಿತು ಮಾತಾಡುತ್ತಾ ಇದ್ದೇನೆ;
33 ಇದು ವರೆಗೆ ಗುಪ್ತವಾಗಿದ್ದ ಈ ಸತ್ಯಾರ್ಥವು ಬಹು ಗಂಭೀರವಾದದ್ದು. ಅದಿರಲಿ; ನಿಮ್ಮಲ್ಲಿ ಪ್ರತಿ ಪುರುಷನು ತನ್ನನ್ನು ಪ್ರೀತಿಸಿಕೊಳ್ಳುವಂತೆಯೇ ತನ್ನ ಹೆಂಡತಿಯನ್ನೂ ಪ್ರೀತಿಸಬೇಕು; ಪ್ರತಿ ಹೆಂಡತಿಯು ತನ್ನ ಗಂಡನಿಗೆ ಭಯಭಕ್ತಿಯಿಂದ ನಡೆದುಕೊಳ್ಳಬೇಕು.

[1] ಉತ್ಪತ್ತಿ ೨, ೨೪.

**6** ಮಕ್ಕಳೇ, ನೀವು ಕರ್ತನಲ್ಲಿರುವವರಿಗೆ ತಕ್ಕ ಹಾಗೆ ನಿಮ್ಮ ತಂದೆತಾಯಿಗಳ ಮಾತನ್ನು ಕೇಳಬೇಕು; ಇದು ಧರ್ಮ. 2 ವಾಗ್ದಾನಸಹಿತವಾದ ಮೊದಲನೇ ಆಜ್ಞೆಯನ್ನು ಕೇಳಿರಿ— 3 ನಿನ್ನ ತಂದೆಯನ್ನೂ ತಾಯಿಯನ್ನೂ ಸನ್ಮಾನಿಸು; ಇದರಿಂದ ನಿನಗೆ ಮೇಲಾಗುವದು, ನೀನು ಭೂಮಿಯ ಮೇಲೆ ಬಹುಕಾಲ ಬದುಕುವಿ[1].

4 ತಂದೆಗಳೇ, ನಿಮ್ಮ ಮಕ್ಕಳಿಗೆ ಕೋಪವನ್ನೆಬ್ಬಿಸದೆ, ಕರ್ತನಿಗೆ ಮೆಚ್ಚಿಗೆಯಾಗಿರುವ ಬಾಲಶಿಕ್ಷೆಯನ್ನೂ ಬಾಲೋಪದೇಶವನ್ನೂ ಮಾಡುತ್ತಾ ಅವರನ್ನು ಸಾಕಿಸಲಹಿರಿ.

5 ದಾಸತ್ವದಲ್ಲಿರುವವರೇ[2], ಈ ಲೋಕದಲ್ಲಿ ನಿಮಗೆ ಯಜಮಾನರಾಗಿರುವವರಿಗೆ ಕ್ರಿಸ್ತನಿಗೆಂದು ಮನೋಭೀತಿಯಿಂದ ನಡುಗುವವರಾಗಿಯೂ ಸರಳಹೃದಯರಾಗಿಯೂ ವಿಧೇಯರಾಗಿರ್ರಿ. 6 ಮನುಷ್ಯರನ್ನು ಮೆಚ್ಚಿಸುವವರು ಮಾಡುವ ಪ್ರಕಾರ ಯಜಮಾನರು ನೋಡುತ್ತಿರುವಾಗ ಮಾತ್ರ ಸೇವೆಮಾಡದೆ, ಕ್ರಿಸ್ತನ ದಾಸರಿಗೆ ತಕ್ಕ ಹಾಗೆ ದೇವರ ಚಿತ್ತವನ್ನು ಮನಃಪೂರ್ವಕವಾಗಿ ನಡಿಸಿರಿ. 7 ಮನುಷ್ಯರಿಗೋಸ್ಕರವಲ್ಲ, ಕರ್ತನಿಗೋಸ್ಕರ ಸೇವೆಮಾಡುತ್ತೇವೆಂದು ಚಿತ್ತಪೂರ್ವಕವಾಗಿ ಸೇವೆಮಾಡಿರಿ. 8 ಯಾಕಂದರೆ ಒಬ್ಬನು ದಾಸನಾಗಲಿ ಸ್ವತಂತ್ರನಾಗಲಿ, ತಾನು ಯಾವ ಸತ್ಕಾರ್ಯವನ್ನು ಮಾಡುತ್ತಾನೋ ಅದರ ಪ್ರತಿಫಲವನ್ನು ಕರ್ತನಿಂದ ಹೊಂದುವನೆಂಬುವದನ್ನು ನೀವು ತಿಳಿದವರಾಗಿಯೇ ಇದ್ಧೀರಿ.

9 ಯಜಮಾನರೇ, ನಿಮ್ಮ ಕೈಕೆಳಗಿರುವ ದಾಸರ ವಿಷಯದಲ್ಲಿ ಅದೇ ರೀತಿಯಾಗಿ ನಡೆಯಿರಿ. ಪರಲೋಕದಲ್ಲಿ ನಿಮಗೂ ಅವರಿಗೂ ಯಜಮಾನನಾಗಿರುವಾತನು ಇದ್ದಾನೆಂತಲೂ ಆತನಲ್ಲಿ ಪಕ್ಷಪಾತವಿಲ್ಲವೆಂತಲೂ ತಿಳಿದು ನಿಮ್ಮ ದಾಸರನ್ನು ಬೆದರಿಸುವ ಪದ್ಧತಿಯನ್ನು ಬಿಟ್ಟುಬಿಡಿರಿ.

### ಕ್ರೈಸ್ತರು ನಡಿಸುವ ಯುದ್ಧದಲ್ಲಿ ದೇವರು ಕೊಡುವ ಸರ್ವಾಯುಧಗಳು ಅವಶ್ಯವಾಗಿವೆ.

10 ಕಡೇ ಮಾತೇನಂದರೆ, ನೀವು ಕರ್ತನನ್ನೂ ಆತನ ಅತ್ಯಧಿಕವಾದ ಶಕ್ತಿಯನ್ನೂ ಆಶ್ರಯಿಸಿಕೊಂಡವರಾಗಿ ಬಲಗೊಳ್ಳಿರಿ. 11 ಸೈತಾನನ ತಂತ್ರೋಪಾಯಗಳನ್ನು ನೀವು ಎದುರಿಸಿ ನಿಲ್ಲುವದಕ್ಕೆ ಶಕ್ತರಾಗುವಂತೆ ದೇವರು ದಯಪಾಲಿಸುವ ಸರ್ವಾಯುಧಗಳನ್ನು ಧರಿಸಿಕೊಳ್ಳಿರಿ. 12 ನಾವು ಹೋರಾಡುವದು ಮನುಷ್ಯಮಾತ್ರದವರ ಸಂಗಡವಲ್ಲ; ರಾಜತ್ವಗಳ ಮೇಲೆಯೂ ಅಧಿಕಾರಗಳ ಮೇಲೆಯೂ ಈ ಅಂಧಕಾರದ ಲೋಕಾಧಿಪತಿಗಳ ಮೇಲೆಯೂ ಆಕಾಶಮಂಡಲದಲ್ಲಿರುವ ದುರಾತ್ಮಗಳ ಸೇನೆಯ ಮೇಲೆಯೂ ನಾವು ಯುದ್ಧಮಾಡುವವರಾಗಿದ್ದೇವೆ. 13 ಆದದರಿಂದ ಕಠಿನ ಯುದ್ಧವು ನಡೆಯುವ ದಿವಸದಲ್ಲಿ ಆ ವೈರಿಗಳನ್ನು ಎದುರಿಸುವದಕ್ಕೂ ಮಾಡಬೇಕಾದದ್ದೆಲ್ಲವನ್ನು ಮಾಡಿ ಜಯಶಾಲಿಗಳಾಗಿ ನಿಲ್ಲುವದಕ್ಕೂ ಶಕ್ತರಾಗುವಂತೆ ದೇವರು ದಯಪಾಲಿಸುವ ಸರ್ವಾಯುಧಗಳನ್ನು ತೆಗೆದುಕೊಳ್ಳಿರಿ. 14 ಸತ್ಯವೆಂಬ ನಡುಕಟ್ಟನ್ನು ಕಟ್ಟಿಕೊಂಡು, ನೀತಿಯೆಂಬ ಉಕ್ಕಿನ ಕವಚವನ್ನು

---

ವ್ಯಯ ೫, ೧೬; ಹೊರಡೋಣ ೨೦, ೧೨. [2] ಅಥವಾ, ಗುಲಾಮರೇ, ದಾಸರೇ.

15 ಧರಿಸಿಕೊಂಡು[1], ಸಮಾಧಾನದ ವಿಷಯವಾದ ಸುವಾರ್ತೆಯನ್ನು ತಿಳಿಸುವದರಲ್ಲಿ ಸಿದ್ಧ
16 ವಾದ ಮನಸ್ಸೆಂಬ[2] ಕೆರಗಳನ್ನು ಮೆಟ್ಟಿಕೊಂಡು ನಿಲ್ಲಿರಿ. ಮತ್ತು ನಂಬಿಕೆಯೆಂಬ ಗುರಾಣಿಯನ್ನು ಹಿಡುಕೊಳ್ಳಿರಿ; ಅದರಿಂದ ನೀವು ಕೆಡಕನ ಅಗ್ನಿಬಾಣಗಳನ್ನೆಲ್ಲಾ ಆರಿಸು
17 ವದಕ್ಕೆ ಶಕ್ತರಾಗುವಿರಿ. ಇದಲ್ಲದೆ ರಕ್ಷಣೆಯೆಂಬ ಶಿರಸ್ತ್ರಾಣವನ್ನು ಇಟ್ಟುಕೊಂಡು
18 ಪವಿತ್ರಾತ್ಮನು ಕೊಡುವ ದೇವರ ವಾಕ್ಯವೆಂಬ ಕತ್ತಿಯನ್ನು[3] ಹಿಡಿಯಿರಿ. ನೀವು ಪವಿತ್ರಾತ್ಮಪ್ರೇರಿತರಾಗಿ ಎಲ್ಲಾ ಸಮಯಗಳಲ್ಲಿ ಸಕಲವಿಧವಾದ ಪ್ರಾರ್ಥನೆಯಿಂದಲೂ ವಿಜ್ಞಾಪನೆಯಿಂಧಲೂ ದೇವರನ್ನು ಪ್ರಾರ್ಥಿಸಿರಿ. ಇದರಲ್ಲಿ ಪೂರ್ಣ ಸ್ಥಿರಚಿತ್ತರಾಗಿದ್ದು
19 ದೇವಜನರೆಲ್ಲರ ವಿಷಯದಲ್ಲಿ ವಿಜ್ಞಾಪನೆ ಮಾಡುತ್ತಾ ಎಚ್ಚರವಾಗಿರ್‍ರಿ. ನನಗೋಸ್ಕರ ಸಹ ಪ್ರಾರ್ಥನೆ ಮಾಡಿರಿ. ನಾನು ಬಾಯಿ ತೆರೆಯುವಾಗ ಪೂರ್ವಕಾಲದಲ್ಲಿ ಗುಪ್ತವಾಗಿದ್ದ ಸುವಾರ್ತಾಸತ್ಯಾರ್ಥವನ್ನು ಭಯವಿಲ್ಲದೆ ತಿಳಿಸುವದಕ್ಕೆ ಬೇಕಾದ ಮಾತನ್ನು
20 ದೇವರು ನನಗೆ ಅನುಗ್ರಹಿಸಬೇಕೆಂದು ಪ್ರಾರ್ಥಿಸಿರಿ. ಆ ಸತ್ಯಾರ್ಥದ ನಿಮಿತ್ತವೇ ರಾಯಭಾರಿಯಾದ ನಾನು ಬೇಡಿಯಲ್ಲಿ ಬಿದ್ದಿದ್ಧೇನಲ್ಲಾ. ಅದರ ವಿಷಯದಲ್ಲಿ ಧೈರ್ಯವಾಗಿ ಮಾತಾಡುವ ಹಂಗಿನಲ್ಲಿದ್ಧೇನೆ; ಹಾಗೆಯೇ ನಾನು ಮಾತಾಡಬೇಕೆಂದು ನನಗೋಸ್ಕರ ಬೇಡಿಕೊಳ್ಳಿರಿ.

### ಕಡೇ ಮಾತುಗಳು.

21 ನನ್ನ ಸಂಗತಿಗಳು ನಿಮಗೆ ಸಹ ಗೊತ್ತಾಗುವ ಹಾಗೆ, ಪ್ರಿಯ ಸಹೋದರನೂ ಕರ್ತನಲ್ಲಿ ನಂಬಿಗಸ್ತನಾದ ಸೇವಕನೂ ಆಗಿರುವ ತುಖಿಕನು ನಿಮಗೆ ಎಲ್ಲವನ್ನೂ ತಿಳಿಸುವನು.
22 ನೀವು ನಮ್ಮ ಸಮಾಚಾರವನ್ನು ತಿಳುಕೊಳ್ಳುವ ಹಾಗೆಯೂ ಅವನು ನಿಮ್ಮ ಹೃದಯಗಳನ್ನು ಸಂತೈಸುವ ಹಾಗೆಯೂ ಅವನನ್ನು ನಿಮ್ಮ ಬಳಿಗೆ ಕಳುಹಿಸಿದ್ಧೇನೆ.
23 ತಂದೆಯಾದ ದೇವರಿಂದಲೂ ಕರ್ತನಾದ ಯೇಸು ಕ್ರಿಸ್ತನಿಂದಲೂ ಶಾಂತಿಯೂ
24 ನಂಬಿಕೆಯಿಂದ ಕೂಡಿದ ಪ್ರೀತಿಯೂ ಸಹೋದರರಿಗೆ ಆಗಲಿ. ನಮ್ಮ ಕರ್ತನಾದ ಯೇಸು ಕ್ರಿಸ್ತನನ್ನು ನಿರಂತರವಾದ ಪ್ರೀತಿಯಿಂದ ಪ್ರೀತಿಸುವವರೆಲ್ಲರ ಮೇಲೆ ದೇವರ ಕೃಪೆಯು ಇರಲಿ.

---

[1] ಯೆಶಾಯ ೧೧, ೫; ೫೯, ೧೭. [2] ಯೆಶಾಯ ೫೨, ೭; ೪೦, ೩. ೯.
[3] ಯೆಶಾಯ ೫೯, ೧೭; ೧೧, ೪; ೪೯, ೨ ನೋಡು.

# THE EPISTLE OF SAINT PAUL TO THE PHILIPPIANS

# ಪೌಲನು ಫಿಲಿಪ್ಪಿಯವರಿಗೆ ಬರೆದ ಪತ್ರಿಕೆ

ಒಕ್ಕಣೆ.

ಕ್ರಿಸ್ತ ಯೇಸುವಿನ ದಾಸರಾದ ಪೌಲ ತಿಮೊಥೆಯರು ಫಿಲಿಪ್ಪಿಯಲ್ಲಿ ಕ್ರಿಸ್ತ ಯೇಸುವಿನ 1 ಮೂಲಕ ದೇವಜನರಾಗಿರುವವರೆಲ್ಲರಿಗೂ ಅವರಲ್ಲಿರುವ ಸಭಾಧ್ಯಕ್ಷರಿಗೂ ಸಭಾಸೇವಕ ರಿಗೂ ಬರೆಯುವದೇನಂದರೆ—ನಮ್ಮ ತಂದೆಯಾದ ದೇವರಿಂದಲೂ ಕರ್ತನಾದ ಯೇಸು 2 ಕ್ರಿಸ್ತನಿಂದಲೂ ನಿಮಗೆ ಕೃಪೆಯೂ ಶಾಂತಿಯೂ ಆಗಲಿ.

ಪೌಲನು ಫಿಲಿಪ್ಪಿಯ ಸಭೆಯವರಿಗೋಸ್ಕರ ದೇವರಿಗೆ ಮಾಡಿದ ಕೃತಜ್ಞತಾಸ್ತುತಿ ಪ್ರಾರ್ಥನೆಗಳು.

ನಾನು ನಿಮಗೋಸ್ಕರ ದೇವರನ್ನು ಬೇಡಿಕೊಳ್ಳುವ ಎಲ್ಲಾ ಸಮಯಗಳಲ್ಲಿಯೂ 3-4 ಸಂತೋಷದಿಂದಲೇ ಬೇಡುವವನಾಗಿದ್ದೇನೆ. ನಾನು ನಿಮ್ಮನ್ನು ನೆನಸಿಕೊಳ್ಳುವಾಗೆಲ್ಲಾ 5 ನೀವು ಮೊದಲಿನಿಂದ ಇಂದಿನ ವರೆಗೂ ಸುವಾರ್ತಾಪ್ರಚಾರದಲ್ಲಿ ಸಹಕಾರಿಗಳಾಗಿದ್ದೀ ರೆಂದು ನನ್ನ ದೇವರಿಗೆ ಕೃತಜ್ಞತಾಸ್ತುತಿ ಮಾಡುತ್ತೇನೆ. ಈ ಒಳ್ಳೇ ಕೆಲಸವನ್ನು ನಿಮ್ಮಲ್ಲಿ 6 ಪ್ರಾರಂಭಿಸಿದಾತನು ಅದನ್ನು ನಡಿಸಿಕೊಂಡು ಯೇಸು ಕ್ರಿಸ್ತನು ಬರುವ ದಿನದೊಳಗಾಗಿ ಸಿದ್ಧಿಗೆ ತರುವನೆಂದು ನನಗೆ ಭರವಸವುಂಟು. ನಿಮ್ಮೆಲ್ಲರ ವಿಷಯದಲ್ಲಿ ಈ ಅಭಿಪ್ರಾಯ 7 ವುಳ್ಳವನಾಗಿರುವದು ನ್ಯಾಯವಾಗಿದೆ; ನಾನು ಬೇಡಿಬಿದ್ದಿರುವಾಗಲೂ ಸುವಾರ್ತೆಯ ವಿಷಯದಲ್ಲಿ ಉತ್ತರ ಹೇಳಿ ಸ್ಥಾಪಿಸುವಾಗಲೂ ನೀವೆಲ್ಲರೂ ನನ್ನೊಂದಿಗೆ ದೇವರ ಕೃಪೆ ಯಲ್ಲಿ ಪಾಲುಗಾರರಾಗಿದ್ದೀರೆಂದು ನಿಮ್ಮನ್ನು ನನ್ನ ಹೃದಯದಲ್ಲಿಟ್ಟುಕೊಂಡಿದ್ದೇನೆ. ಕ್ರಿಸ್ತ ಯೇಸುವಿಗಿರುವಂಥಾ ಕನಿಕರದಿಂದ ನಿಮ್ಮೆಲ್ಲರಿಗೋಸ್ಕರ ಎಷ್ಟೋ ಹಂಬಲಿಸುತ್ತೇನೆ; 8 ಇದಕ್ಕೆ ದೇವರೇ ನನ್ನ ಸಾಕ್ಷಿ. ಮತ್ತು ನಾನು ದೇವರನ್ನು ಪ್ರಾರ್ಥಿಸಿ—ನಿಮ್ಮ 9 ಪ್ರೀತಿಯು ಹೆಚ್ಚುತ್ತಾ ಹೆಚ್ಚುತ್ತಾ ಪೂರ್ಣ ಜ್ಞಾನವಿವೇಕಗಳಿಂದ ಕೂಡಿ ಉತ್ತಮವಾದ 10 ಕಾರ್ಯಗಳು ಯಾವವೆಂದು ನೀವು ವಿವೇಚಿಸುವವರಾಗಬೇಕೆಂತಲೂ ಕ್ರಿಸ್ತನು ಬರುವ ದಿನದಲ್ಲಿ ನೀವು ಸರಳರಾಗಿಯೂ ನಿರ್ಮಲರಾಗಿಯೂ ಯೇಸು ಕ್ರಿಸ್ತನ ಮೂಲಕವಾಗಿ 11 ಸುನೀತಿಯೆಂಬ ಫಲದಿಂದ ತುಂಬಿದವರಾಗಿಯೂ ಕಾಣಿಸಿಕೊಂಡು ದೇವರಿಗೆ ಘನ ವನ್ನೂ ಸ್ತೋತ್ರವನ್ನೂ ತರಬೇಕೆಂತಲೂ ಬೇಡಿಕೊಳ್ಳುತ್ತೇನೆ.

ಪೌಲನು ರೋಮಾಪುರಿಯಲ್ಲಿ ಸೆರೆಯವನಾಗಿದ್ದು ತನ್ನ ಸ್ಥಿತಿಯನ್ನೂ ಕೋರಿಕೆಯನ್ನೂ ಕುರಿತು ಹೇಳಿದ್ದು.

12 ಸಹೋದರರೇ, ನನಗೆ ಸಂಭವಿಸಿರುವದು ಸುವಾರ್ತೆಯ ಪ್ರಸಾರಣೆಗೇ ಸಹಾಯವಾ
13 ಯಿತೆಂದು ನೀವು ತಿಳಿಯಬೇಕೆಂಬದಾಗಿ ಅಪೇಕ್ಷಿಸುತ್ತೇನೆ. ಹ್ಯಾಗಂದರೆ ನನ್ನ ಬೇಡಿ
ಗಳು ಕ್ರಿಸ್ತನ ನಿಮಿತ್ತವೇ ಎಂದು ಅರಮನೆಯ ಪಹರೆಯವರೆಲ್ಲರಿಗೂ ಮಿಕ್ಕಾದವರೆಲ್ಲ
14 ರಿಗೂ ಪ್ರಸಿದ್ಧವಾಯಿತು. ಇದಲ್ಲದೆ ಸಹೋದರರಲ್ಲಿ ಬಹಳ ಜನರು ನನ್ನ ಬೇಡಿ
ಗಳಿಂದಲೇ ಕರ್ತನಲ್ಲಿ ಭರವಸವುಳ್ಳವರಾಗಿ ದೇವರ ವಾಕ್ಯವನ್ನು ನಿರ್ಭಯದಿಂದ ಹೇಳು
15 ವದಕ್ಕೆ ಇನ್ನೂ ವಿಶೇಷ ಧೈರ್ಯ ಹೊಂದಿದ್ದಾರೆ. ಕೆಲವರು ಹೊಟ್ಟೆಕಿಚ್ಚುಪಟ್ಟು ಭೇದ
ಹುಟ್ಟಿಸಬೇಕೆಂಬ ಭಾವನೆಯಿಂದ, ಬೇರೆ ಕೆಲವರು ಒಳ್ಳೇ ಭಾವದಿಂದ ಕ್ರಿಸ್ತನನ್ನು ಪ್ರಚುರ
16 ಪಡಿಸುತ್ತಾರೆ. ಇವರಂತೂ ನಾನು ಸುವಾರ್ತೆಯ ವಿಷಯದಲ್ಲಿ ಉತ್ತರ ಹೇಳುವದಕ್ಕೆ
17 ಇಲ್ಲಿ ಬಿದ್ದಿರುತ್ತೇನೆಂದು ತಿಳಿದು ಪ್ರೀತಿಯಿಂದ ಪ್ರಸಿದ್ಧಿಪಡಿಸುತ್ತಾರೆ. ಆ ಬೇರೆ ತರದ
ವರಾದರೋ ನಾನು ಬೇಡಿಬಿದ್ದಿರುವಾಗಲೂ ನನಗೆ ಸಂಕಟವನ್ನು ಎಬ್ಬಿಸಬೇಕೆಂದು
ಯೋಚಿಸಿ ಕ್ರಿಸ್ತನನ್ನು ಯಥಾರ್ಥವಾಗಿ ಪ್ರಸಿದ್ಧಿಪಡಿಸದೆ ಪಕ್ಷಪಾತದಿಂದ ಪ್ರಸಿದ್ಧಿಪಡಿ
18 ಸುತ್ತಾರೆ. ಹ್ಯಾಗಾದರೇನು? ಯಾವ ರೀತಿಯಿಂದಾದರೂ ಕಪಟದಿಂದಾಗಲಿ ಸತ್ಯ
ದಿಂದಾಗಲಿ ಕ್ರಿಸ್ತನನ್ನು ಪ್ರಸಿದ್ಧಿಪಡಿಸುವದುಂಟು; ಇದಕ್ಕೆ ಸಂತೋಷಿಸುತ್ತೇನೆ, ಮುಂದೆ
19 ಯೂ ಸಂತೋಷಿಸುವೆನು. ಯಾಕಂದರೆ ನನಗೆ ಸಂಭವಿಸಿರುವದು ನೀವು ದೇವರಿಗೆ
ಮಾಡುವ ವಿಜ್ಞಾಪನೆಯಿಂದಲೂ ಕ್ರಿಸ್ತನು ಹೇರಳವಾಗಿ ದಯಪಾಲಿಸುವ ಆತ್ಮನ ಸಹಾ
20 ಯದಿಂದಲೂ ನನ್ನ ಪರಮಹಿತಕ್ಕೆ ಅನುಕೂಲಿಸುವದೆಂದು ಬಲ್ಲೆನು. ಹ್ಯಾಗಂದರೆ
ನಾನು ಯಾವ ವಿಷಯದಲ್ಲಾದರೂ ನಾಚಿಕೆಪಡದೆ ಎಂದಿನಂತೆ ಈಗಲೂ ಸಹ ತುಂಬಾ
ಧೈರ್ಯದಿಂದಿರುವದರಿಂದ, ಬದುಕಿದರೂ ಸರಿಯೇ ಸತ್ತರೂ ಸರಿಯೇ, ನನ್ನ ದೇಹದ
ಮೂಲಕ ಕ್ರಿಸ್ತನಿಗೆ ಮಹಿಮೆಯುಂಟಾಗಬೇಕೆಂದು ನನಗೆ ಬಹಳ ಅಭಿಲಾಷೆಯದೆ;
21 ಹಾಗೆಯೇ ಆಗುವದೆಂದು ಭರವಸವುಂಟು. ನಾನಂತೂ ಬದುಕಿದರೆ ಕ್ರಿಸ್ತನಿಗೋಸ್ಕರ
22 ಬದುಕುತ್ತೇನೆ, ಸತ್ತರೆ ನನಗೆ ಲಾಭವಾಗುತ್ತೆ[1]. ಶರೀರದಲ್ಲಿಯೇ ಬದುಕಬೇಕೆಂಬ
ಪಕ್ಷದಲ್ಲಿ ಕೆಲಸಮಾಡಿ ಫಲ ಹೊಂದುವದಕ್ಕಾಗಿ ನನಗೆ ಅನುಕೂಲವಾಗುವದು. ಹೀಗಿರ
23 ಲಾಗಿ ನಾನು ಯಾವದನ್ನಾರಿಸಿಕೊಳ್ಳಬೇಕೋ ನನಗೆ ತೋರದು. ಈ ಎರಡರ ನಡುವೆ
ಸಿಕ್ಕಿಕೊಂಡಿದ್ದೇನೆ; ಇಲ್ಲಿಂದ ಹೋಗಿಬಿಟ್ಟು ಕ್ರಿಸ್ತನ ಜೊತೆಯಲ್ಲಿರಬೇಕೆಂಬದೇ ನನ್ನ
24 ಅಭಿಲಾಷೆ, ಅದು ಉತ್ತಮೋತ್ತಮ; ಆದರೆ ನಾನಿನ್ನೂ ಶರೀರದಲ್ಲಿ ವಾಸಮಾಡಿಕೊಂಡಿ
25 ರುವದೇ ನಿಮಗೋಸ್ಕರ ಬಹು ಅವಶ್ಯವಾದದ್ದು. ಆದದರಿಂದ ನಿಮಗೆ ಕ್ರಿಸ್ತನಂಬಿಕೆ
ಯಲ್ಲಿ ಅಭಿವೃದ್ಧಿಯೂ ಆನಂದವೂ ಉಂಟಾಗುವದಕ್ಕೋಸ್ಕರ ನಾನು ಜೀವದಿಂದುಳಿದು
26 ನಿಮ್ಮೆಲ್ಲರ ಬಳಿಯಲ್ಲಿರುವೆನೆಂದು ದೃಢವಾಗಿ ನಂಬಿದ್ದೇನೆ. ಹೀಗೆ ನಾನು ತಿರಿಗಿ ನಿಮ್ಮ
ಲ್ಲಿಗೆ ಬರುವದರಿಂದ ನೀವು ಕ್ರಿಸ್ತ ಯೇಸುವಿನ ವಿಷಯವಾಗಿ ಉತ್ಸಾಹಪಡುವದಕ್ಕೆ
ನನ್ನಿಂದ ಅಧಿಕವಾದ ಆಸ್ಪದವಿರುವದು.

---

[1] ಅಥವಾ, ನನಗಂತೂ ಬದುಕುವದು ಕ್ರಿಸ್ತನೇ, ಸಾಯುವದು ಲಾಭವೇ.

ಕ್ರೈಸ್ತರು ಸುವಾರ್ತೆಗೆ ಯೋಗ್ಯರಾಗಿ ನಡೆದುಕೊಳ್ಳಬೇಕೆಂಬ ಬೋಧೆ.

ಹ್ಯಾಗೂ ಕ್ರಿಸ್ತನ ಸುವಾರ್ತೆಗೆ ಯೋಗ್ಯರಾಗಿ ನಡೆದುಕೊಳ್ಳಿರಿ. ಆಗ ನಾನು ಬಂದು 27
ನಿಮ್ಮನ್ನು ನೋಡಿದರೂ ಸರಿಯೇ, ದೂರದಲ್ಲಿದ್ದು ನಿಮ್ಮ ಸುದ್ದಿಯನ್ನು ಕೇಳಿದರೂ
ಸರಿಯೇ, ನೀವು ನಿಮ್ಮ ವಿರೋಧಿಗಳಿಗೆ ಯಾವ ವಿಷಯದಲ್ಲಾದರೂ ಹೆದರದೆ ಒಂದೇ
ಆತ್ಮದಲ್ಲಿ ದೃಢವಾಗಿ ನಿಂತು ಸುವಾರ್ತೆಯಲ್ಲಿಟ್ಟ ನಂಬಿಕೆಗೋಸ್ಕರ ಐಕಮತ್ಯದಿಂದ
ಹೋರಾಡುವವರಾಗಿದ್ದೀರೆಂದು ನಾನು ತಿಳಿದುಕೊಳ್ಳುವೆನು. ನೀವು ಹೀಗಿರುವದು 28
ವಿರೋಧಿಗಳ ನಾಶನಕ್ಕೂ ನಿಮ್ಮ ರಕ್ಷಣೆಗೂ ದೇವರಿಂದಾದ ಪ್ರಮಾಣವಾಗಿದೆ.
ಹ್ಯಾಗಂದರೆ ಕ್ರಿಸ್ತನ ಮೇಲೆ ನಂಬಿಕೆಯಿಡುವದಕ್ಕೆ ಅನುಕೂಲತೆಯಲ್ಲದೆ ಆತನಿಗೋಸ್ಕರ 29
ಬಾಧೆಯನ್ನನುಭವಿಸುವ ಪದವಿಯೂ ನಿಮಗೆ ಅನುಗ್ರಹಿಸೋಣವಾಯಿತು. ಹೀಗೆ 30
ನೀವು ನನ್ನಲ್ಲಿ ಕಂಡಂಥಾ ಮತ್ತು ಈಗ ನನ್ನಲ್ಲಿರುವದಾಗಿ ಕೇಳುವಂಥಾ ಅದೇ ಹೋರಾ
ಟವು ನಮಗುಂಟು.

ನೀವು ಕ್ರಿಸ್ತನ ಹೆಸರಿನಲ್ಲಿ ಮಾಡಲ್ಪಟ್ಟ ಬೋಧನೆಯನ್ನು ಮನನ ಮಾಡುವವರೂ **2**
ಪ್ರೀತಿಯ ಪ್ರೇರಣೆಗೆ ಒಳಗಾದವರೂ ಪವಿತ್ರಾತ್ಮವರದಲ್ಲಿ ಪಾಲುಗಾರರೂ ಕಾರುಣ್ಯ
ದಯಾರಸಗಳುಳ್ಳವರೂ ಆಗಿದ್ದೀರಲ್ಲಾ. ಹೀಗಿರಲಾಗಿ ಐಕಮತ್ಯವುಳ್ಳವರಾಗಿದ್ದು ನನ್ನ 2
ಸಂತೋಷವನ್ನು ಪರಿಪೂರ್ಣಮಾಡಿರಿ. ನಿಮ್ಮೆಲ್ಲರಲ್ಲಿ ಒಂದೇ ಪ್ರೀತಿಯಿರಲಿ; ಅನ್ಯೋನ್ಯ
ಭಾವವುಳ್ಳವರಾಗಿಯೂ ಒಂದೇ ಗುರಿಯಿಟ್ಟುಕೊಂಡವರಾಗಿಯೂ ಇರ್ರಿ. ಪಕ್ಷಪಾತ 3
ದಿಂದಾಗಲಿ ಒಣಹೆಮ್ಮೆಯಿಂದಾಗಲಿ ಯಾವದನ್ನೂ ಮಾಡದೆ, ಪ್ರತಿಯೊಬ್ಬನು ದೀನ
ಭಾವದಿಂದ ಮತ್ತೊಬ್ಬರನ್ನು ತನಗಿಂತಲೂ ಶ್ರೇಷ್ಠರೆಂದು ಎಣಿಸಲಿ. ನಿಮ್ಮಲ್ಲಿ ಪ್ರತಿ 4
ಯೊಬ್ಬನು ಸ್ವಹಿತವನ್ನು ಮಾತ್ರ ನೋಡದೆ ಪರಹಿತವನ್ನು ಸಹ ನೋಡಲಿ. ಕ್ರಿಸ್ತ 5
ಯೇಸುವಿನಲ್ಲಿದ್ದಂಥಾ ಮನಸ್ಸು ನಿಮ್ಮಲ್ಲಿಯೂ ಇರಲಿ. ಆತನು ದೇವಸ್ವರೂಪನಾಗಿದ್ದರೂ 6
ದೇವರಿಗೆ ಸರಿಸಮಾನನಾಗಿರುವದೆಂಬ ಅಮೂಲ್ಯ ಪದವಿಯನ್ನು ಬಿಡಲೊಲ್ಲೆನು ಎಂದೆಣಿ
ಸದೆ, ತನ್ನನ್ನು ಬರಿದು ಮಾಡಿಕೊಂಡು ದಾಸನ ರೂಪವನ್ನು ಧರಿಸಿಕೊಂಡು, ಮನುಷ್ಯ 7
ರಿಗೆ ಸದೃಶನಾದನು. ಹೀಗೆ ಆತನು ಆಕಾರದಲ್ಲಿ ಮನುಷ್ಯನಾಗಿ ಕಾಣಿಸಿಕೊಂಡಿದ್ದಾಗ, 8
ತನ್ನನ್ನು ತಗ್ಗಿಸಿಕೊಂಡು, ಮರಣವನ್ನು, ಅಂದರೆ ಶಿಲುಬೆಯ ಮರಣವನ್ನಾದರೂ,
ಹೊಂದುವಷ್ಟು ವಿಧೇಯನಾದನು. ಈ ಕಾರಣದಿಂದ ದೇವರು ಆತನನ್ನು ಅತ್ಯುನ್ನತ 9
ಸ್ಥಾನಕ್ಕೆ ಏರಿಸಿ ಎಲ್ಲಾ ಹೆಸರುಗಳಿಗಿಂತ ಶ್ರೇಷ್ಠವಾದ ಹೆಸರನ್ನು ಆತನಿಗೆ ದಯಪಾಲಿಸಿ
ದ್ದಾನೆ. ಆದದರಿಂದ ಸ್ವರ್ಗ ಮರ್ತ್ಯ ಪಾತಾಳಗಳಲ್ಲಿರುವವರೆಲ್ಲರೂ ಯೇಸುವಿನ ಹೆಸರಿ 10
ನಲ್ಲಿ ಅಡ್ಡಬಿದ್ದು ಯೇಸು ಕ್ರಿಸ್ತನನ್ನು ಒಡೆಯನೆಂದು ಪ್ರತಿಜ್ಞೆಮಾಡಿ ತಂದೆಯಾದ ದೇವ 11
ರಿಗೆ ಘನವನ್ನು ಸಲ್ಲಿಸುವರು.

ಹೀಗಿರುವಲ್ಲಿ, ನನ್ನ ಪ್ರಿಯರೇ, ನೀವು ನನ್ನ ಮಾತನ್ನು ಯಾವಾಗಲೂ ಕೇಳಿದಂತೆ 12
ಈಗಲೂ ಕೇಳಿರಿ. ನಾನು ನಿಮ್ಮಲ್ಲಿರುವಾಗ ಮಾತ್ರವಲ್ಲದೆ, ನಾನಿಲ್ಲದಿರುವಾಗಲೂ
ಬಹು ಹೆಚ್ಚಾಗಿ, ಮನೋಭೀತಿಯಿಂದ ನಡುಗುವವರಾಗಿ ನಿಮ್ಮ ನಿಮ್ಮ ರಕ್ಷಣೆಯನ್ನು
ಸಾಧಿಸಿಕೊಳ್ಳಿರಿ. ಯಾಕಂದರೆ ದೇವರೇ ತನ್ನ ಸುಚಿತ್ತವನ್ನು ನೆರವೇರಿಸಬೇಕೆಂದು 13

14 ನಿಮ್ಮಲ್ಲಿ ಉದ್ದೇಶವನ್ನೂ ಪ್ರಯತ್ನವನ್ನೂ ಉಂಟುಮಾಡುವವನಾಗಿದ್ದಾನೆ. ಗುಣ
15 ಗುಟ್ಟದೆಯೂ ವಿವಾದವಿಲ್ಲದೆಯೂ ಎಲ್ಲವನ್ನು ಮಾಡಿರಿ. ಹೀಗೆ ನೀವು ನಿರ್ದೋಷಿ
ಗಳೂ ಯಥಾರ್ಥಮನಸ್ಸುಳ್ಳವರೂ ಆಗಿದ್ದು, ವಕ್ರಬುದ್ಧಿಯುಳ್ಳ ವಿಪರೀತವಾದ ಸಂತ
16 ತಿಯ ಮಧ್ಯದಲ್ಲಿ ದೇವರ ನಿಷ್ಕಳಂಕರಾದ ಮಕ್ಕಳಾಗಿರುವಿರಿ. ಈ ಸಂತತಿಯವರೊ
ಳಗೆ ನೀವು ಸರ್ವರಿಗೂ ಜೀವದಾಯಕ ವಾಕ್ಯವನ್ನು ತೋರಿಸಿಕೊಡುವವರಾಗಿದ್ದು
ಲೋಕದೊಳಗೆ ಹೊಳೆಯುವ ಜ್ಯೋತಿರ್ಮಂಡಲಗಳಂತೆ ಕಾಣಿಸುವವರಾಗಿದ್ದೀರಲ್ಲಾ.
ನೀವು ಹೀಗೆ ನಡೆದರೆ, ನಾನು ಕೆಲಸ ಸಾಧಿಸಿದ್ದೂ ವ್ಯರ್ಥವಲ್ಲ, ನಾನು ಪ್ರಯಾಸ
ಪಟ್ಟದ್ದೂ ವ್ಯರ್ಥವಲ್ಲ ಎಂಬ ಉತ್ಸಾಹವು ಕ್ರಿಸ್ತನ ದಿನದಲ್ಲಿ ನನಗೆ ಉಂಟಾಗುವದು.
17 ನಿಮ್ಮ ನಂಬಿಕೆಯೆಂಬ ಯಜ್ಞವನ್ನು ದೇವರಿಗರ್ಪಿಸುವ ಸೇವೆಯಲ್ಲಿ ನಾನೇ ಪಾನದ್ರವ್ಯ
ವಾಗಿ ಅರ್ಪಿತವಾಗಬೇಕಾದರೂ ನನಗೆ ಸಂತೋಷ, ನಿಮ್ಮೆಲ್ಲರ ಕೂಡ ಸಂತೋಷ.
18 ಹಾಗೆಯೇ ನೀವೂ ಸಂತೋಷಿಸಿರಿ, ನನ್ನೊಂದಿಗೆ ಸಂತೋಷಿಸಿರಿ.

**ಪೌಲನು ಎಪಫ್ರೊದೀತನನ್ನು ಫಿಲಿಪ್ಪಿಯವರಿಗೆ ಕಳುಹಿಸಿ, ತಿಮೊಥೆಯನನ್ನು ಮುಂದೆ ಕಳುಹಿಸುತ್ತೇನೆಂದು ಹೇಳಿದ್ದು.**

19 ಆದರೆ ಕರ್ತನಾದ ಯೇಸುವಿನ ಚಿತ್ತವಾದರೆ ನಾನು ತಿಮೊಥೆಯನನ್ನು ಬೇಗನೆ
ನಿಮ್ಮ ಬಳಿಗೆ ಕಳುಹಿಸಬೇಕೆಂದು ನಿರೀಕ್ಷಿಸುತ್ತೇನೆ. ಅವನ ಮುಖಾಂತರ ನಿಮ್ಮ ಸಂಗತಿ
20 ಗಳನ್ನು ತಿಳಿದು ನಾನೂ ಧೈರ್ಯ ತಂದುಕೊಂಡೇನು. ಅವನ ಹಾಗೆ ನಿಮ್ಮ ಕಾರ್ಯ
ಗಳನ್ನು ಕುರಿತು ಯಥಾರ್ಥವಾಗಿ ಚಿಂತಿಸುವವರು ನನ್ನ ಬಳಿಯಲ್ಲಿ ಬೇರೆ ಯಾರೂ
21 ಇಲ್ಲ. ಎಲ್ಲರೂ ಸ್ವಕಾರ್ಯಗಳ ಮೇಲೆ ಮನಸ್ಸಿಡುತ್ತಾರೆಯೇ ಹೊರತು ಯೇಸು
22 ಕ್ರಿಸ್ತನ ಕಾರ್ಯಗಳ ಮೇಲೆ ಮನಸ್ಸಿಡುವದಿಲ್ಲ. ತಿಮೊಥೆಯನ ಗುಣವನ್ನು ನೀವು
ನೋಡಿ ತಿಳುಕೊಂಡಿದ್ದೀರಿ; ಮಗನು ತಂದೆಗೆ ಹ್ಯಾಗೋ ಹಾಗೆಯೇ ಅವನು ನನ್ನ
ಜೊತೆಯಲ್ಲಿ ಸುವಾರ್ತಾಪ್ರಚಾರಕ್ಕಾಗಿ ಕಷ್ಟಪಟ್ಟು ಕೆಲಸ ನಡಿಸಿದನೆಂಬುವದು ನಿಮಗೆ
23 ಗೊತ್ತುಂಟು. ಆದದರಿಂದ ನನ್ನ ಸಂಗತಿಯು ಹ್ಯಾಗಾಗುವದೋ ಅದನ್ನು ತಿಳಿದ
24 ಕೂಡಲೆ ಅವನನ್ನೇ ಕಳುಹಿಸುವದಕ್ಕೆ ನಿರೀಕ್ಷಿಸುತ್ತೇನೆ. ಇದಲ್ಲದೆ ನಾನು ಸಹ ಬೇಗನೆ
ಬರುವೆನೆಂದು ಕರ್ತನಲ್ಲಿ ದೃಢವಾಗಿ ನಂಬಿದ್ದೇನೆ.

25 ನನ್ನ ಕೊರತೆಯನ್ನು ನೀಗುವದಕ್ಕೆ ನೀವು ಕಳುಹಿಸಿದಂಥಾ, ನನ್ನ ಸಹೋದರನೂ
ಜತೆಕೆಲಸದವನೂ ಸಹಭಟನೂ ಆಗಿರುವಂಥಾ, ಎಪಫ್ರೊದೀತನನ್ನು ನಿಮ್ಮ ಬಳಿಗೆ ಕಳು
26 ಹಿಸುವದು ಅವಶ್ಯವೆಂದು ನೆನಸಿದ್ದೇನೆ. ಅವನು ನಿಮ್ಮೆಲ್ಲರನ್ನು ಕುರಿತು ಹಂಬಲಿಸು
ತ್ತಿದ್ದನು, ಮತ್ತು ತಾನು ಅಸ್ವಸ್ಥನಾಗಿದ್ದ ವರ್ತಮಾನವನ್ನು ನೀವು ಕೇಳಿದ್ದರಿಂದ ವ್ಯಸನ
27 ಪಟ್ಟನು. ಅವನು ರೋಗದಲ್ಲಿ ಬಿದ್ದು ಸಾಯುವ ಹಾಗಿದ್ದನೆಂಬುವದು ನಿಜವೇ,
ಆದರೆ ದೇವರು ಅವನನ್ನು ಕರುಣಿಸಿದನು; ಅವನನ್ನು ಮಾತ್ರವಲ್ಲದೆ, ನನಗೆ ದುಃಖದ
28 ಮೇಲೆ ದುಃಖ ಬಾರದಂತೆ ನನ್ನನ್ನೂ ಕರುಣಿಸಿದನು. ಆದದರಿಂದ ನೀವು ಅವನನ್ನು
ನೋಡಿ ತಿರಿಗಿ ಸಂತೋಷಪಡಬೇಕೆಂತಲೂ ನನಗೆ ಕೂಡ ದುಃಖ ಕಡಿಮೆಯಾಗಬೇ
29-30 ಕೆಂತಲೂ ನಾನು ಅವನನ್ನು ಹೆಚ್ಚಾದ ಅವಸರದಿಂದ ಕಳುಹಿಸಿದ್ದೇನೆ. ಹೀಗಿರಲಾಗಿ

ನೀವೇ ನನಗೆ ಮಾಡಬೇಕೆಂದಿರುವ ಉಪಚಾರದಲ್ಲಿ ಕಡಿಮೆಯಾದದ್ದನ್ನು ಪೂರ್ತಿಮಾಡು ವದಕ್ಕಾಗಿ ಅವನು ಜೀವದ ಆಶೆಯನ್ನು ಲಕ್ಷ್ಯಮಾಡದೆ ಕ್ರಿಸ್ತನ ಕೆಲಸದ ನಿಮಿತ್ತ ಸಾಯುವ ಹಾಗಿದ್ದನೆಂದು ನೀವು ತಿಳಿದು ಅವನನ್ನು ಪೂರ್ಣ ಸಂತೋಷದಿಂದ ಕರ್ತನ ಹೆಸರಿನಲ್ಲಿ ಸೇರಿಸಿಕೊಳ್ಳಿರಿ. ಅಂಥವರನ್ನು ಮಾನ್ಯರೆಂದೆಣಿಸಿರಿ.

ಸುಳ್ಳುಬೋಧಕರ ವಿಷಯದಲ್ಲಿ ಎಚ್ಚರಿಕೆಯಾಗಿರಬೇಕೆಂದು ಪೌಲನು ಬೋಧಿಸಿ ತನ್ನ ಅನುಭವವನ್ನೂ ಗುರಿಯನ್ನೂ ದೃಷ್ಟಾಂತವಾಗಿ ತಿಳಿಸಿದ್ದು.

**3** ಕಡೇ ಮಾತೇನಂದರೆ, ನನ್ನ ಸಹೋದರರೇ, ಕರ್ತನಲ್ಲಿ ಸಂತೋಷಪಡಿರಿ. ಮೊದಲು ತಿಳಿಸಿದ ಮಾತುಗಳನ್ನು ತಿರಿಗಿ ನಿಮಗೆ ಬರೆಯುವದರಲ್ಲಿ ನನಗೇನೂ ಬೇಸರವಿಲ್ಲ; ನಿಮ್ಮ ನ್ನಾದರೋ ಅದು ದೃಢಮಾಡುವದು. 2 ಆ ನಾಯಿಗಳಿಗೆ ಎಚ್ಚರಿಕೆಯಾಗಿರಿ; ದುರ್ಮನ ಸ್ಸಿನಿಂದ ಕೆಲಸಮಾಡುವವರಿಗೆ ಎಚ್ಚರಿಕೆಯಾಗಿರಿ. ಸುನ್ನತಿಯೆಂದು ಹೇಳಿಕೊಂಡು ಅಂಗಚ್ಛೇದನ ಮಾಡುವವರಿಗೆ ಎಚ್ಚರಿಕೆಯಾಗಿರಿ. 3 ನಿಜವಾದ ಸುನ್ನತಿಯವರು ಯಾರಂ ದರೆ—ದೇವರಾತ್ಮನಿಂದ ಪ್ರೇರಿತರಾಗಿ ಆರಾಧಿಸುವವರೂ ಕ್ರಿಸ್ತ ಯೇಸುವಿನಲ್ಲಿ ಹರ್ಷಗೊ ಳ್ಳುವವರೂ ಶರೀರಸಂಬಂಧವಾದವುಗಳಲ್ಲಿ ಭರವಸವಿಲ್ಲದವರೂ ಆಗಿರುವ ನಾವೇ. 4 ನಾನಾದರೋ ಶರೀರಸಂಬಂಧವಾದವುಗಳಲ್ಲಿಯೂ ಭರವಸವಿಟ್ಟರೂ ಇಡಬಹುದು. ಬೇರೆ ಯಾವನಾದರೂ ಶರೀರಸಂಬಂಧವಾದವುಗಳಲ್ಲಿ ಭರವಸವಿಡಬಹುದೆಂದು ಯೋಚಿ ಸುವದಾದರೆ, ನಾನು ಆವನಿಗಿಂತಲೂ ಹೆಚ್ಚಾಗಿ ಹಾಗೆ ಯೋಚಿಸಬಹುದು. 5 ಹುಟ್ಟಿದ ಎಂಟನೇ ದಿನದಲ್ಲಿ ನನಗೆ ಸುನ್ನತಿಯಾಯಿತು; ನಾನು ಇಸ್ರಾಯೇಲ ವಂಶದವನು, ಬೆನ್ಯ ಮೀನನ ಕುಲದವನು, ಇಬ್ರಿಯರಿಂದ ಹುಟ್ಟಿದ ಇಬ್ರಿಯನು; 6 ನೇಮನಿಷ್ಠೆಗಳನ್ನು ನೋಡಿದರೆ ನಾನು ಫರಿಸಾಯನು, ಮತಾಸಕ್ತಿಯನ್ನು ನೋಡಿದರೆ ನಾನು ಕ್ರೈಸ್ತಸಭೆಯ ಹಿಂಸಕನು, ಧರ್ಮಶಾಸ್ತ್ರದಲ್ಲಿ ಹೇಳಿರುವ ನೀತಿಯನ್ನು ನೋಡಿದರೆ ನಾನು ನಿರ್ದೋಷಿ. 7, 8 ಆದರೆ ನನಗೆ ಲಾಭವಾಗಿದ್ದಂಥವುಗಳನ್ನು ಕ್ರಿಸ್ತನ ನಿಮಿತ್ತ ನಷ್ಟವೆಂದೆಣಿಸಿದ್ದೇನೆ. ಇಷ್ಟೇ ಅಲ್ಲದೆ, ನನ್ನ ಕರ್ತನಾದ ಕ್ರಿಸ್ತ ಯೇಸುವನ್ನರಿಯುವದೇ ಅತಿಶ್ರೇಷ್ಠವಾದದ್ದೆಂದು ತಿಳಿದು ನಾನು ಎಲ್ಲವನ್ನು ನಷ್ಟವೆಂದೆಣಿಸುತ್ತೇನೆ. ಆತನ ನಿಮಿತ್ತ ನಾನು ಎಲ್ಲವನ್ನೂ ಕಳ ಕೊಂಡು ಅದನ್ನು ಕಸವೆಂದೆಣಿಸುತ್ತೇನೆ. 9 ಇದರಲ್ಲಿ ನನ್ನ ಉದ್ದೇಶವೇನಂದರೆ—ನಾನು ಕ್ರಿಸ್ತನನ್ನು ಸಂಪಾದಿಸಿಕೊಂಡು, ನೇಮನಿಷ್ಠೆಗಳ ಫಲವಾಗಿರುವ ಸ್ವನೀತಿಯನ್ನಾಶ್ರಯಿ ಸದೆ, ಕ್ರಿಸ್ತನನ್ನು ನಂಬುವದರಿಂದ ದೊರಕುವಂಥಾ ಅಂದರೆ ಕ್ರಿಸ್ತನ ಮೇಲಣ ನಂಬಿಕೆಯ ಆಧಾರದಿಂದ ದೇವರು ಕೊಡುವಂಥಾ ನೀತಿಯನ್ನೇ ಹೊಂದಿ, ಕ್ರಿಸ್ತನಲ್ಲಿರುವವನಾಗಿ ಕಾಣಿಸಿ ಕೊಳ್ಳಬೇಕೆಂಬುವದೇ. 10 ಆತನನ್ನೂ ಆತನ ಪುನರುತ್ಥಾನದಲ್ಲಿರುವ ಶಕ್ತಿಯನ್ನೂ ಆತನ ಬಾಧೆಗಳಲ್ಲಿ ಪಾಲುಗಾರನಾಗಿರುವ ಪದವಿಯನ್ನೂ ತಿಳುಕೊಳ್ಳಲೂ, ಆತನ ಮರಣದ ವಿಷಯದಲ್ಲಿ ಆತನಿಗೆ ಸರೂಪನಾಗಲೂ ಬೇಕೆಂಬುವದೇ ನನ್ನ ಕುತೂಹಲವಾಗಿದೆ. 11 ಹೀಗಾದರೆ, ಸತ್ತವರಲ್ಲಿ ಕೆಲವರಿಗೆ ಆಗುವ ಶ್ರೇಷ್ಠ ಪುನರುತ್ಥಾನವು[1] ನನಗೆ ಒದಗಿ

---

[1] ಲೂಕ ೨೦, ೩೫; ೧ ಕೊರಿಂಥ. ೧೫, ೨೩; ಪ್ರಕಟಣೆ ೨೦, ೫. ೬; ಇಬ್ರಿಯ. ೧೧, ೩೫ ನೋಡು.

12 ಬಂದೀತು. ಇಷ್ಟರೊಳಗೆ ನಾನು ಬಿರುದನ್ನು ಪಡಕೊಂಡು ಸಿದ್ಧಿಗೆ ಬಂದವನೆಂದು ಹೇಳುವದಿಲ್ಲ; ನಾನು ಯಾವದನ್ನು ಹೊಂದುವದಕ್ಕಾಗಿ ಕ್ರಿಸ್ತ ಯೇಸು ನನ್ನನ್ನು ಹಿಡಿದು
13 ಕೊಂಡನೋ ಅದನ್ನು ಹಿಡಿದುಕೊಳ್ಳುವದಕ್ಕೋಸ್ಕರ ಓಡುತ್ತಾ ಇದ್ದೇನೆ. ಸಹೋದರರೇ, ನಾನಂತೂ ಹಿಡಿದುಕೊಂಡವನೆಂದು ನನ್ನನ್ನು ಈ ವರೆಗೂ ಎಣಿಸಿಕೊಳ್ಳುವದಿಲ್ಲ; ಆದರೆ ಒಂದು, ನಾನು ಹಿಂದಿನ ಸಂಗತಿಗಳನ್ನು ಮರೆತುಬಿಟ್ಟು, ಮುಂದಿನವುಗಳನ್ನು
14 ಹಿಡಿಯುವದಕ್ಕೆ ಎದೆಬೊಗ್ಗಿದವನಾಗಿ, ದೇವರು ಕ್ರಿಸ್ತನ ಮೂಲಕವಾಗಿ ನಮ್ಮನ್ನು ಮೇಲಕ್ಕೆ ಕರೆದು ನಮ್ಮ ಮುಂದೆ ಇಟ್ಟಿರುವ ಬಿರುದನ್ನು ಗುರಿಮಾಡಿಕೊಂಡು, ಓಡುತ್ತಾ
15 ಇದ್ದೇನೆ. ನಮ್ಮಲ್ಲಿ ಪ್ರವೀಣರಾದವರು ಇದೇ ಅಭಿಪ್ರಾಯವುಳ್ಳವರಾಗಿರೋಣ. ಯಾವದಾದರೂ ಒಂದು ವಿಷಯದಲ್ಲಿ ನೀವು ಬೇರೆ ಅಭಿಪ್ರಾಯವುಳ್ಳವರಾಗಿದ್ದರೆ, ಅದನ್ನೂ
16 ದೇವರು ನಿಮಗೆ ತೋರಿಸಿಕೊಡುವನು. ಆದರೆ ನಾವು ಯಾವ ಸೂತ್ರವನ್ನನುಸರಿಸಿ ಇಲ್ಲಿಯ ವರೆಗೆ ಬಂದೆವೋ ಅದನ್ನೇ ಅನುಸರಿಸಿ ನಡೆಯೋಣ.

17 ಸಹೋದರರೇ, ನೀವೆಲ್ಲರು ನನ್ನನ್ನು ಅನುಸರಿಸುವವರಾಗಿರ್ರಿ; ಮತ್ತು ನಾವು ನಿಮಗೆ ತೋರಿಸಿದ ಮಾದರಿಯ ಪ್ರಕಾರ ನಡೆದುಕೊಳ್ಳುವವರನ್ನು ಲಕ್ಷ್ಯಕ್ಕೆ ತಂದುಕೊಳ್ಳಿರಿ.
18 ಯಾಕಂದರೆ ಅನೇಕರು ಕ್ರಿಸ್ತನ ಶಿಲುಬೆಗೆ ವಿರೋಧಿಗಳಾಗಿ ನಡೆಯುತ್ತಾರೆ; ಅವರ ವಿಷಯದಲ್ಲಿ ನಿಮಗೆ ಎಷ್ಟೋ ಸಾರಿ ಹೇಳಿದೆನು, ಈಗಲೂ ಅಳುತ್ತಾ ಹೇಳುತ್ತೇನೆ.
19 ನಾಶನವೇ ಅವರ ಅಂತ್ಯಾವಸ್ಥೆ, ಹೊಟ್ಟೆಯೇ ಅವರ ದೇವರು, ನಾಚಿಕೆಕೆಲಸಗಳಲ್ಲಿಯೇ ಅವರ ಗೌರವವು, ಅವರು ಪ್ರಪಂಚದ ಕಾರ್ಯಗಳ ಮೇಲೆ ಮನಸ್ಸಿಡುವವರು.
20 ನಾವಾದರೋ ಪರಲೋಕಸಂಸ್ಥಾನದವರು; ಕರ್ತನಾದ ಯೇಸು ಕ್ರಿಸ್ತನು ಅಲ್ಲಿಂದಲೇ
21 ರಕ್ಷಕನಾಗಿ ಬರುವದನ್ನು ಎದುರುನೋಡುತ್ತಾ ಇದ್ದೇವೆ. ಆತನು ಎಲ್ಲವನ್ನೂ ತನಗೆ ಅಧೀನಮಾಡಿಕೊಳ್ಳಲಾಗುವ ಪರಾಕ್ರಮವನ್ನು ಸಾಧಿಸಿ, ದೀನಾವಸ್ಥೆಯುಳ್ಳ ನಮ್ಮ ದೇಹವನ್ನು ರೂಪಾಂತರಪಡಿಸಿ ಪ್ರಭಾವವುಳ್ಳ ತನ್ನ ದೇಹದ ಸಾರೂಪ್ಯವಾಗುವಂತೆ ಮಾಡುವನು.

**4** ಹೀಗಿರಲಾಗಿ, ಪ್ರಿಯರೂ ಇಷ್ಟರೂ ಆದ ನನ್ನ ಸಹೋದರರೇ, ನನಗೆ ಸಂತೋಷವೂ ಜಯಮಾಲೆಯೂ ಆಗಿರುವವರೇ, ನಾನು ಹೇಳಿದಂತೆ ಕರ್ತನಲ್ಲಿ ದೃಢವಾಗಿ ನಿಲ್ಲಿರಿ, ಪ್ರಿಯರೇ.

ಇಬ್ಬರು ಕ್ರೈಸ್ತ ಸಹೋದರಿಗಳಲ್ಲಿ ಇದ್ದ ಮನಸ್ತಾಪವನ್ನು ಕುರಿತದ್ದು.

2 ಕರ್ತನಲ್ಲಿ ಒಂದೇ ಮನಸ್ಸುಳ್ಳವರಾಗಿರ್ರಿಯೆಂದು ಯುವೊದ್ಯಳನ್ನೂ ಸಂತುಕೆಯನ್ನೂ
3 ಪ್ರಬೋಧಿಸುತ್ತೇನೆ. ಸತ್ಯ ಸಯುಜನೇ, ಅವರಿಗೆ ಸಹಾಯಕನಾಗಿರಬೇಕೆಂದು ನಿನ್ನನ್ನೂ ಕೇಳಿಕೊಳ್ಳುತ್ತೇನೆ. ಅವರು ಕ್ಲೇಮೆನ್ಸ್ ಮುಂತಾದ ನನ್ನ ಜತೆಕೆಲಸದವರ ಸಹಿತವಾಗಿ ನನ್ನ ಕೂಡ ಸುವಾರ್ತೆಗೋಸ್ಕರ ಪ್ರಯಾಸಪಟ್ಟವರು. ಅವರವರ ಹೆಸರುಗಳು ಜೀವಬಾಧ್ಯರ ಪಟ್ಟಿಯಲ್ಲಿ ಬರೆದವೆ.

ಸುವವರಾಗಿಯೂ ಇರ್ರಿ. ದೇವರು ನಿಮಗೆ ಕ್ರಿಸ್ತನಲ್ಲಿ ಕ್ಷಮಿಸಿದನಲ್ಲಾ; ಆದದರಿಂದ **5**
ದೇವರ ಪ್ರಿಯರಾದ ಮಕ್ಕಳಿಗೆ ತಕ್ಕ ಹಾಗೆ ಆತನನ್ನು ಅನುಸರಿಸುವವರಾಗಿರಿ. ಕ್ರಿಸ್ತನು 2
ನಮ್ಮನ್ನು ಪ್ರೀತಿಸಿ, ನಮ್ಮೆಲ್ಲರಿಗೋಸ್ಕರ ತನ್ನನ್ನೇ ದೇವರಿಗೆ ಸುವಾಸನೆಯಾದ ಕಾಣಿಕೆ
ಯಾಗಿಯೂ ಯಜ್ಞವಾಗಿಯೂ ಸಮರ್ಪಿಸಿಕೊಂಡ ಪ್ರಕಾರ, ನೀವೂ ಪ್ರೀತಿಯಲ್ಲಿ ನಡೆದು
ಕೊಳ್ಳಿರಿ.

ಜಾರತ್ವ ಯಾವ ವಿಧವಾದ ಬಂಡುತನ ದ್ರವ್ಯಾಶೆ ಇವುಗಳ ಸುದ್ದಿಯಾದರೂ ನಿಮ್ಮಲ್ಲಿ 3
ಇರಬಾರದು; ಇವುಗಳಿಗೆ ದೂರವಾಗಿರುವದೇ ದೇವಜನರಿಗೆ ಯೋಗ್ಯವಾದದ್ದು.
ಹೊಲಸು ಮಾತು ಹುಚ್ಚು ಮಾತು ಕುಚೋದ್ಯ ಮಾತು ಇವು ಬೇಡ, ಅಯುಕ್ತವಾಗಿವೆ; 4
ಇವುಗಳನ್ನು ಬಿಟ್ಟು ದೇವರಿಗೆ ಉಪಕಾರಸ್ತುತಿ ಮಾಡುವದು ಉತ್ತಮ. ಜಾರರು 5
ದುರಾಚಾರಿಗಳು ವಿಗ್ರಹಾರಾಧಕರಂತಿರುವ ಲೋಭಿಗಳು ಇವರಲ್ಲಿ ಒಬ್ಬರಿಗಾದರೂ
ಕ್ರಿಸ್ತನ ಮತ್ತು ದೇವರ ರಾಜ್ಯದಲ್ಲಿ ಬಾಧ್ಯತೆ ಇಲ್ಲವೇ ಇಲ್ಲವೆಂದು ನೀವು ಚನ್ನಾಗಿ
ಬಲ್ಲಿರಲ್ಲವೇ. ಹುರುಳಿಲ್ಲದ ಮಾತುಗಳನ್ನಾಡುವವರಿಗೆ ಕಿವಿಗೊಟ್ಟು ಮೋಸ ಹೋಗ 6
ಬೇಡಿರಿ; ಅಂಥಾ ಕೃತ್ಯಗಳ ನಿಮಿತ್ತದಿಂದ ದೇವರ ಕೋಪವು ಆತನಿಗೆ ಅವಿಧೇಯರಾಗಿ
ರುವವರ ಮೇಲೆ ಬರುತ್ತದೆ. ನೀವು ಅವರೊಂದಿಗೆ ಪಾಲುಗಾರರಾಗಿರಬೇಡಿರಿ. 7

ನೀವು ಹಿಂದಿನ ಕಾಲದಲ್ಲಿ ಕತ್ತಲೆಯಾಗಿದ್ದಿರಿ, ಆದರೆ ಈಗ ನೀವು ಕ್ರಿಸ್ತನಲ್ಲಿದ್ದು ಬೆಳ 8
ಕಾಗಿದ್ದೀರಿ. ಬೆಳಕಿನವರಂತೆ ನಡೆದುಕೊಳ್ಳಿರಿ. ಬೆಳಕಿನ ಫಲವು ಉಪಕಾರದಲ್ಲಿಯೂ 9
ನೀತಿಯಲ್ಲಿಯೂ ಸತ್ಯದಲ್ಲಿಯೂ ಕಾಣಿಸಿಕೊಳ್ಳುತ್ತದೆ. ಕರ್ತನಿಗೆ ಮೆಚ್ಚಿಗೆಯಾದದ್ದು 10
ಏನೆಂಬುವದನ್ನು ಪರಿಶೋಧಿಸಿ ತಿಳುಕೊಳ್ಳಿರಿ. ಕತ್ತಲೆಗೆ ಸಂಬಂಧವಾದ ಕೃತ್ಯಗಳಿಂದ 11
ಯಾವ ಪ್ರಯೋಜನವೂ ಬರಲಾರದು; ಅವುಗಳಲ್ಲಿ ಪಾಲುಗಾರರಾಗಿರದೆ, ಅವುಗಳನ್ನು
ಬೈಲಿಗೆ ತಂದು ಖಂಡಿಸಿರಿ. ಆ ಜನರು ರಹಸ್ಯವಾಗಿ ನಡಿಸುವ ಕೆಲಸಗಳನ್ನು ಕುರಿತು 12
ಮಾತಾಡುವದಾದರೂ ನಾಚಿಕೆಗೆ ಕಾರಣವಾಗಿದೆ. ಬೆಳಕಿನಿಂದ ಎಲ್ಲಾ ಕೃತ್ಯಗಳ 13
ನಿಜಗುಣ ತೋರಿಬರುತ್ತದೆ; ಅದರಿಂದ ಕೆಟ್ಟದ್ದು ಕೆಟ್ಟದ್ದೇ ಎಂದು ಕಾಣಿಸುವದು.
ಪ್ರಕಟವಾಗಿರುವದೆಲ್ಲಾ ಬೆಳಕಿಗೆ ಸಂಬಂಧವಾದದ್ದು[1]. ಆದದರಿಂದ— 14

ನಿದ್ರೆ ಮಾಡುವವನೇ, ಎಚ್ಚರವಾಗು!
ಸತ್ತವರನ್ನು ಬಿಟ್ಟು ಏಳು!
ಕ್ರಿಸ್ತನು ನಿನಗೆ ಪ್ರಕಾಶ ಕೊಡುವನು

ಎಂದು ಹೇಳಿಯದೆ.

ಆದಕಾರಣ ನೀವು ನಡಕೊಳ್ಳುವ ರೀತಿಯನ್ನು ಕುರಿತು ಚನ್ನಾಗಿ ನೋಡಿಕೊಳ್ಳಿರಿ. 15
ಜ್ಞಾನವಿಲ್ಲದವರಾಗಿರದೆ ಜ್ಞಾನವಂತರಾಗಿರ್ರಿ. ಈ ದಿನಗಳು ಕೆಟ್ಟವುಗಳಾಗಿವೆ; ಆದದರಿಂದ 16
ಕಾಲವನ್ನು ಸುಮ್ಮನೆ ಕಳಕೊಳ್ಳದೆ ಅದನ್ನು ಬೆಲೆಯುಳ್ಳದ್ದೆಂದು ಉಪಯೋಗಿಸಿಕೊಳ್ಳಿರಿ.
ಮತ್ತು ಬುದ್ಧಿಹೀನರಾಗಿ ನಡೆಯದೆ ಕರ್ತನ ಚಿತ್ತವೇನೆಂಬುವದನ್ನು ವಿಚಾರಿಸಿ ತಿಳಿದವ 17
ರಾಗಿರ್ರಿ. ಮದ್ಯಪಾನ ಮಾಡಿ ಮತ್ತರಾಗಬೇಡಿರಿ; ಅದರಿಂದ ಪಟಿಂಗತನವು ಹುಟ್ಟು 18

---

[1] ಅಥವಾ, ಪ್ರಕಟಮಾಡುವಂಥಾದ್ದೆಲ್ಲವೂ ಬೆಳಕೇ.

19 ತ್ತದೆ. ಆದರೆ ಪವಿತ್ರಾತ್ಮಭರಿತರಾಗಿದ್ದು, ಕೀರ್ತನೆಗಳಿಂದಲೂ ಸಂಗೀತಗಳಿಂದಲೂ ಆತ್ಮಸಂಬಂಧವಾದ ಪದಗಳಿಂದಲೂ ಒಬ್ಬರಿಗೊಬ್ಬರು ಮಾತಾಡಿಕೊಳ್ಳುತ್ತಾ, ನಿಮ್ಮ 20 ಹೃದಯಗಳಲ್ಲಿ ಕರ್ತನಿಗೆ ಗಾನಮಾಡುತ್ತಾ, ಕೀರ್ತನೆ ಹಾಡುತ್ತಾ, ಯಾವಾಗಲೂ ಎಲ್ಲಾ ಕಾರ್ಯಗಳಿಗೋಸ್ಕರ ನಮ್ಮ ಕರ್ತನಾದ ಯೇಸು ಕ್ರಿಸ್ತನ ಹೆಸರಿನಲ್ಲಿ ತಂದೆ 21 ಯಾದ ದೇವರಿಗೆ ಸ್ತೋತ್ರ ಮಾಡುತ್ತಾ, ಕ್ರಿಸ್ತನಿಗೆ ಭಯಪಡುವವರಾಗಿದ್ದು ಒಬ್ಬರಿಗೊಬ್ಬರು ವಿನಯವುಳ್ಳವರಾಗಿ ನಡೆದುಕೊಳ್ಳಿರಿ.

### ಗಂಡಹೆಂಡತಿಯರೂ ತಂದೆಗಳೂ ಮಕ್ಕಳೂ ಯಜಮಾನರೂ ದಾಸರೂ ನಡೆಯಬೇಕಾದ ರೀತಿ.

(ಕೊಲೊಸ್ಸೆ. 3, 18—4, 1.)

22 ಸ್ತ್ರೀಯರೇ, ನೀವು ಕರ್ತನಿಗೆ ಹ್ಯಾಗೋ ಹಾಗೆಯೇ ನಿಮ್ಮನಿಮ್ಮ ಗಂಡಂದಿರಿಗೆ 23 ಅಧೀನರಾಗಿರ್ರಿ. ಕ್ರಿಸ್ತನು ಸಭೆಗೆ ತಲೆಯಾಗಿರುವ ಪ್ರಕಾರವೇ ಗಂಡನು ಹೆಂಡತಿಗೆ 24 ತಲೆಯಾಗಿದ್ದಾನೆ. ಕ್ರಿಸ್ತನೋ ಸಭೆಯೆಂಬ ದೇಹಕ್ಕೆ ರಕ್ಷಕನಾಗಿದ್ದಾನೆ. ಅದಿರಲಿ; ಸಭೆಯು ಕ್ರಿಸ್ತನಿಗೆ ಹ್ಯಾಗೆ ಅಧೀನವಾಗಿದೆಯೋ ಹಾಗೆಯೇ ಸ್ತ್ರೀಯರು ತಮ್ಮತಮ್ಮ ಗಂಡಂದಿರಿಗೆ ಎಲ್ಲಾ ವಿಷಯಗಳಲ್ಲಿ ಅಧೀನರಾಗಿರಬೇಕು.

25 ಪುರುಷರೇ, ಕ್ರಿಸ್ತನು ಸಭೆಯನ್ನು ಪ್ರೀತಿಸಿದ ಪ್ರಕಾರವೇ ನಿಮ್ಮನಿಮ್ಮ ಹೆಂಡತಿಯ 26 ರನ್ನು ಪ್ರೀತಿಸಿರಿ. ಆತನು ಅದನ್ನು ಪ್ರತಿಷ್ಠೆಪಡಿಸುವದಕ್ಕಾಗಿ ತನ್ನನ್ನು ಮರಣಕ್ಕೆ 27 ಒಪ್ಪಿಸಿಕೊಟ್ಟನು. ಅದನ್ನು ಕಳಂಕ ಸುಕ್ಕು ಮುಂತಾದೊಂದೂ ಇಲ್ಲದ ಕನ್ನಿಕೆಯೋ ಎಂಬಂತೆ ಪರಿಶುದ್ಧವಾಗಿಯೂ ನಿರ್ದೋಷವಾಗಿಯೂ ಮಹಿಮೆಯುಳ್ಳದ್ದಾಗಿಯೂ ಇರುವ ಸಭೆಯನ್ನಾಗಿ ತನ್ನೆದುರಿನಲ್ಲಿ ನಿಲ್ಲಿಸಿಕೊಳ್ಳಬೇಕೆಂದು ವಾಕ್ಯೋಪದೇಶ ಸಹಿತ 28 ವಾದ ಜಲಸ್ನಾನವನ್ನು ಮಾಡಿಸಿ ಶುದ್ಧಮಾಡಿದನು. ಹಾಗೆಯೇ ಪುರುಷರು ಸಹ ಸ್ವಂತ ಶರೀರವನ್ನು ಪ್ರೀತಿಸಿಕೊಳ್ಳುವ ಪ್ರಕಾರವೇ ತಮ್ಮ ಹೆಂಡತಿಯರನ್ನು ಪ್ರೀತಿಸುವ ಹಂಗಿನವರಾಗಿದ್ದಾರೆ. ತನ್ನ ಹೆಂಡತಿಯನ್ನು ಪ್ರೀತಿಸುವವನು ತನ್ನನ್ನೇ ಪ್ರೀತಿಸಿಕೊಳ್ಳು 29 ವವನಾಗಿದ್ದಾನೆ. ಯಾರೂ ಎಂದೂ ಸ್ವಶರೀರವನ್ನು ಅಲಕ್ಷ್ಯಮಾಡಿದ್ದಿಲ್ಲ; ಎಲ್ಲರೂ 30 ತಮ್ಮ ಶರೀರಗಳನ್ನು ಪೋಷಿಸಿ ಸಂರಕ್ಷಿಸುತ್ತಾರೆ. ಯಾವ ದೇಹಕ್ಕೆ ನಾವು ಅಂಗಗಳಾಗಿದ್ದೇವೋ ಸಭೆಯೆಂಬ ಆ ದೇಹವನ್ನು ಕ್ರಿಸ್ತನು ಹಾಗೆಯೇ ಪೋಷಿಸಿ ಸಂರಕ್ಷಿಸುತ್ತಾ 31 ನಲ್ಲಾ. ಇದರ ನಿಮಿತ್ತದಿಂದ ಪುರುಷನು ತಂದೆತಾಯಿಗಳನ್ನು ಬಿಟ್ಟು ತನ್ನ ಹೆಂಡತಿಯನ್ನು ಸೇರಿಕೊಳ್ಳುವನು; ಅವರಿಬ್ಬರೂ ಒಂದೇ ಶರೀರವಾಗಿರುವರು[1] ಎಂದು ಬರೆದದೆ. 32 ನಾನು ಕ್ರಿಸ್ತನಿಗೂ ಸಭೆಗೂ ಇರುವ ಸಂಬಂಧವನ್ನು ಕುರಿತು ಮಾತಾಡುತ್ತಾ ಇದ್ದೇನೆ; 33 ಇದು ವರೆಗೆ ಗುಪ್ತವಾಗಿದ್ದ ಈ ಸತ್ಯಾರ್ಥವು ಬಹು ಗಂಭೀರವಾದದ್ದು. ಅದಿರಲಿ; ನಿಮ್ಮಲ್ಲಿ ಪ್ರತಿ ಪುರುಷನು ತನ್ನನ್ನು ಪ್ರೀತಿಸಿಕೊಳ್ಳುವಂತೆಯೇ ತನ್ನ ಹೆಂಡತಿಯನ್ನೂ ಪ್ರೀತಿಸಬೇಕು; ಪ್ರತಿ ಹೆಂಡತಿಯು ತನ್ನ ಗಂಡನಿಗೆ ಭಯಭಕ್ತಿಯಿಂದ ನಡೆದುಕೊಳ್ಳಬೇಕು.

---

[1] ಉತ್ಪತ್ತಿ ೨, ೨೪.

**6** ಮಕ್ಕಳೇ, ನೀವು ಕರ್ತನಲ್ಲಿರುವವರಿಗೆ ತಕ್ಕ ಹಾಗೆ ನಿಮ್ಮ ತಂದೆತಾಯಿಗಳ ಮಾತನ್ನು ಕೇಳಬೇಕು; ಇದು ಧರ್ಮ. 2 ವಾಗ್ದಾನಸಹಿತವಾದ ಮೊದಲನೇ ಆಜ್ಞೆಯನ್ನು ಕೇಳಿರಿ— 3 ನಿನ್ನ ತಂದೆಯನ್ನೂ ತಾಯಿಯನ್ನೂ ಸನ್ಮಾನಿಸು; ಇದರಿಂದ ನಿನಗೆ ಮೇಲಾಗುವದು, ನೀನು ಭೂಮಿಯ ಮೇಲೆ ಬಹುಕಾಲ ಬದುಕುವಿ[1].

4 ತಂದೆಗಳೇ, ನಿಮ್ಮ ಮಕ್ಕಳಿಗೆ ಕೋಪವನ್ನೆಬ್ಬಿಸದೆ, ಕರ್ತನಿಗೆ ಮೆಚ್ಚಿಗೆಯಾಗಿರುವ ಬಾಲಶಿಕ್ಷೆಯನ್ನೂ ಬಾಲೋಪದೇಶವನ್ನೂ ಮಾಡುತ್ತಾ ಅವರನ್ನು ಸಾಕಿಸಲಹಿರಿ.

5 ದಾಸತ್ವದಲ್ಲಿರುವವರೇ[2], ಈ ಲೋಕದಲ್ಲಿ ನಿಮಗೆ ಯಜಮಾನರಾಗಿರುವವರಿಗೆ ಕ್ರಿಸ್ತನಿಗೆಂದು ಮನೋಭೀತಿಯಿಂದ ನಡುಗುವವರಾಗಿಯೂ ಸರಳಹೃದಯರಾಗಿಯೂ ವಿಧೇಯರಾಗಿರ್ರಿ. 6 ಮನುಷ್ಯರನ್ನು ಮೆಚ್ಚಿಸುವವರು ಮಾಡುವ ಪ್ರಕಾರ ಯಜಮಾನರು ನೋಡುತ್ತಿರುವಾಗ ಮಾತ್ರ ಸೇವೆಮಾಡದೆ, ಕ್ರಿಸ್ತನ ದಾಸರಿಗೆ ತಕ್ಕ ಹಾಗೆ ದೇವರ ಚಿತ್ತವನ್ನು ಮನಃಪೂರ್ವಕವಾಗಿ ನಡಿಸಿರಿ. 7 ಮನುಷ್ಯರಿಗೋಸ್ಕರವಲ್ಲ, ಕರ್ತನಿಗೋಸ್ಕರ ಸೇವೆಮಾಡುತ್ತೇವೆಂದು ಚಿತ್ತಪೂರ್ವಕವಾಗಿ ಸೇವೆಮಾಡಿರಿ. 8 ಯಾಕಂದರೆ ಒಬ್ಬನು ದಾಸನಾಗಲಿ ಸ್ವತಂತ್ರನಾಗಲಿ, ತಾನು ಯಾವ ಸತ್ಕಾರ್ಯವನ್ನು ಮಾಡುತ್ತಾನೋ ಅದರ ಪ್ರತಿಫಲವನ್ನು ಕರ್ತನಿಂದ ಹೊಂದುವನೆಂಬುವದನ್ನು ನೀವು ತಿಳಿದವರಾಗಿಯೇ ಇದ್ದೀರಿ.

9 ಯಜಮಾನರೇ, ನಿಮ್ಮ ಕೈಕೆಳಗಿರುವ ದಾಸರ ವಿಷಯದಲ್ಲಿ ಅದೇ ರೀತಿಯಾಗಿ ನಡೆಯಿರಿ. ಪರಲೋಕದಲ್ಲಿ ನಿಮಗೂ ಅವರಿಗೂ ಯಜಮಾನನಾಗಿರುವಾತನು ಇದ್ದಾನೆಂತಲೂ ಆತನಲ್ಲಿ ಪಕ್ಷಪಾತವಿಲ್ಲವೆಂತಲೂ ತಿಳಿದು ನಿಮ್ಮ ದಾಸರನ್ನು ಬೆದರಿಸುವ ಪದ್ಧತಿಯನ್ನು ಬಿಟ್ಟುಬಿಡಿರಿ.

### ಕ್ರೈಸ್ತರು ನಡಿಸುವ ಯುದ್ಧದಲ್ಲಿ ದೇವರು ಕೊಡುವ ಸರ್ವಾಯುಧಗಳು ಅವಶ್ಯವಾಗಿವೆ.

10 ಕಡೇ ಮಾತೇನಂದರೆ, ನೀವು ಕರ್ತನನ್ನೂ ಆತನ ಅತ್ಯಧಿಕವಾದ ಶಕ್ತಿಯನ್ನೂ ಆಶ್ರಯಿಸಿಕೊಂಡವರಾಗಿ ಬಲಗೊಳ್ಳಿರಿ. 11 ಸೈತಾನನ ತಂತ್ರೋಪಾಯಗಳನ್ನು ನೀವು ಎದುರಿಸಿ ನಿಲ್ಲುವದಕ್ಕೆ ಶಕ್ತರಾಗುವಂತೆ ದೇವರು ದಯಪಾಲಿಸುವ ಸರ್ವಾಯುಧಗಳನ್ನು ಧರಿಸಿಕೊಳ್ಳಿರಿ. 12 ನಾವು ಹೋರಾಡುವದು ಮನುಷ್ಯಮಾತ್ರದವರ ಸಂಗಡವಲ್ಲ; ರಾಜತ್ವಗಳ ಮೇಲೆಯೂ ಅಧಿಕಾರಗಳ ಮೇಲೆಯೂ ಈ ಅಂಧಕಾರದ ಲೋಕಾಧಿಪತಿಗಳ ಮೇಲೆಯೂ ಆಕಾಶಮಂಡಲದಲ್ಲಿರುವ ದುರಾತ್ಮಗಳ ಸೇನೆಯ ಮೇಲೆಯೂ ನಾವು ಯುದ್ಧಮಾಡುವವರಾಗಿದ್ದೇವೆ. 13 ಆದದರಿಂದ ಕಠಿನ ಯುದ್ಧವು ನಡೆಯುವ ದಿವಸದಲ್ಲಿ ಆ ವೈರಿಗಳನ್ನು ಎದುರಿಸುವದಕ್ಕೂ ಮಾಡಬೇಕಾದದ್ದೆಲ್ಲವನ್ನು ಮಾಡಿ ಜಯಶಾಲಿಗಳಾಗಿ ನಿಲ್ಲುವದಕ್ಕೂ ಶಕ್ತರಾಗುವಂತೆ ದೇವರು ದಯಪಾಲಿಸುವ ಸರ್ವಾಯುಧಗಳನ್ನು ತೆಗೆದುಕೊಳ್ಳಿರಿ. 14 ಸತ್ಯವೆಂಬ ನಡುಕಟ್ಟನ್ನು ಕಟ್ಟಿಕೊಂಡು, ನೀತಿಯೆಂಬ ಉಕ್ಕಿನ ಕವಚವನ್ನು

[1] ದ್ವಿತೀಯ ನ್ಯಾಯ ೫, ೧೬; ಹೊರಡೋಣ ೨೦, ೧೨.
[2] ಅಥವಾ, ಗುಲಾಮರೇ, ದಾಸರೇ.

15 ಧರಿಸಿಕೊಂಡು[1], ಸಮಾಧಾನದ ವಿಷಯವಾದ ಸುವಾರ್ತೆಯನ್ನು ತಿಳಿಸುವದರಲ್ಲಿ ಸಿದ್ಧ
16 ವಾದ ಮನಸ್ಸೆಂಬ[2] ಕೆರಗಳನ್ನು ಮೆಟ್ಟಿಕೊಂಡು ನಿಲ್ಲಿರಿ. ಮತ್ತು ನಂಬಿಕೆಯೆಂಬ ಗುರಾಣಿಯನ್ನು ಹಿಡುಕೊಳ್ಳಿರಿ; ಅದರಿಂದ ನೀವು ಕೆಡಕನ ಅಗ್ನಿಬಾಣಗಳನ್ನೆಲ್ಲಾ ಆರಿಸು
17 ವದಕ್ಕೆ ಶಕ್ತರಾಗುವಿರಿ. ಇದಲ್ಲದೆ ರಕ್ಷಣೆಯೆಂಬ ಶಿರಸ್ತ್ರಾಣವನ್ನು ಇಟ್ಟುಕೊಂಡು
18 ಪವಿತ್ರಾತ್ಮನು ಕೊಡುವ ದೇವರ ವಾಕ್ಯವೆಂಬ ಕತ್ತಿಯನ್ನು[3] ಹಿಡಿಯಿರಿ. ನೀವು ಪವಿತ್ರಾತ್ಮಪ್ರೇರಿತರಾಗಿ ಎಲ್ಲಾ ಸಮಯಗಳಲ್ಲಿ ಸಕಲವಿಧವಾದ ಪ್ರಾರ್ಥನೆಯಿಂದಲೂ ವಿಜ್ಞಾಪನೆಯಿಂಧಲೂ ದೇವರನ್ನು ಪ್ರಾರ್ಥಿಸಿರಿ. ಇದರಲ್ಲಿ ಪೂರ್ಣ ಸ್ಥಿರಚಿತ್ತರಾಗಿದ್ದು
19 ದೇವಜನರೆಲ್ಲರ ವಿಷಯದಲ್ಲಿ ವಿಜ್ಞಾಪನೆ ಮಾಡುತ್ತಾ ಎಚ್ಚರವಾಗಿರ್‍ರಿ. ನನಗೋಸ್ಕರ ಸಹ ಪ್ರಾರ್ಥನೆ ಮಾಡಿರಿ. ನಾನು ಬಾಯಿ ತೆರೆಯುವಾಗ ಪೂರ್ವಕಾಲದಲ್ಲಿ ಗುಪ್ತವಾಗಿದ್ದ ಸುವಾರ್ತಾಸತ್ಯಾರ್ಥವನ್ನು ಭಯವಿಲ್ಲದೆ ತಿಳಿಸುವದಕ್ಕೆ ಬೇಕಾದ ಮಾತನ್ನು
20 ದೇವರು ನನಗೆ ಅನುಗ್ರಹಿಸಬೇಕೆಂದು ಪ್ರಾರ್ಥಿಸಿರಿ. ಆ ಸತ್ಯಾರ್ಥದ ನಿಮಿತ್ತವೇ ರಾಯಭಾರಿಯಾದ ನಾನು ಬೇಡಿಯಲ್ಲಿ ಬಿದ್ದಿದ್ದೇನಲ್ಲಾ. ಅದರ ವಿಷಯದಲ್ಲಿ ಧೈರ್ಯವಾಗಿ ಮಾತಾಡುವ ಹಂಗಿನಲ್ಲಿದ್ಧೇನೆ; ಹಾಗೆಯೇ ನಾನು ಮಾತಾಡಬೇಕೆಂದು ನನಗೋಸ್ಕರ ಬೇಡಿಕೊಳ್ಳಿರಿ.

### ಕಡೇ ಮಾತುಗಳು.

21 ನನ್ನ ಸಂಗತಿಗಳು ನಿಮಗೆ ಸಹ ಗೊತ್ತಾಗುವ ಹಾಗೆ, ಪ್ರಿಯ ಸಹೋದರನೂ ಕರ್ತನಲ್ಲಿ ನಂಬಿಗಸ್ತನಾದ ಸೇವಕನೂ ಆಗಿರುವ ತುಖಿಕನು ನಿಮಗೆ ಎಲ್ಲವನ್ನೂ ತಿಳಿಸುವನು.
22 ನೀವು ನಮ್ಮ ಸಮಾಚಾರವನ್ನು ತಿಳುಕೊಳ್ಳುವ ಹಾಗೆಯೂ ಅವನು ನಿಮ್ಮ ಹೃದಯಗಳನ್ನು ಸಂತೈಸುವ ಹಾಗೆಯೂ ಅವನನ್ನು ನಿಮ್ಮ ಬಳಿಗೆ ಕಳುಹಿಸಿದ್ಧೇನೆ.
23 ತಂದೆಯಾದ ದೇವರಿಂದಲೂ ಕರ್ತನಾದ ಯೇಸು ಕ್ರಿಸ್ತನಿಂದಲೂ ಶಾಂತಿಯೂ
24 ನಂಬಿಕೆಯಿಂದ ಕೂಡಿದ ಪ್ರೀತಿಯೂ ಸಹೋದರರಿಗೆ ಆಗಲಿ. ನಮ್ಮ ಕರ್ತನಾದ ಯೇಸು ಕ್ರಿಸ್ತನನ್ನು ನಿರಂತರವಾದ ಪ್ರೀತಿಯಿಂದ ಪ್ರೀತಿಸುವವರೆಲ್ಲರ ಮೇಲೆ ದೇವರ ಕೃಪೆಯು ಇರಲಿ.

---

[1] ಯೆಶಾಯ ೧೧, ೫; ೫೯, ೧೭. [2] ಯೆಶಾಯ ೫೨, ೭; ೪೦, ೩. ೯.

[3] ಯೆಶಾಯ ೫೯, ೧೭; ೧೧, ೪; ೪೯, ೨ ನೋಡು.

# THE EPISTLE OF SAINT PAUL TO THE PHILIPPIANS

# ಪೌಲನು ಫಿಲಿಪ್ಪಿಯವರಿಗೆ ಬರೆದ ಪತ್ರಿಕೆ

### ಒಕ್ಕಣೆ.

ಕ್ರಿಸ್ತ ಯೇಸುವಿನ ದಾಸರಾದ ಪೌಲ ತಿಮೊಥೆಯರು ಫಿಲಿಪ್ಪಿಯಲ್ಲಿ ಕ್ರಿಸ್ತ ಯೇಸುವಿನ **1** ಮೂಲಕ ದೇವಜನರಾಗಿರುವವರೆಲ್ಲರಿಗೂ ಅವರಲ್ಲಿರುವ ಸಭಾಧ್ಯಕ್ಷರಿಗೂ ಸಭಾಸೇವಕ ರಿಗೂ ಬರೆಯುವದೇನಂದರೆ—ನಮ್ಮ ತಂದೆಯಾದ ದೇವರಿಂದಲೂ ಕರ್ತನಾದ ಯೇಸು 2 ಕ್ರಿಸ್ತನಿಂದಲೂ ನಿಮಗೆ ಕೃಪೆಯೂ ಶಾಂತಿಯೂ ಆಗಲಿ.

### ಪೌಲನು ಫಿಲಿಪ್ಪಿಯ ಸಭೆಯವರಿಗೋಸ್ಕರ ದೇವರಿಗೆ ಮಾಡಿದ ಕೃತಜ್ಞತಾಸ್ತುತಿ ಪ್ರಾರ್ಥನೆಗಳು.

ನಾನು ನಿಮಗೋಸ್ಕರ ದೇವರನ್ನು ಬೇಡಿಕೊಳ್ಳುವ ಎಲ್ಲಾ ಸಮಯಗಳಲ್ಲಿಯೂ 3-4 ಸಂತೋಷದಿಂದಲೇ ಬೇಡುವವನಾಗಿದ್ದೇನೆ. ನಾನು ನಿಮ್ಮನ್ನು ನೆನಸಿಕೊಳ್ಳುವಾಗೆಲ್ಲಾ 5 ನೀವು ಮೊದಲಿನಿಂದ ಇಂದಿನ ವರೆಗೂ ಸುವಾರ್ತಾಪ್ರಚಾರದಲ್ಲಿ ಸಹಕಾರಿಗಳಾಗಿದ್ದೀ ರೆಂದು ನನ್ನ ದೇವರಿಗೆ ಕೃತಜ್ಞತಾಸ್ತುತಿ ಮಾಡುತ್ತೇನೆ. ಈ ಒಳ್ಳೇ ಕೆಲಸವನ್ನು ನಿಮ್ಮಲ್ಲಿ 6 ಪ್ರಾರಂಭಿಸಿದಾತನು ಅದನ್ನು ನಡಿಸಿಕೊಂಡು ಯೇಸು ಕ್ರಿಸ್ತನು ಬರುವ ದಿನದೊಳಗಾಗಿ ಸಿದ್ಧಿಗೆ ತರುವನೆಂದು ನನಗೆ ಭರವಸವುಂಟು. ನಿಮ್ಮೆಲ್ಲರ ವಿಷಯದಲ್ಲಿ ಈ ಅಭಿಪ್ರಾಯ 7 ವುಳ್ಳವನಾಗಿರುವದು ನ್ಯಾಯವಾಗಿದೆ; ನಾನು ಬೇಡಿಬಿದ್ದಿರುವಾಗಲೂ ಸುವಾರ್ತೆಯ ವಿಷಯದಲ್ಲಿ ಉತ್ತರ ಹೇಳಿ ಸ್ಥಾಪಿಸುವಾಗಲೂ ನೀವೆಲ್ಲರೂ ನನ್ನೊಂದಿಗೆ ದೇವರ ಕೃಪೆ ಯಲ್ಲಿ ಪಾಲುಗಾರರಾಗಿದ್ದೀರೆಂದು ನಿಮ್ಮನ್ನು ನನ್ನ ಹೃದಯದಲ್ಲಿಟ್ಟುಕೊಂಡಿದ್ದೇನೆ. ಕ್ರಿಸ್ತ ಯೇಸುವಿಗಿರುವಂಥಾ ಕನಿಕರದಿಂದ ನಿಮ್ಮೆಲ್ಲರಿಗೋಸ್ಕರ ಎಷ್ಟೋ ಹಂಬಲಿಸುತ್ತೇನೆ; 8 ಇದಕ್ಕೆ ದೇವರೇ ನನ್ನ ಸಾಕ್ಷಿ. ಮತ್ತು ನಾನು ದೇವರನ್ನು ಪ್ರಾರ್ಥಿಸಿ—ನಿಮ್ಮ 9 ಪ್ರೀತಿಯು ಹೆಚ್ಚುತ್ತಾ ಹೆಚ್ಚುತ್ತಾ ಪೂರ್ಣ ಜ್ಞಾನವಿವೇಕಗಳಿಂದ ಕೂಡಿ ಉತ್ತಮವಾದ 10 ಕಾರ್ಯಗಳು ಯಾವವೆಂದು ನೀವು ವಿವೇಚಿಸುವವರಾಗಬೇಕೆಂತಲೂ ಕ್ರಿಸ್ತನು ಬರುವ ದಿನದಲ್ಲಿ ನೀವು ಸರಳರಾಗಿಯೂ ನಿರ್ಮಲರಾಗಿಯೂ ಯೇಸು ಕ್ರಿಸ್ತನ ಮೂಲಕವಾಗಿ 11 ರುವ ಸುನೀತಿಯೆಂಬ ಫಲದಿಂದ ತುಂಬಿದವರಾಗಿಯೂ ಕಾಣಿಸಿಕೊಂಡು ದೇವರಿಗೆ ಘನ ತೆಯನ್ನೂ ಸ್ತೋತ್ರವನ್ನೂ ತರಬೇಕೆಂತಲೂ ಬೇಡಿಕೊಳ್ಳುತ್ತೇನೆ.

**ಪೌಲನು ರೋಮಾಪುರಿಯಲ್ಲಿ ಸೆರೆಯವನಾಗಿದ್ದು ತನ್ನ ಸ್ಥಿತಿಯನ್ನೂ ಕೋರಿಕೆಯನ್ನೂ ಕುರಿತು ಹೇಳಿದ್ದು.**

12 ಸಹೋದರರೇ, ನನಗೆ ಸಂಭವಿಸಿರುವದು ಸುವಾರ್ತೆಯ ಪ್ರಸಾರಣೆಗೇ ಸಹಾಯವಾ
13 ಯಿತೆಂದು ನೀವು ತಿಳಿಯಬೇಕೆಂಬದಾಗಿ ಅಪೇಕ್ಷಿಸುತ್ತೇನೆ. ಹ್ಯಾಗಂದರೆ ನನ್ನ ಬೇಡಿ
ಗಳು ಕ್ರಿಸ್ತನ ನಿಮಿತ್ತವೇ ಎಂದು ಅರಮನೆಯ ಪಹರೆಯವರೆಲ್ಲರಿಗೂ ಮಿಕ್ಕಾದವರೆಲ್ಲ
14 ರಿಗೂ ಪ್ರಸಿದ್ಧವಾಯಿತು. ಇದಲ್ಲದೆ ಸಹೋದರರಲ್ಲಿ ಬಹಳ ಜನರು ನನ್ನ ಬೇಡಿ
ಗಳಿಂದಲೇ ಕರ್ತನಲ್ಲಿ ಭರವಸವುಳ್ಳವರಾಗಿ ದೇವರ ವಾಕ್ಯವನ್ನು ನಿರ್ಭಯದಿಂದ ಹೇಳು
15 ವದಕ್ಕೆ ಇನ್ನೂ ವಿಶೇಷ ಧೈರ್ಯ ಹೊಂದಿದ್ದಾರೆ. ಕೆಲವರು ಹೊಟ್ಟೆಕಿಚ್ಚುಪಟ್ಟು ಭೇದ
ಹುಟ್ಟಿಸಬೇಕೆಂಬ ಭಾವನೆಯಿಂದ, ಬೇರೆ ಕೆಲವರು ಒಳ್ಳೇ ಭಾವದಿಂದ ಕ್ರಿಸ್ತನನ್ನು ಪ್ರಚುರ
16 ಪಡಿಸುತ್ತಾರೆ. ಇವರಂತೂ ನಾನು ಸುವಾರ್ತೆಯ ವಿಷಯದಲ್ಲಿ ಉತ್ತರ ಹೇಳುವದಕ್ಕೆ
17 ಇಲ್ಲಿ ಬಿದ್ದಿರುತ್ತೇನೆಂದು ತಿಳಿದು ಪ್ರೀತಿಯಿಂದ ಪ್ರಸಿದ್ಧಿಪಡಿಸುತ್ತಾರೆ. ಆ ಬೇರೆ ತರದ
ವರಾದರೋ ನಾನು ಬೇಡಿಬಿದ್ದಿರುವಾಗಲೂ ನನಗೆ ಸಂಕಟವನ್ನು ಎಬ್ಬಿಸಬೇಕೆಂದು
ಯೋಚಿಸಿ ಕ್ರಿಸ್ತನನ್ನು ಯಥಾರ್ಥವಾಗಿ ಪ್ರಸಿದ್ಧಿಪಡಿಸದೆ ಪಕ್ಷಪಾತದಿಂದ ಪ್ರಸಿದ್ಧಿಪಡಿ
18 ಸುತ್ತಾರೆ. ಹ್ಯಾಗಾದರೇನು? ಯಾವ ರೀತಿಯಿಂದಾದರೂ ಕಪಟದಿಂದಾಗಲಿ ಸತ್ಯ
ದಿಂದಾಗಲಿ ಕ್ರಿಸ್ತನನ್ನು ಪ್ರಸಿದ್ಧಿಪಡಿಸುವದುಂಟು; ಇದಕ್ಕೆ ಸಂತೋಷಿಸುತ್ತೇನೆ, ಮುಂದೆ
19 ಯೂ ಸಂತೋಷಿಸುವೆನು. ಯಾಕಂದರೆ ನನಗೆ ಸಂಭವಿಸಿರುವದು ನೀವು ದೇವರಿಗೆ
ಮಾಡುವ ವಿಜ್ಞಾಪನೆಯಿಂದಲೂ ಕ್ರಿಸ್ತನು ಹೇರಳವಾಗಿ ದಯಪಾಲಿಸುವ ಆತ್ಮನ ಸಹಾ
20 ಯದಿಂದಲೂ ನನ್ನ ಪರಮಹಿತಕ್ಕೆ ಅನುಕೂಲಿಸುವದೆಂದು ಬಲ್ಲೆನು. ಹ್ಯಾಗಂದರೆ
ನಾನು ಯಾವ ವಿಷಯದಲ್ಲಾದರೂ ನಾಚಿಕೆಪಡದೆ ಎಂದಿನಂತೆ ಈಗಲೂ ಸಹ ತುಂಬಾ
ಧೈರ್ಯದಿಂದಿರುವದರಿಂದ, ಬದುಕಿದರೂ ಸರಿಯೇ ಸತ್ತರೂ ಸರಿಯೇ, ನನ್ನ ದೇಹದ
ಮೂಲಕ ಕ್ರಿಸ್ತನಿಗೆ ಮಹಿಮೆಯುಂಟಾಗಬೇಕೆಂದು ನನಗೆ ಬಹಳ ಅಭಿಲಾಷೆಯದೆ;
21 ಹಾಗೆಯೇ ಆಗುವದೆಂದು ಭರವಸವುಂಟು. ನಾನಂತೂ ಬದುಕಿದರೆ ಕ್ರಿಸ್ತನಿಗೋಸ್ಕರ
22 ಬದುಕುತ್ತೇನೆ, ಸತ್ತರೆ ನನಗೆ ಲಾಭವಾಗುತ್ತೆ[1]. ಶರೀರದಲ್ಲಿಯೇ ಬದುಕಬೇಕೆಂಬ
ಪಕ್ಷದಲ್ಲಿ ಕೆಲಸಮಾಡಿ ಫಲ ಹೊಂದುವದಕ್ಕಾಗಿ ನನಗೆ ಅನುಕೂಲವಾಗುವದು. ಹೀಗಿರ
23 ಲಾಗಿ ನಾನು ಯಾವದನ್ನಾರಿಸಿಕೊಳ್ಳಬೇಕೋ ನನಗೆ ತೋರದು. ಈ ಎರಡರ ನಡುವೆ
ಸಿಕ್ಕಿಕೊಂಡಿದ್ದೇನೆ; ಇಲ್ಲಿಂದ ಹೋಗಿಬಿಟ್ಟು ಕ್ರಿಸ್ತನ ಜೊತೆಯಲ್ಲಿರಬೇಕೆಂಬದೇ ನನ್ನ
24 ಅಭಿಲಾಷೆ, ಅದು ಉತ್ತಮೋತ್ತಮ; ಆದರೆ ನಾನಿನ್ನೂ ಶರೀರದಲ್ಲಿ ವಾಸಮಾಡಿಕೊಂಡಿ
25 ರುವದೇ ನಿಮಗೋಸ್ಕರ ಬಹು ಅವಶ್ಯವಾದದ್ದು. ಆದದರಿಂದ ನಿಮಗೆ ಕ್ರಿಸ್ತನಂಬಿಕೆ
ಯಲ್ಲಿ ಅಭಿವೃದ್ಧಿಯೂ ಆನಂದವೂ ಉಂಟಾಗುವದಕ್ಕೋಸ್ಕರ ನಾನು ಜೀವದಿಂದುಳಿದು
26 ನಿಮ್ಮೆಲ್ಲರ ಬಳಿಯಲ್ಲಿರುವೆನೆಂದು ದೃಢವಾಗಿ ನಂಬಿದ್ದೇನೆ. ಹೀಗೆ ನಾನು ತಿರಿಗಿ ನಿಮ್ಮ
ಲ್ಲಿಗೆ ಬರುವದರಿಂದ ನೀವು ಕ್ರಿಸ್ತ ಯೇಸುವಿನ ವಿಷಯವಾಗಿ ಉತ್ಸಾಹಪಡುವದಕ್ಕೆ
ನನ್ನಿಂದ ಅಧಿಕವಾದ ಆಸ್ಪದವಿರುವದು.

---

[1] ಅಥವಾ, ನನಗಂತೂ ಬದುಕುವದು ಕ್ರಿಸ್ತನೇ, ಸಾಯುವದು ಲಾಭವೇ.

ಕ್ರೈಸ್ತರು ಸುವಾರ್ತೆಗೆ ಯೋಗ್ಯರಾಗಿ ನಡೆದುಕೊಳ್ಳಬೇಕೆಂಬ ಬೋಧೆ.

ಹ್ಯಾಗೂ ಕ್ರಿಸ್ತನ ಸುವಾರ್ತೆಗೆ ಯೋಗ್ಯರಾಗಿ ನಡೆದುಕೊಳ್ಳಿರಿ. ಆಗ ನಾನು ಬಂದು 27 ನಿಮ್ಮನ್ನು ನೋಡಿದರೂ ಸರಿಯೇ, ದೂರದಲ್ಲಿದ್ದು ನಿಮ್ಮ ಸುದ್ದಿಯನ್ನು ಕೇಳಿದರೂ ಸರಿಯೇ, ನೀವು ನಿಮ್ಮ ವಿರೋಧಿಗಳಿಗೆ ಯಾವ ವಿಷಯದಲ್ಲಾದರೂ ಹೆದರದೆ ಒಂದೇ ಆತ್ಮದಲ್ಲಿ ದೃಢವಾಗಿ ನಿಂತು ಸುವಾರ್ತೆಯಲ್ಲಿಟ್ಟ ನಂಬಿಕೆಗೋಸ್ಕರ ಐಕಮತ್ಯದಿಂದ ಹೋರಾಡುವವರಾಗಿದ್ದೀರೆಂದು ನಾನು ತಿಳಿದುಕೊಳ್ಳುವೆನು. ನೀವು ಹೀಗಿರುವದು 28 ವಿರೋಧಿಗಳ ನಾಶನಕ್ಕೂ ನಿಮ್ಮ ರಕ್ಷಣೆಗೂ ದೇವರಿಂದಾದ ಪ್ರಮಾಣವಾಗಿದೆ. ಹ್ಯಾಗಂದರೆ ಕ್ರಿಸ್ತನ ಮೇಲೆ ನಂಬಿಕೆಯಿಡುವದಕ್ಕೆ ಅನುಕೂಲತೆಯಲ್ಲದೆ ಆತನಿಗೋಸ್ಕರ 29 ಬಾಧೆಯನ್ನನುಭವಿಸುವ ಪದವಿಯೂ ನಿಮಗೆ ಅನುಗ್ರಹಿಸೋಣವಾಯಿತು. ಹೀಗೆ 30 ನೀವು ನನ್ನಲ್ಲಿ ಕಂಡಂಥಾ ಮತ್ತು ಈಗ ನನ್ನಲ್ಲಿರುವದಾಗಿ ಕೇಳುವಂಥಾ ಅದೇ ಹೋರಾಟವು ನಮಗುಂಟು.

ನೀವು ಕ್ರಿಸ್ತನ ಹೆಸರಿನಲ್ಲಿ ಮಾಡಲ್ಪಟ್ಟ ಬೋಧನೆಯನ್ನು ಮನನ ಮಾಡುವವರೂ **2** ಪ್ರೀತಿಯ ಪ್ರೇರಣೆಗೆ ಒಳಗಾದವರೂ ಪವಿತ್ರಾತ್ಮವರದಲ್ಲಿ ಪಾಲುಗಾರರೂ ಕಾರುಣ್ಯ ದಯಾರಸಗಳುಳ್ಳವರೂ ಆಗಿದ್ದೀರಲ್ಲಾ. ಹೀಗಿರಲಾಗಿ ಐಕಮತ್ಯವುಳ್ಳವರಾಗಿದ್ದು ನನ್ನ 2 ಸಂತೋಷವನ್ನು ಪರಿಪೂರ್ಣಮಾಡಿರಿ. ನಿಮ್ಮೆಲ್ಲರಲ್ಲಿ ಒಂದೇ ಪ್ರೀತಿಯಿರಲಿ; ಅನ್ಯೋನ್ಯ ಭಾವವುಳ್ಳವರಾಗಿಯೂ ಒಂದೇ ಗುರಿಯಿಟ್ಟುಕೊಂಡವರಾಗಿಯೂ ಇರ್ರಿ. ಪಕ್ಷಪಾತ 3 ದಿಂದಾಗಲಿ ಒಣಹೆಮ್ಮೆಯಿಂದಾಗಲಿ ಯಾವದನ್ನೂ ಮಾಡದೆ, ಪ್ರತಿಯೊಬ್ಬನು ದೀನ ಭಾವದಿಂದ ಮತ್ತೊಬ್ಬರನ್ನು ತನಗಿಂತಲೂ ಶ್ರೇಷ್ಠರೆಂದು ಎಣಿಸಲಿ. ನಿಮ್ಮಲ್ಲಿ ಪ್ರತಿ 4 ಯೊಬ್ಬನು ಸ್ವಹಿತವನ್ನು ಮಾತ್ರ ನೋಡದೆ ಪರಹಿತವನ್ನು ಸಹ ನೋಡಲಿ. ಕ್ರಿಸ್ತ 5 ಯೇಸುವಿನಲ್ಲಿದ್ದಂಥಾ ಮನಸ್ಸು ನಿಮ್ಮಲ್ಲಿಯೂ ಇರಲಿ. ಆತನು ದೇವಸ್ವರೂಪನಾಗಿದ್ದರೂ 6 ದೇವರಿಗೆ ಸರಿಸಮಾನನಾಗಿರುವದೆಂಬ ಅಮೂಲ್ಯ ಪದವಿಯನ್ನು ಬಿಡಲೊಲ್ಲೆನು ಎಂದೆಣಿಸದೆ, ತನ್ನನ್ನು ಬರಿದು ಮಾಡಿಕೊಂಡು ದಾಸನ ರೂಪವನ್ನು ಧರಿಸಿಕೊಂಡು, ಮನುಷ್ಯ 7 ರಿಗೆ ಸದೃಶನಾದನು. ಹೀಗೆ ಆತನು ಆಕಾರದಲ್ಲಿ ಮನುಷ್ಯನಾಗಿ ಕಾಣಿಸಿಕೊಂಡಿದ್ದಾಗ, 8 ತನ್ನನ್ನು ತಗ್ಗಿಸಿಕೊಂಡು, ಮರಣವನ್ನು, ಅಂದರೆ ಶಿಲುಬೆಯ ಮರಣವನ್ನಾದರೂ, ಹೊಂದುವಷ್ಟು ವಿಧೇಯನಾದನು. ಈ ಕಾರಣದಿಂದ ದೇವರು ಆತನನ್ನು ಅತ್ಯುನ್ನತ 9 ಸ್ಥಾನಕ್ಕೆ ಏರಿಸಿ ಎಲ್ಲಾ ಹೆಸರುಗಳಿಗಿಂತ ಶ್ರೇಷ್ಠವಾದ ಹೆಸರನ್ನು ಆತನಿಗೆ ದಯಪಾಲಿಸಿದ್ದಾನೆ. ಆದದರಿಂದ ಸ್ವರ್ಗ ಮರ್ತ್ಯ ಪಾತಾಳಗಳಲ್ಲಿರುವವರೆಲ್ಲರೂ ಯೇಸುವಿನ ಹೆಸರಿ 10 ನಲ್ಲಿ ಅಡ್ಡಬಿದ್ದು ಯೇಸು ಕ್ರಿಸ್ತನನ್ನು ಒಡೆಯನೆಂದು ಪ್ರತಿಜ್ಞೆಮಾಡಿ ತಂದೆಯಾದ ದೇವ 11 ರಿಗೆ ಘನವನ್ನು ಸಲ್ಲಿಸುವರು.

ಹೀಗಿರುವಲ್ಲಿ, ನನ್ನ ಪ್ರಿಯರೇ, ನೀವು ನನ್ನ ಮಾತನ್ನು ಯಾವಾಗಲೂ ಕೇಳಿದಂತೆ 12 ಈಗಲೂ ಕೇಳಿರಿ. ನಾನು ನಿಮ್ಮಲ್ಲಿರುವಾಗ ಮಾತ್ರವಲ್ಲದೆ, ನಾನಿಲ್ಲದಿರುವಾಗಲೂ ಬಹು ಹೆಚ್ಚಾಗಿ, ಮನೋಭೀತಿಯಿಂದ ನಡುಗುವವರಾಗಿ ನಿಮ್ಮ ನಿಮ್ಮ ರಕ್ಷಣೆಯನ್ನು ಸಾಧಿಸಿಕೊಳ್ಳಿರಿ. ಯಾಕಂದರೆ ದೇವರೇ ತನ್ನ ಸುಚಿತ್ತವನ್ನು ನೆರವೇರಿಸಬೇಕೆಂದು 13

14 ನಿಮ್ಮಲ್ಲಿ ಉದ್ದೇಶವನ್ನೂ ಪ್ರಯತ್ನವನ್ನೂ ಉಂಟುಮಾಡುವವನಾಗಿದ್ದಾನೆ. ಗುಣ
15 ಗುಟ್ಟದೆಯೂ ವಿವಾದವಿಲ್ಲದೆಯೂ ಎಲ್ಲವನ್ನು ಮಾಡಿರಿ. ಹೀಗೆ ನೀವು ನಿರ್ದೋಷಿ
ಗಳೂ ಯಥಾರ್ಥಮನಸ್ಸುಳ್ಳವರೂ ಆಗಿದ್ದು, ವಕ್ರಬುದ್ಧಿಯುಳ್ಳ ವಿಪರೀತವಾದ ಸಂತ
16 ತಿಯ ಮಧ್ಯದಲ್ಲಿ ದೇವರ ನಿಷ್ಕಳಂಕರಾದ ಮಕ್ಕಳಾಗಿರುವಿರಿ. ಈ ಸಂತತಿಯವರೊ
ಳಗೆ ನೀವು ಸರ್ವರಿಗೂ ಜೀವದಾಯಕ ವಾಕ್ಯವನ್ನು ತೋರಿಸಿಕೊಡುವವರಾಗಿದ್ದು
ಲೋಕದೊಳಗೆ ಹೊಳೆಯುವ ಜ್ಯೋತಿರ್ಮಂಡಲಗಳಂತೆ ಕಾಣಿಸುವವರಾಗಿದ್ದೀರಲ್ಲಾ.
ನೀವು ಹೀಗೆ ನಡೆದರೆ, ನಾನು ಕೆಲಸ ಸಾಧಿಸಿದ್ದೂ ವ್ಯರ್ಥವಲ್ಲ, ನಾನು ಪ್ರಯಾಸ
ಪಟ್ಟದ್ದೂ ವ್ಯರ್ಥವಲ್ಲ ಎಂಬ ಉತ್ಸಾಹವು ಕ್ರಿಸ್ತನ ದಿನದಲ್ಲಿ ನನಗೆ ಉಂಟಾಗುವದು.
17 ನಿಮ್ಮ ನಂಬಿಕೆಯೆಂಬ ಯಜ್ಞವನ್ನು ದೇವರಿಗರ್ಪಿಸುವ ಸೇವೆಯಲ್ಲಿ ನಾನೇ ಪಾನದ್ರವ್ಯ
ವಾಗಿ ಅರ್ಪಿತವಾಗಬೇಕಾದರೂ ನನಗೆ ಸಂತೋಷ, ನಿಮ್ಮೆಲ್ಲರ ಕೂಡ ಸಂತೋಷ.
18 ಹಾಗೆಯೇ ನೀವೂ ಸಂತೋಷಿಸಿರಿ, ನನ್ನೊಂದಿಗೆ ಸಂತೋಷಿಸಿರಿ.

ಪೌಲನು ಎಪಫ್ರೊದೀತನನ್ನು ಫಿಲಿಪ್ಪಿಯವರಿಗೆ ಕಳುಹಿಸಿ, ತಿಮೊಥೆಯನನ್ನು ಮುಂದೆ ಕಳುಹಿಸುತ್ತೇನೆಂದು ಹೇಳಿದ್ದು.

19 ಆದರೆ ಕರ್ತನಾದ ಯೇಸುವಿನ ಚಿತ್ತವಾದರೆ ನಾನು ತಿಮೊಥೆಯನನ್ನು ಬೇಗನೆ
ನಿಮ್ಮ ಬಳಿಗೆ ಕಳುಹಿಸಬೇಕೆಂದು ನಿರೀಕ್ಷಿಸುತ್ತೇನೆ. ಅವನ ಮುಖಾಂತರ ನಿಮ್ಮ ಸಂಗತಿ
20 ಗಳನ್ನು ತಿಳಿದು ನಾನೂ ಧೈರ್ಯ ತಂದುಕೊಂಡೇನು. ಅವನ ಹಾಗೆ ನಿಮ್ಮ ಕಾರ್ಯ
ಗಳನ್ನು ಕುರಿತು ಯಥಾರ್ಥವಾಗಿ ಚಿಂತಿಸುವವರು ನನ್ನ ಬಳಿಯಲ್ಲಿ ಬೇರೆ ಯಾರೂ
21 ಇಲ್ಲ. ಎಲ್ಲರೂ ಸ್ವಕಾರ್ಯಗಳ ಮೇಲೆ ಮನಸ್ಸಿಡುತ್ತಾರೆಯೇ ಹೊರತು ಯೇಸು
22 ಕ್ರಿಸ್ತನ ಕಾರ್ಯಗಳ ಮೇಲೆ ಮನಸ್ಸಿಡುವದಿಲ್ಲ. ತಿಮೊಥೆಯನ ಗುಣವನ್ನು ನೀವು
ನೋಡಿ ತಿಳುಕೊಂಡಿದ್ದೀರಿ; ಮಗನು ತಂದೆಗೆ ಹ್ಯಾಗೋ ಹಾಗೆಯೇ ಅವನು ನನ್ನ
ಜೊತೆಯಲ್ಲಿ ಸುವಾರ್ತಾಪ್ರಚಾರಕ್ಕಾಗಿ ಕಷ್ಟಪಟ್ಟು ಕೆಲಸ ನಡಿಸಿದನೆಂಬುವದು ನಿಮಗೆ
23 ಗೊತ್ತುಂಟು. ಆದದರಿಂದ ನನ್ನ ಸಂಗತಿಯು ಹ್ಯಾಗಾಗುವದೋ ಅದನ್ನು ತಿಳಿದ
24 ಕೂಡಲೆ ಅವನನ್ನೇ ಕಳುಹಿಸುವದಕ್ಕೆ ನಿರೀಕ್ಷಿಸುತ್ತೇನೆ. ಇದಲ್ಲದೆ ನಾನು ಸಹ ಬೇಗನೆ
ಬರುವೆನೆಂದು ಕರ್ತನಲ್ಲಿ ದೃಢವಾಗಿ ನಂಬಿದ್ದೇನೆ.

25 ನನ್ನ ಕೊರತೆಯನ್ನು ನೀಗುವದಕ್ಕೆ ನೀವು ಕಳುಹಿಸಿದಂಥಾ, ನನ್ನ ಸಹೋದರನೂ
ಜತೆಕೆಲಸದವನೂ ಸಹಭಟನೂ ಆಗಿರುವಂಥಾ, ಎಪಫ್ರೊದೀತನನ್ನು ನಿಮ್ಮ ಬಳಿಗೆ ಕಳು
26 ಹಿಸುವದು ಅವಶ್ಯವೆಂದು ನೆನಸಿದ್ದೇನೆ. ಅವನು ನಿಮ್ಮೆಲ್ಲರನ್ನು ಕುರಿತು ಹಂಬಲಿಸು
ತ್ತಿದ್ದನು, ಮತ್ತು ತಾನು ಅಸ್ವಸ್ಥನಾಗಿದ್ದ ವರ್ತಮಾನವನ್ನು ನೀವು ಕೇಳಿದ್ದರಿಂದ ವ್ಯಸನ
27 ಪಟ್ಟನು. ಅವನು ರೋಗದಲ್ಲಿ ಬಿದ್ದು ಸಾಯುವ ಹಾಗಿದ್ದನೆಂಬುವದು ನಿಜವೇ,
ಆದರೆ ದೇವರು ಅವನನ್ನು ಕರುಣಿಸಿದನು; ಅವನನ್ನು ಮಾತ್ರವಲ್ಲದೆ, ನನಗೆ ದುಃಖದ
28 ಮೇಲೆ ದುಃಖ ಬಾರದಂತೆ ನನ್ನನ್ನೂ ಕರುಣಿಸಿದನು. ಆದದರಿಂದ ನೀವು ಅವನನ್ನು
ನೋಡಿ ತಿರಿಗಿ ಸಂತೋಷಪಡಬೇಕೆಂತಲೂ ನನಗೆ ಕೂಡ ದುಃಖ ಕಡಿಮೆಯಾಗಬೇ
29-30 ಕೆಂತಲೂ ನಾನು ಅವನನ್ನು ಹೆಚ್ಚಾದ ಅವಸರದಿಂದ ಕಳುಹಿಸಿದ್ದೇನೆ. ಹೀಗಿರಲಾಗಿ

ನೀವೇ ನನಗೆ ಮಾಡಬೇಕೆಂದಿರುವ ಉಪಚಾರದಲ್ಲಿ ಕಡಿಮೆಯಾದದ್ದನ್ನು ಪೂರ್ತಿಮಾಡು
ವದಕ್ಕಾಗಿ ಅವನು ಜೀವದ ಆಶೆಯನ್ನು ಲಕ್ಷ್ಯಮಾಡದೆ ಕ್ರಿಸ್ತನ ಕೆಲಸದ ನಿಮಿತ್ತ
ಸಾಯುವ ಹಾಗಿದ್ದನೆಂದು ನೀವು ತಿಳಿದು ಅವನನ್ನು ಪೂರ್ಣ ಸಂತೋಷದಿಂದ ಕರ್ತನ
ಹೆಸರಿನಲ್ಲಿ ಸೇರಿಸಿಕೊಳ್ಳಿರಿ. ಅಂಥವರನ್ನು ಮಾನ್ಯರೆಂದೆಣಿಸಿರಿ.

ಸುಳ್ಳುಬೋಧಕರ ವಿಷಯದಲ್ಲಿ ಎಚ್ಚರಿಕೆಯಾಗಿರಬೇಕೆಂದು ಪೌಲನು ಬೋಧಿಸಿ ತನ್ನ ಅನುಭವವನ್ನೂ
ಗುರಿಯನ್ನೂ ದೃಷ್ಟಾಂತವಾಗಿ ತಿಳಿಸಿದ್ದು.

ಕಡೇ ಮಾತೇನಂದರೆ, ನನ್ನ ಸಹೋದರರೇ, ಕರ್ತನಲ್ಲಿ ಸಂತೋಷಪಡಿರಿ. ಮೊದಲು **3**
ತಿಳಿಸಿದ ಮಾತುಗಳನ್ನು ತಿರಿಗಿ ನಿಮಗೆ ಬರೆಯುವದರಲ್ಲಿ ನನಗೇನೂ ಬೇಸರವಿಲ್ಲ; ನಿಮ್ಮ
ನ್ನಾದರೋ ಅದು ದೃಢಮಾಡುವದು. ಆ ನಾಯಿಗಳಿಗೆ ಎಚ್ಚರಿಕೆಯಾಗಿರಿ; ದುರ್ಮನ 2
ಸ್ಸಿನಿಂದ ಕೆಲಸಮಾಡುವವರಿಗೆ ಎಚ್ಚರಿಕೆಯಾಗಿರಿ. ಸುನ್ನತಿಯೆಂದು ಹೇಳಿಕೊಂಡು
ಅಂಗಚ್ಛೇದನ ಮಾಡುವವರಿಗೆ ಎಚ್ಚರಿಕೆಯಾಗಿರಿ. ನಿಜವಾದ ಸುನ್ನತಿಯವರು ಯಾರಂ 3
ದರೆ—ದೇವರಾತ್ಮನಿಂದ ಪ್ರೇರಿತರಾಗಿ ಆರಾಧಿಸುವವರೂ ಕ್ರಿಸ್ತ ಯೇಸುವಿನಲ್ಲಿ ಹರ್ಷಗೊ
ಳ್ಳುವವರೂ ಶರೀರಸಂಬಂಧವಾದವುಗಳಲ್ಲಿ ಭರವಸವಿಲ್ಲದವರೂ ಆಗಿರುವ ನಾವೇ.
ನಾನಾದರೋ ಶರೀರಸಂಬಂಧವಾದವುಗಳಲ್ಲಿಯೂ ಭರವಸವಿಟ್ಟರೂ ಇಡಬಹುದು. 4
ಬೇರೆ ಯಾವನಾದರೂ ಶರೀರಸಂಬಂಧವಾದವುಗಳಲ್ಲಿ ಭರವಸವಿಡಬಹುದೆಂದು ಯೋಚಿ
ಸುವದಾದರೆ, ನಾನು ಅವನಿಗಿಂತಲೂ ಹೆಚ್ಚಾಗಿ ಹಾಗೆ ಯೋಚಿಸಬಹುದು. ಹುಟ್ಟಿದ 5
ಎಂಟನೇ ದಿನದಲ್ಲಿ ನನಗೆ ಸುನ್ನತಿಯಾಯಿತು; ನಾನು ಇಸ್ರಾಯೇಲ ವಂಶದವನು, ಬೆನ್ಯ
ಮೀನನ ಕುಲದವನು, ಇಬ್ರಿಯರಿಂದ ಹುಟ್ಟಿದ ಇಬ್ರಿಯನು; ನೇಮನಿಷ್ಠೆಗಳನ್ನು 6
ನೋಡಿದರೆ ನಾನು ಫರಿಸಾಯನು, ಮತಾಸಕ್ತಿಯನ್ನು ನೋಡಿದರೆ ನಾನು ಕ್ರೈಸ್ತಸಭೆಯ
ಹಿಂಸಕನು, ಧರ್ಮಶಾಸ್ತ್ರದಲ್ಲಿ ಹೇಳಿರುವ ನೀತಿಯನ್ನು ನೋಡಿದರೆ ನಾನು ನಿರ್ದೋಷಿ.
ಆದರೆ ನನಗೆ ಲಾಭವಾಗಿದ್ದಂಥವುಗಳನ್ನು ಕ್ರಿಸ್ತನ ನಿಮಿತ್ತ ನಷ್ಟವೆಂದೆಣಿಸಿದ್ದೇನೆ. ಇಷ್ಟೇ 7, 8
ಅಲ್ಲದೆ, ನನ್ನ ಕರ್ತನಾದ ಕ್ರಿಸ್ತ ಯೇಸುವನ್ನರಿಯುವದೇ ಅತಿಶ್ರೇಷ್ಠವಾದದ್ದೆಂದು ತಿಳಿದು
ನಾನು ಎಲ್ಲವನ್ನು ನಷ್ಟವೆಂದೆಣಿಸುತ್ತೇನೆ. ಆತನ ನಿಮಿತ್ತ ನಾನು ಎಲ್ಲವನ್ನೂ ಕಳ
ಕೊಂಡು ಅದನ್ನು ಕಸವೆಂದೆಣಿಸುತ್ತೇನೆ. ಇದರಲ್ಲಿ ನನ್ನ ಉದ್ದೇಶವೇನಂದರೆ—ನಾನು 9
ಕ್ರಿಸ್ತನನ್ನು ಸಂಪಾದಿಸಿಕೊಂಡು, ನೇಮನಿಷ್ಠೆಗಳ ಫಲವಾಗಿರುವ ಸ್ವನೀತಿಯನ್ನಾಶ್ರಯಿ
ಸದೆ, ಕ್ರಿಸ್ತನನ್ನು ನಂಬುವದರಿಂದ ದೊರಕುವಂಥಾ ಅಂದರೆ ಕ್ರಿಸ್ತನ ಮೇಲಣ ನಂಬಿಕೆಯ
ಆಧಾರದಿಂದ ದೇವರು ಕೊಡುವಂಥಾ ನೀತಿಯನ್ನೇ ಹೊಂದಿ, ಕ್ರಿಸ್ತನಲ್ಲಿರುವವನಾಗಿ ಕಾಣಿಸಿ
ಕೊಳ್ಳಬೇಕೆಂಬುವದೇ. ಆತನನ್ನೂ ಆತನ ಪುನರುತ್ಥಾನದಲ್ಲಿರುವ ಶಕ್ತಿಯನ್ನೂ ಆತನ 10
ಬಾಧೆಗಳಲ್ಲಿ ಪಾಲುಗಾರನಾಗಿರುವ ಪದವಿಯನ್ನೂ ತಿಳುಕೊಳ್ಳಲೂ, ಆತನ ಮರಣದ
ವಿಷಯದಲ್ಲಿ ಆತನಿಗೆ ಸರೂಪನಾಗಲೂ ಬೇಕೆಂಬುವದೇ ನನ್ನ ಕುತೂಹಲವಾಗಿದೆ.
ಹೀಗಾದರೆ, ಸತ್ತವರಲ್ಲಿ ಕೆಲವರಿಗೆ ಆಗುವ ಶ್ರೇಷ್ಠ ಪುನರುತ್ಥಾನವು[1] ನನಗೆ ಒದಗಿ 11

[1] ಲೂಕ ೨೦, ೩೫; ೧ ಕೊರಿಂಥ. ೧೫, ೨೩; ಪ್ರಕಟಣೆ ೨೦, ೫. ೬; ಇಬ್ರಿಯ. ೧೧, ೩೫ ನೋಡು.

12 ಬಂದೀತು. ಇಷ್ಟರೊಳಗೆ ನಾನು ಬಿರುದನ್ನು ಪಡಕೊಂಡು ಸಿದ್ಧಿಗೆ ಬಂದವನೆಂದು ಹೇಳುವದಿಲ್ಲ; ನಾನು ಯಾವದನ್ನು ಹೊಂದುವದಕ್ಕಾಗಿ ಕ್ರಿಸ್ತ ಯೇಸು ನನ್ನನ್ನು ಹಿಡಿದು
13 ಕೊಂಡನೋ ಅದನ್ನು ಹಿಡಿದುಕೊಳ್ಳುವದಕ್ಕೋಸ್ಕರ ಓಡುತ್ತಾ ಇದ್ದೇನೆ. ಸಹೋದರರೇ, ನಾನಂತೂ ಹಿಡಿದುಕೊಂಡವನೆಂದು ನನ್ನನ್ನು ಈ ವರೆಗೂ ಎಣಿಸಿಕೊಳ್ಳುವದಿಲ್ಲ; ಆದರೆ ಒಂದು, ನಾನು ಹಿಂದಿನ ಸಂಗತಿಗಳನ್ನು ಮರೆತುಬಿಟ್ಟು, ಮುಂದಿನವುಗಳನ್ನು
14 ಹಿಡಿಯುವದಕ್ಕೆ ಎದೆಬೊಗ್ಗಿದವನಾಗಿ, ದೇವರು ಕ್ರಿಸ್ತನ ಮೂಲಕವಾಗಿ ನಮ್ಮನ್ನು ಮೇಲಕ್ಕೆ ಕರೆದು ನಮ್ಮ ಮುಂದೆ ಇಟ್ಟಿರುವ ಬಿರುದನ್ನು ಗುರಿಮಾಡಿಕೊಂಡು, ಓಡುತ್ತಾ
15 ಇದ್ದೇನೆ. ನಮ್ಮಲ್ಲಿ ಪ್ರವೀಣರಾದವರು ಇದೇ ಅಭಿಪ್ರಾಯವುಳ್ಳವರಾಗಿರೋಣ. ಯಾವದಾದರೂ ಒಂದು ವಿಷಯದಲ್ಲಿ ನೀವು ಬೇರೆ ಅಭಿಪ್ರಾಯವುಳ್ಳವರಾಗಿದ್ದರೆ, ಅದನ್ನೂ
16 ದೇವರು ನಿಮಗೆ ತೋರಿಸಿಕೊಡುವನು. ಆದರೆ ನಾವು ಯಾವ ಸೂತ್ರವನ್ನನುಸರಿಸಿ ಇಲ್ಲಿಯ ವರೆಗೆ ಬಂದೆವೋ ಅದನ್ನೇ ಅನುಸರಿಸಿ ನಡೆಯೋಣ.

17 ಸಹೋದರರೇ, ನೀವೆಲ್ಲರು ನನ್ನನ್ನು ಅನುಸರಿಸುವವರಾಗಿರ್ರಿ; ಮತ್ತು ನಾವು ನಿಮಗೆ ತೋರಿಸಿದ ಮಾದರಿಯ ಪ್ರಕಾರ ನಡೆದುಕೊಳ್ಳುವವರನ್ನು ಲಕ್ಷ್ಯಕ್ಕೆ ತಂದುಕೊಳ್ಳಿರಿ.
18 ಯಾಕಂದರೆ ಅನೇಕರು ಕ್ರಿಸ್ತನ ಶಿಲುಬೆಗೆ ವಿರೋಧಿಗಳಾಗಿ ನಡೆಯುತ್ತಾರೆ; ಅವರ ವಿಷಯದಲ್ಲಿ ನಿಮಗೆ ಎಷ್ಟೋ ಸಾರಿ ಹೇಳಿದೆನು, ಈಗಲೂ ಅಳುತ್ತಾ ಹೇಳುತ್ತೇನೆ.
19 ನಾಶನವೇ ಅವರ ಅಂತ್ಯಾವಸ್ಥೆ, ಹೊಟ್ಟೆಯೇ ಅವರ ದೇವರು, ನಾಚಿಕೆಕೆಲಸಗಳಲ್ಲಿಯೇ ಅವರ ಗೌರವವು, ಅವರು ಪ್ರಪಂಚದ ಕಾರ್ಯಗಳ ಮೇಲೆ ಮನಸ್ಸಿಡುವವರು.
20 ನಾವಾದರೋ ಪರಲೋಕಸಂಸ್ಥಾನದವರು; ಕರ್ತನಾದ ಯೇಸು ಕ್ರಿಸ್ತನು ಅಲ್ಲಿಂದಲೇ
21 ರಕ್ಷಕನಾಗಿ ಬರುವದನ್ನು ಎದುರುನೋಡುತ್ತಾ ಇದ್ದೇವೆ. ಆತನು ಎಲ್ಲವನ್ನೂ ತನಗೆ ಅಧೀನಮಾಡಿಕೊಳ್ಳಲಾಗುವ ಪರಾಕ್ರಮವನ್ನು ಸಾಧಿಸಿ, ದೀನಾವಸ್ಥೆಯುಳ್ಳ ನಮ್ಮ ದೇಹವನ್ನು ರೂಪಾಂತರಪಡಿಸಿ ಪ್ರಭಾವವುಳ್ಳ ತನ್ನ ದೇಹದ ಸಾರೂಪ್ಯವಾಗುವಂತೆ ಮಾಡುವನು.

**4** ಹೀಗಿರಲಾಗಿ, ಪ್ರಿಯರೂ ಇಷ್ಟರೂ ಆದ ನನ್ನ ಸಹೋದರರೇ, ನನಗೆ ಸಂತೋಷವೂ ಜಯಮಾಲೆಯೂ ಆಗಿರುವವರೇ, ನಾನು ಹೇಳಿದಂತೆ ಕರ್ತನಲ್ಲಿ ದೃಢವಾಗಿ ನಿಲ್ಲಿರಿ, ಪ್ರಿಯರೇ.

ಇಬ್ಬರು ಕ್ರೈಸ್ತ ಸಹೋದರಿಗಳಲ್ಲಿ ಇದ್ದ ಮನಸ್ತಾಪವನ್ನು ಕುರಿತದ್ದು.

2 ಕರ್ತನಲ್ಲಿ ಒಂದೇ ಮನಸ್ಸುಳ್ಳವರಾಗಿರ್ರಿಯೆಂದು ಯುವೊದ್ಯಳನ್ನೂ ಸಂತುಕೆಯನ್ನೂ
3 ಪ್ರಬೋಧಿಸುತ್ತೇನೆ. ಸತ್ಯ ಸಯುಜನೇ, ಅವರಿಗೆ ಸಹಾಯಕನಾಗಿರಬೇಕೆಂದು ನಿನ್ನನ್ನೂ ಕೇಳಿಕೊಳ್ಳುತ್ತೇನೆ. ಅವರು ಕ್ಲೇಮೆನ್ಸ್ ಮುಂತಾದ ನನ್ನ ಜತೆಕೆಲಸದವರ ಸಹಿತವಾಗಿ ನನ್ನ ಕೂಡ ಸುವಾರ್ತೆಗೋಸ್ಕರ ಪ್ರಯಾಸಪಟ್ಟವರು. ಅವರವರ ಹೆಸರುಗಳು ಜೀವ ಬಾಧ್ಯರ ಪಟ್ಟಿಯಲ್ಲಿ ಬರೆದವೆ.

ಕ್ರೈಸ್ತರಲ್ಲಿ ತೋರತಕ್ಕ ಸದ್ಗುಣಗಳು.

ಯಾವಾಗಲೂ ಕರ್ತನಲ್ಲಿ ಸಂತೋಷಿಸಿರಿ; ಸಂತೋಷಪಡಿರಿ ಎಂದು ತಿರಿಗಿ ಹೇಳು 4
ತ್ತೇನೆ. ನಿಮ್ಮ ಸೈರಣೆಯು ಎಲ್ಲಾ ಮನುಷ್ಯರಿಗೆ ಗೊತ್ತಾಗಲಿ; ಕರ್ತನು ಹತ್ತರವಾಗಿ 5
ದ್ದಾನೆ. ಯಾವ ಸಂಬಂಧವಾಗಿಯೂ ಚಿಂತೆಮಾಡದೆ, ಸರ್ವವಿಷಯದಲ್ಲಿ ದೇವರ 6
ಮುಂದೆ ಕೃತಜ್ಞತಾಸ್ತುತಿಯನ್ನೂ ಪ್ರಾರ್ಥನೆವಿಜ್ಞಾಪನೆಗಳನ್ನೂ ಮಾಡುತ್ತಾ ನಿಮಗೆ
ಬೇಕಾದದ್ದನ್ನು ತಿಳಿಯಪಡಿಸಿರಿ. ಆಗ ಎಲ್ಲಾ ಗ್ರಹಿಕೆಯನ್ನು ಮೀರುವ ದೇವಶಾಂತಿಯು 7
ನಿಮ್ಮ ಹೃದಯಗಳನ್ನೂ ಯೋಚನೆಗಳನ್ನೂ ಕ್ರಿಸ್ತ ಯೇಸುವಿನಲ್ಲಿ ಕಾಯುವದು.

ಕಡೇ ಮಾತೇನಂದರೆ, ಸಹೋದರರೇ, ಯಾವ್ಯಾವದು ಸತ್ಯವೂ ಮಾನ್ಯವೂ ನ್ಯಾಯ 8
ವೂ ಶುದ್ಧವೂ ಪ್ರೀತಿಕರವೂ ಮನೋಹರವೂ ಆಗಿದೆಯೋ, ಯಾವದು ಸದ್ಗುಣವಾಗಿ
ದೆಯೋ, ಯಾವದು ಕೀರ್ತಿಗೆ ಯೋಗ್ಯವೋ, ಅವೆಲ್ಲವುಗಳನ್ನೂ ಲಕ್ಷ್ಯಕ್ಕೆ ತಂದು
ಕೊಳ್ಳಿರಿ. ನೀವು ಯಾವದನ್ನು ನನ್ನಿಂದ ಕಲಿತು ಹೊಂದಿದಿರೋ, ಮತ್ತು ಯಾವದನ್ನು 9
ನನ್ನಲ್ಲಿ ಕೇಳಿ ಕಂಡಿರೋ ಅದನ್ನೇ ಮಾಡುತ್ತಾ ಬನ್ನಿರಿ. ಹೀಗೆ ಮಾಡಿದರೆ ಶಾಂತಿದಾ
ಯಕನಾದ ದೇವರು ನಿಮ್ಮೊಂದಿಗಿರುವನು.

ಫಿಲಿಪ್ಪಿ ಸಭೆಯವರು ಪೌಲನಿಗೆ ತೋರಿಸಿದ ಔದಾರ್ಯವನ್ನು ಕುರಿತದ್ದು.

ನನ್ನ ವಿಷಯವಾದ ನಿಮ್ಮ ಯೋಚನೆಯೆಂಬ ಬಳ್ಳಿಯು ಇಷ್ಟು ದಿವಸಗಳಾದ ಮೇಲೆ 10
ಪುನಃ ಚಿಗುರಿದ್ದಕ್ಕೆ ನಾನು ಕರ್ತನ ನಿಮಿತ್ತ ಬಹಳವಾಗಿ ಸಂತೋಷಪಡುತ್ತೇನೆ.
ಇಂಥಾ ಯೋಚನೆ ನಿಮ್ಮಲ್ಲಿ ನಿಜವಾಗಿ ಇರುತ್ತಿದ್ದಾಗ್ಯೂ ಇದು ವರೆಗೆ ಅದರ ಪ್ರಕಾರ
ಮಾಡುವದಕ್ಕೆ ಸಂದರ್ಭ ಸಿಕ್ಕಲಿಲ್ಲವೇನೋ. ಕೊರತೆಯಲ್ಲಿದ್ದೇನೆಂದು ಸೂಚಿಸುವ 11
ದಕ್ಕೆ ನಾನು ಇದನ್ನು ಹೇಳುವದಿಲ್ಲ; ನಾನಂತೂ ಇದ್ದ ಸ್ಥಿತಿಯಲ್ಲಿಯೇ ಸಂತುಷ್ಟನಾಗಿ
ರುವದನ್ನು ಕಲಿತುಕೊಂಡಿದ್ದೇನೆ. ಬಡವನಾಗಿರಲೂ ಬಲ್ಲೆನು, ಸಮೃದ್ಧಿಯುಳ್ಳವನಾಗಿ 12
ರಲೂ ಬಲ್ಲೆನು. ನಾನು ತೃಪ್ತನಾಗಿದ್ದರೂ ಹಸಿದವನಾಗಿದ್ದರೂ, ಸಮೃದ್ಧಿಯುಳ್ಳವ
ನಾದರೂ ಕೊರತೆಯುಳ್ಳವನಾದರೂ, ಯಾವ ತರದ ಸ್ಥಿತಿಯಲ್ಲಿರುವವನಾದಾಗ್ಯೂ,
ಅದರ ಗುಟ್ಟು ನನಗೆ ತಿಳಿದದೆ. ನನ್ನನ್ನು ಬಲಪಡಿಸುವಾತನಲ್ಲಿದ್ದುಕೊಂಡು ಎಲ್ಲಕ್ಕೂ 13
ಶಕ್ತನಾಗಿದ್ದೇನೆ. ಹೀಗಿದ್ದಾಗ್ಯೂ ನೀವು ನನ್ನ ಸಂಕಟದಲ್ಲಿ ಪಾಲುಗಾರರಾಗಿದ್ದದ್ದು 14
ಒಳ್ಳೇದಾಯಿತು. ಇದಲ್ಲದೆ, ಫಿಲಿಪ್ಪಿಯವರೇ, ನಾನು ಮೊದಲು ನಿಮ್ಮಲ್ಲಿ ಸುವಾರ್ತೆ 15
ಯನ್ನು ಸಾರಿ ಮಕೆದೋನ್ಯದಿಂದ ಹೊರಟುಹೋದಾಗ, ಕೊಡುವ ಕೊಳ್ಳುವ ವಿಷಯ
ದಲ್ಲಿ ನಿಮ್ಮ ಹೊರತು ಬೇರೆ ಯಾವ ಸಭೆಗೂ ನನಗೂ ಸಂಬಂಧವಿರಲಿಲ್ಲವೆಂದು ನೀವೂ
ಬಲ್ಲಿರಿ. ನಾನು ಥೆಸಲೊನೀಕದಲ್ಲಿದ್ದಾಗಲೂ ನೀವು ಒಂದೆರಡು ಸಾರಿ ನನ್ನ ಕೊರತೆ 16
ಯನ್ನು ನೀಗಿಸುವದಕ್ಕೆ ಕೊಟ್ಟುಕಳುಹಿಸಿದಿರಲ್ಲಾ. ನಾನು ನಿಮ್ಮಿಂದ ದಾನವನ್ನು ಅಪೇ 17
ಕ್ಷಿಸುವದಿಲ್ಲ; ನಿಮ್ಮ ಆತ್ಮಕ್ಕೆ ಆದಾಯವಾಗುವಂಥ ಪ್ರೀತಿಫಲವನ್ನೇ ಅಪೇಕ್ಷಿಸುತ್ತೇನೆ.
ಬೇಕಾದದ್ದೆಲ್ಲಾ ನನಗುಂಟು, ಸಮೃದ್ಧಿಯಾಯಿತು. ಎಪಫ್ರೊದೀತನ ಕೈಯಿಂದ ನೀವು 18

ಕೊಟ್ಟುಕಳುಹಿಸಿದ್ದು ನನಗೆ ತಲಪಲಾಗಿ ನಾನು ತುಂಬಿ ತುಳುಕಿದವನಾಗಿದ್ದೇನೆ.
19 ಅದು ದೇವರಿಗೆ ಮೆಚ್ಚಿಕೆಯಾದದ್ದು, ಸುಗಂಧವಾಸನೆಯೇ, ಇಷ್ಟಯಜ್ಞವೇ. ನನ್ನ ದೇವರು ಕ್ರಿಸ್ತ ಯೇಸುವಿನ ಮೂಲಕ ತನ್ನ ಪ್ರಭಾವದ ಐಶ್ವರ್ಯಕ್ಕೆ ತಕ್ಕ ಹಾಗೆ ನಿಮ್ಮ
20 ಪ್ರತಿಯೊಂದು ಕೊರತೆಯನ್ನು ನೀಗಿಸುವನು. ನಮ್ಮ ತಂದೆಯಾದ ದೇವರಿಗೆ ಸದಾ ಕಾಲವು ಪ್ರಭಾವ. ಆಮೆನ್.

### ವಂದನೆಗಳು.

21 ದೇವಜನರಲ್ಲಿ ಪ್ರತಿಯೊಬ್ಬನಿಗೆ ಜೊತೆಕ್ರೈಸ್ತನಿಗೆಂದು ನನ್ನ ವಂದನೆಯನ್ನು ಹೇಳಿರಿ.
22 ನನ್ನ ಜೊತೆಯಲ್ಲಿರುವ ಸಹೋದರರು ನಿಮ್ಮನ್ನು ವಂದಿಸುತ್ತಾರೆ. ಇಲ್ಲಿರುವ ದೇವ ಜನರು ನಿಮ್ಮನ್ನು ವಂದಿಸುತ್ತಾರೆ. ಚಕ್ರವರ್ತಿಯ ಅರಮನೆಗೆ ಸೇರಿದವರು ವಿಶೇಷ ವಾದ ವಂದನೆಗಳನ್ನು ಹೇಳುತ್ತಾರೆ.
23 ಕರ್ತನಾದ ಯೇಸು ಕ್ರಿಸ್ತನ ಕೃಪೆಯು ನಿಮ್ಮ ಆತ್ಮದೊಂದಿಗೆ ಇರಲಿ.

# THE EPISTLE OF SAINT PAUL TO THE COLOSSIANS

# ಪೌಲನು ಕೊಲೊಸ್ಸೆಯವರಿಗೆ ಬರೆದ ಪತ್ರಿಕೆ

## ಒಕ್ಕಣೆ.

ದೇವರ ಚಿತ್ತಾನುಸಾರವಾಗಿ ಕ್ರಿಸ್ತ ಯೇಸುವಿನ ಅಪೊಸ್ತಲನಾದ ಪೌಲನೂ ಸಹೋ 1
ದರನಾದ ತಿಮೊಥೆಯನೂ ಕೊಲೊಸ್ಸೆಯಲ್ಲಿರುವ ದೇವಜನರಿಗೂ ಕ್ರಿಸ್ತನಲ್ಲಿರುವ ನಂಬು 2
ವವರಾದ[1] ಸಹೋದರರಿಗೂ ಬರೆಯುವದೇನಂದರೆ—ನಮ್ಮ ತಂದೆಯಾದ ದೇವರಿಂದ
ನಿಮಗೆ ಕೃಪೆಯೂ ಶಾಂತಿಯೂ ಆಗಲಿ.

## ಪೌಲನು ಕೊಲೊಸ್ಸೆಯ ಸಭೆಯವರ ವಿಷಯದಲ್ಲಿ ದೇವರಿಗೆ ಮಾಡುವ ಕೃತಜ್ಞತಾಸ್ತುತಿಯೂ ಪ್ರಾರ್ಥನೆಯೂ.

ಕ್ರಿಸ್ತ ಯೇಸುವಿನಲ್ಲಿ ನೀವು ಇಟ್ಟ ನಂಬಿಕೆಯ ವಿಷಯವಾಗಿಯೂ ದೇವಜನರ ಮೇಲಿ 3-5
ರುವ ನಿಮ್ಮ ಪ್ರೀತಿಯ ವಿಷಯವಾಗಿಯೂ ನಾವು ಕೇಳಿ ಪರಲೋಕದಲ್ಲಿ ನಿಮಗೋಸ್ಕರ
ಸಿದ್ಧವಾಗಿರುವ ಮಹಾಪದವಿಯನ್ನು ನೆನಸುತ್ತಾ ನಾವು ಪ್ರಾರ್ಥನೆ ಮಾಡುವಾಗೆಲ್ಲಾ
ನಿಮ್ಮ ನಿಮಿತ್ತವಾಗಿ ನಮ್ಮ ಕರ್ತನಾದ ಯೇಸು ಕ್ರಿಸ್ತನ ತಂದೆಯಾಗಿರುವ ದೇವರಿಗೆ
ಸ್ತೋತ್ರ ಮಾಡುತ್ತೇವೆ. ನೀವು ಆ ಪದವಿಯನ್ನು ಕುರಿತು ನಿಮ್ಮ ಬಳಿಗೆ ಬಂದಿರುವ
ಸುವಾರ್ತೆಯ ಸತ್ಯವಾಕ್ಯದಿಂದ ಮೊದಲೇ ಕೇಳಿದಿರಿ. ಆ ಸುವಾರ್ತೆಯು ನೀವು 6
ದೇವರ ಕೃಪೆಯನ್ನು ಕುರಿತು ಸತ್ಯಾರ್ಥವನ್ನು ಕೇಳಿ ತಿಳುಕೊಂಡ ದಿವಸದಿಂದ ನಿಮ್ಮಲ್ಲಿ
ಫಲಕೊಟ್ಟು ವೃದ್ಧಿಯಾಗುತ್ತಾ ಬಂದ ಪ್ರಕಾರ ಲೋಕದಲ್ಲೆಲ್ಲಾ ಹಬ್ಬಿ ಫಲಕೊಟ್ಟು
ವೃದ್ಧಿಯಾಗುತ್ತಾ ಬರುತ್ತದೆ. ನಮ್ಮ ಪ್ರಿಯ ಜೊತೆಯ ದಾಸನಾದ ಎಪಫ್ರನಿಂದ ಆ 7
ಸತ್ಯೋಪದೇಶವನ್ನು ಕಲಿತುಕೊಂಡಿರಿ. ಅವನು ನಿಮಗೋಸ್ಕರ ಕ್ರಿಸ್ತನ ನಂಬಿಗಸ್ತನಾದ
ಸೇವಕನು. ಪವಿತ್ರಾತ್ಮಪ್ರೇರಿತ ನಿಮ್ಮ ಪ್ರೀತಿಯ ವಿಷಯದಲ್ಲಿ ನನಗೆ ತಿಳಿಸಿದವನು 8
ಅವನೇ.

---

[1] ಅಥವಾ, ನಂಬಿಗಸ್ತರಾದ.

9 ಆದಕಾರಣ ನಾವು ನಿಮ್ಮ ಸುದ್ದಿಯನ್ನು ಕೇಳಿದಾಗಲಿಂದ ನಿಮಗೋಸ್ಕರ ಪ್ರಾರ್ಥಿಸುವದನ್ನು ಬಿಡದೆ, ನೀವು ಸಕಲ ಆತ್ಮೀಯ ಜ್ಞಾನವನ್ನೂ ಗ್ರಹಿಕೆಯನ್ನೂ ಹೊಂದಿ, ಕರ್ತನ 10 ಚಿತ್ತವನ್ನು ಸಂಪೂರ್ಣವಾಗಿ ತಿಳಿದು ಆತನಿಗೆ ಯೋಗ್ಯರಾಗಿ ನಡೆದು ಎಲ್ಲಾ ವಿಷಯಗಳಲ್ಲಿ ಆತನನ್ನು ಸಂತೋಷಪಡಿಸುವವರಾಗಿರಬೇಕೆಂದು ಬೇಡಿಕೊಳ್ಳುತ್ತೇವೆ. ನೀವು ದೇವಜ್ಞಾನವುಳ್ಳವರಾಗಿದ್ದು ಸಕಲ ಸತ್ಕಾರ್ಯವೆಂಬ ಫಲವನ್ನು ಹೆಚ್ಚಾಗಿ ಕೊಡುವವ 11 ರಾಗಿರಬೇಕೆಂತಲೂ ಆತನ ಮಹಿಮಾಶಕ್ತಿಯ ಪ್ರಕಾರ ಪರಿಪೂರ್ಣ ಬಲವನ್ನು ಹೊಂದಿ ಆನಂದಪೂರ್ವಕವಾದ ತಾಳ್ಮೆಯನ್ನೂ ದೀರ್ಘಶಾಂತಿಯನ್ನೂ ಯಾವಾಗಲೂ 12 ತೋರಿಸುವವರಾಗಿರಬೇಕೆಂತಲೂ ಬೆಳಕಿನ ರಾಜ್ಯದೊಳಗೆ ದೇವಜನರ ಬಾಧ್ಯತೆಯಲ್ಲಿ ಪಾಲುಗಾರರಾಗುವದಕ್ಕೆ ನಿಮ್ಮನ್ನು ಯೋಗ್ಯರನ್ನಾಗ ಮಾಡಿದ ತಂದೆಗೆ ಕೃತಜ್ಞತಾಸ್ತುತಿ ಮಾಡುವವರಾಗಿರಬೇಕೆಂತಲೂ ಪ್ರಾರ್ಥಿಸುತ್ತೇವೆ.

### ಕ್ರಿಸ್ತನು ಸರ್ವಸೃಷ್ಟಿಗೆ ಉತ್ಕೃಷ್ಟಸ್ಥಾನದಲ್ಲಿದ್ದಾನೆಂಬುವ ಬೋಧೆ.

13 ದೇವರು ನಮ್ಮನ್ನು ಅಂಧಕಾರದ ಧೊರೆತನದಿಂದ ಬಿಡಿಸಿ ತನ್ನ ಪ್ರಿಯ ಕುಮಾರನ 14 ರಾಜ್ಯದೊಳಗೆ ಸೇರಿಸಿದನು. ಆ ಕುಮಾರನಲ್ಲಿ ನಮ್ಮ ಪಾಪಗಳು ಪರಿಹಾರವಾಗಿ ನಮಗೆ 15 ಬಿಡುಗಡೆಯಾಯಿತು. ಆತನು ಅದೃಶ್ಯನಾದ ದೇವರ ಪ್ರತಿರೂಪನಾಗಿಯೂ ಸೃಷ್ಟಿ 16 ಗೆಲ್ಲಾ ಜ್ಯೇಷ್ಠಪುತ್ರನ ಸ್ಥಾನಹೊಂದಿದವನಾಗಿಯೂ ಇದ್ದಾನೆ. ಭೂಲೋಕಗಳಲ್ಲಿರುವ ದೃಶ್ಯಾದೃಶ್ಯವಾದವುಗಳೆಲ್ಲವೂ ಸಿಂಹಾಸನಗಳಾಗಲಿ ಪ್ರಭುತ್ವಗಳಾಗಲಿ ಧೊರೆತನಗಳಾಗಲಿ ಅಧಿಕಾರಗಳಾಗಲಿ ಆತನಲ್ಲಿ ಸೃಷ್ಟಿಸಲ್ಪಟ್ಟವು. ಸರ್ವವು ಆತನ ಮುಖಾಂತರ 17 ವಾಗಿಯೂ ಆತನಿಗೋಸ್ಕರವಾಗಿಯೂ ಸೃಷ್ಟಿಸಲ್ಪಟ್ಟಿತು. ಆತನು ಎಲ್ಲಕ್ಕೂ ಮೊದಲು 18 ಇದ್ದವನು; ಆತನು ಸಮಸ್ತಕ್ಕೂ ಆಧಾರಭೂತನು. ಸಭೆಯೆಂಬ ದೇಹಕ್ಕೆ ಆತನು ಶಿರಸ್ಸು; ಆತನು ಆದಿಸಂಭೂತನು. ಎಲ್ಲಾದರಲ್ಲಿ ಪ್ರಮುಖನಾಗುವಂತೆ ಸತ್ತವರೊಳ 19 ಗಿಂದ ಮೊದಲು ಎದ್ದುಬಂದವನು ಆತನೇ. ತಂದೆಯಾದ ದೇವರು ಆತನಲ್ಲಿ ತನ್ನ 20 ಸರ್ವಸಂಪೂರ್ಣತೆಯು ವಾಸವಾಗಿರಬೇಕೆಂತಲೂ ಆತನು ಶಿಲುಬೆಯ ಮೇಲೆ ಸುರಿಸಿದ ರಕ್ತದಿಂದ ತಾನು ಸಮಾಧಾನವನ್ನು ಉಂಟುಮಾಡಿ, ಭೂಪರಲೋಕಗಳಲ್ಲಿರುವ ಸಮಸ್ತವನ್ನೂ ಆತನ ಮೂಲಕ ತನಗೆ ಸಂಧಾನಪಡಿಸಿಕೊಳ್ಳಬೇಕೆಂತಲೂ ನಿಷ್ಕರ್ಷೆ ಮಾಡಿದನು.

### ಕ್ರಿಸ್ತನಲ್ಲಿ ಎಲ್ಲಾ ಜನಾಂಗದವರು ಯೆಹೂದ್ಯರೊಂದಿಗೆ ಸಮಭಾಗಿಗಳಾಗಿದ್ದಾರೆಂಬುವದು.

(ಎಫೆಸ. 2, 1—22.).

21 ಇದಲ್ಲದೆ ನೀವು ಹಿಂದಿನ ಕಾಲದಲ್ಲಿ ಅನ್ಯರೂ ದುಷ್ಕೃತ್ಯಗಳನ್ನು ಮಾಡುವವರಾಗಿ 22 ದ್ವೇಷಮನಸ್ಸುಳ್ಳವರೂ ಆಗಿದ್ದಾಗ್ಯೂ, ಆತನು ನಿಮ್ಮನ್ನು ಸಹ ತನ್ನ ಕುಮಾರನ ಸ್ಥೂಲ ದೇಹದಲ್ಲಿ ಉಂಟಾದ ಮರಣದ ಮೂಲಕ ಈಗ ಸಂಧಾನಪಡಿಸಿಕೊಂಡಿದ್ದಾನೆ; ಮತ್ತು ನಿಮ್ಮನ್ನು ಪರಿಶುದ್ಧರನ್ನಾಗಿಯೂ ನಿರ್ದೋಷಿಗಳನ್ನಾಗಿಯೂ ನಿರಪರಾಧಿಗಳನ್ನಾಗಿಯೂ

ತನ್ನ ಸನ್ನಿಧಿಯಲ್ಲಿ ನಿಲ್ಲಿಸಬೇಕೆಂದಿದ್ದಾನೆ. ನೀವು ಕೇಳಿದಂಥಾ ಆಕಾಶದ ಕೆಳಗಿರುವ 23
ಸರ್ವಸೃಷ್ಟಿಗೆ ಸಾರಲ್ಪಟ್ಟಂಥಾ ಸುವಾರ್ತೆಯಿಂದ ಉಂಟಾದ ನಿರೀಕ್ಷೆಯನ್ನು ಬಿಟ್ಟು ತೊಲಗಿ
ಹೋಗದೆ, ಅಸ್ತಿವಾರದ ಮೇಲೆ ನಿಂತು ಸ್ಥಿರವಾಗಿದ್ದು ನಂಬಿಕೆಯಲ್ಲಿ ನೆಲೆಗೊಂಡಿರುವ
ದಾದರೆ, ಆ ಪದವಿ ನಿಮಗೆ ಪ್ರಾಪ್ತವಾಗುವದು.

ಪೌಲನೆಂಬ ನಾನು ಈ ಸುವಾರ್ತೆಗೆ ಸೇವಕನಾದೆನು. ನಾನು ಈಗ ನಿಮಗೋಸ್ಕರ 24
ಅನುಭವಿಸುತ್ತಿರುವ ಬಾಧೆಗಳಲ್ಲಿ ಸಂತೋಷಪಟ್ಟು ಕ್ರಿಸ್ತನ ಸಂಕಟಗಳೊಳಗೆ ಇನ್ನೂ
ಉಳಿದದ್ದನ್ನು ಸಭೆಯೆಂಬ ಆತನ ದೇಹಕ್ಕೋಸ್ಕರ ನನ್ನ ಶರೀರದಲ್ಲಿ ಅನುಭವಿಸಿ ತೀರಿಸು
ತ್ತೇನೆ. ನಾನು ಸಭೆಗೆ ಸೇವಕನಾದೆನು. ದೇವರು ತನ್ನ ವಾಕ್ಯವನ್ನು ಸಂಪೂರ್ಣ 25
ವಾಗಿ ತಿಳಿಸುವ ಕೆಲಸವನ್ನು ನಿಮ್ಮ ಪ್ರಯೋಜನಕ್ಕೋಸ್ಕರ ನನಗೆ ದಯಪಾಲಿಸಿದನು.
ಆ ವಾಕ್ಯವು ಹಿಂದಿನ ಯುಗಗಳಿಂದಲೂ ತಲತಲಾಂತರಗಳಿಂದಲೂ ಮರೆಯಾಗಿತ್ತು; 26
ಈಗಿನ ಕಾಲದಲ್ಲಿ ದೇವಜನರಿಗೆ ತಿಳಿಸಲ್ಪಟ್ಟಿದೆ. ಅನ್ಯಜನಗಳ ವಿಷಯವಾದ ಈ 27
ಮರ್ಮವು ಎಷ್ಟು ಉತ್ಕೃಷ್ಟವಾದದ್ದೆಂಬುವದನ್ನು ದೇವರು ತನ್ನ ಜನರಿಗೆ ತಿಳಿಸಲಿಕ್ಕೆ
ಮನಸ್ಸುಮಾಡಿಕೊಂಡನು. ಈ ಮರ್ಮವು ಏನಂದರೆ, ಕ್ರಿಸ್ತನು [ಅನ್ಯಜನಗಳಾದ] ನಿಮ್ಮ
ಲ್ಲಿಯೂ ಇದ್ದು ಮಹಾಪದವಿಯ ನಿರೀಕ್ಷೆಯನ್ನು ಉಂಟುಮಾಡುವಂಥವನಾಗಿದ್ದಾನೆ
ಎಂಬುವದೇ. ನಾವು ಆತನನ್ನು ಪ್ರಸಿದ್ಧಿಪಡಿಸುವವರಾಗಿ ಸಕಲರಿಗೂ ಬುದ್ಧಿಹೇಳುತ್ತಾ 28
ಸರ್ವರಿಗೂ ಜ್ಞಾನಪೂರ್ವಕವಾಗಿ ಉಪದೇಶಿಸುತ್ತಾ ದೇವರ ಮುಂದೆ ಎಲ್ಲರನ್ನು ಕ್ರಿಸ್ತ
ನಲ್ಲಿ ಪ್ರವೀಣರನ್ನಾಗಿ ನಿಲ್ಲಿಸುವದಕ್ಕೆ ಪ್ರಯತ್ನಿಸುತ್ತಿದ್ದೇವೆ. ನನ್ನಲ್ಲಿ ಕಾರ್ಯಸಾಧಿಸುವ 29
ದೇವರ ಬಲವನ್ನು ಪ್ರಯೋಗಮಾಡಿ ಇದಕ್ಕೋಸ್ಕರವೇ ಹೋರಾಡುತ್ತೇನೆ, ಪ್ರಯಾಸ
ಪಡುತ್ತೇನೆ.

ಸುಳ್ಳುಬೋಧಕರಿಗೆ ಕಿವಿಗೊಡಬಾರದೆಂದು ಎಚ್ಚರಿಕೆ.

**2** ನಿಮಗೋಸ್ಕರವೂ ಲವೊದಿಕೀಯದವರಿಗೋಸ್ಕರವೂ ನನ್ನನ್ನು ಕಣ್ಣಾರೆ ಕಾಣದಿರು
ವವರೆಲ್ಲರಿಗೋಸ್ಕರವೂ ನನಗೆ ಬಹಳ ಹೋರಾಟ ಉಂಟೆಂಬುವದು ನಿಮಗೆ ತಿಳಿದಿರ
ಬೇಕೆಂದು ಅಪೇಕ್ಷಿಸುತ್ತೇನೆ. ಹ್ಯಾಗಂದರೆ, ನೀವೆಲ್ಲರು ಪ್ರೀತಿಯಿಂದ ಹೊಂದಿಕೆ 2-3
ಯಾಗಿದ್ದು ಬುದ್ಧಿಪೂರ್ವಕ ನಿಶ್ಚಯವೆಂಬ ಭಾಗ್ಯವನ್ನು ಪಡೆದು, ದೇವರು ತಿಳಿಸಿರುವ
ಮರ್ಮವನ್ನು, ಅಂದರೆ ತನ್ನಲ್ಲೇ ಜ್ಞಾನವಿದ್ಯಾಸಂಬಂಧವಾದ ನಿಕ್ಷೇಪಗಳನ್ನೆಲ್ಲಾ[1] ಅಡ
ಗಿಸಿಕೊಂಡಿರುವ ಕ್ರಿಸ್ತನನ್ನು, ತಿಳುಕೊಂಡವರಾಗಿ ಹೃದಯದಲ್ಲಿ ದೃಢವಾಗಿರಬೇಕೆಂಬ
ಕುತೂಹಲವು ನನಗುಂಟು. ಯಾರಾದರೂ ರಂಜನೆಯಾದ ಮಾತುಗಳಿಂದ ನಿಮ್ಮನ್ನು 4
ಮೋಸಗೊಳ್ಳಿಸ್ಯಾರೆಂಬ ಭಯ ನನಗಿರುವದರಿಂದ ಇದನ್ನು ಹೇಳಿದ್ದೇನೆ. ನಾನು ಶರೀರ 5
ದಿಂದ ನಿಮ್ಮ ಬಳಿಯಲ್ಲಿ ಇಲ್ಲದಿದ್ದರೂ ಆತ್ಮದಿಂದ ನಿಮ್ಮೊಂದಿಗಿದ್ದು, ನೀವು ಕ್ರಮವಾಗಿ
ನಡೆಯುವದನ್ನೂ ಕ್ರಿಸ್ತನಂಬಿಕೆಯಲ್ಲಿ ದೃಢವಾಗಿ ನಿಂತಿರುವದನ್ನೂ ನೋಡಿ ಸಂತೋಷ
ಪಡುತ್ತೇನೆ. ಆದದರಿಂದ ನೀವು ಕರ್ತನಾದ ಯೇಸುವೆಂಬ ಕ್ರಿಸ್ತನನ್ನು ಅಂಗೀಕರಿಸಿ 6

[1] ಸಾಮತಿ ೨, ೨—೪; ಯೆಶಾಯ ೪೫, ೩ ನೋಡು.

7 ದಂತೆಯೇ ಆತನಲ್ಲಿದ್ದವರಾಗಿ ನಡೆದುಕೊಳ್ಳಿರಿ. ಆತನಲ್ಲಿ ಬೇರೂರಿಕೊಂಡು ಭಕ್ತಿವೃದ್ಧಿ
ಯನ್ನು ಹೊಂದಿ ನಿಮಗೆ ಬೋಧಿಸಲ್ಪಟ್ಟ ಉಪದೇಶದ ಪ್ರಕಾರವೇ ಕ್ರಿಸ್ತನಂಬಿಕೆಯಲ್ಲಿ
ನೆಲೆಗೊಂಡು ದೇವರಿಗೆ ಹೆಚ್ಚೆಚ್ಚಾಗಿ ಸ್ತೋತ್ರ ಮಾಡುವವರಾಗಿರ್ರಿ.

8 ಕ್ರಿಸ್ತನನ್ನು ಅನುಸರಿಸದೆ ಮನುಷ್ಯರ ಸಂಪ್ರದಾಯಗಳನ್ನೂ ಮೂಢರಿಗೆ ಯೋಗ್ಯ
ವಾದ ಪ್ರಾಪಂಚಿಕ ಬೋಧೆಯನ್ನೂ ಅನುಸರಿಸುವವರು ನಿಮ್ಮಲ್ಲಿ ಬಂದು ಕೇವಲ
ಮೋಸವಾದ ತತ್ವಜ್ಞಾನಬೋಧನೆಯಿಂದ ನಿಮ್ಮ ಮನಸ್ಸನ್ನು ಕೆಡಿಸಿ ನಿಮ್ಮನ್ನು ವಶ
9 ಮಾಡಿಕೊಂಡಾರು, ಎಚ್ಚರಿಕೆಯಾಗಿರ್ರಿ. ಕ್ರಿಸ್ತನಲ್ಲಿಯೇ ದೇವರ ಸರ್ವಸಂಪೂರ್ಣತೆಯು
10 ಅವತರಿಸಿ ವಾಸಮಾಡುತ್ತದೆ, ಮತ್ತು ನೀವು ಆತನಲ್ಲಿದ್ದು ಪರಿಪೂರ್ಣತೆಯನ್ನು ಹೊಂದಿದ
11 ವರಾಗಿದ್ದೀರಿ. ಆತನು ಎಲ್ಲಾ ಧೊರೆತನಗಳಿಗೂ ಅಧಿಕಾರಗಳಿಗೂ ಶಿರಸ್ಸು. ನೀವು
ಆತನಲ್ಲಿ ಸುನ್ನತಿಯನ್ನೂ ಹೊಂದಿದಿರಿ; ಈ ಸುನ್ನತಿಯು ಕೈಯಿಂದ ಮಾಡಿದ್ದಲ್ಲ, ಇದು
ಪಾಪಾಧೀನಸ್ವಭಾವವನ್ನು ವಿಸರ್ಜಿಸುವದೇ; ಇದೇ ಕ್ರಿಸ್ತೀಯ ಸುನ್ನತಿ; ನೀವು ದೀಕ್ಷಾ
12 ಸ್ನಾನಮಾಡಿಸಿಕೊಂಡದ್ದರಲ್ಲಿ ಇದನ್ನು ಹೊಂದಿದಿರಿ. ಆ ದೀಕ್ಷಾಸ್ನಾನದಲ್ಲಿ ನೀವು ಕ್ರಿಸ್ತ
ನೊಂದಿಗೆ ಹೂಣಲ್ಪಟ್ಟಿರಿ. ಇದಲ್ಲದೆ ಆತನನ್ನು ಸತ್ತವರೊಳಗಿಂದ ಎಬ್ಬಿಸಿದ ದೇವರ
ಸಾಮರ್ಥ್ಯದಲ್ಲಿ ನಂಬಿಕೆಯಿಡುವದರ ಮೂಲಕ ಅದರಲ್ಲಿ ಆತನ ಕೂಡ ಎದ್ದುಬಂದಿರಿ.
13 ಅಪರಾಧಗಳನ್ನು ಮಾಡುವದರಿಂದಲೂ ಶರೀರದ ಸುನ್ನತಿಯಿಲ್ಲದಿರುವದರಿಂದಲೂ ಸತ್ತ
14 ವರಾಗಿದ್ದ ನಿಮ್ಮನ್ನು ಸಹ ದೇವರು ಕ್ರಿಸ್ತನೊಂದಿಗೆ ಬದುಕಿಸಿದ್ದಾನೆ. ಆತನು ನಮ್ಮ
ಅಪರಾಧಗಳನ್ನೆಲ್ಲಾ ಕ್ಷಮಿಸಿ ನಮ್ಮ ಮೇಲೆ ದೋಷಾರೋಪಣೆ ಮಾಡಿದಂಥಾ ಆಜ್ಞಾರೂಪ
ವಾಗಿದ್ದಂಥಾ ಪತ್ರವನ್ನು ಕೆಡಿಸಿ ಅದನ್ನು ಶಿಲುಬೆಗೆ ಜಡಿದು ಇಲ್ಲದಂತಾಗಮಾಡಿದನು.
15 ಆತನು ಧೊರೆತನಗಳನ್ನೂ ಅಧಿಕಾರಗಳನ್ನೂ ನಿರಾಯುಧರನ್ನಾಗಿ ಮಾಡಿ[1], ಜಯೋತ್ಸವ
ಮಾಡುತ್ತಾನೋ ಎಂಬಂತೆ ಶಿಲುಬೆಯ ಮೇಲೆ[2] ಅವುಗಳನ್ನು ಜಯಿಸಲ್ಪಟ್ಟವುಗಳನ್ನಾಗಿ
ಮೆರಸುತ್ತಾ ತೋರಿಸಿದನು.

16 ಹೀಗಿರುವದರಿಂದ ತಿಂದು ಕುಡಿಯುವ ವಿಷಯದಲ್ಲಿಯೂ ಹಬ್ಬ ಅಮಾವಾಸ್ಯೆ
ಸಬ್ಬತು ಎಂಬಿವುಗಳ ವಿಷಯದಲ್ಲಿಯೂ ನಿಮ್ಮನ್ನು ದೋಷಿಗಳೆಂದು ಯಾರೂ ಎಣಿಸ
17 ಬಾರದು. ಇವು ಮುಂದೆ ಬರಬೇಕಾಗಿದ್ದ ಕಾರ್ಯಗಳ ಛಾಯೆಯಾಗಿವೆ; ಇವುಗಳ ನಿಜ
18 ಸ್ವರೂಪವು ಕ್ರಿಸ್ತನೇ. ಕೆಲವರು ಅತಿವಿನಯದಲ್ಲಿಯೂ ದೇವದೂತರ ಪೂಜೆಯಲ್ಲಿಯೂ
ಆಸಕ್ತರಾಗಿದ್ದಾರೆ, ತಮಗೆ ದರ್ಶನಗಳಾದವೆಂದು ಕೊಚ್ಚಿಕೊಳ್ಳುತ್ತಾರೆ, ಮತ್ತು
ಪ್ರಾಪಂಚಿಕ ಬುದ್ಧಿಯಿಂದ ನಿರಾಧಾರವಾಗಿ ಉಬ್ಬಿಕೊಂಡಿದ್ದಾರೆ, ಆದರೆ ಕ್ರಿಸ್ತನೆಂಬ ಶಿರ
ಸ್ಸಿನ ಹೊಂದಿಕೆಯನ್ನು ಬಿಟ್ಟವರಾಗಿದ್ದಾರೆ. ಇಂಥವರು ನಿಮಗೆ ದೊರಕಿರುವ ಬಿರು
19 ದನ್ನು ಅಪಹರಿಸುವದಕ್ಕೆ ಅವಕಾಶ ಕೊಡಬೇಡಿರಿ. ಆ ಶಿರಸ್ಸಿನಿಂದಲೇ ದೇಹವೆಲ್ಲಾ
ಕೀಲುನರಗಳ ಮೂಲಕ ಬೇಕಾದ ಸಹಾಯವನ್ನು ಹೊಂದಿ ಒಂದಾಗಿ ಕೂಡಿಸಲ್ಪಟ್ಟು
20 ದೇವರು ಕೊಡುವ ವೃದ್ಧಿಯಿಂದ ಅಭಿವೃದ್ಧಿಯಾಗುತ್ತಾ ಬರುತ್ತದೆ. ಮೂಢರು ಅನು
ಸರಿಸುವ ಪ್ರಾಪಂಚಿಕ ಬೋಧನೆಯ ಪಾಲಿಗೆ ನೀವು ಕ್ರಿಸ್ತನೊಂದಿಗೆ ಸತ್ತವರಾಗಿದ್ದ
ಮೇಲೆ, ಇನ್ನೂ ಪ್ರಾಪಂಚಿಕರಾಗಿ ಬದುಕುವವರಂತೆ ಮನುಷ್ಯಕಲ್ಪಿತ ಆಜ್ಞೆಗಳನ್ನೂ

[1] ಅಥವಾ, ತೆಗೆದಿಟ್ಟು. [2] ಅಥವಾ, ಕ್ರಿಸ್ತನಲ್ಲಿ.

ಉಪದೇಶಗಳನ್ನೂ ಅನುಸರಿಸಿ—ಇದನ್ನು ಹಿಡಿಯಬೇಡ, ಇದನ್ನು ರುಚಿನೋಡಬೇಡ, 21-22
ಅದನ್ನು ಮುಟ್ಟಬೇಡ ಎನ್ನುವ ನಿಬಂಧನೆಗಳಿಗೆ ನಿಮ್ಮನ್ನು ಒಳಗಾಗಮಾಡಿಕೊಳ್ಳುವದು
ಯಾಕೆ?[1] ಆ ಪದಾರ್ಥಗಳೆಲ್ಲವೂ ಬಳಸುವದರಲ್ಲಿ ನಾಶವಾಗುತ್ತವೆ. ಅಂಥಾ ಉಪ 23
ದೇಶಗಳು ಅತ್ಯಾಚಾರವನ್ನೂ ಅತಿವಿನಯವನ್ನೂ ದೇಹದಂಡನೆಯನ್ನೂ ಬೋಧಿಸುತ್ತಾ
ಹೆಸರಿಗೆ ಮಾತ್ರ ಜ್ಞಾನವೆನ್ನಿಸಿಕೊಳ್ಳುತ್ತವೆಯಲ್ಲದೆ ಶಾರೀರಿಕ ಇಚ್ಛೆಗಳನ್ನು ನಿಗ್ರಹಿಸುವದ
ರಲ್ಲಿ ಯಾವ ಪ್ರಯೋಜನಕ್ಕೂ ಬರುವದಿಲ್ಲ.

### ಅಜ್ಞಾನಿಗಳ ದುರ್ನಡತೆಯನ್ನು ಬಿಟ್ಟುಬಿಟ್ಟು ಯೋಗ್ಯರಾಗಿ ನಡೆಯಬೇಕೆಂಬ ಬೋಧೆ.

(ಎಫೆಸ. 4, 17—6, 9.)

ಆದಕಾರಣ ನೀವು ಕ್ರಿಸ್ತನೊಂದಿಗೆ ಎಬ್ಬಿಸಲ್ಪಟ್ಟಿರುವದರಿಂದ ಮೇಲಿರುವವುಗಳನ್ನೇ **3**
ಹುಡುಕಿರಿ; ಅಲ್ಲಿ ಕ್ರಿಸ್ತನು ದೇವರ ಬಲಪಾರ್ಶ್ವದಲ್ಲಿ ಆಸನಾರೂಢನಾಗಿದ್ದಾನೆ. ಮೇಲಿ 2
ರುವಂಥವುಗಳ ಮೇಲೆ ಮನಸ್ಸಿಡಿರಿ, ಭೂಸಂಬಂಧವಾದವುಗಳ ಮೇಲೆ ಇಡಬೇಡಿರಿ.
ಯಾಕಂದರೆ ನೀವು ಸತ್ತಿರಲ್ಲಾ, ನಿಮ್ಮ ಜೀವವು ಕ್ರಿಸ್ತನೊಂದಿಗೆ ದೇವರಲ್ಲಿ ಮರೆಯಾಗಿ 3
ಟ್ಟದೆ. ನಮಗೆ ಜೀವವಾಗಿರುವ ಕ್ರಿಸ್ತನು ಪ್ರತ್ಯಕ್ಷನಾಗುವಾಗ, ನೀವು ಸಹ ಆತನ 4
ಜೊತೆಯಲ್ಲಿ ಪ್ರಭಾವದಿಂದ ಕೂಡಿದವರಾಗಿ ಪ್ರತ್ಯಕ್ಷರಾಗುವಿರಿ.

ಆದದರಿಂದ ನಿಮ್ಮಲ್ಲಿರುವ ಭೂಸಂಬಂಧವಾದ ಭಾವಗಳನ್ನು[2] ಸಾಯಿಸಿರಿ. ಜಾರತ್ವ 5
ಬಂಡುತನ ಕಾಮಾಭಿಲಾಷೆ ದುರಾಶೆ ವಿಗ್ರಹಾರಾಧನೆಗೆ ಸಮವಾಗಿರುವ ಲೋಭ ಇವು
ಗಳನ್ನು ವಿಸರ್ಜಿಸಿಬಿಡಿರಿ; ಇವುಗಳ ನಿಮಿತ್ತ ದೇವರ ಕೋಪವು ಉಂಟಾಗುತ್ತದೆ. 6
ಪೂರ್ವದಲ್ಲಿ ನೀವು ಸಹ ಈ ದುರ್ಭಾವಗಳ ಅಧೀನದಲ್ಲಿದ್ದು ಈ ಕೆಲಸಗಳನ್ನು ನಡಿಸು 7
ತ್ತಿದ್ದಿರಿ. ಈಗಲಾದರೋ ಕ್ರೋಧ ಕೋಪ ಮತ್ಸರ ದೂಷಣೆ ಬಾಯಿಂದ ಹೊರಡುವ 8
ದುರ್ಭಾಷೆ ಇವುಗಳನ್ನು ವಿಸರ್ಜಿಸಿಬಿಡಿರಿ. ಒಬ್ಬರಿಗೊಬ್ಬರು ಸುಳ್ಳಾಡಬೇಡಿರಿ; ನೀವು 9
ಪೂರ್ವಸ್ವಭಾವವನ್ನು ಅದರ ಕೃತ್ಯಗಳ ಕೂಡ ತೆಗೆದಿಟ್ಟು, ನೂತನಸ್ವಭಾವವನ್ನು ಧರಿಸಿ 10
ಕೊಂಡಿದ್ದೀರಲ್ಲವೇ. ಈ ಸ್ವಭಾವವು ಸೃಷ್ಟಿಕರ್ತನ ಹೋಲಿಕೆಯ ಮೇರೆಗೆ ದಿನೇದಿನೇ
ನೂತನವಾಗುತ್ತಾ ಪೂರ್ಣಜ್ಞಾನವನ್ನು ಉಂಟುಮಾಡುತ್ತದೆ. ಇದನ್ನು ಧರಿಸಿಕೊಂಡಿ 11
ರುವದರಲ್ಲಿ ಗ್ರೀಕನು ಯೆಹೂದ್ಯನು ಎಂಬ ಭೇದವಿಲ್ಲ; ಸುನ್ನತಿ ಮಾಡಿಸಿಕೊಂಡವರು
ಸುನ್ನತಿ ಮಾಡಿಸಿಕೊಳ್ಳದವರು ಎಂಬ ಭೇದವಿಲ್ಲ; ಮ್ಲೇಚ್ಛ ಹೂಣ ಎಂಬ ಹೆಸರುಗಳಿಲ್ಲ;
ಆಳು ಒಡೆಯ ಎಂಬ ಭೇದವಿಲ್ಲ; ಆದರೆ ಕ್ರಿಸ್ತನೇ ಸಮಸ್ತರಲ್ಲಿಯೂ ಸಮಸ್ತವೂ
ಆಗಿರುವನು.

ಹೀಗಿರಲಾಗಿ ನೀವು ದೇವರಿಂದ ಆರಿಸಿಕೊಂಡವರೂ ಪ್ರತಿಷ್ಠಿತರೂ ಪ್ರಿಯರೂ ಆಗಿರು 12
ವದರಿಂದ, ಕನಿಕರ ದಯೆ ದೀನಭಾವ ಸಾತ್ವಿಕತ್ವ ದೀರ್ಘಶಾಂತಿ ಎಂಬ ಸದ್ಗುಣಗಳನ್ನು
ಧರಿಸಿಕೊಳ್ಳಿರಿ. ಮತ್ತೊಬ್ಬನ ಮೇಲೆ ತಪ್ಪುಹೊರಿಸುವದಕ್ಕೆ ಕಾರಣವಿದ್ದರೂ ತಪ್ಪು 13
ಹೊರಿಸದೆ ಒಬ್ಬರಿಗೊಬ್ಬರು ಸೈರಿಸಿಕೊಂಡು ಕ್ಷಮಿಸಿರಿ. ಕರ್ತನು ನಿಮ್ಮನ್ನು ಕ್ಷಮಿಸಿ

[1] ಮತ್ತಾಯ ೧೫, ೧—೨೦; ಮಾರ್ಕ ೭, ೧—೨೩ ನೋಡು. [2] ಮೂಲ: ಅಂಗಗಳನ್ನು.

14 ದಂತೆಯೇ ನೀವೂ ಕ್ಷಮಿಸಿರಿ. ಇದೆಲ್ಲಾದರ ಮೇಲೆ ಪ್ರೀತಿಯನ್ನು ಧರಿಸಿಕೊಳ್ಳಿರಿ;
15 ಅದು ಸಮಸ್ತವನ್ನು ಸಂಪೂರ್ಣಮಾಡುವ ಬಂಧವಾಗಿದೆ. ಕ್ರಿಸ್ತನಿಂದಾದ ಸಮಾಧಾನವು ನಿಮ್ಮ ಹೃದಯಗಳಲ್ಲಿ ಯಜಮಾನನಂತಿದ್ದು ತೀರ್ಪು ಹೇಳಲಿ; ನೀವು ಒಂದೇ ದೇಹಕ್ಕೆ ಸೇರಿದವರಾದ್ದರಿಂದ ಸಮಾಧಾನದಿಂದಿರುವದಕ್ಕಾಗಿ ಕರೆಯಲ್ಪಟ್ಟಿರಿ. ಇದಲ್ಲದೆ
16 ಕೃತಜ್ಞತೆಯುಳ್ಳವರಾಗಿರ್ರಿ. ಕ್ರಿಸ್ತನ ವಾಕ್ಯವು ನಿಮ್ಮಲ್ಲಿ ಸಮೃದ್ಧಿಯಾಗಿ ವಾಸಿಸಲಿ; ಸಕಲ ಜ್ಞಾನದಿಂದ ಕೂಡಿದವರಾಗಿ ಒಬ್ಬರಿಗೊಬ್ಬರು ಉಪದೇಶ ಮಾಡಿಕೊಳ್ಳಿರಿ, ಬುದ್ಧಿ ಹೇಳಿಕೊಳ್ಳಿರಿ; ಕರ್ತನ ಕೃಪೆಯನ್ನು ನೆನಸಿಕೊಳ್ಳುವವರಾಗಿ ಕೀರ್ತನೆಗಳಿಂದಲೂ ಸಂಗೀತಗಳಿಂದಲೂ ಆತ್ಮಸಂಬಂಧವಾದ ಹಾಡುಗಳಿಂದಲೂ ನಿಮ್ಮ ಹೃದಯಗಳಲ್ಲಿ ದೇವ
17 ರಿಗೆ ಗಾನಮಾಡಿರಿ. ನೀವು ನುಡಿಯಿಂದಾಗಲಿ ನಡೆಯಿಂದಾಗಲಿ ಏನೂ ಮಾಡಿದರೂ ಅದೆಲ್ಲವನ್ನೂ ಕರ್ತನಾದ ಯೇಸುವಿನ ಹೆಸರಿನಲ್ಲಿಯೇ ಮಾಡಿರಿ. ಆತನ ಮೂಲಕ ತಂದೆಯಾದ ದೇವರಿಗೆ ಕೃತಜ್ಞತಾಸ್ತುತಿಯನ್ನು ಸಲ್ಲಿಸಿರಿ.

18 ಸ್ತ್ರೀಯರೇ, ನಿಮ್ಮ ಗಂಡಂದಿರಿಗೆ ಅಧೀನರಾಗಿರಿ; ಇದು ಕರ್ತನಲ್ಲಿರುವವರಿಗೆ
19 ಯೋಗ್ಯವಾಗಿದೆ. ಪುರುಷರೇ, ನಿಮ್ಮ ಹೆಂಡತಿಯರನ್ನು ಪ್ರೀತಿಸಿರಿ, ಅವರಿಗೆ ನಿಷ್ಠುರ
20 ವಾಗಿರಬೇಡಿರಿ. ಮಕ್ಕಳೇ, ಎಲ್ಲಾ ವಿಷಯಗಳಲ್ಲಿ ನಿಮ್ಮ ತಂದೆತಾಯಿಗಳ ಮಾತನ್ನು
21 ಕೇಳಿರಿ; ಇದು ಕರ್ತನ ದೃಷ್ಟಿಯಲ್ಲಿ ಮೆಚ್ಚಿಕೆಯಾಗಿದೆ. ತಂದೆಗಳೇ, ನಿಮ್ಮ ಮಕ್ಕಳನ್ನು
22 ಕೆಣಕಿ ಅವರಿಗೆ ಮನಗುಂದಿಸಬೇಡಿರಿ. ದಾಸತ್ವದಲ್ಲಿರುವವರೇ, ಈ ಲೋಕದಲ್ಲಿನ ನಿಮ್ಮ ಯಜಮಾನರಿಗೆ ಎಲ್ಲಾ ವಿಷಯಗಳಲ್ಲಿ ವಿಧೇಯರಾಗಿರ್ರಿ; ಮನುಷ್ಯರನ್ನು ಮೆಚ್ಚಿಸುವವರು ಮಾಡುವ ಪ್ರಕಾರ ನಿಮ್ಮ ಯಜಮಾನರು ನೋಡುತ್ತಿರುವಾಗ ಮಾತ್ರ ಸೇವೆ
23 ಮಾಡದೆ, ಕರ್ತನಿಗೆ ಭಯಪಡುವವರಾಗಿ ಸರಳಮನಸ್ಸಿನಿಂದ ಕೆಲಸಮಾಡಿರಿ. ನೀವು ಯಾವ ಕೆಲಸವನ್ನು ಮಾಡಿದರೂ ಅದನ್ನು ಮನುಷ್ಯರಿಗೋಸ್ಕರವೆಂದು ಮಾಡದೆ, ಕರ್ತ
24 ನಿಗೋಸ್ಕರವೇ ಎಂದು ಮನಃಪೂರ್ವಕವಾಗಿ ಮಾಡಿರಿ; ಕರ್ತನಿಂದ ಪರಲೋಕ ಬಾಧ್ಯತೆಯೆಂಬ ಪ್ರತಿಫಲವನ್ನು ಹೊಂದುವೆವೆಂದು ತಿಳಿದಿದ್ದೀರಲ್ಲಾ. ನೀವು ಕರ್ತನಾದ
25 ಕ್ರಿಸ್ತನಿಗೇ ದಾಸರಾಗಿದ್ದೀರಿ. ಅನ್ಯಾಯ ಮಾಡುವವನು ತಾನು ಮಾಡಿದ ಅನ್ಯಾಯಕ್ಕೆ
**4** ತಕ್ಕ ಪ್ರತಿಫಲವನ್ನು ಹೊಂದುವನಷ್ಟೆ; ಪಕ್ಷಪಾತವಿರುವದಿಲ್ಲ. ಯಜಮಾನರೇ, ಪರಲೋಕದಲ್ಲಿ ನಿಮಗೂ ಯಜಮಾನನೊಬ್ಬನಿದ್ದಾನೆಂದು ತಿಳಿದು ನಿಮ್ಮ ದಾಸರಿಗೆ ನ್ಯಾಯವಾದದ್ದನ್ನೂ ಸರಿಯಾದದ್ದನ್ನೂ ಮಾಡಿರಿ.

2 ಪ್ರಾರ್ಥನೆಯನ್ನು ತಪ್ಪದೆ ಮಾಡುವವರಾಗಿ ಅದರಲ್ಲಿ ಎಚ್ಚರವಾಗಿದ್ದು ದೇವರಿಗೆ ಕೃತ
3-4 ಜ್ಞತಾಸ್ತುತಿ ಮಾಡಿರಿ. ಇದಲ್ಲದೆ ನಮಗೋಸ್ಕರವೂ ಪ್ರಾರ್ಥನೆ ಮಾಡಿರಿ. ಕ್ರಿಸ್ತನ ವಿಷಯದಲ್ಲಿ ದೇವರು ತಿಳಿಯಪಡಿಸಿದ ಸತ್ಯಾರ್ಥವನ್ನು ಪ್ರಸಂಗಿಸುವದಕ್ಕೆ ಆತನು ಅನುಕೂಲವಾದ ಸಂದರ್ಭವನ್ನು ನಮಗೆ ದಯಪಾಲಿಸಿ, ನಾನು ಅದನ್ನು ಹೇಳಬೇಕಾದ ರೀತಿಯಲ್ಲಿ ತಿಳಿಸುವಂತೆ ಅನುಗ್ರಹ ಮಾಡಬೇಕೆಂದು ಬೇಡಿಕೊಳ್ಳಿರಿ; ಆ ಸತ್ಯಾರ್ಥದ
5 ನಿಮಿತ್ತವೇ ನಾನು ಸೆರೆಯಲ್ಲಿದ್ದೇನಲ್ಲಾ. ಸಮಯವನ್ನು ಸುಮ್ಮನೆ ಕಳಕೊಳ್ಳದೆ ಅದನ್ನು ಬೆಲೆಯುಳ್ಳದ್ದೆಂದು ಉಪಯೋಗಿಸಿ ಹೊರಗಿನವರ ಮುಂದೆ ಜ್ಞಾನವುಳ್ಳವರಾಗಿ ನಡೆದು
6 ಕೊಳ್ಳಿರಿ. ನಿಮ್ಮ ಸಂಭಾಷಣೆ ಯಾವಾಗಲೂ ಇಂಪಾಗಿಯೂ ರಸವತ್ತಾಗಿಯೂ

ಇರಲಿ; ಹೀಗೆ ನೀವು ಯಾರ್ಯಾರಿಗೆ ಯಾವ್ಯಾವ ರೀತಿಯಲ್ಲಿ ಉತ್ತರ ಹೇಳಬೇಕೋ ಅದನ್ನು ತಿಳುಕೊಳ್ಳುವಿರಿ.

ವಂದನೆಗಳೂ ಕಡೇ ಮಾತುಗಳೂ.

7 ಪ್ರಿಯ ಸಹೋದರನೂ ನಂಬಿಗಸ್ತನಾದ ಸೇವಕನೂ ಕರ್ತನಲ್ಲಿ ಜೊತೆಯ ದಾಸನೂ ಆಗಿರುವ ತುಖಿಕನು ನನ್ನ ಸಂಗತಿಗಳನ್ನೆಲ್ಲಾ ನಿಮಗೆ ತಿಳಿಸುವನು. 8 ನೀವು ನನ್ನ ಸಮಾಚಾರವನ್ನು ತಿಳುಕೊಳ್ಳುವ ಹಾಗೆಯೂ ಅವನು ನಿಮ್ಮ ಹೃದಯಗಳನ್ನು ಸಂತೈಸುವ ಹಾಗೆಯೂ ಅವನನ್ನು 9 ನಂಬಿಗಸ್ತನಾದ ಪ್ರಿಯ ಸಹೋದರನಾಗಿರುವ ನಿಮ್ಮ ಊರಿನ ಒನೇಸಿಮನ ಜೊತೆಯಲ್ಲಿ ಕಳುಹಿಸಿದ್ದೇನೆ. ಅವರು ಇಲ್ಲಿ ನಡೆಯುವ ಸಂಗತಿಗಳನ್ನೆಲ್ಲಾ ನಿಮಗೆ ತಿಳಿಸುವರು.

10 ನನ್ನ ಜೊತೆಸೆರೆಯವನಾದ ಅರಿಸ್ತಾರ್ಕನೂ ಬಾರ್ನಬನಿಗೆ ದಾಯಾದನಾಗಿರುವ ಮಾರ್ಕನೂ ನಿಮಗೆ ವಂದನೆ ಹೇಳುತ್ತಾರೆ. ಮಾರ್ಕನನ್ನು ಕುರಿತು ಅಪ್ಪಣೆಗಳನ್ನು ಹೊಂದಿದಿರಲ್ಲಾ; ಅವನು ನಿಮ್ಮ ಬಳಿಗೆ ಬಂದರೆ ಅವನನ್ನು ಸೇರಿಸಿಕೊಳ್ಳಿರಿ. 11 ಯೂಸ್ತನೆನ್ನಿಸಿಕೊಳ್ಳುವ ಯೇಸು ಸಹ ನಿಮಗೆ ವಂದನೆ ಹೇಳುತ್ತಾನೆ. ಸುನ್ನತಿಯವರೊಳಗೆ ಇವರು ಮಾತ್ರವೇ ದೇವರ ರಾಜ್ಯಾಭಿವೃದ್ಧಿಗಾಗಿ ನನ್ನ ಜೊತೆಗೆಲಸದವರಾಗಿದ್ದಾರೆ; ಇವರಿಂದ ನನಗೆ ಉಪಶಮನ ಉಂಟಾಯಿತು. 12 ಕ್ರಿಸ್ತ ಯೇಸುವಿನ ದಾಸನಾಗಿರುವ ನಿಮ್ಮ ಊರಿನ ಎಪಫ್ರನು ನಿಮಗೆ ವಂದನೆ ಹೇಳುತ್ತಾನೆ; ಇವನು ಪ್ರಾರ್ಥನೆ ಮಾಡುವಾಗೆಲ್ಲಾ ನಿಮಗೋಸ್ಕರ ಹೋರಾಡಿ, ನೀವು ಪ್ರವೀಣರಾಗಿಯೂ ಎಲ್ಲಾ ವಿಷಯಗಳಲ್ಲಿ ದೇವರ ಚಿತ್ತವನ್ನು ಕುರಿತು ಪೂರ್ಣ ನಿಶ್ಚಯವುಳ್ಳವರಾಗಿಯೂ ನಿಂತಿರಬೇಕೆಂದು ವಿಜ್ಞಾಪನೆ ಮಾಡುತ್ತಾನೆ. 13 ಇವನು ನಿಮಗೋಸ್ಕರವೂ ಲವೊದಿಕೀಯದವರಿಗೋಸ್ಕರವೂ ಹಿರಿಯಾಪೊಲಿಯವರಿಗೋಸ್ಕರವೂ ಬಹಳ ಪ್ರಯಾಸಪಡುತ್ತಾನೆಂದು ಸಾಕ್ಷಿಹೇಳುತ್ತೇನೆ. 14 ಪ್ರಿಯ ವೈದ್ಯನಾಗಿರುವ ಲೂಕನು ಮತ್ತು ದೇಮನು ನಿಮಗೆ ವಂದನೆ ಹೇಳುತ್ತಾರೆ. 15 ಲವೊದಿಕೀಯದಲ್ಲಿರುವ ಸಹೋದರರಿಗೂ ನುಂಫಳಿಗೂ ಆಕೆಯ[1] ಮನೆಯಲ್ಲಿ ಕೂಡುವ ಸಭೆಯವರಿಗೂ ವಂದನೆ ಹೇಳಿರಿ.

16 ನಿಮ್ಮಲ್ಲಿ ಈ ಪತ್ರಿಕೆಯನ್ನು ಓದಿಸಿಕೊಂಡ ತರುವಾಯ ಲವೊದಿಕೀಯದವರ ಸಭೆಯಲ್ಲಿಯೂ ಓದಿಸಿರಿ; ಮತ್ತು ನಾನು ಬರೆದ ಪತ್ರಿಕೆಯನ್ನು ಲವೊದಿಕೀಯದಿಂದ ತರಿಸಿ ನೀವೂ ಓದಿಸಿಕೊಳ್ಳಿರಿ. 17 ಅರ್ಖಿಪ್ಪನಿಗೆ—ನೀನು ಕರ್ತನಿಂದ ಹೊಂದಿರುವ ಸೇವೆಯನ್ನು ನೆರವೇರಿಸುವದಕ್ಕೆ ಎಚ್ಚರವಾಗಿರಬೇಕೆಂದು ಹೇಳಿರಿ.

18 ಇದು ಪೌಲನೆಂಬ ನಾನು ಸ್ವಂತ ಕೈಯಿಂದ ಬರೆದ ವಂದನೆ. ನಾನು ಸೆರೆಯಲ್ಲಿದ್ದೇನೆಂಬುವದನ್ನು ಜ್ಞಾಪಕಮಾಡಿಕೊಳ್ಳಿರಿ. ಕರ್ತನಾದ ಯೇಸುವಿನ ಕೃಪೆಯು ನಿಮ್ಮಲ್ಲಿರಲಿ.

---

[1] ಕೆಲವು ಪ್ರತಿಗಳಲ್ಲಿ — ನುಂಫನಿಗೂ ಅವರ ಎಂದು ಬರೆದಿದೆ.

# THE FIRST EPISTLE OF SAINT PAUL TO THE
# THESSALONIANS

---

# ಪೌಲನು ಥೆಸಲೊನೀಕದವರಿಗೆ
ಬರೆದ
# ಮೊದಲನೇ ಪತ್ರಿಕೆ

### ಒಕ್ಕಣೆ.

**1** ತಂದೆಯಾದ ದೇವರಲ್ಲಿಯೂ ಕರ್ತನಾದ ಯೇಸು ಕ್ರಿಸ್ತನಲ್ಲಿಯೂ ಇರುವ ಥೆಸಲೊನೀಕದವರ ಸಭೆಗೆ ಪೌಲ ಸಿಲ್ವಾನ ತಿಮೊಥೆಯ ಎಂಬ ನಾವು ಬರೆಯುವದೇನಂದರೆ—ನಿಮಗೆ ಕೃಪೆಯೂ ಶಾಂತಿಯೂ ಆಗಲಿ.

### ಪೌಲನು ಥೆಸಲೊನೀಕದವರಲ್ಲಿ ಕಾಣಬಂದ ಸದ್ಗುಣಗಳಿಗಾಗಿ ದೇವರಿಗೆ ಮಾಡಿದ ಕೃತಜ್ಞತಾಸ್ತುತಿ.

2-3 ನಾವು ನಂಬಿಕೆಯ ಫಲವಾದ ನಿಮ್ಮ ಕೆಲಸವನ್ನೂ ಪ್ರೀತಿಪೂರ್ವಕವಾದ ನಿಮ್ಮ ಪ್ರಯಾಸವನ್ನೂ ನಮ್ಮ ಕರ್ತನಾದ ಯೇಸು ಕ್ರಿಸ್ತನ ಮೇಲಣ ನಿರೀಕ್ಷೆಯಿಂದುಂಟಾದ ನಿಮ್ಮ ಸ್ಥೈರಣೆಯನ್ನೂ ನಮ್ಮ ತಂದೆಯಾದ ದೇವರ ಮುಂದೆ ಎಡೆಬಿಡದೆ ಜ್ಞಾಪಕಮಾಡಿಕೊಂಡು, ನಮ್ಮ ಪ್ರಾರ್ಥನೆಗಳಲ್ಲಿ ನಿಮಗೋಸ್ಕರ ವಿಜ್ಞಾಪನೆಮಾಡುವಾಗ ನಿಮ್ಮೆಲ್ಲರ 4 ವಿಷಯದಲ್ಲಿ ದೇವರಿಗೆ ಯಾವಾಗಲೂ ಕೃತಜ್ಞತಾಸ್ತುತಿ ಸಲ್ಲಿಸುತ್ತೇವೆ. ದೇವರು ಪ್ರೀತಿ 5 ಸಿದ ಸಹೋದರರೇ, ಆತನು ನಿಮ್ಮನ್ನು ಆದುಕೊಂಡನೆಂಬುವದನ್ನೂ ನಾವು ಸಾರಿದ ಸುವಾರ್ತೆಯು ನಿಮ್ಮಲ್ಲಿ ಬರೀ ಮಾತಾಗಿ ಬಾರದೆ ಶಕ್ತಿಯೊಡನೆಯೂ ಪವಿತ್ರಾತ್ಮದೊಡನೆಯೂ ನಿಶ್ಚಯದೊಡನೆಯೂ[1] ಬಂತೆಂಬುವದನ್ನೂ ಬಲ್ಲೆವು. ನಾವು ನಿಮ್ಮಲ್ಲಿದ್ದು ನಿಮ 6 ಗೋಸ್ಕರ ಎಂಥವರಾಗಿ ವರ್ತಿಸಿದೆವೆಂಬುವದನ್ನು ನೀವೂ ಬಲ್ಲಿರಿ. ಇದಲ್ಲದೆ ನೀವು ಬಹಳ ಹಿಂಸೆಯನ್ನು ಅನುಭವಿಸಬೇಕಾದಾಗ್ಯೂ, ಪವಿತ್ರಾತ್ಮದಿಂದುಂಟಾದ ಆನಂದದೊಡನೆ ದೇವರ ವಾಕ್ಯವನ್ನು ಅಂಗೀಕರಿಸಿ, ನಮ್ಮನ್ನೂ ಕರ್ತನಾದ ಯೇಸುವನ್ನೂ ಅನು

---

[1] ಅಥವಾ, ಸಿದ್ಧಿಪೂರ್ವಕವಾಗಿಯೂ.

ಜೀವನಮಾಡಿಕೊಳ್ಳುತ್ತಾ ದೇವರ ಸುವಾರ್ತೆಯನ್ನು ನಿಮಗೆ ಸಾರಿದೆವು; ಆ ನಮ್ಮ
10 ಕಷ್ಟವೂ ಪ್ರಯಾಸವೂ ನಿಮ್ಮ ನೆನಪಿನಲ್ಲಿರುವದಷ್ಟೆ. ನಂಬುವವರಾದ ನಿಮ್ಮ ವಿಷಯ
ದಲ್ಲಿ ನಾವು ಎಷ್ಟೋ ಶುದ್ಧರಾಗಿಯೂ ನೀತಿವಂತರಾಗಿಯೂ ನಿರ್ದೋಷಿಗಳಾಗಿಯೂ
11 ನಡೆದುಕೊಂಡೆವೆಂಬುವದಕ್ಕೆ ನೀವು ಸಾಕ್ಷಿಗಳು, ದೇವರೂ ಸಾಕ್ಷಿ. ತಂದೆಯು ತನ್ನ
ಮಕ್ಕಳಿಗೆ ಹ್ಯಾಗೋ ಹಾಗೆಯೇ ನಾವು ನಿಮ್ಮಲ್ಲಿ ಪ್ರತಿಯೊಬ್ಬನಿಗೆ ಬುದ್ಧಿಹೇಳುತ್ತಾ
12 ಧೈರ್ಯಪಡಿಸುತ್ತಾ, ತನ್ನ ರಾಜ್ಯಪ್ರಭಾವಗಳಲ್ಲಿ ಪಾಲುಗಾರರಾಗುವದಕ್ಕೆ ಕರೆಯುವ
ದೇವರಿಗೆ ಯೋಗ್ಯರಾಗಿ ನೀವು ನಡೆಯಬೇಕೆಂದು ಖಂಡಿತವಾಗಿ ಹೇಳುತ್ತಾ ಇದ್ದೆವೆಂಬು
ವದು ನಿಮಗೇ ತಿಳಿದದೆ.

ಕ್ರೈಸ್ತಸಭೆಯವರಿಗೆ ಉಂಟಾದ ಹಿಂಸೆಯನ್ನೂ ಯೆಹೂದ್ಯರ ವಿರೋಧವನ್ನೂ ಕುರಿತದ್ದು.

13 ಹೀಗಿರಲಾಗಿ, ನೀವು ದೇವರ ವಾಕ್ಯವನ್ನು ನಮ್ಮಿಂದ ಕೇಳಿದಾಗ, ಅದನ್ನು ಮನು
ಷ್ಯರ ವಾಕ್ಯವೆಂದೆಣಿಸದೆ ದೇವರ ವಾಕ್ಯವೆಂದೇ ತಿಳಿದು ಅಂಗೀಕರಿಸಿದ್ದಕ್ಕಾಗಿ ನಾವಂತೂ
ಎಡೆಬಿಡದೆ ದೇವರಿಗೆ ಕೃತಜ್ಞತಾಸ್ತುತಿ ಮಾಡುತ್ತೇವೆ. ಅದು ನಿಜವಾಗಿ ದೇವರ
14 ವಾಕ್ಯವೇ; ಅದು ನಂಬುವವರಾದ ನಿಮ್ಮೊಳಗೆ ಬಲವಾಗಿ ಕೆಲಸ ನಡಿಸುತ್ತದೆ. ಹೌದು,
ಸಹೋದರರೇ, ನೀವು ಯೂದಾಯದಲ್ಲಿ ಕ್ರಿಸ್ತ ಯೇಸುವಿನಲ್ಲಿರುವ ದೇವರ ಸಭೆಗಳನ್ನು
ಅನುಸರಿಸುವವರಾದಿರಿ. ಅವರು ಯೆಹೂದ್ಯರಿಂದ ಅನುಭವಿಸಿದಂಥ ಕಷ್ಟಗಳನ್ನು
15 ನೀವೂ ನಿಮ್ಮ ಸ್ವದೇಶದವರಿಂದ ಅನುಭವಿಸಿದಿರಿ. ಆ ಯೆಹೂದ್ಯರು ಕರ್ತನಾದ
ಯೇಸುವನ್ನೂ ಪ್ರವಾದಿಗಳನ್ನೂ ಕೊಂದರು, ನಮ್ಮನ್ನೂ ಅಟ್ಟಿಬಿಟ್ಟರು; ಅವರು ದೇವ
16 ರನ್ನು ಮೆಚ್ಚಿಸುವವರಲ್ಲ, ಎಲ್ಲಾ ಮನುಷ್ಯರಿಗೂ ವಿರೋಧಿಗಳಾಗಿದ್ದಾರೆ; ಅನ್ಯಜನರಿಗೆ
ರಕ್ಷಣೆಯಾಗುವಂತೆ ಸುವಾರ್ತೆಯನ್ನು ಹೇಳುವ ನಮಗೆ ಅಡ್ಡಿಮಾಡುತ್ತಾರೆ; ಹೀಗೆ
ತಮ್ಮ ಪಾಪಕೃತ್ಯಗಳನ್ನು ಎಲ್ಲಾ ಕಾಲಗಳಲ್ಲಿಯೂ ಪರಿಪೂರ್ಣ ಮಾಡುವದಕ್ಕೆ ಹೋಗು
ತ್ತಾರೆ. ಆದರೆ ದೇವರ ಕೋಪವು ಅವರ ಮೇಲೆ ಸಂಪೂರ್ಣವಾಗುತ್ತಾ ಬಂತು.

ಪೌಲನು ಥೆಸಲೋನೀಕದವರನ್ನು ನೋಡುವದಕ್ಕೆ ಆಶೆಪಟ್ಟು ತಿಮೊಥೆಯನನ್ನು ಅವರ ಬಳಿಗೆ ಕಳುಹಿಸಿದ್ದು.

17 ಸಹೋದರರೇ, ನಾವಂತೂ ದೇಹದಲ್ಲಿ ಮಾತ್ರ ನಿಮ್ಮನ್ನು ಸ್ವಲ್ಪಕಾಲ ಅಗಲಿದರೂ
ಹೃದಯದಲ್ಲಿ ಅಗಲದೆ ನಿಮ್ಮ ಮುಖವನ್ನು ನೋಡುವದಕ್ಕೆ ಅತ್ಯಾಶೆಯಿಂದ ಬಹಳ
18 ಪ್ರಯತ್ನ ಮಾಡಿದೆವು. ಯಾಕಂದರೆ ನಿಮ್ಮ ಬಳಿಗೆ ಬರುವದಕ್ಕೆ ನಮಗೆ ಮನಸ್ಸಿತ್ತು;
ಹ್ಯಾಗೂ ಪೌಲನೆಂಬ ನಾನು ಒಂದೆರಡು ಸಾರಿ ಬರುವದಕ್ಕಿದ್ದೆನು; ಆದರೆ ಸೈತಾನನು
19 ನಮಗೆ ಅಭ್ಯಂತರಮಾಡಿದನು. ನಮ್ಮ ಕರ್ತನಾದ ಯೇಸು ಪ್ರತ್ಯಕ್ಷನಾಗುವಾಗ
ಆತನ ಮುಂದೆ ನಮ್ಮ ಭರವಸವೂ ನಮ್ಮ ಸಂತೋಷವೂ ನಾವು ಹೊಗಳಿಕೊಳ್ಳುವ
20 ಜಯಮಾಲೆಯೂ ಯಾರು? ನೀವೇ ಅಲ್ಲವೇ? ನಿಜವಾಗಿ ನೀವೇ ನಮ್ಮ ಗೌರವವೂ
ಸಂತೋಷವೂ ಆಗಿದ್ದೀರಿ.

ಆದದರಿಂದ ಇನ್ನು ತಡೆಯಲಾರದೆ, ನಾವು ಅಥೇನೆಯಲ್ಲಿ ಒಬ್ಬಂಟಿಗರಾಗಿಯೇ **3** ಇರುವದು ಒಳ್ಳೇದೆಂದು ಯೋಚಿಸಿ, ನಿಮ್ಮ ಮೇಲೆ ಬಂದಿರುವ ಸಂಕಟಗಳಲ್ಲಿ ಒಬ್ಬರೂ 2 ಚಂಚಲರಾಗದಂತೆ ನಿಮ್ಮನ್ನು ದೃಢಪಡಿಸುವದಕ್ಕೂ ನಿಮ್ಮ ನಂಬಿಕೆಯ ವೃದ್ಧಿಗಾಗಿ ಪ್ರಬೋಧಿಸುವದಕ್ಕೂ ನಮ್ಮ ಸಹೋದರನೂ ಕ್ರಿಸ್ತನ ಸುವಾರ್ತೆಯ ಉದ್ಯೋಗದಲ್ಲಿ ದೇವರ ಸೇವಕನೂ ಆಗಿರುವ ತಿಮೊಥೆಯನನ್ನು ನಿಮ್ಮ ಬಳಿಗೆ ಕಳುಹಿಸಿದೆವು. ಸಂಕಟ 3 ಗಳನ್ನು ಅನುಭವಿಸುವದಕ್ಕಾಗಿ ನಾವು ನೇಮಿಸಲ್ಪಟ್ಟವರೆಂದು ನೀವೇ ಬಲ್ಲಿರಷ್ಟೆ. ನಾವು 4 ನಿಮ್ಮ ಬಳಿಯಲ್ಲಿದ್ದಾಗ, ಸಂಕಟವನ್ನು ಅನುಭವಿಸಲೇ ಬೇಕೆಂದು ಮುಂದಾಗಿ ಹೇಳಿದೆ ವಲ್ಲಾ; ಅದರಂತೆ ಆಯಿತು, ನಿಮ್ಮ ಅನುಭವಕ್ಕೂ ಬಂತು. ಆದದರಿಂದ ನಾನು ಇನ್ನು 5 ತಡೆಯಲಾರದೆ, ಒಂದು ವೇಳೆ ಶೋಧಕನು ನಿಮ್ಮನ್ನು ಶೋಧಿಸಿದ್ದರಿಂದ ನಮ್ಮ ಪ್ರಯಾ ಸವು ವ್ಯರ್ಥವಾಯಿತೋ ಏನೋ ಎಂದು, ನಿಮ್ಮ ನಂಬಿಕೆಯ ವಿಷಯದಲ್ಲಿ ತಿಳುಕೊಳ್ಳು ವದಕ್ಕೆ ಅವನನ್ನು ಕಳುಹಿಸಿದೆನು. ಆದರೆ ತಿಮೊಥೆಯನು ಈಗಲೇ ನಮ್ಮ ಬಳಿಗೆ ಬಂದು, 6 ನಿಮ್ಮ ವಿಶ್ವಾಸ ಪ್ರೀತಿಗಳ ವಿಷಯವಾಗಿ ಶುಭವರ್ತಮಾನವನ್ನು ಹೇಳಿ, ನೀವು ನಮ್ಮನ್ನು ಯಾವಾಗಲೂ ಚನ್ನಾಗಿ ಜ್ಞಾಪಕಮಾಡಿಕೊಂಡು, ನಾವು ನಿಮ್ಮನ್ನು ಹ್ಯಾಗೋ ಹಾಗೆ ಯೇ ನೀವೂ ನಮ್ಮನ್ನು ನೋಡುವದಕ್ಕೆ ಅಪೇಕ್ಷಿಸುತ್ತೀರೆಂಬುವದನ್ನು ತಿಳಿಸಿದ್ದಾನೆ. ಸಹೋದರರೇ, ಇದನ್ನು ಕೇಳಿ ನಮ್ಮ ಎಲ್ಲಾ ಕೊರತೆಯಲ್ಲಿಯೂ ಸಂಕಟದಲ್ಲಿಯೂ 7 ನಿಮ್ಮ ನಂಬಿಕೆಯ ಮೂಲಕ ನಮಗೆ ಆದರಣೆಯಾಯಿತು. ನೀವು ಕರ್ತನಲ್ಲಿ ದೃಢ 8 ವಾಗಿ ನಿಂತಿದ್ದೀರೆಂದು ತಿಳಿದು ಉಜ್ಜೀವಿಸಿದೆವು. ನಿಮ್ಮ ನಿಮಿತ್ತ ನಮ್ಮ ದೇವರ ಮುಂದೆ 9 ನಮಗಿರುವ ಎಲ್ಲಾ ಸಂತೋಷಕ್ಕಾಗಿ ದೇವರಿಗೆ ತಕ್ಕಷ್ಟು ಸ್ತೋತ್ರ ಮಾಡುವದು ನಮ್ಮಿಂದ ಹ್ಯಾಗಾದೀತು? ನಿಮ್ಮ ಮುಖವನ್ನು ನೋಡುವದಕ್ಕೂ ನಿಮ್ಮ ಕೊರತೆ 10 ಗಳನ್ನು ನೀಗುವದಕ್ಕೂ ನಮಗೆ ಅನುಕೂಲವಾಗಬೇಕೆಂದು ನಾವು ಹಗಲಿರುಳು ದೇವ ರನ್ನು ಅತ್ಯಂತವಾಗಿ ಬೇಡುವವರಾಗಿದ್ದೇವೆ. ನಮ್ಮ ತಂದೆಯಾದ ದೇವರೂ ನಮ್ಮ 11 ಕರ್ತನಾದ ಯೇಸುವೂ ನಮಗೆ ನಿಮ್ಮ ಬಳಿಗೆ ಬರುವದಕ್ಕೆ ಮಾರ್ಗವನ್ನು ಸರಾಗ ಮಾಡಲಿ.

ನಿಮ್ಮಲ್ಲಿ ನಮ್ಮ ಪ್ರೀತಿಯು ಹ್ಯಾಗೋ ಹಾಗೆಯೇ ನಿಮ್ಮ ಪ್ರೀತಿಯೂ ಒಬ್ಬರೊಬ್ಬರ 12 ಮೇಲೆಯೂ ಎಲ್ಲಾ ಮನುಷ್ಯರ ಮೇಲೆಯೂ ಅಭಿವೃದ್ಧಿಹೊಂದಿ ಅತ್ಯಧಿಕವಾಗುವಂತೆ ಕರ್ತನು ಅನುಗ್ರಹಿಸಲಿ. ನಮ್ಮ ಕರ್ತನಾದ ಯೇಸು ನಿಮ್ಮ ಹೃದಯಗಳನ್ನು ದೃಢ 13 ಪಡಿಸಿ, ತನ್ನ ಎಲ್ಲಾ ಪರಿಶುದ್ಧ ಪರಿವಾರ ಸಮೇತ ಪ್ರತ್ಯಕ್ಷನಾದಾಗ ತಂದೆಯಾದ ದೇವರ ಸಮಕ್ಷಮದಲ್ಲಿ ನೀವು ಪರಿಶುದ್ಧರಾಗಿಯೂ ನಿರ್ದೋಷಿಗಳಾಗಿಯೂ ಇರುವಂತೆ ಮಾಡಲಿ.

ಕ್ರೈಸ್ತರಿಗೆ ಇರತಕ್ಕ ನಡಾವಳಿಯನ್ನು ಕುರಿತದ್ದು.

ಕಡೇ ಮಾತೇನಂದರೆ, ಸಹೋದರರೇ, ನಾವು ಕರ್ತನಾದ ಯೇಸುವಿನ ಅಧಿಕಾರ **4** ದಿಂದ ನಿಮಗೆ ಕೊಟ್ಟ ಆಜ್ಞೆಗಳನ್ನು ತಿಳಿದಿದ್ದೀರಷ್ಟೆ. ನೀವು ಹ್ಯಾಗೆ ನಡೆದು ದೇವರನ್ನು 2

ಮೆಚ್ಚಿಸಬೇಕೋ ಅದನ್ನು ನಮ್ಮಿಂದ ಕಲಿತುಕೊಂಡು ಅದರಂತೆ ನಡೆಯುತ್ತಲೇ ಇದ್ದೀರಿ. ನೀವು ಹಾಗೆಯೇ ಇನ್ನೂ ಹೆಚ್ಚಾಗಿ ನಡೆಯಬೇಕೆಂದು ನಿಮ್ಮನ್ನು ಬೇಡಿಕೊಂಡು ಯೇಸು 3 ಕರ್ತನಲ್ಲಿ ಪ್ರಬೋಧಿಸುತ್ತೇವೆ. ದೇವರ ಚಿತ್ತವೇನಂದರೆ ನೀವು ಶುದ್ಧರಾಗಿರಬೇಕೆಂಬು 4-5 ವದೇ. ಆದದರಿಂದ ಹಾದರಕ್ಕೆ ದೂರವಾಗಿರಬೇಕು. ದೇವರನ್ನರಿಯದ ಅನ್ಯಜನಗಳಂತೆ ಕಾಮಾಭಿಲಾಷೆಗೆ ಒಳಪಡದೆ, ನಿಮ್ಮಲ್ಲಿ ಪ್ರತಿಯೊಬ್ಬನು ಪವಿತ್ರವಾದ ಮನಸ್ಸಿನಿಂದಲೂ ಘನತೆಯಿಂದಲೂ ಧರ್ಮಪತ್ನಿಯನ್ನು ಸಂಪಾದಿಸಿಕೊಳ್ಳಲು[1] ತಿಳಿಯಬೇಕು. 6 ಈ ವಿಷಯದಲ್ಲಿ ಯಾರೂ ತನ್ನ ಸಹೋದರನನ್ನು ವಂಚಿಸಿ ಕೇಡುಮಾಡಬಾರದು. ನಾವು ಮುಂಚೆ ತಿಳಿಸಿ ನಿಮಗೆ ಖಂಡಿತವಾಗಿ ಹೇಳಿದ ಪ್ರಕಾರ ಇವೆಲ್ಲವುಗಳ ವಿಷಯ 7 ದಲ್ಲಿ ಕರ್ತನು ಮುಯ್ಯಿಗೆ ಮುಯ್ಯಿ ತೀರಿಸುವವನಾಗಿದ್ದಾನೆ. ದೇವರು ನಮ್ಮನ್ನು 8 ಬಂಡತನಕ್ಕೆ ಕರೆಯದೆ ಶುದ್ಧರಾಗಿರುವದಕ್ಕೆ ಕರೆದನು. ಹೀಗಿರಲು ಈ ಮಾತನ್ನು ತಾತ್ಸಾರಮಾಡುವವನು ಮನುಷ್ಯನನ್ನು ತಿರಸ್ಕರಿಸುವದು ಮಾತ್ರವಲ್ಲದೆ ಪವಿತ್ರಾತ್ಮವರವನ್ನು ನಿಮಗೆ ದಯಪಾಲಿಸುವ ದೇವರನ್ನೂ ತಿರಸ್ಕರಿಸುತ್ತಾನೆ.

9 ಸಹೋದರಸ್ನೇಹವಿಷಯದಲ್ಲಿ ನಿಮಗೆ ಬರೆಯುವದು ಅವಶ್ಯವಿಲ್ಲ; ಒಬ್ಬರನ್ನೊಬ್ಬರು ಪ್ರೀತಿಸಬೇಕೆಂಬ ಉಪದೇಶವನ್ನು ನೀವೇ ದೇವರಿಂದ ಹೊಂದಿದವರಾಗಿದ್ದು, ಸಮಸ್ತ 10 ಮಕೆದೋನ್ಯದಲ್ಲಿರುವ ಸಹೋದರರನ್ನೆಲ್ಲಾ ಪ್ರೀತಿಸುವವರಾಗಿಯೇ ಇದ್ದೀರಿ. ಆದಾಗ್ಯೂ ಸಹೋದರರೇ, ನೀವು ಪ್ರೀತಿಯಲ್ಲಿ ಇನ್ನೂ ಹೆಚ್ಚುತ್ತಾ ಬರಬೇಕೆಂದು ನಿಮ್ಮನ್ನು ಪ್ರಬೋ 11 ಧಿಸುತ್ತೇವೆ. ಇದಲ್ಲದೆ ನಾನು ನಿಮಗೆ ಆಜ್ಞೆ ಕೊಟ್ಟ ಪ್ರಕಾರ, ನೀವು ಮತ್ತೊಬ್ಬರ ಕಾರ್ಯದಲ್ಲಿ ತಲೆಹಾಕದೆ ಸುಮ್ಮಗಿದ್ದು, ಸ್ವಂತ ಕಾರ್ಯವನ್ನೇ ನಡಿಸಿಕೊಂಡು ಕೈಯಾರೆ 12 ಕೆಲಸ ಮಾಡುವದೇ ಮಾನವೆಂದೆಣಿಸಿರಿ. ಹೀಗಿದ್ದರೆ ನೀವು ಹೊರಗಿನವರ ಎದುರಿನಲ್ಲಿ ಸಜ್ಜನರಾಗಿ ನಡೆದುಕೊಳ್ಳುವಿರಿ, ಮತ್ತು ನಿಮಗೆ ಯಾವದಕ್ಕೂ ಕೊರತೆಯಿರುವದಿಲ್ಲ.

ಯೇಸುಕರ್ತನು ಪ್ರತ್ಯಕ್ಷನಾಗುವದಕ್ಕೆ ಮುಂಚಿತವಾಗಿ ಸಾಯುವ ಭಕ್ತರನ್ನು ಕುರಿತದ್ದು.

13 ಸಹೋದರರೇ, ನಿದ್ರೆಹೋಗುವವರ ಗತಿ ಏನೆಂದು ನೀವು ತಿಳಿಯದೆ ಇದ್ದು ನಿರೀಕ್ಷೆ 14 ಯಿಲ್ಲದವರಾದ ಇತರರಂತೆ ದುಃಖಿಸುವದು ನಮ್ಮ ಮನಸ್ಸಿಗೆ ಒಪ್ಪುವದಿಲ್ಲ. ಯೇಸು ಸತ್ತು ಜೀವಿತನಾಗಿ ಎದ್ದನೆಂದು ನಾವು ನಂಬಿದ ಮೇಲೆ ಅದರಂತೆ ಯೇಸುವಿನಲ್ಲಿದ್ದುಕೊಂಡು ನಿದ್ರೆಹೋಗುವವರನ್ನು ಸಹ ದೇವರು ಆತನೊಡನೆ[2] ಕರೆದುಕೊಂಡು ಬರುವ 15 ನೆಂದು ನಂಬಬೇಕಲ್ಲವೇ. ನಾವು ಕರ್ತನ ಮಾತಿನ ಆಧಾರದಿಂದ ನಿಮಗೆ ಹೇಳುವದೇನಂದರೆ, ಕರ್ತನು ಪ್ರತ್ಯಕ್ಷನಾಗುವ ವರೆಗೂ ಜೀವದಿಂದುಳಿದಿರುವ ನಾವು ನಿದ್ರೆಹೋದವರಿ 16 ಗಿಂತ ಮುಂದಾಗುವದೇ ಇಲ್ಲ. ಕರ್ತನು ತಾನೇ ಆಜ್ಞಾಘೋಷದೊಡನೆಯೂ ಪ್ರಧಾನ ದೂತನ ಶಬ್ದದೊಡನೆಯೂ ದೇವರ ತುತೂರಿಧ್ವನಿಯೊಡನೆಯೂ ಆಕಾಶದಿಂದ ಇಳಿದು 17 ಬರುವನು; ಆಗ ಕ್ರಿಸ್ತನಲ್ಲಿರುವ ಸತ್ತವರು ಮೊದಲು ಎದ್ದುಬರುವರು. ಆ ಮೇಲೆ

1) ಅಥವಾ, ಸ್ವಂತ ಘಟವನ್ನು ಸ್ವಾಧೀನದಲ್ಲಿ ಇಟ್ಟುಕೊಂಡಿರಲು.
2) ಅಥವಾ, ದೇವರು ನಿದ್ರೆಹೋದವರನ್ನು ಸಹ ಯೇಸುವಿನ ಮೂಲಕವಾಗಿ ಆತನೊಡನೆ.

ಜೀವದಿಂದುಳಿದಿರುವ ನಾವು ಅಂತರಿಕ್ಷದಲ್ಲಿ ಕರ್ತನನ್ನು ಎದುರುಗೊಳ್ಳುವದಕ್ಕಾಗಿ ಅವರ ಸಂಗಡಲೇ ಮೇಘವಿಮಾನದಲ್ಲಿ ಫಕ್ಕನೆ ವೈಯಲ್ಪಡುವೆವು; ಹೀಗಾಗಿ ನಾವು ಸದಾ ಕಾಲವೂ ಕರ್ತನ ಜೊತೆಯಲ್ಲಿರುವೆವು. 18 ಆದಕಾರಣ ಈ ಮಾತುಗಳಿಂದ ಒಬ್ಬರನ್ನೊಬ್ಬರು ಸಂತೈಸಿರಿ.

5 ಸಹೋದರರೇ, ಈ ಸಂಗತಿಗಳು ನಡೆಯಬೇಕಾದ ಕಾಲಗಳನ್ನೂ ಗಳಿಗೆಗಳನ್ನೂ ಕುರಿತು ನಿಮಗೆ ಬರೆಯುವದು ಅವಶ್ಯವಿಲ್ಲ. 2 ರಾತ್ರಿಕಾಲದಲ್ಲಿ ಕಳ್ಳನು ಹ್ಯಾಗೆ ಬರುತ್ತಾನೋ ಹಾಗೆಯೇ ಕರ್ತನ ದಿನವು ಬರುವದೆಂದು ನೀವೇ ಚನ್ನಾಗಿ ತಿಳಿದಿದ್ಧೀರಲ್ಲಾ. 3 ಸಮಾಧಾನವಾಗಿಯೂ ನಿರ್ಭಯವಾಗಿಯೂ ಇರುತ್ತೇವೆಂದು ಜನರು ಹೇಳುತ್ತಿರುವಾಗಲೇ, ಅವರ ಮೇಲೆ ನಾಶನವು ಗರ್ಭಿಣಿಗೆ ಪ್ರಸವವೇದನೆ ಬರುವ ಪ್ರಕಾರ ಬರುವದು; ಅವರು ಹ್ಯಾಗೂ ತಪ್ಪಿಸಿಕೊಳ್ಳಲಾರರು. 4 ಆದರೆ ಸಹೋದರರೇ, ಆ ದಿನವು ಕಳ್ಳನಂತೆ[1] ನಿಮ್ಮ ಮೇಲೆ ಬರತಕ್ಕದ್ದಲ್ಲ; ನೀವು ಕತ್ತಲೆಯಲ್ಲಿರುವವರಲ್ಲ. 5 ನೀವೆಲ್ಲರು ಬೆಳಕಿನವರೂ ಹಗಲಿನವರೂ ಆಗಿದ್ಧೀರಷ್ಟೆ; ನಾವು ರಾತ್ರಿಯವರೂ ಅಲ್ಲ, ಕತ್ತಲೆಯವರೂ ಅಲ್ಲ. 6 ಆದಕಾರಣ ನಾವು ಇತರರಂತೆ ನಿದ್ದೆಮಾಡದೆ ಎಚ್ಚರವಾಗಿರೋಣ, ಸ್ವಸ್ಥಚಿತ್ತರಾಗಿರೋಣ. 7 ನಿದ್ದೆಮಾಡುವವರು ರಾತ್ರಿಯಲ್ಲಿ ನಿದ್ದೆಮಾಡುತ್ತಾರೆ, ಅಮಲೇರುವವರು ರಾತ್ರಿಯಲ್ಲಿ ಅಮಲೇರುತ್ತಾರಷ್ಟೆ. 8 ನಾವಾದರೋ ಹಗಲಿನವರಾಗಿರಲಾಗಿ ವಿಶ್ವಾಸ ಪ್ರೀತಿಗಳೆಂಬ ಕವಚವನ್ನೂ ರಕ್ಷಣೆಯ ನಿರೀಕ್ಷೆಯೆಂಬ ಶಿರಸ್ತ್ರಾಣವನ್ನೂ ಧರಿಸಿಕೊಂಡು ಸ್ವಸ್ಥಚಿತ್ತರಾಗಿರೋಣ. 9 ಯಾಕಂದರೆ ದೇವರು ನಮ್ಮನ್ನು ತನ್ನ ಕೋಪಕ್ಕೆ ಗುರಿಯಾಗಬೇಕೆಂದು ನೇಮಿಸದೆ ನಾವು ನಮ್ಮ ಕರ್ತನಾದ ಯೇಸು ಕ್ರಿಸ್ತನ ಮೂಲಕವಾಗಿ ರಕ್ಷಣೆಯನ್ನು ಸಂಪಾದಿಸಿಕೊಳ್ಳಬೇಕೆಂದು ನೇಮಿಸಿದನು. 10 ನಾವು ಎಚ್ಚರವಾಗಿದ್ದರೂ ಸರಿಯೇ ನಿದ್ರೆಯಲ್ಲಿದ್ದರೂ ಸರಿಯೇ[2], ತನ್ನ ಜೊತೆಯಲ್ಲಿಯೇ ಜೀವಿಸಬೇಕೆಂದು ಆತನು ನಮಗೋಸ್ಕರ ಸತ್ತನು. 11 ಆದದರಿಂದ ನೀವು ಈಗ ಮಾಡುತ್ತಿರುವ ಪ್ರಕಾರವೇ ಒಬ್ಬರನ್ನೊಬ್ಬರು ಸಂತೈಸಿಕೊಳ್ಳುತ್ತಾ ಒಬ್ಬರ ಭಕ್ತಿಯನ್ನೊಬ್ಬರು ವೃದ್ಧಿಪಡಿಸುತ್ತಾ ಇರ್ರಿ.

### ಕ್ರೈಸ್ತರು ಅನುಸರಿಸತಕ್ಕ ಕೆಲವು ಸೂತ್ರಗಳು.

12 ಸಹೋದರರೇ, ಯಾರು ನಿಮ್ಮಲ್ಲಿ ಪ್ರಯಾಸಪಟ್ಟು ಕರ್ತನ ಕಾರ್ಯಗಳಲ್ಲಿ ನಿಮ್ಮ ಮೇಲೆ ಮುಖ್ಯಸ್ಥರಾಗಿದ್ದು ನಿಮಗೆ ಬುದ್ಧಿಹೇಳುತ್ತಾರೋ ಅವರನ್ನು ಲಕ್ಷಿಸಿ, 13 ಅವರ ಕೆಲಸದ ನಿಮಿತ್ತ ಅವರನ್ನು ಪ್ರೀತಿಯಿಂದ ಬಹಳವಾಗಿ ಸನ್ಮಾನ ಮಾಡಬೇಕೆಂದು ನಿಮ್ಮನ್ನು ಬೇಡಿಕೊಳ್ಳುತ್ತೇವೆ. ನಿಮ್ಮನಿಮ್ಮೊಳಗೆ ಸಮಾಧಾನವಾಗಿರಿ.

14 ಸಹೋದರರೇ, ಅಕ್ರಮವಾಗಿ ನಡೆಯುವವರಿಗೆ ಬುದ್ಧಿ ಹೇಳಿರಿ, ಮನಗುಂದಿದವರನ್ನು ಧೈರ್ಯಪಡಿಸಿರಿ, ಬಲಹೀನರಿಗೆ ಆಧಾರವಾಗಿರಿ, ಎಲ್ಲರಲ್ಲಿಯೂ ದೀರ್ಘಶಾಂತರಾಗಿರಿ ಎಂದು ನಿಮ್ಮನ್ನು ಪ್ರಬೋಧಿಸುತ್ತೇವೆ. 15 ಯಾರೂ ಅಪಕಾರಕ್ಕೆ ಅಪಕಾರ ಮಾಡದಂತೆ

[1] ಕೆಲವು ಪ್ರತಿಗಳಲ್ಲಿ — ಕಳ್ಳರ ಮೇಲೆ ಹಗಲಿನ ಬೆಳಕು ಫಕ್ಕನೆ ಬಂತೋ ಎಂಬಂತೆ ಆ ದಿನವು ಎಂದು ಬರೆದದೆ.
[2] ಅಂದರೆ, ಜೀವದಿಂದಿದ್ದರೂ ಸತ್ತಿದ್ದರೂ.

ನೋಡಿಕೊಳ್ಳಿರಿ; ಯಾವಾಗಲೂ ನೀವು ಒಬ್ಬರಿಗೊಬ್ಬರು ಹಿತವನ್ನು ಮಾಡಿಕೊಂಡಿರುವ ದಲ್ಲದೆ ಎಲ್ಲರಿಗೂ ಹಿತವನ್ನು ಮಾಡುವವರಾಗಿರ್ರಿ.

16, 17, 18 ಯಾವಾಗಲೂ ಸಂತೋಷಿಸಿರಿ; ಎಡೆಬಿಡದೆ ಪ್ರಾರ್ಥನೆ ಮಾಡಿರಿ; ಎಲ್ಲರಲ್ಲಿಯೂ ಕೃತಜ್ಞತಾಸ್ತುತಿ ಮಾಡಿರಿ; ಇದೇ ನಿಮ್ಮ ವಿಷಯವಾಗಿ ಕ್ರಿಸ್ತ ಯೇಸುವಿನಲ್ಲಿ ತೋರಿ 19, 20 ಬಂದ ದೇವರ ಚಿತ್ತ. ಪವಿತ್ರಾತ್ಮವನ್ನು ನಂದಿಸಬೇಡಿರಿ; ಪ್ರವಾದನೆಗಳನ್ನು ಹೀನೈಸ 21 ಬೇಡಿರಿ; ಆದರೆ ಎಲ್ಲವನ್ನೂ ಪರಿಶೋಧಿಸಿ ಒಳ್ಳೇದನ್ನೇ ಭದ್ರವಾಗಿ ಹಿಡಿದುಕೊಳ್ಳಿರಿ; 22 ಸಕಲ ವಿಧವಾದ ಕೆಟ್ಟತನಕ್ಕೆ ದೂರವಾಗಿರಿ.

### ಸಮಾಪ್ತಿವಾಕ್ಯಗಳು.

23 ಶಾಂತಿದಾಯಕನಾದ ದೇವರು ತಾನೇ ನಿಮ್ಮನ್ನು ಪರಿಪೂರ್ಣವಾಗಿ ಪವಿತ್ರಮಾಡಲಿ. ನಮ್ಮ ಕರ್ತನಾದ ಯೇಸು ಕ್ರಿಸ್ತನು ಪ್ರತ್ಯಕ್ಷನಾದಾಗ ನಿಮ್ಮ ಆತ್ಮಪ್ರಾಣಶರೀರಗಳು 24 ದೋಷವಿಲ್ಲದೆ ಸಂಪೂರ್ಣವಾಗಿ ಕಾಣಿಸುವಂತೆ ಕಾಪಾಡಲ್ಪಡಲಿ. ನಿಮ್ಮನ್ನು ಕರೆಯು ವವನು ನಂಬಿಗಸ್ತನು, ಆತನು ತನ್ನ ಕಾರ್ಯವನ್ನು ಸಾಧಿಸುವನು.

25, 26 ಸಹೋದರರೇ, ನಮಗೋಸ್ಕರ ಪ್ರಾರ್ಥನೆ ಮಾಡಿರಿ. ಸಹೋದರರೆಲ್ಲರಿಗೂ ಪವಿತ್ರ 27 ವಾದ ಮುದ್ದಿಟ್ಟು ನನ್ನ ವಂದನೆಗಳನ್ನು ಹೇಳಿರಿ. ಈ ಪತ್ರಿಕೆಯನ್ನು ಸಹೋದರರೆಲ್ಲ ರಿಗೂ ಓದಿ ಹೇಳಬೇಕೆಂದು ನಿಮಗೆ ಕರ್ತನ ಆಣೆ ಇಡುತ್ತೇನೆ.

ನಮ್ಮ ಕರ್ತನಾದ ಯೇಸು ಕ್ರಿಸ್ತನ ಕೃಪೆಯು ನಿಮ್ಮೊಂದಿಗಿರಲಿ.

# THE SECOND EPISTLE OF SAINT PAUL TO THE THESSALONIANS

# ಪೌಲನು ಥೆಸಲೊನೀಕದವರಿಗೆ

ಬರೆದ

# ಎರಡನೇ ಪತ್ರಿಕೆ

### ಒಕ್ಕಣೆ.

1 ನಮ್ಮ ತಂದೆಯಾದ ದೇವರಲ್ಲಿಯೂ ಕರ್ತನಾದ ಯೇಸು ಕ್ರಿಸ್ತನಲ್ಲಿಯೂ ಇರುವ ಥೆಸಲೊನೀಕದವರ ಸಭೆಗೆ ಪೌಲ ಸಿಲ್ವಾನ ತಿಮೊಥೆಯ ಎಂಬ ನಾವು ಬರೆಯುವದೇನಂದರೆ— 2 ತಂದೆಯಾದ ದೇವರಿಂದಲೂ ಕರ್ತನಾದ ಯೇಸು ಕ್ರಿಸ್ತನಿಂದಲೂ ನಿಮಗೆ ಕೃಪೆಯೂ ಶಾಂತಿಯೂ ಆಗಲಿ.

### ದೇವರಿಗೆ ಕೃತಜ್ಞತಾಸ್ತುತಿ.

3 ಸಹೋದರರೇ, ನಾವು ಯಾವಾಗಲೂ ನಿಮ್ಮ ವಿಷಯದಲ್ಲಿ ದೇವರಿಗೆ ಕೃತಜ್ಞತಾಸ್ತುತಿ ಮಾಡುವದಕ್ಕೆ ಬದ್ಧರಾಗಿದ್ದೇವೆ. ಹಾಗೆ ಮಾಡುವದು ಯೋಗ್ಯ; ಯಾಕಂದರೆ ನಿಮ್ಮ ನಂಬಿಕೆಯು ಬಹಳ ಅಭಿವೃದ್ಧಿ ಹೊಂದುತ್ತಾ ಬರುತ್ತದೆ, ಪರಸ್ಪರವಾದ ಪ್ರೀತಿ ನಿಮ್ಮೆಲ್ಲರಲ್ಲಿಯೂ ಹೆಚ್ಚುತ್ತಾ ಬರುತ್ತದೆ. 4 ಹೀಗಿರುವದರಿಂದ, ನಿಮಗೆ ಬಂದಿರುವ ಎಲ್ಲಾ ಹಿಂಸೆಗಳಲ್ಲಿಯೂ ನೀವು ಅನುಭವಿಸುತ್ತಿರುವ ಸಂಕಟಗಳಲ್ಲಿಯೂ ತೋರಿಬಂದ ನಿಮ್ಮ ತಾಳ್ಮೆ ನಂಬಿಕೆಗಳನ್ನು ನೆನಸಿ, ನಿಮ್ಮ ವಿಷಯವಾಗಿ ಹೆಚ್ಚಳಪಟ್ಟು ದೇವರ ಸಭೆಗಳೊಳಗೆ ನಾವೇ ಮಾತಾಡುತ್ತೇವೆ.

### ಕರ್ತನಾದ ಯೇಸು ಪ್ರತ್ಯಕ್ಷನಾದಾಗ ಆತನಿಗೋಸ್ಕರ ಹಿಂಸೆಪಟ್ಟವರಿಗೆ ಉಪಶಾಂತಿಯೂ ವೈರಿಗಳಿಗೆ ದಂಡನೆಯೂ ಉಂಟಾಗುವ ಭರವಸ.

5 ದೇವರು ನ್ಯಾಯವಾದ ತೀರ್ಪು ಮಾಡುತ್ತಾನೆಂಬುವದಕ್ಕೆ ನಿಮ್ಮ ತಾಳ್ಮೆಯು ಸ್ಪಷ್ಟವಾದ ನಿದರ್ಶನವಾಗಿದೆ. ಯಾವ ದೇವರಾಜ್ಯಕ್ಕೋಸ್ಕರ ನೀವು ಕಷ್ಟವನ್ನನುಭವಿಸುತ್ತೀರೋ ಅದಕ್ಕೆ ನೀವು ಯೋಗ್ಯರಾಗಬೇಕೆಂಬುವದೇ ದೇವರ ಅಭಿಪ್ರಾಯ. 6 ನಿಮ್ಮನ್ನು ಸಂಕಟಪಡಿಸುವವರಿಗೆ ಪ್ರತಿಯಾಗಿ ಸಂಕಟವನ್ನೂ ಸಂಕಟಪಡುವವರಾದ ನಿಮಗೆ ನಮ್ಮೊಡನೆ ಉಪಶಮನವನ್ನೂ ಕೊಡುವದು ದೇವರ ಎಣಿಕೆಯಲ್ಲಿ ನ್ಯಾಯವಾಗಿದೆ

7 ಯಷ್ಟೆ. ಯಾವಾಗ ಕೊಡುವನಂದರೆ, ಯೇಸುಕರ್ತನು ತನ್ನ ಶಕ್ತಿಯನ್ನು ತೋರ್ಪ
ಡಿಸುವ ದೇವದೂತರಿಂದ ಕೂಡಿದವನಾಗಿ ಉರಿಯುವ ಬೆಂಕಿಯಲ್ಲಿ ಆಕಾಶದಿಂದ ಪ್ರತ್ಯ
8 ಕ್ಷನಾಗುವ ಕಾಲದಲ್ಲಿ ಅದನ್ನು ಕೊಡುವನು. ಆಗ ನಮ್ಮ ಕರ್ತನಾದ ಯೇಸು ದೇವ
ರನ್ನರಿಯದವರಿಗೂ ತನ್ನ ಸುವಾರ್ತೆಗೆ ಒಳಪಡದವರಿಗೂ ಪ್ರತೀಕಾರವನ್ನು ಸಲ್ಲಿಸುವನು.
9-10 ಆ ದಿನದಲ್ಲಿ ಆತನು ತನ್ನ ಪವಿತ್ರರ ಮೂಲಕ ಪ್ರಭಾವ ಹೊಂದುವವನಾಗಿಯೂ
ನಾವು ನಿಮಗೆ ಹೇಳಿದ ಸಾಕ್ಷಿಯನ್ನು ನಂಬಿದವರೆಲ್ಲರ ಮೂಲಕ ತನ್ನ ವಿಷಯದಲ್ಲಿ
ಆಶ್ಚರ್ಯ ಹುಟ್ಟಿಸುವವನಾಗಿಯೂ ಬರುವಾಗ, ಅಂಥವರು ಕರ್ತನ ಸಮ್ಮುಖಕ್ಕೂ
ಆತನ ಪರಾಕ್ರಮದ ವೈಭವಕ್ಕೂ ದೂರವಾಗಿ ನಿತ್ಯನಾಶನವೆಂಬ ದಂಡನೆಯನ್ನು ಅನು
11 ಭವಿಸುವರು. ಆ ದಿನವನ್ನು ನಾವು ಎದುರುನೋಡುತ್ತಾ ನಿಮಗೋಸ್ಕರ ಯಾವಾ
ಗಲೂ ಪ್ರಾರ್ಥನೆಮಾಡಿ—ನಮ್ಮ ದೇವರು ನಿಮ್ಮನ್ನು ಕರೆದದ್ದಕ್ಕೆ ತಾನೇ ನಿಮ್ಮನ್ನು
ಯೋಗ್ಯರಾಗಮಾಡಬೇಕೆಂತಲೂ ಸತ್ಕ್ರಿಯೆಗಳಲ್ಲಿ ಸಂತೋಷಿಸುವ ನಿಮ್ಮ ಸಕಲ
ಆಲೋಚನೆಯನ್ನೂ ನಂಬಿಕೆಯ ಫಲವಾದ ನಿಮ್ಮ ಕೆಲಸವನ್ನೂ ಶಕ್ತಿಪೂರ್ವಕವಾಗಿ
12 ಸಿದ್ಧಿಗೆ ತರಬೇಕೆಂತಲೂ ಬೇಡಿಕೊಳ್ಳುತ್ತೇವೆ. ಹೀಗಾದರೆ ನಮ್ಮ ದೇವರ ಮತ್ತು
ಕರ್ತನಾದ ಯೇಸು ಕ್ರಿಸ್ತನ ಕೃಪೆಯಿಂದ ನಿಮ್ಮ ಮೂಲಕ ನಮ್ಮ ಕರ್ತನಾದ ಯೇಸುವಿನ
ಹೆಸರಿಗೆ ಮಹಿಮೆ ಉಂಟಾಗುವದು; ಆತನ ಮೂಲಕ ನಿಮಗೂ ಮಹಿಮೆ ಉಂಟಾಗುವದು.

ಕರ್ತನಾದ ಯೇಸು ಪ್ರತ್ಯಕ್ಷನಾಗುವದಕ್ಕೆ ಮುಂಚಿತವಾಗಿ ಅನೇಕ ಸಂಗತಿಗಳು ನಡೆಯಬೇಕು.

**2** ಸಹೋದರರೇ, ನಮ್ಮ ಕರ್ತನಾದ ಯೇಸು ಕ್ರಿಸ್ತನ ಪ್ರತ್ಯಕ್ಷತೆಯ ವಿಷಯವಾಗಿಯೂ
ನಾವು ಆತನ ಬಳಿಯಲ್ಲಿ ಕೂಡಿಕೊಳ್ಳುವದರ ವಿಷಯವಾಗಿಯೂ ನಿಮ್ಮನ್ನು ಬೇಡಿ
2 ಕೊಳ್ಳುವದೇನಂದರೆ—ಕರ್ತನ ದಿನವು ಈಗಲೇ ಹತ್ತರವಾಯಿತೆಂಬದಾಗಿ ದೇವರಾತ್ಮ
ಪ್ರೇರಿತವಾದ ನುಡಿ ಇದೆ ಎಂದಾಗಲಿ ಪೌಲನು ಹಾಗೆ ಹೇಳಿದನೆಂದಾಗಲಿ ಪೌಲನು
ಹಾಗೆ ಬರೆದನೆಂದಾಗಲಿ ಯಾರಾದರೂ ಹೇಳಿದರೂ ನೀವು ಬೇಗನೆ ಬುದ್ಧಿಗೆಟ್ಟು ಚಂಚಲ
3 ರಾಗಿ ಕಳವಳಪಡಬೇಡಿರಿ. ಯಾರೂ ಯಾವ ವಿಧದಲ್ಲಿಯೂ ನಿಮ್ಮನ್ನು ಮೋಸಗೊಳಿ
ಸದಂತೆ ನೋಡಿಕೊಳ್ಳಿರಿ; ಯಾಕಂದರೆ ಮೊದಲು ಮತಭ್ರಷ್ಟತೆಯು ಉಂಟಾಗಿ ಅಧರ್ಮ
4 ಸ್ವರೂಪನು ಬೈಲಿಗೆ ಬಂದ ಹೊರತು ಆ ದಿನವು ಬರುವದಿಲ್ಲ. ಯಾವದು ದೇವರೆನ್ನಿಸಿ
ಕೊಳ್ಳುತ್ತದೋ ಯಾವದು ಪೂಜೆ ಹೊಂದುತ್ತದೋ ಅದನ್ನೆಲ್ಲಾ ನಾಶನಕ್ಕೆ ಅಧೀನ
ನಾದ ಆ ಪುರುಷನು ಎದುರಿಸಿ, ಅದಕ್ಕಿಂತ ಮೇಲಾಗಿ ತನ್ನನ್ನು ತಾನೇ ಹೆಚ್ಚಿಸಿಕೊಂಡು,
ತಾನು ದೇವರೆಂದು ಹೇಳಿಕೊಂಡು, ದೇವರ ಗರ್ಭಗುಡಿಯಲ್ಲೇ ಕೂತುಕೊಳ್ಳುತ್ತಾನೆ.
5 ನಾನು ನಿಮ್ಮ ಸಂಗಡ ಇದ್ದಾಗ ಈ ಸಂಗತಿಗಳನ್ನು ಹೇಳಿದ್ದು ಜ್ಞಾಪಕವಿಲ್ಲವೋ?
6 ಇದಲ್ಲದೆ ಆ ಮನುಷ್ಯನು ನೇಮಕವಾದ ಸಮಯದಲ್ಲೇ ಹೊರತು ಬೈಲಿಗೆ ಬರುವದಕ್ಕೆ
7 ಏನು ಅಡ್ಡಿಮಾಡುತ್ತದೋ ಅದು ನಿಮಗೆ ತಿಳಿದೇ ಇದೆ. ಅಧರ್ಮವು ಈಗಲೂ ಗುಪ್ತ
ವಾಗಿ ತನ್ನ ಕಾರ್ಯವನ್ನು ಸಾಧಿಸುತ್ತದೆ; ಆದರೆ ಇದು ವರೆಗೂ ಅಡ್ಡಿಮಾಡುವವನನ್ನು
8 ತೆಗೆದುಬಿಡಲ್ಪಡುವ ತನಕ ಅದು ಗುಪ್ತವಾಗಿಯೇ ಇರುವದು. ಅವನು ತೆಗೆದುಬಿಡ
ಲ್ಪಟ್ಟ ಕೂಡಲೆ ಆ ಅಧರ್ಮಸ್ವರೂಪನು ಕಾಣಬರುವನು; ಅವನನ್ನು ಯೇಸುಕರ್ತನು

ಇರಲಿ; ಹೀಗೆ ನೀವು ಯಾರ್ಯಾರಿಗೆ ಯಾವ್ಯಾವ ರೀತಿಯಲ್ಲಿ ಉತ್ತರ ಹೇಳಬೇಕೋ ಅದನ್ನು ತಿಳುಕೊಳ್ಳುವಿರಿ.

ವಂದನೆಗಳೂ ಕಡೇ ಮಾತುಗಳೂ.

ಪ್ರಿಯ ಸಹೋದರನೂ ನಂಬಿಗಸ್ತನಾದ ಸೇವಕನೂ ಕರ್ತನಲ್ಲಿ ಜೊತೆಯ ದಾಸನೂ 7 ಆಗಿರುವ ತುಖಿಕನು ನನ್ನ ಸಂಗತಿಗಳನ್ನೆಲ್ಲಾ ನಿಮಗೆ ತಿಳಿಸುವನು. ನೀವು ನನ್ನ ಸಮಾ 8 ಚಾರವನ್ನು ತಿಳುಕೊಳ್ಳುವ ಹಾಗೆಯೂ ಅವನು ನಿಮ್ಮ ಹೃದಯಗಳನ್ನು ಸಂತೈಸುವ ಹಾಗೆಯೂ ಅವನನ್ನು ನಂಬಿಗಸ್ತನಾದ ಪ್ರಿಯ ಸಹೋದರನಾಗಿರುವ ನಿಮ್ಮ ಊರಿನ 9 ಒನೇಸಿಮನ ಜೊತೆಯಲ್ಲಿ ಕಳುಹಿಸಿದ್ದೇನೆ. ಅವರು ಇಲ್ಲಿ ನಡೆಯುವ ಸಂಗತಿಗಳನ್ನೆಲ್ಲಾ ನಿಮಗೆ ತಿಳಿಸುವರು.

ನನ್ನ ಜೊತೆಸೆರೆಯವನಾದ ಅರಿಸ್ತಾರ್ಕನೂ ಬಾರ್ನಬನಿಗೆ ದಾಯಾದನಾಗಿರುವ 10 ಮಾರ್ಕನೂ ನಿಮಗೆ ವಂದನೆ ಹೇಳುತ್ತಾರೆ. ಮಾರ್ಕನನ್ನು ಕುರಿತು ಅಪ್ಪಣೆಗಳನ್ನು ಹೊಂದಿದಿರಲ್ಲಾ; ಅವನು ನಿಮ್ಮ ಬಳಿಗೆ ಬಂದರೆ ಅವನನ್ನು ಸೇರಿಸಿಕೊಳ್ಳಿರಿ. ಯೂಸ್ತ 11 ನೆನ್ನಿಸಿಕೊಳ್ಳುವ ಯೇಸು ಸಹ ನಿಮಗೆ ವಂದನೆ ಹೇಳುತ್ತಾನೆ. ಸುನ್ನತಿಯವರೊಳಗೆ ಇವರು ಮಾತ್ರವೇ ದೇವರ ರಾಜ್ಯಾಭಿವೃದ್ಧಿಗಾಗಿ ನನ್ನ ಜೊತೆಗೆಲಸದವರಾಗಿದ್ದಾರೆ; ಇವರಿಂದ ನನಗೆ ಉಪಶಮನ ಉಂಟಾಯಿತು. ಕ್ರಿಸ್ತ ಯೇಸುವಿನ ದಾಸನಾಗಿರುವ 12 ನಿಮ್ಮ ಊರಿನ ಎಪಫ್ರನು ನಿಮಗೆ ವಂದನೆ ಹೇಳುತ್ತಾನೆ; ಇವನು ಪ್ರಾರ್ಥನೆ ಮಾಡು ವಾಗೆಲ್ಲಾ ನಿಮಗೋಸ್ಕರ ಹೋರಾಡಿ, ನೀವು ಪ್ರವೀಣರಾಗಿಯೂ ಎಲ್ಲಾ ವಿಷಯಗಳಲ್ಲಿ ದೇವರ ಚಿತ್ತವನ್ನು ಕುರಿತು ಪೂರ್ಣ ನಿಶ್ಚಯವುಳ್ಳವರಾಗಿಯೂ ನಿಂತಿರಬೇಕೆಂದು ವಿಜ್ಞಾ ಪನೆ ಮಾಡುತ್ತಾನೆ. ಇವನು ನಿಮಗೋಸ್ಕರವೂ ಲವೊದಿಕೀಯದವರಿಗೋಸ್ಕರವೂ 13 ಹಿರಿಯಾಪೊಲಿಯವರಿಗೋಸ್ಕರವೂ ಬಹಳ ಪ್ರಯಾಸಪಡುತ್ತಾನೆಂದು ಸಾಕ್ಷಿಹೇಳು ತ್ತೇನೆ. ಪ್ರಿಯ ವೈದ್ಯನಾಗಿರುವ ಲೂಕನು ಮತ್ತು ದೇಮನು ನಿಮಗೆ ವಂದನೆ ಹೇಳು 14 ತ್ತಾರೆ. ಲವೊದಿಕೀಯದಲ್ಲಿರುವ ಸಹೋದರರಿಗೂ ನುಂಫಳಿಗೂ ಆಕೆಯ[1] ಮನೆಯಲ್ಲಿ 15 ಕೂಡುವ ಸಭೆಯವರಿಗೂ ವಂದನೆ ಹೇಳಿರಿ.

ನಿಮ್ಮಲ್ಲಿ ಈ ಪತ್ರಿಕೆಯನ್ನು ಓದಿಸಿಕೊಂಡ ತರುವಾಯ ಲವೊದಿಕೀಯದವರ ಸಭೆ 16 ಯಲ್ಲಿಯೂ ಓದಿಸಿರಿ; ಮತ್ತು ನಾನು ಬರೆದ ಪತ್ರಿಕೆಯನ್ನು ಲವೊದಿಕೀಯದಿಂದ ತರಿಸಿ ನೀವೂ ಓದಿಸಿಕೊಳ್ಳಿರಿ. ಅರ್ಖಿಪ್ಪನಿಗೆ—ನೀನು ಕರ್ತನಿಂದ ಹೊಂದಿರುವ ಸೇವೆಯನ್ನು 17 ನೆರವೇರಿಸುವದಕ್ಕೆ ಎಚ್ಚರವಾಗಿರಬೇಕೆಂದು ಹೇಳಿರಿ.

ಇದು ಪೌಲನೆಂಬ ನಾನು ಸ್ವಂತ ಕೈಯಿಂದ ಬರೆದ ವಂದನೆ. ನಾನು ಸೆರೆಯಲ್ಲಿ 18 ದ್ದೇನೆಂಬುವದನ್ನು ಜ್ಞಾಪಕಮಾಡಿಕೊಳ್ಳಿರಿ. ಕರ್ತನಾದ ಯೇಸುವಿನ ಕೃಪೆಯು ನಿಮ್ಮಲ್ಲಿರಲಿ.

---

[1] ಕೆಲವು ಪ್ರತಿಗಳಲ್ಲಿ — ನುಂಫನಿಗೂ ಅವರ ಎಂದು ಬರೆದಿದೆ.

# THE FIRST EPISTLE OF SAINT PAUL TO THE THESSALONIANS

---

# ಪೌಲನು ಥೆಸಲೊನೀಕದವರಿಗೆ

ಬರೆದ

# ಮೊದಲನೇ ಪತ್ರಿಕೆ

ಒಕ್ಕಣೆ.

**1** ತಂದೆಯಾದ ದೇವರಲ್ಲಿಯೂ ಕರ್ತನಾದ ಯೇಸು ಕ್ರಿಸ್ತನಲ್ಲಿಯೂ ಇರುವ ಥೆಸಲೊನೀಕದವರ ಸಭೆಗೆ ಪೌಲ ಸಿಲ್ವಾನ ತಿಮೊಥೆಯ ಎಂಬ ನಾವು ಬರೆಯುವದೇನಂದರೆ— ನಿಮಗೆ ಕೃಪೆಯೂ ಶಾಂತಿಯೂ ಆಗಲಿ.

ಪೌಲನು ಥೆಸಲೊನೀಕದವರಲ್ಲಿ ಕಾಣಬಂದ ಸದ್ಗುಣಗಳಿಗಾಗಿ ದೇವರಿಗೆ ಮಾಡಿದ ಕೃತಜ್ಞತಾಸ್ತುತಿ.

2-3 ನಾವು ನಂಬಿಕೆಯ ಫಲವಾದ ನಿಮ್ಮ ಕೆಲಸವನ್ನೂ ಪ್ರೀತಿಪೂರ್ವಕವಾದ ನಿಮ್ಮ ಪ್ರಯಾಸವನ್ನೂ ನಮ್ಮ ಕರ್ತನಾದ ಯೇಸು ಕ್ರಿಸ್ತನ ಮೇಲಣ ನಿರೀಕ್ಷೆಯಿಂದುಂಟಾದ ನಿಮ್ಮ ಸ್ಥೈರಣೆಯನ್ನೂ ನಮ್ಮ ತಂದೆಯಾದ ದೇವರ ಮುಂದೆ ಎಡೆಬಿಡದೆ ಜ್ಞಾಪಕಮಾಡಿಕೊಂಡು, ನಮ್ಮ ಪ್ರಾರ್ಥನೆಗಳಲ್ಲಿ ನಿಮಗೋಸ್ಕರ ವಿಜ್ಞಾಪನೆಮಾಡುವಾಗ ನಿಮ್ಮೆಲ್ಲರ 4 ವಿಷಯದಲ್ಲಿ ದೇವರಿಗೆ ಯಾವಾಗಲೂ ಕೃತಜ್ಞತಾಸ್ತುತಿ ಸಲ್ಲಿಸುತ್ತೇವೆ. ದೇವರು ಪ್ರೀತಿ 5 ಸಿದ ಸಹೋದರರೇ, ಆತನು ನಿಮ್ಮನ್ನು ಆದುಕೊಂಡನೆಂಬುವದನ್ನೂ ನಾವು ಸಾರಿದ ಸುವಾರ್ತೆಯು ನಿಮ್ಮಲ್ಲಿ ಬರೀ ಮಾತಾಗಿ ಬಾರದೆ ಶಕ್ತಿಯೊಡನೆಯೂ ಪವಿತ್ರಾತ್ಮದೊಡನೆಯೂ ನಿಶ್ಚಯದೊಡನೆಯೂ[1] ಬಂತೆಂಬುವದನ್ನೂ ಬಲ್ಲೆವು. ನಾವು ನಿಮ್ಮಲ್ಲಿದ್ದು ನಿಮ 6 ಗೋಸ್ಕರ ಎಂಥವರಾಗಿ ವರ್ತಿಸಿದೆವೆಂಬುವದನ್ನು ನೀವೂ ಬಲ್ಲಿರಿ. ಇದಲ್ಲದೆ ನೀವು ಬಹಳ ಹಿಂಸೆಯನ್ನು ಅನುಭವಿಸಬೇಕಾದಾಗ್ಯೂ, ಪವಿತ್ರಾತ್ಮದಿಂದುಂಟಾದ ಆನಂದದೊಡನೆ ದೇವರ ವಾಕ್ಯವನ್ನು ಅಂಗೀಕರಿಸಿ, ನಮ್ಮನ್ನೂ ಕರ್ತನಾದ ಯೇಸುವನ್ನೂ ಅನು

---

[1] ಅಥವಾ, ಸಿದ್ಧಿಪೂರ್ವಕವಾಗಿಯೂ.

ಸರಿಸುವವರಾದಿರಿ. ಹೀಗೆ ಮಕೆದೋನ್ಯದಲ್ಲಿಯೂ ಅಖಾಯದಲ್ಲಿಯೂ ಕ್ರಿಸ್ತನನ್ನು 7
ನಂಬುವವರೆಲ್ಲರಿಗೆ ಮಾದಿರಿಯಾದಿರಿ. ಕರ್ತನ ವಾಕ್ಯವು ನಿಮ್ಮಿಂದಲೇ ಮಕೆದೋನ್ಯ 8
ದಲ್ಲಿಯೂ ಅಖಾಯದಲ್ಲಿಯೂ ಘೋಷಿತವಾದದ್ದಲ್ಲದೆ, ದೇವರ ಮೇಲೆ ನೀವು ಇಟ್ಟಿ
ರುವ ನಂಬಿಕೆಯು ಎಲ್ಲಾ ಸ್ಥಳಗಳಲ್ಲಿಯೂ ಪ್ರಸಿದ್ಧವಾಯಿತು; ಆದದರಿಂದ ಆ ವಿಷಯ
ದಲ್ಲಿ ನಾವು ಏನೂ ಹೇಳಬೇಕಾದದ್ದಿಲ್ಲ. ನಾವು ನಿಮ್ಮಲ್ಲಿಗೆ ಬಂದಾಗ ನೀವು ಎಂಥಾ 9
ಮನಸ್ಸಿನಿಂದ ನಮ್ಮ ಬೋಧನೆಯನ್ನು ಕೇಳಿದಿರೋ ಅದನ್ನು ಕುರಿತು ಅಲ್ಲಿಯ ಜನರು
ತಾವೇ ಹೇಳುತ್ತಾರೆ. ಅದು ಮಾತ್ರವಲ್ಲದೆ, ನೀವು ವಿಗ್ರಹಗಳನ್ನು ಬಿಟ್ಟುಬಿಟ್ಟು ದೇವರ
ಕಡೆಗೆ ತಿರುಗಿಕೊಂಡು ಜೀವವುಳ್ಳ ಸತ್ಯದೇವರನ್ನು ಸೇವಿಸುವವರಾದಿರೆಂತಲೂ ಆತನು 10
ಸತ್ತವರೊಳಗಿಂದ ಎಬ್ಬಿಸಿದಂಥಾ ಆಕಾಶದೊಳಗಿಂದ ಬರುವಂಥಾ ಆತನ ಕುಮಾರನನ್ನು
ಎದುರುನೋಡುವವರಾದಿರೆಂತಲೂ ತಿಳಿಸುತ್ತಾರೆ. ಈ ಯೇಸುವು ಮುಂದೆ ಬರುವ
ದೈವಕೋಪದಿಂದ ನಮ್ಮನ್ನು ತಪ್ಪಿಸುವಾತನು.

### ಪೌಲನು ಥೆಸಲೊನೀಕದವರಲ್ಲಿ ನಡಕೊಂಡ ರೀತಿಯ ವಿವರಣೆ.

**2** ಸಹೋದರರೇ, ನಾವು ಸುಮ್ಮಸುಮ್ಮಗೆ ನಿಮ್ಮಲ್ಲಿಗೆ ಬರಲಿಲ್ಲವೆಂಬುವದನ್ನೂ[1] ನಿಮಗೆ
ತಿಳಿದಿರುವ ಪ್ರಕಾರ ನಮಗೆ ಫಿಲಿಪ್ಪಿ ಪಟ್ಟಣದಲ್ಲಿ ಹಿಂಸೆಯೂ ಅವಮಾನವೂ ಮೊದಲು 2
ಸಂಭವಿಸಿದ್ದಾಗ್ಯೂ ನಾವು ನಮ್ಮ ದೇವರ ಮೂಲಕ ಧೈರ್ಯಗೊಂಡು ಬಹು ವಿರೋಧ
ವನ್ನು ಅನುಭವಿಸುವವರಾಗಿ ನಿಮಗೆ ದೇವರ ಸುವಾರ್ತೆಯನ್ನು ತಿಳಿಸಿದೆವೆಂಬುವದನ್ನೂ
ನೀವೇ ಬಲ್ಲಿರಿ. ಯಾಕಂದರೆ ನಮ್ಮ ಬೋಧನೆಯು ಅಬದ್ಧವಲ್ಲ, ಅಶುದ್ಧವಲ್ಲ, ಮೋಸ 3
ವಲ್ಲ; ದೇವರು ನಮ್ಮನ್ನು ಯೋಗ್ಯರೆಂದೆಣಿಸಿ ಸುವಾರ್ತೆಯನ್ನು ನಮ್ಮ ವಶಕ್ಕೆ ಒಪ್ಪಿಸಿದ 4
ನಲ್ಲಾ ಎಂದು ಯೋಚಿಸುವವರಾಗಿ, ಮನುಷ್ಯರನ್ನು ಮೆಚ್ಚಿಸಬೇಕೆನ್ನದೆ ಹೃದಯವನ್ನು
ಪರಿಶೋಧಿಸುವ ದೇವರನ್ನೇ ಮೆಚ್ಚಿಸಬೇಕೆಂದು ಮಾತಾಡುತ್ತೇವೆ. ನಿಮಗೆ ತಿಳಿದಿರುವ 5
ಪ್ರಕಾರ, ನಾವು ಎಂದಿಗೂ ಮುಖಸ್ತುತಿಯನ್ನು ಮಾಡುವವರಾಗಿ ಕಾಣಬಂದಿಲ್ಲ, ಮತ್ತು
ದ್ರವ್ಯಾಶೆಯನ್ನು ಮರೆಮಾಡುವದಕ್ಕಾಗಿ ವೇಷವನ್ನು ಹಾಕಿಕೊಂಡವರಾಗಿಲ್ಲ; ಇದಕ್ಕೆ
ದೇವರೇ ಸಾಕ್ಷಿ. ಇದಲ್ಲದೆ ನಾವು ಕ್ರಿಸ್ತನ ಅಪೊಸ್ತಲರಾಗಿರುವದರಿಂದ ನಮಗೆ ಗೌರ 6
ವವನ್ನು ಕೊಡಬೇಕೆಂದು ಹೇಳಬಹುದಾಗಿದ್ದಾಗ್ಯೂ[2], ಮನುಷ್ಯರಿಂದ ಬರುವ ಮಾನ
ವನ್ನು ನಿಮ್ಮಿಂದಾಗಲಿ ಇತರರಿಂದಾಗಲಿ ಹೊಂದಲಪೇಕ್ಷಿಸುವವರಾಗಿಲ್ಲ. ತಾಯಿಯು 7
ಮೊಲೆ ಕೊಟ್ಟು ತನ್ನ ಮಕ್ಕಳನ್ನು ಪೋಷಿಸುತ್ತಾಳೋ ಎಂಬಂತೆ ನಾವು ನಿಮ್ಮ ಮಧ್ಯ
ದಲ್ಲಿ ವಾತ್ಸಲ್ಯದಿಂದ ನಡಕೊಂಡಿದ್ದೆವು. ನೀವು ನಮಗೆ ಅತಿಪ್ರಿಯರಾದ ಕಾರಣ ನಾವು 8
ನಿಮ್ಮಲ್ಲಿ ಮಮತೆಯುಳ್ಳವರಾಗಿ, ದೇವರ ಸುವಾರ್ತೆಯನ್ನು ಹೇಳುವದಕ್ಕೆ ಮಾತ್ರವಲ್ಲದೆ
ನಿಮಗೋಸ್ಕರ ಪ್ರಾಣವನ್ನೇ ಕೊಡುವದಕ್ಕೆ ಸಂತೋಷಿಸುವವರಾದೆವು. ಸಹೋದರರೇ, 9
ನಾವು ನಿಮ್ಮಲ್ಲಿ ಯಾರ ಮೇಲೆಯೂ ಭಾರಹಾಕಬಾರದೆಂದು ಹಗಲಿರುಳು ದುಡಿದು

---

[1] ಅಥವಾ, ನಾವು ನಿಮ್ಮಲ್ಲಿ ಬಂದದ್ದು ವ್ಯರ್ಥವಾಗಲಿಲ್ಲವೆಂತಲೂ.
[2] ಅಥವಾ, ನಮ್ಮನ್ನು ಸಂರಕ್ಷಿಸುವ ಭಾರವನ್ನು ನಿಮ್ಮ ಮೇಲೆ ಹಾಕಬಹುದಾಗಿದ್ದಾಗ್ಯೂ; ೯ನೇ ವಚನವನ್ನು ನೋಡು.

ಜೀವನಮಾಡಿಕೊಳ್ಳುತ್ತಾ ದೇವರ ಸುವಾರ್ತೆಯನ್ನು ನಿಮಗೆ ಸಾರಿದೆವು; ಆ ನಮ್ಮ
10 ಕಷ್ಟವೂ ಪ್ರಯಾಸವೂ ನಿಮ್ಮ ನೆನಪಿನಲ್ಲಿರುವದಷ್ಟೆ. ನಂಬುವವರಾದ ನಿಮ್ಮ ವಿಷಯ
ದಲ್ಲಿ ನಾವು ಎಷ್ಟೋ ಶುದ್ಧರಾಗಿಯೂ ನೀತಿವಂತರಾಗಿಯೂ ನಿರ್ದೋಷಿಗಳಾಗಿಯೂ
11 ನಡೆದುಕೊಂಡೆವೆಂಬುವದಕ್ಕೆ ನೀವು ಸಾಕ್ಷಿಗಳು, ದೇವರೂ ಸಾಕ್ಷಿ. ತಂದೆಯು ತನ್ನ
ಮಕ್ಕಳಿಗೆ ಹ್ಯಾಗೋ ಹಾಗೆಯೇ ನಾವು ನಿಮ್ಮಲ್ಲಿ ಪ್ರತಿಯೊಬ್ಬನಿಗೆ ಬುದ್ಧಿಹೇಳುತ್ತಾ
12 ಧೈರ್ಯಪಡಿಸುತ್ತಾ, ತನ್ನ ರಾಜ್ಯಪ್ರಭಾವಗಳಲ್ಲಿ ಪಾಲುಗಾರರಾಗುವದಕ್ಕೆ ಕರೆಯುವ
ದೇವರಿಗೆ ಯೋಗ್ಯರಾಗಿ ನೀವು ನಡೆಯಬೇಕೆಂದು ಖಂಡಿತವಾಗಿ ಹೇಳುತ್ತಾ ಇದ್ದೆವೆಂಬು
ವದು ನಿಮಗೇ ತಿಳಿದದೆ.

ಕ್ರೈಸ್ತಸಭೆಯವರಿಗೆ ಉಂಟಾದ ಹಿಂಸೆಯನ್ನೂ ಯೆಹೂದ್ಯರ ವಿರೋಧವನ್ನೂ ಕುರಿತದ್ದು.

13 ಹೀಗಿರಲಾಗಿ, ನೀವು ದೇವರ ವಾಕ್ಯವನ್ನು ನಮ್ಮಿಂದ ಕೇಳಿದಾಗ, ಅದನ್ನು ಮನು
ಷ್ಯರ ವಾಕ್ಯವೆಂದೆಣಿಸದೆ ದೇವರ ವಾಕ್ಯವೆಂದೇ ತಿಳಿದು ಅಂಗೀಕರಿಸಿದ್ದಕ್ಕಾಗಿ ನಾವಂತೂ
ಎಡೆಬಿಡದೆ ದೇವರಿಗೆ ಕೃತಜ್ಞತಾಸ್ತುತಿ ಮಾಡುತ್ತೇವೆ. ಅದು ನಿಜವಾಗಿ ದೇವರ
14 ವಾಕ್ಯವೇ; ಅದು ನಂಬುವವರಾದ ನಿಮ್ಮೊಳಗೆ ಬಲವಾಗಿ ಕೆಲಸ ನಡಿಸುತ್ತದೆ. ಹೌದು,
ಸಹೋದರರೇ, ನೀವು ಯೂದಾಯದಲ್ಲಿ ಕ್ರಿಸ್ತ ಯೇಸುವಿನಲ್ಲಿರುವ ದೇವರ ಸಭೆಗಳನ್ನು
ಅನುಸರಿಸುವವರಾದಿರಿ. ಅವರು ಯೆಹೂದ್ಯರಿಂದ ಅನುಭವಿಸಿದಂಥ ಕಷ್ಟಗಳನ್ನು
15 ನೀವೂ ನಿಮ್ಮ ಸ್ವದೇಶದವರಿಂದ ಅನುಭವಿಸಿದಿರಿ. ಆ ಯೆಹೂದ್ಯರು ಕರ್ತನಾದ
ಯೇಸುವನ್ನೂ ಪ್ರವಾದಿಗಳನ್ನೂ ಕೊಂದರು, ನಮ್ಮನ್ನೂ ಅಟ್ಟಿಬಿಟ್ಟರು; ಅವರು ದೇವ
16 ರನ್ನು ಮೆಚ್ಚಿಸುವವರಲ್ಲ, ಎಲ್ಲಾ ಮನುಷ್ಯರಿಗೂ ವಿರೋಧಿಗಳಾಗಿದ್ದಾರೆ; ಅನ್ಯಜನರಿಗೆ
ರಕ್ಷಣೆಯಾಗುವಂತೆ ಸುವಾರ್ತೆಯನ್ನು ಹೇಳುವ ನಮಗೆ ಅಡ್ಡಿಮಾಡುತ್ತಾರೆ; ಹೀಗೆ
ತಮ್ಮ ಪಾಪಕೃತ್ಯಗಳನ್ನು ಎಲ್ಲಾ ಕಾಲಗಳಲ್ಲಿಯೂ ಪರಿಪೂರ್ಣ ಮಾಡುವದಕ್ಕೆ ಹೋಗು
ತ್ತಾರೆ. ಆದರೆ ದೇವರ ಕೋಪವು ಅವರ ಮೇಲೆ ಸಂಪೂರ್ಣವಾಗುತ್ತಾ ಬಂತು.

ಪೌಲನು ಥೆಸಲೊನೀಕದವರನ್ನು ನೋಡುವದಕ್ಕೆ ಆಶೆಪಟ್ಟು ತಿಮೊಥೆಯನನ್ನು ಅವರ ಬಳಿಗೆ ಕಳುಹಿಸಿದ್ದು.

17 ಸಹೋದರರೇ, ನಾವಂತೂ ದೇಹದಲ್ಲಿ ಮಾತ್ರ ನಿಮ್ಮನ್ನು ಸ್ವಲ್ಪಕಾಲ ಅಗಲಿದರೂ
ಹೃದಯದಲ್ಲಿ ಅಗಲದೆ ನಿಮ್ಮ ಮುಖವನ್ನು ನೋಡುವದಕ್ಕೆ ಅತ್ಯಾಶೆಯಿಂದ ಬಹಳ
18 ಪ್ರಯತ್ನ ಮಾಡಿದೆವು. ಯಾಕಂದರೆ ನಿಮ್ಮ ಬಳಿಗೆ ಬರುವದಕ್ಕೆ ನಮಗೆ ಮನಸ್ಸಿತ್ತು;
ಹ್ಯಾಗೂ ಪೌಲನೆಂಬ ನಾನು ಒಂದೆರಡು ಸಾರಿ ಬರುವದಕ್ಕಿದ್ದೆನು; ಆದರೆ ಸೈತಾನನು
19 ನಮಗೆ ಅಭ್ಯಂತರಮಾಡಿದನು. ನಮ್ಮ ಕರ್ತನಾದ ಯೇಸು ಪ್ರತ್ಯಕ್ಷನಾಗುವಾಗ
ಆತನ ಮುಂದೆ ನಮ್ಮ ಭರವಸವೂ ನಮ್ಮ ಸಂತೋಷವೂ ನಾವು ಹೊಗಳಿಕೊಳ್ಳುವ
20 ಜಯಮಾಲೆಯೂ ಯಾರು? ನೀವೇ ಅಲ್ಲವೇ? ನಿಜವಾಗಿ ನೀವೇ ನಮ್ಮ ಗೌರವವೂ
ಸಂತೋಷವೂ ಆಗಿದ್ದೀರಿ.

**3** ಆದದರಿಂದ ಇನ್ನು ತಡೆಯಲಾರದೆ, ನಾವು ಅಥೇನೆಯಲ್ಲಿ ಒಬ್ಬಂಟಿಗರಾಗಿಯೇ ಇರುವದು ಒಳ್ಳೇದೆಂದು ಯೋಚಿಸಿ, 2 ನಿಮ್ಮ ಮೇಲೆ ಬಂದಿರುವ ಸಂಕಟಗಳಲ್ಲಿ ಒಬ್ಬರೂ ಚಂಚಲರಾಗದಂತೆ ನಿಮ್ಮನ್ನು ದೃಢಪಡಿಸುವದಕ್ಕೂ ನಿಮ್ಮ ನಂಬಿಕೆಯ ವೃದ್ಧಿಗಾಗಿ ಪ್ರಬೋಧಿಸುವದಕ್ಕೂ ನಮ್ಮ ಸಹೋದರನೂ ಕ್ರಿಸ್ತನ ಸುವಾರ್ತೆಯ ಉದ್ಯೋಗದಲ್ಲಿ ದೇವರ ಸೇವಕನೂ ಆಗಿರುವ ತಿಮೊಥೆಯನನ್ನು ನಿಮ್ಮ ಬಳಿಗೆ ಕಳುಹಿಸಿದೆವು. 3 ಸಂಕಟಗಳನ್ನು ಅನುಭವಿಸುವದಕ್ಕಾಗಿ ನಾವು ನೇಮಿಸಲ್ಪಟ್ಟವರೆಂದು ನೀವೇ ಬಲ್ಲಿರಷ್ಟೆ. 4 ನಾವು ನಿಮ್ಮ ಬಳಿಯಲ್ಲಿದ್ದಾಗ, ಸಂಕಟವನ್ನು ಅನುಭವಿಸಲೇ ಬೇಕೆಂದು ಮುಂದಾಗಿ ಹೇಳಿದೆವಲ್ಲಾ; ಅದರಂತೆ ಆಯಿತು, ನಿಮ್ಮ ಅನುಭವಕ್ಕೂ ಬಂತು. 5 ಆದದರಿಂದ ನಾನು ಇನ್ನು ತಡೆಯಲಾರದೆ, ಒಂದು ವೇಳೆ ಶೋಧಕನು ನಿಮ್ಮನ್ನು ಶೋಧಿಸಿದ್ದರಿಂದ ನಮ್ಮ ಪ್ರಯಾಸವು ವ್ಯರ್ಥವಾಯಿತೋ ಏನೋ ಎಂದು, ನಿಮ್ಮ ನಂಬಿಕೆಯ ವಿಷಯದಲ್ಲಿ ತಿಳುಕೊಳ್ಳುವದಕ್ಕೆ ಅವನನ್ನು ಕಳುಹಿಸಿದೆನು. 6 ಆದರೆ ತಿಮೊಥೆಯನು ಈಗಲೇ ನಮ್ಮ ಬಳಿಗೆ ಬಂದು, ನಿಮ್ಮ ವಿಶ್ವಾಸ ಪ್ರೀತಿಗಳ ವಿಷಯವಾಗಿ ಶುಭವರ್ತಮಾನವನ್ನು ಹೇಳಿ, ನೀವು ನಮ್ಮನ್ನು ಯಾವಾಗಲೂ ಚನ್ನಾಗಿ ಜ್ಞಾಪಕಮಾಡಿಕೊಂಡು, ನಾವು ನಿಮ್ಮನ್ನು ಹ್ಯಾಗೋ ಹಾಗೆಯೇ ನೀವೂ ನಮ್ಮನ್ನು ನೋಡುವದಕ್ಕೆ ಅಪೇಕ್ಷಿಸುತ್ತೀರೆಂಬುವದನ್ನು ತಿಳಿಸಿದ್ದಾನೆ. 7 ಸಹೋದರರೇ, ಇದನ್ನು ಕೇಳಿ ನಮ್ಮ ಎಲ್ಲಾ ಕೊರತೆಯಲ್ಲಿಯೂ ಸಂಕಟದಲ್ಲಿಯೂ ನಿಮ್ಮ ನಂಬಿಕೆಯ ಮೂಲಕ ನಮಗೆ ಆದರಣೆಯಾಯಿತು. 8 ನೀವು ಕರ್ತನಲ್ಲಿ ದೃಢವಾಗಿ ನಿಂತಿದ್ದೀರೆಂದು ತಿಳಿದು ಉಜ್ಜೀವಿಸಿದೆವು. 9 ನಿಮ್ಮ ನಿಮಿತ್ತ ನಮ್ಮ ದೇವರ ಮುಂದೆ ನಮಗಿರುವ ಎಲ್ಲಾ ಸಂತೋಷಕ್ಕಾಗಿ ದೇವರಿಗೆ ತಕ್ಕಷ್ಟು ಸ್ತೋತ್ರ ಮಾಡುವದು ನಮ್ಮಿಂದ ಹ್ಯಾಗಾದೀತು? 10 ನಿಮ್ಮ ಮುಖವನ್ನು ನೋಡುವದಕ್ಕೂ ನಿಮ್ಮ ಕೊರತೆಗಳನ್ನು ನೀಗುವದಕ್ಕೂ ನಮಗೆ ಅನುಕೂಲವಾಗಬೇಕೆಂದು ನಾವು ಹಗಲಿರುಳು ದೇವರನ್ನು ಅತ್ಯಂತವಾಗಿ ಬೇಡುವವರಾಗಿದ್ದೇವೆ. 11 ನಮ್ಮ ತಂದೆಯಾದ ದೇವರೂ ನಮ್ಮ ಕರ್ತನಾದ ಯೇಸುವೂ ನಮಗೆ ನಿಮ್ಮ ಬಳಿಗೆ ಬರುವದಕ್ಕೆ ಮಾರ್ಗವನ್ನು ಸರಾಗ ಮಾಡಲಿ.

12 ನಿಮ್ಮಲ್ಲಿ ನಮ್ಮ ಪ್ರೀತಿಯು ಹ್ಯಾಗೋ ಹಾಗೆಯೇ ನಿಮ್ಮ ಪ್ರೀತಿಯೂ ಒಬ್ಬರೊಬ್ಬರ ಮೇಲೆಯೂ ಎಲ್ಲಾ ಮನುಷ್ಯರ ಮೇಲೆಯೂ ಅಭಿವೃದ್ಧಿಹೊಂದಿ ಅತ್ಯಧಿಕವಾಗುವಂತೆ ಕರ್ತನು ಅನುಗ್ರಹಿಸಲಿ. 13 ನಮ್ಮ ಕರ್ತನಾದ ಯೇಸು ನಿಮ್ಮ ಹೃದಯಗಳನ್ನು ದೃಢಪಡಿಸಿ, ತನ್ನ ಎಲ್ಲಾ ಪರಿಶುದ್ಧ ಪರಿವಾರ ಸಮೇತ ಪ್ರತ್ಯಕ್ಷನಾದಾಗ ತಂದೆಯಾದ ದೇವರ ಸಮಕ್ಷಮದಲ್ಲಿ ನೀವು ಪರಿಶುದ್ಧರಾಗಿಯೂ ನಿರ್ದೋಷಿಗಳಾಗಿಯೂ ಇರುವಂತೆ ಮಾಡಲಿ.

ಕ್ರೈಸ್ತರಿಗೆ ಇರತಕ್ಕ ನಡಾವಳಿಯನ್ನು ಕುರಿತದ್ದು.

**4** ಕಡೇ ಮಾತೇನಂದರೆ, ಸಹೋದರರೇ, ನಾವು ಕರ್ತನಾದ ಯೇಸುವಿನ ಅಧಿಕಾರದಿಂದ ನಿಮಗೆ ಕೊಟ್ಟ ಆಜ್ಞೆಗಳನ್ನು ತಿಳಿದಿದ್ದೀರಷ್ಟೆ. 2 ನೀವು ಹ್ಯಾಗೆ ನಡೆದು ದೇವರನ್ನು

ಮೆಚ್ಚಿಸಬೇಕೋ ಅದನ್ನು ನಮ್ಮಿಂದ ಕಲಿತುಕೊಂಡು ಅದರಂತೆ ನಡೆಯುತ್ತಲೇ ಇದ್ದೀರಿ.
ನೀವು ಹಾಗೆಯೇ ಇನ್ನೂ ಹೆಚ್ಚಾಗಿ ನಡೆಯಬೇಕೆಂದು ನಿಮ್ಮನ್ನು ಬೇಡಿಕೊಂಡು ಯೇಸು
3 ಕರ್ತನಲ್ಲಿ ಪ್ರಬೋಧಿಸುತ್ತೇವೆ. ದೇವರ ಚಿತ್ತವೇನಂದರೆ ನೀವು ಶುದ್ಧರಾಗಿರಬೇಕೆಂಬು
4-5 ವದೇ. ಆದದರಿಂದ ಹಾದರಕ್ಕೆ ದೂರವಾಗಿರಬೇಕು. ದೇವರನ್ನರಿಯದ ಅನ್ಯಜನ
ಗಳಂತೆ ಕಾಮಾಭಿಲಾಷೆಗೆ ಒಳಪಡದೆ, ನಿಮ್ಮಲ್ಲಿ ಪ್ರತಿಯೊಬ್ಬನು ಪವಿತ್ರವಾದ ಮನಸ್ಸಿ
ನಿಂದಲೂ ಘನತೆಯಿಂದಲೂ ಧರ್ಮಪತ್ನಿಯನ್ನು ಸಂಪಾದಿಸಿಕೊಳ್ಳಲು[1] ತಿಳಿಯಬೇಕು.
6 ಈ ವಿಷಯದಲ್ಲಿ ಯಾರೂ ತನ್ನ ಸಹೋದರನನ್ನು ವಂಚಿಸಿ ಕೇಡುಮಾಡಬಾರದು.
ನಾವು ಮುಂಚೆ ತಿಳಿಸಿ ನಿಮಗೆ ಖಂಡಿತವಾಗಿ ಹೇಳಿದ ಪ್ರಕಾರ ಇವೆಲ್ಲವುಗಳ ವಿಷಯ
7 ದಲ್ಲಿ ಕರ್ತನು ಮುಯ್ಯಿಗೆ ಮುಯ್ಯಿ ತೀರಿಸುವವನಾಗಿದ್ದಾನೆ. ದೇವರು ನಮ್ಮನ್ನು
8 ಬಂಡತನಕ್ಕೆ ಕರೆಯದೆ ಶುದ್ಧರಾಗಿರುವದಕ್ಕೆ ಕರೆದನು. ಹೀಗಿರಲು ಈ ಮಾತನ್ನು
ತಾತ್ಸಾರಮಾಡುವವನು ಮನುಷ್ಯನನ್ನು ತಿರಸ್ಕರಿಸುವದು ಮಾತ್ರವಲ್ಲದೆ ಪವಿತ್ರಾತ್ಮವರ
ವನ್ನು ನಿಮಗೆ ದಯಪಾಲಿಸುವ ದೇವರನ್ನೂ ತಿರಸ್ಕರಿಸುತ್ತಾನೆ.

9 ಸಹೋದರಸ್ನೇಹವಿಷಯದಲ್ಲಿ ನಿಮಗೆ ಬರೆಯುವದು ಅವಶ್ಯವಿಲ್ಲ; ಒಬ್ಬರನ್ನೊಬ್ಬರು
ಪ್ರೀತಿಸಬೇಕೆಂಬ ಉಪದೇಶವನ್ನು ನೀವೇ ದೇವರಿಂದ ಹೊಂದಿದವರಾಗಿದ್ದು, ಸಮಸ್ತ
10 ಮಕೆದೋನ್ಯದಲ್ಲಿರುವ ಸಹೋದರರನ್ನೆಲ್ಲಾ ಪ್ರೀತಿಸುವವರಾಗಿಯೇ ಇದ್ದೀರಿ. ಆದಾಗ್ಯೂ
ಸಹೋದರರೇ, ನೀವು ಪ್ರೀತಿಯಲ್ಲಿ ಇನ್ನೂ ಹೆಚ್ಚುತ್ತಾ ಬರಬೇಕೆಂದು ನಿಮ್ಮನ್ನು ಪ್ರಬೋ
11 ಧಿಸುತ್ತೇವೆ. ಇದಲ್ಲದೆ ನಾನು ನಿಮಗೆ ಆಜ್ಞೆ ಕೊಟ್ಟ ಪ್ರಕಾರ, ನೀವು ಮತ್ತೊಬ್ಬರ
ಕಾರ್ಯದಲ್ಲಿ ತಲೆಹಾಕದೆ ಸುಮ್ಮಗಿದ್ದು, ಸ್ವಂತ ಕಾರ್ಯವನ್ನೇ ನಡಿಸಿಕೊಂಡು ಕೈಯಾರೆ
12 ಕೆಲಸ ಮಾಡುವದೇ ಮಾನವೆಂದೆಣಿಸಿರಿ. ಹೀಗಿದ್ದರೆ ನೀವು ಹೊರಗಿನವರ ಎದುರಿನಲ್ಲಿ
ಸಜ್ಜನರಾಗಿ ನಡೆದುಕೊಳ್ಳುವಿರಿ, ಮತ್ತು ನಿಮಗೆ ಯಾವದಕ್ಕೂ ಕೊರತೆಯಿರುವದಿಲ್ಲ.

ಯೇಸುಕರ್ತನು ಪ್ರತ್ಯಕ್ಷನಾಗುವದಕ್ಕೆ ಮುಂಚಿತವಾಗಿ ಸಾಯುವ ಭಕ್ತರನ್ನು ಕುರಿತದ್ದು.

13 ಸಹೋದರರೇ, ನಿದ್ರೆಹೋಗುವವರ ಗತಿ ಏನೆಂದು ನೀವು ತಿಳಿಯದೆ ಇದ್ದು ನಿರೀಕ್ಷೆ
14 ಯಿಲ್ಲದವರಾದ ಇತರರಂತೆ ದುಃಖಿಸುವದು ನಮ್ಮ ಮನಸ್ಸಿಗೆ ಒಪ್ಪುವದಿಲ್ಲ. ಯೇಸು
ಸತ್ತು ಜೀವಿತನಾಗಿ ಎದ್ದನೆಂದು ನಾವು ನಂಬಿದ ಮೇಲೆ ಅದರಂತೆ ಯೇಸುವಿನಲ್ಲಿದ್ದು
ಕೊಂಡು ನಿದ್ರೆಹೋಗುವವರನ್ನು ಸಹ ದೇವರು ಆತನೊಡನೆ[2] ಕರೆದುಕೊಂಡು ಬರುವ
15 ನೆಂದು ನಂಬಬೇಕಲ್ಲವೇ. ನಾವು ಕರ್ತನ ಮಾತಿನ ಆಧಾರದಿಂದ ನಿಮಗೆ ಹೇಳುವದೇ
ನಂದರೆ, ಕರ್ತನು ಪ್ರತ್ಯಕ್ಷನಾಗುವ ವರೆಗೂ ಜೀವದಿಂದುಳಿದಿರುವ ನಾವು ನಿದ್ರೆಹೋದವರಿ
16 ಗಿಂತ ಮುಂದಾಗುವದೇ ಇಲ್ಲ. ಕರ್ತನು ತಾನೇ ಆಜ್ಞಾಘೋಷದೊಡನೆಯೂ ಪ್ರಧಾನ
ದೂತನ ಶಬ್ದದೊಡನೆಯೂ ದೇವರ ತುತೂರಿಧ್ವನಿಯೊಡನೆಯೂ ಆಕಾಶದಿಂದ ಇಳಿದು
17 ಬರುವನು; ಆಗ ಕ್ರಿಸ್ತನಲ್ಲಿರುವ ಸತ್ತವರು ಮೊದಲು ಎದ್ದುಬರುವರು. ಆ ಮೇಲೆ

[1] ಅಥವಾ, ಸ್ವಂತ ಘಟವನ್ನು ಸ್ವಾಧೀನದಲ್ಲಿ ಇಟ್ಟುಕೊಂಡಿರಲು.
[2] ಅಥವಾ, ದೇವರು ನಿದ್ರೆಹೋದವರನ್ನು ಸಹ ಯೇಸುವಿನ ಮೂಲಕವಾಗಿ ಆತನೊಡನೆ.

ಜೀವದಿಂದುಳಿದಿರುವ ನಾವು ಅಂತರಿಕ್ಷದಲ್ಲಿ ಕರ್ತನನ್ನು ಎದುರುಗೊಳ್ಳುವದಕ್ಕಾಗಿ ಅವರ ಸಂಗಡಲೇ ಮೇಘವಿಮಾನದಲ್ಲಿ ಫಕ್ಕನೆ ವೈಯಲ್ಪಡುವೆವು; ಹೀಗಾಗಿ ನಾವು ಸದಾ ಕಾಲವೂ ಕರ್ತನ ಜೊತೆಯಲ್ಲಿರುವೆವು. 18 ಆದಕಾರಣ ಈ ಮಾತುಗಳಿಂದ ಒಬ್ಬರ ನ್ನೊಬ್ಬರು ಸಂತೈಸಿರಿ.

**5** ಸಹೋದರರೇ, ಈ ಸಂಗತಿಗಳು ನಡೆಯಬೇಕಾದ ಕಾಲಗಳನ್ನೂ ಗಳಿಗೆಗಳನ್ನೂ ಕುರಿತು ನಿಮಗೆ ಬರೆಯುವದು ಅವಶ್ಯವಿಲ್ಲ. 2 ರಾತ್ರಿಕಾಲದಲ್ಲಿ ಕಳ್ಳನು ಹ್ಯಾಗೆ ಬರುತ್ತಾನೋ ಹಾಗೆಯೇ ಕರ್ತನ ದಿನವು ಬರುವದೆಂದು ನೀವೇ ಚನ್ನಾಗಿ ತಿಳಿದಿದ್ಧೀರಲ್ಲಾ. 3 ಸಮಾಧಾನವಾಗಿಯೂ ನಿರ್ಭಯವಾಗಿಯೂ ಇರುತ್ತೇವೆಂದು ಜನರು ಹೇಳುತ್ತಿರುವಾಗಲೇ, ಅವರ ಮೇಲೆ ನಾಶನವು ಗರ್ಭಿಣಿಗೆ ಪ್ರಸವವೇದನೆ ಬರುವ ಪ್ರಕಾರ ಬರುವದು; ಅವರು ಹ್ಯಾಗೂ ತಪ್ಪಿಸಿಕೊಳ್ಳಲಾರರು. 4 ಆದರೆ ಸಹೋದರರೇ, ಆ ದಿನವು ಕಳ್ಳನಂತೆ[1] ನಿಮ್ಮ ಮೇಲೆ ಬರತಕ್ಕದ್ದಲ್ಲ; ನೀವು ಕತ್ತಲೆಯಲ್ಲಿರುವವರಲ್ಲ. 5 ನೀವೆಲ್ಲರು ಬೆಳಕಿನವರೂ ಹಗಲಿನವರೂ ಆಗಿದ್ಧೀರಷ್ಟೆ; ನಾವು ರಾತ್ರಿಯವರೂ ಅಲ್ಲ, ಕತ್ತಲೆಯವರೂ ಅಲ್ಲ. 6 ಆದಕಾರಣ ನಾವು ಇತರರಂತೆ ನಿದ್ದೆಮಾಡದೆ ಎಚ್ಚರವಾಗಿರೋಣ, ಸ್ವಸ್ಥಚಿತ್ತರಾಗಿ ರೋಣ. 7 ನಿದ್ದೆಮಾಡುವವರು ರಾತ್ರಿಯಲ್ಲಿ ನಿದ್ದೆಮಾಡುತ್ತಾರೆ, ಅಮಲೇರುವವರು ರಾತ್ರಿಯಲ್ಲಿ ಅಮಲೇರುತ್ತಾರಷ್ಟೆ. 8 ನಾವಾದರೋ ಹಗಲಿನವರಾಗಿರಲಾಗಿ ವಿಶ್ವಾಸ ಪ್ರೀತಿಗಳೆಂಬ ಕವಚವನ್ನೂ ರಕ್ಷಣೆಯ ನಿರೀಕ್ಷೆಯೆಂಬ ಶಿರಸ್ತ್ರಾಣವನ್ನೂ ಧರಿಸಿಕೊಂಡು ಸ್ವಸ್ಥಚಿತ್ತರಾಗಿರೋಣ. 9 ಯಾಕಂದರೆ ದೇವರು ನಮ್ಮನ್ನು ತನ್ನ ಕೋಪಕ್ಕೆ ಗುರಿಯಾಗ ಬೇಕೆಂದು ನೇಮಿಸದೆ ನಾವು ನಮ್ಮ ಕರ್ತನಾದ ಯೇಸು ಕ್ರಿಸ್ತನ ಮೂಲಕವಾಗಿ ರಕ್ಷಣೆಯನ್ನು ಸಂಪಾದಿಸಿಕೊಳ್ಳಬೇಕೆಂದು ನೇಮಿಸಿದನು. 10 ನಾವು ಎಚ್ಚರವಾಗಿದ್ದರೂ ಸರಿಯೇ ನಿದ್ರೆಯಲ್ಲಿದ್ದರೂ ಸರಿಯೇ[2], ತನ್ನ ಜೊತೆಯಲ್ಲಿಯೇ ಜೀವಿಸಬೇಕೆಂದು ಆತನು ನಮಗೋಸ್ಕರ ಸತ್ತನು. 11 ಆದದರಿಂದ ನೀವು ಈಗ ಮಾಡುತ್ತಿರುವ ಪ್ರಕಾರವೇ ಒಬ್ಬರ ನ್ನೊಬ್ಬರು ಸಂತೈಸಿಕೊಳ್ಳುತ್ತಾ ಒಬ್ಬರ ಭಕ್ತಿಯನ್ನೊಬ್ಬರು ವೃದ್ಧಿಪಡಿಸುತ್ತಾ ಇರ್ರಿ.

### ಕ್ರೈಸ್ತರು ಅನುಸರಿಸತಕ್ಕ ಕೆಲವು ಸೂತ್ರಗಳು.

12 ಸಹೋದರರೇ, ಯಾರು ನಿಮ್ಮಲ್ಲಿ ಪ್ರಯಾಸಪಟ್ಟು ಕರ್ತನ ಕಾರ್ಯಗಳಲ್ಲಿ ನಿಮ್ಮ ಮೇಲೆ ಮುಖ್ಯಸ್ಥರಾಗಿದ್ದು ನಿಮಗೆ ಬುದ್ಧಿಹೇಳುತ್ತಾರೋ ಅವರನ್ನು ಲಕ್ಷಿಸಿ, 13 ಅವರ ಕೆಲ ಸದ ನಿಮಿತ್ತ ಅವರನ್ನು ಪ್ರೀತಿಯಿಂದ ಬಹಳವಾಗಿ ಸನ್ಮಾನ ಮಾಡಬೇಕೆಂದು ನಿಮ್ಮನ್ನು ಬೇಡಿಕೊಳ್ಳುತ್ತೇವೆ. ನಿಮ್ಮನಿಮ್ಮೊಳಗೆ ಸಮಾಧಾನವಾಗಿರಿ.

14 ಸಹೋದರರೇ, ಅಕ್ರಮವಾಗಿ ನಡೆಯುವವರಿಗೆ ಬುದ್ಧಿ ಹೇಳಿರಿ, ಮನಗುಂದಿದವರನ್ನು ಧೈರ್ಯಪಡಿಸಿರಿ, ಬಲಹೀನರಿಗೆ ಆಧಾರವಾಗಿರಿ, ಎಲ್ಲರಲ್ಲಿಯೂ ದೀರ್ಘಶಾಂತರಾಗಿರಿ ಎಂದು ನಿಮ್ಮನ್ನು ಪ್ರಬೋಧಿಸುತ್ತೇವೆ. 15 ಯಾರೂ ಅಪಕಾರಕ್ಕೆ ಅಪಕಾರ ಮಾಡದಂತೆ

[1] ಕೆಲವು ಪ್ರತಿಗಳಲ್ಲಿ — ಕಳ್ಳರ ಮೇಲೆ ಹಗಲಿನ ಬೆಳಕು ಫಕ್ಕನೆ ಬಂತೋ ಎಂಬಂತೆ ಆ ದಿನವು ಎಂದು ಬರೆದದೆ.
[2] ಅಂದರೆ, ಜೀವದಿಂದಿದ್ದರೂ ಸತ್ತಿದ್ದರೂ.

ನೋಡಿಕೊಳ್ಳಿರಿ; ಯಾವಾಗಲೂ ನೀವು ಒಬ್ಬರಿಗೊಬ್ಬರು ಹಿತವನ್ನು ಮಾಡಿಕೊಂಡಿರುವ ದಲ್ಲದೆ ಎಲ್ಲರಿಗೂ ಹಿತವನ್ನು ಮಾಡುವವರಾಗಿರ್ರಿ.
16, 17, 18 ಯಾವಾಗಲೂ ಸಂತೋಷಿಸಿರಿ; ಎಡೆಬಿಡದೆ ಪ್ರಾರ್ಥನೆ ಮಾಡಿರಿ; ಎಲ್ಲರಲ್ಲಿಯೂ ಕೃತಜ್ಞತಾಸ್ತುತಿ ಮಾಡಿರಿ; ಇದೇ ನಿಮ್ಮ ವಿಷಯವಾಗಿ ಕ್ರಿಸ್ತ ಯೇಸುವಿನಲ್ಲಿ ತೋರಿ
19, 20 ಬಂದ ದೇವರ ಚಿತ್ತ. ಪವಿತ್ರಾತ್ಮವನ್ನು ನಂದಿಸಬೇಡಿರಿ; ಪ್ರವಾದನೆಗಳನ್ನು ಹೀನೈಸ
21 ಬೇಡಿರಿ; ಆದರೆ ಎಲ್ಲವನ್ನೂ ಪರಿಶೋಧಿಸಿ ಒಳ್ಳೇದನ್ನೇ ಭದ್ರವಾಗಿ ಹಿಡಿದುಕೊಳ್ಳಿರಿ;
22 ಸಕಲ ವಿಧವಾದ ಕೆಟ್ಟತನಕ್ಕೆ ದೂರವಾಗಿರಿ.

### ಸಮಾಪ್ತಿವಾಕ್ಯಗಳು.

23 ಶಾಂತಿದಾಯಕನಾದ ದೇವರು ತಾನೇ ನಿಮ್ಮನ್ನು ಪರಿಪೂರ್ಣವಾಗಿ ಪವಿತ್ರಮಾಡಲಿ. ನಮ್ಮ ಕರ್ತನಾದ ಯೇಸು ಕ್ರಿಸ್ತನು ಪ್ರತ್ಯಕ್ಷನಾದಾಗ ನಿಮ್ಮ ಆತ್ಮಪ್ರಾಣಶರೀರಗಳು
24 ದೋಷವಿಲ್ಲದೆ ಸಂಪೂರ್ಣವಾಗಿ ಕಾಣಿಸುವಂತೆ ಕಾಪಾಡಲ್ಪಡಲಿ. ನಿಮ್ಮನ್ನು ಕರೆಯುವವನು ನಂಬಿಗಸ್ತನು, ಆತನು ತನ್ನ ಕಾರ್ಯವನ್ನು ಸಾಧಿಸುವನು.
25, 26 ಸಹೋದರರೇ, ನಮಗೋಸ್ಕರ ಪ್ರಾರ್ಥನೆ ಮಾಡಿರಿ. ಸಹೋದರರೆಲ್ಲರಿಗೂ ಪವಿತ್ರ
27 ವಾದ ಮುದ್ದಿಟ್ಟು ನನ್ನ ವಂದನೆಗಳನ್ನು ಹೇಳಿರಿ. ಈ ಪತ್ರಿಕೆಯನ್ನು ಸಹೋದರರೆಲ್ಲರಿಗೂ ಓದಿ ಹೇಳಬೇಕೆಂದು ನಿಮಗೆ ಕರ್ತನ ಆಣೆ ಇಡುತ್ತೇನೆ.

ನಮ್ಮ ಕರ್ತನಾದ ಯೇಸು ಕ್ರಿಸ್ತನ ಕೃಪೆಯು ನಿಮ್ಮೊಂದಿಗಿರಲಿ.

# THE SECOND EPISTLE OF SAINT PAUL TO THE THESSALONIANS

# ಪೌಲನು ಥೆಸಲೊನೀಕದವರಿಗೆ
ಬರೆದ
# ಎರಡನೇ ಪತ್ರಿಕೆ

ಒಕ್ಕಣೆ.

ನಮ್ಮ ತಂದೆಯಾದ ದೇವರಲ್ಲಿಯೂ ಕರ್ತನಾದ ಯೇಸು ಕ್ರಿಸ್ತನಲ್ಲಿಯೂ ಇರುವ ಥೆಸಲೊನೀಕದವರ ಸಭೆಗೆ ಪೌಲ ಸಿಲ್ವಾನ ತಿಮೊಥೆಯ ಎಂಬ ನಾವು ಬರೆಯುವದೇನಂದರೆ— 1
ತಂದೆಯಾದ ದೇವರಿಂದಲೂ ಕರ್ತನಾದ ಯೇಸು ಕ್ರಿಸ್ತನಿಂದಲೂ ನಿಮಗೆ ಕೃಪೆಯೂ ಶಾಂತಿಯೂ ಆಗಲಿ. 2

ದೇವರಿಗೆ ಕೃತಜ್ಞತಾಸ್ತುತಿ.

ಸಹೋದರರೇ, ನಾವು ಯಾವಾಗಲೂ ನಿಮ್ಮ ವಿಷಯದಲ್ಲಿ ದೇವರಿಗೆ ಕೃತಜ್ಞತಾಸ್ತುತಿ ಮಾಡುವದಕ್ಕೆ ಬದ್ಧರಾಗಿದ್ದೇವೆ. ಹಾಗೆ ಮಾಡುವದು ಯೋಗ್ಯ; ಯಾಕಂದರೆ ನಿಮ್ಮ ನಂಬಿಕೆಯು ಬಹಳ ಅಭಿವೃದ್ಧಿ ಹೊಂದುತ್ತಾ ಬರುತ್ತದೆ, ಪರಸ್ಪರವಾದ ಪ್ರೀತಿ ನಿಮ್ಮೆಲ್ಲರಲ್ಲಿಯೂ ಹೆಚ್ಚುತ್ತಾ ಬರುತ್ತದೆ. 3 ಹೀಗಿರುವದರಿಂದ, ನಿಮಗೆ ಬಂದಿರುವ ಎಲ್ಲಾ ಹಿಂಸೆಗಳಲ್ಲಿಯೂ ನೀವು ಅನುಭವಿಸುತ್ತಿರುವ ಸಂಕಟಗಳಲ್ಲಿಯೂ ತೋರಿಬಂದ ನಿಮ್ಮ ತಾಳ್ಮೆ ನಂಬಿಕೆಗಳನ್ನು ನೆನಸಿ, ನಿಮ್ಮ ವಿಷಯವಾಗಿ ಹೆಚ್ಚಳಪಟ್ಟು ದೇವರ ಸಭೆಗಳೊಳಗೆ ನಾವೇ ಮಾತಾಡುತ್ತೇವೆ. 4

ಕರ್ತನಾದ ಯೇಸು ಪ್ರತ್ಯಕ್ಷನಾದಾಗ ಆತನಿಗೋಸ್ಕರ ಹಿಂಸೆಪಟ್ಟವರಿಗೆ ಉಪಶಾಂತಿಯೂ ವೈರಿಗಳಿಗೆ ದಂಡನೆಯೂ ಉಂಟಾಗುವ ಭರವಸ.

ದೇವರು ನ್ಯಾಯವಾದ ತೀರ್ಪು ಮಾಡುತ್ತಾನೆಂಬುವದಕ್ಕೆ ನಿಮ್ಮ ತಾಳ್ಮೆಯು ಸ್ಪಷ್ಟವಾದ ನಿದರ್ಶನವಾಗಿದೆ. 5 ಯಾವ ದೇವರಾಜ್ಯಕ್ಕೋಸ್ಕರ ನೀವು ಕಷ್ಟವನ್ನನುಭವಿಸುತ್ತೀರೋ ಅದಕ್ಕೆ ನೀವು ಯೋಗ್ಯರಾಗಬೇಕೆಂಬುವದೇ ದೇವರ ಅಭಿಪ್ರಾಯ. 6 ನಿಮ್ಮನ್ನು ಸಂಕಟಪಡಿಸುವವರಿಗೆ ಪ್ರತಿಯಾಗಿ ಸಂಕಟವನ್ನೂ ಸಂಕಟಪಡುವವರಾದ ನಿಮಗೆ ನಮ್ಮೊಡನೆ ಉಪಶಮನವನ್ನೂ ಕೊಡುವದು ದೇವರ ಎಣಿಕೆಯಲ್ಲಿ ನ್ಯಾಯವಾಗಿದೆ

7 ಯಷ್ಟೆ. ಯಾವಾಗ ಕೊಡುವನಂದರೆ, ಯೇಸುಕರ್ತನು ತನ್ನ ಶಕ್ತಿಯನ್ನು ತೋರ್ಪ ಡಿಸುವ ದೇವದೂತರಿಂದ ಕೂಡಿದವನಾಗಿ ಉರಿಯುವ ಬೆಂಕಿಯಲ್ಲಿ ಆಕಾಶದಿಂದ ಪ್ರತ್ಯ
8 ಕ್ಷನಾಗುವ ಕಾಲದಲ್ಲಿ ಅದನ್ನು ಕೊಡುವನು. ಆಗ ನಮ್ಮ ಕರ್ತನಾದ ಯೇಸು ದೇವ ರನ್ನರಿಯದವರಿಗೂ ತನ್ನ ಸುವಾರ್ತೆಗೆ ಒಳಪಡದವರಿಗೂ ಪ್ರತೀಕಾರವನ್ನು ಸಲ್ಲಿಸುವನು.
9-10 ಆ ದಿನದಲ್ಲಿ ಆತನು ತನ್ನ ಪವಿತ್ರರ ಮೂಲಕ ಪ್ರಭಾವ ಹೊಂದುವವನಾಗಿಯೂ ನಾವು ನಿಮಗೆ ಹೇಳಿದ ಸಾಕ್ಷಿಯನ್ನು ನಂಬಿದವರೆಲ್ಲರ ಮೂಲಕ ತನ್ನ ವಿಷಯದಲ್ಲಿ ಆಶ್ಚರ್ಯ ಹುಟ್ಟಿಸುವವನಾಗಿಯೂ ಬರುವಾಗ, ಅಂಥವರು ಕರ್ತನ ಸಮ್ಮುಖಕ್ಕೂ ಆತನ ಪರಾಕ್ರಮದ ವೈಭವಕ್ಕೂ ದೂರವಾಗಿ ನಿತ್ಯನಾಶನವೆಂಬ ದಂಡನೆಯನ್ನು ಅನು
11 ಭವಿಸುವರು. ಆ ದಿನವನ್ನು ನಾವು ಎದುರುನೋಡುತ್ತಾ ನಿಮಗೋಸ್ಕರ ಯಾವಾ ಗಲೂ ಪ್ರಾರ್ಥನೆಮಾಡಿ—ನಮ್ಮ ದೇವರು ನಿಮ್ಮನ್ನು ಕರೆದದ್ದಕ್ಕೆ ತಾನೇ ನಿಮ್ಮನ್ನು ಯೋಗ್ಯರಾಗಮಾಡಬೇಕೆಂತಲೂ ಸತ್ಕ್ರಿಯೆಗಳಲ್ಲಿ ಸಂತೋಷಿಸುವ ನಿಮ್ಮ ಸಕಲ ಆಲೋಚನೆಯನ್ನೂ ನಂಬಿಕೆಯ ಫಲವಾದ ನಿಮ್ಮ ಕೆಲಸವನ್ನೂ ಶಕ್ತಿಪೂರ್ವಕವಾಗಿ
12 ಸಿದ್ಧಿಗೆ ತರಬೇಕೆಂತಲೂ ಬೇಡಿಕೊಳ್ಳುತ್ತೇವೆ. ಹೀಗಾದರೆ ನಮ್ಮ ದೇವರ ಮತ್ತು ಕರ್ತನಾದ ಯೇಸು ಕ್ರಿಸ್ತನ ಕೃಪೆಯಿಂದ ನಿಮ್ಮ ಮೂಲಕ ನಮ್ಮ ಕರ್ತನಾದ ಯೇಸುವಿನ ಹೆಸರಿಗೆ ಮಹಿಮೆ ಉಂಟಾಗುವದು; ಆತನ ಮೂಲಕ ನಿಮಗೂ ಮಹಿಮೆ ಉಂಟಾಗುವದು.

ಕರ್ತನಾದ ಯೇಸು ಪ್ರತ್ಯಕ್ಷನಾಗುವದಕ್ಕೆ ಮುಂಚಿತವಾಗಿ ಅನೇಕ ಸಂಗತಿಗಳು ನಡೆಯಬೇಕು.

**2** ಸಹೋದರರೇ, ನಮ್ಮ ಕರ್ತನಾದ ಯೇಸು ಕ್ರಿಸ್ತನ ಪ್ರತ್ಯಕ್ಷತೆಯ ವಿಷಯವಾಗಿಯೂ ನಾವು ಆತನ ಬಳಿಯಲ್ಲಿ ಕೂಡಿಕೊಳ್ಳುವದರ ವಿಷಯವಾಗಿಯೂ ನಿಮ್ಮನ್ನು ಬೇಡಿ
2 ಕೊಳ್ಳುವದೇನಂದರೆ—ಕರ್ತನ ದಿನವು ಈಗಲೇ ಹತ್ತರವಾಯಿತೆಂಬದಾಗಿ ದೇವರಾತ್ಮ ಪ್ರೇರಿತವಾದ ನುಡಿ ಇದೆ ಎಂದಾಗಲಿ ಪೌಲನು ಹಾಗೆ ಹೇಳಿದನೆಂದಾಗಲಿ ಪೌಲನು ಹಾಗೆ ಬರೆದನೆಂದಾಗಲಿ ಯಾರಾದರೂ ಹೇಳಿದರೂ ನೀವು ಬೇಗನೆ ಬುದ್ಧಿಗೆಟ್ಟು ಚಂಚಲ
3 ರಾಗಿ ಕಳವಳಪಡಬೇಡಿರಿ. ಯಾರೂ ಯಾವ ವಿಧದಲ್ಲಿಯೂ ನಿಮ್ಮನ್ನು ಮೋಸಗೊಳಿ ಸದಂತೆ ನೋಡಿಕೊಳ್ಳಿರಿ; ಯಾಕಂದರೆ ಮೊದಲು ಮತಭ್ರಷ್ಟತೆಯು ಉಂಟಾಗಿ ಅಧರ್ಮ
4 ಸ್ವರೂಪನು ಬೈಲಿಗೆ ಬಂದ ಹೊರತು ಆ ದಿನವು ಬರುವದಿಲ್ಲ. ಯಾವದು ದೇವರೆನ್ನಿಸಿ ಕೊಳ್ಳುತ್ತದೋ ಯಾವದು ಪೂಜೆ ಹೊಂದುತ್ತದೋ ಅದನ್ನೆಲ್ಲಾ ನಾಶನಕ್ಕೆ ಅಧೀನ ನಾದ ಆ ಪುರುಷನು ಎದುರಿಸಿ, ಅದಕ್ಕಿಂತ ಮೇಲಾಗಿ ತನ್ನನ್ನು ತಾನೇ ಹೆಚ್ಚಿಸಿಕೊಂಡು, ತಾನು ದೇವರೆಂದು ಹೇಳಿಕೊಂಡು, ದೇವರ ಗರ್ಭಗುಡಿಯಲ್ಲೇ ಕೂತುಕೊಳ್ಳುತ್ತಾನೆ.
5 ನಾನು ನಿಮ್ಮ ಸಂಗಡ ಇದ್ದಾಗ ಈ ಸಂಗತಿಗಳನ್ನು ಹೇಳಿದ್ದು ಜ್ಞಾಪಕವಿಲ್ಲವೋ?
6 ಇದಲ್ಲದೆ ಆ ಮನುಷ್ಯನು ನೇಮಕವಾದ ಸಮಯದಲ್ಲೇ ಹೊರತು ಬೈಲಿಗೆ ಬರುವದಕ್ಕೆ
7 ಏನು ಅಡ್ಡಿಮಾಡುತ್ತದೋ ಅದು ನಿಮಗೆ ತಿಳಿದೇ ಇದೆ. ಅಧರ್ಮವು ಈಗಲೂ ಗುಪ್ತ ವಾಗಿ ತನ್ನ ಕಾರ್ಯವನ್ನು ಸಾಧಿಸುತ್ತದೆ; ಆದರೆ ಇದು ವರೆಗೂ ಅಡ್ಡಿಮಾಡುವವನನ್ನು
8 ತೆಗೆದುಬಿಡಲ್ಪಡುವ ತನಕ ಅದು ಗುಪ್ತವಾಗಿಯೇ ಇರುವದು. ಅವನು ತೆಗೆದುಬಿಡ ಲ್ಪಟ್ಟ ಕೂಡಲೆ ಆ ಅಧರ್ಮಸ್ವರೂಪನು ಕಾಣಬರುವನು; ಅವನನ್ನು ಯೇಸುಕರ್ತನು

ತನ್ನ ಬಾಯಿಯ ಉಸುರಿನಿಂದ ಕೊಲ್ಲುವನು, ತನ್ನ ಪ್ರತ್ಯಕ್ಷತೆಯ ಪ್ರಕಾಶದಿಂದ ಸಂಹ ರಿಸುವನು. 9 ಆ ಅಧರ್ಮಸ್ವರೂಪನ ಪ್ರತ್ಯಕ್ಷತೆಯು ಸೈತಾನನ ಮಾಟಕ್ಕನುಗುಣವಾಗಿ ರುವದು. ಅದು ಮೋಸಗೊಳಿಸುವ ಸಕಲವಿಧವಾದ ಮಹತ್ಕಾರ್ಯ ಸೂಚಕಕಾರ್ಯ ಅದ್ಭುತಕಾರ್ಯ ಇವುಗಳಿಂದಲೂ ದುರ್ನೀತಿಯ ಎಲ್ಲಾ ವಂಚನೆಯಿಂದಲೂ ಕೂಡಿ ನಾಶನಮಾರ್ಗದಲ್ಲಿರುವವರಿಗೋಸ್ಕರ ಸಂಭವಿಸುವದು. 10 ಅವರು ಸತ್ಯದ ಮೇಲೆ ಪ್ರೀತಿಯನ್ನಿಡದ ಕಾರಣದಿಂದ ರಕ್ಷಣೆಯನ್ನು ಹೊಂದದೆ ನಾಶವಾಗುತ್ತಾರೆ. 11 ಅದೇ ಕಾರಣದಿಂದ ದೇವರು ಅಸತ್ಯ ನಡಿಸುವ ಭ್ರಮೆಯನ್ನು ಅವರಲ್ಲಿಗೆ ಕಳುಹಿಸಿ, ಆ ಸುಳ್ಳನ್ನು ನಂಬುವದಕ್ಕೆ ಅವರನ್ನು ಬಿಡುತ್ತಾನೆ. 12 ಸತ್ಯವನ್ನು ನಂಬದೆ ಅನೀತಿಯಲ್ಲಿ ಆನಂದಪಡುವವರೆಲ್ಲರೂ ಈ ಪ್ರಕಾರ ನ್ಯಾಯತೀರ್ಪಿಗೆ ಒಳಗಾಗುವರು[1].

#### ಪೌಲನು ಥೆಸಲೋನೀಕದವರಿಗಾಗಿ ಮಾಡುವ ಕೃತಜ್ಞತಾಸ್ತುತಿಯೂ ವಿಜ್ಞಾಪನೆಯೂ.

13 ಕರ್ತನಾದ ಯೇಸು ಪ್ರೀತಿಸಿದ ಸಹೋದರರೇ, ನೀವು ಪವಿತ್ರಾತ್ಮದಿಂದ ಶುದ್ಧೀಕರಿ ಸಲ್ಪಟ್ಟವರಾಗಿ ಸತ್ಯದ ಮೇಲೆ ನಂಬಿಕೆಯನ್ನಿಟ್ಟು ರಕ್ಷಣೆಯನ್ನು ಪಡೆಯುವದಕ್ಕಾಗಿ ದೇವರು ನಿಮ್ಮನ್ನು ಆದಿಯಿಂದ[2] ಆರಿಸಿಕೊಂಡದರಿಂದ ನಾವು ನಿಮ್ಮ ವಿಷಯದಲ್ಲಿ ಯಾವಾಗಲೂ ದೇವರಿಗೆ ಕೃತಜ್ಞತಾಸ್ತುತಿ ಮಾಡುವದಕ್ಕೆ ಬದ್ಧರಾಗಿದ್ದೇವೆ. 14 ನೀವು ಹೀಗೆ ರಕ್ಷಿಸಲ್ಪಟ್ಟು ನಮ್ಮ ಕರ್ತನಾದ ಯೇಸು ಕ್ರಿಸ್ತನ ಪ್ರಭಾವವನ್ನು ಸಂಪಾದಿಸಿಕೊಳ್ಳ ಬೇಕೆಂದು ದೇವರು ನಮ್ಮ ಸುವಾರ್ತೆಯ ಮೂಲಕವಾಗಿ ನಿಮ್ಮನ್ನು ಕರೆದನು. 15 ಹೀಗಿ ರುವದರಿಂದ ಸಹೋದರರೇ, ದೃಢವಾಗಿ ನಿಲ್ಲಿರಿ. ನಾವು ಮಾತಿನಿಂದಾಗಲಿ ಪತ್ರಿಕೆ ಯಿಂದಾಗಲಿ ನಿಮಗೆ ತಿಳಿಸಿದ ಬೋಧನೆಗಳನ್ನು ನೀವು ಭದ್ರವಾಗಿ ಹಿಡಿದುಕೊಂಡಿರ್ರಿ. 16 ಮತ್ತು ನಮ್ಮನ್ನು ಪ್ರೀತಿಸಿ ನಮಗೆ ನಿತ್ಯವಾದ ಆದರಣೆಯನ್ನೂ ಉತ್ತಮವಾದ ನಿರೀಕ್ಷೆ ಯನ್ನೂ ಕೃಪೆಯಿಂದ ಅನುಗ್ರಹಿಸಿದ ನಮ್ಮ ತಂದೆಯಾದ ದೇವರೂ ನಮ್ಮ ಕರ್ತನಾದ ಯೇಸು ಕ್ರಿಸ್ತನೂ 17 ನಿಮ್ಮ ಹೃದಯಗಳನ್ನು ಸಂತೈಸಿ, ಸಕಲ ಸತ್ಕಾರ್ಯದಲ್ಲಿಯೂ ಸದ್ವಾ ಕ್ಯದಲ್ಲಿಯೂ ದೃಢಪಡಿಸಲಿ.

**3** ಕಡೇ ಮಾತೇನಂದರೆ, ಸಹೋದರರೇ, ನಮಗೋಸ್ಕರ ಪ್ರಾರ್ಥನೆಮಾಡಿರಿ. ಕರ್ತನ ವಾಕ್ಯವು ನಿಮ್ಮಲ್ಲಿ ಹಬ್ಬಿದ ಪ್ರಕಾರ ಎಲ್ಲೆಲ್ಲಿಯೂ ಬೇಗನೆ ಹಬ್ಬಿ ಪ್ರಖ್ಯಾತಿ ಹೊಂದುವ ಹಾಗೆಯೂ 2 ದೇವರು ನಮ್ಮನ್ನು ಮೂರ್ಖರಾದ ದುಷ್ಟ ಜನರ ಕೈಯಿಂದ ತಪ್ಪಿಸುವ ಹಾಗೆಯೂ ಪ್ರಾರ್ಥಿಸಿರಿ; ಎಲ್ಲರಲ್ಲಿ ಕ್ರಿಸ್ತನಂಬಿಕೆಯಿಲ್ಲವಲ್ಲಾ. 3 ಆದರೆ ಕರ್ತನು ನಂಬಿ ಗಸ್ತನು; ಆತನು ನಿಮ್ಮನ್ನು ದೃಢಪಡಿಸಿ, ನೀವು ಕೆಡಕನ ಕೈಗೆ ಸಿಕ್ಕದಂತೆ ಕಾಪಾಡು ವನು. 4 ನಾವು ಆಜ್ಞಾಪಿಸುವ ಪ್ರಕಾರ ನೀವು ಮಾಡುತ್ತೀರೆಂತಲೂ ಮುಂದೆಯೂ ಮಾಡುವಿರೆಂತಲೂ ನಿಮ್ಮ ವಿಷಯದಲ್ಲಿ ಕರ್ತನ ಮೂಲಕವಾಗಿ ನಮಗೆ ಭರವಸ ವುಂಟು. 5 ದೇವರ ಪ್ರೀತಿಯಲ್ಲಿಯೂ ಕ್ರಿಸ್ತನ[3] ತಾಳ್ಮೆಯಲ್ಲಿಯೂ ಸೇರುವಂತೆ ಕರ್ತನೇ ನಿಮ್ಮನ್ನು ನಡಿಸಲಿ.

---

[1] ಅಥವಾ, ಒಳಗಾಗಬೇಕೆಂಬುವದೇ ದೇವರ ಉದ್ದೇಶ. [2] ಕೆಲವು ಪ್ರತಿಗಳಲ್ಲಿ — ಪ್ರಥಮಫಲವಾಗಿ ಎಂದು ಬರೆದದೆ. [3] ಅಥವಾ, ಕ್ರಿಸ್ತನನ್ನು ಎದುರುನೋಡುವ.

ಕ್ರೈಸ್ತರು ಕ್ರಮವಾಗಿ ನಡೆದು ಕೆಲಸಮಾಡಿ ಉಪಜೀವನವನ್ನು ಮಾಡಿಕೊಳ್ಳಬೇಕೆಂಬುವ ಬೋಧೆ.

6 ಸಹೋದರರೇ, ನಮ್ಮಿಂದ ಹೊಂದಿದ ಬೋಧನೆಯನ್ನು ಅನುಸರಿಸದೆ ಅಕ್ರಮವಾಗಿ ನಡೆಯುವ ಪ್ರತಿ ಸಹೋದರನಿಗೆ ನೀವು ದೂರವಾಗಿರಬೇಕೆಂದು ನಮ್ಮ ಕರ್ತನಾದ 7 ಯೇಸು ಕ್ರಿಸ್ತನ ಹೆಸರಿನಲ್ಲಿ ನಿಮಗೆ ಆಜ್ಞಾಪಿಸುತ್ತೇವೆ. ನೀವು ನಮ್ಮನ್ನು ಅನುಸರಿಸಿ ಹ್ಯಾಗೆ ನಡೆಯಬೇಕೆಂದು ನೀವೇ ಬಲ್ಲಿರಿ; ನಾವು ನಿಮ್ಮಲ್ಲಿ ಅಕ್ರಮವಾಗಿ ನಡೆಯಲಿಲ್ಲ; 8 ನಾವು ಹಣಕೊಡದೆ ಯಾರ ಬಳಿಯಲ್ಲಿಯೂ ಊಟಮಾಡಲಿಲ್ಲ; ನಿಮ್ಮಲ್ಲಿ ಒಬ್ಬರಿಗೂ ಭಾರವಾಗಬಾರದೆಂದು ಹಗಲಿರುಳು ಕಷ್ಟದಿಂದಲೂ ಪ್ರಯಾಸದಿಂದಲೂ ದುಡಿದು 9 ಜೀವನಮಾಡಿಕೊಂಡೆವು. ನಿಮ್ಮಿಂದ ಪೋಷಣೆ ಹೊಂದುವದಕ್ಕೆ ನಮಗೆ ಹಕ್ಕಿಲ್ಲ ವೆಂದು ಹಾಗೆ ಮಾಡಲಿಲ್ಲ, ನೀವು ನಮ್ಮನ್ನು ಅನುಸರಿಸುವದಕ್ಕಾಗಿ ನಿಮಗೆ ಮಾದರಿ 10 ಯಾಗಿರೋಣವೆಂದೇ ಮಾಡಿದೆವು. ಇದಲ್ಲದೆ ನಾವು ನಿಮ್ಮ ಸಂಗಡ ಇದ್ದಾಗ—ಕೆಲಸ 11 ಮಾಡಲೊಲ್ಲದವನು ಊಟಾ ಮಾಡಬಾರದೆಂದು ನಿಮಗೆ ಆಜ್ಞಾಪಿಸಿದೆವಷ್ಟೆ. ಆದರೆ ನಿಮ್ಮಲ್ಲಿ ಕೆಲವರು ಯಾವ ಕೆಲಸವನ್ನೂ ಮಾಡದೆ ಇತರರ ಕೆಲಸದಲ್ಲಿ ಮಾತ್ರ ತಲೆ 12 ಹಾಕಿ ಅಕ್ರಮವಾಗಿ ನಡೆಯುತ್ತಾರೆಂದು ವರ್ತಮಾನ ಕೇಳಿದ್ದೇವೆ. ಇಂಥವರು ತಮ್ಮ ಕೆಲಸವನ್ನು ನೋಡುತ್ತಾ ತಾವೇ ಸಂಪಾದಿಸಿದ್ದನ್ನು ಊಟಮಾಡಬೇಕೆಂದು ಕರ್ತನಾದ 13 ಯೇಸು ಕ್ರಿಸ್ತನಲ್ಲಿ ನಾವು ಆಜ್ಞಾಪಿಸಿ ಪ್ರಬೋಧಿಸುತ್ತೇವೆ. ಸಹೋದರರೇ, ನೀವಾ 14 ದರೋ ಒಳ್ಳೇದನ್ನು ಮಾಡುವದರಲ್ಲಿ ಬೇಸರಗೊಳ್ಳಬೇಡಿರಿ. ಈ ಪತ್ರಿಕೆಯ ಮೂಲಕ ವಾಗಿ ಹೇಳಿರುವ ನಮ್ಮ ಮಾತಿಗೆ ಯಾವನಾದರೂ ಒಳಗಾಗದಿದ್ದರೆ, ಅವನನ್ನು ಗುರುತು ಇಟ್ಟುಕೊಂಡು, ಅವನಿಗೆ ನಾಚಿಕೆಯಾಗುವಂತೆ ಅವನ ಸಹವಾಸದಲ್ಲಿ ಸೇರ 15 ಬೇಡಿರಿ. ಆದಾಗ್ಯೂ ಅವನನ್ನು ವೈರಿಯೆಂದು ಎಣಿಸದೆ ಸಹೋದರನೆಂದು ಎಣಿಸಿ ಕೊಂಡು ಬುದ್ಧಿಹೇಳಿರಿ.

ಸಮಾಪ್ತಿವಾಕ್ಯಗಳು.

16 ಶಾಂತಿದಾಯಕನಾದ ಕರ್ತನು ತಾನೇ ಸದಾಕಾಲದಲ್ಲಿಯೂ ಸಕಲವಿಧದಲ್ಲಿಯೂ ನಿಮಗೆ ಶಾಂತಿಯನ್ನು ದಯಪಾಲಿಸಲಿ. ಕರ್ತನು ನಿಮ್ಮೆಲ್ಲರೊಂದಿಗೆ ಇರಲಿ.

17 ಪೌಲನೆಂಬ ನಾನು ಸ್ವಂತ ಕೈಯಿಂದ ವಂದನೆಯನ್ನು ಬರೆದಿದ್ದೇನೆ; ಎಲ್ಲಾ ಪತ್ರಿಕೆ ಗಳಲ್ಲಿಯೂ ಇದೇ ಗುರುತು; ಹೀಗೆಯೇ ನನ್ನ ಕೈಬರಹ.

18 ನಮ್ಮ ಕರ್ತನಾದ ಯೇಸು ಕ್ರಿಸ್ತನ ಕೃಪೆಯು ನಿಮ್ಮೆಲ್ಲರ ಸಂಗಡವಿರಲಿ.

# THE FIRST EPISTLE OF SAINT PAUL TO
# TIMOTHY

---

# ಪೌಲನು ತಿಮೊಥೆಯನಿಗೆ
ಬರೆದ
# ಮೊದಲನೇ ಪತ್ರಿಕೆ

ಒಕ್ಕಣೆ.

ನಮ್ಮ ರಕ್ಷಕನಾದ ದೇವರಿಂದಲೂ ನಮ್ಮ ನಿರೀಕ್ಷೆಗೆ ಆಧಾರನಾಗಿರುವ ಕ್ರಿಸ್ತ ಯೇಸು **1** ವಿನಿಂದಲೂ ನೇಮಿಸಲ್ಪಟ್ಟ ಕ್ರಿಸ್ತ ಯೇಸುವಿನ ಅಪೊಸ್ತಲನಾದ ಪೌಲನು ನಂಬಿಕೆಯ 2 ವಿಷಯದಲ್ಲಿ ನಿಜಕುಮಾರನಾಗಿರುವ ತಿಮೊಥೆಯನಿಗೆ ಬರೆಯುವದೇನಂದರೆ—ತಂದೆ ಯಾದ ದೇವರಿಂದಲೂ ನಮ್ಮ ಕರ್ತನಾದ ಕ್ರಿಸ್ತ ಯೇಸುವಿನಿಂದಲೂ ನಿನಗೆ ಕೃಪೆಯೂ ಕರುಣೆಯೂ ಶಾಂತಿಯೂ ಆಗಲಿ.

ತಿಮೊಥೆಯನು ಎಫೆಸದಲ್ಲಿದ್ದುಕೊಂಡು ಸುಳ್ಳುಬೋಧಕರನ್ನು ಎದುರಿಸಿ ಸ್ವಸ್ಥಬೋಧೆಯನ್ನು ಸ್ಥಾಪಿಸಬೇಕೆಂದು ಆಜ್ಞಾಪನೆ.

ನಾನು ಮಕೆದೋನ್ಯಕ್ಕೆ ಹೋಗುತ್ತಿದ್ದಾಗ, ನೀನು ಎಫೆಸದಲ್ಲೇ ಇದ್ದುಕೊಂಡು, 3 ಅಲ್ಲಿರುವ ಕೆಲವರಿಗೆ—ನೀವು ಬೇರೆ ಉಪದೇಶವನ್ನು ಮಾಡಬಾರದೆಂತಲೂ, ಕಲ್ಪನಾಕಥೆ 4 ಗಳಿಗೂ ಕೊನೆಮೊದಲಿಲ್ಲದ ವಂಶಾವಳಿಗಳಿಗೂ ಲಕ್ಷ್ಯಕೊಡಬಾರದೆಂತಲೂ ಆಜ್ಞಾಪಿಸ ಬೇಕೆಂಬದಾಗಿ ನಿನಗೆ ಖಂಡಿತವಾಗಿ ಹೇಳಿದ ಪ್ರಕಾರ, ಈಗಲೂ ಹೇಳುತ್ತೇನೆ. ಅಂಥಾ ಕಥೆಗಳೂ ವಂಶಾವಳಿಗಳೂ ವಿವಾದಕ್ಕೆ ಆಸ್ಪದವಾಗಿವೆಯೇ ಹೊರತು ದೇವರು ನಿರ್ವ ಹಿಸುವ ಕೆಲಸಕ್ಕೆ ಅನುಕೂಲವಾಗಿಲ್ಲ; ಇದರಲ್ಲಿ ನಂಬಿಕೆಯೇ ಮುಖ್ಯವಾದದ್ದು[1]. ಶುದ್ಧಹೃದಯ ಒಳ್ಳೇ ಮನಸ್ಸಾಕ್ಷಿ ನಿಷ್ಕಪಟವಾದ ನಂಬಿಕೆ ಎಂಬಿವುಗಳಿಂದ ಕೂಡಿದ 5

---

[1] ಅಥವಾ, ದೇವನಂಬಿಕೆಯಲ್ಲಿ ಆಧಾರಗೊಂಡಿರುವ ದೇವರ ಸೇವೆಗೆ ಅನುಕೂಲವಾಗಿಲ್ಲ.

6 ಪ್ರೀತಿಯನ್ನು ಹುಟ್ಟಿಸುವದೇ ದೇವವಾಕ್ಯೋಪದೇಶದ ಗುರಿಯಾಗಿದೆ. ಕೆಲವರು ಈ
7 ಗುರಿ ತಪ್ಪಿ ವ್ಯರ್ಥವಾದ ವಿಚಾರಗಳಿಗೆ ಹೋಗಿದ್ದಾರೆ; ಅವರು ಧರ್ಮೋಪದೇಶಕರಾಗಿರ ಬೇಕೆಂದಿದ್ದಾಗ್ಯೂ ತಾವು ಹೇಳುವದಾಗಲಿ ತಾವು ದೃಢವಾಗಿ ಮಾತಾಡುವ ವಿಷಯ
8 ವಾಗಲಿ ಇಂಥಾದ್ದೆಂದು ತಿಳಿಯದವರಾಗಿದ್ದಾರೆ. ಧರ್ಮಶಾಸ್ತ್ರವು ಒಳ್ಳೇದೆಂದು ಬಲ್ಲೆವು;
9 ಆದರೆ ಅದನ್ನು ಅದರ ಉದ್ದೇಶಕ್ಕೆ ತಕ್ಕ ಹಾಗೆ ಉಪಯೋಗಿಸಬೇಕು; ಅಂದರೆ ಅದು ಅಧರ್ಮಿಗಳು ಅವಿಧೇಯರು ಭಕ್ತಿಹೀನರು ಪಾಪಿಷ್ಠರು ದೇವಭಕ್ತಿಯಿಲ್ಲದವರು ಪ್ರಾಪಂಚಿ
10 ಕರು ತಂದೆತಾಯಿಗಳನ್ನು ಹೊಡೆಯುವವರು ನರಹತ್ಯಮಾಡುವವರು ಜಾರರು ವಿಟರು ನರಚೋರರು ಸುಳ್ಳುಗಾರರು ಅಬದ್ಧಪ್ರಮಾಣಿಕರು ಸ್ವಸ್ಥಬೋಧನೆಗೆ ಪ್ರತಿಕೂಲವಾಗಿ ರುವ ಬೇರೆ ಏನಾದರೂ ಇದ್ದರೆ ಅದನ್ನು ಮಾಡುವವರು ಯಾರಿದ್ದಾರೋ ಅಂಥ ಅನೀತಿ ವಂತರಿಗಾಗಿ ನೇಮಕವಾಗಿದೆಯೇ ಹೊರತು ನೀತಿವಂತರಿಗೆ ನೇಮಕವಾಗಿಲ್ಲವೆಂದು
11 ತಿಳಿದು ಉಪಯೋಗಿಸಬೇಕು. ಈ ಬೋಧೆ ಭಾಗ್ಯವಂತನಾದ ದೇವರ ಮಹಿಮೆ ಯನ್ನು ಪ್ರದರ್ಶಿಸುವ ಸುವಾರ್ತೆಗೆ ಅನುಸಾರವಾಗಿದೆ.

12-13 ಈ ಸುವಾರ್ತೆಯ ಸೇವೆಯು ನನಗೆ ಕೊಡಲ್ಪಟ್ಟಿತು. ನನಗೆ ಬಲವನ್ನು ದಯಪಾಲಿಸಿ ದವನು ನಮ್ಮ ಕರ್ತನಾದ ಯೇಸು ಕ್ರಿಸ್ತನೇ. ಮೊದಲು ದೂಷಕನೂ ಹಿಂಸಕನೂ ಬಲಾತ್ಕಾರಿಯೂ ಆಗಿದ್ದ ನನ್ನನ್ನು ಆತನು ನಂಬಿಗಸ್ತನೆಂದು ಎಣಿಸಿ ತನ್ನ ಸೇವೆಗೆ ನೇಮಿ ಸಿಕೊಂಡದ್ದಕ್ಕಾಗಿ ನಾನು ಆತನಿಗೆ ಸ್ತೋತ್ರ ಸಲ್ಲಿಸುತ್ತೇನೆ. ನಾನು ಅವಿಶ್ವಾಸಿಯಾಗಿ
14 ತಿಳಿಯದೆ ಹಾಗೆ ಮಾಡಿದ್ದರಿಂದ, ನನ್ನ ಮೇಲೆ ಕರುಣೆ ಉಂಟಾಯಿತು; ನಮ್ಮ ಕರ್ತನ ಕೃಪೆಯು ಅತ್ಯಧಿಕವಾಗಿದ್ದು ಕ್ರಿಸ್ತ ಯೇಸುವಿನಲ್ಲಿರುವ ನಂಬಿಕೆಯನ್ನೂ ಪ್ರೀತಿಯನ್ನೂ
15 ನನ್ನಲ್ಲಿ ಉಂಟುಮಾಡಿತು. ಕ್ರಿಸ್ತ ಯೇಸು ಪಾಪಿಗಳನ್ನು ರಕ್ಷಿಸುವದಕ್ಕೋಸ್ಕರ ಈ ಲೋಕಕ್ಕೆ ಬಂದನು ಎಂಬ ವಾಕ್ಯವು ನಂಬತಕ್ಕದ್ದಾಗಿಯೂ ಸರ್ವ ಅಂಗೀಕಾರಕ್ಕೆ
16 ಯೋಗ್ಯವಾದದ್ದಾಗಿಯೂ ಅದೆ; ಆ ಪಾಪಿಗಳಲ್ಲಿ ನಾನೇ ಮುಖ್ಯನು. ಇನ್ನು ಮುಂದೆ ನಿತ್ಯಜೀವಕ್ಕಾಗಿ ತನ್ನ ಮೇಲೆ ನಂಬಿಕೆಯಿಡುವವರಿಗೆ ತನ್ನ ದೀರ್ಘಶಾಂತಿಯ ದೃಷ್ಟಾಂತ ವಿರಬೇಕೆಂದು ಕ್ರಿಸ್ತ ಯೇಸು ಮುಖ್ಯ ಪಾಪಿಯಾದ ನನ್ನನ್ನು ಕರುಣಿಸಿ ನನ್ನಲ್ಲಿ ತನ್ನ
17 ಪೂರ್ಣ ದೀರ್ಘಶಾಂತಿಯನ್ನು ತೋರ್ಪಡಿಸಿದನು. ಸರ್ವಯುಗಗಳ ಅರಸನೂ ನಿರ್ಲ ಯನೂ ಅದೃಶ್ಯನೂ ಆಗಿರುವ ಏಕದೇವರಿಗೆ ಮಾನಪ್ರಭಾವಗಳು ಸದಾಕಾಲವಿರಲಿ. ಆಮೆನ್.

18 ಮಗನಾದ ತಿಮೊಥೆಯನೇ, ನಿನ್ನ ವಿಷಯದಲ್ಲಿ ಮುಂಚೆ ಉಂಟಾದ ಪ್ರವಾದನೆ ಗಳನ್ನು ನಾನು ನೆನಸಿ—ನೀನು ಅವುಗಳಿಂದ ಧೈರ್ಯಗೊಂಡು ಕ್ರೈಸ್ತರ ದಿವ್ಯ ಯುದ್ಧ
19 ವನ್ನು ನಡಿಸಬೇಕೆಂದು ನಿನಗೆ ಆಜ್ಞಾಪನೆ ಮಾಡುತ್ತೇನೆ[1]. ನಂಬಿಕೆಯನ್ನೂ ಒಳ್ಳೇ ಮನಸ್ಸಾಕ್ಷಿಯನ್ನೂ ಬಿಡದೆ ಹಿಡುಕೋ. ಕೆಲವರು ಮನಸ್ಸಿನ ಒಳ್ಳೇ ಸಾಕ್ಷಿಯನ್ನು ತಳ್ಳಿಬಿಟ್ಟು, ಕ್ರಿಸ್ತನಂಬಿಕೆಯ ವಿಷಯದಲ್ಲಿ ಹಡಗು ಒಡೆದು ನಷ್ಟಪಟ್ಟವರಂತೆ ಇದ್ದಾರೆ;

---

[1] ಅಥವಾ, ನಿನ್ನ ವಿಷಯದಲ್ಲಿ ಮುಂಚೆ ಉಂಟಾದ ಪ್ರವಾದನೆಗಳಿಂದ ನೀನು ಧೈರ್ಯಗೊಂಡು ಈ ಒಳ್ಳೇ ಯುದ್ಧವನ್ನು ನಡಿಸಬೇಕೆಂದು ನಾನು ಆ ಪ್ರವಾದನೆಗಳನ್ನು ನೆನಸಿ ಈ ಆಜ್ಞಾಪನೆಯನ್ನು ನಿನಗೆ ಒಪ್ಪಿಸಿಕೊಟ್ಟಿದ್ದೇನೆ.

ಹುಮೆನಾಯನೂ ಅಲೆಕ್ಸಾಂದ್ರನೂ ಇಂಥವರೇ; ಇವರು ದೇವದೂಷಣೆ ಮಾಡಬಾರ 20
ದೆಂಬುವದನ್ನು ಕಲಿತುಕೊಳ್ಳುವಂತೆ ಇವರನ್ನು ಸೈತಾನನಿಗೆ ಒಪ್ಪಿಸಿಕೊಟ್ಟೆನು[1].

ಸಭೆಯವರು ಕೂಡುವಾಗ ಸರ್ವಜನಗಳಿಗಾಗಿ ಪ್ರಾರ್ಥಿಸಿ, ಸ್ತ್ರೀಪುರುಷರು ಭಕ್ತಿಪೂರ್ವಕವಾಗಿ ದೇವಾರಾಧನೆಯನ್ನು ನಡಿಸಬೇಕು.

**2** ಎಲ್ಲಾದಕ್ಕಿಂತ ಮೊದಲು ಮನುಷ್ಯರೆಲ್ಲರಿಗೋಸ್ಕರ ದೇವರಿಗೆ ವಿಜ್ಞಾಪನೆಗಳನ್ನೂ ಪ್ರಾರ್ಥನೆಗಳನ್ನೂ ಮನವೆಗಳನ್ನೂ ಕೃತಜ್ಞತಾಸ್ತುತಿಗಳನ್ನೂ ಮಾಡಬೇಕೆಂದು ಬೋಧಿಸುತ್ತೇನೆ. 2 ನಮಗೆ ಸುಖಸಮಾಧಾನಗಳು ಉಂಟಾಗಿ ನಾವು ಪೂರ್ಣ ಭಕ್ತಿಯಿಂದಲೂ ಗೌರವದಿಂದಲೂ ಕಾಲಕ್ಷೇಪಮಾಡುವಂತೆ ಅರಸುಗಳಿಗಾಗಿಯೂ ಎಲ್ಲಾ ಅಧಿಕಾರಿಗಳಿಗಾಗಿಯೂ ವಿಜ್ಞಾಪನೆಗಳನ್ನು ಮಾಡಬೇಕು. 3 ಹಾಗೆ ಮಾಡುವದು ನಮ್ಮ ರಕ್ಷಕನಾದ ದೇವರ ಸನ್ನಿಧಿಯಲ್ಲಿ ಮೆಚ್ಚಿಕೆಯಾಗಿಯೂ ಯೋಗ್ಯವಾಗಿಯೂ ಅದೆ. 4 ಎಲ್ಲಾ ಮನುಷ್ಯರು ರಕ್ಷಣೆಯನ್ನು ಹೊಂದಿ ಸತ್ಯದ ಜ್ಞಾನಕ್ಕೆ ಸೇರಬೇಕೆಂಬುವದು ಆತನ ಚಿತ್ತವಾಗಿದೆ. 5 ಎಲ್ಲರಿಗೂ ದೇವರು ಒಬ್ಬನೇ; ದೇವರಿಗೂ ಮನುಷ್ಯರಿಗೂ ಮಧ್ಯಸ್ಥನು ಒಬ್ಬನೇ; 6 ಆತನು ಮನುಷ್ಯನಾಗಿರುವ ಕ್ರಿಸ್ತ ಯೇಸುವೇ; ಆತನು ಎಲ್ಲರ ವಿಮೋಚನಾರ್ಥವಾಗಿ ತನ್ನನ್ನು ಮರಣಕ್ಕೆ ಒಪ್ಪಿಸಿಕೊಟ್ಟನು. ಇದೇ ತಕ್ಕ ಸಮಯಗಳಲ್ಲಿ ಹೇಳಬೇಕಾದ ಸಾಕ್ಷಿಯು. 7 ಆ ಸಾಕ್ಷಿಯನ್ನು ಪ್ರಸಿದ್ಧಿಪಡಿಸುವದಕ್ಕಾಗಿಯೇ ನಾನು ಸಾರುವವನಾಗಿಯೂ ಅಪೊಸ್ತಲನಾಗಿಯೂ ನಂಬಿಕೆಯಿಂದಲೂ ಸತ್ಯದಿಂದಲೂ ಅನ್ಯಜನರಿಗೆ ಬೋಧಿಸುವವನಾಗಿಯೂ ನೇಮಿಸಲ್ಪಟ್ಟೆನು. ನಾನು ಇಂಥವನೆಂಬುವದು ಸುಳ್ಳಲ್ಲ, ಸತ್ಯವೇ.

8 ಹೀಗಿರಲಾಗಿ ಪುರುಷರು ಎಲ್ಲಾ ಸ್ಥಳಗಳಲ್ಲಿ ಕೋಪವೂ ವಾಗ್ವಾದವೂ ಇಲ್ಲದವರಾಗಿ ಭಕ್ತಿಪೂರ್ವಕವಾಗಿಯೇ ಕೈಗಳನ್ನೆತ್ತಿ ಪ್ರಾರ್ಥಿಸಬೇಕೆಂದು ಅಪೇಕ್ಷಿಸುತ್ತೇನೆ. 9 ಹಾಗೆಯೇ ಸ್ತ್ರೀಯರು ಮಾನಸ್ಥೆಯರಾಗಿಯೂ ಡಂಭವಿಲ್ಲದವರಾಗಿಯೂ ಇದ್ದು ಮರ್ಯಾದೆಗೆ ತಕ್ಕ ಉಡುಪನ್ನುಟ್ಟುಕೊಳ್ಳಬೇಕೆಂದು ಅಪೇಕ್ಷಿಸುತ್ತೇನೆ. ಅವರು ಜಡೆ ಚಿನ್ನ ಮುತ್ತು ಬೆಲೆಯುಳ್ಳ ವಸ್ತ್ರ ಮುಂತಾದವುಗಳಿಂದ ತಮ್ಮನ್ನು ಅಲಂಕರಿಸಿಕೊಳ್ಳದೆ, 10 ದೇವಭಕ್ತೆಯರೆನ್ನಿಸಿಕೊಳ್ಳುವ ಸ್ತ್ರೀಯರಿಗೆ ಯುಕ್ತವಾಗಿರುವ ಪ್ರಕಾರ ಸತ್ಕ್ರಿಯೆಗಳಿಂದಲೇ ಅಲಂಕರಿಸಿಕೊಳ್ಳಬೇಕು. 11 ಸ್ತ್ರೀಯರು ಮೌನವಾಗಿದ್ದು ಪೂರ್ಣ ವಿಧೇಯರಾಗಿ ಉಪದೇಶವನ್ನು ಕೇಳಬೇಕು. 12 ಉಪದೇಶಮಾಡುವದಕ್ಕಾಗಲಿ ಪುರುಷರ ಮೇಲೆ ಅಧಿಕಾರನಡಿಸುವದಕ್ಕಾಗಲಿ ಸ್ತ್ರೀಯರಿಗೆ ನಾನು ಅಪ್ಪಣೆಕೊಡುವದಿಲ್ಲ; ಅವರು ಮೌನವಾಗಿರಬೇಕು. 13 ಮೊದಲು ನಿರ್ಮಿತನಾದವನು ಆದಾಮನಲ್ಲವೇ, ಆ ಮೇಲೆ ಹವ್ವಳು; 14 ಇದಲ್ಲದೆ ಆದಾಮನು ವಂಚನೆಗೆ ಒಳಬೀಳಲಿಲ್ಲ, ಸ್ತ್ರೀಯು ವಂಚನೆಗೆ ಒಳಬಿದ್ದು ಅಪರಾಧಿಯಾದಳು. 15 ಆದಾಗ್ಯೂ ಸ್ತ್ರೀಯರು ಮಾನಸ್ಥೆಯರಾಗಿ ನಂಬಿಕೆಯಲ್ಲಿಯೂ ಪ್ರೀತಿಯಲ್ಲಿಯೂ ಪರಿಶುದ್ಧತೆಯಲ್ಲಿಯೂ ನೆಲೆಗೊಂಡಿದ್ದರೆ, ಮಕ್ಕಳನ್ನು ಹೆರುವದರಲ್ಲಿ ರಕ್ಷಣೆಹೊಂದುವರು.

[1] ೧ ಕೊರಿಂಥ. ೫, ೫.

ಸಭಾಧ್ಯಕ್ಷರೂ ಸಭಾಸೇವಕರೂ ಯೋಗ್ಯರಾಗಿರಬೇಕು.

**3** ಸಭಾಧ್ಯಕ್ಷನ ಉದ್ಯೋಗವನ್ನು ಪಡಕೊಳ್ಳಬೇಕೆಂದಿರುವವನು ಒಳ್ಳೇ ಕೆಲಸವನ್ನು
2 ಅಪೇಕ್ಷಿಸುವವನಾಗಿದ್ದಾನೆಂಬ ಮಾತು ನಂಬತಕ್ಕದ್ದಾಗಿದೆ. ಸಭಾಧ್ಯಕ್ಷನು ದೋಷಾ ರೋಪಣೆಯಿಲ್ಲದವನೂ ಏಕಪತ್ನಿಯುಳ್ಳವನೂ ಮದ್ಯಪಾನಮಾಡದವನೂ ಜಿತೇಂದ್ರಿ ಯನೂ ಮಾನಸ್ಥನೂ ಅತಿಥಿಸತ್ಕಾರಮಾಡುವವನೂ ಬೋಧಿಸುವದರಲ್ಲಿ ಪ್ರವೀಣನೂ
3 ಆಗಿರಬೇಕು. ಅವನು ಕುಡಿದು ಜಗಳವಾಡುವವನೂ ಹೊಡೆದಾಡುವವನೂ ಆಗಿರ
4 ಬಾರದು; ಸಾತ್ವಿಕನೂ ದ್ರವ್ಯಾಶೆಯಿಲ್ಲದವನೂ ಆಗಿರಬೇಕು. ಪೂರ್ಣಗೌರವದಿಂದ ತನ್ನ ಮಕ್ಕಳನ್ನು ಅಧೀನದಲ್ಲಿಟ್ಟುಕೊಂಡು ಸ್ವಂತ ಮನೆಯವರನ್ನು ಚನ್ನಾಗಿ ಆಳುವವನಾ
5 ಗಿರಬೇಕು. ಸ್ವಂತ ಮನೆಯವರನ್ನು ಆಳುವದಕ್ಕೆ ತಿಳಿಯದವನು ದೇವರ ಸಭೆಯನ್ನು
6 ಹ್ಯಾಗೆ ಪರಾಮರಿಸುವನು? ಅವನು ಹೊಸದಾಗಿ ಸಭೆಯಲ್ಲಿ ಸೇರಿದವನಾಗಿರಬಾರದು; ಅಂಥವನಾದರೆ, ಉಬ್ಬಿಕೊಂಡು ಸೈತಾನನಿಗೆ ಪ್ರಾಪ್ತವಾದ ಶಿಕ್ಷಾವಿಧಿಗೆ ಒಳಗಾದಾನು.
7 ಇದಲ್ಲದೆ ಅವನು ಹೊರಗಣವರಿಂದ ಒಳ್ಳೆಯವನೆನ್ನಿಸಿಕೊಂಡಿರಬೇಕು; ಇಲ್ಲದಿದ್ದರೆ ದೂಷಕನ ನಿಂದೆಗೆ ಗುರಿಯಾಗುವನು, ಮತ್ತು ಸೈತಾನನ ಉರ್ಲಿನೊಳಗೆ ಸಿಕ್ಕಿಬಿದ್ದಾನು.
8 ಅದೇ ರೀತಿಯಾಗಿ, ಸಭಾಸೇವಕರು ಗೌರವವುಳ್ಳವರಾಗಿರಬೇಕು. ಅವರು ಎರಡು
9 ಮಾತಿನವರೂ ಮದ್ಯಾಸಕ್ತರೂ ನೀಚಲಾಭವನ್ನು ಅಪೇಕ್ಷಿಸುವವರೂ ಆಗಿರದೆ, ನಂಬಿ ದವರಿಗೆ ಪ್ರಕಟವಾಗಿರುವ ಸತ್ಯಾರ್ಥವನ್ನು ಶುದ್ಧಮನಸ್ಸಾಕ್ಷಿಯಿಂದ ಕೈಕೊಳ್ಳುವವ
10 ರಾಗಿರಬೇಕು. ಇದಲ್ಲದೆ ಅವರು ಮೊದಲು ಪರೀಕ್ಷಿಸಲ್ಪಡಬೇಕು; ತರುವಾಯ ಅವರ ಮೇಲೆ ಯಾರೂ ತಪ್ಪುಹೊರಿಸದಿದ್ದರೆ ಸಭಾಸೇವಕರ ಉದ್ಯೋಗವನ್ನು ನಡಿಸಲಿ.
11 ಹಾಗೆಯೇ ಸಭಾಸೇವಕಿಯರಾದ ಸ್ತ್ರೀಯರೂ[1] ಗೌರವವುಳ್ಳವರಾಗಿರಬೇಕು; ಚಾಡಿ ಹೇಳುವವರಾಗಿರದೆ ಮದ್ಯಪಾನ ಮಾಡದವರಾಗಿಯೂ ಎಲ್ಲಾ ವಿಷಯಗಳಲ್ಲಿ ನಂಬಿಗಸ್ತ
12 ರಾಗಿಯೂ ಇರಬೇಕು. ಸಭಾಸೇವಕರು ಏಕಪತ್ನಿಯುಳ್ಳವರೂ ತಮ್ಮ ಮಕ್ಕಳನ್ನೂ
13 ಮನೆಯವರನ್ನೂ ಚನ್ನಾಗಿ ಆಳುವವರೂ ಆಗಿರಬೇಕು. ಸಭಾಸೇವಕರಾಗಿ ಚನ್ನಾಗಿ ಕೆಲಸಮಾಡಿದವರು ತಮಗೆ ಒಳ್ಳೇ ಪದವಿಯನ್ನೂ ಕ್ರಿಸ್ತ ಯೇಸುವಿನಲ್ಲಿರುವ ನಂಬಿಕೆಯ ಸಂಬಂಧವಾಗಿ ಬಹು ಧೈರ್ಯವನ್ನೂ ಸಂಪಾದಿಸಿಕೊಳ್ಳುತ್ತಾರೆ.
14-15 ಬೇಗನೇ ನಿನ್ನ ಬಳಿಗೆ ಬರುವೆನೆಂದು ನನಗೆ ನಿರೀಕ್ಷೆಯುಂಟು; ಆದರೆ ಒಂದು ವೇಳೆ ನಾನು ತಡಮಾಡಿದರೂ ದೇವರ ಮನೆಯಲ್ಲಿ ಅಂದರೆ ಜೀವಸ್ವರೂಪನಾದ ದೇವರ ಸಭೆ ಯಲ್ಲಿ ನಡೆದುಕೊಳ್ಳಬೇಕಾದ ರೀತಿಯು ನಿನಗೆ ಗೊತ್ತಾಗಬೇಕೆಂದು ಈ ಸಂಗತಿಗಳನ್ನು ಬರೆದಿದ್ದೇನೆ. ಆ ಸಭೆಯು ಸತ್ಯಕ್ಕೆ ಸ್ತಂಭವೂ ಆಧಾರವೂ ಆಗಿದೆ[2].

---

[1] ಅಥವಾ, ಅವರ ಹೆಂಡತಿಯರು. [2] ಅಥವಾ, ಆ ಸಭೆಯಲ್ಲಿ ನೀನು ಸತ್ಯಕ್ಕೆ ಸ್ತಂಭವೂ ಆಧಾರವೂ ಆಗಿರಬೇಕು.

ಸದ್ಧರ್ಮವನ್ನು ಕೆಡಿಸುವವರು ಬರುತ್ತಾರಾದ್ದರಿಂದ ತಿಮೊಥೆಯನು ಎಚ್ಚರಿಕೆಯಾಗಿದ್ದು ಸದ್ಭಕ್ತನಾಗುವದಕ್ಕಾಗಿ ಬಹು ಪ್ರಯಾಸಪಡಬೇಕೆಂದು ಬೋಧೆ.

ದೇವಭಕ್ತಿಗೆ ಆಧಾರವಾಗಿರುವ ಸತ್ಯಾರ್ಥವು ಗಂಭೀರವಾದದ್ದೆಂಬುವದಕ್ಕೆ ನಾವೆಲ್ಲರೂ 16 ಒಪ್ಪಿಕೊಳ್ಳುತ್ತೇವೆ; ಅದೇನಂದರೆ—

ಕ್ರಿಸ್ತನು ಶರೀರಧಾರಿಯಾಗಿ ಪ್ರತ್ಯಕ್ಷನಾದನು;
ಆತ್ಮಸಂಬಂಧವಾಗಿ ಕ್ರಿಸ್ತನೇ ಎಂದು[1] ಸ್ಥಾಪಿಸಲ್ಪಟ್ಟನು;
ದೇವದೂತರಿಗೆ[2] ಕಾಣಿಸಿಕೊಂಡನು;
ಅನ್ಯಜನರಲ್ಲಿ ಪ್ರಸಿದ್ಧಿಮಾಡಲ್ಪಟ್ಟನು;
ಲೋಕದಲ್ಲಿ ನಂಬಲ್ಪಟ್ಟನು;
ಪ್ರಭಾವಸ್ಥಾನದಲ್ಲಿ ಸೇರಿಸಲ್ಪಟ್ಟನು.

ಆದರೂ ಮುಂದಣ ದಿನಗಳಲ್ಲಿ ಕೆಲವರು ವಂಚಿಸುವ ಆತ್ಮಗಳ ನುಡಿಗಳಿಗೂ ದೆವ್ವ **4** ಗಳ ಬೋಧನೆಗಳಿಗೂ ಲಕ್ಷ್ಯಕೊಟ್ಟು ಕ್ರಿಸ್ತನಂಬಿಕೆಯಿಂದ ಭ್ರಷ್ಟರಾಗುವರೆಂದು ದೇವ ರಾತ್ಮವು ಸ್ಪಷ್ಟವಾಗಿ ಹೇಳುತ್ತದೆ. 2 ಸುಳ್ಳುಬೋಧಕರು ಬಂದು, ಸ್ವಂತ ಮನಸ್ಸಿನಲ್ಲಿ ಅಪರಾಧಿಗಳೆಂಬ ಬರೆಯುಳ್ಳವರಾದಾಗ್ಯೂ ತಾವು ನೀತಿವಂತರೆಂದು ತೋರ್ಪಡಿಸಿಕೊಂಡು, 3 ಅವರನ್ನು ಮರುಳುಗೊಳಿಸಿ ಮದುವೆಯಾಗಬಾರದೆಂತಲೂ ಇಂಥಿಂಥಾ ಆಹಾರವನ್ನು ತಿನ್ನಬಾರದೆಂತಲೂ ಹೇಳುವರು. ಆದರೆ ಯಾರು ನಂಬುವವರಾಗಿದ್ದು ಸತ್ಯವನ್ನು ಗ್ರಹಿಸಿದ್ದಾರೋ ಅವರು[3] ಕೃತಜ್ಞತಾಸ್ತುತಿ ಮಾಡಿ ತಿನ್ನುವದಕ್ಕೋಸ್ಕರ ದೇವರು ಸಕಲ ವಿಧವಾದ ಆಹಾರವನ್ನೂ ಉಂಟುಮಾಡಿದನು. 4 ಆತನು ಉಂಟುಮಾಡಿದ್ದೆಲ್ಲವೂ ಒಳ್ಳೇದೇ[4]; ದೇವರ ಸ್ತೋತ್ರಮಾಡಿ ತೆಗೆದುಕೊಳ್ಳುವ ಪಕ್ಷಕ್ಕೆ ಯಾವದನ್ನೂ ನಿಷಿದ್ಧ ವೆಂದು ಹೇಳತಕ್ಕದ್ದಲ್ಲ; 5 ದೇವರ ವಾಕ್ಯವನ್ನು ಹೇಳಿ ಪ್ರಾರ್ಥಿಸುವದರಿಂದ ಅದು ಪವಿತ್ರ ವಾಗುತ್ತದಲ್ಲಾ.

6 ಈ ಸಂಗತಿಗಳನ್ನು ಸಹೋದರರಿಗೆ ತಿಳಿಸಿದರೆ ನೀನು ಅನುಸರಿಸಿರುವ ಕ್ರಿಸ್ತ ನಂಬಿಕೆಯ ಮತ್ತು ಸುಬೋಧನೆಯ ವಾಕ್ಯಗಳಲ್ಲಿ ಅಭ್ಯಾಸಹೊಂದುವವನಾಗಿ ಕ್ರಿಸ್ತ ಯೇಸುವಿನ ಒಳ್ಳೇ ಸೇವಕನಾಗಿರುವಿ. 7 ಅಜ್ಜೀಕಥೆಗಳಂತಿರುವ ಕೇವಲ ಪ್ರಾಪಂಚಿಕವಾದ ಆ ಕಥೆಗಳನ್ನು ತಳ್ಳಿಬಿಟ್ಟು ನೀನು ದೇವಭಕ್ತಿಯ ವಿಷಯದಲ್ಲಿ ಸಾಧನೆಮಾಡಿಕೋ. 8 ದೇಹಸಾಧನೆಯು[5] ಸ್ವಲ್ಪಮಟ್ಟಿಗೆ ಪ್ರಯೋಜನವಾಗಿದೆ, ಭಕ್ತಿಯಾದರೋ ಎಲ್ಲಾ ವಿಧ ದಲ್ಲಿ ಪ್ರಯೋಜನವಾದದ್ದು; ಅದಕ್ಕೆ ಇಹಪರಗಳಲ್ಲಿಯೂ ಜೀವವಾಗ್ದಾನ ಉಂಟು. 9 ಈ ವಾಕ್ಯವು ನಂಬತಕ್ಕದ್ದಾಗಿಯೂ ಸರ್ವ ಅಂಗೀಕಾರಕ್ಕೆ ಯೋಗ್ಯವಾದದ್ದಾಗಿಯೂ ಅದೆ. 10 ಇದಕ್ಕಾಗಿ ನಾವು ಕಷ್ಟಪಡುತ್ತೇವೆ, ಹೋರಾಡುತ್ತೇವೆ, ಯಾಕಂದರೆ ಎಲ್ಲಾ ಮನುಷ್ಯರಿಗೂ, ವಿಶೇಷವಾಗಿ ನಂಬುವವರಿಗೆ, ರಕ್ಷಕನಾಗಿರುವ ಜೀವವುಳ್ಳ ದೇವರ ಮೇಲೆ ನಾವು ನಿರೀಕ್ಷೆಯನ್ನಿಟ್ಟುಕೊಂಡಿದ್ದೇವೆ.

[1] ಅಥವಾ, ನೀತಿವಂತನೆಂದು. [2] ಅಥವಾ, ದೂತರಿಗೆ.
[3] ರೋಮಾ. ೧೪, ೧೪. ೨೦ ನೋಡು. [4] ಉತ್ಪತ್ತಿ ೧, ೩೧. [5] ಅಥವಾ, ದೇಹದಂಡನೆಯು.

11, 12 ಈ ಸಂಗತಿಗಳನ್ನು ಆಜ್ಞಾಪಿಸಬೇಕು ಮತ್ತು ಬೋಧಿಸಬೇಕು. ಯೌವನಸ್ಥನೆಂದು ನಿನ್ನನ್ನು ಅಸಡ್ಡೆಮಾಡುವದಕ್ಕೆ ಯಾರಿಗೂ ಅವಕಾಶಕೊಡದೆ, ನಂಬುವವರಿಗೆ ನಡೆ ನುಡಿ
13 ಪ್ರೀತಿ ನಂಬಿಕೆ ಶುದ್ಧತ್ವ ಇವುಗಳ ವಿಷಯದಲ್ಲಿ ನೀನೇ ಮಾದರಿಯಾಗಿರು. ನಾನು ಬರುವ ತನಕ ವೇದಪಾರಾಯಣವನ್ನೂ ಪ್ರಸಂಗವನ್ನೂ ಉಪದೇಶವನ್ನೂ ಮಾಡುವದರಲ್ಲಿ
14 ಆಸಕ್ತನಾಗಿರು. ನಿನ್ನಲ್ಲಿರುವ ವರವನ್ನು ಅಲಕ್ಷ್ಯಮಾಡಬೇಡ; ಸಭೆಯ ಹಿರಿಯರು ಪ್ರವಾದನೆಯ ಸಹಿತವಾಗಿ ನಿನ್ನ ಮೇಲೆ ಹಸ್ತಗಳನ್ನಿಟ್ಟಾಗ ಅದು ನಿನಗೆ ಕೊಡಲ್ಪಟ್ಟಿ
15 ತಲ್ಲಾ. ಈ ಕಾರ್ಯಗಳನ್ನು ಸಾಧಿಸಿಕೊಳ್ಳುವದರಲ್ಲಿ ಆಸಕ್ತನಾಗಿರು. ಇದರಿಂದ
16 ನಿನ್ನ ಅಭಿವೃದ್ಧಿಯು ಎಲ್ಲರಿಗೂ ಪ್ರಸಿದ್ಧವಾಗುವದು. ನಿನ್ನ ವಿಷಯದಲ್ಲಿಯೂ ನಿನ್ನ ಉಪದೇಶದ ವಿಷಯದಲ್ಲಿಯೂ ಎಚ್ಚರಿಕೆಯಾಗಿರು. ನೀನು ಈ ಕಾರ್ಯಗಳಲ್ಲಿ ನಿರತ ನಾಗಿರು; ಹೀಗಿರುವದರಿಂದ ನಿನ್ನನ್ನೂ ನಿನ್ನ ಉಪದೇಶ ಕೇಳುವವರನ್ನೂ ರಕ್ಷಿಸುವಿ.

ತಿಮೊಥೆಯನು ಸಭೆಯವರೊಳಗೆ ಆಯಾ ತರದವರ ವಿಷಯದಲ್ಲಿ ನಡೆಯಬೇಕಾದ ರೀತಿ;
ವಿಧವೆಯರ ಸಂಬಂಧವಾದ ಕ್ರಮಗಳು.

**5** ವೃದ್ಧನನ್ನು ಗದರಿಸದೆ ತಂದೆಯೆಂದು ಭಾವಿಸಿ ಬುದ್ಧಿ ಹೇಳು. ಯೌವನಸ್ಥರನ್ನು
2 ಅಣ್ಣತಮ್ಮಂದಿರೆಂದೂ, ವೃದ್ಧಸ್ತ್ರೀಯರನ್ನು ತಾಯಿಗಳೆಂದೂ ಯೌವನ ಸ್ತ್ರೀಯರನ್ನು ಪೂರ್ಣ ಶುದ್ಧಭಾವದಿಂದ ಅಕ್ಕತಂಗಿಯರೆಂದೂ ಎಣಿಸಿ, ಅವರವರಿಗೆ ಬುದ್ಧಿಹೇಳು.
3, 4 ದಿಕ್ಕಿಲ್ಲದ ವಿಧವೆಯರನ್ನು ಸಂರಕ್ಷಿಸು. ಆದರೆ ಒಬ್ಬ ವಿಧವೆಗೆ ಮಕ್ಕಳಾಗಲಿ ಮೊಮ್ಮಕ್ಕಳಾಗಲಿ ಇದ್ದರೆ, ಅವರೇ ಮೊದಲು ತಮ್ಮ ಮನೆಯವರಿಗೆ ಭಕ್ತಿ ತೋರಿಸುವದಕ್ಕೂ ತಂದೆತಾಯಿಗಳಿಗೆ ಪ್ರತ್ಯುಪಕಾರಮಾಡುವದಕ್ಕೂ ಕಲಿತುಕೊಳ್ಳಲಿ; ಇದು ದೇವರ ದೃಷ್ಟಿ
5 ಯಲ್ಲಿ ಮೆಚ್ಚಿಕೆಯಾದದ್ದು. ದಿಕ್ಕಿಲ್ಲದೆ ಒಬ್ಬೊಂಟಿಗಳಾಗಿರುವ ವಿಧವೆಯು ದೇವರ ಮೇಲೆ ನಿರೀಕ್ಷೆಯನ್ನಿಟ್ಟು, ಹಗಲಿರುಳು ವಿಜ್ಞಾಪನೆಗಳಲ್ಲಿಯೂ ಪ್ರಾರ್ಥನೆಗಳಲ್ಲಿಯೂ
6 ನೆಲೆಯಾಗಿರುವಳು. ಆದರೆ ಭೋಗಿಯಾಗಿರುವ ವಿಧವೆಯು ಬದುಕಿರುವಾಗಲೂ
7 ಸತ್ತವಳಂತಿದ್ದಾಳೆ. ವಿಧವೆಯರು ನಿಂದೆಗೆ ಗುರಿಯಾಗದಂತೆ ಈ ಆಜ್ಞೆಗಳನ್ನು ಮಾಡು.
8 ಯಾವನಾದರೂ ಸ್ವಂತ ಜನರನ್ನು, ವಿಶೇಷವಾಗಿ ತನ್ನ ಮನೆಯವರನ್ನು, ಸಂರಕ್ಷಿಸದೆ ಹೋದರೆ, ಅವನು ಕ್ರಿಸ್ತನಂಬಿಕೆಯನ್ನು ತಿರಸ್ಕರಿಸಿದವನೂ ನಂಬದವನಿಗಿಂತ ಕಡೆಯಾದ
9 ವನೂ ಆಗಿದ್ದಾನೆ. ವಯಸ್ಸಿನಲ್ಲಿ ಅರವತ್ತಕ್ಕೆ ಕಡಿಮೆಯಿಲ್ಲದ ವಿಧವೆಯನ್ನು ವಿಧವೆಯರ ಪಟ್ಟಿಯಲ್ಲಿ ಸೇರಿಸ ಬಹುದು; ಅಂಥವಳಾದರೂ ಒಬ್ಬ ಗಂಡನಿಗೆ ಮಾತ್ರ ಹೆಂಡತಿ
10 ಯಾಗಿದ್ದವಳೂ ಸತ್ಕ್ರಿಯೆಗಳನ್ನು ಮಾಡುವವಳೆಂದು ಹೆಸರುಗೊಂಡವಳೂ ಆಗಿರಬೇಕು; ಅಂದರೆ ಮಕ್ಕಳನ್ನು ಸಾಕಿದವಳಾಗಲಿ ಅತಿಥಿಸತ್ಕಾರವನ್ನು ಮಾಡಿದವಳಾಗಲಿ ದೇವಜನರಿಗೆ ಉಪಚಾರಮಾಡಿದವಳಾಗಲಿ[1] ಸಂಕಟದಲ್ಲಿ ಬಿದ್ದವರಿಗೆ ಸಹಾಯಮಾಡಿದವಳಾಗಲಿ
11 ಬೇರೆ ಯಾವದಾದರೂ ಸತ್ಕಾರ್ಯವನ್ನು ಮಾಡಿದವಳಾಗಲಿ ಇರಬೇಕು. ಪ್ರಾಯದ ವಿಧವೆಯರನ್ನು ಪಟ್ಟಿಯಲ್ಲಿ ಸೇರಿಸಬೇಡ; ಅವರು ಮದಿಸಿ ಕ್ರಿಸ್ತನಿಗೆ ಒಳಗಾಗಲೊಲ್ಲದೆ

[1] ಮೂಲ: ದೇವಜನರ ಕಾಲುಗಳನ್ನು ತೊಳೆದವಳಾಗಲಿ.

ಮದುವೆಮಾಡಿಕೊಳ್ಳಬೇಕೆಂದು ಇಷ್ಟಪಟ್ಟಾರು. ಅಂಥವರು ತಾವು ಮೊದಲು ಕೊಟ್ಟ 12
ಭರವಸಕ್ಕೆ ತಪ್ಪಿದರೆಂಬ ಅವಮಾನಕ್ಕೊಳಗಾಗಿದ್ದಾರೆ. ಇದಲ್ಲದೆ ಅವರು ಮನೆಮನೆಗೆ 13
ತಿರುಗಾಡುತ್ತಾ ಮೈಗಳ್ಳತನವನ್ನು ಕಲಿಯುತ್ತಾರೆ; ಮೈಗಳ್ಳರಾಗುವದಲ್ಲದೆ, ಹರಟೆ
ಮಾತಾಡುವವರೂ ಇತರರ ಕೆಲಸದಲ್ಲಿ ಕೈಹಾಕುವವರೂ ಆಗಿ, ಆಡಬಾರದ ಮಾತುಗಳ
ನ್ನಾಡುತ್ತಾರೆ. ಆದದರಿಂದ ಪ್ರಾಯದ ವಿಧವೆಯರು ಮದುವೆಮಾಡಿಕೊಂಡು ಮಕ್ಕ 14
ಳನ್ನು ಹೆತ್ತು ಮನೆಯ ಯಜಮಾನಿಯರಾಗಿರುವದು ನನಗೆ ಒಳ್ಳೇದಾಗಿ ತೋಚುತ್ತದೆ;
ಹಾಗೆ ಮಾಡುವದರಿಂದ ವಿರೋಧಿಗಳ ನಿಂದೆಗೆ ಆಸ್ಪದ ಕೊಡದೆ ಇರುವರು. ಇಷ್ಟ 15
ರೊಳಗೆ ಕೆಲವರು ದಾರಿಬಿಟ್ಟು ಸೈತಾನನನ್ನು ಹಿಂಬಾಲಿಸಿದ್ದಾರೆ. ನಂಬುವವಳಾದ 16
ಸ್ತ್ರೀಯ ಅಧೀನದಲ್ಲಿ ವಿಧವೆಯರಿದ್ದರೆ, ಆಕೆಯೇ ಅವರನ್ನು ಸಂರಕ್ಷಿಸಲಿ. ಸಭೆಯು
ದಿಕ್ಕಿಲ್ಲದ ವಿಧವೆಯರಿಗೆ ಸಹಾಯ ಮಾಡಬೇಕಾಗಿರುವದರಿಂದ, ಆಕೆಯು ಆ ಭಾರವನ್ನು
ಅದರ ಮೇಲೆ ಹಾಕಬಾರದು.

### ಹಿರಿಯರ ವಿಷಯದಲ್ಲಿ ನಡೆಯಬೇಕಾದ ರೀತಿ.

ಚನ್ನಾಗಿ ಅಧಿಕಾರ ನಡಿಸುವ ಸಭೆಯ ಹಿರಿಯರನ್ನು, ಅವರೊಳಗೆ ವಿಶೇಷವಾಗಿ ಪ್ರಸಂಗ 17
ದಲ್ಲಿಯೂ ಉಪದೇಶದಲ್ಲಿಯೂ ಕಷ್ಟಪಡುವವರನ್ನು, ಇಮ್ಮಡಿಯಾದ ಮಾನಕ್ಕೆ ಯೋಗ್ಯ
ರೆಂದು ಎಣಿಸಬೇಕು. ಕಣ ತುಳಿಯುವ ಎತ್ತಿನ ಬಾಯಿ ಕಟ್ಟಬಾರದೆಂತಲೂ[1] ದುಡಿ 18
ಯುವವನು ತನ್ನ ಕೂಲಿಗೆ ಯೋಗ್ಯನಾಗಿದ್ದಾನೆಂತಲೂ[2] ಶಾಸ್ತ್ರದಲ್ಲಿ ಹೇಳಿದೆಯಲ್ಲಾ.
ಸಭೆಯ ಹಿರಿಯನ ಮೇಲೆ ಯಾರಾದರೂ ದೂರು ಹೇಳಿದರೆ, ಇಬ್ಬರು ಮೂವರು ಸಾಕ್ಷಿ 19
ಗಳಿದ್ದ ಹೊರತಾಗಿ[3] ಅದನ್ನು ಮನಸ್ಸಿಗೆ ತೆಗೆದುಕೊಳ್ಳಬೇಡ. ಪಾಪದಲ್ಲಿ ನಡೆಯುವವ 20
ರನ್ನು ಎಲ್ಲರ ಮುಂದೆಯೇ ಗದರಿಸು; ಇದರಿಂದ ಮಿಕ್ಕಾದವರಿಗೂ ಭಯ ಉಂಟಾಗು
ವದು. ನೀನು ವಿಚಾರಿಸುವದಕ್ಕೆ ಮೊದಲೇ ತಪ್ಪುಹೊರಿಸದೆಯೂ ಪಕ್ಷಪಾತದಿಂದ 21
ಏನೂ ಮಾಡದೆಯೂ ನಾನು ಹೇಳಿರುವ ಮಾತುಗಳ ಪ್ರಕಾರವೇ ನಡೆಯಬೇಕೆಂದು ದೇವರ
ಮುಂದೆಯೂ ಕ್ರಿಸ್ತ ಯೇಸುವಿನ ಮುಂದೆಯೂ ಆಯಲ್ಪಟ್ಟಿರುವ ದೇವದೂತರ ಮುಂದೆ
ಯೂ ಖಂಡಿತವಾಗಿ ಹೇಳುತ್ತೇನೆ. ಅವಸರದಿಂದ ಯಾರ ತಲೆಯ ಮೇಲೆಯಾದರೂ 22
ಹಸ್ತವನ್ನಿಟ್ಟು ಸಭೆಯ ಉದ್ಯೋಗಕ್ಕೆ ನೇಮಿಸಬೇಡ. ಹಾಗೆ ನೇಮಿಸಿದರೆ, ಮತ್ತೊಬ್ಬರು
ಮಾಡಿದ ಪಾಪದಲ್ಲಿ ನೀನು ಪಾಲುಗಾರನೆಂದು ತೋರಿಬಂದೀತು; ನೀನು ಶುದ್ಧನಾಗಿ
ರುವ ಹಾಗೆ ನೋಡಿಕೋ. ಇನ್ನು ಮೇಲೆ ನೀರನ್ನು ಮಾತ್ರ ಕುಡಿಯದವನಾಗಿರದೆ ನಿನ್ನ 23
ಅಜೀರ್ಣದ ಮತ್ತು ನಿನಗೆ ಆಗ್ಯಾಗ್ಯೆ ಉಂಟಾಗುವ ಅಸ್ವಸ್ಥತೆಯ ಪರಿಹಾರಕ್ಕಾಗಿ ದ್ರಾಕ್ಷಾ
ರಸವನ್ನು ಸ್ವಲ್ಪವಾಗಿ ಕುಡಿಯಬಹುದು. ಕೆಲವರ ಪಾಪಕೃತ್ಯಗಳು ಪ್ರಸಿದ್ಧವಾಗಿದ್ದು 24
ಅವರು ಇಂಥವರೆಂದು ಮೊದಲೇ ತಿಳಿಯಪಡಿಸುತ್ತವೆ; ಬೇರೆ ಕೆಲವರ ಪಾಪಕೃತ್ಯಗಳು
ಮರೆಯಾಗಿದ್ದು ತರುವಾಯ ತಿಳಿದುಬರುತ್ತವೆ. ಹಾಗೆಯೇ ಕೆಲವರ ಸತ್ಕ್ರಿಯೆಗಳು ಪ್ರಸಿ 25
ದ್ಧವಾಗಿವೆ, ಬೇರೆ ಕೆಲವರ ಸತ್ಕ್ರಿಯೆಗಳು ಅಪ್ರಸಿದ್ಧವಾಗಿದ್ದರೂ ಮರೆಯಾಗಿರಲಾರವು.

---

[1] ದ್ವಿತೀಯ ನ್ಯಾಯ ೨೫, ೪. [2] ಲೂಕ ೧೦, ೭ನೇ ವಚನ ನೋಡಿರಿ. [3] ದ್ವಿತೀಯ ನ್ಯಾಯ ೧೯, ೧೫.

ದಾಸರಾಗಿ ಮತ್ತೊಬ್ಬರ ಅಧೀನದಲ್ಲಿರುವ ಕ್ರೈಸ್ತರ ಧರ್ಮ.

**6** ದಾಸರಾಗಿ ಮತ್ತೊಬ್ಬರ ಅಧೀನದಲ್ಲಿರುವವರು ತಮ್ಮ ಯಜಮಾನರನ್ನು ಎಲ್ಲಾ ಮಾನಕ್ಕೂ ಯೋಗ್ಯರೆಂದೆಣಿಸಲಿ; ಇಲ್ಲದಿದ್ದರೆ ದೇವರ ನಾಮಕ್ಕೂ ನಾವು ಹೊಂದಿರುವ 2 ಉಪದೇಶಕ್ಕೂ ನಿಂದೆ ಉಂಟಾದೀತು. ಯಾರಿಗಾದರೂ ಕ್ರಿಸ್ತನನ್ನು ನಂಬುವವರಾದ ಯಜಮಾನರಿದ್ದರೆ, ಅವರು ಆ ಯಜಮಾನರನ್ನು ಸಹೋದರರೆಂದು ಉದಾಸೀನ ಮಾಡದೆ, ತಮ್ಮ ಸೇವೆಯ ಫಲವನ್ನು ಹೊಂದುವವರು ನಂಬುವವರೂ ಪ್ರಿಯರೂ ಆಗಿದ್ದಾರೆಂದು ತಿಳಿದು ಅವರಿಗೆ ಹೆಚ್ಚಾದ ಸಂತೋಷದಿಂದಲೇ ಸೇವೆಮಾಡಬೇಕು. ಈ ಉಪದೇಶವನ್ನು ಮಾಡಿ ಅವರನ್ನು ಎಚ್ಚರಿಸು.

ತಿಮೊಥೆಯನು ತಪ್ಪಾದ ಬೋಧನೆಗೂ ಹಣದಾಸೆಗೂ ದೂರವಾಗಿದ್ದು ಸದ್ಧರ್ಮವನ್ನು ಅನುಸರಿಸುವವನೂ ಬೋಧಿಸುವವನೂ ಆಗಿರಬೇಕೆಂದು ಖಂಡಿತವಾದ ಎಚ್ಚರಿಕೆಯು.

3 ಯಾವನಾದರೂ ಬೇರೆ ವಿಧವಾದ ಉಪದೇಶವನ್ನು ಮಾಡಿ ನಮ್ಮ ಕರ್ತನಾದ ಯೇಸು ಕ್ರಿಸ್ತನ ಸ್ವಸ್ಥವಾದ ಮಾತುಗಳಿಗೂ ಭಕ್ತ್ಯನುಸಾರವಾದ ಉಪದೇಶಕ್ಕೂ ಸಮ್ಮ 4 ತಿಸದೆ ಹೋದರೆ, ಅವನು ಒಂದನ್ನೂ ತಿಳಿಯದೆ ಕುತರ್ಕ ವಾಗ್ವಾದಗಳನ್ನು ಮಾಡುವ ಭ್ರಾಂತಿಯಲ್ಲಿದ್ದು ಮದದಿಂದ ಕಣ್ಣುಗಾಣದವನಾಗಿದ್ದಾನೆ. ಇವುಗಳಿಂದ ಹೊಟ್ಟೇಕಿಚ್ಚು 5 ಜಗಳ ದೂಷಣೆ ದುಸ್ಸಂಶಯ ಇವುಗಳು ಉಂಟಾಗುತ್ತವೆ. ಇದಲ್ಲದೆ ಬುದ್ಧಿಗೆಟ್ಟು ಸತ್ಯ ವಿಹೀನರಾಗಿದ್ದು ದೇವಭಕ್ತಿಯನ್ನು ಲಾಭಸಾಧನವೆಂದೆಣಿಸುವ ಈ ಮನುಷ್ಯರಲ್ಲಿ ನಿತ್ಯ 6 ವಾದ ಕಚ್ಚಾಟಗಳು ಉಂಟಾಗುತ್ತವೆ. ಸಂತುಷ್ಟಿಸಹಿತವಾದ ಭಕ್ತಿಯು ದೊಡ್ಡ 7 ಲಾಭವೇ ಸರಿ. ನಾವು ಲೋಕದೊಳಕ್ಕೆ ಏನೂ ತಕ್ಕೊಂಡು ಬರಲಿಲ್ಲವಷ್ಟೆ; ಅದರೊಳ 8,9 ಗಿಂದ ಏನೂ ತಕ್ಕೊಂಡುಹೋಗಲಾರೆವು. ನಮಗೆ ಅನ್ನವಸ್ತ್ರಗಳಿದ್ದರೆ ಸಾಕು; ಐಶ್ವರ್ಯ ವಂತರಾಗಬೇಕೆಂದು ಮನಸ್ಸುಮಾಡುವವರು ದುಷ್ಪ್ರೇರಣೆಯೆಂಬ ಉರ್ಲಿನಲ್ಲಿ ಸಿಕ್ಕಿ ಕೊಂಡು ಬುದ್ಧಿವಿರುದ್ಧವಾಗಿಯೂ ಹಾನಿಕರವಾಗಿಯೂ ಇರುವ ಅನೇಕ ಆಶೆಗಳಲ್ಲಿ ಬೀಳುತ್ತಾರೆ. ಇಂಥ ಆಶೆಗಳು ಮನುಷ್ಯರನ್ನು ಸಂಹಾರ ನಾಶನಗಳಲ್ಲಿ ಮುಳುಗಿಸು 10 ತ್ತವೆ. ಹಣದಾಸೆಯು ಸಕಲವಿಧವಾದ ಕೆಟ್ಟತನಕ್ಕೆ ಮೂಲವಾಗಿದೆ. ಕೆಲವರು ಹಣ ದಾಸೆಯುಳ್ಳವರಾಗಿದ್ದು ಕ್ರಿಸ್ತನಂಬಿಕೆಯನ್ನು ಬಿಟ್ಟು ಅನೇಕ ವೇದನೆಗಳಿಗೆ ತಮ್ಮನ್ನು ಗುರಿಮಾಡಿಕೊಂಡಿದ್ದಾರೆ.

11 ಎಲೈ, ದೇವರ ಮನುಷ್ಯನೇ, ನೀನಾದರೋ ಇವುಗಳಿಗೆ ದೂರವಾಗಿರು; ನೀತಿ ಭಕ್ತಿ ನಂಬಿಕೆ ಪ್ರೀತಿ ಸ್ಥಿರಚಿತ್ತ ಸಾತ್ವಿಕತ್ವ ಇವುಗಳನ್ನು ಸಂಪಾದಿಸುವದಕ್ಕೆ ಪ್ರಯಾಸಪಡು. 12 ಕ್ರಿಸ್ತನಂಬಿಕೆಯುಳ್ಳವರು ಮಾಡತಕ್ಕ[1] ಶ್ರೇಷ್ಠ ಹೋರಾಟವನ್ನು ಮಾಡು, ನಿತ್ಯಜೀವ ವನ್ನು ಹಿಡಿದುಕೋ; ಅದಕ್ಕಾಗಿ ದೇವರು ನಿನ್ನನ್ನು ಕರೆದನು, ಮತ್ತು ನೀನು ಅನೇಕ 13 ಸಾಕ್ಷಿಗಳ ಮುಂದೆ ಒಳ್ಳೇ ಪ್ರತಿಜ್ಞೆಯನ್ನು ಮಾಡಿದಿಯಲ್ಲಾ. ಸರ್ವಸೃಷ್ಟಿಗೆ ಜೀವಾ

[1] ಮೂಲ: ನಂಬಿಕೆಯ.

ಧಾರಕನಾದ ದೇವರ ಮುಂದೆಯೂ ಪೊಂತ್ಯ ಪಿಲಾತನ ಕಾಲದಲ್ಲಿ[1] ಶ್ರೇಷ್ಠ ಪ್ರತಿಜ್ಞೆಯನ್ನು ತಾನೇ ಸಾಕ್ಷಿಯಾಗಿದ್ದು ಸ್ಥಾಪಿಸಿದ ಕ್ರಿಸ್ತ ಯೇಸುವಿನ ಮುಂದೆಯೂ ನಾನು ನಿನಗೆ ಖಂಡಿತವಾಗಿ ಹೇಳುವದೇನಂದರೆ—ನಮ್ಮ ಕರ್ತನಾದ ಯೇಸು ಕ್ರಿಸ್ತನು ಪ್ರತ್ಯಕ್ಷ 14 ನಾಗುವ ತನಕ ನೀನು ಸುವಾರ್ತೆಯ ವಿಧಿಯನ್ನು ನಿಷ್ಕಳಂಕವಾಗಿಯೂ ನಿಂದಾರಹಿತವಾಗಿಯೂ ಕಾಪಾಡಬೇಕು. ಭಾಗ್ಯವಂತನಾದ ಏಕಾಧಿಪತಿಯು ತನ್ನ ಕ್ಲುಪ್ತ ಸಮಯ 15 ದಲ್ಲೇ ಆತನನ್ನು ಪ್ರತ್ಯಕ್ಷಪಡಿಸುವನು. ಆ ಏಕಾಧಿಪತಿಯು ರಾಜಾಧಿರಾಜನೂ ಕರ್ತರ ಕರ್ತನೂ ತಾನೊಬ್ಬನೇ ಅಮರತ್ವವುಳ್ಳವನೂ ಅಗಮ್ಯವಾದ ಬೆಳಕಿನಲ್ಲಿ ವಾಸಮಾಡು 16 ವವನೂ ಆಗಿದ್ದಾನೆ; ಮನುಷ್ಯರಲ್ಲಿ ಯಾರೂ ಆತನನ್ನು ಕಾಣಲಿಲ್ಲ, ಯಾರೂ ಕಾಣಲಾರರು; ಆತನಿಗೆ ಮಾನವೂ ನಿತ್ಯಪರಾಕ್ರಮವೂ ಇರಲಿ. ಆಮೆನ್.

ಇಹಲೋಕವಿಷಯದಲ್ಲಿ ಐಶ್ವರ್ಯವುಳ್ಳವರು ಅಹಂಕಾರಿಗಳಾಗಿರದೆ, ಅಸ್ಥಿರವಾದ 17 ಐಶ್ವರ್ಯದ ಮೇಲೆ ನಿರೀಕ್ಷೆಯನ್ನಿಡದೆ, ನಮ್ಮ ಅನುಭೋಗಕ್ಕೋಸ್ಕರ ನಮಗೆ ಎಲ್ಲವನ್ನೂ ಹೇರಳವಾಗಿ ದಯಪಾಲಿಸುವ ದೇವರ ಮೇಲೆ ನಿರೀಕ್ಷೆಯನ್ನಿಡಬೇಕೆಂತಲೂ, ವಾಸ್ತವ 18-19 ವಾದ ಜೀವವನ್ನು ಹೊಂದುವದಕ್ಕೋಸ್ಕರ ಅವರು ಒಳ್ಳೇದನ್ನು ಮಾಡುವವರಾಗಿಯೂ ಸತ್ಕಾರ್ಯಗಳಲ್ಲಿ ಐಶ್ವರ್ಯವಂತರಾಗಿಯೂ ದಾನಧರ್ಮಗಳನ್ನು ಮಾಡುವವರಾಗಿಯೂ ಪರೋಪಕಾರ ಮಾಡುವವರಾಗಿಯೂ ಇದ್ದು, ಮುಂದಿನ ಕಾಲಕ್ಕೆ ಒಳ್ಳೇ ಅಸ್ತಿವಾರವಾಗುವಂಥವುಗಳನ್ನು ತಮಗೆ ಕೂಡಿಸಿಟ್ಟುಕೊಳ್ಳಬೇಕೆಂತಲೂ ಅವರಿಗೆ ಆಜ್ಞಾಪಿಸು.

ಎಲೈ ತಿಮೊಥೆಯನೇ, ಜ್ಞಾನೋಪದೇಶವೆಂದು ಸುಳ್ಳಾಗಿ ಹೇಳಿಕೊಳ್ಳುವ ಬೋಧನೆಗೆ 20 ಸಂಬಂಧಪಟ್ಟ ಪ್ರಾಪಂಚಿಕವಾದ ಆ ಹರಟೆಮಾತುಗಳಿಗೂ ವಿವಾದಗಳಿಗೂ ನೀನು ದೂರವಾಗಿದ್ದು ನಿನ್ನ ವಶಕ್ಕೆ ಕೊಟ್ಟಿರುವದನ್ನೇ ಕಾಪಾಡು. ಕೆಲವರು ಆ ಸುಳ್ಳಾದ 21 ಜ್ಞಾನವನ್ನು ಅವಲಂಬಿಸಿ ಕ್ರಿಸ್ತನಂಬಿಕೆಯಿಂದ ಭ್ರಷ್ಟರಾದರು. ಕೃಪೆಯು ನಿಮ್ಮೊಂದಿಗಿರಲಿ.

---

[1] ಅಥವಾ, ಎದುರಿನಲ್ಲಿ.

# THE SECOND EPISTLE OF SAINT PAUL TO
# TIMOTHY

# ಪೌಲನು ತಿಮೊಥೆಯನಿಗೆ

ಬರೆದ

# ಎರಡನೇ ಪತ್ರಿಕೆ

ಒಕ್ಕಣೆ.

**1** ಕ್ರಿಸ್ತ ಯೇಸುವಿನಲ್ಲಿರುವ ಜೀವವಾಗ್ದಾನವನ್ನು ತಿಳಿಯಪಡಿಸುವದಕ್ಕೋಸ್ಕರ ದೇವರ
2 ಚಿತ್ತಾನುಸಾರವಾಗಿ ಕ್ರಿಸ್ತ ಯೇಸುವಿನ ಅಪೊಸ್ತಲನಾದ ಪೌಲನು ತನ್ನ ಪ್ರಿಯ ಕುಮಾರನಾದ ತಿಮೊಥೆಯನಿಗೆ ಬರೆಯುವದೇನಂದರೆ—ತಂದೆಯಾದ ದೇವರಿಂದಲೂ ಕರ್ತನಾದ ಕ್ರಿಸ್ತ ಯೇಸುವಿನಿಂದಲೂ ನಿನಗೆ ಕೃಪೆಯೂ ಕರುಣೆಯೂ ಶಾಂತಿಯೂ ಆಗಲಿ.

ತಿಮೊಥೆಯನು ಸುವಾರ್ತಾಸೇವೆಯಲ್ಲಿ ನಂಬಿಗಸ್ತನಾಗಿರಬೇಕೆಂದು ಬೋಧನೆ.

3 ನಾನು ಹಗಲಿರುಳು ನನ್ನ ಪ್ರಾರ್ಥನೆಗಳಲ್ಲಿ ನಿನ್ನನ್ನು ತಪ್ಪದೆ ಜ್ಞಾಪಿಸಿಕೊಳ್ಳುತ್ತೇನೆ. ಇದಲ್ಲದೆ ನಾನು ಪೂರ್ವಿಕರ ಭಕ್ತಿಮಾರ್ಗವನ್ನೇ ಅನುಸರಿಸಿ ಒಳ್ಳೇ ಮನಸ್ಸಾಕ್ಷಿಯುಳ್ಳ
4 ವನಾಗಿ ಆರಾಧಿಸುವ ದೇವರಿಗೆ ನಿನ್ನ ವಿಷಯವಾಗಿ ಸ್ತೋತ್ರ ಸಲ್ಲಿಸುತ್ತೇನೆ. ನಾನು ನಿನ್ನ ಕಣ್ಣೀರುಗಳನ್ನು ನೆನಪಿಗೆ ತಂದು, ನಿನ್ನನ್ನು ನೋಡಿ ಸಂತೋಷಭರಿತನಾಗಬೇಕೆಂದು
5 ಅಪೇಕ್ಷಿಸುತ್ತೇನೆ. ನಿನ್ನಲ್ಲಿರುವ ನಿಷ್ಕಪಟವಾದ ನಂಬಿಕೆಯು ನನ್ನ ನೆನಪಿಗೆ ಬಂತು. ಆ ನಂಬಿಕೆಯು ನಿನ್ನ ಅಜ್ಜಿಯಾದ ಲೋವಿಯಲ್ಲಿಯೂ ನಿನ್ನ ತಾಯಿಯಾದ ಯೂನೀಕೆಯಲ್ಲಿಯೂ ವಾಸವಾಗಿತ್ತು; ಹಾಗೆಯೇ ನಿನ್ನಲ್ಲಿಯೂ ವಾಸವಾಗಿದೆ ಎಂದು ದೃಢವಾಗಿ ನಂಬಿದ್ದೇನೆ.

6 ಆದಕಾರಣ ನಾನು ನಿನ್ನ ತಲೆಯ ಮೇಲೆ ಹಸ್ತವನ್ನಿಟ್ಟದರ ಮೂಲಕ ನಿನಗೆ ದೊರಕಿದ ದೇವರ ಕೃಪಾವರವು ಪ್ರಜ್ವಲಿಸುವಂತೆ ಮಾಡಬೇಕೆಂದು ನಿನಗೆ ಜ್ಞಾಪಕ ಕೊಡು
7 ತ್ತೇನೆ. ದೇವರು ನಮಗೆ ಕೊಟ್ಟಿರುವ ಆತ್ಮವು ಬಲ ಪ್ರೀತಿ ಶಿಕ್ಷಣಗಳನ್ನು ಹುಟ್ಟಿಸು

ವಂಥಾದ್ದೇ ಹೊರತು ಹೇಡಿತನವನ್ನು ಹುಟ್ಟಿಸುವಂಥಾದ್ದಲ್ಲ. ಆದದರಿಂದ ನೀನು ನಮ್ಮ 8 ಕರ್ತನನ್ನು ಕುರಿತು ಹೇಳುವ ಸಾಕ್ಷಿಯ ವಿಷಯದಲ್ಲಾಗಲಿ ಆತನ ಸೆರೆಯವನಾದ ನನ್ನ ವಿಷಯದಲ್ಲಾಗಲಿ ನಾಚಿಕೆಪಡದೆ, ದೇವರ ಬಲವನ್ನು ಆಶ್ರಯಿಸಿ ನನ್ನೊಂದಿಗೆ ಸುವಾರ್ತೆ ಗೋಸ್ಕರ ಶ್ರಮೆಯನ್ನನುಭವಿಸು. ಆತನು ನಮ್ಮಲ್ಲಿ ಸುಕೃತ್ಯಗಳನ್ನು ನೋಡಿದ್ದರಿಂದಲ್ಲ, 9 ತನ್ನ ಸಂಕಲ್ಪವನ್ನು ಅನುಸರಿಸಿ ಕೃಪೆಯಿಂದಲೇ ನಮ್ಮನ್ನು ರಕ್ಷಿಸಿ ಪರಿಶುದ್ಧರಾಗುವದಕ್ಕೆ ಕರೆದನು. ಆತನು ಅನಾದಿಕಾಲದಲ್ಲಿ ಆ ಕೃಪೆಯನ್ನು ಕ್ರಿಸ್ತ ಯೇಸುವಿನಲ್ಲಿ ನಮಗೆ ಅನು ಗ್ರಹಿಸಿ ಈಗ ನಮ್ಮ ರಕ್ಷಕನಾದ ಕ್ರಿಸ್ತ ಯೇಸುವಿನ ಪ್ರತ್ಯಕ್ಷತೆಯ ಮೂಲಕ ಅದನ್ನು ಪ್ರಕಾಶ ಪಡಿಸಿದ್ದಾನೆ. ಈತನು ಸುವಾರ್ತೆಯ ಮೂಲಕ ಮರಣವನ್ನು ನಿವೃತ್ತಿಮಾಡಿ, ಜೀವ 10 ವನ್ನೂ ನಿರ್ಲಯತ್ವವನ್ನೂ ಪ್ರಕಾಶಗೊಳಿಸಿದನು. ಆ ಸುವಾರ್ತಾಭಿವೃದ್ಧಿಗೋಸ್ಕರ 11 ನಾನು ಸಾರುವವನಾಗಿಯೂ ಅಪೊಸ್ತಲನಾಗಿಯೂ ಉಪದೇಶಕನಾಗಿಯೂ ನೇಮಿಸ ಲ್ಪಟ್ಟೆನು. ಇದರ ನಿಮಿತ್ತದಿಂದಲೇ ಈ ಶ್ರಮೆಗಳನ್ನು ಅನುಭವಿಸುತ್ತಾ ಇದ್ದೇನೆ; 12 ಆದಾಗ್ಯೂ ನಾನು ನಾಚಿಕೆಪಡುವದಿಲ್ಲ; ನಾನು ನಂಬಿರುವಾತನನ್ನು ಬಲ್ಲೆನು. ಆತನು ನನ್ನ[1] ವಶದಲ್ಲಿಟ್ಟಿರುವದನ್ನು ಆತನು ಆ ದಿನಕ್ಕಾಗಿ ಕಾಪಾಡುವದಕ್ಕೆ ಶಕ್ತನಾಗಿದ್ದಾ ನೆಂದು ದೃಢವಾಗಿ ನಂಬಿದ್ದೇನೆ. ನೀನು ಕ್ರಿಸ್ತ ಯೇಸುವಿನಲ್ಲಿ ನಂಬಿಕೆಯೂ ಪ್ರೀತಿಯೂ 13 ಉಳ್ಳವನಾಗಿ ನನ್ನಿಂದ ಕೇಳಿದ ಸ್ವಸ್ಥ ಬೋಧನಾವಾಕ್ಯಗಳನ್ನು ಮಾದಿರಿ ಮಾಡಿಕೊಂಡು ಅನುಸರಿಸು. ನಿನ್ನ ವಶಕ್ಕೆ ಕೊಡಲ್ಪಟ್ಟಿರುವದನ್ನು ಶ್ರೇಷ್ಠವೆಂದು ತಿಳಿದು ನಮ್ಮಲ್ಲಿ 14 ವಾಸವಾಗಿರುವ ಪವಿತ್ರಾತ್ಮನ ಮೂಲಕ ಕಾಪಾಡು.

ಆಸ್ಯಸೀಮೆಯಲ್ಲಿರುವವರೆಲ್ಲರೂ ನನ್ನನ್ನು ಕೈಬಿಟ್ಟರೆಂಬುವದನ್ನು ನೀನು ಬಲ್ಲೆ; ಅವರಲ್ಲಿ 15 ಫುಗೇಲನೂ ಹೆರ್ಮೊಗೇನನೂ ಸೇರಿದ್ದಾರೆ. ಒನೇಸಿಫೊರನ ಮನೆಯವರಿಗೆ ಕರ್ತನು 16 ಕರುಣೆಯನ್ನು ತೋರಿಸಲಿ; ಅವನು ರೋಮಾಪುರಕ್ಕೆ ಬಂದಾಗ ನನ್ನ ಬೇಡಿಗಳಿಗೆ ನಾಚಿಕೆಪಡದೆ ಬಹು ವಿಚಾರಣೆಯಿಂದ ನನ್ನನ್ನು ಹುಡುಕಿ ಕಂಡುಕೊಂಡು ಅನೇಕಾ 17 ವರ್ತಿ ನನಗೆ ಶೈತ್ಯೋಪಚಾರ ಮಾಡಿದನು. ಮತ್ತು ಎಫೆಸದಲ್ಲಿ ಎಷ್ಟೋ ಉಪಚಾರ 18 ಮಾಡಿದನೆಂಬುವದು ನಿನಗೆ ಚನ್ನಾಗಿ ಗೊತ್ತಿದೆ. ಅವನು ಆ ದಿನದಲ್ಲಿ ಕರ್ತನಿಂದ ಕರು ಣೆಯನ್ನು ಹೊಂದುವಂತೆ ಕರ್ತನು ಅವನಿಗೆ ದಯಪಾಲಿಸಲಿ.

ನನ್ನ ಮಗನೇ, ನೀನು ಕ್ರಿಸ್ತ ಯೇಸುವಿನಲ್ಲಿರುವ ಕೃಪೆಯಿಂದ ಬಲಹೊಂದಿದವನಾಗು. **2** ನೀನು ನನ್ನಿಂದ ಅನೇಕ ಸಾಕ್ಷಿಗಳ ಮುಂದೆ ಕೇಳಿದ ಉಪದೇಶವನ್ನು ಇತರರಿಗೆ ಬೋಧಿಸ 2 ಶಕ್ತರಾದ ನಂಬಿಗಸ್ತ ಮನುಷ್ಯರಿಗೆ ಒಪ್ಪಿಸಿಕೊಡು. ಕ್ರಿಸ್ತ ಯೇಸುವಿನ ಒಳ್ಳೇ ಸೈನಿಕ 3 ನಂತೆ ನನ್ನೊಂದಿಗೆ ಶ್ರಮೆಯನ್ನನುಭವಿಸು. ಯುದ್ಧಕ್ಕೆ ಹೋಗುವ ಸೈನಿಕನು ಸಂಸಾರ 4 ವ್ಯಾಪಾರದಲ್ಲಿ ಸಿಕ್ಕಿಕೊಳ್ಳದೆ ತನ್ನನ್ನು ಸೈನ್ಯದಲ್ಲಿ ಸೇರಿಸಿಕೊಂಡವನನ್ನು ಮೆಚ್ಚಿಸುವದಕ್ಕೆ ಪ್ರಯಾಸಪಡುತ್ತಿರುವನಲ್ಲವೇ. ಇದಲ್ಲದೆ ಯಾವನಾದರೂ ರಂಗಸ್ಥಳದಲ್ಲಿ ಎದುರಾಳಿ 5 ನೊಡನೆ ಹೋರಾಡುವಾಗ ನಿಯಮದ ಪ್ರಕಾರ ಹೋರಾಡದಿದ್ದರೆ, ಅವನಿಗೆ ಜಯಮಾ ಲೆಯು ದೊರಕುವದಿಲ್ಲ. ವ್ಯವಸಾಯದ ಹುಟ್ಟುವಳಿಯಲ್ಲಿ ಮೊದಲನೇ ಪಾಲು ಕಷ್ಟ 6

[1] ಅಥವಾ, ನಾನು ಆತನ.

7 ಮಾಡಿದವನಿಗೆ ದೊರೆಯುತ್ತದೆ. ನಾನು ಹೇಳುವದನ್ನು ಯೋಚಿಸು; ಕರ್ತನು ಎಲ್ಲಾದ
8 ರಲ್ಲೂ ನಿನಗೆ ವಿವೇಕವನ್ನು ದಯಪಾಲಿಸುವನು. ಸತ್ತವರೊಳಗಿಂದ ಎಬ್ಬಿಸಲ್ಪಟ್ಟವನೂ
ದಾವೀದನ ವಂಶದವನೂ ಆಗಿರುವ ಯೇಸು ಕ್ರಿಸ್ತನನ್ನು ಜ್ಞಾಪಕಮಾಡಿಕೋ[1]; ಇದೇ
9 ನಾನು ಸಾರುವ ಸುವಾರ್ತೆ. ಇದರಲ್ಲಿ ನಾನು ಕಷ್ಟವನ್ನನುಭವಿಸಿ ದುಷ್ಕರ್ಮಿಯಂತೆ
10 ಸಂಕೋಲೆಯಿಂದ ಕಟ್ಟಲ್ಪಟ್ಟವನಾಗಿದ್ದೇನೆ; ಆದರೆ ದೇವರ ವಾಕ್ಯಕ್ಕೆ ಬಂಧನವಿಲ್ಲ. ಆದ
ಕಾರಣ, ದೇವರಾರಿಸಿಕೊಂಡವರು ನನ್ನ ಕೂಡ ಕ್ರಿಸ್ತ ಯೇಸುವಿನಲ್ಲಿರುವ ರಕ್ಷಣೆಯನ್ನು
ನಿತ್ಯಪ್ರಭಾವ ಸಹಿತವಾಗಿ ಹೊಂದಬೇಕೆಂದು ನಾನು ಅವರಿಗೋಸ್ಕರ ಎಲ್ಲವನ್ನೂ ತಾಳಿ
11 ಕೊಳ್ಳುತ್ತೇನೆ. ಈ ಮಾತು ನಂಬತಕ್ಕದ್ದಾಗಿದೆ, ಏನಂದರೆ—ನಾವು ಆತನೊಡನೆ ಸತ್ತಿ
12 ದ್ದರೆ, ಆತನೊಡನೆ ಜೀವಿಸುವೆವು; ಸಹಿಸಿಕೊಳ್ಳುವವರಾಗಿದ್ದರೆ, ಆತನೊಡನೆ ಆಳು
ವೆವು; ನಾವು ಯೇಸುವಿನವರಲ್ಲವೆಂದು ಹೇಳಿದರೆ, ಆತನು ನಮ್ಮನ್ನು ತನ್ನವರಲ್ಲವೆಂದು
13 ಹೇಳುವನು. ನಾವು ಅಪನಂಬಿಗಸ್ತರಾಗಿದ್ದರೂ ಆತನು ನಂಬಿಗಸ್ತನಾಗಿಯೇ ಇರುವನು;
ತನ್ನ ಸ್ವಭಾವಕ್ಕೆ ವಿರುದ್ಧವಾಗಿ ಏನೂ ಮಾಡಲಾರನು.

ದುರ್ಮಾರ್ಗತನವೂ ದುರ್ಬೋಧನೆಯೂ ಪ್ರಬಲವಾಗಿರುವದರಿಂದ ತಿಮೊಥೆಯನು ಬಹು
ಎಚ್ಚರಿಕೆಯುಳ್ಳವನಾಗಿರಬೇಕೆಂದು ಬೋಧನೆ.

14 ಈ ಸಂಗತಿಗಳನ್ನು ಸಭೆಯವರ ಜ್ಞಾಪಕಕ್ಕೆ ತರಬೇಕು. ಕೇಳುವವರಿಗೆ ಕೇಡನ್ನುಂಟು
ಮಾಡುವದೇ ಹೊರತು ಯಾವ ಪ್ರಯೋಜನಕ್ಕೂ ಬಾರದ ವಾಗ್ವಾದಗಳನ್ನು ಮಾಡ
15 ಬಾರದೆಂದು ಅವರಿಗೆ ದೇವರ ಸನ್ನಿಧಿಯಲ್ಲಿ ಖಂಡಿತವಾಗಿ ಹೇಳು. ನೀನು ದೇವರ
ದೃಷ್ಟಿಗೆ ಯೋಗ್ಯನಾಗಿಯೂ ಕಾಣಿಸಿಕೊಳ್ಳುವದಕ್ಕೆ ಬಹು ಪ್ರಯಾಸಪಡು. ಅವಮಾ
ನಕ್ಕೆ ಗುರಿಯಾಗದ ಕೆಲಸದವನಾಗಿಯೂ ಸತ್ಯವಾಕ್ಯವನ್ನು ಸರಿಯಾಗಿ ಉಪದೇಶಿಸು
16 ವವನಾಗಿಯೂ ಇರು. ಪ್ರಾಪಂಚಿಕವಾದ ಆ ಹರಟೆಮಾತುಗಳಿಗೆ[2] ದೂರವಾಗಿರು;
17 ಅವುಗಳಿಗೆ ಮನಸ್ಸುಕೊಡುವವರು ಹೆಚ್ಚೆಚ್ಚಾಗಿ ಭಕ್ತಿಹೀನರಾಗುವರು. ಅವರ
ಮಾತು ಕೊಳಕು ಹುಣ್ಣಿನಂತೆ ಹರಡಿಕೊಳ್ಳುವದು. ಅವರಲ್ಲಿ ಹುಮೆನಾಯನೂ ಫಿಲೇ
18 ತನೂ ಇದ್ದಾರೆ; ಅವರು ಪುನರುತ್ಥಾನವು ಆಗಿಹೋಯಿತೆಂದು ಹೇಳುತ್ತಾ ಸತ್ಯಭ್ರಷ್ಟ
19 ರಾಗಿ ಕೆಲವರ ನಂಬಿಕೆಯನ್ನು ಕೆಡಿಸುವವರಾಗಿದ್ದಾರೆ. ಆದರೂ ದೇವರ ಸ್ಥಿರವಾದ
ಅಸ್ತಿವಾರವು ನಿಲ್ಲುತ್ತದೆ. ಅದರ ಮೇಲೆ—ತನ್ನವರು ಯಾರ್ಯಾರೆಂಬುವದನ್ನು ಕರ್ತನು
ತಿಳಿದಿದ್ದಾನೆಂತಲೂ[3] ಕರ್ತನ ನಾಮವನ್ನು ಹೇಳಿಕೊಳ್ಳುವವರೆಲ್ಲರು ದುರ್ಮಾರ್ಗತನ
20 ವನ್ನು ಬಿಟ್ಟುಬಿಡಬೇಕೆಂತಲೂ ಲಿಪಿಯುಂಟು. ದೊಡ್ಡ ಮನೆಯಲ್ಲಿ ಬೆಳ್ಳಿಬಂಗಾರದ
ಪಾತ್ರೆಗಳಲ್ಲದೆ, ಮರದ ಪಾತ್ರೆಗಳೂ ಮಣ್ಣಿನ ಪಾತ್ರೆಗಳೂ ಇರುತ್ತವೆ; ಅವುಗಳಲ್ಲಿ
21 ಕೆಲವು ಉತ್ತಮವಾದ ಬಳಿಕೆಗೂ ಕೆಲವು ಹೀನವಾದ ಬಳಿಕೆಗೂ ಬರುತ್ತವೆ. ಹೀಗಿರ
ಲಾಗಿ ಒಬ್ಬನು ಹೀನ ನಡತೆಯುಳ್ಳವರ ಸಹವಾಸವನ್ನು ಬಿಟ್ಟು ತನ್ನನ್ನು ಶುದ್ಧಮಾಡಿ

[1] ಅಥವಾ, ದಾವೀದನ ವಂಶದವನಾದ ಯೇಸು ಕ್ರಿಸ್ತನು ಸತ್ತವರೊಳಗಿಂದ ಎಬ್ಬಿಸಲ್ಪಟ್ಟವನೆಂಬುವದನ್ನು ಜ್ಞಾಪಕಮಾಡಿಕೋ. [2] ೧ ತಿಮೊಥೆ. ೬, ೧೨. [3] ಅಂಕೆ ೧೬, ೫.

ಕೊಂಡರೆ, ಅವನು ಉತ್ತಮವಾದ ಬಳಕೆಗೆ ಯೋಗ್ಯವಾಗಿರುವನು; ಅವನು ದೇವರ ಸೇವೆಗೆ ಪ್ರತಿಷ್ಠಿತನಾಗಿಯೂ ಯಜಮಾನನಿಗೆ ಉಪಯುಕ್ತನಾಗಿಯೂ ಸಕಲ ಸತ್ಕ್ರಿಯೆಗಳನ್ನು ಮಾಡುವದಕ್ಕೆ ಸಿದ್ಧನಾಗಿಯೂ ಇರುವನು.

ನೀನು ಯೌವನದ ಇಚ್ಛೆಗಳಿಗೆ ದೂರವಾಗಿರು; ನೀತಿ ವಿಶ್ವಾಸ ಪ್ರೀತಿಗಳನ್ನು ಸಂಪಾದಿಸುವದಕ್ಕೂ ಶುದ್ಧ ಹೃದಯವುಳ್ಳವರಾಗಿ ಕರ್ತನನ್ನು ಬೇಡಿಕೊಳ್ಳುವವರ ಸಂಗಡ ಸಮಾಧಾನದಿಂದಿರುವದಕ್ಕೂ ಪ್ರಯಾಸಪಡು. 22 ಮೂಢರ ಬುದ್ಧಿಯಿಲ್ಲದ ವಿಚಾರಗಳು ಜಗಳಗಳಿಗೆ ಕಾರಣವಾಗಿವೆ ಎಂದು ತಿಳಿದು ಅವುಗಳ ಗೊಡವೆಗೆ ಹೋಗಬೇಡ. 23 ಕರ್ತನ ದಾಸನು ಜಗಳವಾಡದೆ, ಎಲ್ಲರ ವಿಷಯದಲ್ಲಿ ಸಾಧುವಾಗಿಯೂ ಬೋಧಿಸುವದರಲ್ಲಿ ಪ್ರವೀಣನಾಗಿಯೂ ಕೇಡನ್ನು ಸಹಿಸಿಕೊಳ್ಳುವವನಾಗಿಯೂ, 24 ಎದುರಿಸುವವರನ್ನು ನಿಧಾನದಿಂದ ತಿದ್ದುವವನಾಗಿಯೂ ಇರಬೇಕು. 25 ಒಂದು ವೇಳೆ ದೇವರು ಆ ಎದುರಿಸುವವರ ಮನಸ್ಸನ್ನು ತನ್ನ ಕಡೆಗೆ ತಿರುಗಿಸಿ ಸತ್ಯದ ಜ್ಞಾನವನ್ನು ಅವರಿಗೆ ಕೊಟ್ಟಾನು. ಸೈತಾನನ ಉರ್ಲಿಗೆ ಬಿದ್ದವರಾದ ಇವರು ಒಂದು ವೇಳೆ ತಪ್ಪಿಸಿಕೊಂಡು ದೇವರ ಚಿತ್ತವನ್ನು ಅನುಸರಿಸುವದಕ್ಕೆ ಸ್ವಸ್ಥಚಿತ್ತರಾದಾರು[1]. 26

**3** ಆದರೆ, ಕಡೇ ದಿವಸಗಳಲ್ಲಿ ಕಠಿನ ಕಾಲಗಳು ಬರುವವೆಂಬುವದನ್ನು ತಿಳಿದುಕೋ. 2 ಮನುಷ್ಯರು ಸ್ವಾರ್ಥಚಿಂತಕರೂ ಹಣದಾಸೆಯವರೂ ಬಡಾಯಿಕೊಚ್ಚುವವರೂ ಅಹಂಕಾರಿಗಳೂ ದೂಷಕರೂ ತಂದೆತಾಯಿಗಳಿಗೆ ಅವಿಧೇಯರೂ ಉಪಕಾರನೆನಸದವರೂ ದೇವಭಯವಿಲ್ಲದವರೂ 3 ಮಮತೆಯಿಲ್ಲದವರೂ ಸಮಾಧಾನವಾಗದವರೂ ಚಾಡಿಹೇಳುವವರೂ ದಮೆಯಿಲ್ಲದವರೂ ಉಗ್ರತೆಯುಳ್ಳವರೂ ಒಳ್ಳೇದನ್ನು ಪ್ರೀತಿಸದವರೂ 4 ದ್ರೋಹಿಗಳೂ ದುಡುಕಿನವರೂ ಉಬ್ಬಿಕೊಂಡವರೂ ದೇವರನ್ನು ಪ್ರೀತಿಸದೆ ಭೋಗಗಳನ್ನೇ ಪ್ರೀತಿಸುವವರೂ 5 ಭಕ್ತಿಯ ವೇಷವಿದ್ದು ಅದರ ಬಲವಿಲ್ಲದವರೂ ಆಗಿರುವರು; ಇಂಥವರ ಸಹವಾಸವನ್ನೂ ಮಾಡದಿರು. 6 ಮನೆಗಳಲ್ಲಿ ಸುಸುಳಿ ಪಾಪಗಳಿಂದ ತುಂಬಿದವರಾಗಿಯೂ ನಾನಾ ವಿಧವಾದ ಇಚ್ಛೆಗಳಿಂದ ಪ್ರೇರಿತರಾಗಿಯೂ ಇರುವ ಅವಿವೇಕಿಗಳಾದ ಸ್ತ್ರೀಯರನ್ನು ವಶಮಾಡಿಕೊಳ್ಳುವವರು ಇವರೊಳಗೆ ಸೇರಿದವರೇ. 7 ಆ ಸ್ತ್ರೀಯರು ಯಾವಾಗಲೂ ಉಪದೇಶ ಕೇಳುತ್ತಿದ್ದಾಗ್ಯೂ ಸತ್ಯದ ಪರಿಜ್ಞಾನವನ್ನು ಹೊಂದಲಾರದವರು. 8 ಯನ್ನ ಯಂಬ್ರ ಎಂಬವರು ಮೋಶೆಯನ್ನು ವಿರೋಧಿಸಿದಂತೆಯೇ ಆ ಮನುಷ್ಯರು ಸಹ ಸತ್ಯವನ್ನು ವಿರೋಧಿಸುತ್ತಾರೆ; ಬುದ್ಧಿಗೆಟ್ಟವರಾಗಿಯೂ ಕ್ರಿಸ್ತನಂಬಿಕೆಯಿಂದ ಭ್ರಷ್ಟರಾಗಿಯೂ ಇದ್ದಾರೆ. 9 ಆದರೆ ಅವರ ಪ್ರಯತ್ನವು ಇನ್ನು ಸಾಗುವದಿಲ್ಲ; ಆ ಯನ್ನ ಯಂಬ್ರರ ಮೂರ್ಖತನವು ಎಲ್ಲರಿಗೂ ಪರಿಷ್ಕಾರವಾಗಿ ತಿಳಿದುಬಂದ ಪ್ರಕಾರ ಇವರದೂ ತಿಳಿದು ಬರುವದು. 10 ನೀನಾದರೋ ನನ್ನನ್ನು ಅನುಸರಿಸುವವನಾಗಿದ್ದು ನನ್ನ ಬೋಧನೆ ನಡತೆ 11 ಉದ್ದೇಶ ನಂಬಿಕೆ ದೀರ್ಘಶಾಂತಿ ಪ್ರೀತಿ ಸೈರಣೆ ಇವುಗಳನ್ನೂ, ಅಂತಿಯೋಕ್ಯ ಇಕೋನ್ಯ ಲುಸ್ತ್ರ ಎಂಬ ಪಟ್ಟಣಗಳಲ್ಲಿ ನನಗೆ ಸಂಭವಿಸಿದ ಹಿಂಸೆಗಳನ್ನೂ ಕಷ್ಟಾನುಭವಗಳನ್ನೂ

---

[1] ಅಥವಾ, ಸೈತಾನನ ಉರ್ಲಿಗೆ ಬಿದ್ದು ಅವನ ಚಿತ್ತಕ್ಕೆ ಒಳಗಾಗಿರುವ ಇವರು ಒಂದು ವೇಳೆ ತಪ್ಪಿಸಿಕೊಂಡು ಸ್ವಸ್ಥಚಿತ್ತಕ್ಕೆ ಬಂದಾರು. ಅಥವಾ, ಅವರು ದೇವರ ಚಿತ್ತಕ್ಕೆ ಒಳಗಾಗುವಂತೆ ಕರ್ತನ ದಾಸನಿಂದ ಹಿಡಿಯಲ್ಪಟ್ಟವರಾಗಿ ಸ್ವಸ್ಥಚಿತ್ತಕ್ಕೆ ಬಂದು ಸೈತಾನನ ಉರ್ಲಿನಿಂದ ತಪ್ಪಿಸಿಕೊಂಡಾರು.

ತಿಳಿದವನಾಗಿದ್ದೀ. ನಾನು ಎಂಥೆಂಥಾ ಹಿಂಸೆಗಳನ್ನು ಸಹಿಸಿಕೊಂಡೆನು; ಅವೆಲ್ಲವುಗಳೊ
12 ಳಗಿಂದ ಕರ್ತನು ನನ್ನನ್ನು ಬಿಡಿಸಿದನು. ಕ್ರಿಸ್ತ ಯೇಸುವಿನಲ್ಲಿ ಸದ್ಭಕ್ತರಾಗಿ ಜೀವಿಸು
13 ವದಕ್ಕೆ ಮನಸ್ಸುಮಾಡುವವರೆಲ್ಲರೂ ಹಿಂಸೆಗೊಳಗಾಗುವರು. ಆದರೆ ದುಷ್ಟರೂ ವಂಚ
ಕರೂ ಇತರರನ್ನು ಮೋಸಮಾಡುತ್ತಾ ತಾವೇ ಮೋಸಹೋಗುತ್ತಾ ಹೆಚ್ಚಾದ ಕೆಟ್ಟತನಕ್ಕೆ
14 ಹೋಗುವರು. ನೀನಾದರೋ ಕಲಿತು ದೃಢವಾಗಿ ನಂಬಿದ ಬೋಧನೆಗಳಲ್ಲಿ ನೆಲೆಯಾ
15 ಗಿರು. ಕಲಿಸಿಕೊಟ್ಟವರು ಯಾರೆಂಬುವದನ್ನು ಆಲೋಚಿಸು. ಬಾಲ್ಯದಿಂದಲೇ ನಿನಗೆ
16 ಪರಿಶುದ್ಧ ಗ್ರಂಥಗಳ ಪರಿಚಯವಾಯಿತಲ್ಲಾ. ಆ ಗ್ರಂಥಗಳು ಕ್ರಿಸ್ತ ಯೇಸುವಿನಲ್ಲಿರುವ
ನಂಬಿಕೆಯ ಮೂಲಕ ರಕ್ಷಣೆಹೊಂದಿಸುವ ಜ್ಞಾನವನ್ನು ಕೊಡುವದಕ್ಕೆ ಶಕ್ತವಾಗಿವೆ.
ದೈವಪ್ರೇರಿತವಾದ ಪ್ರತಿಯೊಂದು ಶಾಸ್ತ್ರವು ಉಪದೇಶಕ್ಕೂ ಖಂಡನೆಗೂ ತಿದ್ದುಪಾಟಿಗೂ
17 ನೀತಿಶಿಕ್ಷೆಗೂ ಉಪಯೋಗವಾಗಿದೆ. ಅದರಿಂದ ದೇವರ ಮನುಷ್ಯನು ಪ್ರವೀಣನಾಗಿ
ಸಕಲ ಸತ್ಕಾರ್ಯಕ್ಕೆ ಸನ್ನದ್ಧನಾಗುವನು.

ತನಗೆ ಮರಣಕಾಲ ಸಮೀಪವಾದ್ದರಿಂದ ಪೌಲನು ತಿಮೊಥೆಯನನ್ನು ಖಂಡಿತವಾಗಿ ಎಚ್ಚರಿಸಿ ಸುವಾರ್ತೆಯ ಕೆಲಸವನ್ನು ಅತಿಜಾಗರೂಕತೆಯಿಂದ ನಡಿಸಬೇಕೆಂದು ಬೋಧಿಸಿದ್ದು.

**4** ದೇವರ ಮುಂದೆ ಮತ್ತು ಜೀವಿಸುವವರಿಗೂ ಸತ್ತವರಿಗೂ ನ್ಯಾಯತೀರಿಸುವದಕ್ಕೆ
ಬರುವ ಕ್ರಿಸ್ತ ಯೇಸುವಿನ ಮುಂದೆ ಆತನ ಪ್ರತ್ಯಕ್ಷತೆಯ ಮೇಲೆಯೂ ಆತನ ರಾಜ್ಯದ
2 ಮೇಲೆಯೂ ಆಣೆಯಿಟ್ಟು ನಾನು ನಿನಗೆ ಖಂಡಿತವಾಗಿ ಹೇಳುವದೇನಂದರೆ—ದೇವರ
ವಾಕ್ಯವನ್ನು ಸಾರು, ಅನುಕೂಲವಾದ ಕಾಲದಲ್ಲಿಯೂ ಅನುಕೂಲವಿಲ್ಲದ ಕಾಲದ
ಲ್ಲಿಯೂ ಅದರಲ್ಲಿ ಆಸಕ್ತನಾಗಿರು; ಪೂರ್ಣ ದೀರ್ಘಶಾಂತಿಯಿಂದ ಉಪದೇಶಿಸುತ್ತಾ
3 ಖಂಡಿಸು, ಗದರಿಸು, ಎಚ್ಚರಿಸು. ಯಾಕಂದರೆ ಜನರು ಸ್ವಸ್ಥಬೋಧನೆಯನ್ನು ಸಹಿಸ
ಲಾರದ ಕಾಲವು ಬರುತ್ತದೆ; ಅದರಲ್ಲಿ ಅವರು ತೀಟೇ ಕಿವಿಗಳುಳ್ಳವರಾಗಿ ತಮ್ಮ ದುರಾ
4 ಶೆಗಳಿಗೆ ಅನುಕೂಲರಾದ ಅನೇಕ ಉಪದೇಶಕರನ್ನು ಇಟ್ಟುಕೊಳ್ಳುವರು. ಅವರು ಸತ್ಯ
5 ಬೋಧನೆಗೆ ಕಿವಿಗೊಡದೆ ಕಲ್ಪನಾಕಥೆಗಳನ್ನು ಕೇಳುವದಕ್ಕೆ ಹೋಗುವರು. ಆದರೆ
ನೀನು ಎಲ್ಲಾ ವಿಷಯಗಳಲ್ಲಿ ಸ್ವಸ್ಥಚಿತ್ತನಾಗಿರು, ಶ್ರಮೆಯನ್ನು ತಾಳಿಕೋ, ಸೌವಾರ್ತಿ
ಕನ ಕೆಲಸವನ್ನು ಮಾಡು, ನಿನಗೆ ನೇಮಿಸಿರುವ ಸೇವೆಯನ್ನು ಲೋಪವಿಲ್ಲದೆ ನಡಿಸು.
6 ಯಾಕಂದರೆ ನಾನಂತೂ ಈಗಲೇ ಪಾನದ್ರವ್ಯವಾಗಿ ಅರ್ಪಿತನಾಗುತ್ತಾ ಇದ್ದೇನೆ; ನಾನು
7 ಹೊರಟು ಹೋಗಬೇಕಾದ ಸಮಯವು ಸಮೀಪಕ್ಕೆ ಬಂದದೆ. ಶ್ರೇಷ್ಠ ಹೋರಾಟವನ್ನು
ಮಾಡಿದ್ದೇನೆ, ನನ್ನ ಓಟವನ್ನು ಕಡೆಗಾಣಿಸಿದ್ದೇನೆ, ಕ್ರಿಸ್ತನಂಬಿಕೆಯನ್ನು ಕಾಪಾಡಿಕೊಂಡಿ
8 ದ್ದೇನೆ; ನೀತಿವಂತರಿಗೆ ದೊರಕುವ[1] ಜಯಮಾಲೆಯು ಮುಂದೆ ನನಗೆ ಸಿದ್ಧವಾಗಿದೆ;
ಅದನ್ನು ನೀತಿಯುಳ್ಳ ನ್ಯಾಯಾಧಿಪತಿಯಾಗಿರುವ ಕರ್ತನು ಆ ದಿನದಲ್ಲಿ ನನಗೆ ಕೊಡು
ವನು; ನನಗೆ ಮಾತ್ರವಲ್ಲದೆ, ತನ್ನ ಪ್ರತ್ಯಕ್ಷತೆಯನ್ನು ಪ್ರೀತಿಸುವವರೆಲ್ಲರಿಗೂ ಕೊಡುವನು.

[1] ಮೂಲ: ನೀತಿಯೆಂಬ.

[illegible]

ನನ್ನ ಬಳಿಗೆ ಬೇಗ ಬರುವದಕ್ಕೆ ಪ್ರಯತ್ನಮಾಡು; ಯಾಕಂದರೆ ದೇಮನು ಈ 9,10
ಲೋಕವನ್ನು ಪ್ರೀತಿಸಿ ನನ್ನನ್ನು ಬಿಟ್ಟು ಥೆಸಲೋನಿಕಕ್ಕೆ ಹೋದನು; ಕ್ರೆಸ್ಕನು ಗಲಾ
ತ್ಯಕ್ಕೆ ತೀತನು ದಲ್ಮಾತ್ಯಕ್ಕೆ ಹೋದರು; ಲೂಕನು ಮಾತ್ರ ನನ್ನ ಜೊತೆಯಲ್ಲಿದ್ದಾನೆ.
ಮಾರ್ಕನನ್ನು ಸಂಗಡ ಕರಕೊಂಡು ಬಾ, ಅವನು ನನಗೆ ಸೇವೆಗಾಗಿ ಉಪಯುಕ್ತನಾಗಿ 11
ದ್ದಾನೆ. ತುಖಿಕನನ್ನು ಎಫೆಸಕ್ಕೆ ಕಳುಹಿಸಿದೆನು. ತ್ರೋವದಲ್ಲಿ ನಾನು ಕರ್ಪನ 12,13
ಬಳಿಯಲ್ಲಿ ಬಿಟ್ಟುಬಂದ ಮೇಲಂಗಿಯನ್ನೂ ಪುಸ್ತಕಗಳನ್ನೂ ಮುಖ್ಯವಾಗಿ ಚರ್ಮದ
ಕಾಗದಗಳನ್ನೂ ನೀನು ಬರುವಾಗ ತೆಗೆದುಕೊಂಡು ಬಾ.

ಕಂಚುಗಾರನಾದ ಅಲೆಕ್ಸಾಂದ್ರನು ನನಗೆ ಬಹಳ ಕೇಡುಮಾಡಿದನು; ಕರ್ತನು 14
ಅವನ ಕೃತ್ಯಗಳಿಗೆ ಸರಿಯಾಗಿ ಅವನಿಗೆ ಪ್ರತಿಫಲವನ್ನು ಕೊಡುವನು. ನೀನು ಸಹ ಅವನ 15
ವಿಷಯದಲ್ಲಿ ಎಚ್ಚರಿಕೆಯಾಗಿರು; ಅವನು ನಮ್ಮ ಮಾತುಗಳನ್ನು ಬಹಳವಾಗಿ ಎದುರಿಸಿ
ದನು. ನಾನು ಮೊದಲನೇ ಸಾರಿ ಪ್ರತಿವಾದಮಾಡಿದಾಗ, ಯಾರೂ ನನ್ನ ಕಡೆ ಆಗ 16
ಲಿಲ್ಲ; ಎಲ್ಲರೂ ನನ್ನನ್ನು ಕೈಬಿಟ್ಟರು; ಇದು ಅವರ ಲೆಕ್ಕಕ್ಕೆ ಸೇರಿಸಲ್ಪಡದೆ ಇರಲಿ.
ಆದರೆ ಕರ್ತನು ನನ್ನ ಬಳಿಯಲ್ಲಿ ನಿಂತು ನನ್ನನ್ನು ಬಲಪಡಿಸಿ, ನನ್ನ ಮೂಲಕ ಸುವಾ 17
ರ್ತೆಯು ಸಂಪೂರ್ಣವಾಗಿ ಸಾರಲ್ಪಡುವಂತೆಯೂ ಅನ್ಯಜನರೆಲ್ಲರೂ ಅದನ್ನು ಕೇಳು
ವಂತೆಯೂ ಮಾಡಿದನು; ಇದಲ್ಲದೆ ಆತನು ನನ್ನನ್ನು ಸಿಂಹದ ಬಾಯೊಳಗಿಂದ ತಪ್ಪಿಸಿ
ದನು[1]. ನಾನು ಯಾವ ದುಷ್ಕೃತ್ಯವನ್ನೂ ಮಾಡದಂತೆ ಕರ್ತನು ನನ್ನನ್ನು ಕಾಪಾಡಿ 18
ತನ್ನ ಬಳಿಗೆ ಪರಲೋಕರಾಜ್ಯಕ್ಕೆ ಸೇರಿಸುವನು. ಯುಗಯುಗಾಂತರಗಳಿಗೂ ಆತನಿಗೆ
ಸ್ತೋತ್ರ. ಆಮೆನ್.

ಪ್ರಿಸ್ಕಳಿಗೂ ಅಕ್ವಿಲ್ಲನಿಗೂ ಒನೇಸಿಫೊರನ ಮನೆಯವರಿಗೂ ವಂದನೆಹೇಳು. ಎರ 19,20
ಸ್ತನು ಕೊರಿಂಥದಲ್ಲಿ ನಿಂತನು. ತ್ರೊಫಿಮನು ಅಸೌಖ್ಯವಾಗಿದ್ದದರಿಂದ ಅವನನ್ನು
ಮಿಲೇತದಲ್ಲಿ ಬಿಟ್ಟೆನು. ಚಳಿಗಾಲಕ್ಕೆ ಮುಂಚೆಯೇ ಬರುವದಕ್ಕೆ ಪ್ರಯತ್ನಮಾಡು. 21
ಯುಬೂಲನೂ ಪೂದೆಯನೂ ಲೀನನೂ ಕ್ಲೌದ್ಯಳೂ ಉಳಿದ ಸಹೋದರರೆಲ್ಲರೂ ನಿನಗೆ
ವಂದನೆಹೇಳಿದ್ದಾರೆ.

ಕರ್ತನು ನಿನ್ನ ಆತ್ಮದ ಸಂಗಡ ಇರಲಿ. 22

ಕೃಪೆಯು ನಿಮ್ಮೊಂದಿಗಿರಲಿ.

---

[1] ಅಥವಾ, ನಾನು ಸಿಂಹದ ಬಾಯಿಗೆ ಬೀಳದಂತೆ ಕಾಯಲ್ಪಟ್ಟೆನು; ೧ ಪೇತ್ರ ೫, ೮ ನೋಡು.

# THE EPISTLE OF SAINT PAUL TO TITUS

# ಪೌಲನು ತೀತನಿಗೆ ಬರೆದ ಪತ್ರಿಕೆ

ಒಕ್ಕಣೆ.

**1** 1-4 **ದೇ**ವರ ದಾಸನೂ ಯೇಸು ಕ್ರಿಸ್ತನ ಅಪೊಸ್ತಲನೂ ಆಗಿರುವ ಪೌಲನು ನಮ್ಮೆಲ್ಲರಿಗೆ ಹುದುವಾಗಿರುವ ನಂಬಿಕೆಯ ಸಂಬಂಧದಲ್ಲಿ ನನ್ನ ನಿಜ ಕುಮಾರನಾದ ತೀತನಿಗೆ ಬರೆಯುವದೇನಂದರೆ—ತಂದೆಯಾದ ದೇವರಿಂದಲೂ ನಮ್ಮ ರಕ್ಷಕನಾದ ಯೇಸು ಕ್ರಿಸ್ತನಿಂದಲೂ ನಿನಗೆ ಕೃಪೆಯೂ ಶಾಂತಿಯೂ ಆಗಲಿ. ದೇವರಾದುಕೊಂಡವರ ನಂಬಿಕೆಯೂ ಭಕ್ತಿಯನ್ನುಂಟುಮಾಡುವ ಸತ್ಯದ ಪರಿಜ್ಞಾನವೂ ವೃದ್ಧಿಯಾಗುವದಕ್ಕೋಸ್ಕರವೇ ಅಪೊಸ್ತಲನಾಗಿದ್ದೇನೆ. ಆ ನಂಬಿಕೆಗೂ ಸತ್ಯಪರಿಜ್ಞಾನಕ್ಕೂ ನಿತ್ಯಜೀವದ ನಿರೀಕ್ಷೆಯೇ ಆಧಾರವಾಗಿದೆ. ಸುಳ್ಳಾಡದ ದೇವರು ಆ ನಿತ್ಯಜೀವವನ್ನು ಕೊಡುತ್ತೇನೆಂದು ಅನಾದಿಕಾಲದಲ್ಲಿ ವಾಗ್ದಾನ ಮಾಡಿ ತನ್ನ ಕ್ಲುಪ್ತ ಸಮಯದಲ್ಲಿ ವಾಗ್ದಾನ ನೆರವೇರಿಸಿ ಪ್ರಸಂಗದ ಮೂಲಕ ಪ್ರಕಟಿಸಿದನು. ಆ ಪ್ರಸಂಗೋದ್ಯೋಗವು ನಮ್ಮ ರಕ್ಷಕನಾದ ದೇವರ ಅಪ್ಪಣೆಯ ಪ್ರಕಾರ ನನಗೆ ಒಪ್ಪಿಸಲ್ಪಟ್ಟದೆ.

ಸಭೆಯ ಹಿರಿಯರಲ್ಲಿ ಇರಬೇಕಾದ ಲಕ್ಷಣಗಳು.

5 ನೀನು ಕ್ರೇತದ್ವೀಪದಲ್ಲಿ ಇನ್ನೂ ಕ್ರಮಕ್ಕೆ ಬಾರದಿರುವ ಕಾರ್ಯಗಳನ್ನು ಕ್ರಮಪಡಿಸಿ ಪಟ್ಟಣಪಟ್ಟಣಗಳಲ್ಲೂ ಸಭೆಯ ಹಿರಿಯರನ್ನು ನೇಮಿಸಬೇಕೆಂದು ನಾನು ನಿನಗೆ ಅಪ್ಪಣೆ 6 ಕೊಟ್ಟು ನಿನ್ನನ್ನು ಅಲ್ಲೇ ಬಿಟ್ಟುಬಂದೆನಲ್ಲಾ. ಸಭೆಯ ಹಿರಿಯನು ನಿಂದಾರಹಿತನೂ ಏಕಪತ್ನಿಯುಳ್ಳವನೂ ಆಗಿರಬೇಕು. ಅವನ ಮಕ್ಕಳು ಕರ್ತನನ್ನು ನಂಬಿದವರಾಗಿರಬೇಕು; ಅವರು ದುರ್ಮಾರ್ಗಸ್ಥರೆನ್ನಿಸಿಕೊಂಡವರಾಗಲಿ ಅಧಿಕಾರಕ್ಕೆ ಒಳಗಾಗದವರಾ 7 ಗಲಿ ಇರಬಾರದು. ಯಾಕಂದರೆ ಸಭಾಧ್ಯಕ್ಷನು ದೇವರ ಮನೆವಾರ್ತೆಯವನಾಗಿರುವದರಿಂದ ನಿಂದಾರಹಿತನಾಗಿರಬೇಕು; ಅವನು ಸ್ವೇಚ್ಛಾಪರನಾದರೂ ಮುಂಗೋಪಿಯಾದರೂ ಕುಡಿದು ಜಗಳಮಾಡುವವನಾದರೂ ಹೊಡೆದಾಡುವವನಾದರೂ ನೀಚಲಾಭ 8 ವನ್ನು ಅಪೇಕ್ಷಿಸುವವನಾದರೂ ಆಗಿರದೆ, ಅತಿಥಿಸತ್ಕಾರಮಾಡುವವನೂ ಒಳ್ಳೇದನ್ನು ಪ್ರೀತಿಸುವವನೂ ಸ್ವಸ್ಥಚಿತ್ತನೂ ನ್ಯಾಯವಂತನೂ ದೇವಭಕ್ತನೂ ಜಿತೇಂದ್ರಿಯನೂ

ಆಗಿದ್ದು, ತಾನು ಸ್ವಸ್ಥಬೋಧನೆಯಿಂದ ಜನರನ್ನು ಎಚ್ಚರಿಸುವದಕ್ಕೂ ಎದುರಿಸುವವರ 9
ಬಾಯಿಕಟ್ಟುವದಕ್ಕೂ ಶಕ್ತನಾಗಿರುವಂತೆ, ಕ್ರಿಸ್ತಬೋಧಾನುಸಾರವಾದ ನಂಬತಕ್ಕ
ವಾಕ್ಯವನ್ನು ದೃಢವಾಗಿ ಹಿಡುಕೊಂಡವನಾಗಿರಬೇಕು.

ಅಧಿಕಾರಕ್ಕೆ ಒಳಗಾಗದವರ ವಿಷಯದಲ್ಲಿ ತೀತನು ಮಾಡಬೇಕಾದದ್ದು.

ಅನೇಕರು ಬರೀ ಮಾತಿನವರಾಗಿಯೂ ಮೋಸಗಾರರಾಗಿಯೂ ಇದ್ದು ಅಧಿಕಾರಕ್ಕೆ 10
ಒಳಗಾಗದವರಾಗಿದ್ದಾರೆ; ಅವರೊಳಗೆ ಹೆಚ್ಚು ಜನರು ಸುನ್ನತಿಯವರು. ಅವರು ನೀಚ 11
ಲಾಭವನ್ನು ಹೊಂದುವದಕ್ಕಾಗಿ ಮಾಡಬಾರದ ಉಪದೇಶವನ್ನು ಮಾಡಿ ಕುಟುಂಬ
ಕುಟುಂಬಗಳನ್ನೇ ಹಾಳುಮಾಡುತ್ತಾರಾದ್ದರಿಂದ ಅವರ ಬಾಯಿ ಮುಚ್ಚಿಸಬೇಕಾಗಿದೆ.
ಕ್ರೇತದವರು ಯಾವಾಗಲೂ ಸುಳ್ಳುಗಾರರೂ ದುಷ್ಟಮೃಗಗಳೂ ಸೋಮಾರಿಗಳಾದ 12
ಹೊಟ್ಟೇಬಾಕರೂ ಆಗಿದ್ದಾರೆಂದು ಅವರಲ್ಲಿಯೇ ಹುಟ್ಟಿದ ಒಬ್ಬ ಪ್ರವಾದಿಯು ಹೇಳಿದನು.
ಈ ಸಾಕ್ಷಿಯು ನಿಜವೇ. ಆದಕಾರಣ ಅವರು ಯೆಹೂದ್ಯರ ಕಲ್ಪನಾಕಥೆಗಳಿಗೂ 13-14
ಸತ್ಯಭ್ರಷ್ಟರಾದ ಮನುಷ್ಯರ ವಿಧಿಗಳಿಗೂ ಲಕ್ಷ್ಯಕೊಡದೆ, ಕ್ರಿಸ್ತನಂಬಿಕೆಯಲ್ಲಿ ಸ್ವಸ್ಥಚಿತ್ತ
ರಾಗಿರುವಂತೆ ಅವರನ್ನು ಕಠಿಣವಾಗಿ ಖಂಡಿಸು. ಶುದ್ಧರಿಗೆ ಎಲ್ಲವೂ ಶುದ್ಧವೇ; ಆದರೆ 15
ಮಲಿನವಾದವರಿಗೂ ನಂಬಿಕೆಯಿಲ್ಲದವರಿಗೂ ಯಾವದೂ ಶುದ್ಧವಲ್ಲ; ಅವರ ಬುದ್ಧಿಯೂ
ಮನಸ್ಸಾಕ್ಷಿಯೂ ಎರಡೂ ಮಲಿನವಾಗಿವೆ. ಅವರು ತಾವು ದೇವರನ್ನು ಅರಿತವರೆಂದು 16
ಹೇಳಿಕೊಳ್ಳುತ್ತಾರೆ; ಆದರೆ ಅವರ ಕ್ರಿಯೆಗಳನ್ನು ನೋಡಿದರೆ, ಅವರು ಅಸಹ್ಯರೂ ಅವಿ
ಧೇಯರೂ ಯಾವ ಸತ್ಕಾರ್ಯದ ವಿಷಯದಲ್ಲಿಯೂ ಅಪ್ರಯೋಜಕರೂ ಆಗಿರುವದ
ರಿಂದ ದೇವರನ್ನು ಅರಿಯದವರೇ.

ವೃದ್ಧರೂ ಪ್ರಾಯಸ್ಥರೂ ಸ್ತ್ರೀಪುರುಷರೂ ಎಲ್ಲರೂ ಸುನಡತೆಯುಳ್ಳವರಾಗಿರಬೇಕೆಂಬುವದೇ ಕ್ರೈಸ್ತ ಸದ್ಧರ್ಮದ ಬೋಧನೆ.

ನೀನಾದರೋ ಸ್ವಸ್ಥಬೋಧನೆಗೆ ಅನುಗುಣವಾಗಿ ಉಪದೇಶ ಮಾಡು. ಹ್ಯಾಗಂದರೆ, 2 **2**
ವೃದ್ಧರು ಮದ್ಯಪಾನಮಾಡದವರಾಗಿಯೂ ಗೌರವವುಳ್ಳವರಾಗಿಯೂ ಜಿತೇಂದ್ರಿಯರಾಗಿ
ಯೂ ನಂಬಿಕೆ ಪ್ರೀತಿ ತಾಳ್ಮೆ ಇವುಗಳಲ್ಲಿ ಸ್ವಸ್ಥರಾಗಿಯೂ ಇರಬೇಕೆಂದು ಬೋಧಿಸು.
ಹಾಗೆಯೇ ವೃದ್ಧ ಸ್ತ್ರೀಯರು ಚಾಡಿ ಹೇಳುವವರೂ ಮದ್ಯಪಾನಾಸಕ್ತರೂ ಆಗಿರದೆ, 3
ದೇವಭಕ್ತೆಯರಿಗೆ ಯೋಗ್ಯವಾದ ನಡತೆಯುಳ್ಳವರೂ ಸದ್ಬೋಧನೆ ಹೇಳುವವರೂ ಆಗಿರ
ಬೇಕೆಂದು ಬೋಧಿಸು. ಇದಲ್ಲದೆ ಅವರು ಪ್ರಾಯದ ಸ್ತ್ರೀಯರಿಗೆ—ನಿಮ್ಮ ಮೂಲಕ 4
ದೇವರ ವಾಕ್ಯಕ್ಕೆ ದೂಷಣೆಯಾಗದಂತೆ ನೀವು ಗಂಡಂದಿರನ್ನೂ ಮಕ್ಕಳನ್ನೂ ಪ್ರೀತಿಸು
ವವರಾಗಿಯೂ ದಮೆಯುಳ್ಳವರಾಗಿಯೂ ಪತಿವ್ರತೆಯರಾಗಿಯೂ ಮನೆಯಲ್ಲೇ ಕೆಲಸ 5
ಮಾಡುವವರಾಗಿಯೂ ಸುಶೀಲೆಯರಾಗಿಯೂ ನಿಮ್ಮ ಗಂಡಂದಿರಿಗೆ ಅಧೀನರಾಗಿಯೂ
ಇರಬೇಕೆಂದು ಬುದ್ಧಿಕಲಿಸುವ ಹಾಗೆ ಬೋಧಿಸು. ಹಾಗೆಯೇ ಎಲ್ಲಾ ವಿಷಯಗಳಲ್ಲೂ 6
ಜಿತೇಂದ್ರಿಯರಾಗಿರಬೇಕೆಂದು ನೀನು ಯೌವನಸ್ಥರನ್ನು ಎಚ್ಚರಿಸು. ಸತ್ಕಾರ್ಯ ಮಾಡು 7

ವದರಲ್ಲಿ ನೀನೇ ಮಾದರಿಯಾಗಿರು. ನೀನು ಮಾಡುವ ಉಪದೇಶದಲ್ಲಿ ಯಥಾರ್ಥತ್ವ
8 ವೂ ಗೌರವವೂ ಆಕ್ಷೇಪಣೆಗೆ ಆಸ್ಪದವಿಲ್ಲದಂಥಾ ಸ್ವಸ್ಥಬುದ್ಧಿಯೂ ಇರಬೇಕು; ಆಗ ನಮ್ಮನ್ನು ಎದುರಿಸುವವರು ನಮ್ಮ ವಿಷಯದಲ್ಲಿ ಕೆಟ್ಟದ್ದೇನೂ ಹೇಳುವದಕ್ಕೆ ಅವಕಾಶ
9 ವಿಲ್ಲದೆ ನಾಚಿಕೊಳ್ಳುವರು. ದಾಸರು ಎಲ್ಲಾದರಲ್ಲಿ ತಮ್ಮ ಯಜಮಾನರಿಗೆ ಅಧೀನ ರಾಗಿದ್ದು ಅವರನ್ನು ಮೆಚ್ಚಿಸುವದಕ್ಕೆ ಪ್ರಯಾಸಪಡುತ್ತಾ ಎದುರುಮಾತನ್ನಾಡದೆ ಯಾವ
10 ದನ್ನೂ ಕದ್ದಿಟ್ಟುಕೊಳ್ಳದೆ ಪೂರಾ ನಂಬಿಗಸ್ತರೆಂದು ಹೆಸರುಹೊಂದಿ ನಮ್ಮ ರಕ್ಷಕನಾದ ದೇವರ ಉಪದೇಶಕ್ಕೆ ಎಲ್ಲಾ ವಿಷಯಗಳಲ್ಲಿ ಅಲಂಕಾರವಾಗಿರಬೇಕೆಂದು ಬೋಧಿಸು.
11 ಯಾಕಂದರೆ ಎಲ್ಲಾ ಮನುಷ್ಯರಿಗೆ ರಕ್ಷಣೆಯನ್ನುಂಟುಮಾಡುವ ದೇವರ ಕೃಪೆಯು
12-13 ಪ್ರತ್ಯಕ್ಷವಾಯಿತು; ನಾವು ಭಕ್ತಿಹೀನತೆಯನ್ನೂ ಲೋಕದ ಆಶೆಗಳನ್ನೂ ವಿಸರ್ಜಿಸಿ, ಭಾಗ್ಯಕರವಾದ ನಿರೀಕ್ಷೆಯನ್ನು, ಅಂದರೆ ಮಹಾದೇವರ ಮತ್ತು ನಮ್ಮ ರಕ್ಷಕನಾದ ಯೇಸು ಕ್ರಿಸ್ತನ ಪ್ರಭಾವದ ಪ್ರತ್ಯಕ್ಷತೆಯನ್ನು, ಎದುರುನೋಡುತ್ತಾ ಇಹಲೋಕದಲ್ಲಿ ಸ್ವಸ್ಥಚಿತ್ತರಾಗಿಯೂ ನೀತಿವಂತರಾಗಿಯೂ ಭಕ್ತಿಯುಳ್ಳವರಾಗಿಯೂ ಬದುಕಬೇಕೆಂದು
14 ಅದು ನಮಗೆ ಬೋಧಿಸುತ್ತದೆ. ಆತನು ನಮ್ಮನ್ನು ಸಕಲ ಅಧರ್ಮದಿಂದ ಬಿಡಿಸುವ ದಕ್ಕೂ ಸತ್ಕ್ರಿಯೆಗಳಲ್ಲಿ ಆಸಕ್ತರಾದ ಸ್ವಕೀಯ ಜನರನ್ನು ತನಗಾಗಿ ಪರಿಶುದ್ಧಮಾಡು ವದಕ್ಕೂ ನಮಗೋಸ್ಕರ ತನ್ನನ್ನು ಮರಣಕ್ಕೆ ಒಪ್ಪಿಸಿದನು.
15 ಈ ಕಾರ್ಯಗಳ ವಿಷಯದಲ್ಲಿ ಬೋಧಿಸುತ್ತಾ ಎಚ್ಚರಿಸುತ್ತಾ ಪೂರ್ಣ ಅಧಿಕಾರದಿಂದ ದುರ್ನಡತೆಯನ್ನು ಖಂಡಿಸುತ್ತಾ ಇರು. ಯಾರೂ ನಿನ್ನನ್ನು ತಿರಸ್ಕರಿಸದ ಹಾಗೆ ನೋಡಿಕೋ.

**3** ಅಧಿಪತಿಗಳಿಗೂ ಅಧಿಕಾರಿಗಳಿಗೂ ಅಧೀನರಾಗಿ ವಿಧೇಯರಾಗಿರಬೇಕೆಂತಲೂ ಸಕಲ
2 ಸತ್ಕಾರ್ಯಗಳನ್ನು ಮಾಡುವದಕ್ಕೆ ಸಿದ್ಧರಾಗಿರಬೇಕೆಂತಲೂ, ಯಾರನ್ನೂ ದೂಷಿಸದೆ, ಜಗಳವಾಡದೆ, ಎಲ್ಲಾ ಮನುಷ್ಯರಿಗೆ ಪೂರ್ಣ ಸಾಧುಗುಣವನ್ನು ತೋರಿಸುತ್ತಾ ಸಾತ್ವಿಕ
3 ರಾಗಿರಬೇಕೆಂತಲೂ ಅವರಿಗೆ ಜ್ಞಾಪಕಕೊಡು. ನಾವು ಸಹ ಮೊದಲು ಅವಿವೇಕಿಗಳೂ ಅವಿಧೇಯರೂ ಮೋಸಹೋದವರೂ ನಾನಾ ವಿಧವಾದ ದುರಾಶೆಗಳಿಗೆ ಮತ್ತು ಭೋಗ ಗಳಿಗೆ ಅಧೀನರೂ ಕೆಟ್ಟತನ ಹೊಟ್ಟೇಕಿಚ್ಚುಗಳಲ್ಲಿ ಕಾಲಕಳೆಯುವವರೂ ಅಸಹ್ಯರೂ
4 ಒಬ್ಬರನ್ನೊಬ್ಬರು ಹಗೆಮಾಡುವವರೂ ಆಗಿದ್ದೆವು. ಆದರೆ ನಮ್ಮ ರಕ್ಷಕನಾದ ದೇವರ
5 ದಯೆಯೂ ಜನೋಪಕಾರವೂ ಪ್ರತ್ಯಕ್ಷವಾದಾಗ, ನಾವು ಮಾಡಿದ ಪುಣ್ಯಕ್ರಿಯೆಗಳ ನಿಮಿತ್ತದಿಂದಲ್ಲ ಆತನ ಕರುಣೆಯಲ್ಲಿಯೇ ಪುನರ್ಜನ್ಮವನ್ನು ಸೂಚಿಸುವ ಸ್ನಾನದ ಮೂಲಕವಾಗಿಯೂ ಪವಿತ್ರಾತ್ಮನು ನಮ್ಮಲ್ಲಿ ನೂತನ ಸ್ವಭಾವವನ್ನು ಉಂಟುಮಾಡುವ
7 ದರ ಮೂಲಕವಾಗಿಯೂ ಆತನು ನಮ್ಮನ್ನು ರಕ್ಷಿಸಿದನು. ನಾವು ನಮ್ಮ ರಕ್ಷಕನಾದ ಯೇಸು ಕ್ರಿಸ್ತನ ಕೃಪೆಯಿಂದ ನೀತಿವಂತರೆಂದು ನಿರ್ಣಯಿಸಲ್ಪಟ್ಟು ನಿತ್ಯಜೀವದ ನಿರೀಕ್ಷೆ
6 ಯನ್ನು ಪಡೆದು ಅದಕ್ಕೆ ಬಾಧ್ಯರಾಗುವಂತೆ ದೇವರು ಆತನ ಮೂಲಕ ಪವಿತ್ರಾತ್ಮವನ್ನು
8 ನಮ್ಮ ಮೇಲೆ ಸಮೃದ್ಧಿಯಾಗಿ ಸುರಿಸಿದನು. ಇದು ನಂಬತಕ್ಕ ಮಾತಾಗಿದೆ; ದೇವರಲ್ಲಿ ನಂಬಿಕೆ ಇಟ್ಟಿರುವವರು ಸತ್ಕ್ರಿಯೆಗಳನ್ನು ಮಾಡುವದರಲ್ಲಿ ಜಾಗರೂಕರಾಗಿರುವಂತೆ, ನೀನು ಈ ಎಲ್ಲಾ ಮಾತುಗಳನ್ನು ದೃಢವಾಗಿ ಹೇಳಬೇಕೆಂದು ಅಪೇಕ್ಷಿಸುತ್ತೇನೆ. ಇವು

ಉತ್ತಮವಾಗಿಯೂ ಮನುಷ್ಯರಿಗೆ ಪ್ರಯೋಜನಕರವಾಗಿಯೂ ಅವೆ. ಆದರೆ ಬುದ್ಧಿ 9 ಯಿಲ್ಲದ ವಿತರ್ಕಗಳಿಗೂ ವಂಶಾವಳಿಗಳಿಗೂ ಜಗಳಗಳಿಗೂ ಧರ್ಮಶಾಸ್ತ್ರದ ವಿಷಯ ವಾದ ವಾಗ್ವಾದಗಳಿಗೂ ದೂರವಾಗಿರು; ಅವು ನಿಷ್ಪ್ರಯೋಜನವಾಗಿಯೂ ವ್ಯರ್ಥವಾ ಗಿಯೂ ಅವೆ. ಸಭೆಯಲ್ಲಿ ಭೇದ ಹುಟ್ಟಿಸುವ ಮನುಷ್ಯನನ್ನು ಎರಡು ಸಾರಿ ಬುದ್ಧಿ 10 ಹೇಳಿದ ಮೇಲೆ ಬಿಟ್ಟುಬಿಡು; ಅಂಥವನು ಸನ್ಮಾರ್ಗತಪ್ಪಿದವನೂ ಪಾಪಮಾಡುವವನೂ 11 ಆಗಿದ್ದಾನೆ; ತಾನು ಶಿಕ್ಷಾಪಾತ್ರನೆಂದು ಅವನ ಮನಸ್ಸೇ ನಿರ್ಣಯಿಸುವದು.

### ಕಡೇ ಮಾತುಗಳು.

ನಾನು ನಿಕೊಪೊಲಿಯಲ್ಲಿ ಚಳಿಗಾಲವನ್ನು ಕಳೆಯಬೇಕೆಂದು ನಿಶ್ಚಯಿಸಿಕೊಂಡದರಿಂದ 12 ಅರ್ತೆಮನನ್ನಾಗಲಿ ತುಖಿಕನನ್ನಾಗಲಿ ನಿನ್ನ ಬಳಿಗೆ ಕಳುಹಿಸಿದ ಕೂಡಲೆ ಅಲ್ಲಿಗೆ ನನ್ನ ಹತ್ತರ ಬರುವದಕ್ಕೆ ಪ್ರಯತ್ನಮಾಡು. ನ್ಯಾಯಶಾಸ್ತ್ರಿ ಜೇನನನ್ನೂ ಅಪೊಲ್ಲೋಸನನ್ನೂ 13 ಜಾಗ್ರತೆಯಾಗಿ ಸಾಗಕಳುಹಿಸು; ಅವರಿಗೇನೂ ಕೊರತೆಯಾಗಬಾರದು. ನಮ್ಮ ಜನರು 14 ಸತ್ಕ್ರಿಯಾಹೀನರಾಗದಂತೆ ಅವರೂ ಸಹೋದರರಿಗೆ ಬೇಕಾದದ್ದನ್ನು ಕೊಡುವವರಾಗಿ ಪರೋಪಕಾರವನ್ನು ಕಲಿತುಕೊಳ್ಳಲಿ.

ನನ್ನೊಂದಿಗಿರುವವರೆಲ್ಲರೂ ನಿನಗೆ ವಂದನೆ ಹೇಳುತ್ತಾರೆ. ಕ್ರಿಸ್ತನನ್ನು ನಂಬುವವ 15 ರಾಗಿ ನಮ್ಮನ್ನು ಪ್ರೀತಿಸುವವರಿಗೆ ವಂದನೆ ಹೇಳು.

ಕೃಪೆಯು ನಿಮ್ಮೆಲ್ಲರ ಮೇಲೆ ಇರಲಿ.



THE EPISTLE OF SAINT PAUL TO PHILEMON

# ಪೌಲನು ಫಿಲೆಮೋನನಿಗೆ ಬರೆದ ಪತ್ರಿಕೆ

### ಒಕ್ಕಣೆ.

1 ಕ್ರಿಸ್ತ ಯೇಸುವಿನ ಸೆರೆಯವನಾಗಿರುವ ಪೌಲನೂ ಸಹೋದರನಾದ ತಿಮೊಥೆಯನೂ ನಮಗೆ ಪ್ರಿಯನಾಗಿಯೂ ಜೊತೆಗೆಲಸದವನಾಗಿಯೂ ಇರುವ ಫಿಲೆಮೋನನೆಂಬ ನಿನಗೂ
2 ಸಹೋದರಿಯಾದ ಅಪ್ಫಿಯಳಿಗೂ ನಮ್ಮ ಸಹಭಟನಾದ ಅರ್ಖಿಪ್ಪನಿಗೂ ನಿನ್ನ ಮನೆಯಲ್ಲಿ
3 ಕೂಡುವ ಸಭೆಯವರಿಗೂ ಬರೆಯುವದೇನಂದರೆ—ನಮ್ಮ ತಂದೆಯಾದ ದೇವರಿಂದಲೂ ಕರ್ತನಾದ ಯೇಸು ಕ್ರಿಸ್ತನಿಂದಲೂ ನಿಮಗೆ ಕೃಪೆಯೂ ಶಾಂತಿಯೂ ಆಗಲಿ.

### ಫಿಲೆಮೋನನ ಸದ್ಗುಣಗಳ ನಿಮಿತ್ತ ಪೌಲನು ದೇವರಿಗೆ ಮಾಡುವ ಸ್ತೋತ್ರ.

5 ಕರ್ತನಾದ ಯೇಸುವಿನ ಮೇಲೆ ನೀನು ಇಟ್ಟಿರುವ ನಂಬಿಕೆಯನ್ನು ಕುರಿತೂ ದೇವ
4 ಜನರೆಲ್ಲರ ಮೇಲಿರುವ ನಿನ್ನ ಪ್ರೀತಿಯನ್ನು ಕುರಿತೂ ಕೇಳಿದ್ದರಿಂದ ನಾನು ಪ್ರಾರ್ಥನೆ ಮಾಡುವಾಗೆಲ್ಲಾ ದೇವರಿಗೆ ಯಾವಾಗಲೂ ಸ್ತೋತ್ರವನ್ನು ಸಲ್ಲಿಸಿ ನಿನಗೋಸ್ಕರ ವಿಜ್ಞಾ
6 ಪನೆ ಮಾಡುತ್ತೇನೆ. ಕ್ರಿಸ್ತನಲ್ಲಿ ನಮಗೆ ದೊರಕಿರುವ ಎಲ್ಲಾ ಸುವರಗಳನ್ನು ಕುರಿತು ನೀನು ತಿಳುವಿಕೆಯನ್ನು ಹೊಂದುತ್ತಿರುವಲ್ಲಿ ಕ್ರಿಸ್ತನಂಬಿಕೆಯಲ್ಲಿರುವ ನಿನ್ನ ಅನ್ಯೋನ್ಯತೆಯು[1] ಕ್ರಿಸ್ತನಿಗೆ ಹೆಚ್ಚಾದ ಮಹಿಮೆಯನ್ನು ಉಂಟುಮಾಡಬೇಕೆಂದು ಪ್ರಾರ್ಥಿಸುತ್ತೇನೆ.
7 ಸಹೋದರನೇ, ನಿನ್ನ ಮೂಲಕ ದೇವಜನರ ಹೃದಯಗಳಿಗೆ ಪ್ರೋತ್ಸಾಹ ಉಂಟಾದ್ದರಿಂದ ನಿನ್ನ ಪ್ರೀತಿಯ ನಿಮಿತ್ತ ನನಗೆ ಬಹಳ ಸಂತೋಷವೂ ಆದರಣೆಯೂ ಉಂಟಾಯಿತು.

### ಓಡಿಹೋದ ಒನೇಸಿಮನೆಂಬ ದಾಸನನ್ನು ಕ್ಷಮಿಸಿ ಸೇರಿಸಿಕೊಳ್ಳಬೇಕೆಂದು ವಿಜ್ಞಾಪನೆ.

8-9 ಆದಕಾರಣ ನಿನಗೆ ಯುಕ್ತವಾದದ್ದನ್ನು ಆಜ್ಞಾಪಿಸುವದಕ್ಕೆ ಮುದುಕನಾಗಿಯೂ[2] ಈಗ ಕ್ರಿಸ್ತ ಯೇಸುವಿನ ನಿಮಿತ್ತ ಸೆರೆಯವನಾಗಿಯೂ ಇರುವ ಪೌಲನೆಂಬ ನನಗೆ ಕ್ರಿಸ್ತನಲ್ಲಿ ಪೂರಾ ಅಧಿಕಾರವಿದ್ದಾಗ್ಯೂ, ಹಾಗೆ ಆಜ್ಞಾಪಿಸದೆ ಪ್ರೀತಿಯ ನಿಮಿತ್ತ ನಿನ್ನನ್ನು ಬೇಡಿ
10 ಕೊಳ್ಳುತ್ತೇನೆ. ನಾನು ಸೆರೆಯಲ್ಲಿ ಪಡೆದಿರುವ ನನ್ನ ಮಗನಾದ[3] ಒನೇಸಿಮನ ವಿಷಯ

---

[1] ಅಥವಾ, ನಿನ್ನ ನಂಬಿಕೆಯಿಂದ ಉಂಟಾಗುವ ಪರೋಪಕಾರಭಾವವು. [2] ಅಥವಾ, ರಾಯಭಾರಿಯಾಗಿಯೂ. [3] ಅಂದರೆ, ಗುಣಪಡಿಸಿದ ಶಿಷ್ಯನಾದ.

ವಂಥಾದ್ದೇ ಹೊರತು ಹೇಡಿತನವನ್ನು ಹುಟ್ಟಿಸುವಂಥಾದ್ದಲ್ಲ. ಆದದರಿಂದ ನೀನು ನಮ್ಮ 8 ಕರ್ತನನ್ನು ಕುರಿತು ಹೇಳುವ ಸಾಕ್ಷಿಯ ವಿಷಯದಲ್ಲಾಗಲಿ ಆತನ ಸೆರೆಯವನಾದ ನನ್ನ ವಿಷಯದಲ್ಲಾಗಲಿ ನಾಚಿಕೆಪಡದೆ, ದೇವರ ಬಲವನ್ನು ಆಶ್ರಯಿಸಿ ನನ್ನೊಂದಿಗೆ ಸುವಾರ್ತೆ ಗೋಸ್ಕರ ಶ್ರಮೆಯನ್ನನುಭವಿಸು. ಆತನು ನಮ್ಮಲ್ಲಿ ಸುಕೃತ್ಯಗಳನ್ನು ನೋಡಿದ್ದರಿಂದಲ್ಲ, 9 ತನ್ನ ಸಂಕಲ್ಪವನ್ನು ಅನುಸರಿಸಿ ಕೃಪೆಯಿಂದಲೇ ನಮ್ಮನ್ನು ರಕ್ಷಿಸಿ ಪರಿಶುದ್ಧರಾಗುವದಕ್ಕೆ ಕರೆದನು. ಆತನು ಅನಾದಿಕಾಲದಲ್ಲಿ ಆ ಕೃಪೆಯನ್ನು ಕ್ರಿಸ್ತ ಯೇಸುವಿನಲ್ಲಿ ನಮಗೆ ಅನು ಗ್ರಹಿಸಿ ಈಗ ನಮ್ಮ ರಕ್ಷಕನಾದ ಕ್ರಿಸ್ತ ಯೇಸುವಿನ ಪ್ರತ್ಯಕ್ಷತೆಯ ಮೂಲಕ ಅದನ್ನು ಪ್ರಕಾಶ ಪಡಿಸಿದ್ದಾನೆ. ಈತನು ಸುವಾರ್ತೆಯ ಮೂಲಕ ಮರಣವನ್ನು ನಿವೃತ್ತಿಮಾಡಿ, ಜೀವ 10 ವನ್ನೂ ನಿರ್ಲಯತ್ವವನ್ನೂ ಪ್ರಕಾಶಗೊಳಿಸಿದನು. ಆ ಸುವಾರ್ತಾಭಿವೃದ್ಧಿಗೋಸ್ಕರ 11 ನಾನು ಸಾರುವವನಾಗಿಯೂ ಅಪೊಸ್ತಲನಾಗಿಯೂ ಉಪದೇಶಕನಾಗಿಯೂ ನೇಮಿಸ ಲ್ಪಟ್ಟೆನು. ಇದರ ನಿಮಿತ್ತದಿಂದಲೇ ಈ ಶ್ರಮೆಗಳನ್ನು ಅನುಭವಿಸುತ್ತಾ ಇದ್ದೇನೆ; 12 ಆದಾಗ್ಯೂ ನಾನು ನಾಚಿಕೆಪಡುವದಿಲ್ಲ; ನಾನು ನಂಬಿರುವಾತನನ್ನು ಬಲ್ಲೆನು. ಆತನು ನನ್ನ[1] ವಶದಲ್ಲಿಟ್ಟಿರುವದನ್ನು ಆತನು ಆ ದಿನಕ್ಕಾಗಿ ಕಾಪಾಡುವದಕ್ಕೆ ಶಕ್ತನಾಗಿದ್ದಾ ನೆಂದು ದೃಢವಾಗಿ ನಂಬಿದ್ದೇನೆ. ನೀನು ಕ್ರಿಸ್ತ ಯೇಸುವಿನಲ್ಲಿ ನಂಬಿಕೆಯೂ ಪ್ರೀತಿಯೂ 13 ಉಳ್ಳವನಾಗಿ ನನ್ನಿಂದ ಕೇಳಿದ ಸ್ವಸ್ಥ ಬೋಧನಾವಾಕ್ಯಗಳನ್ನು ಮಾದಿರಿ ಮಾಡಿಕೊಂಡು ಅನುಸರಿಸು. ನಿನ್ನ ವಶಕ್ಕೆ ಕೊಡಲ್ಪಟ್ಟಿರುವದನ್ನು ಶ್ರೇಷ್ಠವೆಂದು ತಿಳಿದು ನಮ್ಮಲ್ಲಿ 14 ವಾಸವಾಗಿರುವ ಪವಿತ್ರಾತ್ಮನ ಮೂಲಕ ಕಾಪಾಡು.

ಆಸ್ಯಸೀಮೆಯಲ್ಲಿರುವವರೆಲ್ಲರೂ ನನ್ನನ್ನು ಕೈಬಿಟ್ಟರೆಂಬುವದನ್ನು ನೀನು ಬಲ್ಲೆ; ಅವರಲ್ಲಿ 15 ಫುಗೇಲನೂ ಹೆರ್ಮೊಗೇನನೂ ಸೇರಿದ್ದಾರೆ. ಒನೇಸಿಫೊರನ ಮನೆಯವರಿಗೆ ಕರ್ತನು 16 ಕರುಣೆಯನ್ನು ತೋರಿಸಲಿ; ಅವನು ರೋಮಾಪುರಕ್ಕೆ ಬಂದಾಗ ನನ್ನ ಬೇಡಿಗಳಿಗೆ ನಾಚಿಕೆಪಡದೆ ಬಹು ವಿಚಾರಣೆಯಿಂದ ನನ್ನನ್ನು ಹುಡುಕಿ ಕಂಡುಕೊಂಡು ಅನೇಕಾ 17 ವರ್ತಿ ನನಗೆ ಶೈತ್ಯೋಪಚಾರ ಮಾಡಿದನು. ಮತ್ತು ಎಫೆಸದಲ್ಲಿ ಎಷ್ಟೋ ಉಪಚಾರ 18 ಮಾಡಿದನೆಂಬುವದು ನಿನಗೆ ಚನ್ನಾಗಿ ಗೊತ್ತಿದೆ. ಅವನು ಆ ದಿನದಲ್ಲಿ ಕರ್ತನಿಂದ ಕರು ಣೆಯನ್ನು ಹೊಂದುವಂತೆ ಕರ್ತನು ಅವನಿಗೆ ದಯಪಾಲಿಸಲಿ.

ನನ್ನ ಮಗನೇ, ನೀನು ಕ್ರಿಸ್ತ ಯೇಸುವಿನಲ್ಲಿರುವ ಕೃಪೆಯಿಂದ ಬಲಹೊಂದಿದವನಾಗು. **2** ನೀನು ನನ್ನಿಂದ ಅನೇಕ ಸಾಕ್ಷಿಗಳ ಮುಂದೆ ಕೇಳಿದ ಉಪದೇಶವನ್ನು ಇತರರಿಗೆ ಬೋಧಿಸ 2 ಶಕ್ತರಾದ ನಂಬಿಗಸ್ತ ಮನುಷ್ಯರಿಗೆ ಒಪ್ಪಿಸಿಕೊಡು. ಕ್ರಿಸ್ತ ಯೇಸುವಿನ ಒಳ್ಳೇ ಸೈನಿಕ 3 ನಂತೆ ನನ್ನೊಂದಿಗೆ ಶ್ರಮೆಯನ್ನನುಭವಿಸು. ಯುದ್ಧಕ್ಕೆ ಹೋಗುವ ಸೈನಿಕನು ಸಂಸಾರ 4 ವ್ಯಾಪಾರದಲ್ಲಿ ಸಿಕ್ಕಿಕೊಳ್ಳದೆ ತನ್ನನ್ನು ಸೈನ್ಯದಲ್ಲಿ ಸೇರಿಸಿಕೊಂಡವನನ್ನು ಮೆಚ್ಚಿಸುವದಕ್ಕೆ ಪ್ರಯಾಸಪಡುತ್ತಿರುವನಲ್ಲವೇ. ಇದಲ್ಲದೆ ಯಾವನಾದರೂ ರಂಗಸ್ಥಳದಲ್ಲಿ ಎದುರಾಳಿ 5 ನೊಡನೆ ಹೋರಾಡುವಾಗ ನಿಯಮದ ಪ್ರಕಾರ ಹೋರಾಡದಿದ್ದರೆ, ಅವನಿಗೆ ಜಯಮಾ ಲೆಯು ದೊರಕುವದಿಲ್ಲ. ವ್ಯವಸಾಯದ ಹುಟ್ಟುವಳಿಯಲ್ಲಿ ಮೊದಲನೇ ಪಾಲು ಕಷ್ಟ 6

[1] ಅಥವಾ, ನಾನು ಆತನ.

7 ಮಾಡಿದವನಿಗೆ ದೊರೆಯುತ್ತದೆ. ನಾನು ಹೇಳುವದನ್ನು ಯೋಚಿಸು; ಕರ್ತನು ಎಲ್ಲಾದ
8 ರಲ್ಲೂ ನಿನಗೆ ವಿವೇಕವನ್ನು ದಯಪಾಲಿಸುವನು. ಸತ್ತವರೊಳಗಿಂದ ಎಬ್ಬಿಸಲ್ಪಟ್ಟವನೂ
ದಾವೀದನ ವಂಶದವನೂ ಆಗಿರುವ ಯೇಸು ಕ್ರಿಸ್ತನನ್ನು ಜ್ಞಾಪಕಮಾಡಿಕೋ[1]; ಇದೇ
9 ನಾನು ಸಾರುವ ಸುವಾರ್ತೆ. ಇದರಲ್ಲಿ ನಾನು ಕಷ್ಟವನ್ನನುಭವಿಸಿ ದುಷ್ಕರ್ಮಿಯಂತೆ
10 ಸಂಕೋಲೆಯಿಂದ ಕಟ್ಟಲ್ಪಟ್ಟವನಾಗಿದ್ದೇನೆ; ಆದರೆ ದೇವರ ವಾಕ್ಯಕ್ಕೆ ಬಂಧನವಿಲ್ಲ. ಆದ
ಕಾರಣ, ದೇವರಾರಿಸಿಕೊಂಡವರು ನನ್ನ ಕೂಡ ಕ್ರಿಸ್ತ ಯೇಸುವಿನಲ್ಲಿರುವ ರಕ್ಷಣೆಯನ್ನು
ನಿತ್ಯಪ್ರಭಾವ ಸಹಿತವಾಗಿ ಹೊಂದಬೇಕೆಂದು ನಾನು ಅವರಿಗೋಸ್ಕರ ಎಲ್ಲವನ್ನೂ ತಾಳಿ
11 ಕೊಳ್ಳುತ್ತೇನೆ. ಈ ಮಾತು ನಂಬತಕ್ಕದ್ದಾಗಿದೆ, ಏನಂದರೆ—ನಾವು ಆತನೊಡನೆ ಸತ್ತಿ
12 ದ್ದರೆ, ಆತನೊಡನೆ ಜೀವಿಸುವೆವು; ಸಹಿಸಿಕೊಳ್ಳುವವರಾಗಿದ್ದರೆ, ಆತನೊಡನೆ ಆಳು
ವೆವು; ನಾವು ಯೇಸುವಿನವರಲ್ಲವೆಂದು ಹೇಳಿದರೆ, ಆತನು ನಮ್ಮನ್ನು ತನ್ನವರಲ್ಲವೆಂದು
13 ಹೇಳುವನು. ನಾವು ಅಪನಂಬಿಗಸ್ತರಾಗಿದ್ದರೂ ಆತನು ನಂಬಿಗಸ್ತನಾಗಿಯೇ ಇರುವನು;
ತನ್ನ ಸ್ವಭಾವಕ್ಕೆ ವಿರುದ್ಧವಾಗಿ ಏನೂ ಮಾಡಲಾರನು.

ದುರ್ಮಾರ್ಗತನವೂ ದುರ್ಬೋಧನೆಯೂ ಪ್ರಬಲವಾಗಿರುವದರಿಂದ ತಿಮೊಥೆಯನು ಬಹು
ಎಚ್ಚರಿಕೆಯುಳ್ಳವನಾಗಿರಬೇಕೆಂದು ಬೋಧನೆ.

14 ಈ ಸಂಗತಿಗಳನ್ನು ಸಭೆಯವರ ಜ್ಞಾಪಕಕ್ಕೆ ತರಬೇಕು. ಕೇಳುವವರಿಗೆ ಕೇಡನ್ನುಂಟು
ಮಾಡುವದೇ ಹೊರತು ಯಾವ ಪ್ರಯೋಜನಕ್ಕೂ ಬಾರದ ವಾಗ್ವಾದಗಳನ್ನು ಮಾಡ
15 ಬಾರದೆಂದು ಅವರಿಗೆ ದೇವರ ಸನ್ನಿಧಿಯಲ್ಲಿ ಖಂಡಿತವಾಗಿ ಹೇಳು. ನೀನು ದೇವರ
ದೃಷ್ಟಿಗೆ ಯೋಗ್ಯನಾಗಿಯೂ ಕಾಣಿಸಿಕೊಳ್ಳುವದಕ್ಕೆ ಬಹು ಪ್ರಯಾಸಪಡು. ಅವಮಾ
ನಕ್ಕೆ ಗುರಿಯಾಗದ ಕೆಲಸದವನಾಗಿಯೂ ಸತ್ಯವಾಕ್ಯವನ್ನು ಸರಿಯಾಗಿ ಉಪದೇಶಿಸು
16 ವವನಾಗಿಯೂ ಇರು. ಪ್ರಾಪಂಚಿಕವಾದ ಆ ಹರಟೆಮಾತುಗಳಿಗೆ[2] ದೂರವಾಗಿರು;
17 ಅವುಗಳಿಗೆ ಮನಸ್ಸುಕೊಡುವವರು ಹೆಚ್ಚೆಚ್ಚಾಗಿ ಭಕ್ತಿಹೀನರಾಗುವರು. ಅವರ
ಮಾತು ಕೊಳಕು ಹುಣ್ಣಿನಂತೆ ಹರಡಿಕೊಳ್ಳುವದು. ಅವರಲ್ಲಿ ಹುಮೆನಾಯನೂ ಪಿಲೇ
18 ತನೂ ಇದ್ದಾರೆ; ಅವರು ಪುನರುತ್ಥಾನವು ಆಗಿಹೋಯಿತೆಂದು ಹೇಳುತ್ತಾ ಸತ್ಯಭ್ರಷ್ಟ
19 ರಾಗಿ ಕೆಲವರ ನಂಬಿಕೆಯನ್ನು ಕೆಡಿಸುವವರಾಗಿದ್ದಾರೆ. ಆದರೂ ದೇವರ ಸ್ಥಿರವಾದ
ಅಸ್ತಿವಾರವು ನಿಲ್ಲುತ್ತದೆ. ಅದರ ಮೇಲೆ—ತನ್ನವರು ಯಾರ್ಯಾರೆಂಬುವದನ್ನು ಕರ್ತನು
ತಿಳಿದಿದ್ದಾನೆಂತಲೂ[3] ಕರ್ತನ ನಾಮವನ್ನು ಹೇಳಿಕೊಳ್ಳುವವರೆಲ್ಲರು ದುರ್ಮಾರ್ಗತನ
20 ವನ್ನು ಬಿಟ್ಟುಬಿಡಬೇಕೆಂತಲೂ ಲಿಪಿಯುಂಟು. ದೊಡ್ಡ ಮನೆಯಲ್ಲಿ ಬೆಳ್ಳಿಬಂಗಾರದ
ಪಾತ್ರೆಗಳಲ್ಲದೆ, ಮರದ ಪಾತ್ರೆಗಳೂ ಮಣ್ಣಿನ ಪಾತ್ರೆಗಳೂ ಇರುತ್ತವೆ; ಅವುಗಳಲ್ಲಿ
21 ಕೆಲವು ಉತ್ತಮವಾದ ಬಳಿಕೆಗೂ ಕೆಲವು ಹೀನವಾದ ಬಳಿಕೆಗೂ ಬರುತ್ತವೆ. ಹೀಗಿರ
ಲಾಗಿ ಒಬ್ಬನು ಹೀನ ನಡತೆಯುಳ್ಳವರ ಸಹವಾಸವನ್ನು ಬಿಟ್ಟು ತನ್ನನ್ನು ಶುದ್ಧಮಾಡಿ

[1] ಅಥವಾ, ದಾವೀದನ ವಂಶದವನಾದ ಯೇಸು ಕ್ರಿಸ್ತನು ಸತ್ತವರೊಳಗಿಂದ ಎಬ್ಬಿಸಲ್ಪಟ್ಟವನೆಂಬುವದನ್ನು ಜ್ಞಾಪಕಮಾಡಿಕೋ. [2] ೧ ತಿಮೊಥೆ. ೬, ೧೨. [3] ಅಂಕೆ ೧೬, ೫.

ಕೊಂಡರೆ, ಅವನು ಉತ್ತಮವಾದ ಬಳಕೆಗೆ ಯೋಗ್ಯವಾಗಿರುವನು; ಅವನು ದೇವರ ಸೇವೆಗೆ ಪ್ರತಿಷ್ಠಿತನಾಗಿಯೂ ಯಜಮಾನನಿಗೆ ಉಪಯುಕ್ತನಾಗಿಯೂ ಸಕಲ ಸತ್ಕ್ರಿಯೆಗಳನ್ನು ಮಾಡುವದಕ್ಕೆ ಸಿದ್ಧನಾಗಿಯೂ ಇರುವನು.

22 ನೀನು ಯೌವನದ ಇಚ್ಛೆಗಳಿಗೆ ದೂರವಾಗಿರು; ನೀತಿ ವಿಶ್ವಾಸ ಪ್ರೀತಿಗಳನ್ನು ಸಂಪಾದಿಸುವದಕ್ಕೂ ಶುದ್ಧ ಹೃದಯವುಳ್ಳವರಾಗಿ ಕರ್ತನನ್ನು ಬೇಡಿಕೊಳ್ಳುವವರ ಸಂಗಡ ಸಮಾಧಾನದಿಂದಿರುವದಕ್ಕೂ ಪ್ರಯಾಸಪಡು. 23 ಮೂಢರ ಬುದ್ಧಿಯಿಲ್ಲದ ವಿಚಾರಗಳು ಜಗಳಗಳಿಗೆ ಕಾರಣವಾಗಿವೆ ಎಂದು ತಿಳಿದು ಅವುಗಳ ಗೊಡವೆಗೆ ಹೋಗಬೇಡ. 24 ಕರ್ತನ ದಾಸನು ಜಗಳವಾಡದೆ, ಎಲ್ಲರ ವಿಷಯದಲ್ಲಿ ಸಾಧುವಾಗಿಯೂ ಬೋಧಿಸುವದರಲ್ಲಿ ಪ್ರವೀಣನಾಗಿಯೂ ಕೇಡನ್ನು ಸಹಿಸಿಕೊಳ್ಳುವವನಾಗಿಯೂ, 25 ಎದುರಿಸುವವರನ್ನು ನಿಧಾನದಿಂದ ತಿದ್ದುವವನಾಗಿಯೂ ಇರಬೇಕು. ಒಂದು ವೇಳೆ ದೇವರು ಆ ಎದುರಿಸುವವರ ಮನಸ್ಸನ್ನು ತನ್ನ ಕಡೆಗೆ ತಿರುಗಿಸಿ ಸತ್ಯದ ಜ್ಞಾನವನ್ನು ಅವರಿಗೆ ಕೊಟ್ಟಾನು. 26 ಸೈತಾನನ ಉರ್ಲಿಗೆ ಬಿದ್ದವರಾದ ಇವರು ಒಂದು ವೇಳೆ ತಪ್ಪಿಸಿಕೊಂಡು ದೇವರ ಚಿತ್ತವನ್ನು ಅನುಸರಿಸುವದಕ್ಕೆ ಸ್ವಸ್ಥಚಿತ್ತರಾದಾರು[1].

**3** ಆದರೆ, ಕಡೇ ದಿವಸಗಳಲ್ಲಿ ಕಠಿನ ಕಾಲಗಳು ಬರುವವೆಂಬುವದನ್ನು ತಿಳಿದುಕೋ. 2 ಮನುಷ್ಯರು ಸ್ವಾರ್ಥಚಿಂತಕರೂ ಹಣದಾಸೆಯವರೂ ಬಡಾಯಿಕೊಚ್ಚುವವರೂ ಅಹಂಕಾರಿಗಳೂ ದೂಷಕರೂ ತಂದೆತಾಯಿಗಳಿಗೆ ಅವಿಧೇಯರೂ ಉಪಕಾರನೆನಸದವರೂ ದೇವಭಯವಿಲ್ಲದವರೂ 3 ಮಮತೆಯಿಲ್ಲದವರೂ ಸಮಾಧಾನವಾಗದವರೂ ಚಾಡಿಹೇಳುವವರೂ ದಮೆಯಿಲ್ಲದವರೂ ಉಗ್ರತೆಯುಳ್ಳವರೂ ಒಳ್ಳೇದನ್ನು ಪ್ರೀತಿಸದವರೂ 4 ದ್ರೋಹಿಗಳೂ ದುಡುಕಿನವರೂ ಉಬ್ಬಿಕೊಂಡವರೂ ದೇವರನ್ನು ಪ್ರೀತಿಸದೆ ಭೋಗಗಳನ್ನೇ ಪ್ರೀತಿಸುವವರೂ 5 ಭಕ್ತಿಯ ವೇಷವಿದ್ದು ಅದರ ಬಲವಿಲ್ಲದವರೂ ಆಗಿರುವರು; ಇಂಥವರ ಸಹವಾಸವನ್ನೂ ಮಾಡದಿರು. 6 ಮನೆಗಳಲ್ಲಿ ನುಸುಳಿ ಪಾಪಗಳಿಂದ ತುಂಬಿದವರಾಗಿಯೂ ನಾನಾ ವಿಧವಾದ ಇಚ್ಛೆಗಳಿಂದ ಪ್ರೇರಿತರಾಗಿಯೂ ಇರುವ ಅವಿವೇಕಿಗಳಾದ ಸ್ತ್ರೀಯರನ್ನು ವಶಮಾಡಿಕೊಳ್ಳುವವರು ಇವರೊಳಗೆ ಸೇರಿದವರೇ. 7 ಆ ಸ್ತ್ರೀಯರು ಯಾವಾಗಲೂ ಉಪದೇಶ ಕೇಳುತ್ತಿದ್ದಾಗ್ಯೂ ಸತ್ಯದ ಪರಿಜ್ಞಾನವನ್ನು ಹೊಂದಲಾರದವರು. 8 ಯನ್ನ ಯಂಬ್ರ ಎಂಬವರು ಮೋಶೆಯನ್ನು ವಿರೋಧಿಸಿದಂತೆಯೇ ಆ ಮನುಷ್ಯರು ಸಹ ಸತ್ಯವನ್ನು ವಿರೋಧಿಸುತ್ತಾರೆ; ಬುದ್ಧಿಗೆಟ್ಟವರಾಗಿಯೂ ಕ್ರಿಸ್ತನಂಬಿಕೆಯಿಂದ ಭ್ರಷ್ಟರಾಗಿಯೂ ಇದ್ದಾರೆ. 9 ಆದರೆ ಅವರ ಪ್ರಯತ್ನವು ಇನ್ನು ಸಾಗುವದಿಲ್ಲ; ಆ ಯನ್ನ ಯಂಬ್ರರ ಮೂರ್ಖತನವು ಎಲ್ಲರಿಗೂ ಪರಿಷ್ಕಾರವಾಗಿ ತಿಳಿದುಬಂದ ಪ್ರಕಾರ ಇವರದೂ ತಿಳಿದುಬರುವದು. 10 ನೀನಾದರೋ ನನ್ನನ್ನು ಅನುಸರಿಸುವವನಾಗಿದ್ದು ನನ್ನ ಬೋಧನೆ ನಡತೆ ಉದ್ದೇಶ ನಂಬಿಕೆ ದೀರ್ಘಶಾಂತಿ ಪ್ರೀತಿ ಸೈರಣೆ ಇವುಗಳನ್ನೂ, 11 ಅಂತಿಯೋಕ್ಯ ಇಕೋನ್ಯ ಲುಸ್ತ್ರ ಎಂಬ ಪಟ್ಟಣಗಳಲ್ಲಿ ನನಗೆ ಸಂಭವಿಸಿದ ಹಿಂಸೆಗಳನ್ನೂ ಕಷ್ಟಾನುಭವಗಳನ್ನೂ

[1] ಅಥವಾ, ಸೈತಾನನ ಉರ್ಲಿಗೆ ಬಿದ್ದು ಅವನ ಚಿತ್ತಕ್ಕೆ ಒಳಗಾಗಿರುವ ಇವರು ಒಂದು ವೇಳೆ ತಪ್ಪಿಸಿಕೊಂಡು ಸ್ವಸ್ಥಚಿತ್ತಕ್ಕೆ ಬಂದಾರು. ಅಥವಾ, ಅವರು ದೇವರ ಚಿತ್ತಕ್ಕೆ ಒಳಗಾಗುವಂತೆ ಕರ್ತನ ದಾಸನಿಂದ ಹಿಡಿಯಲ್ಪಟ್ಟವರಾಗಿ ಸ್ವಸ್ಥಚಿತ್ತಕ್ಕೆ ಬಂದು ಸೈತಾನನ ಉರ್ಲಿನಿಂದ ತಪ್ಪಿಸಿಕೊಂಡಾರು.

ತಿಳಿದವನಾಗಿದ್ಧೀ. ನಾನು ಎಂಥೆಂಥಾ ಹಿಂಸೆಗಳನ್ನು ಸಹಿಸಿಕೊಂಡೆನು; ಅವೆಲ್ಲವುಗಳೊ
12 ಳಗಿಂದ ಕರ್ತನು ನನ್ನನ್ನು ಬಿಡಿಸಿದನು. ಕ್ರಿಸ್ತ ಯೇಸುವಿನಲ್ಲಿ ಸದ್ಭಕ್ತರಾಗಿ ಜೀವಿಸು
13 ವದಕ್ಕೆ ಮನಸ್ಸುಮಾಡುವವರೆಲ್ಲರೂ ಹಿಂಸೆಗೊಳಗಾಗುವರು. ಆದರೆ ದುಷ್ಟರೂ ವಂಚ
ಕರೂ ಇತರರನ್ನು ಮೋಸಮಾಡುತ್ತಾ ತಾವೇ ಮೋಸಹೋಗುತ್ತಾ ಹೆಚ್ಚಾದ ಕೆಟ್ಟತನಕ್ಕೆ
14 ಹೋಗುವರು. ನೀನಾದರೋ ಕಲಿತು ದೃಢವಾಗಿ ನಂಬಿದ ಬೋಧನೆಗಳಲ್ಲಿ ನೆಲೆಯಾ
15 ಗಿರು. ಕಲಿಸಿಕೊಟ್ಟವರು ಯಾರೆಂಬುವದನ್ನು ಆಲೋಚಿಸು. ಬಾಲ್ಯದಿಂದಲೇ ನಿನಗೆ
16 ಪರಿಶುದ್ಧ ಗ್ರಂಥಗಳ ಪರಿಚಯವಾಯಿತಲ್ಲಾ. ಆ ಗ್ರಂಥಗಳು ಕ್ರಿಸ್ತ ಯೇಸುವಿನಲ್ಲಿರುವ
ನಂಬಿಕೆಯ ಮೂಲಕ ರಕ್ಷಣೆಹೊಂದಿಸುವ ಜ್ಞಾನವನ್ನು ಕೊಡುವದಕ್ಕೆ ಶಕ್ತವಾಗಿವೆ.
ದೈವಪ್ರೇರಿತವಾದ ಪ್ರತಿಯೊಂದು ಶಾಸ್ತ್ರವು ಉಪದೇಶಕ್ಕೂ ಖಂಡನೆಗೂ ತಿದ್ದುಪಾಟಿಗೂ
17 ನೀತಿಶಿಕ್ಷೆಗೂ ಉಪಯೋಗವಾಗಿದೆ. ಅದರಿಂದ ದೇವರ ಮನುಷ್ಯನು ಪ್ರವೀಣನಾಗಿ
ಸಕಲ ಸತ್ಕಾರ್ಯಕ್ಕೆ ಸನ್ನದ್ಧನಾಗುವನು.

ತನಗೆ ಮರಣಕಾಲ ಸಮೀಪವಾದ್ದರಿಂದ ಪೌಲನು ತಿಮೊಥೆಯನನ್ನು ಖಂಡಿತವಾಗಿ ಎಚ್ಚರಿಸಿ ಸುವಾರ್ತೆಯ ಕೆಲಸವನ್ನು ಅತಿಜಾಗರೂಕತೆಯಿಂದ ನಡಿಸಬೇಕೆಂದು ಬೋಧಿಸಿದ್ದು.

**4** ದೇವರ ಮುಂದೆ ಮತ್ತು ಜೀವಿಸುವವರಿಗೂ ಸತ್ತವರಿಗೂ ನ್ಯಾಯತೀರಿಸುವದಕ್ಕೆ
ಬರುವ ಕ್ರಿಸ್ತ ಯೇಸುವಿನ ಮುಂದೆ ಆತನ ಪ್ರತ್ಯಕ್ಷತೆಯ ಮೇಲೆಯೂ ಆತನ ರಾಜ್ಯದ
2 ಮೇಲೆಯೂ ಆಣೆಯಿಟ್ಟು ನಾನು ನಿನಗೆ ಖಂಡಿತವಾಗಿ ಹೇಳುವದೇನಂದರೆ—ದೇವರ
ವಾಕ್ಯವನ್ನು ಸಾರು, ಅನುಕೂಲವಾದ ಕಾಲದಲ್ಲಿಯೂ ಅನುಕೂಲವಿಲ್ಲದ ಕಾಲದ
ಲ್ಲಿಯೂ ಅದರಲ್ಲಿ ಆಸಕ್ತನಾಗಿರು; ಪೂರ್ಣ ದೀರ್ಘಶಾಂತಿಯಿಂದ ಉಪದೇಶಿಸುತ್ತಾ
3 ಖಂಡಿಸು, ಗದರಿಸು, ಎಚ್ಚರಿಸು. ಯಾಕಂದರೆ ಜನರು ಸ್ವಸ್ಥಬೋಧನೆಯನ್ನು ಸಹಿಸ
ಲಾರದ ಕಾಲವು ಬರುತ್ತದೆ; ಅದರಲ್ಲಿ ಅವರು ತೀಟೇ ಕಿವಿಗಳುಳ್ಳವರಾಗಿ ತಮ್ಮ ದುರಾ
4 ಶೆಗಳಿಗೆ ಅನುಕೂಲರಾದ ಅನೇಕ ಉಪದೇಶಕರನ್ನು ಇಟ್ಟುಕೊಳ್ಳುವರು. ಅವರು ಸತ್ಯ
5 ಬೋಧನೆಗೆ ಕಿವಿಗೊಡದೆ ಕಲ್ಪನಾಕಥೆಗಳನ್ನು ಕೇಳುವದಕ್ಕೆ ಹೋಗುವರು. ಆದರೆ
ನೀನು ಎಲ್ಲಾ ವಿಷಯಗಳಲ್ಲಿ ಸ್ವಸ್ಥಚಿತ್ತನಾಗಿರು, ಶ್ರಮೆಯನ್ನು ತಾಳಿಕೋ, ಸೌವಾರ್ತಿ
ಕನ ಕೆಲಸವನ್ನು ಮಾಡು, ನಿನಗೆ ನೇಮಿಸಿರುವ ಸೇವೆಯನ್ನು ಲೋಪವಿಲ್ಲದೆ ನಡಿಸು.
6 ಯಾಕಂದರೆ ನಾನಂತೂ ಈಗಲೇ ಪಾನದ್ರವ್ಯವಾಗಿ ಅರ್ಪಿತನಾಗುತ್ತಾ ಇದ್ದೇನೆ; ನಾನು
7 ಹೊರಟು ಹೋಗಬೇಕಾದ ಸಮಯವು ಸಮೀಪಕ್ಕೆ ಬಂದದೆ. ಶ್ರೇಷ್ಠ ಹೋರಾಟವನ್ನು
ಮಾಡಿದ್ದೇನೆ, ನನ್ನ ಓಟವನ್ನು ಕಡೆಗಾಣಿಸಿದ್ದೇನೆ, ಕ್ರಿಸ್ತನಂಬಿಕೆಯನ್ನು ಕಾಪಾಡಿಕೊಂಡಿ
8 ದ್ದೇನೆ; ನೀತಿವಂತರಿಗೆ ದೊರಕುವ[1] ಜಯಮಾಲೆಯು ಮುಂದೆ ನನಗೆ ಸಿದ್ಧವಾಗಿದೆ;
ಅದನ್ನು ನೀತಿಯುಳ್ಳ ನ್ಯಾಯಾಧಿಪತಿಯಾಗಿರುವ ಕರ್ತನು ಆ ದಿನದಲ್ಲಿ ನನಗೆ ಕೊಡು
ವನು; ನನಗೆ ಮಾತ್ರವಲ್ಲದೆ, ತನ್ನ ಪ್ರತ್ಯಕ್ಷತೆಯನ್ನು ಪ್ರೀತಿಸುವವರೆಲ್ಲರಿಗೂ ಕೊಡುವನು.

[1] ಮೂಲ: ನೀತಿಯೆಂಬ.

ಪೌಲನು ತನ್ನ ಸಮಾಚಾರವನ್ನು ತಿಳಿಸಿ ಆಯಾ ಜನರಿಗೆ ಹೇಳಿದ ವಂದನೆಗಳು.

ನನ್ನ ಬಳಿಗೆ ಬೇಗ ಬರುವದಕ್ಕೆ ಪ್ರಯತ್ನಮಾಡು; ಯಾಕಂದರೆ ದೇಮನು ಇಹ 9,10
ಲೋಕವನ್ನು ಪ್ರೀತಿಸಿ ನನ್ನನ್ನು ಬಿಟ್ಟು ಥೆಸಲೊನೀಕಕ್ಕೆ ಹೋದನು; ಕ್ರೆಸ್ಕನು ಗಲಾ
ತ್ಯಕ್ಕೂ ತೀತನು ದಲ್ಮಾತ್ಯಕ್ಕೂ ಹೋದರು; ಲೂಕನು ಮಾತ್ರ ನನ್ನ ಜೊತೆಯಲ್ಲಿದ್ದಾನೆ.
ಮಾರ್ಕನನ್ನು ಸಂಗಡ ಕರಕೊಂಡು ಬಾ, ಅವನು ನನಗೆ ಸೇವೆಗಾಗಿ ಉಪಯುಕ್ತನಾಗಿ 11
ದ್ದಾನೆ. ತುಖಿಕನನ್ನು ಎಫೆಸಕ್ಕೆ ಕಳುಹಿಸಿದೆನು. ತ್ರೋವದಲ್ಲಿ ನಾನು ಕರ್ಪನ 12,13
ಬಳಿಯಲ್ಲಿ ಬಿಟ್ಟುಬಂದ ಮೇಲಂಗಿಯನ್ನೂ ಪುಸ್ತಕಗಳನ್ನೂ ಮುಖ್ಯವಾಗಿ ಚರ್ಮದ
ಕಾಗದಗಳನ್ನೂ ನೀನು ಬರುವಾಗ ತೆಗದುಕೊಂಡು ಬಾ.

ಕಂಚುಗಾರನಾದ ಅಲೆಕ್ಸಾಂದ್ರನು ನನಗೆ ಬಹಳ ಕೇಡುಮಾಡಿದನು; ಕರ್ತನು 14
ಅವನ ಕೃತ್ಯಗಳಿಗೆ ಸರಿಯಾಗಿ ಅವನಿಗೆ ಪ್ರತಿಫಲವನ್ನು ಕೊಡುವನು. ನೀನು ಸಹ ಅವನ 15
ವಿಷಯದಲ್ಲಿ ಎಚ್ಚರಿಕೆಯಾಗಿರು; ಅವನು ನಮ್ಮ ಮಾತುಗಳನ್ನು ಬಹಳವಾಗಿ ಎದುರಿಸಿ
ದನು. ನಾನು ಮೊದಲನೇ ಸಾರಿ ಪ್ರತಿವಾದಮಾಡಿದಾಗ, ಯಾರೂ ನನ್ನ ಕಡೆ ಆಗ 16
ಲಿಲ್ಲ; ಎಲ್ಲರೂ ನನ್ನನ್ನು ಕೈಬಿಟ್ಟರು; ಇದು ಅವರ ಲೆಕ್ಕಕ್ಕೆ ಸೇರಿಸಲ್ಪಡದೆ ಇರಲಿ.
ಆದರೆ ಕರ್ತನು ನನ್ನ ಬಳಿಯಲ್ಲಿ ನಿಂತು ನನ್ನನ್ನು ಬಲಪಡಿಸಿ, ನನ್ನ ಮೂಲಕ ಸುವಾ 17
ರ್ತೆಯು ಸಂಪೂರ್ಣವಾಗಿ ಸಾರಲ್ಪಡುವಂತೆಯೂ ಅನ್ಯಜನರೆಲ್ಲರೂ ಅದನ್ನು ಕೇಳು
ವಂತೆಯೂ ಮಾಡಿದನು; ಇದಲ್ಲದೆ ಆತನು ನನ್ನನ್ನು ಸಿಂಹದ ಬಾಯೊಳಗಿಂದ ತಪ್ಪಿಸಿ
ದನು[1]. ನಾನು ಯಾವ ದುಷ್ಕೃತ್ಯವನ್ನೂ ಮಾಡದಂತೆ ಕರ್ತನು ನನ್ನನ್ನು ಕಾಪಾಡಿ 18
ತನ್ನ ಬಳಿಗೆ ಪರಲೋಕರಾಜ್ಯಕ್ಕೆ ಸೇರಿಸುವನು. ಯುಗಯುಗಾಂತರಗಳಿಗೂ ಆತನಿಗೆ
ಸ್ತೋತ್ರ. ಆಮೆನ್.

ಪ್ರಿಸ್ಕಳಿಗೂ ಅಕ್ವಿಲ್ಲನಿಗೂ ಒನೇಸಿಫೊರನ ಮನೆಯವರಿಗೂ ವಂದನೆಹೇಳು. ಎರ 19,20
ಸ್ತನು ಕೊರಿಂಥದಲ್ಲಿ ನಿಂತನು. ತ್ರೊಫಿಮನು ಅಸೌಖ್ಯವಾಗಿದ್ದದರಿಂದ ಅವನನ್ನು
ಮಿಲೇತದಲ್ಲಿ ಬಿಟ್ಟೆನು. ಚಳಿಗಾಲಕ್ಕೆ ಮುಂಚೆಯೇ ಬರುವದಕ್ಕೆ ಪ್ರಯತ್ನಮಾಡು. 21
ಯುಬೂಲನೂ ಪೂದೆಯನೂ ಲೀನನೂ ಕ್ಲೌದ್ಯಳೂ ಉಳಿದ ಸಹೋದರರೆಲ್ಲರೂ ನಿನಗೆ
ವಂದನೆಹೇಳಿದ್ದಾರೆ.

ಕರ್ತನು ನಿನ್ನ ಆತ್ಮದ ಸಂಗಡ ಇರಲಿ. 22

ಕೃಪೆಯು ನಿಮ್ಮೊಂದಿಗಿರಲಿ.

---

[1] ಅಥವಾ, ನಾನು ಸಿಂಹದ ಬಾಯಿಗೆ ಬೀಳದಂತೆ ಕಾಯಲ್ಪಟ್ಟೆನು; ೧ ಪೇತ್ರ ೫, ೮ ನೋಡು.

# THE EPISTLE OF SAINT PAUL TO TITUS

# ಪೌಲನು ತೀತನಿಗೆ ಬರೆದ ಪತ್ರಿಕೆ

ಒಕ್ಕಣೆ.

**1** 1-4 ದೇವರ ದಾಸನೂ ಯೇಸು ಕ್ರಿಸ್ತನ ಅಪೊಸ್ತಲನೂ ಆಗಿರುವ ಪೌಲನು ನಮ್ಮೆಲ್ಲರಿಗೆ ಹುದುವಾಗಿರುವ ನಂಬಿಕೆಯ ಸಂಬಂಧದಲ್ಲಿ ನನ್ನ ನಿಜ ಕುಮಾರನಾದ ತೀತನಿಗೆ ಬರೆಯುವದೇನಂದರೆ—ತಂದೆಯಾದ ದೇವರಿಂದಲೂ ನಮ್ಮ ರಕ್ಷಕನಾದ ಯೇಸು ಕ್ರಿಸ್ತನಿಂದಲೂ ನಿನಗೆ ಕೃಪೆಯೂ ಶಾಂತಿಯೂ ಆಗಲಿ. ದೇವರಾದುಕೊಂಡವರ ನಂಬಿಕೆಯೂ ಭಕ್ತಿಯನ್ನುಂಟುಮಾಡುವ ಸತ್ಯದ ಪರಿಜ್ಞಾನವೂ ವೃದ್ಧಿಯಾಗುವದಕ್ಕೋಸ್ಕರವೇ ಅಪೊಸ್ತಲನಾಗಿದ್ಧೇನೆ. ಆ ನಂಬಿಕೆಗೂ ಸತ್ಯಪರಿಜ್ಞಾನಕ್ಕೂ ನಿತ್ಯಜೀವದ ನಿರೀಕ್ಷೆಯೇ ಆಧಾರವಾಗಿದೆ. ಸುಳ್ಳಾಡದ ದೇವರು ಆ ನಿತ್ಯಜೀವವನ್ನು ಕೊಡುತ್ತೇನೆಂದು ಅನಾದಿ ಕಾಲದಲ್ಲಿ ವಾಗ್ದಾನ ಮಾಡಿ ತನ್ನ ಕ್ಲುಪ್ತ ಸಮಯದಲ್ಲಿ ವಾಗ್ದಾನ ನೆರವೇರಿಸಿ ಪ್ರಸಂಗದ ಮೂಲಕ ಪ್ರಕಟಿಸಿದನು. ಆ ಪ್ರಸಂಗೋದ್ಯೋಗವು ನಮ್ಮ ರಕ್ಷಕನಾದ ದೇವರ ಅಪ್ಪಣೆಯ ಪ್ರಕಾರ ನನಗೆ ಒಪ್ಪಿಸಲ್ಪಟ್ಟದೆ.

ಸಭೆಯ ಹಿರಿಯರಲ್ಲಿ ಇರಬೇಕಾದ ಲಕ್ಷಣಗಳು.

5 ನೀನು ಕ್ರೇತದ್ವೀಪದಲ್ಲಿ ಇನ್ನೂ ಕ್ರಮಕ್ಕೆ ಬಾರದಿರುವ ಕಾರ್ಯಗಳನ್ನು ಕ್ರಮಪಡಿಸಿ ಪಟ್ಟಣಪಟ್ಟಣಗಳಲ್ಲೂ ಸಭೆಯ ಹಿರಿಯರನ್ನು ನೇಮಿಸಬೇಕೆಂದು ನಾನು ನಿನಗೆ ಅಪ್ಪಣೆ ಕೊಟ್ಟು ನಿನ್ನನ್ನು ಅಲ್ಲೇ ಬಿಟ್ಟುಬಂದೆನಲ್ಲಾ. 6 ಸಭೆಯ ಹಿರಿಯನು ನಿಂದಾರಹಿತನೂ ಏಕಪತ್ನಿಯುಳ್ಳವನೂ ಆಗಿರಬೇಕು. ಅವನ ಮಕ್ಕಳು ಕರ್ತನನ್ನು ನಂಬಿದವರಾಗಿರಬೇಕು; ಅವರು ದುರ್ಮಾರ್ಗಸ್ಥರೆನ್ನಿಸಿಕೊಂಡವರಾಗಲಿ ಅಧಿಕಾರಕ್ಕೆ ಒಳಗಾಗದವರಾಗಲಿ ಇರಬಾರದು. 7 ಯಾಕಂದರೆ ಸಭಾಧ್ಯಕ್ಷನು ದೇವರ ಮನೆವಾರ್ತೆಯವನಾಗಿರುವದರಿಂದ ನಿಂದಾರಹಿತನಾಗಿರಬೇಕು; ಅವನು ಸ್ವೇಚ್ಛಾಪರನಾದರೂ ಮುಂಗೋಪಿಯಾದರೂ ಕುಡಿದು ಜಗಳಮಾಡುವವನಾದರೂ ಹೊಡೆದಾಡುವವನಾದರೂ ನೀಚಲಾಭವನ್ನು ಅಪೇಕ್ಷಿಸುವವನಾದರೂ ಆಗಿರದೆ, 8 ಅತಿಥಿಸತ್ಕಾರಮಾಡುವವನೂ ಒಳ್ಳೇದನ್ನು ಪ್ರೀತಿಸುವವನೂ ಸ್ವಸ್ಥಚಿತ್ತನೂ ನ್ಯಾಯವಂತನೂ ದೇವಭಕ್ತನೂ ಜಿತೇಂದ್ರಿಯನೂ

ಆಗಿದ್ದು, ತಾಸು ಸ್ವಸ್ಥಬೋಧನೆಯಿಂದ ಜನರನ್ನು ಎಚ್ಚರಿಸುವದಕ್ಕೂ ಎದುರಿಸುವವರ 9
ಬಾಯಿಕಟ್ಟುವದಕ್ಕೂ ಶಕ್ತನಾಗಿರುವಂತೆ, ಕ್ರಿಸ್ತಬೋಧಾನುಸಾರವಾದ ನಂಬತಕ್ಕ
ವಾಕ್ಯವನ್ನು ದೃಢವಾಗಿ ಹಿಡುಕೊಂಡವನಾಗಿರಬೇಕು.

ಅಧಿಕಾರಕ್ಕೆ ಒಳಗಾಗದವರ ವಿಷಯದಲ್ಲಿ ತೀತನು ಮಾಡಬೇಕಾದದ್ದು.

ಅನೇಕರು ಬರೀ ಮಾತಿನವರಾಗಿಯೂ ಮೋಸಗಾರರಾಗಿಯೂ ಇದ್ದು ಅಧಿಕಾರಕ್ಕೆ 10
ಒಳಗಾಗದವರಾಗಿದ್ದಾರೆ; ಅವರೊಳಗೆ ಹೆಚ್ಚು ಜನರು ಸುನ್ನತಿಯವರು. ಅವರು ನೀಚ 11
ಲಾಭವನ್ನು ಹೊಂದುವದಕ್ಕಾಗಿ ಮಾಡಬಾರದ ಉಪದೇಶವನ್ನು ಮಾಡಿ ಕುಟುಂಬ
ಕುಟುಂಬಗಳನ್ನೇ ಹಾಳುಮಾಡುತ್ತಾರಾದ್ದರಿಂದ ಅವರ ಬಾಯಿ ಮುಚ್ಚಿಸಬೇಕಾಗಿದೆ.
ಕ್ರೇತದವರು ಯಾವಾಗಲೂ ಸುಳ್ಳುಗಾರರೂ ದುಷ್ಟಮೃಗಗಳೂ ಸೋಮಾರಿಗಳಾದ 12
ಹೊಟ್ಟೇಬಾಕರೂ ಆಗಿದ್ದಾರೆಂದು ಅವರಲ್ಲಿಯೇ ಹುಟ್ಟಿದ ಒಬ್ಬ ಪ್ರವಾದಿಯು ಹೇಳಿದನು.
ಈ ಸಾಕ್ಷಿಯು ನಿಜವೇ. ಆದಕಾರಣ ಅವರು ಯೆಹೂದ್ಯರ ಕಲ್ಪನಾಕಥೆಗಳಿಗೂ 13-14
ಸತ್ಯಭ್ರಷ್ಟರಾದ ಮನುಷ್ಯರ ವಿಧಿಗಳಿಗೂ ಲಕ್ಷ್ಯಕೊಡದೆ, ಕ್ರಿಸ್ತನಂಬಿಕೆಯಲ್ಲಿ ಸ್ವಸ್ಥಚಿತ್ತ
ರಾಗಿರುವಂತೆ ಅವರನ್ನು ಕಠಿಣವಾಗಿ ಖಂಡಿಸು. ಶುದ್ಧರಿಗೆ ಎಲ್ಲವೂ ಶುದ್ಧವೇ; ಆದರೆ 15
ಮಲಿನವಾದವರಿಗೂ ನಂಬಿಕೆಯಿಲ್ಲದವರಿಗೂ ಯಾವದೂ ಶುದ್ಧವಲ್ಲ; ಅವರ ಬುದ್ಧಿಯೂ
ಮನಸ್ಸಾಕ್ಷಿಯೂ ಎರಡೂ ಮಲಿನವಾಗಿವೆ. ಅವರು ತಾವು ದೇವರನ್ನು ಅರಿತವರೆಂದು 16
ಹೇಳಿಕೊಳ್ಳುತ್ತಾರೆ; ಆದರೆ ಅವರ ಕ್ರಿಯೆಗಳನ್ನು ನೋಡಿದರೆ, ಅವರು ಅಸಹ್ಯರೂ ಅವಿ
ಧೇಯರೂ ಯಾವ ಸತ್ಕಾರ್ಯದ ವಿಷಯದಲ್ಲಿಯೂ ಅಪ್ರಯೋಜಕರೂ ಆಗಿರುವದ
ರಿಂದ ದೇವರನ್ನು ಅರಿಯದವರೇ.

ವೃದ್ಧರೂ ಪ್ರಾಯಸ್ಥರೂ ಸ್ತ್ರೀಪುರುಷರೂ ಎಲ್ಲರೂ ಸುನಡತೆಯುಳ್ಳವರಾಗಿರಬೇಕೆಂಬುವದೇ ಕ್ರೈಸ್ತ ಸದ್ಧರ್ಮದ ಬೋಧನೆ.

ನೀನಾದರೋ ಸ್ವಸ್ಥಬೋಧನೆಗೆ ಅನುಗುಣವಾಗಿ ಉಪದೇಶ ಮಾಡು. ಹ್ಯಾಗಂದರೆ, 2 **2**
ವೃದ್ಧರು ಮದ್ಯಪಾನಮಾಡದವರಾಗಿಯೂ ಗೌರವವುಳ್ಳವರಾಗಿಯೂ ಜಿತೇಂದ್ರಿಯರಾಗಿ
ಯೂ ನಂಬಿಕೆ ಪ್ರೀತಿ ತಾಳ್ಮೆ ಇವುಗಳಲ್ಲಿ ಸ್ವಸ್ಥರಾಗಿಯೂ ಇರಬೇಕೆಂದು ಬೋಧಿಸು.
ಹಾಗೆಯೇ ವೃದ್ಧ ಸ್ತ್ರೀಯರು ಚಾಡಿ ಹೇಳುವವರೂ ಮದ್ಯಪಾನಾಸಕ್ತರೂ ಆಗಿರದೆ, 3
ದೇವಭಕ್ತೆಯರಿಗೆ ಯೋಗ್ಯವಾದ ನಡತೆಯುಳ್ಳವರೂ ಸದ್ಬೋಧನೆ ಹೇಳುವವರೂ ಆಗಿರ
ಬೇಕೆಂದು ಬೋಧಿಸು. ಇದಲ್ಲದೆ ಅವರು ಪ್ರಾಯದ ಸ್ತ್ರೀಯರಿಗೆ—ನಿಮ್ಮ ಮೂಲಕ 4
ದೇವರ ವಾಕ್ಯಕ್ಕೆ ದೂಷಣೆಯಾಗದಂತೆ ನೀವು ಗಂಡಂದಿರನ್ನೂ ಮಕ್ಕಳನ್ನೂ ಪ್ರೀತಿಸು
ವವರಾಗಿಯೂ ದಮೆಯುಳ್ಳವರಾಗಿಯೂ ಪತಿವ್ರತೆಯರಾಗಿಯೂ ಮನೆಯಲ್ಲೇ ಕೆಲಸ 5
ಮಾಡುವವರಾಗಿಯೂ ಸುಶೀಲೆಯರಾಗಿಯೂ ನಿಮ್ಮ ಗಂಡಂದಿರಿಗೆ ಅಧೀನರಾಗಿಯೂ
ಇರಬೇಕೆಂದು ಬುದ್ಧಿಕಲಿಸುವ ಹಾಗೆ ಬೋಧಿಸು. ಹಾಗೆಯೇ ಎಲ್ಲಾ ವಿಷಯಗಳಲ್ಲೂ 6
ಜಿತೇಂದ್ರಿಯರಾಗಿರಬೇಕೆಂದು ನೀನು ಯೌವನಸ್ಥರನ್ನು ಎಚ್ಚರಿಸು. ಸತ್ಕಾರ್ಯ ಮಾಡು 7

ವದರಲ್ಲಿ ನೀನೇ ಮಾದರಿಯಾಗಿರು. ನೀನು ಮಾಡುವ ಉಪದೇಶದಲ್ಲಿ ಯಥಾರ್ಥತ್ವ
8 ವೂ ಗೌರವವೂ ಆಕ್ಷೇಪಣೆಗೆ ಆಸ್ಪದವಿಲ್ಲದಂಥಾ ಸ್ವಸ್ಥಬುದ್ಧಿಯೂ ಇರಬೇಕು; ಆಗ
ನಮ್ಮನ್ನು ಎದುರಿಸುವವರು ನಮ್ಮ ವಿಷಯದಲ್ಲಿ ಕೆಟ್ಟದ್ದೇನೂ ಹೇಳುವದಕ್ಕೆ ಅವಕಾಶ
9 ವಿಲ್ಲದೆ ನಾಚಿಕೊಳ್ಳುವರು. ದಾಸರು ಎಲ್ಲಾದರಲ್ಲಿ ತಮ್ಮ ಯಜಮಾನರಿಗೆ ಅಧೀನ
ರಾಗಿದ್ದು ಅವರನ್ನು ಮೆಚ್ಚಿಸುವದಕ್ಕೆ ಪ್ರಯಾಸಪಡುತ್ತಾ ಎದುರುಮಾತನ್ನಾಡದೆ ಯಾವ
10 ದನ್ನೂ ಕದ್ದಿಟ್ಟುಕೊಳ್ಳದೆ ಪೂರಾ ನಂಬಿಗಸ್ತರೆಂದು ಹೆಸರುಹೊಂದಿ ನಮ್ಮ ರಕ್ಷಕನಾದ
ದೇವರ ಉಪದೇಶಕ್ಕೆ ಎಲ್ಲಾ ವಿಷಯಗಳಲ್ಲಿ ಅಲಂಕಾರವಾಗಿರಬೇಕೆಂದು ಬೋಧಿಸು.
11 ಯಾಕಂದರೆ ಎಲ್ಲಾ ಮನುಷ್ಯರಿಗೆ ರಕ್ಷಣೆಯನ್ನುಂಟುಮಾಡುವ ದೇವರ ಕೃಪೆಯು
12-13 ಪ್ರತ್ಯಕ್ಷವಾಯಿತು; ನಾವು ಭಕ್ತಿಹೀನತೆಯನ್ನೂ ಲೋಕದ ಆಶೆಗಳನ್ನೂ ವಿಸರ್ಜಿಸಿ,
ಭಾಗ್ಯಕರವಾದ ನಿರೀಕ್ಷೆಯನ್ನು, ಅಂದರೆ ಮಹಾದೇವರ ಮತ್ತು ನಮ್ಮ ರಕ್ಷಕನಾದ
ಯೇಸು ಕ್ರಿಸ್ತನ ಪ್ರಭಾವದ ಪ್ರತ್ಯಕ್ಷತೆಯನ್ನು, ಎದುರುನೋಡುತ್ತಾ ಇಹಲೋಕದಲ್ಲಿ
ಸ್ವಸ್ಥಚಿತ್ತರಾಗಿಯೂ ನೀತಿವಂತರಾಗಿಯೂ ಭಕ್ತಿಯುಳ್ಳವರಾಗಿಯೂ ಬದುಕಬೇಕೆಂದು
14 ಅದು ನಮಗೆ ಬೋಧಿಸುತ್ತದೆ. ಆತನು ನಮ್ಮನ್ನು ಸಕಲ ಅಧರ್ಮದಿಂದ ಬಿಡಿಸುವ
ದಕ್ಕೂ ಸತ್ಕ್ರಿಯೆಗಳಲ್ಲಿ ಆಸಕ್ತರಾದ ಸ್ವಕೀಯ ಜನರನ್ನು ತನಗಾಗಿ ಪರಿಶುದ್ಧಮಾಡು
ವದಕ್ಕೂ ನಮಗೋಸ್ಕರ ತನ್ನನ್ನು ಮರಣಕ್ಕೆ ಒಪ್ಪಿಸಿದನು.
15 ಈ ಕಾರ್ಯಗಳ ವಿಷಯದಲ್ಲಿ ಬೋಧಿಸುತ್ತಾ ಎಚ್ಚರಿಸುತ್ತಾ ಪೂರ್ಣ ಅಧಿಕಾರದಿಂದ
ದುರ್ನಡತೆಯನ್ನು ಖಂಡಿಸುತ್ತಾ ಇರು. ಯಾರೂ ನಿನ್ನನ್ನು ತಿರಸ್ಕರಿಸದ ಹಾಗೆ
ನೋಡಿಕೋ.

**3** ಅಧಿಪತಿಗಳಿಗೂ ಅಧಿಕಾರಿಗಳಿಗೂ ಅಧೀನರಾಗಿ ವಿಧೇಯರಾಗಿರಬೇಕೆಂತಲೂ ಸಕಲ
2 ಸತ್ಕಾರ್ಯಗಳನ್ನು ಮಾಡುವದಕ್ಕೆ ಸಿದ್ಧರಾಗಿರಬೇಕೆಂತಲೂ, ಯಾರನ್ನೂ ದೂಷಿಸದೆ,
ಜಗಳವಾಡದೆ, ಎಲ್ಲಾ ಮನುಷ್ಯರಿಗೆ ಪೂರ್ಣ ಸಾಧುಗುಣವನ್ನು ತೋರಿಸುತ್ತಾ ಸಾತ್ವಿಕ
3 ರಾಗಿರಬೇಕೆಂತಲೂ ಅವರಿಗೆ ಜ್ಞಾಪಕಕೊಡು. ನಾವು ಸಹ ಮೊದಲು ಅವಿವೇಕಿಗಳೂ
ಅವಿಧೇಯರೂ ಮೋಸಹೋದವರೂ ನಾನಾ ವಿಧವಾದ ದುರಾಶೆಗಳಿಗೆ ಮತ್ತು ಭೋಗ
ಗಳಿಗೆ ಅಧೀನರೂ ಕೆಟ್ಟತನ ಹೊಟ್ಟೇಕಿಚ್ಚುಗಳಲ್ಲಿ ಕಾಲಕಳೆಯುವವರೂ ಅಸಹ್ಯರೂ
4 ಒಬ್ಬರನ್ನೊಬ್ಬರು ಹಗೆಮಾಡುವವರೂ ಆಗಿದ್ದೆವು. ಆದರೆ ನಮ್ಮ ರಕ್ಷಕನಾದ ದೇವರ
5 ದಯೆಯೂ ಜನೋಪಕಾರವೂ ಪ್ರತ್ಯಕ್ಷವಾದಾಗ, ನಾವು ಮಾಡಿದ ಪುಣ್ಯಕ್ರಿಯೆಗಳ
ನಿಮಿತ್ತದಿಂದಲ್ಲ ಆತನ ಕರುಣೆಯಲ್ಲಿಯೇ ಪುನರ್ಜನ್ಮವನ್ನು ಸೂಚಿಸುವ ಸ್ನಾನದ
ಮೂಲಕವಾಗಿಯೂ ಪವಿತ್ರಾತ್ಮನು ನಮ್ಮಲ್ಲಿ ನೂತನ ಸ್ವಭಾವವನ್ನು ಉಂಟುಮಾಡುವ
7 ದರ ಮೂಲಕವಾಗಿಯೂ ಆತನು ನಮ್ಮನ್ನು ರಕ್ಷಿಸಿದನು. ನಾವು ನಮ್ಮ ರಕ್ಷಕನಾದ
ಯೇಸು ಕ್ರಿಸ್ತನ ಕೃಪೆಯಿಂದ ನೀತಿವಂತರೆಂದು ನಿರ್ಣಯಿಸಲ್ಪಟ್ಟು ನಿತ್ಯಜೀವದ ನಿರೀಕ್ಷೆ
6 ಯನ್ನು ಪಡೆದು ಅದಕ್ಕೆ ಬಾಧ್ಯರಾಗುವಂತೆ ದೇವರು ಆತನ ಮೂಲಕ ಪವಿತ್ರಾತ್ಮವನ್ನು
8 ನಮ್ಮ ಮೇಲೆ ಸಮೃದ್ಧಿಯಾಗಿ ಸುರಿಸಿದನು. ಇದು ನಂಬತಕ್ಕ ಮಾತಾಗಿದೆ; ದೇವರಲ್ಲಿ
ನಂಬಿಕೆ ಇಟ್ಟಿರುವವರು ಸತ್ಕ್ರಿಯೆಗಳನ್ನು ಮಾಡುವದರಲ್ಲಿ ಜಾಗರೂಕರಾಗಿರುವಂತೆ,
ನೀನು ಈ ಎಲ್ಲಾ ಮಾತುಗಳನ್ನು ದೃಢವಾಗಿ ಹೇಳಬೇಕೆಂದು ಅಪೇಕ್ಷಿಸುತ್ತೇನೆ. ಇವು

ಉತ್ತಮವಾಗಿಯೂ ಮನುಷ್ಯರಿಗೆ ಪ್ರಯೋಜನಕರವಾಗಿಯೂ ಅವೆ. ಆದರೆ ಬುದ್ಧಿ 9 ಯಿಲ್ಲದ ವಿತರ್ಕಗಳಿಗೂ ವಂಶಾವಳಿಗಳಿಗೂ ಜಗಳಗಳಿಗೂ ಧರ್ಮಶಾಸ್ತ್ರದ ವಿಷಯ ವಾದ ವಾಗ್ವಾದಗಳಿಗೂ ದೂರವಾಗಿರು; ಅವು ನಿಷ್ಪ್ರಯೋಜನವಾಗಿಯೂ ವ್ಯರ್ಥವಾ ಗಿಯೂ ಅವೆ. ಸಭೆಯಲ್ಲಿ ಭೇದ ಹುಟ್ಟಿಸುವ ಮನುಷ್ಯನನ್ನು ಎರಡು ಸಾರಿ ಬುದ್ಧಿ 10 ಹೇಳಿದ ಮೇಲೆ ಬಿಟ್ಟುಬಿಡು; ಅಂಥವನು ಸನ್ಮಾರ್ಗತಪ್ಪಿದವನೂ ಪಾಪಮಾಡುವವನೂ 11 ಆಗಿದ್ದಾನೆ; ತಾನು ಶಿಕ್ಷಾಪಾತ್ರನೆಂದು ಅವನ ಮನಸ್ಸೇ ನಿರ್ಣಯಿಸುವದು.

### ಕಡೇ ಮಾತುಗಳು.

ನಾನು ನಿಕೊಪೊಲಿಯಲ್ಲಿ ಚಳಿಗಾಲವನ್ನು ಕಳೆಯಬೇಕೆಂದು ನಿಶ್ಚಯಿಸಿಕೊಂಡದರಿಂದ 12 ಅರ್ತೆಮನನ್ನಾಗಲಿ ತುಖಿಕನನ್ನಾಗಲಿ ನಿನ್ನ ಬಳಿಗೆ ಕಳುಹಿಸಿದ ಕೂಡಲೆ ಅಲ್ಲಿಗೆ ನನ್ನ ಹತ್ತರ ಬರುವದಕ್ಕೆ ಪ್ರಯತ್ನಮಾಡು. ನ್ಯಾಯಶಾಸ್ತ್ರಿ ಜೇನನನ್ನೂ ಅಪೊಲ್ಲೋಸನನ್ನೂ 13 ಜಾಗ್ರತೆಯಾಗಿ ಸಾಗಕಳುಹಿಸು; ಅವರಿಗೇನೂ ಕೊರತೆಯಾಗಬಾರದು. ನಮ್ಮ ಜನರು 14 ಸತ್ಕ್ರಿಯಾಹೀನರಾಗದಂತೆ ಅವರೂ ಸಹೋದರರಿಗೆ ಬೇಕಾದದ್ದನ್ನು ಕೊಡುವವರಾಗಿ ಪರೋಪಕಾರವನ್ನು ಕಲಿತುಕೊಳ್ಳಲಿ.

ನನ್ನೊಂದಿಗಿರುವವರೆಲ್ಲರೂ ನಿನಗೆ ವಂದನೆ ಹೇಳುತ್ತಾರೆ. ಕ್ರಿಸ್ತನನ್ನು ನಂಬುವವ 15 ರಾಗಿ ನಮ್ಮನ್ನು ಪ್ರೀತಿಸುವವರಿಗೆ ವಂದನೆ ಹೇಳು.

ಕೃಪೆಯು ನಿಮ್ಮೆಲ್ಲರ ಮೇಲೆ ಇರಲಿ.



# THE EPISTLE OF SAINT PAUL TO PHILEMON

# ಪೌಲನು ಫಿಲೆಮೋನನಿಗೆ ಬರೆದ ಪತ್ರಿಕೆ

ಒಕ್ಕಣೆ.

1 ಕ್ರಿಸ್ತ ಯೇಸುವಿನ ಸೆರೆಯವನಾಗಿರುವ ಪೌಲನೂ ಸಹೋದರನಾದ ತಿಮೊಥೆಯನೂ ನಮಗೆ ಪ್ರಿಯನಾಗಿಯೂ ಜೊತೆಗೆಲಸದವನಾಗಿಯೂ ಇರುವ ಫಿಲೆಮೋನನೆಂಬ ನಿನಗೂ 2 ಸಹೋದರಿಯಾದ ಅಪ್ಫಿಯಳಿಗೂ ನಮ್ಮ ಸಹಭಟನಾದ ಅರ್ಖಿಪ್ಪನಿಗೂ ನಿನ್ನ ಮನೆಯಲ್ಲಿ 3 ಕೂಡುವ ಸಭೆಯವರಿಗೂ ಬರೆಯುವದೇನಂದರೆ—ನಮ್ಮ ತಂದೆಯಾದ ದೇವರಿಂದಲೂ ಕರ್ತನಾದ ಯೇಸು ಕ್ರಿಸ್ತನಿಂದಲೂ ನಿಮಗೆ ಕೃಪೆಯೂ ಶಾಂತಿಯೂ ಆಗಲಿ.

ಫಿಲೆಮೋನನ ಸದ್ಗುಣಗಳ ನಿಮಿತ್ತ ಪೌಲನು ದೇವರಿಗೆ ಮಾಡುವ ಸ್ತೋತ್ರ.

5 ಕರ್ತನಾದ ಯೇಸುವಿನ ಮೇಲೆ ನೀನು ಇಟ್ಟಿರುವ ನಂಬಿಕೆಯನ್ನು ಕುರಿತೂ ದೇವ 4 ಜನರೆಲ್ಲರ ಮೇಲಿರುವ ನಿನ್ನ ಪ್ರೀತಿಯನ್ನು ಕುರಿತೂ ಕೇಳಿದ್ದರಿಂದ ನಾನು ಪ್ರಾರ್ಥನೆ ಮಾಡುವಾಗೆಲ್ಲಾ ದೇವರಿಗೆ ಯಾವಾಗಲೂ ಸ್ತೋತ್ರವನ್ನು ಸಲ್ಲಿಸಿ ನಿನಗೋಸ್ಕರ ವಿಜ್ಞಾ 6 ಪನೆ ಮಾಡುತ್ತೇನೆ. ಕ್ರಿಸ್ತನಲ್ಲಿ ನಮಗೆ ದೊರಕಿರುವ ಎಲ್ಲಾ ಸುವರಗಳನ್ನು ಕುರಿತು ನೀನು ತಿಳುವಿಕೆಯನ್ನು ಹೊಂದುತ್ತಿರುವಲ್ಲಿ ಕ್ರಿಸ್ತನಂಬಿಕೆಯಲ್ಲಿರುವ ನಿನ್ನ ಅನ್ಯೋನ್ಯ ತೆಯು[1] ಕ್ರಿಸ್ತನಿಗೆ ಹೆಚ್ಚಾದ ಮಹಿಮೆಯನ್ನು ಉಂಟುಮಾಡಬೇಕೆಂದು ಪ್ರಾರ್ಥಿಸುತ್ತೇನೆ. 7 ಸಹೋದರನೇ, ನಿನ್ನ ಮೂಲಕ ದೇವಜನರ ಹೃದಯಗಳಿಗೆ ಪ್ರೋತ್ಸಾಹ ಉಂಟಾದ್ದರಿಂದ ನಿನ್ನ ಪ್ರೀತಿಯ ನಿಮಿತ್ತ ನನಗೆ ಬಹಳ ಸಂತೋಷವೂ ಆದರಣೆಯೂ ಉಂಟಾಯಿತು.

ಓಡಿಹೋದ ಓನೇಸಿಮನೆಂಬ ದಾಸನನ್ನು ಕ್ಷಮಿಸಿ ಸೇರಿಸಿಕೊಳ್ಳಬೇಕೆಂದು ವಿಜ್ಞಾಪನೆ.

8-9 ಆದಕಾರಣ ನಿನಗೆ ಯುಕ್ತವಾದದ್ದನ್ನು ಆಜ್ಞಾಪಿಸುವದಕ್ಕೆ ಮುದುಕನಾಗಿಯೂ[2] ಈಗ ಕ್ರಿಸ್ತ ಯೇಸುವಿನ ನಿಮಿತ್ತ ಸೆರೆಯವನಾಗಿಯೂ ಇರುವ ಪೌಲನೆಂಬ ನನಗೆ ಕ್ರಿಸ್ತ ನಲ್ಲಿ ಪೂರಾ ಅಧಿಕಾರವಿದ್ದಾಗ್ಯೂ, ಹಾಗೆ ಆಜ್ಞಾಪಿಸದೆ ಪ್ರೀತಿಯ ನಿಮಿತ್ತ ನಿನ್ನನ್ನು ಬೇಡಿ 10 ಕೊಳ್ಳುತ್ತೇನೆ. ನಾನು ಸೆರೆಯಲ್ಲಿ ಪಡೆದಿರುವ ನನ್ನ ಮಗನಾದ[3] ಒನೇಸಿಮನ ವಿಷಯ

---

[1] ಅಥವಾ, ನಿನ್ನ ನಂಬಿಕೆಯಿಂದ ಉಂಟಾಗುವ ಪರೋಪಕಾರಭಾವವು. [2] ಅಥವಾ, ರಾಯಭಾರಿಯಾಗಿಯೂ. [3] ಅಂದರೆ, ಗುಣಪಡಿಸಿದ ಶಿಷ್ಯನಾದ.

ದಲ್ಲಿ ನಿನ್ನನ್ನು ಬೇಡಿಕೊಳ್ಳುತ್ತೇನೆ. ಅವನು ಮೊದಲು ನಿನಗೆ ಅಪ್ರಯೋಜಕನಾಗಿ 11 ದ್ದನು, ಈಗ ನಿನಗೂ ನನಗೂ ಪ್ರಯೋಜಕನಾಗಿದ್ದಾನೆ. ಅವನು ನನಗೆ ಪ್ರಾಣದಂತಿ 12 ದ್ದಾಗ್ಯೂ ಅವನನ್ನು ನಿನ್ನ ಬಳಿಗೆ ಕಳುಹಿಸಿಕೊಟ್ಟಿದ್ದೇನೆ. ನಾನು ಸುವಾರ್ತೆಯ ನಿಮಿತ್ತ 13 ಸೆರೆಯಲ್ಲಿರಲಾಗಿ ನಿನಗೆ ಬದಲಾಗಿ ಅವನು ನನಗೆ ಉಪಚಾರ ಮಾಡುವಂತೆ ಅವನನ್ನು ನನ್ನ ಬಳಿಯಲ್ಲೇ ಇಟ್ಟುಕೊಳ್ಳಬೇಕೆಂದು ಯೋಚಿಸಿದ್ದೆನು. ಆದರೆ ನಿನ್ನ ಉಪಕಾರವು 14 ಬಲಾತ್ಕಾರದಿಂದಾಗದೆ ಮನಃಪೂರ್ವಕವಾಗಿಯೇ ಇರಬೇಕೆಂದು ಯೋಚಿಸಿ ನಿನ್ನ ಸಮ್ಮ ತಿಯಿಲ್ಲದೆ ಏನು ಮಾಡುವದಕ್ಕೂ ನನಗೆ ಇಷ್ಟವಿರಲಿಲ್ಲ. ಅವನು ಸ್ವಲ್ಪಕಾಲ ನಿನ್ನಿಂದ 15 ಅಗಲಿಸಲ್ಪಟ್ಟದ್ದು ನಿರಂತರವೂ ನಿನ್ನವನಾಗಬೇಕೆಂಬುವದಕ್ಕೋಸ್ಕರವೋ ಏನೋ. ಇನ್ನು 16 ಮೇಲೆ ಅವನು ದಾಸನಾಗದೆ ದಾಸನಿಗಿಂತ ಉತ್ತಮನಾಗಿ ಪ್ರಿಯ ಸಹೋದರನಂತಾಗ ಬೇಕು. ಅವನು ನನಗೆ ಬಹಳ ಪ್ರಿಯನಾಗಿರುವಲ್ಲಿ, ನಿನಗೆ ಲೋಕಸಂಬಂಧದಲ್ಲಿಯೂ ಕರ್ತನ ಸಂಬಂಧದಲ್ಲಿಯೂ ಇನ್ನೂ ಎಷ್ಟೋ ಪ್ರಿಯನಾಗಿರುವನು. ಹಾಗಾದರೆ ನೀನು 17 ನನ್ನನ್ನು ಜತೆಗಾರನೆಂದು ಎಣಿಸಿದರೆ, ನನ್ನನ್ನು ಸೇರಿಸಿಕೊಳ್ಳುವ ಪ್ರಕಾರವೇ ಅವನನ್ನು ಸೇರಿಸಿಕೋ. ಅವನಿಂದ ನೀನು ಏನಾದರೂ ನಷ್ಟಪಟ್ಟಿದ್ದರೆ ಅಥವಾ ಅವನು ಸಾಲವೇ 18 ನಾದರೂ ತೀರಿಸಬೇಕಾಗಿದ್ದರೆ ಅದನ್ನು ನನ್ನ ಲೆಕ್ಕಕ್ಕೆ ಹಾಕು; ನಾನೇ ಕೊಟ್ಟು ತೀರಿಸು 19 ತ್ತೇನೆಂದು ಪೌಲನೆಂಬ ನಾನು ಸ್ವಂತ ಕೈಯಿಂದ ಬರೆದಿದ್ದೇನೆ. ನಿನ್ನ ಆತ್ಮವಿಷಯದಲ್ಲಿ ನೀನೇ ನನ್ನ ಸಾಲದಲ್ಲಿದ್ದೀ ಎಂದು ನಾನು ಬೇರೆ ಹೇಳಬೇಕೇ. ಹೌದು, ಸಹೋದ 20 ರನೇ, ಕರ್ತನಲ್ಲಿ ನಿನ್ನಿಂದ ನನಗೆ ಪ್ರಯೋಜನವಾಗುವ ಹಾಗೆ ಮಾಡು; ಕ್ರಿಸ್ತನಲ್ಲಿ ನನ್ನ ಹೃದಯವನ್ನು ಸಂತೋಷಪಡಿಸು. ನನ್ನ ಮಾತನ್ನು ಕೇಳುವಿ ಎಂಬ ಭರವಸವುಳ್ಳವ 21 ನಾಗಿ ಈ ಪತ್ರಿಕೆಯನ್ನು ನಿನಗೆ ಬರೆದಿದ್ದೇನೆ. ನಾನು ಹೇಳಿದ್ದಕ್ಕಿಂತಲೂ ಹೆಚ್ಚಾಗಿ ಮಾಡುವಿಯೆಂದು ನನಗೆ ಗೊತ್ತುಂಟು.

### ಕಡೇ ಮಾತುಗಳೂ ವಂದನೆಗಳೂ.

ಇದಲ್ಲದೆ ದೇವರು ನಿನ್ನ ಪ್ರಾರ್ಥನೆಗಳನ್ನು ಕೇಳಿ ನನ್ನನ್ನು ನಿಮ್ಮ ಬಳಿಗೆ ಬರುವದಕ್ಕೆ 22 ಅನುಗ್ರಹಿಸುವನೆಂದು ನನಗೆ ನಿರೀಕ್ಷೆ ಉಂಟು. ಆದಕಾರಣ ನನಗೋಸ್ಕರ ಇಳು ಕೊಳ್ಳುವ ಸ್ಥಳವನ್ನು ಸಿದ್ಧಮಾಡು.

ಕ್ರಿಸ್ತ ಯೇಸುವಿನ ನಿಮಿತ್ತವಾಗಿ ನನ್ನ ಜೊತೆಸೆರೆಯವನಾದ ಎಪಫ್ರನೂ ನನ್ನ ಸಹ 23 ಕಾರಿಗಳಾದ ಮಾರ್ಕ ಅರಿಸ್ತಾರ್ಕ ದೇಮ ಲೂಕರೂ ನಿನ್ನನ್ನು ವಂದಿಸುತ್ತಾರೆ. 24

ನಮ್ಮ ಕರ್ತನಾದ ಯೇಸು ಕ್ರಿಸ್ತನ ಕೃಪೆಯು ನಿಮ್ಮ ಆತ್ಮದ ಮೇಲೆ ಇರಲಿ. 25

# THE EPISTLE TO THE HEBREWS

# ಇಬ್ರಿಯರಿಗೆ ಬರೆದ ಪತ್ರಿಕೆ

### ಪತ್ರಿಕೆಯ ಪ್ರಸ್ತಾಪವು.

**1** ಪುರಾತನಕಾಲದಲ್ಲಿ ನಮ್ಮ ಪಿತೃಗಳ ಸಂಗಡ ಪ್ರವಾದಿಗಳ ಬಾಯಿಂದ ಭಾಗಭಾಗವಾ
2 ಗಿಯೂ ವಿಧವಿಧವಾಗಿಯೂ ಮಾತಾಡಿದ ದೇವರು ಈ ಅಂತ್ಯದಿನಗಳಲ್ಲಿ ನಮ್ಮ
ಸಂಗಡ ಮಗನ ಮುಖಾಂತರ ಮಾತಾಡಿದ್ದಾನೆ. ಈತನನ್ನು ಎಲ್ಲಕ್ಕೂ ಬಾಧ್ಯನನ್ನಾಗಿ
3 ನೇಮಿಸಿದನು, ಈತನ ಮೂಲಕವೇ ಜಗತ್ತನ್ನು[1] ಉಂಟುಮಾಡಿದನು. ಈತನು ದೇವರ
ಪ್ರಭಾವದ ಪ್ರಕಾಶವೂ ಆತನ ತತ್ವದ ಮೂರ್ತಿಯೂ ತನ್ನ ಶಕ್ತಿವಾಕ್ಯದಿಂದ ಸಮಸ್ತಕ್ಕೆ
ಆಧಾರವೂ ಆಗಿದ್ದು, ಪಾಪವಿಶುದ್ಧಿಮಾಡಿದ ಮೇಲೆ ಉನ್ನತಲೋಕದೊಳಗೆ ಮಹತ್ವವುಳ್ಳ
ದೇವರ ಬಲಪಾರ್ಶ್ವದಲ್ಲಿ ಆಸನಾರೂಢನಾದನು.

### ಯೇಸು ದೇವರ ಮಗನಾಗಿದ್ದು ದೇವದೂತರಿಗಿಂತಲೂ ಶ್ರೇಷ್ಠನು.

4 ಈತನು ದೇವದೂತರಿಗಿಂತಲೂ ಉತ್ತಮನಾದನು; ಅವರಿಗಿಂತ ಶ್ರೇಷ್ಠವಾದ ಹೆಸ
ರನ್ನು ಹೊಂದಿದನಲ್ಲಾ; ಹ್ಯಾಗಂದರೆ—
5 ನನಗೆ ನೀನು ಮಗನು; ನಾನೇ ಈ ಹೊತ್ತು ನಿನ್ನನ್ನು ಪಡೆದಿದ್ಧೇನೆ
ಎಂತಲೂ[2],
ನಾನು ಅವನಿಗೆ ತಂದೆಯಾಗಿರುವೆನು; ಅವನು ನನಗೆ ಮಗನಾಗಿರುವನು
ಎಂತಲೂ[3] ದೇವರು ತನ್ನ ದೂತರೊಳಗೆ ಯಾವನಿಗಾದರೂ ಎಂದಾದರೂ ಹೇಳಿ
6 ದ್ದುಂಟೋ? ಆದರೆ ಆತನು ತನ್ನ ಚೊಚ್ಚಲಮಗನನ್ನು ಭೂಲೋಕದೊಳಗೆ ತಿರಿಗಿ
ಬರಮಾಡುವಾಗ[4]
ದೇವರ ದೂತರೆಲ್ಲರೂ ಈತನಿಗೆ ಅಡ್ಡ ಬೀಳಲಿ
7 ಎಂದು[5] ಹೇಳುತ್ತಾನೆ. ದೂತರ ವಿಷಯದಲ್ಲಿ ಹೇಳುವದೇನಂದರೆ—

---

[1] ಮೂಲ: ಯುಗಗಳನ್ನು. [2] ಕೀರ್ತನೆ ೨, ೭. [3] ೨ ಸಮುವೇಲ ೭, ೧೪.
[4] ಅಥವಾ, ಹಾಗೆ ಹೇಳದೆ ಆತನು ತನ್ನ ಚೊಚ್ಚಲಮಗನನ್ನು ಭೂಲೋಕದೊಳಗೆ ಬರಮಾಡುವಾಗ.
[5] ದ್ವಿತೀಯ ನ್ಯಾಯ ೩೨, ೪೩; ಕೀರ್ತನೆ ೯೭, ೭.

ದೇವರು ತನ್ನ ದೂತರನ್ನು ಗಾಳಿಗಳನ್ನಾಗಿಯೂ
ತನ್ನ ಊಳಿಗದವರನ್ನು ಅಗ್ನಿಜ್ವಾಲೆಯನ್ನಾಗಿಯೂ ಮಾಡುತ್ತಾನೆ[1]

ಎಂಬುವದು. ಆದರೆ ಮಗನ ವಿಷಯದಲ್ಲಿ— 8

ದೇವರೇ[2], ನಿನ್ನ ಸಿಂಹಾಸನವು ಸದಾಕಾಲವೂ ಇರುವದು;
ನ್ಯಾಯದಂಡವೇ ನಿನ್ನ ರಾಜದಂಡವಾಗಿದೆ;
ನೀನು ನೀತಿಯನ್ನು ಪ್ರೀತಿಸಿದಿ, ಅಧರ್ಮವನ್ನು ದ್ವೇಷಿಸಿದಿ; 9
ಆದದರಿಂದ, ದೇವರೇ[2], ನಿನ್ನ ದೇವರು ನಿನ್ನನ್ನು ನಿನ್ನ ಜೊತೆಗಾರರಿಗಿಂತ
ಉನ್ನತಸ್ಥಾನಕ್ಕೆ ಏರಿಸಿ ಪರಮಾನಂದತೈಲದಿಂದ ಅಭಿಷೇಕಿಸಿದ್ದಾನೆ[3]

ಎಂತಲೂ,

ಕರ್ತನೇ, ನೀನು ಆದಿಯಲ್ಲಿ ಭೂಮಿಗೆ ಅಸ್ತಿವಾರವನ್ನು ಹಾಕಿದಿ, 10
ಗಗನಮಂಡಲವು ನಿನ್ನ ಕೈಕೆಲಸವಾಗಿಯೇ ಅದೆ;
ಅವು ನಾಶವಾಗುವವು, ಆದರೆ ನೀನು ಶಾಶ್ವತವಾಗಿ ಇರುತ್ತೀ; 11
ಅವೆಲ್ಲವೂ ವಸ್ತ್ರದಂತೆ ಹಳೇವಾಗುವವು,
ಅವುಗಳನ್ನು ಮೇಲಂಗಿಯಂತೆಯೂ ವಸ್ತ್ರದಂತೆಯೂ ಮಡಿಸುತ್ತೀ, 12
ಮತ್ತು ಅವು ಮಾರ್ಪಡುವವು;
ನೀನಾದರೋ ಏಕರೀತಿಯಾಗಿದ್ದೀ.
ನಿನ್ನ ವರುಷಗಳು ಮುಗಿದುಹೋಗುವದಿಲ್ಲ[4]

ಎಂತಲೂ ಹೇಳುತ್ತಾನೆ. ಆದರೆ ದೇವದೂತರಲ್ಲಿ ಯಾವನ ವಿಷಯದಲ್ಲಿಯಾದರೂ— 13

ನಾನು ನಿನ್ನ ವಿರೋಧಿಗಳನ್ನು ನಿನ್ನ ಪಾದಗಳಿಗೆ ಪೀಠವಾಗ ಮಾಡುವ
ತನಕ
ನನ್ನ ಬಲಪಾರ್ಶ್ವದಲ್ಲಿ ಕೂತುಕೊಂಡಿರು[5]

ಎಂಬದಾಗಿ ಎಂದಾದರೂ ಹೇಳಿದ್ದಾನೋ? ಇವರೆಲ್ಲರು ರಕ್ಷಣೆಯನ್ನು ಬಾಧ್ಯವಾಗಿ 14 ಹೊಂದಬೇಕಾಗಿರುವವರ ಸೇವೆಗೋಸ್ಕರ ಕಳುಹಿಸಲ್ಪಡುವ ಊಳಿಗದ ಆತ್ಮಗಳಲ್ಲವೋ?

**2** ಆದದರಿಂದ, ನಾವು ಕೇಳಿದ ಸಂಗತಿಗಳಿಗೆ ತಪ್ಪಿಹೋದೇವೆಂದು[6] ಭಯಪಟ್ಟು, ಅವುಗಳಿಗೆ ಹೆಚ್ಚಾಗಿ ಲಕ್ಷ್ಯಕೊಡುವವರಾಗಿರಬೇಕು. 2 ಯಾಕಂದರೆ ದೇವದೂತರ ಮೂಲಕ ಹೇಳಲ್ಪಟ್ಟ ವಾಕ್ಯವು ಸ್ಥಿರವಾಗಿದ್ದು ಅದನ್ನು ಮೀರಿ ಮಾಡಿದ ಪ್ರತಿಯೊಂದು ತಪ್ಪಿಗೂ ಅವಿಧೇಯತ್ವಕ್ಕೂ ನ್ಯಾಯವಾದ ಪ್ರತಿಫಲವುಂಟಾದ ಮೇಲೆ, 3 ನಾವು ನಮ್ಮ ಮುಂದಿಟ್ಟಿರುವ ಈ ಅತ್ಯಂತ ವಿಶೇಷ ರಕ್ಷಣೆಯನ್ನು ಅಲಕ್ಷ್ಯಮಾಡಿದರೆ, ತಪ್ಪಿಸಿಕೊಳ್ಳುವದು ಹ್ಯಾಗೆ? ಇದು ಕರ್ತನಿಂದ ಮೊದಲು ಹೇಳಲ್ಪಟ್ಟಿತು; ಆತನಿಂದ ಕೇಳಿದವರು ಇದನ್ನು ನಮಗೆ ಸ್ಥಿರಪಡಿಸಿದರು; 4 ಮತ್ತು ದೇವರು ಅವರ ಕೈಯಿಂದ ಸೂಚಕಕಾರ್ಯಗಳನ್ನೂ ಅದ್ಭುತ ಕಾರ್ಯಗಳನ್ನೂ ನಾನಾವಿಧವಾದ ಮಹತ್ಕಾರ್ಯಗಳನ್ನೂ ನಡಿಸಿ ಪವಿತ್ರಾತ್ಮವರ

---

[1] ಕೀರ್ತನೆ ೧೦೪, ೪. [2] ಅಂದರೆ, ಅರಸನೇ. [3] ಕೀರ್ತನೆ ೪೫, ೬. ೭.

[4] ಕೀರ್ತನೆ ೧೦೨, ೨೫—೨೭. [5] ಕೀರ್ತನೆ ೧೧೦, ೧.

[6] ಅಥವಾ, ಪ್ರವಾಹವು ನಮ್ಮನ್ನು ಬಡುಕೊಂಡು ಹೋಯಿತೋ ಎಂತಂತೆ ತಪ್ಪಿಹೋದೇವೆಂದು.

ಗಳನ್ನು ತನ್ನ ಚಿತ್ತಾನುಸಾರವಾಗಿ ಅವರಿಗೆ ಅನುಗ್ರಹಿಸಿ[1] ಅವರ ಮಾತಿಗೆ ಸಾಕ್ಷಿಕೊಡು ತ್ತಿದ್ದನು[2].

ಯೇಸು ಸ್ವಲ್ಪಕಾಲ ದೇವದೂತರಿಗಿಂತ ಕಡಿಮೆಯಾದದ್ದಕ್ಕೆ ಕಾರಣ.

5 ನಾವು ಪ್ರಸ್ತಾಪಿಸುವ ಮುಂದಣ ಸಾಮ್ರಾಜ್ಯವನ್ನು ಆತನು ದೇವದೂತರಿಗೆ ಅಧೀನ 6 ಮಾಡಲಿಲ್ಲವಲ್ಲಾ. ಶಾಸ್ತ್ರದ ಒಂದು ಭಾಗದಲ್ಲಿ—

ಮನುಷ್ಯನು ಎಷ್ಟು ಮಾತ್ರದವನು; ಅವನನ್ನು ನೀನು ನೆನಸುವದೇಕೆ?
ನರಪುತ್ರನು ಎಷ್ಟರವನು; ಅವನನ್ನು ನೀನು ಪರಾಂಬರಿಸುವದೇಕೆ?
7 ಅವನನ್ನು ದೇವದೂತರಿಗಿಂತ ಸ್ವಲ್ಪ ಕಾಲದ ವರೆಗೆ ಕಡಿಮೆಯವನಾಗ ಮಾಡಿದಿ[3];
ಅವನ ಮೇಲೆ ಪ್ರಭಾವವನ್ನೂ ಮಾನವನ್ನೂ ಕಿರೀಟವಾಗಿ ಇಟ್ಟೆ[4];
8 ಅವನ ಪಾದಗಳ ಕೆಳಗೆ ಸಮಸ್ತವನ್ನೂ ಹಾಕಿ ಅಧೀನಮಾಡಿದಿ[5]

ಎಂದು ಸ್ಪಷ್ಟವಾಗಿ ಹೇಳಿದನು. ಆತನು ಸಮಸ್ತವನ್ನೂ ಮನುಷ್ಯನಿಗೆ ಅಧೀನಮಾಡಿದ ನೆಂಬದರಲ್ಲಿ ಅವನಿಗೆ ಒಂದನ್ನಾದರೂ ಅಧೀನಮಾಡದೆ ಬಿಡಲಿಲ್ಲವೆಂದು ಹೇಳಿದ ಹಾಗಾ ಯಿತು; ಆದರೆ ಸಮಸ್ತವೂ ಅವನಿಗೆ ಅಧೀನವಾಗಿರುವದನ್ನು ನಾವು ಇನ್ನೂ ಕಾಣು 9 ವದಿಲ್ಲ. ಆದಾಗ್ಯೂ ದೇವದೂತರಿಗಿಂತ ಸ್ವಲ್ಪ ಕಾಲದ ವರೆಗೆ ಕಡಿಮೆಯಾಗಿ ಮಾಡಲ್ಪಟ್ಟ ಒಬ್ಬಾತನು, ಅಂದರೆ ಯೇಸುವು, ಪ್ರಭಾವವನ್ನೂ ಮಾನವನ್ನೂ ಕಿರೀಟವಾಗಿ ಹೊಂದಿರು ವದನ್ನು ನಾವು ನೋಡುತ್ತೇವೆ. ಮೃತಪಟ್ಟದ್ದರಿಂದಲೇ ಮಾನಪ್ರಭಾವಗಳನ್ನು ಹೊಂದಿ ದನು. ಆತನು ದೇವರ ಕೃಪೆಯಿಂದ ಎಲ್ಲರಿಗೋಸ್ಕರ ಮರಣವನ್ನು ಅನುಭವಿಸಬೇಕಾಗಿತ್ತು.

10 ಸಮಸ್ತವು ಯಾವನಿಗೋಸ್ಕರವೂ ಯಾವನಿಂದಲೂ ಉಂಟಾಯಿತೋ ಆತನು ಬಹು ಮಂದಿ ಪುತ್ರರನ್ನು ಪ್ರಭಾವಕ್ಕೆ ಸೇರಿಸಲಾಗಿ, ಅವರ ರಕ್ಷಣಾಕರ್ತನನ್ನು[6] ಬಾಧೆಗಳ 11 ಮೂಲಕ ಸಿದ್ಧಿಗೆ ತರುವದು ಆತನಿಗೆ ಯುಕ್ತವು. ಯಾಕಂದರೆ ಪವಿತ್ರಮಾಡುವಾತ ನಿಗೂ ಪವಿತ್ರರಾಗುವವರೆಲ್ಲರಿಗೂ ಒಬ್ಬನೇ ತಂದೆ ಇದ್ದಾನೆ. ಈ ಕಾರಣದಿಂದ, ಪವಿತ್ರ ಮಾಡುವಾತನು ಪವಿತ್ರರಾಗುವವರನ್ನು ಸಹೋದರರೆನ್ನುವದಕ್ಕೆ ನಾಚಿಕೆ ಪಡದೆ—

12 ನಿನ್ನ ನಾಮವನ್ನು ನನ್ನ ಸಹೋದರರಿಗೆ ತಿಳಿಸುವೆನು,
ಸಭಾಮಧ್ಯದಲ್ಲಿ ನಿನಗೆ ಸ್ತುತಿಪದಗಳನ್ನು ಹಾಡುವೆನು[7]

ಎಂತಲೂ,—

13 ನಾನೂ ದೇವರ ಮೇಲೆ ಭರವಸವಿಟ್ಟವನಾಗಿರುವೆನು[8]

ಎಂತಲೂ,—

ಇಗೋ, ನಾನೂ ದೇವರಿಂದ ನನಗೆ ಉಂಟಾದ ಮಕ್ಕಳೂ ಇದ್ದೇವೆ[9]

---

1) ೧ ಕೊರಿಂಥ. ೧೨, ೧೧ ನೋಡು. 2) ಅಥವಾ, ಆತನನ್ನು ಕೇಳಿದವರು ಇದನ್ನು ನಮಗೆ ತಿಳಿಸಲು ದೇವರು . . . ಅನುಗ್ರಹಿಸಿ ಅವರ ಮಾತಿಗೆ ಸಾಕ್ಷಿಕೊಟ್ಟು ಸ್ಥಿರಪಡಿಸಿದನು. 3) ಅಥವಾ, ದೇವದೂತರಿಗಿಂತ ಸ್ವಲ್ಪ ಕಡಿಮೆ ಯವನಾಗ ಮಾಡಿದಿ. 4) ಕೆಲವು ಪ್ರತಿಗಳಲ್ಲಿ—ಅವನನ್ನು ನೀನು ಮಾಡಿದ ಕೆಲಸಗಳ ಮೇಲೆ ಅಧಿಕಾರಿಯಾಗಿ ಇರಿಸಿದಿ ಎಂದು ಹೆಚ್ಚು ಮಾತು ಉಂಟು. 5) ಕೀರ್ತನೆ ೮, ೪—೬. 6) ಅಥವಾ, ರಕ್ಷಿತರ ನಾಯಕನನ್ನು. 7) ಕೀರ್ತನೆ ೨೨, ೨೨. 8) ಯೆಶಾಯ ೮, ೧೭. 9) ಯೆಶಾಯ ೮, ೧೮.

ಎಂತಲೂ ಹೇಳುತ್ತಾನೆ. ಇದಲ್ಲದೆ ಮಕ್ಕಳು ನರಸ್ವಭಾವಿಗಳಾಗಿರುವದರಿಂದ[1], 14
ಆತನೂ ಅವರಂತೆ ನರಸ್ವಭಾವದಲ್ಲಿ ಪಾಲುಗಾರನಾದನು. ಆತನು ತನ್ನ ಮರಣದಿಂದಲೇ
ಮರಣಾಧಿಕಾರಿಯನ್ನು ಅಂದರೆ ಸೈತಾನನನ್ನು ನಿವೃತ್ತಿಮಾಡುವದಕ್ಕೂ, ಮರಣಭಯದ 15
ದೆಸೆಯಿಂದ ತಮ್ಮ ಜೀವಮಾನದಲ್ಲೆಲ್ಲಾ ದಾಸತ್ವದೊಳಗಿದ್ದವರನ್ನು ಬಿಡಿಸುವದಕ್ಕೂ ಅವ
ರಂತೆ ಮರಣವನ್ನು ಅನುಭವಿಸಿದನು. ಆತನು ದೇವದೂತರಿಗೆ ಸಹಾಯಮಾಡುವದಕ್ಕೆ 16
ಕೈಚಾಚುವವನೆಂದು ಬರೆದಿಲ್ಲ; ಅಬ್ರಹಾಮನ ಸಂತಾನದವರಿಗೆ ಕೈಚಾಚಿ ಸಹಾಯಕನಾಗಿ
ದ್ದಾನಷ್ಟೆ[2]. ಆದದರಿಂದ ಆತನು ಎಲ್ಲಾ ವಿಷಯಗಳಲ್ಲಿ ತನ್ನ ಸಹೋದರರಿಗೆ ಸಮಾನ 17
ನಾಗಬೇಕಾಗಿ ಬಂತು. ಹೀಗೆ ಆತನು ಜನರ ಪಾಪಗಳನ್ನು ನಿವಾರಣಮಾಡುವದಕ್ಕಾಗಿ
ದೇವರ ಕಾರ್ಯಗಳಲ್ಲಿ ಕರುಣೆಯೂ ನಂಬಿಕೆಯೂ ಉಳ್ಳ ಮಹಾಯಾಜಕನಾದನು.
ಆತನು ಶೋಧಿಸಲ್ಪಟ್ಟು ಬಾಧೆಯನ್ನು ಅನುಭವಿಸಿರುವದರಿಂದ, ಶೋಧಿಸಲ್ಪಡುವವರಿಗೆ 18
ಸಹಾಯಮಾಡುವದಕ್ಕೆ ಶಕ್ತನಾಗಿದ್ದಾನೆ.

### ಯೇಸು ಮೋಶೆಗಿಂತ ಶ್ರೇಷ್ಠನು.

**3** ಆದದರಿಂದ, ದೇವಜನರಾದ ಸಹೋದರರೇ, ಪರಲೋಕಸ್ವಾಸ್ಥ್ಯಕ್ಕಾಗಿ ನನ್ನೊಂದಿಗೆ
ಕರೆಯಲ್ಪಟ್ಟವರೇ, ನಾವು ಪ್ರತಿಜ್ಞೆಮಾಡಿ ಒಪ್ಪಿಕೊಂಡಿರುವ ದೇವಪ್ರೇಷಿತನೂ ಮಹಾ
ಯಾಜಕನೂ ಆಗಿರುವ ಯೇಸುವನ್ನು ಲಕ್ಷ್ಯವಿಟ್ಟು ಯೋಚಿಸಿರಿ.
ಮೋಶೆಯು ದೇವರ ಮನೆಯಲ್ಲೆಲ್ಲಾ ನಂಬಿಗಸ್ತನಾಗಿದ್ದಂತೆಯೇ[3] ಯೇಸುವೂ ತನ್ನನ್ನು 2
ನೇಮಿಸಿದಾತನಿಗೆ ನಂಬಿಗಸ್ತನಾಗಿದ್ದಾನೆ. ಮನೆಗಿಂತ ಮನೆಕಟ್ಟಿದವನಿಗೆ ಹೆಚ್ಚಾದ ಮಾನ 3
ವಿರುವದರಿಂದ ಮೋಶೆಗಿಂತ ಯೇಸುವು ಹೆಚ್ಚಾದ ಮಾನಕ್ಕೆ ಯೋಗ್ಯನೆಂದೆಣಿಸಲ್ಪಟ್ಟಿದ್ದಾನೆ.
ಪ್ರತಿ ಮನೆಯನ್ನು ಯಾರೋ ಒಬ್ಬನು ಕಟ್ಟಿರುವನು; ಸಮಸ್ತವನ್ನು ಕಟ್ಟಿದಾತನು ದೇವರೇ. 4
ಮೋಶೆಯು ಸೇವಕನಾಗಿ[4] ದೇವರ ಮನೆಯಲ್ಲೆಲ್ಲಾ ನಂಬಿಗಸ್ತನಾಗಿದ್ದನು; ಅವನು 5
ಮುಂದೆ ಪ್ರಕಟವಾಗಬೇಕಾಗಿದ್ದ ಸಂಗತಿಗಳಿಗೆ ಸಾಕ್ಷಿಯಾಗಿದ್ದನು. ಕ್ರಿಸ್ತನಾದರೋ 6
ಮಗನಾಗಿ ದೇವರ ಮನೆಯ ಮೇಲೆ ಅಧಿಕಾರಿಯಾಗಿದ್ದಾನೆ; ನಾವು ನಮ್ಮ ಧೈರ್ಯ
ವನ್ನೂ ನಮ್ಮ ನಿರೀಕ್ಷೆಯಿಂದುಂಟಾಗುವ ಉತ್ಸಾಹವನ್ನೂ ಕಡೇ ತನಕ ದೃಢವಾಗಿ ಹಿಡು
ಕೊಂಡವರಾದರೆ, ನಾವೇ ದೇವರ ಮನೆಯವರು.

### ದೇವರು ವಾಗ್ದಾನಮಾಡಿದ ವಿಶ್ರಾಂತಿಯನ್ನು ನಾವು ಹೊಂದಬೇಕಾದರೆ, ನಾವು ನಂಬದವರಾಗಿರದೆ ಸ್ಥಿರಚಿತ್ತದಿಂದಿರುವದು ಅಗತ್ಯ.

ಆದದರಿಂದ ಪವಿತ್ರಾತ್ಮನು ಹೇಳುವ ಪ್ರಕಾರ— 7

ನೀವು ಈ ಹೊತ್ತು ದೇವರ ವಾಣಿಯನ್ನು ಕೇಳಿದರೆ,
ನಿಮ್ಮ ಪಿತೃಗಳು ದೇವರ ಕೋಪವನ್ನೆಬ್ಬಿಸಿದ ಸ್ಥಳದಲ್ಲಿ[5] 8

---

[1] ಅಥವಾ, ರಕ್ತಮಾಂಸಧಾರಿಗಳಾಗಿರುವದರಿಂದ. [2] ಯೆಶಾಯ ೪೧, ೮. ೯. [3] ಅಂಕೆ. ೧೨, ೭.
[4] ಅಂಕೆ. ೧೨, ೭. [5] ಹೊರಡೋಣ ೧೭, ೭.

ಅರಣ್ಯದೊಳಗೆ ದೇವರನ್ನು ಪರೀಕ್ಷಿಸಿದ ದಿನದಲ್ಲಿ
ತಮ್ಮ ಹೃದಯಗಳನ್ನು ಕಠಿನಪಡಿಸಿಕೊಂಡಂತೆ ಮಾಡಬೇಡಿರಿ.
9 ಅವರು ಅರಣ್ಯದಲ್ಲಿ—ದೇವರು ನಮ್ಮೊಳಗೆ ಇದ್ದಾನೋ ಇಲ್ಲವೋ ಎಂದು
ನನ್ನನ್ನು ಪರೀಕ್ಷಿಸಿದರು[1];
ಮತ್ತು ನಾಲ್ವತ್ತು ವರುಷ ನಾನು ನಡಿಸುತ್ತಿದ್ದ ಕೃತ್ಯಗಳನ್ನು ನೋಡಿದರು.
10 ಆದದರಿಂದ ನಾನು ಆ ಸಂತತಿಯವರ ಮೇಲೆ ಬಹಳವಾಗಿ ಕೋಪಿಸಿಕೊಂಡು—
ಅವರು ಯಾವಾಗಲೂ ಹೃದಯದಲ್ಲಿ ತಪ್ಪಿಹೋಗುವವರಾಗಿದ್ದಾರೆ,
ಅವರು ನನ್ನ ಮಾರ್ಗವನ್ನು ತಿಳುಕೊಳ್ಳಲಿಲ್ಲ ಎಂದು ಹೇಳಿದೆನು.
11 ಇದಲ್ಲದೆ—ನಾನು ವಾಗ್ದಾನಮಾಡಿದ ವಿಶ್ರಾಂತಿಯಲ್ಲಿ ಇವರು ಸೇರುವದೇ
ಇಲ್ಲವೆಂದು
ನಾನು ಕೋಪಗೊಂಡು ಪ್ರಮಾಣಮಾಡಿದೆನು[2].

12 ಸಹೋದರರೇ, ನೋಡಿಕೊಳ್ಳಿರಿ, ಜೀವಸ್ವರೂಪನಾದ ದೇವರನ್ನು ಬಿಟ್ಟುಹೋಗುವ ಅಪ
13 ನಂಬಿಕೆಯುಳ್ಳ ಕೆಟ್ಟ ಹೃದಯವು ನಿಮ್ಮೊಳಗೆ ಯಾವನಲ್ಲಿಯೂ ಇರಬಾರದು. ನಿಮ್ಮಲ್ಲಿ ಒಬ್ಬರಾದರೂ ಪಾಪದಿಂದ ಮೋಸಹೋಗಿ ಕಠಿನರಾಗದಂತೆ ಈಹೊತ್ತು ಎಂಬ ಕಾಲವು
14 ಇರುವ ತನಕ ಪ್ರತಿನಿತ್ಯವೂ ಒಬ್ಬರನ್ನೊಬ್ಬರು ಎಚ್ಚರಿಸಿರಿ. ಮೊದಲಿಂದಿರುವ ಭರವಸವನ್ನು ಅಂತ್ಯದ ವರೆಗೂ ದೃಢವಾಗಿ ಹಿಡುಕೊಳ್ಳುವ ಪಕ್ಷಕ್ಕೆ, ಕ್ರಿಸ್ತನಲ್ಲಿ[3] ಪಾಲುಗಾರರಾಗಿದ್ದೇವಲ್ಲಾ.

15 ನೀವು ಈ ಹೊತ್ತು ದೇವರ ವಾಣಿಯನ್ನು ಕೇಳಿದರೆ,
ನಿಮ್ಮ ಪಿತೃಗಳು ದೇವರ ಕೋಪವನ್ನೆಬ್ಬಿಸಿದ ಸ್ಥಳದಲ್ಲಿ
ತಮ್ಮ ಹೃದಯಗಳನ್ನು ಕಠಿನಪಡಿಸಿಕೊಂಡಂತೆ ಮಾಡಬೇಡಿರಿ

16 ಎಂಬುವದರಲ್ಲಿ, ಕೇಳಿ ಕೋಪವನ್ನೆಬ್ಬಿಸಿದವರು ಯಾರು? ಮೋಶೆಯ ಕೈಕೆಳಗಿದ್ದು
17 ಐಗುಪ್ತದೊಳಗಿಂದ ಹೊರಟುಬಂದವರೆಲ್ಲರೂ ಅಲ್ಲವೇ? ಮತ್ತು ನಾಲ್ವತ್ತು ವರುಷ ಆತನು ಯಾರ ಮೇಲೆ ಬಹಳವಾಗಿ ಕೋಪಿಸಿಕೊಂಡನು? ಪಾಪ ಮಾಡಿದವರ ಮೇಲೆ
18 ಅಲ್ಲವೇ? ಅವರ ಶವಗಳು ಅರಣ್ಯದಲ್ಲಿ ಬಿದ್ದವಲ್ಲಾ[4]. ನಾನು ವಾಗ್ದಾನಮಾಡಿದ ವಿಶ್ರಾಂತಿಯಲ್ಲಿ ನೀವು ಸೇರುವದೇ ಇಲ್ಲವೆಂದು ಯಾರನ್ನು ಕುರಿತು ಪ್ರಮಾಣಮಾಡಿ
19 ದನು? ನಂಬದವರನ್ನು ಕುರಿತಲ್ಲವೇ? ನಂಬಿಕೆಯಿಂದಲೇ ಅವರು ಸೇರಲಾರದೆ ಹೋದರೆಂದು ತಿಳಿದುಕೊಳ್ಳುತ್ತೇವೆ.

**4** ಹೀಗಿರಲಾಗಿ ದೇವರ ವಿಶ್ರಾಂತಿಯಲ್ಲಿ ಸೇರಬಹುದೆಂಬ ವಾಗ್ದಾನವು ಇನ್ನೂ ಇರುವಲ್ಲಿ ನಿಮ್ಮೊಳಗೆ ಯಾವನಾದರೂ ಆ ವಾಗ್ದಾನದ ಫಲವನ್ನು ಹೊಂದದೆ ತಪ್ಪುವವ
2 ನಾದಾನೋ ಎಂದು ನಾವು ಭಯಪಡೋಣ. ಅವರಿಗೆ ಶುಭವರ್ತಮಾನವು ಸಾರೋಣವಾದಂತೆಯೇ ನಮಗೂ ಸಾರೋಣವಾಯಿತು; ಆದರೆ ಆ ಕಾಲದಲ್ಲಿ ಕೇಳಿದವರು
3 ನಂಬದೆಹೋದ ಕಾರಣ ಆ ವಾಕ್ಯದಿಂದ ಅವರಿಗೆ ಪ್ರಯೋಜನವಾಗಲಿಲ್ಲ. ನಂಬುವವ

---

[1] ಹೊರಡೋಣ ೧೭, ೭. [2] ಕೀರ್ತನೆ ೯೫, ೭—೧೧.
[3] ಅಥವಾ, ನಮ್ಮ ಪಿತೃಗಳು ಎದುರುನೋಡುತ್ತಿದ್ದ ಕ್ರಿಸ್ತನಲ್ಲಿ. [4] ಅಂಕೆ. ೧೪, ೨೯.

ರಾದ ನಾವು ಆ ವಿಶ್ರಾಂತಿಯಲ್ಲಿ ಸೇರುತ್ತಲೇ ಇದ್ದೇವೆ. ದೇವರ ಕೆಲಸಗಳು ಲೋಕಾದಿಯಿಂದ ಮುಗಿದುಹೋಗಿದ್ದಾಗ್ಯೂ, ಆತನು—

ನನ್ನ ವಿಶ್ರಾಂತಿಯಲ್ಲಿ ಇವರು ಸೇರುವದೇ ಇಲ್ಲವೆಂದು
ನಾನು ಕೋಪಗೊಂಡು ಪ್ರಮಾಣಮಾಡಿದೆನು

ಎಂಬದಾಗಿ ಹೇಳುವದರಲ್ಲಿ ಆ ವಿಶ್ರಾಂತಿ ಇನ್ನೂ ಉಂಟೆಂದು ಸೂಚಿಸಿದ್ದಾನೆ. 4 ಒಂದು ಸ್ಥಳದಲ್ಲಿ ಏಳನೇ ದಿವಸವನ್ನು ಕುರಿತು—ದೇವರು[1] ತನ್ನ ಕೆಲಸಗಳನ್ನೆಲ್ಲಾ ತೀರಿಸಿ ಏಳನೇ ದಿವಸದಲ್ಲಿ ವಿಶ್ರಮಿಸಿಕೊಂಡನೆಂದು ಬರೆದದೆ. 5 ಆದರೆ ಈ ಸ್ಥಳದಲ್ಲಿ—ಇವರು ನನ್ನ ವಿಶ್ರಾಂತಿಯಲ್ಲಿ ಸೇರುವದೇ ಇಲ್ಲವೆಂದು ಹೇಳಿದ್ದಾನೆ. 6 ಹೀಗಿರಲಾಗಿ ಆ ವಿಶ್ರಾಂತಿಯಲ್ಲಿ ಕೆಲವರು ಸೇರಬೇಕೆಂಬುವ ಮಾತು ಇನ್ನೂ ಇರುವದರಿಂದಲೂ ಮೊದಲು ಶುಭವರ್ತಮಾನವನ್ನು ಕೇಳಿದವರು ಅವಿಧೇಯರಾದ ಕಾರಣ ಅದರಲ್ಲಿ ಸೇರದೆಹೋದದ್ದರಿಂದಲೂ, 7 ಬಹುಕಾಲ ಹೋದನಂತರ ಆತನು ದಾವೀದನ ಬಾಯಿಯಿಂದ ಮಾತಾಡಿ ಈಹೊತ್ತೇ ಎಂದು ಒಂದಾನೊಂದು ದಿವಸವನ್ನು ಗೊತ್ತುಮಾಡುತ್ತಾನೆ; ಹ್ಯಾಗಂದರೆ—

ನೀವು ಈ ಹೊತ್ತು ದೇವರ ವಾಣಿಯನ್ನು ಕೇಳಿದರೆ,
ನಿಮ್ಮ ಹೃದಯಗಳನ್ನು ಕಠಿನಪಡಿಸಿಕೊಳ್ಳಬೇಡಿರಿ

ಎಂದು ಮೇಲ್ಕಂಡ ವಚನದಲ್ಲಿ ಹೇಳುತ್ತಾನಷ್ಟೆ. 8 ಯೆಹೋಶುವನು ಅವರನ್ನು ಆ ವಿಶ್ರಾಂತಿಯಲ್ಲಿ ಸೇರಿಸಿದ್ದಾದರೆ, ತರುವಾಯ ಮತ್ತೊಂದು ದಿವಸವನ್ನು ಕುರಿತು ಹೇಳೋಣವಾಗುತ್ತಿರಲಿಲ್ಲ. 9 ಆದದರಿಂದ ದೇವರ ಜನರು ಅನುಭವಿಸುವದಕ್ಕಿರುವ ಸಬ್ಬತೆಂಬ ವಿಶ್ರಾಂತಿಯು ಇನ್ನೂ ಉಂಟು. 10 ಹ್ಯಾಗಂದರೆ, ದೇವರು ತನ್ನ ಕೆಲಸಗಳನ್ನು ಮುಗಿಸಿ ಹ್ಯಾಗೆ ವಿಶ್ರಮಿಸಿಕೊಂಡನೋ ಹಾಗೆಯೇ ಆತನ ವಿಶ್ರಾಂತಿಯಲ್ಲಿ ಸೇರಿರುವವನು ಸಹ ತನ್ನ ಕೆಲಸಗಳನ್ನು ಮುಗಿಸಿ ವಿಶ್ರಮಿಸಿಕೊಂಡಿದ್ದಾನೆ. 11 ಆದದರಿಂದ ನಾವು ಆ ವಿಶ್ರಾಂತಿಯಲ್ಲಿ ಸೇರುವದಕ್ಕೆ ಪ್ರಯಾಸಪಡೋಣ; ನಮ್ಮಲ್ಲಿ ಒಬ್ಬರಾದರೂ ಅವರ ಅವಿಧೇಯತ್ವವನ್ನು ಅನುಸರಿಸುವವರಾಗಬಾರದು. 12 ಯಾಕಂದರೆ ದೇವರ ವಾಕ್ಯವು ಸಜೀವವಾದದ್ದು, ಕಾರ್ಯಸಾಧಕವಾದದ್ದು, ಯಾವ ಇಬ್ಬಾಯಿಕತ್ತಿಗಿಂತಲೂ ಹದವಾದದ್ದು, ಪ್ರಾಣ ಆತ್ಮಗಳನ್ನೂ ಕೀಲು ಮಜ್ಜೆಗಳನ್ನೂ ವಿಭಾಗಿಸುವಷ್ಟು ಮಟ್ಟಿಗೂ ತೂರಿಹೋಗುವಂಥಾದ್ದು, ಹೃದಯದ ಆಲೋಚನೆಗಳನ್ನೂ ಉದ್ದೇಶಗಳನ್ನೂ ವಿವೇಚಿಸುವಂಥಾದ್ದು ಆಗಿದೆ. 13 ನಾವು ಯಾವಾತನಿಗೆ ಲೆಕ್ಕ ಒಪ್ಪಿಸಬೇಕಾಗಿದೆಯೋ ಆತನ ದೃಷ್ಟಿಗೆ ಸಮಸ್ತವೂ ಮುಚ್ಚುಮರೆಯಿಲ್ಲದ್ದಾಗಿಯೂ ಬೈಲಾದದ್ದಾಗಿಯೂ ಅದೆ. ಆತನ ಸನ್ನಿಧಿಯಲ್ಲಿ ಅಗೋಚರವಾಗಿರುವ ಸೃಷ್ಟಿಯು ಒಂದೂ ಇಲ್ಲ.

### ಶ್ರೇಷ್ಠ ಮಹಾಯಾಜಕನ ಸುಲಕ್ಷಣಗಳು ಯೇಸುವಿನಲ್ಲಿ ಉಂಟೆಂಬುವದು.

14 ಆಕಾಶಮಂಡಲಗಳನ್ನು ದಾಟಿಹೋದ ದೇವಕುಮಾರನಾದ ಯೇಸುವೆಂಬ ಶ್ರೇಷ್ಠ ಮಹಾಯಾಜಕನು ನಮಗಿರುವದರಿಂದ[2] ನಾವು ಮಾಡಿರುವ ಪ್ರತಿಜ್ಞೆಯನ್ನು ಬಿಡದೆ

[1] ಉತ್ಪತ್ತಿ ೨, ೨.
[2] ಇಬ್ರಿಯ ೨, ೧೭—೩, ೧ ನೋಡು.

15 ಹಿಡಿಯೋಣ. ಯಾಕಂದರೆ ನಮಗಿರುವ ಮಹಾಯಾಜಕನು ನಮ್ಮ ನಿರ್ಬಲಾವಸ್ಥೆ
ಯನ್ನು ಕುರಿತು ಅನುತಾಪವಿಲ್ಲದವನಲ್ಲ; ಆತನು ಸರ್ವ ವಿಷಯಗಳಲ್ಲಿ ನಮ್ಮ ಹಾಗೆ
16 ಶೋಧನೆಗೆ ಗುರಿಯಾದನು, ಪಾಪ ಮಾತ್ರ ಮಾಡಲಿಲ್ಲ. ಆದದರಿಂದ, ನಾವು ಕರುಣೆ
ಯನ್ನು ಹೊಂದುವಂತೆಯೂ ಆತನ ದಯೆಯಿಂದ ಸಮಯೋಚಿತವಾದ ಸಹಾಯವು
ನಮಗೆ ದೊರೆಯುವಂತೆಯೂ ಧೈರ್ಯದಿಂದ ಕೃಪಾಸನದ ಮುಂದೆ ಬರೋಣ.

**5** ಪ್ರತಿ ಮಹಾಯಾಜಕನು ಮನುಷ್ಯರೊಳಗಿಂದ ಆರಿಸಲ್ಪಟ್ಟವನಾಗಿದ್ದು ಮನುಷ್ಯರಿ
ಗೋಸ್ಕರ ದೇವರ ಕಾರ್ಯಗಳನ್ನು ಜರಗಿಸುವದಕ್ಕಾಗಿ ನೇಮಿಸಲ್ಪಡುತ್ತಾನಲ್ಲಾ. ಅವನು
ಅವರಿಗೋಸ್ಕರ ಕಾಣಿಕೆಗಳನ್ನೂ ಪಾಪನಿವಾರಣಕ್ಕಾಗಿ ಯಜ್ಞಗಳನ್ನೂ ಸಮರ್ಪಿಸ
2 ಬೇಕು. ತಾನೂ ಬಲಹೀನನಾಗಿರುವದರಿಂದ ಅವನು ಜ್ಞಾನವಿಲ್ಲದವರನ್ನೂ ಮಾರ್ಗ
3 ತಪ್ಪಿ ನಡೆಯುವವರನ್ನೂ ತಾಳ್ಮೆಯಿಂದ ಸಹಿಸಿಕೊಳ್ಳುವದಕ್ಕೆ ಶಕ್ತನಾಗಿರುವನು. ಆ ಬಲ
ಹೀನತೆಯ ಕಾರಣದಿಂದ ಅವನು ಜನರಿಗೋಸ್ಕರ ಹ್ಯಾಗೋ ಹಾಗೆಯೇ ತನಗೋಸ್ಕ
4 ರವೂ ಪಾಪನಿವಾರಣಾರ್ಥವಾಗಿ ಯಜ್ಞಗಳನ್ನು ಮಾಡಬೇಕಾದವನಾಗಿದ್ದಾನೆ. ಇದಲ್ಲದೆ,
ಯಾವನೂ ತನ್ನಿಷ್ಟಕ್ಕೆ ತಾನೇ ಈ ಗೌರವವನ್ನು ವಹಿಸಿಕೊಳ್ಳದೆ ದೇವರಿಂದ ನೇಮಿಸ
ಲ್ಪಟ್ಟು ವಹಿಸಿಕೊಳ್ಳುತ್ತಾನೆ; ಆರೋನನು ಸಹ ದೇವರಿಂದಲೇ ನೇಮಿಸಲ್ಪಟ್ಟು ಆ ಗೌರ
5 ವವನ್ನು ವಹಿಸಿಕೊಂಡನಲ್ಲಾ. ಹಾಗೆಯೇ ಕ್ರಿಸ್ತನು ಸಹ ತನ್ನನ್ನು ಘನಪಡಿಸಿಕೊಂಡು
ತನ್ನನ್ನು ತಾನೇ ಮಹಾಯಾಜಕನಾಗಮಾಡಿಕೊಳ್ಳಲಿಲ್ಲ; ಆದರೆ—

ನನಗೆ ನೀನು ಮಗನು; ಈ ಹೊತ್ತು ನಿನ್ನನ್ನು ಪಡೆದೆನು

6 ಎಂದು ಹೇಳಿದಾತನೇ ಈ ಗೌರವವನ್ನು ಆತನಿಗೆ ಕೊಟ್ಟನು. ಆತನು ಇನ್ನೊಂದು ಸ್ಥಳದಲ್ಲಿ—

ನೀನು ಮೆಲ್ಕಿಜೆದೇಕನ ತರಹದವನಾಗಿ ಸದಾಕಾಲವೂ ಯಾಜಕನಾಗಿದ್ದೀ[1]

7 ಎಂದು ಹೇಳುತ್ತಾನೆ. ಕ್ರಿಸ್ತನು ತಾನು ಭೂಲೋಕದಲ್ಲಿದ್ದಾಗ ಮರಣಕ್ಕೆ ತಪ್ಪಿಸಿ
ಕಾಪಾಡ ಶಕ್ತನಾಗಿರುವಾತನಿಗೆ ಬಲವಾಗಿ ಕೂಗುತ್ತಾ ಕಣ್ಣೀರನ್ನು ಸುರಿಸುತ್ತಾ ಪ್ರಾರ್ಥನೆ
ವಿಜ್ಞಾಪನೆಗಳನ್ನು ಸಮರ್ಪಿಸಿ, ದೇವರ ಮೇಲಣ ಭಯಭಕ್ತಿಯ ನಿಮಿತ್ತ ಕೇಳಲ್ಪಟ್ಟನು[2].
8 ಹೀಗೆ ಆತನು ಮಗನಾಗಿದ್ದರೂ ಅನುಭವಿಸಿದ ಬಾಧೆಗಳಿಂದಲೇ ವಿಧೇಯತೆಯನ್ನು ಕಲಿತು
9-10 ಕೊಂಡನು. ಇದಲ್ಲದೆ ಆತನು ಸಿದ್ಧಿಗೆ ಬಂದು, ದೇವರಿಂದ ಮೆಲ್ಕಿಜೆದೇಕನ ತರಹದ
ಮಹಾಯಾಜಕನೆನ್ನಿಸಿಕೊಂಡವನಾಗಿ, ತನಗೆ ವಿಧೇಯರಾಗಿರುವವರೆಲ್ಲರಿಗೂ ನಿರಂತರ
ವಾದ ರಕ್ಷಣೆಗೆ[3] ಕಾರಣನಾದನು.

### ವೃದ್ಧಿಯಾಗದಿರುವ ಕ್ರೈಸ್ತರಿಗೆ ಎಚ್ಚರಿಕೆ.

11 ಈ ವಿಷಯದಲ್ಲಿ ನಾವು ಹೇಳಬೇಕಾದ ಮಾತು ಬಹಳ ಉಂಟು, ಆದರೆ ನಿಮ್ಮ ಕಿವಿ
12 ಗಳು ಮಂದವಾದದರಿಂದ ಅದನ್ನು ವಿವರಿಸುವದು ಕಷ್ಟವಾಗಿದೆ. ಕಾಲವನ್ನು ನೋಡಿದರೆ,
ನೀವು ಇಷ್ಟರೊಳಗೆ ಬೋಧಕರಾಗಿರಬೇಕಾಗಿದ್ದಾಗ್ಯೂ ಒಬ್ಬನು ನಿಮಗೆ ದೈವೋಕ್ತಿಗಳ

---

[1] ಕೀರ್ತನೆ ೧೧೦, ೪. [2] ಅಥವಾ, ಸಮರ್ಪಿಸಿ, ಕೇಳಲ್ಪಟ್ಟು ಭಯದಿಂದ ಬಿಡುಗಡೆ ಹೊಂದಿದನು.
[3] ಯೆಶಾಯ ೪೫, ೧೭; ಮಾರ್ಕ ೧೬ ಕಡೇ ಮಾತು.

ಮೂಲಪಾಠಗಳನ್ನು ತಿರಿಗಿ ಕಲಿಸಿಕೊಡಬೇಕಾಗಿದೆ; ನೀವು ಹಾಲು ಕುಡಿಯತಕ್ಕವರೇ ಹೊರತು ಗಟ್ಟಿಯಾದ ಆಹಾರವನ್ನು ತಿನ್ನತಕ್ಕವರಲ್ಲ. 13 ಹಾಲು ಬೇಕಾದವನು ಕೂಸಿನಂತಿದ್ದು ನೀತಿವಾಕ್ಯದಲ್ಲಿ ಅನುಭವವಿಲ್ಲದವನಾಗಿದ್ದಾನೆ. 14 ಗಟ್ಟಿಯಾದ ಆಹಾರವು ಪ್ರಾಯಸ್ಥರಿಗೋಸ್ಕರ, ಅಂದರೆ ಜ್ಞಾನೇಂದ್ರಿಯಗಳನ್ನು ಸಾಧನೆಯಿಂದ ಶಿಕ್ಷಿಸಿಕೊಂಡು ಇದು ಒಳ್ಳೇದು ಅದು ಕೆಟ್ಟದ್ದು ಎಂಬ ಭೇದವನ್ನು ತಿಳಿದವರಿಗೋಸ್ಕರವಾಗಿದೆ.

**6** ಆದದರಿಂದ, ನಿರ್ಜೀವಕರ್ಮಗಳ ಮೇಲಣ ನಂಬಿಕೆಯನ್ನು ಬಿಟ್ಟುಬಿಟ್ಟು ದೇವರಲ್ಲಿಯೇ ನಂಬಿಕೆಯಿಡಬೇಕಾದದ್ದು, 2 ಸ್ನಾನ ಹಸ್ತಾರ್ಪಣಗಳ ವಿಷಯವಾದ ಉಪದೇಶ, ಸತ್ತವರಿಗೆ ಪುನರುತ್ಥಾನವೂ ನಿತ್ಯವಾದ ನ್ಯಾಯತೀರ್ಪೂ ಉಂಟೆಂಬುವದು ಇವುಗಳನ್ನು ಪದೇಪದೇ ಅಸ್ತಿವಾರವಾಗಿ ಹಾಕದೆ, ಕ್ರಿಸ್ತನ ವಿಷಯವಾದ ಪ್ರಥಮಬೋಧನೆಯನ್ನು ಕುರಿತು ಇನ್ನೂ ಮಾತಾಡದೆ, ಪೂರ್ಣವಾದ ತಿಳುವಳಿಕೆಗೆ ಸಾಗುತ್ತಾ ಹೋಗೋಣ. 3 ಮತ್ತು ದೇವರ ಚಿತ್ತವಾದರೆ, ಹೀಗೆ ಸಾಗುತ್ತಾ ಹೋಗುವೆವು.

4 ಒಂದು ಸಾರಿ ಜ್ಞಾನಪ್ರಕಾಶದಲ್ಲಿ ಸೇರಿ, ಪರಲೋಕದಿಂದಾದ ದಾನದ ಅನುಭವವನ್ನು ಹೊಂದಿ, 5 ಪವಿತ್ರಾತ್ಮವರದಲ್ಲಿ ಪಾಲುಗಾರರಾಗಿ, ದೇವರ ವಾಕ್ಯದ ಶ್ರೇಷ್ಠತೆಯನ್ನೂ ಮುಂದಣ ಯುಗದ ಮಹತ್ವವನ್ನೂ ಅನುಭವಿಸಿದವರು 6 ಭ್ರಷ್ಟರಾದರೆ, ಅವರಲ್ಲಿ ತಿರಿಗಿ ಮಾನಸಾಂತರವನ್ನು ಹುಟ್ಟಿಸುವದು ಅಸಾಧ್ಯ; ಯಾಕಂದರೆ ಅವರು ತಮ್ಮ ಪಾಲಿಗೆ ದೇವರ ಮಗನನ್ನು ಪುನಃ ಶಿಲುಬೆಗೆ ಹಾಕುವವರೂ ಆತನನ್ನು ಎಲ್ಲರ ಮುಂದೆ ಅವಮಾನಪಡಿಸುವವರೂ ಆಗಿದ್ದಾರೆ. 7 ಭೂಮಿಯು ತನ್ನ ಮೇಲೆ ಆಗಾಗ್ಯೆ ಸುರಿಯುವ ಮಳೆಯನ್ನು ಹೀರಿಕೊಂಡು ಅದು ಯಾರ ನಿಮಿತ್ತವಾಗಿ ವ್ಯವಸಾಯಮಾಡಲ್ಪಡುತ್ತದೋ ಅವರಿಗೆ ಅನುಕೂಲವಾದ ಬೆಳೆಯನ್ನು ಕೊಟ್ಟರೆ, ದೇವರ ಆಶೀರ್ವಾದವನ್ನು ಹೊಂದುತ್ತದೆ; 8 ಆದರೆ ಅದು ಮುಳ್ಳುಗಿಡಗಳನ್ನೂ ಗೊಳಗೊಳಿಕೆಯನ್ನೂ ಬೆಳಸಿದರೆ, ಅಯೋಗ್ಯವೆನಿಸಿಕೊಂಡು ಶಾಪಕ್ಕೆ ಗುರಿಯಾಗುತ್ತದೆ, ಅದರ ಅಂತ್ಯವು ಸುಡುವದೇ.

9 ಆದರೆ ಪ್ರಿಯರೇ, ಈ ರೀತಿಯಾಗಿ ನಾವು ಮಾತಾಡಿದಾಗ್ಯೂ, ನೀವು ಇದಕ್ಕಿಂತ ಉತ್ತಮವಾಗಿಯೂ ರಕ್ಷಣಕರವಾಗಿಯೂ ಇರುವ ಸ್ಥಿತಿಯಲ್ಲಿದ್ದೀರೆಂದು ದೃಢವಾಗಿ ನಂಬಿದ್ದೇನೆ. 10 ನೀವು ದೇವಜನರಿಗೆ ಉಪಚಾರ ಮಾಡಿದಿರಿ, ಇನ್ನೂ ಮಾಡುತ್ತಾ ಇದ್ದೀರಿ. ಈ ಕೆಲಸವನ್ನೂ ಇದರಲ್ಲಿ ನೀವು ದೇವರ ನಾಮದ ವಿಷಯವಾಗಿ ತೋರಿಸಿದ ಪ್ರೀತಿಯನ್ನೂ ಆತನು ಮರೆಯುವದಕ್ಕೆ ಅನ್ಯಾಯಸ್ಥನಲ್ಲ.

ದೇವರ ವಾಗ್ದಾನಗಳು ಎಷ್ಟು ಮಾತ್ರಕ್ಕೂ ತಪ್ಪುವದಿಲ್ಲವೆಂಬುವದು.

11 ನೀವು ಉಪಚಾರಮಾಡುವದರಲ್ಲಿ ಯಾವ ಆಸಕ್ತಿಯನ್ನು ತೋರಿಸಿದ್ದೀರೋ ನಿಮ್ಮ ನಿರೀಕ್ಷೆ ದೃಢಮಾಡಿಕೊಂಡು ಕಡೇ ತನಕ ಹಿಡಿಯುವದರಲ್ಲಿಯೂ ತೋರಿಸಬೇಕೆಂದು ಅಪೇಕ್ಷಿಸುತ್ತೇವೆ. 12 ನೀವು ಮಂದಮತಿಗಳಾಗಿರದೆ, ಯಾರು ವಾಗ್ದಾನಗಳನ್ನು ನಂಬಿ ಅವುಗಳ ಫಲಕ್ಕೋಸ್ಕರ ಬಹು ದಿವಸಗಳ ವರೆಗೂ ಕಾದಿದ್ದು ಆ ಫಲವನ್ನು ಹೊಂದುತ್ತಾರೋ ಅವರನ್ನು ಅನುಸರಿಸುವವರಾಗಬೇಕೆಂದು ಕೋರುತ್ತೇನೆ. 13 ದೇವರು ಅಬ್ರ

ಹಾಮನಿಗೆ ವಾಗ್ದಾನಮಾಡಿದಾಗ ತನಗಿಂತ ಹೆಚ್ಚಿನವನ ಆಣೆಯಿಡುವದಕ್ಕಾಗದೆ ಇದ್ದ
14 ದರಿಂದ, ತನ್ನಾಣೆಯಿಟ್ಟು—ನಿಜವಾಗಿ ನಿನ್ನನ್ನು ಆಶೀರ್ವದಿಸೇ ಆಶೀರ್ವದಿಸುವೆನು,
15 ನಿನ್ನನ್ನು ಹೆಚ್ಚಿಸೇ ಹೆಚ್ಚಿಸುವೆನು ಎಂದು[1] ಹೇಳಿದನಷ್ಟೆ. ಆ ವಾಗ್ದಾನದ ಫಲಕ್ಕೋ
ಸ್ಕರ ಅಬ್ರಹಾಮನು ಬಹು ದಿವಸ ಕಾದುಕೊಂಡಿದ್ದು ಆ ಫಲವನ್ನು ದೇವರು ಹೇಳಿದ
16 ಹಾಗೆಯೇ ಹೊಂದಿದನು. ಮನುಷ್ಯರು ತಮಗಿಂತ ಹೆಚ್ಚಿನವನ ಆಣೆಯಿಡುತ್ತಾರಷ್ಟೆ;
ಮಾತಿಗೆ ಆಣೆಯಿಟ್ಟು ಸ್ಥಿರಪಡಿಸಿದ ಮೇಲೆ ಅವರೊಳಗೆ ವಿವಾದವೇನೂ ಇರುವದಿಲ್ಲ.
17 ಹಾಗೆಯೇ ದೇವರು ತನ್ನ ಸಂಕಲ್ಪವು ನಿಶ್ಚಲವಾದದ್ದೆಂಬುವದನ್ನು ವಾಗ್ದಾನದ ಫಲಕ್ಕೆ
ಬಾಧ್ಯರಾಗುವವರಿಗೆ ಬಹು ಸ್ಪಷ್ಟವಾಗಿ ತೋರಿಸಬೇಕೆಂದು ಆಣೆಯಿಟ್ಟು ತನ್ನ ಮಾತನ್ನು
18 ಸ್ಥಿರಪಡಿಸಿದನು. ಆಶ್ರಯವನ್ನು ಹೊಂದಬೇಕೆಂದು ಓಡಿಬಂದು ನಮ್ಮ ಮುಂದೆ ಇಟ್ಟಿ
ರುವ ನಿರೀಕ್ಷೆಯನ್ನು ಹಿಡುಕೊಂಡವರಾದ ನಮಗೆ ಅಸತ್ಯರಹಿತನಾದ ದೇವರಿಂದ ಎರಡು
19 ನಿಶ್ಚಲವಾದ ಆಧಾರಗಳು ಇರುವ ಕಾರಣ ಬಲವಾದ ಧೈರ್ಯವುಂಟಾಯಿತು. ಆ ನಿರೀ
ಕ್ಷೆಯು ನಮ್ಮ ಪ್ರಾಣಕ್ಕೆ ಲಂಗರದ ಹಾಗಿದ್ದು ಭರವಸಕ್ಕೆ ಯೋಗ್ಯವಾದದ್ದೂ ಸ್ಥಿರ
ವಾದದ್ದೂ ಆಗಿದೆ. ಅದು ತೆರೆಯೊಳಗಣ ದೇವಸಾನ್ನಿಧ್ಯವನ್ನು ಪ್ರವೇಶಿಸುವಂಥಾದ್ದು.
20 ಯೇಸು ಮೆಲ್ಕಿಜೆದೇಕನ ತರಹದವನಾಗಿ ಸದಾಕಾಲವೂ ಮಹಾಯಾಜಕನಾಗಿದ್ದು
ನಮಗೋಸ್ಕರ ಮುಂದಾಗಿ ಹೋಗಿ ಆ ಸಾನ್ನಿಧ್ಯವನ್ನು ಪ್ರವೇಶಿಸಿದ್ದಾನೆ.

ಯೇಸು ಮೆಲ್ಕಿಜೆದೇಕನ ತರಹದ ಯಾಜಕನಾಗಿದ್ದು ಲೇವಿಕ ಯಾಜಕರಿಗಿಂತ ಉತ್ತಮನು.

**7** ಈ ಮೆಲ್ಕಿಜೆದೇಕನು ಸಾಲೇಮಿನ ಅರಸನೂ ಮಹೋನ್ನತನಾದ ದೇವರ ಯಾಜ
ಕನೂ ಆಗಿದ್ದನು; ಅರಸುಗಳನ್ನು ಸಂಹಾರಮಾಡಿ ಹಿಂತಿರುಗಿ ಬರುತ್ತಿದ್ದ ಅಬ್ರಹಾಮ
2 ನನ್ನು ಎದುರುಗೊಂಡು, ಅವನನ್ನು ಆಶೀರ್ವದಿಸಿದನು; ಅವನಿಗೆ ಅಬ್ರಹಾಮನು ತಾನು
ಜಯಿಸಿಕೊಂಡು ಬಂದಿದ್ದ ಎಲ್ಲಾ ವಸ್ತುಗಳಲ್ಲಿ ದಶಮಭಾಗವನ್ನು ಕೊಟ್ಟನು[2]. ಅವನ
ಹೆಸರಿನ ಅರ್ಥವು ನೀತಿರಾಜ ಎಂಬುವದು; ಇದಲ್ಲದೆ ಅವನು ಸಾಲೇಮಿನ ರಾಜ ಅಂದರೆ
3 ಸಮಾಧಾನರಾಜ; ಅವನ ತಂದೆಯೂ ತಾಯಿಯೂ ವಂಶಾವಳಿಯೂ ಗೊತ್ತಿಲ್ಲ, ಅವನು
ಹುಟ್ಟಿದ್ದಾಗಲಿ ಕಾಲವಾಗಿಹೋದದ್ದಾಗಲಿ ಬರೆದಿಲ್ಲ. ಅವನು ದೇವರ ಮಗನಿಗೆ
ಸಮಾನಮಾಡಲ್ಪಟ್ಟಿದ್ದಾನೆ. ಅವನು ನಿರಂತರವಾಗಿ ಯಾಜಕನಾಗಿರುವವನು[3].
4 ಈ ಮನುಷ್ಯನು ಎಷ್ಟು ದೊಡ್ಡವನೆಂದು ಆಲೋಚಿಸಿರಿ. ನಮ್ಮ ಮೂಲಪಿತೃವಾದ
ಅಬ್ರಹಾಮನು ತಾನು ಸುಲುಕೊಂಡು ಬಂದ ಶ್ರೇಷ್ಠವಸ್ತುಗಳಲ್ಲಿ ದಶಮಭಾಗವನ್ನು ಅವ
5 ನಿಗೆ ಕೊಟ್ಟನಲ್ಲಾ. ಲೇವಿಯ ಕುಲದವರಲ್ಲಿ ಯಾಜಕೋದ್ಯೋಗವನ್ನು ಹೊಂದು
ವವರು ಜನರಿಂದ, ಅಂದರೆ ಅಬ್ರಹಾಮನ ವಂಶಸ್ಥರಾಗಿರುವ ತಮ್ಮ ಸಹೋದರರಿಂದಲೇ,
6 ದಶಮಭಾಗಗಳನ್ನು ತೆಗೆದುಕೊಳ್ಳುವದಕ್ಕೆ ಧರ್ಮಶಾಸ್ತ್ರದಲ್ಲಿ ಅಪ್ಪಣೆ ಉಂಟು. ಆದರೆ
ಅವರ ವಂಶಾವಳಿಗೆ ಸೇರದೆ ಇರುವ ಮೆಲ್ಕಿಜೆದೇಕನು ಅಬ್ರಹಾಮನಿಂದಲೇ ದಶಮಭಾಗ
ಗಳನ್ನು ತಕ್ಕೊಂಡದ್ದಲ್ಲದೆ ದೇವರಿಂದ ವಾಗ್ದಾನಗಳನ್ನು ಹೊಂದಿದವನಾದ ಅವನಿಗೆ

[1] ಉತ್ಪತ್ತಿ ೨೨, ೧೭. [2] ಉತ್ಪತ್ತಿ ೧೪, ೧೭—೨೦. [3] ಕೀರ್ತನೆ ೧೧೦, ೪.

ಆಶೀರ್ವಾದ ಕೊಟ್ಟನು. ಆಶೀರ್ವಾದ ಹೊಂದುವವನಿಗಿಂತ ಆಶೀರ್ವದಿಸುವವನು 7
ದೊಡ್ಡವನು ಎಂಬುವದು ವಿವಾದವಿಲ್ಲದ ಮಾತಷ್ಟೆ. ಇದಲ್ಲದೆ ಲೇವಿಯರ ಕ್ರಮ 8
ವನ್ನು ನೋಡಿದರೆ, ಸಾಯತಕ್ಕ ಮನುಷ್ಯರು ದಶಮಭಾಗಗಳನ್ನು ತಕ್ಕೊಳ್ಳುತ್ತಾರೆ;
ಆದರೆ ಮೆಲ್ಕಿಜೆದೇಕನ ಕ್ರಮವನ್ನು ನೋಡಿದರೆ, ಜೀವಿಸುತ್ತಿದ್ದಾನೆಂದು ಸಾಕ್ಷಿಹೊಂದಿ
ರುವವನು ತಕ್ಕೊಳ್ಳುತ್ತಾನೆ. ಇದು ಮಾತ್ರವಲ್ಲದೆ ದಶಮಭಾಗಗಳನ್ನು ತಕ್ಕೊಳ್ಳುವ 9
ಲೇವಿಯಾದರೂ ಅಬ್ರಹಾಮನ ಮೂಲಕ ದಶಮಭಾಗಗಳನ್ನು ಕೊಟ್ಟಿದ್ದಾನೆಂದು ಹೇಳಿ
ದರೂ ಹೇಳಬಹುದು; ಹ್ಯಾಗಂದರೆ, ಮೆಲ್ಕಿಜೆದೇಕನು ಲೇವಿಯ ಮೂಲಪುರುಷನನ್ನು 10
ಎದುರುಗೊಂಡಾಗ ಲೇವಿಯು ತತ್ವರೂಪವಾಗಿ ಇವನೊಳಗೆ ಇದ್ದನು.

ಇಸ್ರಯೇಲ್ಯರಿಗೆ ಉಂಟಾದ ಧರ್ಮಶಾಸ್ತ್ರವು ಲೇವಿಕ ಯಾಜಕತ್ವದ ಮೇಲೆಯೇ 11
ಆಧಾರಗೊಂಡಿದೆಯಷ್ಟೆ. ಆ ಯಾಜಕತ್ವದಿಂದ ಸಂಪೂರ್ಣ ಸಿದ್ಧಿ ಉಂಟಾಗಿದ್ದರೆ,
ಆರೋನನ ತರಹದವನಾಗಿರದೆ ಮೆಲ್ಕಿಜೆದೇಕನ ತರಹದವನಾಗಿರುವ ಬೇರೊಬ್ಬ ಯಾಜ
ಕನು ಬರುವದಕ್ಕೆ ಅವಶ್ಯವೇನಿತ್ತು? ಯಾಜಕತ್ವವು ಬೇರೆಯಾದರೆ, ಧರ್ಮಶಾಸ್ತ್ರವು 12
ಕೂಡ ಬೇರೆಯಾಗುವದು ಅಗತ್ಯ. ಮೇಲ್ಕಂಡ ಮಾತು[1] ಯಾವಾತನ ವಿಷಯದಲ್ಲಿ 13
ಹೇಳಿದೆಯೋ ಆತನು ಬೇರೊಂದು ಕುಲದಲ್ಲಿ ಹುಟ್ಟಿದವನು; ಆ ಕುಲದವರಲ್ಲಿ ಒಬ್ಬರೂ
ಯಜ್ಞವೇದಿಯ ಬಳಿಯಲ್ಲಿ ಸೇವೆಮಾಡಿದ್ದಿಲ್ಲ. ನಮ್ಮ ಕರ್ತನು ಯೆಹೂದ ಕುಲದಲ್ಲಿ 14
ಜನಿಸಿದವನೆಂಬುವದು ಪ್ರಸಿದ್ಧವಾಗಿದೆಯಷ್ಟೆ; ಈ ಕುಲದ ವಿಷಯದಲ್ಲಿ ಮೋಶೆಯು
ಯಾಜಕರ ಸಂಬಂಧವಾಗಿ ಒಂದು ಮಾತನ್ನಾದರೂ ಹೇಳಲಿಲ್ಲ. ಇದಲ್ಲದೆ ಬೇರೊಬ್ಬ 15-16
ಯಾಜಕನು ಶರೀರಧರ್ಮವಿಷಯವಾದ ನಿಯಮದ ಪ್ರಕಾರವಾಗಿರದೆ ಮೆಲ್ಕಿಜೆದೇಕನ
ಸಾದೃಶ್ಯದಲ್ಲಿ ನಿರ್ಲಯವಾದ ಜೀವದ ಶಕ್ತಿಯುಳ್ಳವನಾಗಿದ್ದು ಬರಬೇಕಾದ್ದರಿಂದ ನಮ್ಮ
ಸಿದ್ಧಾಂತ ಮತ್ತು ಸ್ಪಷ್ಟವಾಯಿತು. ಆತನ ವಿಷಯದಲ್ಲಿ—ನೀನು ಮೆಲ್ಕಿಜೆದೇಕನ 17
ತರಹದವನಾಗಿ ಸದಾಕಾಲವೂ ಯಾಜಕನಾಗಿದ್ಧೀ ಎಂದು ಹೇಳಿಯದೆಯಲ್ಲಾ.
ಧರ್ಮಶಾಸ್ತ್ರವು ಯಾವದನ್ನೂ ಸಿದ್ಧಿಗೆ ತಾರದೆ ಇರುವದರಿಂದ ಮೊದಲಿದ್ದ ನಿಯ 18-19
ಮವು ನಿರ್ಬಲವಾಗಿಯೂ ನಿಷ್ಪ್ರಯೋಜಕವಾಗಿಯೂ ಇದ್ದು ರದ್ದಾಗಿ ಹೋಯಿತು.
ಅದಕ್ಕೆ ಬದಲಾಗಿ ಉತ್ತಮವಾಗಿರುವ ಒಂದು ನಿರೀಕ್ಷಾಧಾರವು ಪ್ರಾಬಲ್ಯಕ್ಕೆ ಬಂತು.
ಈ ನಿರೀಕ್ಷಾಧಾರವು ನಮ್ಮನ್ನು ದೇವರ ಸನ್ನಿಧಿಗೆ ಸೇರಿಸುವಂಥಾದ್ದು.

ಇದಲ್ಲದೆ ಲೇವಿಯರು ಆಣೆಯಿಲ್ಲದೆ ಯಾಜಕರಾದರು; ಆತನಾದರೋ ಆಣೆಯಿಂದ 20-21
ಯಾಜಕನಾಗಿ ಮಾಡಲ್ಪಟ್ಟನು. ದೇವರು ಆತನಿಗೆ—

ನೀನು ಸದಾಕಾಲವೂ ಯಾಜಕನಾಗಿದ್ಧೀ ಎಂದು
ಕರ್ತನೆಂಬ ನಾನು ಆಣೆಯಿಟ್ಟು ಹೇಳಿ ಪಶ್ಚಾತ್ತಾಪ ಪಡುವದಿಲ್ಲ

ಎಂಬದಾಗಿ ಹೇಳಿದನಲ್ಲಾ. ಯೇಸು ಆಣೆಯಿಂದಲೇ ಯಾಜಕನಾದ್ದರಿಂದ ಎಷ್ಟೋ 22
ಶ್ರೇಷ್ಠವಾದ ಒಡಂಬಡಿಕೆಗೆ ಹೊಣೆಗಾರನಾದನು.

---

[1] ಅಂದರೆ, ಕೀರ್ತನೆ ೧೧೦, ೪.

23 ಲೇವಿಯರು ಶಾಶ್ವತವಾಗಿ ಉದ್ಯೋಗ ನಡಿಸುವದಕ್ಕೆ ಮರಣವು ಅಡ್ಡಿಯಾದ್ದರಿಂದ,
24 ಅವರಲ್ಲಿ ಯಾಜಕರಾದವರು ಅನೇಕರು; ಆತನಾದರೋ ಸದಾಕಾಲವಿರುವದರಿಂದ,
25 ಆತನ ಯಾಜಕತ್ವವು ಮತ್ತೊಬ್ಬರಿಗೆ ಹೋಗುವಂಥಾದ್ದಲ್ಲ. ಆದಕಾರಣ, ಆತನು ತನ್ನ
ಮೂಲಕ ದೇವರ ಬಳಿಗೆ ಬರುವವರನ್ನು ಸಂಪೂರ್ಣವಾಗಿ ರಕ್ಷಿಸುವದಕ್ಕೆ ಶಕ್ತನಾಗಿದ್ದಾನೆ;
ಅವರಿಗೋಸ್ಕರ ವಿಜ್ಞಾಪನೆಮಾಡುವದಕ್ಕೆ ಯಾವಾಗಲೂ ಬದುಕುವವನಾಗಿದ್ದಾನೆ.
26 ಇಂಥವನೇ ನಮಗೆ ಬೇಕಾದ ಮಹಾಯಾಜಕನು. ಈತನು ಪರಿಶುದ್ಧನೂ ನಿರ್ದೋ
ಷಿಯೂ ನಿಷ್ಕಳಂಕನೂ ಪಾಪಿಗಳಲ್ಲಿ ಸೇರದೆ ಪ್ರತ್ಯೇಕವಾಗಿರುವವನೂ ಆಕಾಶಮಂಡಲ
27 ಗಳಿಗಿಂತ ಉನ್ನತದಲ್ಲಿರುವವನೂ ಆಗಿರುವನು. ಮೊದಲು ತಮ್ಮ ಪಾಪಪರಿಹಾರಕ್ಕಾಗಿ
ಆ ಮೇಲೆ ಜನರ ಪಾಪಪರಿಹಾರಕ್ಕಾಗಿ ಸಮರ್ಪಣೆಮಾಡುವ ಲೇವಿಕ ಮಹಾಯಾಜಕ
ರಂತೆ ಈತನು ಪ್ರತಿನಿತ್ಯವೂ ಸಮರ್ಪಿಸಬೇಕಾದ ಅವಶ್ಯವಿಲ್ಲ. ಈತನು ತನ್ನನ್ನೇ
28 ಸಮರ್ಪಿಸಿಕೊಂಡು ಒಂದೇ ಸಾರಿ ಆ ಕೆಲಸವನ್ನು ಮಾಡಿ ಮುಗಿಸಿದನು. ಧರ್ಮ
ಶಾಸ್ತ್ರವು ನಿರ್ಬಲರಾದ ಮನುಷ್ಯರನ್ನು ಮಹಾಯಾಜಕರನ್ನಾಗ ಮಾಡುತ್ತದೆ; ಆದರೆ
ಧರ್ಮಶಾಸ್ತ್ರದ ತರುವಾಯ ಆಣೇಸಹಿತವಾಗಿ ಉಂಟಾದ ವಾಕ್ಯವು ಸದಾಕಾಲಕ್ಕೂ
ಸರ್ವಸಂಪೂರ್ಣನಾಗಿರುವ ಮಗನನ್ನೇ ನೇಮಿಸುತ್ತದೆ.

ಲೇವಿಕರ ಯಾಜಕತ್ವವು ಮುಂದೆ ಬರಬೇಕಾದದ್ದನ್ನು ಸೂಚಿಸುವ ಛಾಯೆಯಾಗಿರುವದರಿಂದ ತತ್ಕಾಲಿಕವಾದದ್ದು;
ಯೇಸುವಿನ ಯಾಜಕತ್ವವು ಶಾಶ್ವತವಾದದ್ದು.

**8** ನಾವು ಈಗ ಹೇಳುವ ಸಂಗತಿಗಳಲ್ಲಿ ಮುಖ್ಯವಾದ ಮಾತೇನಂದರೆ—ಪರಲೋಕ
ದೊಳಗೆ ಮಹತ್ವವುಳ್ಳ ದೇವರ ಸಿಂಹಾಸನದ ಬಲಪಾರ್ಶ್ವದಲ್ಲಿ ಆಸನಾರೂಢನಾದಂಥಾ
2 ಮಹಾಯಾಜಕನು ನಮಗಿದ್ದಾನೆ. ಈತನು ಪವಿತ್ರಸ್ಥಾನದಲ್ಲಿ[1] ಅಂದರೆ ಮನುಷ್ಯನು
ಹಾಕದೆ ಕರ್ತನೇ ಹಾಕಿದ ನಿಜವಾದ ದೇವದರ್ಶನಗುಡಾರದಲ್ಲಿ ಯಾಜಕೋದ್ಯೋಗ
ನಡಿಸುವವನಾಗಿದ್ದಾನೆ.
3 ಪ್ರತಿ ಮಹಾಯಾಜಕನು ಕಾಣಿಕೆಗಳನ್ನೂ ಯಜ್ಞಗಳನ್ನೂ ಸಮರ್ಪಿಸುವದಕ್ಕೆ ನೇಮ
ಕವಾಗಿರುತ್ತಾನಷ್ಟೆ; ಆದದರಿಂದ, ಸಮರ್ಪಿಸುವದಕ್ಕೆ ಈ ಮಹಾಯಾಜಕನಿಗೂ ಏನಾ
4 ದರೂ ಇರಬೇಕು. ಈತನು ಇನ್ನೂ ಭೂಮಿಯ ಮೇಲೆ ಇದ್ದರೆ ಯಾಜಕನಾಗಿರುತ್ತಿರ
ಲಿಲ್ಲ; ಯಾಕಂದರೆ ಧರ್ಮನಿಯಮದ ಪ್ರಕಾರ ಕಾಣಿಕೆಗಳನ್ನು ಸಮರ್ಪಿಸುವವರು
5 ಇದ್ದೇ ಇರುತ್ತಾರೆ; ಅವರು ಪರಲೋಕದಲ್ಲಿರುವ ದೇವಾಲಯದ ಪ್ರತಿರೂಪವೂ ಛಾಯೆ
ಯೂ ಆಗಿರುವ ಆಲಯದಲ್ಲಿ ಯಾಜಕತ್ವವನ್ನು ನಡಿಸುವವರು. ಮೋಶೆಯು ದೇವ
ದರ್ಶನಗುಡಾರವನ್ನು ಮಾಡುವದಕ್ಕಿದ್ದಾಗ—ಪರ್ವತದಲ್ಲಿ ನಿನಗೆ ತೋರಿಸಲ್ಪಟ್ಟ ಮಾದ
ರಿಯ ಪ್ರಕಾರ ಎಲ್ಲವನ್ನು ಮಾಡಬೇಕೆಂಬದಾಗಿ[2] ದೈವೋಕ್ತಿಯು ಅವನಿಗೆ ಉಂಟಾಯಿ

---

[1] ಅಥವಾ, ಮಾತೇನಂದರೆ—ಇಂಥ ಮಹಾಯಾಜಕನೇ ನಮಗಿದ್ದಾನೆ; ಈತನು ಪರಲೋಕದೊಳಗೆ . . ಬಲ
ಪಾರ್ಶ್ವದಲ್ಲಿ ಕೂತಿದ್ದು ಪವಿತ್ರಸ್ಥಾನದಲ್ಲಿ . . .

[2] ಹೊರಡೋಣ ೨೫, ೪೦.

ತಲ್ಲಾ. ಆದರೆ ಯೇಸು ಅದಕ್ಕಿಂತ ಶ್ರೇಷ್ಠವಾದ ಯಾಜಕೋದ್ಯೋಗವನ್ನು ಹೊಂದಿ 6
ದವನಾಗಿದ್ದಾನೆ; ಉತ್ತಮ ವಾಗ್ದಾನಗಳ ಮೇಲೆ ಸ್ಥಾಪಿತವಾದ ಉತ್ತಮವಾದ ಒಡಂಬಡಿ
ಕೆಗೆ ಮಧ್ಯಸ್ಥನಾಗಿದ್ದಾನೆ.

ಆ ಮೊದಲನೇ ಒಡಂಬಡಿಕೆಯು ದೋಷವಿಲ್ಲದ್ದಾಗಿದ್ದರೆ, ಎರಡನೇ ಒಡಂಬಡಿಕೆಗೆ 7
ಅವಕಾಶವು ಇರುತ್ತಿರಲಿಲ್ಲ. ಆದರೆ ದೇವರು ಆ ಒಡಂಬಡಿಕೆಗೆ ಸೇರಿದವರ ಮೇಲೆ 8
ತಪ್ಪು ಹೊರಿಸಿ ಹೀಗೆಂದನು—

ಕೇಳಿರಿ; ನಾನು ಇಸ್ರಯೇಲಮನೆತನದವರ ಸಂಗಡಲೂ ಯೆಹೂದಮನೆತನ
ದವರ ಸಂಗಡಲೂ ಹೊಸದಾಗಿರುವ ಒಂದು ಒಡಂಬಡಿಕೆಯನ್ನು ಮಾಡುವ
ಕಾಲ ಬರುತ್ತದೆಂದು ಕರ್ತನು ಹೇಳುತ್ತಾನೆ;
ಈ ಒಡಂಬಡಿಕೆಯು ನಾನು ಇವರ ಪಿತೃಗಳನ್ನು ಕೈಹಿಡಿದು ಐಗುಪ್ತದೇಶ 9
ದಿಂದ ಕರಕೊಂಡು ಬಂದ ಕಾಲದಲ್ಲಿ ಅವರ ಸಂಗಡ ಮಾಡಿದ ಒಡಂಬಡಿ
ಕೆಯ ಪ್ರಕಾರವಾಗಿರುವಂಥಾದ್ದಲ್ಲ;
ಅವರು ನನ್ನ ಒಡಂಬಡಿಕೆಯಲ್ಲಿ ಸ್ಥಿರವಾಗಿ ನಿಲ್ಲಲಿಲ್ಲವಾದದರಿಂದ ನಾನು
ಅವರ ಚಿಂತೆಯನ್ನು ಬಿಟ್ಟೆನೆಂದು ಕರ್ತನು ಹೇಳುತ್ತಾನೆ.
ಆ ದಿವಸಗಳಾದ ಮೇಲೆ ನಾನು ಇಸ್ರಯೇಲಮನೆತನದವರ ಸಂಗಡ ಮಾಡುವ 10
ಒಡಂಬಡಿಕೆ ಏನಂದರೆ,
ನನ್ನ ಆಜ್ಞೆಗಳು ಅವರ ಮನಸ್ಸಿನಲ್ಲಿರುವಂತೆ ಮಾಡುವೆನು,
ಅವರ ಹೃದಯಗಳ ಮೇಲೆ ಅವುಗಳನ್ನು ಬರೆಯುವೆನು;
ನಾನು ಅವರಿಗೆ ದೇವರಾಗಿರುವೆನು,
ಅವರು ನನಗೆ ಪ್ರಜೆಗಳಾಗಿರುವರು;
ಅವರಲ್ಲಿ ಯಾವನೂ ತನ್ನ ಊರಿನವನಿಗೂ ಸಹೋದರನಿಗೂ 11
ಕರ್ತನನ್ನು ತಿಳುಕೋ ಎಂದು ಬೋಧಿಸುವದು ಅವಶ್ಯವಿರುವದಿಲ್ಲ;
ಚಿಕ್ಕವರು ದೊಡ್ಡವರು ಎಲ್ಲರೂ ನನ್ನನ್ನು ಬಲ್ಲವರಾಗಿರುವರು;
ನಾನು ಅವರ ದುಷ್ಕೃತ್ಯಗಳ ವಿಷಯವಾಗಿ ಕ್ಷಮೆಯುಳ್ಳವನಾಗಿರುವೆನು, 12
ಅವರ ಪಾಪಗಳನ್ನು ಇನ್ನು ಮೇಲೆ ನನ್ನ ನೆನಪಿಗೆ ತರುವದೇ ಇಲ್ಲ
ಎಂದು ಕರ್ತನು ಹೇಳುತ್ತಾನೆ[1]

ಇಲ್ಲಿ ಹೊಸ ಒಡಂಬಡಿಕೆಯೆಂದು ಹೇಳಿದ್ದರಲ್ಲಿ ಮೊದಲಿದ್ದದ್ದನ್ನು ಹಳೇದಾಗಿ ಮಾಡಿ 13
ದ್ದಾನೆ. ಆದರೆ ಹಳೇದಾಗುತ್ತಾ ಮುದಿಯಾಗುವಂಥಾದ್ದಕ್ಕೆ ಅಂತ್ಯವು ಸಮೀಪವಾಗಿದೆ.

ಹೀಗಿದ್ದಾಗ್ಯೂ ಮೊದಲನೇ ಒಡಂಬಡಿಕೆಯಲ್ಲಿ ದೇವಾರಾಧನೆಯ ನಿಯಮಗಳಿದ್ದವು; **9**
ಮತ್ತು ದೇವಾಲಯವಿತ್ತು, ಅದು ಇಹಲೋಕಸಂಬಂಧವಾದದ್ದು. ಅಂದರೆ, ಒಂದು 2
ಗುಡಾರವು ಕಟ್ಟಲ್ಪಟ್ಟಿತು; ಅದರ ಮೊದಲನೇ ಭಾಗದಲ್ಲಿ ದೀಪಸ್ತಂಭ, ಮೇಜು, ಸಮರ್ಪಿ
ಸಿದ ರೊಟ್ಟಿ ಇವುಗಳಿದ್ದವು; ಅದಕ್ಕೆ ಪವಿತ್ರಸ್ಥಾನವೆಂಬ ಹೆಸರು. ಎರಡನೇ ತೆರೆಯ 3

[1] ಯೆರೆಮೀಯ ೩೧, ೩೧ – ೩೪.

4 ಆಚೆಯಲ್ಲಿ ಅತಿಪವಿತ್ರಸ್ಥಾನವೆನ್ನಿಸಿಕೊಳ್ಳುವ ಇನ್ನೊಂದು ಭಾಗವಿತ್ತು; ಅದರಲ್ಲಿ ಚಿನ್ನದ ಧೂಪಾರತಿ, ಒಳಗೂ ಹೊರಗೂ ಚಿನ್ನದ ತಗಡನ್ನು ಮಡಾಯಿಸಿದ್ದ ಒಡಂಬಡಿಕೆಯ ಪೆಟ್ಟಿಗೆ ಇವುಗಳಿದ್ದವು; ಆ ಪೆಟ್ಟಿಗೆಯೊಳಗೆ ಮನ್ನಾ ಇಟ್ಟಿದ್ದ ಚಿನ್ನದ ಪಾತ್ರೆಯೂ ಆರೋ
5 ನನ ಚಿಗುರಿದ ಕೋಲೂ ಒಡಂಬಡಿಕೆ ಬರೆದಿದ್ದ ಕಲ್ಲಿನ ಹಲಿಗೆಗಳೂ ಇದ್ದವು; ಅದರ ಮೇಲೆ ದೇವರ ಪ್ರಭಾವವನ್ನು ಸೂಚಿಸುವ ಖೆರೂಬಿಗಳು ಕೃಪಾಸನವನ್ನು ಆಚ್ಛಾದಿಸಿ ಕೊಂಡಿದ್ದವು. ಸದ್ಯಕ್ಕೆ ಈ ವಿಷಯಗಳನ್ನು ಒಂದೊಂದಾಗಿ ವಿವರಿಸುವದಕ್ಕೆ ಆಗುವದಿಲ್ಲ.
6 ಇವುಗಳು ಹೀಗೆ ಸಿದ್ಧಮಾಡಲ್ಪಟ್ಟ ಮೇಲೆ, ಯಾಜಕರು ಯಾವಾಗಲೂ ಗುಡಾರದ
7 ಮುಂದಣ ಭಾಗದೊಳಗೆ ಹೋಗಿ, ದೇವಾರಾಧನೆಯನ್ನು ನಡಿಸುತ್ತಾರೆ. ಆದರೆ ಎರಡನೇ ಭಾಗದೊಳಗೆ ಮಹಾಯಾಜಕನೊಬ್ಬನೇ ವರುಷಕ್ಕೆ ಒಂದೇ ಸಾರಿ ಹೋಗುತ್ತಾನೆ, ಅವನು ರಕ್ತವನ್ನು ತಕ್ಕೊಳ್ಳದೆ ಹೋಗುವದಿಲ್ಲ; ಆ ರಕ್ತವನ್ನು ತನಗೋಸ್ಕ
8 ರವೂ ಜನರ ತಪ್ಪುಗಳಿಗೋಸ್ಕರವೂ ಸಮರ್ಪಿಸುತ್ತಾನೆ. ಈ ಏರ್ಪಾಟಿನಿಂದ ಗುಡಾರದಲ್ಲಿ ಮುಂದಣ ಭಾಗವು ಇರುವ ತನಕ ದೇವರ ಸಮಕ್ಷಮಕ್ಕೆ ಹೋಗುವ ಮಾರ್ಗವು
9 ಇದು ವರೆಗೂ ಪ್ರಕಟವಾಗಲಿಲ್ಲವೆಂಬುವದನ್ನು ಪವಿತ್ರಾತ್ಮನು ವ್ಯಕ್ತಪಡಿಸುತ್ತಾನೆ. ಆ ಗುಡಾರವು ಈಗಿನ ಕಾಲದವರಿಗೋಸ್ಕರ ಒಂದು ಒಳಗಣ ಅರ್ಥವನ್ನು ಸೂಚಿಸುತ್ತದೆ; ಏನಂದರೆ, ಅದರ ಕ್ರಮದ ಮೇರೆಗೆ ಸಮರ್ಪಣೆಯಾಗುವ ಕಾಣಿಕೆಗಳೂ ಯಜ್ಞಗಳೂ
10 ದೇವಾರಾಧನೆ ಮಾಡುವವರಿಗೆ ಮನಶ್ಶುದ್ಧಿಯನ್ನು ಉಂಟುಮಾಡಲಾರದೆ, ಅನ್ನಪಾನಾದಿಗಳೂ ವಿವಿಧ ಸ್ನಾನಗಳೂ ಸಹಿತವಾಗಿ, ದೇಹಸಂಬಂಧಪಟ್ಟ ನಿಯಮಗಳಾಗಿದ್ದು ತಿದ್ದುಪಾಟಿನ ಕಾಲದ ವರೆಗೆ ಮಾತ್ರ ನೇಮಕವಾದವು ಎಂಬುವದೇ.
11 ಆದರೆ ಕ್ರಿಸ್ತನು ಈಗ ಬಂದಿರುವ[1] ಮೇಲುಗಳನ್ನು ಕುರಿತು ಮಹಾಯಾಜಕನಾಗಿ ಬಂದು, ಕೈಯಿಂದ ಕಟ್ಟಲ್ಪಡದಂಥಾ ಅಂದರೆ ಈ ಸೃಷ್ಟಿಗೆ ಸಂಬಂಧಪಡದಂಥಾ ಘನವಾಗಿಯೂ ಉತ್ಕೃಷ್ಟವಾಗಿಯೂ ಇರುವ ಗುಡಾರದಲ್ಲಿ ಸೇವೆಯನ್ನು ಮಾಡುವವನಾಗಿ
12 ಹೋತ ಹೋರೀ ಕರಗಳ ರಕ್ತವನ್ನು ತಕ್ಕೊಳ್ಳದೆ ಸ್ವಂತ ರಕ್ತವನ್ನೇ ತಕ್ಕೊಂಡು, ನಮಗೋಸ್ಕರ ನಿತ್ಯವಿಮೋಚನೆಯನ್ನು ಸಂಪಾದಿಸಿಕೊಂಡವನಾಗಿ ಒಂದೇ ಸಾರಿ ದೇವರ
13 ಸನ್ನಿಧಾನಕ್ಕೆ ಪ್ರವೇಶಿಸಿದನು. ಹೋತ ಹೋರಿಗಳ ರಕ್ತವೂ ಹೊಲೆಯಾದವರ ಮೇಲೆ ಚೆಲ್ಲುವ ಕಡಸಿನ ಬೂದಿಯೂ ಶರೀರದ ಹೊಲೆಯನ್ನು ಹೋಗಲಾಡಿಸಿ ಪವಿತ್ರಮಾಡು
14 ವದಾದರೆ[2], ನಿತ್ಯಾತ್ಮನಿಂದ[3] ತನ್ನನ್ನು ತಾನೇ ಪೂರ್ಣಾಂಗವಾದ ಯಜ್ಞಪಶುವೋ ಎಂಬಂತೆ ದೇವರಿಗೆ ಸಮರ್ಪಿಸಿಕೊಂಡ ಕ್ರಿಸ್ತನ ರಕ್ತವು ಎಷ್ಟೋ ಹೆಚ್ಚಾಗಿ ನಮ್ಮನ್ನು[4] ನಿರ್ಜೀವಕರ್ಮಗಳಿಂದ ಬಿಡಿಸಿ ಜೀವವುಳ್ಳ ದೇವರನ್ನು ನಾವು ಆರಾಧಿಸುವವರಾಗುವಂತೆ ನಮ್ಮ ಅಂತರಾತ್ಮವನ್ನು ಶುದ್ಧೀಕರಿಸುವದಲ್ಲವೇ.
15 ಮತ್ತು ಈ ಕಾರಣದಿಂದ ಆತನು ಒಂದು ಹೊಸ ಒಡಂಬಡಿಕೆಗೆ ಮಧ್ಯಸ್ಥನಾಗಿದ್ದಾನೆ. ಮೊದಲನೇ ಒಡಂಬಡಿಕೆಯ ಕಾಲದಲ್ಲಿ ನಡೆದ ಅಕ್ರಮಗಳ ಪರಿಹಾರಕ್ಕಾಗಿ

---

1) ಕೆಲವು ಪ್ರತಿಗಳಲ್ಲಿ—ಮುಂದೆ ಬರಬೇಕಾಗಿದ್ದ ಎಂದು ಬರೆದದೆ.
2) ಲೇವಿಕ ೧೬, ೩—೧೬; ಅಂಕೆ ೧೯, ೯—೧೯.
3) ಅಥವಾ, ನಿತ್ಯಸಾಧಕವಾಗಿರುವ ಆತ್ಮೀಯ ರೀತಿಯಲ್ಲಿ.
4) ಕೆಲವು ಪ್ರತಿಗಳಲ್ಲಿ—ನಿಮ್ಮನ್ನು .... ನೀವು .... ನಿಮ್ಮ ಎಂದು ಬರೆದದೆ.

ಆತನು ಮರಣವನ್ನು ಅನುಭವಿಸಿದ್ದರಿಂದ ದೇವರಿಂದ ಕರಸಿಕೊಂಡವರು ವಾಗ್ದಾನವಾ
ಗಿದ್ದ ನಿತ್ಯಬಾಧ್ಯತೆಯನ್ನು ಹೊಂದುವದಕ್ಕೆ ಆತನ ಮೂಲಕ ಮಾರ್ಗವಾಯಿತು.
ಮರಣಶಾಸನವು ಇರುವಲ್ಲಿ ಅದನ್ನು ಬರಸಿದವನ ಮರಣವು ಪ್ರಸಿದ್ಧವಾಗಿರಬೇಕಷ್ಟೆ. 16
ಮರಣಶಾಸನವು ಮರಣವಾದ ಮೇಲೆ ನಡೆಯುವದೇ ಹೊರತು, ಬರಸಿದವನು ಜೀವ 17
ದಿಂದಿರುವಾಗ ಎಂದಿಗೂ ಸಲ್ಲುವದಿಲ್ಲ[1].

ಹೀಗಿರಲಾಗಿ, ಮೊದಲನೇ ಒಡಂಬಡಿಕೆಯಾದರೂ ರಕ್ತವಿಲ್ಲದೆ ಸ್ಥಾಪಿತವಾಗಲಿಲ್ಲ. 18
ಮೋಶೆಯು ದೇವರ ವಿಧಿಗಳನ್ನೆಲ್ಲಾ ಧರ್ಮಶಾಸ್ತ್ರದ ಪ್ರಕಾರ ಜನರೆಲ್ಲರಿಗೆ ಹೇಳಿದ 19
ಮೇಲೆ, ನೀರು, ಕೆಂಪು ಉಣ್ಣೆ, ಹಿಸ್ಸೋಪುಕಡ್ಡಿ ಇವುಗಳೊಂದಿಗೆ ಹೋರೀ ಕರಗಳ ಮತ್ತು
ಹೋತಗಳ ರಕ್ತವನ್ನು ತಕ್ಕೊಂಡು—ಇದು ದೇವರು ನಿಮಗೋಸ್ಕರ ವಿಧಿಸಿದ ಒಡಂಬ 20
ಡಿಕೆಯನ್ನು ಸ್ಥಿರಪಡಿಸುವ ರಕ್ತವಾಗಿದೆ ಎಂದು ಹೇಳಿ, ಅದನ್ನು ಗ್ರಂಥದ ಮೇಲೆಯೂ
ಎಲ್ಲಾ ಜನರ ಮೇಲೆಯೂ ಪ್ರೋಕ್ಷಿಸಿದನು[2]. ಇದಲ್ಲದೆ ಗುಡಾರದ ಮೇಲೆಯೂ 21
ದೇವರ ಸೇವೆಗೆ ಬೇಕಾಗಿರುವ ಎಲ್ಲಾ ಉಪಕರಣಗಳ ಮೇಲೆಯೂ ಅದೇ ರೀತಿಯಾಗಿ
ರಕ್ತವನ್ನು ಪ್ರೋಕ್ಷಿಸಿದನು. ಧರ್ಮಶಾಸ್ತ್ರದ ಪ್ರಕಾರ, ಸ್ವಲ್ಪಕಡಿಮೆ ಎಲ್ಲಾ ವಸ್ತುಗಳು 22
ರಕ್ತದಿಂದಲೇ ಶುದ್ಧೀಕರಿಸಲ್ಪಡುವದೇ ಹೊರತು ರಕ್ತಧಾರೆಯಿಲ್ಲದೆ ಪಾಪಪರಿಹಾರ
ಉಂಟಾಗುವದಿಲ್ಲ.

ಪರಲೋಕವಸ್ತುಗಳಿಗೆ ಪ್ರತಿರೂಪವಾಗಿರುವ ವಸ್ತುಗಳ ಶುದ್ಧೀಕರಣಕ್ಕಾಗಿ ಇಂಥಾ 23
ಯಜ್ಞಗಳು ಅವಶ್ಯವಾದಾಗ್ಯೂ ಸಾಕ್ಷಾತ್ ಪರಲೋಕದವುಗಳಿಗೆ ಇವುಗಳಿಗಿಂತ ಉತ್ತ
ಮವಾದ ಯಜ್ಞಗಳು ಬೇಕು. ಯಾಕಂದರೆ ಕ್ರಿಸ್ತನು ನಿಜವಾದ ದೇವಾಲಯಕ್ಕೆ ಅನು 24
ರೂಪಮಾತ್ರವಾದದ್ದಾಗಿಯೂ ಕೈಯಿಂದ ಕಟ್ಟಿದ್ದಾಗಿಯೂ ಇರುವ ಆಲಯದಲ್ಲಿ
ಪ್ರವೇಶಿಸದೆ, ದೇವರ ಸಮ್ಮುಖದಲ್ಲಿ ನಮಗೋಸ್ಕರ ಈಗ ಕಾಣಿಸಿಕೊಳ್ಳುವದಕ್ಕೆ ಪರ
ಲೋಕದಲ್ಲಿಯೇ ಪ್ರವೇಶಿಸಿದನು. ಇದಲ್ಲದೆ ಮಹಾಯಾಜಕನು ವರುಷವರುಷವೂ 25
ಅನ್ಯರಕ್ತವನ್ನು ತೆಗೆದುಕೊಂಡು ಪವಿತ್ರಾಲಯದಲ್ಲಿ ಪ್ರವೇಶಿಸುವ ಪ್ರಕಾರ, ಆತನು
ತನ್ನನ್ನು ಅನೇಕ ಸಾರಿ ಸಮರ್ಪಿಸುವದಕ್ಕೆ ಪರಲೋಕದಲ್ಲಿ ಪ್ರವೇಶಿಸಲಿಲ್ಲ; ಹಾಗೆ ಸಮ 26
ರ್ಪಿಸಬೇಕಾಗಿದ್ದ ಪಕ್ಷದಲ್ಲಿ, ಆತನು ಲೋಕಾದಿಯಿಂದ ಎಷ್ಟೋ ಸಾರಿ ಬಾಧೆಪಟ್ಟು
ಸಾಯಬೇಕಾಗಿತ್ತು. ಆದರೆ ಒಂದೇ ಸಾರಿ ಯುಗಗಳ ಸಮಾಪ್ತಿಯಲ್ಲೇ ಆತನು ಪಾಪ
ನಿವಾರಣೆ ಮಾಡಬೇಕೆಂಬ ಉದ್ದೇಶದಿಂದ ತನ್ನನ್ನು ಯಜ್ಞಮಾಡಿಕೊಳ್ಳುವವನಾಗಿ ಪ್ರತ್ಯ
ಕ್ಷನಾದನು. ಒಂದೇ ಸಾರಿ ಸಾಯುವದೂ ಆ ಮೇಲೆ ನ್ಯಾಯತೀರ್ಪೂ ಮನುಷ್ಯರಿಗೆ 27
ಹ್ಯಾಗೆ ನೇಮಕವಾಗಿದೆಯೋ, ಹಾಗೆಯೇ ಕ್ರಿಸ್ತನು ಸಹ ಅನೇಕರ ಪಾಪಗಳನ್ನು 28
ಹೊತ್ತುಕೊಳ್ಳುವದಕ್ಕೋಸ್ಕರ ಒಂದೇ ಸಾರಿ ಸಮರ್ಪಿತನಾದನು, ಮತ್ತು ತನ್ನನ್ನು
ನಿರೀಕ್ಷಿಸಿಕೊಂಡಿರುವವರಿಗೆ ರಕ್ಷಣೆಯನ್ನುಂಟುಮಾಡುವದಕ್ಕೋಸ್ಕರ ಪಾಪಸಂಬಂಧವಿಲ್ಲ
ದವನಾಗಿ ಎರಡನೇ ಸಾರಿ ಕಾಣಿಸಿಕೊಳ್ಳುವನು.

---

[1] ಅಥವಾ, ಒಡಂಬಡಿಕೆಯಿರುವಲ್ಲಿ ಅದನ್ನು ನಿಶ್ಚಯಪಡಿಸುವ ಪಶುವಿನ ಮರಣವು ಪ್ರಸಿದ್ಧವಾಗಿರಬೇಕಷ್ಟೆ. ಪಶು
ವಿನ ಮರಣವಾದ ಮೇಲೆ ಒಡಂಬಡಿಕೆಯು ದೃಢವಾಗುವದೇ ಹೊರತು, ನಿಶ್ಚಯಪಡಿಸುವ ಆ ಪಶು ಜೀವದಿಂದಿರು
ವಾಗ ಆ ಒಡಂಬಡಿಕೆ ಎಂದಿಗೂ ಪ್ರಯೋಜನಕ್ಕೆ ಬರುವದಿಲ್ಲ. [2] ಹೊರಡೋಣ ೨೪, ೮.

ಲೇವಿಕರ ಕೊನೆಯಿಲ್ಲದ ಯಜ್ಞಗಳು ಸಾರ್ಥಕವಾಗುವದಿಲ್ಲ; ಯೇಸುವಿನ ಒಂದೇ ಯಜ್ಞವು ಸದಾಕಾಲವೂ ಸಾರ್ಥಕವಾದದ್ದು.

**10** ಧರ್ಮಶಾಸ್ತ್ರದಲ್ಲಿ ಮುಂದೆ ಬರಬೇಕಾಗಿದ್ದ ಮೇಲುಗಳ ನಿಜಸ್ವರೂಪವು ಇರದೆ ಅವುಗಳ ಛಾಯೆ ಮಾತ್ರವೇ ಇರುವದರಿಂದ ಆ ಧರ್ಮಶಾಸ್ತ್ರವು ವರುಷವರುಷಕ್ಕೆ ತಪ್ಪದೆ ಅರ್ಪಿತವಾದ ಒಂದೇ ವಿಧವಾದ ಯಜ್ಞಗಳಿಂದ, ದೇವರ ಸಮೀಪಕ್ಕೆ ಬರುವವರನ್ನು 2 ಎಂದಿಗೂ ಸಿದ್ಧಿಗೆ ತರಲಾರದು. ತಂದಿದ್ದ ಪಕ್ಷದಲ್ಲಿ ಆ ಯಜ್ಞಸಮರ್ಪಣೆಯು ನಿಂತು ಹೋಗುತ್ತಿತ್ತಲ್ಲಾ. ಯಾಕಂದರೆ ದೇವಾರಾಧನೆ ಮಾಡುವವರು ಒಂದೇ ಸಾರಿ ಶುದ್ಧೀಕರಿಸಲ್ಪಟ್ಟ ಮೇಲೆ, ಅವರಿಗೆ ಪಾಪವುಂಟೆಂದು ಅವರ ಮನಸ್ಸು ಇನ್ನೂ ಸಾಕ್ಷಿಕೊಡು 3 ವದು ಹ್ಯಾಗೆ? ಆದರೆ ಆ ಯಜ್ಞಗಳಿಂದ ಪ್ರತಿವರುಷದಲ್ಲಿಯೂ ಪಾಪಗಳ ಜ್ಞಾಪಕವಾ 4 ಗುವದುಂಟು; ಹೋರಿಗಳ ಮತ್ತು ಹೋತಗಳ ರಕ್ತದಿಂದ ಪಾಪಗಳು ಪರಿಹಾರವಾಗು 5 ವದು ಅಸಾಧ್ಯವಾಗಿದೆಯಲ್ಲಾ. ಆದದರಿಂದ, ಕ್ರಿಸ್ತನು ಭೂಲೋಕದೊಳಗೆ ಬರುವಾಗ—

ದೇವರೇ, ಯಜ್ಞದ ಮೇಲೆಯೂ ನೈವೇದ್ಯದ ಮೇಲೆಯೂ ನಿನಗೆ ಇಷ್ಟವಿರಲಿಲ್ಲ,
ನನಗೆ ದೇಹವನ್ನು ಸಿದ್ಧಮಾಡಿಕೊಟ್ಟೆ;
6 ಸರ್ವಾಂಗಹೋಮಗಳಲ್ಲಿಯೂ ಪಾಪಗಳ ನಿಮಿತ್ತವಾದ ಯಜ್ಞಗಳಲ್ಲಿಯೂ ನೀನು
ಸಂತೋಷ ಪಡಲಿಲ್ಲ;
7 ಆಗ ನಾನು—ಇಗೋ, ದೇವರೇ, ನಿನ್ನ ಚಿತ್ತವನ್ನು ನೆರವೇರಿಸುವದಕ್ಕೆ ಬಂದಿದ್ದೇನೆ.
ಗ್ರಂಥದ ಸುರಳಿಯಲ್ಲಿ ನನ್ನನ್ನು ಕುರಿತು ಬರೆದದೆ ಎಂದು ಹೇಳಿದೆನು[1]

8 ಅನ್ನುತ್ತಾನೆ. ಧರ್ಮಶಾಸ್ತ್ರದ ಪ್ರಕಾರ ಸಮರ್ಪಣೆಯಾಗುತ್ತಾ ಬರುವ ಯಜ್ಞಗಳೂ ನೈವೇದ್ಯಗಳೂ ಸರ್ವಾಂಗಹೋಮಗಳೂ ಪಾಪಗಳ ನಿಮಿತ್ತವಾದ ಸಮರ್ಪಣೆಗಳೂ ನಿನಗೆ ಇಷ್ಟವಾಗಿರಲಿಲ್ಲ, ನೀನು ಅವುಗಳಲ್ಲಿ ಸಂತೋಷಪಡುವದಿಲ್ಲ ಎಂದು ಮೇಲೆ 9 ಹೇಳಿದ ತರುವಾಯ—ಇಗೋ, ನಿನ್ನ ಚಿತ್ತವನ್ನು ನೆರವೇರಿಸುವದಕ್ಕೆ ಬಂದಿದ್ದೇನೆ ಎಂದು ಹೇಳಿದ್ದಾನೆ. ಆತನು ಎರಡನೇದನ್ನು ಸ್ಥಾಪಿಸುವದಕ್ಕಾಗಿ ಮೊದಲನೇದನ್ನು 10 ತೆಗೆದುಬಿಡುತ್ತಾನೆ. ಯೇಸು ಕ್ರಿಸ್ತನು ಒಂದೇ ಸಾರಿ ದೇಹಸಮರ್ಪಣೆ ಮಾಡಿ ದೇವರ ಚಿತ್ತವನ್ನು ನೆರವೇರಿಸಿದ್ದರಿಂದಲೇ ನಾವು ದೇವರ ಸನ್ನಿಧಾನಕ್ಕೆ ಸೇರುವಂತೆ ಶುದ್ಧರಾದೆವು.

11 ಇದಲ್ಲದೆ ಆ ಯಾಜಕರೆಲ್ಲರು ದಿನಾಲು ಸೇವೆಮಾಡುತ್ತಾ ಎಂದಿಗೂ ಪಾಪನಿವಾರಣೆ ಮಾಡಲಾರದಂಥ ಒಂದೇ ವಿಧವಾದ ಯಜ್ಞಗಳನ್ನು ಪದೇ ಪದೇ ಸಮರ್ಪಿಸುತ್ತಾ ನಿಂತು 12 ಕೊಂಡಿರುವರು. ಆದರೆ ಈ ಯಾಜಕನು ಪಾಪನಿವಾರಣೆಗೋಸ್ಕರ ನಿರಂತರವಾಗಿ ನಿಲ್ಲುವ ಒಂದೇ ಯಜ್ಞವನ್ನು ಸಮರ್ಪಿಸಿ ದೇವರ ಬಲಪಾರ್ಶ್ವದಲ್ಲಿ ಕೂತುಕೊಂಡನು. 13 ಅಂದಿನಿಂದ ತನ್ನ ಶತ್ರುಗಳು ತನ್ನ ಪಾದಪೀಠವಾಗಿ ಹಾಕಲ್ಪಡುವ ತನಕ ಆತನು ಕಾದಿ 14 ರುವನು. ದೇವಜನರನ್ನು ಒಂದೇ ಸಮರ್ಪಣೆಯಿಂದ ನಿರಂತರವಾಗಿ ಸಿದ್ಧಿಗೆ ತಂದಿದ್ದಾ 15 ನಷ್ಟೆ. ಪವಿತ್ರಾತ್ಮನು ಸಹ ನಮಗೆ ಸಾಕ್ಷಿಕೊಡುವವನಾಗಿ—

[1] ಕೀರ್ತನೆ ೪೦, ೬—೮.

ಆ ದಿವಸಗಳಾದ ಮೇಲೆ ನಾನು ಇಸ್ರಯೇಲ್ಯರ ಸಂಗಡ ಮಾಡುವ ಒಡಂಬಡಿಕೆ ಏನಂದರೆ, 16
ನನ್ನ ಆಜ್ಞೆಗಳು ಅವರ ಹೃದಯಗಳಲ್ಲಿರುವಂತೆ ಮಾಡುವೆನು,
ಅವರ ಮನಸ್ಸುಗಳ ಮೇಲೆ ಅವುಗಳನ್ನು ಬರೆಯುವೆನು
ಎಂದು ಕರ್ತನು ನುಡಿಯುತ್ತಾನೆ

ಎಂಬದಾಗಿ ಹೇಳಿದ ಮೇಲೆ, ಇನ್ನು—

ಅವರ ಪಾಪಗಳನ್ನೂ ಅವರ ಅಕ್ರಮಗಳನ್ನೂ ಇನ್ನು ಮೇಲೆ ನನ್ನ ನೆನಪಿಗೆ ತಂದುಕೊಳ್ಳುವದಿಲ್ಲ[1] 17

ಎಂದು ಹೇಳುತ್ತಾನೆ. ಪಾಪಗಳು ಪರಿಹಾರವಾದಲ್ಲಿ ಮುಂದೆ ಅವುಗಳ ವಿಷಯದಲ್ಲಿ ಸಮರ್ಪಣೆ ಮಾಡುವದು ಅವಶ್ಯವಿಲ್ಲ. 18

**ಯೇಸುವಿನ ಮೂಲಕ ದೇವಸನ್ನಿಧಾನವನ್ನು ಯೋಗ್ಯರಾಗಿ ಸೇರೋಣ; ಆತನ ಯಜ್ಞವನ್ನು ಬೇಡವೆಂದರೆ ಬೇರೊಂದಿಲ್ಲ; ನಾವು ಹಿಂಸೆ ತಾಳಬೇಕಾದರೂ ಹಿಂಜರಿಯಬಾರದು ಎಂದು ಬೋಧೆ.**

ಹೀಗಿರುವಲ್ಲಿ ಸಹೋದರರೇ, ಯೇಸು ನಮಗೋಸ್ಕರ ತನ್ನ ಶರೀರವೆಂಬ ತೆರೆ 19-20 ಯನ್ನು ಭೇದಿಸಿ ಪ್ರತಿಷ್ಠಿಸಿದ ಜೀವವುಳ್ಳ ಹೊಸ ದಾರಿಯಲ್ಲಿ ಆತನ ರಕ್ತದ ಮೂಲಕ ದೇವರ ಸಮಕ್ಷಮದಲ್ಲಿ ಪ್ರವೇಶಿಸುವದಕ್ಕೆ ನಮಗೆ ಧೈರ್ಯವುಂಟಾಯಿತು. ದೇವರ 21 ಮನೆಯ ಮೇಲೆ ಅಧಿಕಾರಿಯಾಗಿರುವ ಶ್ರೇಷ್ಠನಾದ ಯಾಜಕನು ನಮಗಿದ್ದಾನೆ. ಆದ 22 ಕಾರಣ ನೀನಪರಾಧಿಯೆಂದು ನಮ್ಮ ಮನಸ್ಸು ನಮಗೆ ಸಾಕ್ಷಿ ಹೇಳದಂತೆ ನಾವು ಹೃದಯವನ್ನು ಪ್ರೋಕ್ಷಿಸಿಕೊಂಡು ದೇಹವನ್ನು ತಿಳಿನೀರಿನಿಂದ ತೊಳೆದುಕೊಂಡು ಪರಿಪೂರ್ಣವಾದ ನಂಬಿಕೆಯುಳ್ಳವರಾಗಿಯೂ ಯಥಾರ್ಥಹೃದಯವುಳ್ಳವರಾಗಿಯೂ ದೇವರ ಬಳಿಗೆ ಬರೋಣ. ನಮ್ಮ ನಿರೀಕ್ಷೆಯನ್ನು ಕುರಿತು ನಾವು ಮಾಡಿದ ಪ್ರತಿಜ್ಞೆಯನ್ನು 23 ನಿಶ್ಚಂಚಲವಾಗಿ ಪರಿಗ್ರಹಿಸೋಣ; ವಾಗ್ದಾನಮಾಡಿದಾತನು ನಂಬಿಗಸ್ತನು. ನಾವು 24 ಪರಸ್ಪರ ಹಿತಚಿಂತಕರಾಗಿದ್ದು ಪ್ರೀತಿಸುತ್ತಿರಬೇಕೆಂತಲೂ ಸತ್ಕಾರ್ಯ ಮಾಡಬೇಕೆಂತಲೂ ಒಬ್ಬರನ್ನೊಬ್ಬರು ಪ್ರೇರೇಪಿಸೋಣ. ಕೆಲವರಿಗೆ ರೂಢಿಬಿದ್ದ ಪ್ರಕಾರ ನಾವು ಸಭೆಯಾಗಿ 25 ಕೂಡಿಕೊಳ್ಳುವದನ್ನು ಬಿಟ್ಟುಬಿಡದೆ, ಒಬ್ಬರನ್ನೊಬ್ಬರು ಎಚ್ಚರಿಸೋಣ. ಕರ್ತನ ಪ್ರತ್ಯಕ್ಷತೆಯ ದಿನವು ಸಮೀಪಿಸುತ್ತಾ ಬರುತ್ತದೆ ಎಂದು ನೀವು ನೋಡುವದರಿಂದ ಇದನ್ನು ಮತ್ತಷ್ಟು ಮಾಡಿರಿ.

ಯಾಕಂದರೆ ಸತ್ಯದ ಪರಿಜ್ಞಾನವನ್ನು ನಾವು ಹೊಂದಿದ ಮೇಲೆ ಬೇಕೆಂದು ಪಾಪ 26 ಮಾಡಿದರೆ, ಪಾಪಪರಿಹಾರಕ್ಕಾಗಿ ಇನ್ನಾವ ಯಜ್ಞವೂ ಇರುವದಿಲ್ಲ; ಅತ್ಯಂತ ಭಯದಿಂದ 27 ಎದುರುನೋಡತಕ್ಕ ನ್ಯಾಯತೀರ್ಪೂ ದೇವರ ವಿರೋಧಿಗಳನ್ನು ದಹಿಸುವ ತೀಕ್ಷ್ಣವಾದ ಅಗ್ನಿಯೂ ಇವೇ ನಮ್ಮ ಮುಂದೆ ಇರುವವು. ಮೋಶೆಯ ವಿಧಿಗಳನ್ನು ಅಸಡ್ಡೆಮಾಡಿದವನಿಗೆ 28 ಎರಡು ಮೂರು ಸಾಕ್ಷಿಗಳ ಮಾತಿನ ಮೇಲೆ ಕನಿಕರವಿಲ್ಲದೆ ಮರಣದಂಡನೆ ಆಗುತ್ತದಷ್ಟೆ[2].

---

[1] ಯೆರೆಮೀಯ ೩೧, ೩೩. ೩೪. [2] ದ್ವಿತೀಯ ನ್ಯಾಯ ೧೭, ೬.

29 ಯಾವನು ದೇವಕುಮಾರನನ್ನು ತುಳಿದು ಒಡಂಬಡಿಕೆಯನ್ನು ನಿಶ್ಚಯಪಡಿಸಿದಂಥಾ ತನ್ನನ್ನು ಪವಿತ್ರಮಾಡಿದಂಥಾ ರಕ್ತವನ್ನು ಅಶುದ್ಧವೆಂದೆಣಿಸಿ[1], ದೇವರ ಕೃಪಾವರವಾಗಿರುವ ಆತ್ಮನನ್ನು[2] ತಿರಸ್ಕಾರಮಾಡಿದ್ದಾನೋ ಅವನು ಇನ್ನೂ ಎಷ್ಟೋ ಕ್ರೂರವಾದ
30 ದಂಡನೆಗೆ ಪಾತ್ರನಾಗಬೇಕೆಂಬದನ್ನು ಯೋಚಿಸಿರಿ. ಮುಯ್ಯಿಗೆ ಮುಯ್ಯಿ ತೀರಿಸುವದು ನನ್ನ ಕೆಲಸ, ನಾನೇ ಪ್ರತಿಫಲವನ್ನು ಕೊಡುವೆನೆಂದು[3] ಹೇಳಿದಾತನನ್ನು ಬಲ್ಲೆವು; ಇದಲ್ಲದೆ, ಕರ್ತನು ತನ್ನ ಜನರ ನ್ಯಾಯವನ್ನು ವಿಚಾರಿಸುವನೆಂತಲೂ[4] ಹೇಳಿಯದೆ.
31 ಜೀವಸ್ವರೂಪನಾದ ದೇವರ ಕೈಯಲ್ಲಿ ಸಿಕ್ಕಿಬೀಳುವದು ಭಯಂಕರವಾದದ್ದು.
32 ಹೀಗಿರಲಾಗಿ, ನೀವು ಜ್ಞಾನಪ್ರಕಾಶದಲ್ಲಿ ಸೇರಿ ಕಷ್ಟಾನುಭವವೆಂಬ ಬಲು ಹೋರಾ
33 ಟವನ್ನು ಸಹಿಸಿಕೊಂಡ ಹಿಂದಿನ ದಿನಗಳನ್ನು ನೆನಪಿಗೆ ತಂದುಕೊಳ್ಳಿರಿ; ಕೆಲವು ಸಾರಿ ನೀವು ನಿಂದೆಗಳನ್ನೂ ಸಂಕಟಗಳನ್ನೂ ಅನುಭವಿಸಿ ಹಾಸ್ಯಕ್ಕೆ ಗುರಿಯಾದಿರಿ; ಕೆಲವು ಸಾರಿ ಅಂಥವುಗಳನ್ನು ಅನುಭವಿಸಿದವರಲ್ಲಿ ಸೇರಿದವರಾಗಿದ್ದು ಕಷ್ಟಾನುಭವಿಗಳಾದಿರಿ.
34 ಬೇಡಿಗಳನ್ನು ಹಾಕಿಸಿಕೊಂಡವರ ಕಷ್ಟವನ್ನು ನೋಡಿ ಅವರ ಸಂಗಡ ನೀವು ದುಃಖಪಟ್ಟದ್ದಲ್ಲದೆ, ನಮಗೆ ಉತ್ತಮವಾಗಿಯೂ ಸ್ಥಿರವಾಗಿಯೂ ಇರುವ ಆಸ್ತಿಯುಂಟೆಂದು ಚನ್ನಾಗಿ ಅರಿತುಕೊಂಡು, ನಿಮ್ಮ ಸೊತ್ತನ್ನು ಸುಲುಕೊಳ್ಳುವವರಿಗೆ ಸಂತೋಷದಿಂದ
35 ಬಿಟ್ಟಿರಿ. ಹಾಗಾದರೆ, ನಿಮ್ಮ ಧೈರ್ಯವನ್ನು ಬಿಟ್ಟುಬಿಡಬೇಡಿರಿ; ಅದಕ್ಕೆ ಮಹಾ ಪ್ರತಿ
36 ಫಲ ಉಂಟು. ದೇವರ ಚಿತ್ತವನ್ನು ನೆರವೇರಿಸಿ ವಾಗ್ದಾನದ ಫಲವನ್ನು ಹೊಂದಬೇಕಾದರೆ, ನಿಮಗೆ ತಾಳ್ಮೆ ಬೇಕು.

37 ಬರುವಾತನು ಇನ್ನು ಸ್ವಲ್ಪಕಾಲದಲ್ಲಿ ಬರುವನು, ತಡಮಾಡುವದಿಲ್ಲ;
38 ಆದರೆ ನನ್ನವನಾಗಿರುವ ನೀತಿವಂತನು ನಂಬಿಕೆಯಿಂದಲೇ ಬದುಕುವನು;
ಅವನು ನಂಬಿಕೆಯನ್ನು ಬಿಟ್ಟು ಹಿಂದೆಗೆದರೆ, ಅವನಲ್ಲಿ ನನಗೆ ಸಂತೋಷವಿರುವದಿಲ್ಲ[5]

39 ಎಂದು ಬರೆದದೆ. ನಾವಾದರೋ ಹಿಂದೆಗೆದವರಾಗಿ ನಾಶವಾಗುವವರಲ್ಲ, ನಂಬಿಕೆಯುಳ್ಳವರಾಗಿ ಪ್ರಾಣರಕ್ಷಣೆಯನ್ನು ಹೊಂದುವವರಾಗಿದ್ದೇವೆ.

ನಂಬಿಕೆಯ ಮಹತ್ವಕ್ಕೆ ದೃಷ್ಟಾಂತಗಳು.

**11** ನಂಬಿಕೆಯೋ, ನಾವು ನಿರೀಕ್ಷಿಸುವವುಗಳ ವಿಷಯವಾಗಿ ಭರವಸದಿಂದಿರುವದೂ
2 ಕಣ್ಣಿಗೆ ಕಾಣದವುಗಳನ್ನು ನಿಜವೆಂದು ತಿಳುಕೊಳ್ಳುವದೂ ಆಗಿದೆ[6]. ನಮ್ಮ ಪೂರ್ವಿ
3 ಕರು ನಂಬಿಕೆಯುಳ್ಳವರಾದ್ದರಿಂದಲೇ ಒಳ್ಳೇ ಹೆಸರನ್ನು ಹೊಂದಿದರು. ಲೋಕಗಳು ದೇವರ ಮಾತಿನಿಂದ ನಿರ್ಮಿತವಾದವೆಂದು ನಂಬಿಕೆಯಿಂದಲೇ ನಾವು ತಿಳಿದುಕೊಂಡು, ಕಾಣಿಸುವ ಈ ಜಗತ್ತು ದೃಶ್ಯವಸ್ತುಗಳಿಂದ ಉಂಟಾಗಲಿಲ್ಲವೆಂದು ಗ್ರಹಿಸುತ್ತೇವೆ.

---

[1] ಮೂಲ: ಸಾಧಾರಣವೆಂದೆಣಿಸಿ. [2] ಮೂಲ: ಕೃಪೆಯ ಆತ್ಮನನ್ನು. [3] ದ್ವಿತೀಯ ನ್ಯಾಯ ೩೨, ೩೫. [4] ದ್ವಿತೀಯ ನ್ಯಾಯ ೩೨, ೩೬. [5] ಹಬಕೂಕ ೨, ೩—೪. [6] ಅಥವಾ, ನಿರೀಕ್ಷಿಸುವವುಗಳ ಆಧಾರವೂ ಕಣ್ಣಿಗೆ ಕಾಣದೆ ಇರುವವುಗಳ ಪ್ರಮಾಣವೂ ಆಗಿದೆ.

ನಂಬಿಕೆಯಿಂದಲೇ ಹೇಬೆಲನು ಕಾಯಿನನ ಯಜ್ಞಕ್ಕಿಂತ ಶ್ರೇಷ್ಠವಾದ ಯಜ್ಞವನ್ನು 4 ದೇವರಿಗೆ ಸಮರ್ಪಿಸಿದನು. ಅದರ ಮೂಲಕ ತಾನು ನೀತಿವಂತನೆಂದು ಸಾಕ್ಷಿಹೊಂದಿದನು; ದೇವರು ಅವನ ಕಾಣಿಕೆಗಳನ್ನು ಅಂಗೀಕಾರ ಮಾಡಿದ್ದೇ ಆ ಸಾಕ್ಷಿ[1]. ಅವನು ಸತ್ತಿದ್ದರೂ ಅವನ ನಂಬಿಕೆಯ ಮೂಲಕ ಮಾತಾಡುತ್ತಾನೆ.

ಹನೋಕನು ಮರಣವನ್ನು ಅನುಭವಿಸದೆ ವೈಯಲ್ಪಟ್ಟದ್ದು ನಂಬಿಕೆಯಿಂದಲೇ; ಅವ 5 ನನ್ನು ದೇವರು ತೆಗೆದುಕೊಂಡುಹೋದದರಿಂದ ಅವನು ಯಾರಿಗೂ ಸಿಕ್ಕಲಿಲ್ಲ; ಅವನು ವೈಯಲ್ಪಡುವದಕ್ಕಿಂತ ಮೊದಲು ದೇವರಿಗೆ ಮೆಚ್ಚಿಕೆಯಾದವನಾಗಿದ್ದನೆಂದು[2] ಸಾಕ್ಷಿ ಉಂಟು. ಆದರೆ ನಂಬಿಕೆಯಿಲ್ಲದೆ ದೇವರನ್ನು ಮೆಚ್ಚಿಸುವದು ಅಸಾಧ್ಯ; ದೇವರ ಬಳಿಗೆ 6 ಬರುವವನು—ದೇವರು ಇದ್ದಾನೆ, ಮತ್ತು ತನ್ನನ್ನು ಹುಡುಕುವವರಿಗೆ ಪ್ರತಿಫಲವನ್ನು ಕೊಡುತ್ತಾನೆ ಎಂದು ನಂಬುವದು ಅವಶ್ಯ.

ನಂಬಿಕೆಯಿಂದಲೇ ನೋಹನು ಅದು ವರೆಗೆ ಕಾಣದಿದ್ದ ಸಂಗತಿಗಳ ವಿಷಯವಾಗಿ 7 ದೈವೋಕ್ತಿಯನ್ನು ಹೊಂದಿ ಭಯಭಕ್ತಿಯುಳ್ಳವನಾಗಿ ತನ್ನ ಮನೆಯವರ ಸಂರಕ್ಷಣೆಗೋಸ್ಕರ ನಾವೆಯನ್ನು ಕಟ್ಟಿ ಸಿದ್ಧಮಾಡಿದನು[3]. ಅದರಿಂದ ಅವನು ಲೋಕದವರನ್ನು ದಂಡನೆಗೆ ಪಾತ್ರರೆಂದು ನಿರ್ಣಯಿಸಿಕೊಂಡು ನಂಬಿಕೆಯ ಫಲವಾದ ನೀತಿಗೆ ಬಾಧ್ಯನಾದನು.

ನಂಬಿಕೆಯಿಂದಲೇ ಅಬ್ರಹಾಮನು ಕರೆಯಲ್ಪಟ್ಟ ಕೂಡಲೇ ಕರೆದಾತನ ಮಾತನ್ನು 8 ಕೇಳಿ, ತಾನು ಬಾಧ್ಯವಾಗಿ ಹೊಂದಬೇಕಾಗಿದ್ದ ಸ್ಥಳಕ್ಕೆ ಹೊರಟುಹೋದನು; ತಾನು ಹೋಗಬೇಕಾದ ಸ್ಥಳವು ಯಾವದೆಂದು ತಿಳಿಯದೆ ಹೊರಟನು[4]. ನಂಬಿಕೆಯಿಂದಲೇ 9 ಅವನು ವಾಗ್ದತ್ತದೇಶಕ್ಕೆ ಬಂದಾಗ, ಅಲ್ಲಿ ಅನ್ಯದೇಶದಲ್ಲಿ ಇದ್ದವನಂತೆ ಡೇರೆಗಳಲ್ಲಿ ಇದ್ದುಕೊಂಡು ಪ್ರವಾಸಿಯಾಗಿ ಬದುಕಿದನು. ಅದೇ ವಾಗ್ದಾನಕ್ಕೆ ಸಹಬಾಧ್ಯರಾಗಿದ್ದ ಇಸಾಕನೂ ಯಾಕೋಬನೂ ಅವನಂತೆಯೇ ಡೇರೆಗಳಲ್ಲಿ ವಾಸಿಸಿದರು. ಯಾಕಂದರೆ 10 ಅವನು ಶಾಶ್ವತವಾದ ಅಸ್ತಿವಾರಗಳುಳ್ಳ ಪಟ್ಟಣವನ್ನು, ಅಂದರೆ ದೇವರು ಸಂಕಲ್ಪಿಸಿ ನಿರ್ಮಿಸಿದ ಪಟ್ಟಣವನ್ನು, ಎದುರುನೋಡುತ್ತಿದ್ದನು.

ಇದಲ್ಲದೆ ಸಾರಳು ವಾಗ್ದಾನಮಾಡಿದಾತನನ್ನು ನಂಬತಕ್ಕವನೆಂದೆಣಿಸಿ, ತಾನು ಪ್ರಾಯ 11 ಮೀರಿದವಳಾಗಿದ್ದಾಗ್ಯೂ, ನಂಬಿಕೆಯಿಂದಲೇ ಗರ್ಭವತಿಯಾಗುವದಕ್ಕೆ ಶಕ್ತಿಯನ್ನು ಹೊಂದಿದಳು. ಆದದರಿಂದ ಮೃತಪ್ರಾಯನಾಗಿದ್ದ ಒಬ್ಬನಿಂದ ಆಕಾಶದಲ್ಲಿರುವ ನಕ್ಷತ್ರ 12 ಗಳಂತೆಯೂ ಸಮುದ್ರದ ದಡದಲ್ಲಿರುವ ಉಸುಬಿನಂತೆಯೂ ಅಸಂಖ್ಯವಾಗಿ[5] ಮಕ್ಕಳು ಹುಟ್ಟಿದರು.

ಇವರೆಲ್ಲರು ವಾಗ್ದಾನದ ಫಲಗಳನ್ನು ಹೊಂದದೆ, ಅವುಗಳನ್ನು ದೂರದಿಂದ ನೋಡಿ 13 ಉಲ್ಲಾಸದೊಡನೆ ವಂದಿಸಿ ನಂಬಿಕೆಯುಳ್ಳವರಾಗಿ ಮೃತರಾದರು. ತಾವು ಭೂಮಿಯ ಮೇಲೆ ಪರದೇಶಿಗಳೂ ಪ್ರವಾಸಿಗಳೂ ಆಗಿದ್ದೇವೆಂದು ಒಪ್ಪಿಕೊಂಡರು[6]. ಇಂಥಾ 14 ಮಾತುಗಳನ್ನಾಡುವವರು ತಾವು ಸ್ವದೇಶವನ್ನು ಹುಡುಕುವವರೆಂಬರ್ಥವನ್ನು ವ್ಯಕ್ತಪಡಿಸುತ್ತಾರೆ. ತಾವು ಹೊರಟುಬಂದಿದ್ದ ದೇಶದ ಮೇಲೆ ಮನಸ್ಸಿಟ್ಟವರಾಗಿದ್ದರೆ, ತಿರಿಗಿ 15

---

1) ಉತ್ಪತ್ತಿ ೪, ೪.
2) ಉತ್ಪತ್ತಿ ೫, ೨೪. ಗ್ರೀಕ್ ಭಾಷಾಂತರ.
3) ಉತ್ಪತ್ತಿ ೬, ೧೩. ೧೪. ೧೮. ೨೨.
4) ಉತ್ಪತ್ತಿ ೧೨, ೧. ೪. ೮.
5) ಉತ್ಪತ್ತಿ ೨೨, ೧೭.
6) ಉತ್ಪತ್ತಿ ೨೩, ೪; ೪೭, ೯.

16 ಅಲ್ಲಿಗೆ ಹೋಗುವದಕ್ಕೆ ಅವರಿಗೆ ಯಾವಾಗಲೂ ಅವಕಾಶವಿತ್ತು. ಆದರೆ ಅವರು ಪರ ಲೋಕವೆಂಬ ಉತ್ತಮದೇಶವನ್ನು ಹಾರೈಸುವವರು. ಆದದರಿಂದ ದೇವರು ಅವರ ದೇವ ರೆನ್ನಿಸಿಕೊಳ್ಳುವದಕ್ಕೆ ನಾಚಿಕೊಳ್ಳದೆ[1] ಅವರಿಗೋಸ್ಕರ ಪಟ್ಟಣವನ್ನು ಸಿದ್ಧಮಾಡಿದ್ದಾನೆ[2].

17-18 ಅಬ್ರಹಾಮನು ಪರಿಶೋಧಿತನಾಗಿ ನಂಬಿಕೆಯಿಂದಲೇ ಇಸಾಕನನ್ನು ಸಮರ್ಪಿಸಿ ದನು. ಇಸಾಕನು ಅವನ ಏಕಪುತ್ರನಾದಾಗ್ಯೂ ಮತ್ತು ಇಸಾಕನ ವಂಶದಲ್ಲಿಯೇ ನಿನಗೆ ಸಂತತಿಯಾಗುವದೆಂದು ದೇವರು ಅವನಿಗೆ ಹೇಳಿದ್ದಾಗ್ಯೂ ಆ ವಾಗ್ದಾನಗಳನ್ನು

19 ಹೊಂದಿದ ಅವನು ಆ ಒಬ್ಬನೇ ಮಗನನ್ನು ಸಮರ್ಪಿಸುವದಕ್ಕಿದ್ದನು. ತನ್ನ ಮಗನು ಸತ್ತರೂ ದೇವರು ಅವನನ್ನು ಬದುಕಿಸ ಸಮರ್ಥನಾಗಿದ್ದಾನೆಂದು ತಿಳುಕೊಂಡನು. ಮತ್ತು ಅವನನ್ನು ಸತ್ತವರೊಳಗಿಂದಲೇ ಜೀವಿತನಾಗಿ ಬಂದವನಂತೆ ಹೊಂದಿದನು[3].

20 ನಂಬಿಕೆಯಿಂದಲೇ ಇಸಾಕನು ಯಾಕೋಬನನ್ನೂ ಏಸಾವನನ್ನೂ ಆಶೀರ್ವದಿಸಿದಾಗ

21 ಮುಂದೆ ಸಂಭವಿಸಬೇಕಾದ ಸಂಗತಿಗಳನ್ನು ಸೂಚಿಸಿದನು. ಯಾಕೋಬನು ತಾನು ಸಾಯುತ್ತಿರುವಾಗ ನಂಬಿಕೆಯಿಂದಲೇ ಯೋಸೇಫನ ಮಕ್ಕಳಿಬ್ಬರನ್ನು ಆಶೀರ್ವದಿಸಿ ದನು[4]; ತನ್ನ ಕೋಲಿನ ಮೇಲೆ ಆತುಕೊಂಡು ದೇವರಿಗೆ ನಮಸ್ಕಾರಮಾಡಿದನು[5].

22 ಯೋಸೇಫನು ತೀರಿಹೋಗುವಾಗ, ಇಸ್ರಯೇಲ್ಯರು ಐಗುಪ್ತ ದೇಶದಿಂದ ಹೊರಡುವ ದನ್ನು ಕುರಿತು ನಂಬಿಕೆಯಿಂದಲೇ ಮಾತಾಡಿ ತನ್ನ ಶವವನ್ನು ತಕ್ಕೊಂಡು ಹೋಗುವ ವಿಷಯದಲ್ಲಿ ಅಪ್ಪಣೆಕೊಟ್ಟನು[6].

23 ಮೋಶೆ ಹುಟ್ಟಿದಾಗ ಅವನ ತಂದೆತಾಯಿಗಳು ಕೂಸು ಸುಂದರವಾಗಿದೆ ಎಂದು ನೋಡಿ, ಅರಸನ ಅಪ್ಪಣೆಗೆ ಭಯಪಡದೆ, ನಂಬಿಕೆಯಿಂದಲೇ ಅವನನ್ನು ಮೂರು ತಿಂಗಳು

24 ಬಚ್ಚಿಟ್ಟರು. ಮೋಶೆಯು ದೊಡ್ಡವನಾದ ಮೇಲೆ ಫರೋನನ ಕುಮಾರ್ತೆಯ ಮಗನೆನ್ನಿಸಿ

25 ಕೊಳ್ಳುವದು ಬೇಡವೆಂದದ್ದು ನಂಬಿಕೆಯಿಂದಲೇ. ಸ್ವಲ್ಪಕಾಲ ಪಾಪಭೋಗಗಳನ್ನನು ಭವಿಸುವದಕ್ಕಿಂತ ದೇವರ ಜನರೊಂದಿಗೆ ಕಷ್ಟವನ್ನನುಭವಿಸುವದೇ ಒಳ್ಳೇದೆಂದು ತೀರ್ಮಾ

26 ನಿಸಿಕೊಂಡನು. ಐಗುಪ್ತ ದೇಶದ ಸರ್ವೈಶ್ವರ್ಯಕ್ಕಿಂತಲೂ ಕ್ರಿಸ್ತನ ನಿಮಿತ್ತವಾಗಿ ಉಂಟಾಗುವ ನಿಂದೆಯೇ[7] ಶ್ರೇಷ್ಠ ಭಾಗ್ಯವೆಂದೆಣಿಸಿಕೊಂಡನು; ಯಾಕಂದರೆ ಬರುವ

27 ಪ್ರತಿಫಲದ ಮೇಲೆ ಕಣ್ಣಿಟ್ಟಿದ್ದನು. ಅವನು ಅರಸನ ರೌದ್ರಕ್ಕೆ ಭಯಪಡದೆ ಐಗುಪ್ತ ದೇಶವನ್ನು ಬಿಟ್ಟುಹೋದದ್ದು ನಂಬಿಕೆಯಿಂದಲೇ. ಅವನು ಅದೃಶ್ಯನಾಗಿರುವಾತನನ್ನು

28 ದೃಷ್ಟಿಸುವವನೋ ಎಂಬಂತೆ ದೃಢಚಿತ್ತನಾಗಿದ್ದನು. ಚೊಚ್ಚಲಮಕ್ಕಳನ್ನು ಸಂಹರಿಸು ವವನು ಇಸ್ರಯೇಲ್ಯರನ್ನು ಮುಟ್ಟದಂತೆ ಅವನು ಪಸ್ಕವೆಂಬ ಊಟವನ್ನೂ ರಕ್ತಪ್ರೋಕ್ಷ ಣಾಚಾರವನ್ನೂ[8] ನೇಮಿಸಿದ್ದು ನಂಬಿಕೆಯಿಂದಲೇ.

29 ನಂಬಿಕೆಯಿಂದಲೇ ಇಸ್ರಯೇಲ್ಯರು ಕೆಂಪು ಸಮುದ್ರವನ್ನು ಒಣಭೂಮಿಯನ್ನು ದಾಟು ವಂತೆ ದಾಟಿದರು; ಐಗುಪ್ತ ದೇಶದವರು ಅದನ್ನು ದಾಟುವದಕ್ಕೆ ಪ್ರಯತ್ನಿಸಿ ಮುಳುಗಿ

---

[1] ಹೊರಡೋಣ ೩, ೬.
[2] ಕೀರ್ತನೆ ೧೦೭, ೩೬.
[3] ಮೂಲ: ಸತ್ತವರೊಳಗಿಂದ ಸಾಮ್ಯರೂಪವಾಗಿ ಹೊಂದಿದನು.
[4] ಉತ್ಪತ್ತಿ ೪೮, ೧೩—೨೦.
[5] ಉತ್ಪತ್ತಿ ೪೭, ೩೧.
[6] ಉತ್ಪತ್ತಿ ೫೦, ೨೫.
[7] ಕೀರ್ತನೆ ೮೯, ೫೦. ೫೧; ೬೯, ೯.
[8] ಹೊರಡೋಣ ೧೨, ೨೨. ೨೩.

ಹೋದರು. ನಂಬಿಕೆಯಿಂದಲೇ ಅವರು ಏಳು ದಿವಸಗಳ ತನಕ ಎರಿಖೋ ಪಟ್ಟಣದ 30 ಗೋಡೆಗಳನ್ನು ಸುತ್ತಿದ ಮೇಲೆ ಅವು ಬಿದ್ದವು. ನಂಬಿಕೆಯಿಂದಲೇ ರಹಾಬಳೆಂಬ ಸೂಳೆಯು 31 ಗೂಢಚಾರರನ್ನು ಸಮಾಧಾನವಾಗಿ ಸೇರಿಸಿಕೊಂಡು ನಂಬದವರೊಂದಿಗೆ ನಾಶವಾಗಲಿಲ್ಲ.

ಇನ್ನೂ ಏನು ಹೇಳಬೇಕು? ಗಿಡಿಯೋನ್ ಬಾರಾಕ್ ಸಂಸೋನ್ ಎಫ್ಥ ದಾವೀದ್ 32 ಸಮುವೇಲ್ ಎಂಬವರ ವೃತ್ತಾಂತವನ್ನೂ ಪ್ರವಾದಿಗಳ ವೃತ್ತಾಂತವನ್ನೂ ವಿವರವಾಗಿ ಹೇಳಬೇಕಾದರೆ, ನನಗೆ ಸಮಯ ಸಾಲದು. ನಂಬಿಕೆಯ ಮೂಲಕ ಅವರು ರಾಜ್ಯ 33 ಗಳನ್ನು ಸ್ವಾಧೀನಮಾಡಿಕೊಂಡರು; ನೀತಿಯನ್ನು ನಡಸಿದರು; ವಾಗ್ದಾನಗಳನ್ನು ಪಡ ಕೊಂಡರು; ಸಿಂಹಗಳ ಬಾಯಿ ಕಟ್ಟಿದರು[1]; ಬೆಂಕಿಯ ಬಲವನ್ನು ಆರಿಸಿದರು[2]; 34 ಕತ್ತಿಯ ಬಾಯಿಗೆ ತಪ್ಪಿಸಿಕೊಂಡರು; ನಿರ್ಬಲರಾಗಿದ್ದು ಬಲಿಷ್ಠರಾದರು; ಯುದ್ಧದಲ್ಲಿ ಪರಾಕ್ರಮಶಾಲಿಗಳಾದರು; ಪರರ ದಂಡುಗಳನ್ನು ಓಡಿಸಿಬಿಟ್ಟರು[3]. ಸ್ತ್ರೀಯರು ಸತ್ತು 35 ಹೋಗಿದ್ದ ತಮ್ಮವರನ್ನು ಪುನರುತ್ಥಾನದಿಂದ ತಿರಿಗಿ ಹೊಂದಿದರು[4]. ಕೆಲವರು, ತಾವು ಯಾತನೆಯ ಯಂತ್ರಕ್ಕೆ ಕಟ್ಟಲ್ಪಟ್ಟಾಗ, ಶ್ರೇಷ್ಠಪುನರುತ್ಥಾನವನ್ನು ಹೊಂದುವದಕ್ಕೋ ಸ್ಕರ ಬಿಡುಗಡೆ ಬೇಡವೆಂದು ಹೇಳಿ ಮುರಿಸಿಕೊಂಡು ಸತ್ತರು[5]. ಬೇರೆ ಕೆಲವರು ಅಪ 36 ಹಾಸ್ಯ ಕೊರಡೆಯ ಪೆಟ್ಟು ಬೇಡಿ ಸೆರೆಮನೆ ಇವುಗಳನ್ನು ಅನುಭವಿಸಿದರು. ಕೆಲವರನ್ನು 37 ಜನರು ಕಲ್ಲೆಸೆದು ಕೊಂದರು[6]; ಕೆಲವರನ್ನು ಗರಗಸದಿಂದ ಕೊಯ್ದು ಕೊಂದರು; ದೇವದ್ರೋಹಿಗಳಾಗಿ ಪ್ರಾಣವನ್ನು ಉಳಿಸಿಕೊಳ್ಳಿರೆಂದು ಕೆಲವರನ್ನು ಪ್ರೇರೇಪಿಸಿದರು[7]; ಕೆಲವರನ್ನು ಕತ್ತಿಯಿಂದ ಕೊಂದರು. ಕೆಲವರು ಕೊರತೆ ಹಿಂಸೆ ಬಾಧೆ ಇವುಗಳನ್ನು ಅನುಭವಿಸುವವರಾಗಿದ್ದು ಕುರಿ ಮೇಕೆಗಳ ಚರ್ಮಗಳನ್ನು ಉಟ್ಟುಕೊಂಡವರಾಗಿ ತಿರುಗಾಡಿದರು[8]. ಇಂಥವರಿಗೆ ಈ ಲೋಕವು ಯೋಗ್ಯ ಸ್ಥಳವಲ್ಲ; ಅವರು ತಮ್ಮ 38 ದೇಶದ ಕಾಡುಗಳಲ್ಲಿಯೂ ಬೆಟ್ಟಗಳಲ್ಲಿಯೂ ತಿರುಗುವವರಾಗಿಯೂ[9] ಗವಿಗಳಲ್ಲಿಯೂ ಕುಣಿಗಳಲ್ಲಿಯೂ ವಾಸವಾಗುವವರಾಗಿಯೂ ಇದ್ದರು[10].

ಇವರೆಲ್ಲರೂ ನಂಬಿಕೆಯ ಮೂಲಕ ಒಳ್ಳೇ ಹೆಸರನ್ನು ಸಂಪಾದಿಸಿಕೊಂಡಿದ್ದಾಗ್ಯೂ 39 ವಾಗ್ದಾನದ ಫಲವನ್ನು ಹೊಂದಲಿಲ್ಲ; ದೇವರು ನಮಗೋಸ್ಕರ ಶ್ರೇಷ್ಠವಾದ ಭಾಗ್ಯವನ್ನು 40 ಏರ್ಪಡಿಸಿ ನಾವಿಲ್ಲದೆ ಅವರು ಸಿದ್ಧಿಗೆ ಬರಬಾರದೆಂದು ಸಂಕಲ್ಪಿಸಿದನು.

ನಮಗೆ ಸಂಭವಿಸುವ ಕಷ್ಟಗಳನ್ನು ತಂದೆಯ ಶಿಕ್ಷಣವೆಂದು ತಿಳಿದು ನಾವು ಸಹಿಸಿಕೊಂಡು, ಪರಲೋಕ ಮಾರ್ಗದಲ್ಲಿ ಸ್ಥಿರಚಿತ್ತದಿಂದ ನಡೆಯಬೇಕು.

ಆದಕಾರಣ, ಇಷ್ಟುಮಂದಿ ಸಾಕ್ಷಿಯವರು ಮೇಘದೋಪಾದಿಯಲ್ಲಿ ನಮ್ಮ **12** ಸುತ್ತಲು ಇರುವದರಿಂದ, ನಮಗೆ ಅಭ್ಯಂತರ ಮಾಡುವ ಎಲ್ಲಾ ಭಾರವನ್ನೂ ಹತ್ತಿಕೊ

---

1) ದಾನಿಯೇಲ ೬, ೨೨. 2) ದಾನಿಯೇಲ ೩, ೨೭. 3) ೧ ಮಕಬೀಯ. ೩, ೧—೫, ೪೪.
4) ೧ ಅರಸು. ೧೭, ೨೩; ೨ ಅರಸು. ೪, ೨೦—೩೭. 5) ೨ ಮಕಬೀಯ. ೬, ೧೯; ೭, ೭. ೮. ೧೩.
6) ೨ ದಿನಚರ್ಯ. ೨೪, ೨೧. 7) ೨ ಮಕಬೀಯ. ೬, ೨೧—೩೧; ೭, ೨೪.
8) ೧ ಅರಸು. ೧೯, ೩. ೪. ೧೪; ೨ ಅರಸು. ೧, ೮. 9) ೧ ಮಕಬೀಯ. ೨, ೨೮. ೨೯.
10) ೧ ಅರಸು. ೧೮, ೪. ೧೩; ೨ ಮಕಬೀಯ. ೬, ೧೧.

2 ಳ್ಳುವ ಪಾಪವನ್ನೂ ನಾವು ಸಹ ತೆಗೆದಿಟ್ಟು, ನಂಬಿಕೆಯನ್ನು ಹುಟ್ಟಿಸುವವನೂ ಪೂರೈಸು ವವನೂ ಆಗಿರುವ ಯೇಸುವಿನ ಮೇಲೆ ದೃಷ್ಟಿಯಿಟ್ಟು ನಮಗೆ ನೇಮಕವಾದ ಓಟವನ್ನು ಸ್ಥಿರಚಿತ್ತದಿಂದ ಓಡೋಣ. ಆತನು ತನ್ನ ಮುಂದೆ ಇಟ್ಟಿದ್ದ ಸಂತೋಷಕ್ಕೋಸ್ಕರ ಅವ ಮಾನವನ್ನು ಅಲಕ್ಷ್ಯಮಾಡಿ, ಶಿಲುಬೆಯ ಮರಣವನ್ನು ಸಹಿಸಿಕೊಂಡು, ದೇವರ ಸಿಂಹಾ
3 ಸನದ ಬಲಪಾರ್ಶ್ವದಲ್ಲಿ ಆಸನಾರೂಢನಾಗಿದ್ದಾನೆ. ನೀವು ಮನಗುಂದಿದವರಾಗಿ ಬೇಸರ ಗೊಳ್ಳದಂತೆ ಆತನನ್ನು ಆಲೋಚಿಸಿರಿ. ಆತನು ಪಾಪಿಗಳಿಂದ ಎಷ್ಟೋ ವಿರೋಧವನ್ನು
4 ಸಹಿಸಿಕೊಂಡನು[1]. ನೀವು ಪಾಪಕ್ಕೆ ವಿರೋಧವಾಗಿ ಹೋರಾಡುವದರಲ್ಲಿ ಪ್ರಾಣಾ
5 ಪಾಯದ ತನಕ ಇನ್ನೂ ಅದನ್ನು ಎದುರಿಸಲಿಲ್ಲ. ಮಕ್ಕಳಿಗೆ ಹೇಳುವಂತೆ ನಿಮಗೆ ಹೇಳಿದ ಎಚ್ಚರಿಕೆಯ ಮಾತನ್ನು ಮರೆತುಬಿಟ್ಟಿದ್ದೀರೋ? ಏನಂದರೆ—

ನನ್ನ ಮಗನೇ, ಕರ್ತನ ಶಿಕ್ಷೆಯನ್ನು ತಾತ್ಸಾರ ಮಾಡಬೇಡ;
ಆತನು ನಿನ್ನನ್ನು ಗದರಿಸುವಾಗ ಬೇಸರಗೊಳ್ಳಬೇಡ;
6 ಕರ್ತನು ತಾನು ಪ್ರೀತಿಸುವವನನ್ನೇ ಶಿಕ್ಷಿಸುತ್ತಾನೆ;
ತಾನು ಸೇರಿಸಿಕೊಳ್ಳುವ ಪ್ರತಿಯೊಬ್ಬ ಮಗನನ್ನು ಹೊಡೆಯುತ್ತಾನೆ[2]

7 ಎಂಬುವದು. ನೀವು ಶಿಕ್ಷಿತರಾಗುವದಕ್ಕಾಗಿಯೇ ನಿಮಗೆ ಶಿಕ್ಷೆಯಾಗುತ್ತದೆಂದು ತಿಳಿದು ಅದನ್ನು ಸಹಿಸಿಕೊಳ್ಳಿರಿ; ದೇವರು ನಿಮ್ಮನ್ನು ಮಕ್ಕಳೆಂದು ನಡಿಸುತ್ತಾನೆ. ತಂದೆಯಿಂದ
8 ಶಿಕ್ಷೆಹೊಂದದ ಮಗನೆಲ್ಲಿ? ಮಕ್ಕಳೆಲ್ಲರೂ ಹೊಂದುವ ಶಿಕ್ಷೆಯು ನಿಮಗುಂಟಾಗದಿದ್ದರೆ,
9 ನೀವು ಹಾದರದಿಂದ ಹುಟ್ಟಿದವರೇ ಹೊರತು ಪುತ್ರರಲ್ಲ. ಇದು ಮಾತ್ರವಲ್ಲದೆ, ನಮ್ಮನ್ನು ಶಿಕ್ಷಿಸಿದಂಥ ಶರೀರಸಂಬಂಧವಾದ ತಂದೆಗಳನ್ನು ಸನ್ಮಾನಿಸಿದೆವಷ್ಟೆ; ನಮ್ಮ ಆತ್ಮಗಳಿಗೆ ತಂದೆಯಾಗಿರುವಾತನಿಗೆ ನಾವು ಇನ್ನೂ ಹೆಚ್ಚಾಗಿ ಒಳಪಟ್ಟು ಜೀವಿಸಬೇಕಲ್ಲವೇ?
10 ಆ ತಂದೆಗಳು ಕೆಲವು ದಿವಸಗಳ ಪ್ರಯೋಜನವನ್ನು ಲಕ್ಷ್ಯಕ್ಕೆ ತೆಗೆದುಕೊಂಡು[3] ತಮ್ಮ ಮನಸ್ಸಿಗೆ ತೋರಿದಂತೆ ನಮ್ಮನ್ನು ಶಿಕ್ಷಿಸಿದರು; ಆತನಾದರೋ ನಾವು ತನ್ನ ಪರಿಶುದ್ಧತೆ
11 ಯಲ್ಲಿ ಪಾಲುಗಾರರಾಗಬೇಕೆಂದು ನಮ್ಮ ಹಿತಕ್ಕಾಗಿಯೇ ಶಿಕ್ಷಿಸುತ್ತಾನೆ. ಯಾವ ಶಿಕ್ಷೆ ಯಾದರೂ ತತ್ಕಾಲಕ್ಕೆ ಸಂತೋಷಕರವಾಗಿ ತೋಚದೆ ದುಃಖಕರವಾಗಿ ತೋಚುತ್ತದೆ; ಆದರೂ ತರುವಾಯ ಅದು ಶಿಕ್ಷೆಹೊಂದಿದವರಿಗೆ ನೀತಿಯೆಂಬ ಫಲವನ್ನು ಕೊಟ್ಟು ಮನ
12 ಸ್ಸಿಗೆ ಸಮಾಧಾನವನ್ನು ಉಂಟುಮಾಡುತ್ತದೆ. ಆದದರಿಂದ, ಜೋಲುಬಿದ್ದ ಕೈಗಳನ್ನೂ
13 ನಡುಗುವ ಮೊಣಕಾಲುಗಳನ್ನೂ ಸುದಾರಿಸಿಕೊಳ್ಳಿರಿ[4]; ನಿಮ್ಮ ಕಾಲುಗಳಿಂದ ನೆಟ್ಟಗೆ ಮುಂದೆ ನಡೆಯಿರಿ[5]. ಹೀಗೆ ಮಾಡಿದರೆ, ಕುಂಟಕಾಲು ಉಳುಕಿಹೋಗದೆ, ವಾಸಿ ಯಾಗುವದು.

---

[1] ಕೆಲವು ಪ್ರತಿಗಳಲ್ಲಿ—ಪಾಪಿಗಳು ತಮ್ಮ ಸ್ವಂತ ಹಾನಿಗೆ ಮಾಡಿದ ವಿರೋಧವನ್ನು ಎಷ್ಟಾಗಿ ಸಹಿಸಿಕೊಂಡನು ಎಂದು ಬರೆದದೆ.

[2] ಜ್ಞಾನೋ. ೩, ೧೧. ೧೨; ಯೋಬ. ೫, ೧೭.

[3] ಅಥವಾ, ಕೆಲವು ದಿವಸಗಳ ತನಕ.

[4] ಯೆಶಾಯ ೩೫, ೩.

[5] ಜ್ಞಾನೋ. ೪, ೨೬. ೨೭.

ಕ್ರೈಸ್ತ ಸಭೆಯೊಳಗೆ ಯಾವ ವಿಧವಾದ ಅವಭಕ್ತಿ ಇರಬಾರದೆಂದು ಎಚ್ಚರಿಕೆ.

ಎಲ್ಲರ ಸಂಗಡ ಸಮಾಧಾನದಿಂದಿರುವದಕ್ಕೂ ಪರಿಶುದ್ಧತೆಯನ್ನು ಹೊಂದುವದಕ್ಕೂ 14
ಪ್ರಯತ್ನಮಾಡಿರಿ; ಪರಿಶುದ್ಧತೆಯಿಲ್ಲದೆ ಯಾವನೂ ಕರ್ತನನ್ನು ಕಾಣುವದಿಲ್ಲ. ನಿಮ್ಮಲ್ಲಿ 15
ಯಾವನಾದರೂ ದೇವರ ಕೃಪೆಗೆ ತಪ್ಪಿ ಹಿಂಜರಿಯದಂತೆಯೂ ಯಾವ ವಿಷವುಳ್ಳ ಬೇರು
ನಿಮ್ಮಲ್ಲಿ ಚಿಗುರಿ ಅಸಮಾಧಾನವನ್ನು ಹುಟ್ಟಿಸಿ ಸಭೆಯವರನ್ನು ಕೆಡಿಸದಂತೆಯೂ ಯಾವ 16
ಜಾರನಾಗಲಿ ಪ್ರಾಪಂಚಿಕನಾಗಲಿ ನಿಮ್ಮಲ್ಲಿ ಇರದಂತೆಯೂ ಜಾಗ್ರತೆಯಿಂದ ನೋಡಿ
ಕೊಳ್ಳಿರಿ. ಪ್ರಾಪಂಚಿಕನು ಏಸಾವನಂತಿದ್ದಾನೆ. ಆ ಏಸಾವನು ಒಂದೇ ಒಂದು
ಊಟಕ್ಕೋಸ್ಕರ ತನ್ನ ಚೊಚ್ಚಲತನದ ಹಕ್ಕನ್ನು ಕೊಟ್ಟುಬಿಟ್ಟನು; ಅನಂತರದಲ್ಲಿ ತನ್ನ 17
ತಂದೆಯ ಆಶೀರ್ವಾದವನ್ನು ಬಾಧ್ಯವಾಗಿ ಹೊಂದಬೇಕೆಂದು ಕಣ್ಣೀರು ಸುರಿಸುತ್ತಾ
ಬೇಡಿಕೊಂಡಾಗ್ಯೂ, ನಡೆದದ್ದನ್ನು ಇಲ್ಲದ ಹಾಗೆ ಮಾಡುವದಕ್ಕೆ[1] ಮಾರ್ಗವಿಲ್ಲದೆ ನಿರಾ
ಕರಿಸಲ್ಪಟ್ಟನೆಂದು ಬಲ್ಲಿರಿ.

ಧರ್ಮಶಾಸ್ತ್ರವು ಭೂಸಂಬಂಧವಾದದ್ದೂ ಭಯ ಹುಟ್ಟಿಸುವಂಥಾದ್ದೂ ಆಗಿದೆ; ಸುವಾರ್ತೆಯು
ನಿರಂತರವಾಗಿಯೂ ಉತ್ಸಾಹ ಹುಟ್ಟಿಸುವಂಥಾದ್ದಾಗಿಯೂ ಇದೆ ಎಂಬುವದು.

ನೀವು ಮುಟ್ಟುವದಕ್ಕೆ ಸಾಧ್ಯವಾದಂಥ ಮತ್ತು ಬೆಂಕಿಹತ್ತಿದಂಥ ಬೆಟ್ಟಕ್ಕೂ ಮೋಡದ 18
ಮೊಬ್ಬಿಗೂ ಕತ್ತಲೆಗೂ ಬಿರುಗಾಳಿಗೂ ತುತೂರಿಯ ಧ್ವನಿಗೂ ಮಾತುಗಳ ಶಬ್ದಕ್ಕೂ[2]
ಬಂದವರಲ್ಲ. ಆ ಶಬ್ದವನ್ನು ಕೇಳಿದವರು ತಮಗೆ ಇನ್ನೂ ಒಂದು ಮಾತನ್ನಾದರೂ 19
ಹೇಳಬಾರದೆಂದು ಬೇಡಿಕೊಂಡರು[3]; ಯಾಕಂದರೆ—ಒಂದು ಮೃಗವಾದರೂ ಬೆಟ್ಟಕ್ಕೆ 20
ತಗಲಿದರೆ ಅದನ್ನು ಕಲ್ಲೆಸೆದು ಕೊಲ್ಲಬೇಕೆಂಬ ವಿಧಿಯನ್ನು[4] ತಾಳಲಾರದೆ ಇದ್ದರು.
ಇದಲ್ಲದೆ ಅಲ್ಲಿ ತೋರಿದ್ದು ಅಷ್ಟು ಭಯಂಕರವಾಗಿದ್ದದರಿಂದ ಮೋಶೆಯು—ನನಗೆ ಬಹು 21
ಭಯವಾಗುತ್ತದೆ, ನಡುಗುತ್ತೇನೆ ಎಂದು[5] ಹೇಳಿದನು. ಆದರೆ ನೀವು ಚಿಯೋನ್ 22
ಪರ್ವತಕ್ಕೂ ಜೀವಸ್ವರೂಪನಾದ ದೇವರ ಪಟ್ಟಣವಾಗಿರುವ ಪರಲೋಕದ ಯೆರೂಸ
ಲೇಮಿಗೂ ಉತ್ಸವಸಂಘದಲ್ಲಿ ಕೂಡಿರುವ ಕೋಟ್ಯಾನುಕೋಟಿ ದೇವದೂತರ ಬಳಿಗೂ
ಪರಲೋಕದಲ್ಲಿ ಹೆಸರು ಬರಸಿಕೊಂಡಿರುವ ಚೊಚ್ಚಲುಮಕ್ಕಳ ಸಭೆಗೂ ಎಲ್ಲರಿಗೆ 23
ನ್ಯಾಯಾಧಿಪತಿಯಾಗಿರುವ ದೇವರ ಬಳಿಗೂ ಸಿದ್ಧಿಗೆ ಬಂದಿರುವ ನೀತಿವಂತರ ಆತ್ಮಗಳ
ಬಳಿಗೂ ಹೊಸ ಒಡಂಬಡಿಕೆಗೆ ಮಧ್ಯಸ್ಥನಾಗಿರುವ ಯೇಸುವಿನ ಬಳಿಗೂ ಹೇಬೆಲನ 24
ರಕ್ತಕ್ಕಿಂತ ಹಿತಕರವಾಗಿ ಮಾತಾಡುವ[6] ಪ್ರೋಕ್ಷಣರಕ್ತದ ಬಳಿಗೂ ಬಂದಿದ್ದೀರಿ.
ನೀವು ಮಾತಾಡುತ್ತಿರುವಾತನ ಮಾತನ್ನು ಕೇಳಲೊಲ್ಲೆವೆಂದು ಹೇಳಬಾರದು. ಭೂಮಿಯ 25
ಮೇಲೆ ದೈವೋಕ್ತಿಗಳನ್ನಾಡಿದವನಿಗೆ ಕಿವಿಗೊಡ ಮನಸ್ಸಿಲ್ಲದೆ ಇದ್ದ ಇಸ್ರಯೇಲ್ಯರು

[1] ಅಥವಾ, ಮಾನಸಾಂತರಕ್ಕೆ. [2] ಹೊರಡೋಣ ೧೯, ೧೬—೧೯; ದ್ವಿತೀಯ ನ್ಯಾಯ ೪, ೧೧; ೫, ೨೨.
[3] ಹೊರಡೋಣ ೨೦, ೧೮. ೧೯; ದ್ವಿತೀಯ ನ್ಯಾಯ ೫, ೨೪. ೨೫. [4] ಹೊರಡೋಣ ೧೯, ೨. ೧೩.
[5] ದ್ವಿತೀಯ ನ್ಯಾಯ ೯, ೧೯. [6] ಉತ್ಪತ್ತಿ ೪, ೧೦.

ದಂಡನೆಗೆ ತಪ್ಪಿಸಿಕೊಳ್ಳದಿದ್ದರೆ, ಪರಲೋಕದಿಂದ ಮಾತಾಡುವವನಿಗೆ ನಾವು ಕಿವಿಗೊಡ
26 ಮನಸ್ಸಿಲ್ಲದೆ ತೊಲಗಿದರೆ, ಹ್ಯಾಗೆ ತಪ್ಪಿಸಿಕೊಂಡೇವು? ಆತನ ಧ್ವನಿಯು ಆ ಕಾಲದಲ್ಲಿ ಭೂಮಿಯನ್ನು ಕದಲಿಸಿತು; ಈಗಲಾದರೋ ಆತನು—ಇನ್ನೊಂದೇ ಸಾರಿ ನಾನು ಭೂಮಿಯನ್ನು ಮಾತ್ರವಲ್ಲದೆ ಪರಲೋಕವನ್ನೂ ನಡುಗಿಸುವೆನೆಂದು[1] ವಾಗ್ದಾನ ಮಾಡಿದ್ದಾನೆ.
27 ಇನ್ನೊಂದೇ ಸಾರಿ ಎಂಬೀ ಮಾತನ್ನು ಯೋಚಿಸಿದರೆ, ಕದಲಿಸಿರುವ ವಸ್ತುಗಳು ನಿರ್ಮಿತವಾದವುಗಳಾದ್ದರಿಂದ ತೆಗೆದುಹಾಕಲ್ಪಡಬೇಕೆಂಬುವದು ಸ್ಪಷ್ಟವಾಗುತ್ತದೆ; ಆಗ ಕದಲಿ
28 ಸದೆ ಇರುವ ವಸ್ತುಗಳು ಸ್ಥಿರವಾಗಿ ನಿಲ್ಲುವವು. ಆದಕಾರಣ ಯಾರೂ ಕದಲಿಸಲಾರದ ರಾಜ್ಯವನ್ನು ಹೊಂದುವವರಾದ ನಾವು ಕೃತಜ್ಞತೆಯುಳ್ಳವರಾಗಿದ್ದು[2] ಆತನಿಗೆ ಸಮರ್ಪಕ
29 ವಾದ ಆರಾಧನೆಯನ್ನು ಭಕ್ತಿಯಿಂದಲೂ ಭಯದಿಂದಲೂ ಮಾಡೋಣ; ಯಾಕಂದರೆ ನಮ್ಮ ದೇವರು ದಹಿಸುವ ಅಗ್ನಿಯಾಗಿದ್ದಾನೆ[3].

ಯೇಸುವಿನ ಶಿಷ್ಯರು ಸುನಡತೆಯುಳ್ಳವರಾಗಿರಬೇಕೆಂಬುವದು.

**13** 1,2 ಸಹೋದರಸ್ನೇಹವು ನೆಲೆಯಾಗಿರಲಿ. ಅತಿಥಿಸತ್ಕಾರ ಮಾಡುವದನ್ನು ಮರೆಯಬೇಡಿರಿ; ಅದನ್ನು ಮಾಡುವಲ್ಲಿ ಕೆಲವರು ತಿಳಿಯದೆ ದೇವದೂತರನ್ನೂ ಸತ್ಕರಿಸಿದ್ದಾರೆ[4].
3 ನಿಮ್ಮನ್ನು ಜೊತೆಸೆರೆಯವರೆಂದು ನೀವು ಭಾವಿಸಿಕೊಂಡು ಸೆರೆಯವರನ್ನು ಜ್ಞಾಪಕಮಾಡಿಕೊಳ್ಳಿರಿ. ನಿಮಗೂ ಅನ್ಯಾಯ ಸಂಭವಿಸೀತೆಂದು[5] ತಿಳಿದು ಅನ್ಯಾಯ ಅನುಭವಿಸು
4 ವವರನ್ನು ನೆನಸಿರಿ. ದಾಂಪತ್ಯವು ಮಾನ್ಯವಾದದ್ದೆಂದು ಎಲ್ಲರೂ ಎಣಿಸಬೇಕು; ಗಂಡಹೆಂಡರ ಸಂಬಂಧವು[6] ನಿಷ್ಕಲಂಕವಾಗಿರಬೇಕು. ಜಾರರಿಗೂ ವ್ಯಭಿಚಾರಿಗಳಿಗೂ
5 ದೇವರು ನ್ಯಾಯತೀರಿಸುವನೆಂದು ತಿಳುಕೊಳ್ಳಿರಿ. ದ್ರವ್ಯಾಶೆಯಿಲ್ಲದವರಾಗಿರಿ; ನಿಮಗಿರುವವುಗಳಲ್ಲಿ ತೃಪ್ತರಾಗಿರಿ; ನಾನು ನಿನ್ನನ್ನು ಎಂದಿಗೂ ಕೈಬಿಡುವದಿಲ್ಲ, ನಿನ್ನನ್ನು
6 ಎಂದಿಗೂ ತೊರೆಯುವದಿಲ್ಲವೆಂದು[7] ದೇವರು ತಾನೇ ಹೇಳಿದ್ದಾನೆ. ಆದದರಿಂದ—

ಕರ್ತನು ನನ್ನ ಸಹಾಯಕನು, ನಾನು ಭಯಪಡುವದಿಲ್ಲ,
ಮನುಷ್ಯನು ನನಗೆ ಏನು ಮಾಡ್ಯಾನು?[8]

ಎಂದು ನಾವು ಧೈರ್ಯವಾಗಿ ಹೇಳಬಲ್ಲೆವು.
7 ನಿಮಗೆ ದೇವರ ವಾಕ್ಯವನ್ನು ತಿಳಿಸಿದ ನಿಮ್ಮ ಸಭಾನಾಯಕರನ್ನು ಜ್ಞಾಪಕಮಾಡಿಕೊಳ್ಳಿರಿ; ಅವರು ಯಾವ ರೀತಿಯಿಂದ ನಡೆದುಕೊಂಡು ಪ್ರಾಣ ಬಿಟ್ಟರೆಂಬುವದನ್ನು
8 ಆಲೋಚಿಸಿರಿ; ಅವರ ನಂಬಿಕೆಯನ್ನು ಅನುಸರಿಸಿರಿ. ಯೇಸು ಕ್ರಿಸ್ತನು ನಿನ್ನೆ ಇದ್ದ
9 ಹಾಗೆ ಈ ಹೊತ್ತೂ ಇದ್ದಾನೆ, ನಿರಂತರವೂ ಹಾಗೆಯೇ ಇರುವನು. ನಾನಾವಿಧವಾದ

---

1) ಹಗ್ಗಾಯಿ ೨, ೬.
2) ಅಥವಾ, ದೇವರ ಕೃಪೆಯನ್ನು ಹಿಡುಕೊಂಡು.
3) ದ್ವಿತೀಯ ನ್ಯಾಯ ೪, ೨೪.
4) ಉತ್ಪತ್ತಿ ೧೮, ೧—೮; ೧೯, ೧. ೨.
5) ಮೂಲ: ನೀವೂ ದೇಹದಲ್ಲಿದ್ದೀರೆಂದು.
6) ಮೂಲ: ಹಾಸಿಗೆಯು.
7) ದ್ವಿತೀಯ ನ್ಯಾಯ ೩೧, ೬. ೮; ಯೆಹೋಶುವ ೧, ೫.
8) ಕೀರ್ತನೆ ೧೧೮, ೬.

ಅನ್ಯೋಪದೇಶಗಳ ಸೆಳವಿಗೆ ಸಿಕ್ಕಬೇಡಿರಿ. ದೇವರ ಕೃಪೆಯನ್ನು ಆತುಕೊಂಡು ಮನಸ್ಸನ್ನು ದೃಢಮಾಡಿಕೊಳ್ಳುವದು ಉತ್ತಮವೇ; ಭೋಜನಪದಾರ್ಥಗಳನ್ನು ವಿಶೇಷಿಸುವದರಿಂದ ಅದು ಆಗುವದಿಲ್ಲ. ಭೋಜನಪದಾರ್ಥಗಳನ್ನು ವಿಶೇಷಿಸಿ ನಡೆದವರು ಏನೂ ಪ್ರಯೋಜನ ಹೊಂದಲಿಲ್ಲ.

ನಮಗೊಂದು ಯಜ್ಞವೇದಿ ಉಂಟು, ಈ ವೇದಿಯ ಪದಾರ್ಥಗಳನ್ನು ತಿನ್ನುವದಕ್ಕೆ 10 ಯೆಹೂದ್ಯರ ಗುಡಾರದಲ್ಲಿ ಸೇವೆಯನ್ನು ನಡಿಸುವವರಿಗೆ ಹಕ್ಕಿಲ್ಲ. ಮಹಾಯಾಜಕನು 11 ಪಾಪಪರಿಹಾರಾರ್ಥವಾಗಿ ಪ್ರಾಣಿಯ ರಕ್ತವನ್ನು ತೆಗೆದುಕೊಂಡು ದೇವಾಲಯದೊಳಗೆ ಹೋಗಲು ಆ ಪ್ರಾಣಿಯ ದೇಹವು ಪಾಳೆಯದ ಆಚೆ ಸುಡಲ್ಪಡುತ್ತದಲ್ಲಾ[1]. ಅದರಂತೆ 12 ಯೇಸು ಕೂಡ ಸ್ವಂತ ರಕ್ತದಿಂದ ತನ್ನ ಜನರನ್ನು ಪವಿತ್ರಪಡಿಸುವದಕ್ಕೋಸ್ಕರ ಪಟ್ಟಣದ ಹೊರಗೆ ಸತ್ತನು. ಆದದರಿಂದ ನಾವು ಆತನ ನಿಮಿತ್ತ ಉಂಟಾಗುವ ನಿಂದೆಯನ್ನು 13 ತಾಳಿಕೊಳ್ಳುವವರಾಗಿ ಆತನ ಬಳಿಗೆ ಹೊರಟುಹೋಗೋಣ. ಯಾಕಂದರೆ ಇಹದಲ್ಲಿ 14 ಶಾಶ್ವತವಾದ ಪಟ್ಟಣವು ನಮಗಿಲ್ಲ; ಇನ್ನು ಮುಂದೆ ಆಗುವ ಪಟ್ಟಣವನ್ನು ಹಾರೈಸುತ್ತಾ ಇದ್ದೇವೆ. ಆದದರಿಂದ ಆತನ ಮೂಲಕವಾಗಿಯೇ ದೇವರಿಗೆ ಸ್ತೋತ್ರವೆಂಬ ಯಜ್ಞವನ್ನು 15 ಎಡೆಬಿಡದೆ ಸಮರ್ಪಿಸೋಣ. ಆತನು ಕರ್ತನೆಂದು ಬಾಯಿಯಿಂದ ಪ್ರತಿಜ್ಞೆಮಾಡುವದೇ ನಾವು ಅರ್ಪಿಸುವ ಯಜ್ಞವಾಗಿದೆ. ಇದಲ್ಲದೆ ಪರೋಪಕಾರವನ್ನೂ ಧರ್ಮ 16 ಮಾಡುವದನ್ನೂ ಮರೆಯಬೇಡಿರಿ; ಇವೇ ದೇವರಿಗೆ ಸಮರ್ಪಕವಾದ ಯಜ್ಞಗಳು.

ನಿಮ್ಮ ಸಭಾನಾಯಕರ ಮಾತನ್ನು ಕೇಳಿರಿ, ಅವರಿಗೆ ಅಧೀನರಾಗಿರ್ರಿ. ಅವರು ಲೆಕ್ಕ 17 ಒಪ್ಪಿಸಬೇಕಾದವರಾಗಿ ನಿಮ್ಮ ಆತ್ಮಗಳನ್ನು ಕಾಯುವವರಾಗಿದ್ದಾರೆ. ಅವರು ವ್ಯಸನಪಡದೆ ಸಂತೋಷದಿಂದ ಇದನ್ನು ಮಾಡುವಂತೆ ನೋಡಿರಿ; ಅವರು ವ್ಯಸನದಿಂದಿರುವದು ನಿಮಗೆ ಪ್ರಯೋಜನಕರವಾದದ್ದಲ್ಲ.

### ಕಡೇ ಮಾತುಗಳು.

ನಮಗೋಸ್ಕರ ಪ್ರಾರ್ಥಿಸಿರಿ. ನಾವು ಎಲ್ಲಾ ವಿಷಯಗಳಲ್ಲಿ ಸಜ್ಜನರಾಗಿ ನಡೆದು 18 ಕೊಳ್ಳಬೇಕೆಂದು ಅಪೇಕ್ಷಿಸುವವರಾಗಿದ್ದು ನಮ್ಮ ಮನಸ್ಸಿನಿಂದ ಒಳ್ಳೇ ಸಾಕ್ಷಿಹೊಂದಿದ್ದೇವೆಂದು ನಿಶ್ಚಯಿಸಿಕೊಂಡಿದ್ದೇವೆ. ನಮಗೋಸ್ಕರ ಪ್ರಾರ್ಥನೆ ಮಾಡಬೇಕೆಂದು 19 ನಿಮ್ಮನ್ನು ಬಹು ವಿಶೇಷವಾಗಿ ಬೇಡಿಕೊಳ್ಳುತ್ತೇನೆ, ಯಾಕಂದರೆ ನಿಮ್ಮ ಪ್ರಾರ್ಥನೆಗಳ ಮೂಲಕ ನಾನು ಅತಿ ಶೀಘ್ರವಾಗಿ ನಿಮ್ಮ ಬಳಿಗೆ ತಿರಿಗಿ ಬಂದೇನು.

ನಿತ್ಯವಾದ ಒಡಂಬಡಿಕೆಯನ್ನು ನಿಶ್ಚಯಪಡಿಸುವದಕ್ಕಾಗಿ ತನ್ನ ರಕ್ತವನ್ನು ಸುರಿಸಿ 20 ಕೊಂಡು ಸಭೆಯ ಮಹಾಪಾಲಕನಾಗಿರುವ[2] ನಮ್ಮ ಕರ್ತನಾದ ಯೇಸುವನ್ನು ಸತ್ತವರೊಳಗಿಂದ ಬರಮಾಡಿದ[3] ಶಾಂತಿದಾಯಕನಾದ ದೇವರು, ನೀವು ತನ್ನ ಚಿತ್ತವನ್ನು ನೆರ 21

---

1) ಲೇವಿಕ ೧೬, ೨೭. 2) ಮೂಲ: ಕುರಿಗಳ ದೊಡ್ಡ ಕುರುಬನಾಗಿರುವ.

3) ಅಥವಾ, ಕುರಿಗಳ ದೊಡ್ಡ ಕುರುಬನಾಗಿರುವ ನಮ್ಮ ಕರ್ತನಾದ ಯೇಸುವನ್ನು ನಿತ್ಯವಾದ ಒಡಂಬಡಿಕೆಯನ್ನು ನಿಶ್ಚಯಪಡಿಸಿದ ರಕ್ತದ ನಿಮಿತ್ತ ಸತ್ತವರೊಳಗಿಂದ ಬರಮಾಡಿದ....

ವೇರಿಸುವ ಹಾಗೆ ಸಕಲ ಸತ್ಕಾರ್ಯಗಳಿಗೆ ಬೇಕಾದ ಅನುಕೂಲತೆಯನ್ನು ನಿಮಗೆ ಅನುಗ್ರಹಿಸಲಿ. ಆತನು ಯೇಸು ಕ್ರಿಸ್ತನ ಮೂಲಕ ತನಗೆ ಸಮರ್ಪಕವಾದದ್ದನ್ನು ನಮ್ಮಲ್ಲಿ[1] ನಡಿಸಲಿ. ಆತನಿಗೆ ಸದಾಕಾಲವೂ ಸ್ತೋತ್ರ, ಆಮೆನ್.

22 ಸಹೋದರರೇ, ಈ ಎಚ್ಚರಿಕೆಯ ಮಾತನ್ನು ಸಹಿಸಿಕೊಳ್ಳಬೇಕೆಂದು ನಿಮ್ಮನ್ನು ಬೇಡಿಕೊಳ್ಳುತ್ತೇನೆ; ನಿಮಗೆ ಸಂಕ್ಷೇಪವಾಗಿ ಬರೆದಿದ್ದೇನೆ.

23 ನಮ್ಮ ಸಹೋದರನಾದ ತಿಮೊಥೆಯನಿಗೆ ಬಿಡುಗಡೆಯಾಯಿತೆಂಬುವದು ನಿಮಗೆ ತಿಳಿದಿರಲಿ. ಅವನು ಬೇಗ ಬಂದರೆ, ನಾನೂ ಅವನೊಂದಿಗೆ ಬಂದು ನಿಮ್ಮನ್ನು ಕಾಣುವೆನು.

24 ನಿಮ್ಮ ಸಭಾನಾಯಕರೆಲ್ಲರಿಗೂ ದೇವಜನರಿಗೂ ವಂದನೆ ಹೇಳಿರಿ. ಇತಾಲ್ಯ ದೇಶದಿಂದ ಬಂದವರು ನಿಮಗೆ ವಂದನೆ ಹೇಳುತ್ತಾರೆ.

25 ಕೃಪೆಯು ನಿಮ್ಮೆಲ್ಲರ ಮೇಲೆ ಇರಲಿ.

---

[1] ಕೆಲವು ಪ್ರತಿಗಳಲ್ಲಿ — ನಿಮ್ಮೊಳಗೆ ಎಂದು ಬರೆದದೆ.

# THE EPISTLE OF SAINT JAMES

# ಯಾಕೋಬನು ಬರೆದ ಪತ್ರಿಕೆ

ಕಷ್ಟವನ್ನೂ ದುಷ್ಪ್ರೇರಣೆಗಳನ್ನೂ ಕುರಿತದ್ದು.

**1** ದೇವರಿಗೂ ಕರ್ತನಾದ ಯೇಸು ಕ್ರಿಸ್ತನಿಗೂ ದಾಸನಾಗಿರುವ ಯಾಕೋಬನು ಅನ್ಯ ದೇಶಗಳಲ್ಲಿ ಚದರಿರುವ ಇಸ್ರಯೇಲ ಹನ್ನೆರಡು ಕುಲದವರಿಗೆ ಬರೆಯುವದು. ನಿಮಗೆ ಶುಭವಾಗಲಿ.

2-3 ನನ್ನ ಸಹೋದರರೇ, ನಿಮ್ಮ ನಂಬಿಕೆಗೆ ಆಗುವ ಪರಿಶೋಧನೆಯು ತಾಳ್ಮೆಯನ್ನುಂಟು ಮಾಡುತ್ತದೆಂದು ತಿಳಿದು ನೀವು ನಾನಾವಿಧವಾದ ಕಷ್ಟಗಳಲ್ಲಿ ಬಿದ್ದಿರುವಾಗ ಅದನ್ನು ಕೇವಲ ಆನಂದಕರವಾದದ್ದೆಂದು ಎಣಿಸಿರಿ. 4 ಆ ತಾಳ್ಮೆಯು ಸಿದ್ಧಿಗೆ ಬರಲಿ; ಆಗ ನೀವು ಶಿಕ್ಷಿತರೂ ಸರ್ವಸುಗುಣವುಳ್ಳವರೂ ಏನೂ ಕಡಿಮೆಯಿಲ್ಲದವರೂ ಆಗಿರುವಿರಿ.

5 ನಿಮ್ಮಲ್ಲಿ ಯಾವನಿಗಾದರೂ ಜ್ಞಾನ ಕಡಿಮೆಯಾಗಿದ್ದರೆ, ಅವನು ದೇವರನ್ನು ಕೇಳಿ ಕೊಳ್ಳಲಿ, ಅದು ಅವನಿಗೆ ದೊರಕುವದು; ದೇವರು ಹಂಗಿಸದೆ ಎಲ್ಲರಿಗೂ ಉದಾರ ಮನಸ್ಸಿನಿಂದ ಕೊಡುವವನಾಗಿದ್ದಾನೆ. 6 ಸ್ವಲ್ಪವೂ ಸಂದೇಹಪಡದೆ ನಂಬಿಕೆಯಿಟ್ಟು ಕೇಳಿ ಕೊಳ್ಳಬೇಕು. ಸಂದೇಹಪಡುವವನೋ ಗಾಳಿಯಿಂದ ಬಡಿಯಲ್ಪಟ್ಟ ಸಮುದ್ರದ ತೆರೆ ಯಂತೆ ಅಲೆಯುತ್ತಿರುವನು. 7 ಆ ಮನುಷ್ಯನು ತಾನು ದೇವರಿಂದ ಏನಾದರೂ ಹೊಂದು ವೆನೆಂದು ಭಾವಿಸದೆ ಇರಲಿ; 8 ಅವನು ಎರಡು ಮನಸ್ಸುಳ್ಳವನೂ ತನ್ನ ನಡತೆಯಲ್ಲೆಲ್ಲಾ ಚಂಚಲನೂ ಆಗಿದ್ದಾನೆ.

9 ಹೀನಸ್ಥಿತಿಯಲ್ಲಿರುವ ಸಹೋದರನು ತಾನು ಉತ್ತಮಸ್ಥಿತಿಗೆ ಬಂದೆನೆಂದು ಉಲ್ಲಾಸ ಪಡಲಿ; 10 ಐಶ್ವರ್ಯವಂತನಾದ ಸಹೋದರನು ತಾನು ಹೀನಸ್ಥಿತಿಗೆ ಬಂದೆನೆಂದು ಉಲ್ಲಾಸ ಪಡಲಿ. ಯಾಕಂದರೆ ಐಶ್ವರ್ಯವಂತನು ಹುಲ್ಲಿನ ಹೂವಿನಂತೆ ಗತಿಸಿಹೋಗುವನು. 11 ಸೂರ್ಯನು ಉದಯಿಸಿ ಉಷ್ಣವಾದ ಗಾಳಿ ಬೀಸಿ ಹುಲ್ಲನ್ನು ಬಾಡಿಸಲು, ಆ ಹುಲ್ಲಿನ ಹೂವು ಉದುರಿ ಅದರ ರೂಪದ ಸೊಗಸು ಕೆಡುವದಷ್ಟೆ. ಹೀಗೆಯೇ ಐಶ್ವರ್ಯವಂತನು ತನ್ನ ವ್ಯವಹಾರಗಳಲ್ಲಿಯೇ ಕುಂದಿಹೋಗುವನು.

12 ಕಷ್ಟವನ್ನು ಸಹಿಸಿಕೊಳ್ಳುವವನು ಧನ್ಯನು; ಅವನು ಪರಿಶೋಧಿತನಾದ ಮೇಲೆ ಜೀವ ವೆಂಬ ಜಯಮಾಲೆಯನ್ನು ಹೊಂದುವನು; ಸ್ವಾಮಿಯು ತನ್ನನ್ನು ಪ್ರೀತಿಸುವವರಿಗೆ 13 ಇದನ್ನು ವಾಗ್ದಾನ ಮಾಡಿದ್ದಾನೆ. ಯಾವನಾದರೂ ಪಾಪಮಾಡುವದಕ್ಕೆ ಪ್ರೇರೇಪಿಸಲ್ಪಡುವಾಗ—ಈ ಪ್ರೇರಣೆಯು ದೇವರಿಂದ ನನಗೆ ಉಂಟಾಗುವದೆಂದು ಹೇಳಬಾರದು. ದೇವರು ಕೆಟ್ಟದ್ದಕ್ಕೇನೂ ಸಂಬಂಧಪಟ್ಟವನಲ್ಲ; ಆತನು ಯಾರನ್ನೂ ಪಾಪಕ್ಕೆ ಪ್ರೇರೇ 14 ಪಿಸುವದಿಲ್ಲ. ಆದರೆ ಪ್ರತಿಯೊಬ್ಬನೂ ತನ್ನಲ್ಲಿರುವ ಆಶಾಪಾಶದಿಂದ ಎಳೆಯಲ್ಪಟ್ಟು 15 ಮರುಳುಗೊಂಡವನಾಗಿ ಪ್ರೇರೇಪಿಸಲ್ಪಡುತ್ತಾನೆ. ಆ ಮೇಲೆ ಆಶೆಯು ಬಸುರಾಗಿ ಪಾಪವನ್ನು ಹೆರುತ್ತದೆ; ಪಾಪವು ತುಂಬಾ ಬೆಳೆದು ಮರಣವನ್ನು ಹಡೆಯುತ್ತದೆ.

16, 17 ನನ್ನ ಪ್ರಿಯ ಸಹೋದರರೇ, ಮೋಸಹೋಗಬೇಡಿರಿ. ಎಲ್ಲಾ ಒಳ್ಳೇ ದಾನಗಳೂ ಕುಂದಿಲ್ಲದ ಎಲ್ಲಾ ವರಗಳೂ ಮೇಲಣಿಂದ ಸಕಲವಿಧವಾದ ಬೆಳಕಿಗೂ ಮೂಲಕಾರಣನಾದವನಿಂದ ಇಳಿದುಬರುತ್ತವೆ. ಆತನಲ್ಲಿ ಚಂಚಲತ್ವವೇನೂ ಇಲ್ಲ, ವ್ಯತ್ಯಾಸದ ಸೂಚ 18 ನೆಯೂ[1] ಇಲ್ಲ. ಆತನು ತನ್ನ ಸುಚಿತ್ತದ ಪ್ರಕಾರ ಸತ್ಯಬೋಧನೆಯ ವಾಕ್ಯದಿಂದ ನಮ್ಮನ್ನು ಹುಟ್ಟಿಸಲಾಗಿ ನಾವು ಆತನ ಸೃಷ್ಟಿಗಳಲ್ಲಿ ಪ್ರಥಮಫಲದಂತಾದೆವು.

### ದೇವರ ವಾಕ್ಯವನ್ನು ಕೇಳಿ ಅದನ್ನು ಅನುಸರಿಸುವದರ ವಿಷಯವು.

19 ಪ್ರಿಯ ಸಹೋದರರೇ, ನೀವು ಬಲ್ಲವರು. ಆದರೆ ಪ್ರತಿಯೊಬ್ಬನು ಕಿವಿಗೊಡುವದರಲ್ಲಿ ತೀವ್ರವಾಗಿಯೂ ಮಾತಾಡುವದರಲ್ಲಿ ನಿಧಾನವಾಗಿಯೂ ಇರಲಿ. ಕೋಪಿಸು 20 ವದರಲ್ಲಿಯೂ ನಿಧಾನವಾಗಿರಲಿ; ಮನುಷ್ಯನ ಕೋಪವು ದೇವರಿಗೆ ಮೆಚ್ಚಿಕೆಯಾಗಿರುವ 21 ನೀತಿಗೆ ಅನುಕೂಲವಾಗುವದಿಲ್ಲ. ಆದಕಾರಣ ಎಲ್ಲಾ ನೀಚತನವನ್ನೂ ಎಲ್ಲಾ ದುಷ್ಟತನವನ್ನೂ ತೆಗೆದುಹಾಕಿ ಮನಸ್ಸಿನೊಳಗೆ ಬೇರೂರಿರುವ ವಾಕ್ಯಕ್ಕೆ ನಮ್ರತೆಯಿಂದ ಎಡೆಗೊಡಿರಿ; ಅದು ನಿಮ್ಮ ಆತ್ಮಗಳನ್ನು ರಕ್ಷಿಸುವದಕ್ಕೆ ಸಾಮರ್ಥ್ಯವುಳ್ಳದ್ದಾಗಿದೆ. 22 ವಾಕ್ಯದ ಪ್ರಕಾರ ನಡೆಯುವವರಾಗಿರಿ; ಅದನ್ನು ಕೇಳುವವರು ಮಾತ್ರವೇ ಆಗಿದ್ದು 23 ನಿಮ್ಮನ್ನು ನೀವೇ ಮೋಸಗೊಳಿಸಬೇಡಿರಿ. ಯಾವನಾದರೂ ವಾಕ್ಯವನ್ನು ಕೇಳುವವನಾದಾಗ್ಯೂ ಅದರ ಪ್ರಕಾರ ನಡೆಯದಿದ್ದರೆ, ಅವನು ಕನ್ನಡಿಯಲ್ಲಿ ತನ್ನ ಹುಟ್ಟುಮುಖ 24 ವನ್ನು ನೋಡಿದ ಮನುಷ್ಯನಂತಿರುವನು; ಇವನು ತನ್ನನ್ನು ನೋಡಿಕೊಂಡು ಹೋಗಿ 25 ಆ ಕ್ಷಣವೇ ತಾನು ಹೀಗ್ಗೀಗಿದ್ದೇನೆಂಬುವದನ್ನು ಮರೆತುಬಿಡುವನು. ಆದರೆ ಬಿಡುಗಡೆಯಾದವರಿಗೆ ಇರುವ ಸರ್ವೋತ್ತಮ ಧರ್ಮಪ್ರಮಾಣವನ್ನು ಲಕ್ಷ್ಯಕೊಟ್ಟು ನೋಡಿ ಇನ್ನೂ ನೋಡುತ್ತಲೇ ಇರುವವನು ವಾಕ್ಯವನ್ನು ಕೇಳಿ ಮರೆತುಹೋಗುವವನಾಗಿರದೆ 26 ಅದರ ಪ್ರಕಾರ ನಡೆಯುವವನಾಗಿದ್ದು ತನ್ನ ನಡತೆಯಿಂದ ಧನ್ಯನಾಗುವನು. ಸದ್ಭಕ್ತನೆಂದೆಣಿಸಿಕೊಳ್ಳುವ ಯಾವನಾದರೂ ತನ್ನ ನಾಲಿಗೆಗೆ ಕಡಿವಾಣವನ್ನು ಹಾಕದೆ ತನ್ನ ಹೃದಯವನ್ನು ಮೋಸಗೊಳಿಸುವವನಾದರೆ, ಅವನ ಭಕ್ತಿ ನಿಷ್ಪ್ರಯೋಜನವಾಗಿದೆ. 27 ಸಂಕಟದಲ್ಲಿ ಬಿದ್ದ ದಿಕ್ಕಿಲ್ಲದವರನ್ನೂ ವಿಧವೆಯರನ್ನೂ ಪರಾಮರಿಸಿ ತನಗೆ ಪ್ರಪಂಚದ

[1] ಅಥವಾ, ಗ್ರಹಣದಂತಿರುವ ನೆರಳೂ.

ದೋಷವು ಹತ್ತದಂತೆ ನೋಡಿಕೊಂಡಿರುವದೇ ತಂದೆಯಾದ ದೇವರ ಸನ್ನಿಧಾನದಲ್ಲಿ ಶುದ್ಧವೂ ನಿರ್ಮಲವೂ ಆಗಿರುವ ಭಕ್ತಿ.

ಪಕ್ಷಪಾತವನ್ನು ಕುರಿತದ್ದು.

**2** ನನ್ನ ಸಹೋದರರೇ, ಪ್ರಭಾವವುಳ್ಳ ನಮ್ಮ ಕರ್ತನಾದ ಯೇಸು ಕ್ರಿಸ್ತನಲ್ಲಿ ನಂಬಿಕೆಯಿಟ್ಟವರಾದ ನೀವು ಪಕ್ಷಪಾತಿಗಳಾಗಿರಬಾರದು. 2 ಹ್ಯಾಗಂದರೆ, ಒಬ್ಬ ಮನುಷ್ಯನು ಚಿನ್ನದ ಉಂಗುರವನ್ನೂ ಶೋಭಾಯಮಾನವಾದ ವಸ್ತ್ರಗಳನ್ನೂ ಹಾಕಿಕೊಂಡು ನಿಮ್ಮ ಸಭಾಮಂದಿರದೊಳಗೆ ಬರಲು, ಮತ್ತು ಒಬ್ಬ ಬಡಮನುಷ್ಯನು ಹೀನವಾದ ಬಟ್ಟೆ ಹಾಕಿಕೊಂಡು ಬರಲು, 3 ನೀವು ಶೋಭಾಯಮಾನವಾದ ವಸ್ತ್ರಗಳನ್ನು ಧರಿಸಿಕೊಂಡಿರುವವನನ್ನು ಮರ್ಯಾದೆಯಿಂದ ನೋಡಿ ಅವನಿಗೆ—ನೀವು ಇಲ್ಲಿ ಈ ಸುಖಾಸನದ ಮೇಲೆ ಕೂತುಕೊಳ್ಳಿರಿ ಎಂತಲೂ, ಆ ಬಡಮನುಷ್ಯನಿಗೆ—ನೀನು ಅಲ್ಲಿ ನಿಂತುಕೋ, ಇಲ್ಲವೆ ನನ್ನ ಕಾಲ್ಮಣೆಯ ಹತ್ತರ ನೆಲದ ಮೇಲೆ ಕೂತುಕೋ ಎಂತಲೂ ಹೇಳಿದರೆ, 4 ನೀವು ನಿಮ್ಮಲ್ಲಿ ಭೇದಮಾಡುವವರಾಗಿ ಅನ್ಯಾಯವಾದ ತೀರ್ಪನ್ನು ಮಾಡುವವರಾದಿರಲ್ಲಾ. 5 ಪ್ರಿಯ ಸಹೋದರರೇ, ಕೇಳಿರಿ, ದೇವರು ಲೌಕಿಕ ವಿಷಯದಲ್ಲಿ ಬಡವರಾಗಿರುವವರನ್ನು ಆದುಕೊಂಡು ಅವರು ನಂಬಿಕೆಯಲ್ಲಿ ಐಶ್ವರ್ಯವಂತರಾಗಿಯೂ ತನ್ನನ್ನು ಪ್ರೀತಿಸುವವರಿಗೆ ತಾನು ವಾಗ್ದಾನಮಾಡಿದ ರಾಜ್ಯಕ್ಕೆ ಬಾಧ್ಯರಾಗಿಯೂ ಇರಬೇಕೆಂದು ನೇಮಿಸಲಿಲ್ಲವೋ? 6 ನೀವಾದರೋ ಬಡವರನ್ನು ಅವಮಾನಪಡಿಸಿದ್ದೀರಿ. ನಿಮ್ಮನ್ನು ಬಾಧಿಸಿ ನ್ಯಾಯಸ್ಥಾನಕ್ಕೆ ಎಳೆದುಕೊಂಡುಹೋಗುವವರು ಐಶ್ವರ್ಯವಂತರಲ್ಲವೋ? 7 ನೀವು ಕರೆಸಿಕೊಳ್ಳುವ ಶ್ರೇಷ್ಠವಾದ ನಾಮವನ್ನು ದೂಷಿಸುವವರು ಅವರಲ್ಲವೋ? 8 ಆದಾಗ್ಯೂ ಶಾಸ್ತ್ರಕ್ಕೆ ಸರಿಯಾಗಿ, ನಿನ್ನಂತೆಯೇ ನಿನ್ನ ನೆರೆಯವನನ್ನು ಪ್ರೀತಿಸಬೇಕೆಂಬ ರಾಜಾಜ್ಞೆಯನ್ನು[1] ನೀವು ನೆರವೇರಿಸುತ್ತಿದ್ದರೆ, ನೀವು ಒಳ್ಳೇದನ್ನು ಮಾಡುವವರು. 9 ಅದನ್ನು ಬಿಟ್ಟು ಪಕ್ಷಪಾತ ತೋರಿಸುವವರಾಗಿದ್ದರೆ, ನೀವು ಪಾಪಮಾಡುವವರಾಗಿದ್ದು ಅಪರಾಧಿಗಳೆಂದು ಧರ್ಮಶಾಸ್ತ್ರದಿಂದ ತೀರ್ಮಾನಿಸಲ್ಪಡುತ್ತೀರಿ. 10 ಯಾಕಂದರೆ ಯಾವನಾದರೂ ಧರ್ಮಶಾಸ್ತ್ರವನ್ನೆಲ್ಲಾ ಕೈಕೊಂಡು ನಡೆದು ಒಂದೇ ಒಂದರಲ್ಲಿ ತಪ್ಪಿದರೆ, ಅವನು ಎಲ್ಲಾ ವಿಷಯದಲ್ಲಿಯೂ ಅಪರಾಧಿಯಾಗುತ್ತಾನೆ. 11 ಹಾದರ ಮಾಡಬೇಡವೆಂದು ಹೇಳಿದವನೇ ನರಹತ್ಯ ಮಾಡಬೇಡವೆಂತಲೂ ಹೇಳಿದನು. ಆದಕಾರಣ ನೀನು ಹಾದರ ಮಾಡದೆ ಇದ್ದಾಗ್ಯೂ ನರಹತ್ಯಮಾಡಿದರೆ, ಧರ್ಮಪ್ರಮಾಣವನ್ನು ಮೀರಿದವನಾದಿ. 12 ನೀವು ಬಿಡುಗಡೆಯಾದವರಿಗೆ ಇರುವ ಧರ್ಮಪ್ರಮಾಣದ ಪ್ರಕಾರ ತೀರ್ಮಾನವನ್ನು ಹೊಂದತಕ್ಕವರೆಂದು ಮಾತಾಡಿರಿ, ನಡೆಯಿರಿ. 13 ಕರುಣೆ ತೋರಿಸದೆ ಇರುವವನಿಗೆ ನ್ಯಾಯತೀರ್ಮಾನದಲ್ಲಿ ಕರುಣೆಯು ತೋರಿಸಲ್ಪಡುವದಿಲ್ಲ. ಕರುಣೆಯು ನ್ಯಾಯತೀರ್ಮಾನದಲ್ಲಿ[2] ಹಿಗ್ಗುತ್ತದೆ.

---

[1] ಲೇವಿಕ. ೧೯, ೧೮.

[2] ಅಥವಾ, ನ್ಯಾಯವನ್ನು ಗೆದ್ದು.

ನಂಬಿಕೆ ಮಾತ್ರವೇ ಸಾಲದು, ನಡತೆಯೂ ಬೇಕೆಂಬ ಬೋಧೆ.

14 ನನ್ನ ಸಹೋದರರೇ, ಒಬ್ಬನು ತಕ್ಕ ಕ್ರಿಯೆಗಳಿಲ್ಲದವನಾಗಿದ್ದು ತನಗೆ ನಂಬಿಕೆ ಯುಂಟೆಂದು ಹೇಳಿಕೊಂಡರೆ, ಪ್ರಯೋಜನವೇನು? ಅಂಥಾ ನಂಬಿಕೆಯು ಇವನನ್ನು
15 ರಕ್ಷಿಸುವದೋ? ಒಬ್ಬ ಸಹೋದರನಿಗೆ ಇಲ್ಲವೇ ಒಬ್ಬ ಸಹೋದರಿಗೆ ಬಟ್ಟೆಯೂ ಆ
16 ದಿನದ ಆಹಾರವೂ ಇಲ್ಲದೆ ಇರುವಾಗ, ನಿಮ್ಮಲ್ಲಿ ಒಬ್ಬನು ಅವರಿಗೆ ದೇಹಕ್ಕೆ ಬೇಕಾದ ದ್ದನ್ನು ಕೊಡದೆ—ಸಮಾಧಾನದಿಂದ ಹೋಗಿರಿ, ಬೆಂಕಿಕಾಯಿಸಿಕೊಳ್ಳಿ, ಹೊಟ್ಟೆತುಂಬಿಸಿ
17 ಕೊಳ್ಳಿ ಎಂದು ಬರೀ ಮಾತು ಹೇಳಿದರೆ, ಪ್ರಯೋಜನವೇನು? ಹಾಗೆಯೇ ಕ್ರಿಯೆಗಳಿಲ್ಲ
18 ದಿದ್ದರೆ, ನಂಬಿಕೆಯು ತನ್ನಲ್ಲಿ ಜೀವವಿಲ್ಲದ್ದು. ಹೀಗಲ್ಲವಾದರೆ ಒಬ್ಬ ಮನುಷ್ಯನು— ನಿನಗೆ ನಂಬಿಕೆಯುಂಟು, ನನಗೆ ಕ್ರಿಯೆಗಳುಂಟು, ನಾನು ನನ್ನ ಕ್ರಿಯೆಗಳ ಮುಖಾಂತರ ನನ್ನ ನಂಬಿಕೆಯನ್ನು ನಿನಗೆ ತೋರಿಸುತ್ತೇನೆ; ನೀನು ಕ್ರಿಯೆಗಳಿಲ್ಲದೆ ನಿನ್ನ ನಂಬಿಕೆಯನ್ನು
19 ನನಗೆ ತೋರಿಸು, ನೋಡೋಣ ಎಂದು ಹೇಳುವನಲ್ಲವೇ? ದೇವರು ಒಬ್ಬನೇ ಎಂದು ನೀನು ನಂಬುವವನು. ಹಾಗೆ ನಂಬುವದು ಒಳ್ಳೇದು. ದೆವ್ವಗಳು ಕೂಡ ಹಾಗೆಯೇ
20 ನಂಬಿ ಹೆದರಿ ನಡುಗುತ್ತವೆ. ಅಪ್ರಯೋಜಕನೇ, ಕ್ರಿಯೆಗಳಿಲ್ಲದ ನಂಬಿಕೆಯು ವ್ಯರ್ಥ
21 ವಾಗಿದೆ ಎಂಬದಕ್ಕೆ ದೃಷ್ಟಾಂತ ಬೇಕೋ? ನಮ್ಮ ಪಿತೃವಾದ ಅಬ್ರಹಾಮನು ಇಸಾಕ ನೆಂಬ ತನ್ನ ಮಗನನ್ನು ಯಜ್ಞವೇದಿಯ ಮೇಲೆ ಅರ್ಪಿಸಿದಾಗ ನೀತಿವಂತನೆಂಬ ನಿರ್ಣಯ
22 ವನ್ನು ಹೊಂದಿದ್ದು ಕ್ರಿಯೆಗಳಿಂದಲ್ಲವೇ? ಅವನ ನಂಬಿಕೆಯು ಕ್ರಿಯೆಗಳೊಂದಿಗೆ ಪ್ರವರ್ತಿಸಿ ಆ ಕ್ರಿಯೆಗಳಿಂದಲೇ ಸಿದ್ಧಿಗೆ ಬಂತೆಂಬುವದು ಕಾಣಬರುತ್ತದಲ್ಲಾ.
23 ಅಬ್ರಹಾಮನು ದೇವರನ್ನು ನಂಬಿದನು; ಆ ನಂಬಿಕೆ ಅವನಿಗೆ ನೀತಿಯೆಂದು ಎಣಿಸಲ್ಪಟ್ಟಿತು ಎಂಬ ಶಾಸ್ತ್ರದ ಮಾತು[1] ಹೀಗೆ ನೆರವೇರಿತು, ಮತ್ತು ದೇವರ ಸ್ನೇಹಿತನೆಂಬ ಹೆಸರು[2]
24 ಅವನಿಗೆ ಉಂಟಾಯಿತು. ಮನುಷ್ಯನು ಕ್ರಿಯೆಗಳಿಂದ ನೀತಿವಂತನೆಂದು ನಿರ್ಣಯಿಸಲ್ಪ
25 ಡುತ್ತಾನೇ ಹೊರತು ಬರೇ ನಂಬಿಕೆಯಿಂದಲ್ಲವೆಂದು ನೋಡುತ್ತೀರಿ. ಅದೇ ರೀತಿಯಾಗಿ, ಸೂಳೆಯಾದ ರಹಾಬಳು ಗೂಢಚಾರರನ್ನು ತನ್ನ ಮನೆಯಲ್ಲಿ ಸೇರಿಸಿಕೊಂಡು ಬೇರೆ ದಾರಿ ಯಿಂದ ಅವರನ್ನು ಕಳುಹಿಸಿದ್ದಲ್ಲಿ ಕ್ರಿಯೆಗಳಿಂದಲೇ ನೀತಿವಂತಳೆಂಬ ನಿರ್ಣಯವನ್ನು
26 ಹೊಂದಿದಳಲ್ಲವೇ? ಆತ್ಮವಿಲ್ಲದ ದೇಹವು ಸತ್ತದ್ದಾಗಿರುವ ಪ್ರಕಾರವೇ ಕ್ರಿಯೆಗಳಿಲ್ಲದ ನಂಬಿಕೆಯೂ ಸತ್ತದ್ದೇ.

ನಾಲಿಗೆಯನ್ನು ಬಿಗಿಹಿಡಿಯುವದರ ವಿಷಯವು.

**3** ನನ್ನ ಸಹೋದರರೇ, ಬೋಧಕರಿಗೆ ಕಠಿನವಾದ ತೀರ್ಪು ಆಗುವದೆಂದು ತಿಳಿದು
2 ಕೊಂಡು ಬಹುಮಂದಿ ಬೋಧಕರಾಗಬೇಡಿರಿ. ಅನೇಕ ವಿಷಯಗಳಲ್ಲಿ ನಾವೆಲ್ಲರೂ ತಪ್ಪುವದುಂಟು. ಒಬ್ಬನು ಮಾತಿನಲ್ಲಿ ತಪ್ಪದಿದ್ದರೆ, ಅವನು ಶಿಕ್ಷಿತನೂ ತನ್ನ ದೇಹವ

---

1) ಉತ್ಪತ್ತಿ ೧೫, ೬.    2) ಯೆಶಾಯ ೪೧, ೮.

ನ್ನೆಲ್ಲಾ ಸ್ವಾಧೀನಪಡಿಸಿಕೊಳ್ಳುವದಕ್ಕೆ ಸಮರ್ಥನೂ ಆಗಿದ್ದಾನೆ. ನಾವು ಕುದುರೆ 3
ಗಳನ್ನು ಸ್ವಾಧೀನಮಾಡಿಕೊಳ್ಳಬೇಕೆಂದಿರುವಾಗ ಅವುಗಳ ಬಾಯಿಗೆ ಕಡಿವಾಣ ಹಾಕು
ತ್ತೇವಲ್ಲಾ; ಆಗ ಅವುಗಳ ದೇಹವನ್ನೆಲ್ಲಾ ತಿರುಗಿಸುವದಕ್ಕೆ ಆಗುತ್ತದೆ. ಹಡಗುಗಳನ್ನು 4
ನೋಡಿರಿ. ಅವು ಬಹು ದೊಡ್ಡವು, ಬಲವಾದ ಗಾಳಿಯಿಂದ ಬಡಿಸಿಕೊಂಡು ಹೋಗು
ತ್ತವೆ. ಆದಾಗ್ಯೂ ನಡಿಸುವವನು ಬಹು ಸಣ್ಣ ಚುಕಾಣಿಯಿಂದ ಅವುಗಳನ್ನು ತನ್ನ
ಮನಸ್ಸಿಗೆ ಬಂದ ಕಡೆಗೆ ತಿರುಗಿಸುತ್ತಾನೆ. ಹಾಗೆಯೇ ನಾಲಿಗೆಯು ಕೂಡ ಚಿಕ್ಕ 5
ಅಂಗವಾಗಿದ್ದರೂ ದೊಡ್ಡ ಕಾರ್ಯ ಕೊಚ್ಚಿಕೊಳ್ಳುತ್ತದೆ. ಬೆಂಕಿ ಕೊಂಚವಾಗಿದ್ದರೂ
ಎಷ್ಟೋ ದೊಡ್ಡ ಅಡವಿಯನ್ನು ಉರಿಸುತ್ತದೆ, ನೋಡಿರಿ. ನಾಲಿಗೆ ಕೂಡ ಬೆಂಕಿಯೇ. 6
ನಾಲಿಗೆಯು ಅಧರ್ಮಲೋಕವಾಗಿ ನಮ್ಮ ಅಂಗಗಳ ನಡುವೆ ಇಟ್ಟದೆ. ಅದು ದೇಹ
ವನ್ನೆಲ್ಲಾ ಕೆಡಿಸುತ್ತದೆ. ತಾನೇ ನರಕದಿಂದ ಬೆಂಕಿ ಹತ್ತಿಸಿಕೊಳ್ಳುತ್ತಾ ಪ್ರಪಂಚ
ವೆಂಬ ಚಕ್ರಕ್ಕೆ ಬೆಂಕಿ ಹಚ್ಚುತ್ತದೆ. ನರಜಾತಿಯು ಸಕಲ ಜಾತಿಯ ಮೃಗ ಪಕ್ಷಿ 7
ಕ್ರಿಮಿ ಜಲಚರಗಳನ್ನೂ ಹತೋಟಿಗೆ ತರುವದುಂಟು, ಮತ್ತು ತಂದದ್ದುಂಟು. ಆದರೆ 8
ನಾಲಿಗೆಯನ್ನು ಯಾವನಾದರೂ ಹತೋಟಿಗೆ ತರಲಾರನು. ಅದು ಸುಮ್ಮನಿರಲಾರದ
ಕೆಡಕಾಗಿದೆ; ಮರಣಕರವಾದ ವಿಷದಿಂದ ತುಂಬಿ ಇದೆ. ನಾಲಿಗೆಯಿಂದ ತಂದೆಯಾದ 9
ದೇವರನ್ನು ಕೊಂಡಾಡುತ್ತೇವೆ; ಅದರಿಂದಲೇ ದೇವರ ಹೋಲ್ವಿಕೆಗೆ ಸರಿಯಾಗಿ ಉಂಟು
ಮಾಡಲ್ಪಟ್ಟ ಮನುಷ್ಯರನ್ನು ಶಪಿಸುತ್ತೇವೆ. ಅದೇ ಬಾಯಿಯಿಂದ ಸ್ತುತಿ ಶಾಪ ಎರಡೂ 10
ಬರುತ್ತವೆ. ನನ್ನ ಸಹೋದರರೇ, ಹೀಗಿರುವದು ಯೋಗ್ಯವಲ್ಲ. ಊಟೆಯು ಒಂದೇ 11
ಬಾಯಿಯಿಂದ ಸೀನೀರು ಕಹಿನೀರು ಎರಡೂ ಹೊರಡುವದುಂಟೇ? ನನ್ನ ಸಹೋದರರೇ, 12
ಅಂಜೂರದ ಮರವು ಎಣ್ಣೇಮರದ ಕಾಯಿ ಬಿಡುವದೋ? ದ್ರಾಕ್ಷೇ ಬಳ್ಳಿಯಲ್ಲಿ ಅಂಜೂ
ರದ ಹಣ್ಣಾಗುವದೋ? ಹಾಗೆಯೇ ಉಪ್ಪುನೀರಿನ ಬಾವಿಯಿಂದ ಸೀನೀರು ಬರುವದಿಲ್ಲ.

### ನಿಜವಾದ ಜ್ಞಾನದ ಲಕ್ಷಣಗಳು.

ನಿಮ್ಮಲ್ಲಿ ಜ್ಞಾನಿಯೂ ಬುದ್ಧಿವಂತನೂ ಯಾರು? ಅಂಥವನು ಜ್ಞಾನದ ಲಕ್ಷಣವಾಗಿ 13
ರುವ ಶಾಂತಗುಣವನ್ನು ಉಳ್ಳವನಾಗಿದ್ದು ಯೋಗ್ಯವಾದ ನಡತೆಯಿಂದ ಅದರ ಫಲವನ್ನು
ತೋರಿಸಲಿ. ಆದರೆ ತೀಕ್ಷ್ಣವಾದ ಮತ್ಸರವೂ ಪಕ್ಷಭೇದವೂ ನಿಮ್ಮ ಹೃದಯದೊಳಗೆ 14
ಇರುವಲ್ಲಿ, ನೀವು ಸತ್ಯಕ್ಕೆ ವಿರೋಧವಾಗಿ ಸುಳ್ಳಾಡಿ ಹೊಗಳಿಕೊಳ್ಳಬೇಡಿರಿ. ಅದು 15
ಮೇಲಣಿಂದ ಬಂದ ಜ್ಞಾನವಲ್ಲ; ಅದು ಭೂಸಂಬಂಧವಾದದ್ದು, ಪ್ರಾಕೃತಭಾವವಾದದ್ದು,
ದೆವ್ವಗಳಿಗೆ ಸಂಬಂಧಪಟ್ಟದ್ದು. ಮತ್ಸರವೂ ಪಕ್ಷಭೇದವೂ ಇರುವ ಕಡೆ ಗಲಿಬಿಲಿಯೂ 16
ಸಕಲವಿಧ ನೀಚಕೃತ್ಯಗಳೂ ಇರುವವು. ಆದರೆ ಮೇಲಣಿಂದ ಬರುವ ಜ್ಞಾನವು 17
ಮೊದಲು ಪರಿಶುದ್ಧವಾದದ್ದು, ಆ ಮೇಲೆ ಸಮಾಧಾನಕರವಾದದ್ದು, ವಿನಯವುಳ್ಳದ್ದು,
ಸತ್ಯಕ್ಕೆ ಒಪ್ಪಿಕೊಳ್ಳುವಂಥಾದ್ದು, ಕರುಣೆ ಮುಂತಾದ ಒಳ್ಳೇ ಫಲಗಳಿಂದ ತುಂಬಿರು
ವಂಥಾದ್ದು ಆಗಿದೆ; ಅದರಲ್ಲಿ ಚಂಚಲವೂ ಕಪಟವೂ ಇಲ್ಲ. ಸಮಾಧಾನಪಡಿಸುವವರು 18
ಸಮಾಧಾನವೆಂಬ ಬೀಜವನ್ನು ಬಿತ್ತಿ ನೀತಿಯೆಂಬ ಫಲವನ್ನು ಕೊಯ್ಯುವರು.

ಜಗಳಗಂಟಿಗತನ ಪ್ರಾಪಂಚಿಕಬುದ್ಧಿ ಇವುಗಳ ವಿಷಯವಾದ ಎಚ್ಚರಿಕೆ.

**4** ನಿಮ್ಮಲ್ಲಿ ಯುದ್ಧಗಳೂ ಕಾದಾಟಗಳೂ ಎಲ್ಲಿಂದ ಹುಟ್ಟುತ್ತವೆ? ನಿಮ್ಮ ಇಂದ್ರಿಯಗಳಲ್ಲಿ
2 ಒದ್ದಾಡುವ ಭೋಗಾಶೆಗಳಿಂದಲೇ ಅಲ್ಲವೇ? ನೀವು ಆಶಿಸಿದಾಗ್ಯೂ ಹೊಂದದೆ ಇದ್ದೀರಿ.
ನೀವು ಕೊಲೆಗಾರರಾಗುವಷ್ಟು ಹೊಟ್ಟೆಕಿಚ್ಚು ಪಟ್ಟಾಗ್ಯೂ ಸಂಪಾದಿಸಲಾರದೆ ಇದ್ದೀರಿ;
ನೀವು ಕಾದಾಡುತ್ತೀರಿ, ಯುದ್ಧಮಾಡುತ್ತೀರಿ. ನೀವು ದೇವರನ್ನು ಬೇಡಿಕೊಳ್ಳದ
3 ಕಾರಣ ನಿಮಗೇನೂ ದೊರೆಯಲಿಲ್ಲ. ನೀವು ಬೇಡಿದರೂ ಬೇಡಿದ್ದನ್ನು ನಿಮ್ಮ ಭೋಗ
ಗಳಿಗಾಗಿ ಉಪಯೋಗಿಸಬೇಕೆಂಬ ದುರಭಿಪ್ರಾಯಪಟ್ಟು ಬೇಡಿಕೊಳ್ಳುವದರಿಂದ ನಿಮಗೆ
4 ದೊರೆಯುವದಿಲ್ಲ. ವ್ಯಭಿಚಾರಿಗಳು ನೀವು; ಇಹಲೋಕಸ್ನೇಹವು ದೇವವೈರವೆಂದು
ನಿಮಗೆ ತಿಳಿಯದೋ? ಲೋಕಕ್ಕೆ ಸ್ನೇಹಿತನಾಗಬೇಕೆಂದಿರುವವನು ತನ್ನನ್ನು ದೇವರಿಗೆ
5 ವಿರೋಧಿಯನ್ನಾಗಿ ಮಾಡಿಕೊಳ್ಳುತ್ತಾನೆ. ದೇವರು ನಮ್ಮಲ್ಲಿ ಇರಿಸಿರುವ ಪವಿತ್ರಾತ್ಮನು
ಅಭಿಮಾನವುಳ್ಳವನಾಗಿ ನಮ್ಮನ್ನು ಹಂಬಲಿಸುತ್ತಾನೆ ಎಂಬ ಶಾಸ್ತ್ರೋಕ್ತಿ ಬರೀ ಮಾತೆಂದು
6 ಭಾವಿಸುತ್ತೀರೋ? ಆತನು ನಮ್ಮ ಮೇಲೆ ಅತಿಶಯವಾದ ಕೃಪೆಯನ್ನು ಇಡುತ್ತಾನೆ.
ಆದದರಿಂದ—ದೇವರು ಅಹಂಕಾರಿಗಳನ್ನು ಎದುರಿಸಿ ದೀನರಿಗೆ ಕೃಪೆಯನ್ನು ಅನುಗ್ರಹಿಸು
7 ತ್ತಾನೆ ಎಂದು[1] ಶಾಸ್ತ್ರವು ಹೇಳುತ್ತದೆ. ಹೀಗಿರಲಾಗಿ, ದೇವರಿಗೆ ಒಳಗಾಗಿರಿ. ಸೈತಾನ
8 ನನ್ನು ಎದುರಿಸಿರಿ, ಅವನು ನಿಮ್ಮನ್ನು ಬಿಟ್ಟು ಓಡಿಹೋಗುವನು. ದೇವರ ಸಮೀಪಕ್ಕೆ
ಬನ್ನಿರಿ, ಆಗ ಆತನು ನಿಮ್ಮ ಸಮೀಪಕ್ಕೆ ಬರುವನು. ಪಾಪಿಗಳೇ, ನಿಮ್ಮ ಕೈಗಳನ್ನು ಶುಚಿ
ಮಾಡಿಕೊಳ್ಳಿರಿ; ಎರಡು ಮನಸ್ಸುಳ್ಳವರೇ, ನಿಮ್ಮ ಹೃದಯಗಳನ್ನು ನಿರ್ಮಲ ಮಾಡಿ
9 ಕೊಳ್ಳಿರಿ. ದುಃಖಿಸಿರಿ, ಗೋಳಾಡಿರಿ, ಕಣ್ಣೀರಿಡಿರಿ; ನಗುವದನ್ನು ಬಿಟ್ಟು ಗೋಳಾಡಿರಿ;
10 ಸಂತೋಷವನ್ನು ಬಿಟ್ಟು ಮನಗುಂದಿದವರಾಗಿರಿ. ಕರ್ತನ ಮುಂದೆ ನಿಮ್ಮನ್ನು ತಗ್ಗಿಸಿ
ಕೊಳ್ಳಿರಿ; ಆಗಲಾತನು ನಿಮ್ಮನ್ನು ಮೇಲಕ್ಕೆ ತರುವನು.

11 ಸಹೋದರರೇ, ಒಬ್ಬರನ್ನೊಬ್ಬರು ನಿಂದಿಸಬೇಡಿರಿ. ಯಾವನಾದರೂ ತನ್ನ ಸಹೋ
ದರನನ್ನು ನಿಂದಿಸಿದರೆ, ಅಥವಾ ತನ್ನ ಸಹೋದರನ ವಿಷಯವಾಗಿ ತೀರ್ಪುಮಾಡಿದರೆ,
ಅವನು ಧರ್ಮಶಾಸ್ತ್ರವನ್ನು ನಿಂದಿಸಿ ಧರ್ಮಶಾಸ್ತ್ರದ ವಿಷಯದಲ್ಲಿ ತೀರ್ಪುಮಾಡಿದ
ಹಾಗಾಗುವದು. ಆದರೆ ನೀನು ಧರ್ಮಶಾಸ್ತ್ರದ ವಿಷಯದಲ್ಲಿ ತೀರ್ಪುಮಾಡಿದರೆ,
ನೀನು ನ್ಯಾಯಾಧಿಪತಿಯೆನಿಸಿಕೊಳ್ಳುವಿಯೇ ಹೊರತು ಅದನ್ನು ಅನುಸರಿಸುವವನಲ್ಲ.
12 ನ್ಯಾಯವನ್ನು ವಿಧಿಸಿದ ನ್ಯಾಯಾಧಿಪತಿ ಒಬ್ಬನೇ; ಆತನೇ ಉಳಿಸುವದಕ್ಕೂ ನಾಶ
ಮಾಡುವದಕ್ಕೂ ಶಕ್ತನು. ಹೀಗಿರುವಾಗ ನಿನ್ನ ನೆರೆಯವನ ವಿಷಯದಲ್ಲಿ ತೀರ್ಪು
ಮಾಡುವದಕ್ಕೆ ನೀನು ಯಾರು?

13 ಈ ಹೊತ್ತು ಇಲ್ಲವೆ ನಾಳೆ ನಾವು ಇಂಥಾ ಪಟ್ಟಣಕ್ಕೆ ಹೋಗಿ ಅಲ್ಲಿ ಒಂದು ವರುಷ
ವಿದ್ದು ವ್ಯಾಪಾರವನ್ನು ಮಾಡಿ ಲಾಭವನ್ನು ಸಂಪಾದಿಸುತ್ತೇವೆ ಅನ್ನುವವರೇ, ಕೇಳಿರಿ.
14 ನಾಳೆ ಏನಾಗುವದೋ ನಿಮಗೆ ತಿಳಿಯದು. ನಿಮ್ಮ ಜೀವಮಾನವು ಎಂಥಾದ್ದು?
ನೀವು ಸ್ವಲ್ಪ ಹೊತ್ತು ಕಾಣಿಸಿಕೊಂಡು ಆ ಮೇಲೆ ಕಾಣದೆಹೋಗುವ ಹಬೆಯಂತಿರು

[1] ಕೀರ್ತನೆ ೧೩೮, ೬; ಸಾಮತಿ ೩, ೩೪.

ತ್ತೀರಿ. ಆದದರಿಂದ ನೀವು ಅಂಥಾ ಮಾತನ್ನು ಬಿಟ್ಟು, ದೇವರ ಚಿತ್ತವಾದರೆ ನಾವು 15
ಬದುಕಿ ಈ ಕೆಲಸವನ್ನಾಗಲಿ ಆ ಕೆಲಸವನ್ನಾಗಲಿ ಮಾಡುವೆವು ಎಂದು ಹೇಳಬೇಕು.
ಹೀಗೆ ಹೇಳದೆ, ನೀವು ಅಹಂಭಾವದಿಂದ ಹೊಗಳಿಕೊಳ್ಳುತ್ತೀರಿ. ಅಂಥಾ ಹೊಗಳಿಕೆ 16
ಯೆಲ್ಲಾ ಕೆಟ್ಟದ್ದೇ. ಹೀಗಿರುವದರಿಂದ ಒಳ್ಳೇದನ್ನು ಮಾಡಬೇಕೆಂದು ತಿಳಿದು ಅದನ್ನು 17
ಮಾಡದೆ ಇರುವವನು ಪಾಪಕ್ಕೊಳಗಾಗುತ್ತಾನೆ.

ಐಶ್ವರ್ಯವಂತರು ಮಾಡುವ ಬಲಾತ್ಕಾರದ ಖಂಡನೆ.

ಧನಿಕರೇ, ಕೇಳಿರಿ; ನಿಮಗೆ ಬರುವ ದುರ್ದಶೆಗಳಿಗಾಗಿ ಕಣ್ಣೀರಿಡಿರಿ, ಗೋಳಾಡಿರಿ. **5**
ನಿಮ್ಮ ಧನವು ನಾಶವಾಗಿದೆ, ನಿಮ್ಮ ಬಟ್ಟೆಗಳಿಗೆ ನುಸಿಹಿಡಿದಿದೆ. ನಿಮ್ಮ ಚಿನ್ನ ಬೆಳ್ಳಿ 2, 3
ಗಳು ಮಣ್ಣು ಹಿಡಿದವೆ; ಆ ಮಣ್ಣೇ ನಿಮಗೆ ಸಾಕ್ಷಿಯಾಗಿದ್ದು ಬೆಂಕಿಯಂತೆ ನಿಮ್ಮ
ಮಾಂಸವನ್ನು ನುಂಗಿಬಿಡುವದು. ಅಂತ್ಯದಿವಸಗಳು ಬಂದಾಗ್ಯೂ ದ್ರವ್ಯವನ್ನು ಕೂಡಿಸಿ
ಇಟ್ಟುಕೊಂಡಿದ್ದೀರಿ. ನಿಮ್ಮ ಪೈರನ್ನು ಕೊಯಿದವರ ಕೂಲಿಯನ್ನು ನೀವು ಅನ್ಯಾಯ 4
ವಾಗಿ ಹಿಡುಕೊಂಡಿದ್ದೀರಿ. ಅಗೋ, ಆ ಕೂಲಿ ನಿಮ್ಮ ಮೇಲೆ ಕೂಗಿಕೊಳ್ಳುತ್ತದೆ;
ಮತ್ತು ಕೊಯಿದವರ ಕೂಗು ಸಕಲಸೇನಾಧಿಪತಿಯಾಗಿರುವ ಕರ್ತನ ಕಿವಿಗಳಲ್ಲಿ
ಬಿದ್ದಿದೆ. ಭೂಲೋಕದಲ್ಲಿ ನೀವು ಅತಿಭೋಗಿಗಳಾಗಿ ಬದುಕಿ ಮನಸ್ಸು ಬಂದಂತೆ ನಡ 5
ಕೊಂಡಿದ್ದೀರಿ. ಕೊಲೆಯಾಗುವ ದಿವಸ ಬಂದಾಗ್ಯೂ ನಿಮ್ಮನ್ನು ಕೊಬ್ಬಿಸಿಕೊಂಡಿದ್ದೀರಿ.
ನೀತಿವಂತನಿಗೆ ಮರಣದಂಡನೆಯನ್ನು ವಿಧಿಸಿ ಅವನನ್ನು ಕೊಂದುಹಾಕಿದ್ದೀರಿ; ಅವನು 6
ನಿಮ್ಮನ್ನು ಎದುರಾಯಿಸುವವನಲ್ಲ.

ಹಿಂಸೆ ಪಡುವ ಕ್ರೈಸ್ತರಿಗೆ ಪ್ರೋತ್ಸಾಹವು.

ಸಹೋದರರೇ, ಕರ್ತನು ಪ್ರತ್ಯಕ್ಷನಾಗುವ ತನಕ ದೀರ್ಘಶಾಂತಿಯಿಂದಿರ್ರಿ. ವ್ಯವ 7
ಸಾಯಗಾರನನ್ನು ನೋಡಿರಿ; ಅವನು ಭೂಮಿಯ ಬೆಲೆಯುಳ್ಳ ಫಲಕ್ಕಾಗಿ ಕಾದಿದ್ದು
ಮುಂಗಾರು ಹಿಂಗಾರು ಮಳೆಗಳು ಬರುವ ತನಕ ದೀರ್ಘಶಾಂತಿಯಿಂದಿರುವನು. ನೀವೂ 8
ದೀರ್ಘಶಾಂತಿಯಿಂದಿರ್ರಿ; ನಿಮ್ಮ ಹೃದಯಗಳನ್ನು ದೃಢಪಡಿಸಿಕೊಳ್ಳಿರಿ, ಕರ್ತನ ಪ್ರತ್ಯಕ್ಷ
ತೆಯು ಹತ್ತರವಾಯಿತು. ಸಹೋದರರೇ, ನೀವು ಒಬ್ಬರ ಮೇಲೊಬ್ಬರು ಗುಣಗುಟ್ಟ 9
ಬೇಡಿರಿ; ನ್ಯಾಯವಿಚಾರಣೆಗೆ ಗುರಿಯಾದೀರಿ. ಅಗೋ, ನ್ಯಾಯಾಧಿಪತಿಯು ಬಾಗ
ಲಿನ ಹತ್ತರದಲ್ಲೇ ನಿಂತಿದ್ದಾನೆ. ಕರ್ತನ ಹೆಸರಿನಿಂದ ಮಾತಾಡಿದ ಪ್ರವಾದಿಗಳನ್ನೇ 10
ಬಾಧೆಯನ್ನು ತಾಳ್ಮೆಯಿಂದ ಸಹಿಸಿಕೊಳ್ಳುವದರಲ್ಲಿ ಮಾದಿರಿ ಮಾಡಿಕೊಳ್ಳಿರಿ. ತಾಳಿ 11
ಕೊಂಡಿರುವವರನ್ನು ಧನ್ಯರೆಂದು ಹೇಳುತ್ತೇವಲ್ಲವೇ. ನೀವು ಯೋಬನಲ್ಲಿದ್ದ ತಾಳ್ಮೆಯ
ವಿಷಯವಾಗಿ ಕೇಳಿ ದೇವರು ಅವನಿಗೆ ಅಂತ್ಯದಲ್ಲಿ ಮಾಡಿದ್ದನ್ನು ನೋಡಿ, ದೇವರು ಕರು
ಣಾಸಾಗರನೂ ದಯಾಳುವೂ ಆಗಿದ್ದಾನೆಂದು ತಿಳಿದಿದ್ದೀರಷ್ಟೆ.

ಬೇರೆ ಬೇರೆ ವಿಷಯಗಳನ್ನು ಕುರಿತದ್ದು.

12 ಮುಖ್ಯವಾಗಿ, ನನ್ನ ಸಹೋದರರೇ, ಆಣೆ ಇಡಲೇ ಬೇಡಿರಿ; ಆಕಾಶದ ಮೇಲಾಗಲಿ ಭೂಮಿಯ ಮೇಲಾಗಲಿ ಇನ್ನ್ಯಾತರ ಮೇಲಾಗಲಿ ಆಣೆ ಇಡಬೇಡಿರಿ. ಹೌದೆಂದು ಹೇಳಬೇಕಾದರೆ ಹೌದೆನ್ನಿರಿ, ಅಲ್ಲವೆನ್ನಬೇಕಾದರೆ ಅಲ್ಲವೆನ್ನಿರಿ; ಹೀಗಾದರೆ, ನೀವು ನ್ಯಾಯವಿಚಾರಣೆಗೆ ಗುರಿಯಾಗುವದಿಲ್ಲ.

13 ನಿಮ್ಮಲ್ಲಿ ಬಾಧೆಪಡುವವನು ಇದ್ದಾನೋ? ಅವನು ದೇವರನ್ನು ಪ್ರಾರ್ಥಿಸಲಿ. ನಿಮ್ಮಲ್ಲಿ 14 ಸಂತೋಷಪಡುವವನಿದ್ದಾನೋ? ಅವನು ಕೀರ್ತನೆ ಹಾಡಲಿ. ನಿಮ್ಮಲ್ಲಿ ಅಸ್ವಸ್ಥನಾಗಿರುವವನು ಇದ್ದಾನೋ? ಅವನು ಸಭೆಯ ಹಿರಿಯರನ್ನು ಕರೇಕಳುಹಿಸಲಿ; ಅವರು ಕರ್ತನ ಹೆಸರಿನಿಂದ ಅವನಿಗೆ ಎಣ್ಣೆ ಹಚ್ಚಿ ಅವನಿಗೋಸ್ಕರ ದೇವರನ್ನು ಪ್ರಾರ್ಥಿಸಲಿ. 15 ನಂಬಿಕೆಯಿಂದ ಮಾಡಿದ ಪ್ರಾರ್ಥನೆಯು ರೋಗಿಯನ್ನು ರಕ್ಷಿಸುವದು; ಕರ್ತನು ಅವನನ್ನು ಎಬ್ಬಿಸುವನು; ಮತ್ತು ಪಾಪಮಾಡಿದವನಾಗಿದ್ದರೆ, ಅದು ಪರಿಹಾರವಾಗುವದು. 16 ನೀವು ಸ್ವಸ್ಥವಾಗುವಂತೆ ನಿಮ್ಮ ಪಾಪಗಳನ್ನು ಒಬ್ಬರಿಗೊಬ್ಬರು ಅರಿಕೆಮಾಡಿ ಒಬ್ಬರೊಬ್ಬರಿಗೋಸ್ಕರ ದೇವರನ್ನು ಪ್ರಾರ್ಥಿಸಿರಿ; ನೀತಿವಂತನ ಅತ್ಯಾಸಕ್ತಿಯುಳ್ಳ ವಿಜ್ಞಾಪನೆಯು 17 ಬಹು ಬಲವಾಗಿದೆ. ಎಲೀಯನು ನಮ್ಮಂಥಾ ಸ್ವಭಾವವುಳ್ಳವನಾಗಿದ್ದನು; ಅವನು ಮಳೆ ಬರಬಾರದೆಂದು ಬಹಳವಾಗಿ ಪ್ರಾರ್ಥಿಸಲು, ಮೂರು ವರುಷ ಆರು ತಿಂಗಳ ವರೆಗೂ 18 ಮಳೆ ಬೀಳಲಿಲ್ಲ. ತಿರಿಗಿ ಅವನು ಪ್ರಾರ್ಥನೆ ಮಾಡಲು, ಮಳೆ ಬಂತು, ಭೂಮಿಯ ಮೇಲೆ ಬೆಳೆಯಾಯಿತು.

19 ನನ್ನ ಸಹೋದರರೇ, ನಿಮ್ಮಲ್ಲಿ ಒಬ್ಬನು ಸತ್ಯಮಾರ್ಗವನ್ನು ತಪ್ಪಿಹೋಗಿರಲಾಗಿ 20 ಮತ್ತೊಬ್ಬನು ಅವನನ್ನು ಸನ್ಮಾರ್ಗಕ್ಕೆ ತಂದರೆ—ಒಬ್ಬ ಪಾಪಿಯನ್ನು ತಪ್ಪಾದ ಮಾರ್ಗದಿಂದ ತಿರುಗಿಸಿದವನು ಅವನ ಪ್ರಾಣವನ್ನು ಮರಣಕ್ಕೆ ತಪ್ಪಿಸಿ ಬಹು ಪಾಪಗಳನ್ನು ಮುಚ್ಚಿದವನಾದನೆಂದು ತಿಳುಕೊಳ್ಳಿರಿ.

# THE FIRST EPISTLE OF SAINT PETER

# ಪೇತ್ರನು ಬರೆದ ಮೊದಲನೇ ಪತ್ರಿಕೆ

### ಒಕ್ಕಣೆ.

1 ಯೇಸು ಕ್ರಿಸ್ತನ ಅಪೊಸ್ತಲನಾದ ಪೇತ್ರನು ಪೊಂತ ಗಲಾತ್ಯ ಕಪ್ಪದೋಕ್ಯ ಆಸ್ಯ ಬಿಥೂನ್ಯ ಎಂಬ ಸೀಮೆಗಳಲ್ಲಿ ಚದರಿರುವಂಥಾ ಪ್ರವಾಸಿಗಳಾದ ದೇವಜನರಿಗೆ, 2 ಅಂದರೆ ಪವಿತ್ರಾತ್ಮನಿಂದ ಪ್ರತಿಷ್ಠಿಸಲ್ಪಟ್ಟವರಾಗಿ ದೇವರ ವಾಕ್ಯಕ್ಕೆ ವಿಧೇಯರಾಗುವದಕ್ಕೂ ಯೇಸು ಕ್ರಿಸ್ತನ ರಕ್ತದಿಂದ ಪ್ರೋಕ್ಷಿತರಾಗುವದಕ್ಕೂ ತಂದೆಯಾದ ದೇವರ ಭವಿಷ್ಯದ್ ಜ್ಞಾನಾನುಸಾರವಾಗಿ ಆರಿಸಿಕೊಳ್ಳಲ್ಪಟ್ಟವರಿಗೆ, ಬರೆಯುವದೇನಂದರೆ—ನಿಮಗೆ ಕೃಪೆಯೂ ಶಾಂತಿಯೂ ಹೆಚ್ಚೆಚ್ಚಾಗಿ ದೊರೆಯಲಿ.

### ಕ್ರೈಸ್ತರಿಗೆ ಇರುವ ಉತ್ಕೃಷ್ಟವಾದ ನಿರೀಕ್ಷೆಯನ್ನು ಕುರಿತದ್ದು.

3 ನಮ್ಮ ಕರ್ತನಾದ ಯೇಸು ಕ್ರಿಸ್ತನ ತಂದೆಯೂ ದೇವರೂ ಆಗಿರುವಾತನಿಗೆ ಸ್ತೋತ್ರ ವಾಗಲಿ. ಆತನು ಯೇಸು ಕ್ರಿಸ್ತನನ್ನು ಸತ್ತವರೊಳಗಿಂದ ಎಬ್ಬಿಸಿದ್ದರಲ್ಲಿ ತನ್ನ ಮಹಾ ಕರುಣಾನುಸಾರವಾಗಿ ನಮ್ಮನ್ನು ತಿರಿಗಿ ಜೀವಿಸುವಂತೆ ಮಾಡಿ[1] ಜೀವಕರವಾದ ನಿರೀಕ್ಷೆ ಯನ್ನು ನಮ್ಮಲ್ಲಿ ಹುಟ್ಟಿಸಿ, 4 ನಮ್ಮನ್ನು ಲಯ ಕಳಂಕ ಕ್ಷಯಗಳಿಲ್ಲದ ಬಾಧ್ಯತೆಯನ್ನು ಎದುರುನೋಡುವವರನ್ನಾಗಿ ಮಾಡಿದನು. ಆ ಬಾಧ್ಯತೆಯು ನಿಮಗೋಸ್ಕರ ಪರಲೋಕ ದಲ್ಲಿ ಇಟ್ಟಿರುವದು. 5 ಅಂತ್ಯಕಾಲದಲ್ಲಿ ಪ್ರತ್ಯಕ್ಷವಾಗುವದಕ್ಕೆ ಸಿದ್ಧವಾಗಿರುವ[2] ರಕ್ಷ ಣೆಯು ನಂಬುವವರಾದ ನಿಮಗೆ ದೊರೆಯಬೇಕೆಂದು ದೇವರು ನಿಮ್ಮನ್ನು ತನ್ನ ಬಲದಿಂದ ಕಾಯುತ್ತಾನೆ. 6 ನೀವು ಸದ್ಯಕ್ಕೆ ಸ್ವಲ್ಪಕಾಲ ದೇವರ ಚಿತ್ತಾನುಸಾರ ನಾನಾ ಕಷ್ಟಗಳ ಲ್ಲಿದ್ದು ದುಃಖಿಸುವವರಾದಾಗ್ಯೂ, ಆ ಪದವಿಯನ್ನು ಆಲೋಚಿಸಿ ಹರ್ಷಿಸುವವರಾಗಿ ದ್ದೀರಿ. 7 ಭಂಗಾರವು ನಾಶವಾಗುವಂಥಾದ್ದಾಗಿದ್ದರೂ ಅದನ್ನು ಬೆಂಕಿಯಲ್ಲಿ ಪುಟಾಹಾಕಿ ಶೋಧಿಸುವದುಂಟಷ್ಟೆ. ಭಂಗಾರಕ್ಕಿಂತ ಬಹು ಅಮೂಲ್ಯವಾಗಿರುವ ನಿಮ್ಮ ನಂಬಿ ಕೆಯು ಈ ಕಷ್ಟಗಳಿಂದ ಶೋಧಿತವಾಗಿ ಯೇಸು ಕ್ರಿಸ್ತನು ಪ್ರತ್ಯಕ್ಷನಾಗುವಾಗ

---

[1] ಅಥವಾ, ನಮಗೆ ಪುನರ್ಜನ್ಮವನ್ನು ಅನುಗ್ರಹಿಸಿ.

[2] ಅಥವಾ, ಸಿದ್ಧವಾಗಿದ್ದ; ೨೦ನೇ ವಚನವನ್ನು ಮತ್ತು ೨ ಕೊರಿಂಥ. ೬, ೨ ನೋಡು.

8-9 ನಿಮಗೆ ಕೀರ್ತಿ ಪ್ರಭಾವ ಮಾನಸಗಳನ್ನು ಉಂಟುಮಾಡುವದು. ನೀವು ಆತನನ್ನು ಕಣ್ಣಾರೆ ನೋಡಲಿಲ್ಲವಾದರೂ ಆತನನ್ನು ಪ್ರೀತಿಸುತ್ತೀರಿ. ನೀವು ಈಗ ಆತನನ್ನು ಕಾಣದಿದ್ದರೂ ಆತನಲ್ಲಿ ನಂಬಿಕೆಯಿಟ್ಟು ನಿಮ್ಮ ನಂಬಿಕೆಯ ಅಂತ್ಯಫಲವಾಗಿರುವ ಆತ್ಮ ರಕ್ಷಣೆಯನ್ನು ಹೊಂದುವವರಾಗಿ ಹೇಳಲಶಕ್ಯವಾದಂಥಾ ಪ್ರಭಾವವುಳ್ಳ ಸಂತೋಷದಿಂದ ಹರ್ಷಿಸುತ್ತೀರಿ.

10 ದೇವರು ನಿಮಗೆ ತೋರಿಸಿರುವ ಕೃಪೆಯನ್ನು ಕುರಿತು ಮುಂತಿಳಿಸಿದ ಪ್ರವಾದಿಗಳು
11 ಈ ರಕ್ಷಣೆಯ ವಿಷಯದಲ್ಲಿ ಸೂಕ್ಷ್ಮವಾಗಿ ವಿಚಾರಿಸಿ ಪರಿಶೋಧನೆ ಮಾಡಿದರು. ತಮ್ಮಲ್ಲಿದ್ದ ಕ್ರಿಸ್ತನ ಆತ್ಮನು ಕ್ರಿಸ್ತನಿಗೆ ಬರಬೇಕಾದ ಬಾಧೆಗಳನ್ನೂ ಅವುಗಳ ತರುವಾಯ ಉಂಟಾಗುವ ಪ್ರಭಾವವನ್ನೂ ಮುಂದಾಗಿ ತಿಳಿಸಿದಾಗ, ಆತನು ಯಾವ ಕಾಲವನ್ನು ಇಲ್ಲವೆ ಎಂಥಾ ಕಾಲವನ್ನು ಸೂಚಿಸುವನೆಂಬುವದನ್ನು ಅವರು ಪರಿಶೋಧನೆ ಮಾಡಿದರು.
12 ಈ ಸಂಗತಿಗಳನ್ನು ಮುಂತಿಳಿಸುವದರಲ್ಲಿ ತಮಗೋಸ್ಕರವಲ್ಲ ನಿಮಗೋಸ್ಕರವೇ ಸೇವೆ ಮಾಡುವವರಾಗಿದ್ದರೆಂಬುವದು ಅವರಿಗೆ ಪ್ರಕಟವಾಯಿತು. ಅವರು ಮುಂದಾಗಿ ಹೇಳಿದ ಸಂಗತಿಗಳೇ ಈಗ ಸಂಭವಿಸಿದವು ಎಂಬ ವರ್ತಮಾನವು ಪರಲೋಕದಿಂದ ಕಳುಹಿಸಲ್ಪಟ್ಟ ಪವಿತ್ರಾತ್ಮನ ಬಲದಿಂದ ನಿಮಗೆ ಸುವಾರ್ತೆಯನ್ನು ಸಾರಿದವರ ಮೂಲಕ ನಿಮಗೆ ಪ್ರಸಿದ್ಧಿ ಮಾಡಲ್ಪಟ್ಟಿದೆ. ದೇವದೂತರಿಗೂ ಈ ಸಂಗತಿಗಳನ್ನು ಲಕ್ಷ್ಯವಿಟ್ಟು ನೋಡಬೇಕೆಂಬ ಅಪೇಕ್ಷೆ ಉಂಟು.

### ಕ್ರೈಸ್ತರು ತಮಗುಂಟಾದ ಘನವಾದ ಸ್ಥಿತಿಯನ್ನೂ ಪರಲೋಕನಿರೀಕ್ಷೆಯನ್ನೂ ಲಕ್ಷಿಸಿ ಯೋಗ್ಯರಾಗಿ ನಡೆಯಬೇಕೆಂಬ ಬೋಧನೆ.

13 ಆದದರಿಂದ ನಿಮ್ಮ ಮನಸ್ಸನ್ನು ದೃಢಮಾಡಿಕೊಂಡು[1] ಸ್ವಸ್ಥಚಿತ್ತರಾಗಿದ್ದು ಯೇಸು ಕ್ರಿಸ್ತನು ಪ್ರತ್ಯಕ್ಷನಾಗುವಾಗ ನಿಮಗೆ ದೊರಕುವ ಭಾಗ್ಯದ ಮೇಲೆ ನಿಮ್ಮ ನಿರೀಕ್ಷೆಯನ್ನು
14 ಸಂಪೂರ್ಣವಾಗಿ ಇಡಿರಿ. ನೀವು ಮುಂಚೆ ಅಜ್ಞಾನಿಗಳಾಗಿದ್ದಾಗ ನಿಮಗಿದ್ದ ದುರಾಶೆ
15 ಗಳನ್ನು ಅನುಸರಿಸಿ ನಡೆಯುವವರಾಗಿರದೆ, ನಿಮ್ಮನ್ನು ಕರೆದಾತನು ಪರಿಶುದ್ಧನಾಗಿರುವ ಪ್ರಕಾರವೇ ನೀವೂ ವಿಧೇಯರಿಗೆ ತಕ್ಕಂತೆ ನಿಮ್ಮ ಎಲ್ಲಾ ನಡವಳಿಕೆಯಲ್ಲಿ ಪರಿಶುದ್ಧ
16 ರಾಗಿರ್ರಿ. ನಾನು ಪರಿಶುದ್ಧನಾಗಿರುವ ಕಾರಣ ನೀವೂ ಪರಿಶುದ್ಧರಾಗಿರಿ ಎಂದು[2] ಬರೆದದೆಯಲ್ಲಾ.

17 ಪ್ರತಿಯೊಬ್ಬನ ಕೆಲಸವನ್ನು ನೋಡಿ ಪಕ್ಷಪಾತವಿಲ್ಲದೆ ತೀರ್ಪುಮಾಡುವಾತನನ್ನು ನೀವು ತಂದೆಯೆಂದು ಕರೆಯುವವರಾಗಿರಲಾಗಿ, ಈ ಲೋಕದಲ್ಲಿ ನಿಮ್ಮ ಪ್ರವಾಸಕಾಲ
18 ವನ್ನು ಭಯಭಕ್ತಿಯುಳ್ಳವರಾಗಿ ಕಳೆಯಿರಿ. ನಿಮ್ಮ ಹಿರಿಯರು ಕಲಿಸಿಕೊಟ್ಟ ವ್ಯರ್ಥವಾದ ನಡವಳಿಕೆಯಿಂದ ನಿಮಗೆ ಬಿಡುಗಡೆಯಾದದ್ದು ಬೆಳ್ಳಿ ಭಂಗಾರ ಮೊದಲಾದ ನಶಿಸಿ
19 ಹೋಗುವ ವಸ್ತುಗಳಿಂದಲ್ಲ, ಪೂರ್ಣಾಂಗವಾದ ನಿಷ್ಕಳಂಕ ಯಜ್ಞಪಶುವಿನ ರಕ್ತ

---

[1] ಮೂಲ: ಮನಸ್ಸಿನ ನಡುವನ್ನು ಕಟ್ಟಿಕೊಂಡು. [2] ಲೇವಿಕ. ೧೧, ೪೪; ೧೯, ೨.

ದಿಂದಲೋ ಎಂಬಂತೆ[1] ಕ್ರಿಸ್ತನ ಅಮೂಲ್ಯವಾದ ರಕ್ತದಿಂದಲೇ ಎಂದು ಬಲ್ಲಿರಲ್ಲವೇ. ಆತನು ಜಗದುತ್ಪತ್ತಿಗೆ ಮೊದಲೇ ಗೊತ್ತುಮಾಡಲ್ಪಟ್ಟು ಅಂತ್ಯಕಾಲದಲ್ಲಿ ನಿಮಗಾಗಿ 20 ಪ್ರತ್ಯಕ್ಷನಾದನು. ಆತನನ್ನು ಜೀವಂತನಾಗಿ ಎಬ್ಬಿಸಿ ಆತನಿಗೆ ಪ್ರಭಾವವನ್ನು ಕೊಟ್ಟ 21 ದೇವರಲ್ಲಿ ನೀವು ಆತನ ಮೂಲಕ ನಂಬಿಕೆಯಿಟ್ಟವರಾದಿರಷ್ಟೆ.

ನೀವು ಸತ್ಯೋಪದೇಶಕ್ಕೆ ವಿಧೇಯರಾಗಿದ್ದು ನಿಮ್ಮ ಆತ್ಮಗಳನ್ನು ಶುದ್ಧಮಾಡಿಕೊಂಡ 22 ದ್ದರಿಂದ ನಿಷ್ಕಪಟವಾದ ಸಹೋದರಸ್ನೇಹವುಳ್ಳವರಾಗಿರತಕ್ಕದ್ದು. ಹೀಗಿರಲಾಗಿ ಒಬ್ಬರ ನ್ನೊಬ್ಬರು ಹೃದಯಪೂರ್ವಕವಾಗಿಯೂ ಯಥಾರ್ಥವಾಗಿಯೂ ಪ್ರೀತಿಸಿರಿ. ನೀವು 23 ಪುನರ್ಜನ್ಮ ಹೊಂದಿದವರಾಗಿದ್ದೀರಲ್ಲಾ; ಆ ಜನ್ಮವು ನಾಶವಾಗುವ ಬೀಜದಿಂದ ಉಂಟಾ ದದ್ದಲ್ಲ, ನಾಶವಾಗದ ಬೀಜದಿಂದಲೇ ಉಂಟಾದದ್ದು. ಅದು ದೇವರ ಸದಾಜೀವವುಳ್ಳ ವಾಕ್ಯದ ಮೂಲಕವಾಗಿ ಉಂಟಾಯಿತು.

ನರಜಾತಿಯೆಲ್ಲಾ ಹುಲ್ಲಿನ ಹಾಗಿದೆ, 24
ಅದರ ಪ್ರಭಾವವೆಲ್ಲಾ ಹುಲ್ಲಿನ ಹೂವಿನಂತದೆ.
ಹುಲ್ಲು ಒಣಗಿಹೋಗುವದು, ಹೂವು ಉದುರಿಹೋಗುವದು;
ಕರ್ತನ ಮಾತೋ ಸದಾಕಾಲವೂ ಇರುವದು[2] 25

ಎಂದು ಹೇಳಿದೆಯಷ್ಟೆ. ಆ ಮಾತು ಯಾವದಂದರೆ, ನಿಮಗೆ ಸಾರಲ್ಪಟ್ಟ ಸುವಾರ್ತಾ ವಾಕ್ಯವೇ.

ಆದಕಾರಣ ಎಲ್ಲಾ ಕೆಟ್ಟತನವನ್ನೂ ಎಲ್ಲಾ ವಂಚನೆಯನ್ನೂ ಕಪಟವನ್ನೂ ಹೊಟ್ಟೆ **2** ಕಿಚ್ಚನ್ನೂ ಎಲ್ಲಾ ತರದ ನಿಂದೆಯನ್ನೂ ವಿಸರ್ಜಿಸಿ, ಹಸುಮಕ್ಕಳಂತೆ ದೇವರ ವಾಕ್ಯವೆಂಬ 2 ಶುದ್ಧ ಹಾಲನ್ನು ಬಯಸಿರಿ; ಅದರಿಂದ ಬೆಳೆಯುತ್ತಾ ರಕ್ಷಣೆಯನ್ನು ಹೊಂದುವಿರಿ; ಕರ್ತನು ದಯಾಳುವಾಗಿದ್ದಾನೆಂಬುವದನ್ನು ನೀವು ಅನುಭವದಿಂದ ತಿಳುಕೊಂಡಿದ್ದೀರ 3 ಲ್ಲವೋ[3]? ನೀವು ಜೀವವುಳ್ಳ ಕಲ್ಲಾಗಿರುವ ಆತನನ್ನು ಸೇರಿಕೊಂಡಿದ್ದೀರಿ. ಆ ಕಲ್ಲನ್ನು 4 ಮನುಷ್ಯರು ನಿರಾಕರಿಸಿದಾಗ್ಯೂ, ದೇವರು ಅದನ್ನು ಆಯಲ್ಪಟ್ಟದ್ದೂ ಮಾನ್ಯವಾದದ್ದೂ ಎಂದು ಎಣಿಸಿದನು. ನೀವು ಸಹ ಜೀವವುಳ್ಳ ಕಲ್ಲುಗಳಾಗಿದ್ದು ಆತ್ಮಸಂಬಂಧವಾದ 5 ಮಂದಿರವಾಗಲಿಕ್ಕೆ ಕಟ್ಟಲ್ಪಡುತ್ತಾ ಇದ್ದೀರಿ, ಮತ್ತು ಯೇಸು ಕ್ರಿಸ್ತನ ಮೂಲಕ ದೇವ ರಿಗೆ ಸಮರ್ಪಕವಾದ ಆತ್ಮೀಯ ಯಜ್ಞಗಳನ್ನು ಸಮರ್ಪಿಸುವದಕ್ಕೆ ಯಾಜಕವರ್ಗದವ ರಾಗಿದ್ದೀರಿ.

ಇಗೋ, ಚಿಯೋನಿನಲ್ಲಿ ಮೂಲೆಗಲ್ಲನ್ನು ಇಡುತ್ತೇನೆ; 6
ಅದು ಆಯಲ್ಪಟ್ಟದ್ದು, ಮಾನ್ಯವಾದದ್ದು;
ಅದರ ಮೇಲೆ ನಂಬಿಕೆಯಿಡುವವನು ಆಶಾಭಂಗಕ್ಕೆ ಗುರಿಯಾಗುವದೇ ಇಲ್ಲ[4]

ಎಂದು ಶಾಸ್ತ್ರದಲ್ಲಿ ಬರೆದದೆ. ಆದದರಿಂದ ನಂಬುವವರಾದ ನಿಮಗೇ ಈ ಮಾನ 7 ಉಂಟು. ನಂಬದೆಯಿರುವವರಿಗೋ—

---

1) ಹೊರಡೋಣ ೧೨, ೫; ಲೇವಿಕ ೨೨, ೨೦.
2) ಯೆಶಾಯ ೪೦, ೬—೮.
3) ಕೀರ್ತನೆ ೩೪, ೮.
4) ಯೆಶಾಯ ೨೮, ೧೬.

ಮನೇ ಕಟ್ಟುವವರು ಬೇಡವೆಂದು ಬಿಟ್ಟ ಕಲ್ಲೇ
ಮುಖ್ಯವಾದ ಮೂಲೆಗಲ್ಲಾಯಿತು[1]

ಎಂತಲೂ

8 ಅದು ಕಾಲು ಎಡವುವ ಕಲ್ಲು, ವಿಘ್ನವಾಗುವ ಬಂಡೆ[2]

ಎಂತಲೂ ಬರೆದಿರುವ ಮಾತು ಸರಿಬೀಳುತ್ತದೆ. ಅವರು ದೇವರ ವಾಕ್ಯವನ್ನು ನಂಬಲೊಲ್ಲದೆ ಇರುವದರಿಂದ ಆ ಕಲ್ಲನ್ನು ಹಾಯ್ದು ಬೀಳುತ್ತಾರೆ; ಅದಕ್ಕಾಗಿಯೇ ಅವರು ನೇಮಕವಾದರು. 9 ನೀವಾದರೋ ದೇವರಾದುಕೊಂಡ ಜನಾಂಗವೂ ರಾಜವಂಶಸ್ಥರಾದ ಯಾಜಕರೂ ಪ್ರತಿಷ್ಠಿತವಾದ ಜನವೂ ದೇವರ ಸ್ವಕೀಯ ಪ್ರಜೆಯೂ ಆಗಿದ್ದು[3], ನಿಮ್ಮನ್ನು ಕತ್ತಲೆಯೊಳಗಿಂದ ಕರೆದು ತನ್ನ ಆಶ್ಚರ್ಯಕರವಾದ ಬೆಳಕಿನಲ್ಲಿ ಸೇರಿಸಿದಾತನ ಗುಣಾತಿಶಯಗಳನ್ನು ಪ್ರಚಾರಮಾಡುವವರಾಗಿದ್ದೀರಿ. 10 ಮೊದಲು ನೀವು ಪ್ರಜೆಯಾಗಿರಲಿಲ್ಲ, ಈಗ ದೇವರ ಪ್ರಜೆಯಾಗಿದ್ದೀರಿ; ಮೊದಲು ಕರುಣೆ ಹೊಂದಿರಲಿಲ್ಲ, ಈಗ ಕರುಣೆ ಹೊಂದಿದವರಾಗಿದ್ದೀರಿ[4].

### ಪ್ರಜೆಗಳೂ ಸೇವಕರೂ ಗಂಡಹೆಂಡರೂ ನಡೆಯಬೇಕಾದ ರೀತಿ.

11 ಪ್ರಿಯರೇ, ಪ್ರವಾಸಿಗಳೂ ಪರದೇಶಸ್ಥರೂ ಆಗಿರುವ ನೀವು ನಿಮ್ಮ ಆತ್ಮದ ಮೇಲೆ ಯುದ್ಧ ಮಾಡುವ ಶಾರೀರಿಕ ಅಭಿಲಾಷೆಗಳಿಗೆ ದೂರವಾಗಿರಬೇಕೆಂದು ನಿಮ್ಮನ್ನು ಎಚ್ಚರಿಸುತ್ತೇನೆ. 12 ನಿಮ್ಮ ನಡವಳಿಕೆಯು ಅನ್ಯಜನರ ಮಧ್ಯದಲ್ಲಿ ಯೋಗ್ಯವಾಗಿರಲಿ; ಆಗ ಅವರು ಯಾವ ವಿಷಯದಲ್ಲಿ ನಿಮ್ಮನ್ನು ಅಕ್ರಮಕಾರರೆಂದು ನಿಂದಿಸುತ್ತಾರೋ ಆ ವಿಷಯದಲ್ಲಿಯೇ ನಿಮ್ಮ ಸತ್ಕ್ರಿಯೆಗಳನ್ನು ಕಣ್ಣಾರೆ ಕಂಡು ವಿಚಾರಣೆಯ ದಿನದಲ್ಲಿ[5] ದೇವರನ್ನು ಕೊಂಡಾಡುವರು.

13 ಮನುಷ್ಯರು ನೇಮಿಸಿರುವ ಯಾವ ಅಧಿಕಾರಕ್ಕೂ ಕರ್ತನ ನಿಮಿತ್ತ ಅಧೀನರಾಗಿರಿ. 14 ಅರಸನು ಸರ್ವಾಧಿಕಾರಿ ಎಂತಲೂ ಬೇರೆ ಅಧಿಪತಿಗಳು ಕೆಟ್ಟ ನಡತೆಯುಳ್ಳವರನ್ನು ದಂಡಿಸುವದಕ್ಕೂ ಒಳ್ಳೇ ನಡತೆಯುಳ್ಳವರನ್ನು ಪ್ರೋತ್ಸಾಹಪಡಿಸುವದಕ್ಕೂ ಅರಸನಿಂದ ಕಳುಹಿಸಲ್ಪಟ್ಟವರೆಂತಲೂ ತಿಳಿದು ಅವರಿಗೆ ಅಧೀನರಾಗಿರಿ. 15 ತಿಳಿಯದೆ ಮಾತಾಡುವ ಮೂಢಜನರ ಬಾಯಿಯನ್ನು ನಿಮ್ಮ ಒಳ್ಳೇ ನಡತೆಯಿಂದಲೇ ಕಟ್ಟಬೇಕು; ದೇವರ ಚಿತ್ತ ಹಾಗೆಯೇ ಅದೆ. 16 ನೀವು ಸ್ವತಂತ್ರರಾಗಿದ್ದಾಗ್ಯೂ ಕೆಟ್ಟತನವನ್ನು ಮರೆಮಾಜುವದಕ್ಕೆ ಆ ಸ್ವಾತಂತ್ರ್ಯವನ್ನು ಉಪಯೋಗಿಸಬೇಡಿರಿ; ನೀವು ದೇವರ ದಾಸರಾಗಿದ್ದೀರಲ್ಲಾ. 17 ಸಹೋದರರನ್ನು ಪ್ರೀತಿಸಿರಿ. ದೇವರಿಗೆ ಭಯಪಡಿರಿ. ಅರಸನನ್ನು ಸನ್ಮಾನಿಸಿರಿ.

18 ಸೇವಕರೇ, ಒಳ್ಳೆಯವರೂ ಸಾತ್ವಿಕರೂ ಆಗಿರುವ ಯಜಮಾನರಿಗೆ ಮಾತ್ರವಲ್ಲದೆ ವಕ್ರಬುದ್ಧಿಯುಳ್ಳ ಯಜಮಾನರಿಗೂ ಪೂರ್ಣ ಭಯದಿಂದ ಅಧೀನರಾಗಿರಿ. 19 ಒಬ್ಬನು ಅನ್ಯಾಯವಾಗಿ ಬಾಧೆಪಡುವವನಾಗಿದ್ದು ದೇವರು ನೋಡುತ್ತಾನೆಂದು ಅರಿತು ಆ ಕಷ್ಟ

[1] ಕೀರ್ತನೆ ೧೧೮, ೨೨. [2] ಯೆಶಾಯ ೮, ೧೪. [3] ಹೊರಡೋಣ ೧೯, ೫. ೬.
[4] ಹೋಶೇಯ ೨, ೨೩. [5] ಅಥವಾ, ದೇವರು ದರ್ಶನ ಕೊಡುವ ದಿನದಲ್ಲಿ.

ವನ್ನು ಸಹಿಸಿಕೊಂಡರೆ, ಅದು ಶ್ಲಾಘ್ಯವಾಗಿದೆ. ತಪ್ಪು ಮಾಡಿ ಗುದ್ದು ತಿನ್ನುವದರಲ್ಲಿ ನೀವು 20
ತಾಳ್ಮೆಯಿಂದಿದ್ದರೆ, ಅದರಿಂದೇನು ಕೀರ್ತಿ? ಆದರೆ ಒಳ್ಳೇದನ್ನು ಮಾಡಿ ಬಾಧೆಪಡುವದ
ರಲ್ಲಿ ನೀವು ತಾಳ್ಮೆಯಿಂದಿದ್ದರೆ, ಅದು ದೇವರ ಮುಂದೆ ಶ್ಲಾಘ್ಯವಾಗಿದೆ. ಇದಕ್ಕಾಗಿಯೇ 21
ನೀವು ಕರೆಯಲ್ಪಟ್ಟಿರಿ; ಕ್ರಿಸ್ತನು ಸಹ ನಿಮಗೋಸ್ಕರ ಬಾಧೆಯನ್ನನುಭವಿಸಿ, ನೀವು ತನ್ನ
ಹೆಜ್ಜೇಜಾಡಿನಲ್ಲಿ ನಡೆಯಬೇಕೆಂದು ಸುನಡತೆಯ ಮಾದರಿಯನ್ನು ತೋರಿಸಿ ಹೋದನು.
ಆತನು ಯಾವ ಪಾಪವನ್ನೂ ಮಾಡಲಿಲ್ಲ, ಆತನ ಬಾಯಲ್ಲಿ ಯಾವ ಕಪಟ ಮಾತೂ 22
ಸಿಕ್ಕಲಿಲ್ಲ[1]; ಬೈಯುವವರನ್ನು ಆತನು ಪ್ರತಿಯಾಗಿ ಬೈಯಲಿಲ್ಲ; ಆತನು ಬಾಧೆಯನ್ನನು 23
ಭವಿಸಿದಾಗ ಯಾರನ್ನೂ ಬೆದರಿಸದೆ, ನ್ಯಾಯವಾಗಿ ತೀರ್ಪುಮಾಡುವ ದೇವರಿಗೆ ತನ್ನ
ಕಾರ್ಯವನ್ನು ಒಪ್ಪಿಸಿದನು. ನಾವು ಪಾಪದ ಪಾಲಿಗೆ ಸತ್ತು ನೀತಿವಂತರಾಗಿ ಜೀವಿಸು 24
ವಂತೆ ಆತನು ನಮ್ಮ ಪಾಪಗಳನ್ನು ತಾನೇ ತನ್ನ ದೇಹದಲ್ಲಿ ಹೊತ್ತುಕೊಂಡು ಮರಣದ
ಕಂಬವನ್ನು ಏರಿದನು; ಆತನ ಬಾಸುಂಡೆಗಳಿಂದ ನಿಮಗೆ ಕ್ಷೇಮವಾಯಿತು. ನೀವು 25
ಕುರಿಗಳಂತೆ ದಾರಿತಪ್ಪಿ ತೊಳಲುವವರಾಗಿದ್ದಿರಿ, ಆದರೆ ಈಗ ನೀವು ತಿರುಗಿಕೊಂಡು ನಿಮ್ಮ
ಆತ್ಮಗಳಿಗೆ ಕಾಯುವ ಕುರುಬನೂ ಅಧ್ಯಕ್ಷನೂ ಆಗಿರುವಾತನ ಬಳಿಗೆ ಬಂದಿದ್ದೀರಿ.

ಅದೇ ರೀತಿಯಾಗಿ, ಸ್ತ್ರೀಯರೇ, ನಿಮ್ಮ ಗಂಡಂದಿರಿಗೆ ಅಧೀನರಾಗಿರಿ. ಅವರಲ್ಲಿ 1-2 **3**
ಕೆಲವರು ದೇವರ ವಾಕ್ಯವನ್ನು ನಂಬದವರಾದಾಗ್ಯೂ ಅವರು ಭಯಭರಿತವಾದ ನಿಮ್ಮ
ಪಾತಿವ್ರತ್ಯವನ್ನು ನೋಡಿ ವಾಕ್ಯೋಪದೇಶವಿಲ್ಲದೆ ತಮ್ಮ ಹೆಂಡತಿಯರಾದ ನಿಮ್ಮ ಸುನಡತೆ
ಯಿಂದಲೇ ಸನ್ಮಾರ್ಗಕ್ಕೆ ಬಂದಾರು. ಜಡೆ ಹೆಣೆದುಕೊಳ್ಳುವದು ಚಿನ್ನದ ಒಡವೆಗಳನ್ನು 3
ಇಟ್ಟುಕೊಳ್ಳುವದು ಬೆಲೆಯುಳ್ಳ ವಸ್ತ್ರಗಳನ್ನು ಧರಿಸಿಕೊಳ್ಳುವದು ಇವೇ ಮೊದಲಾದ
ಅಲಂಕಾರವು ನಿಮಗೆ ವಿಶೇಷವಾಗಿರಬಾರದು. ಸಾತ್ವಿಕವಾದ ಶಾಂತ ಮನಸ್ಸು ಎಂಬ 4
ಒಳಗಣ ಭೂಷಣವೇ ನಿಮಗೆ ಅಲಂಕಾರವಾಗಿರಲಿ. ಇದು ಶಾಶ್ವತವಾದದ್ದೂ ದೇವರ
ದೃಷ್ಟಿಗೆ ಬಹು ಬೆಲೆಯುಳ್ಳದ್ದೂ ಆಗಿದೆ. ಪೂರ್ವಕಾಲದಲ್ಲಿ ದೇವರ ಮೇಲೆ ನಿರೀಕ್ಷೆ 5
ಯಿಟ್ಟ ಭಕ್ತೆಯರಾದ ಸ್ತ್ರೀಯರು ಸಹ ಹೀಗೆಯೇ ತಮ್ಮನ್ನು ಅಲಂಕರಿಸಿಕೊಂಡರು.
ಅವರು ತಮ್ಮ ತಮ್ಮ ಗಂಡಂದಿರಿಗೆ ಅಧೀನರಾಗಿದ್ದು, ಯಾವ ಭೀತಿಗೆ ಘಾಬರಿಯಾಗದೆ[2]
ಒಳ್ಳೇದನ್ನೇ ಮಾಡುವವರಾಗಿದ್ದರು. ಸಾರಳು ಹಾಗೆಯೇ ಅಬ್ರಹಾಮನಿಗೆ ವಿಧೇಯ 6
ಳಾಗಿದ್ದು ಅವನನ್ನು ಯಜಮಾನನೆಂದು ಕರೆದಳು ಎಂದು[3] ಬರೆದದೆ. ನೀವು ಸಾರಳ
ಕುಮಾರ್ತೆಗಳಾದಿರಲ್ಲಾ[4].

ಅದೇ ರೀತಿಯಾಗಿ, ಪುರುಷರೇ, ಸ್ತ್ರೀಯು ಪುರುಷನಿಗಿಂತ ಬಲಹೀನಳೆಂಬುವದನ್ನು 7
ಜ್ಞಾಪಕಮಾಡಿಕೊಂಡು ನಿಮ್ಮ ಹೆಂಡತಿಯರ ಸಂಗಡ ವಿವೇಕದಿಂದ ಒಗತನ ಮಾಡಿರಿ.
ಅವರು ಜೀವವರಕ್ಕೆ ನಿಮ್ಮೊಂದಿಗೆ ಬಾಧ್ಯರಾಗಿದ್ದಾರೆಂದು ತಿಳಿದು ಅವರಿಗೆ ಮಾನವನ್ನು
ಸಲ್ಲಿಸಿರಿ. ಹೀಗೆ ನಡೆದರೆ ನಿಮ್ಮ ಪ್ರಾರ್ಥನೆಗಳಿಗೆ ಅಡ್ಡಿಯಿರುವದಿಲ್ಲ.

---

1) ಯೆಶಾಯ ೫೩, ೯. 2) ಸಾಮತಿ. ೩, ೨೫. 3) ಉತ್ಪತ್ತಿ ೧೮, ೧೨.

4) ಅಥವಾ, ಅಧೀನರಾಗಿದ್ದರು. ಸಾರಳು ..ಕುಮಾರ್ತೆಗಳಾದಿರಲ್ಲಾ; ಒಳ್ಳೇದನ್ನು ಮಾತುವವರಾಗಿದ್ದು, ಯಾವ ಭೀತಿಗೆ ಘಾಬರಿಯಾಗಬೇಡಿರಿ.

ಕ್ರೈಸ್ತರೊಳಗೆ ಪರಸ್ಪರ ಪ್ರೀತಿಯೂ, ಹಿಂಸೆಯ ಕಾಲದಲ್ಲಿ ಶಾಂತ ಮನಸ್ಸೂ ಇರಬೇಕಾದದ್ದು.

8 ಕಡೆಗೆ, ನೀವೆಲ್ಲರೂ ಏಕಮನಸ್ಸುಳ್ಳವರಾಗಿರಿ; ಪರರ ಸುಖದುಃಖಗಳಲ್ಲಿ ಸೇರುವವರಾಗಿರಿ; ಅಣ್ಣತಮ್ಮಂದಿರಂತೆ ಒಬ್ಬರನ್ನೊಬ್ಬರು ಪ್ರೀತಿಸಿರಿ; ಕರುಣೆಯೂ ದೀನಭಾವವೂ 9 ಉಳ್ಳವರಾಗಿರಿ. ಅಪಕಾರಕ್ಕೆ ಅಪಕಾರವನ್ನು ನಿಂದೆಗೆ ನಿಂದೆಯನ್ನು ಮಾಡದೆ ಆಶೀರ್ವದಿಸಿರಿ. ಇದಕ್ಕಾಗಿ ದೇವರು ನಿಮ್ಮನ್ನು ಕರೆದನಲ್ಲಾ; ಹೀಗೆ ಮಾಡುವದಾದರೆ ನೀವು ಆಶೀರ್ವಾದವನ್ನು ಬಾಧ್ಯವಾಗಿ ಹೊಂದುವಿರಿ.

10 ಜೀವದಲ್ಲಿ ಸಂತೋಷಪಟ್ಟು
ಸುದಿನಗಳನ್ನು ನೋಡುವದಕ್ಕೆ ಇಷ್ಟವುಳ್ಳವನು
ಕೆಟ್ಟದ್ದನ್ನು ನುಡಿಯದಂತೆ ತನ್ನ ನಾಲಿಗೆಯನ್ನು ಬಿಗಿಹಿಡುಕೊಳ್ಳಲಿ;
ವಂಚನೆಯ ಮಾತುಗಳನ್ನಾಡದಂತೆ ಬಾಯಿಯನ್ನು ಮುಚ್ಚಿಕೊಳ್ಳಲಿ.
11 ಅವನು ದುಷ್ಕಾರ್ಯದಿಂದ ತೊಲಗಿಹೋಗಿ ಒಳ್ಳೇದನ್ನು ಮಾಡಲಿ;
ಸಮಾಧಾನವನ್ನು ಹಾರೈಸುವವನಾಗಿ ಅದಕ್ಕೋಸ್ಕರ ಪ್ರಯತ್ನ ಮಾಡಲಿ.
12 ಯಾಕಂದರೆ ಕರ್ತನು ನೀತಿವಂತರನ್ನು ಕಟಾಕ್ಷಿಸುತ್ತಾನೆ,
ಆತನು ಅವರ ವಿಜ್ಞಾಪನೆಗಳಿಗೆ ಕಿವಿಗೊಡುತ್ತಾನೆ.
ಆದರೆ ಕೆಟ್ಟದನ್ನು ಮಾಡುವವರಿಗೆ ಕೋಪದ ಮುಖವನ್ನು ತೋರಿಸುತ್ತಾನೆ[1]
ಎಂದು ಬರೆದದೆ.

13 ನೀವು ಒಳ್ಳೇದನ್ನೇ ಮಾಡುವದರಲ್ಲಿ ಆಸಕ್ತರಾಗಿದ್ದರೆ, ನಿಮಗೆ ಕೇಡು ಮಾಡುವವರು 14 ಯಾರಿದ್ದಾರೆ? ಒಂದು ವೇಳೆ ನೀತಿಯ ನಿಮಿತ್ತವೇ ಬಾಧೆಪಟ್ಟಾಗ್ಯೂ ನೀವು ಧನ್ಯರೇ. 15 ಅವರ ಬೆದರಿಸುವಿಕೆಗೆ ಹೆದರದೆ[2], ಕರ್ತನನ್ನು, ಅಂದರೆ ಕ್ರಿಸ್ತನನ್ನು[3], ನಿಮ್ಮ ಹೃದಯಗಳಲ್ಲಿ ಪ್ರತಿಷ್ಠೆಪಡಿಸಿರಿ[4]. ನಿಮ್ಮಲ್ಲಿರುವ ನಿರೀಕ್ಷೆಗೆ ಆಧಾರವೇನೆಂದು ಕೇಳುವವರೆಲ್ಲರಿಗೆ ಉತ್ತರ ಹೇಳುವದಕ್ಕೆ ಯಾವಾಗಲೂ ಸಿದ್ಧವಾಗಿರಿ; ಆದರೆ ಅದನ್ನು ಸಾತ್ವಿಕತ್ವ 16 ದಿಂದಲೂ ಮನೋಭೀತಿಯಿಂದಲೂ ಹೇಳಿರಿ. ಒಳ್ಳೇ ಮನಸ್ಸಾಕ್ಷಿಯುಳ್ಳವರಾಗಿರಿ; ಆಗ ಕ್ರಿಸ್ತನಲ್ಲಿರುವ ನಿಮ್ಮ ಒಳ್ಳೇ ನಡವಳಿಕೆಯನ್ನು ಕುರಿತು ಬೈಯುವವರು ನಿಮ್ಮನ್ನು 17 ನಿಂದಿಸುವದಕ್ಕೆ ನಾಚಿಕೆಪಡುವರು. ಕೆಟ್ಟ ನಡತೆಯುಳ್ಳವರಾಗಿ ಬಾಧೆಪಡುವದಕ್ಕಿಂತ 18 ಒಳ್ಳೇ ನಡತೆಯುಳ್ಳವರಾಗಿಯೇ ದೇವರ ಚಿತ್ತವಿದ್ದರೆ ಬಾಧೆಪಡುವದು ಲೇಸು. ಕ್ರಿಸ್ತನು ಸಹ ನೀತಿವಂತನಾಗಿದ್ದು ಅನೀತಿವಂತರಿಗೋಸ್ಕರ ಪ್ರಾಣಕೊಟ್ಟು ನಮ್ಮನ್ನು ದೇವರ ಬಳಿಗೆ ಸೇರಿಸುವದಕ್ಕಾಗಿ ಒಂದೇ ಸಾರಿ ಪಾಪನಿವಾರಣಕ್ಕೋಸ್ಕರ[5] ಬಾಧೆಪಟ್ಟು ಸತ್ತನು.

ಆತನು ಶರೀರಸಂಬಂಧದಲ್ಲಿ ಕೊಲ್ಲಲ್ಪಟ್ಟನು, ಆತ್ಮಸಂಬಂಧದಲ್ಲಿ ತಿರಿಗಿ ಬದುಕುವವ 19-20 ನಾದನು. ಇದಲ್ಲದೆ ಆತನು ಆತ್ಮರೂಪನಾಗಿ ಸೆರೆಯಲ್ಲಿದ್ದ ಆತ್ಮಗಳ ಬಳಿಗೆ, ಅಂದರೆ

[1] ಕೀರ್ತನೆ ೩೪, ೧೨—೧೬.
[2] ಅಥವಾ, ಅವರು ಹೆದರುವಂಥಾದ್ದಕ್ಕೆ ನೀವು ಹೆದರದೆ.
[3] ಅಥವಾ, ಕ್ರಿಸ್ತನನ್ನು ಕರ್ತನೆಂದು.
[4] ಯೆಶಾಯ ೮, ೧೨. ೧೩.
[5] ಅಥವಾ, ಪಾಪನಿವಾರಣಕ್ಕೋಸ್ಕರ ಒಂದೇ ಯಜ್ಞವಾಗಿದ್ದು.

ಪೂರ್ವಕಾಲದಲ್ಲಿ ನೋಹನು ನಾವೆಯನ್ನು ಕಟ್ಟಿಸುತ್ತಿರಲು ದೇವರು ದೀರ್ಘಶಾಂತಿಯಿಂದ ಕಾದಿದ್ದಾಗ ನಂಬದೆಹೋದವರ ಬಳಿಗೆ, ಹೋಗಿ[1] ಸುವಾರ್ತೆಯನ್ನು ಸಾರಿದನು. ಆ ನಾವೆಯೊಳಗೆ ಕೆಲವರು ಅಂದರೆ ಎಂಟೇ ಜನರು ಸೇರಿ ನೀರನ್ನು ದಾಟಿ ರಕ್ಷಣೆ ಹೊಂದಿದರು. 21 ಆ ನೀರಿನಿಂದ ಸೂಚಿತವಾದ ದೀಕ್ಷಾಸ್ನಾನವು ಯೇಸು ಕ್ರಿಸ್ತನ ಪುನರುತ್ಥಾನದ ಮೂಲಕ ಈಗ ನಮ್ಮನ್ನು ರಕ್ಷಿಸುತ್ತದೆ; ಅದು ಮೈಕೊಳೆಯನ್ನು ಹೋಗಲಾಡಿಸುವಂಥಾದ್ದಲ್ಲ, ಒಳ್ಳೇ ಮನಸ್ಸಾಕ್ಷಿ ಬೇಕೆಂದು[2] ದೇವರಿಗೆ ವಿಜ್ಞಾಪಿಸಿಕೊಳ್ಳುವಂಥಾದ್ದೇ. 22 ಆತನು ಪರಲೋಕಕ್ಕೆ ಹೋಗಿ ದೇವರ ಬಲಪಾರ್ಶ್ವದಲ್ಲಿದ್ದಾನೆ; ದೇವದೂತರೂ ಅಧಿಕಾರಿಗಳೂ ಮಹತ್ವಗಳೂ ಆತನ ಸ್ವಾಧೀನವಾಗಿವೆ.

ಕ್ರೈಸ್ತರು ಅಜ್ಞಾನಿಗಳ ದುಷ್ಕೃತ್ಯಗಳನ್ನು ವಿಸರ್ಜಿಸಿಬಿಟ್ಟು, ಬರುವ ನ್ಯಾಯವಿಚಾರಣೆಯನ್ನು ಎದುರುನೋಡುತ್ತಾ ಭಯಭಕ್ತಿಯಿಂದ ನಡೆಯಬೇಕು.

**4** ಕ್ರಿಸ್ತನು ಶರೀರದಲ್ಲಿ ಬಾಧೆಪಟ್ಟದ್ದರಿಂದ ನೀವು ಸಹ ಆತನಿಗಿದ್ದ ಭಾವವನ್ನೇ ಹಿಡಿದುಕೊಳ್ಳಿರಿ. ಯಾಕಂದರೆ ಶರೀರದಲ್ಲಿ ಬಾಧೆಪಟ್ಟವನು ಪಾಪದ ವಶದಿಂದ ತಪ್ಪಿಸಿಕೊಂಡವನಾಗಿ, 2 ಉಳಿದಿರುವ ತನ್ನ ಜೀವಮಾನಕಾಲದಲ್ಲಿ ಇನ್ನೂ ಮನುಷ್ಯರ ಅಭಿಲಾಷೆಗಳ ಪ್ರಕಾರ ಬದುಕದೆ ದೇವರ ಚಿತ್ತದ ಪ್ರಕಾರ ಬದುಕುವದಕ್ಕೆ ಪ್ರಯತ್ನಮಾಡುವನು. 3 ನೀವು ಬಂಡುತನ ದುರಾಶೆ ಕುಡಿಕತನ ದುಂದೌತನ ಮದ್ಯಪಾನಗೋಷ್ಠಿ ಅಸಹ್ಯವಾದ ವಿಗ್ರಹಾರಾಧನೆ ಈ ಮೊದಲಾದವುಗಳನ್ನು ನಡಿಸುವದರಲ್ಲಿಯೂ ಅನ್ಯಜನರಿಗೆ ಇಷ್ಟವಾದ ದುಷ್ಕೃತ್ಯಗಳನ್ನು ಮಾಡುವದರಲ್ಲಿಯೂ ಕಳೆದುಹೋದ ಕಾಲವೇ ಸಾಕು. 4 ತಾವು ಮಾಡುವ ಅಪರಿಮಿತವಾದ ಪಟಿಂಗತನದಲ್ಲಿ ನೀವು ಸೇರದೆ ಇದ್ದದ್ದಕ್ಕೆ ಅವರು ಆಶ್ಚರ್ಯಪಟ್ಟು ನಿಮ್ಮನ್ನು ದೂಷಿಸುತ್ತಾರೆ. 5 ಅವರು ಬದುಕುವವರಿಗೂ ಸತ್ತವರಿಗೂ ನ್ಯಾಯತೀರಿಸುವದಕ್ಕೆ ಸಿದ್ಧವಾಗಿರುವಾತನಿಗೆ ಉತ್ತರ ಕೊಡಬೇಕು. 6 ಸತ್ತಿರುವವರು ಮನುಷ್ಯಜಾತಿಗೆ ಬರುವ ಮರಣವೆಂಬ ತೀರ್ಪನ್ನು ಶರೀರಿಗಳಾಗಿದ್ದಾಗ ಹೊಂದಿದರು; ಅವರು ಆತ್ಮಸಂಬಂಧವಾಗಿ[3] ದೇವರ ಜೀವದಲ್ಲಿ ಪಾಲುಗಾರರಾಗುವಂತೆ ಅವರಿಗೂ ಸುವಾರ್ತೆಯು ತಿಳಿಸಲ್ಪಟ್ಟಿತು.

7 ಎಲ್ಲವುಗಳ ಅಂತ್ಯವು ಹತ್ತರವಾಗಿದೆ; ಆದದರಿಂದ ನೀವು ಜಿತೇಂದ್ರಿಯರಾಗಿಯೂ ಪ್ರಾರ್ಥನೆಗೆ ಸಿದ್ಧವಾಗಿರುವಂತೆ ಸ್ವಸ್ಥಚಿತ್ತರಾಗಿಯೂ ಇರ್ರಿ. 8 ಮೊಟ್ಟಮೊದಲು ನಿಮ್ಮನಿಮ್ಮೊಳಗೆ ಯಥಾರ್ಥವಾದ ಪ್ರೀತಿಯಿರಲಿ; ಪ್ರೀತಿಯು ಅನೇಕ ಪಾಪಗಳನ್ನು ಮುಚ್ಚುತ್ತದೆ[4]. 9, 10 ಗುಣಗುಟ್ಟದೆ ಒಬ್ಬರಿಗೊಬ್ಬರು ಅತಿಥಿಸತ್ಕಾರ ಮಾಡಿರಿ. ನೀವೆಲ್ಲರು ದೇವರ ವಿವಿಧ ಕೃಪೆಯ ವಿಷಯದಲ್ಲಿ ಒಳ್ಳೇ ಮನೆವಾರ್ತೆಯವರಾಗಿದ್ದು ಪ್ರತಿಯೊಬ್ಬನು ತಾನು ಹೊಂದಿದ ಕೃಪಾವರವನ್ನು ಎಲ್ಲರ ಸೇವೆಯಲ್ಲಿ ಉಪಯೋಗಿಸಲಿ. 11 ಒಬ್ಬನು

---

[1] ಅಥವಾ, ಇದಲ್ಲದೆ ಸೆರೆಯಲ್ಲಿರುವ ಆತ್ಮಗಳು ಪೂರ್ವದಲ್ಲಿ ನಂಬದೆ ಇದ್ದಾಗ, ಅಂದರೆ ನೋಹನು...ಕಾದಿದ್ದಾಗ ಆತನು ಆತ್ಮರೂಪನಾಗಿಯೇ ಅವುಗಳ ಬಳಿಗೆ ಹೋಗಿ. [2] ಅಥವಾ, ಒಳ್ಳೇ ಮನಸ್ಸಾಕ್ಷಿಯಿಂದ.
[3] ಅಥವಾ, ಶರೀರವನ್ನು ಬಿಟ್ಟವರಾಗಿ. [4] ಜ್ಞಾನೋ. ೧೦, ೧೨; ೧೭, ೯.

ಬೋಧಿಸುವವನಾದರೆ, ದೈವೋಕ್ತಿಗಳನ್ನು ನುಡಿಯುವವನಾಗಿ ಬೋಧಿಸಲಿ. ಒಬ್ಬನು ಸಭೆಯ ಸೇವೆ ಮಾಡುವವನಾದರೆ, ದೇವರಿಂದ ಶಕ್ತಿಯನ್ನು ಹೊಂದಿದವನಾಗಿ ಮಾಡಲಿ. ಇದರಿಂದ ಎಲ್ಲಾದರಲ್ಲಿ ಯೇಸು ಕ್ರಿಸ್ತನ ಮೂಲಕ ದೇವರಿಗೆ ಸ್ತೋತ್ರ ಉಂಟಾಗುವದು. ಯೇಸು ಕ್ರಿಸ್ತನಿಗೆ ಘನವೂ ಮಹತ್ವವೂ ಸದಾಕಾಲವೂ ಇರುವವು.

12 ಪ್ರಿಯರೇ, ನೀವು ಪರಿಶೋಧನೆಗಾಗಿ ಪುಟಕ್ಕೆ ಹಾಕಲ್ಪಟ್ಟದ್ದಕ್ಕೆ ಆಶ್ಚರ್ಯ ಪಡ
13 ಬೇಡಿರಿ[1]; ವಿಪರೀತವಾದ ಸಂಗತಿ ಸಂಭವಿಸಿತೆಂದು ಯೋಚಿಸಬೇಡಿರಿ. ಆದರೆ ನೀವು ಎಷ್ಟರ ಮಟ್ಟಿಗೂ ಕ್ರಿಸ್ತನ ಬಾಧೆಗಳಲ್ಲಿ ಪಾಲುಗಾರರಾಗಿದ್ದೀರೋ ಅಷ್ಟರ ಮಟ್ಟಿಗೆ ಸಂತೋಷವುಳ್ಳವರಾಗಿರ್ರಿ; ಆತನ ಮಹಿಮೆಯ ಪ್ರತ್ಯಕ್ಷತೆಯಲ್ಲಿಯೂ ನೀವು ಸಂತೋಷ
14 ಪಟ್ಟು ಉಲ್ಲಾಸಗೊಳ್ಳುವಿರಿ. ನೀವು ಕ್ರಿಸ್ತನ ಹೆಸರಿನ ನಿಮಿತ್ತ ನಿಂದೆ ತಾಳಿಕೊಂಡರೆ, ಧನ್ಯರೇ; ತೇಜೋಮಯವಾದ ಆತ್ಮನಾಗಿರುವ ದೇವರಾತ್ಮನು ನಿಮ್ಮಲ್ಲಿ ನೆಲೆಗೊಂಡಿ
15 ದ್ದಾನಲ್ಲಾ[2]. ನಿಮ್ಮಲ್ಲಿ ಯಾವನಾದರೂ ಕೊಲೆಗಾರನು ಕಳ್ಳನು ದುಷ್ಟನು ಪರಕಾರ್ಯ
16 ಗಳಲ್ಲಿ ತಲೆಹಾಕುವವನು[3] ಆಗಿದ್ದು ಶಿಕ್ಷಾಪಾತ್ರನಾಗಬಾರದು. ಆದರೆ ಕ್ರೈಸ್ತನಾಗಿ ಬಾಧೆಪಟ್ಟರೆ, ಅವನು ನಾಚಿಕೆಪಡದೆ ಆ ಹೆಸರಿನಿಂದಲೇ ದೇವರನ್ನು ಘನಪಡಿಸಲಿ.

17 ನ್ಯಾಯವಿಚಾರಣೆಯ ಸಮಯ ಬಂದದೆ; ಆ ವಿಚಾರಣೆಯು ದೇವರ ಮನೆಯಲ್ಲಿಯೇ ಪ್ರಾರಂಭವಾಯಿತಲ್ಲಾ. ಅದು ನಮ್ಮಲ್ಲಿ ಪ್ರಾರಂಭವಾಗಲು ದೇವರ ಸುವಾರ್ತೆಯನ್ನು
18 ನಂಬಲೊಲ್ಲದವರ ಗತಿ ಏನಾಗಬಹುದು? ನೀತಿವಂತನೇ ರಕ್ಷಣೆಹೊಂದುವದು ಕಷ್ಟವಾ
19 ದರೆ ಭಕ್ತಿಹೀನನೂ ಪಾಪಿಷ್ಠನೂ ನಿಲ್ಲುವದು ಹ್ಯಾಗೆ[4]? ಹೀಗಿರಲಾಗಿ ದೇವರ ಚಿತ್ತಾನುಸಾರ ಬಾಧೆಪಡುವವರು ಒಳ್ಳೇದನ್ನು ಮಾಡುವವರಾಗಿದ್ದು ತಮ್ಮ ಆತ್ಮಗಳನ್ನು ನಂಬಿಗಸ್ತನಾದ ಸೃಷ್ಟಿಕರ್ತನಿಗೆ ಒಪ್ಪಿಸಲಿ.

### ಸಭೆಯ ಹಿರಿಯರಿಗೂ ಸಭೆಯವರೆಲ್ಲರಿಗೂ ಪ್ರಬೋಧನೆ.

**5** ಸಭೆಯ ಹಿರಿಯರೇ, ಜೊತೆಹಿರಿಯವನಾದ ನಾನು ಕ್ರಿಸ್ತನ ಬಾಧೆಗಳನ್ನು ಕಣ್ಣಾರೆ ಕಂಡವನಾಗಿಯೂ ಇನ್ನು ಮುಂದೆ ಪ್ರತ್ಯಕ್ಷವಾಗುವ ಪ್ರಭಾವದಲ್ಲಿ ಪಾಲುಗಾರ
2 ನಾಗಿಯೂ ಇದ್ದು ನಿಮ್ಮನ್ನು ಎಚ್ಚರಿಸಿ ಹೇಳುವದೇನಂದರೆ—ನಿಮ್ಮಲ್ಲಿರುವ ದೇವರ ಮಂದೆಯನ್ನು ಕಾಯಿರಿ. ಬಲಾತ್ಕಾರದಿಂದಲ್ಲ ದೇವರ ಚಿತ್ತದ ಪ್ರಕಾರ ಇಷ್ಟಪೂರ್ವಕವಾಗಿಯೂ, ನೀಚವಾದ ದ್ರವ್ಯಾಶೆಯಿಂದಲ್ಲ ಸಿದ್ಧಮನಸ್ಸಿನಿಂದಲೂ, ಮೇಲ್ವಿಚಾರಣೆ
3 ಮಾಡಿರಿ. ದೇವರು ನಿಮ್ಮ ವಶದಲ್ಲಿಟ್ಟಿರುವ ಸಭೆಗಳ ಮೇಲೆ ಧೊರೆತನ ಮಾಡುವವ
4 ರಂತೆ ನಡೆಯದೆ ಮಂದೆಗೆ ಮಾದರಿಯಾಗಿಯೇ ನಡೆದುಕೊಳ್ಳಿರಿ. ಹಿರೀ ಕುರುಬನು ಪ್ರತ್ಯಕ್ಷನಾಗುವಾಗ ನೀವು ದೇವಪ್ರಭಾವವೆಂಬ[5] ಎಂದಿಗೂ ಬಾಡದ ಜಯಮಾಲೆಯನ್ನು
5 ಹೊಂದುವಿರಿ. ಯೌವನಸ್ಥರೇ, ಅದೇ ರೀತಿಯಾಗಿ ಹಿರಿಯರಿಗೆ ಅಧೀನರಾಗಿರ್ರಿ.

---

1) ೧ ಪೇತ್ರ ೧, ೭. 2) ಯೆಶಾಯ ೧೧, ೨. 3) ಅಥವಾ, ನಿಕೃಷ್ಟ ಕಾರ್ಯಗಳನ್ನು ನಡಿಸುವವನು.
4) ಸಾಮತಿ. ೧೧, ೩೧. 5) ೧ ಪೇತ್ರ ೫, ೧. ೧೦; ೪, ೧೩; ೧, ೭ ನೋಡು.

ನೀವೆಲ್ಲರೂ ದೀನಮನಸ್ಸೆಂಬ ವಸ್ತ್ರದಿಂದ ಸೊಂಟಾಕಟ್ಟಿಕೊಂಡು ಒಬ್ಬರಿಗೊಬ್ಬರು ಸೇವೆಮಾಡಿರಿ. ದೇವರು ಅಹಂಕಾರಿಗಳನ್ನು ಎದುರಿಸಿ ದೀನರಲ್ಲಿ ದಯೆ ತೋರಿಸು ತ್ತಾನೆ[1]. 6 ಹೀಗಿರುವದರಿಂದ ದೇವರ ತ್ರಾಣವುಳ್ಳ ಹಸ್ತದ ಕೆಳಗೆ ನಿಮ್ಮನ್ನು ತಗ್ಗಿಸಿ ಕೊಳ್ಳಿರಿ; 7 ಆತನು ತಕ್ಕ ಕಾಲದಲ್ಲಿ ನಿಮ್ಮನ್ನು ಮೇಲಕ್ಕೆ ತರುವನು. ನಿಮ್ಮ ಚಿಂತೆಯ ನ್ನೆಲ್ಲಾ ಆತನ ಮೇಲೆ ಹಾಕಿರಿ[2], ಆತನು ನಿಮಗೋಸ್ಕರ ಚಿಂತಿಸುತ್ತಾನೆ. 8 ಸ್ವಸ್ಥಚಿತ್ತ ರಾಗಿರಿ, ಎಚ್ಚರವಾಗಿರಿ; ನಿಮ್ಮ ವಿರೋಧಿಯಾಗಿರುವ ಸೈತಾನನು ಗರ್ಜಿಸುವ ಸಿಂಹ ದೋಪಾದಿಯಲ್ಲಿ ಯಾರನ್ನು ನುಂಗಲಿ ಎಂದು ಹುಡುಕುತ್ತಾ ತಿರುಗುತ್ತಾನೆ. 9 ನೀವು ನಂಬಿಕೆಯಲ್ಲಿ ದೃಢವಾಗಿದ್ದು ಅವನನ್ನು ಎದುರಿಸಿರಿ; ಲೋಕದಲ್ಲಿರುವ ನಿಮ್ಮ ಸಹೋದ ರರೂ ಅಂಥಾ ಬಾಧೆಗಳನ್ನೇ ಅನುಭವಿಸುತ್ತಿದ್ದಾರೆಂದು ನಿಮಗೆ ತಿಳಿದದೆಯಲ್ಲಾ. 10 ಕ್ರಿಸ್ತ ನಲ್ಲಿ ನಿಮ್ಮನ್ನು ತನ್ನ ನಿತ್ಯ ಪ್ರಭಾವಕ್ಕೆ ಕರೆದ ಕೃಪಾಪೂರ್ಣನಾದ ದೇವರು ತಾನೇ, ನೀವು ಸ್ವಲ್ಪ ಕಾಲ ಬಾಧೆಪಟ್ಟ ಮೇಲೆ, ನಿಮ್ಮನ್ನು ಯೋಗ್ಯ ಸ್ಥಿತಿಗೆ ತಂದು ನೆಲೆಗೊಳಿಸಿ ಬಲಪಡಿಸುವನು. 11 ಆತನಿಗೆ ಮಹತ್ವವು ಸದಾಕಾಲವಿರುವದು. ಆಮೆನ್.

### ಕಡೇ ಮಾತುಗಳು.

12 ನಿಮ್ಮನ್ನು ಎಚ್ಚರಿಸುವದಕ್ಕೂ ಇದೇ ದೇವರ ನಿಜವಾದ ಕೃಪೆ ಎಂದು ಸಾಕ್ಷಿ ಹೇಳು ವದಕ್ಕೂ ನಾನು ಸಂಕ್ಷೇಪವಾಗಿ ಬರೆದು ನಂಬಿಗಸ್ತನಾದ ಸಹೋದರನೆಂದು ನಾನು ಎಣಿ ಸುವ ಸಿಲ್ವಾನನ ಕೈಯಲ್ಲಿ ಇದನ್ನು ಕಳುಹಿಸಿದ್ದೇನೆ. ಈ ನಿಜವಾದ ಕೃಪೆಯಲ್ಲಿ ನಿಲ್ಲಿರಿ. 13 ದೇವರು ನಿಮ್ಮೊಂದಿಗೆ ಆರಿಸಿಕೊಂಡಂಥಾ ಬಾಬೇಲಿನಲ್ಲಿರುವ ಸಭೆಯು ನಿಮಗೆ ವಂದನೆ ಹೇಳುತ್ತದೆ. ನನ್ನ ಮಗನಾದ ಮಾರ್ಕನು ಸಹ ವಂದನೆ ಹೇಳುತ್ತಾನೆ. 14 ಪ್ರೀತಿಯಿಂದ ಮುದ್ದಿಟ್ಟು ಒಬ್ಬರನ್ನೊಬ್ಬರು ವಂದಿಸಿರಿ.

ಕ್ರಿಸ್ತನಲ್ಲಿರುವ ನಿಮ್ಮೆಲ್ಲರಿಗೆ ಶಾಂತಿಯಿರಲಿ.

---

1) ಸಾಮತಿ. ೩, ೩೪.

2) ಕೀರ್ತನೆ ೫೫, ೨೨.

# THE SECOND EPISTLE OF SAINT PETER

# ಪೇತ್ರನು ಬರೆದ ಎರಡನೇ ಪತ್ರಿಕೆ

### ಒಕ್ಕಣೆ.

**1** ಯೇಸು ಕ್ರಿಸ್ತನ ದಾಸನೂ ಅಪೊಸ್ತಲನೂ ಆಗಿರುವ ಸಿಮೆಯೋನ ಪೇತ್ರನು, ನಮ್ಮ ದೇವರ ಮತ್ತು ರಕ್ಷಕನಾದ ಯೇಸು ಕ್ರಿಸ್ತನ ನೀತಿಯಿಂದ ನಮ್ಮೊಂದಿಗೆ ಅಮೂಲ್ಯ
2 ವಾದ ನಂಬಿಕೆಯನ್ನು ಹೊಂದಿದವರಿಗೆ ಬರೆಯುವದೇನಂದರೆ—ದೇವರ ವಿಷಯವಾಗಿಯೂ ನಮ್ಮ ಕರ್ತನಾದ ಯೇಸುವಿನ ವಿಷಯವಾಗಿಯೂ ಪರಿಜ್ಞಾನವು ನಿಮಗೆ ಉಂಟಾಗುವದರಲ್ಲಿ ಕೃಪೆಯೂ ಶಾಂತಿಯೂ ನಿಮಗೆ ಹೆಚ್ಚಾಗಲಿ.

### ಭಕ್ತಿವೃದ್ಧಿಗೆ ಅನುಕೂಲವಾದ ಪ್ರೇರಣೆಗಳು.

3 ನಮ್ಮನ್ನು ತನ್ನ ಪ್ರಭಾವದಿಂದಲೂ ಗುಣಾತಿಶಯದಿಂದಲೂ ಕರೆದ ದೇವರ ವಿಷಯವಾಗಿ ಯೇಸುವಿನ ದಿವ್ಯ ಶಕ್ತಿಯು ನಮಗೆ ಪರಿಜ್ಞಾನವನ್ನು ಕೊಟ್ಟದ್ದರಲ್ಲಿ ಜೀವಕ್ಕೂ
4 ಭಕ್ತಿಗೂ ಬೇಕಾದದ್ದೆಲ್ಲವು ದೊರೆಯಿತೆಂದು ಬಲ್ಲೆವಷ್ಟೆ. ನೀವು ಲೋಕದಲ್ಲಿ ದುರಾಶೆಯಿಂದುಂಟಾದ ಕೆಟ್ಟತನಕ್ಕೆ ತಪ್ಪಿಸಿಕೊಂಡು ದೈವಸ್ವಭಾವದಲ್ಲಿ ಪಾಲನ್ನು ಹೊಂದುವವರಾಗಬೇಕೆಂಬ ಉದ್ದೇಶದಿಂದ ದೇವರು ತನ್ನ ಪ್ರಭಾವಗುಣಾತಿಶಯಗಳಿಂದ ಅಮೂಲ್ಯವಾಗಿಯೂ ಉತ್ಕೃಷ್ಟವಾಗಿಯೂ ಇರುವ ವಾಗ್ದಾನಗಳನ್ನು ನಮಗೆ ದಯಪಾಲಿಸಿ
5 ದ್ದಾನೆ. ಈ ಕಾರಣದಿಂದಲೇ ನೀವು ಪೂರ್ಣ ಆಸಕ್ತಿಯುಳ್ಳವರಾಗಿ ನಿಮಗಿರುವ ನಂಬಿ
6 ಕೆಗೆ ಸದ್ಗುಣವನ್ನೂ ಸದ್ಗುಣಕ್ಕೆ ಜ್ಞಾನವನ್ನೂ ಜ್ಞಾನಕ್ಕೆ ದಮೆಯನ್ನೂ ದಮೆಗೆ ತಾಳ್ಮೆ
7 ಯನ್ನೂ ತಾಳ್ಮೆಗೆ ಭಕ್ತಿಯನ್ನೂ ಭಕ್ತಿಗೆ ಸಹೋದರಸ್ನೇಹವನ್ನೂ ಸಹೋದರಸ್ನೇಹಕ್ಕೆ
8 ಪ್ರೀತಿಯನ್ನೂ ಕೂಡಿಸಿರಿ. ಇವು ನಿಮ್ಮಲ್ಲಿದ್ದು ಹೆಚ್ಚುತ್ತಾ ಬಂದರೆ, ನಮ್ಮ ಕರ್ತನಾದ ಯೇಸು ಕ್ರಿಸ್ತನ ಸಂಬಂಧವಾದ ಪರಿಜ್ಞಾನವನ್ನು ಹೊಂದುವ ವಿಷಯದಲ್ಲಿ ನಿಮ್ಮನ್ನು
9 ಆಲಸ್ಯಗಾರರೂ ನಿಷ್ಫಲರೂ ಆಗದಂತೆ ಮಾಡುತ್ತವೆ. ಇವುಗಳಿಲ್ಲದವನು ಕುರುಡನಾಗಿದ್ದಾನೆ; ಅವನು ದೂರ ದೃಷ್ಟಿಯಿಲ್ಲದವನಾಗಿದ್ದು ತನ್ನ ಹಿಂದಣ ಪಾಪಗಳು ಪರಿಹಾರ
10 ವಾಗಿ ತಾನು ಶುದ್ಧನಾದದ್ದನ್ನು ಮರೆತುಬಿಟ್ಟಿದ್ದಾನೆ. ಆದದರಿಂದ ಸಹೋದರರೇ, ದೇವರು ನಿಮ್ಮನ್ನು ಕರೆದದ್ದನ್ನೂ ಆದುಕೊಂಡದ್ದನ್ನೂ ದೃಢಪಡಿಸಿಕೊಳ್ಳುವದಕ್ಕೆ

ಮತ್ತಷ್ಟು ಜಾಗರೂಕರಾಗಿರಿ. ಹೀಗೆ ನೀವು ಮಾಡಿದರೆ, ಎಂದಿಗೂ ಎಡಹುವದಿಲ್ಲ.
ಮತ್ತು ನಮ್ಮ ಕರ್ತನೂ ರಕ್ಷಕನೂ ಆಗಿರುವ ಯೇಸು ಕ್ರಿಸ್ತನ ನಿತ್ಯರಾಜ್ಯದಲ್ಲಿ ಪ್ರವೇ 11
ಶಿಸುವ ಹಾಗೆ ದೇವರು ನಿಮಗೆ ಧಾರಾಳವಾಗಿ ಅನುಗ್ರಹಿಸುವನು.

ಕರ್ತನಾದ ಯೇಸು ಕ್ರಿಸ್ತನ ಪ್ರತ್ಯಕ್ಷತೆಯನ್ನು ಎದುರುನೋಡುವದಕ್ಕೆ ದೃಢವಾದ ಆಧಾರ ಉಂಟು.

ಆದದರಿಂದ, ನೀವು ಈ ಸಂಗತಿಗಳನ್ನು ತಿಳಿದವರಾಗಿ ನಿಮಗೆ ದೊರಕಿರುವ ಸತ್ಯ 12
ದಲ್ಲಿ ಸ್ಥಿರವಾಗಿದ್ದರೂ, ಅವುಗಳನ್ನು ನಿಮಗೆ ಜ್ಞಾಪಕಕೊಡುವದಕ್ಕೆ ನಾನು ಯಾವಾ
ಗಲೂ ಸಿದ್ಧವಾಗಿರುವೆನು. ನಾನು ನನ್ನ ದೇಹವೆಂಬ ಗುಡಾರದಲ್ಲಿರುವ ತನಕ 13
ನಿಮ್ಮನ್ನು ಜ್ಞಾಪಕಪಡಿಸಿ ಪ್ರೇರಿಸುವದು ಯುಕ್ತವೆಂದೆಣಿಸಿದ್ದೇನೆ. ಯಾಕಂದರೆ ನಮ್ಮ 14
ಕರ್ತನಾದ ಯೇಸು ಕ್ರಿಸ್ತನು ನನಗೆ ತಿಳಿಸಿದ ಪ್ರಕಾರ, ಈ ಗುಡಾರವನ್ನು ಕಿತ್ತು
ಹಾಕುವ ಕಾಲ ಬೇಗನೆ ಬರುತ್ತದೆಂದು ಬಲ್ಲೆನು. ನೀವು ನನ್ನ ಮರಣಾನಂತರದಲ್ಲಿ 15
ಇವುಗಳನ್ನು ಯಾವಾಗಲೂ ಜ್ಞಾಪಕಮಾಡಿಕೊಳ್ಳುವದು ಸಾಧ್ಯವಾಗುವಂತೆ ಜಾಗ
ರೂಕನಾಗಿರುವೆನು.

ನಮ್ಮ ಕರ್ತನಾದ ಯೇಸು ಕ್ರಿಸ್ತನ ಶಕ್ತಿಯನ್ನೂ ಪ್ರತ್ಯಕ್ಷತೆಯನ್ನೂ ನಿಮಗೆ ತಿಳಿಯ 16
ಪಡಿಸಿದ್ದರಲ್ಲಿ ಚಮತ್ಕಾರದಿಂದ ಕಲ್ಪಿಸಿದ ಕಥೆಗಳನ್ನು ನಾವು ಅನುಸರಿಸುವವರಾಗಿರಲಿಲ್ಲ.
ಆತನ ಮಹತ್ತನ್ನು ಕಣ್ಣಾರೆ ಕಂಡವರಾಗಿಯೇ ತಿಳಿಯಪಡಿಸಿದೆವು. ಈತನು ಪ್ರಿಯನಾ 17
ಗಿರುವ ನನ್ನ ಮಗನು, ಈತನನ್ನು ಮೆಚ್ಚಿದ್ದೇನೆ ಎಂಬಂಥಾ ವಾಣಿಯು[1] ಸರ್ವೋತ್ಕೃಷ್ಟ
ಪ್ರಭಾವದಿಂದ ಆತನಿಗೆ ಉಂಟಾದದ್ದರಲ್ಲಿ ಆತನು ತಂದೆಯಾದ ದೇವರಿಂದ ಘನಮಾನ
ಗಳನ್ನು ಹೊಂದಿದನಲ್ಲವೇ? ನಾವು ಪರಿಶುದ್ಧ ಪರ್ವತದ ಮೇಲೆ ಆತನ ಸಂಗಡ 18
ಇದ್ದಾಗ ಆಕಾಶದಿಂದ ಬಂದ ಆ ವಾಣಿಯನ್ನು ನಾವೇ ಕೇಳಿದೆವು.

ಇದಲ್ಲದೆ ನಮಗೆ ಪ್ರವಾದನಾವಾಕ್ಯವು ಉಂಟು, ಅದು ಮತ್ತೂ ದೃಢವಾಗಿದೆ. 19
ಅರುಣೋದಯವಾಗಿ ನಿಮ್ಮ ಹೃದಯದೊಳಗೆ ಬೆಳ್ಳಿಯು[2] ಮೂಡುವ ಪರ್ಯಂತರ
ಅದನ್ನು ಕತ್ತಲೆಯಾದ ಸ್ಥಳದಲ್ಲಿ ಪ್ರಕಾಶಿಸುವ ದೀಪವೆಂದೆಣಿಸಿ ಅದಕ್ಕೆ ಲಕ್ಷ್ಯ
ಕೊಡುವದೇ ಒಳ್ಳೇದು. ಶಾಸ್ತ್ರದಲ್ಲಿರುವ ಯಾವ ಪ್ರವಾದನಾವಾಕ್ಯವೂ ಕೇವಲ 20
ಮಾನುಷಬುದ್ಧಿಯಿಂದ ವಿವರಿಸತಕ್ಕಂಥಾದ್ದಲ್ಲವೆಂಬದನ್ನು ಮುಖ್ಯವಾಗಿ ತಿಳುಕೊಳ್ಳಿರಿ.
ಯಾಕಂದರೆ ಯಾವ ಪ್ರವಾದನೆಯೂ ಎಂದೂ ಮನುಷ್ಯರ ಚಿತ್ತದಿಂದ ಉಂಟಾಗಲಿಲ್ಲ; 21
ಮನುಷ್ಯರು ಪವಿತ್ರಾತ್ಮಪ್ರೇರಿತರಾಗಿ ದೇವರಿಂದ ಹೊಂದಿದ್ದನ್ನೇ ಮಾತಾಡಿದರು.

ದುರ್ಮಾರ್ಗತನವನ್ನು ಬೋಧಿಸುವವರ ವಿಷಯದಲ್ಲಿ ಎಚ್ಚರಿಕೆ. (ಯೂದ 1—19.)

ಆದರೆ ಇಸ್ರಯೇಲ ಜನರಲ್ಲಿ ಸುಳ್ಳುಪ್ರವಾದಿಗಳು ಎದ್ದರಲ್ಲಾ; ಅದೇ ಪ್ರಕಾರ ನಿಮ್ಮ **2**
ಲ್ಲಿಯೂ ಸುಳ್ಳುಬೋಧಕರು ಇರುವರು. ಅವರು ನಾಶಕರವಾದ ಮತಭೇದಗಳನ್ನು

---

[1] ಮತ್ತಾಯ ೧೭, ೫.　[2] ಅಥವಾ, ಸೂರ್ಯನು, ದಿವಾಕರನು.

ಕಳ್ಳತನದಿಂದ ಹುಟ್ಟಿಸುವವರಾಗಿಯೂ ತಮ್ಮನ್ನು ಕೊಂಡುಕೊಂಡ ಒಡೆಯನನ್ನು ಕೂಡ
ತಾವು ಅರಿಯೆವು ಎಂದು ಹೇಳುವವರಾಗಿಯೂ ಇದ್ದು, ಫಕ್ಕನೆ ತಮ್ಮ ಮೇಲೆ ನಾಶ
2 ವನ್ನು ಬರಮಾಡಿಕೊಳ್ಳುವರು. ಅವರ ನಿರ್ಲಜ್ಜಾಕೃತ್ಯಗಳನ್ನು ಅನೇಕರು ಅನುಸರಿಸು
3 ವರು; ಅವರ ನಿಮಿತ್ತ ಸತ್ಯಮಾರ್ಗಕ್ಕೆ ದೂಷಣೆ ಉಂಟಾಗುವದು. ಅವರು ದ್ರವ್ಯಾಶೆ
ಯುಳ್ಳವರಾಗಿ ಕಲ್ಪನೆಯ ಮಾತುಗಳನ್ನು ಹೇಳುತ್ತಾ ನಿಮ್ಮಿಂದ ಲಾಭವನ್ನು ಸಂಪಾದಿಸ
ಬೇಕೆಂದಿರುವರು.

ಲೋಕಾದಿಯಿಂದ ಅಂಥವರಿಗೆ ದಂಡನೆಯ ತೀರ್ಪು ತಪ್ಪದೆ ಬರುತ್ತಿರುವದು, ಅವರ
4 ನಾಶವು ತೂಕಡಿಸುವದಿಲ್ಲ. ದೇವದೂತರು ಪಾಪಮಾಡಿದಾಗ ದೇವರು ಅವರನ್ನೂ
ಸುಮ್ಮನೆ ಬಿಡದೆ, ನರಕಕ್ಕೆ ದೊಬ್ಬಿ, ನ್ಯಾಯತೀರ್ಪನ್ನು ಹೊಂದುವದಕ್ಕೆ ಇಡಲ್ಪಟ್ಟವರಾ
5 ಗಿರಬೇಕೆಂದು ಕತ್ತಲೇ ಗುಂಡಿಗಳಿಗೆ ಒಪ್ಪಿಸಿದನು. ಆತನು ಭಕ್ತಿಹೀನರಾದ ಪುರಾತನರ
ಲೋಕವನ್ನು ಸುಮ್ಮನೆ ಬಿಡದೆ, ಅವರ ಮೇಲೆ ಜಲಪ್ರಲಯವನ್ನು ಬರಮಾಡಿದನು;
ಆದರೆ ಸುನೀತಿಯನ್ನು ಸಾರುವವನಾಗಿದ್ದ ನೋಹನನ್ನೂ ಅವನೊಂದಿಗೆ ಬೇರೆ ಏಳು
6 ಮಂದಿಯನ್ನೂ ಉಳಿಸಿದನು. ಆತನು ಸೊದೋಮ ಗಮೋರ ಪಟ್ಟಣಗಳನ್ನು ಸುಟ್ಟು
ಬೂದಿಮಾಡಿ, ಮುಂದೆ ಭಕ್ತಿಹೀನರಾಗಿ ಬದುಕುವವರ ಗತಿ ಇಂಥಾದ್ದೆಂದು ಸೂಚಿಸು
7 ವದಕ್ಕಾಗಿ ಅವುಗಳಿಗೆ ನಾಶನವನ್ನು ವಿಧಿಸಿದನು. ಆದರೆ ಆ ಅಧರ್ಮಿಗಳ ನಾಚಿಕೆ
8 ಗೆಟ್ಟ ನಡತೆಗೆ ವೇದನೆಗೊಂಡಿದ್ದ ನೀತಿವಂತನಾದ ಲೋಟನನ್ನು ತಪ್ಪಿಸಿದನು. ಆ ನೀತಿ
ವಂತನು ಅವರ ನಡುವೆ ಇದ್ದುಕೊಂಡು ಅವರ ಅನ್ಯಾಯಕೃತ್ಯಗಳನ್ನು ನೋಡುತ್ತಾ
ಕೇಳುತ್ತಾ ಅವುಗಳ ನಿಮಿತ್ತ ದಿನೇ ದಿನೇ ತನ್ನ ಆತ್ಮದಲ್ಲಿ ಬಹಳವಾಗಿ ಕರಕರೆಗೊಂಡನು.
9 ಕರ್ತನು ಭಕ್ತರನ್ನು ಕಷ್ಟಗಳೊಳಗಿಂದ ತಪ್ಪಿಸುವದಕ್ಕೂ ದುರ್ಮಾರ್ಗಿಗಳನ್ನು ನ್ಯಾಯ
10 ತೀರ್ಪಿನ ದಿನದ ತನಕ ಶಿಕ್ಷಾನುಭವದಲ್ಲಿ ಇಡುವದಕ್ಕೂ ಬಲ್ಲವನಾಗಿದ್ದಾನೆ. ಮುಖ್ಯ
ವಾಗಿ ಬಂಡುತನವನ್ನು ಆಶಿಸಿ ಶರೀರಭಾವಾನುಸಾರ ನಡೆದು ಪ್ರಭುತ್ವತಿರಸ್ಕಾರ ಮಾಡು
ವವರನ್ನು ಹೀಗೆ ಶಿಕ್ಷಿಸುವನು.

ಇವರು ಯಾರಿಗೂ ಹೆದರದೆ, ಸ್ವೇಚ್ಛಾಪರರಾಗಿದ್ದು ಮಹಾ ಪದವಿಯವರನ್ನು ನಿರ್ಭ
11 ಯವಾಗಿ ದೂಷಿಸುತ್ತಾರೆ. ದೇವದೂತರು ಬಲದಲ್ಲಿಯೂ ಮಹತ್ತಿನಲ್ಲಿಯೂ ಶ್ರೇಷ್ಠ
ರಾಗಿದ್ದಾಗ್ಯೂ ಕರ್ತನ ಮುಂದೆ ಮಹಾ ಪದವಿಯವರ ಮೇಲೆ ದೂಷಣಾಭಿಪ್ರಾಯವನ್ನು
12 ಹೇಳುವದಿಲ್ಲವಲ್ಲಾ. ಆದರೆ ಸ್ವಾಭಾವಿಕವಾಗಿ ಬೇಟೆಗೂ ಕೊಲೆಗೂ ಹುಟ್ಟಿರುವ
ವಿವೇಕಶೂನ್ಯ ಪಶುಗಳಂತಿರುವ ಈ ದುರ್ಮಾರ್ಗಿಗಳು ತಮಗೆ ತಿಳಿಯದವುಗಳ ವಿಷ
ಯವಾಗಿ ದೂಷಣೆ ಹೇಳುವವರಾಗಿದ್ದಾರೆ. ಇವರು ತಮ್ಮ ಕೆಟ್ಟತನದಿಂದ ತಾವೇ
ಕೆಟ್ಟುಹೋಗಿ ತಮ್ಮ ದುಷ್ಪ್ರವರ್ತನಕ್ಕೆ ಸರಿಯಾದ ಪ್ರತಿಫಲವನ್ನು ಹೊಂದುವರು.
13 ದುಂದುಗಾರಿಕೆಯಲ್ಲಿ ಹಗಲನ್ನು ಕಳೆಯುವದೇ[1] ಸುಖವೆಂದೆಣಿಸುತ್ತಾರೆ. ಇವರು
ನಿಮ್ಮ ಸಂಗಡ ಸೇರಿ ಔತಣಮಾಡುತ್ತಿರುವಾಗ ವಂಚಕರಾಗಿದ್ದು[2] ಉಂಡು ಕುಡಿದು
14 ಕಳಂಕಕ್ಕೂ ಅವಮಾನಕ್ಕೂ ಕಾರಣರಾಗಿದ್ದಾರೆ. ಇವರು ಜಾರತ್ವಕ್ಕೆ ಸಂದರ್ಭವನ್ನು

[1] ಅಥವಾ, ತತ್ಕಾಲಿಕ ಭೋಗಾನುಭವವನ್ನೇ.

[2] ಕೆಲವು ಪ್ರತಿಗಳಲ್ಲಿ—ಪ್ರೇಮಭೋಜನಗಳಲ್ಲಿ ಎಂದು ಬರೆದದೆ; ಯೂದ ೧೨ ನೋಡು.

ನೋಡುವಂಥಾ ಮತ್ತು ಪಾಪಕ್ಕೆ ಕಾರಣವಾದ ನೋಟವನ್ನು ಬಿಡಲಾರದಂಥಾ ಕಣ್ಣುಳ್ಳ ವರೂ ಚಪಲಚಿತ್ತರನ್ನು ಮರುಳುಗೊಳ್ಳಿಸುವವರೂ ಲೋಭದಲ್ಲಿ ತೇರ್ಗಡೆ ಹೊಂದಿದ ಮನಸ್ಸುಳ್ಳವರೂ ಶಾಪಕ್ಕೆ ಪಾತ್ರರೂ ಆಗಿದ್ದಾರೆ. ಇವರು ನೀಟಾದ ಮಾರ್ಗವನ್ನು 15 ಬಿಟ್ಟು ಬೆಯೋರನ ಮಗನಾದ ಬಿಳಾಮನ ಮಾರ್ಗವನ್ನು ಹಿಡಿದು ತಪ್ಪಿಹೋಗಿದ್ದಾರೆ. ಈ ಬಿಳಾಮನು ಅಧರ್ಮದಿಂದ ದೊರಕುವ ದ್ರವ್ಯವನ್ನು ಪ್ರೀತಿಸಿದನು; ಆದರೆ ಅವನ 16 ಅಕ್ರಮಕ್ಕೆ ಖಂಡನೆಯಾಯಿತು; ಮೂಕ ಪಶುವು ಮನುಷ್ಯಸ್ವರದಿಂದ ಮಾತಾಡಿ ಆ ಪ್ರವಾದಿಯ ಹುಚ್ಚುತನಕ್ಕೆ ಅಡ್ಡಿಮಾಡಿತು[1]. ಇವರು ನೀರಿಲ್ಲದ ಬಾವಿಗಳೂ ಬಿರು 17 ಗಾಳಿಯಿಂದ ಬಡಿಸಿಕೊಂಡು ಹಾರಿಹೋಗುವ ಇಬ್ಬನಿಯೂ ಆಗಿದ್ದಾರೆ; ಇಂಥವರ ಪಾಲಿಗೆ ಕಾರ್ಗತ್ತಲೆ ಇಟ್ಟಿರುವದು. ತಪ್ಪಾದ ಮಾರ್ಗದಲ್ಲಿ ನಡೆಯುವವರ ಸಹವಾಸ 18 ದಿಂದ ಹೊಸದಾಗಿ ತಪ್ಪಿಸಿಕೊಂಡವರ ಸಂಗಡ ಇವರು ಹುರುಳಿಲ್ಲದ ದೊಡ್ಡ ದೊಡ್ಡ ಮಾತುಗಳನ್ನಾಡಿ, ಬಂಡುಬಂಡಾದ ದುರಾಶೆಗಳನ್ನು ಹುಟ್ಟಿಸಿ ಅವರನ್ನು ಮರುಳುಗೊಳ್ಳಿ ಸುತ್ತಾರೆ. ಸ್ವಾತಂತ್ರ್ಯ ಕೊಡುತ್ತೇವೆಂದು ಅವರಿಗೆ ವಾಗ್ದಾನ ಮಾಡುತ್ತಾರೆ, ಆದರೆ 19 ತಾವೇ ಕೆಟ್ಟತನದ ದಾಸತ್ವದೊಳಗಿದ್ದಾರೆ. ಒಬ್ಬನು ಯಾವದಕ್ಕೆ ಸೋತುಹೋಗಿರು ವನೋ ಅದರ ದಾಸತ್ವದೊಳಗಿರುವನಷ್ಟೆ.

ಕರ್ತನೂ ರಕ್ಷಕನೂ ಆಗಿರುವ ಯೇಸು ಕ್ರಿಸ್ತನ ವಿಷಯವಾದ ಜ್ಞಾನ ಹೊಂದಿ 20 ಲೋಕದ ಮಲಿನತ್ವಗಳಿಗೆ ತಪ್ಪಿಸಿಕೊಂಡವರು ತಿರಿಗಿ ಅವುಗಳಲ್ಲಿ ಸಿಕ್ಕಿಕೊಂಡು ಸೋತು ಹೋದರೆ, ಅವರ ಅಂತ್ಯಸ್ಥಿತಿಯು ಮೊದಲಿಗಿಂತ ಕೆಟ್ಟದ್ದಾಗಿದೆ. ಅವರು ನೀತಿಮಾರ್ಗ 21 ವನ್ನು ತಿಳಿದು ತಮಗೆ ಕೊಡಲ್ಪಟ್ಟ ಪರಿಶುದ್ಧ ಆಜ್ಞೆಯಿಂದ ತೊಲಗಿಹೋಗುವದಕ್ಕಿಂತ ಆ ಮಾರ್ಗವನ್ನು ತಿಳಿಯದಿದ್ದರೆ ಮೇಲಾಗಿತ್ತು. ನಾಯಿ ತಾನು ಕಕ್ಕಿದ್ದನ್ನು ನೆಕ್ಕುವ 22 ದಕ್ಕೆ ತಿರಿಗಿತು ಮತ್ತು ತೊಳೆದ ಹಂದಿ ಕೆಸರಿನಲ್ಲಿ ಹೊರಳುವದಕ್ಕೆ ಹೋಯಿತು ಎಂಬ ನಿಜವಾದ ಗಾದೆಗೆ ಸರಿಯಾಗಿ ನಡೆದಿದ್ದಾರೆ.

### ದೇವರ ದಿನವು ತಡೆಮಾಡಿದರೂ ಅದು ಬರುವದು ನಿಶ್ಚಯ.

**3** ಪ್ರಿಯರೇ, ನಿಮಗೀಗ ಬರೆಯುವದು ಎರಡನೇ ಪತ್ರಿಕೆ. ಪರಿಶುದ್ಧ ಪ್ರವಾದಿ 1-2 ಗಳು ಪೂರ್ವದಲ್ಲಿ ಹೇಳಿದ ಮಾತುಗಳನ್ನೂ ಕರ್ತನಾದ ರಕ್ಷಕನು ನಿಮ್ಮ ಅಪೊಸ್ತಲರ ಮೂಲಕ ಕೊಟ್ಟ ಅಪ್ಪಣೆಯನ್ನೂ ನೀವು ಜ್ಞಾಪಕಮಾಡಿಕೊಳ್ಳಬೇಕೆಂದು ಈ ಎರಡು ಪತ್ರಿಕೆಗಳಲ್ಲಿಯೂ ಜ್ಞಾಪಕಕೊಟ್ಟು ನಿಮ್ಮ ಸರಳ ಮನಸ್ಸನ್ನು ಪ್ರೇರಿಸಿದ್ದೇನೆ.

ಕಡೇ ದಿವಸಗಳಲ್ಲಿ ತಮ್ಮ ದುರಾಶೆಗಳ ಪ್ರಕಾರ ನಡೆಯುವ ಕುಚೋದ್ಯಗಾರರು 3 ಬಂದು ಕುಚೋದ್ಯಮಾಡುತ್ತಾ—ಆತನ ಪ್ರತ್ಯಕ್ಷತೆಯ ವಿಷಯವಾದ ವಾಗ್ದಾನವು 4 ಏನಾಯಿತು? ನಮ್ಮ ಪಿತೃಗಳು ನಿದ್ರೆಹೊಂದಿದ ದಿನ ಮೊದಲುಗೊಂಡು ಸಮಸ್ತವೂ ಲೋಕಾದಿಯಿಂದಿದ್ದ ಹಾಗೆಯೇ ಇರುತ್ತದಲ್ಲಾ ಎಂದು ಹೇಳುವರೆಂಬದಾಗಿ ನೀವು ಮೊದಲು ತಿಳುಕೊಳ್ಳಬೇಕು. ಹೀಗೆ ಮಾತಾಡುವವರು ಒಂದು ಸಂಗತಿಯನ್ನು ತಿಳಿ 5

[1] ಅಂಕೆ ೨೨, ೭. ೨೮.

ದರೂ ಬೇಕೆಂದು ಮರೆತುಬಿಡುತ್ತಾರೆ; ಅದೇನಂದರೆ—ಪೂರ್ವಕಾಲದಲ್ಲಿದ್ದ ಭೂಮ್ಯಾಕಾಶಗಳು ದೇವರ ವಾಕ್ಯದ ಮೂಲಕವಾಗಿ ನೀರಿನಿಂದ ಉಂಟಾಗಿ ನೀರಿನಿಂದ ಆಧಾರ
6 ಗೊಂಡಿರುವಲ್ಲಿ[1] ಆ ನೀರುಗಳಿಂದಲೇ[2] ಆ ಕಾಲದಲ್ಲಿದ್ದ ಲೋಕವು ಜಲಪ್ರಲಯದಲ್ಲಿ
7 ನಾಶವಾಯಿತು. ಆದರೆ ಈಗಿರುವ ಭೂಮ್ಯಾಕಾಶಗಳ ಗರ್ಭದೊಳಗೆ ಅದೇ ವಾಕ್ಯದ ಬಲದಿಂದ ಬೆಂಕಿಯು ತುಂಬಿದೆ, ಮತ್ತು ಭಕ್ತಿಹೀನರ ಶಿಕ್ಷಾವಿಧಿಯೂ ನಾಶವೂ ಉಂಟಾಗುವ ದಿನಕ್ಕಾಗಿ ಆ ಬೆಂಕಿ ಸಿದ್ಧವಾಗಿದೆ.

8 ಪ್ರಿಯರೇ, ಕರ್ತನ ಎಣಿಕೆಯಲ್ಲಿ ಒಂದು ದಿನವು ಸಾವಿರ ವರುಷಗಳಂತೆಯೂ ಸಾವಿರ ವರುಷಗಳು ಒಂದು ದಿನದಂತೆಯೂ ಅವೆ ಎಂಬುವದನ್ನು ಮಾತ್ರ ಮರೆಯಬೇಡಿರಿ.
9 ಕರ್ತನು ತನ್ನ ವಾಗ್ದಾನವನ್ನು ನೆರವೇರಿಸುವದಕ್ಕೆ ತಡಮಾಡುತ್ತಾನೆಂಬದಾಗಿ ಕೆಲವರು ಅರ್ಥ ಮಾಡಿಕೊಳ್ಳುವ ಪ್ರಕಾರ ಆತನು ತಡಮಾಡುವವನಲ್ಲ. ಯಾವನಾದರೂ ನಾಶವಾಗುವದರಲ್ಲಿ ಆತನು ಇಷ್ಟಪಡದೆ ಎಲ್ಲರೂ ತನ್ನ ಕಡೆಗೆ ತಿರುಗಿಕೊಳ್ಳಬೇಕೆಂದು ಅಪೇ
10 ಕ್ಷಿಸುವವನಾಗಿದ್ದು ನಿಮ್ಮ ವಿಷಯದಲ್ಲಿ ದೀರ್ಘಶಾಂತಿಯುಳ್ಳವನಾಗಿದ್ದಾನೆ. ಆದರೂ ಕರ್ತನ ದಿನವು ಕಳ್ಳನು ಬರುವಂತೆ ಬರುತ್ತದೆ. ಆ ದಿನದಲ್ಲಿ ಆಕಾಶಮಂಡಲವು ಮಹಾ ಘೋಷದಿಂದ ಇಲ್ಲದೆ ಹೋಗುವದು, ಸೂರ್ಯ ಚಂದ್ರ ನಕ್ಷತ್ರಗಳು ಉರಿದು ಲಯವಾಗಿ ಹೋಗುವವು, ಭೂಮಿಯೂ ಅದರಲ್ಲಿರುವ ಕೆಲಸಗಳೆಲ್ಲಾ ಸುಟ್ಟುಹೋಗುವವು[3].

### ಲೋಕಾಂತ್ಯವನ್ನು ಎದುರುನೋಡುತ್ತಾ ಪರಿಶುದ್ಧರಾಗಿ ನಡಿಯಿರಿ ಎಂಬ ಬೋಧನೆ.

11,12 ಇವೆಲ್ಲವುಗಳು ಹೀಗೆ ಲಯವಾಗಿ ಹೋಗುವದರಿಂದ ನೀವು ದೇವರ ದಿನದ ಪ್ರತ್ಯಕ್ಷತೆಯನ್ನು ಎದುರುನೋಡುತ್ತಾ ಹಾರೈಸುತ್ತಾ[4] ಎಷ್ಟೋ ಪರಿಶುದ್ಧವಾದ ನಡವಳಿಕೆಯೂ ಭಕ್ತಿಯೂ ಉಳ್ಳವರಾಗಿರಬೇಕಲ್ಲಾ; ಆ ದಿನದಲ್ಲಿ ಆಕಾಶಮಂಡಲವು ಬೆಂಕಿ ಹತ್ತಿ ಲಯವಾಗಿ ಹೋಗುವದು, ಸೂರ್ಯ ಚಂದ್ರ ನಕ್ಷತ್ರಗಳು ಉರಿದು ಕರಗಿ
13 ಹೋಗುವವು. ಆದರೆ ನಾವು ದೇವರ ವಾಗ್ದಾನವನ್ನು[5] ನಂಬಿ ನೂತನ ಆಕಾಶಮಂಡಲವನ್ನೂ ನೂತನ ಭೂಮಿಯನ್ನೂ ಎದುರುನೋಡುತ್ತಾ ಇದ್ದೇವೆ; ಅವುಗಳಲ್ಲಿ ನೀತಿಯು ವಾಸವಾಗಿರುವದು.

14 ಆದಕಾರಣ, ಪ್ರಿಯರೇ, ನೀವು ಇವುಗಳನ್ನು ಎದುರುನೋಡುವವರಾಗಿರುವದರಿಂದ ಶಾಂತರಾಗಿದ್ದು ಆತನೆದುರಿನಲ್ಲಿ ನಿರ್ಮಲರಾಗಿಯೂ ನಿರ್ದೋಷಿಗಳಾಗಿಯೂ ಕಾಣಿಸಿ
15 ಕೊಳ್ಳುವದಕ್ಕೆ ಆಸಕ್ತರಾಗಿರಿ. ನಮ್ಮ ಕರ್ತನ ದೀರ್ಘಶಾಂತಿಯು ನಮ್ಮ ರಕ್ಷಣಾರ್ಥವಾಗಿ ಅದೆ ಎಂದು ಎಣಿಸಿಕೊಳ್ಳಿರಿ. ಇದೇ ಅಭಿಪ್ರಾಯಕ್ಕೆ ಸರಿಯಾಗಿ ನಮ್ಮ ಪ್ರಿಯ ಸಹೋದರನಾದ ಪೌಲನು ಸಹ ತನಗೆ ಅನುಗ್ರಹಿಸಿರುವ ಜ್ಞಾನದ ಪ್ರಕಾರ ನಿಮಗೆ
16 ಬರೆದನು[6]. ಅವನು ತನ್ನ ಎಲ್ಲಾ ಪತ್ರಿಕೆಗಳಲ್ಲಿಯೂ ಈ ವಿಷಯಗಳನ್ನು ಕುರಿತು

---

[1] ಕೀರ್ತನೆ ೨೪, ೨; ಉತ್ಪತ್ತಿ ೧, ೬. [2] ಉತ್ಪತ್ತಿ ೭, ೧೧.
[3] ಕೆಲವು ಪ್ರತಿಗಳಲ್ಲಿ—ಭೂಮಿಯೂ ಅದರಲ್ಲಿರುವ ಕೆಲಸಗಳೂ ಕಾಣುವವೇ? ಎಂದು ಬರೆದದೆ.
[4] ಅಥವಾ, ಬೇಗ ಬರುವಂತೆ ಪ್ರಯತ್ನಿಸುತ್ತಾ. [5] ಯೆಶಾಯ ೬೫, ೧೭; ೬೬, ೨೨. [6] ರೋಮಾ. ೨, ೪.

ಬರೆಯುವಾಗ ಹೀಗೆ ಬೋಧಿಸಿದ್ದಾನೆ. ಆ ಪತ್ರಿಕೆಗಳಲ್ಲಿರುವ ಕೆಲವು ಮಾತುಗಳು ತಿಳಿಯುವದಕ್ಕೆ ಕಷ್ಟವಾಗಿವೆ. ವಿದ್ಯಾಹೀನರೂ ಚಪಲಚಿತ್ತರೂ ಹ್ಯಾಗೆ ನಮಗಿರುವ ಮಿಕ್ಕಾದ ಗ್ರಂಥಗಳಿಗೆ ತಪ್ಪಾದ ಅರ್ಥ ಮಾಡಿಕೊಂಡಿದ್ದಾರೋ ಹಾಗೆಯೇ ಇವುಗಳಿಗೂ ತಪ್ಪಾದ ಅರ್ಥ ಮಾಡಿಕೊಂಡು ತಮಗೆ ನಾಶವನ್ನುಂಟುಮಾಡಿಕೊಳ್ಳುತ್ತಾರೆ. 17 ಆದಕಾರಣ, ಪ್ರಿಯರೇ, ನೀವು ಈ ಸಂಗತಿಗಳನ್ನು ಮುಂದಾಗಿ ತಿಳಿದುಕೊಂಡಿರುವದರಿಂದ ಅಧರ್ಮಿಗಳ ಭ್ರಾಂತಿಯ ಸೆಳವಿಗೆ ಸಿಕ್ಕಿಕೊಂಡು ನಿಮ್ಮ ಸ್ಥಿರ ಮನಸ್ಸನ್ನು ಬಿಟ್ಟು ಭ್ರಷ್ಟರಾಗದಂತೆ ಎಚ್ಚರಿಕೆಯಾಗಿರಿ. 18 ನೀವು ಕೃಪೆಯಲ್ಲಿಯೂ ನಮ್ಮ ಕರ್ತನೂ ರಕ್ಷಕನೂ ಆಗಿರುವ ಯೇಸು ಕ್ರಿಸ್ತನ ವಿಷಯವಾದ ಜ್ಞಾನದಲ್ಲಿಯೂ ಅಭಿವೃದ್ಧಿಯನ್ನು ಹೊಂದುತ್ತಾ ಇರ್ರಿ. ಆತನಿಗೆ ಈಗಲೂ ಸದಾಕಾಲವೂ ಸ್ತೋತ್ರ.

# THE FIRST EPISTLE OF SAINT JOHN

# ಯೋಹಾನನು ಬರೆದ ಮೊದಲನೇ ಪತ್ರಿಕೆ

ಯೇಸು ಕ್ರಿಸ್ತನಲ್ಲಿ ಪ್ರಕಟವಾದ ನಿತ್ಯಜೀವದಿಂದ ದೇವರ ಸಂಗಡಲೂ ಜೊತೆಯ ಭಕ್ತರ ಸಂಗಡಲೂ ಅನ್ಯೋನ್ಯತೆ ಉಂಟಾಗುತ್ತೆ.

**1** ನಾವು ನಿಮಗೆ ಪ್ರಸಿದ್ಧಿಪಡಿಸುವ ಜೀವವಾಕ್ಯವು ಆದಿಯಿಂದ ಇದ್ದದ್ದು. ನಾವು ಅದನ್ನು ಕಿವಿಯಾರೆ ಕೇಳಿ ಕಣ್ಣಾರೆ ಕಂಡು ಮನಸ್ಸಿಟ್ಟು ನೋಡಿ ಕೈಯಿಂದ ಮುಟ್ಟಿದ್ಧೇವೆ. 2 ಆ ಜೀವವು ಪ್ರತ್ಯಕ್ಷವಾಯಿತು; ತಂದೆಯ ಬಳಿಯಲ್ಲಿದ್ದು ನಮಗೆ ಪ್ರತ್ಯಕ್ಷವಾದಂಥಾ ಆ ನಿತ್ಯಜೀವವನ್ನು ನಾವು ಕಂಡು ಅದನ್ನು ಕುರಿತು ಸಾಕ್ಷಿ ಹೇಳಿ ಅದನ್ನು ನಿಮಗೆ ಪ್ರಸಿದ್ಧಿ 3 ಪಡಿಸುತ್ತೇವೆ. ನಾವು ಕಂಡು ಕೇಳಿದ್ದು ನಿಮಗೂ ಗೊತ್ತಾಗಿ ನಮಗಿರುವ ಅನ್ಯೋ ನ್ಯತಾಭಾಗ್ಯದಲ್ಲಿ ನೀವೂ ಸೇರಬೇಕೆಂದು ಅದನ್ನು ನಿಮಗೆ ಪ್ರಸಿದ್ಧಿಪಡಿಸುತ್ತೇವೆ. ನಮ ಗಿರುವ ಅನ್ಯೋನ್ಯತೆಯು ತಂದೆಯ ಸಂಗಡಲೂ ಆತನ ಮಗನಾದ ಯೇಸು ಕ್ರಿಸ್ತನ 4 ಸಂಗಡಲೂ ಇರುವಂಥಾದ್ದು. ನಮ್ಮುಭಯತರ[1] ಸಂತೋಷವು ಪರಿಪೂರ್ಣವಾಗ ಬೇಕೆಂದು ನಾವು ಈ ಮಾತುಗಳನ್ನು ಬರೆಯುತ್ತೇವೆ.

ದೇವರಲ್ಲಿ ಕತ್ತಲೆಯಿಲ್ಲದ ಕಾರಣ ನಾವು ಪಾಪವನ್ನು ಮರೆಮಾಜದೆ ಅದನ್ನು ಒಪ್ಪಿಕೊಂಡು ಪಾಪಪರಿಹಾರವನ್ನು ಪಡೆಯಬೇಕು.

5 ನಾವು ಆತನಿಂದ ಕೇಳಿ ನಿಮಗೆ ತಿಳಿಸುವ ವಾರ್ತೆ ಯಾವದಂದರೆ, ದೇವರು ಬೆಳಕಾಗಿ 6 ದ್ಧಾನೆ ಮತ್ತು ಆತನಲ್ಲಿ ಎಷ್ಟು ಮಾತ್ರವೂ ಕತ್ತಲೆಯಿಲ್ಲ ಎಂಬುವದೇ. ನಾವು ದೇವರ ಸಂಗಡ ಅನ್ಯೋನ್ಯತೆಯುಳ್ಳವರಾಗಿದ್ಧೇವೆಂದು ಹೇಳಿ ಕತ್ತಲೆಯಲ್ಲಿ ನಡೆದರೆ, ಸತ್ಯವನ್ನನು 7 ಸರಿಸದೆ ಸುಳ್ಳಾಡುವವರಾಗಿದ್ಧೇವೆ. ಆದರೆ ಆತನು ಬೆಳಕಿನಲ್ಲಿರುವಂತೆಯೇ ನಾವು ಬೆಳಕಿನಲ್ಲಿ ನಡೆದರೆ, ನಾವು ಒಬ್ಬರ ಸಂಗಡಲೊಬ್ಬರು ಅನ್ಯೋನ್ಯತೆಯಲ್ಲಿದ್ಧೇವೆ, ಮತ್ತು ಆತನ ಮಗನಾದ ಯೇಸುವಿನ ರಕ್ತವು ಸಕಲ ಪಾಪವನ್ನು ನಿವಾರಣಮಾಡಿ ನಮ್ಮನ್ನು

---

[1] ಮೂಲ: ನಮ್ಮ; ಕೆಲವು ಪ್ರತಿಗಳಲ್ಲಿ—ನಿಮ್ಮ ಎಂದು ಬರೆದದೆ.

ಶುದ್ಧಿ ಮಾಡುತ್ತದೆ. ನಮ್ಮಲ್ಲಿ ಪಾಪವಿಲ್ಲವೆಂದು ನಾವು ಹೇಳಿದರೆ, ನಮ್ಮನ್ನು ನಾವೇ 8
ಮೋಸ ಪಡಿಸಿಕೊಳ್ಳುತ್ತೇವೆ, ಮತ್ತು ಸತ್ಯವೆಂಬುವದು ನಮ್ಮಲ್ಲಿಲ್ಲ. ನಮ್ಮ ಪಾಪಗಳನ್ನು 9
ಒಪ್ಪಿಕೊಂಡು ಅರಿಕೆಮಾಡಿದರೆ, ಆತನು ನಂಬಿಗಸ್ತನೂ ನೀತಿವಂತನೂ ಆಗಿರುವದರಿಂದ
ನಮ್ಮ ಪಾಪಗಳನ್ನು ಕ್ಷಮಿಸಿಬಿಟ್ಟು ಸಕಲ ಅನೀತಿಯನ್ನು ಪರಿಹರಿಸಿ ನಮ್ಮನ್ನು ಶುದ್ಧಿ
ಮಾಡುವನು. ನಾವು ಪಾಪಮಾಡಲಿಲ್ಲವೆಂದು ಹೇಳಿದರೆ, ಆತನನ್ನು ಸುಳ್ಳುಗಾರನನ್ನಾಗ 10
ಮಾಡುತ್ತೇವೆ, ಮತ್ತು ಆತನ ವಾಕ್ಯವು ನಮ್ಮಲ್ಲಿ ಇಲ್ಲ.

ನನ್ನ ಪ್ರಿಯರಾದ ಮಕ್ಕಳೇ, ನೀವು ಪಾಪಮಾಡದಂತೆ ಈ ಮಾತುಗಳನ್ನು ನಿಮಗೆ **2**
ಬರೆಯುತ್ತೇನೆ. ಯಾವನಾದರೂ ಪಾಪಮಾಡಿದರೆ, ತಂದೆಯ ಬಳಿಯಲ್ಲಿ ನೀತಿವಂತ
ನಾದ ಯೇಸು ಕ್ರಿಸ್ತನೆಂಬ ಸಹಾಯಕನು ನಮಗಿದ್ದಾನೆ. ಆತನು ನಮ್ಮ ಪಾಪಗಳನ್ನು 2
ನಿವಾರಣಮಾಡುವ ಯಜ್ಞವಾಗಿದ್ದಾನೆ[1]; ನಮ್ಮ ಪಾಪಗಳನ್ನು ಮಾತ್ರವಲ್ಲದೆ, ಸಮಸ್ತ
ಲೋಕದ ಪಾಪಗಳನ್ನು ಸಹ ನಿವಾರಣಮಾಡುತ್ತಾನೆ.

### ದೇವರ ಆಜ್ಞೆಗಳನ್ನು ಕೈಕೊಳ್ಳುವವರೇ ಹೊರತು ದೇವರನ್ನರಿತವರು ಬೇರೆ ಯಾರೂ ಇಲ್ಲ.

ನಾವು ದೇವರ ಆಜ್ಞೆಗಳನ್ನು ಕೈಕೊಂಡು ನಡೆದರೆ, ಅದರಿಂದಲೇ ಆತನನ್ನು ಬಲ್ಲವ 3
ರಾಗಿದ್ದೇವೆಂದು ತಿಳುಕೊಳ್ಳುತ್ತೇವೆ. ದೇವರನ್ನು ಬಲ್ಲೆನೆಂದು ಹೇಳಿ ಆತನ ಆಜ್ಞೆಗಳನ್ನು 4
ಕೈಕೊಳ್ಳದೆ ನಡೆಯುವವನು ಸುಳ್ಳುಗಾರನಾಗಿದ್ದಾನೆ; ಸತ್ಯವೆಂಬುವದು ಅವನಲ್ಲಿ ಇಲ್ಲ.
ಯಾವನಾದರೂ ಆತನ ವಾಕ್ಯವನ್ನು ಕೈಕೊಂಡು ನಡೆದರೆ, ಅವನಲ್ಲಿ ನಿಜವಾಗಿ ದೇವರ 5
ಮೇಲಣ ಪ್ರೀತಿಯು[2] ಪರಿಪೂರ್ಣವಾಗಿದೆ. ಇದರಿಂದಲೇ ಆತನಲ್ಲಿದ್ದೇವೆಂಬುವದನ್ನು
ತಿಳುಕೊಳ್ಳುತ್ತೇವೆ. ಆತನಲ್ಲಿ ನೆಲೆಗೊಂಡವನಾಗಿದ್ದೇನೆಂದು ಹೇಳುವವನು ಕ್ರಿಸ್ತನು 6
ನಡೆದಂತೆಯೇ ತಾನೂ ನಡೆಯುವದಕ್ಕೆ ಬದ್ಧನಾಗಿದ್ದಾನೆ.

### ಕತ್ತಲೆಯನ್ನು ಬಿಟ್ಟು ಬೆಳಕಿಗೆ ಸೇರಿದವರಲ್ಲಿ ಪ್ರೀತಿಸ್ವಭಾವವೇ ಅವಶ್ಯ.

ಪ್ರಿಯರೇ, ನಾನು ನಿಮಗೆ ಬರೆಯುವದು ಹೊಸ ಅಪ್ಪಣೆಯಲ್ಲ, ಮೊದಲಿಂದಲೂ 7
ನಿಮಗಿದ್ದ ಹಳೆ ಅಪ್ಪಣೆಯಾಗಿದೆ; ಈ ಹಳೇ ಅಪ್ಪಣೆಯು ನೀವು ಕೇಳಿದ ವಾಕ್ಯವೇ.
ಆದಾಗ್ಯೂ ನಾನು ನಿಮಗೆ ಬರೆಯುವದು ಹೊಸ ಅಪ್ಪಣೆಯೇ; ಇದು ಆತನಲ್ಲಿಯೂ 8
ನಿಮ್ಮಲ್ಲಿಯೂ ಸತ್ಯವಾಗಿದೆ; ಹ್ಯಾಗಂದರೆ ಕತ್ತಲೆಯು ಕಳೆದುಹೋಗುತ್ತದೆ, ನಿಜವಾದ
ಬೆಳಕು ಈಗಲೇ ಪ್ರಕಾಶಿಸುತ್ತದೆ. ಬೆಳಕಿನಲ್ಲಿದ್ದೇನೆಂದು ಹೇಳಿಕೊಂಡು ತನ್ನ ಸಹೋ 9
ದರನನ್ನು ದ್ವೇಷಿಸುವವನು[3] ಈ ವರೆಗೂ ಕತ್ತಲೆಯಲ್ಲಿದ್ದಾನೆ. ತನ್ನ ಸಹೋದರನನ್ನು 10
ಪ್ರೀತಿಸುವವನು ಬೆಳಕಿನಲ್ಲಿ ನೆಲೆಗೊಂಡಿದ್ದಾನೆ, ಮತ್ತು ಅವನಲ್ಲಿ ವಿಘ್ನಕರವಾದದ್ದು
ಏನೂ ಇಲ್ಲ. ತನ್ನ ಸಹೋದರನನ್ನು ದ್ವೇಷಿಸುವವನು[3] ಕತ್ತಲೆಯಲ್ಲಿದ್ದಾನೆ, ಕತ್ತಲೆ 11

---

1) ಅಥವಾ, ಸಿವಾರಣಮಾಡುವವನಾಗಿದ್ದಾನೆ. 2) ಅಥವಾ, ದೇವರ ಪ್ರೀತಿಯು.

3) ಅಥವಾ, ಅಲಕ್ಷ್ಯಮಾಡುವವನು; ರೋಮಾ. ೯, ೧೩ ನೋಡು.

ಯಲ್ಲಿ ನಡೆದುಕೊಳ್ಳುತ್ತಾನೆ. ಕತ್ತಲೆಯು ಅವನ ಕಣ್ಣುಗಳನ್ನು ಕಾಣದ ಹಾಗೆ ಮಾಡಿದ್ದರಿಂದ ತಾನು ಎಲ್ಲಿಗೆ ಹೋಗುತ್ತಾನೋ ಅವನಿಗೆ ತಿಳಿಯದು.

ಈ ಪತ್ರಿಕೆಯನ್ನು ಸಭೆಯವರೆಲ್ಲರಿಗೋಸ್ಕರ ಬರೆವದಕ್ಕೆ ಕಾರಣ.

12 ಪ್ರಿಯರಾದ ಮಕ್ಕಳೇ, ಕ್ರಿಸ್ತನ ಹೆಸರಿನ ನಿಮಿತ್ತ ನಿಮ್ಮ ಪಾಪಗಳು ಕ್ಷಮಿಸಲ್ಪಟ್ಟಿರು 13 ವದರಿಂದ ನಿಮಗೆ ಬರೆಯುತ್ತೇನೆ. ತಂದೆಗಳೇ, ಆದಿಯಿಂದಿರುವಾತನನ್ನು[1] ನೀವು ಬಲ್ಲವರಾಗಿರುವದರಿಂದ ನಿಮಗೆ ಬರೆಯುತ್ತೇನೆ. ಯೌವನಸ್ಥರೇ, ನೀವು ಕೆಡಕನನ್ನು ಜಯಿಸಿದ್ದರಿಂದ ನಿಮಗೆ ಬರೆಯುತ್ತೇನೆ.

ಮಕ್ಕಳಿರಾ, ನೀವು ತಂದೆಯನ್ನು ಬಲ್ಲವರಾಗಿರುವದರಿಂದ ನಿಮಗೆ ಬರೆದಿದ್ದೇನೆ. 14 ತಂದೆಗಳೇ, ಆದಿಯಿಂದಿರುವಾತನನ್ನು ನೀವು ಬಲ್ಲವರಾಗಿರುವದರಿಂದ ನಿಮಗೆ ಬರೆದಿದ್ದೇನೆ. ಯೌವನಸ್ಥರೇ, ನೀವು ಶಕ್ತರಾಗಿರುವದರಿಂದಲೂ ದೇವರ ವಾಕ್ಯವು ನಿಮ್ಮಲ್ಲಿ ನೆಲೆಗೊಂಡಿರುವದರಿಂದಲೂ ನೀವು ಕೆಡಕನನ್ನು ಜಯಿಸಿರುವದರಿಂದಲೂ ನಿಮಗೆ ಬರೆದಿದ್ದೇನೆ.

ದೇವರನ್ನು ಪ್ರೀತಿಸುವವರು ಲೋಕವನ್ನು ಪ್ರೀತಿಸಬಾರದು.

15 ಲೋಕವನ್ನಾಗಲಿ ಲೋಕದಲ್ಲಿರುವವುಗಳನ್ನಾಗಲಿ ಪ್ರೀತಿಸಬೇಡಿರಿ. ಯಾವನಾದರೂ 16 ಲೋಕವನ್ನು ಪ್ರೀತಿಸಿದರೆ, ತಂದೆಯ ಮೇಲಣ ಪ್ರೀತಿಯು ಅವನಲ್ಲಿಲ್ಲ. ಲೋಕದಲ್ಲಿರುವ ಶರೀರದಾಶೆ ಕಣ್ಣಿನಾಶೆ ಬದುಕುಬಾಳಿನ ದಂಭ ಈ ಮೊದಲಾದವುಗಳೆಲ್ಲವು ತಂದೆಯಿಂದ 17 ಹುಟ್ಟದೆ ಲೋಕದಿಂದ ಹುಟ್ಟಿದವುಗಳಾಗಿವೆ. ಲೋಕವೂ ಅದರ ಆಶೆಯೂ ಗತಿಸಿ ಹೋಗುತ್ತವೆ; ಆದರೆ ದೇವರ ಚಿತ್ತವನ್ನು ನೆರವೇರಿಸುವವನು ಎಂದೆಂದಿಗೂ ಇರುವನು.

ಕ್ರಿಸ್ತವಿರೋಧಿಗಳಾದ ದುರ್ಬೋಧಕರ ವಿಷಯದಲ್ಲಿ ಎಚ್ಚರಿಕೆ.

18 ಮಕ್ಕಳಿರಾ, ಇದು ಕಡೇ ಗಳಿಗೆಯಾಗಿದೆ; ಕ್ರಿಸ್ತವಿರೋಧಿ[2] ಬರುತ್ತಾನೆಂದು ನೀವು ಕೇಳಿದ್ದೀರಷ್ಟೆ; ಈಗಲೂ ಕ್ರಿಸ್ತವಿರೋಧಿಗಳು ಬಹುಮಂದಿ ಎದ್ದಿದ್ದಾರೆ; ಇದರಿಂದ 19 ಇದು ಕಡೇ ಗಳಿಗೆಯಾಗಿದೆ ಎಂದು ತಿಳುಕೊಳ್ಳುತ್ತೇವೆ. ಅವರು ನಮ್ಮನ್ನು ಬಿಟ್ಟು ಹೊರಟುಹೋದರು, ಆದರೆ ಅವರು ನಮ್ಮವರಾಗಿರಲಿಲ್ಲ. ಅವರು ನಮ್ಮವರಾಗಿದ್ದರೆ, ನಮ್ಮ ಜೊತೆಯಲ್ಲೇ ಇರುತ್ತಿದ್ದರು, ಆದರೆ ಅವರು ನಮ್ಮನ್ನು ಬಿಟ್ಟುಹೋದದರಿಂದ ಕ್ರೈಸ್ತರೆನ್ನಿಸಿಕೊಳ್ಳುವವರೆಲ್ಲರೂ[3] ನಮ್ಮವರಲ್ಲವೆಂಬುವದು ಸ್ಪಷ್ಟವಾಗಿ ತೋರಬಂತು. 20 ನೀವು ಪವಿತ್ರನಾದ ದೇವರಿಂದ ಅಭಿಷೇಕವನ್ನು ಹೊಂದಿದವರಾಗಿದ್ದು ಎಲ್ಲರೂ ತಿಳಿದವ

[1] ಯೋಹಾನ ೧, ೧; ೧ ಯೋಹಾನ ೧, ೧. [2] ಅಥವಾ, ಅಂತಿಕ್ರಿಸ್ತನೆಂಬುವವನು.
[3] ಮೂಲ: ಎಲ್ಲರೂ.

ರಾಗಿದ್ಧೀರಿ[1]. ನೀವು ಸತ್ಯವನ್ನು ತಿಳಿಯದವರೆಂಬ ಭಾವನೆಯಿಂದಲ್ಲ, ನೀವು ಅದನ್ನು 21 ತಿಳಿದಿರುವದರಿಂದಲೂ ಯಾವ ಸುಳ್ಳೂ ಸತ್ಯದಿಂದ ಹುಟ್ಟಿ ಬರುವದಿಲ್ಲವೆಂಬದನ್ನು ನೀವು ತಿಳಿದವರಾಗಿರುವದರಿಂದಲೂ ನಿಮಗೆ ಬರೆದೆನು.

ಯೇಸುವನ್ನು ಕ್ರಿಸ್ತನಲ್ಲವೆನ್ನುವವನು ಸುಳ್ಳುಗಾರನಲ್ಲವಾದರೆ, ಸುಳ್ಳುಗಾರನು ಬೇರೆ 22 ಎಲ್ಲಿದ್ಧಾನೆ? ಯಾವನಾದರೂ ತಾನು ತಂದೆಯನ್ನೂ ಮಗನನ್ನೂ ಅರಿಯೆನು ಎಂದು ಹೇಳಿದರೆ, ಅವನೇ ಕ್ರಿಸ್ತವಿರೋಧಿ. ತಾನು ದೇವರ ಮಗನಿಗೆ ಸೇರಿದವನಲ್ಲವೆನ್ನುವವನು 23 ತಂದೆಗೆ ಸೇರಿದವನಲ್ಲ; ತಾನು ಮಗನಿಗೆ ಸೇರಿದವನೆಂದು ಒಪ್ಪಿಕೊಳ್ಳುವವನು ತಂದೆಗೂ ಸೇರಿದವನಾಗಿದ್ಧಾನೆ. ನೀವಂತೂ ಯಾವ ಬೋಧನೆಯನ್ನು ಮೊದಲಿನಿಂದ ಕೇಳಿ 24 ದ್ಧೀರೋ ಅದು ನಿಮ್ಮಲ್ಲಿ ನೆಲೆಗೊಂಡಿರಲಿ. ಮೊದಲಿನಿಂದ ನೀವು ಕೇಳಿದ ಬೋಧ ನೆಯು ನಿಮ್ಮಲ್ಲಿ ನೆಲೆಗೊಂಡಿದ್ದರೆ, ನೀವು ಸಹ ಮಗನಲ್ಲಿಯೂ ತಂದೆಯಲ್ಲಿಯೂ ನೆಲೆ ಗೊಂಡಿರುತ್ತೀರಿ. ಕ್ರಿಸ್ತನು ತಾನು ಕೊಡುತ್ತೇನೆಂದು ನಮಗೆ ವಾಗ್ದಾನ ಮಾಡಿದ್ದು 25 ನಿತ್ಯಜೀವವು[2].

ನಿಮ್ಮನ್ನು ಸನ್ಮಾರ್ಗದಿಂದ ತಪ್ಪಿಸಬೇಕೆಂದಿರುವವರ ವಿಷಯವಾಗಿ ಈ ಸಂಗತಿಗಳನ್ನು 26 ನಿಮಗೆ ಬರೆದಿದ್ದೇನೆ. ಆದರೆ ಪವಿತ್ರನಾದ ದೇವರಿಂದ ನೀವು ಹೊಂದಿದ ಅಭಿಷೇಕವು 27 ನಿಮ್ಮಲ್ಲಿ ನೆಲೆಗೊಂಡಿರುವದರಿಂದ ಯಾವನಾದರೂ ನಿಮಗೆ ಉಪದೇಶ ಮಾಡುವದು ಅವಶ್ಯವಿಲ್ಲ. ಆತನು ಮಾಡಿದ ಅಭಿಷೇಕವು ಎಲ್ಲಾ ವಿಷಯಗಳಲ್ಲಿ ನಿಮಗೆ ಉಪದೇಶ ಮಾಡುವಂಥಾದ್ದಾಗಿದ್ದು ಸತ್ಯವಾಗಿದೆ, ಸುಳ್ಳಲ್ಲ. ಅದು ನಿಮಗೆ ಉಪದೇಶ ಮಾಡಿದ ಪ್ರಕಾರ ಆತನಲ್ಲಿ ನೆಲೆಗೊಂಡಿರ್ರಿ. ಪ್ರಿಯರಾದ ಮಕ್ಕಳೇ, ಆತನಲ್ಲಿ ನೆಲೆಗೊಂಡಿರ್ರಿ; 28 ಆತನು ಪ್ರತ್ಯಕ್ಷನಾಗುವಾಗ ನಾವು ಆತನ ಆಗಮನದಲ್ಲಿ ಆತನ ಮುಂದೆ ನಾಚಿಕೆಪಡದೆ ಧೈರ್ಯದಿಂದಿರುವೆವು. ದೇವರು ನೀತಿವಂತನಾಗಿದ್ಧಾನೆಂಬುವದು ನಿಮಗೆ ಗೊತ್ತಾಗಿ 29 ದ್ದರೆ, ನೀತಿಯನ್ನು ಅನುಸರಿಸುವವರು ಆತನಿಂದ ಹುಟ್ಟಿದವರಾಗಿದ್ಧಾರೆಂದು ನೀವು ತಿಳಿದಿದ್ಧೀರಿ.

ದೇವರ ಮಕ್ಕಳನ್ನೂ ಸೈತಾನನ ಮಕ್ಕಳನ್ನೂ ಕುರಿತದ್ದು.

**3** ದೇವರ ಮಕ್ಕಳೆಂಬ ಹೆಸರನ್ನು ನಮಗೆ ಕೊಡುವದರಲ್ಲಿ ತಂದೆಯು ಎಂಥಾ ಪ್ರೀತಿ ಯನ್ನು ನಮ್ಮ ಮೇಲೆ ಇಟ್ಟಿದ್ಧಾನೆಂದು ನೋಡಿರಿ; ನಾವು ಆತನ ಮಕ್ಕಳಾಗಿದ್ದೇವೆ. ಈ ಕಾರಣದಿಂದ ಲೋಕವು ನಮ್ಮನ್ನು ತಿಳುಕೊಳ್ಳುವದಿಲ್ಲ, ಅದು ಆತನನ್ನು ತಿಳುಕೊಳ್ಳ ಲಿಲ್ಲವಲ್ಲಾ. ಪ್ರಿಯರೇ, ಈಗ ದೇವರ ಮಕ್ಕಳಾಗಿದ್ದೇವೆ; ಮುಂದೆ ನಾವು ಏನಾಗು 2 ವೆವೋ ಅದು ಇನ್ನು ಪ್ರತ್ಯಕ್ಷವಾಗಲಿಲ್ಲ. ಕ್ರಿಸ್ತನು[3] ಪ್ರತ್ಯಕ್ಷನಾದರೆ, ನಾವು ಆತನ[4] ಹಾಗಿರುವೆವೆಂದು ಬಲ್ಲೆವು; ಯಾಕಂದರೆ ಆತನಿರುವ ಪ್ರಕಾರವೇ ಆತನನ್ನು ನೋಡುವೆವು.

[1] ಕೆಲವು ಪ್ರತಿಗಳಲ್ಲಿ — ಎಲ್ಲವನ್ನೂ ತಿಳಿದವರಾಗಿದ್ಧೀರಿ ಎಂದು ಬರೆದದೆ.

[2] ಯೋಹಾನ ೩, ೧೫; ೫, ೨೪; ೬, ೪೭. ೫೪; ೧೦, ೨೮; ೧೭, ೩.

[3] ಮೂಲ: ಆತನು, ಅಥವಾ ಅದು. [4] ಅಥವಾ, ದೇವರ.

3 ಆತನ ಮೇಲೆ ಈ ನಿರೀಕ್ಷೆಯನ್ನು ಇಟ್ಟಿರುವ ಪ್ರತಿಯೊಬ್ಬನು ಕ್ರಿಸ್ತನು ಶುದ್ಧನಾಗಿರು
ವಂತೆಯೇ ತನ್ನನ್ನು ಶುದ್ಧಮಾಡಿಕೊಳ್ಳುತ್ತಾನೆ.

4 ಪಾಪಮಾಡುವ ಪ್ರತಿಯೊಬ್ಬನು ಅಧರ್ಮವನ್ನು ಮಾಡುವವನಾಗಿದ್ದಾನೆ; ಪಾಪವು
5 ಅಧರ್ಮವೇ. ಪಾಪಗಳನ್ನು ಹೋಗಲಾಡಿಸುವದಕ್ಕಾಗಿ ಕ್ರಿಸ್ತನು ಪ್ರತ್ಯಕ್ಷನಾದನೆಂಬು
6 ವದು ನಿಮಗೆ ಗೊತ್ತಾಗಿದೆ; ಆತನಲ್ಲಿ ಪಾಪವಿಲ್ಲ. ಆತನಲ್ಲಿ ನೆಲೆಗೊಂಡಿರುವವನು ಪಾಪ
ಮಾಡನು; ಪಾಪಮಾಡುವವನು ಆತನನ್ನು ಕಂಡವನೂ ಅಲ್ಲ, ತಿಳಿದವನೂ ಅಲ್ಲ.
7 ಪ್ರಿಯರಾದ ಮಕ್ಕಳೇ, ನಿಮ್ಮನ್ನು ಸನ್ಮಾರ್ಗದಿಂದ ತಪ್ಪಿಸುವದಕ್ಕೆ ಯಾರಿಗೂ ಅವಕಾಶ
ಕೊಡಬೇಡಿರಿ. ಕ್ರಿಸ್ತನು ಹ್ಯಾಗೆ ನೀತಿವಂತನಾಗಿದ್ದಾನೋ ಹಾಗೆಯೇ ನೀತಿಯನ್ನನು
8 ಸರಿಸುವವನು ನೀತಿವಂತನಾಗಿರುವನು. ಪಾಪಮಾಡುವವನು ಸೈತಾನನಿಂದ ಹುಟ್ಟಿ
ದವನಾಗಿದ್ದಾನೆ; ಆದಿಯಿಂದಲೂ ಸೈತಾನನು ಪಾಪಮಾಡುವವನಾಗಿದ್ದಾನಲ್ಲಾ[1].
ಸೈತಾನನ ಕೆಲಸಗಳನ್ನು ಲಯಮಾಡುವದಕ್ಕೋಸ್ಕರವೇ ದೇವಕುಮಾರನು ಪ್ರತ್ಯಕ್ಷ
ನಾದನು.

9 ದೇವರಿಂದ ಹುಟ್ಟಿದವನು ಪಾಪಮಾಡನು; ದೇವರ ಜೀವವು[2] ಅವನಲ್ಲಿ ನೆಲೆಗೊಂಡದೆ.
10 ಅವನು ದೇವರಿಂದ ಹುಟ್ಟಿದ ಕಾರಣ ಪಾಪಮಾಡುವವನಾಗಿರಲಾರನು. ಇವರು
ದೇವರ ಮಕ್ಕಳೆಂಬುವದೂ ಅವರು ಸೈತಾನನ ಮಕ್ಕಳೆಂಬುವದೂ ಇದರಿಂದ ವ್ಯಕ್ತ
ವಾಗುತ್ತದೆ. ನೀತಿಯನ್ನು ಅನುಸರಿಸದವನೂ ತನ್ನ ಸಹೋದರನನ್ನು ಪ್ರೀತಿಸದವನೂ
11 ದೇವರಿಂದ ಹುಟ್ಟಿದವರಲ್ಲ. ನಾವು ಒಬ್ಬರನ್ನೊಬ್ಬರು ಪ್ರೀತಿಸಬೇಕೆಂಬುವದೇ ನೀವು
12 ಮೊದಲಿನಿಂದಲೂ ಕೇಳಿದ ವಾಕ್ಯವಾಗಿದೆ. ಕೆಡಕನಿಂದ ಹುಟ್ಟಿ ತನ್ನ ತಮ್ಮನನ್ನು
ಕೊಂದುಹಾಕಿದ ಕಾಯಿನನಂತೆ ನಾವು ಇರಬಾರದು. ಯಾವ ಕಾರಣದಿಂದ ಅವನನ್ನು
ಕೊಂದುಹಾಕಿದನು? ತನ್ನ ಕೃತ್ಯಗಳು ಕೆಟ್ಟವುಗಳಾಗಿಯೂ ತನ್ನ ತಮ್ಮನ ಕೃತ್ಯಗಳು
ನೀತಿಗೆ ಸರಿಯಾದವುಗಳಾಗಿಯೂ ಇದ್ದದರಿಂದಲೇ.

### ನಿತ್ಯಜೀವದಲ್ಲಿ ಸೇರಿರುವವರಿಗೆ ಪರರ ಪ್ರೀತಿಯಿರುವದು.

13, 14 ಸಹೋದರರೇ, ಲೋಕವು ನಿಮ್ಮನ್ನು ದ್ವೇಷಿಸಿದರೆ ಆಶ್ಚರ್ಯಪಡಬೇಡಿರಿ. ನಾವಂತೂ
ಕ್ರೈಸ್ತಸಹೋದರರನ್ನು ಪ್ರೀತಿಸುವವರಾಗಿರುವದರಿಂದ, ಮರಣದಿಂದ ಪಾರಾಗಿ ಜೀವದಲ್ಲಿ
ಸೇರಿದ್ದೇವೆಂಬುವದು ನಮಗೆ ಗೊತ್ತಾಗಿದೆ. ಪ್ರೀತಿಸದೆ ಇರುವವನು ಮರಣದಲ್ಲೇ
15 ಇದ್ದಾನೆ. ತನ್ನ ಸಹೋದರನನ್ನು ದ್ವೇಷಿಸುವವನು ಕೊಲೆಗಾರನಾಗಿದ್ದಾನೆ[3], ಮತ್ತು
ಯಾವ ಕೊಲೆಗಾರನಲ್ಲಿಯೂ ನಿತ್ಯಜೀವವು ಇರುವದಿಲ್ಲವೆಂಬುವದು ನಿಮಗೆ ಗೊತ್ತಾಗಿದೆ.
16 ಕ್ರಿಸ್ತನು ನಮಗೋಸ್ಕರ ತನ್ನ ಪ್ರಾಣವನ್ನು ಕೊಟ್ಟದರಲ್ಲಿಯೇ ಪ್ರೀತಿ ಎಂಥಾದ್ದೆಂದು
ನಮಗೆ ತಿಳಿದು ಬಂದದೆ. ನಾವು ಸಹ ಸಹೋದರರಿಗೋಸ್ಕರ ನಮ್ಮ ಪ್ರಾಣಗಳನ್ನು
17 ಕೊಡುವ ಹಂಗಿನಲ್ಲಿದ್ದೇವೆ. ಈ ಲೋಕದ ಸಂಪತ್ತುಳ್ಳ ಯಾವನಾದರೂ ಕೊರತೆಯಲ್ಲಿ
ಬಿದ್ದಿರುವ ತನ್ನ ಸಹೋದರನನ್ನು ನೋಡಿ ಕರುಣಿಸದೆ ಬಿಟ್ಟರೆ, ದೇವರ ಪ್ರೀತಿಯು ಅವ

---

[1] ಯೋಹಾನ ೮, ೪೪. [2] ಮೂಲ: ಬೀಜವು. [3] ಮತ್ತಾಯ ೫, ೨೧. ೨೨.

ನಲ್ಲಿ ನೆಲೆಗೊಂಡಿರುವದುಂಟೇ? ಪ್ರಿಯರಾದ ಮಕ್ಕಳೇ, ನಾವು ಬರೀಮಾತಿನಿಂದಾಗಲಿ 18 ಬಾಯುಪಚಾರದಿಂದಾಗಲಿ ಪ್ರೀತಿಸುವವರಾಗಿರಬಾರದು; ನಮ್ಮ ಪ್ರೀತಿಯು ಕೃತ್ಯ ದಲ್ಲಿಯೂ ಸತ್ಯದಲ್ಲಿಯೂ ತೋರಬೇಕು[1].

ಯೇಸುವಿನಲ್ಲಿ ನಂಬಿಕೆಯಿಟ್ಟು ಪ್ರೀತಿಯಲ್ಲಿ ನಡೆದರೆ, ಮನಸ್ಸಮಾಧಾನವು ಉಂಟಾಗುವದಲ್ಲದೆ ನಾವು ಮಾಡುವ ಪ್ರಾರ್ಥನೆ ಸಫಲವಾಗುವದು.

ನಾವು ಸತ್ಯಕ್ಕೆ ಸೇರಿದವರೆಂಬುವದು ಇದರಿಂದಲೇ ನಮಗೆ ತಿಳಿಯುತ್ತದೆ. ಮತ್ತು 19, 20 ನಮ್ಮ ಹೃದಯವು ಯಾವ ವಿಷಯದಲ್ಲಿಯಾದರೂ ನಮ್ಮನ್ನು ದೋಷಿಗಳೆಂದು ನಿರ್ಣ ಯಿಸಿದರೂ ದೇವರು ನಮ್ಮ ಹೃದಯಕ್ಕಿಂತ ದೊಡ್ಡವನಾಗಿದ್ದು ಎಲ್ಲವನ್ನೂ ಬಲ್ಲವ ನಾಗಿದ್ದಾನೆಂದು ನಾವು ತಿಳಿದು ದೇವರ ಸಮಕ್ಷಮದಲ್ಲಿ ನಮ್ಮ ಹೃದಯವನ್ನು ಸಮಾ ಧಾನಪಡಿಸುವೆವು. ಪ್ರಿಯರೇ, ನಮ್ಮ ಹೃದಯವು ನಮ್ಮನ್ನು ದೋಷಿಗಳೆಂದು ನಿರ್ಣ 21 ಯಿಸದಿದ್ದರೆ, ನಮಗೆ ದೇವರ ವಿಷಯದಲ್ಲಿ ಧೈರ್ಯವುಂಟು. ಮತ್ತು ನಾವು ಆತನ 22 ಆಜ್ಞೆಗಳನ್ನು ಕೈಕೊಂಡು ಆತನ ಎಣಿಕೆಯಲ್ಲಿ ಮೆಚ್ಚಿಕೆಯಾದ ಕಾರ್ಯಗಳನ್ನು ಮಾಡು ವವರಾಗಿರುವದರಿಂದ, ಏನು ಬೇಡಿಕೊಂಡಾಗ್ಯೂ ಆತನಿಂದ ಹೊಂದುವೆವು. ದೇವರ 23 ಆಜ್ಞೆ ಯಾವದಂದರೆ, ನಾವು ಆತನ ಮಗನಾದ ಯೇಸು ಕ್ರಿಸ್ತನ ಹೆಸರನ್ನು ನಂಬಿ ಕ್ರಿಸ್ತನು ನಮಗೆ ಅಪ್ಪಣೆ ಕೊಟ್ಟ ಪ್ರಕಾರ ಒಬ್ಬರನ್ನೊಬ್ಬರು ಪ್ರೀತಿಸಬೇಕೆಂಬುವದೇ. ಆತನ ಆಜ್ಞೆಗಳನ್ನು ಕೈಕೊಂಡು ನಡೆಯುವವನು ಆತನಲ್ಲಿ ನೆಲೆಗೊಂಡಿರುತ್ತಾನೆ, ಆತನು 24 ಇವನಲ್ಲಿ ನೆಲೆಗೊಂಡಿರುತ್ತಾನೆ. ನಮ್ಮಲ್ಲಿ ನೆಲೆಗೊಂಡಿದ್ದಾನೆಂದು ಆತನು ನಮಗೆ ಅನು ಗ್ರಹಿಸಿದ ಆತ್ಮನಿಂದಲೇ ಬಲ್ಲೆವು.

ಆತ್ಮಪ್ರೇರಿತ ನುಡಿಗಳು ಸತ್ಯವೋ ಅಸತ್ಯವೋ ಎಂದು ತಿಳುಕೊಳ್ಳುವದಕ್ಕಾಗಿ ಅವುಗಳನ್ನು ಪರೀಕ್ಷಿಸಬೇಕು.

ಪ್ರಿಯರೇ, ಅನೇಕ ಮಂದಿ ಸುಳ್ಳುಪ್ರವಾದಿಗಳು ಲೋಕದೊಳಗೆ ಬಂದಿರುವದರಿಂದ, **4** ನೀವು ಎಲ್ಲಾ ಆತ್ಮದ ನುಡಿಗಳನ್ನು[2] ನಂಬದೆ ಆಯಾ ನುಡಿಗಳು ದೇವರಿಂದ ಪ್ರೇರಿತ ವಾದವುಗಳೋ ಅಲ್ಲವೋ ಎಂದು ಅವುಗಳನ್ನು ಪರೀಕ್ಷಿಸಬೇಕು. ಪ್ರೇರಿಸುವಂಥಾದ್ದು 2 ದೇವರ ಆತ್ಮವೇ ಎಂದು ತಿಳುಕೊಳ್ಳುವದಕ್ಕೆ ಲಕ್ಷಣವೇನಂದರೆ—ಮನುಷ್ಯನಾಗಿ ಬಂದ ಯೇಸು ಕ್ರಿಸ್ತನನ್ನು ಒಪ್ಪಿಕೊಳ್ಳುವ ಆತ್ಮವು ದೇವರಿಂದ ಪ್ರೇರಿತವಾದದ್ದು. ಯೇಸು 3 ವನ್ನು ಒಪ್ಪದೆ ಇರುವ[3] ಆತ್ಮವು ದೇವರಿಂದ ಪ್ರೇರಿತವಾದದ್ದಲ್ಲ; ಅದು ಕ್ರಿಸ್ತವಿರೋ ಧಿಯ ಆತ್ಮವಾಗಿದೆ. ಕ್ರಿಸ್ತವಿರೋಧಿ ಬರುವನೆಂಬುವದನ್ನು ನೀವು ಕೇಳಿದ್ದೀರಲ್ಲಾ; ಅದು ಈಗಲೂ ಲೋಕದಲ್ಲಿ ಅದೆ.

---

[1] ಯಾಕೋಬ ೨, ೧೪—೧೬.
[2] ಮೂಲ: ಆತ್ಮಗಳನ್ನು; ೧ ಕೊರಿಂಥ. ೧೨, ೧೦; ೧೪, ೧೨; ೨ ಥೆಸ್ಸಲೊನೀಕ. ೨, ೨; ೧ ತಿಮೊಥೆ. ೪, ೧ ನೋಡು.
[3] ಕೆಲವು ಪ್ರತಿಗಳಲ್ಲಿ—ತಳ್ಳಿಬಿಡುವ ಎಂದು ಬರೆದದೆ.

4 ಪ್ರಿಯರಾದ ಮಕ್ಕಳೇ, ನೀವಂತೂ ದೇವರಿಂದ ಹುಟ್ಟಿದವರಾಗಿದ್ದೀರಿ; ಮತ್ತು ಲೋಕ
ದಲ್ಲಿರುವವನಿಗಿಂತ ನಿಮ್ಮಲ್ಲಿರುವಾತನು ಹೆಚ್ಚಿನವನಾಗಿರುವದರಿಂದ ನೀವು ಆ ಸುಳ್ಳು
5 ಪ್ರವಾದಿಗಳನ್ನು ಜಯಿಸಿದ್ದೀರಿ. ಅವರು ಲೋಕದಿಂದ ಹುಟ್ಟಿದವರಾಗಿದ್ದಾರೆ; ಈ ಕಾರ
ಣದಿಂದ ಅವರು ಲೋಕಪ್ರೇರಿತರಾಗಿ ಮಾತಾಡುತ್ತಾರೆ, ಮತ್ತು ಲೋಕದವರು ಅವರ
6 ಮಾತನ್ನು ಕೇಳುತ್ತಾರೆ. ನಾವಂತೂ ದೇವರಿಂದ ಹುಟ್ಟಿದವರಾಗಿದ್ದೇವೆ; ದೇವರನ್ನು
ಬಲ್ಲವನು ನಮ್ಮ ಮಾತನ್ನು ಕೇಳುತ್ತಾನೆ; ದೇವರಿಂದ ಹುಟ್ಟದವನು ನಮ್ಮ ಮಾತನ್ನು
ಕೇಳುವದಿಲ್ಲ. ಇದು ಸತ್ಯವನ್ನು ಬೋಧಿಸುವ ಆತ್ಮ, ಅದು ಸುಳ್ಳನ್ನು ಬೋಧಿಸುವ
ಆತ್ಮ ಎಂದು ಇದರಿಂದಲೇ ತಿಳುಕೊಳ್ಳುತ್ತೇವೆ.

ದೇವರಿಂದ ಹುಟ್ಟಿದವರಲ್ಲಿ ಪ್ರೀತಿಸ್ವಭಾವವೇ ವಿಶೇಷ.

7 ಪ್ರಿಯರೇ, ನಾವು ಒಬ್ಬರನ್ನೊಬ್ಬರು ಪ್ರೀತಿಸೋಣ. ಪ್ರೀತಿಯು ದೇವರಿಂದಾಗಿದೆ,
ಮತ್ತು ಪ್ರೀತಿಮಾಡುವ ಪ್ರತಿಯೊಬ್ಬನು ದೇವರಿಂದ ಹುಟ್ಟಿದವನೂ ದೇವರನ್ನು ಬಲ್ಲ
8 ವನೂ ಆಗಿದ್ದಾನೆ. ದೇವರು ಪ್ರೀತಿಸ್ವರೂಪಿಯು; ಪ್ರೀತಿಯಿಲ್ಲದವನು ದೇವರನ್ನು
9 ಬಲ್ಲವನಲ್ಲ. ದೇವರು ತನ್ನ ಒಬ್ಬನೇ ಮಗನನ್ನು ನಾವು ಆತನ ಮೂಲಕ ಜೀವಿಸುವದ
ಕ್ಕಾಗಿ ಲೋಕಕ್ಕೆ ಕಳುಹಿಸಿಕೊಟ್ಟದರಲ್ಲಿಯೇ ದೇವರ ಪ್ರೀತಿಯು ನಮ್ಮಲ್ಲಿ ಪ್ರತ್ಯಕ್ಷ
10 ವಾಗಿದೆ. ನಾವು ದೇವರನ್ನು ಪ್ರೀತಿಸಿದ್ದರಲ್ಲಿಯಲ್ಲ, ಆತನು ನಮ್ಮನ್ನು ಪ್ರೀತಿಸಿ ನಮ್ಮ
ಪಾಪನಿವಾರಣಾರ್ಥವಾಗಿ ತನ್ನ ಮಗನನ್ನು ಕಳುಹಿಸಿಕೊಟ್ಟದರಲ್ಲಿಯೇ ಪ್ರೀತಿಯ ನಿಜ
ಗುಣವು ತೋರಿಬರುತ್ತದೆ.

11 ಪ್ರಿಯರೇ, ದೇವರು ನಮ್ಮನ್ನು ಹೀಗೆ ಪ್ರೀತಿಸಿದ ಮೇಲೆ ನಾವು ಒಬ್ಬರನ್ನೊಬ್ಬರು
12 ಪ್ರೀತಿಸುವ ಹಂಗಿನಲ್ಲಿದ್ದೇವೆ. ದೇವರನ್ನು ಯಾರೂ ಎಂದೂ ನೋಡಿಲ್ಲ; ನಾವು ಒಬ್ಬರ
ನ್ನೊಬ್ಬರು ಪ್ರೀತಿಸಿದರೆ, ದೇವರು ನಮ್ಮಲ್ಲಿ ನೆಲೆಗೊಂಡಿದ್ದಾನೆ, ಮತ್ತು ಆತನಿಂದಾಗುವ
13 ಪ್ರೀತಿಯು[1] ನಮ್ಮಲ್ಲಿ ಸಿದ್ಧಿಗೆ ಬರುತ್ತದೆ. ದೇವರು ನಮಗೆ ತನ್ನ ಆತ್ಮದಲ್ಲಿ ಪಾಲನ್ನು
ಅನುಗ್ರಹಿಸಿದ್ದರಿಂದಲೇ ನಾವು ಆತನಲ್ಲಿ ನೆಲೆಗೊಂಡಿದ್ದೇವೆಂತಲೂ ಆತನು ನಮ್ಮಲ್ಲಿ ನೆಲೆ
14 ಗೊಂಡಿದ್ದಾನೆಂತಲೂ ತಿಳುಕೊಳ್ಳುತ್ತೇವೆ. ತಂದೆಯು ತನ್ನ ಮಗನನ್ನು ಲೋಕರಕ್ಷಕ
ನನ್ನಾಗಿ ಕಳುಹಿಸಿಕೊಟ್ಟಿರುವದನ್ನು ನಾವು ನೋಡಿದ್ದೇವೆ, ಅದರ ವಿಷಯದಲ್ಲಿ ಸಾಕ್ಷಿ
15 ಹೇಳುತ್ತೇವೆ. ಯೇಸು ದೇವರ ಮಗನಾಗಿದ್ದಾನೆಂದು ಯಾವನು ಒಪ್ಪಿಕೊಂಡು ಹೇಳು
ತ್ತಾನೋ ಅವನಲ್ಲಿ ದೇವರು ನೆಲೆಗೊಂಡಿದ್ದಾನೆ, ಅವನು ದೇವರಲ್ಲಿ ನೆಲೆಗೊಂಡಿದ್ದಾನೆ.
16 ದೇವರು ನಮ್ಮಲ್ಲಿಟ್ಟಿರುವ ಪ್ರೀತಿಯನ್ನು ನಾವು ತಿಳಿದುಕೊಂಡಿದ್ದೇವೆ, ಅದನ್ನು
ನಂಬಿದ್ದೇವೆ.

ದೇವರು ಪ್ರೀತಿಸ್ವರೂಪಿ; ಪ್ರೀತಿಯಲ್ಲಿ ನೆಲೆಗೊಂಡಿರುವವನು ದೇವರಲ್ಲಿ ನೆಲೆಗೊಂಡಿ
17 ದ್ದಾನೆ, ದೇವರು ಅವನಲ್ಲಿ ನೆಲೆಗೊಂಡಿದ್ದಾನೆ. ನ್ಯಾಯತೀರ್ಪಿನ ದಿನದಲ್ಲಿ ನಮಗಿರುವ

---

[1] ಮೂಲ: ಆತನ ಪ್ರೀತಿ.

ಧೈರ್ಯದಲ್ಲಿಯೇ ಪ್ರೀತಿಯು ನಮ್ಮೊಳಗೆ ಸಿದ್ಧಿಗೆ ಬಂತು[1]. ಯಾಕಂದರೆ ಕ್ರಿಸ್ತನು ಎಂಥವನಾಗಿದ್ದಾನೋ ನಾವು ಅಂಥವರಾಗಿಯೇ ಈ ಲೋಕದಲ್ಲಿದ್ದೇವೆ. 18 ಪ್ರೀತಿಯು ಇರುವಲ್ಲಿ ಹೆದರಿಕೆಯಿಲ್ಲ. ಹೆದರಿಕೆಯು ದಂಡನೆಯನ್ನು ಎದುರುನೋಡುತ್ತಾ ಇರುವದು; ಪೂರ್ಣ ಪ್ರೀತಿಯು ಹೆದರಿಕೆಯನ್ನು ಹೊರಡಿಸಿಬಿಡುತ್ತದೆ. ಹೆದರುವವನು ಪ್ರೀತಿಯಲ್ಲಿ ಸಿದ್ಧಿಗೆ ಬಂದವನಲ್ಲ. 19 ದೇವರು ಮೊದಲು ನಮ್ಮನ್ನು ಪ್ರೀತಿಸಿದ್ದರಿಂದ ನಾವು ಪ್ರೀತಿಸುತ್ತೇವೆ[2]. 20 ಒಬ್ಬನು ತಾನು ದೇವರನ್ನು ಪ್ರೀತಿಸುತ್ತೇನೆಂದು ಹೇಳಿ ತನ್ನ ಸಹೋದರನನ್ನು ದ್ವೇಷಿಸಿದರೆ, ಅವನು ಸುಳ್ಳುಗಾರನಾಗಿದ್ದಾನೆ. ತಾನು ಕಂಡಿರುವ ತನ್ನ ಸಹೋದರನನ್ನು ಪ್ರೀತಿಸದವನು ತಾನು ಕಾಣದಿರುವ ದೇವರನ್ನು ಪ್ರೀತಿಸಲಾರನು. 21 ದೇವರನ್ನು ಪ್ರೀತಿಸುವವನು ತನ್ನ ಸಹೋದರನನ್ನೂ ಪ್ರೀತಿಸಬೇಕೆಂಬ ಆಜ್ಞೆಯನ್ನು ನಾವು ಆತನಿಂದ ಹೊಂದಿದ್ದೇವೆ.

ಕ್ರಿಸ್ತನಲ್ಲಿ ನಂಬಿಕೆಯಿಟ್ಟವರು ಲೋಕವನ್ನು ಜಯಿಸುತ್ತಾರೆ.

**5** ಯೇಸುವನ್ನು ಕ್ರಿಸ್ತನೆಂದು ನಂಬುವ ಪ್ರತಿಯೊಬ್ಬನು ದೇವರಿಂದ ಹುಟ್ಟಿದವನಾಗಿದ್ದಾನೆ. ಯಾವನು ಹುಟ್ಟಿಸಿದ ತಂದೆಯನ್ನು ಪ್ರೀತಿಸುತ್ತಾನೋ ಅವನು ತಂದೆಯಿಂದ ಹುಟ್ಟಿದವರೆಲ್ಲರನ್ನೂ ಪ್ರೀತಿಸುತ್ತಾನೆ. 2 ನಾವು ದೇವರ ಮಕ್ಕಳನ್ನು ಪ್ರೀತಿಸುತ್ತೇವೆಂಬುವದನ್ನು ದೇವರನ್ನು ಪ್ರೀತಿಸಿ ಆತನ ಆಜ್ಞೆಗಳನ್ನು ಅನುಸರಿಸುವದರಿಂದಲೇ ತಿಳುಕೊಳ್ಳುತ್ತೇವೆ. 3 ದೇವರ ಮೇಲಣ ಪ್ರೀತಿ ಏನಂದರೆ ಆತನ ಆಜ್ಞೆಗಳನ್ನು ಕೈಕೊಂಡು ನಡೆಯುವದೇ. ಆತನ ಆಜ್ಞೆಗಳು ಭಾರವಾದವುಗಳಲ್ಲ[3]. 4 ಯಾಕಂದರೆ ದೇವರಿಂದ ಹುಟ್ಟಿರುವಂಥಾದ್ದೆಲ್ಲವು ಲೋಕವನ್ನು ಜಯಿಸುತ್ತದೆ. ಲೋಕವನ್ನು ಜಯಿಸಿದಂಥಾದ್ದು ನಮ್ಮ ನಂಬಿಕೆಯೇ. 5 ಯೇಸುವನ್ನು ದೇವರ ಮಗನೆಂದು ನಂಬಿದವರೇ ಅಲ್ಲದೆ ಲೋಕವನ್ನು ಜಯಿಸುವವರು ಇನ್ನಾರಿದ್ದಾರೆ?

ಕ್ರಿಸ್ತನ ಮುಖಾಂತರ ನಿತ್ಯಜೀವ ದೊರೆಯುತ್ತದೆಂಬುವದಕ್ಕೆ ಸಾಕ್ಷಿಗಳು.

6 ಈತನು, ಅಂದರೆ ಯೇಸು ಕ್ರಿಸ್ತನು, ನೀರಿನಿಂದಲೂ ರಕ್ತದಿಂದಲೂ ಸಾಕ್ಷಿಹೊಂದಿದವನು. ನೀರಿನಿಂದ ಮಾತ್ರವಲ್ಲ, ನೀರಿನಿಂದಲೂ ರಕ್ತದಿಂದಲೂ ಸಾಕ್ಷಿಹೊಂದಿದವನಾಗಿದ್ದಾನೆ[4]. ಇದಲ್ಲದೆ ಆತ್ಮನು ಸಾಕ್ಷಿಕೊಡುವವನಾಗಿದ್ದಾನೆ; ಆತ್ಮನು ಸತ್ಯಸ್ವರೂಪನೇ. 7,8 ಆತ್ಮ ನೀರು ರಕ್ತವೆಂಬ ಮೂರು ಸಾಕ್ಷಿಗಳುಂಟು; ಈ ಮೂರು ಒಂದೇ ಅಭಿಪ್ರಾಯವಾಗಿ ಸಾಕ್ಷಿ ಹೇಳುತ್ತವೆ. 9 ನಾವು ಮನುಷ್ಯರ ಸಾಕ್ಷಿಯನ್ನು ತಕ್ಕೊಳ್ಳುತ್ತೇವಲ್ಲಾ; ದೇವರ ಸಾಕ್ಷಿಯು ಅದಕ್ಕಿಂತ ವಿಶೇಷವಾಗಿದೆ. ದೇವರು ಕೊಟ್ಟ ಸಾಕ್ಷಿ

---

[1] ಅಥವಾ, ಇದರಿಂದಲೇ ಪ್ರೀತಿಯು ನಮ್ಮೊಳಗೆ ಸಿದ್ಧಿಗೆ ಬರುತ್ತದೆ; ಮತ್ತು ನ್ಯಾಯತೀರ್ಪಿನ ದಿನದಲ್ಲಿ ನಮಗೆ ಧೈರ್ಯವಿರುವದು. [2] ಅಥವಾ, ಪ್ರೀತಿಸೋಣ. [3] ಮತ್ತಾಯ ೧೧, ೩೦.

[4] ಯೋಹಾನ ೧೯, ೩೪. ೩೫.

10 ಏನಂದರೆ, ಆತನು ತನ್ನ ಮಗನ ವಿಷಯದಲ್ಲಿ ಹೇಳಿದ್ದೇ. ದೇವರ ಮಗನಲ್ಲಿ ನಂಬಿಕೆ ಇಟ್ಟವನು ಆ ಸಾಕ್ಷಿಯನ್ನು ತನ್ನಲ್ಲೇ ಹೊಂದಿದ್ದಾನೆ. ದೇವರನ್ನು ನಂಬದವನು ಆತ ನನ್ನು ಸುಳ್ಳುಗಾರನನ್ನಾಗ ಮಾಡಿದ್ದಾನೆ; ಹ್ಯಾಗಂದರೆ ದೇವರು ತನ್ನ ಮಗನ ವಿಷಯ 11 ವಾಗಿ ಹೇಳಿರುವ ಸಾಕ್ಷಿಯಲ್ಲಿ ಅವನು ನಂಬಿಕೆಯಿಡಲಿಲ್ಲ. ಆ ಸಾಕ್ಷಿ ಯಾವದಂದರೆ, ದೇವರು ನಮಗೆ ನಿತ್ಯಜೀವವನ್ನು ಅನುಗ್ರಹಿಸಿದನು, ಆ ಜೀವವು ಆತನ ಮಗನಲ್ಲಿ ಅದೆ 12 ಎಂಬುವದೇ. ಯಾವನು ದೇವರ ಮಗನನ್ನು ಅಂಗೀಕರಿಸಿದ್ದಾನೋ ಅವನಿಗೆ ಆ ಜೀವ ಉಂಟು; ಯಾವನು ದೇವರ ಮಗನನ್ನು ಅಂಗೀಕರಿಸಲಿಲ್ಲವೋ ಅವನಿಗೆ ಆ ಜೀವವಿಲ್ಲ.

ದೇವಕುಮಾರನಲ್ಲಿ ನಂಬಿಕೆಯಿಟ್ಟವರಿಗೆ ದೃಢ ನಿಶ್ಚಯವಿರುವದು.

13 ದೇವರ ಮಗನ ಹೆಸರಿನಲ್ಲಿ ನಂಬಿಕೆಯಿಟ್ಟಿರುವವರಾದ ನಿಮ್ಮಲ್ಲಿ ನಿತ್ಯಜೀವ ಉಂಟೆಂದು 14 ನಿಮಗೆ ಗೊತ್ತಾಗುವಂತೆ ಈ ಮಾತುಗಳನ್ನು ಬರೆದಿದ್ದೇನೆ. ಮತ್ತು ನಾವು ದೇವರ ಚಿತ್ತಾನುಸಾರವಾಗಿ ಏನಾದರೂ ಬೇಡಿಕೊಂಡರೆ, ಆತನು ನಮ್ಮ ವಿಜ್ಞಾಪನೆಯನ್ನು 15 ಕೇಳುತ್ತಾನೆಂಬ ಧೈರ್ಯವು ಆತನ ವಿಷಯವಾಗಿ ನಮಗುಂಟು. ನಾವು ಏನು ಬೇಡಿ ಕೊಂಡಾಗ್ಯೂ ಆತನು ನಮ್ಮ ವಿಜ್ಞಾಪನೆಯನ್ನು ಕೇಳುತ್ತಾನೆಂಬುವದು ನಮಗೆ ಗೊತ್ತಾ ಗಿದ್ದರೆ, ನಾವು ಬೇಡಿದವುಗಳು ಆತನಿಂದ ನಮಗೆ ದೊರೆದವೆಂಬುವದೂ ನಮಗೆ ಗೊತ್ತಾ 16 ಗಿದೆ. ಯಾವನಾದರೂ ತನ್ನ ಸಹೋದರನು ಮರಣಕರವಲ್ಲದ ಪಾಪ ಮಾಡುವದನ್ನು ಕಂಡರೆ, ಅವನು ದೇವರನ್ನು ಬೇಡಿಕೊಳ್ಳಲಿ; ಆಗ ದೇವರು ಮರಣಕರವಲ್ಲದ ಪಾಪ ಮಾಡುವವರಿಗೆ ಜೀವವನ್ನು ದಯಪಾಲಿಸುವನು. ಮರಣಕರವಾದ ಪಾಪವುಂಟು; 17 ಈ ಪಾಪದ ವಿಷಯವಾಗಿ ಬೇಡಿಕೊಳ್ಳಬೇಕೆಂದು ನಾನು ಹೇಳುವದಿಲ್ಲ. ನೀತಿಗೆ ವಿರುದ್ಧವಾದದ್ದೆಲ್ಲಾ ಪಾಪವಾಗಿದೆ; ಆದಾಗ್ಯೂ ಮರಣಕರವಲ್ಲದ ಪಾಪವುಂಟು.

18 ದೇವರಿಂದ ಹುಟ್ಟಿರುವವನು ಪಾಪಮಾಡುವವನಲ್ಲವೆಂಬುವದು ನಮಗೆ ಗೊತ್ತದೆ. ದೇವರಿಂದ ಹುಟ್ಟಿದಾತನು[1] ಅವನನ್ನು ಕಾಪಾಡುವನು; ಕೆಡಕನು ಅವನನ್ನು ಹಿಡಿಯು 19 ವದಿಲ್ಲ. ನಾವು ದೇವರಿಂದ ಹುಟ್ಟಿದವರೆಂದೂ ಲೋಕವೆಲ್ಲವು ಕೆಡಕನ ವಶದಲ್ಲಿ ಬಿದ್ದಿದೆ 20 ಎಂದೂ ನಮಗೆ ಗೊತ್ತದೆ. ದೇವರ ಮಗನು ಬಂದು ನಾವು ನಿಜವಾಗಿರುವಾತನನ್ನು ಅರಿತುಕೊಳ್ಳುವ ಹಾಗೆ ನಮಗೆ ವಿವೇಕವನ್ನು ಕೊಟ್ಟಿದ್ದಾನೆಂಬುವದು ನಮಗೆ ಗೊತ್ತದೆ. ಮತ್ತು ನಾವು ದೇವರ ಮಗನಾದ ಯೇಸು ಕ್ರಿಸ್ತನಲ್ಲಿ ಇರುವವರಾಗಿ ನಿಜವಾಗಿರುವಾತ ನಲ್ಲಿದ್ದೇವೆ. ಆತನು ನಿಜದೇವರೂ ನಿತ್ಯಜೀವವೂ ಆಗಿದ್ದಾನೆ.

21 ಪ್ರಿಯರಾದ ಮಕ್ಕಳೇ, ವಿಗ್ರಹಗಳಿಗೆ ದೂರವಾಗಿರುವಂತೆ ನಿಮ್ಮನ್ನು ಕಾಪಾಡಿಕೊಳ್ಳಿರಿ.

---

[1] ಅಂದರೆ, ಯೇಸು ಕ್ರಿಸ್ತನು. ಆದರೆ ಕೆಲವು ಪ್ರತಿಗಳಲ್ಲಿ—ದೇವರಿಂದ ಹುಟ್ಟಿದವನು ತನ್ನನ್ನು ಕಾಪಾಡಿ ಕೊಳ್ಳುವನು ಎಂದು ಬರೆದದೆ.

# THE SECOND EPISTLE OF SAINT JOHN

# ಯೋಹಾನನು ಬರೆದ ಎರಡನೇ ಪತ್ರಿಕೆ

ದುರ್ಬೋಧಕರ ವಿಷಯದಲ್ಲಿ ಎಚ್ಚರಿಕೆ.

ಸಭೆಯ ಹಿರಿಯನು ದೇವರಾದುಕೊಂಡವರಾದ ಅಮ್ಮನವರಿಗೂ[1] ಆಕೆಯ ಮಕ್ಕಳಿಗೂ ಬರೆಯುವದೇನಂದರೆ—ನಿಮ್ಮಲ್ಲಿ ನೆಲೆಗೊಂಡಿರುವಂಥಾ ಮತ್ತು ಸದಾಕಾಲವೂ ನಮ್ಮೊಂದಿಗಿರುವಂಥಾ ಸತ್ಯದ ನಿಮಿತ್ತ ನಾನು ನಿಮ್ಮನ್ನು ಸತ್ಯವಾಗಿ ಪ್ರೀತಿಸುತ್ತೇನೆ; ನಾನು ಮಾತ್ರವಲ್ಲದೆ ಸತ್ಯವನ್ನು ತಿಳಿದಿರುವವರೆಲ್ಲರೂ ನಿಮ್ಮನ್ನು ಪ್ರೀತಿಸುತ್ತಾರೆ. ತಂದೆಯಾದ ದೇವರಿಂದಲೂ ಆ ತಂದೆಯ ಮಗನಾದ ಯೇಸು ಕ್ರಿಸ್ತನಿಂದಲೂ ಕೃಪೆಯೂ ಕರುಣೆಯೂ ಶಾಂತಿಯೂ ಸತ್ಯಪೂರ್ವಕವಾಗಿಯೂ ಪ್ರೀತಿಪೂರ್ವಕವಾಗಿಯೂ ನಮ್ಮೊಂದಿಗಿರುವವು. 1-2 3

ನಿನ್ನ ಮಕ್ಕಳಲ್ಲಿ ಕೆಲವರು ತಂದೆಯಿಂದ ನಮಗುಂಟಾದ ಆಜ್ಞಾನುಸಾರ ಸತ್ಯವಂತರಾಗಿ ನಡೆಯುವದನ್ನು ಕಂಡು ಬಹಳ ಸಂತೋಷವುಳ್ಳವನಾದೆನು. ಅಮ್ಮನವರೇ, ನಾನು ಹೊಸ ಆಜ್ಞೆಯನ್ನು ನಿಮಗೆ ಬರೆಯದೆ ಮೊದಲಿಂದಲೂ ನಮಗೆ ಬಂದ ಆಜ್ಞೆಯನ್ನು ಬರೆಯುವವನಾಗಿ—ನಾವು ಒಬ್ಬರನ್ನೊಬ್ಬರು ಪ್ರೀತಿಸುವವರಾಗಿರೋಣ ಎಂದು ನಿನ್ನನ್ನು ಕೇಳಿಕೊಳ್ಳುತ್ತೇನೆ. ದೇವರ ಆಜ್ಞೆಗಳನ್ನು ಅನುಸರಿಸಿ ನಡೆಯುವದೇ ಪ್ರೀತಿ; ಪ್ರೀತಿಯಲ್ಲಿ ನಡೆಯಬೇಕೆಂಬುವದೇ ನೀವು ಮೊದಲಿಂದಲೂ ಕೇಳಿದ ಅಪ್ಪಣೆಯಾಗಿದೆ. ಮನುಷ್ಯನಾಗಿ ಬಂದಿರುವ[2] ಯೇಸು ಕ್ರಿಸ್ತನನ್ನು ಒಪ್ಪದೆ ಇರುವ ದುರ್ಬೋಧಕರು ಅನೇಕ ಮಂದಿ ಹೊರಟು ಲೋಕದೊಳಗೆ ಹೋಗಿದ್ದಾರೆ. ಯೇಸುವನ್ನು ಒಪ್ಪದವನು ದುರ್ಬೋಧಕನೂ ಕ್ರಿಸ್ತವಿರೋಧಿಯೂ ಆಗಿದ್ದಾನೆ. ನಾವು[3] ಪ್ರಯಾಸಪಟ್ಟು ಮಾಡಿದವುಗಳನ್ನು ನೀವು ಕಳಕೊಳ್ಳದೆ ಪೂರ್ಣ ಫಲವನ್ನು ಹೊಂದುವಂತೆ ಜಾಗರೂಕರಾಗಿರಿ. ಕ್ರಿಸ್ತನ ಉಪದೇಶದಲ್ಲಿ ನೆಲೆಗೊಳ್ಳದೆ ಅದನ್ನು ಅತಿಕ್ರಮಿಸಿ ಮುಂದಕ್ಕೆ ಹೋಗುವವನಿಗೆ ದೇವರ ಅನ್ಯೋನ್ಯತೆಯಿಲ್ಲ. ಆ ಉಪದೇಶದಲ್ಲಿ ನೆಲೆಗೊಂಡಿರುವವನಿಗೆ ತಂದೆಯ ಮತ್ತು ಮಗನ ಅನ್ಯೋನ್ಯತೆ ಉಂಟು. ಈ ಉಪದೇಶಕ್ಕೆ ಒಪ್ಪದಿರುವ 4 5 6 7 8 9 10

[1] ಕೆಲವರು ಸಭೆಗೆ ಎಂದು ಅರ್ಥ ಮಾಡಿಕೊಳ್ಳುತ್ತಾರೆ. [2] ಮೂಲ: ಬರುವ; ೧ ಯೋಹಾನ ೪, ೨ ನೋಡು.
[3] ಕೆಲವು ಪ್ರತಿಗಳಲ್ಲಿ—ನೀವು ಎಂದು ಬರೆದದೆ.

ಯಾವನಾದರೂ ನಿಮ್ಮ ಬಳಿಗೆ ಬಂದರೆ, ಅವನನ್ನು ಮನೆಯೊಳಗೆ ಸೇರಿಸಿಕೊಳ್ಳಬೇಡಿರಿ,
11 ಅವನಿಗೆ ಶುಭವಾಗಲಿ ಎಂದು ಹೇಳಬೇಡಿರಿ. ಅವನಿಗೆ ಶುಭವಾಗಲಿ ಎಂದು ಹೇಳು ವವನು ಅವನ ದುಷ್ಕೃತ್ಯಗಳಲ್ಲಿ ಪಾಲುಗಾರನಾಗುತ್ತಾನೆ.

12 ನಿಮಗೆ ಬರೆಯುವದಕ್ಕೆ ನನಗೆ ಅನೇಕ ಸಂಗತಿಗಳಿದ್ದಾಗ್ಯೂ ಅವುಗಳನ್ನು ಮಸಿ ಯಿಂದ ಕಾಗದದ ಮೇಲೆ ಬರೆದು ತಿಳಿಸುವದಕ್ಕೆ ನನಗೆ ಮನಸ್ಸಿಲ್ಲ. ನಾನು ನಿಮ್ಮ ಬಳಿಗೆ ಬಂದು ನಿಮ್ಮ ಸಂಗಡ ಮುಖಾಮುಖಿಯಾಗಿ ಮಾತಾಡುವೆನೆಂದು ನಿರೀಕ್ಷಿಸು ತ್ತೇನೆ. ಆಗ ನಿಮ್ಮ ಸಂತೋಷವು ಪರಿಪೂರ್ಣವಾಗುವದು.
13 ದೇವರಾದುಕೊಂಡವ ಳಾದ ನಿನ್ನ ಸಹೋದರಿಯ ಮಕ್ಕಳು ನಿನಗೆ ವಂದನೆ ಹೇಳುತ್ತಾರೆ.



# THE THIRD EPISTLE OF SAINT JOHN

# ಯೋಹಾನನು ಬರೆದ ಮೂರನೇ ಪತ್ರಿಕೆ

**ಗಾಯನ ಮತ್ತು ದೇಮೇತ್ರಿಯ ಶ್ಲಾಘೆಯೂ, ದಿಯೊತ್ರೇಫನ ಖಂಡನೆಯೂ.**

ಸಭೆಯ ಹಿರಿಯನು ತಾನು ಸತ್ಯವಾಗಿ ಪ್ರೀತಿಸುವ ಪ್ರಿಯ ಗಾಯನಿಗೆ ಬರೆಯುವದೇ 1
ನಂದರೆ—

ಪ್ರಿಯನೇ, ನೀನು ಆತ್ಮವಿಷಯದಲ್ಲಿ ಅಭಿವೃದ್ಧಿ ಹೊಂದಿರುವ ಪ್ರಕಾರ ಎಲ್ಲಾ ವಿಷಯ 2
ಗಳಲ್ಲಿಯೂ ಅಭಿವೃದ್ಧಿ ಹೊಂದಿ ಸುಕ್ಷೇಮವಾಗಿರಬೇಕೆಂದು ಪ್ರಾರ್ಥಿಸುತ್ತೇನೆ. ಸಹೋ 3
ದರರು ಆಗಾಗ್ಯೆ ನನ್ನ ಬಳಿಗೆ ಬಂದು ನಿನ್ನಲ್ಲಿರುವ ಸತ್ಯವನ್ನು ಕುರಿತು ತಿಳಿಸಿ, ನೀನು
ಸತ್ಯವಂತನಾಗಿ ನಡೆಯುವವನು ಎಂದು ಹೇಳುವಾಗ ನಾನು ಬಹಳ ಸಂತೋಷಪಡು
ತ್ತೇನೆ. ನನ್ನ ಮಕ್ಕಳು ಸತ್ಯವನ್ನನುಸರಿಸಿ ನಡೆಯುವವರಾಗಿದ್ದಾರೆಂದು ಕೇಳುವದ 4
ಕ್ಕಿಂತ ಹೆಚ್ಚಾದ ಸಂತೋಷವು ನನಗಿಲ್ಲ.

ಪ್ರಿಯನೇ, ಪರಿಚಯವಿಲ್ಲದವರಾದ ಸಹೋದರರಿಗೂ ನೀನು ಸತ್ಕಾರವನ್ನು ಮಾಡು 5
ವದರಲ್ಲಿ ನಂಬುವವನಿಗೆ ಯೋಗ್ಯನಾಗಿ ನಡೆಯುತ್ತೀ. ಅವರು ಸಭೆಯ ಮುಂದೆ ನಿನ್ನ 6
ಪ್ರೀತಿಗೆ ಸಾಕ್ಷಿ ಹೇಳಿದರು. ಅವರನ್ನು ನೀನು ದೇವರ ಸೇವಕರಿಗೆ ಯೋಗ್ಯವಾದ
ರೀತಿಯಿಂದ ಸಾಗ ಕಳುಹಿಸಿದರೆ ಚನ್ನಾಗಿರುವದು. ಯಾಕಂದರೆ ಅವರು ಕ್ರಿಸ್ತನ ಹೆಸ 7
ರನ್ನು ಪ್ರಸಿದ್ಧಿಪಡಿಸುವದಕ್ಕೋಸ್ಕರ ಹೊರಟುಹೋಗಿದ್ದಾರೆ ಮತ್ತು ಅನ್ಯಜನಗಳಿಂದ
ಏನೂ ತೆಗೆದುಕೊಳ್ಳುವವರಲ್ಲ. ಆದದರಿಂದ ನಾವು ಸತ್ಯಕ್ಕೆ ಸಹಕಾರಿಗಳಾಗುವಂತೆ 8
ಅಂಥವರನ್ನು ಸೇರಿಸಿಕೊಳ್ಳುವ ಹಂಗಿನಲ್ಲಿದ್ದೇವೆ.

ಸಭೆಗೆ ಕೆಲವು ಮಾತುಗಳನ್ನು ಬರೆದಿದ್ದೆನು; ಆದರೆ ಸಭೆಯವರಲ್ಲಿ ಪ್ರಮುಖನಾಗ 9
ಬೇಕೆಂದಿರುವ ದಿಯೊತ್ರೇಫನು ನಮ್ಮ ಮಾತನ್ನು ಅಂಗೀಕರಿಸುವದಿಲ್ಲ. ಆದಕಾರಣ 10
ನಾನು ಬಂದರೆ, ಅವನು ಮಾಡುವ ಕೃತ್ಯಗಳ ವಿಷಯದಲ್ಲಿ ಎಲ್ಲರಿಗೂ ನೆನಪುಕೊಡು
ವೆನು. ಅವನು ಹರಟೆಕೊಚ್ಚುವವನಾಗಿ ನಮ್ಮ ವಿಷಯದಲ್ಲಿ ಕೆಟ್ಟಕೆಟ್ಟ ಮಾತುಗಳನ್ನಾ
ಡುತ್ತಾನೆ. ಇವೂ ಸಾಲದೆ, ತಾನು ಸಹೋದರರನ್ನು ಸೇರಿಸಿಕೊಳ್ಳದೆ ಸೇರಿಸಿಕೊಳ್ಳ
ಬೇಕೆಂದಿರುವವರಿಗೆ ಅಡ್ಡಿಮಾಡಿ ಅವರನ್ನು ಸಭೆಯೊಳಗಿಂದ ಬಹಿಷ್ಕರಿಸುತ್ತಾನೆ. ಪ್ರಿಯ 11
ನೇ, ನೀನು ಕೆಟ್ಟ ನಡತೆಯನ್ನು ಅನುಸರಿಸದೆ ಒಳ್ಳೇ ನಡತೆಯನ್ನು ಅನುಸರಿಸು; ಒಳ್ಳೇ

ದನ್ನು ಮಾಡುವವನು ದೇವರಿಂದ ಹುಟ್ಟಿದವನಾಗಿದ್ದಾನೆ, ಕೆಟ್ಟದ್ದನ್ನು ಮಾಡುವವನು
12 ದೇವರನ್ನು ಕಂಡವನಲ್ಲ. ದೇಮೇತ್ರಿಯನು ಸಂಭಾವಿತನೆಂದು ಎಲ್ಲರಿಂದಲೂ ಸಾಕ್ಷಾತ್
ಸತ್ಯದಿಂದಲೂ ಸಾಕ್ಷಿಹೊಂದಿದ್ದಾನೆ. ನಾವು ಸಹ ಅವನ ವಿಷಯದಲ್ಲಿ ಸಾಕ್ಷಿ ಹೇಳು
ವವರಾಗಿದ್ದೇವೆ; ನಮ್ಮ ಸಾಕ್ಷಿ ಸತ್ಯವಾದದ್ದೆಂದು ನೀನು ಬಲ್ಲಿ.

13 ನಿನಗೆ ಬರೆಯತಕ್ಕ ಅನೇಕ ಸಂಗತಿಗಳಿದ್ದವು, ಆದರೆ ಮಸಿ ಲೇಖಣಿಗಳನ್ನು ತೆಗೆದು
14 ಕೊಂಡು ಬರೆಯುವದಕ್ಕೆ ನನಗಿಷ್ಟವಿಲ್ಲ. ಬೇಗನೆ ನಿನ್ನನ್ನು ನೋಡುವೆನೆಂದು ನಿರೀಕ್ಷಿ
ಸುತ್ತೇನೆ; ಆಗ ಮುಖಾಮುಖಿಯಾಗಿ ಮಾತಾಡುವೆವು. ನಿನಗೆ ಶಾಂತಿ ಇರಲಿ. ಸ್ನೇಹಿ
ತರು ನಿನಗೆ ವಂದನೆ ಹೇಳುತ್ತಾರೆ. ಸ್ನೇಹಿತರನ್ನು ಹೆಸರ್ಹೆಸರಾಗಿ ವಂದಿಸು.

# THE EPISTLE OF JUDE

# ಯೂದನು ಬರೆದ ಪತ್ರಿಕೆ

**ಒಕ್ಕಣೆ.**

ಯೇಸು ಕ್ರಿಸ್ತನ ದಾಸನೂ ಯಾಕೋಬನ ತಮ್ಮನೂ ಆಗಿರುವ ಯೂದನು ತಂದೆ 1 ಯಾದ ದೇವರಲ್ಲಿ ಪ್ರಿಯರಾದವರೂ ಯೇಸು ಕ್ರಿಸ್ತನಿಗಾಗಿ ಕಾಯಲ್ಪಟ್ಟವರೂ ಆಗಿರುವ ವರಿಗೆ ಬರೆಯುವದೇನಂದರೆ—ದೇವರಿಂದ ಕರೆಯಲ್ಪಟ್ಟ ನಿಮಗೆ ಕರುಣೆಯೂ ಶಾಂತಿ 2 ಯೂ ಪ್ರೀತಿಯೂ ಹೆಚ್ಚಾಗಲಿ.

**ಸಭೆಯೊಳಗೆ ಕಳ್ಳತನದಿಂದ ಸೇರಿದ್ದ ದುರ್ಮಾರ್ಗಿಗಳ ವಿಷಯದಲ್ಲಿ ಎಚ್ಚರಿಕೆ. (2 ಪೇತ್ರ 2, 1—22.)**

ಪ್ರಿಯರೇ, ನಮಗೆ ಹುದುವಾಗಿರುವ ರಕ್ಷಣೆಯ ವಿಷಯದಲ್ಲಿ ನಿಮಗೆ ಬರೆಯುವ 3 ದಕ್ಕೆ ಪೂರ್ಣ ಜಾಗರೂಕತೆಯಿಂದ ಪ್ರಯತ್ನ ಮಾಡುತ್ತಿದ್ದಾಗ, ದೇವಜನರಿಗೆ ಶಾಶ್ವತ ವಾಗಿರುವಂತೆ ಒಂದೇ ಸಾರಿ ಒಪ್ಪಿಸಲ್ಪಟ್ಟ ನಂಬಿಕೆಯನ್ನು ಕಾಪಾಡಿಕೊಳ್ಳುವದಕ್ಕೆ ನೀವು ಹೋರಾಡಬೇಕೆಂದು ಎಚ್ಚರಿಸಿ ಬರೆಯುವದು ಅವಶ್ಯವೆಂದು ತೋಚಿತು. ಯಾಕಂದರೆ ಭಕ್ತಿಹೀನರಾಗಿಯೂ ನಮ್ಮ ದೇವರ ಕೃಪೆಯನ್ನು ನೆವಮಾಡಿಕೊಂಡು 4 ನಾಚಿಕೆಗೆಟ್ಟ ಕೃತ್ಯಗಳನ್ನು ನಡಿಸುವವರಾಗಿಯೂ ನಮ್ಮ ಒಬ್ಬನೇ ಒಡೆಯನೂ ಕರ್ತನೂ ಆಗಿರುವ ಯೇಸು ಕ್ರಿಸ್ತನನ್ನು ಅರಿಯದವರಾಗಿಯೂ ಇರುವ ಕೆಲವು ಜನರು ಸಭೆಯಲ್ಲಿ ಕಳ್ಳತನದಿಂದ ಹೊಕ್ಕಿದ್ದಾರೆ; ಅವರಿಗೆ ಈ ದಂಡನೆಯಾಗಬೇಕೆಂದು ಪೂರ್ವದಲ್ಲೇ ಅವರ ವಿಷಯವಾಗಿ ಬರೆದದೆ.

ನೀವು ಸಮಸ್ತವನ್ನು ಮೊದಲೇ ತಿಳಿದವರಾಗಿದ್ದಾಗ್ಯೂ ನಾನು ಮುಂದಣ ಕೆಲವು ಸಂಗ 5 ತಿಗಳನ್ನು ನಿಮ್ಮ ಜ್ಞಾಪಕಕ್ಕೆ ತರಬೇಕೆಂದು ಅಪೇಕ್ಷಿಸುತ್ತೇನೆ. ಅವು ಯಾವವಂದರೆ— ಕರ್ತನು ತನ್ನ ಪ್ರಜೆಯನ್ನು ಐಗುಪ್ತದೇಶದೊಳಗಿಂದ ಬಿಡಿಸಿದ ತರುವಾಯ ಅವರೊಳಗೆ ನಂಬದೆಹೋದವರನ್ನು ನಾಶಮಾಡಿದನು. ತಮ್ಮ ದೊರೆತನವನ್ನು[1] ಕಾಪಾಡದೆ 6 ತಮಗೆ ತಕ್ಕ ವಾಸಸ್ಥಾನವನ್ನು ಬಿಟ್ಟ ದೇವದೂತರಿಗೆ ದೇವರು ನಿತ್ಯವಾದ ಬೇಡಿಗ

---

[1] ಅಥವಾ, ಅಧಿಸ್ಥಿತಿಯನ್ನು.

ಳನ್ನು ಹಾಕಿ ಮಹಾ ದಿನದಲ್ಲಿ ಆಗುವ ದಂಡನೆಯ ತೀರ್ಪಿಗಾಗಿ ಅವರನ್ನು ಕತ್ತಲೆಯೊ
7 ಳಗೆ ಇಟ್ಟಿದ್ದಾನೆ. ಸೊದೋಮ ಗಮೋರ ಪಟ್ಟಣಗಳವರೂ ಅವುಗಳ ಸುತ್ತುಮುತ್ತಣ
ಪಟ್ಟಣಗಳವರೂ ಆ ದೂತರಂತೆ ನಡೆದುಕೊಂಡು ತಮ್ಮನ್ನು ಜಾರತ್ವಕ್ಕೆ ಒಪ್ಪಿಸಿಬಿಟ್ಟು,
ಸ್ವಭಾವವಿರುದ್ಧವಾದ ಭೋಗವನ್ನನುಸರಿಸಿದ್ದರಿಂದ, ಅವರು ನಿತ್ಯವಾದ ಅಗ್ನಿಯಲ್ಲಿ ದಂಡ
ನೆಯನ್ನು ಅನುಭವಿಸುತ್ತಾ ದುರ್ಮಾರ್ಗಿಗಳಿಗೆ ಆಗುವ ದುರ್ಗತಿಗೆ ಉದಾಹರಣೆಯಾಗಿ
8 ಇಡಲ್ಪಟ್ಟಿದ್ದಾರೆ. ಹೀಗಿದ್ದಾಗ್ಯೂ ಈ ಜನರು ಸ್ವಪ್ನಾವಸ್ಥೆಯಲ್ಲಿರುವವರಂತೆ ಅದೇ ರೀತಿ
ಯಾಗಿ ಶರೀರವನ್ನು ಮಲಿನ ಮಾಡಿಕೊಳ್ಳುತ್ತಾರೆ, ಪ್ರಭುತ್ವವನ್ನು ಅಸಡ್ಡೆ ಮಾಡುತ್ತಾರೆ,
9 ಮಹಾ ಪದವಿಯವರನ್ನು ದೂಷಿಸುತ್ತಾರೆ. ಆದರೆ ಪ್ರಧಾನ ದೇವದೂತನಾದ ಮಿಕ
ಯೇಲನು ಮೋಶೆಯ ಶವದ ವಿಷಯದಲ್ಲಿ ಸೈತಾನನೊಂದಿಗೆ ವ್ಯಾಜ್ಯವಾಡಿ ವಾಗ್ವಾದ
ಮಾಡಿದಾಗ ಅವನು ಸೈತಾನನ ಮೇಲೆ ದೂಷಣಾಭಿಪ್ರಾಯವನ್ನು ಹೇಳುವದಕ್ಕೆ ಧೈರ್ಯ
10 ಗೊಳ್ಳದೆ—ಕರ್ತನು ನಿನ್ನನ್ನು ಗದರಿಸಲಿ ಅಂದನು. ಆದರೆ ಈ ಜನರು ತಮಗೆ ಗೊತ್ತಿ
ಲ್ಲದ ಎಲ್ಲವನ್ನೂ ದೂಷಿಸುತ್ತಾರೆ, ಮತ್ತು ತಾವು ವಿವೇಕಶೂನ್ಯ ಪಶುಗಳಂತೆ ಸ್ವಾಭಾವಿ
ಕವಾಗಿ ಯಾವವುಗಳನ್ನು ತಿಳುಕೊಳ್ಳುತ್ತಾರೋ ಅವುಗಳಲ್ಲಿ ತಮ್ಮನ್ನು ಕೆಡಿಸಿಕೊಳ್ಳು
11 ತ್ತಾರೆ. ಅವರ ಗತಿಯನ್ನು ಏನು ಹೇಳಲಿ; ಇವರು ಕಾಯಿನನ ಮಾರ್ಗವನ್ನು ಹಿಡಿದ
ವರೂ ದ್ರವ್ಯಸಂಪಾದನೆಗೋಸ್ಕರ ಬಿಳಾಮನ ಭ್ರಾಂತಿಯಲ್ಲಿ ಪೂರ್ಣವಾಗಿ ಸೇರಿದ
ವರೂ[1] ಕೋರಹನಂತೆ ಎದುರುಮಾತುಗಳನ್ನಾಡಿ ನಾಶವಾಗಿಹೋಗ ತಕ್ಕವರೂ[2]
12 ಆಗಿದ್ದಾರೆ. ಇವರು ಸಮುದ್ರದೊಳಗಿರುವ ಗುಪ್ತವಾದ ಬಂಡೆಗಳಂತಿದ್ದು[3] ನಿಮ್ಮ
ಪ್ರೇಮಭೋಜನಗಳಲ್ಲಿ ಸೇರಿ ತಿಂದು ಕುಡಿದು ನಿರ್ಭಯವಾಗಿ ಮೇದುಬಿಡುವರು.
ಇವರು ಗಾಳಿಯಿಂದ ಹೊಡಿಸಿಕೊಂಡು ಹೋಗುವ ನೀರಿಲ್ಲದ ಮೇಘಗಳೂ, ಎಲೆಗಳು
13 ದುರಿ ಹಣ್ಣುಬಿಡದೆ ಒಣಗಿಹೋಗಿ[4] ಬೇರು ಸಹಿತ ಕಿತ್ತುಬಿದ್ದ ಮರಗಳೂ, ಸ್ವಂತ ಅವ
ಮಾನವೆಂಬ ನೊರೆಯನ್ನು ಕಾರುವ ಸಮುದ್ರದ ಹುಚ್ಚು ತೆರೆಗಳೂ ಆಗಿದ್ದಾರೆ. ಅಲೆ
ಯುವ ನಕ್ಷತ್ರಗಳಾದ ಇವರ ಪಾಲಿಗೆ ಕಾರ್ಗತ್ತಲೆಯು ಸದಾಕಾಲ ಇಟ್ಟಿರುವದು.

14 ಇಂಥವರ ವಿಷಯದಲ್ಲೇ ಆದಮನಿಗೆ ಏಳನೇ ತಲೆಯವನಾದ ಹನೋಖನು—ಇಗೋ!
ಕರ್ತನು ಕೋಟ್ಯನುಕೋಟಿ ಸಂಖ್ಯೆಯುಳ್ಳ ಪರಿಶುದ್ಧ ಪರಿವಾರದವರನ್ನು ಕೂಡಿಕೊಂಡು
15 ಎಲ್ಲರಿಗೆ ನ್ಯಾಯತೀರಿಸುವದಕ್ಕೂ ಭಕ್ತಿಹೀನರೆಲ್ಲರು ಮಾಡಿದ ಭಕ್ತಿಯಿಲ್ಲದ ಕೃತ್ಯ
ಗಳ ವಿಷಯವಾಗಿ ಮತ್ತು ಭಕ್ತಿಯಿಲ್ಲದ ಪಾಪಿಷ್ಠರು ತನ್ನ ಮೇಲೆ ಹೇಳಿದ ಎಲ್ಲಾ
ಕಠಿಣವಾದ ಮಾತುಗಳ ವಿಷಯವಾಗಿ ಅವರನ್ನು ಖಂಡಿಸುವದಕ್ಕೂ ಬಂದನು ಎಂಬ
16 ದಾಗಿ ಪ್ರವಾದಿಸಿದನು. ಇವರು ಗುಣಗುಟ್ಟುವವರೂ ತಮ್ಮ ಗತಿಯನ್ನು ನಿಂದಿಸುವ
ವರೂ ತಮ್ಮ ದುರಾಶೆಗಳನ್ನನುಸರಿಸಿ ನಡೆಯುವವರೂ ಆಗಿದ್ದಾರೆ. ಇವರ ಬಾಯಿಂದ
ದೊಡ್ಡ ದೊಡ್ಡ ಮಾತುಗಳು ಬರುತ್ತವೆ. ಇವರು ಸ್ವಕಾರ್ಯಸಾಧನೆಗಾಗಿ ಮುಖ
ಸ್ತುತಿ ಮಾಡುತ್ತಾರೆ.

---

1) ಅಂಕೆ ೩೧, ೧೫. ೧೬. 2) ಅಂಕೆ ೧೬, ೧—೩೫. 3) ಅಥವಾ, ಕಳಂಕಕ್ಕೆ ಕಾರಣರಾಗಿದ್ದು.
4) ಮೂಲ: ಎರಡು ಸಾರಿ ಸತ್ತ.

ಪ್ರಿಯರೇ, ನೀವಾದರೋ ನಮ್ಮ ಕರ್ತನಾದ ಯೇಸು ಕ್ರಿಸ್ತನ ಅಪೊಸ್ತಲರು ಮೊದಲು 17
ಹೇಳಿದ ಮಾತುಗಳನ್ನು ಜ್ಞಾಪಕಮಾಡಿಕೊಳ್ಳಿರಿ. ಭಕ್ತಿಗೆ ವಿರುದ್ಧವಾದ ಆಶೆಗಳನ್ನು 18
ಅನುಸರಿಸಿ ನಡೆಯುವ ಕುಚೋದ್ಯಗಾರರು ಅಂತ್ಯಕಾಲದಲ್ಲಿ ಇರುವರೆಂದು ಅವರು
ನಿಮಗೆ ಹೇಳಿದರಲ್ಲಾ. ಇವರು ಭೇದಗಳನ್ನು ಉಂಟುಮಾಡುವವರೂ ಪ್ರಾಕೃತ 19
ಮನುಷ್ಯರೂ[1] ದೇವರಾತ್ಮವಿಲ್ಲದವರೂ ಆಗಿದ್ದಾರೆ. ಪ್ರಿಯರೇ, ನೀವಾದರೋ ನಿಮ 20
ಗಿರುವ ಅತಿಪರಿಶುದ್ಧವಾದ ಧರ್ಮವನ್ನು[2] ಆಧಾರಮಾಡಿಕೊಂಡು ಭಕ್ತಿಯಲ್ಲಿ ಅಭಿ
ವೃದ್ಧಿಯನ್ನು ಹೊಂದುತ್ತಾ ಪವಿತ್ರಾತ್ಮಪ್ರೇರಿತರಾಗಿ ಪ್ರಾರ್ಥನೆಮಾಡುತ್ತಾ, ನಿತ್ಯಜೀವ 21
ಕ್ಕಾಗಿ ನಮ್ಮ ಕರ್ತನಾದ ಯೇಸು ಕ್ರಿಸ್ತನ ಕರುಣೆಯನ್ನು ಎದುರುನೋಡುತ್ತಾ ನಿಮ್ಮನ್ನು
ದೇವರ ಪ್ರೀತಿಯಲ್ಲಿ ಕಾಪಾಡಿಕೊಳ್ಳಿರಿ. ಸಂದೇಹಪಡುವ ಕೆಲವರಿಗೆ ಕರುಣೆಯನ್ನು 22
ತೋರಿಸಿರಿ; ಅವರನ್ನು ಬೆಂಕಿಯ ಬಾಯೊಳಗಿಂದ ಎಳಕೊಂಡು ರಕ್ಷಿಸಿರಿ. ಕೆಲವರನ್ನು 23
ಭಯಯುಕ್ತರಾಗಿ ಕರುಣಿಸಿರಿ; ಹೊಲಸು ನಡತೆಯಿಂದ ಮೈಲಿಗೆಯಾದ ಅವರ ಅಂಗಿ
ಯನ್ನಾದರೂ ಅಸಹ್ಯಿಸಿರಿ.

ಎಡವಿಬೀಳದಂತೆ ನಿಮ್ಮನ್ನು ಕಾಪಾಡುವದಕ್ಕೂ ತನ್ನ ಪ್ರಭಾವದ ಸಮಕ್ಷಮದಲ್ಲಿ 24
ನಿಮ್ಮನ್ನು ನಿರ್ದೋಷಿಗಳಾಗಿ ಹರ್ಷದೊಡನೆ ನಿಲ್ಲಿಸುವದಕ್ಕೂ ಶಕ್ತನಾಗಿರುವ ನಮ್ಮ 25
ರಕ್ಷಕನಾದ ಒಬ್ಬನೇ ದೇವರಿಗೆ ನಮ್ಮ ಕರ್ತನಾದ ಯೇಸು ಕ್ರಿಸ್ತನ ಮೂಲಕ ಪ್ರಭಾವ
ಮಹತ್ವ ಪರಾಕ್ರಮ ಅಧಿಕಾರಗಳು ಎಲ್ಲಾ ಕಾಲಕ್ಕಿಂತ ಮೊದಲೂ ಈಗಲೂ ಯಾವಾ
ಗಲೂ ಉಂಟು. ಆಮೆನ್.

---

[1] ೧ ಕೊರಿಂಥ. ೨, ೧೪ ನೋಡು. [2] ಅಥವಾ, ಕ್ರಿಸ್ತನಂಬಿಕೆಯನ್ನು.

# THE REVELATION OF SAINT JOHN

# ಯೋಹಾನನು ಬರೆದ ಪ್ರಕಟನೆ

#### ಪೀಠಿಕೆ.

**1** ಯೇಸು ಕ್ರಿಸ್ತನ ಪ್ರಕಟನೆಯು. ಆತನು ಬೇಗನೆ ಸಂಭವಿಸಬೇಕಾಗಿರುವ ಸಂಗತಿಗಳನ್ನು ತನ್ನ ದಾಸರಿಗೆ ತೋರಿಸುವದಕ್ಕಾಗಿ ದೇವರಿಂದ ಈ ಪ್ರಕಟನೆಯನ್ನು ಹೊಂದಿದನು; ಇದಲ್ಲದೆ ಆತನು ತನ್ನ ದೂತನನ್ನು ಕಳುಹಿಸಿ ಅವನ ಮೂಲಕ ಆ ಸಂಗತಿಗಳನ್ನು **2** ತನ್ನ ದಾಸನಾದ ಯೋಹಾನನಿಗೆ ಸೂಚಿಸಿದನು. ಯೋಹಾನನು ತಾನು ಕಂಡದ್ದನ್ನೆಲ್ಲಾ ತಿಳಿಸುವವನಾಗಿ ದೇವರ ವಾಕ್ಯದ ವಿಷಯವಾಗಿಯೂ ಯೇಸು ಕ್ರಿಸ್ತನು ಹೇಳಿದ[1] **3** ಸಾಕ್ಷಿಯ ವಿಷಯವಾಗಿಯೂ ಸಾಕ್ಷಿ ಕೊಟ್ಟನು. ಈ ಪ್ರವಾದನಾವಾಕ್ಯಗಳನ್ನು ಓದುವಂಥವನೂ ಕೇಳುವಂಥವರೂ ಈ ಪ್ರವಾದನೆಯಲ್ಲಿ ಬರೆದಿರುವ ಮಾತುಗಳನ್ನು ಕೈಕೊಂಡು ನಡೆಯುವಂಥವರೂ ಧನ್ಯರು. ಅವು ನೆರವೇರುವ ಸಮಯವು ಸಮೀಪವಾಗಿದೆ.

#### I. ಆಸ್ಯಸೀಮೆಯ ಏಳು ಸಭೆಗಳಿಗೆ ಯೋಹಾನನು ಬರೆದ ಪತ್ರಿಕೆ.

**4** ಆಸ್ಯಸೀಮೆಯಲ್ಲಿರುವ ಏಳು ಸಭೆಗಳಿಗೆ ಯೋಹಾನನು ಬರೆಯುವದೇನಂದರೆ—ವರ್ತಮಾನ ಭೂತ ಭವಿಷ್ಯತ್ಕಾಲಗಳಲ್ಲಿರುವಾತನಿಂದ[2], ಮತ್ತು ಆತನ ಸಿಂಹಾಸನದ ಮುಂದಿ **5** ರುವ ಏಳು ಆತ್ಮಗಳಿಂದ, ಮತ್ತು ನಂಬಿಗಸ್ತನಾದ ಸಾಕ್ಷಿಯೂ[3] ಸತ್ತವರೊಳಗಿಂದ ಮೊದಲು ಎದ್ದುಬಂದವನೂ[4] ಭೂರಾಜರ ಒಡೆಯನೂ[5] ಆಗಿರುವ ಯೇಸು ಕ್ರಿಸ್ತನಿಂದ ನಿಮಗೆ ಕೃಪೆಯೂ ಶಾಂತಿಯೂ ಆಗಲಿ.

ನಮ್ಮನ್ನು ಪ್ರೀತಿಸುವವನೂ ತನ್ನ ರಕ್ತವನ್ನು ಸುರಿಸಿ ನಮ್ಮನ್ನು ಪಾಪಗಳಿಂದ ಬಿಡಿಸಿ **6** ದವನೂ ನಮ್ಮನ್ನು ರಾಜ್ಯವನ್ನಾಗಿಯೂ ತನ್ನ ತಂದೆಯಾದ ದೇವರಿಗೆ ಯಾಜಕರನ್ನಾಗಿಯೂ ಮಾಡಿದವನೂ[6] ಆಗಿರುವಾತನಿಗೆ ಘನವೂ ಮಹತ್ವವೂ ಸದಾಕಾಲವಿರಲಿ.

---

1) ಅಥವಾ, ಯೇಸು ಕ್ರಿಸ್ತನ ವಿಷಯವಾದ.
2) ಹೊರಡೋಣ ೩, ೧೪.
3) ಪ್ರಕಟನೆ ೩, ೧೪; ಯೋಹಾನ ೧೮, ೩೭; ಯೆಶಾಯ ೫೫, ೪.
4) ಮೂಲ: ಹುಟ್ಟಿಬಂದವನೂ.
5) ಕೀರ್ತನೆ ೮೯, ೨೭
6) ಹೊರಡೋಣ ೧೯, ೬.

ಆಮೆನ್. ಇಗೋ ಮೇಘಾರೂಢನಾಗಿ ಬರುತ್ತಾನೆ[1]; ಎಲ್ಲರ ಕಣ್ಣುಗಳು ಆತನನ್ನು 7
ಕಾಣುವವು[2]; ಆತನನ್ನು ತಿವಿದವರು ಸಹ ಕಾಣುವರು; ಭೂಮಿಯಲ್ಲಿರುವ ಎಲ್ಲಾ
ಕುಲದವರು ಆತನನ್ನು ನೋಡಿ ಎದೆಬಡುಕೊಳ್ಳುವರು. ಹೌದು, ಹಾಗೆಯೇ ಆಗು
ವದು. ಆಮೆನ್.

ನಾನು ಆದ್ಯಂತ್ಯನೂ[3] ವರ್ತಮಾನ ಭೂತ ಭವಿಷ್ಯತ್ಕಾಲಗಳಲ್ಲಿರುವವನೂ ಸರ್ವ 8
ಶಕ್ತನೂ ಆಗಿದ್ದೇನೆ ಎಂದು ದೇವರಾದ ಕರ್ತನು ಹೇಳುತ್ತಾನೆ.

ನಿಮ್ಮ ಸಹೋದರನೂ ಯೇಸುವಿನ ನಿಮಿತ್ತ ಹಿಂಸೆಯಲ್ಲಿಯೂ ರಾಜ್ಯದಲ್ಲಿಯೂ 9
ತಾಳ್ಮೆಯಲ್ಲಿಯೂ ನಿಮ್ಮೊಂದಿಗೆ ಪಾಲುಗಾರನೂ ಆಗಿರುವ ಯೋಹಾನನೆಂಬ ನಾನು ದೇವರ
ವಾಕ್ಯಕ್ಕೋಸ್ಕರವೂ ಯೇಸುವಿನ ವಿಷಯವಾದ ಸಾಕ್ಷಿಗೋಸ್ಕರವೂ ಪತ್ಮೊಸ್ ದ್ವೀಪ
ದಲ್ಲಿದ್ದೆನು. ನಾನು ಕರ್ತನ ದಿನದಲ್ಲಿ ದೇವರಾತ್ಮವಶನಾಗಿ, ನನ್ನ ಹಿಂದುಗಡೆ ತುತೂ 10
ರಿಯ ಶಬ್ದದಂತಿರುವ ಮಹಾ ಶಬ್ದವನ್ನು ಕೇಳಿದೆನು. ಅದು—ನೀನು ನೋಡುವದನ್ನು 11
ಪುಸ್ತಕದಲ್ಲಿ ಬರೆದು, ಎಫೆಸ, ಸ್ಮುರ್ನ, ಪೆರ್ಗಮ, ಥುವತೈರ, ಸಾರ್ದಿಸ್, ಫಿಲದೆಲ್ಫಿಯ,
ಲವೊದಿಕೀಯ ಎಂಬೀ ಏಳು ಪಟ್ಟಣಗಳ ಸಭೆಗಳಿಗೆ ಕಳುಹಿಸಬೇಕೆಂದು ನುಡಿಯಿತು.
ನನ್ನ ಸಂಗಡ ಮಾತಾಡುತ್ತಿದ್ದ ಶಬ್ದವು ಯಾರದೆಂದು ನೋಡುವದಕ್ಕೆ ಹಿಂದಕ್ಕೆ ತಿರುಗಿ 12
ದೆನು. ತಿರುಗಿದಾಗ ಏಳು ಚಿನ್ನದ ದೀಪಸ್ತಂಭಗಳನ್ನೂ ಆ ದೀಪಸ್ತಂಭಗಳ ಮಧ್ಯದಲ್ಲಿ 13
ಮನುಷ್ಯಕುಮಾರನಂತೆ ಇರುವವನನ್ನೂ[4] ಕಂಡೆನು. ಆತನು ನಿಲುವಂಗಿಯನ್ನು ತೊಟ್ಟು
ಚಿನ್ನದ ಪಟ್ಟಿಯನ್ನು ಎದೆಗೆ ಕಟ್ಟಿಕೊಂಡಿದ್ದನು[5]. ಆತನ ತಲೇ ಕೂದಲುಗಳು ಬಿಳೀ 14
ಕುರಿಯ ಉಣ್ಣೆಯಂತೆಯೂ ಹಿಮದಂತೆಯೂ ಬೆಳ್ಳಗಿದ್ದವು[6]. ಆತನ ಕಣ್ಣುಗಳು
ಬೆಂಕಿಯ ಉರಿಯಂತೆಯೂ ಆತನ ಪಾದಗಳು ಕುಲುಮೆಯಲ್ಲಿ ಕಾಯಿಸಿದ ಹಿತ್ತಾಳಿ 15
ಯಂತೆಯೂ[7] ಆತನ ಧ್ವನಿಯು ಜಲಪ್ರವಾಹದ ಘೋಷದಂತೆಯೂ[8] ಇದ್ದವು. ಆತನ 16
ಬಲಗೈಯಲ್ಲಿ ಏಳು ನಕ್ಷತ್ರಗಳಿದ್ದವು; ಆತನ ಬಾಯೊಳಗಿಂದ ಹದವಾದ ಇಬ್ಬಾಯಿ
ಕತ್ತಿಯು ಹೊರಡುತ್ತಿತ್ತು. ಆತನ ಮುಖವು ಮಧ್ಯಾಹ್ನದಲ್ಲಿ ಪ್ರಕಾಶಿಸುವ ಸೂರ್ಯ
ನಂತಿತ್ತು. ನಾನು ಆತನನ್ನು ಕಂಡಾಗ ಸತ್ತವನ ಹಾಗೆ ಆತನ ಪಾದಗಳ ಮುಂದೆ 17
ಬಿದ್ದೆನು[9]. ಆತನು ತನ್ನ ಬಲಗೈಯನ್ನು ನನ್ನ ಮೇಲಿಟ್ಟು—ಹೆದರಬೇಡ, ನಾನು ಮೊದ
ಲನೆಯವನೂ ಕಡೆಯವನೂ ಸದಾ ಜೀವಿಸುವವನೂ ಆಗಿದ್ದೇನೆ. ಸತ್ತವನಾದೆನು, 18
ಮತ್ತು ಇಗೋ ಸದಾಕಾಲವೂ ಬದುಕುವವನಾಗಿದ್ದೇನೆ; ಮರಣದ ಮತ್ತು ಪಾತಾಳದ
ಬೀಗದಕೈಗಳು ನನ್ನಲ್ಲಿ ಅವೆ. ಆದದರಿಂದ ನೀನು ಕಂಡ ದರ್ಶನವನ್ನೂ ಈಗ ನಡೆಯು 19
ತ್ತಿರುವವುಗಳನ್ನೂ ಅನಂತರ ಆಗಬೇಕಾದವುಗಳನ್ನೂ ವಿವರಿಸಿ ಬರೆ. ನನ್ನ ಬಲಗೈಯಲ್ಲಿ 20
ನೀನು ಕಂಡ ಏಳು ನಕ್ಷತ್ರಗಳ ಮತ್ತು ಏಳು ಚಿನ್ನದ ದೀಪಸ್ತಂಭಗಳ ಗೂಢಾರ್ಥವನ್ನು

[1] ದಾನಿಯೇಲ ೭, ೧೩.
[2] ಜೆಕರ್ಯ ೧೨, ೧೦; ಯೋಹಾನ ೧೯, ೩೭.
[3] ಯೆಶಾಯ ೪೪, ೬; ೪೮, ೧೨.
[4] ದಾನಿಯೇಲ ೭, ೧೩.
[5] ಹೊರಡೋಣ ೨೮, ೪; ದಾನಿಯೇಲ ೧೦, ೫.
[6] ದಾನಿಯೇಲ ೭, ೯.
[7] ದಾನಿಯೇಲ ೧೦, ೬.
[8] ಯೆಜೇಕಿಯೇಲ ೧, ೨೪; ೪೩, ೨.
[9] ಯೆಜೇಕಿಯೇಲ ೧, ೨೮; ದಾನಿಯೇಲ ೮, ೧೭. ೧೮; ಮತ್ತಾಯ ೧೭, ೬. ೭.

ವಿವರಿಸುತ್ತೇನೆ—ಆ ಏಳು ನಕ್ಷತ್ರಗಳು ಅಂದರೆ ಆ ಏಳು ಸಭೆಗಳ ದೂತರು[1]; ಆ ಏಳು ದೀಪಸ್ತಂಭಗಳು ಅಂದರೆ ಆ ಏಳು ಸಭೆಗಳು.

### ಕರ್ತನಾದ ಯೇಸು ಏಳು ಸಭೆಗಳ ದೂತರಿಗೆ ಬರಸಿದ ಪತ್ರಿಕೆಗಳು.

**2** ಎಫೆಸದಲ್ಲಿರುವ ಸಭೆಯ ದೂತನಿಗೆ ಬರೆ—

ಏಳು ನಕ್ಷತ್ರಗಳನ್ನು ಬಲಗೈಯಲ್ಲಿ ಹಿಡುಕೊಂಡು ಏಳು ಚಿನ್ನದ ದೀಪಸ್ತಂಭಗಳ 2 ಮಧ್ಯದಲ್ಲಿ ತಿರುಗಾಡುವಾತನು ಹೇಳುವದೇನಂದರೆ—ನಿನ್ನ ಕೃತ್ಯಗಳನ್ನೂ ಪ್ರಯಾಸವನ್ನೂ ತಾಳ್ಮೆಯನ್ನೂ ಬಲ್ಲೆನು; ನೀನು ದುಷ್ಟರನ್ನು ಸಹಿಸಲಾರಿ; ಅಪೊಸ್ತಲರಲ್ಲದಿದ್ದರೂ ತಮ್ಮನ್ನು ಅಪೊಸ್ತಲರೆಂದು ಹೇಳಿಕೊಳ್ಳುವವರನ್ನು ನೀನು ಪರೀಕ್ಷಿಸಿ ಅವರನ್ನು ಸುಳ್ಳು 3 ಗಾರರೆಂದು ಕಂಡುಕೊಂಡಿ; ನೀನು ತಾಳ್ಮೆಯುಳ್ಳವನಾಗಿ ನನ್ನ ಹೆಸರಿನ ನಿಮಿತ್ತ ಬಾಧೆ 4 ಯನ್ನು ಸೈರಿಸಿಕೊಂಡು ಬೇಸರಗೊಳ್ಳಲಿಲ್ಲ; ಇದನ್ನೆಲ್ಲಾ ಬಲ್ಲೆನು. ಆದರೆ ಮೊದಲು ನಿನಗಿದ್ದ ಪ್ರೀತಿಯನ್ನು ನೀನು ಬಿಟ್ಟುಬಿಟ್ಟಿದ್ದೀಯೆಂದು ನಾನು ನಿನ್ನ ಮೇಲೆ ತಪ್ಪುಹೊರಿಸ 5 ಬೇಕಾಗುತ್ತದೆ. ಆದದರಿಂದ ನೀನು ಎಲ್ಲಿಂದ ಬಿದ್ದಿದ್ದೀಯೋ ಅದನ್ನು ನಿನ್ನ ನೆನಪಿಗೆ ತಂದುಕೊಂಡು ಮನಸ್ಸನ್ನು ಬೇರೆಮಾಡಿಕೋ; ನೀನು ಮೊದಲು ಮಾಡುತ್ತಿದ್ದ ಕೃತ್ಯಗಳನ್ನು ಮಾಡು. ನೀನು ಮನಸ್ಸು ಬೇರೆಮಾಡಿಕೊಳ್ಳದೆ ಹೋದರೆ, ನಾನು ಬಂದು 6 ನಿನ್ನ ದೀಪಸ್ತಂಭವನ್ನು ಅದರ ಸ್ಥಳದಿಂದ ತೆಗದುಹಾಕುವೆನು. ಆದರೆ ನಿನ್ನಲ್ಲಿ ಒಳ್ಳೇದು ಒಂದುಂಟು, ಅದೇನಂದರೆ—ನಾನು ದ್ವೇಷಿಸುವ ನಿಕೊಲಾಯಿತರ ಕೃತ್ಯಗಳನ್ನು 7 ನೀನು ಸಹ ದ್ವೇಷಿಸುತ್ತೀ. ದೇವರಾತ್ಮನು ಸಭೆಗಳಿಗೆ ಹೇಳುವದನ್ನು ಕಿವಿಯುಳ್ಳವನು ಕೇಳಲಿ. ಯಾವನು ಜಯಹೊಂದುತ್ತಾನೋ ಅವನಿಗೆ ದೇವರ ಪರದೈಸಿನಲ್ಲಿರುವ[2] ಜೀವವೃಕ್ಷದ ಹಣ್ಣನ್ನು ತಿನ್ನುವದಕ್ಕೆ ಕೊಡುವೆನು.

8 ಸ್ಮುರ್ನದಲ್ಲಿರುವ ಸಭೆಯ ದೂತನಿಗೆ ಬರೆ—

9 ಸತ್ತವನಾಗಿದ್ದು ಜೀವಿತನಾಗಿ ಬಂದ ಆದ್ಯಂತ್ಯನು[3] ಹೇಳುವದೇನಂದರೆ—ನಾನು ನಿನ್ನ ಸಂಕಟವನ್ನೂ ನಿನ್ನ ಬಡತನವನ್ನೂ ಬಲ್ಲೆನು; ಆದರೂ ನೀನು ಐಶ್ವರ್ಯವಂತನೇ. ಇದಲ್ಲದೆ ತಮ್ಮನ್ನು ಯೆಹೂದ್ಯರೆಂದು ಹೇಳಿಕೊಳ್ಳುವವರು ನಿನ್ನ ವಿಷಯವಾಗಿ ದೂಷಿಸುವ 10 ದನ್ನು ಬಲ್ಲೆನು; ಅವರು ಯೆಹೂದ್ಯರಲ್ಲ, ಸೈತಾನನ ಸಮಾಜದವರಾಗಿದ್ದಾರೆ. ನಿನಗೆ ಸಂಭವಿಸುವದಕ್ಕಿರುವ ಬಾಧೆಗಳಿಗೆ ಹೆದರಬೇಡ. ಇಗೋ ಸೈತಾನನು ನಿಮ್ಮಲ್ಲಿ ಕೆಲವರನ್ನು ಸೆರೆಮನೆಯೊಳಗೆ ಹಾಕುವದಕ್ಕಿದ್ದಾನೆ; ನಿಮಗೆ ಶೋಧನೆಯಾಗುವದು. ಮತ್ತು ಹತ್ತು ದಿವಸಗಳ ತನಕ ನಿಮಗೆ ಸಂಕಟವಿರುವದು. ನೀನು ಸಾಯಬೇಕಾದರೂ ನಂಬಿಗಸ್ತನಾಗಿರು; ನಾನು ನಿನಗೆ ಜೀವವೆಂಬ ಜಯಮಾಲೆಯನ್ನು[4] ಕೊಡುವೆನು.

---

[1] ಪ್ರಕಟನೆ ೧೬, ೫; ೧೪, ೧೮; ೭, ೧; ೯, ೧೧ ನೋಡು.

[2] ಅಂದರೆ, ಆನಂದವನ. ಉತ್ಪತ್ತಿ ೨, ೮. ೯; ಪ್ರಕಟನೆ ೨೦, ೨; ಲೂಕ ೨೩, ೪೩.

[3] ಪ್ರಕಟನೆ ೧, ೧೮; ಯೆಶಾಯ ೪೪, ೬. [4] ಯಾಕೋಬ ೧, ೧೨.

ದೇವರಾತ್ಮನು ಸಭೆಗಳಿಗೆ ಹೇಳುವದನ್ನು ಕಿವಿಯುಳ್ಳವನು ಕೇಳಲಿ. ಜಯಹೊಂದುವವ 11
ನಿಗೆ ಎರಡನೇ ಮರಣದಿಂದ[1] ಕೇಡಾಗುವದೇ ಇಲ್ಲ.

ಪೆರ್ಗಮದಲ್ಲಿರುವ ಸಭೆಯ ದೂತನಿಗೆ ಬರೆ— 12

ಹದವಾದ ಇಬ್ಬಾಯಿಕತ್ತಿಯನ್ನು ಹಿಡಿದಾತನು[2] ಹೇಳುವದೇನಂದರೆ—ನೀನು ವಾಸ 13
ಮಾಡುವ ಸ್ಥಳವನ್ನು ಬಲ್ಲೆನು; ಅದು ಸೈತಾನನ ಸಿಂಹಾಸನವಿರುವ ಸ್ಥಳವಾಗಿದೆ. ನೀನು
ನನ್ನ ಹೆಸರನ್ನು ಬಿಡದೇ ಹಿಡುಕೊಂಡಿದ್ದೀ; ನೀನು ಇರುವ ಸೈತಾನನ ನಿವಾಸದಲ್ಲಿ ನನಗೆ
ನಂಬಿಗಸ್ತನೂ ಸಾಕ್ಷಿಯೂ ಆದ ಅಂತಿಪನು ಕೊಲ್ಲಲ್ಪಟ್ಟ ದಿನಗಳಲ್ಲಿಯಾದರೂ ನನ್ನಲ್ಲಿಟ್ಟಿ
ರುವ ನಂಬಿಕೆಯನ್ನು ನೀನು ಮರೆಮಾಡಲಿಲ್ಲ. ಆದರೂ ಕೆಲವು ವಿಷಯಗಳಲ್ಲಿ ನಿನ್ನ 14
ಮೇಲೆ ತಪ್ಪುಹೊರಿಸಬೇಕಾಗುತ್ತದೆ; ವಿಗ್ರಹಕ್ಕೆ ನೈವೇದ್ಯಮಾಡಿದ ಪದಾರ್ಥಗಳನ್ನು
ತಿನ್ನುವಂತೆಯೂ ಜಾರತ್ವಮಾಡುವಂತೆಯೂ ಇಸ್ರಯೇಲ್ಯರನ್ನು ಪ್ರೇರಿಸಿ ಕೆಡಿಸಬೇಕೆಂದು
ಬಿಳಾಮನು ಬಾಲಾಕನಿಗೆ ಹೇಳಿದ ದುರ್ಬೋಧನೆಯನ್ನು[3] ಅವಲಂಬಿಸಿರುವವರು ನಿನ್ನಲ್ಲಿ
ದ್ದಾರೆ. ಇದಲ್ಲದೆ ನಿಮ್ಮಲ್ಲಿಯೂ ನಿಕೊಲಾಯಿತರ ಬೋಧನೆಯನ್ನು ಅವಲಂಬಿಸಿರುವ 15
ವರು ಇದ್ದಾರೆ. ಆದದರಿಂದ ಮನಸ್ಸನ್ನು ಬೇರೆಮಾಡಿಕೋ; ಮಾಡಿಕೊಳ್ಳದಿದ್ದರೆ, ನಾನು 16
ಬೇಗನೆ ನಿನ್ನ ಬಳಿಗೆ ಬಂದು ನನ್ನ ಬಾಯಿುಯ ಕತ್ತಿಯಿಂದ ಅವರ ಮೇಲೆ ಯುದ್ಧಮಾಡು
ವೆನು. ದೇವರಾತ್ಮನು ಸಭೆಗಳಿಗೆ ಹೇಳುವದನ್ನು ಕಿವಿಯುಳ್ಳವನು ಕೇಳಲಿ. ಯಾವನು 17
ಜಯಹೊಂದುತ್ತಾನೋ ಅವನಿಗೆ ಬಚ್ಚಿಟ್ಟಿರುವ ಮನ್ನವೆಂಬ ಆಹಾರವನ್ನು[4] ಕೊಡು
ವೆನು; ಇದಲ್ಲದೆ ಅವನಿಗೆ ಬಿಳೀ ಕಲ್ಲನ್ನೂ ಆ ಕಲ್ಲಿನ ಮೇಲೆ ಕೆತ್ತಿದ ಹೊಸ ಹೆಸರನ್ನೂ[5]
ಕೊಡುವೆನು; ಆ ಹೆಸರನ್ನು ಹೊಂದಿದವನಿಗೇ ಹೊರತು ಅದು ಇನ್ನ್ಯಾರಿಗೂ ತಿಳಿಯದು.

ಥುವತೈರದಲ್ಲಿರುವ ಸಭೆಯ ದೂತನಿಗೆ ಬರೆ— 18

ಬೆಂಕಿಯ ಉರಿಯಂತಿರುವ ಕಣ್ಣುಗಳೂ ಹಿತ್ತಾಳಿಯಂತಿರುವ ಪಾದಗಳೂ ಉಳ್ಳ[6]
ದೇವಕುಮಾರನು ಹೇಳುವದೇನಂದರೆ—ನಿನ್ನ ಕೃತ್ಯಗಳನ್ನೂ ನಿನ್ನ ಪ್ರೀತಿಯನ್ನೂ ನಂಬಿಕೆ 19
ಯನ್ನೂ ಪರೋಪಕಾರವನ್ನೂ ತಾಳ್ಮೆಯನ್ನೂ ಬಲ್ಲೆನು; ಇದಲ್ಲದೆ ನಿನ್ನ ಕಡೇ ಕೃತ್ಯಗಳು
ನಿನ್ನ ಮೊದಲಿನ ಕೃತ್ಯಗಳಿಗಿಂತ ಹೆಚ್ಚಾದವುಗಳೆಂದು ಬಲ್ಲೆನು. ಆದರೆ ನಿನ್ನ ಮೇಲೆ 20
ಒಂದು ತಪ್ಪುಹೊರಿಸಬೇಕಾಗುತ್ತದೆ; ಅದೇನಂದರೆ, ಯೆಜೆಬೇಲೆಂಬ ಆ ಹೆಂಗಸು[7]
ತನ್ನನ್ನು ಪ್ರವಾದಿನಿಯೆಂದು ಹೇಳಿಕೊಂಡು ಜಾರತ್ವಮಾಡಬಹುದೆಂದೂ ವಿಗ್ರಹಗಳಿಗೆ
ನೈವೇದ್ಯಮಾಡಿದ ಪದಾರ್ಥಗಳನ್ನು ತಿನ್ನಬಹುದೆಂದೂ ನನ್ನ ದಾಸರಿಗೆ ಬೋಧಿಸುತ್ತಾ
ಅವರನ್ನು ತಪ್ಪಾದ ಮಾರ್ಗದಲ್ಲಿ ಸೇರಿಸುತ್ತಿರುವಲ್ಲಿ ನೀನು ಅವಳನ್ನು ತಡೆಯದೆ ಬಿಟ್ಟಿರು
ವದೇ. ಮನಸ್ಸನ್ನು ಬೇರೆಮಾಡಿಕೊಳ್ಳುವದಕ್ಕೆ ನಾನು ಅವಳಿಗೆ ಸಮಯವನ್ನು 21
ಕೊಟ್ಟೆನು; ಆದರೆ ಮನಸ್ಸು ಬೇರೆಮಾಡಿಕೊಂಡು ತನ್ನ ಜಾರತ್ವವನ್ನು ಬಿಟ್ಟುಬಿಡುವದಕ್ಕೆ
ಅವಳಿಗೆ ಇಷ್ಟವಿಲ್ಲ. ಇಗೋ, ಅವಳು ಹಾಸಿಗೆಯ ಮೇಲೆ ಬಿದ್ದುಕೊಂಡಿರುವಂತೆ 22

---

1) ಪ್ರಕಟನೆ ೨೦, ೬; ಮತ್ತಾಯ ೧೦, ೨೮.
2) ಪ್ರಕಟನೆ ೧, ೧೬.
3) ಅಂಕೆ. ೩೧, ೧೬; ೨೫, ೧. ೨.
4) ಹೊರಡೋಣ ೧೬, ೩೩.
5) ಯೆಶಾಯ ೬೨, ೨.
6) ಪ್ರಕಟನೆ ೧, ೧೪. ೧೫.
7) ಕೆಲವು ಪ್ರತಿಗಳಲ್ಲಿ—ನಿನ್ನ ಹೆಂಡತಿಯು ಎಂದು ಬರೆದದೆ.

ಮಾಡುವೆನು, ಮತ್ತು ಅವಳ ಹಾಗೆ ವ್ಯಭಿಚಾರಮಾಡುವವರು ತಮ್ಮ ಮನಸ್ಸನ್ನು ಬೇರೆ ಮಾಡಿಕೊಂಡು ಅವಳ ಕೃತ್ಯಗಳನ್ನು ಬಿಟ್ಟುಬಿಡದೆ ಹೋದರೆ ಮಹಾ ಸಂಕಟದಲ್ಲಿ ಬೀಳು 23 ವಂತೆ ಮಾಡುವೆನು. ಅವಳ ಮಕ್ಕಳನ್ನು[1] ಕೊಂದೇ ಕೊಲ್ಲುವೆನು; ಆಗ ನಾನು ಮನುಷ್ಯರ ಅಂತರಿಂದ್ರಿಯವನ್ನೂ ಹೃದಯವನ್ನೂ ಪರೀಕ್ಷಿಸುವವನಾಗಿದ್ದೇನೆಂಬುವದು ಎಲ್ಲಾ ಸಭೆಗಳಿಗೆ ಗೊತ್ತಾಗುವದು. ನಿಮ್ಮಲ್ಲಿ ಪ್ರತಿಯೊಬ್ಬನಿಗೆ ಅವನವನ ಕೃತ್ಯಗಳಿಗೆ 24 ತಕ್ಕ ಹಾಗೆ ಪ್ರತಿಫಲ ಕೊಡುವೆನು. ಆದರೆ ಥುವತೈರದಲ್ಲಿರುವ ಉಳಿದವರಿಗೆ, ಅಂದರೆ ಅಗಾಧಬೋಧೆಯೆಂದು ಹೇಳಿಸಿಕೊಂಡಿರುವ ಸೈತಾನನಿಂದ ಪ್ರೇರಿತವಾದ ದುರ್ಬೋಧನೆ ಯನ್ನು ನಿಮ್ಮಲ್ಲಿ ಯಾರ್‍ಯಾರು ತಿಳಿಯದೆಯೂ ಅವಲಂಬಿಸದೆಯೂ ಇರುತ್ತಾರೋ ಅವ 25 ರಿಗೆ ಹೇಳುವದೇನಂದರೆ—ನಿಮಗಿರುವದನ್ನು ನಾನು ಬರುವ ತನಕ ಬಿಗಿಯಾಗಿ ಹಿಡು ಕೊಂಡಿರಬೇಕೆಂಬ ಅಪ್ಪಣೆಯನ್ನೇ ಹೊರತು ಮತ್ತೊಂದು ಭಾರವನ್ನು ನಿಮ್ಮ ಮೇಲೆ 26 ಹಾಕುವದಿಲ್ಲವೆಂಬುವದೇ[2]. ಯಾವನು ಜಯಶಾಲಿಯಾಗಿದ್ದು ನನಗೆ ಮೆಚ್ಚಿಕೆಯಾದ ಕೃತ್ಯಗಳನ್ನು ಕಡೇ ವರೆಗೂ ನಡಸುತ್ತಾನೋ ಅವನಿಗೆ ನಾನು ನನ್ನ ತಂದೆಯಿಂದ 27 ಹೊಂದಿದ ಅಧಿಕಾರದಂತೆ ಜನಾಂಗಗಳ ಮೇಲೆ ಅಧಿಕಾರವನ್ನು ಕೊಡುವೆನು. ಅವನು ಕಬ್ಬಿಣದ ಕೋಲಿನಿಂದ ಅವರನ್ನು ಆಳುವನು; ಮಣ್ಣಿನ ಮಡಿಕೆಗಳು ಒಡೆಯುವಂತೆ[3] 28 ಅವರ ಬಲ ಮುರಿದುಹೋಗುವದು. ಇದಲ್ಲದೆ ಉದಯಸೂಚಕನಕ್ಷತ್ರವನ್ನು ಅವನಿಗೆ 29 ಕೊಡುವೆನು. ದೇವರಾತ್ಮನು ಸಭೆಗಳಿಗೆ ಹೇಳುವದನ್ನು ಕಿವಿಯುಳ್ಳವನು ಕೇಳಲಿ.

**3** ಸಾರ್ದಿಸಿನಲ್ಲಿರುವ ಸಭೆಯ ದೂತನಿಗೆ ಬರೆ—

ದೇವರ ಏಳು ಆತ್ಮಗಳೂ[4] ಏಳು ನಕ್ಷತ್ರಗಳೂ[5] ಉಳ್ಳಾತನು ಹೇಳುವದೇನಂದರೆ— ನಿನ್ನ ಕೃತ್ಯಗಳನ್ನು ಬಲ್ಲೆನು; ಜೀವಿಸುವವನು ಎಂಬ ಹೆಸರು ನಿನಗಿದ್ದಾಗ್ಯೂ ಸತ್ತವ 2 ನಾಗಿದ್ದೀ ಎಂಬುವದನ್ನು ಬಲ್ಲೆನು. ಎಚ್ಚರವಾಗಿರು; ಸಾಯುವ ಹಾಗಿದ್ದ ಉಳಿದವು ಗಳನ್ನು ದೃಢಪಡಿಸು. ನನ್ನ ದೇವರ ಮುಂದೆ ನಿನ್ನ ಕೃತ್ಯಗಳಲ್ಲಿ ಒಂದಾದರೂ 3 ಸಂಪೂರ್ಣವಾದದ್ದೆಂದು ನಾನು ಕಾಣಲಿಲ್ಲ. ಆದದರಿಂದ ನೀನು ಹೊಂದಿದ ಉಪದೇಶ ವನ್ನೂ ಅದನ್ನು ಕೇಳಿದ ರೀತಿಯನ್ನೂ ನೆನಪಿಗೆ ತಂದುಕೊಂಡು ಅದನ್ನು ಕಾಪಾಡಿಕೋ, ಮತ್ತು ಮನಸ್ಸನ್ನು ಬೇರೆಮಾಡಿಕೋ. ನೀನು ಎಚ್ಚರವಾಗಿಲ್ಲದಿದ್ದರೆ, ಕಳ್ಳನು ಬರು ವಂತೆ ಬರುವೆನು; ನಾನು ಯಾವ ಗಳಿಗೆಯಲ್ಲಿ ನಿನ್ನ ಮೇಲೆ ಬರುವೆನೋ ಅದು ನಿನಗೆ 4 ತಿಳಿಯುವದೇ ಇಲ್ಲ. ಆದಾಗ್ಯೂ ತಮ್ಮ ವಸ್ತ್ರಗಳನ್ನು ಮೈಲಿಗೆ ಮಾಡಿಕೊಳ್ಳದಿರುವ ಸ್ವಲ್ಪ ಜನರು ಸಾರ್ದಿಸಿನೊಳಗೆ ನಿನ್ನಲ್ಲಿದ್ದಾರೆ; ಅವರು ಯೋಗ್ಯರಾಗಿರುವದರಿಂದ ಶುಭ್ರ 5 ವಸ್ತ್ರಗಳನ್ನು ಧರಿಸಿಕೊಂಡು ನನ್ನ ಜೊತೆಯಲ್ಲಿ ನಡೆಯುವರು. ಜಯಶಾಲಿಗೆ ಹೀಗೆ ಶುಭ್ರವಸ್ತ್ರಗಳನ್ನು ಹೊದ್ದಿಸುವರು. ಜೀವಬಾಧ್ಯರ ಪಟ್ಟಿಯಿಂದ ಅವನ ಹೆಸರನ್ನು ನಾನು ಅಳಿಸಿಬಿಡದೆ[6] ಅವನು ನನ್ನವನೆಂದು ನನ್ನ ತಂದೆಯ ಮುಂದೆಯೂ ಆತನ ದೂತರ

[1] ಅಥವಾ, ಅವಳನ್ನು ಹಿಂಬಾಲಿಸಿದವರನ್ನು. [2] ಅಪೊಸ್ತಲರ ಕೃತ್ಯ. ೧೫, ೨೯.
[3] ಕೀರ್ತನೆ ೨, ೮—೯. [4] ಪ್ರಕಟನೆ ೧, ೪. [5] ಪ್ರಕಟನೆ ೧, ೧೬. ೨೦.
[6] ಕೀರ್ತನೆ ೬೯, ೨೮; ಹೊರಡೋಣ ೩೨, ೩೨; ಲೂಕ ೧೦, ೨೦; ಫಿಲಿಪ್ಪಿ. ೪, ೩.

ಮುಂದೆಯೂ ಒಪ್ಪುವೆನು[1]. ದೇವರಾತ್ಮನು ಸಭೆಗಳಿಗೆ ಹೇಳುವದನ್ನು ಕಿವಿಯುಳ್ಳ ವನು ಕೇಳಲಿ. 6

ಫಿಲದೆಲ್ಫಿಯದಲ್ಲಿರುವ ಸಭೆಯ ದೂತನಿಗೆ ಬರೆ— 7
ಪರಿಶುದ್ಧನೂ ಸತ್ಯವಂತನೂ ದಾವೀದನ ಬೀಗದಕೈಯುಳ್ಳವನೂ ಯಾರೂ ಮುಚ್ಚ ಕೂಡದಂತೆ ತೆರೆಯುವವನೂ ಯಾರೂ ತೆರೆಯದಂತೆ ಮುಚ್ಚುವವನೂ ಆಗಿರುವಾತನು[2] ಹೇಳುವದೇನಂದರೆ—ನಿನ್ನ ಕೃತ್ಯಗಳನ್ನು ಬಲ್ಲೆನು; ನಿನಗಿರುವ ಶಕ್ತಿ ಕೊಂಚವಾಗಿ 8 ದ್ದಾಗ್ಯೂ, ನೀನು ನನಗೆ ಸೇರಿದವನಲ್ಲವೆಂದು ಹೇಳದೆ ನನ್ನ ವಾಕ್ಯವನ್ನು ಕಾಪಾಡಿದ್ದ ರಿಂದ, ಇಗೋ, ನಿನ್ನೆದುರಿನಲ್ಲಿ ಒಂದು ಬಾಗಿಲನ್ನು ತೆರೆದಿಟ್ಟಿದ್ದೇನೆ[3]; ಯಾರೂ ಅದನ್ನು ಮುಚ್ಚಲಾರರು. ನಾನು ನಿನಗೆ ಅನುಗ್ರಹಿಸುವದೇನಂದರೆ, ತಾವು ಯೆಹೂದ್ಯರೆಂದು 9 ಸುಳ್ಳಾಗಿ ಕೊಚ್ಚಿಕೊಳ್ಳುವ ಸೈತಾನನ ಸಮಾಜದವರಲ್ಲಿ ಕೆಲವರು ಬಂದು ನಿನ್ನ ಪಾದ ಗಳ ಮುಂದೆ ಬೀಳುವಂತೆಯೂ[4] ನಿನ್ನನ್ನು ನಾನು ಪ್ರೀತಿಸಿದ್ದನ್ನು ತಿಳುಕೊಳ್ಳುವಂತೆಯೂ ಮಾಡುವೆನು. ನೀನು ನನ್ನ ಸಹನವಾಕ್ಯವನ್ನು[5] ಕಾಪಾಡಿದ್ದರಿಂದ ಭೂನಿವಾಸಿಗಳನ್ನು 10 ಪರೀಕ್ಷಿಸುವದಕ್ಕಾಗಿ ಲೋಕದ ಮೇಲೆಲ್ಲಾ ಒರುವದಕ್ಕಿರುವ ಕಷ್ಟದ ಗಳಿಗೆಯಲ್ಲಿ ನಿನ್ನನ್ನು ತಪ್ಪಿಸಿ ಕಾಪಾಡುವೆನು. ಬೇಗನೆ ಬರುತ್ತೇನೆ; ನಿನಗಿರುವದನ್ನು ಹಿಡು 11 ಕೊಂಡಿರು; ನಿನ್ನ ಜಯಮಾಲೆಯನ್ನು ಯಾರೂ ಅಪಹರಿಸಬಾರದು. ಯಾವನು 12 ಜಯಹೊಂದುತ್ತಾನೋ ಅವನನ್ನು ನನ್ನ ದೇವರ ಆಲಯದಲ್ಲಿ ಸ್ತಂಭವಾಗಿ ನಿಲ್ಲಿಸುವೆನು; ಅವನು ಇನ್ನು ಮುಂದೆ ಅದರೊಳಗಿಂದ ಹೋಗುವದೇ ಇಲ್ಲ. ಇದಲ್ಲದೆ ನನ್ನ ದೇವರ ಹೆಸರನ್ನೂ ನನ್ನ ದೇವರ ಬಳಿಯಿಂದ ಪರಲೋಕದೊಳಗಿಂದ ಇಳಿದುಬರುವ ಹೊಸ ಯೆರೂಸ ಲೇಮ್ ಪಟ್ಟಣವೆಂಬ ನನ್ನ ದೇವರ ಪಟ್ಟಣದ ಹೆಸರನ್ನೂ[6] ನನ್ನ ಹೊಸ ಹೆಸರನ್ನೂ[7] ಅವನ 13 ಮೇಲೆ ಬರೆಯುವೆನು. ದೇವರಾತ್ಮನು ಸಭೆಗಳಿಗೆ ಹೇಳುವದನ್ನು ಕಿವಿಯುಳ್ಳವನು ಕೇಳಲಿ.

ಲವೊದಿಕೀಯದಲ್ಲಿರುವ ಸಭೆಯ ದೂತನಿಗೆ ಬರೆ—
ಆಮೆನ್ ಎಂಬಾತನು[8] ಅಂದರೆ ನಂಬತಕ್ಕ ಸತ್ಯಸಾಕ್ಷಿಯೂ[9] ದೇವರ ಸೃಷ್ಟಿಗೆ 14 ಮೂಲನೂ[10] ಆಗಿರುವಾತನು ಹೇಳುವದೇನಂದರೆ—ನಿನ್ನ ಕೃತ್ಯಗಳನ್ನು ಬಲ್ಲೆನು; ನೀನು 15 ತಣ್ಣಗೂ ಅಲ್ಲ, ಬೆಚ್ಚಗೂ ಅಲ್ಲ; ನೀನು ತಣ್ಣಗಾಗಲಿ ಬೆಚ್ಚಗಾಗಲಿ ಇದ್ದರೆ ಒಳ್ಳೇದಾ ಗಿತ್ತು. ನೀನು ಬೆಚ್ಚಗೂ ಇಲ್ಲದೆ ತಣ್ಣಗೂ ಇಲ್ಲದೆ ಉಗುರುಬೆಚ್ಚಗಿರುವದರಿಂದ, 16 ನಿನ್ನನ್ನು ನನ್ನ ಬಾಯೊಳಗಿಂದ ಕಾರುವೆನು. ನೀನು ನಿನ್ನ ವಿಷಯದಲ್ಲಿ—ನಾನು ಐಶ್ವ 17 ರ್ಯವಂತನು ಸಂಪನ್ನನು ಒಂದರಲ್ಲಿಯೂ ಕೊರತೆಯಿಲ್ಲದವನು ಎಂದು ಹೇಳಿಕೊಳ್ಳುತ್ತೀ; ಆದರೆ ನೀನು ಕೇವಲ ದುರವಸ್ಥೆಯಲ್ಲಿ ಬಿದ್ದಿರುವಂಥವನು ದೌರ್ಭಾಗ್ಯನು ದರಿದ್ರನು ಕುರು ಡನು ಬಟ್ಟೆಯಿಲ್ಲದವನು ಆಗಿರುವದನ್ನು ತಿಳಿಯದೆ ಇದ್ದೀ. ನೀನು ಐಶ್ವರ್ಯವಂತನಾಗು 18

[1] ಮತ್ತಾಯ ೧೦, ೩೨; ಲೂಕ ೧೨, ೮. [2] ಯೆಶಾಯ ೨೨, ೨೨.
[3] ೧ ಕೊರಿಂಥ. ೧೬, ೯; ೨ ಕೊರಿಂಥ. ೨, ೧೨; ಕೊಲೊಸ್ಸೆ. ೪, ೩. [4] ಯೆಶಾಯ ೪೫, ೧೪.
[5] ೨ ಥೆಸಲೊನೀಕ ೩, ೫. [6] ಯೆಜೇಕಿಯೇಲ ೪೮, ೩೫. [7] ಯೆಶಾಯ ೬೨, ೨.
[8] ಅಥವಾ, ಸತ್ಯವಂತನು; ಯೆಶಾಯ ೬೫, ೧೬. [9] ಪ್ರಕಟನೆ ೧, ೫. [10] ಕೊಲೊಸ್ಸೆ. ೧, ೧೫. ೧೬.

ವಂತೆ ಬೆಂಕಿಯಲ್ಲಿ ಪುಟಾಹಾಕಿದ ಚಿನ್ನವನ್ನೂ, ಲಜ್ಜಾಸ್ಪದವಾದ ನಿನ್ನ ಬೆತ್ತಲೆತನ ಕಾಣಿಸದಂತೆ ಹೊದ್ದುಕೊಳ್ಳುವದಕ್ಕಾಗಿ ಬಿಳೀ ವಸ್ತ್ರಗಳನ್ನೂ, ಕಣ್ಣುಕಾಣುವಂತೆ ನಿನ್ನ ಕಣ್ಣುಗಳಿಗೆ ಹಚ್ಚುವದಕ್ಕಾಗಿ ಅಂಜನವನ್ನೂ ನನ್ನಿಂದ ಕೊಂಡುಕೊಳ್ಳಬೇಕೆಂದು ನಿನಗೆ ಬುದ್ಧಿ 19 ಹೇಳುತ್ತೇನೆ. ನಾನು ಯಾರ್ಯಾರನ್ನು ಪ್ರೀತಿಸುತ್ತೇನೋ ಅವರನ್ನು ಗದರಿಸುತ್ತೇನೆ ಮತ್ತು ಶಿಕ್ಷಿಸುತ್ತೇನೆ. ಆದದರಿಂದ ನೀನು ಆಸಕ್ತನಾಗಿರು; ದೇವರ ಕಡೆಗೆ ತಿರುಗಿಕೋ. 20 ಇಗೋ, ಬಾಗಿಲಲ್ಲಿ ನಿಂತುಕೊಂಡು ತಟ್ಟುತ್ತಾ ಇದ್ದೇನೆ[1]; ಯಾವನಾದರೂ ನನ್ನ ಶಬ್ದವನ್ನು ಕೇಳಿ ಬಾಗಿಲನ್ನು ತೆರೆದರೆ, ನಾನು ಒಳಗೆ ಬಂದು ಅವನ ಸಂಗಡ ಊಟಮಾಡು 21 ವೆನು, ಅವನು ನನ್ನ ಸಂಗಡ ಊಟಮಾಡುವನು. ನಾನು ಜಯಹೊಂದಿ ನನ್ನ ತಂದೆಯೊಡನೆ ಸಿಂಹಾಸನದಲ್ಲಿ ಕೂತುಕೊಂಡೆನು; ಹಾಗೆಯೇ ಜಯಹೊಂದುವವನನ್ನು 22 ನನ್ನೊಡನೆ ಸಿಂಹಾಸನದಲ್ಲಿ ಕೂತುಕೊಳ್ಳುವಂತೆ ಮಾಡುವೆನು. ದೇವರಾತ್ಮನು ಸಭೆಗಳಿಗೆ ಹೇಳುವದನ್ನು ಕಿವಿಯುಳ್ಳವನು ಕೇಳಲಿ.

### II. ಪರಲೋಕದಲ್ಲಿರುವ ದೇವರ ಸಾನ್ನಿಧ್ಯವನ್ನು ಕುರಿತದ್ದು[2].

**4** ಇವುಗಳಾದ ಮೇಲೆ ನಾನು ನೋಡಿದಾಗ, ಪರಲೋಕದಲ್ಲಿ ತೆರೆದಿದ್ದ ಬಾಗಿಲು ಕಾಣಿಸಿತು; ಮತ್ತು ನನ್ನ ಸಂಗಡ ತುತೂರಿಯು ಮಾತಾಡುತ್ತದೋ ಎಂಬಂತೆ ನಾನು ಮೊದಲು ಕೇಳಿದ್ದ ವಾಣಿಯು ಕೇಳಿಸಿತು. ಇಲ್ಲಿಗೆ ಏರಿಬಾ, ಇನ್ನುಮೇಲೆ ಆಗಬೇಕಾದವುಗಳನ್ನು 2 ನಿನಗೆ ತೋರಿಸುವೆನು ಎಂದು ಹೇಳಿತು. ಕೂಡಲೇ ದೇವರಾತ್ಮವಶನಾದೆನು. ಆಗ ಇಗೋ ಪರಲೋಕದಲ್ಲಿ ಒಂದು ಸಿಂಹಾಸನವಿತ್ತು; ಸಿಂಹಾಸನದ ಮೇಲೆ ಒಬ್ಬನು ಕೂತಿ 3 ದ್ದನು. ಕೂತಿದ್ದವನು ಕಣ್ಣಿಗೆ ಸೂರ್ಯಕಾಂತ[3] ಪದ್ಮರಾಗ ಮಣಿಗಳಂತೆ ಕಾಣುತ್ತಿದ್ದನು. ಸಿಂಹಾಸನದ ಸುತ್ತಲು ಪಚ್ಚೆಯಂತೆ ತೋರುತ್ತಿದ್ದ ಕಾಮನಬಿಲ್ಲು ಇತ್ತು[4]. 4 ಇದಲ್ಲದೆ ಸಿಂಹಾಸನದ ಸುತ್ತಲು ಇಪ್ಪತ್ತುನಾಲ್ಕು ಸಿಂಹಾಸನಗಳಿದ್ದವು; ಆ ಸಿಂಹಾಸನಗಳ ಮೇಲೆ ಶುಭ್ರವಸ್ತ್ರ ಧರಿಸಿಕೊಂಡಿದ್ದ ಇಪ್ಪತ್ತುನಾಲ್ಕು ಮಂದಿ ಹಿರಿಯರು ಕೂತಿದ್ದರು[5]; 5 ಅವರ ತಲೆಗಳ ಮೇಲೆ ಚಿನ್ನದ ಕಿರೀಟಗಳಿದ್ದವು. ಸಿಂಹಾಸನದೊಳಗಿಂದ ಮಿಂಚುಗಳೂ ವಾಣಿಗಳೂ ಗುಡುಗುಗಳೂ ಹೊರಡುತ್ತವೆ[6]. ಅದರ ಮುಂದೆ ದೇವರ ಏಳು ಆತ್ಮಗಳನ್ನು 6 ಸೂಚಿಸುವ ಏಳು ದೀಪಗಳು ಉರಿಯುತ್ತಿದ್ದವು. ಇದಲ್ಲದೆ ಸಿಂಹಾಸನದ ಮುಂದೆ ಸ್ಫಟಿಕಕ್ಕೆ ಸಮಾನವಾದ ಗಾಜಿನ ಸಮುದ್ರವಿದ್ದ ಹಾಗೆ ತೋಚಿತು[7]. ಸಿಂಹಾಸನದ ಮಧ್ಯದಲ್ಲಿ ಅದರ ನಾಲ್ಕು ಕಡೆಗಳಲ್ಲಿ ನಾಲ್ಕು ಜೀವಿಗಳಿದ್ದವು[8]; ಅವುಗಳಿಗೆ ಹಿಂದೆ 7 ಮುಂದೆ ತುಂಬಾ ಕಣ್ಣುಗಳಿದ್ದವು. ಮೊದಲನೇ ಜೀವಿಯು ಸಿಂಹದಂತಿತ್ತು; ಎರಡನೇ ಜೀವಿಯು ಹೋರಿಯಂತಿತ್ತು; ಮೂರನೇ ಜೀವಿಯ ಮುಖವು ಮನುಷ್ಯನ ಮುಖ 8 ದಂತಿತ್ತು; ನಾಲ್ಕನೇ ಜೀವಿಯು ಹಾರುವ ಗರುಡಪಕ್ಷಿಯಂತಿತ್ತು. ಆ ನಾಲ್ಕು ಜೀವಿ

1) ಸೊಲೊಮೋನನ ಗೀತ ೫, ೨. 2) ಯೆಜೇಕಿಯೇಲ ೧ ನೋಡು. 3) ಅಥವಾ, ವಜ್ರ.
4) ಯೆಜೇಕಿಯೇಲ ೧, ೨೬—೨೮. 5) ೧ ದಿನಚರ್ಯ ೨೪, ೧—೧೯; ಪ್ರಕಟನೆ ೫, ೮.
6) ಹೊರಡೋಣ ೧೯, ೧೬. 7) ೧ ಅರಸು. ೭, ೨೩. ೨೬. 8) ಯೆಜೇಕಿಯೇಲ ೧, ೫—೧೪. ೧೮; ೧೦, ೧೨.

ಗಳೊಳಗೆ ಒಂದೊಂದಕ್ಕೆ ಆರಾರು ರೆಕ್ಕೆಗಳಿದ್ದವು[1]; ಅವುಗಳ ಎಲ್ಲಾ ಭಾಗದಲ್ಲಿಯೂ ಹಿಂಭಾಗದಲ್ಲಿಯೂ ಸಹ ತುಂಬಾ ಕಣ್ಣುಗಳಿದ್ದವು. ಆ ಜೀವಿಗಳು ಹಗಲಿರುಳು ವಿಶ್ರಮಿಸಿಕೊಳ್ಳದೆ—

ದೇವರಾದ ಕರ್ತನು ಪರಿಶುದ್ಧನು ಪರಿಶುದ್ಧನು ಪರಿಶುದ್ಧನು[2];
ಆತನು ಸರ್ವಶಕ್ತನು, ವರ್ತಮಾನ ಭೂತ ಭವಿಷ್ಯತ್ಕಾಲಗಳಲ್ಲಿರುವಂಥವನು

ಎಂದು ಹೇಳುತ್ತವೆ. ಸದಾಕಾಲ ಜೀವಿಸುವವನಾಗಿರುವ ಸಿಂಹಾಸನದ ಮೇಲೆ ಕೂತಿರು 9 ವಾತನಿಗೆ ಆ ನಾಲ್ಕು ಜೀವಿಗಳು ಪ್ರಭಾವ ಮಾನ ಕೃತಜ್ಞತಾಸ್ತುತಿಗಳನ್ನು ಸಲ್ಲಿಸುವಾಗ್ಯೆ ಆ ಇಪ್ಪತ್ತುನಾಲ್ಕು ಮಂದಿ ಹಿರಿಯರು ಸಿಂಹಾಸನದ ಮೇಲೆ ಕೂತಾತನ ಪಾದಕ್ಕೆ ಬಿದ್ದು 10 ತಮ್ಮ ಕಿರೀಟಗಳನ್ನು ಸಿಂಹಾಸನದ ಮುಂದೆ ಹಾಕಿ—

ಕರ್ತನೇ, ನಮ್ಮ ದೇವರೇ, 11
ನೀನು ಪ್ರಭಾವ ಮಾನ ಬಲಗಳನ್ನು ಹೊಂದುವದಕ್ಕೆ ಯೋಗ್ಯನಾಗಿದ್ದೀ;
ಸಮಸ್ತವನ್ನು ಸೃಷ್ಟಿಸಿದಾತನು ನೀನೇ;
ಎಲ್ಲವು ನಿನ್ನ ಚಿತ್ತದಿಂದಲೇ ಇದ್ದವು, ನಿನ್ನ ಚಿತ್ತದಿಂದಲೇ ನಿರ್ಮಿತವಾದವು

ಎಂದು ಹೇಳುತ್ತಾ, ಸದಾಕಾಲವೂ ಜೀವಿಸುವಾತನನ್ನು ಆರಾಧಿಸುತ್ತಾರೆ.

### III. ಸುರುಳಿಯ ಏಳು ಮುದ್ರೆಗಳನ್ನು ಕುರಿತದ್ದು.

ಸಿಂಹಾಸನದ ಮೇಲೆ ಕೂತಿದ್ದವನ ಬಲಗೈಯಲ್ಲಿ ಒಂದು ಸುರುಳಿಯನ್ನು ಕಂಡೆನು; **5** ಅದರ ಎರಡು ಪಕ್ಕೆಗಳಲ್ಲಿಯೂ ಬರೆದಿತ್ತು[3]; ಅದು ಏಳು ಮುದ್ರೆಗಳಿಂದ ಮುದ್ರಿತವಾಗಿತ್ತು. ಇದಲ್ಲದೆ ಬಲಿಷ್ಠನಾದ ಒಬ್ಬ ದೇವದೂತನು—ಈ ಸುರುಳಿಯನ್ನು ಬಿಚ್ಚು 2 ವದಕ್ಕೂ ಇದರ ಮುದ್ರೆಗಳನ್ನು ಒಡೆಯುವದಕ್ಕೂ ಯಾವನು ಯೋಗ್ಯನು ಎಂದು ಮಹಾ ಶಬ್ದದಿಂದ ಸಾರುವದನ್ನು ಕಂಡೆನು. ಆ ಸುರುಳಿಯನ್ನು ಬಿಚ್ಚುವದಕ್ಕಾದರೂ 3 ಅದರೊಳಗೆ ನೋಡುವದಕ್ಕಾದರೂ ಪರಲೋಕದಲ್ಲಿಯಾಗಲಿ ಭೂಮಿಯಲ್ಲಿಯಾಗಲಿ ಭೂಮಿಯ ಕೆಳಗಾಗಲಿ ಯಾವನಿಗೂ ಶಕ್ತಿಯಿರಲಿಲ್ಲ. ಆಗ ಸುರುಳಿಯನ್ನು ಬಿಚ್ಚುವದ 4 ಕ್ಕಾಗಲಿ ಅದರಲ್ಲಿ ನೋಡುವದಕ್ಕಾಗಲಿ ಯೋಗ್ಯನಾದವನು ಒಬ್ಬನೂ ಸಿಕ್ಕಲಿಲ್ಲವಾದ ಕಾರಣ ನಾನು ಬಹಳವಾಗಿ ಅಳುತ್ತಿರಲು, ಹಿರಿಯರಲ್ಲಿ ಒಬ್ಬನು ನನಗೆ—ಅಳಬೇಡ; 5 ಅಗೋ, ಯೂದಾ ಕುಲದಲ್ಲಿ ಜನಿಸಿದ ಸಿಂಹವೂ[4] ದಾವೀದ ವಂಶವೆಂಬ ಬುಡದಲ್ಲಿ ಹುಟ್ಟಿದ ಚಿಗುರೂ[5] ಆಗಿರುವಾತನು ಜಯ ಹೊಂದಿದನು; ಆತನು ಆ ಸುರುಳಿಯನ್ನೂ ಅದರ ಏಳು ಮುದ್ರೆಗಳನ್ನೂ ಬಿಚ್ಚುವನು ಎಂದು ಹೇಳಿದನು. ಸಿಂಹಾಸನವೂ ನಾಲ್ಕು 6

[1] ಯೆಶಾಯ ೬, ೨. [2] ಯೆಶಾಯ ೬, ೩. [3] ಯೆಜೇಕಿಯೇಲ ೨, ೯. ೧೦; ಯೆಶಾಯ ೨೯, ೧೧.
[4] ಅಥವಾ, ಸಿಂಹಪ್ರಾಯನೂ; ಉತ್ಪತ್ತಿ ೪೯, ೯. [5] ಯೆಶಾಯ ೧೧, ೧. ೧೦.

ಜೀವಿಗಳೂ ಇದ್ದ ಸ್ಥಳಕ್ಕೂ ಹಿರಿಯರು ಇದ್ದ ಸ್ಥಳಕ್ಕೂ ಮಧ್ಯದಲ್ಲಿ ಒಂದು ಯಜ್ಞಪಶು[1] ಕೊಯ್ಯಲ್ಪಟ್ಟದ್ದಾಗಿ ನಿಂತಿರುವದನ್ನು ಕಂಡೆನು. ಅದಕ್ಕೆ ಏಳು ಕೊಂಬುಗಳೂ ಏಳು ಕಣ್ಣುಗಳೂ ಇದ್ದವು; ಅವು ಏನಂದರೆ ಭೂಮಿಯ ಮೇಲೆಲ್ಲಾ ಕಳುಹಿಸಲ್ಪಟ್ಟಿರುವ
7 ದೇವರ ಏಳು ಆತ್ಮಗಳು[2]. ಈತನು ಮುಂದೆ ಬಂದು, ಸಿಂಹಾಸನದ ಮೇಲೆ ಕೂತಿದ್ದಾ
8 ತನ ಬಲಗೈಯೊಳಗಿಂದ ಆ ಸುರುಳಿಯನ್ನು ತೆಗೆದುಕೊಂಡನು. ತೆಗೆದುಕೊಂಡಾಗ, ಆ ನಾಲ್ಕು ಜೀವಿಗಳೂ ಇಪ್ಪತ್ತುನಾಲ್ಕು ಮಂದಿ ಹಿರಿಯರೂ ಯಜ್ಞಪಶುವಾದಾತನ ಪಾದಕ್ಕೆ ಬಿದ್ದರು. ಹಿರಿಯರ ಕೈಗಳಲ್ಲಿ ವೀಣೆಗಳೂ, ದೇವಜನರ ಪ್ರಾರ್ಥನೆಗಳೆಂಬ ಧೂಪದಿಂದ
9 ತುಂಬಿದ್ದ ಚಿನ್ನದ ಧೂಪಾರತಿಗಳೂ ಇದ್ದವು. ಅವರು ಹೊಸ ಹಾಡನ್ನು ಹಾಡುತ್ತಾ—

ನೀನು ಸುರುಳಿಯನ್ನು ತೆಗೆದುಕೊಂಡು ಅದರ ಮುದ್ರೆಗಳನ್ನು ಒಡೆಯುವದಕ್ಕೆ
ಯೋಗ್ಯನೇ;
ನೀನು ಯಜ್ಞಾರ್ಪಿತನಾಗಿ ನಿನ್ನ ರಕ್ತದಿಂದ ಸಕಲ ಕುಲ ಭಾಷೆ ಪ್ರಜೆ
ಜನಾಂಗಗಳವರಿಂದ ಮನುಷ್ಯರನ್ನು ದೇವರಿಗಾಗಿ ಕೊಂಡುಕೊಂಡಿ;
10 ಅವರನ್ನು ನಮ್ಮ ದೇವರಿಗೋಸ್ಕರ ರಾಜ್ಯವನ್ನಾಗಿಯೂ ಯಾಜಕರನ್ನಾಗಿಯೂ
ಮಾಡಿದಿ[3]; ಅವರು ಭೂಮಿಯ ಮೇಲೆ ಆಳುವರು

11 ಎಂದು ಹೇಳಿದರು. ಇದಲ್ಲದೆ ಸಿಂಹಾಸನವು ಜೀವಿಗಳು ಹಿರಿಯರು ಇವರ ಸುತ್ತಲು ಬಹು ಮಂದಿ ದೇವದೂತರನ್ನು ಕಂಡೆನು; ಅವರ ಸಂಖ್ಯೆ ಕೋಟ್ಯಂತರವಾಗಿಯೂ
12 ಲಕ್ಷಾಂತರವಾಗಿಯೂ ಇತ್ತು[4]. ಅವರ ಸ್ವರವು ನನಗೆ ಕೇಳಿಸಿತು; ಅವರು ಮಹಾ ಶಬ್ದದಿಂದ—

ವಧಿತನಾದ ಯಜ್ಞಪಶುವಾದಾತನು
ಬಲ ಐಶ್ವರ್ಯ ಜ್ಞಾನ ಸಾಮರ್ಥ್ಯ ಮಾನ ಪ್ರಭಾವ ಸ್ತೋತ್ರಗಳನ್ನು
ಹೊಂದುವದಕ್ಕೆ ಯೋಗ್ಯನು

13 ಎಂದು ಹೇಳಿದರು. ಇದಲ್ಲದೆ ಪರಲೋಕದಲ್ಲಿಯೂ ಭೂಮಿಯ ಮೇಲೆಯೂ ಭೂಮಿಯ ಕೆಳಗೆಯೂ ಸಮುದ್ರದ ಮೇಲೆಯೂ ಇರುವ ಎಲ್ಲಾ ಸೃಷ್ಟಿಗಳೂ ಭೂಸಮುದ್ರಗಳೊಳಗೆ ಇರುವದೆಲ್ಲವೂ—

ಸಿಂಹಾಸನಾಸೀನನಿಗೂ ಯಜ್ಞಪಶುವಾದಾತನಿಗೂ
ಸ್ತೋತ್ರವೂ ಮಾನವೂ ಪ್ರಭಾವವೂ ಆಧಿಪತ್ಯವೂ ಸದಾಕಾಲವಿರಲಿ

14 ಎಂದು ಹೇಳುವದನ್ನು ಕೇಳಿದೆನು. ಆಗ ನಾಲ್ಕು ಜೀವಿಗಳು ಆಮೆನ್ ಅಂದವು, ಮತ್ತು ಹಿರಿಯರು ಅಡ್ಡಬಿದ್ದು ನಮಸ್ಕಾರ ಮಾಡಿದರು.

---

[1] ಮೂಲ: ಕುರಿಮರಿ; ಎಲ್ಲಾ ಸ್ಥಳಗಳಲ್ಲಿಯೂ ಹಾಗೆಯೇ.
[2] ಜೆಕರೀಯ ೪, ೧೦.
[3] ಹೊರಡೋಣ ೧೯, ೬; ಪ್ರಕಟನೆ ೧, ೬.
[4] ದಾನಿಯೇಲ ೭, ೧೦.

ಮೊದಲ ನಾಲ್ಕು ಮುದ್ರೆಗಳನ್ನು ಒಡೆಯಲು, ಯುದ್ಧ ಕ್ಷಾಮ ಕೊಲೆ ಇವುಗಳ ಗುರುತುಗಳು ಕಾಣಿಸಿದ್ದು[1].

**6** ಯಜ್ಞಪಶುವಾದಾತನು ಆ ಏಳು ಮುದ್ರೆಗಳಲ್ಲಿ ಒಂದು ಮುದ್ರೆಯನ್ನು ಒಡೆಯುವಾಗ ನಾನು ನೋಡಿದೆನು. ಮತ್ತು ಆ ನಾಲ್ಕು ಜೀವಿಗಳಲ್ಲಿ ಒಂದು ಜೀವಿಯು— 2 ಬಾ[2] ಎಂದು ಗುಡುಗಿನಂತಿದ್ದ ಸ್ವರದಿಂದ ಹೇಳುವದನ್ನು ಕೇಳಿದೆನು. ಆಗ ಇಗೋ, ಒಂದು ಬಿಳೀ ಕುದುರೆ ಕಾಣಿಸಿತು[1]; ಅದರ ಮೇಲೆ ಕೂತಿದ್ದವನ ಕೈಯಲ್ಲಿ ಬಿಲ್ಲು ಇತ್ತು; ಅವನಿಗೆ ಜಯಮಾಲೆ ಕೊಡಲ್ಪಟ್ಟಿತು; ಅವನು ಜಯಹೊಂದತಕ್ಕವನಾಗಿ ಜಯಿಸುವದಕ್ಕೋಸ್ಕರ ಹೊರಟನು.

3 ಆತನು ಎರಡನೇ ಮುದ್ರೆಯನ್ನು ಒಡೆದಾಗ, ಎರಡನೇ ಜೀವಿಯು—ಬಾ[2] ಅನ್ನುವ 4 ದನ್ನು ಕೇಳಿದೆನು. ಆಗ ಮತ್ತೊಂದು ಕುದುರೆಯು ಹೊರಟುಬಂತು; ಅದು ಕೆಂಪು ಕುದುರೆ. ಅದರ ಮೇಲೆ ಕೂತಿದ್ದವನಿಗೆ ಭೂಮಿಯಿಂದ ಸಮಾಧಾನವನ್ನು ತೆಗೆದುಬಿಡುವದಕ್ಕೂ ಮನುಷ್ಯರು ಒಬ್ಬರನ್ನೊಬ್ಬರು ಕೊಲ್ಲುವವರಾಗುವಂತೆ ಮಾಡುವದಕ್ಕೂ ಅಧಿಕಾರವು ಕೊಡಲ್ಪಟ್ಟಿತು; ಅವನಿಗೆ ದೊಡ್ಡ ಕತ್ತಿಯು ಕೊಡಲ್ಪಟ್ಟಿತು.

5 ಆತನು ಮೂರನೇ ಮುದ್ರೆಯನ್ನು ಒಡೆದಾಗ, ಮೂರನೇ ಜೀವಿಯು—ಬಾ[2] ಅನ್ನುವದನ್ನು ಕೇಳಿದೆನು. ಆಗ ಇಗೋ, ಕರೀ ಕುದುರೆಯು ಕಾಣಿಸಿತು; ಅದರ ಮೇಲೆ 6 ಕೂತಿದ್ದವನ ಕೈಯಲ್ಲಿ ತ್ರಾಸು ಇತ್ತು. ಆ ಮೇಲೆ ನಾಲ್ಕು ಜೀವಿಗಳ ಮಧ್ಯದಿಂದ ಒಬ್ಬನ ಧ್ವನಿಯು ಹೊರಟ ಹಾಗೆ ಕೇಳಿದೆನು. ಅದು—ಪಾವಲಿಗೆ ಒಂದು ಸೇರು ಗೋಧಿ; ಪಾವಲಿಗೆ ಮೂರು ಸೇರು ಜವೆಗೋಧಿ; ಎಣ್ಣೆಯನ್ನೂ ದ್ರಾಕ್ಷಾರಸವನ್ನೂ ಕೆಡಿಸಬೇಡ ಎಂದು ಹೇಳಿತು[4].

7 ಆತನು ನಾಲ್ಕನೇ ಮುದ್ರೆಯನ್ನು ಒಡೆದಾಗ, ನಾಲ್ಕನೇ ಜೀವಿಯು—ಬಾ[2] ಅನ್ನುವ 8 ಶಬ್ದವನ್ನು ಕೇಳಿದೆನು. ಆಗ ಇಗೋ, ಬೂದಿಬಣ್ಣದ ಕುದುರೆಯು ಕಾಣಿಸಿತು. ಅದರ ಮೇಲೆ ಕೂತಿದ್ದವನ ಹೆಸರು ಮೃತ್ಯುವು; ಅವನ ಹಿಂದೆ ಪಾತಾಳವೆಂಬವನು ಬಂದನು. ಅವರಿಗೆ ಭೂಮಿಯ ಕಾಲುಭಾಗದಲ್ಲಿ ಕತ್ತಿಯಿಂದಲೂ ಬರದಿಂದಲೂ ಅಂಟು ರೋಗದಿಂದಲೂ ಕಾಡುಮೃಗಗಳಿಂದಲೂ ಕೊಲ್ಲುವದಕ್ಕೆ ಅಧಿಕಾರವು ಕೊಡಲ್ಪಟ್ಟಿತು[5].

ಐದನೇ ಮುದ್ರೆಯನ್ನು ಒಡೆದದ್ದು; ರಕ್ತಸಾಕ್ಷಿಗಳ ಆತ್ಮಗಳು ದೇವರ ಶತ್ರುಗಳಿಗೆ ಪ್ರತಿದಂಡನೆಯಾಗಬೇಕೆಂದು ಮೊರೆಯಿಟ್ಟದ್ದು.

9 ಆತನು ಐದನೇ ಮುದ್ರೆಯನ್ನು ಒಡೆದಾಗ, ದೇವರ ವಾಕ್ಯದ ನಿಮಿತ್ತವಾಗಿಯೂ ತಾವು ಹೇಳಿದ ಸಾಕ್ಷಿಯ ನಿಮಿತ್ತವಾಗಿಯೂ ಹತವಾದವರ ಆತ್ಮಗಳು ಯಜ್ಞವೇದಿಯ 10 ಕೆಳಗಿರುವದನ್ನು ಕಂಡೆನು. ಅವರು—ಒಡೆಯನೇ, ಪರಿಶುದ್ಧನೂ ಸತ್ಯವಂತನೂ ಆಗಿರುವಾತನೇ, ಭೂನಿವಾಸಿಗಳು ನಮ್ಮನ್ನು ಕೊಂದದ್ದಕ್ಕಾಗಿ ನೀನು ಎಷ್ಟು ಕಾಲದ ವರೆಗೂ

---

1) ಮಾರ್ಕ ೧೩, ೭. ೮. 2) ಅಥವಾ, ಹೊರಟು ಬಾ. 3) ಜೆಕರ್ಯ ೧, ೮; ೬, ೧—೮.
4) ಯೆಜೇಕಿಯೇಲ ೪, ೧೬; ಲೇವಿಕ ೨೬, ೨೬; ೨ ಅರಸು. ೭, ೧. 5) ಯೆಜೇಕಿಯೇಲ ೧೪, ೨೧.

ನ್ಯಾಯವಿಚಾರಿಸದೆಯೂ ಪ್ರತಿದಂಡನೆಮಾಡದೆಯೂ ಇರುವಿ? ಎಂದು ಮಹಾ ಶಬ್ದದಿಂದ
11 ಕೂಗಿದರು[1]. ಅವರಲ್ಲಿ ಒಬ್ಬೊಬ್ಬನಿಗೆ ಒಂದೊಂದು ಬಿಳೀ ನಿಲುವಂಗಿಯು ಕೊಡಲ್ಪ
ಟ್ಟಿತು. ಇದಲ್ಲದೆ—ನಿಮ್ಮ ಹಾಗೆ ಕೊಲೆಯಾಗಬೇಕಾಗಿರುವ ನಿಮ್ಮ ಸಹೋದರರ
ಮತ್ತು ನಿಮ್ಮ ಜೊತೆದಾಸರ ಸಂಖ್ಯೆಯೂ ಪೂರ್ಣವಾಗುವ ತನಕ ಇನ್ನೂ ಸ್ವಲ್ಪ ಕಾಲ
ವಿಶ್ರಮಿಸಿಕೊಂಡಿರಬೇಕೆಂದು ಅವರಿಗೆ ಉತ್ತರವಾಯಿತು.

ಆರನೇ ಮುದ್ರೆಯನ್ನು ಒಡೆದದ್ದು; ಮನುಷ್ಯರು ದೇವರ ಕೋಪದಿಂದ ತಪ್ಪಿಸಿಕೊಳ್ಳಬೇಕೆಂದು ಓಡಿಹೋದದ್ದು.

12 ಆತನು ಆರನೇ ಮುದ್ರೆ ಒಡೆಯುವದನ್ನು ಕಂಡೆನು. ಒಡೆದಾಗ ಮಹಾ ಭೂಕಂಪ
ಉಂಟಾಯಿತು; ಸೂರ್ಯನು ಕರೀಕಂಬಳಿಯಂತೆ ಕಪ್ಪಾದನು; ಪೂರ್ಣಚಂದ್ರನು ರಕ್ತ
13 ದಂತಾದನು; ಅತ್ತೀಮರವು ಬಿರುಗಾಳಿಯಿಂದ ಅಲ್ಲಾಡಿಸಲ್ಪಟ್ಟು ತನ್ನ ಕಾಯಿಗಳನ್ನು
14 ಉದುರಿಸುವ ಪ್ರಕಾರ ಆಕಾಶದ ನಕ್ಷತ್ರಗಳು ಭೂಮಿಗೆ ಬಿದ್ದವು[2]. ಆಕಾಶವು ಸುರು
ಳಿಯ ಹಾಗೆ ಸುತ್ತಲ್ಪಟ್ಟು ಹೋಗಿಬಿಟ್ಟಿತು; ಎಲ್ಲಾ ಬೆಟ್ಟಗಳೂ ದ್ವೀಪಗಳೂ ತಮ್ಮ ತಮ್ಮ
15 ಸ್ಥಳಗಳಿಂದ ಚಲಿಸಿದವು[3]. ಇದಲ್ಲದೆ ಭೂರಾಜರೂ ಪ್ರಭುಗಳೂ ಸಹಸ್ರಾಧಿಪತಿಗಳೂ
ಐಶ್ವರ್ಯವಂತರೂ ಪರಾಕ್ರಮಶಾಲಿಗಳೂ ಎಲ್ಲಾ ದಾಸರೂ ಸ್ವತಂತ್ರರೂ ಬೆಟ್ಟಗಳ ಗವಿ
16 ಗಳಿಗೂ ಬಂಡೆಗಳ ಸಂದುಗಳಿಗೂ ಓಡಿಹೋಗಿ ತಮ್ಮನ್ನು ಮರೆಮಾಡಿಕೊಂಡು[4], ಬೆಟ್ಟ
ಗಳಿಗೂ ಬಂಡೆಗಳಿಗೂ—ನಮ್ಮ ಮೇಲೆ ಬೀಳಿರಿ, ಸಿಂಹಾಸನದ ಮೇಲೆ ಕೂತಿರುವಾತನ
17 ಮುಖಕ್ಕೂ ಯಜ್ಞಪಶುವಾದಾತನ ಕೋಪಕ್ಕೂ ನಮ್ಮನ್ನು ಮರೆಮಾಡಿರಿ; ಅವರ
ಕೋಪವು ಕಾಣಿಸುವ ಮಹಾದಿನ ಬಂದದೆ; ಅದರ ಮುಂದೆ ನಿಲ್ಲುವದಕ್ಕೆ ಯಾರು
ಶಕ್ತರು[5] ಎಂದು ಹೇಳಿದರು.

ರಕ್ಷಣೆಯನ್ನು ಹೊಂದಿದ ಯೆಹೂದ್ಯರನ್ನೂ ಅನ್ಯಜನರನ್ನೂ ಕುರಿತದ್ದು.

**7** ಇದಾದ ಮೇಲೆ, ನಾಲ್ಕು ಮಂದಿ ದೇವದೂತರು ಭೂಮಿಯ ನಾಲ್ಕು ದಿಕ್ಕುಗಳಲ್ಲಿ
ನಿಂತುಕೊಂಡು, ಭೂಮಿಯ ಮೇಲಾಗಲಿ ಸಮುದ್ರದ ಮೇಲಾಗಲಿ ಯಾವ ಮರದ
ಮೇಲಾಗಲಿ ಗಾಳಿಬೀಸದಂತೆ, ಭೂಮಿಯ ಚತುರ್ದಿಕ್ಕುಗಳ ಗಾಳಿಗಳನ್ನು ಹಿಡಿದಿರುವ
2 ದನ್ನು ಕಂಡೆನು. ಇದಲ್ಲದೆ ಮತ್ತೊಬ್ಬ ದೇವದೂತನು ಜೀವಸ್ವರೂಪನಾದ ದೇವರ
ಮುದ್ರೆಯನ್ನು ಹಿಡುಕೊಂಡು ಮೂಡಣದಿಕ್ಕಿನಿಂದ ಏರಿಬರುವದನ್ನು ಕಂಡೆನು. ಅವನು
ಭೂಮಿಯನ್ನೂ ಸಮುದ್ರವನ್ನೂ ಕೆಡಿಸುವದಕ್ಕೆ ಅಧಿಕಾರಹೊಂದಿದ ಆ ನಾಲ್ಕು ಮಂದಿ
3 ದೇವದೂತರಿಗೆ—ನಾವು ನಮ್ಮ ದೇವರ ದಾಸರಿಗೆ ಹಣೆಯ ಮೇಲೆ ಮುದ್ರೆ ಒತ್ತುವ
ತನಕ[6] ಭೂಮಿಯನ್ನಾಗಲಿ ಸಮುದ್ರವನ್ನಾಗಲಿ ಮರಗಳನ್ನಾಗಲಿ ಕೆಡಿಸಬೇಡಿರಿ ಎಂದು

[1] ಲೂಕ ೧೮, ೭.
[2] ಯೋವೇಲ ೨, ೩೧; ೩, ೧೫; ಮತ್ತಾಯ ೨೪, ೨೯.
[3] ಯೆಶಾಯ ೩೪, ೪.
[4] ಯೆಶಾಯ ೨, ೧೯; ಹೋಶೇಯ ೧೦, ೮; ಲೂಕ ೨೩, ೩೦.
[5] ಯೋವೇಲ ೨, ೧೧. ೩೧; ಮಲಕೀಯ ೩, ೨.
[6] ಯೆಜೇಕಿಯೇಲ ೯, ೪.

ಮಹಾ ಶಬ್ದದಿಂದ ಕೂಗಿ ಹೇಳಿದನು. ಮುದ್ರೆ ಒತ್ತಿಸಿಕೊಂಡವರ ಸಂಖ್ಯೆಯು ಪ್ರಸಿದ್ಧ 4
ವಾದಾಗ ನಾನು ಕೇಳಿದೆನು. ಇಸ್ರಯೇಲ್ಯರ ಪ್ರತಿಯೊಂದು ಕುಲಕ್ಕೆ ಸೇರಿದವರು
ಒತ್ತಿಸಿಕೊಂಡರು. ಅವರ ಸಂಖ್ಯೆ ಒಂದು ಲಕ್ಷ ನಾಲ್ವತ್ತುನಾಲ್ಕು ಸಾವಿರ ಮಂದಿ.

ಯೂದನ ಕುಲದವರಲ್ಲಿ ಮುದ್ರೆ ಹಾಕಿಸಿಕೊಂಡವರು ಹನ್ನೆರಡು ಸಾವಿರ, 5
ರೂಬೇನನ ಕುಲದವರಲ್ಲಿ ಹನ್ನೆರಡು ಸಾವಿರ,
ಗಾಡನ ಕುಲದವರಲ್ಲಿ ಹನ್ನೆರಡು ಸಾವಿರ,
ಅಷೇರನ ಕುಲದವರಲ್ಲಿ ಹನ್ನೆರಡು ಸಾವಿರ, 6
ನೆಫ್ತಲೀಮನ ಕುಲದವರಲ್ಲಿ ಹನ್ನೆರಡು ಸಾವಿರ,
ಮನಾಸ್ಸೆಯ ಕುಲದವರಲ್ಲಿ ಹನ್ನೆರಡು ಸಾವಿರ,
ಸಿಮೆಯೋನನ ಕುಲದವರಲ್ಲಿ ಹನ್ನೆರಡು ಸಾವಿರ, 7
ಲೇವಿಯ ಕುಲದವರಲ್ಲಿ ಹನ್ನೆರಡು ಸಾವಿರ,
ಇಸ್ಸಕಾರನ ಕುಲದವರಲ್ಲಿ ಹನ್ನೆರಡು ಸಾವಿರ,
ಜೆಬುಲೋನನ ಕುಲದವರಲ್ಲಿ ಹನ್ನೆರಡು ಸಾವಿರ, 8
ಯೋಸೇಫನ ಕುಲದವರಲ್ಲಿ ಹನ್ನೆರಡು ಸಾವಿರ,
ಬೆನ್ಯಮೀನನ ಕುಲದವರಲ್ಲಿ ಮುದ್ರೆ ಹಾಕಿಸಿಕೊಂಡವರು ಹನ್ನೆರಡು
ಸಾವಿರ ಮಂದಿ ಇದ್ದರು.

ಇವುಗಳಾದ ಮೇಲೆ, ಇಗೋ, ಯಾರಿಂದಲೂ ಎಣಿಸಲಾಗದಂಥಾ ಮಹಾ ಸಮೂ 9
ಹವು[1] ಸಿಂಹಾಸನದ ಮುಂದೆಯೂ ಯಜ್ಞಪಶುವಾದಾತನ ಮುಂದೆಯೂ ನಿಂತಿರುವದನ್ನು
ಕಂಡೆನು. ಅವರು ಸಕಲ ಜನಾಂಗ ಕುಲ ಪ್ರಜೆಗಳವರೂ ಸಕಲ ಭಾಷೆಗಳನ್ನಾಡುವ
ವರೂ ಆಗಿದ್ದರು. ಅವರು ಬಿಳೀ ನಿಲುವಂಗಿಗಳನ್ನು ತೊಟ್ಟುಕೊಂಡು ತಮ್ಮ ಕೈಗಳಲ್ಲಿ
ಖರ್ಜೂರದ ಗರಿಗಳನ್ನು ಹಿಡುಕೊಂಡಿದ್ದರು. ಅವರು— 10

ಸಿಂಹಾಸನಾಸೀನನಾಗಿರುವ ನಮ್ಮ ದೇವರಿಗೂ ಯಜ್ಞಪಶುವಾದಾತನಿಗೂ
ನಮಗೆ ರಕ್ಷಣೆಯುಂಟಾದದ್ದಕ್ಕಾಗಿ ಸ್ತೋತ್ರ[2]

ಎಂದು ಮಹಾ ಶಬ್ದದಿಂದ ಕೂಗಿದರು. ಅಷ್ಟರಲ್ಲಿ ದೇವದೂತರೆಲ್ಲರೂ ಸಿಂಹಾಸನವು 11
ಹಿರಿಯರು ನಾಲ್ಕು ಜೀವಿಗಳು ಇವುಗಳ ಸುತ್ತಲು ನಿಂತುಕೊಂಡಿದ್ದರು. ಅವರು ಸಿಂಹಾ
ಸನದ ಮುಂದೆ ಅಡ್ಡಬಿದ್ದು—

ಆಮೆನ್[3]. 12
ಸ್ತೋತ್ರವೂ ಪ್ರಭಾವವೂ ಜ್ಞಾನವೂ ಕೃತಜ್ಞತಾಸ್ತುತಿಯೂ ಮಾನವೂ
ಬಲವೂ ಶಕ್ತಿಯೂ
ನಮ್ಮ ದೇವರಿಗೆ ಸದಾಕಾಲವಿರಲಿ, ಆಮೆನ್

ಎಂದು ಹೇಳುತ್ತಾ ದೇವರನ್ನು ಆರಾಧಿಸಿದರು. ಇದನ್ನು ನೋಡಿ ಹಿರಿಯರಲ್ಲಿ ಒಬ್ಬನು— 13
ಬಿಳೀ ನಿಲುವಂಗಿಗಳನ್ನು ತೊಟ್ಟುಕೊಂಡಿರುವವರಾದ ಇವರು ಯಾರು? ಎಲ್ಲಿಂದ ಬಂದರು

---

[1] ರೋಮಾ. ೧೧, ೨೫. [2] ಅಥವಾ, ಯಜ್ಞಪಶುವಾದಾತನಿಗೂ ಜಯವಾಗಲಿ; ಕೀರ್ತನೆ ೩, ೮.
[3] ಅಂದರೆ, ತಥಾಸ್ತು, ಹಾಗೆಯೇ ಆಗಲಿ.

14 ಎಂದು ನನ್ನನ್ನು ಕೇಳಲು—ಅಯ್ಯಾ, ನೀನೇ ಬಲ್ಲಿ ಅಂದೆನು. ಅವನು ನನಗೆ—ಇವರು ಆ ಮಹಾ ಹಿಂಸೆಯನ್ನು ಅನುಭವಿಸಿ ಬಂದವರು[1]; ಯಜ್ಞಪಶುವಾದಾತನ ರಕ್ತದಲ್ಲಿ
15 ತಮ್ಮ ನಿಲುವಂಗಿಗಳನ್ನು ತೊಳೆದು ಶುಭ್ರಮಾಡಿದ್ದಾರೆ[2]. ಈ ಕಾರಣದಿಂದ ಅವರು ದೇವರ ಸಿಂಹಾಸನದ ಮುಂದೆ ಇದ್ದುಕೊಂಡು ಆತನ ಆಲಯದಲ್ಲಿ ಹಗಲಿರುಳು ಆತನ ಸೇವೆಮಾಡುತ್ತಾ ಇದ್ದಾರೆ; ಸಿಂಹಾಸನದಲ್ಲಿ ಕೂತಿರುವಾತನು ಗುಡಾರದಂತೆ ಅವರನ್ನು
16 ಆವರಿಸುವನು. ಇನ್ನು ಮೇಲೆ ಅವರಿಗೆ ಹಸಿವೆ ಇಲ್ಲ, ಬಾಯಾರಿಕೆ ಇಲ್ಲ; ಅವರಿಗೆ
17 ಬಿಸಿಲಾದರೂ ಯಾವ ಸೆಕೆಯಾದರೂ ಬಡಿಯುವದಿಲ್ಲ; ಸಿಂಹಾಸನದ ಮಧ್ಯದಲ್ಲಿರುವ ಯಜ್ಞಪಶುವೆಂಬಾತನು ಅವರಿಗೆ ಕುರುಬನಂತಿದ್ದು ಜೀವಜಲದ ಒರತೆಗಳಿಗೆ ದಾರೀ ತೋರಿಸುತ್ತಾನೆ[3]. ದೇವರು ಅವರ ಕಣ್ಣೀರನ್ನೆಲ್ಲಾ ಒರಸುವನು[4] ಎಂದು ಹೇಳಿದನು.

ಏಳನೇ ಮುದ್ರೆಯನ್ನು ಒಡೆಯಲು ನಿಶ್ಶಬ್ದವಾದದ್ದು; ತುತೂರಿಗಳನ್ನು ಹಿಡುಕೊಂಡ ಏಳು ಮಂದಿ ದೇವದೂತರು ಮುಂದೆ ಬಂದದ್ದು. ದೇವಜನರ ಪ್ರಾರ್ಥನೆಗಳು ದೇವರ ಸನ್ನಿಧಿಗೆ ಏರಿಬಂದದ್ದು.

**8** ಆತನು ಏಳನೇ ಮುದ್ರೆಯನ್ನು ಒಡೆದಾಗ, ಸುಮಾರು ಅರ್ಧಗಂಟೇ ಹೊತ್ತಿನ ವರೆಗೂ
2 ಪರಲೋಕವು ನಿಶ್ಶಬ್ದವಾಯಿತು. ಆಗ ದೇವರ ಸನ್ನಿಧಿಯಲ್ಲಿ ನಿಂತಿರುವ ಏಳು ಮಂದಿ ದೇವದೂತರನ್ನು ಕಂಡೆನು[5]; ಅವರಿಗೆ ಏಳು ತುತೂರಿಗಳು ಕೊಡಲ್ಪಟ್ಟವು.
3 ಆ ಮೇಲೆ ಮತ್ತೊಬ್ಬ ದೇವದೂತನು ಬಂದು ಯಜ್ಞವೇದಿಯ ಬಳಿಯಲ್ಲಿ ನಿಂತನು; ಅವನ ಕೈಯಲ್ಲಿ ಚಿನ್ನದ ಧೂಪಾರತಿ ಇತ್ತು. ಸಿಂಹಾಸನದ ಮುಂದಣ ಚಿನ್ನದ ಧೂಪ ವೇದಿಯ ಮೇಲೆ ದೇವಜನರೆಲ್ಲರ ಪ್ರಾರ್ಥನೆಗಳ ಜೊತೆಯಲ್ಲಿ ಸಮರ್ಪಿಸುವದಕ್ಕಾಗಿ
4 ಅವನಿಗೆ ಬಹಳ ಧೂಪ ಕೊಡಲ್ಪಟ್ಟಿತು. ಆಗ ಧೂಪದ ಹೊಗೆಯು ದೇವದೂತನ ಕೈಯೊಳಗಿಂದ ಹೊರಟು ದೇವಜನರ ಪ್ರಾರ್ಥನೆಗಳೊಂದಿಗೆ ಕೂಡಿ ದೇವರ ಸನ್ನಿಧಿಗೆ
5 ಏರಿಹೋಯಿತು. ತರುವಾಯ ಆ ದೇವದೂತನು ಧೂಪಾರತಿಯನ್ನು ತೆಗೆದುಕೊಂಡು ಯಜ್ಞವೇದಿಯ ಮೇಲಿದ್ದ ಕೆಂಡಗಳಿಂದ ತುಂಬಿಸಿ ಭೂಮಿಗೆ ಬಿಸಾಡಿದನು. ಆಗ ಗುಡು ಗುಗಳೂ ವಾಣಿಗಳೂ ಮಿಂಚುಗಳೂ ಭೂಕಂಪವೂ ಉಂಟಾದವು.

## IV. ಏಳು ತುತೂರಿಗಳನ್ನು ಕುರಿತದ್ದು.

ನಾಲ್ಕು ತುತೂರಿಗಳು ಊದಲಾಗಿ, ಆನೆಕಲ್ಲು, ರಕ್ತ, ಮಾಚಿಪತ್ರೆವಿಷ, ಕತ್ತಲು ಎಂಬ ಉಪದ್ರವಗಳು ಸಂಭವಿಸಿದ್ದು[6].

6 ಏಳು ತುತೂರಿಗಳನ್ನು ಹಿಡಿದಿದ್ದ ಏಳು ಮಂದಿ ದೇವದೂತರು ತುತೂರಿಗಳನ್ನೂದುವ ದಕ್ಕೆ ಸಿದ್ಧಮಾಡಿಕೊಂಡರು.
7 ಮೊದಲನೇ ದೇವದೂತನು ತುತೂರಿಯನ್ನೂದಿದಾಗ ರಕ್ತದಲ್ಲಿ ಕಲಸಿದ್ದ ಆನೆಕಲ್ಲಿನ ಮಳೆಯೂ ಬೆಂಕಿಯೂ ಭೂಮಿಗೆ ಸುರಿಸಲ್ಪಟ್ಟವು[7]; ಭೂಮಿಯೊಳಗೆ ಮೂರರಲ್ಲಿ

---

1) ಮತ್ತಾಯ ೨೪, ೨೧.
2) ೧ ಯೋಹಾನ ೧, ೭; ಅಪೊಸ್ತಲರ ಕೃತ್ಯ ೧೫, ೯.
3) ಯೆಶಾಯ ೪೯, ೧೦; ೪೦, ೧೧.
4) ಯೆಶಾಯ ೨೫, ೮.
5) ಲೂಕ ೧, ೧೯.
6) ಹೊರಡೋಣ ೯, ೧೪.
7) ಹೊರಡೋಣ ೯, ೨೪.

ಒಂದು ಭಾಗ[1] ಸುಟ್ಟುಹೋಯಿತು; ಮರಗಳೊಳಗೆ ಮೂರರಲ್ಲಿ ಒಂದು ಭಾಗ ಸುಟ್ಟು ಹೋಯಿತು; ಹಸುರು ಹುಲ್ಲೆಲ್ಲಾ ಸುಟ್ಟುಹೋಯಿತು.

8 ಎರಡನೇ ದೇವದೂತನು ತುತೂರಿಯನ್ನೂದಿದಾಗ ಬೆಂಕಿಹತ್ತಿ ಉರಿಯುವ ದೊಡ್ಡ ಬೆಟ್ಟವೋ ಎಂಬಂತಿರುವ ಒಂದು ವಸ್ತು ಸಮುದ್ರದಲ್ಲಿ ಹಾಕಲ್ಪಟ್ಟಿತು. ಆಗ ಸಮುದ್ರ 9 ದೊಳಗೆ ಮೂರರಲ್ಲಿ ಒಂದು ಭಾಗ ರಕ್ತವಾಯಿತು; ಸಮುದ್ರಜೀವಿಗಳೊಳಗೆ ಮೂರ ರಲ್ಲಿ ಒಂದು ಭಾಗ ಸತ್ತುಹೋಯಿತು[2]; ಹಡಗುಗಳೊಳಗೆ ಮೂರರಲ್ಲಿ ಒಂದು ಭಾಗ ನಾಶವಾಯಿತು.

10 ಮೂರನೇ ದೇವದೂತನು ತುತೂರಿಯನ್ನೂದಿದಾಗ ಪಂಜಿನಂತೆ ಉರಿಯುವ ಒಂದು ದೊಡ್ಡ ನಕ್ಷತ್ರವು ಆಕಾಶದಿಂದ ಬಿತ್ತು. ಅದು ನದಿಗಳೊಳಗೆ ಮೂರರಲ್ಲಿ ಒಂದು ಭಾಗದ ಮೇಲೆಯೂ ನೀರಿನ ಒರತೆಗಳ ಮೇಲೆಯೂ ಬಿತ್ತು. 11 ಆ ನಕ್ಷತ್ರಕ್ಕೆ ಮಾಚಿ ಪತ್ರೆ ಎಂದು ಹೆಸರು. ನೀರಿನೊಳಗೆ ಮೂರರಲ್ಲಿ ಒಂದು ಭಾಗ ಮಾಚಿಪತ್ರೆಯಂತೆ ಕಹಿಯಾಯಿತು[3]. ಆ ನೀರು ವಿಷವಾದದ್ದರಿಂದ ಮನುಷ್ಯರಲ್ಲಿ ಅನೇಕರು ಸತ್ತರು.

12 ನಾಲ್ಕನೇ ದೇವದೂತನು ತುತೂರಿಯನ್ನೂದಿದಾಗ ಸೂರ್ಯ ಚಂದ್ರ ನಕ್ಷತ್ರಗಳೊ ಳಗೆ ಮೂರರಲ್ಲಿ ಒಂದು ಭಾಗವು ಬಡಿಯಲ್ಪಟ್ಟು ಕತ್ತಲಾಯಿತು[4]. ಆದದರಿಂದ ಹಗ ಲಿನೊಳಗೆ ಮೂರರಲ್ಲಿ ಒಂದು ಭಾಗವು ಪ್ರಕಾಶವಿಲ್ಲದೆ ಇತ್ತು. ರಾತ್ರಿಯು ಹಾಗೆಯೇ ಆಯಿತು.

### ಐದನೇ ತುತೂರಿ ಊದಿದ್ದು.

#### ಮೊದಲನೇ ವಿಪತ್ತು; ಮಿಡಿತೆಗಳು ಅಧೋಲೋಕದಿಂದ ಭೂಮಿಯ ಮೇಲೆ ಬಂದದ್ದು.

13 ಆ ಮೇಲೆ ನಾನು ನೋಡಲಾಗಿ, ಇಗೋ, ಒಂದೇ ಗರುಡಪಕ್ಷಿಯು ಆಕಾಶಮಧ್ಯ ದಲ್ಲಿ ಹಾರ್ಯಾಡುತ್ತಿತ್ತು. ಅದು—ಅಯ್ಯೋ, ಅಯ್ಯೋ, ಅಯ್ಯೋ, ಊದಬೇಕಾಗಿರುವ ಮೂವರು ದೇವದೂತರ ಮಿಕ್ಕಾದ ತುತೂರಿಯ ಧ್ವನಿಗಳು ಉಂಟಾಗುವಾಗ ಭೂನಿವಾ ಸಿಗಳಿಗೆ ಎಂಥಾ ವಿಪತ್ತುಗಳು ಸಂಭವಿಸುವವು ಎಂದು ಮಹಾ ಶಬ್ದದಿಂದ ಹೇಳುವ ದನ್ನು ಕೇಳಿದೆನು.

**9** ಐದನೇ ದೇವದೂತನು ತುತೂರಿಯನ್ನೂದಿದಾಗ ಆಕಾಶದಿಂದ ಭೂಮಿಗೆ ಬಿದ್ದ ಒಂದು ನಕ್ಷತ್ರವನ್ನು[5] ಕಂಡೆನು. ಅವನಿಗೆ ಅಧೋಲೋಕಕ್ಕೆ ಹೋಗುವ ಕೂಪದ ಬೀಗದಕೈ ಕೊಡಲ್ಪಟ್ಟಿತು. 2 ಅವನು ಅಧೋಲೋಕದ ಕೂಪವನ್ನು ತೆರೆಯಲು, ಕೂಪ ದಿಂದ ಬಂದ ಹೊಗೆ ದೊಡ್ಡ ಕುಲುಮೆಯ ಹೊಗೆಯಂತೆ ಏರಿತು; ಕೂಪದ ಹೊಗೆಯಿಂದ ಸೂರ್ಯನೂ ಆಕಾಶವೂ ಕತ್ತಲಾದವು. 3 ಹೊಗೆಯೊಳಗಿಂದ ಮಿಡಿತೆಗಳು ಭೂಮಿಯ

---

[1] ಜೆಕರೀಯ ೧೩, ೮. ೯; ಯೆಜೇಕಿಯೇಲ ೫, ೨.
[2] ಹೊರಡೋಣ ೭, ೨೦. ೨೧; ಪ್ರಕಟನೆ ೧೬, ೩.
[3] ಯೆರೆಮೀಯ ೨೩, ೧೫.
[4] ಹೊರಡೋಣ ೧೦, ೨೧—೨೩; ಪ್ರಕಟನೆ ೧೬, ೧೦.
[5] ಅಥವಾ, ನಕ್ಷತ್ರಪ್ರಾಯನೊಬ್ಬನನ್ನು; ಯೆಶಾಯ ೧೪, ೧೨; ಲೂಕ ೧೦, ೧೮.

ಮೇಲೆ ಹೊರಟುಬಂದವು[1]. ಭೂಮಿಯಲ್ಲಿರುವ ಚೇಳುಗಳಿಗೆ ಸಾಮರ್ಥ್ಯವಿರುವ
4 ಪ್ರಕಾರ ಅವುಗಳಿಗೆ ಸಾಮರ್ಥ್ಯ ಕೊಡಲ್ಪಟ್ಟಿತು. ಭೂಮಿಯ ಮೇಲಿರುವ ಹುಲ್ಲನ್ನಾ
ಗಲಿ ಯಾವ ಪಲ್ಯವನ್ನಾಗಲಿ ಮರವನ್ನಾಗಲಿ ಕೆಡಿಸದೆ, ಹಣೆಯ ಮೇಲೆ ದೇವರ ಮುದ್ರೆ
ಯಿಲ್ಲದವರಾದ ಮನುಷ್ಯರನ್ನು ಮಾತ್ರ ಕೆಡಿಸಬಹುದೆಂದು ಅವುಗಳಿಗೆ ಅಪ್ಪಣೆಯಾ
5 ಯಿತು. ಇವರನ್ನು ಕೊಲ್ಲದೆ ಐದು ತಿಂಗಳುಗಳ ವರೆಗೂ ಪೀಡಿಸುವದಕ್ಕೆ ಅಪ್ಪಣೆಯಾ
ಯಿತು. ಅವರಿಗುಂಟಾದ ಪೀಡೆಯು ಚೇಳು ಮನುಷ್ಯನನ್ನು ಹೊಡೆಯುವದರಿಂದುಂಟಾ
6 ಗುವ ಪೀಡೆಗೆ ಸಮಾನವಾಗಿತ್ತು. ಅಂಥಾ ಕಾಲದಲ್ಲಿ ಮನುಷ್ಯರು ಮರಣವನ್ನು
ಬಯಸುವರು, ಆದರೆ ಅದು ಪ್ರಾಪ್ತವಾಗುವದಿಲ್ಲ; ಸಾಯಬೇಕೆಂದು ಕೋರುವರು,
7 ಆದರೆ ಮೃತ್ಯುವು ಅವರ ಬಳಿಯಿಂದ ಓಡಿಹೋಗುವದು[2]. ಆ ಮಿಡಿತೆಗಳ ರೂಪವು
ಯುದ್ಧಕ್ಕೆ ಸನ್ನದ್ಧವಾಗಿರುವ ಕುದುರೆಗಳ ರೂಪದಂತೆ ಇತ್ತು[3]; ಅವುಗಳ ತಲೆಯ
ಮೇಲೆ ಚಿನ್ನದ ಕಿರೀಟಗಳಂತೆ ಏನೋ ಇದ್ದವು; ಅವುಗಳ ಮುಖಗಳು ಮನುಷ್ಯರ
8 ಮುಖಗಳ ಹಾಗೆ ಇದ್ದವು. ಸ್ತ್ರೀಯರ ಕೂವಲಿನಂತಿರುವ ಕೂದಲು ಅವುಗಳಿಗೆ
9 ಇತ್ತು; ಅವುಗಳ ಹಲ್ಲುಗಳು ಸಿಂಹದ ಹಲ್ಲುಗಳ ಹಾಗಿದ್ದವು[4]. ಅವುಗಳಿಗೆ ಉಕ್ಕಿನ
ಕವಚಗಳಂತಿದ್ದ ಕವಚಗಳು ಇದ್ದವು; ಅವುಗಳ ರೆಕ್ಕೆಗಳ ಶಬ್ದವು ಯುದ್ಧಕ್ಕೆ ಓಡುವ
10 ರಥಾಶ್ವಗಳ ಶಬ್ದದ ಹಾಗೆ ಇತ್ತು[5]. ಚೇಳಿಗಿರುವಂತೆ ಅವುಗಳಿಗೆ ಬಾಲಗಳೂ ಕೊಂಡಿ
ಗಳೂ ಉಂಟು; ಮನುಷ್ಯರನ್ನು ಐದು ತಿಂಗಳುಗಳ ವರೆಗೂ ಪೀಡಿಸುವ ಸಾಮರ್ಥ್ಯವು
11 ಅವುಗಳ ಬಾಲಗಳಲ್ಲಿಯೇ ಇರುವದು. ಅಧೋಲೋಕದ ಅಧಿಕಾರಿಯಾದ ದೂತನು
ಅವುಗಳನ್ನಾಳುವ ಅರಸನು; ಅವನಿಗೆ ಇಬ್ರಿಯ ಭಾಷೆಯಲ್ಲಿ ಅಬದ್ದೋನನೆಂತಲೂ ಗ್ರೀಕ
ಭಾಷೆಯಲ್ಲಿ ಅಪೊಲ್ಲುವೋನನೆಂತಲೂ[6] ಹೆಸರುಂಟು.

12 ಮೊದಲನೇ ವಿಪತ್ತು ಕಳೆದುಹೋಯಿತು; ಇಗೋ, ಇನ್ನೂ ಎರಡು ವಿಪತ್ತುಗಳು
ಬರಬೇಕು.

ಆರನೇ ತುತೂರಿ ಊದಿದ್ದು.

ಎರಡನೇ ವಿಪತ್ತು; ಭಯಂಕರವಾದ ರಾಹುತರು ಫ್ರಾತು ನದಿಯ ಕಡೆಯಿಂದ ಬಂದದ್ದು.

13 ಆರನೇ ದೇವದೂತನು ತುತೂರಿಯನ್ನೂದಿದಾಗ ದೇವರ ಸಮ್ಮುಖದಲ್ಲಿರುವ ಚಿನ್ನದ
14 ವೇದಿಯ ಕೊಂಬುಗಳಿಂದ ಹೊರಟ ಒಂದೇ ಧ್ವನಿಯನ್ನು ಕೇಳಿದೆನು. ಅದು ತುತೂರಿ
ಯನ್ನು ಹಿಡಿದಿದ್ದ ಆರನೇ ದೇವದೂತನಿಗೆ—ನೀನು ಫ್ರಾತು ಎಂಬ ಮಹಾ ನದಿಯ ಬಳಿ
15 ಯಲ್ಲಿ ಕಟ್ಟಿರುವ ನಾಲ್ಕು ಮಂದಿ ದೇವದೂತರನ್ನು ಬಿಚ್ಚಿಬಿಡು ಎಂದು ಹೇಳಿತು. ಆಗ
ಮನುಷ್ಯರೊಳಗೆ ಮೂರರಲ್ಲಿ ಒಂದು ಭಾಗದ ಜನರನ್ನು ಸಂಹಾರ ಮಾಡುವದಕ್ಕಾಗಿ
ಅದೇ ವರುಷ ಅದೇ ತಿಂಗಳು ದಿನ ತಾಸಿಗೆ ಸಿದ್ಧವಾಗಿದ್ದ ಆ ನಾಲ್ಕು ಮಂದಿ ದೇವ
16 ದೂತರನ್ನು ಬಿಚ್ಚಿಬಿಟ್ಟರು; ಕುದುರೇ ದಂಡಿನವರ ಸಂಖ್ಯೆಯು ಇಪ್ಪತ್ತುಕೋಟಿ[7] ಎಂದು

---

1) ಹೊರಡೋಣ ೧೦, ೪. ೫. ೧೨. ೧೫; ಯೋವೇಲ ೨, ೨.
2) ಪ್ರಕಟನೆ ೬, ೧೬.
3) ಯೋವೇಲ ೨, ೪—೬.
4) ಯೋವೇಲ ೧, ೬.
5) ಯೋವೇಲ ೨, ೫.
6) ಅಂದರೆ, ನಾಶ ಮಾಡುವವನು, ಸಂಹಾರಕನು.
7) ಕೀರ್ತನೆ ೬೮, ೧೭.

ನನಗೆ ಕೇಳಿಸಿತು. ನಾನು ದರ್ಶನದಲ್ಲಿ ಕಂಡ ಕುದುರೆಗಳ ಮತ್ತು ಸವಾರರ ವಿವರಣೆ 17
ಹ್ಯಾಗಂದರೆ—ಸವಾರರ ಕವಚಗಳ ಬಣ್ಣವು ಬೆಂಕಿ ಹೊಗೆ ಗಂಧಕ ಇವುಗಳ ಬಣ್ಣದ
ಹಾಗಿತ್ತು. ಕುದುರೆಗಳ ತಲೆಗಳು ಸಿಂಹಗಳ ತಲೆಗಳಂತಿದ್ದವು[1]; ಅವುಗಳ ಬಾಯಿಂದ
ಬೆಂಕಿ ಹೊಗೆ ಗಂಧಕ ಇವುಗಳು ಹೊರಡುತ್ತಿದ್ದವು. ಅವುಗಳ ಬಾಯಿಂದ ಹೊರಟ 18
ಆ ಬೆಂಕಿ ಹೊಗೆ ಗಂಧಕ ಎಂಬ ಮೂರು ಉಪದ್ರವಗಳಿಂದ ಮನುಷ್ಯರಲ್ಲಿ ಮೂರನೇ
ಭಾಗವು[2] ಹತವಾಯಿತು. ಆ ಕುದುರೆಗಳ ಸಾಮರ್ಥ್ಯವು ಅವುಗಳ ಬಾಯಿಯಲ್ಲಿಯೂ 19
ಬಾಲಗಳಲ್ಲಿಯೂ ಇತ್ತು. ಅವುಗಳ ಬಾಲಗಳು ತಲೆಗಳುಳ್ಳವುಗಳಾಗಿ ಸರ್ಪಗಳ ಹಾಗೆ
ಇದ್ದವು. ಅವುಗಳಿಂದ ಕೇಡನ್ನುಂಟುಮಾಡುತ್ತವೆ. ಉಪದ್ರವಗಳಿಂದ ಸಾಯದೆ ಉಳಿದ 20
ಜನರು ತಾವೇ ಮಾಡಿಕೊಂಡ ವಿಗ್ರಹಗಳನ್ನು ಬಿಟ್ಟು ದೇವರ ಕಡೆಗೆ ತಿರುಗಲಿಲ್ಲ;
ಅವರು ದೆವ್ವಗಳ ಪೂಜೆಯನ್ನೂ ಚಿನ್ನ ಬೆಳ್ಳಿ ಹಿತ್ತಾಳಿ ಕಲ್ಲು ಮರ ಇವೇ ಮುಂತಾದವು
ಗಳಿಂದ ಮಾಡಲ್ಪಟ್ಟು ನೋಡಲಾರದೆ ಕೇಳಲಾರದೆ ನಡೆಯಲಾರದೆ ಇರುವ ವಿಗ್ರಹ
ಗಳ[3] ಪೂಜೆಯನ್ನೂ ಬಿಡಲಿಲ್ಲ. ಇದಲ್ಲದೆ ತಾವು ನಡಿಸುತ್ತಿದ್ದ ಕೊಲೆ ಮಾಟ ಜಾರತ್ವ 21
ಕಳ್ಳತನ ಇವುಗಳೊಳಗೆ ಒಂದನ್ನೂ ಬಿಟ್ಟು ಮಾನಸಾಂತರ ಮಾಡಿಕೊಳ್ಳಲಿಲ್ಲ.

ಬಲಿಷ್ಠನಾದ ದೇವದೂತನು ಕೈಯಲ್ಲಿ ಚಿಕ್ಕ ಸುರುಳಿಯನ್ನು ಹಿಡುಕೊಂಡು—ಇನ್ನೂ ಸಾವಕಾಶವಿಲ್ಲದೆ ದೇವರ ಗೂಢ ಸಂಕಲ್ಪವು ನೆರವೇರುವದೆಂದು ಪ್ರಕಟಿಸಿದ್ದು.

ತರುವಾಯ ಬಲಿಷ್ಠನಾದ ಮತ್ತೊಬ್ಬ ದೇವದೂತನು ಪರಲೋಕದಿಂದ ಇಳಿದು **10**
ಬರುವದನ್ನು ಕಂಡೆನು. ಅವನು ಮೇಘವನ್ನು ಧರಿಸಿಕೊಂಡಿದ್ದನು; ಅವನ ತಲೆಯ
ಮೇಲೆ ಕಾಮನಬಿಲ್ಲು ಇತ್ತು; ಅವನ ಮುಖವು ಸೂರ್ಯನೋಪಾದಿಯಲ್ಲಿತ್ತು; ಅವನ
ಪಾದಗಳು ಬೆಂಕಿಯ ಕಂಬಗಳಂತಿದ್ದವು; ಅವನ ಕೈಯಲ್ಲಿ ಬಿಚ್ಚಿದ್ದ ಒಂದು ಚಿಕ್ಕ 2
ಸುರುಳಿ ಇತ್ತು; ಅವನು ಬಲಗಾಲನ್ನು ಸಮುದ್ರದ ಮೇಲೆಯೂ ಎಡಗಾಲನ್ನು ಭೂಮಿಯ
ಮೇಲೆಯೂ ಇಟ್ಟು, ಸಿಂಹವು ಗರ್ಜಿಸುವ ಪ್ರಕಾರ ಮಹಾ ಶಬ್ದದಿಂದ ಕೂಗಿದನು. 3
ಕೂಗಿದಾಗ, ಏಳು ಗುಡುಗುಗಳು ಒಂದೊಂದಾಗಿ ಧ್ವನಿಕೊಟ್ಟವು. ಆ ಏಳು ಗುಡು 4
ಗುಗಳು ನುಡಿದಾಗ ನಾನು ಬರೆಯಬೇಕೆಂದಿದ್ದೆನು. ಆದರೆ—ಆ ಏಳು ಗುಡುಗುಗಳು
ನುಡಿದದ್ದನ್ನು ನೀನು ಬರೆಯದೆ ಗುಪ್ತವಾಗಿಡು[4] ಎಂದು ಹೇಳುವ ಆಕಾಶವಾಣಿಯನ್ನು
ಕೇಳಿದೆನು. ಅನಂತರ ಸಮುದ್ರದ ಮೇಲೆಯೂ ಭೂಮಿಯ ಮೇಲೆಯೂ ನಿಂತಿರುವವ 5
ನಾಗಿ ನನಗೆ ಕಾಣಿಸಿದ ದೇವದೂತನು ತನ್ನ ಬಲಗೈಯನ್ನು ಪರಲೋಕದ ಕಡೆಗೆ ಎತ್ತಿ
ಪರಲೋಕವನ್ನೂ ಅದರಲ್ಲಿರುವ ಸಮಸ್ತವನ್ನೂ ಭೂಮಿಯನ್ನೂ ಅದರಲ್ಲಿರುವ ಸಮ 6
ಸ್ತವನ್ನೂ ಸಮುದ್ರವನ್ನೂ ಅದರಲ್ಲಿರುವ ಸಮಸ್ತವನ್ನೂ ಸೃಷ್ಟಿಸಿ ಸದಾಕಾಲವೂ ಜೀವಿ
ಸುವಾತನ ಮೇಲೆ ಆಣೆಯಿಟ್ಟು[5]—ಇನ್ನು ಸಾವಕಾಶವಿರುವದಿಲ್ಲ; ಏಳನೇ ದೇವದೂತನು 7
ಶಬ್ದಮಾಡುವ ದಿನಗಳಲ್ಲಿ ಅಂದರೆ ಅವನು ತುತೂರಿಯನ್ನು ಊದುವದಕ್ಕಿರುವ ಸಮ

[1] ೧ ದಿನಚರ್ಯ ೧೨, ೮; ಯೆಶಾಯ ೫, ೨೮. ೨೯. [2] ಪ್ರಕಟನೆ ೮, ೭. [3] ದಾನಿಯೇಲ ೫, ೪. ೨೩.
[4] ಮೂಲ: ಅವುಗಳಿಗೆ ಮುದ್ರೆಹಾಕು; ದಾನಿಯೇಲ ೮, ೨೬; ೧೨, ೪. ೯. [5] ದಾನಿಯೇಲ ೧೨, ೭.

ಯದಲ್ಲಿ ದೇವರು ಇದು ವರೆಗೂ ಗುಪ್ತವಾಗಿದ್ದ ಕಾರ್ಯಗಳನ್ನು ತಾನು ತನ್ನ ದಾಸ ರಾದ ಪ್ರವಾದಿಗಳಿಗೆ ಶುಭವರ್ತಮಾನವಾಗಿ ತಿಳಿಸಿದ್ದ ಪ್ರಕಾರ ನೆರವೇರಿಸುವನು ಎಂದು
8 ಹೇಳಿದನು. ಅನಂತರ ಪರಲೋಕದಿಂದ ನನಗೆ ಕೇಳಿಸಿದ್ದ ಶಬ್ದವು ತಿರಿಗಿ ನನ್ನೊಂದಿಗೆ ಮಾತಾಡಿ—ನೀನು ಹೋಗಿ ಸಮುದ್ರದ ಮೇಲೆಯೂ ಭೂಮಿಯ ಮೇಲೆಯೂ ನಿಂತು ಕೊಂಡಿರುವ ದೂತನ ಕೈಯಲ್ಲಿರುವ ಆ ಬಿಚ್ಚಿದ ಸುರುಳಿಯನ್ನು ತೆಗೆದುಕೋ ಎಂದು
9 ಹೇಳಿತು. ನಾನು ಆ ದೂತನ ಬಳಿಗೆ ಹೋಗಿ—ಆ ಚಿಕ್ಕ ಸುರುಳಿಯನ್ನು ನನಗೆ ಕೊಡು ಎಂದು ಕೇಳಲು, ಅವನು ನನಗೆ—ನೀನು ಇದನ್ನು ತಕ್ಕೊಂಡು ತಿಂದುಬಿಡು[1], ಇದು ನಿನ್ನ ಹೊಟ್ಟೆಯನ್ನು ಕಹಿಯಾಗುವಂತೆ ಮಾಡುವದು, ಆದರೆ ನಿನ್ನ ಬಾಯಿಯಲ್ಲಿ
10 ಜೇನಿನಂತೆ ಸೀಯಾಗಿರುವದು ಎಂದು ಹೇಳಿದನು. ಆಗ ನಾನು ಆ ಚಿಕ್ಕ ಸುರುಳಿ ಯನ್ನು ಆ ದೂತನ ಕೈಯಿಂದ ತಕ್ಕೊಂಡು ತಿಂದುಬಿಟ್ಟೆನು. ಅದು ನನ್ನ ಬಾಯಿಯಲ್ಲಿ ಜೇನಿನಂತೆ ಸೀಯಾಗಿತ್ತು; ಅದನ್ನು ತಿಂದ ಮೇಲೆ ನನ್ನ ಹೊಟ್ಟೆಯು ಕಹಿಯಾಯಿತು.
11 ಆ ಮೇಲೆ—ಇನ್ನೂ ನೀನು ಅನೇಕವಾಗಿರುವ ಪ್ರಜೆ ಜನ ಭಾಷೆ ರಾಜ ಇವರ ವಿಷಯ ದಲ್ಲಿ ಪ್ರವಾದನೆ ಹೇಳಬೇಕೆಂದು ನನಗೆ ತಿಳಿಸಲ್ಪಟ್ಟಿತು.

ದೇವರ ಆಲಯವನ್ನು ಅಳೆದದ್ದನ್ನೂ ದೇವರ ಇಬ್ಬರು ಸಾಕ್ಷಿಗಳನ್ನೂ ಕುರಿತದ್ದು.

**11** ತರುವಾಯ ದಂಡದಂತಿದ್ದ ಒಂದು ಅಳತೇಕೋಲು ನನ್ನ ಕೈಗೆ ಕೊಡಲ್ಪಟ್ಟಿತು. ಮತ್ತು ಒಂದು ವಾಣಿ ಉಂಟಾಯಿತು; ಅದು ನನಗೆ ಹೇಳಿದ್ದೇನಂದರೆ—ನೀನೆದ್ದು ದೇವರ ಆಲಯವನ್ನೂ ಯಜ್ಞವೇದಿಯನ್ನೂ ಅಳತೆಮಾಡಿ ಆಲಯದಲ್ಲಿ ಆರಾಧನೆಮಾಡುವವ
2 ರನ್ನು ಲೆಕ್ಕಿಸು[2]. ಆಲಯಕ್ಕೆ ಹೊರಗಿರುವ ಅಂಗಳವನ್ನು ಅಳೆಯದೆ ಬಿಟ್ಟುಬಿಡು; ಅದು ಅನ್ಯಜನರಿಗಾಗಿ ಬಿಟ್ಟದೆ; ಅವರು ಪರಿಶುದ್ಧಪಟ್ಟಣವನ್ನು ನಾಲ್ವತ್ತೆರಡು ತಿಂಗಳು
3 ತುಳಿದಾಡುವರು. ಇದಲ್ಲದೆ ನನ್ನ ಇಬ್ಬರು ಸಾಕ್ಷಿಗಳು[3] ಗೋಣೀತಟ್ಟುಗಳನ್ನು ಹೊದ್ದುಕೊಂಡು ಸಾವಿರದ ಇನ್ನೂರ ಅರವತ್ತು ದಿನಗಳ ತನಕ ಪ್ರವಾದಿಸುವ ಹಾಗೆ
4 ಮಾಡುವೆನು. ಭೂಲೋಕದ ಒಡೆಯನ ಮುಂದೆ ನಿಂತಿರುವ ಎರಡು ಎಣ್ಣೆಮರಗಳೂ
5 ಎರಡು ದೀಪಸ್ತಂಭಗಳೂ ಇವರೇ[4]. ಇವರಿಗೆ ಯಾವನಾದರೂ ಕೇಡನ್ನುಂಟುಮಾಡ ಬೇಕೆಂದಿದ್ದರೆ, ಇವರ ಬಾಯೊಳಗಿಂದ ಬೆಂಕಿ ಹೊರಟು[5] ಇವರ ಶತ್ರುಗಳನ್ನು ದಹಿಸಿ ಬಿಡುವದು; ಇವರಿಗೆ ಯಾವನಾದರೂ ಕೇಡನ್ನು ಉಂಟುಮಾಡಬೇಕೆಂದಿದ್ದರೆ, ಅವನಿಗೆ
6 ಆ ರೀತಿಯಾಗಿ ಕೊಲೆಯಾಗಬೇಕು. ತಾವು ಪ್ರವಾದಿಸುವ ದಿನಗಳಲ್ಲಿ ಮಳೆಬೀಳದಂತೆ ಆಕಾಶವನ್ನು ಮುಚ್ಚುವ ಅಧಿಕಾರ ಇವರಿಗೆ ಉಂಟು. ಇದಲ್ಲದೆ ಇವರಿಗೆ ಇಷ್ಟ ಬಂದಾ ಗೆಲ್ಲಾ ನೀರು ರಕ್ತವಾಗುವಂತೆ ಮಾಡುವದಕ್ಕೂ ಸಕಲ ವಿಧವಾದ ಉಪದ್ರವಗಳಿಂದ
7 ಭೂಮಿಯನ್ನು ಪೀಡಿಸುವದಕ್ಕೂ ಅಧಿಕಾರವುಂಟು. ಇವರು ತಮ್ಮ ಸಾಕ್ಷಿಯನ್ನು

1) ಯೆಜೇಕಿಯೇಲ ೨, ೪—೩, ೩. 2) ಜೆಕರೀಯ ೨, ೧—೩; ಯೆಜೇಕಿಯೇಲ ೪೦, ೩. ೫.
3) ಮಲಕೀಯ ೪, ೩. 4) ಜಕರೀಯ ೪, ೩. ೧೧. ೧೪. 5) ೨ ಅರಸು. ೧, ೧೦; ಯಾಕೋಬ ೫, ೧೪.

ಹೇಳಿ ಮುಗಿಸಿದನಂತರ, ಅಧೋಲೋಕದಿಂದ ಬರುವ ಮೃಗವು[1] ಇವರ ಮೇಲೆ ಯುದ್ಧಮಾಡಿ ಇವರನ್ನು ಜಯಿಸಿ ಕೊಲ್ಲುವದು[2]. 8 ಈ ಸಾಕ್ಷಿಗಳ ಶವಗಳು ಮಹಾ ಪಟ್ಟಣದ ಬೀದಿಯಲ್ಲಿ ಬಿದ್ದಿರುವವು. ಆ ಪಟ್ಟಣಕ್ಕೆ ಗೂಢಾರ್ಥವಾಗಿ ಸೊದೋಮ್ ಎಂತಲೂ[3] ಐಗುಪ್ತ ಎಂತಲೂ ಹೆಸರುಗಳುಂಟು; ಇವರ ಒಡೆಯನು ಸಹ ಅಲ್ಲಿಯೇ ಶಿಲುಬೆಗೆ ಹಾಕಲ್ಪಟ್ಟನು. 9 ಸಕಲ ಪ್ರಜೆ ಕುಲ ಭಾಷೆ ಜನಾಂಗಗಳಿಗೆ ಸೇರಿದವರು ಈ ಸಾಕ್ಷಿಗಳ ಶವಗಳನ್ನು ಮೂರುವರೆ ದಿನಗಳ ವರೆಗೂ ನೋಡುತ್ತಾ ಇರುವರು; ಅವುಗಳನ್ನು ಸಮಾಧಿಯಲ್ಲಿ ಇಡಗೊಡಿಸುವದಿಲ್ಲ. 10 ಈ ಇಬ್ಬರು ಪ್ರವಾದಿಗಳು ಭೂನಿವಾಸಿಗಳನ್ನು ಪೀಡಿಸಿದ್ದರಿಂದ[4], ಇವರು ಸತ್ತದ್ದಕ್ಕೆ ಭೂನಿವಾಸಿಗಳು ಸಂತೋಷಿಸಿ ಸಂಭ್ರಮಗೊಂಡು ಒಬ್ಬರಿಗೊಬ್ಬರು ಉಡುಗೆರೆಗಳನ್ನು ಕಳುಹಿಸುವರು. 11 ಮೂರುವರೆ ದಿನಗಳಾದ ಮೇಲೆ, ದೇವರಿಂದ ಜೀವಾತ್ಮ ಬಂದು ಆ ಶವಗಳಲ್ಲಿ ಹೊಗಲು, ಅವು ಎದ್ದು ನಿಂತವು[5]. ಅವರನ್ನು ನೋಡಿದವರಿಗೆ ಮಹಾ ಭಯವು ಹಿಡಿಯಿತು. 12 ಆ ಮೇಲೆ ಅವರಿಗೆ—ಇಲ್ಲಿ ಮೇಲಕ್ಕೆ ಬನ್ನಿರಿ ಎಂದು ಆಕಾಶದ ಮಹಾ ವಾಣಿಯು ಹೇಳಿತು. ಅದನ್ನು ಅವರು ಕೇಳಿ ಮೇಘವಿಮಾನದಲ್ಲಿ ಪರಲೋಕಕ್ಕೆ ಏರಿಹೋದರು[6]; ಅವರ ಶತ್ರುಗಳು ಅವರನ್ನು ನೋಡುತ್ತಾ ಇದ್ದರು. 13 ಅದೇ ಗಳಿಗೆಯಲ್ಲಿ ಮಹಾ ಭೂಕಂಪವುಂಟಾಗಿ ಆ ಪಟ್ಟಣದ ಹತ್ತರಲ್ಲೊಂದಂಶವು ಬಿದ್ದುಹೋಯಿತು; ಆ ಭೂಕಂಪದಿಂದ ಏಳುಸಾವಿರ ಮಂದಿ ಸತ್ತುಹೋದರು. ಉಳಿದವರು ಭಯಹಿಡಿದವರಾಗಿ ಪರಲೋಕದ ಒಡೆಯನಾದ ದೇವರನ್ನು ಘನಪಡಿಸಿದರು.

14 ಎರಡನೇ ವಿಪತ್ತು ಕಳೆದುಹೋಯಿತು; ಇಗೋ, ಮೂರನೇ ವಿಪತ್ತು ಬೇಗನೆ ಬರುತ್ತದೆ.

ಏಳನೇ ತುತೂರಿ ಊದಿದ್ದು; ದೇವರು ನ್ಯಾಯತೀರ್ಪನ್ನು ಮಾಡುವ ಕಾಲ ಹತ್ತರ ಬಂದದ್ದಕ್ಕಾಗಿ ಪರಲೋಕದಲ್ಲಿ ಆತನಿಗೆ ಸ್ತೋತ್ರ ಉಂಟಾದದ್ದು.

15 ಏಳನೇ ದೇವದೂತನು ತುತೂರಿಯನ್ನೂದಿದನು. ಆಗ ಪರಲೋಕದಲ್ಲಿ ಮಹಾ ಶಬ್ದಗಳುಂಟಾಗಿ—

ಲೋಕದ ರಾಜ್ಯಾಧಿಕಾರವು ನಮ್ಮ ಕರ್ತನಿಗೂ ಆತನು ಅಭಿಷೇಕಿಸಿದವನಿಗೂ ಉಂಟಾಯಿತು;
ಆತನು ಸದಾಕಾಲವೂ ರಾಜ್ಯವನ್ನಾಳುವನು

ಎಂದು ಹೇಳಿದವು. 16 ತರುವಾಯ ದೇವರ ಸಮುಕ್ಷಮದಲ್ಲಿ ತಮ್ಮ ತಮ್ಮ ಸಿಂಹಾಸನಗಳ ಮೇಲೆ ಕೂತಿರುವ ಇಪ್ಪತ್ತುನಾಲ್ಕು ಮಂದಿ ಹಿರಿಯರು ಆತನಿಗೆ ಅಡ್ಡಬಿದ್ದು—

17 ಕರ್ತನೇ, ಸರ್ವಶಕ್ತನಾದ ದೇವರೇ, ಸದಾ ಇರುವಾತನೇ[7],
ನೀನು ನಿನ್ನ ಮಹಾ ಅಧಿಕಾರವನ್ನು ವಹಿಸಿಕೊಂಡು ಆಳಿದ್ದರಿಂದ

---

1) ಪ್ರಕಟನೆ ೧೭, ೮. 2) ದಾನಿಯೇಲ ೭, ೨೧. 3) ಯೆಶಾಯ ೧, ೯. ೧೦.
4) ಪ್ರಕಟನೆ ೧೧, ೩. ೬. 5) ಯೆಜೇಕಿಯೇಲ ೩೭, ೧—೧೦. 6) ೨ ಅರಸು. ೨, ೧೧.
7) ಮೂಲ: ಇರುತ್ತಿರುವಾತನೇ, ಇದ್ದಾತನೇ.

ನಿನಗೆ ಕೃತಜ್ಞತಾಸ್ತುತಿಗಳನ್ನು ಸಲ್ಲಿಸುತ್ತೇವೆ.

18 ಜನಾಂಗಗಳು ಕೋಪಿಸಿಕೊಂಡವು, ನಿನ್ನ ಕೋಪವೂ ಪ್ರಕಟವಾಯಿತು.
ಸತ್ತವರು ತೀರ್ಪುಹೊಂದುವ ಸಮಯ ಬಂದದೆ;
ನೀನು ನಿನ್ನ ದಾಸರಾದ ಪ್ರವಾದಿಗಳಿಗೂ ದೇವಜನರಿಗೂ
ನಿನ್ನ ನಾಮಕ್ಕೆ ಭಯಪಡುವ ದೊಡ್ಡವರಿಗೂ ಚಿಕ್ಕವರಿಗೂ ಪ್ರತಿಫಲವನ್ನು ಕೊಟ್ಟು
ಲೋಕಕಂಟಕರನ್ನು ವಿನಾಶಮಾಡುವಿ

ಎಂದು ಆತನನ್ನು ಆರಾಧಿಸಿದರು.

19 ಆಗ ಪರಲೋಕದಲ್ಲಿರುವ ದೇವಾಲಯವು ತೆರೆಯಿತು; ಆತನ ಆಲಯದಲ್ಲಿ ಆತನ ಒಡಂಬಡಿಕೆಯ ಪೆಟ್ಟಿಗೆಯು ಕಾಣಿಸಿತು; ಇದಲ್ಲದೆ ಮಿಂಚುಗಳೂ ವಾಣಿಗಳೂ ಗುಡುಗುಗಳೂ ಭೂಕಂಪವೂ ದೊಡ್ಡ ಆನೆಕಲ್ಲಿನ ಮಳೆಯೂ ಉಂಟಾದವು.

### V. ಘಟಸರ್ಪವನ್ನೂ ಎರಡು ಮೃಗಗಳನ್ನೂ ಕುರಿತದ್ದು.

#### ಘಟಸರ್ಪವು ತೇಜೋಮಯವಾದ ಸ್ತ್ರೀಯ ಕೂಸನ್ನು ನುಂಗುವದಕ್ಕೆ ಪ್ರಯತ್ನಿಸಿದ್ದು.

**12** ಪರಲೋಕದಲ್ಲಿ ಒಂದು ಮಹಾ ಲಕ್ಷಣವು ಕಾಣಿಸಿತು. ಅದೇನಂದರೆ, ಸೂರ್ಯನನ್ನು ಧರಿಸಿಕೊಂಡಿದ್ದ ಒಬ್ಬ ಸ್ತ್ರೀಯಿದ್ದಳು; ಆಕೆಯ ಕಾಲುಗಳ ಕೆಳಗೆ ಚಂದ್ರನಿದ್ದನು. 2 ಆಕೆಯ ತಲೆಯ ಮೇಲೆ ಹನ್ನೆರಡು ನಕ್ಷತ್ರಗಳುಳ್ಳ ಒಂದು ಕಿರೀಟವಿತ್ತು; ಆಕೆಯು ಗರ್ಭಿಣಿಯಾಗಿದ್ದು ಪ್ರಸವವೇದನೆಯಿಂದ ಸಂಕಟಪಡುತ್ತಾ ಕೂಗುತ್ತಿದ್ದಳು[1]. 3 ಪರಲೋಕದಲ್ಲಿ ಮತ್ತೊಂದು ಲಕ್ಷಣವು ಕಾಣಿಸಿತು. ಅದೇನಂದರೆ, ಕೆಂಪಾದ ಮಹಾ ಘಟಸರ್ಪವಿತ್ತು; ಅದಕ್ಕೆ ಏಳು ತಲೆಗಳೂ ಹತ್ತು ಕೊಂಬುಗಳೂ ಇದ್ದವು; ಅದರ ತಲೆಗಳ ಮೇಲೆ ಏಳು ಮಕುಟಗಳಿದ್ದವು. 4 ಅದರ ಬಾಲವು ಆಕಾಶದಲ್ಲಿರುವ ನಕ್ಷತ್ರಗಳೊಳಗೆ ಮೂರರಲ್ಲೊಂದು ಭಾಗವನ್ನು ಎಳೆದು ಭೂಮಿಗೆ ಹಾಕಿತು[2]. ಹೆರುತ್ತಿದ್ದ ಆ ಸ್ತ್ರೀಯು ಹೆತ್ತ ಕೂಡಲೆ ಆಕೆಯ ಮಗುವನ್ನು ನುಂಗಿಬಿಡಬೇಕೆಂದು ಆ ಘಟಸರ್ಪವು ಅಲ್ಲೇ ಕಾದುಕೊಂಡಿತ್ತು. 5 ಆಕೆ ಜನಾಂಗಗಳನ್ನು ಕಬ್ಬಿಣದ ಕೋಲಿನಿಂದ ಆಳಬೇಕಾದ[3] ಒಂದು ಗಂಡುಮಗುವನ್ನು ಹೆತ್ತಳು; ಆ ಕೂಸು ಫಕ್ಕನೆ ದೇವರ ಬಳಿಗೂ ಆತನ ಸಿಂಹಾಸನದ ಬಳಿಗೂ ಎತ್ತಲ್ಪಟ್ಟಿತು. 6 ಆ ಸ್ತ್ರೀಯು ಅರಣ್ಯಕ್ಕೆ ಓಡಿಹೋದಳು; ಅಲ್ಲಿ ಆಕೆಗೆ ಸಾವಿರದ ಇನ್ನೂರ ಅರವತ್ತು ದಿನಗಳ ವರೆಗೆ ಪೋಷಣೆಯಾಗಬೇಕೆಂದು ದೇವರು ಸ್ಥಳವನ್ನು ಸಿದ್ಧಮಾಡಿದ್ದನು.

---

1) ಯೆಶಾಯ ೬೬, ೭. ೮; ಯೋಹಾನ ೧೬, ೨೧; ಮತ್ತಾಯ ೨೪, ೮.

2) ದಾನಿಯೇಲ ೮, ೧೦.

3) ಕೀರ್ತನೆ ೨, ೯.

### ಸೈತಾನನೆಂಬ ಘಟಸರ್ಪವು ಪರಲೋಕದಿಂದ ದೊಬ್ಬಲ್ಪಟ್ಟದ್ದು.

ಪರಲೋಕದಲ್ಲಿ ಯುದ್ಧ ನಡೆಯಿತು. ಮಿಕಯೇಲನೂ[1] ಅವನ ದೂತರೂ ಘಟ 7
ಸರ್ಪನ ಮೇಲೆ ಯುದ್ಧಮಾಡುವದಕ್ಕೆ ಹೊರಟರು. ಘಟಸರ್ಪನೂ ಅವನ ದೂತರೂ
ಯುದ್ಧಮಾಡಿ ಸೋತುಹೋದರು, ಮತ್ತು ಪರಲೋಕದೊಳಗೆ ಅವರಿಗೆ ಸ್ಥಾನವು ತಪ್ಪಿ 8
ಹೋಯಿತು. ಭೂಲೋಕದವರನ್ನೆಲ್ಲಾ ಸನ್ಮಾರ್ಗದಿಂದ ತಪ್ಪಿಸುವ ಆ ಮಹಾ ಘಟ 9
ಸರ್ಪನು ಅಂದರೆ ಪಿಶಾಚನೆಂತಲೂ ಸೈತಾನನೆಂತಲೂ ಹೆಸರುಳ್ಳ ಪುರಾತನಸರ್ಪವು
ದೊಬ್ಬಲ್ಪಟ್ಟು ಭೂಮಿಗೆ ಬಿದ್ದನು; ಅವನ ದೂತರೂ ಅವನೊಂದಿಗೆ ದೊಬ್ಬಲ್ಪಟ್ಟರು.
ಆಗ ಪರಲೋಕದಲ್ಲಿ ಮಹಾ ಶಬ್ದವನ್ನು ಕೇಳಿದೆನು, ಅದು— 10

ಈಗ ಜಯವೂ ಶಕ್ತಿಯೂ ರಾಜ್ಯವೂ ನಮ್ಮ ದೇವರಿಗೆ ಉಂಟಾಯಿತು;
ಈಗ ಅಧಿಕಾರವು ಆತನ ಅಭಿಷಿಕ್ತನಿಗೆ ದೊರೆಯಿತು;
ಹಗಲಿರುಳು ನಮ್ಮ ಸಹೋದರರ ಮೇಲೆ ನಮ್ಮ ದೇವರ ಮುಂದೆ
ದೂರು ಹೇಳಿದ ದೂರುಗಾರನು ದೊಬ್ಬಲ್ಪಟ್ಟಿದ್ದಾನೆ.
ಅವರು ಪ್ರಾಣದ ಮೇಲಣ ಪ್ರೀತಿಯನ್ನು ತೊರೆದು ಮರಣಕ್ಕೆ ಹಿಂತೆಗೆಯದೆ 11
ಯಜ್ಞಪಶುವಾದಾತನ ರಕ್ತದ ಬಲದಿಂದಲೂ ತಾವು ಸಾಕ್ಷಿಕೊಟ್ಟ ದೇವರ
ವಾಕ್ಯದ ಬಲದಿಂದಲೂ
ಅವನನ್ನು ಜಯಿಸಿದರು.
ಪರಲೋಕವೇ, ಅದರಲ್ಲಿ ವಾಸಮಾಡುವವರೇ, ಹರ್ಷಗೊಳ್ಳಿರಿ. 12
ಭೂಮಿಯೇ, ಸಮುದ್ರವೇ, ನಿಮ್ಮ ದುರ್ಗತಿಯನ್ನು ಏನು ಹೇಳಲಿ;
ಸೈತಾನನು ತನಗಿರುವ ಕಾಲವು ಸ್ವಲ್ಪವೆಂದು ತಿಳಿದು
ಮಹಾ ರೌದ್ರವುಳ್ಳವನಾಗಿ ನಿಮ್ಮ ಕಡೆಗೆ ಇಳಿದುಬಂದಿದ್ದಾನೆ

ಎಂಬದಾಗಿ ಹೇಳಿತು.

### ಘಟಸರ್ಪವು ಆ ತೇಜೋಮಯವಾದ ಸ್ತ್ರೀಯನ್ನು ಹಿಂಸಿಸಿದ್ದು.

ಘಟಸರ್ಪನು ತಾನು ದೊಬ್ಬಲ್ಪಟ್ಟು ಭೂಮಿಗೆ ಬಿದ್ದಿರುವದನ್ನು ಕಂಡು ಗಂಡುಮಗು 13
ವನ್ನು ಹೆತ್ತ ಸ್ತ್ರೀಯನ್ನು ಹಿಂಸಿಸುವದಕ್ಕೆ ಅಟ್ಟಿಕೊಂಡು ಹೋದನು. ಆ ಸ್ತ್ರೀಯು ಅರ 14
ಣ್ಯದಲ್ಲಿದ್ದ ತನ್ನ ಸ್ಥಳಕ್ಕೆ ಹಾರಿಹೋಗುವದಕ್ಕಾಗಿ ಆಕೆಗೆ ದೊಡ್ಡ ಗರುಡಪಕ್ಷಿಯ ಎರಡು
ರೆಕ್ಕೆಗಳು ಕೊಡಲ್ಪಟ್ಟವು. ಅಲ್ಲಿ ಮೂರುವರೆ ವರುಷಗಳ ಪರಿಯಂತರ[2] ಸರ್ಪನ
ಮುಖಕ್ಕೆ ಮರೆಯಾಗಿ ಪೋಷಣೆಹೊಂದುತ್ತಾಳೆ. ಆ ಸರ್ಪನು ಸ್ತ್ರೀಯನ್ನು ಬಡಿಸಿ 15
ಕೊಂಡು ಹೋಗಬೇಕೆಂದು ಆಕೆಯ ಹಿಂದೆ ತನ್ನ ಬಾಯೊಳಗಿಂದ ನೀರನ್ನು ನದಿಯಂತೆ
ಬಿಟ್ಟನು. ಆದರೆ ಭೂಮಿಯು ಆ ಸ್ತ್ರೀಯ ಸಹಾಯಕ್ಕೆ ಬಂದು ಬಾಯಿ ತೆರೆದು, ಘಟ 16

[1] ದಾನಿಯೇಲ ೧೦, ೧೩. ೨೧. [2] ಮೂಲ: ಒಂದು ಕಾಲ ಎರಡು ಕಾಲಗಳು ಅರ್ಧ ಕಾಲ. ಪ್ರಕಟನೆ ೧೧, ೨ ಮತ್ತು ೧೩, ೫ ನೋಡಿರಿ; ದಾನಿಯೇಲ ೭, ೨೫; ೧೨, ೭.

17 ಸರ್ಪನು ತನ್ನ ಬಾಯೊಳಗಿಂದ ಬಿಟ್ಟ ನದಿಯನ್ನು ಕುಡಿದುಬಿಟ್ಟಿತು. ಆಗ ಘಟಸರ್ಪನು ಸ್ತ್ರೀಯ ಮೇಲೆ ಕೋಪಿಸಿಕೊಂಡು ಆಕೆಯ ಸಂತಾನದವರಲ್ಲಿ ಉಳಿದವರ ಮೇಲೆ ಅಂದರೆ ದೇವರ ಆಜ್ಞೆಗಳನ್ನು ಕೈಕೊಂಡು ನಡೆದು ಯೇಸುವಿನ ವಿಷಯವಾದ ಸಾಕ್ಷಿಯನ್ನು **13** ಹೇಳಿರುವವರ ಮೇಲೆ ಯುದ್ಧಮಾಡುವದಕ್ಕೆ ಹೊರಟು, ಸಮುದ್ರತೀರದ ಮರಳಿನ ಮೇಲೆ ನಿಂತನು.

### ಸಮುದ್ರದೊಳಗಿಂದ ಬಂದ ಆಶ್ಚರ್ಯಕರವಾದ ಮೃಗವನ್ನು ಕುರಿತದ್ದು.

ಸಮುದ್ರದಿಂದ ಮೃಗವು ಏರಿಬರುವದನ್ನು ಕಂಡೆನು. ಅದಕ್ಕೆ ಏಳು ತಲೆಗಳೂ ಹತ್ತು ಕೊಂಬುಗಳೂ ಕೊಂಬುಗಳ ಮೇಲೆ ಹತ್ತು ಮಕುಟಗಳೂ ತಲೆಗಳ ಮೇಲೆ ದೇವದೂಷ 2 ಣನಾಮಗಳೂ ಇದ್ದವು[1]. ನಾನು ಕಂಡ ಮೃಗವು ಚಿರತೆಯಂತಿತ್ತು; ಅದರ ಕಾಲು ಗಳು ಕರಡಿಯ ಕಾಲುಗಳಂತೆಯೂ ಅದರ ಬಾಯಿ ಸಿಂಹದ ಬಾಯಿಯಂತೆಯೂ ಇದ್ದವು. ಅದಕ್ಕೆ ಘಟಸರ್ಪನು ಶಕ್ತಿಯನ್ನೂ ಸಿಂಹಾಸನವನ್ನೂ ಮಹಾ ಅಧಿಕಾರ 3 ವನ್ನೂ ಕೊಟ್ಟನು. ಅದರ ತಲೆಗಳಲ್ಲಿ ಒಂದು ತಲೆ ಗಾಯಹೊಂದಿ ಸಾಯುವ ಹಾಗಿ ರುವದನ್ನು ಕಂಡೆನು. ಆ ಮರಣಕರವಾದ ಗಾಯವು ವಾಸಿಯಾಯಿತು; ಭೂಲೋಕ 4 ದವರೆಲ್ಲರು ಆ ಮೃಗವನ್ನು ನೋಡುತ್ತಾ ಆಶ್ಚರ್ಯಪಟ್ಟರು; ಘಟಸರ್ಪನು ಆ ಮೃಗಕ್ಕೆ ಅಧಿಕಾರವನ್ನು ಕೊಟ್ಟವನಾದ್ದರಿಂದ ಅವರು ಆ ಘಟಸರ್ಪನಿಗೆ ನಮಸ್ಕಾರಮಾಡುವವ ರಾದರು. ಇದಲ್ಲದೆ ಆ ಮೃಗಕ್ಕೂ ನಮಸ್ಕಾರಮಾಡಿ—ಈ ಮೃಗಕ್ಕೆ ಸಮಾನರು 5 ಯಾರು? ಇದರ ಮೇಲೆ ಯುದ್ಧಮಾಡುವದಕ್ಕೆ ಯಾರು ಶಕ್ತರು? ಅಂದರು. ದೊಡ್ಡ ದೊಡ್ಡ ಮಾತುಗಳನ್ನೂ ದೂಷಣೆಯ ಮಾತುಗಳನ್ನೂ ಆಡುವ ಬಾಯಿ ಅದಕ್ಕೆ ಕೊಡ ಲ್ಪಟ್ಟಿತು. ಮತ್ತು ನಾಲ್ವತ್ತೆರಡು ತಿಂಗಳ ಪರ್ಯಂತರ ತನ್ನ ಕಾರ್ಯಗಳನ್ನು ನಡಸುವ 6 ಅಧಿಕಾರವೂ ಅದಕ್ಕೆ ಕೊಡಲ್ಪಟ್ಟಿತು. ಅದು ಬಾಯಿತೆರೆದು ದೇವರನ್ನು ದೂಷಿಸಿದ್ದ ಲ್ಲದೆ ಆತನ ನಾಮವನ್ನೂ ಆತನ ನಿವಾಸವನ್ನೂ ಪರಲೋಕನಿವಾಸಿಗಳನ್ನೂ ದೂಷಿ 7 ಸಿತು. ಇದಲ್ಲದೆ ದೇವಜನರ ಮೇಲೆ ಯುದ್ಧಮಾಡಿ ಅವರನ್ನು ಜಯಿಸುವದಕ್ಕೆ ಅದಕ್ಕೆ ಅಧಿಕಾರ ಕೊಡಲ್ಪಟ್ಟಿತು[2]. ಮತ್ತು ಸಕಲ ಕುಲ ಪ್ರಜೆ ಭಾಷೆ ಜನಾಂಗಗಳ ಮೇಲೆ 8 ಅದಕ್ಕೆ ಅಧಿಕಾರವು ಕೊಡಲ್ಪಟ್ಟಿತು. ಜಗದುತ್ಪತ್ತಿಗೆ ಮೊದಲೇ ಕೊಯ್ಯಲ್ಪಟ್ಟ ಯಜ್ಞ ಪಶುವಾದಾತನ ಬಳಿಯಲ್ಲಿರುವ ಜೀವಬಾಧ್ಯರ ಪಟ್ಟಿಯಲ್ಲಿ ಯಾರ್ಯಾರ ಹೆಸರುಗಳು 9 ಬರೆದಿರುವದಿಲ್ಲವೋ ಆ ಭೂನಿವಾಸಿಗಳೆಲ್ಲರೂ ಅದಕ್ಕೆ ನಮಸ್ಕಾರಮಾಡುವರು. ಕಿವಿ 10 ಯುಳ್ಳವನು ಕೇಳಲಿ. ಸೆರೆಹಿಡಿಯುವವನು ತಾನೇ ಸೆರೆಗೆ ಹೋಗುವನು; ಕತ್ತಿಯಿಂದ ಕೊಲ್ಲುವವನು ಕತ್ತಿಯಿಂದಲೇ ಸಾಯಬೇಕು[3]. ಇದರಲ್ಲಿ ದೇವಜನರ ತಾಳ್ಮೆಯೂ ನಂಬಿಕೆಯೂ ತೋರಿಬರುತ್ತವೆ.

---

[1] ದಾನಿಯೇಲ ೭, ೨—೮.  [2] ಕೆಲವು ಪ್ರತಿಗಳಲ್ಲಿ ಈ ವಾಕ್ಯವು ಇಲ್ಲ.

[3] ಯೆರೆಮೀಯ ೧೫, ೨.

ಭೂಮಿಯೊಳಗಿಂದ ಬಂದ ಸುಳ್ಳುಪ್ರವಾದಿಯೆಂಬ ಮೃಗವನ್ನು ಕುರಿತದ್ದು.

ಮತ್ತೊಂದು ಮೃಗವು[1] ಭೂಮಿಯೊಳಗಿಂದ ಬರುವದನ್ನು ಕಂಡೆನು. ಇದಕ್ಕೆ ಟಗರಿಗಿರುವಂತೆ[2] ಎರಡು ಕೊಂಬುಗಳಿದ್ದವು; ಘಟಸರ್ಪದಂತೆ ಮಾತಾಡಿತು. ಈ ಮೃಗವು ಮೊದಲನೇ ಮೃಗದ ಅಧಿಕಾರವನ್ನೆಲ್ಲಾ ಅದರ ಸನ್ನಿಧಿಯಲ್ಲೇ ನಡಿಸುತ್ತದೆ. ಇದು ಮರಣಕರವಾದ ಗಾಯ ವಾಸಿಯಾದ ಮೊದಲನೇ ಮೃಗಕ್ಕೆ ಭೂಲೋಕವೂ ಭೂನಿವಾಸಿಗಳೂ ನಮಸ್ಕರಿಸುವಂತೆ ಮಾಡುವಂಥಾದ್ದಾಗಿದೆ. ಇದು ಮಹತ್ತಾದ ಸೂಚಕಕಾರ್ಯಗಳನ್ನು ನಡಿಸುತ್ತದೆ; ಜನರ ಮುಂದೆ ಬೆಂಕಿಯು ಆಕಾಶದಿಂದ ಭೂಮಿಗೆ ಇಳಿದು ಬರುವಂತೆಯಾದರೂ ಮಾಡುವದು. ಆ ಮೊದಲನೆ ಮೃಗದ ಸನ್ನಿಧಿಯಲ್ಲಿ ಮಹತ್ಕಾರ್ಯಗಳನ್ನು ಮಾಡುವ ಅಧಿಕಾರವಿರುವದರಿಂದ ಭೂನಿವಾಸಿಗಳನ್ನು ಮರುಳುಗೊಳ್ಳಿಸುತ್ತದೆ; ಅವರಿಗೆ—ಕತ್ತಿಯಿಂದ ಗಾಯ ಹೊಂದಿ ಸಾಯದೆ ಬದುಕಿದ ಮೃಗದ ಘನಕ್ಕಾಗಿ ವಿಗ್ರಹವನ್ನು ಮಾಡಿಸಿಕೊಳ್ಳಬೇಕೆಂದು ಬೋಧಿಸುತ್ತದೆ. ಇದಲ್ಲದೆ ಆ ಮೃಗದ ವಿಗ್ರಹಕ್ಕೆ ಜೀವಕೊಡುವ ಸಾಮರ್ಥ್ಯವು ಇದಕ್ಕೆ ದೊರೆಯಿತು. ಆ ಮೃಗದ ವಿಗ್ರಹವು ಮಾತಾಡುವದು; ತನಗೆ ನಮಸ್ಕರಿಸದವರೆಲ್ಲರಿಗೂ ಮರಣದಂಡನೆ ಆಗುವಂತೆ ಮಾಡುವದು. ಈ ಎರಡನೇ ಮೃಗವು—ದೊಡ್ಡವರು ಚಿಕ್ಕವರು ಐಶ್ವರ್ಯವಂತರು ಬಡವರು ಸ್ವತಂತ್ರರು ದಾಸರು ಎಲ್ಲರೂ ತಮ್ಮ ತಮ್ಮ ಬಲಗೈಯ ಮೇಲಾಗಲಿ ಹಣೆಯ ಮೇಲಾಗಲಿ ಗುರುತು ಹೊಂದಬೇಕೆಂತಲೂ ಆ ಗುರುತು ಯಾರಿಗಿಲ್ಲವೋ ಅವರು ಕ್ರಯ ವಿಕ್ರಯಗಳನ್ನು ನಡಿಸಕೂಡದೆಂತಲೂ ಆಜ್ಞೆ ಮಾಡುತ್ತದೆ. ಆ ಗುರುತು ಯಾವದಂದರೆ ಮೊದಲನೆ ಮೃಗದ ಹೆಸರು ಅಥವಾ ಅದರ ಹೆಸರನ್ನು ಸೂಚಿಸುವ ಅಂಕೆ. 11 12 13 14 15 16 17

ಇದರಲ್ಲಿ ಜ್ಞಾನವು ಅಡಕವಾಗಿದೆ. ಬುದ್ಧಿವಂತನು ಆ ಮೃಗದ ಅಂಕೆಯನ್ನು ಎಣಿಸಲಿ; ಅದು ಒಬ್ಬ ಮನುಷ್ಯನನ್ನು ಸೂಚಿಸುವ ಅಂಕೆಯಾಗಿದೆ; ಅದರ ಅಂಕೆಯು ಆರುನೂರ ಅರವತ್ತಾರು[3]. 18

### VI. ರಕ್ಷಣೆಹೊಂದಿದವರ ಉತ್ಸವಗೀತೆ, ನಾಲ್ಕು ಪ್ರಕಟನೆಗಳು, ಭೂಲೋಕದ ಸುಗ್ಗೀಕಾಲ, ಇವುಗಳನ್ನು ಕುರಿತದ್ದು.

#### ೧. ರಕ್ಷಣೆಹೊಂದಿದವರ ಉತ್ಸವಗೀತವನ್ನು ಕುರಿತದ್ದು.

**14** ನಾನು ನೋಡಲಾಗಿ ಯಜ್ಞಪಶುವಾದಾತನು ಚಿಯೋನ್ ಪರ್ವತದ ಮೇಲೆ ನಿಂತಿರುವದನ್ನು ಕಂಡೆನು. ಆತನ ಜೊತೆಯಲ್ಲಿ ಒಂದು ಲಕ್ಷ ನಾಲ್ವತ್ತುನಾಲ್ಕು ಸಾವಿರ ಮಂದಿ ಇದ್ದರು; ಅವರವರ ಹಣೆಯ ಮೇಲೆ ಆತನ ಹೆಸರೂ ಆತನ ತಂದೆಯ ಹೆಸರೂ ಬರೆಯಲ್ಪಟ್ಟಿದ್ದವು. ಇದಲ್ಲದೆ ಪರಲೋಕದ ಕಡೆಯಿಂದ ಜಲಪ್ರವಾಹದ ಘೋಷದಂತೆಯೂ ದೊಡ್ಡ ಗುಡುಗಿನ ಶಬ್ದದಂತೆಯೂ ಇದ್ದ ಗಾಯನದ ಶಬ್ದವನ್ನು ಕೇಳಿದೆನು. ನಾನು 2

---

[1] ಅಂದರೆ, ಸುಳ್ಳುಪ್ರವಾದಿ; ಪ್ರಕಟನೆ ೧೬, ೧೩; ೧೯, ೨೦ ನೋಡು.
[2] ಮೂಲ: ಕುರಿಮರಿಗಿರುವಂತೆ.
[3] ಕೆಲವು ಪ್ರತಿಗಳಲ್ಲಿ—೬೧೬ ಎಂದು ಬರೆದದೆ.

ಕೇಳಿದ ಆ ಶಬ್ದವು ವೀಣೆಗಳನ್ನು ನುಡಿಸಿಕೊಂಡು ಹಾಡುತ್ತಿರುವ ವೀಣೆಗಾರರ ಶಬ್ದ
3 ದಂತಿತ್ತು. ಅವರು ಸಿಂಹಾಸನದ ಮುಂದೆಯೂ ಆ ನಾಲ್ಕು ಜೀವಿಗಳ ಮತ್ತು ಹಿರಿ
ಯರ ಮುಂದೆಯೂ ಹೊಸ ಹಾಡನ್ನು ಹಾಡಿದರು. ಭೂಲೋಕದೊಳಗಿಂದ ಕೊಂಡು
ಕೊಳ್ಳಲ್ಪಟ್ಟ ಆ ಲಕ್ಷ ನಾಲ್ವತ್ತುನಾಲ್ಕು ಸಾವಿರ ಜನರೇ ಹೊರತು ಬೇರೆ ಯಾರೂ ಆ
4 ಹಾಡನ್ನು ಕಲಿಯಲಾರರು. ಸ್ತ್ರೀಸಹವಾಸದಿಂದ ಮಲಿನರಾಗದವರು ಇವರೇ; ಇವರು
ಕನ್ಯೆಯರಂತೆ ನಿಷ್ಕಳಂಕರು. ಯಜ್ಞಪಶುವಾದಾತನು ಎಲ್ಲಿ ಹೋದರೂ ಇವರು ಆತನ
ಹಿಂದೆ ಹೋಗುವರು. ಇವರು ಮನುಷ್ಯರೊಳಗಿಂದ ಸ್ವಕೀಯ ಜನರಾಗಿ ಕೊಂಡುಕೊಳ್ಳ
5 ಲ್ಪಟ್ಟು ದೇವರಿಗೂ ಯಜ್ಞಪಶುವಾದಾತನಿಗೂ ಪ್ರಥಮಫಲದಂತಾದರು[1]. ಇವರ
ಬಾಯಿಯಲ್ಲಿ ಸುಳ್ಳು ಸಿಕ್ಕಲಿಲ್ಲ; ಇವರು ನಿರ್ದೋಷಿಗಳಾಗಿದ್ದಾರೆ.

### ೨. ನಾಲ್ಕು ಪ್ರಕಟನೆಗಳು.

6 ಮತ್ತೊಬ್ಬ ದೇವದೂತನು ಆಕಾಶಮಧ್ಯದಲ್ಲಿ ಹಾರಿಹೋಗುವದನ್ನು ಕಂಡೆನು.
ಭೂನಿವಾಸಿಗಳಾಗಿರುವ ಸಕಲ ಜನಾಂಗ ಕುಲ ಪ್ರಜೆಗಳವರಿಗೂ ಸಕಲ ಭಾಷೆಗಳನ್ನಾಡು
7 ವವರಿಗೂ ಸಾರಿಹೇಳುವದಕ್ಕೆ ನಿತ್ಯವಾದ ಶುಭವರ್ತಮಾನವು ಅವನಲ್ಲಿತ್ತು. ಅವನು—
ನೀವೆಲ್ಲರು ದೇವರಿಗೆ ಭಯಪಟ್ಟು ಆತನನ್ನು ಘನಪಡಿಸಿರಿ, ಆತನು ನ್ಯಾಯತೀರ್ಪು
ಮಾಡುವ ಗಳಿಗೆಯು ಬಂದಿದೆ. ಭೂಲೋಕ ಪರಲೋಕಗಳನ್ನೂ ಸಮುದ್ರವನ್ನೂ
ನೀರಿನ ಬುಗ್ಗೆಗಳನ್ನೂ ಉಂಟುಮಾಡಿದಾತನಿಗೆ ನಮಸ್ಕಾರಮಾಡಿರಿ ಎಂದು ಮಹಾ
ಶಬ್ದದಿಂದ ಹೇಳಿದನು.

8 ಅವನ ಹಿಂದೆ ಎರಡನೆಯವನಾದ ಒಬ್ಬ ದೇವದೂತನು ಬಂದು—ಬಿದ್ದಳು, ಬಿದ್ದಳು,
ಮಹಾ ಪಟ್ಟಣವಾದ ಬಾಬೇಲು ಬಿದ್ದಳು. ಆಕೆಯು ಸಕಲ ಜನಾಂಗಗಳಿಗೆ ತನ್ನ ಅತಿ
ಜಾರತ್ವವೆಂಬ[2] ದ್ರಾಕ್ಷಾರಸವನ್ನು ಕುಡಿಸಿದಳು ಎಂದು ಹೇಳಿದನು.

9 ಅವನ ಹಿಂದೆ ಮೂರನೆಯವನಾದ ಒಬ್ಬ ದೇವದೂತನು ಬಂದು—ಯಾವನಾದರೂ
ಮೊದಲನೇ ಮೃಗಕ್ಕೂ ಅದರ ವಿಗ್ರಹಕ್ಕೂ ನಮಸ್ಕಾರಮಾಡಿ ತನ್ನ ಹಣೆಯ ಮೇಲಾ
10 ಗಲಿ ಕೈಯ ಮೇಲಾಗಲಿ ಗುರುತುಹಾಕಿಸಿಕೊಂಡರೆ, ಅವನು ಸಹ ದೇವರ ಕೋಪವೆಂಬ
ಪಾತ್ರೆಯಲ್ಲಿ ಏನೂ ಬೆರಸದೆ ಹಾಕಿದ ದೇವರ ರೌದ್ರವೆಂಬ ದ್ರಾಕ್ಷಾರಸವನ್ನು ಕುಡಿಯು
ವನು; ಪರಿಶುದ್ಧ ದೇವದೂತರ ಮುಂದೆಯೂ ಯಜ್ಞಪಶುವಾದಾತನ ಮುಂದೆಯೂ
11 ಬೆಂಕಿಯಿಂದಲೂ ಗಂಧಕದಿಂದಲೂ ಯಾತನೆಪಡುವನು. ಅಂಥವರ ಯಾತನಾ
ಸ್ಥಳದ ಹೊಗೆಯು ಸದಾಕಾಲ ಏರುತ್ತಾ ಹೋಗುತ್ತದೆ; ಮೃಗಕ್ಕೆ ಮತ್ತು ಅದರ ವಿಗ್ರ
ಹಕ್ಕೆ ನಮಸ್ಕಾರಮಾಡುವವರೂ ಅದರ ಹೆಸರನ್ನು ಸೂಚಿಸುವ ಗುರುತನ್ನು ಹಾಕಿಸಿ
ಕೊಂಡಿರುವವರೆಲ್ಲರೂ ಹಗಲಿರುಳು ಉಪಶಮನವಿಲ್ಲದೆ ಯಾತನೆ ಪಡುವರು ಎಂದು
12 ಮಹಾ ಶಬ್ದದಿಂದ ಹೇಳಿದನು. ಇದರಲ್ಲಿ ದೇವರ ಆಜ್ಞೆಗಳನ್ನೂ ಯೇಸುವಿನ ಮೇಲಣ
ನಂಬಿಕೆಯನ್ನೂ ಕೈಕೊಂಡು ನಡೆಯುತ್ತಿರುವ ದೇವಜನರ ತಾಳ್ಮೆಯು ತೋರಿಬರುತ್ತದೆ.

[1] ಅಂಕೆ. ೧೫, ೧೨. [2] ಅಥವಾ, ಜಾರತ್ವದಿಂದಾಗುವ ದೇವರ ರೌದ್ರವೆಂಬ.

ಪರಲೋಕದಿಂದ ಒಂದು ಶಬ್ದವು ನನಗೆ ಕೇಳಿಸಿತು. ಅದು—ಇಂದಿನಿಂದ ಕರ್ತನ 13 ಭಕ್ತರಾಗಿ ಸಾಯುವವರು ಧನ್ಯರು ಎಂಬದಾಗಿ ಬರೆ ಎಂದು ನನಗೆ ಹೇಳಿತು. ಅದಕ್ಕೆ ಆತ್ಮನು—ಹೌದು, ಅವರು ಧನ್ಯರೇ; ಅವರ ಕಷ್ಟ ತೀರ್ರಿತು, ಅವರಿಗೆ ವಿಶ್ರಾಂತಿಯಾಗುವದು; ಅವರ ಸುಕೃತ್ಯಗಳು ಅವರೊಡನೆ ಬರುವವು ಎಂದು ಹೇಳುತ್ತಾನೆ.

೬. ಭೂಲೋಕದ ಸುಗ್ಗೀಕಾಲವನ್ನು ಕುರಿತದ್ದು.

ನಾನು ನೋಡಲಾಗಿ, ಇಗೋ, ಪ್ರಕಾಶಮಾನವಾದ ಒಂದು ಮೇಘವು ನನಗೆ ಕಾಣಿಸಿತು. ಆ ಮೇಘದ ಮೇಲೆ ಮನುಷ್ಯಕುಮಾರನಂತಿದ್ದವನೊಬ್ಬನು ಕೂತಿರುವದನ್ನು ಕಂಡೆನು[1]. ಆತನ ತಲೆಯ ಮೇಲೆ ಚಿನ್ನದ ಕಿರೀಟವೂ ಆತನ ಕೈಯಲ್ಲಿ ಹದವಾದ ಕುಡುಗೋಲೂ ಇದ್ದವು. ಆಗ ದೂತನಾದ ಮತ್ತೊಬ್ಬನು ದೇವಾಲಯದೊಳಗಿಂದ ಬಂದು ಮೇಘದ ಮೇಲೆ ಕೂತಿದ್ದವನಿಗೆ—ಭೂಮಿಯ ಪೈರು ಬೆಳೆದು ಮಾಗಿದೆ; ಕೊಯ್ಯುವ ಕಾಲ ಬಂತು; ನಿನ್ನ ಕುಡುಗೋಲನ್ನು ಹಾಕಿ ಕೊಯ್ಯಿ[2] ಎಂದು ಮಹಾ ಶಬ್ದದಿಂದ ಕೂಗಿದನು. ಮೇಘದ ಮೇಲೆ ಕೂತಿದ್ದವನು ತನ್ನ ಕುಡುಗೋಲನ್ನು ಹಾಕಿ ಭೂಮಿಯ ಪೈರನ್ನು ಕೊಯಿದನು; ಭೂಮಿಯ ಪೈರು ಕೊಯ್ಯಲ್ಪಟ್ಟಿತು. 14 15 16

ಮತ್ತೊಬ್ಬ ದೂತನು ಪರಲೋಕದಲ್ಲಿರುವ ದೇವಾಲಯದೊಳಗಿಂದ ಬಂದನು. ಅವನಲ್ಲಿ ಸಹ ಹದವಾದ ಕುಡುಗೋಲು ಇತ್ತು. ತರುವಾಯ ಬೆಂಕಿಗೆ ಅಧಿಕಾರಿಯಾದ ಇನ್ನೊಬ್ಬ ದೂತನು ಯಜ್ಞವೇದಿಯ ಬಳಿಯಿಂದ ಬಂದು, ಆ ಹದವಾದ ಕುಡುಗೋಲಿನವನಿಗೆ—ನಿನ್ನ ಹದವಾದ ಕುಡುಗೋಲನ್ನು ಹಾಕಿ ಭೂಮಿಯ ದ್ರಾಕ್ಷೇಗೊಂಚಲುಗಳನ್ನು ಕೊಯ್ಯಿ; ಅದರ ಹಣ್ಣುಗಳು ಪೂರಾ ಮಾಗಿವೆ ಎಂದು ಮಹಾ ಶಬ್ದದಿಂದ ಕೂಗಿದನು. ಆಗ ಆ ದೂತನು ತನ್ನ ಕುಡುಗೋಲನ್ನು ಭೂಮಿಗೆ ಹಾಕಿ, ಭೂಮಿಯ ದ್ರಾಕ್ಷೇಬಳ್ಳಿಯ ಹಣ್ಣನ್ನು ಕೊಯಿದು ದೇವರ ರೌದ್ರವೆಂಬ ದೊಡ್ಡ ತೊಟ್ಟಿಯಲ್ಲಿ ಹಾಕಿದನು[3]. ಅದನ್ನು ಪಟ್ಟಣದ ಹೊರಗೆ ಆ ತೊಟ್ಟಿಯಲ್ಲಿ ತುಳಿದರು. ಆ ತೊಟ್ಟಿಯೊಳಗಿಂದ ರಕ್ತವು ಹೊರಟು ಕುದುರೆಗಳ ಕಡಿವಾಣಗಳನ್ನು ಮುಟ್ಟುವಷ್ಟು ಆಳವಾಗಿ ಇನ್ನೂರು ಮೈಲಿ[4] ದೂರ ಹರಿಯಿತು. 17 18 19 20

VII. ಏಳು ಉಪದ್ರವಗಳನ್ನು ಕುರಿತದ್ದು.

ಪರಲೋಕದಲ್ಲಿ ಆಶ್ಚರ್ಯಕರವಾದ ಮತ್ತೊಂದು ಮಹಾ ಲಕ್ಷಣವು ನನಗೆ ಕಾಣಿಸಿತು. **15** ಏಳು ಮಂದಿ ದೇವದೂತರ ಕೈಯಲ್ಲಿ ಏಳು ಉಪದ್ರವಗಳಿದ್ದವು; ಇವು ಕಡೇ ಉಪದ್ರವಗಳು; ಇವುಗಳಲ್ಲಿ ದೇವರ ರೌದ್ರವು ಮುಗಿದಿರುವದು.

---

[1] ದಾನಿಯೇಲ ೭, ೧೩. [2] ಯೋವೇಲ ೩, ೧೩. [3] ಯೆಶಾಯ ೬೩, ೨. ೬.
[4] ಮೂಲ: ಸಾವಿರದ ಆರುನೂರು ಸ್ತಾದ್ಯ.

### ಮೃಗದ ಮೇಲೆ ಜಯಹೊಂದಿದವರ ಗೀತ.

2 ಬೆಂಕಿ ಬೆರೆದ ಗಾಜಿನ ಸಮುದ್ರವೋ ಎಂಬಂತೆ ಏನೋ ಒಂದು ನನಗೆ ಕಾಣಿಸಿತು. ಆಗ ಮೃಗದ ವಿಗ್ರಹಕ್ಕೆ ನಮಸ್ಕರಿಸದೆಯೂ ಅದರ ಹೆಸರಿನ ಅಂಕೆಯನ್ನು ಮುದ್ರೆ ಹಾಕಿಸಿಕೊಳ್ಳದೆಯೂ ಅದರ ಮೇಲೆ ಜಯಹೊಂದಿದವರು ದೇವರ ಸೇವಾರ್ಥವಾದ 3 ವೀಣೆಗಳನ್ನು ಕೈಯಲ್ಲಿ ಹಿಡುಕೊಂಡು ಗಾಜಿನ ಸಮುದ್ರದ ಬಳಿಯಲ್ಲಿ[1] ನಿಂತು ದೇವರ ದಾಸನಾದ ಮೋಶೆಯ ಹಾಡನ್ನೂ[2] ಯಜ್ಞಪಶುವಾದಾತನ ಹಾಡನ್ನೂ ಹಾಡುತ್ತಾ—

ದೇವರಾದ ಕರ್ತನೇ, ಸರ್ವಶಕ್ತನೇ,
ನಿನ್ನ ಕೃತ್ಯಗಳು ಮಹತ್ತಾದವುಗಳೂ ಆಶ್ಚರ್ಯಕರವಾದವುಗಳೂ ಆಗಿವೆ;
ಸರ್ವಜನಾಂಗಗಳ[3] ಅರಸನೇ, ನಿನ್ನ ಆಡಳಿತವು ನ್ಯಾಯವೂ ಸತ್ಯವೂ ಆಗಿದೆ;
4 ಕರ್ತನೇ, ನಿನ್ನ ನಾಮಕ್ಕೆ ಭಯಪಡದವರೂ
ಅದನ್ನು ಘನವಾದದ್ದೆಂದು ಒಪ್ಪಿಕೊಳ್ಳದವರೂ ಯಾರಾದರೂ ಇದ್ದಾರೇ?
ನೀನೊಬ್ಬನೇ ಪರಿಶುದ್ಧನು;
ನಿನ್ನ ನೀತಿಯುಳ್ಳ ಕೃತ್ಯಗಳು ಪ್ರಕಾಶಕ್ಕೆ ಬಂದದರಿಂದ
ಎಲ್ಲಾ ಜನಾಂಗಗಳು ಬಂದು ನಿನ್ನ ಸನ್ನಿಧಾನದಲ್ಲಿ ನಮಸ್ಕಾರಮಾಡುವರು

ಎಂದು ಹೇಳಿದರು.

### ಏಳು ಉಪದ್ರವಗಳು ದೇವವಿರೋಧಿಗಳಿಗೆ ಉಂಟಾದದ್ದು[4].

5 ಇದಾದ ಮೇಲೆ ನಾನು ನೋಡಿದಾಗ, ಪರಲೋಕದಲ್ಲಿರುವ ದೇವದರ್ಶನಗುಡಾರದ 6 ಪವಿತ್ರಸ್ಥಾನವು ತೆರೆಯಿತು; ಅದರೊಳಗಿಂದ ಏಳು ಉಪದ್ರವಗಳನ್ನು ಕೈಯಲ್ಲಿ ಹಿಡಿದಿರುವ ಆ ಏಳು ಮಂದಿ ದೇವದೂತರು ಬಂದರು; ಅವರು ಪ್ರಕಾಶವೂ ನಿರ್ಮಲವೂ ಆದ ನಾರುಮಡಿಯನ್ನು ಧರಿಸಿಕೊಂಡಿದ್ದರು; ತಮ್ಮ ಎದೆಗಳಿಗೆ ಚಿನ್ನದ ಪಟ್ಟಿಯನ್ನು ಕಟ್ಟಿ 7 ಕೊಂಡಿದ್ದರು. ನಾಲ್ಕು ಜೀವಿಗಳಲ್ಲಿ ಒಂದು ಈ ಏಳು ಮಂದಿ ದೇವದೂತರಿಗೆ ಸದಾ ಜೀವಿತನಾದ ದೇವರ ರೌದ್ರದಿಂದ ತುಂಬಿದ್ದ ಏಳು ಚಿನ್ನದ ಪಾತ್ರೆಗಳನ್ನು ಕೊಟ್ಟಿತು. 8 ದೇವರ ತೇಜಸ್ಸಾನ್ನಿಧ್ಯದಿಂದಲೂ ಆತನ ಶಕ್ತಿಯಿಂದಲೂ ಉಂಟಾದ ಹೊಗೆಯಿಂದ ಪವಿತ್ರಸ್ಥಾನವು ತುಂಬಿದ ಕಾರಣ[5], ಆ ಏಳು ಮಂದಿ ದೇವದೂತರ ಕೈಯಲ್ಲಿದ್ದ ಏಳು ಉಪದ್ರವಗಳು ತೀರುವ ತನಕ ಆ ಪವಿತ್ರಸ್ಥಾನದೊಳಗೆ ಪ್ರವೇಶಿಸುವದಕ್ಕೆ ಯಾರಿಂದಲೂ ಆಗಲಿಲ್ಲ.

**16** ಆಗ ಪವಿತ್ರಸ್ಥಾನದಿಂದ ಬಂದ ಮಹಾ ಶಬ್ದವನ್ನು ಕೇಳಿದೆನು. ಅದು ಆ ಏಳು ಮಂದಿ ದೇವದೂತರಿಗೆ—ನೀವು ಹೋಗಿ ಆ ಏಳು ಪಾತ್ರೆಗಳಲ್ಲಿರುವ ದೇವರ ರೌದ್ರವನ್ನು ಭೂಮಿಯ ಮೇಲೆ ಹೊಯ್ಯಿರಿ ಎಂದು ಹೇಳಿತು.

---

[1] ಅಥವಾ, ಮೇಲೆ. [2] ಹೊರಡೋಣ ೧೫, ೧. ೧೧; ದ್ವಿತೀಯ ನ್ಯಾಯ ೩೨, ೪.
[3] ಕೆಲವು ಪ್ರತಿಗಳಲ್ಲಿ – ಸರ್ವಯುಗಗಳ ಎಂದು ಬರೆದದೆ. [4] ಹೊರಡೋಣ ೯, ೧೪.
[5] ಯೆಶಾಯ ೬, ೪.

2 ಆಗ ಮೊದಲನೆಯವನು ಹೊರಟು ತನ್ನ ಪಾತ್ರೆಯಲ್ಲಿದ್ದದ್ದನ್ನು ಭೂಮಿಗೆ ಹೊಯಿದನು; ಕೂಡಲೇ ಮೊದಲನೇ ಮೃಗದ ಗುರುತನ್ನು ಹೊಂದಿ ಅದರ ವಿಗ್ರಹಕ್ಕೆ ನಮಸ್ಕಾರಮಾಡುವ ಮನುಷ್ಯರ ಮೈಮೇಲೆ ಕೆಟ್ಟ ಉರಿಹುಣ್ಣು ಎದ್ದಿತು[1].

3 ಎರಡನೆಯವನು ತನ್ನ ಪಾತ್ರೆಯಲ್ಲಿದ್ದದ್ದನ್ನು ಸಮುದ್ರದ ಮೇಲೆ ಹೊಯಿದನು. ಅದರ ನೀರು ಸತ್ತವನ ರಕ್ತದ ಹಾಗಾಯಿತು; ಮತ್ತು ಸಮುದ್ರದಲ್ಲಿದ್ದ ಜೀವಜಂತುಗಳೆಲ್ಲವು ಸತ್ತುಹೋದವು[2].

4 ಮೂರನೆಯವನು ತನ್ನ ಪಾತ್ರೆಯಲ್ಲಿದ್ದದ್ದನ್ನು ನದಿಗಳ ಮೇಲೆಯೂ ನೀರಿನ ಬುಗ್ಗೆಗಳ ಮೇಲೆಯೂ ಹೊಯಿದನು; ಅವುಗಳ ನೀರು ರಕ್ತವಾಯಿತು. 5 ಆ ಮೇಲೆ ಜಲಾಧಿಪತಿಯಾದ ದೂತನು—

ಸದಾ ಇರುವಾತನೇ, ಪರಿಶುದ್ಧನೇ,
ನೀನು ಹೀಗೆ ತೀರ್ಪುಮಾಡಿದ್ದರಲ್ಲಿ ನೀತಿಸ್ವರೂಪನಾಗಿದ್ದೀ.
6 ಅವರು ದೇವಜನರ ಮತ್ತು ಪ್ರವಾದಿಗಳ ರಕ್ತವನ್ನು ಸುರಿಸಿದರು;
ನೀನು ಅವರಿಗೆ ರಕ್ತವನ್ನೇ ಕುಡಿಯುವದಕ್ಕೆ ಕೊಟ್ಟಿದ್ದೀ;
ಇದಕ್ಕೆ ಅವರು ಪಾತ್ರರು

ಎಂದು ಹೇಳುವದನ್ನು ಕೇಳಿದೆನು. 7 ಆ ಮೇಲೆ ಯಜ್ಞವೇದಿಯು ಮಾತಾಡುತ್ತಾ—ದೇವರಾದ ಕರ್ತನೇ, ಸರ್ವಶಕ್ತನೇ, ನಿನ್ನ ನ್ಯಾಯತೀರ್ಪುಗಳು ಸತ್ಯವೂ ನ್ಯಾಯವೂ ಆಗಿವೆ ನಿಜ ಎಂದು ಹೇಳುವದನ್ನು ಕೇಳಿದೆನು.

8 ನಾಲ್ಕನೆಯವನು ತನ್ನ ಪಾತ್ರೆಯಲ್ಲಿದ್ದದ್ದನ್ನು ಸೂರ್ಯನ ಮೇಲೆ ಹೊಯಿದನು; ಆಗ ಸೂರ್ಯನಿಗೆ ಕಡುಬಿಸಿಲಿನಿಂದ ಮನುಷ್ಯರನ್ನು ಕಂದಿಸುವ ಶಕ್ತಿಯು ಕೊಡಲ್ಪಟ್ಟಿತು. 9 ಮನುಷ್ಯರು ಬಲವಾದ ಕಾವಿನಿಂದ ಕಂದಿಹೋದಾಗ್ಯೂ, ಅವರು ದೇವರನ್ನು ಘನಪಡಿಸುವ ಹಾಗೆ ಮಾನಸಾಂತರ ಮಾಡಿಕೊಳ್ಳದೆ, ಈ ಉಪದ್ರವಗಳ ಮೇಲೆ ಅಧಿಕಾರವುಳ್ಳ ದೇವರ ನಾಮವನ್ನು ದೂಷಿಸಿದರು.

10 ಐದನೆಯವನು ತನ್ನ ಪಾತ್ರೆಯಲ್ಲಿದ್ದದ್ದನ್ನು ಮೊದಲನೇ ಮೃಗದ ಸಿಂಹಾಸನದ ಮೇಲೆ ಹೊಯ್ಯಲು, ಅದರ ರಾಜ್ಯವು ಕತ್ತಲಾಯಿತು[3]. ಜನರು ತಮಗಾದ ಕಷ್ಟದ ದೆಸೆಯಿಂದ ತಮ್ಮ ನಾಲಿಗೆಗಳನ್ನು ಕಚ್ಚಿಕೊಂಡು, 11 ತಮ್ಮ ಕೃತ್ಯಗಳ ವಿಷಯದಲ್ಲಿ ಮಾನಸಾಂತರ ಮಾಡಿಕೊಳ್ಳದೆ ತಮ್ಮ ಕಷ್ಟಗಳ ದೆಸೆಯಿಂದಲೂ ಹುಣ್ಣುಗಳ ದೆಸೆಯಿಂದಲೂ ಪರಲೋಕದಲ್ಲಿರುವ ದೇವರನ್ನು ದೂಷಿಸಿದರು.

12 ಆರನೆಯವನು ತನ್ನ ಪಾತ್ರೆಯಲ್ಲಿದ್ದದ್ದನ್ನು ಫ್ರಾತು ಎಂಬ ಮಹಾ ನದಿಯ ಮೇಲೆ ಹೊಯ್ಯಲು, ಅದರ ನೀರು ಇಂಗಿಹೋಯಿತು; ಇದರಿಂದ ಮೂಡಣ ದಿಕ್ಕಿನಿಂದ ಬರುವ ರಾಜರಿಗೆ ಮಾರ್ಗವು ಸಿದ್ಧವಾಯಿತು. 13 ಮತ್ತು ಘಟಸರ್ಪ ಮೃಗ ಸುಳ್ಳುಪ್ರವಾದಿ[4] ಇವರ ಬಾಯಿಗಳಿಂದ ಕಪ್ಪೆಗಳಂತಿದ್ದ ಮೂರು ಅಶುದ್ಧಾತ್ಮಗಳು ಬರುವದನ್ನು ಕಂಡೆನು. 14 ಇವು ಮಹತ್ಕಾರ್ಯಗಳನ್ನು ಮಾಡುವ ದೆವ್ವಗಳು; ಭೂಲೋಕದಲ್ಲೆಲ್ಲೆಲ್ಲಿಯೂ ಇರುವ

---

1) ಹೊರಡೋಣ ೯, ೧೦. ೧೧.
2) ಹೊರಡೋಣ ೭, ೨೦. ೨೧.
3) ಹೊರಡೋಣ ೧೦, ೨೧—೨೩.
4) ಪ್ರಕಟನೆ ೧೩, ೧೧—೧೭; ೧೯, ೨೦; ೨೦, ೧೦ ನೋಡು.

ರಾಜರ ಬಳಿಗೆ ಹೋಗಿ ಸರ್ವಶಕ್ತನಾದ ದೇವರ ಮಹಾ ದಿನದಲ್ಲಾಗುವ ಯುದ್ಧಕ್ಕೆ
15 ಅವರನ್ನು ಕೂಡಿಸುವವು. (ಇಗೋ, ಕಳ್ಳನು ಬರುವಂತೆ ಬರುತ್ತೇನೆ; ಎಚ್ಚರವಾಗಿದ್ದು
ತನ್ನ ವಸ್ತ್ರಗಳನ್ನು ಕಾಪಾಡಿಕೊಳ್ಳುವವನು ಧನ್ಯನು. ಕಾಪಾಡಿಕೊಳ್ಳದವನು ನಿರ್ವಾಣ
16 ನಾಗಿ ತಿರುಗಾಡಿ ಅವಮಾನಕ್ಕೆ ಗುರಿಯಾದಾನು.) ಆ ದೆವ್ವಗಳು ಭೂರಾಜರನ್ನು
ಇಬ್ರಿಯ ಭಾಷೆಯಲ್ಲಿ ಹರ್ಮಗೆದೋನ್[1] ಎಂಬ ಹೆಸರುಳ್ಳ ಸ್ಥಳಕ್ಕೆ ಕೂಡಿಸಿದವು.
17 ಏಳನೆಯವನು ತನ್ನ ಪಾತ್ರೆಯಲ್ಲಿದ್ದದ್ದನ್ನು ವಾಯುಮಂಡಲದ ಮೇಲೆ ಹೊಯ್ಯಲು,
ದೇವಾಲಯದಲ್ಲಿರುವ ಸಿಂಹಾಸನದ ಕಡೆಯಿಂದ ಮಹಾ ಶಬ್ದವು ಉಂಟಾಗಿ—ಆಯಿತು
18 ಎಂದು ಹೇಳಿತು. ಆಗ ಮಿಂಚುಗಳೂ ವಾಣಿಗಳೂ ಗುಡುಗುಗಳೂ ಉಂಟಾದವು;
ಇದಲ್ಲದೆ ಮಹಾ ಭೂಕಂಪವಾಯಿತು; ಮನುಷ್ಯರು ಭೂಮಿಯ ಮೇಲೆ ಇದ್ದಂದಿನಿಂದ
19 ಅಂಥಾ ದೊಡ್ಡ ಭೂಕಂಪವಾಗಲಿಲ್ಲ. ಮಹಾ ಪಟ್ಟಣವು ಮೂರು ಭಾಗವಾಯಿತು;
ಜನಾಂಗಗಳ ಪಟ್ಟಣಗಳು ಬಿದ್ದವು. ಇದಲ್ಲದೆ ದೇವರು ದೊಡ್ಡ ಬಾಬೇಲನ್ನು ಜ್ಞಾಪಿಸಿ
ಕೊಂಡು ತನ್ನ ಉಗ್ರಕೋಪವೆಂಬ ದ್ರಾಕ್ಷಾರಸದ ಪಾತ್ರೆಯನ್ನು ಅವಳಿಗೆ ಕುಡಿಯ
20 ಕೊಟ್ಟನು. ಆಗ ದ್ವೀಪಗಳೆಲ್ಲಾ ಓಡಿಹೋದವು; ಬೆಟ್ಟಗಳು ಸಿಕ್ಕದೆ ಹೋದವು.
21 ಮತ್ತು ಆಕಾಶದಿಂದ ಮನುಷ್ಯರ ಮೇಲೆ ದೊಡ್ಡ ಆನೇಕಲ್ಲಿನ ಮಳೆ ಸುರಿಯಿತು[2];
ಒಂದೊಂದು ಕಲ್ಲು ಹೆಚ್ಚುಕಡಿಮೆ ನಾಲ್ಕು ಮಣ[3] ತೂಕವಾಗಿತ್ತು. ಆ ಆನೇಕಲ್ಲಿನ
ಮಳೆಯ ಕಾಟವು ಬಹಳ ಹೆಚ್ಚಾಗಿದ್ದದರಿಂದ ಆ ಮಳೆಯಲ್ಲಿ ಸಿಕ್ಕಿಕೊಂಡ ಮನುಷ್ಯರು
ದೇವರನ್ನು ದೂಷಿಸಿದರು.

### VIII. ಕ್ರಿಸ್ತವಿರೋಧಿಗಳ ನಾಶವನ್ನು ಕುರಿತದ್ದು.

#### ೧. ಬಾಬೇಲೆಂಬ ಜಾರಸ್ತ್ರೀಯ ನಾಶವು.

**17** ಏಳು ಪಾತ್ರೆಗಳನ್ನು ಹಿಡಿದಿದ್ದ ಏಳು ಮಂದಿ ದೇವದೂತರಲ್ಲಿ ಒಬ್ಬನು ಬಂದು ನನ್ನ
ಸಂಗಡ ಮಾತಾಡಿ—ಬಾ, ಬಹಳ ನೀರುಗಳ ಮೇಲೆ ವಾಸಿಸಿರುವ[4] ಮಹಾ ಜಾರಸ್ತ್ರೀಗೆ
2 ಬರುವ ದಂಡನೆಯನ್ನು ನಿನಗೆ ತೋರಿಸುತ್ತೇನೆ; ಅವಳೊಂದಿಗೆ[5] ಭೂರಾಜರು ಜಾರತ್ವ[6]
ಮಾಡಿದರು, ಮತ್ತು ಭೂನಿವಾಸಿಗಳು ಅವಳ ಜಾರತ್ವವೆಂಬ ದ್ರಾಕ್ಷಾರಸವನ್ನು ಕುಡಿದು
3 ಮತ್ತರಾದರು[7] ಎಂದು ಹೇಳಿದನು. ಆಗ ಅವನು ದೇವರಾತ್ಮವಶನಾದ ನನ್ನನ್ನು ಎತ್ತಿ
ಕೊಂಡು ಅಡವಿಗೆ ಹೋದನು. ಅಲ್ಲಿ ನಾನು ರಕ್ತವರ್ಣದ ಮೃಗದ ಮೇಲೆ ಕೂತಿದ್ದ
ಒಬ್ಬ ಸ್ತ್ರೀಯನ್ನು ಕಂಡೆನು; ಆ ಮೃಗದ ಮೈಮೇಲೆಲ್ಲಾ ದೇವದೂಷಣೆಯ ಹೆಸರುಗಳು
4 ತುಂಬಿದ್ದವು. ಅದಕ್ಕೆ ಏಳು ತಲೆಗಳೂ ಹತ್ತು ಕೊಂಬುಗಳೂ ಇದ್ದವು. ಆ ಸ್ತ್ರೀಯು
ಧೂಮ್ರವರ್ಣದ ವಸ್ತ್ರಗಳನ್ನೂ ರಕ್ತಾಂಬರವನ್ನೂ ಧರಿಸಿಕೊಂಡು ಚಿನ್ನ ರತ್ನ ಮುತ್ತು

---

[1] ಅಂದರೆ, ಮಗಿದ್ದೋನ್ ಬೆಟ್ಟ; ಅಂಕೆ ೫, ೧೯. ೩೧.
[2] ಹೊರಡೋಣ ೯, ೨೩—೨೫.
[3] ಮೂಲ: ೧ ತಲಾಂತು.
[4] ಪ್ರಕಟನೆ ೧೭, ೧೫; ಯೆರೆಮೀಯ ೫೧, ೧೩.
[5] ಅಥವಾ, ಅವಳ ದುಷ್ಕಾರ್ಯವನ್ನು ನೋಡಿ.
[6] ಅಂದರೆ, ದೇವದ್ರೋಹ; ಯೆಶಾಯ ೨೩, ೧೭; ನಾಹುಮ್ ೩, ೪.
[7] ಯೆರೆಮೀಯ ೫೧, ೭.

ಇವುಗಳಿಂದ ಅಲಂಕರಿಸಿಕೊಂಡಿದ್ದಳು; ಅವಳ ಕೈಯಲ್ಲಿ ಒಂದು ಚಿನ್ನದ ಬಟ್ಲು ಇತ್ತು;
ಅದು ಅಸಹ್ಯವಾದವುಗಳಿಂದ ಅಂದರೆ ಅವಳ ಜಾರತ್ವಸಂಬಂಧವಾದ ಅಶುದ್ಧ ವಸ್ತು
ಗಳಿಂದ ತುಂಬಿತ್ತು. ಅವಳ ಹಣೆಯ ಮೇಲೆ— 5

ಬಾಬೇಲೆಂಬ ಮಹಾ ನಗರಿ,

ಭೂಮಿಯಲ್ಲಿರುವ ಜಾರಸ್ತ್ರೀಯರಿಗೂ ಅಸಹ್ಯವಾದ ಕಾರ್ಯಗಳಿಗೂ ತಾಯಿ

ಎಂದು ಗೂಢಾರ್ಥವುಳ್ಳ ಹೆಸರು ಬರೆದಿತ್ತು. ಆ ಸ್ತ್ರೀಯು ದೇವಜನರ ರಕ್ತವನ್ನೂ 6
ಯೇಸುವಿಗೋಸ್ಕರ ಸಾಕ್ಷಿಕೊಟ್ಟು ಹತರಾದವರ ರಕ್ತವನ್ನೂ ಕುಡಿದು ಮತ್ತಳಾಗಿರುವ
ದನ್ನು ಕಂಡೆನು. ನಾನು ಅವಳನ್ನು ನೋಡಿ ಅತ್ಯಾಶ್ಚರ್ಯಪಟ್ಟೆನು. ಆಗ ಆ ದೇವ 7
ದೂತನು ನನಗೆ ಹೇಳಿದ್ದು—ನೀನ್ಯಾಕೆ ಆಶ್ಚರ್ಯಪಟ್ಟೆ? ಆ ಸ್ತ್ರೀಯಿಂದಲೂ ಅವಳ
ವಾಹನವಾಗಿದ್ದು ಏಳು ತಲೆಗಳೂ ಹತ್ತು ಕೊಂಬುಗಳೂ ಉಳ್ಳ ಮೃಗದಿಂದಲೂ ಸೂಚಿ
ತವಾದ ಗೂಢಾರ್ಥವನ್ನು ನಾನು ನಿನಗೆ ವಿವರಿಸುತ್ತೇನೆ. ನೀನು ಕಂಡ ಈ ಮೃಗವು 8
ಮೊದಲು ಇತ್ತು, ಈಗ ಇಲ್ಲ, ಮತ್ತು ಅಧೋಲೋಕದಿಂದ ಏರಿಬಂದು ನಾಶಕ್ಕೆ ಹೋ
ಗುವದು. ಭೂನಿವಾಸಿಗಳೊಳಗೆ ಯಾರ್ಯಾರ ಹೆಸರುಗಳು ಲೋಕಾದಿಯಿಂದ ಜೀವ
ಬಾಧ್ಯರ ಪಟ್ಟಿಯಲ್ಲಿ ಬರೆದಿರುವದಿಲ್ಲವೋ ಅವರು ಈ ಮೃಗವನ್ನು ನೋಡಿ ಇದು ಮೊದಲು
ಇತ್ತು, ಈಗ ಇಲ್ಲ, ಇನ್ನು ಮೇಲೆ ಬರುವದು ಎಂದು ತಿಳಿದು ಆಶ್ಚರ್ಯಪಡುವರು.
ಇದು ಬುದ್ಧಿವಂತನಿಗೆ ಮಾತ್ರ ಗೊತ್ತಾಗುವದು. ಆ ಏಳು ತಲೆಗಳು ಆ ಸ್ತ್ರೀ ಕೂತು 9
ಕೊಂಡಿರುವ ಏಳು ಬೆಟ್ಟಗಳೇ; ಇದಲ್ಲದೆ ಅವು ಏಳು ಮಂದಿ ಅರಸುಗಳನ್ನು ಸೂಚಿ 10
ಸುತ್ತವೆ[1]; ಅವರಲ್ಲಿ ಐದು ಮಂದಿ ಬಿದ್ದುಹೋಗಿದ್ದಾರೆ, ಒಬ್ಬನು ಇದ್ದಾನೆ, ಮತ್ತೊಬ್ಬನು
ಇನ್ನೂ ಬಂದಿಲ್ಲ. ಬಂದ ಮೇಲೆ ಅವನು ಸ್ವಲ್ಪ ಕಾಲ ಇರಬೇಕು. ಮೊದಲಿದ್ದು ಈಗ 11
ಇಲ್ಲದಿರುವ ಆ ಮೃಗವು ತಾನೇ ಎಂಟನೇ ಅರಸು; ಅವನು ಆ ಏಳು ಮಂದಿ ಅರಸು
ಗಳಿಗೆ ಸೇರಿದವನು; ನಾಶಕ್ಕೆ ಹೋಗುವನು. ನೀನು ಕಂಡ ಆ ಹತ್ತು ಕೊಂಬುಗಳು 12
ಅಂದರೆ ರಾಜ್ಯವನ್ನು ಇನ್ನೂ ಹೊಂದದಿರುವ ಹತ್ತು ಮಂದಿ ಅರಸುಗಳು. ಅವರು ಒಂದು
ಗಳಿಗೆಯ ವರೆಗೆ ರಾಜರಂತೆ ಆಳುವ ಅಧಿಕಾರವನ್ನು ಮೃಗದೊಂದಿಗೆ ಹೊಂದುತ್ತಾರೆ.
ಅವರು ಒಂದೇ ಅಭಿಪ್ರಾಯವುಳ್ಳವರಾಗಿದ್ದು ತಮ್ಮ ಶಕ್ತಿಯನ್ನೂ ಅಧಿಕಾರವನ್ನೂ 13
ಮೃಗಕ್ಕೆ ಕೊಡುತ್ತಾರೆ. ಅವರು ಯಜ್ಞಪಶುವಾದಾತನ ಮೇಲೆ ಯುದ್ಧಮಾಡುವರು, 14
ಆದರೆ ಆತನು ಕರ್ತರ ಕರ್ತನೂ ರಾಜಾಧಿರಾಜನೂ[2] ಆಗಿರುವದರಿಂದ ಅವರನ್ನು ಜಯಿ
ಸುವನು; ಮತ್ತು ದೇವರು ಕರೆದವರೂ ದೇವರಾದುಕೊಂಡವರೂ ನಂಬಿಗಸ್ತರೂ ಆಗಿ
ರುವ ಆತನ ಕಡೆಯವರು ಆ ಜಯದಲ್ಲಿ ಪಾಲುಗಾರರಾಗುವರು.

ಇನ್ನೂ ಆ ದೇವದೂತನು ನನಗೆ ಹೇಳಿದ್ದು—ಆ ಜಾರಸ್ತ್ರೀಯು ವಾಸಿಸಿರುವ 15
ನೀರುಗಳನ್ನು ಕಂಡಿಯಲ್ಲ? ಅವು ಪ್ರಜೆ ಸಮೂಹ ಜನ ಭಾಷೆಗಳನ್ನು ಸೂಚಿ
ಸುತ್ತವೆ. ಇದಲ್ಲದೆ ಹತ್ತು ಕೊಂಬುಗಳನ್ನೂ ಮೃಗವನ್ನೂ ಕಂಡಿಯಲ್ಲ? ಇವುಗಳಿಂದ 16
ಸೂಚಿತರಾದವರು ಆ ಜಾರಸ್ತ್ರೀಯನ್ನು ದ್ವೇಷಿಸಿ ಅವಳನ್ನು ಗತಿಗೆಟ್ಟವಳನ್ನಾಗಿಯೂ

---

[1] ಅಥವಾ, ಇದಲ್ಲದೆ, ಏಳು ಮಂದಿ ಅರಸುಗಳಿದ್ದಾರೆ.

[2] ದ್ವಿತೀಯ ನ್ಯಾಯ ೧೦, ೧೭; ದಾನಿಯೇಲ ೨, ೪೭; ಕೀರ್ತನೆ ೧೩೬, ೩.

ಬಟ್ಟೆಯಿಲ್ಲದವಳನ್ನಾಗಿಯೂ ಮಾಡಿ ಅವಳ ಮಾಂಸವನ್ನು ತಿಂದು ಅವಳನ್ನು ಬೆಂಕಿಯಿಂದ
17 ಸುಟ್ಟುಬಿಡುವರು. ಯಾಕಂದರೆ ಅವರು ದೇವರ ಅಭಿಪ್ರಾಯವನ್ನು ನೆರವೇರಿಸುವ ದಕ್ಕೂ ಒಂದೇ ಅಭಿಪ್ರಾಯವುಳ್ಳವರಾಗಿದ್ದು ತಮ್ಮ ರಾಜ್ಯವನ್ನು ಮೃಗಕ್ಕೆ ಕೊಡುವ ದಕ್ಕೂ ದೇವರು ತನ್ನ ವಚನವು ನೆರವೇರುವ ತನಕ ಅವರ ಹೃದಯಗಳನ್ನು ಪ್ರೇರಿಸಿ
18 ದನು. ನೀನು ಕಂಡ ಆ ಸ್ತ್ರೀಯು ಭೂರಾಜರ ಮೇಲೆ ಅಧಿಕಾರ ಹೊಂದಿರುವ ಮಹಾ ನಗರಿಯೇ.

ಬಾಬೇಲು ಪಟ್ಟಣದ ನಾಶದಿಂದ ಮನುಷ್ಯರೊಳಗೆ ಉಂಟಾದ ಗೋಳಾಟವನ್ನು ಕುರಿತದ್ದು.

**18** ಇದಾದ ಮೇಲೆ, ಮಹಾ ಅಧಿಕಾರವುಳ್ಳ ಮತ್ತೊಬ್ಬ ದೇವದೂತನು ಪರಲೋಕದಿಂದ ಇಳಿಯುವದನ್ನು ಕಂಡೆನು; ಅವನ ಪ್ರಭಾವದಿಂದ ಭೂಮಿಗೆ ಪ್ರಕಾಶವುಂಟಾಯಿತು[1].
2 ಅವನು ಗಟ್ಟಿಯಾದ ಶಬ್ದದಿಂದ ಕೂಗುತ್ತಾ—

ಬಿದ್ದಳು, ಬಿದ್ದಳು, ಮಹಾ ನಗರಿಯಾದ ಬಾಬೇಲು ಬಿದ್ದಳು[2];
ದೆವ್ವಗಳ ವಾಸಸ್ಥಾನವೂ ಅಶುದ್ಧಾತ್ಮಗಳ ಆಶ್ರಯವೂ
ಅಪವಿತ್ರವಾಗಿಯೂ ಅಸಹ್ಯವಾಗಿಯೂ ಇರುವ ಸಕಲ ವಿಧವಾದ ಪಕ್ಷಿಗಳ ಆಶ್ರಯವೂ ಆದಳು[3];
3 ಎಲ್ಲಾ ಜನಾಂಗಗಳು ಅವಳ ಅತಿಜಾರತ್ವವೆಂಬ ದ್ರಾಕ್ಷಾರಸವನ್ನು ಕುಡಿದರು;
ಅವಳೊಂದಿಗೆ[4] ಭೂರಾಜರು ಜಾರತ್ವಮಾಡಿದರು;
ಅವಳು ಸುಖಭೋಗಿನಿಯಾಗಿದ್ದರಿಂದ ಭೂಲೋಕದ ವರ್ತಕರು ಐಶ್ವರ್ಯವಂತರಾದರು

ಎಂದು ಹೇಳಿದನು.

4 ಪರಲೋಕದಿಂದ ಬಂದ ಮತ್ತೊಂದು ಶಬ್ದವನ್ನು ಕೇಳಿದೆನು; ಅದು ಹೇಳಿದ್ದೇನಂದರೆ— ನನ್ನ ಪ್ರಜೆಗಳೇ, ಅವಳನ್ನು ಬಿಟ್ಟುಬನ್ನಿರಿ[5]; ನೀವು ಅವಳ ಪಾಪಗಳಲ್ಲಿ ಪಾಲುಗಾರರಾಗ
5 ಬಾರದು; ಅವಳಿಗಾಗುವ ಉಪದ್ರವಗಳಿಗೆ ಗುರಿಯಾಗಬಾರದು. ಅವಳ ಪಾಪಗಳು ಒಂದರ ಮೇಲೊಂದು ಸೇರಿ ಆಕಾಶದ ಪರ್ಯಂತರಕ್ಕೂ ಬೆಳೆದವೆ. ದೇವರು ಅವಳ
6 ಅನ್ಯಾಯಗಳನ್ನು ಜ್ಞಾಪಿಸಿಕೊಂಡನು. ಇತರರಿಗೆ ಅವಳು ಮಾಡಿದ ಪ್ರಕಾರ ಅವಳಿಗೆ ಮಾಡಿರಿ; ಅವಳ ಕೃತ್ಯಗಳಿಗೆ ಸರಿಯಾಗಿ ಅವಳಿಗೆ ಎರಡಷ್ಟು ಕೊಡಿರಿ; ಅವಳು ಕಲ
7 ಸಿದ ಪಾತ್ರೆಯಲ್ಲಿ ಅವಳಿಗೆ ಎರಡಷ್ಟು ಕಲಸಿಕೊಡಿರಿ. ಅವಳು ಎಷ್ಟು ಮಟ್ಟಿಗೆ ತನ್ನನ್ನು ಘನಪಡಿಸಿಕೊಂಡು ಭೋಗಿನಿಯಾಗಿದ್ದಳೋ ಅಷ್ಟು ಮಟ್ಟಿಗೆ ಅವಳಿಗೆ ಯಾತನೆಯನ್ನೂ ದುಃಖವನ್ನೂ ಕೊಡಿರಿ. ಅವಳು ತನ್ನ ಹೃದಯದಲ್ಲಿ—ನಾನು ರಾಣಿಯಾಗಿ ಕೂತು ಕೊಂಡಿದ್ದೇನೆ, ನಾನು ವಿಧವೆಯಲ್ಲ, ದುಃಖವನ್ನು ಕಾಣುವದೇ ಇಲ್ಲ ಎಂದು ಹೇಳಿಕೊ
8 ಳ್ಳುವದರಿಂದ[6] ಅವಳಿಗೆ ಕೊಲೆ ದುಃಖ ಕ್ಷಾಮ ಎಂಬೀ ಉಪದ್ರವಗಳು ಒಂದೇ ದಿನದಲ್ಲಿ

1) ಯೆಜೇಕಿಯೇಲ ೪೩, ೨.
2) ಯೆಶಾಯ ೨೧, ೯.
3) ಯೆಶಾಯ ೧೩, ೨೧; ೩೪, ೧೧. ೧೪.
4) ಅಥವಾ, ಅವಳ ದುಷ್ಟಚರ್ಯವನ್ನು ನೋಡಿ.
5) ಯೆರೆಮೀಯ ೫೧, ೬. ೪೫.
6) ಯೆಶಾಯ ೪೭, ೭. ೯.

ಸಂಭವಿಸುವವು; ಅವಳು ಬೆಂಕಿಯಿಂದ ಸುಟ್ಟುಹೋಗುವಳು; ಅವಳಿಗೆ ದಂಡನೆಯನ್ನು
ವಿಧಿಸಿದ ದೇವರಾಗಿರುವ ಕರ್ತನು ಬಲಿಷ್ಠನಾಗಿದ್ದಾನೆ. 9 ಅವಳೊಂದಿಗೆ ಜಾರತ್ವಮಾಡಿ
ಭೋಗಿಗಳಾಗಿ ಬದುಕಿದ ಭೂರಾಜರು ಅವಳ ದಹನದಿಂದೇರುವ ಹೊಗೆಯನ್ನು ನೋಡು
ವಾಗ[1], 10 ಅವಳ ಯಾತನೆಯ ದೆಸೆಯಿಂದ ಭಯಪಟ್ಟು ದೂರದಲ್ಲಿ ನಿಂತು ಗೋಳಾಡುತ್ತಾ
ಎದೆ ಬಡುಕೊಳ್ಳುತ್ತಾ—ಅಯ್ಯೋ, ಅಯ್ಯೋ, ಮಹಾ ಪಟ್ಟಣವೇ, ಬಾಬೇಲೇ, ಬಲಿಷ್ಠ
ವಾದ ನಗರಿಯೇ, ನಿನಗೆ ವಿಧಿಸಲ್ಪಟ್ಟ ದಂಡನೆಯು ಒಂದೇ ಗಳಿಗೆಯಲ್ಲಿ ಬಂತಲ್ಲಾ ಎಂದು
ಹೇಳುವರು. 11 ಇದಲ್ಲದೆ ಭೂಲೋಕದ ವರ್ತಕರು ಅವಳ ನಿಮಿತ್ತವಾಗಿ ಅತ್ತು ಗೋಳಾ
ಡುತ್ತಾ[2]—ನಮ್ಮ ಹಡಗುಗಳ ಸರಕುಗಳನ್ನು ಕೊಂಡುಕೊಳ್ಳುವವರು ಇನ್ನು ಇಲ್ಲವಲ್ಲಾ.
12 ಚಿನ್ನ, ಬೆಳ್ಳಿ, ರತ್ನ, ಮುತ್ತು, ನಯವಾದ ನಾರುಮಡಿ, ಧೂಮ್ರವರ್ಣದ ವಸ್ತ್ರ, ರೇಶಿಮೆ,
ರಕ್ತಾಂಬರ, ಸಕಲ ವಿಧವಾದ ಅಗಿಲುಮರ, ಸಕಲ ವಿಧವಾದ ಜಂತದ ಸಾಮಾನು,
ಬಹು ಬೆಲೆಯುಳ್ಳ ಮರ, ಹಿತ್ತಾಳೆ, ಕಬ್ಬಿಣ, ಚಂದ್ರಕಾಂತ ಶಿಲೆ ಇವುಗಳಿಂದ ಮಾಡಿದ
ಸಕಲ ವಿಧವಾದ ಪಾತ್ರೆ, 13 ಲವಂಗಚೆಕ್ಕೆ, ರಕ್ತಬಾಳ, ಧೂಪ, ಸುಗಂಧತೈಲ, ಸಾಂಬ್ರಾಣಿ,
ದ್ರಾಕ್ಷಾರಸ, ಎಣ್ಣೆ, ನಯವಾದ ಹಿಟ್ಟು, ಗೋಧಿ, ದನ, ಕುರಿ, ಕುದುರೆ, ರಥ, ಗುಲಾಮ,
ಮಾನುಷಪ್ರಾಣ[3] ಇವೇ ಮೊದಲಾದ ನಮ್ಮ ಸರಕುಗಳನ್ನು ಕೊಂಡುಕೊಳ್ಳುವವರು
ಯಾರೂ ಇಲ್ಲವಲ್ಲಾ ಎಂದು ಹೇಳಿಕೊಳ್ಳುತ್ತಾ ದುಃಖಿಸುವರು. 14 ಬಾಬೇಲೇ, ನಿನ್ನ
ಜೀವವು ಅಪೇಕ್ಷಿಸಿದ ಹಣ್ಣುಹಂಪಲಗಳು ನಿನ್ನನ್ನು ಬಿಟ್ಟುಹೋದವು; ಸೊಗಸಾಗಿಯೂ
ಶೋಭಾಯಮಾನವಾಗಿಯೂ ಇರುವದೆಲ್ಲವೂ ನಾಶವಾಗಿ ನಿನ್ನನ್ನು ಬಿಟ್ಟವು. ಅವು
ಇನ್ನು ಮೇಲೆ ಜನರಿಗೆ ಸಿಕ್ಕುವದೇ ಇಲ್ಲ. 15 ಆ ಸರಕುಗಳನ್ನು ಮಾರಿ ಅವಳಿಂದ
ಐಶ್ವರ್ಯವಂತರಾದ ವರ್ತಕರು ಅವಳ ಯಾತನೆಯನ್ನು ನೋಡಿ ಭಯಪಟ್ಟು ದೂರದಲ್ಲಿ
ನಿಂತು ಗೋಳಾಡುತ್ತಾ ದುಃಖಿಸುತ್ತಾ—16 ಅಯ್ಯೋ, ಅಯ್ಯೋ, ನಯವಾದ ನಾರುಮಡಿ
ಯನ್ನೂ ಧೂಮ್ರವರ್ಣದ ವಸ್ತ್ರಗಳನ್ನೂ ರಕ್ತಾಂಬರವನ್ನೂ ಧರಿಸಿಕೊಂಡು ಚಿನ್ನ ರತ್ನ
ಮುತ್ತು ಇವುಗಳಿಂದ ತನ್ನನ್ನು ಅಲಂಕರಿಸಿಕೊಂಡಿದ್ದ ಈ ಮಹಾ ಪಟ್ಟಣಕ್ಕೆ ಏನು
ದುರ್ಗತಿ ಸಂಭವಿಸಿತು. 17 ಅಷ್ಟು ಐಶ್ವರ್ಯವು ಒಂದೇ ಗಳಿಗೆಯಲ್ಲಿ ನಾಶವಾಯಿತಲ್ಲಾ
ಎಂದು ಹಂಬಲಿಸುವರು. ಇದಲ್ಲದೆ ಹಡಗುಗಳ ಯಜಮಾನರೂ ಸಮುದ್ರಪ್ರಯಾಣ
ಮಾಡುವವರೂ ನಾವಿಕರೂ ಸಮುದ್ರದ ಮೇಲೆ ಕೆಲಸವನ್ನು ನಡಿಸಿ ಜೀವನಮಾಡುವವ
ರೆಲ್ಲರೂ ದೂರದಲ್ಲಿ ನಿಂತು, 18 ಅವಳ ದಹನದಿಂದೇರುವ ಹೊಗೆಯನ್ನು ನೋಡುತ್ತಾ—
ಈ ಮಹಾ ಪಟ್ಟಣಕ್ಕೆ ಸಮಾನವಾದದ್ದು ಯಾವದು ಎಂದು ಕೂಗಿ ಹೇಳಿದರು. 19 ಆಗ
ಅವರು ತಮ್ಮ ತಲೆಗಳ ಮೇಲೆ ಮಣ್ಣನ್ನು ಹೊಯಿದುಕೊಂಡು ಅಳುತ್ತಾ ಗೋಳಾ
ಡುತ್ತಾ—ಅಯ್ಯೋ, ಅಯ್ಯೋ, ಸಮುದ್ರದ ಮೇಲೆ ಹಡಗುಳ್ಳವರೆಲ್ಲರನ್ನು ತನ್ನ ಅಮೂಲ್ಯ
ದ್ರವ್ಯಗಳಿಂದ ಐಶ್ವರ್ಯವಂತರನ್ನಾಗಮಾಡಿದ ಈ ಮಹಾ ಪಟ್ಟಣಕ್ಕೆ ಎಂಥಾ ಗತಿ ಬಂತು;
ಇವಳು ಒಂದೇ ಗಳಿಗೆಯಲ್ಲಿ ಹಾಳಾದಳಲ್ಲಾ ಎಂದು ಕೂಗಿ ಹೇಳಿದರು. 20 ಪರಲೋಕವೇ,
ಆನಂದ ಪಡು; ದೇವಜನರೇ, ಅಪೊಸ್ತಲರೇ, ಪ್ರವಾದಿಗಳೇ, ಇವಳು ನಿಮಗೆ ಅನ್ಯಾಯ

---

[1] ಉತ್ಪತ್ತಿ ೧೯, ೨೮. [2] ಯೆಜೇಕಿಯೇಲ ೨೭ ನೋಡು. [3] ಯೆಜೇಕಿಯೇಲ ೨೭, ೧೩.

ಮಾಡಿದ್ದಕ್ಕಾಗಿ ದೇವರು ಇವಳಿಗೆ ಪ್ರತಿದಂಡನೆಯನ್ನು ಮಾಡಿದ್ದರಿಂದ ಆನಂದಪಡಿರಿ[1]
ಎಂದು ಆ ಶಬ್ದ ಹೇಳಿತು.

21 ಆಗ ಬಲಿಷ್ಠನಾದ ಒಬ್ಬ ದೇವದೂತನು ದೊಡ್ಡ ಬೀಸುವ ಕಲ್ಲಿನಂತಿರುವ ಒಂದು ಕಲ್ಲನ್ನು ಎತ್ತಿ ಸಮುದ್ರದೊಳಗೆ ಹಾಕಿ—ಮಹಾ ಪಟ್ಟಣವಾದ ಬಾಬೇಲು ಹೀಗೆಯೇ
22 ದಡದಡನೆ ಕೆಡವಲ್ಪಟ್ಟಿತು[2], ಇನ್ನೆಂದಿಗೂ ಕಾಣಿಸುವದಿಲ್ಲ. ಬಾಬೇಲೇ, ನಿನ್ನಲ್ಲಿ ವೀಣೆಗಾರರೂ ವಾದ್ಯಗಾರರೂ ಕೊಳಲೂದುವವರೂ ತುತೂರಿಯವರೂ ಮಾಡುವ ಧ್ವನಿಯು ಇನ್ನೆಂದಿಗೂ ಕೇಳಿಸುವದಿಲ್ಲ. ಯಾವ ವಿಧವಾದ ಕೈಗಾರಿಕೆಯನ್ನು ಮಾಡುವವರು ನಿನ್ನಲ್ಲಿ ಇನ್ನೆಂದಿಗೂ ಸಿಕ್ಕುವದಿಲ್ಲ. ಬೀಸುವ ಕಲ್ಲಿನ ಶಬ್ದವು ನಿನ್ನಲ್ಲಿ ಇನ್ನೆಂದಿಗೂ ಕೇಳಿ
23 ಸುವದಿಲ್ಲ. ದೀಪದ ಬೆಳಕು ನಿನ್ನಲ್ಲಿ ಇನ್ನೆಂದಿಗೂ ಕಾಣಿಸುವದಿಲ್ಲ. ಮದಲಿಂಗ ಮದಲಗಿತ್ತಿಯರ ಶಬ್ದವು ನಿನ್ನಲ್ಲಿ ಇನ್ನೆಂದಿಗೂ ಕೇಳಿಸುವದಿಲ್ಲ[3]. ನಿನ್ನ ವರ್ತಕರು ಭೂಮಿಯ ಪ್ರಭುಗಳಾಗಿದ್ದರಲ್ಲವೇ. ನಿನ್ನ ಮಾಟದಿಂದ ಎಲ್ಲಾ ಜನಾಂಗದವರು ಮರು
24 ಳಾದರು. ಪ್ರವಾದಿಗಳ ರಕ್ತವೂ ದೇವಜನರ ರಕ್ತವೂ ಭೂಮಿಯ ಮೇಲೆ ಕೊಲ್ಲಲ್ಪಟ್ಟವರೆಲ್ಲರ ರಕ್ತವೂ ನಿನ್ನಲ್ಲಿ[4] ಸಿಕ್ಕಿತು ಎಂದು ಹೇಳಿದನು.

ಬಾಬೇಲು ಪಟ್ಟಣವು ಬಿದ್ದದ್ದಕ್ಕೆ ಪರಲೋಕದಲ್ಲಿ ಉಂಟಾದ ಹರ್ಷವನ್ನು ಕುರಿತದ್ದು.

**19** ಇದಾದ ಮೇಲೆ, ಪರಲೋಕದಲ್ಲಿ ದೊಡ್ಡ ಗುಂಪಿನ ಮಹಾ ಶಬ್ದವೋ ಎಂಬಂತೆ ಒಂದು ಶಬ್ದವನ್ನು ಕೇಳಿದೆನು. ಅವರು—

ಹಲ್ಲೆಲೂಯಾ[5].
ಜಯವೂ[6] ಪ್ರಭಾವವೂ ಶಕ್ತಿಯೂ ನಮ್ಮ ದೇವರಲ್ಲಿ ಉಂಟು;
2 ಆತನ ನ್ಯಾಯತೀರ್ಪುಗಳು ಸತ್ಯವೂ ನ್ಯಾಯವೂ ಆಗಿವೆ,
ತನ್ನ ಜಾರತ್ವದಿಂದ ಭೂಲೋಕವನ್ನು ಕೆಡಿಸುತ್ತಿದ್ದ
ಆ ಮಹಾ ಜಾರಸ್ತ್ರೀಗೆ ಆತನು ನ್ಯಾಯತೀರಿಸಿ,
ಅವಳು ಆತನ ದಾಸರನ್ನು ಕೊಂದದ್ದಕ್ಕಾಗಿ
ಅವಳಿಗೆ ಪ್ರತಿದಂಡನೆಯನ್ನು ಮಾಡಿದ್ದಾನೆ

3 ಎಂದು ಹೇಳಿ, ಎರಡನೇ ಸಾರಿ—ಹಲ್ಲೆಲೂಯಾ[5] ಎಂದು ಆರ್ಭಟಿಸಿ—

ಅವಳ ದಹನದಿಂದುಂಟಾದ ಹೊಗೆಯು ಯಾವಾಗಲೂ ಏರಿಹೋಗುತ್ತದೆ

4 ಎಂದು ಹೇಳಿದರು. ಆಗ ಇಪ್ಪತ್ತುನಾಲ್ಕು ಮಂದಿ ಹಿರಿಯರೂ ಆ ನಾಲ್ಕು ಜೀವಿಗಳೂ ಅಡ್ಡಬಿದ್ದು ಸಿಂಹಾಸನದ ಮೇಲೆ ಕೂತಿರುವ ದೇವರಿಗೆ ನಮಸ್ಕಾರ ಮಾಡಿ—ಆಮೆನ್[7]; ಹಲ್ಲೆಲೂಯಾ, ಅಂದರು.

---

[1] ಯೆರೆಮಿಾಯ ೫೧, ೪೮. [2] ಯೆರೆಮಿಾಯ ೫೧, ೬೩. ೬೪. [3] ಯೆರೆಮಿಾಯ ೨೫, ೧೦.
[4] ಮೂಲ: ಅವಳಲ್ಲಿ. [5] ಅಂದರೆ, ಕರ್ತನನ್ನು ಸ್ತುತಿಸಿರಿ; ಕೀರ್ತನೆ ೧೦೬, ೧; ೧೦೫, ೪೫.
[6] ಅಥವಾ, ರಕ್ಷಣೆಯೂ. [7] ಅಂದರೆ, ತಥಾಸ್ತು, ಹಾಗೆಯೇ ಆಗಲಿ.

ಸಭೆಯೆಂಬ ಕನ್ಯೆಯನ್ನೂ ರಾಜಾಧಿರಾಜನನ್ನೂ ಕುರಿತದ್ದು.

ಆ ಮೇಲೆ, ಸಿಂಹಾಸನದ ಕಡೆಯಿಂದ ಬಂದ ಒಂದು ಶಬ್ದವು— 5

ದೇವರ ದಾಸರೆಲ್ಲರೇ, ದೇವರಿಗೆ ಭಯಪಡುವ ಹಿರಿಕಿರಿಯರೇ,
ನಮ್ಮ ದೇವರನ್ನು ಕೊಂಡಾಡಿರಿ

ಎಂದು ಹೇಳಿತು. ತರುವಾಯ ಜನರ ದೊಡ್ಡ ಗುಂಪಿನ ಶಬ್ದದಂತೆಯೂ ಜಲಪ್ರವಾಹ 6 ಘೋಷದಂತೆಯೂ ಗಟ್ಟಿಯಾದ ಗುಡುಗಿನ ಶಬ್ದದಂತೆಯೂ ಇದ್ದ ಒಂದು ಶಬ್ದವನ್ನು ಕೇಳಿದೆನು. ಅದು—

ಹಲ್ಲೆಲೂಯಾ;
ಸರ್ವಶಕ್ತನಾಗಿರುವ ನಮ್ಮ ದೇವರಾದ ಕರ್ತನು ಆಳುತ್ತಾನೆ;
ಯಜ್ಞಪಶುವಾದಾತನ ವಿವಾಹಕಾಲವು ಬಂತು; 7
ಆತನಿಗೆ ವಿವಾಹವಾಗುವ ಕನ್ಯೆ ತನ್ನನ್ನು ಸಿದ್ಧಮಾಡಿಕೊಂಡಿದ್ದಾಳೆ[1];
ಸಂತೋಷಪಡೋಣ, ಹರ್ಷಗೊಳ್ಳೋಣ, ಆತನನ್ನು ಘನಪಡಿಸೋಣ

ಎಂದು ಹೇಳಿತು. ಪ್ರಕಾಶಮಾನವೂ ನಿರ್ಮಲವೂ ಆದ ನಯವಾದ ನಾರುಮಡಿ 8 ಯನ್ನು ಧರಿಸಿಕೊಳ್ಳುವದಕ್ಕೆ ಆಕೆಗೆ ಅನುಗ್ರಹಿಸೋಣವಾಗಿತ್ತು. ಆ ನಾರುಮಡಿ ಅಂದರೆ ದೇವಜನರ ಸತ್ಕಾರ್ಯಗಳೇ. ಇದಲ್ಲದೆ ಅವನು ನನ್ನ ಸಂಗಡ ಮಾತಾಡುತ್ತಾ—ಯಜ್ಞ 9 ಪಶುವಾದಾತನ ವಿವಾಹದ ಔತಣಕ್ಕೆ ಕರಸಿಕೊಂಡವರು ಧನ್ಯರು ಎಂಬದಾಗಿ ಬರೆ ಎಂದು ನನಗೆ ಹೇಳಿ—ಈ ಮಾತುಗಳು ದೇವರ ಸತ್ಯವಚನಗಳಾಗಿವೆ, ಅಂದನು. ಆಗ, 10 ನಾನು ಅವನಿಗೆ ನಮಸ್ಕಾರಮಾಡಬೇಕೆಂದು ಅವನ ಪಾದಗಳ ಮುಂದೆ ಬೀಳಲು ಅವನು—ಮಾಡಬೇಡ ನೋಡು, ನಾನು ನಿನಗೂ ಯೇಸುವಿನ ವಿಷಯವಾದ ಸಾಕ್ಷಿ ಯನ್ನು ಹೇಳಿರುವ ನಿನ್ನ ಸಹೋದರರಿಗೂ ಜೊತೆಯ ದಾಸನಾಗಿದ್ದೇನೆ; ದೇವರಿಗೆ ಮಾತ್ರ ನಮಸ್ಕಾರಮಾಡು, ಅಂದನು. ಯೇಸುವಿನ ವಿಷಯವಾದ ಸಾಕ್ಷಿಯು ಪ್ರವಾ ದನೆಯ ಆತ್ಮವೇ[2].

ಪರಲೋಕವು ತೆರೆದಿರುವದನ್ನು ನಾನು ಕಂಡೆನು. ಆಗ, ಇಗೋ, ಬಿಳೀ ಕುದು 11 ರೆಯು ನನಗೆ ಕಾಣಿಸಿತು; ಅದರ ಮೇಲೆ ಕೂತಿದ್ದವನಿಗೆ ನಂಬಿಗಸ್ತನೂ ಸತ್ಯವಂತನೂ ಎಂದು ಹೆಸರು. ಆತನು ನೀತಿಯಿಂದ ನ್ಯಾಯವಿಚಾರಿಸುತ್ತಾನೆ, ನೀತಿಯಿಂದ ಯುದ್ಧ ಮಾಡುತ್ತಾನೆ; ಆತನ ಕಣ್ಣುಗಳು ಬೆಂಕಿಯ ಉರಿಯಂತಿವೆ; ಆತನ ತಲೆಯ ಮೇಲೆ 12 ಅನೇಕ ಮಕುಟಗಳುಂಟು; ಆತನಿಗೆ ಒಂದು ಹೆಸರು ಬರೆದುಕೊಟ್ಟಿದೆ, ಅದು ಆತನಿಗೇ ಹೊರತು ಮತ್ತಾರಿಗೂ ತಿಳಿಯದು. ಆತನು ರಕ್ತಪ್ರೋಕ್ಷಿತವಾದ ವಸ್ತ್ರವನ್ನು ಧರಿಸಿ 13 ಕೊಂಡಿದ್ದನು. ಆತನಿಗೆ ದೇವರ ವಾಕ್ಯವೆಂದು ಹೆಸರು[3]. ಪರಲೋಕದಲ್ಲಿರುವ 14 ಸೈನ್ಯದವರು ಶುಭ್ರವಾಗಿಯೂ ನಿರ್ಮಲವಾಗಿಯೂ ಇರುವ ನಯವಾದ ನಾರುಮಡಿ

---

[1] ಹೋಶೇಯ ೨, ೧೯. ೨೦; ಯೆಶಾಯ ೫೪, ೫. ೬. [2] ಅಥವಾ, ನಮಸ್ಕಾರಮಾಡು; ಯೇಸುವಿನ ವಿಷ ಯವಾದ ಸಾಕ್ಷಿಯನ್ನು ಹೇಳಿಸುವ ಆತ್ಮನು ಪ್ರವಾದನೆಯನ್ನು ಹೇಳಿಸುವ ಆತ್ಮನೇ ಅಂದನು.

[3] ಯೋಹಾನ ೧, ೧—೧೪.

ಯನ್ನು ಧರಿಸಿಕೊಂಡು ಬಿಳೀ ಕುದುರೆಗಳ ಮೇಲೆ ಹತ್ತಿದವರಾಗಿ ಆತನ ಹಿಂದೆ ಬರುತ್ತಿ
15 ದ್ದರು. ಜನಾಂಗಗಳನ್ನು ಹೊಡೆಯುವದಕ್ಕಾಗಿ ಹದವಾದ ಕತ್ತಿಯು ಆತನ ಬಾಯಿಂದ
ಬರುತ್ತದೆ[1]. ಆತನು ಅವರನ್ನು ಕಬ್ಬಿಣದ ಕೋಲಿನಿಂದ ಆಳುವನು[2]. ಆತನು
ಸರ್ವಶಕ್ತನಾದ ದೇವರ ಉಗ್ರಕೋಪವೆಂಬ ದ್ರಾಕ್ಷೆಯ ತೊಟ್ಟಿಯಲ್ಲಿರುವದನ್ನು ತುಳಿಯು
16 ತ್ತಾನೆ. ಆತನ ತೊಡೆಯ ಮೇಲಣ ವಸ್ತ್ರದಲ್ಲಿ—

ರಾಜಾಧಿರಾಜನೂ ಕರ್ತರ ಕರ್ತನೂ[3]

ಎಂಬ ಹೆಸರು ಬರೆದದೆ.

### ೨. ಮೊದಲನೇ ಮೃಗವೂ ಸುಳ್ಳುಪ್ರವಾದಿಯೂ ನಾಶವಾದದ್ದು.

17 ಆ ಮೇಲೆ ಒಬ್ಬ ದೇವದೂತನು ಸೂರ್ಯನಲ್ಲಿ ನಿಂತಿರುವದನ್ನು ಕಂಡೆನು. ಅವನು
ಮಹಾ ಶಬ್ದದಿಂದ ಕೂಗುತ್ತಾ ಆಕಾಶದಲ್ಲಿ ಹಾರ್ಯಾಡುವ ಎಲ್ಲಾ ಪಕ್ಷಿಗಳಿಗೆ—ಬನ್ನಿರಿ,
18 ದೇವರು ಮಾಡಿಸುವ ಮಹಾ ಭೋಜನಕ್ಕೆ ಕೂಡಿಬನ್ನಿರಿ, ರಾಜರ ಮಾಂಸವನ್ನೂ ಸಹ
ಸ್ರಾಧಿಪತಿಗಳ ಮಾಂಸವನ್ನೂ ಪರಾಕ್ರಮಶಾಲಿಗಳ ಮಾಂಸವನ್ನೂ ಕುದುರೆಗಳ ಮಾಂಸ
ವನ್ನೂ ರಾಹುತರ ಮಾಂಸವನ್ನೂ, ಸ್ವತಂತ್ರರೂ ದಾಸರೂ ದೊಡ್ಡವರೂ ಚಿಕ್ಕವರೂ
ಇವರೆಲ್ಲರ ಮಾಂಸವನ್ನೂ ತಿನ್ನುವದಕ್ಕೆ ಬನ್ನಿರಿ[4] ಎಂದು ಹೇಳಿದನು.

19 ತರುವಾಯ ಆ ಮೊದಲನೇ ಮೃಗವೂ ಭೂರಾಜರೂ ಅವರ ಸೈನ್ಯಗಳವರೂ ಆ ಕುದು
ರೆಯ ಮೇಲೆ ಕೂತಿದ್ದವನ ಮೇಲೆಯೂ ಆತನ ಸೈನ್ಯದ ಮೇಲೆಯೂ ಯುದ್ಧಮಾಡುವದ
20 ಕ್ಕಾಗಿ ಕೂಡಿಬಂದಿರುವದನ್ನು ಕಂಡೆನು[5]. ಆಗ ಮೃಗವು ಸೆರೆಸಿಕ್ಕಿತು; ಇದಲ್ಲದೆ
ಮೃಗದ ಮುಂದೆ ಮಹತ್ಕಾರ್ಯಗಳನ್ನು ಮಾಡಿ ಮೃಗದ ಗುರುತು ಹಾಕಿಸಿಕೊಂಡವ
ರನ್ನೂ ಅವನ ವಿಗ್ರಹಕ್ಕೆ ನಮಸ್ಕರಿಸಿದವರನ್ನೂ ಮರುಳುಗೊಳಿಸಿದ ಆ ಸುಳ್ಳುಪ್ರವಾ
ದಿಯೂ[6] ಅದರ ಜೊತೆಯಲ್ಲಿ ಸೆರೆಸಿಕ್ಕಿದನು. ಇವರಿಬ್ಬರೂ ಜೀವಸಹಿತವಾಗಿ ಗಂಧಕ
21 ದಿಂದ ಉರಿಯುವ[7] ಬೆಂಕಿಯ ಕೆರೆಯಲ್ಲಿ ಹಾಕಲ್ಪಟ್ಟರು; ಮಿಕ್ಕಾದವರು ಆ ಕುದುರೆಯ
ಮೇಲೆ ಕೂತಿದ್ದವನ ಬಾಯಿಂದ ಬಂದ ಕತ್ತಿಯಿಂದ ಹತರಾದರು; ಮತ್ತು ಹಕ್ಕಿಗಳೆಲ್ಲಾ
ಅವರ ಮಾಂಸವನ್ನು ಹೊಟ್ಟೆತುಂಬಾ ತಿಂದವು.

### ೩. ಸೈತಾನನು ನಾಶವಾದದ್ದು.

**20** ಆಗ ಒಬ್ಬ ದೇವದೂತನು ಅಧೋಲೋಕದ ಬೀಗದ ಕೈಯನ್ನೂ[8] ದೊಡ್ಡ ಸರಪಣಿ
ಯನ್ನೂ ಕೈಯಲ್ಲಿ ಹಿಡಿದುಕೊಂಡು ಪರಲೋಕದಿಂದ ಇಳಿದುಬರುವದನ್ನು ಕಂಡೆನು.
2 ಅವನು ಪಿಶಾಚನೂ ಸೈತಾನನೂ ಆಗಿರುವ ಪುರಾತನಸರ್ಪನೆಂಬ ಘಟಸರ್ಪನನ್ನು
3 ಹಿಡಿದು ಸಾವಿರ ವರುಷ ಬಂಧನದಲ್ಲಿಟ್ಟನು. ಆ ಸಾವಿರ ವರುಷ ತೀರುವ ತನಕ

---

1) ಇಬ್ರಿಯ ೪, ೧೨; ಯೆಶಾಯ ೧೧, ೪. 2) ಕೀರ್ತನೆ ೨, ೯. 3) ಪ್ರಕಟನೆ ೧೭, ೧೪.
4) ಯೆಜೇಕಿಯೇಲ ೩೯, ೧೭—೨೦. 5) ಪ್ರಕಟನೆ ೧೬, ೧೪. ೧೬. 6) ಪ್ರಕಟನೆ ೧೬, ೧೩; ೧೩, ೧೧—೧೭.
7) ಉತ್ಪತ್ತಿ ೧೯, ೨೪. 8) ಪ್ರಕಟನೆ ೯, ೧.

ಸೈತಾನನು ಇನ್ನೂ ಜನಗಳನ್ನು ಮರುಳುಗೊಳಿಸದ ಹಾಗೆ ದೇವದೂತನು ಅವನನ್ನು ಅಧೋಲೋಕದಲ್ಲಿ ದೊಬ್ಬಿ ಬಾಗಿಲು ಮುಚ್ಚಿ ಅದಕ್ಕೆ ಮುದ್ರೆಹಾಕಿದನು. ಆ ಸಾವಿರ ವರುಷಗಳಾದ ಮೇಲೆ ಅವನಿಗೆ ಸ್ವಲ್ಪಕಾಲ ಬಿಡುಗಡೆಯಾಗಬೇಕು.

4 ತರುವಾಯ ಸಿಂಹಾಸನಗಳನ್ನು ಕಂಡೆನು[1]. ಅವುಗಳ ಮೇಲೆ ಜನರು ಕೂತಿದ್ದರು; ನ್ಯಾಯತೀರಿಸುವ ಅಧಿಕಾರವು ಅವರಿಗೆ ಕೊಡಲ್ಪಟ್ಟಿತು. ಇದಲ್ಲದೆ ಯೇಸುವಿನ ವಿಷಯವಾದ ಸಾಕ್ಷಿಯ ನಿಮಿತ್ತವಾಗಿಯೂ ದೇವರ ವಾಕ್ಯದ ನಿಮಿತ್ತವಾಗಿಯೂ ತಲೆ ಹೊಯಿಸಿಕೊಂಡವರ ಆತ್ಮಗಳನ್ನೂ ಮೃಗಕ್ಕೂ ಅದರ ವಿಗ್ರಹಕ್ಕೂ ನಮಸ್ಕರಿಸದೆ ತಮ್ಮ ಹಣೆಯ ಮೇಲೆ ಮತ್ತು ಕೈಯ ಮೇಲೆ ಗುರುತುಹಾಕಿಸಿಕೊಳ್ಳದೆ ಇರುವವರನ್ನೂ ಕಂಡೆನು. 5 ಅವರು ಜೀವಿತರಾಗಿ ಎದ್ದು ಸಾವಿರ ವರುಷ ಕ್ರಿಸ್ತನೊಂದಿಗೆ ಆಳಿದರು. ಮಿಕ್ಕ ಸತ್ತವರು ಆ ಸಾವಿರ ವರುಷ ತೀರುವ ತನಕ ಜೀವಿತರಾಗಿ ಏಳಲಿಲ್ಲ. ಇದೇ ಪ್ರಥಮ ಪುನರುತ್ಥಾನವು. 6 ಪ್ರಥಮ ಪುನರುತ್ಥಾನದಲ್ಲಿ ಸೇರಿರುವವನು ಧನ್ಯನೂ ಪರಿಶುದ್ಧನೂ ಆಗಿದ್ದಾನೆ[2]. ಇಂಥವರ ಮೇಲೆ ಎರಡನೇ ಮರಣಕ್ಕೆ[3] ಅಧಿಕಾರವಿಲ್ಲ; ಆದರೆ ಅವರು ದೇವರಿಗೂ ಕ್ರಿಸ್ತನಿಗೂ ಯಾಜಕರಾಗಿ[4] ಕ್ರಿಸ್ತನೊಂದಿಗೆ ಆ ಸಾವಿರ ವರುಷ ಆಳುವರು.

7 ಆ ಸಾವಿರ ವರುಷಗಳು ತೀರಿದ ಮೇಲೆ ಸೈತಾನನಿಗೆ ಸೆರೆಯಿಂದ ಬಿಡುಗಡೆಯಾಗುವದು. 8 ಅವನು ಹೊರಗೆ ಬಂದು ಭೂಮಿಯ ನಾಲ್ಕು ದಿಕ್ಕುಗಳಲ್ಲಿರುವ ಗೋಗ್ ಮಾಗೋಗ್ ಎಂಬ ಜನಾಂಗಗಳನ್ನು[5] ಮೋಸಗೊಳಿಸಿ ಅವರನ್ನು ಯುದ್ಧಕ್ಕೆ ಕೂಡಿಸುವನು; ಅವರ ಸಂಖ್ಯೆಯು ಸಮುದ್ರದ ಮರಳಿನಷ್ಟಿರುವದು. 9 ಅವರು ದೇಶದಲ್ಲೆಲ್ಲಾ ಹರಡಿಕೊಂಡು ದೇವಜನರ ದಂಡಿಗೂ ನಮ್ಮ ಪ್ರಿಯ ಪಟ್ಟಣಕ್ಕೂ ಮುತ್ತಿಗೆ ಹಾಕಿದರು. ಆಗ ಪರಲೋಕದಿಂದ ಬೆಂಕಿ ಇಳಿದುಬಂದು ಅವರನ್ನು ದಹಿಸಿಬಿಟ್ಟಿತು[6]. 10 ಇದಲ್ಲದೆ ಅವರನ್ನು ಮರುಳುಗೊಳಿಸಿದ ಸೈತಾನನು ಬೆಂಕಿ ಗಂಧಕಗಳುರಿಯುವ ಕೆರೆಯಲ್ಲಿ ದೊಬ್ಬಲ್ಪಟ್ಟನು. ಅಲ್ಲಿ ಮೃಗವೂ ಸುಳ್ಳುಪ್ರವಾದಿಯೂ ಕೂಡ ಇದ್ದಾರೆ; ಅವರು ಹಗಲಿರುಳು ಸದಾಕಾಲ ಯಾತನೆ ಪಡುತ್ತಿರುವರು.

### ೪. ಸತ್ತವರ ಪುನರುತ್ಥಾನವನ್ನೂ ಕಡೇ ನ್ಯಾಯತೀರ್ಪನ್ನೂ ಕುರಿತದ್ದು. ಮೃತ್ಯುವೂ ಪಾತಾಳವೂ ನಾಶವಾದದ್ದು.

11 ಆ ಮೇಲೆ ಬೆಳ್ಳಗಿರುವ ಮಹಾ ಸಿಂಹಾಸನವನ್ನೂ ಅದರ ಮೇಲೆ ಕೂತಿದ್ದಾತನನ್ನೂ ಕಂಡೆನು. ಆತನೆದುರಿನಿಂದ ಭೂಮ್ಯಾಕಾಶಗಳು ಓಡಿಹೋಗಿ ಇನ್ನು ಕಾಣಿಸದ ಹಾಗಾದವು. 12 ಇದಲ್ಲದೆ ಸತ್ತವರಾದ ದೊಡ್ಡವರೂ ಚಿಕ್ಕವರೂ ಸಿಂಹಾಸನದ ಮುಂದೆ ನಿಂತಿರುವದನ್ನು ಕಂಡೆನು. ಆಗ ಪುಸ್ತಕಗಳು ತೆರೆಯಲ್ಪಟ್ಟವು[7]; ಮತ್ತು ಜೀವಬಾಧ್ಯರ ಪಟ್ಟಿ ಎಂಬ ಇನ್ನೊಂದು ಪುಸ್ತಕವು[8] ತೆರೆಯಲ್ಪಟ್ಟಿತು; ಆ ಪುಸ್ತಕಗಳಲ್ಲಿ ಬರೆದಿದ್ದ ಸಂಗತಿ

---

1) ದಾನಿಯೇಲ ೭, ೯. 2) ಪ್ರಕಟನೆ ೧೪, ೧೩; ೧೯, ೯. 3) ಪ್ರಕಟನೆ ೨೦, ೧೪; ೨೧, ೮; ಮತ್ತಾಯ ೧೦, ೨೮.
4) ಯೆಶಾಯ ೬೧, ೬. 5) ಯೆಜೇಕಿಯೇಲ ೩೮, ೨. ೯. ೧೬.
6) ಯೆಜೇಕಿಯೇಲ ೩೯, ೬. 7) ದಾನಿಯೇಲ ೭, ೧೦. 8) ಫಿಲಿಪ್ಪಿಯ ೪, ೩; ಲೂಕ ೧೦, ೨೦.

ಗಳ ಆಧಾರದಿಂದ ಅವರವರ ಕೃತ್ಯಗಳ ಪ್ರಕಾರ ಸತ್ತವರಿಗೆ ನ್ಯಾಯತೀರ್ಪಾಯಿತು.
13 ಸಮುದ್ರವು ತನ್ನೊಳಗಿದ್ದ ಸತ್ತವರನ್ನು ಒಪ್ಪಿಸಿತು; ಮೃತ್ಯುವೂ ಪಾತಾಳವೂ ತಮ್ಮ ವಶ ದಲ್ಲಿದ್ದ ಸತ್ತವರನ್ನು ಒಪ್ಪಿಸಿದವು. ಅವರಲ್ಲಿ ಪ್ರತಿಯೊಬ್ಬನಿಗೆ ಅವನವನ ಕೃತ್ಯಗಳ
14 ಪ್ರಕಾರ ನ್ಯಾಯತೀರ್ಪಾಯಿತು. ಆ ಮೇಲೆ ಮೃತ್ಯುವೂ ಪಾತಾಳವೂ ಬೆಂಕಿಯ ಕೆರೆಗೆ
15 ದೊಬ್ಬಲ್ಪಟ್ಟವು; ಆ ಬೆಂಕಿಯ ಕೆರೆಯೇ ಎರಡನೇ ಮರಣವು[1]. ಯಾವನ ಹೆಸರು ಜೀವಬಾಧ್ಯರ ಪಟ್ಟಿಯಲ್ಲಿ ಬರೆದದ್ದಾಗಿ ಕಾಣಲಿಲ್ಲವೋ ಅವನು ಬೆಂಕಿಯ ಕೆರೆಗೆ ದೊಬ್ಬ ಲ್ಪಟ್ಟನು.

### IX. ನೂತನ ಭೂಮ್ಯಾಕಾಶಗಳನ್ನು ಕುರಿತದ್ದು.

**21** ತರುವಾಯ ನೂತನ ಆಕಾಶಮಂಡಲವನ್ನೂ ನೂತನ ಭೂಮಂಡಲವನ್ನೂ[2] ಕಂಡೆನು. ಮೊದಲಿದ್ದ ಆಕಾಶಮಂಡಲವೂ ಮೊದಲಿದ್ದ ಭೂಮಂಡಲವೂ ಇಲ್ಲದೆ ಹೋದವು; ಇನ್ನು
2 ಸಮುದ್ರವೂ ಇಲ್ಲ. ಇದಲ್ಲದೆ ಪರಿಶುದ್ಧ ಪಟ್ಟಣವಾದ ಹೊಸ ಯೆರೂಸಲೇಮು[3] ಪರ ಲೋಕದಿಂದ ದೇವರ ಬಳಿಯಿಂದ ಇಳಿದುಬರುವದನ್ನು ಕಂಡೆನು; ಅದು ತನ್ನ ಗಂಡನಿ
3 ಗೋಸ್ಕರ ಅಲಂಕೃತಳಾದ ಮದಲಗಿತ್ತಿಯಂತೆ ಶೃಂಗರಿಸಲ್ಪಟ್ಟಿತ್ತು[4]. ಇದಲ್ಲದೆ ಸಿಂಹಾ ಸನದೊಳಗಿಂದ ಬಂದ ಮಹಾ ಶಬ್ದವು ನನಗೆ ಕೇಳಿಸಿತು. ಅದು—

ಇಗೋ, ದೇವರ ನಿವಾಸವು ಮನುಷ್ಯರಲ್ಲಿ ಅದೆ;
ಆತನು ಅವರೊಡನೆ ವಾಸಮಾಡುವನು,
ಅವರು ಆತನಿಗೆ ಪ್ರಜೆಗಳಾಗಿರುವರು[5];
ದೇವರು ತಾನೇ ಅವರ ಸಂಗಡ ಇರುವನು,
4 ಅವರ ಕಣ್ಣೀರನ್ನೆಲ್ಲಾ ಒರಸಿಬಿಡುವನು[6].
ಇನ್ನು ಮರಣವಿರುವದಿಲ್ಲ,
ಇನ್ನು ದುಃಖವಾಗಲಿ ಗೋಳಾಟವಾಗಲಿ ಕಷ್ಟವಾಗಲಿ ಇರುವದಿಲ್ಲ[7];
ಮೊದಲಿದ್ದದ್ದೆಲ್ಲಾ ಇಲ್ಲದೆ ಹೋಯಿತು

5 ಎಂದು ಹೇಳಿತು. ಆಗ ಸಿಂಹಾಸನದ ಮೇಲೆ ಕೂತಿದ್ದವನು—

ಇಗೋ, ಎಲ್ಲವನ್ನು ಹೊಸದು ಮಾಡುತ್ತೇನೆ

ಅಂದನು. ಮತ್ತು ಒಬ್ಬನು[8] ನನಗೆ—ಇದನ್ನು ಬರೆ; ಈ ಮಾತುಗಳು ನಂಬತಕ್ಕವು
6 ಗಳೂ ಸತ್ಯವಾದವುಗಳೂ ಆಗಿವೆ ಎಂದು ಹೇಳಿದನು. ಆಗ ಸಿಂಹಾಸನದ ಮೇಲೆ ಕೂತಿದ್ದವನು—

ಎಲ್ಲಾ ನೆರವೇರಿತು;
ನಾನು ಆದಿಯೂ ಅಂತ್ಯವೂ ಪ್ರಾರಂಭವೂ ಸಮಾಪ್ತಿಯೂ ಆಗಿದ್ದೇನೆ.

---

1) ಪ್ರಕಟನೆ ೨೦, ೬.
2) ಯೆಶಾಯ ೬೫, ೧೭.
3) ಇಬ್ರಿಯ ೧೨, ೨೨; ಗಲಾತ್ಯ ೪, ೨೬.
4) ಯೆಶಾಯ ೬೧, ೧೦—೬೨, ೫.
5) ಯೆಜೇಕಿಯೇಲ ೩೭, ೨೭.
6) ಯೆಶಾಯ ೨೫, ೮.
7) ಯೆಶಾಯ. ೩೫, ೧೦.
8) ಅಥವಾ, ಆತನು.

ದಾಹವುಳ್ಳವನಿಗೆ ಜೀವಜಲದ ಬುಗ್ಗೆಯಲ್ಲಿ ಕ್ರಯವಿಲ್ಲದೆ ಕುಡಿಯುವದಕ್ಕೆ
ಕೊಡುವೆನು[1].
ಜಯಹೊಂದುವವನು ಇವುಗಳಿಗೆ ಬಾಧ್ಯನಾಗುವನು; 7
ನಾನು ಅವನಿಗೆ ದೇವರಾಗಿರುವೆನು, ಅವನು ನನಗೆ ಮಗನಾಗಿರುವನು.
ಆದರೆ ಹೇಡಿಗಳು, ನಂಬಿಕೆಯಿಲ್ಲದವರು, 8
ಅಸಹ್ಯವಾದದ್ದರಲ್ಲಿ ಸೇರಿದವರು, ಕೊಲೆಗಾರರು, ಜಾರರು,
ಮಾಟಗಾರರು, ವಿಗ್ರಹಾರಾಧಕರು, ಎಲ್ಲಾ ಸುಳ್ಳುಗಾರರು
ಇವರಿಗೆ ಸಿಕ್ಕುವ ಪಾಲು ಬೆಂಕಿ ಗಂಧಕಗಳುರಿಯುವ ಕೆರೆಯೇ;
ಅದು ಎರಡನೇ ಮರಣವು

ಎಂದು ನನಗೆ ಹೇಳಿದನು.

### ಹೊಸ ಯೆರೂಸಲೇಮನ್ನು ಕುರಿತದ್ದು.

ಕಡೇ ಏಳು ಉಪದ್ರವಗಳಿಂದ ತುಂಬಿದ ಏಳು ಪಾತ್ರೆಗಳನ್ನು ಹಿಡಿದಿದ್ದ ಏಳು ಮಂದಿ 9 ದೇವದೂತರಲ್ಲಿ ಒಬ್ಬನು ಬಂದು ನನ್ನ ಸಂಗಡ ಮಾತಾಡುತ್ತಾ—ಬಾ, ಯಜ್ಞಪಶುವಾದಾತನಿಗೆ ಹೆಂಡತಿಯಾಗತಕ್ಕ ಮದಲಗಿತ್ತಿಯನ್ನು ನಿನಗೆ ತೋರಿಸುವೆನು ಎಂದು ಹೇಳಿ, ದೇವರಾತ್ಮವಶನಾದ ನನ್ನನ್ನು ಎತ್ತರವಾದ ದೊಡ್ಡ ಬೆಟ್ಟಕ್ಕೆ[2] ಎತ್ತಿಕೊಂಡು ಹೋಗಿ, 10 ಯೆರೂಸಲೇಮೆಂಬ ಪರಿಶುದ್ಧ ಪಟ್ಟಣವು ದೇವರ ತೇಜಸ್ಸುಳ್ಳದ್ದಾಗಿ ಪರಲೋಕದೊಳಗಿಂದ ದೇವರ ಕಡೆಯಿಂದ ಇಳಿದುಬರುವದನ್ನು ನನಗೆ ತೋರಿಸಿದನು. ಪಟ್ಟಣದ 11 ಪ್ರಕಾಶವು ಅಮೂಲ್ಯ ರತ್ನದ ಪ್ರಕಾಶಕ್ಕೆ ಸಮಾನವಾಗಿತ್ತು, ಥಳಥಳಿಸುವ ವಜ್ರವೋ ಎಂಬಂತೆ ಕಾಣಿಸಿತು. ಆ ಪಟ್ಟಣಕ್ಕೆ ಎತ್ತರವಾದ ದೊಡ್ಡ ಪ್ರಾಕಾರವಿತ್ತು; ಅದಕ್ಕೆ 12 ಹನ್ನೆರಡು ಹೆಬ್ಬಾಗಿಲುಗಳಿದ್ದವು; ಆ ಬಾಗಿಲುಗಳ ಬಳಿಯಲ್ಲಿ ಹನ್ನೆರಡು ಮಂದಿ ದೇವದೂತರಿದ್ದರು; ಅವುಗಳ ಮೇಲೆ ಇಸ್ರಾಯೇಲ್ಯರ ಹನ್ನೆರಡು ಕುಲಗಳ ಹೆಸರುಗಳು ಬರೆದಿದ್ದವು[3]. ಪೂರ್ವದಿಕ್ಕಿನಲ್ಲಿ ಮೂರು ಬಾಗಿಲುಗಳು, ಉತ್ತರದಿಕ್ಕಿನಲ್ಲಿ ಮೂರು ಬಾಗಿಲು 13 ಗಳು, ದಕ್ಷಿಣದಿಕ್ಕಿನಲ್ಲಿ ಮೂರು ಬಾಗಿಲುಗಳು, ಪಶ್ಚಿಮದಿಕ್ಕಿನಲ್ಲಿ ಮೂರು ಬಾಗಿಲುಗಳು ಇದ್ದವು. ಪಟ್ಟಣದ ಪ್ರಾಕಾರಕ್ಕೆ ಹನ್ನೆರಡು ಅಸ್ತಿವಾರಗಳಿದ್ದವು; ಅವುಗಳ ಮೇಲೆ ಯಜ್ಞ 14 ಪಶುವಾದಾತನ ಹನ್ನೆರಡು ಮಂದಿ ಅಪೊಸ್ತಲರ ಹೆಸರುಗಳಿದ್ದವು. ನನ್ನ ಸಂಗಡ ಮಾತಾಡು 15 ತ್ತಿದ್ದವನು ಆ ಪಟ್ಟಣವನ್ನೂ ಅದರ ಬಾಗಿಲುಗಳನ್ನೂ ಅದರ ಪ್ರಾಕಾರವನ್ನೂ ಅಳತೆಮಾಡುವದಕ್ಕಾಗಿ ತನ್ನ ಕೈಯಲ್ಲಿ ಚಿನ್ನದ ಅಳತೇಕೋಲನ್ನು ಹಿಡಿದಿದ್ದನು[4]. ಪಟ್ಟಣವು ಚಚ್ಚೌಕ 16 ವಾಗಿದೆ; ಅದರ ಉದ್ದವು ಅದರ ಅಗಲದಷ್ಟಿದೆ. ಅವನು ಆ ಪಟ್ಟಣವನ್ನು ಕೋಲಿನಿಂದ ಅಳತೆ ಮಾಡಿದನು; ಅಳತೆಯು ಹನ್ನೆರಡು ನೂರು ಮೈಲಿ[5] ಆಯಿತು. ಅದರ ಉದ್ದವೂ ಅಗಲವೂ ಎತ್ತರವೂ ಸಮವಾಗಿವೆ. ಅದರ ಪ್ರಾಕಾರವನ್ನೂ ಅಳತೆ ಮಾಡಿ 17 ದನು; ಅದು ನೂರನಾಲ್ವತ್ತುನಾಲ್ಕು ಮೊಳವಾಯಿತು; ಈ ಲೆಕ್ಕದಲ್ಲಿ ಮನುಷ್ಯನ ಮೊಳ

[1] ಯೆಶಾಯ ೫೫, ೧; ಯೋಹಾನ ೪, ೧೩. ೧೪; ೭, ೩೭. [2] ಯೆಜೇಕಿಯೇಲ ೪೦, ೨.
[3] ಯೆಜೇಕಿಯೇಲ ೪೮, ೩೧. [4] ಯೆಜೇಕಿಯೇಲ ೪೦, ೩. ೫. [5] ಮೂಲ: ಹನ್ನೆರಡು ಸಾವಿರ ಸ್ತಾದ್ಯ.

18 ಅಂದರೆ ದೇವದೂತನ ಮೊಳ. ಆ ಪ್ರಾಕಾರವು ಸೂರ್ಯಕಾಂತಶಿಲೆಯಿಂದ[1] ಕಟ್ಟಲ್ಪ
19 ಟ್ಟಿತು. ಪಟ್ಟಣವು ಶುದ್ಧ ಗಾಜಿನಂತಿರುವ ಸೋಸಿದ ಭಂಗಾರವೇ. ಪಟ್ಟಣದ ಪ್ರಾಕಾ
ರದ ಅಸ್ತಿವಾರಗಳು ಸಕಲ ವಿಧವಾದ ರತ್ನಗಳಿಂದ ಅಲಂಕೃತವಾಗಿದ್ದವು. ಮೊದಲನೇ
ಅಸ್ತಿವಾರವು ವಜ್ರ, ಎರಡನೇದು ವೈಡೂರ್ಯ, ಮೂರನೇದು ಪಚ್ಚೆ, ನಾಲ್ಕನೇದು ಪದ್ಮ
20 ರಾಗ, ಐದನೇದು ಗೋಮೇಧಿಕ, ಆರನೇದು ಮಾಣಿಕ್ಯ, ಏಳನೇದು ಪೀತರತ್ನ, ಎಂಟ
ನೇದು ಬೆರುಲ್ಲ, ಒಂಭತ್ತನೇದು ಪುಷ್ಯರಾಗ, ಹತ್ತನೇದು ಗರುಡಪಚ್ಚೆ, ಹನ್ನೊಂದನೇದು
21 ಇಂದ್ರನೀಲ, ಹನ್ನೆರಡನೇದು ನೀಲಸ್ಫಟಿಕ. ಹನ್ನೆರಡು ಹೆಬ್ಬಾಗಿಲುಗಳು ಹನ್ನೆರಡು ಮುತ್ತು
ಗಳಾಗಿದ್ದವು[2]; ಒಂದೊಂದು ಬಾಗಿಲು ಒಂದೊಂದು ಮುತ್ತಿನಿಂದ ಮಾಡಲ್ಪಟ್ಟಿತ್ತು. ಪಟ್ಟ
22 ಣದ ಬೀದಿಯು ಸ್ವಚ್ಛವಾದ ಗಾಜಿನಂತಿರುವ ಸೋಸಿದ ಭಂಗಾರವಾಗಿತ್ತು. ಪಟ್ಟಣದಲ್ಲಿ
ನಾನು ದೇವಾಲಯವನ್ನು ಕಾಣಲಿಲ್ಲ; ಯಾಕಂದರೆ ಸರ್ವಶಕ್ತನಾದ ದೇವರಾಗಿರುವ
23 ಕರ್ತನೂ ಯಜ್ಞಪಶುವಾದಾತನೂ ಅದರ ದೇವಾಲಯವಾಗಿದ್ದಾರೆ. ಪಟ್ಟಣಕ್ಕೆ ಬೆಳಕನ್ನು
ಕೊಡುವದಕ್ಕಾಗಿ ಸೂರ್ಯನಾಗಲಿ ಚಂದ್ರನಾಗಲಿ ಬೇಕಾಗಿಲ್ಲ. ಅದಕ್ಕೆ ದೇವರ ಪ್ರಭಾ
24 ವವೇ ಬೆಳಕನ್ನು ಕೊಟ್ಟಿತು[3]; ಯಜ್ಞಪಶುವಾದಾತನೇ ಅದರ ದೀಪವು. ಅದರ ಬೆಳಕಿನಿಂದ
ಸರ್ವ ಜನಾಂಗದವರು ಸಂಚಾರಮಾಡುವರು[4]; ಭೂರಾಜರು ತಮ್ಮ ವೈಭವವನ್ನು ಅಲ್ಲಿಗೆ
25 ತರುವರು. ಅದರ ಬಾಗಿಲುಗಳನ್ನು ಹಗಲಿನಲ್ಲಿ ಮುಚ್ಚುವದೇ ಇಲ್ಲ[5]; ರಾತ್ರಿಯಂತೂ
26, 27 ಅಲ್ಲಿಲ್ಲ. ಜನಾಂಗಗಳ ವೈಭವವೂ ಘನವೂ ಅಲ್ಲಿಗೆ ಬರುವವು. ಅದರಲ್ಲಿ ಹೊಲೆ
ಯಾದದ್ದೊಂದೂ ಸೇರುವದಿಲ್ಲ[6], ಅಸಹ್ಯವಾದದ್ದನ್ನೂ ಸುಳ್ಳಾದದ್ದನ್ನೂ ನಡಿಸುವವನು
ಸೇರುವದಿಲ್ಲ; ಯಜ್ಞಪಶುವಾದಾತನ ಜೀವಬಾಧ್ಯರ ಪಟ್ಟಿಯಲ್ಲಿ ಯಾರ್ಯಾರ ಹೆಸರುಗಳು
ಬರೆದವೆಯೋ ಅವರು ಮಾತ್ರ ಸೇರುವರು.

**22** ಆ ಮೇಲೆ ಅವನು ಸ್ಫಟಿಕದಂತೆ ಪ್ರಕಾಶಮಾನವಾಗಿದ್ದ ಜೀವಜಲದ ನದಿಯನ್ನು[7]
ನನಗೆ ತೋರಿಸಿದನು. ಅದು ದೇವರ ಮತ್ತು ಯಜ್ಞಪಶುವಾದಾತನ ಸಿಂಹಾಸನದಿಂದ
2 ಹೊರಟು ಪಟ್ಟಣದ ಬೀದಿಯ ಮಧ್ಯದಲ್ಲಿ ಹರಿಯುತ್ತಿತ್ತು. ಆ ನದಿಯ ಉಭಯ
ಪಾರ್ಶ್ವಗಳಲ್ಲಿ ಜೀವವೃಕ್ಷವಿತ್ತು; ಅದು ತಿಂಗಳು ತಿಂಗಳಿಗೆ ಫಲವನ್ನು ಫಲಿಸುತ್ತಾ ಹನ್ನೆ
ರಡು ತರದ ಫಲಗಳನ್ನು ಕೊಡುತ್ತದೆ[8]. ಆ ಮರದ ಎಲೆಗಳು ಜನಾಂಗದವರನ್ನು
3 ವಾಸಿಮಾಡುವದಕ್ಕೆ ಪ್ರಯೋಜನವಾಗಿವೆ. ಇನ್ನು ಶಾಪಗ್ರಸ್ತವಾದದ್ದು ಒಂದೂ ಇರು
ವದಿಲ್ಲ[9]. ಆ ಪಟ್ಟಣದಲ್ಲಿ ದೇವರ ಮತ್ತು ಯಜ್ಞಪಶುವಾದಾತನ ಸಿಂಹಾಸನವಿರುವದು.
4 ಆತನ ದಾಸರು ಆತನಿಗೆ ಯಾಜಕಸೇವೆ ಮಾಡುವರು; ಅವರಿಗೆ ಆತನ ಮುಖದರ್ಶನ
5 ವಾಗುವದು; ಅವರ ಹಣೆಗಳ ಮೇಲೆ ಆತನ ಹೆಸರು ಇರುವದು. ಇನ್ನು ರಾತ್ರಿ ಇರು
ವದಿಲ್ಲ; ಅವರಿಗೆ ದೀಪದ ಬೆಳಕೂ ಸೂರ್ಯನ ಬೆಳಕೂ ಬೇಕಾಗುವದಿಲ್ಲ; ದೇವರಾದ
ಕರ್ತನೇ ಅವರಿಗೆ ಬೆಳಕನ್ನು ಕೊಡುವನು; ಅವರು ಸದಾಕಾಲವೂ ಆಳುವರು[10].

---

[1] ಅಥವಾ, ವಜ್ರದಿಂದ. [2] ಯೆಶಾಯ ೫೪, ೧೨. [3] ಯೆಶಾಯ ೬೦, ೧೯.
[4] ಯೆಶಾಯ ೬೦, ೩. [5] ಯೆಶಾಯ ೬೦, ೧೧. [6] ಯೆಶಾಯ ೫೨, ೧; ಯೆಜೇಕಿಯೇಲ ೪೪, ೯.
[7] ಯೆಜೇಕಿಯೇಲ ೪೭, ೧—೧೨. [8] ಅಥವಾ, ಹನ್ನೆರಡು ಸಾರಿ ಬಿಡುತ್ತದೆ; ಯೆಜೇಕಿಯೇಲ ೪೭, ೧೨.
[9] ಜೆಕರ್ಯ ೧೪, ೧೧. [10] ದಾನಿಯೇಲ ೭, ೧೮. ೨೭.

ಅಂತ್ಯೋಕ್ತಿಗಳು.

ಆ ಮೇಲೆ ಅವನು ನನಗೆ—ಈ ಮಾತುಗಳು ನಂಬತಕ್ಕವುಗಳೂ ಸತ್ಯವಾದವುಗಳೂ 6 ಆಗಿವೆ; ಪ್ರವಾದಿಗಳ ಆತ್ಮಗಳನ್ನು ಪ್ರೇರೇಪಿಸುವ ದೇವರಾದ ಕರ್ತನು ಬೇಗನೆ ಸಂಭವಿಸ ಬೇಕಾಗಿರುವ ಸಂಗತಿಗಳನ್ನು ತನ್ನ ದಾಸರಿಗೆ ತಿಳಿಯಪಡಿಸುವದಕ್ಕಾಗಿ ತನ್ನ ದೂತನನ್ನು ಕಳುಹಿಸಿಕೊಟ್ಟನು. ಇಗೋ, ಬೇಗನೆ ಬರುತ್ತೇನೆ. ಈ ಪುಸ್ತಕದಲ್ಲಿ ಬರೆದಿರುವ 7 ಪ್ರವಾದನೆಯ ಮಾತುಗಳನ್ನು ಕೈಕೊಂಡು ನಡೆಯುವವನು ಧನ್ಯನು ಎಂದು ಹೇಳಿದನು.

ಈ ಸಂಗತಿಗಳನ್ನು ಕೇಳಿ ಕಂಡವನು ಯೋಹಾನನೆಂಬ ನಾನೇ. ನಾನು ಕೇಳಿ 8 ಕಂಡಾಗ ಈ ಸಂಗತಿಗಳನ್ನು ನನಗೆ ತೋರಿಸಿದ ದೇವದೂತನಿಗೆ ನಮಸ್ಕಾರಮಾಡ ಬೇಕೆಂದು ಅವನ ಪಾದಕ್ಕೆ ಬಿದ್ದೆನು. ಅವನು ನನಗೆ—ಮಾಡಬೇಡ ನೋಡು; ನಾನು 9 ನಿನಗೂ ಪ್ರವಾದಿಗಳಾಗಿರುವ ನಿನ್ನ ಸಹೋದರರಿಗೂ ಈ ಪುಸ್ತಕದಲ್ಲಿ ಬರೆದಿರುವ ಮಾತುಗಳನ್ನು ಕೈಕೊಂಡು ನಡೆಯುವವರಿಗೂ ಜೊತೆಯ ದಾಸನಾಗಿದ್ದೇನೆ; ದೇವರಿಗೆ ಮಾತ್ರ ನಮಸ್ಕಾರಮಾಡು ಎಂದು ಹೇಳಿದನು.

ಇದಲ್ಲದೆ ಅವನು ನನಗೆ—ಈ ಪುಸ್ತಕದಲ್ಲಿರುವ ಪ್ರವಾದನಾವಾಕ್ಯಗಳನ್ನು ಗುಪ್ತ 10 ವಾಗಿಡಬೇಡ[1]; ಇವು ನೆರವೇರುವ ಸಮಯವು ಸಮೀಪವಾಗಿದೆ. ಅನ್ಯಾಯ ಮಾಡು 11 ವವನು ಇನ್ನೂ ಅನ್ಯಾಯಮಾಡಲಿ; ಮೈಲಿಗೆಯಾದವನು ತನ್ನನ್ನು ಇನ್ನೂ ಮೈಲಿಗೆ ಮಾಡಿಕೊಳ್ಳಲಿ; ನೀತಿವಂತನು ಇನ್ನೂ ನೀತಿಯನ್ನು ಅನುಸರಿಸಲಿ; ಪವಿತ್ರನು ತನ್ನನ್ನು ಇನ್ನೂ ಪವಿತ್ರಮಾಡಿಕೊಳ್ಳಲಿ. ಇಗೋ, ಬೇಗ ಬರುತ್ತೇನೆ; ನಾನು ಪ್ರತಿಯೊಬ್ಬನಿಗೆ 12 ಅವನವನ ನಡತೆಯ ಪ್ರಕಾರ ಕೊಡತಕ್ಕ ಪ್ರತಿಫಲವು ನನ್ನ ಕೈಯಲ್ಲಿ ಅದೆ. ನಾನೇ 13 ಆದಿಯೂ ಅಂತ್ಯವೂ ಮೊದಲನೆಯವನೂ ಕಡೆಯವನೂ[2] ಪ್ರಾರಂಭವೂ ಸಮಾಪ್ತಿಯೂ ಆಗಿದ್ದೇನೆ. ತಮ್ಮ ನಿಲುವಂಗಿಗಳನ್ನು ತೊಳಕೊಂಡವರು ಧನ್ಯರು; ಅವರಿಗೆ ಜೀವ 14 ವೃಕ್ಷದ ಹಕ್ಕು ಇರುವದು; ಅವರು ಬಾಗಿಲುಗಳಿಂದ ಆ ಪಟ್ಟಣದೊಳಕ್ಕೆ ಸೇರುವರು. ನಾಯಿಗಳಂತಿರುವವರೂ ಮಾಟಗಾರರೂ ಜಾರರೂ ಕೊಲೆಗಾರರೂ ವಿಗ್ರಹಾರಾಧಕರೂ 15 ಸುಳ್ಳಾದದ್ದನ್ನು ಪ್ರೀತಿಸಿ ನಡಿಸುವವರೆಲ್ಲರೂ ಹೊರಗಿರುವರು ಎಂದು ಹೇಳಿದನು.

ಯೇಸುವೆಂಬ ನಾನು ನನ್ನ ಸಭೆಗಳ[3] ಪ್ರಯೋಜನಾರ್ಥವಾಗಿ ಈ ಸಂಗತಿಗಳ ವಿಷ 16 ಯದಲ್ಲಿ ನಿಮಗೆ ಸಾಕ್ಷಿ ಹೇಳುವದಕ್ಕೋಸ್ಕರ ನನ್ನ ದೂತನನ್ನು ಕಳುಹಿಸಿಕೊಟ್ಟೆನು. ನಾನು ದಾವೀದವಂಶವೆಂಬ ಬುಡದಿಂದ ಹುಟ್ಟಿದ ಚಿಗುರೂ[4] ಅವನ ಸಂತತಿಯೂ ಉದಯಸೂಚಕವಾದ ಪ್ರಕಾಶವುಳ್ಳ ನಕ್ಷತ್ರವೂ[5] ಆಗಿದ್ದೇನೆ.

ಆತ್ಮನೂ ಮದಲಗಿತ್ತಿಯೂ—ಬಾ ಅನ್ನುತ್ತಾರೆ. ಕೇಳುವವನು—ಬಾ ಅನ್ನಲಿ. 17 ದಾಹವುಳ್ಳವನು ಬರಲಿ. ಇಷ್ಟವುಳ್ಳವನು ಜೀವಜಲವನ್ನು ಕ್ರಯವಿಲ್ಲದೆ ತಕ್ಕೊಳ್ಳಲಿ[6].

ಈ ಪುಸ್ತಕದ ಪ್ರವಾದನಾವಾಕ್ಯಗಳನ್ನು ಕೇಳುವ ಪ್ರತಿಯೊಬ್ಬನಿಗೆ ನಾನು ಹೇಳುವ 18 ಸಾಕ್ಷಿ ಏನಂದರೆ—ಇವುಗಳಿಗೆ ಯಾವನಾದರೂ ಹೆಚ್ಚು ಮಾತುಗಳನ್ನು ತಂದುಹಾಕಿದರೆ,

---

1) ಮೂಲ: ವಾಕ್ಯಗಳಿಗೆ ಮುದ್ರೆ ಹಾಕಬೇಡ. 2) ಯೆಶಾಯ ೪೦, ೧೦. 3) ಪ್ರಕಟನೆ ೧, ೪.
4) ಯೆಶಾಯ ೧೧, ೧. 5) ಅಂಕೆ ೨೪, ೧೭. 6) ಯೆಶಾಯ ೫೫, ೧.

ದೇವರು ಅವನ ಮೇಲೆ ಈ ಪುಸ್ತಕದಲ್ಲಿ ಬರೆದಿರುವ ಉಪದ್ರವಗಳನ್ನು ತಂದುಹಾಕು

19 ವನು. ಯಾವನಾದರೂ ಈ ಪ್ರವಾದನಾಪುಸ್ತಕದಲ್ಲಿರುವ ಮಾತುಗಳಲ್ಲಿ ಒಂದನ್ನಾದರೂ ತೆಗೆದುಬಿಟ್ಟರೆ, ಈ ಪುಸ್ತಕದಲ್ಲಿ ಬರೆದಿರುವ ಪರಿಶುದ್ಧ ಪಟ್ಟಣದಲ್ಲಿಯೂ ಜೀವವೃಕ್ಷದಲ್ಲಿಯೂ ಅವನಿಗಿರುವ ಪಾಲನ್ನು ದೇವರು ತೆಗೆದುಬಿಡುವನು.

20 ಈ ವಿಷಯಗಳಲ್ಲಿ ಸಾಕ್ಷಿ ಹೇಳುವವನು—ನಿಜವಾಗಿ ಬೇಗ ಬರುತ್ತೇನೆ ಎಂದು ಹೇಳುತ್ತಾನೆ. ಹಾಗೆಯೇ ಆಗಲಿ; ಕರ್ತನಾದ ಯೇಸುವೇ, ಬಾ.

21 ಕರ್ತನಾದ ಯೇಸುವಿನ ಕೃಪೆಯು ಎಲ್ಲರೊಂದಿಗೆ ಇರಲಿ.




PRINTED AT THE BASEL MISSION PRESS, MANGALORE.